# ಸ್ಕಂದ ಮಹಾಪುರಾಣ

ಭಾಗ-೨

## ಕುಮಾರಿಕಾ ಖಂಡ, ವೈಷ್ಣವ ಖಂಡ, ಬ್ರಹ್ಮ ಖಂಡ





ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಸ್ಕಂದ ಮಹಾಪುರಾಣ

## ಭಾಗ – ೨

ಕುಮಾರಿಕಾ ಖಂಡ, ವೈಷ್ಣವ ಖಂಡ, ಬ್ರಹ್ಮ ಖಂಡ*

*(ಬ್ರಹ್ಮ ಖಂಡ ಭಾಗ - ೩ರಲ್ಲಿ ಮುಂದುವರೆದಿದೆ)

ಅನುವಾದ-ಲೇಖಕರು ಮಹಾಮಹೋಪಾಧ್ಯಾಯ

**ಪಂ. ಪಂಢರೀನಾಥಾಚಾರ್ಯ ಗಲಗಲಿ**

ರಾಷ್ಟ್ರಪ್ರಶಸ್ತಿ, ರಾಜ್ಯಪ್ರಶಸ್ತಿ

ರಾಮಕೃಷ್ಣ ದಾಲ್ಮಿಯಾ ಲಕ್ಷ್ಮೀ ಶ್ರೀವಾಣಿ ಅಲಂಕರಣ ಪ್ರಶಸ್ತಿ ಪುರಸ್ಕೃತರು

–: ಪ್ರಕಾಶಕರು :–

**ಖೋಡೇ ಫೌಂಡೇಶನ್**

ಗ್ರಂಥ ಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

ದೂರವಾಣಿ : 22956573, 22956505

ಫ್ಯಾಕ್ಸ್ : 0091-80-22956570

0091-80-22956508

SKANDA MAHAAPURAANA of Bhagavan Sri Vedavyasa Maharshi, edited and translated in to Kannada by Rajyaprashasti, Rashtraprashasti, Ramakrishna Dhalmia Lakshmi Shreevani Alankarana Prashasti Puraskrutha Panditha Sri Pandarinathacharya Galagali, Vishveshwara Nagara, Shanthi Colony, Hubli-580032 Ph : (0836) 2250250

First Edition : 1967

Second Edition : 2007

No. of Pages : x + 600

No. of Copies : 1,000



Price : Rs. 162 = 00

Printed at : **SRI VENKATESHWARA PRINTERS**
No. 3, Yellappa Road, Susheela Road Cross
Chickmavalli, Lalbagh Crumbigal Road Cross
BANGALORE-560 004
Phone : 26573001

# ಪ್ರಸ್ತಾವನೆ

ಭಾರತೀಯಧರ್ಮ, ಸಂಸ್ಕೃತಿ ಹಾಗೂ ಇತಿಹಾಸ ದೃಷ್ಟಿಯಿಂದ ಪುರಾಣಗಳಿಗೆ ವಿಶಿಷ್ಟಸ್ಥಾನವಿದೆ. ವೇದ, ಸ್ಮೃತಿಗಳ ಅನಂತರ ಪುರಾಣಗಳೇ ಭಾರತೀಯರ ಆಚಾರ, ವಿಚಾರ, ಸಂಪ್ರದಾಯಗಳಿಗೆ ಆಧಾರಭೂತವಾದ ಪ್ರಮಾಣಗ್ರಂಥಗಳಾಗಿವೆ. **''ಇತಿಹಾಸ-ಪುರಾಣಾಭ್ಯಾಂ ವೇದ ಸಮುಪ ಬೃಹಂಯೇತ್''** ಎಂದು ಹೇಳಿದ ಪ್ರಕಾರ ವೈದಿಕದರ್ಶನಕ್ಕೆ ನಿದರ್ಶನಗಳನ್ನು ಪುರಾಣಗಳು ಪ್ರದರ್ಶನ ಮಾಡುತ್ತವೆ. ವೇದಾರ್ಥಗಳು ವೇದ್ಯವಾಗುವುದು ಪುರಾಣಗಳಿಂದಲೇ.

ಮಹಾತ್ಮರಾದ ಭಗವಾನ್ ವೇದವ್ಯಾಸರು ರಚಿಸಿದ ಹದಿನೆಂಟು ಮಹಾಪುರಾಣಗಳಲ್ಲಿ ಅತ್ಯಂತ ದೊಡ್ಡದು ಸ್ಕಂದಮಹಾಪುರಾಣ. ಪರಮೇಶ್ವರನ ವರಕುಮಾರನಾದ ಕುಮಾರ ಸ್ವಾಮಿ ಅರ್ಥಾತ್ ಸ್ಕಂದದೇವನ ಚರಿತ್ರೆಯನ್ನು ನಿರೂಪಿಸ ಹೊರಟ ಈ ಮಹಾಮಹತ್ತರವಾದ ಪುರಾಣದಲ್ಲಿ ಶಿವ-ವಿಷ್ಣು ಮುಂತಾದ ಬೇರೆ ಎಲ್ಲ ದೇವಧಿದೇವತೆಗಳ ಚಾರುಚರಿತ್ರೆಗಳೂ ಚೇತೋಹಾರಿಯಾದ ಶೈಲಿಯಲ್ಲಿ ರಸಾಳವಾಣಿ ಯಿಂದ ಚಿತ್ರಿತವಾಗಿವೆ. ಅನೇಕಾನೇಕ ರಾಜವಂಶ, ಮುನಿಕುಲ, ಶ್ರೀಸಾಮಾನ್ಯರ ಬದುಕಿನ ಬಗೆಬಗೆಯ ಬವಣೆ, ಸ್ವೈರಣೆ, ಉತ್ಥಾನ-ಪತನ, ಪುರೋಗತಿ-ಪರಾಗತಿ, ಸುಖ-ದುಃಖ, ಕಷ್ಟ-ನಷ್ಟ, ಸಂಸ್ಕೃತಿ-ವಿಕೃತಿ, ಸಂತಾಪ-ಸಂತಸ ಮುಂತಾದ ಅವಸ್ಥಾಂತಗಳನ್ನು ಸುರುಳಿ ಬಿಚ್ಚಿ ತೋರಿಸುತ್ತ ಈ ಪುರಾಣವು ಮನುಕುಲವು ನಡೆದುಬಂದ ದಾರಿಯ ಗೆರೆ ಗುರುತುಗಳನ್ನು ನಿಚ್ಚಳವಾಗಿ ಕಾಣಿಸುತ್ತದೆ. ದೇವ, ಮುನಿ, ಋಷಿ, ರಾಜರಂತೆ ದೀನ- ದಲಿತರ ಯಾತನಾಮಯವಾದ ದಾರುಣ ಜೀವನದ ಹೋರಾಟ ಅಪಾಯ ಉಪಾಯ ಉದ್ಧಾರ ಉತ್ಕರ್ಷಗಳ ಚಿತ್ರಮಾಲೆಗಳನ್ನು ಕಣ್ಣೆದುರು ಬಿಡಿಸಿ ಎಲ್ಲರೂ ಕೈವಲ್ಯದತ್ತ ಅನಿರ್ಬಂಧವಾಗಿ ಸಾಗಿ ಸಿದ್ಧಿಪಡೆಯುವ ಸತ್ಯದ ಸತ್ಪಥ ಮುಕ್ತಿಯಮಂದಿರ ಮುಕ್ತದ್ವಾರವಾಗಿದೆ. ಸ್ಕಂದಮಹಾಪುರಾಣ ಎಲ್ಲಾ ಜಾತಿಜನಾಂಗದವರಿಗೂ ಎಂದು ಉದ್ಘೋಷಿಸುತ್ತದೆ.

ಈ ಪುರಾಣದ ಮುಖ್ಯ ಪ್ರತಿಪಾದ್ಯ, ದೇವತೆ ಸ್ಕಂದ ಹಾಗೂ ಅವನ ತಂದೆ ಪರಶಿವ. ಮಹಾಭಾರತದಂತೆ ಒಂದು ಲಕ್ಷ ಶ್ಲೋಕಾತ್ಮಕವಾದ ಈ ಬೃಹದ್ಗ್ರಂಥದಲ್ಲಿ ಆಧ್ಯಾತ್ಮ, ನೀತಿ-ನಿಯಮ, ದೈವವಾದ, ಪೌರುಷವಾದ, ಪ್ರಯತ್ನ-ಪ್ರಾಧಾನ್ಯ, ವಿಧಿವಿಲಾಸ, ದುರಾಚಾರದ ದುಷ್ಪರಿಣಾಮ, ಸದಾಚಾರದ ಮಧುರಫಲ, ಸತ್ಯ ಅಹಿಂಸೆ ಮುಂತಾದವುಗಳು ಒಳ್ಳೊಳ್ಳೆ ದೃಷ್ಟಾಂತ ಹಾಗೂ ನೀತಿ ವಚನಗಳ ಮೂಲಕ ಜನಮನದಲ್ಲಿ ಬಿಂಬಿಸುವಂತೆ ನಿರೂಪಿಸಲ್ಪಟ್ಟಿದೆ.

ಮಹಾಮುನೀಷಿ ಮಾಧವಾಚಾರ್ಯರು ಸಂಹಿತಾತ್ಮಕವಾದ ಸ್ಕಂದ ಪುರಾಣದಲ್ಲಿಯ ಸೂತ ಸಂಹಿತೆಗೆ *'ಸೂತ ಸಂಹಿತಾತಾತ್ಪರ್ಯ ದೀಪಿಕಾ'* ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಆದುದರಿಂದ ಖಂಡಾತ್ಮಕ ಸ್ಕಂದ ಪುರಾಣ ಸಂಹಿತಾತ್ಮಕ ಸ್ಕಂದ ಪುರಾಣ ಎರಡೂ ಕೂಡಿಯೇ ಒಂದು ಸ್ಕಂದಮಹಾಪುರಾಣವಾಗಿದೆ ಎಂಬುದು ನಿರ್ವಿವಾದ.

ಅದಕ್ಕಾಗಿ ಸ್ಕಂದ ಮಹಾಪುರಾಣವನ್ನು ಕನ್ನಡಕ್ಕೆ ಇಡಿಯಾಗಿಯೇ ಇಳಿಸಲಿಕ್ಕೆ ಹೊರಟ ನಾವು ಮೊದಲು ಸಂಪೂರ್ಣವಾಗಿ ಉಪಲಬ್ಧವಾದ ಹಾಗೂ ಮುದ್ರಿತವಾದ ಖಂಡಾತ್ಮಕ ಭಾಗವನ್ನು ಪ್ರಕಟಿಸಲು ಮೊದಲು ಮಾಡಿದ್ದೇವೆ. ಅನಂತರ ಸಂಹಿತಾತ್ಮಕ ಭಾಗವನ್ನೂ ಕನ್ನಡಿಸಿ ಕೊಡಲಾಗುವುದು.

ಮುಂಬೈ ವೆಂಕಟೇಶ್ವರ ಪ್ರೆಸ್ ಮತ್ತು ವಂಗವಾಸಿ ಪ್ರೆಸ್ಸಿನವರು ಮುದ್ರಿಸಿದ ಎರಡೂ ಖಂಡಾತ್ಮಕ ಸ್ಕಂದ ಪುರಾಣಗಳಲ್ಲಿ ಶ್ಲೋಕಗಳ ಸಂಖ್ಯೆಯು ಸಮನಾಗಿದೆ. ಎರಡರಲ್ಲಿಯೂ (೧) ಮಾಹೇಶ್ವರ ಖಂಡ (೨) ವೈಷ್ಣವ ಖಂಡ (೩) ಬ್ರಹ್ಮಖಂಡ (೪) ಕಾಶೀ ಖಂಡ (೫) ಆವಂತ್ಯ ಖಂಡ (೬) ನಾಗರ ಖಂಡ (೭) ಪ್ರಭಾಸ ಖಂಡ ಎಂದು ಏಳು ವಿಭಾಗಗಳು ಇರುತ್ತವೆ. ಇವುಗಳನ್ನೇ ಮಹೇಶ್ವರ ಖಂಡ, ವಿಷ್ಣುಖಂಡ, ಬ್ರಹ್ಮಖಂಡ ಎಂದೂ ಕರೆಯುತ್ತಾರೆ.

ಇವುಗಳಲ್ಲಿ ಮೊದಲನೆಯದಾದ ಮಾಹೇಶ್ವರ ಖಂಡದಲ್ಲಿ ಕೇದಾರಖಂಡ, ಕುಮಾರಿಕಾ ಖಂಡ, ಅರುಣಾಚಲ ಮಾಹಾತ್ಮ್ಯ ಖಂಡ (ಪೂರ್ವಾರ್ಧ ಉತ್ತರಾರ್ಧ ಸಹಿತ) ಎಂದು ಮೂರು ಉಪಖಂಡಗಳು ಇರುತ್ತವೆ.

ಎರಡನೆಯದಾದ ವೈಷ್ಣವ ಖಂಡದಲ್ಲಿ ವೆಂಕಟಾಚಲ ಮಹಾತ್ಮ್ಯ ಅಥವಾ ಭೂವರಾಹ ಖಂಡ, ಉತ್ಕಲಖಂಡ ಅಥವಾ ಪುರುಷೋತ್ತಮ ಮಾಹಾತ್ಮ್ಯ, ವಿಶಾಲಾ ಖಂಡ ಅಥವಾ ಬದರಿಕಾಶ್ರಮ ಕ್ಷೇತ್ರ ಮಾಹಾತ್ಮ್ಯ, ಕಾರ್ತಿಕ ಮಾಸ ಮಾಹಾತ್ಮ್ಯ ವೈಶಾಖ ಮಾಸ ಮಾಹಾತ್ಮ್ಯ, ಅಯೋಧ್ಯಾ ಮಾಹಾತ್ಮ್ಯ ಎಂದು ಉಪವಿಭಾಗಗಳು ಇರುತ್ತವೆ.

ಮೂರನೆಯದಾದ ಬ್ರಹ್ಮಖಂಡದಲ್ಲಿ ಸೇತು ಮಾಹಾತ್ಮ್ಯ ಖಂಡ, ಧರ್ಮಾರಣ್ಯ ಖಂಡ, ಚಾತುರ್ಮಾಸ್ಯ ಮಹಾತ್ಮ್ಯಖಂಡ, ಬ್ರಹ್ಮೋತ್ತರ ಖಂಡ ಎಂದು ನಾಲ್ಕು ವಿಭಾಗಗಳು ಇರುತ್ತವೆ.

ನಾಲ್ಕನೆಯದಾದ ಕಾಶೀಖಂಡದಲ್ಲಿ ಪೂವಾರ್ಧ ಉತ್ತರಾರ್ಧ ಎಂದು ಎರಡು ಭಾಗಗಳು ಇದ್ದು ಇದರಲ್ಲಿ ಕಾಶೀಕ್ಷೇತ್ರದ ಮಹಿಮೆ ಶ್ರೀ ಮಹಾದೇವರ ಮಹಾಮಹಿಮೆಗಳೂ ವರ್ಣಿಸಲ್ಪಟ್ಟಿರುತ್ತವೆ.

ಐದನೆಯದಾದ ಆವಂತೀ ಖಂಡ ಅಥವಾ ಆವಂತ್ಯ ಖಂಡದಲ್ಲಿ ಆವಂತೀ ಕ್ಷೇತ್ರ ಮಾಹಾತ್ಮ್ಯ, ಚತುರಶೀತಿಲಿಂಗ ಮಾಹಾತ್ಮ್ಯ (ಎಂಬತ್ನಾಲ್ಕು ಲಿಂಗಮಹಿಮೆ) ಮತ್ತು ರೇವಾಖಂಡಗಳು ಇರುತ್ತವೆ. ಈ ರೇವಾಖಂಡದ ಕೊನೆಯ ಭಾಗದಲ್ಲಿಯೇ ಜಗತ್ಪ್ರಸಿದ್ಧವಾದ ಸತ್ಯನಾರಾಯಣ ಕಥೆ ಇರುತ್ತದೆ. ಆರನೆಯದಾದ ನಾಗರಖಂಡದಲ್ಲಿ ಎಲ್ಲ ತೀರ್ಥಗಳ ಮಹಿಮಾ ವರ್ಣನೆ ಬರುತ್ತದೆ.

ಏಳನೆಯದಾದ ಪ್ರಭಾಸಖಂಡದಲ್ಲಿ ಏಳು ಭಾಗಗಳು ಇರುತ್ತವೆ. (೧) ಮಾಹೇಶ್ವರ ಭಾಗ (ಇದರಲ್ಲಿ ಕುಮಾರಸ್ವಾಮಿಯ ಮಾಹಾತ್ಮ್ಯವನ್ನು ಚೆನ್ನಾಗಿ ಬಣ್ಣಿಸಲಾಗಿದೆ).

(೨) ವೈಷ್ಣವ ಭಾಗ (೩) ಬ್ರಾಹ್ಮ ಮಾಹಾತ್ಮ್ಯ (೪) ಕಾಶೀ ಮಾಹಾತ್ಮ್ಯ (೫) ರೇವಾ ಉಜ್ಜೈನೀ ಮಾಹಾತ್ಮ್ಯ (೬) ನಾಗರ ಭಾಗ (೭) ಪ್ರಾಭಾಸಿಕ ಭಾಗ (ಈ ಭಾಗದಲ್ಲಿ ಪ್ರಭಾಸ ಕ್ಷೇತ್ರ ಮತ್ತು ದ್ವಾರಕಾ ಮೊದಲಾದ ಇತರ ತೀರ್ಥಕ್ಷೇತ್ರಗಳ ಹಾಗೂ ಮಹಾದೇವರ ಮತ್ತು ಇತರ ದೇವತೆಗಳ ಮಹಿಮೆಗಳು ವರ್ಣಿತವಾಗಿವೆ). ಇದು ನಾವು ಅನುವಾದಿಸುತ್ತಲಿರುವ ಸ್ಕಂದ ಪುರಾಣದ ಏಳು ಖಂಡಗಳ ಸಂಕ್ಷಿಪ್ತ ರೂಪರೇಷೆ.

## ಕಾಲಿಕಾ ಖಂಡದ ವಿಷಯ ವಿಸ್ತಾರ

ಸನತ್ಕುಮಾರ ಸಂಹಿತೆಯಲ್ಲಿ ಬರುವ ಕಾಲಿಕಾ ಖಂಕಡದಲ್ಲಿ ಭಗವಾನ್ ಪರಮೇಶ್ವರನ ಮಹಿಮೆಯ ವಿಷಯದಲ್ಲಿ ಅನೇಕ ಅಖ್ಯಾನ ಉಪಾಖ್ಯಾನಗಳಿದ್ದು ಐದುನೂರು ನದಿಗಳ ಉಗಮಾಗಮಗಳ ಉಲ್ಲೇಖವಿರುತ್ತದೆ. ಮತ್ತು ಭಿನ್ನ ಭಿನ್ನ ಜಾತಿ ಮತ ಆಚಾರ ಸಂಪ್ರದಾಯ ಕರ್ತವ್ಯ ಕರ್ಮಗಳ ಬೋಧನೆ ಇರುತ್ತದೆ. ಮತ್ತು ಭಾರತದ ಬೇರೆ ಬೇರೆ ದೇಶಾಚಾರ ಕುಲಾಚಾರಗಳ ವಿವರಣೆಯು ಬರುತ್ತದೆ. ಜಾಗತಿಕ ಭೂಗೋಲ ವರ್ಣನೆಯೂ ವಿಸ್ತಾರವಾಗಿ ಇಲ್ಲಿ ಬಂದಿದೆ. ಇದರಲ್ಲಿ (೧) ಕ್ಷೇತ್ರಖಂಡ, (೨) ತೀರ್ಥಖಂಡ (೩) ಕಾಶೀಖಂಡ (೪) ಸಹ್ಯಾದ್ರಿಖಂಡ (೫) ಹಿಮಾಚಲ ಖಂಡ (೬) ಮಲಯಾಚಲ ಖಂಡ (೭) ವಿಂಧ್ಯಾದ್ರಿ ಖಂಡ (೮) ಮೋಕ್ಷ ಖಂಡ (೯) ಪ್ರಭಾಸ ಖಂಡ (೧೦) ಪುಷ್ಕರ ಖಂಡ (೧೧) ನಾಗರ ಖಂಡ (೧೨) ನರ್ಮದಾ ಖಂಡ (೧೩) ಶ್ರೀ ಶೈಲಖಂಡ (೧೪) ಅವಂತಿ ಖಂಡ (೧೫) ಗೌರೀಖಂಡ (೧೬) ಕುರುಕ್ಷೇತ್ರ ಖಂಡ (೧೭) ಕೇದಾರಖಂಡ (೧೮) ಹರಿದ್ವಾರ ಖಂಡ (೧೯) ಸೇತುಮಾಹಾತ್ಮ್ಯ ಖಂಡ (೨೦) ಕಾಳೀಖಂಡ (೨೧) ವ್ರತೋಪಾಖ್ಯಾನ ಖಂಡ (೨೨) ನದೀಖಂಡ (೨೩) ಧರ್ಮಖಂಡ (೨೪) ದೇಶಖಂಡ (೨೫) ವರ್ಷ ಖಂಡ. ಹೀಗೆ ಇಪ್ಪತ್ತೈದು ಖಂಡಗಳು ಇರುತ್ತವೆ. ಹೀಗೆ ಗಾತ್ರದಲ್ಲಿ ಬೃಹತ್ತರ ಮಹಿಮೆಯಲ್ಲಿ ಮಹತ್ತರವಾದ ಈ ಸ್ಕಂದಪುರಾಣದಲ್ಲಿ ಅಂತರ್ಗತ ಎಂದು ಹೇಳಲಾದ ಎಷ್ಟೋ ಪುರಾಣ ವಿಭಾಗಗಳ ಉಪ ಸಂಹಿತೆಗಳೂ ಖಂಡೋಪಖಂಡಗಳೂ ದೇಶದ ಅನೇಕ ಕಡೆಗಳಲ್ಲಿ ಮುದ್ರಿತ ಅಮುದ್ರಿತ ಹಸ್ತಪ್ರತಿ ರೂಪದಲ್ಲಿ ಉಪಲಬ್ಧವಿರುತ್ತದೆ.

ಅಂಬಿಕಾ ಖಂಡ, ತಾಪೀಖಂಡ, ಕನಕಾದ್ರಿಖಂಡ, ಭೀಮಾಖಂಡ, ಶಿವರಹಸ್ಯ ಖಂಡ, ಸಹ್ಯಾದ್ರಿ ಖಂಡ, ಬೃಹತ್ ಬ್ರಹ್ಮೋತ್ತರ ಖಂಡ, ಪರ್ವತ ಖಂಡ, ಅಯೋಧ್ಯಾ ಖಂಡ, ಮಥುರಾ ಖಂಡ, ನಿರ್ವಾಣ ಖಂಡ, ಉಮಾಖಂಡ, ಪರಶುರಾಮ ಖಂಡ, ಭೂಖಂಡ, ಪೌಂಡ್ರ ಖಂಡ, ಚಮತ್ಕಾರ ಖಂಡ, ಕರತೋಯಾ ಮಾಹಾತ್ಮ್ಯ ಮುಂತಾದ ಪುರಾಣಾಖ್ಯಾನಗಳು ಸ್ಕಂದ ಪುರಾಣಾಂತರ್ಗತ ಎಂಬ ಪ್ರಸಿದ್ಧಿಯನ್ನು ಪಡೆದಿವೆ.

ಅನೇಕ ಪ್ರಾಚೀನ ತಾಂತ್ರಿಕ ಗ್ರಂಥಗಳಲ್ಲಿಯೂ ಸ್ಕಂದ ಪುರಾಣದ ಮಂತ್ರ ತಂತ್ರ ವಿಧಿ ವಿಧಾನಗಳ ಉದ್ಧರಣೆಯು ಕಂಡು ಬರುವುದರಿಂದ ಈ ಸ್ಕಂದ ಪುರಾಣವು ಕ್ರಿಸ್ತಪೂರ್ವ ಮೂರು ಸಾವಿರ ವರ್ಷಗಳ ಹಿಂದೆ ಭಗವಾನ್ ಬಾದರಾಯಣರಿಂದ ಸಂಹಿತಾರೂಪವಾಗಿ ರಚಿಸಲ್ಪಟ್ಟಿತು ಎಂದು ಒಪ್ಪಲೇ ಬೇಕಾಗುತ್ತದೆ. ಮುಂದೆ ಕಾಲಕ್ರಮದಿಂದ ಸಂಹಿತಾ ಭಾಗವು ಲುಪ್ತವಾಗತೊಡಗಿದಾಗ ಅಳಿದುಳಿದ ಸಂಹಿತೆಗಳ ಆಧಾರದ ಮೇಲೆ ಖಂಡಶಃ ಅಸ್ತಿತ್ವದಲ್ಲಿ ಬಂದ ಸ್ಕಂದ ಪುರಾಣವು ಕ್ರಿಸ್ತಶಕದ ಪ್ರಾರಂಭ ಕಾಲದಲ್ಲಿ ಈಗಿದ್ದ ರೂಪಕ್ಕೆ

ಇಳಿದಿರಬಹುದು. ಆದರೂ ಈಗಲೂ ಸಂಹಿತಾ ಭಾಗದಲ್ಲಿದ್ದ ಸ್ಕಂದ ಪುರಾಣವೂ ಅಲ್ಪಸ್ವಲ್ಪ ವ್ಯತ್ಯಸ್ತ ರೂಪದಲ್ಲಿ ಈಗಲೂ ಮುದ್ರಿತ ಹಾಗೂ ಅಮುದ್ರಿತ ಹಸ್ತಪ್ರತಿ ರೂಪದಲ್ಲಿ ದೊರಕುತ್ತಲಿದೆ. ಮುಂದಿನ ಕೆಲವು ಸಂಪುಟಗಳಲ್ಲಿ ಅವನ್ನೂ ಕ್ರೋಢೀಕರಿಸಿ ಕನ್ನಡಿಸಿ ಕೊಡುವ ಸಂಕಲ್ಪ ಮಾಡಲಾಗಿದೆ. ಪ್ರಕೃತ ಸ್ಕಂದ ಪುರಾಣದ ಪಾಂಡುಲಿಗಳ ಪಾಠಾಂತರ ಸಂಶೋಧನ ಭಾಷಾಂತರ, ಮುದ್ರಣ ಪ್ರತಿಯ ಪರಿಶೋಧನೆ, ಪಂಡಿತ ಅಣ್ಣಯ್ಯಾಚಾರ್ಯ ಗಲಗಲಿ ಹಾಗೂ ಪಂಡಿತ ಎಚ್.ಎಸ್. ಪುರಾಣಿಕ, ವಿದ್ವಾನ್ ಭೀಮಭಟ್ ಸಾಣೂರ, ಪಂಡಿತ ಶ್ರೀ ಸಗರಿ ರಾಘವೇಂದ್ರಾಚಾರ್ಯ, ಪಂಡಿತ ನಾರಾಯಣಚಾರ್ಯ ಗಲಗಲಿ, ಪಂ. ಜಿ. ಎಸ್. ಗೋವರ್ಧನಾಚಾರ್ಯ, ಜಿ.ಪಿ. ಗೋಪಿನಾಥ, ಸೌ. ವಾಣೀ ತೇರಗಾಂವಕರ, ಕೇ ಹಣಮಂತರಾವ, ಶ್ರೀ ಕುಲಕರ್ಣಿ, ಶ್ರೀ ಎನ್.ಎಸ್. ಗದಗಕರ ಮುಂತಾದ ವಿದ್ವನ್ಮಣಿಗಳಿಗೆಲ್ಲ ಕೃತಜ್ಞರಾಗಿದ್ದೇವೆ. ಮತ್ತು ಹಗಲಿರುಳೂ ಕುಳಿತು ಪ್ರೆಸ್‌ಕಾಪಿಯನ್ನು ಸಿದ್ಧಪಡಿಸಿದ ಚಿ॥ ಸೌ॥ ಜಿ. ಮಮತಾ, ಚಿ॥ ಸೌ॥ ಪಿ. ಮಂಜರೀ, ಚಿ॥ ಸೌ॥ ಚಿ. ವಂದನಾ ಈ ಮೂವರಿಗೂ ಈ ಗ್ರಂಥ ಪ್ರಕಾಶನ ಕಾರ್ಯದಲ್ಲಿ ಶ್ರೇಯಸ್ಸು ಸಲ್ಲಬೇಕು.

ನನಗೆ ಈ ಸ್ಕಂದಮಹಾಪುರಾಣವನ್ನು ಬರೆಯಲಿಕ್ಕೆ ಪ್ರೇರಣೆಯಾದುದು ಸ್ಕಂದ ಸ್ವಾಮಿಯ ಕ್ಷೇತ್ರವಾದ ಸಂಡೂರು ಗ್ರಾಮದಲ್ಲಿ. ಸಂಡೂರಿನ ಮಹಾರಾಜರೂ ಹಾಗೂ ಯುವರಾಜರು ಆದ ಮಾನ್ಯ ಮಂತ್ರಿ ಘೋರ್ಪಡೆಯವರು ಗಣೇಶಚತುರ್ಥಿಯ ಸಂದರ್ಭದಲ್ಲಿ ನನ್ನನ್ನು ಬರಮಾಡಿಕೊಂಡು ಕುಮಾರಸ್ವಾಮಿಯ ದರ್ಶನ ಮಾಡಿಸಿ ನಾನು ಬರೆಯಬೇಕೆಂದಿರುವ ಸ್ಕಂದ ಪುರಾಣದ ಸಂಶೋಧನೆ, ಲೇಖನ ಹಾಗೂ ಮೊದಲನೇ ಮುದ್ರಣಕ್ಕೆ ೧೯೮೨ನೇ ಇಸವಿಯಲ್ಲಿ ಧನಸಹಾಯ ಮಾಡಿದ್ದಾರೆ. ಈ ರಾಜ ಕುಟುಂಬಕ್ಕೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಮಹಾಮಹೋಪಾಧ್ಯಾಯ

15-2-2007 **ಶ್ರೀ ಪಂಢರೀನಾಥಾಚಾರ್ಯ ಗಲಗಲಿ**

ಹುಬ್ಬಳ್ಳಿ ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ-580 032

# ಕೃತಜ್ಞತಾ ಸಮರ್ಪಣೆ

ಸಂಸ್ಕೃತದಲ್ಲಿ ಒಂದು ಸುಭಾಷಿತವಿದೆ.

**ಶತೇಷು ಜಾಯತೇ ಶೂರಃ ಸಹಸ್ರೇಷು ಚ ಪಂಡಿತಃ ।**

**ವಕ್ತಾ ದಶಸಹಸ್ರೇಷು ದಾತಾ ಭವತಿ ವಾ ನ ವಾ ॥**

ಈ ಸುಭಾಷಿತಕಾರನ ಸಂದೇಹಕ್ಕೆ ಸಮಂಜಸ ಉತ್ತರವೆಂದರೆ ಬೆಂಗಳೂರಿನ ಸುಪ್ರಸಿದ್ಧ ಉದ್ಯಮಿಗಳಾದ ಶ್ರೀಹರಿಖೋಡೆಯವರು. ಶ್ರೀ ವೇದವ್ಯಾಸಮಹರ್ಷಿಗಳಿಂದ ರಚಿತವಾದ ಹದಿನೆಂಟೂ ಪುರಾಣಗಳ ಕನ್ನಡ ಅನುವಾದ ಗ್ರಂಥಗಳ ಸುಂದರ ಮುದ್ರಣ ಮತ್ತು ಪ್ರಕಾಶನದ ಬಹುದೊಡ್ಡ ಭಾರವನ್ನು, ಕೂರ್ಮರೂಪಿ ಶ್ರೀಹರಿಯು ತನ್ನ ಬೆನ್ನಮೇಲೆ ಮಂದಾರ ಪರ್ವತವನ್ನು ಹೊತ್ತಂತೆ, ಶ್ರೀಹರಿಖೋಡೆಯವರೂ ಹೊತ್ತಿದ್ದಾರೆ. ನನ್ನ ಮೇಲಿನ ಭಾರವನ್ನು ಕಡಿಮೆ ಮಾಡಿ ನಾನು ನಿರಂತರ ಪುರಾಣಗ್ರಂಥಗಳ ಸಂಶೋಧನೆ ಪರಿಶೀಲನೆ ಮುದ್ರಣಾದಿ ಕಾರ್ಯಗಳನ್ನು ನಿಶ್ಚಿಂತೆಯಿಂದ ಮಾಡಲು ಸರ್ವವಿಧ ಸೌಲಭ್ಯ ಒದಗಿಸಿಕೊಡುತ್ತಿದ್ದಾರೆ.

ಈ ಸ್ಕಂದಮಹಾಪುರಾಣ ಮುದ್ರಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮಾಡಿರುವ ಶ್ರೀ ವೆಂಕಟೇಶ್ವರ ಪ್ರಿಂಟರ್ಸ್, ನಂ.3, ಯಲ್ಲಪ್ಪರಸ್ತೆ, ಚಿಕ್ಕಮಾವಳ್ಳಿ (ಸುಶೀಲರಸ್ತೆ ಕ್ರಾಸ್) ಬೆಂಗಳೂರು-560 004 ಮಾಲೀಕರಾದ ಮುದ್ರಣಪ್ರಶಸ್ತಿ ವಿಜೇತ ಕೆ. ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ ಹಾಗೂ ಶ್ರೀಮತಿ ಮತ್ತು ಶ್ರೀ ಎಂ. ಮಂಜುನಾಥ್‌ರವರಿಗೆ ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ. ಮುದ್ರಣ ಕಾರ್ಯದಲ್ಲಿನ ಅವರ ಮೂವತ್ತೇಳು ವರ್ಷದ ಅನುಭವ ಇಲ್ಲಿ ವ್ಯಕ್ತವಾಗಿದೆ. ಹಾಗೂ ಈಗಿನ ಕಂಪ್ಯೂಟರ್ (ಡಿ.ಟಿ.ಪಿ.) ಅಕ್ಷರ ಜೋಡಣೆಯ ಅನುಕೂಲತೆಯ ಜೊತೆ, ಮಾಡುವ ಪ್ರತಿ ಕೆಲಸದಲ್ಲಿನ ವೈಯಕ್ತಿಕ ಶ್ರದ್ಧೆ ಮತ್ತು ಮುದ್ರಣ ಮಾಡುವ ಎಲ್ಲಾ ಕೆಲಸಗಳು ಅಚ್ಚುಕಟ್ಟಾಗಿರಬೇಕೆಂಬ ಸಂಕಲ್ಪದಿಂದ ಈ ಗ್ರಂಥ ಮುದ್ರಣ ಮಾಡಿದ್ದಾರೆ. ರಕ್ಷಾಪುಟ ವಿನ್ಯಾಸವನ್ನು ಕಲಾವಿದರಾದ ಶ್ರೀ ಎಂ. ಮೋಹನ್, ತ್ಯಾಗರಾಜ ನಗರ, ಮೊಬೈಲ್ : 9342889827 ಬೆಂಗಳೂರು ಇವರು ಬಹಳ ಶ್ರದ್ಧೆಯಿಂದ ಅಚ್ಚುಕಟ್ಟಾಗಿ ಚಿತ್ರಿಸಿದ್ದಾರೆ. ಶ್ರೀಪಾಂಡುರಂಗ ವಿಠಲದೇವರು ಅವರಿಗೂ, ಅವರ ಕುಟುಂಬ ಪರಿವಾರಕ್ಕೂ ಆರೋಗ್ಯ ಸೌಭಾಗ್ಯಗಳನ್ನು ದಯಪಾಲಿಸಿ ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಮುಖ್ಯವಾಗಿ ನನ್ನನ್ನು ಕೈಗಾರಿಕೋದ್ಯಮಿ ಎಲ್. ಶ್ರೀಹರಿಖೋಡೆಯವರಿಗೆ ಪರಿಚಯಿಸಿ, ಅವರಿಗೆ ಈ ಕಾರ್ಯದ ಮಹತ್ವ, ಅವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣ ಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ ಶ್ರೀ ಅನಂತರಾವ್ ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ. ಈ ಗ್ರಂಥ ಪಠಿಸುವವರಿಗೆಲ್ಲಾ ಶ್ರೀಹರಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ ಎಂದು ಆಶಿಸುತ್ತೇನೆ.

ಮಹಾಮಹೋಪಾಧ್ಯಾಯ

15 – 02– 2007 **ಪಂಢರೀನಾಥಾಚಾರ್ಯ ಗಲಗಲಿ**

ಹುಬ್ಬಳ್ಳಿ **ಶಾಂತಿ ಕಾಲೋನಿ, ವಿಶ್ವೇಶ್ವರನಗರ, ಹುಬ್ಬಳ್ಳಿ-580 032**

# ಪುರಾಣ ಪ್ರಜ್ಞೆ

ಭಾರತೀಯ ಸಂಸ್ಕೃತಿಯ ಸಂಕೇತವಾಗಿ ಇಂದಿಗೂ ಅಳಿಯದೆ ಉಳಿದಿರುವ ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಪುರಾಣಗಳಿಗೆ ಪ್ರಧಾನ್ಯವಿದೆ. ಭಾರತೀಯ ಸಂಸ್ಕೃತಿ ಬೆಳೆದು ಮಹಾವಟ ವೃಕ್ಷವಾಗಿ ನೆರಳು ನೀಡುತ್ತಿರುವ ಕಥೆ ಈ ಪುರಾಣಗಳಿಂದ ಚೆನ್ನಾಗಿ ತಿಳಿದುಬರುತ್ತದೆ. ಭಾರತೀಯರ ಜನಜೀವನದ ಪ್ರತಿಬಿಂಬವೇ ಈ ಪುರಾಣಗಳು.

ವೇದಗಳನ್ನು ಬಿಟ್ಟರೆ ಪುರಾಣಗಳಿಗೆ ಹೆಚ್ಚು ಮಹತ್ವ. ಇದಕ್ಕೆ 'ಪಂಚಮವೇದ' ಎಂದೂ ಕರೆಯುತ್ತಾರೆ. ಶ್ರುತಿ, ಸ್ಮೃತಿ ಮತ್ತು ಇತಿಹಾಸಗಳಿಗೆ ಧರ್ಮಾದಿ ವಿಷಯಗಳ ವರ್ಣನೆ ಮತ್ತು ನಿರೂಪಣೆಯಲ್ಲಿ ಸಮಸಮವಾಗಿ ತೂಗುವ, ಸತ್ಯ, ತತ್ವ ಮತ್ತು ಮಹತ್ವವೇನೆ ಇದ್ದರೂ ಅದು ಪುರಾಣಗಳಿಂದ ಬರುತ್ತದೆ.

ಅಮರಸಿಂಹನ ನಾಮಲಿಂಗನುಶಾಸನದಲ್ಲಿ ಪುರಾಣದಲ್ಲಿರುವುದನ್ನು ಈ ರೀತಿ ಹೇಳುತ್ತಾರೆ.

**''ಆಖ್ಯಾಯಿಕೋಪಲಬ್ಧಾರ್ಥಾಪುರಾಣ ಪಂಚಲಕ್ಷಣಂ,**
**ಸ್ವರ್ಗಶ್ಚ ಪ್ರತಿಸ್ವರ್ಗಶ್ಚ ವಂಶೋಮನ್ವಂತರಾಶಿ ಚ**
**ವಂಶಾನುಚರಿತಂ ಚೈವ ಪುರಾಣಂ ಪ್ರಂಚಲಿಪುಣಂ''**

ಒಟ್ಟು ಹದಿನೆಂಟು ಪುರಾಣಗಳು, ಬ್ರಹ್ಮ, ಪದ್ಮ, ವಿಷ್ಣು, ವಾಯು, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ವರಾಹ, ಲಿಂಗ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ ಇವುಗಳು ನಾಲ್ಕು ಲಿಪಿ ಶ್ಲೋಕಗಳಲ್ಲಿ ಬಂದಿವೆ.

ಪ್ರಸ್ತುತ ಪಂಡಿತ ಪಂಢರೀನಾಥಾಚಾರ್ಯ ಗಲಗಲಿಯವರು ಬಹುಶ್ರಮದಿಂದ ಈ ಪುರಾಣಗಳನ್ನು ಲೇಖಾನುವಾದ ಮಾಡಿದ್ದಾರೆ. ನಮ್ಮ ಭಾರತದೇಶದ, ವಿಶೇಷವಾಗಿ ಕರ್ನಾಟಕದ ಜನತೆಯ ಮನೆ-ಮನದಲ್ಲಿ ಅವರು ಪ್ರಾತಃಸ್ಮರಣೀಯರು.

ಆದ್ದರಿಂದ ಈ ಎಲ್ಲಾ ಹದಿನೆಂಟುಪುರಾಣಗಳನ್ನು ಪಠಿಸಿ, ಕೇಳಿ, ಮನನ ಮಾಡಿಕೊಂಡು ಬಾಳನ್ನು ಸಾರ್ಥಕಗೊಳಿಸಿಕೊಳ್ಳೋಣ. ಹಾಗೆಯೇ. ''ಅಬ್ಧಿಗೆ ಅತಿ ಮಿತಿಯುಂಟು, ಆದರೆ ಬುದ್ಧಿಗೆ ಮಿತಿಯಿಲ್ಲ.'' ಆದ್ದರಿಂದ ಪ್ರಜ್ಞರು, ಬಲ್ಲವರು ಈ ಪುರಾಣಗಳಲ್ಲಿ ಬರುವ, ವಸ್ತು, ಪಾತ್ರ, ಶೈಲಿ, ನಿರೂಪಣೆ ಮತ್ತು ಭಾಷೆಯ ಬಗ್ಗೆ ತಮ್ಮ ಅಭಿಪ್ರಾಯ ಮತ್ತು ಲೋಪದೋಷ, ಜಿಜ್ಞಾಸೆಗಳೇನಾದರೂ ಕಂಡು ಬಂದಲ್ಲಿ ಅದನ್ನು ತಮ್ಮ ಪ್ರತಿಯಲ್ಲಿ ತಿದ್ದಿ ತಿಳಿಸಿದರೆ ಅದರಬದಲು ತಮ್ಮಗೆ ಮತ್ತೊಂದು ಶುದ್ಧಪ್ರತಿಯನ್ನು ನೀಡಲಾಗುವುದು. ಹಾಗೂ ತಾವು ತೋರಿಸಿದ ಲೋಪ- ದೋಷಗಳನ್ನು ಪರಿಷ್ಕರಿಸಿ ದ್ವಿತೀಯ ಮುದ್ರಣದಲ್ಲಿ ಅಳವಡಿಸಿ ಕೊಳ್ಳಲು ಸಂಪಾದಕ ವರ್ಗವು ಸದಾ ಸಿದ್ಧವಿದೆ. ದ್ವಿತೀಯಮುದ್ರಣದ ನಂತರ ತಮಗೆ ಉಡುಗೊರೆಯ ಜೊತೆ ನೂತನ ಪರಿಷ್ಕರಿಸಿದ ಪ್ರತಿಯನ್ನೂ ಸಹ ನೀಡಲಾಗುವುದು. ತಮ್ಮ ಅಭಿಪ್ರಾಯವನ್ನು ಅತ್ಯಂತ ಆದರದಿಂದ ಸ್ವಾಗತಿಸುತ್ತೇವೆ. ದಯವಿಟ್ಟು ಈ ಅನಂತಸಾಗರ ಪುರಾಣಪ್ರಜ್ಞಾ ಕೈಂಕರ್ಯದಲ್ಲಿ ತಮ್ಮ ಪಾಂಡಿತ್ಯವನ್ನು ವಿನಿಯೋಗಿಸಿ. ಹಾಗೂ ದ್ವಿತೀಯ ಮುದ್ರಣವು ಇನ್ನೂ ಉತ್ತಮವಾಗಿ ಹೊರತರಲು ತಮ್ಮೆಲ್ಲರ ಸಹಕಾರ ಅಗತ್ಯ.

**ಎಲ್. ಶ್ರೀಹರಿ ಖೋಡೆ**
ಪ್ರಕಾಶಕರು, ಖೋಡೆ ಫೌಂಡೇಶನ್,
ಗ್ರಂಥಪ್ರಕಟಣಾ ವಿಭಾಗ

ನಂ. 9, ಮೊದಲನೇ ಮುಖ್ಯರಸ್ತೆ,
ಶೇಷಾದ್ರಿ ರಸ್ತೆ, ಗಾಂಧಿನಗರ,
ಬೆಂಗಳೂರು-560 009

# ಸ್ಕಂದಮಹಾಪುರಾಣ ಭಾಗ-೨

## ಕುಮಾರಿಕಾ ಖಂಡ, ವೈಷ್ಣವ ಖಂಡ, ಬ್ರಹ್ಮ ಖಂಡ

### ಕುಮಾರಿಕಾ ಖಂಡ



### ವೈಷ್ಣವ ಖಂಡ

## ಬ್ರಹ್ಮ ಖಂಡ



*ಬ್ರಹ್ಮ ಖಂಡವು ಸ್ಕಂದ ಮಹಾ ಪುರಾಣ ಭಾಗ - 3 ರಲ್ಲಿ 73ನೇ ಅಧ್ಯಾಯದಿಂದ ಮುಂದುವರೆದು ಅಧ್ಯಾಯ....... 4 ರಲ್ಲಿ ಪೂರ್ಣವಾಗುವುದರೊಂದಿಗೆ ಬ್ರಹ್ಮ ಖಂಡವು ಸಂಪೂರ್ಣವಾಗುತ್ತದೆ*

# ಸ್ಕಂದಮಹಾಪುರಾಣ

## ಭಾಗ-೨

## ಕುಮಾರಿಕಾ ಖಂಡ

ಅಧ್ಯಾಯ - ೩೭

### ನಾರದರ ಕಲಹಕೃತಿಗಳ ಕಾರಣ

**ಅರ್ಜುನ:-** ನಾರದರೇ, ನೀವು ಸಾಮಾನ್ಯರಲ್ಲ. ಋಷಿಗಳು, ಬರೀ ಋಷಿಗಳಲ್ಲ; ಸುರಲೋಕದ ದೇವರ್ಷಿಗಳು, ದಿವ್ಯಜ್ಞಾನಿಗಳು, ಕರುಣೆ ನಿಮ್ಮ ಹೃದಯದಲ್ಲಿ ಮಡುಗಟ್ಟಿದೆ. ಎಲ್ಲ ಇಂದ್ರಿಯ ಎಂಬ ಕುದುರೆಗಳ ಕಡಿವಾಣ ನಿಮ್ಮ ಕೈಯಲ್ಲಿ ಇದೆ. ರಾಗದ್ವೇಷಗಳು, ನಿಮ್ಮ ಸನಿಹದಲ್ಲಿಯೂ ಸುಳಿಯಲಾರವು ಉಳಿದ ಕಾಮ-ಕ್ರೋಧ ಮದ-ಮತ್ಸರಾಧಿ ದೋಷಗಳಂತೂ ನಿಮ್ಮಿಂದ ಬಹೂದೂರ. ಆದರೆ ನೀವು ದೇವ ದಾನವರಲ್ಲಿ ಸುರ-ನರರಲ್ಲಿ ಕಲಹದ ಬೀಜ ಬಿತ್ತುವಿರಿ. ನೀವು ಹಚ್ಚಿದ ಈ ಕಲಹದ ಕಿಡಿಯಿಂದ ಪುರಾಣ ಕಾಲದಲ್ಲಿ ಎಷ್ಟೋ ಯುದ್ಧಗಳ ಕಾಡ್ಗಿಚ್ಚು ಹಬ್ಬಿ ಕೊಟ್ಯಾವಧಿ ದೇವ ದಾನವ ಮಾನವರ ಆಹುತಿ ತೆಗೆದುಕೊಂಡಿದೆ. ನಿಮ್ಮಂಥ ಮಹಾನುಭಾವರು ಹೀಗೆ ಕಲಹಪ್ರಿಯರಾಗಿ ಸುರಾಸುರರ ಸ್ನೇಹ ಸಂಬಂಧಗಳಿಗೆ ಕೊಳ್ಳಿ ಇಡಲು ಕಾರಣವೇನು? ನಿಮ್ಮಲ್ಲಿ ಇಂತಹ ಕಲಹಕಾರಿ ಪ್ರವೃತ್ತಿಯು ಬೆಳೆಯಲು ಏನು ಕಾರಣ? ಇದರ ವಿವರಣೆಯನ್ನು ಹೇಳಿರಿ.

**ಲೋಮಶ ಸೂತರು:-** ಶೌನಕರೇ, ಅರ್ಜುನನ ಈ ಮಾರ್ಮಿಕ ಪ್ರಶ್ನೆಯನ್ನು ಕೇಳಿ ನಾರದರ ಮುಖದಲ್ಲಿ ಮಂದಹಾಸ ಮಿನುಗಿತು. ಅವರು ಅರ್ಥಪೂರ್ಣ ದೃಷ್ಟಿಯಿಂದ ತಮ್ಮ ಸಮೀಪದಲ್ಲಿಯೇ ಕುಳಿತ ಬಾಭ್ರವ್ಯ ಮುನಿಯ ಕಡೆಗೆ ನೋಡಿದರು. ಬಾಭ್ರವ್ಯರು ಹಾರೀತ ಕುಲದಲ್ಲಿಯೇ ಹುಟ್ಟಿದ ಮಹಾಮೇಧಾವಿ ಮುನಿ, ಮಹಾಬುದ್ಧಿವಂತ. ನಾರದರ ಸ್ನಿಗ್ಧ ದೃಷ್ಟಿಯ ಇಂಗಿತವನ್ನು ಅವರು ಕೂಡಲೇ ಗ್ರಹಿಸಿದರು. ಋಷಿಮಂಡಲದ ಮಧ್ಯದಲ್ಲಿ ಎದ್ದು ಬಂದು ಆ ಮಧ್ಯಮ ಪಾಂಡುನಂದನನ ಆ ವಿಚಿತ್ರ ಪ್ರಶ್ನೆಗೆ ಉತ್ತರ ಕೊಡಲು ಮುಂದಾದರು.

**ಬಾಭ್ರವ್ಯ:-** ಪಾಂಡುಪುತ್ರ, ನೀನು ವೀಣಾವಿನೋದ ರಸಿಕರಾದ ದೇವರ್ಷಿ ನಾರದರ ಬಗೆಗೆ ಕೇಳಿದ ಪ್ರಶ್ನೆ ಮಾರ್ಮಿಕವಾಗಿದೆ. ನಿನ್ನ ಸಂದೇಹ ಯಥಾರ್ಥವಾದುದು. ಪೌರಾಣಿಕ ಸನ್ನಿವೇಶಗಳನ್ನು ಐತಿಹಾಸಿಕ ಘಟನಾವಳಿಗಳನ್ನು ಕೇಳಿದವರಿಗೆ ನಾರದರ ಈ ಕಲಹ ಪ್ರವೃತ್ತಿ ಕಂಡು ಕೌತುಕವೆನಿಸುವುದು ಸ್ವಾಭಾವಿಕ. ದಿವ್ಯಜ್ಞಾನಿಗಳೂ, ಮಹಾ ಭಗವದ್ಭಕ್ತರೂ, ಸುರಲೋಕದ ಮಹರ್ಷಿಗಳೂ ಆದ ನಾರದರು ಹೀಗೆ ಹೊದಲ್ಲೆಲ್ಲ ಕಲಹಾಗ್ನಿಯ ಕಿಡಿಗಳನ್ನು ಹೊತ್ತಿಸುತ್ತ ಹೋಗುವದು ಏಕೆ? ಎಂದು ಪ್ರತಿಯೊಬ್ಬರಿಗೂ ಸಂದೇಹ ಬಂದೆ ಬರುವುದು. ಈ ವಿಷಯದಲ್ಲಿ ನಾನು ಸಾಕ್ಷಾತ್ ಶ್ರೀಕೃಷ್ಣನ ಮುಖದಿಂದಲೇ ಕೇಳಿದ ಮಾತನ್ನು ನಿಮಗೆ ಹೇಳುತ್ತೇನೆ. ಚಿತ್ತವಿಟ್ಟು ಕೇಳಿರಿ.

ಈ ಧರೆಯ ಹೊರೆಯನ್ನು ಇಳಿಸಲಿಕ್ಕಾಗಿ ಅವತಾರ ಎತ್ತಿದ್ದಾನೆ ಆ ಶ್ರೀಹರಿ. ದನಗಾಹಿಗಳ ಗುಂಪಿನಲ್ಲಿ ಬೆಳೆದು ಆಡಿ ಶ್ರೀಕೃಷ್ಣ ಎಂಬ ಹೆಸರಿನಿಂದ ಪ್ರಖ್ಯಾತನಾಗಿದ್ದಾನೆ. ಲೀಲಾವತಾರಿಯಾದ ಆ ಕೃಷ್ಣಪ್ರಭು ಕೆಲವು ದಿನಗಳ ಹಿಂದೆ ಈ ಮಹೀಸಾಗರ ಸಂಗಮ ತೀರ್ಥಕ್ಕೆ ದಿಗ್ವಿಜಯ ಮಾಡಿಸಿದ್ದ. ಆ ಯಾದವ ನಂದನನ ಜೊತೆಗೆ ಅವನ ಹಡೆದ ತಂದೆಯಾದ ವಸುದೇವ, ರಾಜನಾದ ಉಗ್ರಸೇನ, ಪುತ್ರನಾದ ಪ್ರದ್ಯುಮ್ನ, ಮಿತ್ರನಾದ ಬಬ್ರು ಉಳಿದ ಎಲ್ಲ ಯಾದವರೂ ಆಗಮಿಸಿದ್ದರು. ಶ್ರೀಕೃಷ್ಣ ಚಂದ್ರನೂ, ಅಷ್ಟಮಹಿಷಿಯರೂ, ನೂರೆಂಟು ರಾಣಿಯರೂ, ಹದಿನಾರು ಸಾವಿರ ಹೆಂಡಂದಿರೂ ಆ ಭಗವಂತನನ್ನು ಅನುಸರಿಸಿ ಈ ಸಂಗಮ ತೀರ್ಥದ ಸ್ನಾನಕ್ಕಾಗಿ ಬಂದಿದ್ದರು. ಆ ಎಲ್ಲ ತನ್ನ ಪುತ್ರ, ಮಿತ್ರ, ಕಲತ್ರ, ಬಂಧುಬಳಗ, ಭೃತ್ಯ ಭಕ್ತ, ಪರಿಚಾರಕ, ಪರಿವಾರದೊಂದಿಗೆ ಆ ಸ್ವಾಮಿ ಸ್ನಾನ ಮಾಡಿದ ಈ ಮಹೀಸಾಗರ ಸಂಗಮ ತೀರ್ಥದಲ್ಲಿ. ಅದರಿಂದ ಪಾವನವಾಯಿತು ಈ ತೀರ್ಥ. ಧನ್ಯವಾಯಿತು ಈ ದೇಶ. ಮಾನ್ಯವಾಯಿತು ಈ ನಾರದರ ಸ್ಥಾನ. ಲೋಕವಿಡಂಬನಾರ್ಥವಾಗಿ ಮಾನುಷ ಲೀಲೆಗೈಯುವ ಆ ಭಗವಂತನು ಎಲ್ಲರಂತೆ ತಾನೂ ಈ ತೀರ್ಥಜಲದಲ್ಲಿ ಮಿಂದು ದೇವರ ಪೂಜೆಮಾಡಿದ. ಇಲ್ಲಿಯ ಬ್ರಾಹ್ಮಣರಿಗೆಲ್ಲ ದಾನ ದಕ್ಷಿಣೆ ನೀಡಿದ. ಅನಂತರ ಅಲ್ಲಿಯೇ ಇದ್ದ ನಾರದರಿಗೆ ವಿಶೇಷ ಪೂಜೆ ಸಲ್ಲಿಸಿದ. ಆಗ ಅಲ್ಲಿಯೇ ಇದ್ದ ಯಾದವರಿಗೆಲ್ಲ ಮಹಾರಾಜನೆನಿಸಿದ ಉಗ್ರಸೇನನು ಕೃಷ್ಣಪರಮಾತ್ಮನಿಗೆ ಒಂದು ಪ್ರಶ್ನೆ ಮಾಡಿದ.

''ಕೃಷ್ಣ, ನೀನು ಜಗದೀಶ್ವರ, ಲೋಕದೃಷ್ಟಿಯಿಂದ ದನಕಾಯುವ ಗೋಪಾಲ. ವಸ್ತುತಸ್ತು ಗೋಪಾಲನಾದ ನೀನು ಜಗತ್ಪಾಲ. ದೇವದೇವ, ಇಂಥ ದೇವೋತ್ತಮನಾದ ನೀನು ಈ ಕಿಲಾಡಿ ನಾರದನನ್ನು ವಿಶೇಷವಾಗಿ ಪೂಜೆ ಮಾಡಿದ್ದು ಏಕೆ? ಈತ ಸರ್ವಶಾಸ್ತ್ರ ವಿಶಾರದ. ಶಾರದೆ ಇವನ ನಾಲಿಗೆಯ ತುದಿಯಲ್ಲಿ. ಸರ್ವಶಾಸ್ತ್ರಗಳೂ ಇವನ ಅಂಗೈಯಲ್ಲಿ ಹಾಗೂ ನಾದಬ್ರಹ್ಮನಾದ ಇವನ ಕೈಬೆರಳು ಮೀಟುವ ತಂಬೂರಿಯ ತಂತಿಯಲ್ಲಿ ಇವೆ. ಇದರಲ್ಲಿ ಸಂದೇಹವಿಲ್ಲ. ಆದರೆ ಇವನೊಬ್ಬ ಕಿಲಾಡಿ. ಯಾವಾಗಲೂ ಇವನಿಗೆ ಕಲಹ ಕುತೂಹಲ. ಇವನ ಕದನ ಕೌತುಕಕ್ಕೆ ಕೊಟ್ಯಾವಧಿ ದೇವದಾನವ ಮಾನವರು ಬಲಿಯಾಗಿದ್ದಾರೆ. ಗಾಳಿಯಂತೆ ಎಲ್ಲ ಲೋಕಗಳಲ್ಲಿಯೂ ಸ್ವೈರ ಸಂಚಾರಗೈಯುವ ಈ ಸ್ವರಬ್ರಹ್ಮನು ಕಲಹಕೇಳೀ ಕುತೂಹಲದಿಂದ ಎಲ್ಲಕಡೆಗೂ ವೈರದ ಕಿಡಿ ತಾಕಿಸಿ ಯುದ್ಧದ ಜ್ವಾಲಾಮುಖಿಗಳನ್ನು ಸ್ಫೋಟಗೊಳಿಸುವುದು ಏಕೆ?

**ಶ್ರೀಕೃಷ್ಣ:-** ರಾಜನ್, ನೀನು ಪ್ರಶ್ನೆ ಕೇಳಿದ ವಿಷಯವು ಯಥಾರ್ಥ. ನಾರದ ಹೋದಲ್ಲೆಲ್ಲ ಇಂಥ ಉಪದ್ವ್ಯಾಪ. ಇದರ ಹಿನ್ನೆಲೆಯಲ್ಲಿ ಇರುವ ಕಾರಣವನ್ನು ಗುರುತಿಸುವದು ಅಗತ್ಯ. ಪೂರ್ವ ಕಾಲದಲ್ಲಿ ಬ್ರಹ್ಮದೇವರ ಅಪ್ಪಣೆಯಂತೆ ದಕ್ಷ ಪ್ರಜಾಪತಿಯು ಸೃಷ್ಟಿ ಕಾರ್ಯದಲ್ಲಿ ಪ್ರವರ್ತಿಸಿದ್ದ. ಅವನಿಗೆ ಸಾವಿರ ಮಕ್ಕಳು. ಅವರೆಲ್ಲರೂ ಒಮ್ಮೆ ಈ ನಾರದನ ಸಂಪರ್ಕದಲ್ಲಿ ಬಂದರು. ಅವರಿಗೆಲ್ಲ ನಾರದನ ಉಪದೇಶ, ಎಲ್ಲರ ಮನಸ್ಸಿನಲ್ಲಿಯೂ ವೈರಾಗ್ಯ. ಸಂಸಾರದಲ್ಲಿ ಜಿಗುಪ್ಸೆ. ಅಧ್ಯಾತ್ಮದಲ್ಲಿ ಜಿಜ್ಞಾಸೆ. ಎಲ್ಲರಿಗೂ ಮೋಕ್ಷಪಥದಲ್ಲಿ ಮುನ್ನುಗ್ಗುವ ಹವ್ಯಾಸ. ಮನೆಮಾರು ತೊರೆದರು. ಸಂಸಾರವನ್ನು ಜರಿದರು. ಕಾಡಿಗೆ ನಡೆದರು. ತಪಂಗೈದರು. ತಪೋನುಷ್ಠಾನ

ತತ್ಪರರಾದರು. ವೈರಾಗ್ಯ ಭಾಗ್ಯ ಅವರದಾಗಿತ್ತು. ಕೈವಲ್ಯ ಅವರ ಕೈಗೆ ಎಟಕಿತ್ತು. ಸಾವಿರ ದಕ್ಷನ ಮಕ್ಕಳಲ್ಲಿ ಯಾರೂ ಮರಳಿ ಮನೆಗೆ ಬರಲಿಲ್ಲ. ಮನೆಯವರನ್ನು ನೆನೆಯಲಿಲ್ಲ. ದಕ್ಷ ಪ್ರಜಾಪತಿಯು ಕೈಕೊಂಡ ಸೃಷ್ಟಿ ಪ್ರಕರಣ ಅಲ್ಲಿಯೇ ನಿಂತಿತು.

ಮತ್ತೆ ಸಾವಿರ ಮಕ್ಕಳನ್ನು ಹೆತ್ತ ಆ ಭೂಪ. ಅವರಿಗೂ ಒಂದಾನೊಂದು ದಿನ ನಾರದರ ಭೇಟಿ. ಸಂಸಾರದ ಅಸಾರತೆಯ ಉಪದೇಶ. ವೈರಾಗ್ಯದ ಸಂದೇಶ. ಪ್ರಪಂಚವನ್ನು ಬಿಟ್ಟು ಅರಣ್ಯಕ್ಕೆ ತಪೋನುಷ್ಠಾನಕ್ಕಾಗಿ ಹೋಗಲು ಆದೇಶ. ಅಣ್ಣಂದಿರ ದಾರಿಯನ್ನೇ ಹಿಡಿದರು ಈ ಸಾವಿರ ಜನ ತಮ್ಮಂದಿರು, ಒಬ್ಬನೂ ಊರಿಗೆ ಬರಲಿಲ್ಲ. ಮನೆಗೆ ಮರಳಲಿಲ್ಲ. ಸಾವಿರ ಸಾವಿರ ಜನ ಮಕ್ಕಳನ್ನು ಹೆತ್ತ ಆ ತಾಯಿ ಮತ್ತೆ ಬಂಜೆ, ತಂದೆ ದಕ್ಷ ನಿಸ್ಸಂತಾನ. ರಾಜ್ಯಕ್ಕೆ ವಾರಸುದಾರರಿಲ್ಲ. ಸೃಷ್ಟಿ ಕಾರ್ಯವನ್ನು ಮುಂದುವರೆಸಲು ಯಾರೂ ದಿಕ್ಕಿಲ್ಲ, ಇದನ್ನು ನೋಡಿ ದಕ್ಷಪ್ರಜಾಪತಿಗೆ ಬ್ರಹ್ಮಾಂಡ ಕೋಪ. ಕೂಡಲೇ ಸಿಡಿದು ಬಂದಿತು ಅವನ ಬಾಯಿಂದ ಶಾಪ "ಕಿಲಾಡಿ ನಾರದ, ನೀನು ಸಂಸಾರದಲ್ಲಿ ಸರ್ವದಾ ತಿರುಗುತ್ತಲೇ ಇರು, ಎಲ್ಲಿಯೂ ಒಂದೆಡೆ ಸ್ಥಾಯಿಯಾಗಿ ನಿಲ್ಲಬೇಡ. ಅಲ್ಲಿ ಇಲ್ಲಿ ಚಾಡಿ ಹೇಳುತ್ತ ಕಲಹಪ್ರಿಯನಾಗಿ ಅಲೆದಾಡು."

ದಕ್ಷಪ್ರಜಾಪತಿಯ ಶಾಪವನ್ನು ಪರಿಹರಿಸುವ ಯೋಗ್ಯತೆಯಿತ್ತು ಈ ಮಹರ್ಷಿಗೆ. ಆದರೂ ಆ ದಕ್ಷನ ಶಾಪವನ್ನು ನಾರದ ಮುನಿ ಅಂಗೀಕರಿಸಿದ. ಸಾಮರ್ಥ್ಯವಿದ್ದರೂ ಇನ್ನೊಬ್ಬರ ಅಪರಾಧವನ್ನು ಮನ್ನಿಸುವುದು ಹಿರಿತನದ ಹೆಗ್ಗುರುತು ತಾನೆ!

## ಲೋಕಕಲ್ಯಾಣಕ್ಕಾಗಿ ನಾರದರ ತಂತ್ರ

ಇನ್ನು ದೇವದಾನವರಲ್ಲಿ ಹಾಗೂ ಇತರ ಜನರಲ್ಲಿ ಕಲಹದ ಬೀಜವನ್ನು ಬಿತ್ತಿ ಕದನದ ಕಿಡಿ ಕಿಚ್ಚಾಗಿ, ಸಿಡಿಲಾಗಿ ಸಿಡಿಯಲು ನಾರದ ಕಾರಣ ಎಂಬ ಅಪವಾದ ಈ ಮುನಿಯ ತಲೆಗೆ ಕಟ್ಟಿದೆ. ಆದರೂ ನಿಷ್ಪಕ್ಷಪಾತವಾಗಿ ವಿಚಾರಿಸಿದರೆ, ಇದರಲ್ಲಿ ನಾರದರ ತಪ್ಪು ಏನೂ ಇರುವುದಿಲ್ಲ. ದುಷ್ಟರಾದ ದೈತ್ಯದಾನವರು ಮದಾಂಧರಾಗಿ ವರ್ತಿಸುವಾಗ ಅವರನ್ನು ಕೊಂದು ಭೂಮಿಯ ಹೊರೆಯನ್ನು ಇಳಿಸುವದು ಭಗವಂತನ ಸಂಕಲ್ಪ. ಅದಕ್ಕೆ ಅನುಗುಣವಾಗಿ ಭೂಮಿಕಾ ರಚನೆಗೆ ನಾರದರ ಕಾರ್ಯಕ್ರಮದ ಉಪಕ್ರಮ. ವಿನಾಶಕಾಲವು ಒದಗಿ ಬಂದ ಆ ದಾನವರ ಮನಸ್ಸಿನಲ್ಲಿ ದೇವತೆಗಳ ವಿಷಯದಲ್ಲಿಯ ವೈರಭಾವನೆಗೆ ಗಾಳಿಹಾಕಿ ಅವರನ್ನು ಸಮರಕ್ಕೆ ಸಿದ್ಧರನ್ನಾಗಿ ಮಾಡಿ ರಣಕುಂಡದಲ್ಲಿ ಆ ಎಲ್ಲ ದುಷ್ಟ ದೈತ್ಯರ ಸಂಹಾರವಾಗಿ ಭೂಭಾರಹರಣರೂಪವಾದ ನನ್ನ ಈ ಭಗವತ್ಕಾರ್ಯದಲ್ಲಿ ಸಹಾಯಕನಾಗುತ್ತಾನೆ ಈ ನಾರದ. ಅವನು ಎಲ್ಲಿಯೂ ಸುಳ್ಳು ಹೇಳುವುದಿಲ್ಲ. ಅವನ ಕಲಹ ಪ್ರಿಯತೆಯಿಂದ ಸಜ್ಜನರಿಗೆ ಯಾರಿಗೂ ಕೇಡು ಉಂಟಾಗುವುದಿಲ್ಲ. ದೇವತೆಗಳಾಗಲೀ, ಅಥವಾ ದೇವತೆಗಳ ಒಡೆಯನಾದ ಶ್ರೀಹರಿಯಾಗಲಿ ದೈತ್ಯಧ್ವಂಸನ ಕಾರ್ಯದಲ್ಲಿ ಉದಾಸೀನರಾಗಿದ್ದರೆ, ಆ ಆಲಸ್ಯ ಮೂಲಕವಾಗಿ ದೈತ್ಯರ ಜನಪೀಡೆಯು ಉಲ್ಬಣವಾಗತೊಡಗಿದರೆ, ಈ ಧರೆಯ ಹೊರೆಯನ್ನು ಹಗುರುಗೊಳಿಸುವ ದೇವತಾಕಾರ್ಯವನ್ನು ಚುರುಕುಗೊಳಿಸಲಿಕ್ಕಾಗಿ, ಅತ್ತ ಇತ್ತ ಚಾಡಿ ಹೇಳಿ, ದ್ವೇಷಾಗ್ನಿ ಹೊತ್ತಿಸಿ, ದುಷ್ಟಶಕ್ತಿಗಳ ನಾಶವನ್ನು ಸಾಧಿಸಿ, ಲೋಕಕಲ್ಯಾಣಕ್ಕಾಗಿ ಕಾರಣನಾಗುತ್ತಾನೆ ಈ ನಾರದ.

ಅವನ ಈ ಕಲಹಪ್ರಿಯತೆ ಜಗತ್ತಿನ ಒಂದು ಕಲ್ಯಾಣ ಕಾರ್ಯವೇ. ನೋಡಲಿಕ್ಕೆ ಆಪಾತತಃ ನಾರದನು ಕಲಹ ಕೇಳೀ ಕುತೂಹಲಿ ಎಂದು ತೋರಿದರೂ, ವಾಸ್ತವಿಕವಾಗಿ, ಅವನು ಲೋಕಕಲ್ಯಾಣಕಾಂಕ್ಷಿಯೇ. ಆದುದರಿಂದಲೇ ಅವನಿಗೆ ಯಾವ ಪಾಪಲೇಪವೂ ಇಲ್ಲ. ಅವನು ಸರ್ವದಾ ಲೋಕ ಸಂಚಾರಗೈಯುತ್ತಿದ್ದರೂ ಅವನ ಮನಸ್ಸು ಧೈರ್ಯದಿಂದ ಚಲವಿಚಲವಾಗುವುದಿಲ್ಲ ಮತ್ತು ಜನ ಅವನನ್ನು ಎಷ್ಟೇ ದೂಷಿಸಿದರೂ ಅವನು ಈ ಕಲ್ಯಾಣ ಕಾರ್ಯದಿಂದ ಎಂದೂ ಹಿಂದಿರುಗುವುದಿಲ್ಲ. ಆದುದರಿಂದಲೇ ನನಗೆ ಅವನ ಮೇಲೆ ಅಧಿಕ ಪ್ರೇಮ. ಇದರಿಂದಲೇ ಜಗತ್ತಿಗೆ ಕ್ಷೇಮ. ದೇವರಾಜ ಇಂದ್ರನು ಅರಿತಿದ್ದಾನೆ ನಾರದರ ಮಹಿಮೆಯನ್ನು, ಬಾಯ್ತುಂಬ ಹೊಗಳಿದ್ದಾನೆ ಆ ದೇವರಾಜ ಈ ದೇವರ್ಷಿಯನ್ನು.

## ಇಂದ್ರಕೃತ ಆ ನಾರದ ಸ್ತೋತ್ರ

''ಬ್ರಹ್ಮದೇವರ ಅಂಗುಷ್ಠದಿಂದ ಜನಿಸಿದ ವಿಶ್ವವಿಖ್ಯಾತ ಚರಿತ್ರೆಯುಳ್ಳ ನಾರದರಿಗೆ ನಾನು ನಮಸ್ಕಾರ ಮಾಡುತ್ತೇನೆ.'' ಮಹಾಮುನಿಯೇ! ನಿನ್ನಲ್ಲಿ ಅಹಂಕಾರ ಅಂಕುರಿಸಿಲ್ಲ, ಕೋಪದ ಆವೇಶವಿಲ್ಲ. ಲೌಲ್ಯದ ಚಾಪಲ್ಯವಿಲ್ಲ, ಭಯದ ಅಪಾಯವಿಲ್ಲ. ಧೈರ್ಯವಿದ್ದರೂ ನೀನು ದೀರ್ಘಸೂತ್ರಿಯಲ್ಲ, ಅಂದರೆ ಆಲಸಿ ಅಲ್ಲ. ಇಂಥ ಸದ್ಗುಣಮಂಡಿತನಾದ ನಿನಗೆ ಪ್ರಣಾಮ, ನಿನ್ನ ಬಾಯಿಂದ ಕಾಮ ಅಥವಾ ಲೋಭದಿಂದ ಸುಳ್ಳು ಎಂದೂ ಬರುವುದಿಲ್ಲ, ಜನತೆಯ ಹಿತವೇ ನಿನ್ನ ಅರಸು ಗುರಿ. ಲೋಕ ಕಲ್ಯಾಣವೇ ನಿನ್ನ ಧ್ಯೇಯ, ಪರೋಪಕಾರವೇ ನಿನ್ನ ವ್ರತ. ಧರ್ಮಶ್ರದ್ಧೆಯೇ ನಿನ್ನ ಜೀವಾಳ. ಸಜ್ಜನರ ಸುಖವೇ ನಿನ್ನ ಹಂಬಲ, ಇಂಥ ದೇವರ್ಷಿಯನ್ನಲ್ಲದೇ ನಾನು ಬೇರೆ ಯಾರಿಗೆ ನಮಸ್ಕರಿಸಲಿ? ಯಾವನು ಮಾಡುವ ಸಮಸ್ತ ವ್ಯಾಪಾರವು ಭಗವಂತನ ಸಂಕಲ್ಪಾನುಸಾರವಾಗಿಯೇ ಇರುವುದೋ, ಜನರಿಗೆ ಹಿತವನ್ನು ಉಂಟು ಮಾಡುವುದೇ ತಪಸ್ಸು ಎಂದು ಯಾವನು ಬಗೆದಿದ್ದಾನೋ ಇಂಥ ಜನತಾ ಜನಾರ್ದನನ ಸೇವೆಗಾಗಿ ಆತ್ಮಾರ್ಪಣೆಯನ್ನೇ ಮಾಡಿದ ಮಹಾ ಮುನೀಶ್ವರ! ನಿನಗೆ ನನ್ನ ಅನಾಂತಾನಂತ ವಂದನೆ. ಯಾರಿಗೆ ಹಣ ಬಂದರೆ ಹರ್ಷವಿಲ್ಲ, ಹಾನಿಯಾದರೆ ದುಃಖವಿಲ್ಲ, ಯಾರ ಬುದ್ಧಿಯು ಸಂಸಾರದಲ್ಲಿ ಅನಾಸಕ್ತವಾಗಿ ಬ್ರಹ್ಮನಲ್ಲಿ ಆಸಕ್ತವಾಗಿದೆಯೋ ಅಂಥ ಸರ್ವಗುಣ ಸಂಪನ್ನ, ಕಾರ್ಯದಕ್ಷ, ಪರಮಪವಿತ್ರ, ಯಾವುದೇ ತರಹದ ಕಾತರ್ಯ ಅಧೈರ್ಯ ಇಲ್ಲದ, ಕಾಲಜ್ಞ ನೀತಿಜ್ಞ, ಉಚಿತಜ್ಞ ಎಂದು ಮಹಿತರಾದ ದೇವರ್ಷಿ ನಾರದರ ಅಡಿದಾವರೆಗಳಿಗೆ ನಾನು ಭಕ್ತಿಯಿಂದ ವಂದಿಸುತ್ತೇನೆ.''

ಮುನಿಗಳೇ, ನಾಕಲೋಕಾಧಿಪತಿಯು ನಿರ್ಮಿಸಿದ ಈ ನಾರದಸ್ತುತಿಯನ್ನು ಲೋಕ ಶಿಕ್ಷಣಕ್ಕಾಗಿ ನಾನೂ ಪ್ರತಿನಿತ್ಯವೂ ತಪ್ಪದೇ ಪಠಿಸುತ್ತೇನೆ. ಈ ನಾರದ ನನಗೆ ಎಂದಿನಿಂದಲೂ ಅಚ್ಚುಮೆಚ್ಚಿನ ಭಕ್ತ, ಪ್ರೀತಿಯ ಶಿಷ್ಯ, ಅವನ ಕಾರ್ಯಕ್ರಮಗಳೆಲ್ಲವೂ ನನ್ನ ಸಂಕಲ್ಪಾನುಸಾರವಾಗಿಯೇ ನಡೆಯುತ್ತವೆ. ಆದರಿಂದ ನಾರದರ ಕಾರ್ಯವೆಲ್ಲವೂ ನನ್ನ ಕಾರ್ಯ. ಭಗವತ್ಕಾರ್ಯ. ನಾನು ಇದೀಗ ಹೇಳಿದ ನಾರದರ ಗುಣವರ್ಣನೆಯನ್ನು ಕೇಳಿ ನಾರದರ ನಿಜವಾದ ಜೀವನದ ಹಿರಿಮೆಯನ್ನು ಅರಿತು, ಅವರ ಕಲಹಪ್ರಿಯತೆಯ ಹಿಂದಿನ ಮಹೋದ್ದೇಶವನ್ನು ತಿಳಿದುಕೊಂಡು ಆ ಮಹಾಮುನಿಯನ್ನು ಸ್ತುತಿಸುವವರ ಮೇಲೆ ನಾನು ಪ್ರಸನ್ನನಾಗುತ್ತೇನೆ.

## ಸ್ವಸ್ಥಾನದಲ್ಲಿಯೇ ನಾರದರಿಗೆ ಸತ್ಕಾರ

**ಬಾಭ್ರವ್ಯ:-** ಸಾಕ್ಷಾತ್ ಭಗವತ್ ಸ್ವರೂಪಿಯಷ್ಟೇ ಆ ಶ್ರೀಕೃಷ್ಣ! ಅವನ ಮುಖದಿಂದಲೇ ನಾರದರ ಗುಣಗಾನವನ್ನು ಕೇಳಿ ಉಗ್ರಸೇನ ಮಹಾರಾಜನಿಗೆ ಸಮಾಧಾನವಾಯಿತು. ಉಳಿದೆಲ್ಲ ಯಾದವರಿಗೂ ಸಂತಸ ಉಕ್ಕಿತು. ಅಂತರಂಗದಲ್ಲಿ ಎಲ್ಲರೂ ಪಠಿಸಿದರು ಆ ನಾರದ ಸ್ತೋತ್ರವನ್ನು. ಪ್ರತಿಯೊಬ್ಬರೂ ನಾ ಮುಂದೆ ತಾ ಮುಂದೆ ಎಂದು ಮುನ್ನುಗ್ಗಿ ಬಂದರು ನಾರದರ ಪೂಜೆಗೆ, ಎಲ್ಲರಿಂದಲೂ ಸರದಿಯಂತೆ ಆ ಮಹಾಮುನಿಯ ಪೂಜೆ. ಪರ್ಯಾಪ್ತ ದಕ್ಷಿಣೆ, ಹೃತ್ಪೂರ್ವಕ ಸತ್ಕಾರ, ಆದರದ ಉಪಚಾರ ಶ್ರೀಕೃಷ್ಣನ ಅಧ್ಯಕ್ಷತೆಯಲ್ಲಿ ಸಾಂಗವಾಗಿ ನಡೆಯಿತು. ನಾರದರ ಸ್ಥಾನದಲ್ಲಿಯೇ ಆ ನಾರದರ ಸತ್ಕಾರ ಸಮಾರಂಭ. ಆದರಿಂದ ಅಲ್ಲಿಯೇ ವಾಸ್ತವ್ಯ ಹೂಡಿದ ಹಾರೀತನೇ ಮೊದಲಾದ ಮಹರ್ಷಿಗಳೆಲ್ಲರಿಗೂ ಒಂದು ಹೆಮ್ಮೆ. ಸ್ವಯಂ ನಾರದಮುನಿಗೆ ಹರ್ಷ. ಭಗವಂತನ ಭಕ್ತವಾತ್ಸಲ್ಯತೆಯನ್ನು ಕಂಡು ಅವರು ಕಣ್ಣುದುಂಬಿದರು. ಕೃತಜ್ಞತೆಯಿಂದ ಅವನ ಕಾಲಿನ ತುದಿಗೆ ಹಣೆ ಹಚ್ಚಿದರು. ಭಗವಂತನೂ ಆಶೀರ್ವದಿಸಿದ ನಾರದರಿಗೆ. ನಾರದರು ಅಲ್ಲಿಗೆ ಬಂದ ಆ ಎಲ್ಲ ಬ್ರಹ್ಮವೃಂದಕ್ಕೂ ಶುಭಾಶಂಸನೆಗೈದರು. ತನ್ನ ಪರಿವಾರದೊಂದಿಗೆ ಶ್ರೀಕೃಷ್ಣ ದ್ವಾರಕೆಗೆ ತೆರಳಿದನು.

ಬಾಭ್ರವ್ಯರ ಈ ನುಡಿ ಮುತ್ತು ಎನಿಸಿತು ಆ ಧನಂಜಯನಿಗೆ. ನಾರದರ ವಿಚಿತ್ರವಾದ ಚಾರಿತ್ರಿಕ ಹಿರಿಮೆಯನ್ನು ಅರಿತು, ಅವನ ದೇಹವೆಲ್ಲವೂ ರೋಮಾಂಚಿತ. ಹೃದಯದಲ್ಲಿ ಭಕ್ತಿ ಅಂಕುರಿತ. ಕೂಡಲೇ ಅವನು ಎದ್ದು ನಾರದರಿಗೆ ವಂದಿಸಿದನು. ಕೈಮುಗಿದು ಕೇಳಿಕೊಂಡನು - ಮಹರ್ಷಿಗಳೇ! ನಿಮ್ಮ ಮುಖದಿಂದ ನಾನು ಈ ಗುಪ್ತಕ್ಷೇತ್ರದ ಮಹಿಮೆಯನ್ನು ಕೇಳಿದೆ. ಆದರೆ ಅದರಿಂದ ನನಗೆ ತೃಪ್ತಿಯಾಗಲಿಲ್ಲ; ಜ್ಞಾನದ ಹಸಿವು ಹೆಚ್ಚಾಯಿತು. ಇನ್ನೂ ಉಣ್ಣಬೇಕೆಂಬ ಆಸೆ. ಕೇಳಬೇಕೆನ್ನುವ ಹಂಬಲ ಅತ್ಯಧಿಕವಾಗಿದೆ. ಈ ತೀರ್ಥದ ಮಹಿಮೆಯನ್ನು ತಾವು ಇನ್ನಷ್ಟು ಹೇಳಿರಿ. ಆ ಅಮೃತವನ್ನು ಇನ್ನಷ್ಟು ಹನಿಸಿರಿ.

## ಗೌತಮೇಶ್ವರ ಪ್ರತಿಷ್ಠೆ

**ನಾರದ:-** "ಕೌಂತೇಯ, ಬಹುವರ್ಷಗಳ ಹಿಂದಿನಮಾತು, ಗೌತಮ ಎಂಬ ಓರ್ವ ಮಹಾಮುನಿ ಇದ್ದ. ಅವನಿಗೆ ಅಕ್ಷಪಾದ ಎಂತಲೂ ಹೆಸರು. ಬ್ರಹ್ಮದೇವರ ಮಾನಸಕುವರಿಯಾದ ಅಹಲ್ಯೆಯನ್ನು ವಿವಾಹವಾದ ಚತುರಮತಿಯೇ ಗೌತಮ. ಧೂರ್ಜಟಿಯ ಜಟಾಜೂಟದಲ್ಲಿ ಸಾಟೋಪಭ್ರಮಣ ಮಾಡುತ್ತಿದ್ದ ಗಂಗೆಯನ್ನು ತನ್ನಿಂದ ಹತವಾಗಿ ಬಿದ್ದ ಹಸುವಿನ ಮೇಲೆ ಧುಮುಕುವಂತೆ ಮಾಡಿದ. ಗೋದಾವರೀ ಎಂದು ಅದೇ ಗಂಗೆಗೆ ಹೆಸರು ಬರಲು ಈ ಮಹಾಮುನಿಯೇ ಕಾರಣನಾದ. ಒಮ್ಮೆ ಈ ಮುನಿಪುಂಗವ ಕೇಳಿದ ಈ ಮಹೀಸಾಗರ ಸಂಗಮ ಮಹಾತ್ಮೆಯನ್ನು. ಒಮ್ಮೆಲೇ ಅವನಿಗೆ ಕುತೂಹಲ ಉಂಟಾಯಿತು ಆ ತೀರ್ಥಕ್ಕೆ ಹೋಗಲು. ಸ್ವತಂತ್ರೇಚ್ಛರು ಅಂಥ ಮುನೀಶ್ವರರು. ಆ ತೀರ್ಥದ ಜಲದಲ್ಲಿ ಮೀಯಬೇಕೆಂದು ಮನಸ್ಸಿನಲ್ಲಿ ಬಂದುದೇ ತಡ, ಹೊರಟೇ ಬಿಟ್ಟರು. ಸಂಭ್ರಮದಿಂದ ಆಗಮಿಸಿದರು ಈ ತೀರ್ಥದ ತೀರಕ್ಕೆ.

ಇಲ್ಲಿಯ ಸುತ್ತಲಿನ ಪರಿಸರ, ಏಕಾಂತ ಹಾಗೂ ತೀರ್ಥದ ಪಾವನಗುಣ ಹಿಡಿಸಿದವು ಆ ಮುನಿಮನಕ್ಕೆ. ಇದನ್ನು ಬಿಟ್ಟುಹೋಗಲು ಮನಸ್ಸೇ ಆಗಲಿಲ್ಲ ಆ ಅಹಲ್ಯಾಪತಿಗೆ. ಇಲ್ಲಿಯೇ

ಶುರುವಾಯಿತು ಅವರ ಅವ್ಯಗ್ರ ಮನದ ಉಗ್ರ ತಪೋನುಷ್ಠಾನ. ಸಮಾಧಿನಿಶ್ಚಲನಾಗಿ ನಿಂತುಕೊಂಡು ತಪಸಿದ್ಧಿಯನ್ನು ಪಡೆದ ಆ ಮುನಿಪುಂಗವ. ಯೋಗಸಿದ್ಧಿಯನ್ನು ಪಡೆದ ಬಳಿಕ ಆ ಮಹರ್ಷಿಗಳ ಮನಸ್ಸಿಗೆ ಧನ್ಯತೆ ಎನಿಸಿತು. ಬೇರೆಡೆಗೆ ತಪಿಸಿದ್ದಕ್ಕಿಂತ ಈ ಪುಣ್ಯಕ್ಷೇತ್ರದಲ್ಲಿ ಬೇಗ ಸಾಧಿಸಿತ್ತು ಯೋಗಸಿದ್ಧಿ ಆ ಮಹರ್ಷಿಗೆ. ಅದರಿಂದ ಮುದಿತಮನಸ್ಕರಾದ ಆ ಮುನಿಮನೀಷಿಗಳು ಅಲ್ಲಿಯೇ ಒಂದು ಮಹಾದೇವರ ಲಿಂಗವನ್ನು ಪ್ರತಿಷ್ಠಾಪಿಸಿದರು. ಗೌತಮೇಶ್ವರ ಎಂದು ಖ್ಯಾತಿ ಭೂತಲದಲ್ಲಿ ಬಂದಿತು ಆ ಲಿಂಗಕ್ಕೆ. ಮಹಾಜಾಗ್ರತ ದೇವರು ಈ ಗೌತಮೇಶ್ವರ ಲಿಂಗ. ಇದಕ್ಕೆ ರುದ್ರಾಭಿಷೇಕವನ್ನು ಮಾಡಿ ಗಂಧ ತೀಡಿ ಹೂಗಳಿಂದ ಪೂಜಿಸಬೇಕು.. ಗುಗ್ಗುಳ ಹಾಕಿ ಧೂಪಾರ್ತಿ ಮಾಡಬೇಕು. ನೈವೇದ್ಯ ತೋರಿಸಬೇಕು. ಮಂಗಳಾರತಿ ಬೆಳಗಬೇಕು. ಅದನ್ನು ಭಕ್ತಿಯಿಂದಲೇ ಬೆಳಗಬೇಕು. ಇಷ್ಟು ಮಾಡಿದ ಮನುಷ್ಯನಿಗೆ ಸರ್ವ ಪಾಪಗಳಿಂದಲೂ ಮುಕ್ತಿ. ಕೊನೆಗೆ ಶಿವಲೋಕ ಪ್ರಾಪ್ತಿ.

**ಅರ್ಜುನ:-** "ಋಷಿಪುಂಗವರೇ! ಯೋಗದ ಸ್ವರೂಪವೇನು? ಅದರ ತಾತ್ವಿಕ ವಿಚಾರವನ್ನು ತಮ್ಮ ಬಾಯಿಂದ ಹೇಳಬೇಕೆಂದು ನನ್ನ ಬಯಕೆ. ಯೋಗಮಾರ್ಗವು ಎಲ್ಲ ಸಾಧನಗಳಿಗಿಂತಲೂ ಹಿರಿದು ಎಂದು ಹಿರಿಯರ ಹೇಳಿಕೆ. ನೀವು ಜ್ಞಾನ ಮಾರ್ತಾಂಡರು, ನಮ್ಮಂಥವರ ಮಂಜುಮೋಹ, ಕರಗುವದು ನಿಮ್ಮ ವಾಕ್ಕಿರಣಗಳಿಂದಲೇ. ದಯಮಾಡಿ ಯೋಗದ ವಿಷಯದಲ್ಲಿ ಬೆಳಕು ಬೀರಿರಿ.

## ಯೋಗತತ್ವ

**ನಾರದ:-** ಕುರುಕುಲಕೇತನ ಅರ್ಜುನ, ಯೋಗ ತತ್ವವನ್ನು ವಿಸ್ತಾರದಿಂದ ಹೇಳುವದು ಯಾರಿಗೂ ಸಾಧ್ಯವಿಲ್ಲ. ಆದರೂ ನಾನು ನಿನಗೆ ಸಾರರೂಪವಾಗಿ ತಿಳಿಸುತ್ತೇನೆ. ಈ ಯೋಗದ ವಿಷಯವನ್ನು ತಿಳಿಸುವದರಿಂದಲೇ ಚಿತ್ತವು ನಿರ್ಮಲ ವಾಗುವುದು. ಮನಸ್ಸು ನಿರ್ಮಲವಾದ ಬಳಿಕ ಅದರಿಂದ ಬೇಕಾದಂಥ ಸಾಧನೆ ಮಾಡಿಕೊಳ್ಳಬಹುದು. ಈ ಮನೋನೈರ್ಮಲ್ಯವು ಯೋಗ ಮಾರ್ಗದ ಶ್ರವಣದಿಂದಲೇ ಲಭ್ಯ. ಇನ್ನು ಅದರ ಪೂರ್ಣ ಸ್ವರೂಪಯೋಗದ ಆಚರಣದಿಂದ ಯಾವುದು ತಾನೆ ಅಸಾಧ್ಯ!

## ಯೋಗಮಾರ್ಗದ ಅಷ್ಟಸಿದ್ಧಿಗಳು

**"ಯೋಗಃ ಚಿತ್ತ ವೃತ್ತಿ ನಿರೋಧಃ"** ಮನಸ್ಸಿನ ವೃತ್ತಿ ಪ್ರವೃತ್ತಿಗಳನ್ನು ತಡೆಯುವುದೇ ಯೋಗದ ತತ್ವ. ಈ ಚಿತ್ತನಿರೋಧವನ್ನು ಯೋಗಿ ಪುರುಷರು ಅಷ್ಟಾಂಗವಿಧಿಯಿಂದ ಸಾಧಿಸಿಕೊಳ್ಳುವರು. ಈ ಯೋಗಮಾರ್ಗದ ಎಂಟು ಸಿದ್ಧಿಗಳೆಂದರೆ, ಯಮ, ನಿಯಮ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ. *ಧ್ಯೇಯ. ಧ್ಯಾನ, ಸಮಾಧಿ- ಇವು ಯೋಗದ ಎಂಟು ಅಂಗಗಳು ಎಂದು ಹೇಳಲ್ಪಡುತ್ತವೆ. ಈ ಅಷ್ಟಾಂಗಗಳ ಲಕ್ಷಣ ಹಾಗೂ ಸ್ವರೂಪಗಳನ್ನು ಕ್ರಮವಾಗಿ ಒಂದೊಂದಾಗಿ ಹೇಳುತ್ತೇನೆ ಕೇಳು.

---

* ಯೋಗ ಶಾಸ್ತ್ರದಲ್ಲಿ ಅಷ್ಟಾಂಗಗಳಲ್ಲಿ ಧ್ಯೇಯದ ಸ್ಥಾನದಲ್ಲಿ ಆಸನವನ್ನು ಹಾಕಿದ್ದಾರೆ. ಪಾತಂಜಲ ಯೋಗ ದರ್ಶನದ ಪ್ರಕಾರ ಯಮ, ನಿಯಮ ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಆಸನ, ಧ್ಯಾನ ಮತ್ತು ಸಮಾಧಿ ಇವೇ ಅಷ್ಟಾಂಗಗಳು ಎಂದು ಎನಿಸಲ್ಪಡುತ್ತವೆ. ಧ್ಯೇಯವು ಸಾಧ್ಯ. ಸಾಧನದಲ್ಲಿ ಅದು ಅಂತರ್ಭಾವ ಆಗುವುದಿಲ್ಲ.

## ಯೋಗಮಾರ್ಗದ ಅಷ್ಟಾಂಗಗಳ ವಿವರಣೆ

ಮೊದಲನೆಯದಾದ ಯಮ ಐದು ವಿಧವಾಗಿದೆ. ಅಹಿಂಸಾ, ಅಸ್ತೇಯ, ಸತ್ಯ, ಬ್ರಹ್ಮಚರ್ಯ, ಅಪರಿಗ್ರಹ. ಇವು ಐದು ಯಮ ಎಂದು ಕರೆಯಲ್ಪಡುತ್ತವೆ. ಇವುಗಳ ಲಕ್ಷಣವನ್ನು ಹೇಳುತ್ತೇನೆ ಕೇಳು. ಐದು ಯಮಗಳಲ್ಲಿ ಮೊದಲನೆಯದೇ ಅಹಿಂಸೆ. ಯಾವ ಮನುಷ್ಯನನ್ನೂ ಯಾವ ಪ್ರಾಣಿಯನ್ನೂ ವ್ಯರ್ಥವಾಗಿ ಹಿಂಸೆಮಾಡಬಾರದು. ಬರೀ ಕೊಲ್ಲದೆ ಇದ್ದ ಮಾತ್ರಕ್ಕೆ ಅಹಿಂಸೆ ಆಗುವುದಿಲ್ಲ. ಯಾವ ಪ್ರಾಣಿಗಳಿಗೂ ನೋವನ್ನು ಅಥವಾ ಮನಸ್ಸಿಗೆ ಆಘಾತವನ್ನು, ದೇಹಕ್ಕೆ ಉಪದ್ರವವನ್ನು ಉಂಟಮಾಡಬಾರದು. ಎಲ್ಲ ಪ್ರಾಣಿಗಳನ್ನು ಸಮದೃಷ್ಟಿಯಿಂದ ನೋಡಬೇಕು. ಸಾಧ್ಯವಾದಷ್ಟು ಎಲ್ಲರಿಗೂ ಹಿತಮಾಡುವ ಹಾಗೂ ಅಹಿತವನ್ನು ಬಯಸದ ಸಮದೃಷ್ಟಿಯ ಪ್ರವೃತ್ತಿಗೆ ಅಹಿಂಸಾ ಎಂದು ಕರೆಯುತ್ತಾರೆ. ವೇದಶಾಸ್ತ್ರಗಳಲ್ಲಿ ಇದೇ ತರಹದ ಅಹಿಂಸೆಯನ್ನು ವಿಧಾನ ಮಾಡಿದ್ದಾರೆ.

ಇನ್ನು ಎರಡನೆಯದಾದ ಯಮವೇ ಸತ್ಯ. ತಾನು ಕಣ್ಣಿನಿಂದ ಕಂಡಿದ್ದನ್ನು ಕಿವಿಯಿಂದ ಕೇಳಿದ್ದನ್ನು ಅಥವಾ ತಾನು ತರ್ಕಿಸಿದ್ದನ್ನು ಇಲ್ಲವೆ ತನ್ನ ಅನುಭವಕ್ಕೆ ಬಂದುದನ್ನು ಇದ್ದುದನ್ನು ಇದ್ದಂತೆ, ವಾಗಿಂದ್ರಿಯದ ಮುಖಾಂತರ ವ್ಯಕ್ತ ಮಾಡುವದೇ ಸತ್ಯ. ಆದರೆ ಇದರಿಂದ ಯಾರಿಗೂ ಪೀಡೆಯಾಗಬಾರದು. ಮತ್ತೊಬ್ಬರಿಗೆ ಅಪಕಾರವಾಗಬಾರದು. ಇನ್ನೊಬ್ಬರಿಗೆ ಅಹಿತವಾಗುತ್ತಿದ್ದರೆ ಅದು ನಿಜವಾದರೂ ಸತ್ಯವಲ್ಲ. ಹಿತಕರವಾದ ಯಥಾರ್ಥ ವಚನವೇ ಸತ್ಯ. ಹೀಗೆ ವೇದಶಾಸ್ತ್ರದಲ್ಲಿ ಸತ್ಯದ ನಿರ್ವಚನ ಮಾಡಿದ್ದಾರೆ. ಮೂರನೆಯದಾದ ಅಸ್ತೇಯ ಶಬ್ದಕ್ಕೆ ಕಳವು ಮಾಡದಿರುವುದು ಎಂದು ಮಾತ್ರ ಅರ್ಥವಿದೆ.

ಆದರೆ, ನಿಜವಾದ ಅಸ್ತೇಯದ ವ್ಯಾಪ್ತಿ ಇನ್ನೂ ವಿಸ್ತಾರವಾಗಿದೆ. ಎಂಥ ಕುತ್ತು ವಿಪತ್ತು ಬಂದರೂ ಮತ್ತೊಬ್ಬರ ಸೊತ್ತನ್ನು ಅಪಹರಿಸಬಾರದು. ಮನಸ್ಸಿನಿಂದಲೂ ಆಶಿಸಬಾರದು. ಬಾಯಿಂದಲೂ ಹೆರವರ ಹಣವನ್ನು ಕೇಳಬಾರದು. ಕೈಯಿಂದಲೂ ಕದಿಯಬಾರದು. ಇನ್ನೊಬ್ಬರ ವೃತ್ತಿಚ್ಛೇದ ಮಾಡಬಾರದು. ಇದಕ್ಕೆ ''ಅಸ್ತೇಯ'' ಎನ್ನುವರು.

## ಎರಡು ವಿಧ ಬ್ರಹ್ಮಚರ್ಯ

ನಾಲ್ಕನೆಯದಾದ ಬ್ರಹ್ಮಚರ್ಯವು ಎರಡು ವಿಧವಾಗಿದೆ. ಸನ್ಯಾಸಿಬ್ರಹ್ಮಚರ್ಯ, ಗೃಹಸ್ಥಬ್ರಹ್ಮಚರ್ಯ ಎಂದು. ಸ್ತ್ರೀಯರ ಸಂಪರ್ಕದಿಂದ ಸರ್ವಥಾ ದೂರವಿದ್ದು, ಕಾಮವಾಸನೆಯನ್ನು ಹೃದಯದಿಂದ ಸಂಪೂರ್ಣವಾಗಿ ಕಿತ್ತು ಹಾಕುವುದೇ ಸನ್ಯಾಸಿ ಬ್ರಹ್ಮಚರ್ಯ ಎನಿಸುವದು. ಕಾಮಿನೀ ಸುಖವನ್ನು ಮನಸಾಪಿ ನೆನೆಯಬಾರದು. ಬಯಸಬಾರದು. ಶೃಂಗಾರ ರಸಭರಿತವಾದ ಕಾವ್ಯ ಸಾಹಿತ್ಯವನ್ನು ಓದಬಾರದು. ಅಂಥ ಮಾತುಗಳನ್ನು ಆಡಬಾರದು. ಹೆಣ್ಣು ಮಕ್ಕಳೊಡನೆ ಸಹವಾಸ, ಸಂಭಾಷಣ, ಸಂಪರ್ಕ ಮೊದಲಾದವುಗಳನ್ನು ಸಂಪೂರ್ಣವಾಗಿ ವರ್ಜಿಸಬೇಕು. ಇನ್ನು ಗೃಹಸ್ಥಾಶ್ರಮಿಗಳ ಬ್ರಹ್ಮಚರ್ಯವು ವಿಶಿಷ್ಟ ರೀತಿಯದು. ಅನಿಷಿದ್ಧ ಕಾಲದಲ್ಲಿ ಋತುಕಾಲದಲ್ಲಿ ವಿಧಿಪೂರ್ವಕವಾಗಿ ವಿವಾಹವಾದ ಮಡದಿಯೊಡನೆ ವಿಹರಿಸುತ್ತ ಉಳಿದ ಸಮಯದಲ್ಲಿ ಸಂಯಮದಿಂದ ಇರುವುದು ಗೃಹಸ್ಥರ ಬ್ರಹ್ಮಚರ್ಯ ಎನಿಸುವುದು.

## ಎರಡು ವಿಧ ಅಪರಿಗ್ರಹ

ಈ ಪಂಚಯಮಗಳಲ್ಲಿ ಐದನೆಯದೇ ಅಪರಿಗ್ರಹ. ಈ ಅಪರಿಗ್ರಹವು ಸನ್ಯಾಸಿಗಳ ಅಪರಿಗ್ರಹ, ಗೃಹಸ್ಥರ ಅಪರಿಗ್ರಹ ಎಂದು ಎರಡು ವಿಧವಾಗಿದೆ. ಸರ್ವವಸ್ತುಗಳನ್ನು ಬಿಟ್ಟು ಬಿಡುವದು. ಮನಸ್ಸಿನಿಂದಲೂ ಕೂಡ ಸುಖೋಪಭೋಗ ವಸ್ತುಗಳನ್ನು ಬಯಸದಿರುವುದು. ತನಗೆ ಬೇಕಾದುದನ್ನು ಬಾಯ್ತೆರೆದು ಕೇಳದಿರುವದು ಅಥವಾ ಆಸೆ ಪಡದೆ ಇರುವದು. ತನ್ನ ಸುಖಸಾಧನವಾದ ವಸ್ತುಗಳನ್ನು ತನ್ನ ಶಾರೀರಿಕ ಪ್ರಯತ್ನದಿಂದ ಸಂಪಾದಿಸದೇ ಇರುವದು. ಇವೆಲ್ಲ ಸನ್ಯಾಸಿಗಳ ಅಪರಿಗ್ರಹ ಎನಿಸುವುದು. ಗೃಹಸ್ಥಾಶ್ರಮಿಗಳ ಅಪರಿಗ್ರಹ ಎಂದರೆ, ತನ್ನ ಸಂಸಾರಕ್ಕೆ ಬೇಕಾಗುವಷ್ಟು ಮಾತ್ರ ವಸ್ತುಗಳನ್ನು ವಿಹಿತವೃತ್ತಿಯಿಂದ ನ್ಯಾಯಮಾರ್ಗದಿಂದ ಸಂಪಾದಿಸಿ ಮಿಕ್ಕದ್ದನ್ನೆಲ್ಲ ದಾನ, ಧರ್ಮ, ಮೊದಲಾದ ಪುಣ್ಯಕರ್ಮಗಳಿಗೆ ಉಪಯೋಗಿಸುವದು, ಹೆಚ್ಚಿನ ಸಂಗ್ರಹವನ್ನು ಮಾಡದಿರುವದು ಲೌಕಿಕ ಭೋಗಗಳಲ್ಲಿ ಅತಿ ಆಸಕ್ತಿಯನ್ನು ಹೊಂದದಿರುವುದು ಗೃಹಸ್ಥಾಶ್ರಮಿಗಳ ಅಪರಿಗ್ರಹ ಎನಿಸುವದು. ಇವು ಐದು ಯಮ ಎಂದು ಕರೆಯಲ್ಪಡುತ್ತವೆ.

## ಪಂಚವಿಧ ನಿಯಮದ ಬಗೆಗಳು

ಶೌಚ, ಸಂತೋಷ, ಜಪ, ತಪ, ಗುರುಭಕ್ತಿ ಇವು ಐದು ನಿಯಮ* ಎನಿಸಲ್ಪಡುತ್ತವೆ.

ಅಷ್ಟಾಂಗಗಳಲ್ಲಿ ಮುಖ್ಯವಾದ ನಿಯಮದ ಈ ಐದು ಪ್ರಭೇದಗಳನ್ನು ಸರಿಯಾಗಿ ತಿಳಿದುಕೊಳ್ಳುವದು ಅತ್ಯವಶ್ಯ. ಇದರಲ್ಲಿ ಮೊದಲನೆಯದಾದ ಶೌಚವು ಎರಡು ವಿಧವಾಗಿದೆ. ಬಾಹ್ಯ ಶೌಚ, ಆಂತರಿಕ ಶೌಚ ಎಂದು. ಶೌಚ ಎಂದರೆ, ಶುಚಿತ್ವ ಅರ್ಥಾತ್ ಶುದ್ಧಿ. ನಮ್ಮ ಈ ಬಾಹ್ಯ ಶರೀರವನ್ನು ಹೊರಗಿನಿಂದ ಶುದ್ಧಮಾಡಬೇಕಾದರೆ, ಮಣ್ಣು, ನೀರು, ಮೊದಲಾದವುಗಳು ಆವಶ್ಯಕ. ಶಾಸ್ತ್ರದಲ್ಲಿ ಹೇಳಿದಂತೆ ಮಲಮೂತ್ರಾದಿ ವಿಸರ್ಜನೆ ಮಾಡಿದಾಗ, ಅಥವಾ ಮೈಲಿಗೆಯಾದಾಗ ವಾಸನೆ ಹೋಗುವಂತೆ ಮಣ್ಣು ನೀರುಗಳಿಂದ ಸ್ವಚ್ಛವಾಗಿ ತೊಳೆದುಕೊಂಡು ಸ್ನಾನಮಾಡಿದರೆ ಬಾಹ್ಯಶುದ್ಧಿ ಆದಂತೆ. ಯಾವದೇ ದುರ್ಭಾವನೆ, ದುರಾಶೆ, ದುರ್ವಿಚಾರಗಳು ಇಲ್ಲದೇ ಭಗವನ್ನಿಷ್ಠವಾದ ನಿರ್ಮಲ ಮನಸ್ಸಿನಿಂದ ಇರುವದು. ಅಂತರಿಕ ಶುದ್ಧಿ ಎನಿಸುವುದು, ನಿಯಮದಲ್ಲಿ ಎರಡನೆಯದಾದ ಸಂತೋಷ ಎಂದರೆ, ಯದೃಚ್ಛಾ ಲಾಭ ಸಂತುಷ್ಟನಾಗಿ ಇರುವದು. ಸ್ವವಿಹಿತ ವೃತ್ತಿಯಿಂದ ನ್ಯಾಯಮಾರ್ಗದಿಂದ ಯಾರ ಮನಸ್ಸನ್ನೂ ನೋಯಿಸದೇ, ಎಷ್ಟೇ ಬಂದರೂ ಏನೇ ಬಂದರೂ ಅದರಿಂದ ತೃಪ್ತನಾಗಿ ಇರುವುದಕ್ಕೆ ಸಂತೋಷ ಎನ್ನುವರು.

ನಾಲ್ಕನೇಯ ನಿಯಮವೇ ತಪ. ಆಹಾರ ವಿಹಾರಗಳನ್ನು ಕಡಿಮೆ ಮಾಡಿ ಭಗವಂತನಲ್ಲಿ ಮನಸ್ಸನ್ನು ಇಟ್ಟು ಸಾಧ್ಯವಾದಷ್ಟು ವ್ರತೋಪಚಾರಗಳನ್ನು ಮಾಡುತ್ತ ಕೃಚ್ಛ್ರ. ಚಾಂದ್ರಾಯಣ, ಸಾಂತಪನ ಮುಂತಾದ ವ್ರತೋದ್ಯಾಪನೆಗಳನ್ನು ಮಾಡುವದು ತಪ ಎನಿಸುವದು.

*ಪಾತಂಜಲ ಯೋಗದರ್ಶನದಲ್ಲಿ ಶೌಚ, ಸಂತೋಷ, ತಪ, ಸ್ವಾಧ್ಯಾಯ, ಈಶ್ವರ ಪ್ರಣಿಧಾನ. ಇವು ಐದು ನಿಯಮಗಳು ಎಂದು ಉಲ್ಲೇಖಿಸಲಾಗಿದೆ. ಮೊದಲಿನ ಶೌಚ, ಸಂತೋಷ, ತಪ ಇವು ಮೂರು ಸ್ಕಂದ ಪುರಾಣ ಹಾಗೂ ಪಾತಂಜಲ ಯೋಗದರ್ಶನ ಎರಡಕ್ಕೂ ಸಾಮಾನ್ಯವಾಗಿವೆ. ಯೋಗದರ್ಶನದ, ಸ್ವಾಧ್ಯಾಯ ಮತ್ತು ಪ್ರಣಿಧಾನ ಎರಡರ ಬದಲು ಸ್ಕಂದ ಪುರಾಣದಲ್ಲಿ ಜಪ ಮತ್ತು ಗುರುಭಕ್ತಿ ಈ ಎರಡನ್ನು ನಿಯಮದಲ್ಲಿ ಎಣಿಸಿದ್ದಾರೆ. ಆದರೆ, ಸ್ವಾಧ್ಯಾಯವು ಒಂದು ಜಪರೂಪವೇ. ಆದುದರಿಂದ ವಿಶೇಷ ಭೇದವಿಲ್ಲ. ಈಶ್ವರ ಪ್ರಣಿಧಾನ, ಶಿವಭಕ್ತಿ ಎರಡೂ ಒಂದೇ.

ವೇದಶಾಸ್ತ್ರಗಳ ಅಧ್ಯಯನ ಅಧ್ಯಾಪನ ಹಾಗೂ ಪ್ರಣವಮಂತ್ರ, ಅಷ್ಟಾಕ್ಷರ, ಪಂಚಾಕ್ಷರ, ದ್ವಾದಶಾಕ್ಷರ ಮಂತ್ರ ಮುಂತಾದ ಪವಿತ್ರವಾದ ಮಂತ್ರಗಳನ್ನು ಮೌನವಾಗಿ ಕುಳಿತು ನಿರಂತರವೂ ಜಪಿಸುವುದಕ್ಕೆ ಜಪ ಎಂದು ಕರೆಯುತ್ತಾರೆ.

ಕೊನೆಯದಾದ ಗುರುಭಕ್ತಿ ಎಂದರೆ, ತನಗೆ ವಿದ್ಯೋಪದೇಶ ಮಾಡಿದ ಗುರುವಿನಿಂದ ಆರಂಭಿಸಿ, ತಾರಕ ಮಂತ್ರೋಪದೇಶಿಯಾದ, ಗುರುವಿನಿಂದ ಆರಂಭಿಸಿ ಸಾಕ್ಷಾತ್ ಪರಶಿವನ ವರೆಗೆ ಎಲ್ಲ ಗುರುಗಳನ್ನು ಮನ್ನಿಸಿ, ಶಂಕರನೇ ಪರಮಗುರು ಎಂದು ನಂಬಿ, ಅವನನ್ನೇ ನಿತ್ಯ ನಿರಂತರ ಭಜನೆ ಮಾಡುವುದು ಗುರುಭಕ್ತಿ ಅಥವಾ ಶಿವಭಕ್ತಿ ಎಂದು ಕರೆಯಲ್ಪಡುವುದು.

## ಪ್ರಾಣಾಯಾಮದ ಮಹತ್ವ

ಈ ರೀತಿಯಾಗಿ ಐದು ಯಮ, ಐದು ನಿಯಮಗಳನ್ನು ಸರಿಯಾಗಿ ಸಾಧನ ಮಾಡಿಕೊಂಡು ವಿದ್ವಾನ್ ಪುರುಷನು ಪ್ರಾಣಾಯಾಮವನ್ನು ಸಾಧಿಸಿಕೊಳ್ಳಬೇಕು. ಪ್ರಾಣಾಯಾಮವಿಲ್ಲದೆ ಯೋಗಸಿದ್ಧಿ ಆಗಲಾರದು. ಯೋಗಸಿದ್ಧಿ ಇಲ್ಲದಿದ್ದರೆ ಶರೀರದ ಬಾಹ್ಯಶುದ್ಧಿಯೂ ಇಲ್ಲ. ಅಂತರಂಗ ಶುದ್ಧಿಯೂ ಇಲ್ಲ. ವಾಯು ಪ್ರಕೋಪದಿಂದ ಶರೀರವು ಜಡವಾಗಿ ಬಿಡುತ್ತದೆ, ಅಥವಾ ರೋಗಗಳಿಗೆ ಆವಾಸ ಸ್ಥಾನವಾಗುತ್ತದೆ.

ಪಾಂಡುಪುತ್ರ! ನಾನು ಈಗ ಪ್ರಾಣಾಯಾಮದ ಲಕ್ಷಣಗಳನ್ನು ಹೇಳುತ್ತೇನೆ ಕೇಳು. ಬಲ್ಲವರು ಪ್ರಾಣವಾಯು ಹಾಗೂ ಅಪಾನವಾಯುಗಳ ನಿರೋಧವೇ **'ಪ್ರಾಣಾಯಾಮ'** ಎಂದು ಹೇಳುವರು. ಈ ಪ್ರಾಣಾಯಾಮವು ಲಘು ಪ್ರಾಣಾಯಾಮ, ಮಧ್ಯಮ ಪ್ರಾಣಾಯಾಮ, ಉತ್ತಮ ಪ್ರಾಣಾಯಾಮ ಎಂದು ಮೂರು ತೆರನಾಗಿದೆ. ಕಣ್ಣನ್ನು ಮುಚ್ಚಿ ತೆಗೆಯಲು ಬೇಕಾಗುವ ಅಲ್ಪ ಸಮಯಕ್ಕೆ ಮಾತ್ರಾ ಎನ್ನುವರು. ಲಘು ಪ್ರಾಣಾಯಾಮವು ಹನ್ನೆರಡು ಮಾತ್ರಾ ಸಮಯ ಸೀಮಿತವಾಗಿದೆ. ಈ ಲಘು ಪ್ರಾಣಾಯಾಮದ ಇಮ್ಮಡಿ, ಅರ್ಥಾತ್ ಇಪ್ಪತ್ತನಾಲ್ಕು ಮಾತ್ರೆಗಳಷ್ಟು ಸಮಯ ನಡೆಯುವ ಶ್ವಾಸ ನಿರೋಧಕ್ಕೆ ಮಧ್ಯಮ ಪ್ರಾಣಾಯಾಮ ಎನ್ನುವರು. ಇದರ ಮೂರುಪಟ್ಟು ಅರ್ಥಾತ್ ಮೂವತ್ತಾರು ಮಾತ್ರೆಗಳ ಸಮಯದಲ್ಲಿ ಮುಗಿಸಲ್ಪಡುವ ಶ್ವಾಸನಿರೋಧಕ್ಕೆ ಉತ್ತಮ ಪ್ರಾಣಾಯಾಮ ಎನ್ನುವರು. ಲಘು ಪ್ರಾಣಾಯಾಮದಿಂದ ಸ್ವೇದ (ಬೆವರು)ವನ್ನು ಗೆಲ್ಲಬೇಕು. ಮಧ್ಯಮ ಪ್ರಾಣಾಯಾಮದಿಂದ ಕಂಪವನ್ನು ಗೆದ್ದು ದೇಹವು ನಿಶ್ಚಲವಾಗಿ ನಿಲ್ಲುವಂತೆ ಮಾಡಬೇಕು. ಇದಕ್ಕೆ ಕಂಪಜಯ ಎನ್ನುವರು. ಮೂರನೆಯ ಉತ್ತಮ ಪ್ರಾಣಾಯಾಮದಿಂದ ಮನಸ್ಸಿನಲ್ಲಿರುವ ಎಲ್ಲ ವಿಷಾದಗಳನ್ನೂ ಕಳೆದುಕೊಳ್ಳಬೇಕು.

## ಪ್ರಾಣಾಯಾಮದ ಪ್ರಯೋಗ, ಪ್ರಕಾರ, ಪರಿಣಾಮಗಳು

ಯಾವುದಾದರೂ ದರ್ಭೆ, ಕೃಷ್ಣಾಜಿನ ಮುಂತಾದ ಆಸನಗಳ ಮೇಲೆ ಕುಳಿತು ಪದ್ಮಾಸನ ಹಾಕಿ, ರೇಚಕ, ಪೂರಕ, ಕುಂಭಕ ಎಂಬ ಮೂರು ವಿಧವಾದ ಪ್ರಾಣಾಯಾಮಗಳನ್ನು ಸಾಧಿಸಬೇಕು. ಪ್ರಾಣಗಳ ಉಪರೋಧ, ಸಂಯಮ ಅರ್ಥಾತ್ ಬಿಗಿಹಿಡಿದು, ಮನಸ್ಸಿನ ಏಕಾಗ್ರತೆಯನ್ನು ಸಾಧಿಸುವುದಕ್ಕೆ ಪ್ರಾಣಾಯಾಮ ಎನ್ನುವರು. ಬೆಂಕಿಯಲ್ಲಿ ಹಾಕುವುದರಿಂದ ಧಾತುಗಳ ಮಾಲಿನ್ಯವು ಸುಟ್ಟು ಹೋಗುವಂತೆ ಪ್ರಾಣಾಯಾಮದಿಂದ ಇಂದ್ರಿಯ ಜನ್ಯವಾದ ಆತ್ಮನ ಎಲ್ಲ ದೋಷಗಳು ಸುಟ್ಟು

ಹೋಗುತ್ತವೆ. ಮೂರು ಕಪಿಲ ಗೋವುಗಳ ದಾನದಿಂದ ಬರುವಷ್ಟು ಪುಣ್ಯವು ಒಂದು ಪ್ರಾಣಾಯಾಮದಿಂದ ಬರುತ್ತದೆ. ಇದಕ್ಕಾಗಿಯೇ ಯೋಗಿಗಳು ತಪ್ಪದೇ ಈ ಪ್ರಾಣಾಯಾಮವನ್ನು ಮಾಡುತ್ತಿರುವರು.

ಶಾಂತಿ, ಪ್ರಶಾಂತಿ, ದೀಪ್ತಿ, ಪ್ರಸಾದ ಇವು ನಾಲ್ಕು ಪ್ರಾಣಾಯಾಮಗಳಿಂದ ಲಭ್ಯವಾಗಬಹುದಾದ ದಿವ್ಯಗುಣಗಳು. ಸ್ವಾಭಾವಿಕ ಪಾಪ ಹಾಗೂ ಆಗಂತುಕ ಪಾಪಗಳ ನಾಶವಾಗಿ ಎಲ್ಲ ವಾಸನೆಗಳ ಉಪಶಮನವಾಗುವದಕ್ಕೆ ಶಾಂತಿ ಎನ್ನುವರು. ಮನಸ್ಸು ಹಾಗೂ ಬುದ್ಧಿಯ ಮುಖಾಂತರ ಲೋಭ ಮೋಹ ಎಂಬ ಎರಡು ದೋಷಗಳನ್ನು ಸಂಪೂರ್ಣ ಮನಸ್ಸಿನಿಂದ ಕಿತ್ತೊಗೆದು, ಮನೋಮಂದಿರದಲ್ಲಿ ಶಾಂತಿ ಪ್ರತಿಷ್ಠಾಪನೆ ಮಾಡುವುದು ಪ್ರಶಾಂತಿ ಎಂದು ಕರೆಯಲ್ಪಡುವುದು. ಹಿಂದೆ ಆದುದನ್ನು ಮುಂದೆ ಆಗಲಿರುವದನ್ನು ಮತ್ತು ಇಂದ್ರಿಯಾತೀತ ವಸ್ತುಗಳನ್ನು ಸರಿಯಾಗಿ ಜ್ಞಾನ ಮಾಡಿಕೊಳ್ಳುವುದಕ್ಕೆ ದೀಪ್ತಿ ಎನ್ನುವರು. ಎಲ್ಲ ಇಂದ್ರಿಯಗಳ ಪ್ರಸನ್ನತಾ, ಬುದ್ಧಿ ಹಾಗೂ ಪ್ರಾಣಗಳ ನೈರ್ಮಲ್ಯಕ್ಕೆ ಪ್ರಸಾದ ಎನ್ನುವರು. ಇವು ನಾಲ್ಕು ಫಲಗಳು ಪ್ರಾಣಾಯಾಮದಿಂದ ಪ್ರಾಪ್ತವಾಗುತ್ತವೆ. ಯಾವಾಗಲೂ ಸೇವೆ ಮಾಡುವದರಿಂದ ಸಿಂಹ, ಹುಲಿಯಂಥ ಪ್ರಾಣಿಗಳೂ ಕೂಡ ಮೃದುವಾಗುವಂತೆ, ಪ್ರಾಣಾಯಾಮದ ಮುಖಾಂತರ ಸಾಧಿತವಾದ ಪ್ರಾಣವೂ ಕೂಡ ಸಾಧಕನ ವಶವರ್ತಿಯಾಗುವದು. ಇದಕ್ಕೆ ಪ್ರಾಣಾಯಾಮ ಎನ್ನುವರು.

ವಿಷಯ ಸೇವನೆಗಾಗಿ ಧಾವಿಸುವ ಮನಸ್ಸನ್ನು ಆ ವಿಷಯಗಳಿಂದ ತಿರುಗಿಸಿ ಭಗವದಭಿಮುಖವನ್ನಾಗಿ ಮಾಡುವಕ್ಕೆ ಪ್ರತ್ಯಾಹಾರ ಎನ್ನುವರು. ಇದರ ಉದ್ದೇಶ ಮನಸ್ಸನ್ನು ಆಚೀಚೆ ಹರಿಬಿಡದೆ, ತನ್ನ ಅಂಕಿತದಲ್ಲಿ ಇಟ್ಟುಕೊಳ್ಳುವುದು.

## ಧಾರಣೆಯ ಧೋರಣೆ

ಈಗ ಅಷ್ಟಾಂಗಗಳಲ್ಲಿ ಐದನೇಯದಾದ ಧಾರಣಾದ ಲಕ್ಷಣವನ್ನು ಹೇಳುತ್ತೇನೆ ಕೇಳು. ನೀರಡಿಸಿದ ಮನುಷ್ಯನು ಅಥವಾ ನಾಲಿಗೆ ಕಂಠ ನಾಳಗಳ ಮುಖಾಂತರ ಮೆಲ್ಲಮೆಲ್ಲನೇ ನೀರನ್ನು ಕುಡಿಯುವದಿಲ್ಲವೇ! ಅದೇ ರೀತಿಯಾಗಿ ಯೋಗಿ ಪುರುಷನು ಧಾರಣೆಯ ದ್ವಾರಾ ಸಾಧಿಸಿದ ವಾಯುವನ್ನು ಮೆಲ್ಲ ಮೆಲ್ಲನೆ ಪಾನಮಾಡುತ್ತಾನೆ. ಗುದ, ಲಿಂಗ, ನಾಭಿ, ಹೃದಯ, ತಾಲು, ಲಲಾಟ, ಈ ಸ್ಥಾನಗಳಲ್ಲಿ ಕ್ರಮವಾಗಿ ಆರು ದಳ, ನಾಲ್ಕು ದಳ, ಹತ್ತು ದಳ, ಹನ್ನೆರಡು ದಳ, ಷೋಡಶದಳ ಹಾಗೂ ದ್ವಿದಳಗಳ ಕಮಲಗಳನ್ನು ಚಿಂತನೆ ಮಾಡಿ ಅವುಗಳಲ್ಲೆಲ್ಲ ಪ್ರಾಣವಾಯುವನ್ನು ಧಾರಣ ಮಾಡಬೇಕು. ಮತ್ತು ಮೆಲ್ಲ ಮೆಲ್ಲನೆ ಆ ಪ್ರಾಣವಾಯುವನ್ನು ಕೆಳಗಿನ ಗುದದ್ವಾರದ ಚತುರ್ದಳ ಪದ್ಮದಿಂದ, ಲಿಂಗದ ಷಡ್ದಳ ಪದ್ಮಕ್ಕೂ, ಅಲ್ಲಿಂದ ನಾಭಿಯ ದಶದಳ ಪದ್ಮಕ್ಕೂ ಮೇಲಕ್ಕೆ ಎತ್ತಿ ಹೃದಯದ ದ್ವಾದಶ ದಳದ ಪದ್ಮದ ಹತ್ತಿರ ತಂದು ನಿಲ್ಲಿಸಬೇಕು. ನಂತರ ನಾಲಿಗೆಯ ಮೇಲೆ ಮುಖದ ಒಳ ಅಂಗಳದ ಮೇಲೆ ಇರುವ ಷೋಡಶದಳ ಪದ್ಮದವರೆಗೆ ಪ್ರಾಣವಾಯುವನ್ನು ಸಾಗಿಸಿ ತೆಗೆದುಕೊಂಡು ಬಂದು ಭ್ರೂಮಧ್ಯ ಭಾಗದ ದ್ವಿದಳ ಕಮಲದ ಚಿಂತನೆಯನ್ನು ಮಾಡಿ, ಈ ಎಲ್ಲ ಕಮಲಗಳಲ್ಲಿ ಪ್ರಾಣವಾಯುವನ್ನು ಧಾರಣಮಾಡಬೇಕು. ಮೆಲ್ಲ ಮೆಲ್ಲನೆ, ಕೆಳಗಿನ ಗುದದ್ವಾರದಿಂದ ಆ ಪ್ರಾಣವಾಯುವನ್ನು

ಮೇಲೆ ಮೇಲೆ ಸಾಗಿಸುತ್ತ ಕೊನೆಗೆ, ತಲೆಯ ಒಳಗೆ ಇರುವ ಬ್ರಹ್ಮರಂಧ್ರದಲ್ಲಿ ಸ್ಥಾಪಿಸಬೇಕು. ಗುದವೇ ಮೊದಲಾದ ಆರು ಅಂಗಗಳು ಹಾಗೂ ಚತುರ್ದಲ ಮೊದಲಾದ ಆರು ಚಕ್ರಗಳು ಈ ಹನ್ನೆರಡು ಸ್ಥಾನದಲ್ಲಿ ಪ್ರಾಣವಾಯುವನ್ನು ಧಾರಣೆ ಹಾಗೂ ಸಂಕೋಚಮಾಡುವದರಿಂದ ಹನ್ನೆರಡು ಪ್ರಾಣಾಯಾಮಗಳು ಆಗುತ್ತವೆ. ಇದಕ್ಕೆ ಧಾರಣಾ, ಧಾರಣಾ, ಎನ್ನುತ್ತಾರೆ.

## ಧ್ಯೇಯ

ಈ ಧಾರಣಾಗಳನ್ನು ಸಿದ್ಧಮಾಡಿಕೊಂಡ ಬಳಿಕ ಯೋಗಿ ಪುರುಷನು ಅಕ್ಷರ ಬ್ರಹ್ಮವನ್ನು ಹೊಂದಲು ಅರ್ಹತೆಯನ್ನು ಪಡೆಯುತ್ತಾನೆ. ಈ ಅಷ್ಟಾಂಗಗಳಲ್ಲಿ ಆರನೇಯ ಅಂಗವಾದ ಧ್ಯೇಯ ತತ್ವವು ಬಹು ವಿಧವಾಗಿದೆ. ಬೇರೆ ಬೇರೆ ಜನರಿಗೆ ಬೇರೆ ಬೇರೆ ಧ್ಯೇಯ ದೇವತೆಗಳಿರುತ್ತಾರೆ. ಕೆಲವರಿಗೆ ಶಿವನು ಧ್ಯೇಯವಾದರೆ, ಹಲವರಿಗೆ ವಿಷ್ಣು ಧ್ಯೇಯ. ಇನ್ನು ಕೆಲವರಿಗೆ ಸೂರ್ಯನೇ ಧ್ಯೇಯ ಪುರುಷ. ಹಲವರಿಗೆ ಬ್ರಹ್ಮ ಕೆಲವರಿಗೆ ಪಾರ್ವತಿ. ಹೀಗೆ ಅನೇಕ ಪ್ರಕಾರದ ಧ್ಯೇಯ ತತ್ವಗಳಿರುತ್ತವೆ. ಆದರೆ ಇಲ್ಲಿ ಶಿವನನ್ನೇ ಧ್ಯೇಯವನ್ನಾಗಿ ಇಟ್ಟುಕೊಂಡ ಶಿವಭಕ್ತರು ಆ ಶಿವನ ಧ್ಯಾನವನ್ನು ಮಾಡುವ ಬಗೆಯನ್ನು ಮಾತ್ರ ಪ್ರಕೃತ ಹೇಳಲಾಗುವುದು.

## ಧ್ಯಾನ

ಲೋಕಕಲ್ಯಾಣಕರನಾದ ಪಂಚಮುಖಿ ಪರಮೇಶ್ವರನು ತನ್ನ ವಾಹನನಾದ ನಂದಿಯ ಮೇಲೆ ಪದ್ಮಾಸನದ ಮೇಲೆ ವಿರಾಜಮಾನನಾಗಿದ್ದಾನೆ. ಗೌರವರ್ಣದಿಂದ ದೇದೀಪ್ಯವಾಗಿದೆ ಅವನ ಅಂಗಕಾಂತಿ. ಅವನಿಗೆ ಹತ್ತು ಕೈ, ಮೂರು ಕಣ್ಣು, ಮಸ್ತಕದ ಮೇಲೆ ಮಂದಾಕಿನಿ, ಮುಕುಟದಲ್ಲಿ ಚಂದ್ರ, ಪಕ್ಕದಲ್ಲಿ ಪರಮೇಶ್ವರಿ. ಅರ್ಧೋನ್ಮೀಲಿತ ನಯನನಾಗಿ ಧ್ಯಾನಮಗ್ನನಾಗಿದ್ದಾನೆ ಆ ಶಿವ. ಇಂಥ ಪ್ರಸನ್ನ ಮುಖದ ಪಾರ್ವತೀಪತಿಯನ್ನು ಧ್ಯೇಯ ತತ್ವವೆಂದು ಬಗೆದು ಭಕ್ತಿಯಿಂದ ಧ್ಯಾನಮಾಡಬೇಕು.ಏಳನೇಯದಾದ ಧ್ಯಾನದ ಲೆಕ್ಕವನ್ನು ಹೇಳುತ್ತೇನೆ. ಧಾರಣಾ ಅವಸ್ಥೆಯಲ್ಲಿ ನಿಂತ ಸಾಧಕನು ಒಂದು ನಿಮಿಷವೂ ತನ್ನ ಧ್ಯೇಯ ವಸ್ತುವಿನಿಂದ ವಿಚಲಿತನಾಗಬಾರದು. ಬೇರೆ ವಿಷಯವನ್ನು ಒಮ್ಮೆಯೂ ಚಿಂತಿಸಬಾರದು. ಭಗವಂತನ ನಾಮರೂಪ ಗುಣ ಕ್ರಿಯೆಗಳನ್ನು ಹಾಗೂ ಮಹಾಮಹಿಮೆಯನ್ನು ಅನುಸಂಧಾನದಲ್ಲಿ ಇಟ್ಟುಕೊಂಡು ಉಳಿದ ಎಲ್ಲ ಚಿಂತೆ ವಿಚಾರಗಳನ್ನು ಬಿಟ್ಟು ತದೈಕತಾನಲೀನಮಾನಸನಾಗಿ ಪರಮಾತ್ಮನನ್ನು ಧ್ಯಾನಿಸುವದಕ್ಕೆ ಧ್ಯಾನ ಎನ್ನುವರು.

## ಸಮಾಧಿ

ಇನ್ನು ಕೊನೆಯದಾದ ಸಮಾಧಿಯ ಸ್ವರೂಪವನ್ನು ಹೇಳುತ್ತೇನೆ ಕೇಳು. ಶಬ್ದ, ಸ್ಪರ್ಶ, ರಸ, ಗಂಧ ಮುಂತಾದವುಗಳಿಂದ ಸರ್ವಥಾ ವರ್ಜಿತನಾಗಬೇಕು. ಪರಮಪುರುಷನಾದ ಪರಮಾತ್ಮನ ಪಾದದಲ್ಲಿಯೇ ಮನಸ್ಸನ್ನು ಸಂಪೂರ್ಣವಾಗಿ ನೆಟ್ಟು, ಬಾಹ್ಯಪ್ರಜ್ಞೆ ಇಲ್ಲದೆ; ದೇವಪಾದನಿಷ್ಠನಾದ ಯೋಗಿಯ ಅವಸ್ಥೆಗೆ ಸಮಾಧಿ ಎನ್ನುವರು. ಸಮಾಧಿಯಲ್ಲಿದ್ದ ಮನುಷ್ಯನು ಎಷ್ಟು ವಿಘ್ನಗಳು ಬಂದರೂ ಅವುಗಳಿಂದ ಆಹತನಾಗುವುದಿಲ್ಲ. ಎಷ್ಟೇ ದುಃಖವಾದರೂ ಏನೇ ಆಘಾತವಾದರೂ ಅದರಿಂದ ವಿಚಲಿತನಾಗುವುದಿಲ್ಲ. ಕಿವಿಯಲ್ಲಿ ಶಂಖ ಊದಿದರೂ, ಬದಿಯಲ್ಲಿ ನಗಾರಿ ಹೊಡೆದರೂ ಅವನಿಗೆ ಕೇಳುವುದೇ ಇಲ್ಲ.

ಕೋಲು, ಬಾರುಕೋಲು, ಚಾವಟಿ ಅಥವಾ ಖಡ್ಗ ಮುಂತಾದವುಗಳಿಂದ ಹೊಡೆದರೂ, ಗಾಯ ಮಾಡಿದರೂ, ಅವನ ಅಂಗಾಂಗಗಳನ್ನು ಸುಟ್ಟರೂ ಅಥವಾ ಹಿಮದಿಂದ ಮುಚ್ಚಿದರೂ ಅವನಿಗೆ ಯಾವುದೂ ಗೊತ್ತೇ ಆಗುವುದಿಲ್ಲ. ಹಸಿವೆ ನೀರಡಿಕೆಗಳ ಪರಿವೆಯಂತೂ ಆತನಿಗೆ ಇರುವುದೇ ಇಲ್ಲ. ನಿಶ್ಚಲವಾದ ಸಮಾಧಿಯನ್ನು ಹೊಂದಿದ ಮನುಷ್ಯನು ನಿರಂತರ ಭಗವದ್ಧ್ಯಾನದಿಂದ ಪಡೆಯುವ ಆತ್ಮಾನಂದವನ್ನು ಸ್ವರ್ಗದಲ್ಲಿಯೂ ಪಡೆಯಲಾರ. ಇನ್ನು ಪಾತಾಳ ಮನುಷ್ಯಲೋಕದಲ್ಲಿ ಅದು ದುಷ್ಪ್ರಾಪ್ಯವೇ ಸರಿ.

## ಗರ್ವದಿಂದ ಸರ್ವನಾಶ

ಈ ರೀತಿಯಾಗಿ ಯೋಗಮಾರ್ಗದಲ್ಲಿ ಆರೂಢನಾದ ಮನುಷ್ಯನಿಗೆ ಐದು ಉಪಸರ್ಗಗಳು ಪ್ರಾಪ್ತವಾಗುತ್ತವೆ. ಪ್ರಾತಿಭ, ಶ್ರಾವಣ, ದೈವ, ಭ್ರಮ ಮತ್ತು ಆವರ್ತ ಎಂದು ಈ ಐದು ಉಪಸರ್ಗಗಳ ಹೆಸರು. ಇವುಗಳಲ್ಲಿ ಸಂಪೂರ್ಣ ಶಾಸ್ತ್ರದ ದಿವ್ಯಜ್ಞಾನದಿಂದ ಉಂಟಾದ ಜ್ಞಾನದ ನವ ನವೋನ್ಮೇಷಕ್ಕೆ 'ಪ್ರತಿಭಾ' ಎನ್ನುತ್ತಾರೆ. ಇಂಥ ದಿವ್ಯ ಪ್ರತಿಭೆಯು ಉತ್ಪನ್ನವಾಗುವುದಕ್ಕೆ ಪ್ರತಿಭಾ ಉಪಸರ್ಗ ಎನ್ನುವರು. ಆದರೆ, ಈ ಪ್ರತಿಭೋನ್ಮೇಷದ ಒಂದು ದುರ್ಗುಣವೆಂದರೆ, ಹೃದಯದಲ್ಲಿ ಅಹಂಕಾರದ ಅಂಕುರಾರ್ಪಣೆ. ಅಹಂಕಾರದ ಉದಯವಾದರೆ, ಆ ಯೋಗಿಯು ತನ್ನ ಉಚ್ಚಸ್ಥಾನದಿಂದ ಒಮ್ಮೆಲೇ ಭ್ರಷ್ಟನಾಗಿ ಬಿಡುತ್ತಾನೆ. ಸಾವಿರಾರು ಯೋಜನದ ದೂರದಲ್ಲಿದ್ದ ಶಬ್ದವನ್ನು ಕೂಡ ಕೇಳುವ ಶಕ್ತಿಗೆ ಶ್ರಾವಣ ಉಪಸರ್ಗ ಎನ್ನುವರು. ದೇವತೆಗಳ ಎಂಟು ವಿಧ ಜಾತಿಗಳಲ್ಲಿ ಬೇಕಾದ ದೇವತೆಯನ್ನು ಕಣ್ಣಿನಿಂದ ನೋಡುವ ಶಕ್ತಿಗೆ ದೈವ ಎನ್ನುವರು. ಆದರೆ, ಇಂಥ ಸಿದ್ಧಿಯನ್ನು ನಾನು ಪಡೆದಿದ್ದೇನೆ ಎಂಬ ಅಹಂಭಾವ ಮೂಡಿದರೆ ಮಾತ್ರ ಈ ಎಲ್ಲ ಸಾಧಕರ ಅಧಃಪಾತ ಕಟ್ಟಿಟ್ಟದ್ದು. ನಾಲ್ಕನೆಯದಾದ ಭ್ರಮೆ ಎನ್ನುವದು ತಾಮಸ ದೋಷ. ಯೋಗಿಯ ಮನಸ್ಸು ಬಗೆಬಗೆಯ ದೋಷಗಳಿಂದ ಆಕ್ರಾಂತವಾಗಿ ಎಲ್ಲ ಆಧಾರಗಳಿಂದ ಭ್ರಷ್ಟವಾಗಿ ಅವಲಂಬನವಿಲ್ಲದೆ, ಕಂಡಕಂಡಲ್ಲಿ ಅಲೆಯ ತೊಡಗಿದರೆ, ಅದಕ್ಕೆ ಭ್ರಮೆ ಉಪಸರ್ಗ ಎನ್ನುವರು. ಐದನೆಯದಾದ ಆವರ್ತವು ರಾಜಸದೋಷ ಎನಿಸುವುದು. ನೀರಿನ ಸೆಳೆವಿನ ಸುಳಿಯಲ್ಲಿ ಮುಳುಗಿದ ಮನುಷ್ಯನು ದಿಗ್ಭ್ರಾಂತನಾಗುವಂತೆ, ಒಮ್ಮೆಲೆ ತನಗೆ ಪ್ರಾಪ್ತವಾದ ಘನತರ, ಜ್ಞಾನ ವಿಜ್ಞಾನಗಳ ಆವರ್ತದಲ್ಲಿ ಚಿತ್ತವು ವ್ಯಾಕುಲವಾಗುವುದಕ್ಕೆ ಆವರ್ತ ಎನ್ನುವರು. ಈ ಎಲ್ಲ ಉಪಸರ್ಗಗಳ ಉಪದ್ರವಗಳಿಂದ ಯೋಗಶಕ್ತಿಯು ನಾಶವಾಗಿ ಹೋಗುವದರಿಂದ ದೇವತೆಗಳು ಮುನಿಗಳು ಮೇಲಿಂದ ಮೇಲೆ ಇವುಗಳ ಸಾಧನವನ್ನು ಮಾಡುತ್ತ ಇರುತ್ತಾರೆ.

## ಯೋಗಮಾರ್ಗದಲ್ಲಿದ್ದವರಿಗೆ ಎಚ್ಚರಿಕೆ

ಆದುದರಿಂದ ಯೋಗಿಯು ಮನೋಮಯವಾದ ಕಂಬಳಿಯ ಆವರಣವನ್ನು ಹೊದ್ದುಕೊಂಡು ಪರಮಾತ್ಮನಲ್ಲಿ ಮನಸ್ಸನ್ನು ಸ್ಥಿರವಾಗಿ ಇಟ್ಟು ಅವನ ನಿರಂತರ ಚಿಂತನವನ್ನು ಮಾಡಬೇಕು. ಸಿದ್ಧಿಯನ್ನು ಬಯಸುವ ಯೋಗಿಯು ಯಾವಾಗಲೂ ಸಾತ್ವಿಕ ಆಹಾರವನ್ನೇ ಸೇವಿಸಬೇಕು. ರಾಜಸ ಹಾಗೂ ತಾಮಸ ಆಹಾರದಿಂದ ಯೋಗಿಗೆ ಎಂದೂ ಸಿದ್ಧಿಯು ಲಭಿಸಲಾರದು. ಸ್ವಧರ್ಮಪಾಲನದಲ್ಲಿ ಆಸಕ್ತರಾದ ಜಿತೇಂದ್ರಿಯ ಶ್ರೋತ್ರಿಯ ಮಹಾತ್ಮರ ಬಳಿಗೆ ಮಾತ್ರ ಯೋಗಿಯು ಭಿಕ್ಷೆ ಬೇಡಬೇಕು. ಅವರು ಭಿಕ್ಷೆಯಲ್ಲಿ ನೀಡಿದ ಅನ್ನ

ಹಾಲು, ಮಜ್ಜಿಗೆ, ಮೊಸರು, ಕಂದ, ಮೂಲ, ಫಲ, ಹಿಟ್ಟು ಮುಂತಾದ ಪವಿತ್ರ ಆಹಾರವನ್ನು ಮಾತ್ರ ಸೇವಿಸಬೇಕು. ಇವೆಲ್ಲವೂ ಸಾತ್ವಿಕವಾದ ಆಹಾರ ಎನಿಸುತ್ತವೆ. ಯೋಗಶಾಸಕರು ಬೇರೆ ಬೇರೆ ಲಕ್ಷಣಗಳಿಂದ ತಮ್ಮ ಮರಣ ಸಮಯವನ್ನು ಮುಂಚಿತವಾಗಿ ತಿಳಿದುಕೊಂಡು ಕಾಲಪುರುಷನನ್ನು ವಂಚಿಸಿ ಮರಣವನ್ನು ಕೂಡ ಮೀರಿ ನಿಲ್ಲಬಹುದು. ಅದಕ್ಕಿರುವ ಒಂದೇ ಒಂದು ಉಪಾಯವೆಂದರೆ ಮೃತ್ಯುಂಜಯನಾದ ಮಹೇಶ್ವರನ ನಿರಂತರ ಧ್ಯಾನ. ನಿಶ್ಚಲ ಸಮಾಧಿ. ಪರಶಿವನ ಪಾದಮೂಲದಲ್ಲಿ ಅವನ ಚರಣ ಪರಿಚರಣ ಪರಾಯಣನಾದ ಪ್ರಾಣಿಯನ್ನೂ, ಸತತ ಶಿವಧ್ಯಾನೈಕತಾನಲೀನ ಮಾನಸನಾಗಿ ಶಿವಮಯನಾಗಿ ಇದ್ದ ಸುಜೀವಿಯನ್ನೂ ಯಾವ ಮೃತ್ಯುವೂ ತನ್ನ ಯಮಪಾಶದಿಂದ ಎಳೆಯಲಾರ. ಆದರೆ ಯೋಗಪಥಾರೂಢನು ತನ್ನ ಮೃತ್ಯುರೂಪ ಕುತ್ತು ಎಂದು ಬರುವುದೆಂಬುದನ್ನು ಮಾತ್ರ ಅದರ ದುಸ್ವಪ್ನ ಮುಂತಾದ ಲಕ್ಷಣಗಳಿಂದ ಪೂರ್ವಭಾವಿಯಾಗಿ ಅರಿತುಕೊಳ್ಳಬೇಕು. ಅಂಥ ಸಾವಿನ ಸೂಚಕವಾದ ಕೆಲವು ಲಕ್ಷಣಗಳನ್ನು ಹೇಳುತ್ತೇನೆ ಕೇಳು -

## ಕೆಲವು ಮರಣದ ಮುನ್ಸೂಚನೆಗಳು

ಕೆಂಪು ಚರ್ಮ ಅಥವಾ ಕೆಂಪು ಬಟ್ಟೆ ಧರಿಸಿದ ಒಬ್ಬ ಸ್ತ್ರೀ ಕನಸಿನಲ್ಲಿ ಬಂದು ಯಾವುದೇ ಪುರುಷನನ್ನು ದಕ್ಷಿಣ ದಿಕ್ಕಿನಲ್ಲಿ ಸೆಳೆದೊಯ್ದರೆ ಅಂಥ ಮನುಷ್ಯನು ಬಹುದಿನ ಬದುಕುವುದಿಲ್ಲ. ಕನಸಿನಲ್ಲಿ ಯಾವನಾದರೊಬ್ಬ ಸನ್ಯಾಸಿಯು ದಿಗಂಬರನಾಗಿ ಕುಣಿದು ಕುಪ್ಪಳಿಸುವದನ್ನು ಕಂಡರೆ ಅಥವಾ ಕನಸಿನಲ್ಲಿ ಕರಡಿ, ಕೋತಿಗಳನ್ನು ಹೂಡಿದ ರಥದಲ್ಲಿ ಕುಳಿತು ದಕ್ಷಿಣ ದಿಕ್ಕಿನಲ್ಲಿ ತಾನು ಹೋಗುವಂತೆ ಕಂಡರೆ ಅವನು ಸಾವಿನ ಸಮೀಪದಲ್ಲಿಯೇ ಇದ್ದಂತೆ. ನೀರಿಲ್ಲದ ನದಿಯಲ್ಲಿ ಕೆಂಡ, ಬೂದಿ, ಹಾವುಗಳು ತುಂಬಿದ್ದನ್ನು ಕಂಡರೆ ಅಂಥ ಸ್ವಪ್ನವು ಮರಣಸೂಚಕ. ಕನಸಿನಲ್ಲಿ ಅಕರಾಳ-ವಿಕರಾಳ ಮನುಷ್ಯನು ಕೈಯಲ್ಲಿಯ ಖಡ್ಗವನ್ನು ಝಳಿಪಿಸುತ್ತ ಹೊಡೆಯಲು ಬಂದರೆ, ಕಲ್ಲುಗಳಿಂದ ಹೊಡೆದರೆ ಮೃತ್ಯು ದೂರ ಇಲ್ಲ ಎಂದು ತಿಳಿಯಬಹುದು. ಸೂರ್ಯೋದಯ ಕಾಲದಲ್ಲಿ ಅಳುತ್ತ ಪಶುಪಕ್ಷಿಗಳು ಯಾರದಾದರೂ ಎದುರು ಹಾಯ್ದು ದಕ್ಷಿಣದಿಕ್ಕಿಗೆ ಪೋಗುತ್ತಿಲಿದ್ದರೆ ಅದು ಮೃತ್ಯು ಸನ್ನಿಹಿತವಾಗಿದೆ ಎಂಬುದರ ಸೂಚಕ.

## ಇನ್ನೂ ಕೆಲವು ದುರ್ಲಕ್ಷಣಗಳು

ಬತ್ತಿಯ ದೀಪ ಆರಿದಾಗ ಅದರ ಕರಕುವಾಸನೆ ಬಾರದಿದ್ದರೆ, ರಾತ್ರಿಯಲ್ಲಿ ರಕ್ತವಾಂತಿ ಮಾಡಿಕೊಂಡರೆ, ಇನ್ನೊಬ್ಬರ ಕಣ್ಣಿನಲ್ಲಿ ತನ್ನ ಪ್ರತಿಬಿಂಬ ಕಾಣದಿದ್ದರೆ, ಅಪರಾತ್ರಿಯಲ್ಲಿ ಕಾಮನ ಬಿಲ್ಲು ಕಂಡರೆ, ಹಗಲು ಹೊತ್ತು ಮುಗಿಲಿನಲ್ಲಿ ನಕ್ಷತ್ರಗಳು ಕಾಣಿಸಿದರೆ, ಕಿವಿಯ ಹಾಳೆಗಳು ಒಮ್ಮೆಲೇ ಜೋತು ಬಿದ್ದರೆ, ಬಲಗಣ್ಣು ಯಾವಾಗಲೂ ನೀರನ್ನು ಸುರಿಸುತ್ತಿದ್ದರೆ ಆಯುಷ್ಯವು ಮುಗಿಯಲು ಬಂದಿದೆ ಎಂದು ತಿಳಿಯಬೇಕು. ಇದರಂತೆ ಮುಖವು ಕೆಂಪು ಕೆಂಪಾಗಿ ನಾಲಿಗೆ ಕಪ್ಪಾದರೆ ಒಳ್ಳೇ ಲಕ್ಷಣವಲ್ಲ. ಕನಸಿನಲ್ಲಿ ಒಂಟೆ ಕತ್ತೆಗಳ ಮೇಲೆ ಏರಿ ದಕ್ಷಿಣ ದಿಕ್ಕಿನ ಕಡೆ ಹೊರಟಂತೆ ತೋರಿದರೆ ಅಥವಾ ದೊಡ್ಡ ತೆಗ್ಗಿನಲ್ಲಿ ಬಿದ್ದರೆ ಎದ್ದು ಬರಲಾರದಂತೆ ಬಂದೀಖಾನೆಯಲ್ಲಿ ಹಾಕಿದಂತಾದರೆ ಅವನಿಗೆ ಮೃತ್ಯು ಹತ್ತಿರ ಬರುತ್ತಿದೆ ಎಂದು ತಿಳಿಯಬೇಕು. ಕನಸಿನಲ್ಲಿ ಕಣ್ಣು ಕೆಂಪಗಾದರೆ, ಅಗ್ನಿಯಲ್ಲಿ ಬಿದ್ದು ಅಲ್ಲಿಂದ ಮೇಲೆ

ಮೇಲೆ ಏಳದಿದ್ದರೆ, ನೀರಿನಲ್ಲಿ ಹೊಕ್ಕು ಅಲ್ಲಿಂದ ಹೊರಬರದಿದ್ದರೆ ಅಂತ್ಯಕಾಲವು ಸಮೀಪಿಸಿದೆ ಎಂದು ಭಾವಿಸಬೇಕು. ಹಗಲು ಅಥವಾ ರಾತ್ರಿ ಭೂತಪ್ರೇತಗಳಿಂದ ಹೊಡೆತಗಳನ್ನು ತಿನ್ನುತ್ತಿದ್ದರೆ ಸಾವು ಜಪ್ಪಿಸಿಕೊಂಡು ಕುಳಿತಿದೆ ಸಮೀಪದಲ್ಲಿಯೇ ಎಂದು ಅರ್ಥ. ಯಾವನು ಆಸ್ತಿಕನಾಗಿ ಹರಿಹರ ಗುರು ದೇವತಾಭಕ್ತನಾಗಿಯೂ ಒಮ್ಮೆಲೆ ದೇವರ ನಿಂದೆ, ಧರ್ಮದ ದ್ವೇಷ ಗುರುಗಳ ನಿರ್ಭತ್ಸನೆಯನ್ನು ಮಾಡತೊಡಗಿದರೆ ಅವರು ಬಹುದಿನ ಬಾಳುವದಿಲ್ಲ ಎಂದು ತಿಳಿಯಬೇಕು.

## ಯೋಗಿ ನಿರ್ಯಾಣ

ಯೋಗಶಾಸ್ತ್ರದ ರಹಸ್ಯವನ್ನು ಅರಿತ ಮಾನವನು ಈ ಮೃತ್ಯು ಸೂಚಕವಾದ ಅಪಶಕುನಗಳಿಂದ ಪೂರ್ವಭಾವಿಯಾಗಿಯೇ ಮೃತ್ಯುವಿನ ಆಗಮನದ ಲಕ್ಷಣಗಳನ್ನು ಕಂಡು ಹಿಡಿದು ಅದನ್ನು ತಪ್ಪಿಸಿಕೊಳ್ಳಲಿಕ್ಕಾಗಿ ಯೋಗಮಾರ್ಗದ ಅಷ್ಟಾಂಗಗಳ ಸಾಧನೆ ಮಾಡಿ ಶಿವ ಸಮಾಧಿಯಲ್ಲಿಯೇ ಸ್ಥಿರಚಿತ್ತನಾಗಿ ನಿಂತುಕೊಳ್ಳಬೇಕು. ಅಂಥವರ ಹತ್ತಿರವೂ ಸುಳಿಯಲಾರದು ಮೃತ್ಯುವಿನ ಛಾಯೆ. ಅಥವಾ ಯೋಗಿಗೆ ಈ ಪಾಂಚಭೌತಿಕ ಶರೀರದಿಂದ ಬಿಡುಗಡೆ ಹೊಂದಿ ಮುಕ್ತಿ ಮಂದಿರವನ್ನು ಸೇರಬೇಕೆಂದು ಉತ್ಕಟ ಇಚ್ಛೆ ಇದ್ದರೆ ತನ್ನ ಪಂಚಪ್ರಾಣಗಳನ್ನೇ ಗುದದ್ವಾರದಿಂದ ಎಬ್ಬಿಸಿಕೊಂಡು ಕ್ರಮವಾಗಿ ಚತುರ್ದಳ ಚಕ್ರದಿಂದ ಷಟ್‌ಚಕ್ರಕ್ಕೂ, ಷಟ್‌ಚಕ್ರದಿಂದ ದಶದಳ ಚಕ್ರಕ್ಕೂ, ದಶದಳ ಚಕ್ರದಿಂದ ದ್ವಾದಶದಳ ಚಕ್ರಕ್ಕೂ, ಇದರಿಂದ ಷೋಡಶದಳ ಚಕ್ರಕ್ಕೂ ಅಲ್ಲಿಂದ ದ್ವಿದಳ ಚಕ್ರಕ್ಕೂ ಎಚ್ಚರದಿಂದ ಪ್ರಾಣವಾಯುವನ್ನು ಕರೆತಂದು ಸುಷುಮ್ನಾನಾಡಿಯಿಂದ ಬ್ರಹ್ಮರಂಧ್ರಕ್ಕೆ ತಲುಪಿಸಬೇಕು. ಬ್ರಹ್ಮರಂಧ್ರ ಸ್ಫೋಟಗೊಂಡು ಪ್ರಾಣೋತ್ಕ್ರಮಣ ಆದರೆ ಆ ಯೋಗಿಯೂ ದೇವಯಾನದಿಂದ ತನ್ನ ಮುಕ್ತಿ ಪಥದಲ್ಲಿ ಮುಂದುವರೆಯುವನು.

ಇದೇ ಲೋಕದಲ್ಲಿ ಇದ್ದು ಯೋಗಸಾಧನ ಮಾಡುವ ಸಿದ್ಧಪುರುಷರಿಗೂ ಕೂಡ ಅನೇಕ ಉಪಸರ್ಗಗಳು ತಾಗುವದುಂಟು. ಈಶಾನ, ರಾಕ್ಷಸ, ಯಕ್ಷ, ಗಂಧರ್ವ, ಇಂದ್ರ, ಚಂದ್ರ, ಪ್ರಜಾಪತಿ, ಬ್ರಹ್ಮ, ಇವರ ಆಧಿಪತ್ಯದಲ್ಲಿ ಇರುವ ಈ ಯೋಗಸಾಧಕರಿಗೆ ಸಂಬದ್ಧವಾದ ಎಂಟು ಸಿದ್ಧಿಗಳು ಇರುತ್ತವೆ. ಪಾರ್ಥಿವೀ, ಜಲಮಯೀ, ತೈಜಸೀ. ವಾಯವೀ, ಆಕಾಶಸಂಬಂಧಿನೀ, ಮಾನಸೀ, ಅಹಂಕಾರೋದ್ಭವಾ ಮತ್ತು ಬುದ್ಧಿಜಾ ಎಂದು ಎಂಟು ಬಗೆಯಾಗಿವೆ ಆ ಸಿದ್ಧಿಗಳು. ಇವುಗಳಲ್ಲಿ ಒಂದೊಂದರಲ್ಲಿಯೂ ಮತ್ತೆ ಎಂಟು ಉಪಭೇದಗಳು ಒಟ್ಟು ಅರವತ್ನಾಲ್ಕು ಸಿದ್ಧಿಗಳು. ಇವು ಮೇಲೆ ಹೇಳಿದ ಈಶಾನಾದಿ ಲೋಕಗಳಲ್ಲಿ ದುಪ್ಪಟ್ಟು, ತಿಪ್ಪಟ್ಟು, ನಾಲ್ಕು ಮುಡಿ, ಹೀಗೆ ಹೆಚ್ಚಾಗುತ್ತ ಹೋಗುವವು. ಈಶಾನ ಲೋಕದಲ್ಲಿ ಎಂಟು ಸಿದ್ಧಿ, ಮುಂದಿನ ರಾಕ್ಷಸ ಲೋಕದಲ್ಲಿ ಹದಿನಾರು, ಅದರ ಮುಂದಿನ ಯಕ್ಷಲೋಕದಲ್ಲಿ ಇಪ್ಪತ್ನಾಲ್ಕು ಸಿದ್ಧಿಗಳು. ಹೀಗೆ ಕೊನೆಯದಾದ ಬ್ರಹ್ಮಲೋಕದಲ್ಲಿ ಅರವತ್ನಾಲ್ಕು ಸಿದ್ಧಿಗಳು ಇರುತ್ತವೆ ಎಂದು ತಿಳಿಯಬೇಕು.

### ಅಷ್ಟಸಿದ್ಧಿಗಳ ಪ್ರಕಾರಗಳು

ಮೊದಲು ಈಶಾನ ಲೋಕದಲ್ಲಿರುವ ಅಷ್ಟಸಿದ್ಧಿಗಳನ್ನು ಹೇಳುತ್ತೇನೆ. ದೇಹದಿಂದ ದೊಡ್ಡವನಾಗುವದು ಅಥವಾ ದಪ್ಪನಾಗುವದು ಅಥವಾ ತೆಳ್ಳಗಾಗುವದು. ಅತ್ಯಂತ

ಸೂಕ್ಷ್ಮನಾಗುವದು. ಮುಪ್ಪಿನ ಮುದುಕನಾಗುವದು. ಹೊಸ ಹರೆಯದ ಹುಡುಗನಾಗುವದು, ಭಿನ್ನ ಭಿನ್ನ ಜಾತಿಯ ಜೀವರಲ್ಲಿ ತಾನು ಪ್ರಕಟನಾಗುವದು. ಒಂದೇ ಜಾತಿಯಲ್ಲಿಯ ಅನೇಕ ರೂಪಗಳನ್ನು ಸ್ವೀಕರಿಸುವದು. ಪಾರ್ಥಿವ ಅಂಶವಿಲ್ಲದೇ ಕೇವಲ ಜಲ, ತೇಜಸ್ಸು, ವಾಯು, ಆಕಾಶ, ಈ ನಾಲ್ಕೇ ಮಹಾಭೂತಗಳಿಂದ ಶರೀರಧಾರಣೆ ಮಾಡುವದು ಇವು ಎಂಟು ಸಿದ್ಧಿಗಳು. ಪೃಥ್ವೀ ತತ್ವದ ಮೇಲೆ ವಿಜಯವನ್ನು ದೊರಕಿಸಿದ ಬಳಿಕ ಈಶಾನ ಲೋಕದಲ್ಲಿ ಪ್ರಾಪ್ತವಾಗುತ್ತವೆ ಈ ಅಷ್ಟವಿಧ ಸಿದ್ಧಿಗಳು.

## ಜಲತತ್ವ ಜಯಸಿದವನಿಗೆ ಬರುವ ಸಿದ್ಧಿಗಳು

ಜಲತತ್ವದ ಮೇಲೆ ವಿಜಯವನ್ನು ಗಳಿಸಿದ ಬಳಿಕ ಮಾನವನು ಪೃಥ್ವಿಯಂತೆ ನೀರಿನಲ್ಲಿಯೇ ನಿವಾಸಮಾಡುವನು. ಯಾವ ಹೆದರಿಕೆಯೂ ಇಲ್ಲದೇ ಸಮುದ್ರವನ್ನೇ ಗಟಗಟ ಕುಡಿಯಬಹುದು. ಅವನು ಬಯಸಿದಲ್ಲೆಲ್ಲ ನೀರು, ಹೋದಲ್ಲೆಲ್ಲ ಹಸಿರು, ನಿಂತಲ್ಲೆಲ್ಲ ಬೆಳೆ, ಬಂಜರ ಭೂಮಿಯಲ್ಲಿ ಕೂಡ ಅವನ ಆಗಮನದಿಂದ ಜಲಸಮೃದ್ಧಿ, ಅವನ ದೇಹಕ್ಕೆ ಎಂದೂ ಬೆವರು ಬರುವದಿಲ್ಲ. ಕಾಂತಿ ಕಡಿಮೆ ಯಾಗುವದಿಲ್ಲ. ಪೃಥ್ವಿ ಮತ್ತು ನೀರು ಇವೆರಡು ತತ್ವಗಳನ್ನು ಬಿಟ್ಟು ಪಂಚಮಹಾಭೂತಗಳಲ್ಲಿ, ತೇಜ, ವಾಯು, ಆಕಾಶ, ಇವು ಮೂರೇ ತತ್ವಗಳಿಂದ ಅವನು ಶರೀರಧಾರಣ ಮಾಡಬಲ್ಲ. ಹೀಗೆ ಈಗ ಹೇಳಿದ ಎಂಟು ಸಿದ್ಧಿಗಳೂ ಹಿಂದಿನ ಈಶಾನ ಲೋಕದಲ್ಲಿ ಇದ್ದಾಗ ಪೃಥ್ವೀತತ್ವದಿಂದ ಬರುವ ಹಿಂದಿನ ಎಂಟು ಸಿದ್ಧಿಗಳೂ ಒಟ್ಟು ಹದಿನಾರು ಸಿದ್ಧಿಗಳು. ಜಲತತ್ವ ವಿಜಯವನ್ನು ಸಾಧಿಸಿಕೊಂಡ ಯೋಗಿಗೆ ಈ ಹದಿನಾರು ಸಿದ್ಧಿಗಳು ಲೋಕದಲ್ಲಿ ಪ್ರಕಟವಾಗುತ್ತವೆ.

## ಅಗ್ನಿತತ್ವ ಗೆದ್ದವನಿಗೆ ಇಪ್ಪತ್ನಾಲ್ಕು ಸಿದ್ಧಿ

ಮೂರನೆಯದಾದ ಅಗ್ನಿತತ್ವದ ಮೇಲೆ ವಿಜಯವನ್ನು ಹೊಂದಿದ ಬಳಿಕ ದೇಹದಿಂದಲೇ ಅಗ್ನಿಯನ್ನು ಪ್ರಕಟಿಸುವದು. ನೀರಿನಲ್ಲಿಯೇ ಉರಿ ಹಚ್ಚುವದು, ಎಲ್ಲ ಲೋಕಗಳನ್ನು ಭಸ್ಮಮಾಡಿ ಹಾಕುವಷ್ಟು ಶಕ್ತಿಯಿಂದ ದೇದೀಪ್ಯಮಾನವಾಗುವದು. ಕೈಯಲ್ಲಿಯೇ ಕೆಂಡ ಕಿಚ್ಚನ್ನು ಹಿಡಿಯುವದು, ಸ್ಮರಣ ಮಾತ್ರದಿಂದಲೇ ಬೇಕಾದವರನ್ನು ಪವಿತ್ರಗೊಳಿಸುವದು. ಬೆಂಕಿಯಿಂದ ಸುಟ್ಟು ಬೂದಿಯಾದ ವಸ್ತುವನ್ನು ಪುನಃ ಮೊದಲಿನಂತೆ ಬದುಕಿಸಿಕೊಡುವದು, ವಾಯು ಮತ್ತು ಆಕಾಶ ಎರಡೇ ತತ್ವಗಳಿಂದ ಶರೀರ ಧಾರಣ ಮಾಡುವದು, ಇವು ಎಂಟು ಸಿದ್ಧಿಗಳು. ಹಿಂದಿನ ಹದಿನಾರು ಸಿದ್ಧಿಗಳು ಕೂಡಿ ಒಟ್ಟು ಇಪ್ಪತ್ನಾಲ್ಕು ಸಿದ್ಧಿಗಳು, ಯಕ್ಷಲೋಕದಲ್ಲಿ ಪ್ರಕಟವಾಗುವವು.

ನಾಲ್ಕನೆಯದಾದ ವಾಯವೀಯ ಸಿದ್ಧಿಯು ಗಂಧರ್ವ ಲೋಕದಲ್ಲಿ ಪ್ರಕಟವಾಗುವದು. ಇದರಲ್ಲಿ ಎಂಟು ವಿಧ. ಮನಸ್ಸಿನ ವೇಗದಿಂದ ಬೇಕಾದಲ್ಲಿ ಪ್ರಯಾಣ ಮಾಡುವುದು. ಪ್ರಾಣಿಗಳ ಅಂತರಂಗದಲ್ಲಿ ಪ್ರವೇಶಿಸುವುದು, ಬೆಟ್ಟದಂಥ ಬಹುಭಾರವಾದ ವಸ್ತುಗಳನ್ನು ಲೀಲಾಜಾಲವಾಗಿ ಎತ್ತಾಡುವುದು, ಅರಳೆಗಿಂತ ಹಗುರಾಗುವದು. ಪರ್ವತಕ್ಕಿಂತ ಭಾರವಾಗುವದು, ಎರಡೂ ಕೈಗಳಿದ ಗಾಳಿಯನ್ನು ಹಿಡಿಯುವುದು, ಬೆರಳಿನ ತುದಿಯಿಂದಲೇ ನೂಕಿ ಅಥವಾ ಜಗ್ಗಿ ಪೃಥ್ವಿಯನ್ನೇ ಅಲುಗಾಡಿಸುವುದು, ಒಂದೇ ಒಂದಾದ ಆಕಾಶ ತತ್ವದಿಂದಲೇ ಶರೀರವನ್ನು ಧಾರಣ ಮಾಡುವದು ಇವು ಎಂಟು ವಾಯವೀಯ ಶಕ್ತಿ

ಎನಿಸುತ್ತವೆ. ವಾಯುತತ್ವದ ಮೇಲೆ ವಿಜಯವನ್ನು ಸಾಧಿಸಿದ ಯೋಗಿಗಳಿಗೆ ಈ ಎಂಟು ವಾಯವೀಯ ಸಿದ್ಧಿಗಳಲ್ಲದೇ ಹಿಂದಿನ ಇಪ್ಪತ್ನಾಲ್ಕು ಸಿದ್ಧಿಗಳು. ಒಟ್ಟು ಮೂವತ್ತೆರಡು ಸಿದ್ಧಿಗಳು ಗಂಧರ್ವ ಲೋಕದಲ್ಲಿ ಪ್ರಕಟವಾಗುವವು.

ಐದನೆಯದಾದ ಆಕಾಶಸಿದ್ಧಿಯೂ ಅಷ್ಟವಿಧ. ತನ್ನ ನೆರಳನ್ನು ಉಪಸಂಹರಿಸುವದು, ಇಂದ್ರಿಯಗೋಚರನಾಗದಿರುವದು, ಯಾವಾಗಲೂ ಆಕಾಶದ ಅವಕಾಶದಲ್ಲಿ ಚರಿಸುವದು, ಮನಸ್ಸು ಇಂದ್ರಿಯಗಳನ್ನು ಸಂಪೂರ್ಣವಾಗಿ ನಿಯಮಿಸಿ ಶಾಂತವಾಗಿ ಇರಿಸುವುದು, ದೂರದ ಶಬ್ದಗಳನ್ನು ಕೇಳುವದು, ಎಲ್ಲ ಪ್ರಾಣಿಗಳ ಶಬ್ದ ಹಾಗೂ ಭಾಷೆಗಳನ್ನು ಅರಿಯುವುದು. ರೂಪ ರಸ ಗಂಧ ಸ್ಪರ್ಶಗಳ ಚಿನ್ಹೆಗಳನ್ನು ಧರಿಸುವದು, ಎಲ್ಲ ಪ್ರಾಣಿಗಳ ಅಂತರಂಗ ಬಹಿರಂಗಗಳನ್ನು ಸಾಕ್ಷಾತ್ಕರಿಸಿಕೊಳ್ಳುವದು. ಈ ಎಂಟು ತತ್ವಗಳು ಆಕಾಶತತ್ವದ ಮೇಲೆ ವಿಜಯವನ್ನು ಸ್ಥಾಪಿಸಿದ ಬಳಿಕ ಪ್ರಾಪ್ತವಾಗುವವು. ಇವಕ್ಕೆ ಹಿಂದಿನ ಮೂವತ್ತೆರಡು ಸಿದ್ಧಿಗಳು ಸೇರಿ ಒಟ್ಟು ನಲವತ್ತು ಸಿದ್ಧಿಗಳು ಇಂದ್ರಲೋಕದಲ್ಲಿ ಪ್ರಕಟಗೊಳ್ಳುವವು.

ಆರನೆಯದಾದ ಮಾನಸೀ ಸಿದ್ಧಿಯೂ ಉಳಿದ ಸಿದ್ಧಿಯಂತೆ ಎಂಟು ಬಗೆಯದಾಗಿದೆ. ತನ್ನ ಇಚ್ಚೆಗೆ ಅನುಸಾರವಾಗಿ ಬಯಸಿದ ವಸ್ತುಗಳನ್ನೆಲ್ಲ ಪಡೆಯುವದು. ಮನಬಂದಲ್ಲಿಗೆ ಹೊರಟು ಹೋಗುವದು. ಎಲ್ಲ ತರಹದ ಶಕ್ತಿಗಳನ್ನು ಸ್ವಾಧೀನಪಡಿಸಿಕೊಳ್ಳುವದು. ಎಲ್ಲ ರಹಸ್ಯವಾದ ಗುಪ್ತ ವಸ್ತುಗಳನ್ನೆಲ್ಲ ಕಾಣುವದು. ಪ್ರಪಂಚದ ಎಲ್ಲ ಘಟನೆಗಳನ್ನು ನೋಡುವದು ಈ ಎಂಟು ಸಿದ್ಧಿಗಳಿಗೆ ಮಾನಸೀ ಸಿದ್ಧಿ ಎನ್ನುವರು. ಈ ಹಿಂದಿನ ನಲವತ್ತು ಕೂಡಿ ಒಟ್ಟು ನಲವತ್ತೆಂಟು ಸಿದ್ಧಿಗಳು ಚಂದ್ರಲೋಕದಲ್ಲಿ ಯೋಗಿಗೆ ಪ್ರಾಪ್ತ ಆಗುತ್ತವೆ.

ಏಳನೆಯದಾದ ಆಹಂಕಾರಿಕ ಸಿದ್ಧಿಗಳೂ ಉಳಿದ ಸಿದ್ಧಿಗಳಂತೆ ಅಷ್ಟ ಪ್ರಕಾರಕವಾಗಿವೆ. ಬೇಕಾದ ವಸ್ತುಗಳನ್ನು ಕಡಿದು ಕತ್ತರಿಸುವದು, ಹಸಿ ಇದ್ದದ್ದನ್ನು ಒಣಗಿಸುವದು, ದೊಡ್ಡ ದೊಡ್ಡ ಗುಡ್ಡಗಳನ್ನೂ, ಭೂಮಂಡಲಗಳನ್ನೂ, ವನಬಯಲುಗಳನ್ನೂ ಕುಳಿತಲ್ಲಿಂದಲೇ ಸೀಳಿ ಹಾಕುವದು, ಪ್ರಪಂಚವನ್ನೇ ಬದಲಿಸುವದು, ಎಲ್ಲ ಪ್ರಾಣಿಗಳನ್ನೂ ಸುಪ್ರಸನ್ನರನ್ನಾಗಿ ಮಾಡುವದು, ಮೃತ್ಯುವಿನ ಮೇಲೆ ವಿಜಯವನ್ನು ಸಂಪಾದಿಸುವದು ಇವು ಎಂಟು, ಹಿಂದಿನ ನಲವತ್ತೆಂಟು, ಒಟ್ಟು ಐವತ್ತಾರು ಸಿದ್ಧಿಗಳು ಯೋಗಮಾರ್ಗದಲ್ಲಿ ಯಶಸ್ವಿಯಾದ ಯೋಗೀಶ್ವರರಿಗೆ ಪ್ರಾಜಾಪತ್ಯ ಲೋಕದಲ್ಲಿ ಪ್ರಕಟಿತವಾಗುವವು.

ಕೊನೆಯದಾದ ಬುದ್ಧಿಜಾ ಸಿದ್ಧಿಯು ಹಿಂದಿನ ಏಳು ಸಿದ್ಧಿಗಳಂತೆ ಎಂಟು ವಿಧವಾಗಿದೆ. ಸಂಕೇತ ಮಾತ್ರದಿಂದಲೇ ಸಂಸಾರದ ಸೃಷ್ಟಿಯನ್ನು ಮಾಡುವದು, ಎಲ್ಲರ ಮೇಲೆ ಅನುಗ್ರಹದ ವೃಷ್ಟಿಯನ್ನು ಸುರಿಸುವದು. ಪ್ರಳಯದ ಅಧಿಕಾರವನ್ನು ಹೊಂದುವದು, ಇನ್ನೊಬ್ಬರ ಚಿತ್ತದಲ್ಲಿ ಪ್ರವೇಶಿಸಿ ಆ ಪರಬುದ್ಧಿ ಮನಗಳನ್ನು ಪ್ರೇರೇಪಿಸುವದು, ಅಸಾಮಾನ್ಯವಾದ ವಸ್ತುಗಳನ್ನು ಪ್ರಕಟಿಸುವದು, ಚಿತ್ರದಲ್ಲಿ ಬರೆದ ಪ್ರಾಣಿಗಳನ್ನು ಜೀವತುಂಬಿ ಪ್ರತ್ಯಕ್ಷದಲ್ಲಿ ಇಳಿಸಿ ತೋರಿಸುವದು, ಅಮಂಗಳಗಳನ್ನೆಲ್ಲ ಪರಿಹರಿಸಿ ಸರ್ವರಿಗೂ ಮಂಗಳವನ್ನುಂಟು ಮಾಡುವದು ಮತ್ತು ಸರ್ವ ಕರ್ತತ್ವ ಶಕ್ತಿಯಿಂದ ಸಂಪನ್ನ ಆಗುವದು, ಇವು ಬುದ್ಧಿಜಾ ಸಿದ್ಧಿಯ ಎಂಟು ಉಪಸಿದ್ಧಿಗಳು. ಹಿಂದಿನ ಐವತ್ತಾರು ಸಿದ್ಧಿಗಳನ್ನೂ ಈ ಎಂಟು ಸಿದ್ಧಿಗಳನ್ನೂ ಸೇರಿಸಿ ಕೂಡಿಸಿದರೆ ಒಟ್ಟು ಅರವತ್ನಾಲ್ಕು ಸಿದ್ಧಿಗಳು ಬ್ರಹ್ಮಲೋಕದಲ್ಲಿ ಮಾನವನಿಗೆ ಕೌಶಲ್ಯದಿಂದ ಪ್ರಕಟವಾಗುವವು.

## ತೂಗಾಡುವ ಖಡ್ಗ

ಅರ್ಜುನ! ಇವೆಲ್ಲವೂ ಅತ್ಯಂತ ರಹಸ್ಯವಾದ ವಿಷಯಗಳು. ಈ ಎಲ್ಲ ಗೋಪನೀಯವಾದ ಗೂಢ ವಿಷಯಗಳನ್ನು ನಿನ್ನೆದುರು ಆ ಗುಟ್ಟನ್ನೆಲ್ಲ ಸ್ಫೋಟಗೊಳಿಸಿದ್ದೇವೆ. ಇವುಗಳನ್ನು ಸಾಧಕರು ತಾವು ಬದುಕಿದ್ದಾಗಾಗಲೀ, ಅಥವಾ ದೇಹಾಂತರವನ್ನು ಹೊಂದಿಯಾಗಲೀ ಸಾಧಿಸಿಕೊಳ್ಳುತ್ತಾರೆ. ಆದರೆ ಈ ೬೪ ಬಗೆಯ ಸಿದ್ಧಿಗಳಲ್ಲಿ ಪತನದ ಭಯ ಇದ್ದೇ ಇದೆ. ಅತೀ ಎತ್ತರಕ್ಕೆ ಏರಿದ ಮನುಷ್ಯನಿಗೆ ಬಿಟ್ಟಿದ್ದೆ ಅಲ್ಲ ಬೀಳುವ ಭಯ. ಆದ್ದರಿಂದ ಇಂಥ ಯೋಗಾರೂಢರು ಸಿದ್ಧಿಯ ತುಟ್ಟ ತುದಿಯನ್ನು ಮುಟ್ಟಿದಾಗ ಬಹಳೇ ಜಾಗರೂಕರಾಗಿ ಇರಬೇಕಾಗುವದು. ಆದ್ದರಿಂದಲೇ ಅಧಃ ಪತನದ ಭಯದ ಖಡ್ಗವು ಯಾವಾಗಲೂ ಮೇಲೆ ತೂಗಾಡುತ್ತಿರುವದು. ಇಂಥ ಸಿದ್ಧಿಗಳ ವಿಷಯದಲ್ಲಿ ಅತಿ ಆಸಕ್ತಿಯನ್ನು ಹೊಂದಬಾರದು. ಇವುಗಳನ್ನೆಲ್ಲ ದೂರಸರಿಸಿ ಸದಾ ಸರ್ವಥಾ ಯೋಗಸಾಧನದಲ್ಲಿಯೇ ಮಗ್ನರಾದ ಯೋಗಿಗಳಿಗೆ ತಾವು ಬಯಸದೇ ಎಂಟು ವಿಧವಾದ ನಿರಪಾಯ ಸಿದ್ಧಿಗಳು ಪ್ರಾಪ್ತವಾಗುವವು. ಅಣಿಮಾ, ಲಘಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ, ಕಾಮಾವಸಾಯಿತಾ ಎಂಬ ಎಂಟು ವಿಧ ಸಿದ್ಧಿಗಳು ಇರುತ್ತವೆ. ಅಖಂಡ ಧ್ಯಾನದಿಂದ ಶಿವತತ್ಪರನಾಗಿ ಶಿವಯೋಗದಲ್ಲಿ ಸಿದ್ಧಿ ಪಡೆದ ಪುರುಷರಿಗೆ ಈ ಅಷ್ಟವಿಧ ಸಿದ್ಧಿಗಳು ಬಯಸದೇ ಬರುವವು. ಈ ಎಂಟು ಸಿದ್ಧಿಗಳು ಸ್ವಾಧೀನವಾದರೆ ಆ ಯೋಗಿಗೆ ಮಾಹೇಶ್ವರ ಪದ ಸ್ಥಿತಿಯು ಸಂಪನ್ನವಾಗಿದೆ ಎಂದು ಅರ್ಥ.

## ನಿರಪಾಯವಾದ ಸಿದ್ಧಿಗಳು

ಅಣಿಮಾ ಎಂದರೆ ಅತ್ಯಂತ ಸೂಕ್ಷ್ಮಾತಿಸೂಕ್ಷ್ಮವಾದ ರೂಪವನ್ನು ತೆಗೆದು ಕೊಳ್ಳುವದು. ಅತೀ ಶೀಘ್ರತೆಯಿಂದ ಗಾಳಿಗಿಂತ ಹಗುರರಾಗಿ ಬೇಕಾದ ಕಾರ್ಯಗಳನ್ನು ಮಾಡುವ ಶಕ್ತಿಗೆ ಲಘಿಮಾ ಎನ್ನುವರು. ಲೋಕಕಲ್ಯಾಣ ಮಾಡುವ ಮಹಾಪ್ರಭಾವಕ್ಕೆ ಮಹಿಮಾ ಎನ್ನುವರು. ತನ್ನ ಮನಸ್ಸಿಗೆ ಬಂದ ವಸ್ತುವನ್ನು ಹೊಂದುವುದಕ್ಕೆ ಪ್ರಾಪ್ತಿ ಎಂದು ಹೆಸರು. ಎಲ್ಲ ಕಡೆಗೂ ವ್ಯಾಪ್ತನಾಗಿ ಇರುವದಕ್ಕೆ ಪ್ರಾಕಾಮ್ಯ ಸಿದ್ಧಿ ಎನ್ನುವರು. ಈಶ್ವರನ ಅನುಗ್ರಹದಿಂದ ಸರ್ವಜಗತ್ತನ್ನೇ ತನ್ನ ವಶದಲ್ಲಿಯೇ ಇರಿಸಿಕೊಳ್ಳುವ ಶಕ್ತಿ ಪಡೆಯುವದು ಈಶಿತ್ವ ಸಿದ್ಧಿ. ಮನ ಬಂದಲ್ಲಿ ಹೋಗುವದು, ಬಯಸಿದ ರೂಪ ಪಡೆಯುವದು ಇದಕ್ಕೆ ಕಾಮಾವಸಾಯಿತಾ ಸಿದ್ಧಿ ಎನ್ನುವರು. ಈ ಎಂಟು ಸಿದ್ಧಿಗಳೂ ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡ ಯೋಗಿಗೆ ಮಾತ್ರ ಲಭಿಸುವವು. ಇಂಥ ಯೋಗಿಗಳು ಮತ್ತೆ ಹುಟ್ಟುವದಿಲ್ಲ. ಬೆಳೆಯುವದಿಲ್ಲ, ಸಾಯುವದಿಲ್ಲ, ಇವರಿಗೆ ಜೀವನ್ಮುಕ್ತರು ಎಂದು ಹೆಸರು. ಇಂಥ ಜೀವನ್ಮುಕ್ತರಿಗೆ ಅಧಃಪತನ ಎಂಬುದೇ ಇಲ್ಲ. ಭಯಾಪಾಯಗಳ ಪ್ರಸಕ್ತಿಯೇ ಇಲ್ಲ ಇಂಥ ಮಹಾತ್ಮರಿಗೆ ಮುಕ್ತಿಯೇ ಇಂಥ ಮಹಾಪುರುಷರಿಗಾಗಿ ದಾರಿ ಕಾಯುತ್ತ ಕುಳಿತಿರುವುದು.

## ಪವಾಡದ ಚಮತ್ಕಾರಗಳ ಚಪಲತೆಗೆ ಎಳೆಸಬಾರದು

ಅರ್ಜುನ! ಯೋಗದ ಈ ಎಲ್ಲ ಸಿದ್ಧಿಫಲಗಳನ್ನು ಸಾಫಲ್ಯ-ವೈಫಲ್ಯಗಳನ್ನು ಮೇಲ್ಮೆ-ಕೀಳ್ಮೆಗಳನ್ನು ಚೆನ್ನಾಗಿ ಅರಿತುಕೊಂಡು ಮಾನವನು ಸರಿಯಾದ ಮಾರ್ಗದಿಂದ ಜಾಗರೂಕನಾಗಿ ಕ್ಷುದ್ರ ಸಿದ್ಧಿ, ಚಿಲ್ಲರೆ ಪವಾಡ, ಕ್ಷುಲ್ಲಕ ಚಮತ್ಕಾರಗಳಿಗೆ ಆಶೆ ಪಡದೇ

ಏಕಾಗ್ರ ಚಿತ್ತದಿಂದ ಭಗವಂತನ ಅನುಗ್ರಹ ಒಂದನ್ನೇ ತನ್ನ ಗುರಿಯನ್ನಾಗಿ ಇಟ್ಟುಕೊಂಡು ಆತ್ಮೋದ್ಧಾರಕ್ಕೆ ಮಾತ್ರ ಯೋಗಸಾಧನೆಯನ್ನು ಕೈಗೊಳ್ಳಬೇಕು.

ನಿರ್ಮಲ ಮನಸ್ಸಿನ ಯೋಗಿಗಳಿಗೆ ಯೋಗಸಿದ್ಧಿಗಾಗಿ ಕೆಲವು ಉಪಮೆಗಳನ್ನು ಯೋಗಶಾಸ್ತ್ರದಲ್ಲಿ ಹೇಳಿದ್ದಾರೆ. ಸೂರ್ಯಕಾಂತಮಣಿಯು ಚಂದ್ರನ ಕಿರಣಗಳ ಸಂಯೋಗದಿಂದಾಗಲೀ, ಚಂದ್ರಕಾಂತ ಮಣಿಯ ಸಂಪರ್ಕದಿಂದಾಗಲೀ ಅಗ್ನಿಯನ್ನು ಪ್ರಕಟಗೊಳಿಸುವದಿಲ್ಲ. ಆದರೆ ತಾನು ಒಂದೇ ಇದ್ದಾಗ ತನ್ನ ಸಜಾತೀಯ ಸೂರ್ಯಕಿರಣದ ಸಂಯೋಗದಿಂದ ಮಾತ್ರ ಅಗ್ನಿಯನ್ನು ಪ್ರಜ್ವಲಿತಗೊಳಿಸುತ್ತದೆ. ಅದರಂತೆ ಯೋಗಿಯೂ ಕೂಡ ತನ್ನಲ್ಲಿರುವ ಸಿದ್ಧಿಶಕ್ತಿಯನ್ನು ವಿಜಾತೀಯತವಾದ ದುಷ್ಕಾರ್ಯ, ಪರೋಪದ್ರವ, ಪರಪ್ರತಾರಣ, ಲೋಕವಂಚನ, ಜನಪೀಡೆ, ಸ್ವಾರ್ಥಸಾಧನೆ ಮುಂತಾದ ದುರುದ್ದೇಶಗಳಿಗಾಗಿ ಎಂದೂ ವ್ಯಕ್ತಗೊಳಿಸಬಾರದು. ಅರ್ಥಾತ್ ಸಿದ್ಧಿ ಇದ್ದರೂ ಅದನ್ನು ಮನಬಂದಂತೆ ಬಳಸಬಾರದು. ಆದರೆ ಶಿವನಿಗೆ ಪ್ರೀತಿಕಾರಕವಾದ ಲೋಕಕ್ಷೇಮ, ಸಜ್ಜನಸುಖ, ಧರ್ಮಾಭಿವೃದ್ಧಿ ಮುಂತಾದ ಸಜಾತೀಯ ಕಾರ್ಯಗಳಿಗೆ ಮಾತ್ರ ಅವುಗಳನ್ನು ಉಪಯೋಗಿಸಿಕೊಳ್ಳಬೇಕು.

ಹಕ್ಕಿಗಳು ಕಷ್ಟಪಟ್ಟು ಗೂಡುಗಳನ್ನು ಕಟ್ಟುತ್ತವೆ. ಇರುವೆಗಳು ಹುತ್ತನ್ನು ನಿರ್ಮಿಸುತ್ತವೆ. ಅದಕ್ಕೆ ಏನಾದರೂ ಅಪಾಯ ಒದಗಿದರೆ ಅಥವಾ ಇನ್ನೊಬ್ಬರು ಬಂದು ಆಕ್ರಮಿಸಿದರೆ ಆನಂದದಿಂದ ಅದನ್ನು ಬಿಟ್ಟು ಹೋಗುತ್ತವೆ. ಅದರ ಬಗ್ಗೆ ಎಂದೂ ಚಿಂತಿಸುವದಿಲ್ಲ. ಯೋಚಿಸುವದಿಲ್ಲ. ಅದರಂತೆ ಯೋಗಿಯು ತನ್ನ ಗೇಹ (ಮನೆ) ದೇಹಗಳ ಬಗ್ಗೆ ನಿಶ್ಚಿಂತನಾಗಿ ಇರಬೇಕು. ಯೋಗಿಯು ಹೀಗೆ ಸೂರ್ಯಕಾಂತಮಣಿ, ಪಕ್ಷಿ, (ಗುಬ್ಬಿ) ಇರುವೆ, ಮರ, ಚಿಗರೆ ಮುಂತಾದವುಗಳನ್ನು ತನ್ನ ಗುರುಗಳನ್ನಾಗಿ ಮಾಡಿಕೊಂಡು ಅವುಗಳಿಂದ ಒಂದೊಂದು ಮಾತನ್ನು ಕಲಿಯಬೇಕು. ಯೋಗಿಗೆ ಇರುವೆಯಿಂದಲೂ ಒಂದು ಪಾಠವನ್ನು ಕಲಿಯಲಿಕ್ಕುಂಟು, ಇರುವೆಯು ತನ್ನ ಚಿಕ್ಕ ಮುಖದಿಂದ ಅಲ್ಪಸ್ವಲ್ಪ ಮಣ್ಣನ್ನು ತಂದು ಮೊದಲು ಮಣ್ಣಿನ ಒಂದು ಗುಡ್ಡೆಯನ್ನೇ ಹಾಕುತ್ತದೆ. ಇದರಲ್ಲಿ ಯೋಗಿಗೆ ಒಂದು ಉಪದೇಶ. ಯೋಗಿಯೂ ಮೆಲ್ಲ ಮೆಲ್ಲನೇ ಆದರೂ ಕ್ರಮವಾಗಿ ಬಿಡದೇ ಯೋಗಸಾಧನೆ ಮಾಡುತ್ತ ತನ್ನ ಶಕ್ತಿಯನ್ನು ಸಂಚಯಮಾಡುತ್ತ ಇರಬೇಕು. ಬಹುದಿನಗಳ ಮೇಲೆ ಅವನ ಅಲ್ಪಾಲ್ಪ ಸಾಧನೆಯ ನೈರಂತರ್ಯದಿಂದ ಪ್ರಚಂಡವಾದ ಯೋಗಶಕ್ತಿಯು ಸಂಚಿತವಾಗಿರುತ್ತದೆ.

## ಹಲವು ಗುರುಗಳು, ಕೆಲವು ಪಾಠಗಳು

ಮರದಿಂದಲೂ ಯೋಗಿಗೆ ಒಂದು ಪಾಠ. ತಳಿರು, ಕುಡಿ, ಮಿಡಿ, ಚಿಗುರು, ಹೊಗರು, ಹೂವು, ಕಾಯಿ, ಎಲೆ, ಬಳ್ಳಿ, ಅಂಟು, ಜೇನು, ಮುಂತಾದವುಗಳಿಂದ ಸಮೃದ್ಧವಾಗಿ ಬೆಳೆದುನಿಂತ ಹೆಮ್ಮರವನ್ನು ಕಂಡಕೂಡಲೇ ಜನರು ಮುಕುರಿ ಬಿಡುವರು. ಕೈಗೆ ಬಂದಂತೆ ಅದರ ಹಣ್ಣು, ಹೂವು, ಚಿಗುರು, ತಳಿರು, ಎಲೆ, ಹಣ್ಣುಕಾಯಿ, ಹೂವು, ರೆಂಬೆ-ಟೊಂಗೆ, ಕೊನೆಗೆ ಕಟ್ಟಿಗೆಯನ್ನು ಕೂಡ ಕಿತ್ತುಕೊಂಡು ಫಲ ಪುಷ್ಪಭರಿತವಾದ ಸುಂದರ ವೃಕ್ಷವನ್ನು ಬೋಳುಮರವನ್ನಾಗಿ ಮಾಡಿ ಸಂಪೂರ್ಣ ಹಾಳು ಮಾಡಿಬಿಡುವರು.

ಅದರಂತೆ ಯೋಗಿ ಪುರುಷರು ತಮ್ಮಲ್ಲಿಯ ಸಿದ್ಧಿಯನ್ನು ಬಗೆಬಗೆಯ ಚಮತ್ಕಾರ, ಪ್ರಭಾವ, ಪವಾಡಗಳಿಂದ ತೋರಿಸುತ್ತ ಹೋದರೆ ಜನರು ಅವರನ್ನು ಬೆನ್ನು ಹತ್ತಿ ಗೌರವ

ಮಾಡಿ, ಕಾಣಿಕೆ ಸಲ್ಲಿಸಿ, ಸ್ತೋತ್ರ ಮಾಡಿ, ಉಬ್ಬಿಸಿ, ಕೊಬ್ಬಿಸಿ, ಹಣ ಕೊಟ್ಟು ಸ್ತೋತ್ರದ ಬಂಗಾರದ ಬೇಡಿ ತೊಡಿಸಿ, ತಮ್ಮ ಕಾರ್ಯಸಾಧನೆಗಾಗಿ ಅವರನ್ನು ಜಗ್ಗಿ ಕೊನೆಗೆ ಆ ಮನುಷ್ಯನನ್ನು ಯೋಗಭ್ರಷ್ಟನನ್ನಾಗಿ ಮಾಡಿ ಬಿಡುವರು. ಆದ್ದರಿಂದ ಮನುಷ್ಯನು ತನ್ನ ಯೋಗಸಿದ್ಧಿಗಳನ್ನು ಜನರಿಗೆ ತೋರಿಸದಂತೆ ಮೂಢಗೂಢನಾಗಿಯೇ ಇದ್ದು ತನ್ನ ಅಧ್ಯಾತ್ಮ ಸಾಧನೆಯನ್ನು ಮಾಡಿಕೊಳ್ಳಬೇಕು.

## ಚಿಗರೆಯಿಂದ ಒಂದು ಪಾಠ

ಚಿಗರೆಗಳಿಂದ ಯೋಗಿಯು ಕಲಿತುಕೊಳ್ಳಬೇಕಾದದ್ದು ಇದೆ. ಚಿಗರೆಯ ಓಟ ಬಹಳ ವೇಗದ್ದು. ಅದರ ನೋಟ ಅತೀ ಚಂಚಲ. ಅದು ಓಡತೊಡಗಿದರೆ ಯಾವ ಬೇಡನ ಗುರಿಯೂ ತಾಕಲಾರದು. ಅದಕ್ಕಾಗಿ ಬೇಡನು ಸಂಗೀತ ಅಥವಾ ತಂತುವಾದ್ಯವನ್ನು ನುಡಿಸುವನು. ಗಾನಲೋಲವಾಗಿ ಚಿಗರೆ, ಸಂಗೀತದ ಪರಶತೆಯಲ್ಲಿ ಸ್ತಬ್ಧವಾಗಿ ನಿಂತುಕೊಂಡಾಗ ಬೇಡ ಅದನ್ನು ಹೊಡೆಯುವನು ಹಿಡಿಯುವನು.

ಅದರಂತೆ ಯೋಗಿಯು ವಿಷಯ ಸಂಗೀತದಲ್ಲಿ ನಾದಮುಗ್ಧನಾದರೆ ಕಾಮಕ್ರೋಧಾದಿ ಬೇಡರು ಅಟ್ಟಿಸಿಕೊಂಡು ಬಂದು ಅವನನ್ನು ಹೊಡೆದುಬಿಡುವರು. ಆದ್ದರಿಂದ ನಿಜವಾದ ಯೋಗಿಯು ವಿಷಯವೆಂಬ ಬೇಡನ ಬಲೆಯಿಂದ ದೂರವೇ ಓಡಿಸಬೇಕು ತನ್ನ ಚಿತ್ತದ ಚಿಗರೆಯನ್ನು

ಚಿಗರೆಯ ಕೋಡಿನಿಂದಲೂ ಯೋಗಿಗಳು ಪಾಠ ಕಲಿಯಲಿಕ್ಕುಂಟು. ಚಿಗರೆ ಚಿಕ್ಕದಿದ್ದಾಗ ಕೋಡು ಮೂಡಿರುವದಿಲ್ಲ. ಅದು ಸ್ವಚ್ಛಂದವಾಗಿ ಬೇಕಾದಲ್ಲಿ ತಿರುಗಾಡುವದು. ಅದಕ್ಕೆ ತಲೆಯಲ್ಲಿ ಶೃಂಗ ಮೂಡಿದಾಗ ತನ್ನ ದೇಹವೆಲ್ಲವೂ ಶೃಂಗಾರಿತವಾದಂತೆ ಹೆಮ್ಮೆ ಮೂಡುವದು. ಅದೇ ಕೋಡು ಉದ್ದವಾದಾಗ ತನಗೊಂದು ಆಯುಧ ಸಿಕ್ಕಿತೆಂದು ಅದು ಹಿಗ್ಗುವದು. ಆದರೆ ಅದೇ ಕೋಡೇ ಯಾವುದಾದರೂ ಕಾಡುಕಂಟೆಗಳಲ್ಲಿ ಸಿಲುಕಿಕೊಂಡಾಗ ಅಥವಾ ಕೋಡಿನ ಆಶೆಯಿಂದ ಜನ ಬೆನ್ನಟ್ಟಿ ಬಂದಾಗ ಆ ಕೋಡೇ ಅದಕ್ಕೆ ಮೃತ್ಯುವಾಗುವದು. ಅದರಂತೆ ಯೋಗಿಯು ತನಗೆ ದೊರೆತ ಅಲ್ಪಾಲ್ಪ ಸಿದ್ಧಿಯಿಂದ ಹರ್ಷಗೊಂಡು ಬೀಗಿ ನಿಂತರೆ ಮುಂದೆ ಅದೇ ಅಹಂಕಾರ ರೂಪದಲ್ಲಿ ಪರಿಣತವಾಗಿ ಅವನನ್ನು ಯೋಗ ಭ್ರಷ್ಟನನ್ನಾಗಿ ಮಾಡುವದು. ಆದ್ದರಿಂದ ಯೋಗಿಯು ತನ್ನ ಅಲ್ಪಶಕ್ತಿಯಿಂದ ತೃಪ್ತನೂ, ದೃಪ್ತನೂ ಎಂದೂ ಆಗಬಾರದು.

## ಸಿದ್ಧಿಯ ಶಿಖರ ಏರುವಾಗ ಬೇಕಾದ ಬುತ್ತಿ

ಎತ್ತರವಾದ ಪರ್ವತದ ಶಿಖರವನ್ನು ಏರುವ ಮನುಷ್ಯರು ನೀರು, ಆಹಾರ, ಹವೆ, ಪದಾರ್ಥವನ್ನು ತೆಗೆದುಕೊಂಡು ಹೋಗುವರು. ನಿರ್ಜನವಾದ ಆ ಅತ್ಯುಚ್ಚ ಪ್ರದೇಶಗಳಲ್ಲಿ ಉಪವಾಸ ಬೀಳುವ ಉಸಿರುಗಟ್ಟುವ ಪ್ರಸಂಗ ಬಂದಾಗ ಅವುಗಳ ಉಪಯೋಗವಾಗುವದು. ಇದರಂತೆ ಯೋಗಮಾರ್ಗದ ಶಿಖರವನ್ನು ಏರುವ ಪ್ರಯತ್ನದಲ್ಲಿದ್ದ ಮಾನವನು ತನ್ನ ಜೊತೆ ಶಿವಭಕ್ತಿ ಎಂಬ ನೀರನ್ನು, ಶಿವಧ್ಯಾನವೆಂಬ ಬುತ್ತಿಯನ್ನೂ, ಶಿವಚಿಂತನ ಎಂಬ ಹವೆಯನ್ನೂ ತೆಗೆದುಕೊಂಡು ಹೋಗಿರಬೇಕು. ಅಂದರೆ ಸಿದ್ಧಿಯ ಶಿಖರವನ್ನು ಮುಟ್ಟುವವರೆಗೂ ಉಸಿರುಗಟ್ಟುವದಿಲ್ಲ, ಕ್ಲೇಶ ಕಸಿವಿಸಿಯಾಗುವದಿಲ್ಲ, ತೂಕ ತಪ್ಪಿ ಎಂದೂ ಕೆಳಗೆ ಬೀಳುವುದಿಲ್ಲ.

ಯೋಗಿಗೆ ತಾನು ಇದ್ದದ್ದೇ ಮನೆ, ದೊರಕಿದ್ದೇ ಭೋಜನ, ಶಿವಮಹಾತ್ಮೆಯ ಅರಿವೇ ಜ್ಞಾನ, ಇದರ ಹೊರತು ಬಗೆಬಗೆಯ ಎಲ್ಲ ತರಹದ ಜ್ಞಾನ-ವಿಜ್ಞಾನಗಳನ್ನು ಸಂಗ್ರಹಿಸುವ ಹವ್ಯಾಸಕ್ಕೆ ಯೋಗಿಯು ಹೋಗಬಾರದು. ಅಧ್ಯಾತ್ಮ ವ್ಯತಿರಿಕ್ತವಾದ ಲೌಕಿಕ ಜ್ಞಾನದ ಅಧಿಕ ಸಂಗ್ರಹವು ಯೋಗಸಾಧನದಲ್ಲಿ ದೊಡ್ಡ ವಿಘ್ನವಾಗಿ ಪರಿಣಮಿಸುವದು. ಇದನ್ನು ತಿಳಿಯಬೇಕು. ಅದನ್ನು ಅರಿಯಬೇಕು. ಮತ್ತೊಂದನ್ನು ತಿಳಿದುಕೊಳ್ಳಬೇಕು. ಹೀಗೆ ಜ್ಞಾನಲಲಾಸೆಯಿಂದ ಬೇರೆ ಬೇರೆ ವಿಷಯಗಳ ತಿಳುವಳಿಕೆಯನ್ನು ಮಾಡಿಕೊಳ್ಳುತ್ತ ಹೊರಟ ಮನುಷ್ಯನಿಗೆ ಸಾವಿರ ವರ್ಷ ಅಲೆದಾಡಿದರೂ ಜ್ಞೇಯ ವಸ್ತುವಿನ ಯಥಾರ್ಥ ಜ್ಞಾನ ಆಗುವದಿಲ್ಲ. ಆದ್ದರಿಂದ ಭಗವಂತನ ಮಹಾಮಹಿಮೆಯ ಜ್ಞಾನ ಒಂದನ್ನು ಮಾತ್ರ ಮಾಡಿಕೊಂಡು ತನ್ನ ಯೋಗಸಾಧನೆಯಲ್ಲಿ ನಿಜವಾದ ಸಾಧಕನು ತೊಡಗಬೇಕು. ಇತರೇತರ ವಿವಿಧ ಜ್ಞಾನ ವಿಸ್ತಾರದ ಆಶೆಯಿಂದ ಅದರ ಸಂಗ್ರಹದಲ್ಲಿಯೇ ತನ್ನ ಅಮೂಲ್ಯವಾದ ಆಯುಷ್ಯವನ್ನು ವ್ಯರ್ಥವಾಗಿ ವ್ಯಯಿಸಬಾರದು.

ವಿಷಯದಲ್ಲಿ ಆಸಕ್ತಿಯನ್ನು ಬಿಡಬೇಕು. ಕಾಮ ಕ್ರೋಧಗಳನ್ನು ಗೆಲ್ಲಬೇಕು. ಸಾತ್ವಿಕ ಆಹಾರವನ್ನು ಪರಿಮಿತವಾಗಿ ಸೇವಿಸಬೇಕು. ಇಂದ್ರಿಯಗಳನ್ನು ಗೆಲ್ಲಬೇಕು. ತನ್ನ ಬುದ್ಧಿಯಿಂದ ಇಂದ್ರಿಯಗಳ ಬಾಗಿಲುಗಳನ್ನೆಲ್ಲ ಬಂದುಮಾಡಿ ಮನಸ್ಸನ್ನು ಶಿವಧ್ಯಾನದಲ್ಲಿಯೇ ತಲ್ಲೀನವಾಗಿ ತತ್ಪರವಾಗಿ ಮಾಡಬೇಕು. ಆಹಾರವು ಸಾತ್ವಿಕವಾಗಿರಬೇಕು. ನಿಷಿದ್ಧ ಆಹಾರವನ್ನು ಸೇವಿಸಕೂಡದು. ನಾಲಿಗೆಯ ರುಚಿಯಿಂದ ಮನಸ್ಸಿನ ಸಮತೋಲವನ್ನು ತಪ್ಪಿಸುವ ಆಹಾರವನ್ನು ವರ್ಜಿಸಬೇಕು. ದುಷ್ಟ ಆಹಾರದಿಂದ ಮನಸ್ಸು ಕೂಡ ವಿಕೃತವಾಗುವುದು. ಚಿತ್ತಸ್ವಾಸ್ಥ್ಯವನ್ನು ಕೆಡಿಸುವ ನಿಷಿದ್ಧ ಆಹಾರವನ್ನು ಸೇವಿಸುವದರಿಂದ ಮಾನವನು ರೌರವ ನರಕವನ್ನು ಹೊಂದುತ್ತಾನೆ.

## ತ್ರಿದಂಡಿ ಸನ್ಯಾಸ

ಸನ್ಯಾಸ ಧರ್ಮವನ್ನು ಪಾಲಿಸುವವರು ತ್ರಿದಂಡಿ ಆಗಬೇಕು. ಮಾತು, ಮನಸ್ಸು, ಕರ್ಮ-ಇವು ಮೂರು ದಂಡ ಎನಿಸುತ್ತವೆ. ಈ ವಾಗ್‌ದಂಡ ಮತ್ತು ಮನೋದಂಡ, ಕರ್ಮದಂಡ ಎಂಬ ಈ ಮೂರು ದಂಡಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡು ಜಿತೇಂದ್ರಿಯನಾದ ಯತಿಗೆ ತ್ರಿದಂಡಿ ಸನ್ಯಾಸಿ ಎನ್ನುತ್ತಾರೆ.

## ಯೋಗಿಯ ಲಕ್ಷಣ

ಯೋಗಿಯ ಲಕ್ಷಣಗಳನ್ನು ಹೇಳುತ್ತೇನೆ ಕೇಳು. ಯೋಗಿಯನ್ನು ಕಣ್ಣೆದುರು ಕಂಡಕೂಡಲೇ ಭಕ್ತಿಯಿಂದ ತಲೆಬಾಗಿಸಬೇಕು ಎಂಬ ಬುದ್ಧಿಯು ಜನಸಾಮಾನ್ಯರಲ್ಲಿ ಹುಟ್ಟಬೇಕು. ಆ ಯಾರಿಗೂ ಇವರನ್ನು ಕಂಡು ಭಯಾಪಾಯ ಶಂಕೆ, ಬರಬಾರದು. ಎಲ್ಲ ಜನರ ಆದರ ಅನುರಾಗಗಳಿಗೆ ಪಾತ್ರನಾಗಿರಬೇಕು. ಇದು ಯೋಗಸಿದ್ಧಿಯ ಲಕ್ಷಣ ಎಂದು ಹೇಳಲಾಗಿದೆ. ಯೋಗಮಾರ್ಗದಲ್ಲಿ ಸಾಧನೆ ಮಾಡುವವರ ಚಿತ್ತದಲ್ಲಿ ಚಾಪಲ್ಯ, ಮನಸ್ಸಿನಲ್ಲಿ ಲೌಲ್ಯ, ದೇಹದಲ್ಲಿ ರೋಗಿಷ್ಠತೆ, ಮಾತಿನಲ್ಲಿ ನಿಷ್ಠುರತೆ ಸರ್ವಾತ್ಮನಾ ಇರಕೂಡದು. ಚಿತ್ತದಲ್ಲಿ ಪ್ರಸನ್ನತೆಯು ಇರಬೇಕು. ಮಾತು ಮೃದು, ದೇಹದಲ್ಲಿ ಕಾಂತಿ, ಪ್ರಕೃತಿಯಲ್ಲಿ ಆರೋಗ್ಯ ಇವು ಯೋಗಸಿದ್ಧಿಯ ಮೊದಲಿನ ಚಿಹ್ನೆಗಳು. ಯೋಗಮಾರ್ಗದಲ್ಲಿ ಮಾನವನು ಮುಂದುವರೆದಂತೆ, ಮಲಮೂತ್ರಗಳ ಉಪದ್ರವವು

ಕಡಿಮೆಯಾಗುತ್ತ ಹೋಗುವದು ಹಾಗೂ ಯೋಗಿಯ ದೇಹದಿಂದ ಒಂದು ವಿಧವಾದ ದಿವ್ಯಸುಗಂಧವು ಸೂಸತೊಡಗುವುದು. ಏಕಾಗ್ರಚಿತ್ತದಿಂದ ಪರಬ್ರಹ್ಮನ ಸಂತತ ಚಿಂತನದಲ್ಲಿಯೇ ಸದಾಸರ್ವದಾ ತಲ್ಲೀನನಾದ ಯೋಗಿಯ ಕೈಯಿಂದ ಅಥವಾ ಬಾಯಿಂದ ಅಥವಾ ಮನಸ್ಸಿನಿಂದ ಯಾವದೇ ತಪ್ಪು, ತಡೆ ಆಗುವದಿಲ್ಲ. ಯೋಗಿಯ ನಡೆನುಡಿ ಯಾವಾಗಲೂ ಪ್ರಮಾದಶೂನ್ಯ, ಅಷ್ಟೇ ಪರಮಪವಿತ್ರ, ಆದರ್ಶ, ಇತರರಿಗೆ ಅನುಕರಣೀಯ. ಇಂಥ ಯೋಗಾರೂಢರು ಗಾಂಪರ ಗುಂಪಿನಲ್ಲಿ ಎಂದೂ ಬರಲಾರರು.

ಪ್ರಸಿದ್ಧಿಯ ಪಿಶಾಚಿಯು ಎಂದೂ ಅವರ ಸಮೀಪದಲ್ಲಿ ಸುಳಿಯದು. ಪ್ರತಿಷ್ಠೆಯ ಶನಿಯು ಯಾವ ಕಾಲದಲ್ಲಿಯೂ ಅವರ ಬೆನ್ನ ಹಿಂದೆ ಬೀಳದು. ಪಂಚಕರ್ಮೇಂದ್ರಿಯಗಳು ಅವರ ಸ್ವಾಧೀನ. ಪಂಚ ಜ್ಞಾನೇಂದ್ರಿಯಗಳು ಅವರ ದಾಸಾನುದಾಸ. ಮನಸ್ಸು ಕೂಡ ಸಂಪೂರ್ಣವಾಗಿ ಕಿಂಕರನಂತೆ ಅವರ ಅಂಕಿತದಲ್ಲಿ. ಈ ಎಲ್ಲ ಜ್ಞಾನೇಂದ್ರಿಯ ಕರ್ಮೇಂದ್ರಿಯ ಹಾಗೂ ಮನಸ್ಸು ಇವುಗಳನ್ನೆಲ್ಲ ತಮ್ಮ ಬುದ್ಧಿಯಿಂದ ನಿಯಂತ್ರಿಸಿ, ಆ ಬುದ್ಧಿಯನ್ನು ಕೂಡ ಭಗವದ್ಯೆಕತಾನಲೀನವಾಗಿ ಮಾಡುವದರಿಂದ ಆ ಯೋಗಿಯು ಭಗವನ್‌ಮಯ ಎಂದು ಕರೆಯಲ್ಪಡುತ್ತಾನೆ. ಇಂಥ ಬ್ರಹ್ಮೈಕನಿಷ್ಠನಾದ ಯೋಗಿಗೆ ಬ್ರಹ್ಮಿಷ್ಠ ಎಂತಲೂ ಕರೆಯುತ್ತಾರೆ.

ಹೀಗೆ ಯೋಗಮಾರ್ಗದಲ್ಲಿ ಮನಸ್ಸಿನ ನಿಗ್ರಹ, ಭಗವಂತನ ಅನುಗ್ರಹ ಎರಡನ್ನೂ ಪಡೆದ ಯೋಗಿಯು ತನ್ನ ಯೋಗಪ್ರಭಾವದಿಂದ ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗಗಳ ಸಮನ್ವಯವನ್ನು ಸಾಧಿಸಿ, ಸತತ ಧ್ಯಾನ ಯೋಗದಿಂದ ನಿರಂತರ ಭಗವದುಪಾಸನೆಯನ್ನು ಮಾಡಿಕೊಂಡ ಬಳಿಕ, ವಿಲಕ್ಷಣವಾದ ಈ ಯೋಗಸಿದ್ಧಿಯ ಪ್ರಭಾವದಿಂದ ಕೊನೆಗೆ ಮೋಕ್ಷವನ್ನು ಹೊಂದುತ್ತಾನೆ.

**ಕುಲಂ ಪವಿತ್ರಂ ಜನನೀ ಕೃತಾರ್ಥಾ ।**
**ವಸುಂಧರಾ ಭಾಗ್ಯವತೀ ಚ ತೇನ ।**
**ವಿಮುಕ್ತಿಮಾರ್ಗೇ ಸುಖಸಿಂಧುಮಗ್ನಂ ।**
**ಲಗ್ನಂ ಪರೇ ಬ್ರಹ್ಮಣಿ ಯಸ್ಯ ಚೇತಃ ॥**

ಮೋಕ್ಷ ಮಾರ್ಗದಲ್ಲಿ ಮುಂದುವರೆದ ಇಂಥ ಯೋಗಿಯ ಮನಸ್ಸ ಯಾವಾಗಲೂ ಪರಬ್ರಹ್ಮನಲ್ಲಿ ನೆಟ್ಟುಬಿಟ್ಟಿರುವದು. ಆ ಪರಮಾತ್ಮನ ಧ್ಯಾನದಲ್ಲಿಯೇ ಆ ಯೋಗಿಗೆ ಪರಮಾನಂದ. ಅದೇ ಬ್ರಹ್ಮಾನಂದ. ಅದರ ಮುಂದೆ ಲೌಕಿಕವಾದ ವಿಷಯಗಳಿಂದ ಉಂಟಾಗುವ ಈ ಕ್ಷುದ್ರ ಆನಂದಗಳೆಲ್ಲವೂ ತುಚ್ಛ. ಆ ಬ್ರಹ್ಮಾನಂದದ ರುಚಿಕಂಡವನು ಎಂದೂ ಈ ಕ್ಷುಲಕವಾದ ವೈಷಯಿಕ ಆನಂದಗಳಿಗೆ ಮನಸ್ಸನ್ನು ಮಾಡಲಾರನು. ಪರಬ್ರಹ್ಮನ ಈ ವಿಧವಾದ ಜ್ಞಾನಾನಂದ, ಧ್ಯಾನಾನಂದ, ಭಜನಾನಂದ ರೂಪವಾದ ಪರಮಾನಂದವನ್ನು ಪಡೆದ ಯೋಗಿಯೇ ಧನ್ಯ. ಅಂಥ ಮಹನೀಯನು ಜನಿಸಿದ ಕುಲವು ಪವಿತ್ರ. ಅಂಥ ಪುಣ್ಯಪುರುಷನನ್ನು ಹಡೆದ ತಾಯಿ ಧನ್ಯೆ. ಅಂಥ ಮಹಾಯೋಗಿಗೆ ಜನ್ಮವಿತ್ತ ಆ ಮಹಾಮಾತೆಯು ನಿಜವಾಗಿಯೂ ಜಗದ್‌ವಂದ್ಯಳು. ಇಂಥ ಮಹಾತ್ಮನು ಅವತರಿಸಿದ ಭೂಮಿಯೇ ಭಾಗ್ಯವತಿ. ಇಂಥ ಸತ್ಪುರುಷರಿಂದ ಭೂದೇವಿಯ ರತ್ನಗರ್ಭಾ, ವಸುಂಧರಾ, ವಸುಮತೀ, ವಸುಧಾ ಮುಂತಾದ ಹೆಸರುಗಳು ಸಾರ್ಥಕ.

## ಜಗ, ಜೀವ, ದೇವರ ತ್ರಿಪುಟೀ

ಇಂಥ ಯೋಗೀಶ್ವರರ ಬುದ್ಧಿ ಅತ್ಯಂತ ಶುದ್ಧ. ಮಣ್ಣು ಹೊನ್ನುಗಳಲ್ಲಿ ಅಂತರದ ಅರಿವು ಅವರಿಗೆ ಇರಲಾರದು. ಎಲ್ಲ ಪ್ರಾಣಿಗಳಲ್ಲಿಯೂ ಪರಬ್ರಹ್ಮನ ಸನ್ನಿಧಾನ ಇರುವುದೆಂದು ತಿಳಿದು ಮತ್ತು ಪ್ರಪಂಚದ ಅಣುರೇಣು, ತೃಣಕಾಷ್ಠ ಎಲ್ಲ ಕಡೆಗೂ ಪರಮಾತ್ಮನೇ ತುಂಬಿರುವನೆಂದು ಅರಿತು, ಅವನು ಭಗವಂತನ ವ್ಯಾಪ್ತೋಪಾಸಕನಾಗಿ ಬಿಡುವನು. ಕಂಡಲ್ಲೆಲ್ಲ ಕೈಮುಗಿವ, ನಿಂತಲ್ಲೆಲ್ಲ ನಮಸ್ಕರಿಸುವ. ಪ್ರಪಂಚವೆಲ್ಲವೂ ಬ್ರಹ್ಮಮಯ ಈ ಯೋಗಿಯ ಪಾಲಿಗೆ. ವಿಶ್ವವೆಲ್ಲವೂ ಆ ಭಗವಂತನ ವಿರಾಟ್‌ರೂಪ. ಯೋಗಮಾರ್ಗದ ಕೊನೆಯನ್ನು ಏರಿನಿಂತ ಯೋಗೀಶ್ವರನಿಗೆ ವಿಶ್ವವೆಲ್ಲವೂ ಬ್ರಹ್ಮಮಯ. ಬ್ರಹ್ಮವೂ ವಿಶ್ವಮಯ. ಆದರ ಸಂತತ ಚಿಂತನೆಯಿಂದ ಸ್ವಯಂ ತಾನೂ ಬ್ರಹ್ಮಮಯ. ಹೀಗೆ ವಿಶ್ವ, ಬ್ರಹ್ಮ ಹಾಗೂ ಸಾಧಕ ಜೀವಗಳ ಬ್ರಹ್ಮಾತ್ಮಕ ತ್ರಿಪುಟೀಕರಣವೇ ಮೋಕ್ಷರೂಪವಾದ ಯೋಗಸಿದ್ಧಿಯ ಪರಮಫಲ, ಚರಮಗಿರಿ. ಇಂಥ ಪರಮಪದವನ್ನು ಹೊಂದಿದ ಮಾನವನು ಈ ಸಂಸಾರಕ್ಕೆ ಎಂದಿಗೂ ಮರಳಿ ಬರಲಾರ.

"ಅರ್ಜುನ! ನಾನು ನಿನಗೆ ಈ ಎಲ್ಲ ಯೋಗದ ರಹಸ್ಯವನ್ನು ತಿಳಿಸಿ ಹೇಳಿದ್ದೇನೆ. ಹೀಗೆ ಶ್ರಮಿಕವಾದ ಯೋಗಸಾಧನೆಯ ಮಾರ್ಗದಲ್ಲಿ ಯಶಸ್ವಿಯಾಗಿ ಮುನ್ನಡೆದು, ಯೋಗಾರೂಢನಾಗಿ, ಯೋಗಸಿದ್ಧಿಯನ್ನು ಪಡೆದ ಗೌತಮ ಮಹರ್ಷಿಯೇ 'ಯೋಗೀಶ್ವರ' ಎಂದು ಹೆಸರುವಾಸಿಯಾಗಿದ್ದ. ಆ ಗೌತಮ ಮಹಾಮುನಿಯು ಇಲ್ಲಿ ಇರುವ ಈ ಗೌತಮೇಶ್ವರ ಲಿಂಗವನ್ನು ಪ್ರತಿಷ್ಠೆ ಮಾಡಿದವ. ಅಂಥ ಮಹಾಪುರುಷನಿಂದ ಪ್ರತಿಷ್ಠಿತವಾದ ಮಹಾದೇವನ ದಿವ್ಯಲಿಂಗದ ದರ್ಶನ ಮಾತ್ರದಿಂದಲೇ ಮಾನವನ ಪಾಪಗಳೆಲ್ಲವೂ ಪರಿಹೃತವಾಗುವವು. ಕಲಿಕಾಲುಷ್ಯವೆಲ್ಲವೂ ಕಳೆದು ಹೋಗುವದು.

ಅಶ್ವೀನ ಮಾಸದ ಕೃಷ್ಣಪಕ್ಷ ಚತುರ್ದಶಿಯ ದಿನ ರಾತ್ರಿಕಾಲದಲ್ಲಿ ಧೂಪ, ದೀಪ, ನೈವೇದ್ಯ ಸಮರ್ಪಣ, ಪುಷ್ಪಾರ್ಚನ, ಮಂಗಳಾರತಿ ಮುಂತಾದ ವಿಧಾನಗಳಿಂದ ಈ ಪರಮೇಶ್ವರನ ಪೂಜೆಗೈಯುವವರು ಪಾಪರಹಿತರಾಗಿ ಗೌತಮ ಮುನಿಯಂತೆ ಯಾವಾಗಲೂ ಶಿವಪೂಜಾಸಕ್ತರಾಗಿ ಶಿವಲೋಕಕ್ಕೆ ಹೋಗುವರು. ಕುಂತೀಪುತ್ರನಾದ ಅರ್ಜುನ! ನಾನು ಈ ವರೆಗೆ ನಿನಗೆ ಈ ಗುಪ್ತಕ್ಷೇತ್ರದ ಮಹಾಮಹಿಮೆಯನ್ನು ಸಂಕ್ಷಿಪ್ತವಾಗಿ ಹೇಳಿದ್ದೇನೆ. ಇದರ ಶ್ರವಣದಿಂದ ಚಿತ್ತಶುದ್ಧಿ; ಮನನದಿಂದ ಇಷ್ಟಸಿದ್ಧಿ, ಇದರಂತೆ ಅನುಷ್ಠಾನದಿಂದ ಸರ್ವಸುಖ ಸಮೃದ್ಧಿ ಕೊನೆಗೆ ಆತ್ಮಸಿದ್ಧಿ.

## ಮಹೀಸಾಗರ ಸಂಗಮ ತೀರ್ಥದ ಕಥನ

**ಅರ್ಜುನ:-** ಪೂಜ್ಯರಾದ ನಾರದರೇ! ಈ ಮಹೀಸಾಗರ ಸಂಗಮ ತೀರ್ಥಕ್ಕೆ ಗುಪ್ತಕ್ಷೇತ್ರ ಎಂದು ಕರೆಯುವರು. ಈ ತೀರ್ಥಕ್ಕೆ ಈ ಹೆಸರು ಬರಲು ಕಾರಣವೇನು? ಈ ತೀರ್ಥದ ಮಹಿಮೆಯನ್ನು ಪರಿಪರಿಯಿಂದ ತಾವು ಬಿತ್ತರಿಸಿದಿರಿ. ಹಿಂದಿನ ಪುರಾಣ, ಗೀತೆ, ಗಾಥೆಗಳಲ್ಲಿಯೂ ಕಂಡು ಬರುತ್ತಿದೆ. ಇದರ ಮಹಿಮೆಯ ಬಣ್ಣನೆ. ಎಂದಿನಿಂದಲೂ, ಎಲ್ಲೆಡೆಗೂ ಇದರ ಪ್ರಚಾರ, ಪ್ರಸಿದ್ಧಿ ವಿಪುಲ. ಅಂದ ಬಳಿಕ ಇದು ಹೇಗೆ ಗುಪ್ತಕ್ಷೇತ್ರ?

**ನಾರದ:-** ಅರ್ಜುನ! ಈ ಮಹೀಸಾಗರ ಸಂಗಮ ಕ್ಷೇತ್ರವು ಗುಪ್ತಕ್ಷೇತ್ರ ಎಂದು ಕರೆಯಲ್ಪಡಲಿಕ್ಕೆ ಹಿನ್ನೆಲೆಯಾಗಿ ಒಂದು ಪ್ರಾಚೀನ ಕಥೆಯಿದೆ. ಅದನ್ನು ಹೇಳುತ್ತೇನೆ ಆಲಿಸು.

## ತೀರ್ಥಗಳ ಸತ್ಯಲೋಕ ಯಾತ್ರೆ

ಹಿಂದೆ ಒಂದಾನೊಂದು ಕಾಲದಲ್ಲಿ ಈ ಕ್ಷೇತ್ರವು ಶಾಪದಿಂದ ಗುಪ್ತವಾಯಿತು. ಇದಕ್ಕೂ ಮೊದಲು ಪ್ರಾಚೀನ ಕಾಲದಲ್ಲಿ ಎಲ್ಲ ತೀರ್ಥಾಭಿಮಾನಿ ದೇವತೆಗಳು ಮಿಲಿತರಾಗಿದ್ದರು ಒಂದು ಕಡೆ. ಬ್ರಹ್ಮದೇವರನ್ನು ಕಂಡು ಕೈಮುಗಿದು ಅವರ ಅನುಗ್ರಹವನ್ನು ಪಡೆಯಬೇಕೆಂದು ಸದ್ಬುದ್ಧಿ ಉದಿಸಿತು ಆ ತೀರ್ಥಾಭಿಮಾನಿಗಳಿಗೆ. ಒಮ್ಮೆಲೇ ಹೊರಟರು ಸತ್ಯಲೋಕಕ್ಕೆ ಆ ತೀರ್ಥದೇವತೆಗಳು. ಬ್ರಹ್ಮದೇವರಿಗೆ ಅಚ್ಚರಿ. ತೀರ್ಥದೇವತೆಗಳೆಲ್ಲರೂ ತಾವಾಗಿ ತಾನಿದ್ದ ತಾಣಕ್ಕೆ ಐತಂದಿದ್ದಾರೆ. ಕೌತುಕದ ಕಿಂಕಾರ ಕುಣಿಯುತ್ತಿತ್ತು ಬ್ರಹ್ಮದೇವರ ಎಂಟೂ ಕಣ್ಣುಗಳಲ್ಲಿ. ಆದರದಿಂದ ಎದ್ದುನಿಂತರು ಆ ಚತುರ್ಮುಖ. ಅವರ ಜೊತೆಗೆ ಬ್ರಹ್ಮಸಭೆಯ ಸರ್ವಸದಸ್ಯರೂ ಉತ್ತಿಷ್ಠೋತ್ತಿಷ್ಠ ಆದರು. ಎದ್ದುನಿಂತ ಪರಮೇಷ್ಠಿಯು ಆ ಎಲ್ಲ ತೀರ್ಥರಾಜರಿಗೆ ಸ್ವಾಗತ ನೀಡಿದರು; ಅಭಿನಂದನೆ ಮಾಡಿದರು. ಉಚ್ಚಾಸನದ ಮೇಲೆ ಕೂಡಿಸಿದರು. ನಲುಮೆಯಿಂದ ನುಡಿದರು.

**ಬ್ರಹ್ಮ:-** "ತೀರ್ಥಶ್ರೇಷ್ಠರೇ, ಈ ಸತ್ಯಲೋಕದ ವರೆಗೆ ಸಾಗಿಬಂದ ನಿಮ್ಮೆಲ್ಲರಿಗೂ ಸುಸ್ವಾಗತ. ನಿಮ್ಮೆಲ್ಲ ಪವಿತ್ರ ತೀರ್ಥಗಳ ಪಾದಕ್ಷೇಪಗಳಿಂದ ಪಾವನವಾಗಿದೆ ಈ ಬ್ರಹ್ಮಲೋಕ. ಇಲ್ಲಿ ನೆರೆದ ದೇವತೆಗಳೆಲ್ಲರೂ ನಿಮ್ಮ ಪವಿತ್ರ ದರ್ಶನದಿಂದ ಪೂತ ಪ್ರೀತರಾಗಿದ್ದಾರೆ. ತೀರ್ಥಗಳ ದರ್ಶನ ಪುಣ್ಯ. ಸ್ಪರ್ಶನ ಪಾವನ. ಅವುಗಳಲ್ಲಿ ಸ್ನಾನ ಪಾಪ ಪರಿಹಾರಕ. ಅವುಗಳ ಜಲಪಾನ ಶುಭಕಾರಕ. ಮಹಾ ಮಹಾ ಪಾಪಗಳಿಂದ ತುಂಬಿತುಳುಕುವ ಪಾಪಿಷ್ಠರೂ ಕೂಡ ತೀರ್ಥಸ್ನಾನದಿಂದ ಪೂತಾವಧೂತರಾಗಿ ಪುಣ್ಯಪುರುಷರು ಎನಿಸುವರು. ತೀರ್ಥಗಳಲ್ಲಿ ಮಿಂದ ದುಷ್ಟನು ಶಿಷ್ಟನಾಗುವನು. ದುರುಳನು ಧರ್ಮಾತ್ಮನಾಗುವನು. ನಿಮ್ಮ ಈ ಶುಭಾಗಮನದಿಂದ ನಮ್ಮೆಲ್ಲರಿಗೂ ಪರಮಸಂತೋಷ."

## ಯಾರಿಗೆ ಅಗ್ರಪೂಜೆ?

ಹೀಗೆ ಹೇಳಿ ಬ್ರಹ್ಮದೇವರು ತಮ್ಮ ಮಾನಸಪುತ್ರನಾದ ಪುಲಸ್ತ್ಯ ಮುನಿಗೆ ಅಪ್ಪಣೆ ನೀಡಿದರು "ವತ್ಸ! ಕೂಡಲೇ ಅರ್ಘ್ಯಪಾದ್ಯಾದಿಗಳನ್ನು ತೆಗೆದುಕೊಂಡು ಬಾ. ನಾನು ಈ ತೀರ್ಥಾಭಿಮಾನಿ ದೇವತೆಗಳನ್ನು ಉಚಿತ ರೀತಿಯಿಂದ ಪೂಜಿಸಬೇಕಾಗಿದೆ. ಅರ್ಘ್ಯಪಾದ್ಯಾದಿಗಳಿಂದ ಪೂಜಿಸಲು ಯೋಗ್ಯರಾದ ಅನೇಕಾನೇಕ ಪೂಜನೀಯ ವ್ಯಕ್ತಿಗಳು ಒಂದೆಡೆ ಸೇರಿದಾಗ, ಯಾರಿಗೆಂದು ಪೂಜೆಮಾಡುವದು ? ಅವರಲ್ಲಿ ಯಾರಾದರೊಬ್ಬರನ್ನು ಪೂಜಿಸಿದರೆ, ಉಳಿದವರ ಮನಸ್ಸಿಗೆ ಖೇದ. ಹಲವಾರು ಜನರಿಗೆ ವಿಷಾದ. ಇಂಥ ಸಂದರ್ಭದಲ್ಲಿ ಎಲ್ಲರನ್ನೂ ಬಿಟ್ಟು ಒಬ್ಬರನ್ನು ಮಾತ್ರ ಸತ್ಕರಿಸಿದರೆ, ಬಹುಜನರ ಮನಸ್ಸಿಗೆ ಬೇಜಾರ. ಯಾರಿಗೂ ಪೂಜೆಯನ್ನೂ ಸಲ್ಲಿಸದಿದ್ದರೆ ಎಲ್ಲರಿಗೂ ಅಸಮಾಧಾನ. ಬಂದವರಿಗೂ ಅವಮಾನ. ಯಜಮಾನನಿಗೆ ಕರ್ತವ್ಯ ಚ್ಯುತಿ. ಅದರಿಂದ ಅಧೋಗತಿ. ಹೇಗೆ ಮಾಡುವುದು? ಈ ವಿಷಯದಲ್ಲಿ ಶಾಸ್ತ್ರ ನಿರ್ಣಯ ಹೀಗಿದೆ. ಅನೇಕ ಜನ ಯೋಗ್ಯರಾದ ಪೂಜನೀಯರು ಏಕಕಾಲದಲ್ಲಿ ಒಟ್ಟಾಗಿ ಬಂದರೆ ಅವರೆಲ್ಲರಲ್ಲಿಯೂ ಖಾರು ಅತ್ಯಂತ ಯೋಗ್ಯತಮರೋ ಪೂಜ್ಯತಮರೋ ಅವರೊಬ್ಬರಿಗೆ ಮಾತ್ರ ವಿಶೇಷ ಪೂಜೆಯನ್ನು ಅರ್ಘ್ಯಪಾದ್ಯಾದಿ ಉಪಚಾರಗಳನ್ನು ಆದರದಿಂದ ಸಲ್ಲಿಸಬೇಕು. ಆ ಗುಂಪಿನಲ್ಲಿ ಗರಿಷ್ಠನಾದ ವಿಶಿಷ್ಟ ವ್ಯಕ್ತಿಒಂದಕ್ಕೆ ಸಂದ ಗೌರವಾದರಗಳು ಆ ಎಲ್ಲ ಮಹನೀಯರಿಗೂ ಸಂದಂತೆಯೇ ಸರಿ. ಈ ಶಾಸ್ತ್ರದ ಆದೇಶದಂತೆ ನಾನು ಈ ತೀರ್ಥಾಭಿಮಾನಿ ದೇವತೆಗಳಲ್ಲಿ ಶಿಷ್ಟ ವಿಶಿಷ್ಟನಾದ ಒಬ್ಬ ತೀರ್ಥಶ್ರೇಷ್ಠನನ್ನು ಪೂಜಿಸುತ್ತೇನೆ. ಅದಕ್ಕಾಗಿ ಶೀಘ್ರವೇ ಸಿದ್ಧಪಡಿಸು ಪೂಜೆಯ ಸಲಕರಣೆಗಳನ್ನು."

ತಂದೆಯ ಮುಖದಿಂದ ಆಜ್ಞೆ ಬಂದುದೇ ತಡ. ಪುಲಸ್ತ್ಯ ಮಹರ್ಷಿಗಳು ಮಿಂಚಿನ ವೇಗದಿಂದ ಎಲ್ಲ ಪೂಜಾ ಸಲಕರಣೆಗಳನ್ನು ಅಣಿಗೊಳಿಸಿದರು. ತಕ್ಷಣವೇ ಸಿದ್ಧವಾಯಿತು ಅರ್ಘ್ಯ-ಪಾದ್ಯ-ಮಧುಪರ್ಕ, ಆಸನ, ಆಚಮನ ಮುಂತಾದ ಪೂಜಾಸಾಮಗ್ರಿ.

ಬ್ರಹ್ಮದೇವರು ಅವುಗಳನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ಅಲ್ಲಿಗೆ ಬಂದು ನಿಂತ ಎಲ್ಲ ತೀರ್ಥವೃಂದ ವೃಂದಾರಕರಿಗೆ ಕೇಳಿದರು. 'ತೀರ್ಥೋತ್ತಮರೇ! ನೀವೆಲ್ಲರೂ ಕೂಡಿ ವಿಚಾರಮಾಡಿ ನನ್ನ ಪ್ರಶ್ನೆಗೆ ಉತ್ತರ ನೀಡಿರಿ. ನಿಮ್ಮ ಎಲ್ಲ ತೀರ್ಥಗಳಲ್ಲಿ ಸರ್ವಶ್ರೇಷ್ಠವಾದ ತೀರ್ಥ ಯಾವುದು? ಅಂಥ ಒಂದು ಮುಖ್ಯತೀರ್ಥದ ಹೆಸರನ್ನು ಹೇಳಿರಿ. ಅದಕ್ಕೆ ನಾನು ಅರ್ಘ್ಯಪಾದ್ಯಾದಿ ಪೂಜೆಗಳನ್ನು ಸಲ್ಲಿಸುತ್ತೇನೆ. ಸರ್ವತೀರ್ಥೋತ್ತಮನ ಒಂದು ಪೂಜೆಯಿಂದ ನಾನು ನಿಮ್ಮೆಲ್ಲ ಕೋಟ್ಯಾಧಿಕ ತೀರ್ಥಗಳ ಪೂಜೆಮಾಡಿದಂತಾಗುವದು. ಅಂಥ ಸರ್ವೋತ್ತಮ ತೀರ್ಥವು ನಿಮ್ಮಲ್ಲಿ ಯಾವುದು?

**ತೀರ್ಥೇಶ್ವರರು:-** ಪ್ರಭು! ಪರಮೇಷ್ಠಿಯೇ! ಶ್ರೇಷ್ಠತ್ವದ ನಿರ್ಣಯವು ನಮ್ಮ ನಮ್ಮಲ್ಲಿ ಆಗುವ ಬಗೆ ಹೇಗೆ? ಇಲ್ಲಿ ನೆರೆದ ಕೋಟಿ ಕೋಟಿ ತೀರ್ಥಗಳಲ್ಲಿ ಯಾವುದು ಶ್ರೇಷ್ಠ. ಯಾವುದು ಕನಿಷ್ಠ ಎಂಬುದನ್ನು ಖಂಡಿತವಾಗಿಯೂ ನಾವು ನಿರ್ಣಯಿಸಲಾರೆವು. ತಮ್ಮಂಥ ಮಹನೀಯರೇ ನಿಷ್ಪಕ್ಷಪಾತ ರೀತಿಯಿಂದ ವಿಚಾರಿಸಿ ಈ ವಿಷಯದಲ್ಲಿ ನಿರ್ಣಯಕೊಡಲು ಸಮರ್ಥರು. ಆದುದರಿಂದ ಸರ್ವಜ್ಞಮೂರ್ತಿಗಳಾದ ತಾವೇ ವಿಚಾರಿ ನಿರ್ಣಯ ನೀಡಿರಿ. ಸರ್ವಶ್ರೇಷ್ಠ ತೀರ್ಥ ಯಾವುದು ಎಂಬ ಪ್ರಪಂಚ ಪಿತಾಮಹನಾದ ಈ ಪರಮೇಷ್ಠಿಯ ನಿರ್ಣಯ ನಮ್ಮೆಲ್ಲರಿಗೂ ಶಿರೋಮಾನ್ಯ. ನಮ್ಮಲ್ಲಿ ಪರಮಶ್ರೇಷ್ಠವಾದ ಒಂದು ವಿಶಿಷ್ಟ ತೀರ್ಥ ದೇವತೆಗೆ ತಾವು ಪೂಜೆ ಸಲ್ಲಿಸಿದರೂ ನಾವೆಲ್ಲರೂ ಧನ್ಯ ಧನ್ಯ.

**ಬ್ರಹ್ಮ:-** ''ತೀರ್ಥ ದೇವತೆಗಳೇ, ನಿಮ್ಮಲ್ಲಿ ಶ್ರೇಷ್ಠರು ಯಾರು ಎಂಬುದನ್ನು ನಾನು ಹೇಗೆ ಬಾಯಿಬಿಟ್ಟು ಹೇಳಲಿ? ನನ್ನ ನಿರ್ಣಯದಿಂದ ಕೆಲವರು ನೊಂದುಕೊಳ್ಳಬಹುದು. ಹಲವರು ಏನಾದರು ಅಂದುಕೊಳ್ಳಬಹುದು. ಸಾಮಾನ್ಯ ಲೋಕದ ದೃಷ್ಟಿಯಿಂದ ನೀವೆಲ್ಲರೂ ಮಹಾಮಹಿಮಾ ಸಂಪನ್ನರೂ ಸ್ವನಾಮ ಧನ್ಯರೂ ಆದುದರಿಂದ ನೀವೆ ನಿಮ್ಮಲ್ಲಿ ತೀರ್ಥೋತ್ತಮರು ಯಾರು ಎಂದು ತಿಳಿಸಿಬಿಡಿರಿ.''

ಶಾರದಾಪತಿಯ ಈ ಮಾತುಗಳನ್ನು ಕೇಳಿ ತೀರ್ಥದೇವತೆಗಳೆಲ್ಲರೂ ಮೂಕಮಂಥರರಾಗಿ ನಿಂತುಕೊಂಡರು. ಯಾರಿಗೂ ಏನೂ ತೋಚಲಿಲ್ಲ. ಎಲ್ಲರೂ ಮೌನಧಾರಿಗಳಾಗಿ ನಿಶ್ಚಯ ನುಡಿಯನ್ನು ನುಡಿಯದೇ ನಿಶ್ಚಲರಾಗಿ ನಿಂತು ಕೊಂಡರು. ಬಹಳ ಹೊತ್ತಿನ ಬಳಿಕ ಮಹೀಸಾಗರ ಸಂಗಮತೀರ್ಥವು ಮುಂದೆ ಬಂದಿತು. ಆ ಹಂಸವಾಹನನನ್ನು ಕುರಿತು ಹದುಳದಿಂದ ನುಡಿಯಿತು.

''ಸರ್ವಕರ್ಮ ಚತುರನಾದ ಚತುರಾನನನೇ! ನನಗೆ ಮೊದಲು ಅರ್ಘ್ಯ ನೀಡಿರಿ. ಪ್ರಥಮಪೂಜೆ ಮಾಡಿರಿ. ಈ ತೀರ್ಥಗಳಲ್ಲಿ ಯಾರು ಶ್ರೇಷ್ಠ ಎಂಬ ಸಂದೇಹ ನಿಮಗೆ ಬೇಡ. ನಾನೇ ಸರ್ವಶ್ರೇಷ್ಠ ತೀರ್ಥ. ಈ ಕೋಟಿತೀರ್ಥಗಳೆಲ್ಲವೂ ನನ್ನ ಯೋಗ್ಯತೆಯ ತೂಕಕ್ಕೆ ಏರಲಾರವು. ಹಿಂದೆ ಇಂದ್ರದ್ಯುಮ್ನ ಮಹಾರಾಜನು ಘೋರ ತಪಸ್ಸನ್ನು ಮಾಡಿದ. ಅತ್ಯುಗ್ರವಾಗಿತ್ತು ಅವನ ತಪಶ್ಚರ್ಯ. ಆ ತಪಸ್ಸಿನ ಕಾವಿನಿಂದ ಕರಗಿಹೋಯಿತು ಸರ್ವತೀರ್ಥಮಯವಾದ ಪೃಥ್ವೀಮಂಡಲ. ಆಗ ತೀಕ್ಷ್ಣ ತಪೋನುಷ್ಠಾನದ ತಾಪದಿಂದ

ಕರಗಿ ದ್ರವಿಸಿ ಸರ್ವತೀರ್ಥಮಯಿಯಾದ ಪೃಥ್ವೀದೇವಿಯು ನೀರಾಗಿ ಮಹೀ ಎಂಬ ಹೆಸರಿನ ನದಿಯಾಗಿ ಹರಿಯಿತು. ಅದರಲ್ಲಿ ಕರಗಿದ ಎಲ್ಲ ತೀರ್ಥಸ್ಥಾನಗಳಿಂದ ಒಡಗೂಡಿದ ಆ ಮಹೀನದಿಯು ನನ್ನಲ್ಲಿ ಬಂದು ಸಾಗರದೊಂದಿಗೆ ಸಂಗಮಿಸಿ, ಮಹೀಸಾಗರ ಸಂಗಮತೀರ್ಥ ಎಂದು ಹೆಸರಾಗಿದೆ. ಸಮುದ್ರದಲ್ಲಿಯೂ ಎಲ್ಲ ತೀರ್ಥಗಳು ಇರುವವು. ಸರ್ವತೀರ್ಥಮಯವಾದ ಆ ಸಾಗರದೊಂದಿಗೆ ನೆಲದಲ್ಲಿ ಹರಿಯುವ ಸಕಲ ತೀರ್ಥಗಳನ್ನು ದ್ರವೀಕರಿಸಿ ಮಹೀನದಿಯ ರೂಪದಿಂದ ಹರಿದುಬಂದ ಸರ್ವತೀರ್ಥಮಯಿಯಾದ ಈ ಪೃಥ್ವೀದೇವಿಯು ಪ್ರವಹಿಸಿ ನನ್ನಲ್ಲಿ ಸಂಗಮಿಸಿದ್ದರಿಂದ ಈ ಮಹೀಸಾಗರ ಸಂಗಮತೀರ್ಥವು ಸರ್ವಶ್ರೇಷ್ಠವೆಂಬುದು ನಿರ್ಣೀತ ವಿಷಯ. ಸರ್ವಸಮ್ಮತವಾದ ಮಾತು. ನನ್ನಲ್ಲಿ ಚತುಸ್ಸಾಗರ ಹಾಗೂ ಸಪ್ತದ್ವೀಪಗಳಲ್ಲಿರು ಜಲತೀರ್ಥ, ಸ್ಥಲತೀರ್ಥಗಳ ಮೇಲನ ಆಗಿರುವದು. ಆದುದರಿಂದ ಸರ್ವತೀರ್ಥ ರಾಜರುಗಳ ಸಂಗಮದ ಹೃದಯಂಗಮವಾದ ರಂಗಸ್ಥಲ ಎನಿಸಿದ ಈ ಮಹೀಸಾಗರ ಸಂಗಮತೀರ್ಥವು ಅತ್ಯುತ್ಕೃಷ್ಟ, ಸರ್ವಶ್ರೇಷ್ಠ. ಈ ವಿಷಯದಲ್ಲಿ ಯಾವ ತೀರ್ಥಗಳಿಗೂ ಸಂದೇಹವಿಲ್ಲ. ಆದುದರಿಂದ ತಾವು ಈಗ ಸರ್ವತೀರ್ಥಮಯನಾದ ನನಗೇ ಅಗ್ರಪೂಜೆಯನ್ನು ಅರ್ಥಾತ್ ಅರ್ಘ್ಯಪೂಜೆಯನ್ನೂ ಮಾಡಬೇಕು.''

ತೀರ್ಥರಾಜನಾದ ಮಹೀಸಾಗರ ಸಂಗಮತೀರ್ಥದ ಈ ಮಾತನ್ನು ಕೇಳಿ ಉಳಿದೆಲ್ಲತೀರ್ಥಗಳೂ ಮೌನ ಮುದ್ರಿತ. ನೋಡಲು ನಿಶ್ಚಲ ನಿದ್ರಿತ. ಈ ವಿಷಯದಲ್ಲಿ ಬ್ರಹ್ಮದೇವರು ಏನು ಹೇಳುವರೋ ಎಂದು ಸಂದೇಹ ಎಲ್ಲರಿಗೂ. ಇದನ್ನು ನೋಡಿ ಬ್ರಹ್ಮದೇವರ ಜ್ಯೇಷ್ಠ ಸುಪುತ್ರ ಧರ್ಮನು ಉಚ್ಚಸ್ವರದಲ್ಲಿ ಮಾತನಾಡಿದ.

## ಧರ್ಮಶಾಪ

''ಇಲ್ಲಿ ನೆರೆದ ತೀರ್ಥೋತ್ತಮರೆ! ಹಾಗೂ ಸುರಸತ್ತಮರೇ! ನೀವೆಲ್ಲರೂ ಈ ಮಹೀಸಾಗರ ಸಂಗಮ ತೀರ್ಥದ ದರ್ಪೋಕ್ತಿಗಳನ್ನು ಕೇಳಿದಿರಿ. ಇದು ಅದರ ಅಹಂಕಾರ. ಆತ್ಮಪ್ರಶಂಸೆಯ ಹೂಂಕಾರ. ಮೋಹಾಂಧನಾಗಿದ್ದಾನೆ ಈ ಮಹೀಸಾಗರ. ಹಂಸ ವಾಹನನಂಥ ದೇವೋತ್ತಮರ ಎದುರು ಆತ್ಮಪ್ರಶಂಸೆಯನ್ನು ಮಾಡಿಕೊಳ್ಳುವದು ಎಂಥ ಮೂರ್ಖತನ? ನಿಜವಾಗಿ ದೊಡ್ಡವರು ತಮ್ಮಲ್ಲಿ ವಿಶಿಷ್ಟವಾದಶಕ್ತಿ, ಅನನ್ಯವಾದ ಮಹಿಮೆ ಒಂದು ವೇಳೆ ಇದ್ದರೂ ತಾವಾಗಿ ತಮ್ಮ ಬಾಯಿಂದ ಹೇಳಲಾರರು. ತುಂಬಿದ ಸಭೆಯಲ್ಲಿ ಉಳಿದವರನ್ನೆಲ್ಲ ಕೀಳಾಗಿ ಕಂಡು, ಎಲ್ಲ ತೀರ್ಥಗಳನ್ನು ಅಧಿಕ್ಷೇಪಿಸಿ ತಾನೇ ಸರ್ವ ಶ್ರೇಷ್ಠನೆಂಬ ಈ ಮಹೀಸಾಗರ ಸಂಗಮತೀರ್ಥದ ಜಂಬದ ಮಾತುಗಳು ಹಾಗೂ ಸ್ವಪ್ರತಿಷ್ಠೆಯ ಆತ್ಮಪ್ರಶಂಸೆಯ ಉದ್ಗಾರಗಳು ನಿಂದನೀಯ ಹಾಗೂ ಖಂಡನೀಯವಾಗಿವೆ. ಈ ಮಹೀಸಾಗರ ಸಂಗಮತೀರ್ಥದಲ್ಲಿ ಅದು ಹೇಳಿಕೊಂಡ ಗುಣಗಳೆಲ್ಲವೂ ಇದ್ದದ್ದೇನೋ ನಿಜ. ಅದರ ಸರ್ವಶ್ರೇಷ್ಠತೆ ಹಾಗೂ ಮಹಾಮಹಿಮೆಯು ಐತಿಹಾಸಿಕ ಸತ್ಯ. ಪೌರಾಣಿಕ ತಥ್ಯ. ಆದರೆ ಆದರಿಂದ ಆ ತೀರ್ಥದ ಮನಸ್ಸಿನಲ್ಲಿ ಅಹಂಕಾರ ಹುಟ್ಟಿದ್ದು ತಪ್ಪು. ಅದರಿಂದ ಗರ್ವಿಷ್ಠವಾಗಿ ಆ ತೀರ್ಥವು ಈ ಬ್ರಹ್ಮಸಭೆಯಲ್ಲಿ ನಾನೇ ಸರ್ವಶ್ರೇಷ್ಠ ಎಂದು ಡಂಗುರ ಹೊಡೆದು ತನ್ನ ಮುಖದಿಂದ ತಾನೇ ಸ್ವಪ್ರತಿಷ್ಠೆಯ ಡೊಳ್ಳು ಬಾರಿಸಿದ್ದು ಮಹಾಪರಾಧ. ಆದುದರಿಂದ ಈ ಕ್ಷೇತ್ರವು ಎಲ್ಲ ಗುಣಗಳಿಂದಲೂ ಒಡಗೂಡಿದ್ದರೂ ಈ ಸಾಹಂಕಾರವಾದ ಆತ್ಮಪ್ರಶಂಸೆಯ ಮಹಾಪರಾಧದಿಂದ ಗುಪ್ತವಾಗಿ ಹೋಗಲಿ.''

ಧರ್ಮದೇವನು ಹೀಗೆ ಗುಡುಗು ಹಾಕಿ ನುಡಿದದ್ದನ್ನು ನೋಡಿ ನಡುಗಿ ಹೋಯಿತು ಆ ಬ್ರಹ್ಮಸಭೆ. ಆಗ ಅಲ್ಲಿಯೇ ಇದ್ದ ನಾನು (ನಾರದ) ಹಾಗೂ ಯೋಗೀಶ್ವರನಾದ ಆ ಸ್ಕಂದದೇವ ನಾವಿಬ್ಬರೂ ಮುಂದೆ ಬಂದೆವು. ಆಗ ಆ ಸ್ಕಂದಸ್ವಾಮಿಯು ಎದ್ದು ನಿಂತು ಆ ದೇವಸಭೆಯಲ್ಲಿ ಹೀಗೆ ನುಡಿದನು.

## ಸ್ಕಂದಸ್ವಾಮಿಯ ಯಥಾರ್ಥ ನಿರ್ಣಯ

**ಸ್ಕಂದ:-** ಧರ್ಮಾತ್ಮನಾದ ಧರ್ಮದೇವನೆ, ಈ ಮಹೀಸಾಗರ ಸಂಗಮತೀರ್ಥಕ್ಕೆ ನೀನು ಶಾಪಕೊಟ್ಟದ್ದು ಧೃಷ್ಟತೆಯ ಸಂಕೇತ. ಸರ್ವಸಮ್ಮತನಾದ ಮಹೀಸಾಗರ ಸಂಗಮ ತೀರ್ಥವನ್ನು ನಿಂದಿಸಿ ನುಡಿದದ್ದಂತೂ ತೀರ ಅನುಚಿತ. ಇಲ್ಲಿ ನೆರೆದ ತೀರ್ಥಗಳೇ ಹೇಳಲಿ. ಎಲ್ಲ ತೀರ್ಥಗಳಲ್ಲಿ ಶ್ರೇಷ್ಠ ತೀರ್ಥ ಯಾವುದು ಎಂಬುದನ್ನು. ಈ ದೇವತೆಗಳಾದರೂ ವಿಚಾರಿಸಿ ಹೇಳಲಿ. ಈ ಮೂರು ಲೋಕಗಳಲ್ಲಿಯೇ ಮಹೀಸಾಗರ ಸಂಗಮ ತೀರ್ಥಕ್ಕೆ ಸಮಾನವಾದ ತೀರ್ಥ ಯಾವುದಿದೆ? ಬ್ರಹ್ಮದೇವರಿಂದ ತೀರ್ಥರಾಜ ಎಂಬ ಅಗ್ರಪೂಜೆಯು ಈ ತೀರ್ಥದ ಹೊರತು ಬೇರೆ ಯಾವ ತೀರ್ಥಕ್ಕೆ ಸಲ್ಲಬೇಕು? ವಾಸ್ತವಿಕವಾಗಿ ವಿಚಾರಿಸಿದರೆ, ಸರ್ವಶ್ರೇಷ್ಠ ತೀರ್ಥವೆಂದರೆ ಈ ಮಹೀಸಾಗರ ಸಂಗಮ ತೀರ್ಥವೇ ಸರಿ. ಈ ತೀರ್ಥವೃಂದದಲ್ಲಿ ಅಗ್ರಪೂಜೆಯ ಮಾನಕ್ಕೆ ಅರ್ಹವಾದ ಒಂದೇ ಒಂದು ತೀರ್ಥವೆಂದರೆ. ಈ ಮಹೀಸಾಗರ ಸಂಗಮತೀರ್ಥ ಮಾತ್ರ. ಈ ತೀರ್ಥವು ತಾನಾಗಿ ಹೇಳಿಕೊಂಡ ಗುಣಗಳೆಲ್ಲವೂ ಅದರಲ್ಲಿ ನಿಜವಾಗಿ ಇರುತ್ತವೆ. ಅದರಲ್ಲಿ ಯಾವುದೂ ಸುಳ್ಳಲ್ಲ. ಇದ್ದ ಗುಣವನ್ನು ಇದ್ದಂತೆ ಹೇಳಿದರೆ ತಪ್ಪೇನು? ಇಲ್ಲದ ಗುಣವನ್ನು ಆರೋಪ ಮಾಡಿಕೊಂಡು ಮಿಥ್ಯಾಪ್ರತಿಷ್ಠೆಯನ್ನು ಮಾಡಿದರೆ ಅವರಿಗೆ ಅಹಂಕಾರಿ. ಆತ್ಮಪ್ರಶಂಸಿ, ಪ್ರತಿಷ್ಠಾಕಾಮುಕ ಎಂದು ಮುಂತಾಗಿ ಹೇಳುವರು. ವಸ್ತುತಸ್ತು ತನ್ನಲ್ಲಿ ಇರುವ ಸದ್ಗುಣಗಳನ್ನು ಇದ್ದುದನ್ನು ಇದ್ದಂತೆ ನಿರೂಪಿಸಿದರೆ ಅವನು ಯಥಾರ್ಥವಾದಿ ಎನಿಸುವನು. ಅವನ ವಸ್ತುಸ್ಥಿತಿ ನಿವೇದನೆಯು ಅಹಂಕಾರದ ಉದ್ಗಾರ ಎನಿಸುವದಿಲ್ಲ. ಮಿಥ್ಯಾಭಾಷಣವು ಮಹಾಪರಾಧ. ಸತ್ಯವಚನವು ಪುಣ್ಯಕಾರ್ಯ. ಈ ಪಾಪ ಪುಣ್ಯಗಳ ವಿವೇಕವು ಧರ್ಮದೇವತೆಯಾದ ಈ ಧರ್ಮನಿಗೆ ಇರುವದು ಅತ್ಯಗತ್ಯ.

ಎಲ್ಲರನ್ನೂ ರಕ್ಷಿಸುವ ಈ ಧರ್ಮದೇವನು ಸತ್ಯಮಿಥ್ಯಗಳನ್ನೂ ವಿಚಾರಿಸದೇ ಹೀಗೆ ಒಮ್ಮೆಲೇ ಸತ್ಯವಾದಿಯಾದ ಈ ಮಹೀಸಾಗರ ಸಂಗಮ ತೀರ್ಥಕ್ಕೆ ಶಾಪವಿತ್ತದ್ದು ಸರ್ವಥಾ ಅನುಚಿತ. ಇಂಥ ಧರ್ಮಮೂರ್ತಿಗಳು ನ್ಯಾಯ ಅನ್ಯಾಯಗಳನ್ನು ವಿಚಾರಿಸದೇ ಕೋಪಾಟೋಪದಿಂದ ಸತ್ಯನಿಷ್ಠರಾದ ಶ್ರೇಷ್ಠ ವ್ಯಕ್ತಿಗಳಿಗೆ ಶಾಪಕೊಡುವದು ಸರ್ವಥಾ ಅನುಚಿತ. ಧರ್ಮಧ್ವಜವನ್ನು ಎತ್ತಿ ಹಿಡಿದವರು ಹೀಗೆ ನಿಷ್ಠುರವಾಗಿ ನ್ಯಾಯ ಮಾರ್ಗ ಬಿಟ್ಟು ನಡೆದರೆ, ದೀನರಾದ ಪ್ರಜೆಗಳು ಯಾರಿಗೆ ಮೊರೆ ಹೋಗಬೇಕು?

ಕಾರ್ತಿಕೇಯನ ಈ ಅಧಿಕ್ಷೇಪ ಪರವಾದ ಉಕ್ತಿಯನ್ನು ಕೇಳಿ ಧರ್ಮದೇವನು ನಮ್ರತೆಯಿಂದಲೇ ಉತ್ತರಕೊಟ್ಟನು.

## ಆತ್ಮಸ್ತುತಿ-ಅಧೋಗತಿ

**ಧರ್ಮದೇವ:-** ಸ್ಕಂದ ಕುಮಾರ! ನೀನು ಹೇಳಿದ್ದೆಲ್ಲವೂ ನಿಜ. ಈ ಮಹೀಸಾಗರ ಸಂಗಮತೀರ್ಥವು ಎಲ್ಲ ತೀರ್ಥಗಳಲ್ಲಿ ಪ್ರಧಾನ. ಬ್ರಹ್ಮದೇವರಿಂದ ಪ್ರಥಮ ಪೂಜೆಗೆ

ಅರ್ಹ ವ್ಯಕ್ತಿ. ಇದರಲ್ಲಿ ನನಗೂ ಸಂದೇಹವಿಲ್ಲ. ಆದರೆ, ದೊಡ್ಡವರ ಮುಂದೆ, ಬಲ್ಲವರ ಸಭೆಯಲ್ಲಿ ತನ್ನ ಮುಖದಿಂದಲೇ ಆತ್ಮಪ್ರಶಂಸೆಯನ್ನು ಮಾಡಿಕೊಳ್ಳಬಾರದು ಎಂಬುದು ಈ ವರೆಗೆ ಸಾಧು ಸಜ್ಜನರು ಪಾಲಿಸಿಕೊಂಡು ಬಂದ ಒಂದು ನಿಯಮ. ಪರನಿಂದೆ, ಆತ್ಮಸ್ತುತಿ ಎರಡೂ ದೊಡ್ಡ ದೋಷ. ಈ ದೋಷವು ಬ್ರಹ್ಮದೇವರಂಥ ಮಹಾಪುರುಷರನ್ನು ಸಹಿತ ತಮ್ಮ ಸ್ಥಾನದಿಂದ ವಿಚಲಿತರನ್ನಾಗಿ ಮಾಡುತ್ತದೆ. ಅಹಂಕಾರದಿಂದ ತಮ್ಮದೇ ಆಹೋಪುರುಷಿಕೆಯನ್ನು ಹೇಳಿಕೊಂಡು, ತಮ್ಮ ಬಢಾಯಿ ಕೊಚ್ಚಿಕೊಂಡು ತಮ್ಮ ಉಚ್ಚಸ್ಥಾನದಿಂದ ಪ್ರಚ್ಯುತರಾದ ಅನೇಕ ಹಿರಿಯರ ಕಥೆಯನ್ನು ನೀವು ಕೇಳಿಲ್ಲವೆ? ಹೆರವರನ್ನೂ ಹಿರಿಯರನ್ನೂ ಹೀಗಳೆದು ಯಯಾತಿ ಮಹಾರಾಜನು ಉರುಳಿಬಿದ್ದ ಸ್ವರ್ಗ ಲೋಕದಿಂದ. ಸರ್ವಜ್ಞನಾದ ಭಗವಂತನು ವೇದಶಾಸ್ತ್ರ ಪುರಾಣಾದಿ ರೂಪ ತನ್ನ ಆಜ್ಞಾವಚನಗಳಿಂದ ಹೇಳಿಕೊಟ್ಟ. ನೀತಿ ಸಂಪ್ರದಾಯಗಳನ್ನು ಪರಿಪಾಲಿಸಿಕೊಂಡು ಬರುವದು ಎಲ್ಲ ಆಸ್ತಿಕ ಧರ್ಮಜ್ಞರ ಕರ್ತವ್ಯವಾಗಿದೆ. ಕಾರ್ತೀಕೇಯನೇ! ನಿಮ್ಮ ತಂದೆಯಾದ ಪರಮೇಶ್ವರನೇ ನಮಗೆಲ್ಲ ಒಪ್ಪಿಸಿಕೊಟ್ಟ ಕಾರ್ಯವನ್ನು ನಿಯಮನಿಷ್ಠೆಯಿಂದ ಪಾಲಿಸುವದು, ವರ್ತಿಸುವುದು ನಮ್ಮ ಕರ್ತವ್ಯವಾಗಿದೆ. ಇದರ ಮೇಲೆ ನಾನು ಹೇಳಿದ ಮಾತು ಹಾಗೂ ವಿಚಾರಗಳು ನಿಮಗೆ ಸಮ್ಮತವಾಗದಿದ್ದರೆ, ನಾನು ಪರಮೇಶ್ವರನು ನನಗೆ ದಯಪಾಲಿಸಿದ ಧರ್ಮಾಧಿಕಾರವನ್ನು ಬಿಟ್ಟುಬಿಡುತ್ತೇನೆ.''

ಧರ್ಮದೇವತೆಯು ವಿಷಣ್ಣನಾಗಿ ತಮ್ಮ ಧರ್ಮಾಧಿಕಾರವನ್ನು ತ್ಯಜಿಸಲು ಸಿದ್ಧನಾದುದನ್ನು ಕಂಡು ನಾನು ಎದ್ದು ನಿಂತೆ. ಹಾಗೂ ಈ ಮಾತನ್ನೂ ಹೇಳಿದೆ.

## ನಾರದರ ಸೂಚನೆ. ಶಾಪದ ಮೋಚನೆ

**ನಾರದ:-** ಚರಾಚರ ಪ್ರಪಂಚವನ್ನೆಲ್ಲ ಧಾರಣ ಮಾಡುವ ಧರ್ಮದೇವತೆಗೆ ನಮಸ್ಕಾರ. ಹರಿಹರ ಬ್ರಹ್ಮಾದಿ ತ್ರಿಮೂರ್ತಿ ದೇವತೆಗಳು ಪ್ರತಿದಿನವೂ ಪೂಜೆಮಾಡುವ ಧರ್ಮರಾಜನಿಗೆ ವಂದನೆ. ಧರ್ಮದೇವನು ತನ್ನ ಧರ್ಮಾಧಿಕಾರವನ್ನೇ ತ್ಯಾಗಮಾಡಿದರೆ ನಮ್ಮಂಥ ಪ್ರಜೆಗಳು ಜಗತ್ತಿನಲ್ಲಿ ಬಾಳುವದೆಂತು? ಬದುಕುವದೆಂತು? ಧರ್ಮಪ್ರಭುವೇ! ನೀನು ಧರ್ಮಾಧಿಕಾರವನ್ನು ತ್ಯಜಿಸುವದರಿಂದ ವಿಶ್ವವನ್ನೇ ವಿನಾಶದೆಡೆಗೆ ನೂಕಿದಂತಾಗುವುದು. ಯೋಗೀಶ್ವರನಾದ ಈ ಸ್ಕಂದದೇವನಿಗೆ ಸರಿಯಾದ ಮನವರಿಕೆಯನ್ನು ನೀಡುವದು ನಮ್ಮ ನಿಮ್ಮೆಲ್ಲರ ಕರ್ತವ್ಯವೇ ಆಗಿದೆ. ಜಗದೊಡೆಯನಾದ ಆ ಪರಶಿವನ ಮೆಚ್ಚಿನ ಪುತ್ರನಲ್ಲವೇ ಈ ಕುಮಾರ ಸ್ವಾಮಿ! ಆದ್ದರಿಂದ ಈ ಸ್ಕಂದ ದೇವನು ವಿಶ್ವವಂದನೀಯನು ಆಗಿದ್ದಾನೆ. ಆ ಸ್ಕಂದ ಸ್ವಾಮಿಯಿಂದ ನಿರ್ಮಿತವಾಗಿ ಅಧಿಷ್ಠಿತವಾದ ಈ ಮಹೀಸಾಗರ ಸಂಗಮತೀರ್ಥಕ್ಕೆ ''ಗುಪ್ತವಾಗು'' ಎಂದು ನೀವು ಶಾಪಕೊಟ್ಟಿದ್ದೀರಿ. ಇದನ್ನು ನಿವಾರಣ ಮಾಡುವದು ಹೇಗೆ? ಹೇಗಾದರೂ ಮಾಡಿ ಈ ದಿವ್ಯಕ್ಷೇತ್ರದ ಮೇಲಿನ ಶಾಪವನ್ನು ಪರಿಹರಿಸಿ ನಮ್ಮೆಲ್ಲರ ಮೇಲೆ ಅನುಗ್ರಹ ಮಾಡಿ.

ನಾರದರ ಈ ಅನುನಯದ ನುಡಿಯನ್ನು ಕೇಳಿ ಸಮಾಧಾನವೆನಿಸಿತು ಬ್ರಹ್ಮದೇವರಿಗೆ. ನಾರದರ ಈ ಕಾರ್ಯವನ್ನು ಪ್ರಶಂಸಿಸಿದ ಪರಮೇಷ್ಠಿ ಬ್ರಹ್ಮ ಧರ್ಮದೇವನನ್ನು ಸಂತೈಸುತ್ತ ನುಡಿದ. ''ಧರ್ಮಪಾಲಕನಾದ ಧರ್ಮದೇವ! ಇದೀಗ ನಾರದನು ನುಡಿದ

ನುಡಿಗಳು ಹಿತ ಮತ್ತು ವಿಹಿತ. ಈ ನಾರದೋಕ್ತಿಯನ್ನು ನೀನು ಈಗ ಅವಶ್ಯವಾಗಿ ಗೌರವಿಸು. ದೊಡ್ಡವರು ಮಾಡಿದ ಹಿತೋಪದೇಶವನ್ನು ಮನ್ನಿಸುವದು ಎಲ್ಲರ ಕರ್ತವ್ಯ.''

## ಧರ್ಮದೇವತೆಯ ಉಶ್ಶಾಪ

**ಧರ್ಮದೇವ:-** ವಿಶ್ವವಂದ್ಯನಾದ ಷಣ್ಮುಖನಿಗೆ ನಮಸ್ಕಾರ. ನಾವೆಲ್ಲರೂ ಕಿಂಕರರು ಈ ಶಂಕರ ಕುಮಾರನಿಗೆ. ಸ್ಕಂದದೇವ, ನೀನು ನಮ್ಮೆಲ್ಲರಿಗೂ ಒಡೆಯ. ನಾವು ನಿಮ್ಮ ಅನುಚರರು. ಮಹೀಸಾಗರ ಸಂಗಮತೀರ್ಥವು ದೊಡ್ಡವರ ಎದುರು ನುಡಿದ ದರ್ಪೋಕ್ತಿಗಳನ್ನು ನನಗೆ ತಡೆಯಲಿಕ್ಕಾಗಲಿಲ್ಲ. ಅದಕ್ಕಾಗಿ ಈ ಮಹಾತೀರ್ಥಕ್ಕೆ ಅಪ್ರಸಿದ್ಧನಾಗು. ಅರ್ಥಾತ್ ಗುಪ್ತನಾಗು ಎಂದು ನಾನು ಶಾಪ ಕೊಟ್ಟದ್ದಾಗಿದೆ. ನನಗೆ ಈ ತೀರ್ಥರಾಜನ ವಿಷಯದಲ್ಲಿ ಯಾವ ದುರ್ಭಾವನೆಯೂ ಇಲ್ಲ. ಇದರ ಹಿರಿಮೆಯ ಅರಿವು ನನಗೆ ಪೂರ್ತಿಯಾಗಿ ಇದ್ದರೂ ಗುರುಗಳೆದುರು ಗರ್ವೋಕ್ತಿಯನ್ನು ನುಡಿದದ್ದಕ್ಕೆ ಶಾಸನರೂಪವಾಗಿ ಇದೆ ನನ್ನ ಆ ಶಾಪಶಿಕ್ಷೆ. ಅದು ಬದಲಾಗದು. ಆದರೆ ಶನಿವಾರ ಅಮಾವಾಸ್ಯೆ ಬಂದ ಸುಮುಹೂರ್ತದಲ್ಲಿ ಈ ಮಹೀಸಾಗರ ಸಂಗಮತೀರ್ಥದ ಯಾತ್ರೆ ಮಾಡಿ ಈ ಪುಣ್ಯಜಲದಲ್ಲಿ ಮಿಂದವರಿಗೆ ಲೋಕೋತ್ತರ ಪುಣ್ಯ ಫಲವು ಪ್ರಾಪ್ತವಾಗುವದು. ಅಮಾವಾಸ್ಯೆಯ ದಿನ ಶನಿವಾರ ಯೋಗವಿದ್ದಂದು ಈ ತೀರ್ಥದ ಯಾತ್ರೆಯನ್ನು ವಿಧಿಪೂರ್ವಕ ಮಾಡಿ ಇಲ್ಲಿ ಸ್ನಾನ, ದೇವತಾರ್ಚನೆ, ಪಿತೃತರ್ಪಣ, ಶಿವಾರ್ಪಣ, ಮೊದಲಾದವನ್ನು ಮಾಡಿದರೆ, ಹತ್ತುಸಲ ಪ್ರಭಾಸ ಕ್ಷೇತ್ರದ ಯಾತ್ರೆ ಮಾಡಿದ ಪುಣ್ಯವು ದೊರೆಯುವದು. ಏಳು ಸಲ ಪುಷ್ಕರ ಕ್ಷೇತ್ರಯಾತ್ರೆ, ಎಂಟು ಸಲ ಪ್ರಯಾಗದ ಗಂಗಾ ಯಮುನಾ ಸಂಗಮ ತೀರ್ಥದ ಯಾತ್ರೆ ಮಾಡಿದ್ದಕ್ಕಿಂತ ಮಿಗಿಲಾದ ಪುಣ್ಯ ಲಭಿಸುವದು. ಈ ಯಾತ್ರೆಯಿಂದ ಮಹೀಸಾಗರ ಸಂಗಮತೀರ್ಥದ ಯಾತ್ರೆಯನ್ನು ಒಂದೇ ಒಂದು ಸಲ ಮಾಡಿದರಾಯ್ತು ಮಿಕ್ಕೆಲ್ಲ ತೀರ್ಥಕ್ಷೇತ್ರಗಳ ವಿದ್ಯುಕ್ತ ಯಾತ್ರೆ ಮಾಡಿದ್ದಕ್ಕಿಂತ ಅತ್ಯಧಿಕ ಫಲಪ್ರಾಪ್ತಿ ನಿಶ್ಚಿತ.

ಹೀಗೆ ಸ್ವಯಂ ಧರ್ಮದೇವತೆಯು ಆ ಮಹೀಸಾಗರ ಸಂಗಮ ತೀರ್ಥಕ್ಕೆ ವರಪ್ರದಾನ ಮಾಡಿದ್ದಕ್ಕೆ ಪರಮಾನಂದವಾಯ್ತು ಆ ಸ್ಕಂದನಿಗೆ. ಬ್ರಹ್ಮದೇವರು ಕೂಡ ಮನದಲ್ಲಿಯೇ ಮೆಚ್ಚಿಕೊಂಡರು. ಎಲ್ಲ ತೀರ್ಥ ದೇವತೆಗಳಿಗೂ ಸಮಾಧಾನವಾಯಿತು. ಆಗ ಬ್ರಹ್ಮದೇವರು ಸ್ವಯಂ ಎದ್ದು ಬಂದು ಆ ಮಹೀಸಾಗರ ಸಂಗಮತೀರ್ಥಕ್ಕೆ ತಮ್ಮ ಕೈಯಿಂದಲೇ ಅರ್ಘ್ಯೋದಕವನ್ನು ನೀಡಿದರು. ತೀರ್ಥೋತ್ತಮ ಎಂದು ಅಗ್ರಪೂಜೆ ಮಾಡಿದರು. ಇದರಿಂದ ಈ ಮಹೀಸಾಗರ ಸಂಗಮ ತೀರ್ಥವು ಎಲ್ಲ ತೀರ್ಥಗಳಲ್ಲೂ ಸರ್ವೋತ್ತಮ ತೀರ್ಥ ಎಂದು ಅಕಥಿತವಾಗಿ ಪ್ರಥಿತವಾಯಿತು. ಆಗ ಎಲ್ಲ ತೀರ್ಥಗಳೂ ಬ್ರಹ್ಮದೇವನನ್ನು ಅಭಿನಂದಿಸಿದವು. ಹಾಗೂ ಸ್ಕಂದ ದೇವನನ್ನು ವಂದಿಸಿದವು. ಅವರಿಬ್ಬರೂ ಎಲ್ಲ ತೀರ್ಥಗಳನ್ನು ವಂದಿಸಿ ಅಲ್ಲಿಂದ ಬೀಳ್ಕೊಟ್ಟರು.

ಪರಮ ಪವಿತ್ರವಾದ ಈ ಮಹೀಸಾಗರ ಸಂಗಮತೀರ್ಥವು ಗುಪ್ತಕ್ಷೇತ್ರ ಆಗುವುದಕ್ಕೆ ಈ ಪ್ರಾಚೀನ ಘಟನೆಯೇ ಕಾರಣ. ಈ ರೀತಿಯಾಗಿ ನಾನು ನಿನಗೆ ಈ ಮಹಾತೀರ್ಥದ ಮಹಾ ಮಹಿಮೆಯನ್ನೂ. ಇದರ ಯಾತ್ರೆಯಿಂದ ಬರುವ ಪುಣ್ಯವನ್ನೂ, ಇದರ ಪ್ರಾಚೀನ ಇತಿಹಾಸವನ್ನೂ, ತಿಳಿಸಿ ಹೇಳಿದ್ದೇನೆ. ಇದನ್ನು ಮೊದಲಿನಿಂದ ಕೊನೆಯವರೆಗೆ ಪೂರ್ತಿ ಕೇಳಿದವರು ಎಲ್ಲ ಪಾಪಗಳಿಂದ ಮುಕ್ತರಾಗುವರು.

**ಸೂತ:-** ಇದೆಲ್ಲ ಮಹೀಸಾಗರ ಸಂಗಮತೀರ್ಥದ ಆಶ್ಚರ್ಯಕರವಾದ ವೃತ್ತಾಂತವನ್ನೂ, ಪಾರ್ವತೀ ಪುತ್ರನಾದ ಕುಮಾರ ಸ್ವಾಮಿಯ ಮಹಾಮಹಿಮೆಯನ್ನೂ ಕೇಳಿ ಅತ್ಯಾಶ್ಚರ್ಯವಾಯಿತು ಅರ್ಜುನನಿಗೆ, ಅವನು ಸ್ಕಂದ ದೇವನಿಗೆ ನಿಂತಲ್ಲಿಯೇ ಸಾಷ್ಟಾಂಗ ವಂದನೆಗೈದು ಅವನ ಪ್ರಶಂಸೆ ಮಾಡಿ ನಾರದರ ಅಪ್ಪಣೆ ಪಡೆದು ಅವನು ದ್ವಾರಕೆಗೆ ತೆರಳಿದ.

## ಸಿದ್ಧಮಾತೆಯ ಮಹಿಮೆ

**ಶೌನಕ:-** ಸೂತರೇ! ತಾವು ಈ ವರೆಗೆ ಬಣ್ಣಿಸಿದ ಗುಪ್ತ ಕ್ಷೇತ್ರದ ಮಹಿಮೆ ಅತ್ಯದ್ಭುತ. ಅದರ ಚರಿತ ಅನುಪಮ. ಅದರ ಆಖ್ಯಾನ ಆನಂದದಾಯಕ. ತಮ್ಮ ಮುಖದಿಂದ ಕೌತುಕಭರಿತವಾದ ಈ ಮಹಾತೀರ್ಥದ ದಿವ್ಯ ವೃತ್ತಾಂತವನ್ನು ಆಲಿಸಿ ನನಗೆ ಅತ್ಯಂತ ಹರ್ಷವಾಯಿತು. ಈಗ ನಾನು ತಮ್ಮ ಮುಖದಿಂದ ಸಿದ್ಧಮಾತೆಯ ಮಹಿಮೆಯನ್ನು ಕೇಳಬೇಕೆಂದು ಬಯಸಿದ್ದೇನೆ. ಆ ಸಿದ್ಧಮಾತೆಯ ದಯೆಯಿಂದ ಚಂಡಿಲ ಹಾಗೂ ವಿಜಯ ಇವರಿಬ್ಬರೂ ಸಿದ್ಧಿಯನ್ನು ಪಡೆದರೆಂದು ಕೇಳಿದ್ದೇನೆ. ಅದರಿಂದ ಆ ವಿಷಯವನ್ನು ದಯವಿಟ್ಟು ಬಿತ್ತರಿಸಬೇಕು.

**ಸೂತ:-** ವಿಪ್ರೋತ್ತಮರೆ! ಈ ವಿಷಯದಲ್ಲಿ ನಾನು ಸಾಕ್ಷಾತ್ ವೇದವ್ಯಾಸ ದೇವರ ಮುಖದಿಂದಲೇ ಕೇಳಿದ ವೃತ್ತಾಂತವನ್ನು ತಿಳಿಸುತ್ತೇನೆ. ಆಸಕ್ತಿಯಿಂದ ಆಲಿಸಿರಿ. ಇದು ಬಹಳ ಹಿಂದೆ ನಡೆದ ವೃತ್ತಾಂತ. ಪೂರ್ವಕಾಲದಲ್ಲಿ ಕುಂತಿಯ ಮಕ್ಕಳಾದ ಧರ್ಮ, ಭೀಮ, ಅರ್ಜುನ, ನಕುಲ, ಸಹದೇವ, ಎಂಬ ಪಂಚ ಪಾಂಡವರು ದುರುಳ ದುರ್ಯೋಧನನಿಂದ ಅರಗಿನ ಮನೆಗೆ ಅಟ್ಟಲ್ಪಟ್ಟಿದ್ದರು. ಅಲ್ಲಿ ಆ ಅರಗಿನ ಮನೆಗೆ ಅಗ್ನಿ ಸ್ಪರ್ಶ ಮಾಡಿಸಿ ಅವರನ್ನು ಆ ಅರಗಿನ ಮನೆಯ ಬೆಂಕಿಯಿಂದ ಸುಟ್ಟುಬಿಡುವ ವಿಚಾರ ಇದ್ದಿತು ಆ ಕೌರವರ ದುಷ್ಟಕೂಟಕ್ಕೆ. ಆದರೆ ವಿದುರನ ಮುಂಜಾಗ್ರತೆಯಿಂದ ಪಾಂಡವರು ಆ ಅಗ್ನಿಯ ಅನಾಹುತದಿಂದ ಸುರಕ್ಷಿತವಾಗಿಪಾರಾಗಿ ಪಾಂಚಾಲ ನಗರಕ್ಕೆ ಬಂದರು. ದ್ರೌಪದೀ ಸ್ವಯಂವರದಲ್ಲಿ ಅರ್ಜುನನು ಮತ್ಸ್ಯಭೇಧನ ಮಾಡಿದ ಬಳಿಕ ಪಂಚಪಾಂಡವರು ಕೂಡಿ ದ್ರೌಪದಿಯ ಪಾಣಿಗ್ರಹಣ ಮಾಡಿದರು. ಅನಂತರ ಧೃತರಾಷ್ಟ್ರನ ಆದೇಶದಂತೆ ಇಂದ್ರಪ್ರಸ್ಥ ಎಂಬ ನಗರದಲ್ಲಿ ತಮ್ಮ ಪಾಲಿನ ರಾಜ್ಯಾಧಿಕಾರವನ್ನು ಪಡೆದು ಶ್ರೀಕೃಷ್ಣನ ದಯೆಯಿಂದ ಧರ್ಮನಿಷ್ಠರಾಗಿ ರಾಜ್ಯದ ಆಡಳಿತವನ್ನು ನಿರ್ವಹಿಸುತ್ತ ನೆಲೆಸಿದ್ದರು.

ಒಂದು ದಿನ ಪಂಚಪಾಂಡವರು ರಾಜಸಭೆಯಲ್ಲಿ ಕುಳಿತು ಪ್ರಜಾಕ್ಷೇಮ ಚಿಂತನ ಮಾಡುತ್ತಲಿದ್ದರು. ಆಗ ಅಲ್ಲಿಗೆ ಭೀಮಸೇನನ ಚೊಚ್ಚಲ ಗಂಡುಮಗು ಘಟೋತ್ಕಚ ಆಗಮಿಸಿದ. ಅವನು ಪಂಚಪಾಂಡವರಿಗೂ, ಅಧ್ಯಕ್ಷಪೀಠದಲ್ಲಿ ಆಸೀನನಾದ ಭಗವಾನ ಶ್ರೀಕೃಷ್ಣನಿಗೂ ಸಾಷ್ಟಾಂಗ ವಂದನೆಗೈದ. ಆ ಭೀಮನಂದನನನ್ನು ಕಂಡು ಈ ಪಾಂಡನಂದರಿಗೆಲ್ಲ ಪರಮಾನಂದ. ಆ ಮುಕುಂದನಿಗೂ ವಿಶೇಷ ಆನಂದ. ಅವರೆಲ್ಲರೂ ಸಂತೋಷದಿಂದ ಘಟೋತ್ಕಚನನ್ನು ತಬ್ಬಿಕೊಂಡರು. ಮಹಾರಾಜನಾದ ಧರ್ಮರಾಜನು ಪ್ರೀತಿಯಿಂದ ಆ ಭೀಮಕುಮಾರನನ್ನು ತನ್ನೆಡೆಗೆ ಎಳೆದು ಕೊಂಡು ತೊಡೆಯ ಮೇಲೆ ಕೂಡಿಸಿಕೊಂಡ. ಮಸ್ತಕವನ್ನು ಮೂಸಿ ಮೈದಡವಿ, ಮಮತೆಯಿಂದ ಮಾತನಾಡಿದ.

**ಧರ್ಮರಾಜ:-** ವತ್ಸ, ನೀನು ಈಗ ಎಲ್ಲಿಂದ ಬಂದೆ? ಇಷ್ಟು ದಿನ ನೀನು ಎಲ್ಲಿ ತಿರುಗಾಡುತ್ತ ಇದ್ದೆ? ನಿನ್ನ ತಾಯಿಯಾದ ಹಿಡಂಬೆಯು ಕ್ಷೇಮದಿಂದ ಇರುವಳಷ್ಟೆ? ನೀವು ದೇವದ್ವೇಷ, ಬ್ರಹ್ಮದ್ರೋಹ, ಗೋಹತ್ಯ, ಸಜ್ಜನ ಪೀಡೆ, ಮುಂತಾದ ರಾಕ್ಷಸೀ ಕೃತ್ಯವನ್ನು ಮಾಡುವದಿಲ್ಲವಷ್ಟೆ? ಜಗದೀಶ್ವರನಾದ ಈ ಕೃಷ್ಣನಲ್ಲಿ ಅಚ್ಚಿನ್ನ ಭಕ್ತಿಯನ್ನು ತಾಳಿ, ನಿತ್ಯವೂ ಆ ಭಗವಂತನ ಸ್ಮರಣ, ಪೂಜಾದಿಗಳನ್ನು ಮಾಡುತ್ತೀರಿ. ತಾನೆ?

## ದೈತ್ಯಪುತ್ರನ ಧರ್ಮರಾಜ್ಯ

**ಘಟೋತ್ಕಚ:-** ಪರಮಪೂಜ್ಯರಾದ ಮಹಾರಾಜರೇ, ನನ್ನ ಸೋದರಮಾವನಾದ ಹಿಡಿಂಬಾಸುರನನ್ನು ನನ್ನ ತಂದೆ ಭೀಮಸೇನನು ಕೊಂದುಹಾಕಿದ ಬಳಿಕ, ನನ್ನ ತಾಯಿಯೇ ಆ ರಾಜ್ಯಕ್ಕೆ ಅಧಿಕಾರಿಣಿಯಾಗಿದ್ದಳು. ನಾನು ಪ್ರಬುದ್ಧನಾದ ಬಳಿಕ ನನ್ನ ತಾಯಿಯ ಅಪೇಕ್ಷೆಯಂತೆ ಹಾಗೂ ತಮ್ಮ ಆದೇಶದಂತೆ, ನನ್ನನ್ನೇ ಆ ರಾಜ್ಯದ ಸಿಂಹಾಸನದ ಮೇಲೆ ಹಿರಿಯರು ಪ್ರತಿಷ್ಠಿತಗೊಳಿಸಿದ್ದಾರೆ. ನಾನು ಈಗ ಆ ನನ್ನ ಪುಟ್ಟ ಸಾಮ್ರಾಜ್ಯದಲ್ಲಿ ನಿಮ್ಮೆಲ್ಲರ ದಯೆದಿಂದ ಧರ್ಮಶಾಸನವನ್ನು ನಡೆಸುತ್ತಲಿದ್ದೇನೆ. ನನ್ನ ರಾಜ್ಯದಲ್ಲಿ ದುಷ್ಟರ ದಮನ ಮಾಡುತ್ತ ಎಲ್ಲ ಜನರೂ ಧರ್ಮಾಚರಣೆ ಮಾಡುತ್ತ ನೀತಿನಿಯಮ ನಿಷ್ಠರಾಗಿ ಬಾಳುವಂತೆ, ನ್ಯಾಯದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತಲಿದ್ದೇನೆ. ನನ್ನ ತಾಯಿಯಾದ ಹಿಂಡಿಬಾದೇವಿ ಪತಿ ಭೀಮಸೇನರೂಪಿ ದೇವರನ್ನು ಮನಸ್ಸಿನಲ್ಲಿ ನೆನೆದುಕೊಂಡು ತಪೋನುಷ್ಠಾನವನ್ನು ಕೈಕೊಂಡಿದ್ದಾಳೆ. ಆ ತಾಯಿಯು ನನಗೆ ನೀಡಿದ ಮುಖ್ಯ ಆಜ್ಞೆ ಏನೆಂದರೆ, ''ವತ್ಸ, ಪಾಂಡವರು ನಿನ್ನ ಹಿತಚಿಂತಕರು. ಅವರಲ್ಲಿ ಭೀಮಸೇನನು ನಿನಗೆ ಜನ್ಮ ಕೊಟ್ಟ ತಂದೆ. ಈ ಐದು ಜನ ಪಾಂಡವ ಸೋದರರೂ ಧರ್ಮಾತ್ಮರು. ನಿನಗೆ ತೀರ್ಥರೂಪರು. ನೀನು ಅವರಲ್ಲಿ ಯಾವಾಗಲೂ ಭಕ್ತಿಯನ್ನು ಮಾಡು, ನೀನು ಪ್ರತಿಯೊಂದು ಕಾರ್ಯವನ್ನು ಅವರ ಅಪ್ಪಣೆಯಂತೆ ನೆರವೇರಿಸು. ಅವರ ಆಜ್ಞಾಪಾಲನೆಯೇ ನಿನ್ನ ಜೀವನದ ಮುಖ್ಯ ಗುರಿಯಾಗಿ ಇರಲಿ.''

## ಶಕ್ತಿಯ ಸದುಪಯೋಗ ಆಗಲಿ

ತೀರ್ಥಸ್ವರೂಪರಾದ ಧರ್ಮರಾಜರೇ! ನನ್ನ ತಾಯಿಯ ಈ ನಿರ್ದೋಷ ವಚನವನ್ನು ಕೇಳಿ ನನಗೆ ಅತ್ಯಧಿಕ ಭಕ್ತಿ ಉತ್ಪನ್ನವಾಗಿದೆ ನಿಮ್ಮಲ್ಲಿ. ನೀವೇ ನನಗೆ ತಂದೆ-ತಾಯಿ ಗುರು-ಹಿರಿಯರು, ದೇವತಾ ಧರ್ಮಸ್ವರೂಪರು, ತೀರ್ಥರೂಪರು. ನಿಮ್ಮ ಮಾತೇ ನಮಗೆ ವೇದ. ನಿಮ್ಮ ಆಜ್ಞೆ ನಮಗೆ ಶಿರೋಮಾನ್ಯ. ಅದಕ್ಕಾಗಿ ನಾನು ಈಗ ಮೇರು ಶಿಖರದಿಂದ ನಿಮ್ಮನ್ನು ಕಂಡು ನಮಸ್ಕರಿಸಿ ನಿಮ್ಮ ಆಶೀರ್ವಾದಗಳನ್ನು ಪಡೆದುಕೊಂಡು ಹೋಗಬೇಕೆಂದು ಬಂದಿದ್ದೇನೆ. ನಾನು ನಿಮ್ಮ ಮಗ. ನಿಮ್ಮ ಕರುಣೆಯ ಕೂಸು. ನಿಮ್ಮ ಆಜ್ಞಾಪಾಲನೆಯೇ ನನ್ನ ಬದುಕಿನ ಅರಸು ಗುರಿ. ನನಗೆ ಈಗ ಪ್ರಾಯದ ವಯಸ್ಸು, ಮೈಯಲ್ಲಿ ಬಲವಿದೆ. ಉತ್ಸಾಹವಿದೆ. ನಿಮ್ಮ ಆದೇಶವನ್ನು ಪಾಲಿಸುವ ಉತ್ಸಾಹವಿದೆ. ಆದುದರಿಂದ ನನಗೆ ಯಾವುದಾದರೊಂದು ಕಾರ್ಯವನ್ನು ಮಾಡಲು ಆಜ್ಞೆನೀಡಬೇಕು. ತಮ್ಮ ವಚನವನ್ನು ಪಾಲಿಸುವ ಭಾಗ್ಯವನ್ನು ನನಗೆ ನೀಡಬೇಕು. ತಾವು ನನ್ನಿಂದ ಯಾವುದಾದರೊಂದು ಕಾರ್ಯವನ್ನು ಮಾಡಿಸಿ, ನನ್ನ ಯೌವ್ವನ, ಉತ್ಸಾಹ, ಶಕ್ತಿ, ಇವುಗಳ ಸದುಪಯೋಗವನ್ನು ಮಾಡಿದರೆ, ನಾನು ಧನ್ಯ. ನನ್ನ ತಾಯಿಯ ಜೀವಕ್ಕೂ ತೃಪ್ತಿ, ತಂದೆ ಹಾಗೂ ಕಕ್ಕಂದಿರ ಆಜ್ಞಾಪಾಲನವನ್ನು ಮಕ್ಕಳು ಮಾಡಿದರೆ, ಪಿತೃವರ್ಗಕ್ಕೆಲ್ಲ ಪರಮ ಪ್ರೀತಿ ಉಂಟಾಗುವದು. ಹಿರಿಯರ ಆದೇಶವನ್ನು ಹೊತ್ತು ನಡೆಸುವ ಮಕ್ಕಳು ಪರಲೋಕದಲ್ಲಿ ದಿವ್ಯ ಸದ್ಗತಿಯನ್ನು ಹೊಂದುವುದಲ್ಲದೇ, ಈ ಪ್ರಪಂಚದಲ್ಲಿಯೇ ಯಶಸ್ವಿಯಾಗಿ ಎಲ್ಲೆಡೆಗೂ ಜಯಭೇರಿಯನ್ನು ಬಾರಿಸುವರು.

**ಧರ್ಮರಾಜ:-** ''ಮಗು ಘಟೋತ್ಕಚ, ನಿನ್ನ ಈ ಮುದ್ದಾದ ಮಾತುಗಳನ್ನು ಕೇಳಿ ನಮ್ಮೆಲ್ಲರಿಗೂ ಅತ್ಯಾನಂದವಾಗಿದೆ. ನಿನ್ನಂಥ ಸತ್ಪುತ್ರನನ್ನು ಪಡೆದ ಆ ಹಿಡಿಂಬಾ ದೇವಿಯೇ ಧನ್ಯೆ. ನಿನ್ನನ್ನು ಹೆತ್ತ ಆ ತಾಯಿ ಹಿಡಿಂಬೆಯು ದೇವಭಕ್ತಿ. ಪಿತೃಭಕ್ತಿ, ಪರೋಪಕಾರ,

ಬಂಧುಸ್ನೇಹ, ಮುಂತಾದ ಸದ್ಗುಣಗಳ ಸಾಕಾರ ಸ್ವರೂಪ. ತಾಯಿಯ ಗುಣಗಳು ಮಕ್ಕಳಿಗೆ ಬಳುವಳಿಯಾಗಿ ಬರುವದು ಸ್ವಾಭಾವಿಕವಷ್ಟೇ! ನಿನ್ನಲ್ಲಿ ಕೂಡ ಆ ಹಿಡಿಂಬಾ ದೇವಿಯ ಕೃಷ್ಣಭಕ್ತಿ, ಪಾಂಡವ ಪ್ರೇಮ, ಕುರುಕುಲದ ಅಭಿಮಾನ, ಧರ್ಮನಿಷ್ಠೆ, ಗುರುಹಿರಿಯರಲ್ಲಿ ಶ್ರದ್ಧೆ, ಮುಂತಾದ ಸದ್ಗುಣಗಳು ಅನುವಂಶಿಕವಾಗಿ ಅರಳಿ ಬಂದಿವೆ. ನಿನ್ನ ತಾಯಿಯಾದ ಹಿಡಿಂಬಾ ದೇವಿಯು ರಾಕ್ಷಸ ಕುಲದಲ್ಲಿ ಹುಟ್ಟಿದ್ದರೂ, ನನ್ನ ಸೋದರ ಭೀಮಸೇನನ ಕೈಹಿಡಿದು, ಭೂತದಯೆ, ದೇವಭಕ್ತಿ, ಧರ್ಮನಿಷ್ಠೆ, ಬಂಧು-ಸ್ನೇಹ, ಕುಲಗೌರವ, ಪತಿಭಕ್ತಿ, ಮುಂತಾದ ಗುಣಗಳನ್ನು ಬೆಳೆಸಿಕೊಂಡು ದೇವತಾ ಸ್ವರೂಪಳೇ ಆಗಿದ್ದಾಳೆ. ಈಗ ಅವಳು ಸಾಂಸಾರಿಕ ಸುಖದ ಆಶೆಯನ್ನು ಬಿಟ್ಟು ತಪೋನುಷ್ಠಾನಪರಾಯಣಳಾದದ್ದು ಆತ್ಯಾಶ್ಚರ್ಯಕರ. ಅವಳ ಈ ಪುಣ್ಯ ಕಾರ್ಯವು ಋಷಿ ಮುನಿಗಳಿಂದಲೂ ಪ್ರಶಂಸನೀಯವಾಗಿದೆ. ನೀನು ಆ ತಾಯಿಗೆ ಯೋಗ್ಯನಾದ ಮಗನಾಗಿರುವೆ.''

ಧರ್ಮರಾಜನು ಘಟೋತ್ಕಚನನ್ನು ಕುರಿತು ಹೀಗೆ ಸಂತಸದ ನುಡಿಗಳನ್ನು ಹೇಳಿ ಶ್ರೀಕೃಷ್ಣನೆಡೆಗೆ ತಿರುಗಿ ಆ ಭಗವಂತನನ್ನು ಉದ್ದೇಶಿಸಿ ನುಡಿದ-

**ಧರ್ಮರಾಜ:-** ''ಪುಂಡರೀಕಾಕ್ಷ, ಭೀಮಕುಮಾರನಾದ ಈ ಘಟೋತ್ಕಚನನ್ನು ನೀನು ಬಲ್ಲೆಯಷ್ಟೆ? ನಾವು ನಿನ್ನ ದಯೆಯಿಂದ ಅರಗಿನ ಮನೆಯ ಅಗ್ನಿಕಾಂಡದಿಂದ ಪಾರಾಗಿ ಪಾಂಚಾಲ ನಗರಕ್ಕೆ ಬರುವ ದಾರಿಯಲ್ಲಿ ಹಿಡಿಂಬವನದಲ್ಲಿ ವಿಶ್ರಮಿಸಿಕೊಂಡಾಗ ಈ ಘಟೋತ್ಕಚನ ಸೋದರಮಾವನಾದ ಹಿಡಿಂಬಾಸುರನು ನಮ್ಮನ್ನು ಕಬಳಿಸಬೇಕೆಂದು ಬಂದ, ದೂರ ದಾರಿ ನಡೆದು ದಣಿದು ಹೋದ ನಮ್ಮೆಲ್ಲರಿಗೂ ಆಗ ಗಾಢನಿದ್ರೆ. ನಮ್ಮನ್ನು ಹಗಲಿರುಳೂ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕಾಯುತ್ತಲಿದ್ದ ಈ ಭೀಮನು ಮಾತ್ರ ಎಚ್ಚರ. ಮನುಷ್ಯರ ವಾಸನೆ ಹಿಡಿದು ಧಾವಿಸಿ ಬಂದ ಆ ದುಷ್ಟದೈತ್ಯನನ್ನು ನಮ್ಮ ಈ ಬಲಭೀಮ ಹೋರಾಡಿ ಹಣಿದು ಹಾಕಿದ. ಅವನ ತಂಗಿಯಾದ ಹಿಡಿಂಬೆಯು ಕಾಮಸುಂದರನಾದ ಈ ಭೀಮನಲ್ಲಿ ಪ್ರೇಮಭಿಕ್ಷೆಯನ್ನು ಬೇಡಿದಳು. ಭೀಮನು ಬೇಡವೆಂದಾಗ ಭಗವಾನ್ ಬಾದರಾಯಣರು ಬಂದು ಕುಂತೀದೇವಿಯ ಅಪೇಕ್ಷೆಯಂತೆ ಭೀಮ ಹಿಡಿಂಬೆಯರ ವಿವಾಹವನ್ನು ನೆರವೇರಿಸಿದರು. ಅವರ ಪುತ್ರನೆ ಈ ಘಟೋತ್ಕಚ. ಇವನು ಹುಟ್ಟಿದಂದಿನಿಂದಲೇ ತಂದೆಯಂತೆ ಬಲಿಷ್ಠ. ತನ್ನ ಉಳಿದ ಕಕ್ಕಂದಿರಂತೆಯೇ ಧರ್ಮಿಷ್ಠ. ತಾಯಿಯಂತೆ ದೈವೀಗುಣ ಸಂಪನ್ನ. ಈಗ ಈ ನಮ್ಮ ಹಿಡಿಂಬಾ ಕುಮಾರ ಪ್ರಾಯ ಪ್ರಬುದ್ಧ. ಹರೆಯದ ಸಿರಿ ಅವನ ಕಟ್ಟುಮಸ್ತಾದ ಶರೀರದಲ್ಲಿ ಪೌರುಷ ಮೆರೆಯುವಂತೆ ಮಾಡಿದೆ. ಇವನ ತಾಯಿ ಜಾತಿಯಿಂದ ರಕ್ಕಸಿಯಾದರೂ ಗುಣದಿಂದ ಅಪ್ಪಟ ಧರ್ಮದೇವತೆ. ಈ ಮಗನಲ್ಲಿಯೂ ಆ ತಾಯಿಯ ದೈವೀ ಗುಣಗಳು ಸ್ವಯಂ ವಿಕಸಿತ. ಈಗ ನವತಾರುಣ್ಯ ಹಾಗೂ ಲೋಭನೀಯ ಲಾವಣ್ಯಗಳಿಂದ ಒಪ್ಪುವ ಈ ನಮ್ಮ ಚಿರಂಜೀವನು ಈಗ ಮದುವೆಗೆ ಯೋಗ್ಯ. ಇವನಿಗೆ ಒಂದು ಅನುರೂಪಳಾದ ಕನ್ಯೆಯನ್ನು ತಂದು ವಿವಾಹ ಮಾಡಬೇಕೆಂದು ನಮ್ಮ ಅಪೇಕ್ಷೆ ಇದೆ. ಇದಕ್ಕೆ ತಕ್ಕುದಾದ ಯಾವುದಾದರೂ ಕನ್ಯಾಮಣಿಯನ್ನು ತಾವು ಸೂಚಿಸಬೇಕು.

**ಕೃಷ್ಣ:-** ರಾಜನೇ, ನೀನು ಹೇಳುವದಕ್ಕೆ ಮುಂಚೆಯೇ ನಾನು ಈ ವಿಷಯವನ್ನು ವಿಚಾರಿಸಿದ್ದೇನೆ. ಈ ಭೀಮನಂದನನು ಈ ರಾಜಸಭೆಗೆ ಆಗಮಿಸಿದಾಗಲೇ ನಾನು ನೋಡಿದೆ

ಈ ತರುಣ ರಾಜಕುಮಾರನನ್ನು. ಪೌರುಷ ಪ್ರತಿಷ್ಠಿತವಾದ ಇವನ ಪ್ರಾಯತುಂಬಿದ ದೇಹವನ್ನೂ ಅವನ ಕಾಂತಿಯನ್ನೂ ಕಂಡಾಗಲೇ ಈ ಭೀಮಕುಮಾರನಿಗೆ ಯೋಗ್ಯ ಕನ್ಯೆ ಯಾವುದು ಎಂದು ವಿಚಾರ ಮಾಡತೊಡಗಿದೆ. ಮಹಾಪರಾಕ್ರಮಶಾಲಿಯಾದ ಈ ಘಟೋತ್ಕಚನಿಗೆ ಅನುರೂಪವಾದ ಒಂದು ಕನ್ಯಾಮಣಿ ಇದೀಗ ನನ್ನ ಸ್ಮರಣಕ್ಕೆ ಬಂದಿದೆ. ಪ್ರಚಂಡಪರಾಕ್ರಮಶಾಲಿಯಾದ ಈ ಘಟೋತ್ಕಚ ಕುಮಾರನಿಗೆ ಧರ್ಮಪತ್ನಿಯಾಗಲು ಓರ್ವ ವೀರವನಿತೆಯೇ ಆಗಬೇಕು. ಅಂಥ ಶಕ್ತಿಶಾಲಿನಿಯೂ, ಗುಣವತಿಯೂ ಆದ ಒಂದು ಕನ್ಯಾರತ್ನವು ಈಗ ಪ್ರಾಗ್ಜ್ಯೋತಿಷಪುರದಲ್ಲಿ ಇರುತ್ತಾಳೆ.

ಅಲ್ಲಿ ಹಿಂದೆ ಮುರ ಎಂಬ ಹೆಸರಿನ ಒಬ್ಬ ದೈತ್ಯನಿದ್ದನು. ಮಹಾವೀರ ಅವನು. ಅಷ್ಟೇ ಘೋರ ಆ ದೈತ್ಯ. ನರಕಾಸುರನನ್ನು ಸಂಹರಿಸಬೇಕೆಂದು ಅಂದು ನಾನು ಪ್ರಾಗ್ಜ್ಯೋತಿಷ ನಗರಕ್ಕೆ ಹೋಗಿದ್ದೆ. ಅಲ್ಲಿ ಮೊಟ್ಟಮೊದಲು ನನ್ನನ್ನು ದಿಟ್ಟತನದಿಂದ ಎದುರಿಸಿದ ವೀರಾಗ್ರಣಿಯೆಂದರೆ ಈ ಮುರಾಸುರ. ಪಾಶಮಯ ದುರ್ಗದಲ್ಲಿ ಯಮಪಾಶ ಹಿಡಿದು ನಿಂತ ಆ ಅರಿಭಯಂಕರನಾದ ಮುರಾಸುರನನ್ನು ನಾನು ನನ್ನ ಸುದರ್ಶನ ಚಕ್ರದಿಂದ ಕೊಂದುಹಾಕಿದೆ. ಆದ್ದರಿಂದಲೇ ನನಗೆ ಮುರಾರಿ ಎಂದು ಹೆಸರು. ಹೀಗೆ ನಾನು ಮುರವೈರಿಯನ್ನು ಗೆದ್ದು, ಮರ್ದಿಸಿ, ಸಂಹರಿಸಿದ ಬಳಿಕ, ನನ್ನನ್ನು ಎದುರಿಸಿದವಳು ಅವನ ಮಗಳು. ತಂದೆಯಂತೆಯೇ ವೀರಾಗ್ರಣಿ ಆ ಕನ್ಯಾಮಣಿ. ಅವಳ ಹೆಸರು ಕಾಮಕಟಂಕಟಾ. ಅವಳಂತೆಯೇ ಹೆಸರೂ ವಿಕಟ. ಖಡ್ಗ ಹಿಡಿದು ನನ್ನ ಮೇಲೆ ಏರಿ ಬಂದ ಆ ದೈತ್ಯಕನ್ಯೆಯೊಂದಿಗೆ ನಾನು ಅನಿವಾರ್ಯವಾಗಿ ಹೋರಾಡಬೇಕಾಯ್ತು. ಯುದ್ಧದಲ್ಲಿ ಅವಳೊಬ್ಬ ಚಂಡಿ ಚಾಮುಂಡಿ. ತಂದೆಯಂತೆಯೇ ವೈರಿ ಭಯಂಕರಿ ಆ ನಾರಿ.

## ಹೆಣ್ಣಿನೊಡನೆ ಹರಿಯ ಹೋರಾಟ

ನನ್ನ ಶಾರಂಗ ಬಿಲ್ಲಿನಿಂದ ಅನೇಕ ಪ್ರಾಣಾಂತಿಕ ಬಾಣಗಳನ್ನು ಗುರಿಯಿಟ್ಟು ನಾನು ತೂರಿದೆ. ಅವೆಲ್ಲವುಗಳನ್ನು ನಡುದಾರಿಯಲ್ಲಿಯೇ ಮುರಿದು ಹಾಕಿದಳು ಆ ಮುರಕುಮಾರಿ. ನನ್ನ ಖಡ್ಗಪಾಶ, ಬಾಣ ಎಲ್ಲವೂ ಮಿಂಚಿನ ವೇಗದಿಂದ ರಣಾಂಗಣದಲ್ಲಿ ಸಂಚರಿಸುವ ಆ ದೈತ್ಯಕನ್ಯೆಗೆ ತಾಕಲಿಲ್ಲ. ನನ್ನ ಶಸ್ತ್ರಾಸ್ತ್ರಗಳೆಲ್ಲವೂ ಅವಳ ಮುಂದೆ ವ್ಯರ್ಥವಾದವು. ರೌದ್ರ ಕಾಳಿಯಂತೆ ಆ ರಣರಂಗದಲ್ಲಿ ಆ ದೈತ್ಯಕನ್ಯೆಯು ಮೃತ್ಯುಕನ್ಯೆಯಾಗಿ ನನ್ನ ಮೇಲೆ ಪ್ರಾಣಾಂತಿಕ ಆಯುಧಗಳನ್ನು ಎಸೆಯುತ್ತಲೇ ಇದ್ದಳು. ಆಗ ನಾನು 'ಇವಳು ನಾರಿಯಲ್ಲ ಮಾರಿ' ಎಂದು ನಿರ್ಧರಿಸಿ ಬೇರಾವ ಉಪಾಯ ಕಾಣದೆ, ಕೊನೆಗೆ ನನ್ನ ಬ್ರಹ್ಮಾಸ್ತ್ರವಾದ ಸುದರ್ಶನ ಚಕ್ರವನ್ನೇ ಎತ್ತಿದೆ. ಆಗ ಒಮ್ಮಿಂದೊಮ್ಮಿಗೇ ನನ್ನ ಕಣ್ಣೆದುರು ಕಾಮಾಖ್ಯಾದೇವಿಯು ಪ್ರಕಟವಾದಳು. ಹಾಗೂ ನನಗೆ ಕೈಮುಗಿದು ಕೇಳಿಕೊಂಡಳು.

**ಕಾಮಾಖ್ಯಾದೇವಿ:-** ಪುರುಷೋತ್ತಮಾ! ನೀನು ವೀರವರೇಣ್ಯಳಾದ ಈ ಶೂರ ಮಹಿಳಾಮಣಿಯನ್ನು ವಧಿಸಬೇಡ. ಇವಳಿಗೆ ಖಡ್ಗ ಹಾಗೂ ಗುರಾಣಿಗಳನ್ನು ಕೊಟ್ಟವಳು ನಾನು. ಅವೆರಡೂ ಅಚ್ಛೇದ್ಯ ಹಾಗೂ ಅಭೇದ್ಯ. ಅವರೆಡರಿಂದ ಈ ಕಾಮಕಟಂಕಟೆಯು ಅಜೇಯೆ ಹಾಗೂ ಅವಧ್ಯೆ. ಇವಳನ್ನು ಯಾರು ಕೊಲ್ಲಲೂ ಬಾರದು. ಗೆಲ್ಲಲೂ ಬಾರದು.

**ಕೃಷ್ಣ:-** ಕಾಮಾಖ್ಯಾದೇವಿಯ ಈ ಮಾತನ್ನು ಕೇಳಿ ನಾನು ನನ್ನ ಸುದರ್ಶನವನ್ನು ಕೆಳಗೆ ಇಟ್ಟೆ. ಮತ್ತು ಹೇಳಿದೆ. 'ದೇವಿ, ನಿನ್ನ ಮಾತು ನನಗೆ ಒಪ್ಪಿಗೆ. ಆದರೆ ನಾನಾಗಿ

ಯುದ್ಧ ವಿಮುಖವಾಗುವದಿಲ್ಲ. ನನ್ನ ಮೇಲೆ ಅವಳು ಯುದ್ಧೋದ್ಯತಳಾದರೆ ನಾನು ಅವಳನ್ನು ವಧಿಸದೇ ಇರಲಾರೆ. ಆದರೆ ಅವಳು ನಿನ್ನ ಸಲಹೆಯಂತೆ ಯುದ್ಧದಿಂದ ನಿವೃತ್ತಳಾದರೆ, ನಾನು ಅವಳ ಮೇಲೆ ಕೈ ಮಾಡುವದಿಲ್ಲ. ನನ್ನ ಸುದರ್ಶನ ಚಕ್ರವನ್ನು ಪ್ರಯೋಗಿಸುವದಿಲ್ಲ. ಆದ್ದರಿಂದ ಮೊದಲು ಅವಳು ಶಸ್ತ್ರವನ್ನು ಕೆಳಗಿಳಿಸಲಿ. ಯುದ್ಧದಿಂದ ಪರಾಙ್ಮುಖಳಾಗಲಿ. ಅನಂತರ ನಾನು ಸಮರದಿಂದ ವಿಮುಖನಾಗುತ್ತೇನೆ. ನಿನ್ನ ವರದಂತೆ ಅವಳು ಅವಧ್ಯಳಾಗಿಯೇ ಉಳಿಯಲಿ.''

## ಕಾಮಾಖ್ಯಾದೇವಿಯ ಕಳಕಳಿಯ ಉಪದೇಶ

ನನ್ನ ಮಾತನ್ನು ಕೇಳಿ ಕಾಮಾಖ್ಯಾದೇವಿಯು ಆ ಮುರ ಕುಮಾರಿಯ ಬಳಿಗೆ ಹೋದಳು. ಅವಳನ್ನು ಪ್ರೀತಿಯಿಂದ ಆಲಿಂಗಿಸಿಕೊಂಡು ನುಡಿದಳು. 'ಭದ್ರೆ, ನೀನು ಈಗಲೇ ಯುದ್ಧದಿಂದ ಹಿಂದಿರುಗು. ಈ ಕೃಷ್ಣ ಸಾಮಾನ್ಯ ಮಾನವನಲ್ಲ. ದೇವಾಧಿದೇವ ಸಾಕ್ಷಾತ್ ಲಕ್ಷ್ಮೀಪತಿ ನಾರಾಯಣ. ಇವನನ್ನು ಎದುರಿಸಿ ಯಾರೂ ಗೆಲ್ಲಲಾರರು. ಯುದ್ಧದಲ್ಲಿ ಇವನು ದುರ್ಜಯ. ಮೃತ್ಯುದೇವತೆಯು ಕೂಡ ಇವನನ್ನು ಕಂಡು ಹೆದರುವದು. ಇವನನ್ನು ಗೆಲ್ಲುವ ಅಥವಾ ಕೊಲ್ಲುವ ವ್ಯಕ್ತಿ ಹಿಂದೆಯೂ ಹುಟ್ಟಿಲ್ಲ, ಮುಂದೆಯೂ ಹುಟ್ಟುವದಿಲ್ಲ. ಹೆಚ್ಚೇನು? ಸಾಕ್ಷಾತ್ ಪರಶಿವನೂ ಕೂಡ ಇವನೊಡನೆ ಹೋರಾಡಿ ಗೆಲ್ಲಲಾರ. ಉಳಿದವರ ಪಾಡೇನು? ಮಗಳೇ, ನಾನು ನಿನಗೆ ಒಂದು ಹಿತವಚನ ಹೇಳುತ್ತೇನೆ ಕೇಳು.

ಶ್ರೀಕೃಷ್ಣನು ಮುಂದೆ ನಿನಗೆ ಒಂದು ರೀತಿಯಿಂದ ಮಾವನೇ ಆಗುವನು. ಇವನ ಸೋದರನಂತಿದ್ದ ಭೀಮಸೇನನ ಮಗನೇ ನಿನಗೆ ಭಾವೀಪತಿ. ನಿನ್ನ ಭಾವೀಮಾವನಾದ ಭೀಮನ ವ್ಯಕ್ತಿತ್ವವನ್ನು ರೂಪಿಸುವವನೇ ಈ ಶ್ರೀಕೃಷ್ಣ. ಇವನು ನಿನಗೆ ಮಾವನೇ ಇದ್ದಂತೆ. ಈ ನಿನ್ನ ಭಾವೀ ಶ್ವಶುರನನ್ನು ಈಗಲೇ ನೀನು ಆದರಿಸು. ಪೂಜಿಸು. ನೀನು ಈ ಕೃಷ್ಣನಿಂದ ಸಂಹರಿಸಲ್ಪಟ್ಟ ನಿನ್ನ ತಂದೆಯ ಬಗೆಗೆ ಶೋಕಮಾಡಬೇಡ. ಈ ಶ್ರೀಕೃಷ್ಣ ಸಾಕ್ಷಾತ್ ಪರಮಾತ್ಮ. ಇವನ ಕೈಯಿಂದ ಮರಣವೂ ಒಂದು ವರ. ಮಹಾಭಾಗ್ಯ. ನಿಮ್ಮ ತಂದೆಯ ಪೂರ್ವಪುಣ್ಯದಿಂದಲೇ ಸಾಕ್ಷಾತ್ ಶ್ರೀಹರಿಯ ಕೈಯಿಂದಲೇ ಅವನಿಗೆ ಮರಣ ಒದಗಿ ಬಂದಿದೆ. ಎಷ್ಟೋ ಜನರು ತಪಸ್ಸುಮಾಡಿ ಈ ಭಗವಂತನಲ್ಲಿ ವರ ಕೇಳಿದ್ದಾರೆ.

'ಸ್ವಾಮಿ, ನಿನ್ನ ಕೈಯಿಂದ ಬರಲಿ ನನಗೆ ಮರಣ. ನಿನ್ನ ಹಸ್ತಾಲಂಕಾರವಾದ ಸುದರ್ಶನ ಚಕ್ರದಿಂದ ನಮಗೆ ಮರಣವನ್ನು ಕರುಣಿಸು ಎಂದು. ಇಂಥ ಭಾಗ್ಯ ನಿಮ್ಮ ತಂದೆಗೆ ಸ್ವಯಂಪ್ರಾಪ್ತವಾಗಿದೆ. ಆದ್ದರಿಂದ ನಿಮ್ಮ ತಂದೆಯು ಈ ರಾಕ್ಷಸ ಜನ್ಮದಲ್ಲಿ ಮಾಡಿದ ಅನೇಕಾನೇಕ ಹಿಂಸಾಕೃತ್ಯ, ಅತ್ಯಾಚಾರ, ಅನ್ಯಾಯ, ಬ್ರಹ್ಮಹತ್ಯೆ, ಸುರಾಪಾನ, ಸ್ತ್ರೀಹತ್ಯೆ, ಶಿಶುಹತ್ಯೆ, ಧರ್ಮಧ್ವಂಸ, ಗೋಹತ್ಯೆ ಮುಂತಾದ ಅಸಂಖ್ಯ ಘೋರ ಪಾತಕಗಳಿಂದ ಮುಕ್ತನಾಗಿ ತಪೋಗಮ್ಯವಾದ ವೈಕುಂಠ ಲೋಕಕ್ಕೆ ಪ್ರಯಾಣ ಮಾಡಿದ್ದಾನೆ. ಮುಕ್ತಿಯನ್ನು ಹೊಂದಿ ಶಾಶ್ವತ ಆನಂದವನ್ನು ಪಡೆದಿದ್ದಾನೆ. ಪಾಪಿಷ್ಠನಾದ ನಿನ್ನ ತಂದೆಗೆ ಇಂತಹ ಯೋಗಿ ಲಭ್ಯವಾದ ಶ್ರೇಷ್ಠ ಸದ್ಗತಿಯನ್ನು ಕರುಣಿಸಿದ. ಶ್ರೀಕೃಷ್ಣನಿಗೆ ನೀನು ಎಷ್ಟು ಕೃತಜ್ಞಳಾದರೂ ಕಡಿಮೆಯೇ, ಪಾಪಕೂಪದಲ್ಲಿ ಬಿದ್ದು ಹೊರಳಾಡುವ ನರಕ ಯೋಗ್ಯನಾದ ನಿನ್ನ ತಂದೆಯನ್ನು ಯಮಯಾತನೆಯಿಂದ ತಪ್ಪಿಸಿ, ಅಧಃಪಾತದ ಪಾತಾಳದಿಂದ ಮೇಲೆತ್ತಿ ಸುಖದ ಶ್ವೇತದ್ವೀಪದಲ್ಲಿ ಒಯ್ದು ಕೂಡಿಸಿದ ಕೃಷ್ಣನ

ಉಪಕಾರವನ್ನು ನಿಮ್ಮ ದೈತ್ಯಕುಟುಂಬದವರೆಲ್ಲರೂ ನಿರಂತರವೂ ನೆನೆಯಬೇಕು. ಇವನ ಮೇಲಿನ ವೈರವನ್ನು ತ್ಯಜಿಸಿ ಭಕ್ತಿಯಿಂದ ಪೂಜಿಸಿ ಅವನ ಕ್ಷಮೆಯನ್ನು ಕೇಳಿ, ನಿತ್ಯವೂ ಅವನ ಚರಣಸ್ಮರಣೆಯನ್ನು ಮಾಡಿರಿ.''

ಕಾಮಾಖ್ಯಾದೇವಿಯ ಈ ಹಿತೋಪದೇಶವನ್ನು ಕೇಳಿ ಕಾಮಕಟಂಕಟೆಯು ತನ್ನ ಶಸ್ತ್ರವನ್ನು ಕೆಳಗೆ ಇಟ್ಟಳು. ಸಮರ ಭಯಂಕರಿಯೂ ವೈರಿ ಪ್ರಳಯಂಕರಿಯೂ ಆದ ಅವಳು ಕೂಡಲೇ ತನ್ನ ರಣಭೈರವಿಯ ಆ ಭೀಕರ ಸ್ವರೂಪವನ್ನು ಬಿಟ್ಟು ಸೌಮ್ಯಳಾಗಿ ವಿನಯದಿಂದ ಅವನತಳಾಗಿ ಭಕ್ತಿ ನಮ್ರತೆಯಿಂದ, ನನ್ನ ಕಡೆಗೆ ಬಂದು ಬಾಗಿ ನಮಸ್ಕರಿಸಿದಳು. ತನ್ನ ಧೃಷ್ಟತೆಯನ್ನು ಹಾಗೂ ದುಷ್ಟತೆಯನ್ನು ಕ್ಷಮಿಸಬೇಕು ಎಂದು ವಿನಯದಿಂದ ಕೇಳಿಕೊಂಡಳು. ಕಾಮಾಖ್ಯಾದೇವಿಯ ಮಾತನ್ನು ಕೇಳಿ, ನನಗೆ ಆಗಲೇ ಅವಳ ಮೇಲೆ ಸೊಸೆಯ ಸ್ನೇಹ ಮೂಡಲು ಶುರುವಾಯಿತು. ಅಂತಃಕರಣದಿಂದ ನಾನು ಅವಳನ್ನು ಆಶೀರ್ವದಿಸಿ ಸ್ನೇಹದಿಂದ ನುಡಿದೆ. ''ಮಗಳೇ! ನೀನು ಇದೇ ನಗರದಲ್ಲಿ ನೆಲಿಸು. ಭಗವಂತನು ಇಲ್ಲಿ ನಿನ್ನ ಯೋಗಕ್ಷೇಮವನ್ನು ನೋಡಿಕೊಳ್ಳುವನು. ನನ್ನ ಭಕ್ತನಾದ ಹಾಗೂ ಪ್ರಾಣಮಿತ್ರನಾದ ಬಂಧು ಬಲಭೀಮನ ವೀರಾಗ್ರಣಿ ಪುತ್ರ ಘಟೋತ್ಕಚನು ನಿನ್ನನ್ನು ಮದುವೆ ಯಾಗುವನು.'' ಹೀಗೆ ಹೇಳಿ ಆ ಮುರುಪುತ್ರಿಯಾದ ಕಾಮಕಟಂಕಟೆಯನ್ನು ಹಾಗೂ ಕಾಮಾಖ್ಯಾದೇವಿಯನ್ನು ನಿರೋಪಕೊಟ್ಟು ಕಳಿಸಿದೆ. ಅಲ್ಲಿಂದ ನಾನು ನರಕಾಸುರನನ್ನು ಸಂಹರಿಸಿ ಸ್ವರ್ಗಲೋಕಕ್ಕೆ ಹೋಗಿ ಅದಿತಿದೇವಿಗೆ ಕರ್ಣಕುಂಡಲ ನೀಡಿ, ನಂದನವನದ ಪಾರಿಜಾತ ವೃಕ್ಷವನ್ನು ಕಿತ್ತಿತಂದು ದ್ವಾರಕೆಯಲ್ಲಿ ಸತ್ಯಭಾಮೆಯ ಮನೆಯ ಅಂಗಳದಲ್ಲಿ ನೆಟ್ಟು, ಇದೀಗ ನಿಮ್ಮ ಭೆಟ್ಟಿಗೆಂದೇ ಈ ಇಂದ್ರಪ್ರಸ್ಥ ನಗರಕ್ಕೆ ಬಂದಿದ್ದೇನೆ. ಈಗಲೇ ನಾನು ನೆನೆದಂತೆಯೇ ಎಲ್ಲವೂ ನಡೆಯುತ್ತಿದೆ.

ಇದೇ ಕಾಲದಲ್ಲಿ ಇಲ್ಲಿಗೆ ಈ ಘಟೋತ್ಕಚನ ಆಗಮನ. ಈ ಸಭೆಯಲ್ಲಿ ಅವನ ವಿನಯ ಪ್ರದರ್ಶನ ಪಿತ್ರಾಜ್ಞಾ ಪರಿಪಾಲನದ ಉತ್ಸಾಹ, ಅವನಿಗೆ ಮದುವೆ ಮಾಡಬೇಕೆಂದು ಅವನಿಗೆ ಕನ್ಯಾನ್ವೇಷಣ. ಅದಕ್ಕಾಗಿ ನಿನ್ನ ಪ್ರಾರ್ಥನೆ ಎಲ್ಲವೂ ಕೂಡಿ ಬಂದಿದೆ ಈ ನಿನ್ನ ಭೀಮಕುಮಾರನಿಗೆ. ಇವರಿಬ್ಬರ ವಿವಾಹವು ದೈವ ಸಂಕಲ್ಪಿತ, ಪೂರ್ವ ನಿಯೋಜಿತ. ಆದುದರಿಂದ ಈ ಘಟೋತ್ಕಚನು ಆ ಕಾಮ ಕಟಂಕಟೆಯನ್ನು ಮದುವೆಯಾಗಲಿ.

## ಮಾರಿಯನ್ನು ಗೆಲ್ಲಲು ಮೂರು ಪಣಗಳು

ಆದರೆ, ಇಲ್ಲಿ ಒಂದು ವಿಚಾರ. ಆ ಮುರನ ಮಗಳು ಸಾಮಾನ್ಯ ಕನ್ಯೆಯಲ್ಲ. ತನ್ನ ವಿವಾಹಕ್ಕೆ ಅವಳು ಘೋರ ಪಣವನ್ನು ಇಟ್ಟಿದ್ದಾಳೆ. ಅವಳನ್ನು ಮದುವೆಯಾಗ ಬಯಸುವವರು ಅವಳ ಮೂರು ಪ್ರತಿಜ್ಞೆಯನ್ನು ಪೂರೈಸಬೇಕು. ಒಂದನೆಯದಾಗಿ, ಅವಳು ಕೇಳುವ ಎಲ್ಲ ಪ್ರಶ್ನೆಗಳಿಗೂ ಸಮಾಧಾನಕರವಾಗಿ ಉತ್ತರ ನೀಡಿ ವಾದದಲ್ಲಿ ಮೊದಲು ಅವಳನ್ನು ಗೆಲ್ಲಬೇಕು. ಅನಂತರ ಯುದ್ಧದಲ್ಲಿ ಅವಳೊಡನೆ ಹೋರಾಡಿ ಅವಳನ್ನು ಗೆಲ್ಲಬೇಕು. ಮತ್ತು ವಿದ್ಯೆ, ಬುದ್ಧಿ, ಯುಕ್ತಿ, ಶಕ್ತಿ, ರೂಪ, ಗುಣ, ಸೌಂದರ್ಯ ಧೈರ್ಯ ಚಾತುರ್ಯ ಮುಂತಾದ ಎಲ್ಲ ಗುಣಗಳಲ್ಲಿಯೂ ಅವಳಿಗಿಂತ ಶ್ರೇಷ್ಠನಾಗಿರಬೇಕು. ಈ ಮೂರು ಪಣಗಳಲ್ಲಿ ತನ್ನನ್ನು ಗೆದ್ದವನನ್ನು ಮದುವೆಯಾಗುವುದಾಗಿ ಪ್ರತಿಜ್ಞೆ ಗೈದಿದ್ದಾಳೆ. ಶೌರ್ಯದಂತೆ, ಅವಳ ಸೌಂದರ್ಯವೂ ಕೂಡ ಆಕರ್ಷಕ ಮತ್ತು ಉನ್ಮಾದಕ

ಆಗಿದೆ. ಅವಳ ರೂಪರಾಶಿಯನ್ನು ಕಂಡೇ ಬೆಕ್ಕಸ ಬೆರಗಾಗಿ ಹೋಗಿದ್ದಾರೆ ಅನೇಕ ರಾಜಕುಮಾರರು. ಅವಳ ಸೌಂದರ್ಯ ಲೋಭದಿಂದ ಅವಳನ್ನು ವರಿಸಬೇಕೆಂದು ಆಶೆಯಿಂದ ಎಷ್ಟೋ ದೈತ್ಯಯುವಕರು ಅಲ್ಲಿಗೆ ಬಂದು ಅವಳೊಡನೆ ಹೋರಾಡಿ ಧಾರಾತೀರ್ಥದಲ್ಲಿ ಧರಾಶಾಯಿಗಳಾಗಿದ್ದಾರೆ. ಅವಳ ಕೈಯಲ್ಲಿಯ ಖಡ್ಗವು, ಅನೇಕ ರಾಜಕುಮಾರರ ಬಿಸಿ ನೆತ್ತರದ ರುಚಿನೋಡಿದೆ. ಇಂಥ ಶೂರಳೂ, ಸುಂದರಳೂ, ರೂಪಸಿಯೂ ರಣರಂಗರಸಿಕಳೂ ಆದ ರಮಣಿಯನ್ನು ವರಿಸಬೇಕೆಂದರೆ, ಘಟೋತ್ಕಚನೇ ಅಲ್ಲಿಗೆ ಹೋಗಲಿ, ಅವಳನ್ನು ಗೆಲ್ಲಲಿ, ವೀರ್ಯಶುಲ್ಕಳಾದ ಆ ವೀರ ಕನ್ಯಾಮಣಿಯನ್ನು ಸ್ವಯಂವರದಲ್ಲಿ ಗೆದ್ದು ತಂದು ವಿವಾಹವಾಗಲಿ.

## ಹೆಣ್ಣಿಗಾಗಿ ಗಂಡು ಗಂಡಾಂತರಕ್ಕೆ ಗುರಿಯಾಗಬೇಕೆ?

**ಧರ್ಮರಾಜ:-** ಪ್ರಭು! ಇಷ್ಟು ಸಾಹಸ ಮಾಡಿ ಅಂಥ ದೈತ್ಯ ಕನ್ಯೆಯನ್ನೇ ನನ್ನ ಮಗ ಏಕೆ ವಿವಾಹವಾಗಬೇಕು? ಆ ಒಂದು ಕ್ರೂರ ಹೆಣ್ಣಿಗಾಗಿ, ನಮ್ಮ ಘಟೋತ್ಕಚನ ಒಂದು ಜೀವನವನ್ನೇ ಗಂಡಾಂತರದಲ್ಲಿ ನೂಕಬೇಕೆ? ಹಾಲು ಎಷ್ಟೇ ರುಚಿಯಿದ್ದರೂ ಅದರಲ್ಲಿ ವಿಷ ಬೆರೆಸಿದರೆ, ಅದು ವಿಷವೇ ಸರಿ. ಅದರಂತೆ ನೀನು ಹೇಳಿದ ಮುರಕನ್ಯೆ ಕಾಮಕಟಂಕಟೆಯಲ್ಲಿ ಎಷ್ಟೇ ಸೌಂದರ್ಯವಿದ್ದರೂ ಇಂಥ ಘೋರ, ಕ್ರೌರ್ಯ, ಶೌರ್ಯಗಳಿದ್ದುದರಿಂದ ಹೆಡೆಯಲ್ಲಿ ರತ್ನವಿರುವ ಹಾವಿನಂತೆ ಅವಳನ್ನು ಬಿಟ್ಟುಬಿಡುವುದೇ ಒಳ್ಳೆಯದು. ದೇಶದಲ್ಲಿ ಕನ್ಯೆಗಳಿಗೆ ಕೊರತೆಯಿಲ್ಲ. ಬೇಡಿದಂಥ, ಬಯಸಿದಂಥ, ಕನ್ಯೆಗಳ ಸರಮಾಲೆಯನ್ನೇ ನಮ್ಮ ಈ ಸತ್ಪುತ್ರನಿಗೆ ಕಟ್ಟಬಹುದು. ಈ ದುಸ್ಸಾಹಸ ಮಾಡಿ ಆ ದೈತ್ಯ ಕುಮಾರಿಯನ್ನು ತರುವುದೂ ಬೇಡ; ಈ ನಮ್ಮ ಘಟೋತ್ಕಚನು ಆ ಕನ್ಯೆಗಾಗಿ ಅವಳು ಹೇಳಿದ ಮೂರು ಪ್ರತಿಜ್ಞೆಯ ಅಗ್ನಿದಿವ್ಯವನ್ನು ಮಾಡುವುದೂ ಬೇಡ.

**ಭೀಮಸೇನ:-** ಅಣ್ಣ ಧರ್ಮರಾಜ, ಸ್ವಾಮಿ ಶ್ರೀಕೃಷ್ಣ ಸತ್ಯಸಂಕಲ್ಪ. ಅವನ ಆದೇಶದಂತೆ ನಡೆಯುವದೇ ನಮ್ಮ ಕರ್ತವ್ಯ. ಅವನ ಆಜ್ಞೆ, ನಮ್ಮ ಕುಮಾರನಿಗೆ ಶ್ರೇಯಸ್ಸನ್ನು ನಮ್ಮೆಲ್ಲರಿಗೂ ಕೀರ್ತಿಯನ್ನು ಉಂಟುಮಾಡುವಲ್ಲಿ ಸಂದೇಹವಿಲ್ಲ. ಮೇಲಾಗಿ ಈ ನನ್ನ ಪುತ್ರನಾದ ಘಟೋತ್ಕಚನು ಕ್ಷತ್ರಿಯ ರಾಜ ಕುಮಾರನಲ್ಲವೆ? ಸಾಹಸೈಕರಸಿಕರಾದ ಕ್ಷತ್ರಿಯ ಪುತ್ರರು ತಂದೆ ತಾಯಿ ಗೊತ್ತು ಮಾಡಿದ ಕನ್ಯೆಯನ್ನು ಮದುವೆಯಾದರೆ ಏನು ವೈಶಿಷ್ಟ್ಯ? ಅವರು ಸಾಹಸಗೈದು ಕನ್ಯೆಯ ಪ್ರತಿಜ್ಞೆಗಳನ್ನೆಲ್ಲ ಪೂರೈಸಿ ತನ್ನ ಪರಾಕ್ರಮದಿಂದ ವೀರ್ಯಶುಲ್ಕಳಾದ ಶೂರ ಕುಮಾರಿಯನ್ನು ಸ್ವಯಂವರದಲ್ಲಿ ಗೆದ್ದು ವಿವಾಹಬದ್ಧರಾಗುವದೇ ಶ್ರೇಯಸ್ಕರ. ಮತ್ತು ಉಬಯತರಿಗೂ ಯಶಸ್ಕರ. ಈ ಘಟೋತ್ಕಚನು ನನ್ನ ಮಗನಲ್ಲವೇ? ನನ್ನಂತೆಯೇ ವೀರ. ಕಕ್ಕ ಅರ್ಜುನನಂತೆಯೇ ಶೂರ. ಎಂಥ ಪಣ ಒಡ್ಡಿದರೂ ಗೆದ್ದು ತನ್ನ ಶೌರ್ಯದಿಂದ ಸ್ವಯಂವರದಲ್ಲಿ ಯಶಸ್ವಿಯಾಗಿ ವೀರ್ಯಶುಲ್ಕಳಾದ ಕನ್ಯಾಮಣಿಯನ್ನು ಸೆಳೆದು ತರಬಲ್ಲ ಎಂಬ ವಿಶ್ವಾಸ ನನಗಿದೆ. ನನ್ನ ಹಾಗೂ ಈ ಕೃಷ್ಣಪ್ರಭುವಿನ ಅಪೇಕ್ಷೆಯನ್ನು ಈ ನನ್ನ ತರುಣ ಮಗನು ಪೂರ್ಣಗೊಳಿಸಲಿ.

**ಅರ್ಜುನ:-** ಕಾಮಾಖ್ಯಾದೇವಿಯು ಮುರ ಪುತ್ರಿಯಾದ ಮೌರ್ವೀ, ಅಥವಾ ಕಾಮಕಟಂಕಟೆಗೆ ವರ ನೀಡಿದ್ದಾಳಷ್ಟೆ? ಅಂದ ಬಳಿಕ ಸಂದೇಹವೇಕೆ? ಮೇಲೆ ಶ್ರೀಕೃಷ್ಣನೂ ಅಪ್ಪಣೆ ನೀಡಿದ್ದಾನೆ. ಇನ್ನು ವಿಚಾರವೇ ಬೇಡ. ಈಗಲೇ ಘಟೋತ್ಕಚನು ಹೊರಡಲಿ. ಆ ಕನ್ಯಾಮಣಿಯನ್ನು ಗೆದ್ದು ತರಲಿ.

## ಕನ್ಯೆಯ ಆಯ್ಕೆಯಲ್ಲಿ ವರನಿಗೆ ಅಧಿಕಾರ

**ಕೃಷ್ಣ:-** ಅರ್ಜುನ, ನನಗೆ ನಿನ್ನ ಮಾತು ಹಾಗೂ ಭೀಮಸೇನನ ಮಾತು ಎರಡೂ ಒಪ್ಪಿಗೆಯಾಗಿವೆ. ಧರ್ಮರಾಜನ ಮಾತು ಕೂಡ ಈ ವಿಷಯದಲ್ಲಿ ವಿಚಾರಣೀಯ. ಆದರೆ ಇಲ್ಲಿ ನಾವು ಒಂದು ಮುಖ್ಯವಾದ ಅಂಶವನ್ನೇ ಮರೆತುಬಿಟ್ಟಿದ್ದೇವೆ. ಮದುವೆಯಾಗುವವ ಘಟೋತ್ಕಚ ಅವನ ನಿರ್ಣಯವೇ ಇಲ್ಲಿ ಕೊನೆಯದು. ಅವನು ಸಾಹಸಪ್ರಿಯನಾಗಿದ್ದರೆ, ಭೀಮಾರ್ಜುನರು ಹೇಳಿದಂತೆ ಮಾಡಲಿ. ಶಾಂತಿ, ಸಂತಸಗಳ ನಿಶ್ಚಿಂತ ಜೀವನವನ್ನು ಬಾಳಬೇಕೆಂದು ಮಾಡಿದ್ದರೆ, ಧರ್ಮರಾಜ ಹೇಳಿದಂತೆ ಮಾಡಲಿ. ಆದರೆ, ಕ್ಷತ್ರಿಯರ ಪಥ ಯಾವಾಗಲೂ ಶೌರ್ಯ ಸಾಹಸಗಳ ಕಂಟಕಾಕೀರ್ಣ. ಅವನ ಇಚ್ಛೆಗೆ ಬಂದ ದಾರಿಯನ್ನು ಆಯ್ಕೆ ಮಾಡಲು ಅವನಿಗೆ ಸಂಪೂರ್ಣ ಸ್ವಾತಂತ್ರ್ಯ. ಘಟೋತ್ಕಚನೇ ನಿನ್ನ ವಿಚಾರ ಏನು ಎಂಬುದನ್ನು ತಿಳಿಸು.

ಶ್ರೀಕೃಷ್ಣ ಪರಮಾತ್ಮನ ವಚನವನ್ನು ಕೇಳಿ ಆ ಘಟೋತ್ಕಚನು ಆ ಭಗವಂತನಿಗೆ ವಂದಿಸಿ ದಿಟ್ಟತನದಿಂದ ಧೀರಧ್ವನಿಯಲ್ಲಿ ನುಡಿದ.

**ಘಟೋತ್ಕಚ:-** ''ನಿಮ್ಮಂಥ ಹಿರಿಯರ ಎದುರು ನನ್ನನ್ನು ನಾನು ಹೊಗಳಿಕೊಳ್ಳುವುದು ವಿಹಿತವಲ್ಲ. ಸೂರ್ಯನ ಕಿರಣಗಳು ಸ್ವಯಂ ಹೇಳಿಕೊಂಡು ಎಂದೂ ಪ್ರಕಾಶಕ್ಕೆ ಬರುವದಿಲ್ಲ. ಅದರಂತೆ ಸಜ್ಜನರ ಸದ್ಗುಣಗಳು ಅವರ ಹೇಳಿಕೆಯಿಂದ ಪ್ರಕಾಶಕ್ಕೆ ಬರುವದಿಲ್ಲ. ಅವರ ಕೃತಿಗಳಿಂದಲೇ ಅವು ವ್ಯಕ್ತವಾಗುತ್ತವೆ. ನಾನು ನನ್ನ ತಂದೆ ಹಾಗೂ ಕಕ್ಕಂದಿರು ನಾಚಿಕೆಯಿಂದ ತಲೆತಗ್ಗಿಸುವಂಥ ಅನುಚಿತ ಕಾರ್ಯವನ್ನು ಎಂದೂ ಮಾಡುವದಿಲ್ಲ. ಇಷ್ಟು ಮಾತ್ರ ನಾನು ನಿಮಗೆ ಆಶ್ವಾಸನೆ ನೀಡಬಲ್ಲೆ. ನನ್ನ ಮೇಲೆ ಭಗವನ್, ತಮ್ಮ ಪೂರ್ಣ ಅನುಗ್ರಹವಿರಲಿ. ಹಾಗೂ ನಮ್ಮ ತಂದೆ ಮತ್ತು ಕಕ್ಕಂದಿರ ಆಶೀರ್ವಾದದ ಭೀಮರಕ್ಷೆ ನನಗಿರಲಿ. ನಿಮ್ಮೆಲ್ಲರಿಗೂ ನನ್ನ ಸಾಷ್ಟಾಂಗ ನಮಸ್ಕಾರಗಳು.''

ಘಟೋತ್ಕಚನ ವೀರವಿಕ್ರಮದಿಂದ ಶೋಭಿಸುವ ಈ ಸಮಯೋಚಿತ ವಚನ ವಿನ್ಯಾಸವನ್ನು ಕೇಳಿ ಪ್ರೀತನಾದ ಶ್ರೀಕೃಷ್ಣ. ತನ್ನ ಪಾದಾರವಿಂದಗಳಲ್ಲಿ ಪ್ರಣತನಾದ ಆ ಘಟೋತ್ಕಚನನ್ನು ಎತ್ತಿ ಹಿಡಿದು ಹೃದಯತುಂಬ ಹರಸಿ ನಸುನಗುತ್ತ ನುಡಿದ ''ವತ್ಸ! ವಿಜಯೀಭವ. ಗೆಲವು ನಿನ್ನ ಬೆನ್ನಿಗಿರಲಿ. ನೀನು ಎಲ್ಲಿಯೇ ಹೋದರೂ ನನ್ನನ್ನು ಮರೆಯಬೇಡ. ಕೃಷ್ಣನ ಸ್ಮರಣವನ್ನು ನಿನ್ನ ಸರ್ವಕಾರ್ಯ ಕಲಾಪಗಳಲ್ಲಿಯೂ ತಪ್ಪದೇ ಮಾಡುತ್ತಲಿರು ನಾನು ನಿನ್ನ ಕುತ್ತು ಆಪತ್ತುಗಳನ್ನೆಲ್ಲ ಪರಿಹರಿಸಿ ಉತ್ತರೋತ್ತರ ನಿನಗೆ ಕಲ್ಯಾಣವಾಗುವಂತೆ ಮಾಡುತ್ತೇನೆ.''

ಹೀಗೆ ಆ ಘಟೋತ್ಕಚನು ಶ್ರೀಕೃಷ್ಣ ಹಾಗೂ ಪಾಂಡವರ ಅನುಮತಿ ಹಾಗೂ ಆಶೀರ್ವಾದ ಪಡೆದುಕೊಂಡು, ತನ್ನ ಅನುಚರರಾದ ಸೂರ್ಯಾಕ್ಷ, ಬಾಲಾಕ್ಷ, ಮಹೋದರ ಎಂಬ ಮೂವರು ಮಿತ್ರರೊಡನೆ ಅಲ್ಲಿಂದ ಹೊರಟು ಆಕಾಶಮಾರ್ಗದಿಂದ ಪ್ರಯಾಣ ಬೆಳೆಸಿದ. ಆಗಸದ ಅಂಗಣದಲ್ಲಿ ಗರುಡವೇಗದಿಂದ ಉಡ್ಡಾಣ ಮಾಡುತ್ತ ಆ ನಾಲ್ವರೂ ವೀರಕುವರರು ಪ್ರಾಗ್ಜ್ಯೋತಿಷಪುರಕ್ಕೆ ಬಂದಿಳಿದರು.

## ಘಟೋತ್ಕಚನ ಧೈರ್ಯ, ದಾಸಿಯ ಚಾತುರ್ಯ

ಆ ಪಟ್ಟಣದ ಹೊರಗಡೆ ಒಂದು ದಿವ್ಯವಾದ ಸುವರ್ಣಮಂದಿರ. ಅದರ ಸುತ್ತಲೂ ಹಸಿರೆಲೆ ಹೊಂದಳಿರಿನ ಅನೇಕ ಸುಂದರ ಹಂದರಗಳು. ಹಾಗೂ ಬಗೆಬಗೆಯ ಮರಬಳ್ಳಿಗಳಿಂದ ಶೋಭಿಸುವ ಹೂದೋಟ. ಆ ಪುಷ್ಪೋದ್ಯಾನದ ಮಧ್ಯದಲ್ಲಿ

ಗಗನಗೋಪುರವನ್ನು ಮುಟ್ಟುವ ಒಂದು ಭವ್ಯಭವನವು ಒಂದು ಸಾವಿರ ಅಂತಸ್ತುಗಳುಳ್ಳ ಮಹಾಮಂದಿರವಾಗಿ ಮೇರುಶಿಖರದಂತೆ ಶೋಭಿಸುತ್ತಿತ್ತು. ಘಟೋತ್ಕಚನು ತುಂಗೋತ್ತುಂಗ ಅಂಬರಚುಂಬಿಯಾದ ಈ ಮಹಾಪ್ರಾಸಾದವನ್ನು ಕಂಡು ವಿಸ್ಮಯಸ್ತಿಮಿತನಾಗಿ ಅದರ ಬಳಿಗೆ ಹೋದ. ಆ ಭವ್ಯಭವನದ ಬಾಗಿಲ ಬಳಿಯಲ್ಲಿಯೇ ನಿಂತಿದ್ದಳು ಓರ್ವ ನವಯೌವನದ ಷೋಡಶಿ. 'ಕರುಣಪ್ರಾವರಣಾ' ಎಂದು ಅವಳ ಹೆಸರು. ಅವಳಿದ್ದಲ್ಲಿಗೆ ಬಂದ ಘಟೋತ್ಕಚ. ಧೈರ್ಯದಿಂದ ಕೇಳಿದ ಆ ಮಹಿಳಾ ಮಣಿಯನ್ನು, ''ಶುಭಾಂಗೀ, ಮುರಾಸುರನ ಮಗಳು ಮೌರ್ವಿ ಎಂದು ಇರುವಳಲ್ಲವೆ? ಅವಳು ಇರುವ ಸ್ಥಾನ ಯಾವುದು? ನಾನು ದೂರ ದೇಶದಿಂದ ಬಂದಿದ್ದೇನೆ. ನಾನು ಆ ದೈತ್ಯದುಹಿತೆಯನ್ನು ಬಯಸಿ ಬಂದ ಅತಿಥಿ, ನನಗೆ ಅವಳನ್ನು ಕಾಣಬೇಕಾಗಿದೆ.''

## ತ್ರೇತೆಯ ರಾಮನೋ, ದ್ವಾಪರದ ಭೀಮನೋ?

ಹಿಡಿಂಬಾಕುಮಾರನ ಈ ದಿಟ್ಟತನದ ನುಡಿ ಕೇಳಿ ಆ ಮಹಾಮಂದಿರದ ದ್ವಾರದಲ್ಲಿ ನಿಂತ ಆ ದೈತ್ಯ ಮಹಿಳೆಯ ಧೈರ್ಯವೇ ಉಡುಗಿಹೋಯಿತು. ಅವಳು ಹೆದರಿ ಹೌಹಾರಿ ಘಟೋತ್ಕಚನಿಗೆ ಏನೂ ಉತ್ತರ ಕೊಡದೇ ತನ್ನ ಒಡತಿಯ ಬಳಿಗೆ ಓಡಿ ಹೋದಳು. ಮೇಲುಪ್ಪರಿಗೆಯಲ್ಲಿ ಹಂಸದುಪ್ಪಳದ ಹಾಸಿನಲ್ಲಿ ಆಸೀನಳಾದ ತನ್ನ ಒಡತಿಗೆ ತಿಳಿಸಿದಳು. 'ದೇವಿ, ನಿನ್ನ ಈ ಅರಮನೆಯ ಬಾಗಿಲಲ್ಲಿ ಓರ್ವ ತರುಣನು ಅತಿಥಿಯಾಗಿ ಬಂದಿದ್ದಾನೆ. ಅವನು ಒಳ್ಳೇ ಸ್ಫುರದ್ರೂಪಿ. ಬಂಗಾರದ ಬಣ್ಣ. ಹೊಳೆಯುವ ಕಣ್ಣು. ಚೆಲುವಿನ ನಿಲುವು. ಕಾಮನಿಗಿಂತ ಸುಂದರ. ಅವನ ಪೌರುಷಪ್ರಭಾವಿತವಾದ ದೇಹವನ್ನು ನೋಡಿದರೆ ತ್ರೇತಾಯುಗದ ರಾಮನೋ ದ್ವಾಪರಯುಗದ ಭೀಮನೋ ಎಂದು ಸಂದೇಹ ಬರುವಂತಿದೆ. ಇಂತಹ ಸರ್ವಾಂಗ ಸುಂದರ ಯುವಕನನ್ನು ನಾನಂತೂ ನನ್ನ ಜನ್ಮದಲ್ಲಿಯೇ ನೋಡಿಲ್ಲ. ರಾಜಕುಮಾರಿಯನ್ನು ಬಯಸಿ ಬಂದಿದ್ದೇನೆ ಎಂದು ಅವನ ಹೇಳಿಕೆ. ಅವನಿಗೆ ಏನು ಉತ್ತರ ಕೊಡಬೇಕು. ಅಪ್ಪಣೆ ಕೊಡು.

**ಮೌರ್ವಿ:-** ಸಖೀ, ಇದರಲ್ಲಿ ವಿಚಾರವೇಕೆ? ಬೇಗನೇ ಆ ತರುಣನನ್ನು ಕರೆದುಕೊಂಡು ಬಾ. ವಿಳಂಬ ಬೇಡ. ನನ್ನ ಪ್ರತಿಜ್ಞೆಯನ್ನು ದೇವೇಚ್ಛೆಯಿಂದ ಸ್ವಯಂ ಸಂಪ್ರಾಪ್ತನಾದ ಈ ತರುಣನು ಪೂರ್ತಿ ಮಾಡಬಹುದು.

ಕಾಮಕಟಂಕಟಾ ಎಂಬ ಹೆಸರುಳ್ಳ ಆ ಮೌರ್ವೀ ಬಾಲಿಕೆಯ ಮಾತನ್ನು ಆ ದ್ವಾರಪಾಲಕ ದಾಸಿಯು ಹೊರಗೆ ನಿಂತ ಘಟೋತ್ಕಚನ ಬಳಿ ಬಂದಳು. ಅವನ ಕಾಂತಿಕಮನೀಯವಾದ ಹೃಷ್ಟಪುಷ್ಟ ದೇಹವನ್ನು ಕಂಡು ಆ ದಾಸಿಗೆ ಅವನ ಬಗ್ಗೆ ಅಭಿಮಾನ ಮೂಡಿತ್ತು. ಅವಳು ನಸುನಗುತ್ತ ಘಟೋತ್ಕಚನಿಗೆ ಹೇಳಿದಳು-

''ಕಾಮೀ ಪುರುಷನೇ! ನೀನು ಈಗ ಪ್ರೇಮಾಂಧನಾಗಿ ಯಾರ ಭೇಟಿಗೆ ನಡೆದಿರುವೆಯೋ ಅವಳು ನಾರಿಯಲ್ಲ ಮಾರಿ. ಅವಳಿಗಾಗಿ ಅನೇಕ ಅಸುರ ರಾಜಕುಮಾರರು ಪ್ರಾಣಾರ್ಪಣೆ ಮಾಡಿದ್ದಾರೆ. ನೀನು ಕೂಡ ಈಗ ಅವರಂತೆ ಆ ಮೃತ್ಯುದೇವತೆಯ ಹತ್ತಿರ ಹೊರಟಿರುವೆ. ಆದರೆ ನಿನ್ನ ದೇಹದಲ್ಲಿ ಉಕ್ಕುವ ಈ ವೀರಶ್ರೀಯನ್ನು ಕಂಡರೆ ನೀನು ಅವಳನ್ನು ಗೆದ್ದು ವಿಜಯಿಶಾಲಿಯಾಗಿಯೇ ಬರುವೆ. ವಿಜಯಲಕ್ಷ್ಮಿಯನ್ನು ಅವಳೊಡನೆ ಕೈಹಿಡಿದೇ

**ಘಟೋತ್ಕಚ:-** ಸುಂದರೀ, ನಾನು ಹೇಳುವ ಕಥೆಯನ್ನು ಚಿತ್ತವಿಟ್ಟು ಕೇಳು. ಒಂದು ಊರಿನಲ್ಲಿ ಒಂದು ಗಂಡು, ಅದೇ ಊರಲ್ಲಿ ಮತ್ತೊಂದು ಹೆಣ್ಣು. ಅವರಿಬ್ಬರಿಗೂ ಮದುವೆ. ಅವರಿಗೊಂದು ಮಗು ಆಯಿತು. ಅವನೂ ದೊಡ್ಡವನಾದ. ಅವನು ಅವಿವೇಕಿ, ಮಹಾಕಾಮಿ. ಆ ಅವಿವೇಕಿಗೆ ಮದುವೆಯಾದ ಬಳಿಕ ಒಬ್ಬ ಮಗಳು ಹುಟ್ಟಿದಳು. ಆ ಮಗಳು ಹುಟ್ಟಿದ ಕೂಡಲೇ ಮಡದಿ ಸತ್ತು ಹೋದಳು. ಆ ಹೆಣ್ಣುಕೂಸು ಅನಾಥವಾಯಿತು. ಆ ಪರದೇಶಿ ಮಗುವನ್ನು ತಂದೆಯೇ ತಾಯಿಯಾಗಿ ಪಾಲಿಸಿದ. ತಂದೆಯಾಗಿ ಪೋಷಿಸಿದ. ಆ ಮಗಳು ಬೆಳೆದು ದೊಡ್ಡವಳಾದಳು. ಪ್ರಾಯ ಅವಳ ದೇಹದಲ್ಲಿ ಸೌಂದರ್ಯಕ್ಕೆ ಶ್ರೀಕಾರ ಹಾಕಿತು. ಅವಳ ಅಂಗಾಂಗಗಳಲ್ಲಿ ಚೆಲುವಿಕೆಯ ಸಹಸ್ರಾರವೇ ಅರಳಿ ನಿಂತಿತು. ಆ ತಂದೆ ಮಹಾಕಾಮುಕ, ಮಹಾಪಾಪಿ, ಅವಿವೇಕಿ, ಅನಾಚಾರಿ. ಒಂದು ದಿನ ಅವನು ಅವಳನ್ನು ಏಕಾಂತದಲ್ಲಿ ಕರೆದು ಹೇಳಿದ- ''ಪ್ರಿಯೆ, ನೀನು ನನ್ನ ಮಗಳಲ್ಲ. ನನ್ನ ನೆರೆಮನೆಯ ಓರ್ವ ಗೃಹಸ್ಥನ ಮನೆಯಲ್ಲಿ ಬೇರೆ ತಾಯಿ ತಂದೆಯಿಂದ ಹುಟ್ಟಿರುವೆ. ನಾನು ನಿನ್ನನ್ನು ಮಡದಿಯನ್ನಾಗಿ ಮಾಡಿಕೊಳ್ಳಬೇಕೆಂದು ಚಿಕ್ಕವಳಿದ್ದಾಗಲೇ ಪಾಲಿಸಿದೆ. ಬೆಳೆಸಿ ದೊಡ್ಡವಳನ್ನಾಗಿ ಮಾಡಿದೆ. ಈಗ ನೀನು ಪತ್ನಿಯಾಗಿ ನನ್ನೊಡನೆ ಬಾಳಬೇಕು.

ತನ್ನ ಹಿಂದಿನ ಇತಿಹಾಸ ಯಾವುದೂ ಗೊತ್ತಿಲ್ಲದ ಆ ಮುಗ್ಧೆಯು ಈ ಕಲಿಪುರುಷನ ಮಾತನ್ನು ನಿಜವೆಂದು ನಂಬಿದಳು. ಅವನನ್ನೇ ತನ್ನ ಪತಿಯೆಂದು ನಂಬಿದಳು. ಪತ್ನೀರೂಪದಿಂದ ಅವನೊಡನೆ ಬಾಳಿದಳು. ಅವಳಿಗೆ ಅವನಿಂದ ಒಂದು ಮಗಳು ಹುಟ್ಟಿತು. ಈಗ ನನ್ನ ಪ್ರಶ್ನೆಗೆ ಉತ್ತರ ಕೊಡು. ಆ ಹುಟ್ಟಿದ ಹೆಣ್ಣು ಆ ಕಲಿಪುರುಷನಿಗೆ ಮಗಳೋ ಅಥವಾ ಮೊಮ್ಮಗಳೋ? ನನ್ನ ಈ ಪ್ರಶ್ನೆಗೆ ಕೂಡಲೇ ಉತ್ತರಕೊಡು.

ಘಟೋತ್ಕಚನ ಈ ಪ್ರಶ್ನೆ ಕೇಳಿ ಕಾಮಕಟಂಕಟೆ ಬಹುವಿಧವಾಗಿ ವಿಚಾರಿಸಿದಳು ತಲೆಯನ್ನು ಕೆರೆದು ತುರುಸಿ ಆಲೋಚನೆಗೈದಳು. ಈ ಪಾಂಡುಪುತ್ರನ ವಿಕಟ ಪ್ರಶ್ನೆಗೆ ಏನು ಉತ್ತರ ಕೊಡಬೇಕೆಂಬುದೇ ಅವಳಿಗೆ ಹೊಳೆಯದಂತಾಯಿತು. ಅವಳು ಆ ಕಥೆಯ ತೊಡಕಿನ ಸಂದೇಹದ ಸುಳಿಯಲ್ಲಿ ಸಿಕ್ಕುಬಿದ್ದು ಉತ್ತರ ಕೊಡಲಾಗದೇ ಒದ್ದಾಡ ತೊಡಗಿದಳು. ಇದರಿಂದ ತಾನು ಇನ್ನು ಪಾರಾಗಲಾರೆ ಎಂದು ತೋರಿತು. ಕೂಡಲೇ ಅವಳು ತನ್ನ ಶಕ್ತಿಯ ಉಪಯೋಗ ಮಾಡಿಕೊಂಡು ಘಟೋತ್ಕಚನನ್ನು ಶಕ್ತಿಯ ಸಂಘರ್ಷದಲ್ಲಿ ಸೋಲಿಸಬೇಕೆಂದು ತನ್ನ ಅಂದೋಲಿಕೆಯ ತೂಗುಮಣೆಯಿಂದ ಎದ್ದುನಿಂತಳು.

ಕೈಯಲ್ಲಿ ಖಡ್ಗ ತೆಗೆಯಲು ಮುಂದೆ ಬಂದಾಗ ಘಟೋತ್ಕಚನು ವೇಗದಿಂದ ಅವಳ ಮೇಲೆ ಎರಗಿ ಎಡಗೈಯಿಂದ ಅವಳ ಕೂದಲನ್ನು ಹಿಡಿದು ನೆಲದ ಮೇಲೆ ಬೀಳಿಸಿದನು. ಅವಳು ಮಹಾಬಲಿಷ್ಠಳಾದ ಹೆಣ್ಣಾಗಿದ್ದುದರಿಂದ ಘಟೋತ್ಕಚನ ಕೈಯಿಂದ ತನ್ನ ಕೂದಲನ್ನು ಬಿಡಿಸಿಕೊಳ್ಳಲು ಕೊಸರಾಡಿದಳು. ಆದರೆ ವಜ್ರಮುಷ್ಟಿಯ ಆ ಭೀಮಕುಮಾರನು ತನ್ನ ಬಲಿಷ್ಠ ಬಾಹುವಿನಿಂದ ಅವಳನ್ನು ಕೆಳಗೆ ಹಾಕಿ. ಅವಳ ಕುತ್ತಿಗೆಯ ಮೇಲೆ ತನ್ನ ಎಡಗಾಲನ್ನು ಇಟ್ಟು, ಬಲಗೈಯಲ್ಲಿ ಖಡ್ಗವನ್ನು ಹಿಡಿದು ಅವಳ ಮೂಗನ್ನು ಕೊಯ್ಯಬೇಕೆಂದು ಪ್ರವೃತ್ತನಾದನು. ಕೆಳಗೆ ಬಿದ್ದ ಕಾಮಕಟಂಕಟೆಯು ಎಷ್ಟೇ ಜೋರಿನಿಂದ ಒದ್ದಾಡಿ, ಗುದ್ದಾಡಿ, ಎದ್ದುನಿಲ್ಲಲು ಪ್ರಯತ್ನಿಸಿದರೂ ಮಿಸುಕಾಡಲೂ ಕೂಡ ಆಗಲಿಲ್ಲ. ಆಗ ಅವಳು ನಿರಾಶಳಾಗಿ ನಮ್ರತೆಯ ಮಂದಸ್ವರದಲ್ಲಿ ಮೃದುವಾಗಿ ನುಡಿದಳು. ''ನಾಥ! ನಾನು ನಿನ್ನ ಪ್ರಶ್ನೆಯಿಂದ ಸೋತಿದ್ದೇನೆ. ನಿನ್ನ ಶಕ್ತಿಯಿಂದ

ಪರಾಜಿತಳಾಗಿದ್ದೇನೆ. ನಿನ್ನ ಶೌರ್ಯ, ಸೌಂದರ್ಯ, ರೂಪ, ಗುಣ ಎಲ್ಲದರಿಂದಲೂ ಅಪಕೃಷ್ಟಳೂ ಆಕೃಷ್ಟಳೂ ಆಗಿದ್ದೇನೆ. ನನ್ನ ಮೂರು ಪ್ರತಿಜ್ಞೆಗಳನ್ನು ಪೂರ್ತಿಗೊಳಿಸಿ ನೀನು ನನ್ನನ್ನು ಗೆದ್ದಿರುವೆ. ನಾನು ನಿನಗೆ ಸಂಪೂರ್ಣ ಸೋತಿರುವೆ. ನಿನಗೆ ನನ್ನ ನಮಸ್ಕಾರ. ದಯಮಾಡಿ ನನ್ನನ್ನು ಬಿಟ್ಟುಬಿಡು. ನಾನು ನಿನ್ನ ದಾಸಿ. ನಿನ್ನ ಆಜ್ಞೆಯನ್ನು ಪಾಲಿಸುವೆ. ನೀನು ಹೇಳಿದಂತೆ ಕೇಳುವೆ.

**ಘಟೋತ್ಕಚ:-** ಹಾಗಿದ್ದರೆ ನಾನು ನಿನ್ನನ್ನು ಈಗಲೇ ಬಿಟ್ಟುಬಿಡುತ್ತೇನೆ. ನೀನು ಈಗ ಸ್ವತಂತ್ರಳು. ನಿನಗೆ ಸರಿಕಂಡಂತೆ ಮಾಡಬಹುದು.

ಹೀಗೆ ಹೇಳಿ ಆ ಘಟೋತ್ಕಚನು ತನ್ನ ಕಾಲ ಕೆಳಗೆ ಅದಮಿ ಹಿಡಿದ ಆ ಕಾಮಕಟಂಕಟೆಯನ್ನು ತನ್ನ ಪಾದ ಹಿಂತೆಗೆದು ಬಿಟ್ಟುಬಿಟ್ಟನು.

## ಶೌರ್ಯಕ್ಕೆ ಸೋತು, ಸೌಂದರ್ಯಕ್ಕೆ ಓತು ಬಂದ ವೀರನಾರಿ

ಆಗ ಅವಳು ಮುಕ್ತಳಾಗಿ ಎದ್ದುಬಂದು ವಿನಯದಿಂದ ವಂದಿಸಿದಳು ಆ ವೀರಪುತ್ರನಿಗೆ. ಮತ್ತು ಬದ್ಧಾಂಜಲಿ ಪುಟಳಾಗಿ ವಿನಯದಿಂದ ವಿಜ್ಞಾಪಿಸಿದಳು.

**ಕಾಮಕಟಂಕಟಾ:-** ವೀರಪುರುಷ, ನಾನು ನಿಮ್ಮ ಪೌರುಷ ಹಾಗೂ ಪರಾಕ್ರಮ. ವಿನಯ, ವೀರ, ಕುಲೀನತೆ, ವೈದುಷ್ಯ ಮುಂತಾದ ಸದ್ಗುಣಗಳನ್ನೆಲ್ಲ ಮೊದಲೇ ಅರಿತಿದ್ದೇನೆ. ನಿಮ್ಮಂಥ ವೀರ ವಿಕ್ರಮದ ವರೇಣ್ಯರು ಮೂರು ಲೋಕದಲ್ಲಿಯೇ ಇಲ್ಲ ಎಂಬುದು ನನಗೆ ಚೆನ್ನಾಗಿ ಗೊತ್ತು. ಈಗ ಈ ಬ್ರಹ್ಮಾಂಡದಲ್ಲಿ ಇರುವ ರಾಕ್ಷಸರ ಸಂಖ್ಯೆ ಅರವತ್ತು ಕೋಟಿ. ಅವರೆಲ್ಲರಿಗೂ ನೀವು ಇಂದು ಅನಭಿಷಿಕ್ತ ಸಾಮ್ರಾಟ. ಈ ಮಾತನ್ನು ಮೊದಲೇ ನನಗೆ ಕಾಮಾಖ್ಯಾದೇವಿಯು ಅರುಹಿದ್ದಳು. ಅದೆಲ್ಲವೂ ಈಗ ನನಗೆ ಜ್ಞಾಪಕಕ್ಕೆ ಬರುತ್ತಿದೆ. ನನ್ನ ಈ ಎಲ್ಲ ಅಸುರ ಸಾಮ್ರಾಜ್ಯ, ಈ ಅರಮನೆ, ಇಲ್ಲಿಯ ಅಪಾರ ಸಂಪತ್ತು, ಈ ನನ್ನ ದೇಹ, ಆತ್ಮ. ನನ್ನ ಸಾರ ಸರ್ವಸ್ವ ಎಲ್ಲವೂ ಇಂದು ತಮ್ಮ ಅಡಿದಾವರೆಗಳಲ್ಲಿ ಸಮರ್ಪಿತ. ಇಂದಿನಿಂದ ನಾನು ತಮ್ಮ ಕಿಂಕರಿ. ಚರಣ ದಾಸಿ, ನೀವೇ ನನ್ನ ಸ್ವಾಮಿ, ನಾನು ನಿಮ್ಮ ಜೀವಪ್ರೇಮಿ, ತಮ್ಮ ಅಪ್ಪಣೆಯನ್ನು ತಲೆಯಲ್ಲಿ ಹೊತ್ತುನಡೆಯುವದಷ್ಟೇ ಈ ಸೇವಕಿಯ ಕಾರ್ಯ. ನಾನು ಈಗ ಏನು ಮಾಡಬೇಕು? ಆಜ್ಞೆ ನೀಡಿ. ಈ ತರಳೆಯ ಮೇಲೆ ಅನುಗ್ರಹ ಮಾಡಿರಿ.

**ಘಟೋತ್ಕಚ:-** ಮೌರ್ವಿ! ನೀನು ಹೇಳದ್ದೆಲ್ಲವೂ ನನಗೆ ಒಪ್ಪಿಗೆ. ನೀನೇನೋ ನನ್ನ ಕಿಂಕರಿ. ಆದರೆ ನಾನು ಇನ್ನೊಬ್ಬರ ಕಿಂಕರ. ಅರ್ಥಾತ್ ನನ್ನ ತಂದೆಯಾದ ಭೀಮನ ಕಿಂಕರ. ಆ ಬಲಭೀಮ ತನ್ನ ಅಣ್ಣ ಧರ್ಮರಾಜನ ಕಿಂಕರ. ಆ ಧರ್ಮರಾಜ ಹಾಗೂ ಎಲ್ಲ ಪಾಂಡವರು ಭಗವಾನ್ ಶ್ರೀಕೃಷ್ಣನ ಕಿಂಕರರು. ನನ್ನ ತಾಯಿ ಹಿಡಿಂಬಾದೇವಿ ತಂದೆ ಭೀಮಸೇನ. ಅವಶೆಲ್ಲರೂ ಬದುಕಿ ಇರುವಾಗ ಅವರನ್ನು ಕೇಳದೆ, ಅವರ ಅಪ್ಪಣೆ ಪಡೆಯದೆ, ನಾನು ನಿನ್ನನ್ನು ಹೇಗೆ ಒಪ್ಪಿಕೊಳ್ಳಲಿ? ನನ್ನ ಎಲ್ಲ ಕಾರ್ಯಗಳಿಗೂ ನನ್ನ ಅಮ್ಮನ ಅಪ್ಪಣೆ, ಭಗವಂತನ ಅನುಮತಿ ಅತ್ಯಾವಶ್ಯಕ. ಅದುದರಿಂದ ನನ್ನನ್ನು ಈಗ ನೀನು ಇಂದ್ರಪ್ರಸ್ಥಕ್ಕೆ ಕರೆದುಕೊಂಡು ನಡೆ. ಅಲ್ಲಿ ಹರಿಗುರುಗಳ ಆಜ್ಞೆಯನ್ನು, ತಾಯಿಯ ಅನುಜ್ಞೆಯನ್ನು ಪಡೆದ ಬಳಿಕವೇ ನನ್ನ ನಿನ್ನ ವಿವಾಹ.''

ಮೌರ್ವಿಯು ತನ್ನ ಭಾವೀಪತಿಯ ಸೌಜನ್ಯ ಬಂಧುರವಾದ ಈ ನುಡಿಗಳನ್ನು ಆಲಿಸಿ ಆನಂದಭರಿತಳಾದಳು. ತನಗೆ ಬೇಕಾದ ಅನೇಕ ಅಮೂಲ್ಯ ವಸ್ತ್ರ, ಆಭರಣ ಮುಂತಾದವುಗಳನ್ನು ತೆಗೆದುಕೊಂಡು, ಘಟೋತ್ಕಚನನ್ನು ತನ್ನ ಹೆಗಲ ಮೇಲೆ ಹೊತ್ತುಕೊಂಡು ಆಕಾಶಮಾರ್ಗದಿಂದಲೇ ಇಂದ್ರಪ್ರಸ್ಥಕ್ಕೆ ಆಗಮಿಸಿದಳು.

## ನೆಚ್ಚಿನ ಭೀಮನ ಮೆಚ್ಚಿನ ಮಗನ ಸಾಹಸದ ಅಭಿನಂದನೆ

ರಣಭೈರವಿಯಾದ ಚಾರು ಚಂಡಿಯಂತಿದ್ದ ಆ ಮುರಾಸುರನ ಪ್ರಚಂಡ ಕುವರಿಯನ್ನು ತನ್ನ ಉದ್ದಂಡ ಬಾಹುಬಲ ಪರಾಕ್ರಮದಿಂದ ಮರ್ದಿಸಿ, ಬುದ್ಧಿಶಕ್ತಿಯಿಂದ ಗೆದ್ದು ಸ್ವಯಂವರದಲ್ಲಿಯ ಅವಳ ಮೂರು ಪ್ರತಿಜ್ಞೆಯನ್ನು ಪೂರೈಸಿ, ವಿಜಯಶಾಲಿಯಾಗಿ ಆ ಅಸುರಾಂಗನೆಯನ್ನು ಸೆಳೆದು ತಂದ ಘಟೋತ್ಕಚನನ್ನು ಕಂಡು ಪರಮಾನಂದವಾಯಿತು ಪಾಂಡುನಂದನನಿಗೆ. ಪುಂಡರೀಕಾಕ್ಷನಾದ ಶ್ರೀಕೃಷ್ಣನೂ ಕೂಡ ತನ್ನ ನೆಚ್ಚಿನ ಭಕ್ತನಾದ ಭೀಮನ ಮೆಚ್ಚಿನ ಮಗ ಘಟೋತ್ಕಚನನ್ನು ಅಭಿನಂದಿಸಿದ ಅತ್ಯಾನಂದದಿಂದ. ಅಜ್ಜಿ ಕುಂತಿ ಹಾಗೂ ದ್ರೌಪತಿಯರು ಕುತೂಹಲದಿಂದ ಬಂದು ಈ ಹೊಸ ಸೊಸೆಯ ರೂಪ, ಶೀಲ, ಶಾಲೀನತೆಗಳನ್ನು ಕಂಡು ಪ್ರಸನ್ನಮನಸ್ಕರಾದರು.

ಶ್ರೀಕೃಷ್ಣ ಪರಮಾತ್ಮನ ಆದೇಶದಂತೆ, ಅಂದೇ ಇಂದ್ರಪ್ರಸ್ಥ ನಗರದಲ್ಲಿ ಕಾಮಕಟಂಕಟಾ ಮತ್ತು ಘಟೋತ್ಕಚರ ವಿವಾಹ ಸಮಾರಂಭವು ಅತ್ಯಂತ ವೈಭವದಿಂದ ನೆರವೇರಿತು. ಇಂಥ ಅದ್ಧೂರಿಯ ಮದುವೆಯ ಮಹೋತ್ಸವವನ್ನು ಯಾರೂ ಕಂಡಿದ್ದಿಲ್ಲ. ಎಂದೂ ನೋಡಿದ್ದಿಲ್ಲ. ಮನೆಗೆ ಬಂದ ಮೊದಲ ಸೊಸೆ ಎಂದು ಕುಂತಿ, ದ್ರೌಪದಿ, ಹಿಡಿಂಬೆ ಮೊದಲಾದ ಮನೆತನದ ಮಾನಿನೀಮಣಿಗಳೆಲ್ಲರೂ ಅತ್ಯಂತ ಉತ್ಸಾಹದ ಉದ್ರೇಕದಿಂದ ಒಡಗೂಡಿ ಮಹಾಸಂಭ್ರಮದಿಂದ ಆ ಮಂಗಳಕಾರ್ಯವನ್ನು ಅಭೂತಪೂರ್ವವಾಗಿ ನೆರವೇರಿಸಿದರು.

ವಿವಾಹ ಸಮಾರಂಭವು ಹೀಗೆ ವೈಭವೋದ್ದೀಪಿತವಾಗಿ ಚಿರಸ್ಮರಣೀಯವಾಗುವಂತೆ ಜರುಗಿದ ಬಳಿಕ ತನ್ನ ರಾಜ್ಯಕ್ಕೆ ಹೊರಟು ನಿಂತ ಘಟೋತ್ಕಚ ದಂಪತಿಗಳನ್ನು ಹಾಗೂ ಹಿಡಿಂಬಾದೇವಿಯನ್ನು, ಪಂಚಪಾಂಡವರು ಹಾಗೂ ಇಂದ್ರಪ್ರಸ್ಥದ ನಾಗರಿಕರೂ ಸಂತಸದಿಂದ ಹಾಗೂ ಭಾರವಾದ ಹೃದಯದಿಂದ ಬೀಳ್ಕೊಟ್ಟರು. ಘಟೋತ್ಕಚನು ಪತ್ನೀಸಹಿತವಾಗಿ ಎಲ್ಲ ಗುರುಹಿರಿಯರನ್ನು ವಂದಿಸಿ ಭೀಮಾದಿ ಪಂಚಪಾಂಡವರ ಅಪ್ಪಣೆ ಪಡೆದು ಕುಂತೀದೇವಿಯ ಹಾಗೂ ದ್ರೌಪದಿಯರ ಅಂತಃಕರಣ ಪೂರ್ವಕವಾದ ಹರಕೆಗಳನ್ನು ಹೊತ್ತು ಕೃಷ್ಣ ಭಗವಂತನ ಅಡಿದಾವರೆಗಳ ಹುಡಿಯನ್ನು ಶಿರದಲ್ಲಿ ಮುಡಿದುಕೊಂಡು ಇಂದ್ರಪ್ರಸ್ಥದಿಂದ ಹೊರಟನು. ಅವನ ರಾಜಧಾನಿಯಾದ ಹಿಡಿಂಬವನದಲ್ಲಿ ದೈತ್ಯ ಧುರೀಣರೆಲ್ಲರೂ ತಮ್ಮ ಸಾಮ್ರಾಟರಾದ ಘಟೋತ್ಕಚ ದಂಪತಿಗಳನ್ನು ಆದರದಿಂದ ಸ್ವಾಗತಿಸಿದರು. ಅವರ ನವವಿವಾಹದ ನಿಮಿತ್ತವಾಗಿ ದೊಡ್ಡ ಉತ್ಸವವನ್ನೇ ಉತ್ಸಾಹದಿಂದ ಆಚರಿಸಿದರು. ಕಾಮಕಟಂಕಟೆಯು ತನ್ನ ಮೆಚ್ಚಿನ ಮನದನ್ನ ನೊಡನೆ ಆ ಹಿಡಿಂಬವನದಲ್ಲಿ ಯೌವ್ವನದ ಸುಖೋಪಭೋಗಗಳನ್ನು ಅನುಭವಿಸುತ್ತ ಆನಂದದಿಂದ ನೆಲೆಸಿದಳು. ಆ ಇಬ್ಬರೂ ನೂತನ ದಂಪತಿಗಲು ತಮ್ಮ ಕಾಮಗತಿಯಿಂದ ಗಂಧಮಾದನ, ಚೈತ್ರವನ, ಕೈಲಾಸ, ಮಾನಸ, ಅಚ್ಛೋದ, ಬ್ರಹದ್ವನ, ಮಲಯ,

ಮಂದರ ಮುಂತಾದ ಸುಂದರವಾದ ವನೋಪವನಗಳಲ್ಲಿ ಮಧುಚಂದ್ರ ವಿಹಾರ ಮಾಡಿ ಆನಂದತುಂದಿಲರಾಗಿ ಇದ್ದರು.

ಹಲವು ವರ್ಷಗಳ ಬಳಿಕ ಆ ದಂಪತಿಗಳಿಗೆ ಮರಿ ಸೂರ್ಯನಂತೆ ತೇಜಸ್ವಿಯಾದ ಕುಮಾರನೊಬ್ಬನು ಜನಿಸಿದ. ಆ ಮಗುವು ದೇಹಕಾಂತಿಯಿಂದ ಅಗ್ನಿಕುಮಾರನಂತೆಯೇ ತೋರುತ್ತಿದ್ದ. ತಂದೆಯಾದ ಆ ಘಟೋತ್ಕಚನಂತೆ ಬಾಲಕನಿದ್ದಾಗಲೇ ತಾರುಣ್ಯದ ತೇಜ ತುಳುಕತೊಡಗಿತು ಅವನ ದೇಹ ಪೀಠದಲ್ಲಿ. ಪ್ರಬುದ್ಧ ಬುದ್ಧಿ, ಪ್ರಚಂಡ ಪರಾಕ್ರಮ, ಪರಿಪಕ್ವ ವಿಚಾರ, ಎಲ್ಲ ವಿಷಯಗಳ ಸರಿಯಾದ ಅರಿವು ಅಪೂರ್ವವಾದ ಸಮಯಪ್ರಜ್ಞೆ ಇವೆಲ್ಲವೂ ಎಳಮೆಯಲ್ಲಿಯೇ ತಂದೆಯಿಂದ ಆ ಘಟೋತ್ಕಚ ಕುಮಾರನಿಗೆ ಬಂದ ಬಳುವಳಿಯಾಗಿದ್ದವು. ಹೀಗೆ ಬಾಲ್ಯದಲ್ಲಿಯೇ ಷಣ್ಮುಖನಂತೆ, ಪ್ರಾಯಪ್ರಬುದ್ಧನಾಗಿ, ಬುದ್ಧಿ ಸಮೃದ್ಧನಾಗಿ ಬೆಳೆದು ನಿಂತ ಆ ಘಟೋತ್ಕಚ ಕುಮಾರನು ತನ್ನ ತಂದೆ ತಾಯಿಗಳಿಗೆ ನಮಸ್ಕರಿಸಿ ಬೇಡಿಕೊಂಡನು. 'ಪೂಜ್ಯರೇ, ನನ್ನ ಜನ್ಮದಾತರಾದ ನಿಮಗೆ ಅನಂತ ವಂದನೆಗಳು. ನೀವೇ ನನಗೆ ಆದಿ ಗುರುಗಳು. ಮಕ್ಕಳಿಗೆ ತಂದೆತಾಯಿಯ ಹೊರತು ಬೇರೆ ಹಿರಿ ಗುರುಗಳು ಯಾರು? ಆದುದರಿಂದ ನನ್ನ ಗುರುಗಳು ಹಾಗೂ ಮಾತಾಪಿತೃಗಳಾದ ತಾವು ಈಗ ನನಗೆ ಒಂದು ಹೆಸರನ್ನು ಕೊಡಿರಿ' ಎಂದು ಕೇಳಿಕೊಂಡ. ಮಗನ ಈ ಮುದ್ದು ಮಾತನ್ನು ಕೇಳಿ ಆ ಘಟೋತ್ಕಚ ದಂಪತಿಗಳಿಗೆ ಹರ್ಷವಾಯಿತು. ತಮ್ಮ ಪ್ರೀತಿಯ ಕುಮಾರನನ್ನು ಅಪ್ಪಿಕೊಂಡು, ಆಶೀರ್ವಾದ ಮಾಡಿ ಮಮತೆಯಿಂದ ಮೈ ಮೇಲೆ ಕೈಯಾಡಿಸಿ ಘಟೋತ್ಕಚ ನುಡಿದನು. 'ಮಗು ನಿನ್ನ ಕೂದಲುಗಳು ಸುರುಳಿ ಸುರುಳಿಯಾಗಿ ಬರ್ಬರಾಕಾರದಿಂದ ಗುಂಗುರುಗಟ್ಟಿವೆ. ಆದ್ದರಿಂದ ನಿನಗೆ ಬರ್ಬರೀಕ ಎಂಬ ಹೆಸರನ್ನು ನಾವು ಇಡುತ್ತೇವೆ. ನೀನು ನಮ್ಮ ಕುಲದ ಗೌರವವನ್ನು ಬೆಳಸಿ ನಿನ್ನ ಪಿತೃವಂಶಕ್ಕೆ ಕೀರ್ತಿಯನ್ನು ತಂದು ಕೊಡುವವನಾಗು. ಮಾತೃವಂಶದಿಂದ ನೀನು ರಾಕ್ಷಸ ವಂಶದವನಾದರೂ, ರಾಕ್ಷಸೀ ಗುಣಗಳನ್ನು ಮಾತ್ರ ಕಲಿಯಬೇಡ. ನಿನ್ನ ಪಿತೃ ವಂಶರಾದ ಪಾಂಡವ ಕುಲದ ಭೂತದಯೆ, ಪರೋಪಕಾರ, ಹರಿಗುರು ಭಕ್ತಿ, ಅಹಿಂಸೆ, ಧರ್ಮನಿಷ್ಠೆ ಮುಂತಾದ ಸದ್ಗುಣಗಳನ್ನು ಬೆಳೆಸಿಕೊಂಡು ಶ್ರೀಕೃಷ್ಣ ಪರಮಾತ್ಮ, ನಿನ್ನ ಅಜ್ಜ ಬಲಭೀಮ ಹಾಗೂ ಅರ್ಜುನರ ಪೂರ್ಣಾನುಗ್ರಹಕ್ಕೆ ಪಾತ್ರನಾಗು. ನಿನಗೆ ಮುಂದಿನ ಜೀವನದಲ್ಲಿ ಕಲ್ಯಾಣಕಾರವಾದ ಯಾವ ಕರ್ತವ್ಯವನ್ನು ಮಾಡಬೇಕು ಎಂದು ಶ್ರೀಕೃಷ್ಣ ಪರಮಾತ್ಮನನ್ನು ಕೇಳಿ ತಿಳಿದುಕೊ. ನಿನಗೆ ನನ್ನ ಹೃತ್ಪೂರ್ವಕ ಆಶೀರ್ವಾದ.''

## ಗುಪ್ತಕ್ಷೇತ್ರದಲ್ಲಿ ಬರ್ಬರೀಕ ಮತ್ತು ವಿಜಯ ಬ್ರಾಹ್ಮಣನ ಸಾಧನೆ ಮತ್ತು ಪಾಂಡವರ ಭೆಟ್ಟಿ

**ಸೂತ:-** ಘಟೋತ್ಕಚನು ತನ್ನ ಮಗನಾದ ಬರ್ಬರೀಕನೊಂದಿಗೆ ಹಿಡಿಂಬವನದಲ್ಲಿ ಸುಖಸಂತಸದಿಂದ ವಾಸವಾಗಿದ್ದನು. ತನ್ನ ತಂದೆತಾಯಿಗಳ ಮುಖಾಂತರ ಅನೇಕ ಬಾರಿ ಅವನು ಕೇಳಿದ್ದ ಲೀಲಾವತಾರಿಯಾದ ಶ್ರೀಕೃಷ್ಣನ ಮಹಾಮಹಿಮೆಯನ್ನು ಕೇಳಿ ಅಂಥ ವಿಶ್ವವಂದ್ಯ ವಿಭೂತಿ ಶ್ರೀಕೃಷ್ಣ ಭಗವಾನನನ್ನು ಕಾಣಬೇಕೆಂದು ತೀವ್ರ ಉತ್ಕಂಠೆ ಆ ಬರ್ಬರೀಕನಿಗೆ. ಆ ಶ್ರೀಕೃಷ್ಣನ ಅಪ್ಪಣೆಯನ್ನು ಪಾಲಿಸಬೇಕೆಂಬ ತವಕ ಅವನ ಮನದಲ್ಲಿ. ಅದಕ್ಕಾಗಿ ತನ್ನ ತಂದೆಗೆ ಒತ್ತಾಯಿಸಿದ ದ್ವಾರಕೆಗೆ ನಡೆಯಲು.

ಕಾಮಕಟಂಕಟೆಯನ್ನು ಆ ಹಿಡಿಂಬವನದಲ್ಲಿಯೇ ಬಿಟ್ಟು ಆ ತಂದೆ ಮಕ್ಕಳಿಬ್ಬರೂ ಆಕಾಶಮಾರ್ಗದಿಂದ ದ್ವಾರಕಾನಗರದಲ್ಲಿ ಯಾದವರ ಸಭೆಗೆ ಬಂದರು. ಸಭಾಧ್ಯಕ್ಷಸ್ಥಾನದಲ್ಲಿ ಯಾದವರ ಹಿರಿಯನಾದ ಉಗ್ರಸೇನ, ಅವನ ಪಕ್ಕದಲ್ಲಿ ವಸುದೇವ. ಸಾತ್ಯಕಿ, ಅಕ್ರೂರ, ಬಲರಾಮ ಹಾಗೂ ಕೃಷ್ಣ ಮುಂತಾದ ಯದುಪ್ರವೀರರು ತಮ್ಮ ತಮ್ಮ ಉಚಿತ ಆಸನಗಳು ಮೇಲೆ ಆಸೀನರು. ಆಗ ಘಟೋತ್ಕಚ ಮಗನೊಂದಿಗೆ ಮೊದಲು ವಂದಿಸಿದ ಉಗ್ರಸೇನನಿಗೆ. ಅನಂತರ ವಸುದೇವ ಬಲರಾಮರಿಗೆ ವಂದಿಸಿ ಶ್ರೀಕೃಷ್ಣನ ಪಾದಗಳಿಗೆ ಪೊರಮಟ್ಟು ಭಕ್ತಿಯಿಂದ ತನ್ನ ಅಡಿದಾವರೆಗಳಿಗೆ ಮುಡಿ ಚಾಚಿದ. ಭೀಮಕುಮಾರ ಘಟೋತ್ಕಚನನ್ನು ನಂದಕುಮಾರ ಕೃಷ್ಣನು ತನ್ನ ಹಿಡಿದೋಳುಗಳಿಂದ ಹಿಡಿದು ಎತ್ತಿ ತಬ್ಬಿಕೊಂಡು ಸ್ನೇಹದಿಂದ ನುಡಿದ

## ಬರ್ಬರೀಕನ ಪ್ರಶ್ನೆ, ಭಗವಂತನ ಉತ್ತರ

**ಕೃಷ್ಣ:-** ಕುರುವಂಶದ ಕಿರೀಟದಂತಿದ್ದ ಘಟೋತ್ಕಚ! ನೀವೆಲ್ಲರೂ ಕ್ಷೇಮವಷ್ಟೆ? ಈಗ ನೀನು ನಿನ್ನ ಮಗನಾದ ಬರ್ಬರೀಕನೊಂದಿಗೆ ಇಲ್ಲಿಗೆ ಬಂದ ಕಾರಣವೇನು? ನನ್ನಿಂದ ಏನಾಗಬೇಕಾಗಿದೆ?

**ಘಟೋತ್ಕಚ:-** ದೇವ, ದೇವ! ನಾವೆಲ್ಲರೂ ಕುಶಲಿಗಳು ನಿನ್ನ ಪ್ರಸಾದದಿಂದ. ನಿನ್ನ ಆದೇಶದಂತೆ ಮುರಾಸುರನ ಕುಮಾರಿಯಾದ ಮೌರ್ವಿಯನ್ನು ನಾನು ಮದುವೆಯಾದೆ. ನನಗೆ ಅವಳಿಂದ ಹುಟ್ಟಿದ ಮಗನೇ ಈ ಬರ್ಬರೀಕ. ಇವನು ಕೂಡ ನನ್ನಂತೆ, ನನ್ನ ತಂದೆಯಂತೆ ಕೃಷ್ಣಕಿಂಕರ. ನೀನೇ ನಮ್ಮೆಲ್ಲರಿಗೂ ಕ್ಷೇಮಕರ. ಈ ನನ್ನ ಕುಮಾರನು ನಿನ್ನನ್ನು ಕಂಡು ನಿನ್ನ ಶುಭಾಶಿಷವನ್ನು ಪಡೆದುಕೊಂಡು ನಿನ್ನಿಂದ ಆಜ್ಞೆಯನ್ನು ಹೊಂದಬೇಕೆಂದು ಬಯಸಿ ಬಂದಿದ್ದಾನೆ ಈ ದ್ವಾರಕಾ ಪಟ್ಟಣಕ್ಕೆ. ಅವನು ಸಾಕ್ಷಾತ್ತಾಗಿ ನಿನ್ನನ್ನು ಮೊದಲು ಕೆಲವು ಪ್ರಶ್ನೆಗಳನ್ನು ಕೇಳಬೇಕೆಂದಿದ್ದಾನೆ, ಅಪ್ಪಣೆಯಾದರೆ.

**ಶ್ರೀಕೃಷ್ಣ:-** ವತ್ಸ, ಮೌರ್ವೀಪುತ್ರ! ನಮ್ಮ ಬಲಭೀಮನ ಮೊಮ್ಮಗನಾದ ನೀನು ನನಗೂ ಪೌತ್ರನೇ ಸರಿ. ನಿನಗೆ ಏನು ಪ್ರಶ್ನೆ ಕೇಳುವದಿದೆಯೋ ನನ್ನನ್ನೇ ಕೇಳು. ನಾನು ನಿನ್ನ ಅಜ್ಜ. ಯಾವ ಸಂಕೋಚವೂ ಬೇಡ. ನಾನು ಮನವಾರೆ ಮೆಚ್ಚಿದ್ದೇನೆ. ಈ ನಿನ್ನ ಜಿಜ್ಞಾಸಾವೃತ್ತಿಯನ್ನು. ನೀನು ಯಾವ ಪ್ರಶ್ನೆಯನ್ನಾದರೂ ಮಾಡಬಹುದು.

**ಬರ್ಬರೀಕ:-** ಭಗವನ್ ಯಾದವ ಮಾಧವ! ನಾನು ಮೊದಲು ನಿನಗೆ ಮನಸಿನಿಂದ ನಮಿಸುವೆ, ದೇಹದಿಂದ ವಂದಿಸುವೆ. ಮಾತಿನಿಂದ ನುತಿಸಿ ನಮಸ್ಕರಿಸುವೆ. ಹೀಗೆ ತ್ರಿಕರಣ ಶುದ್ಧಿಪೂರ್ವಕ ನಿನ್ನ ರಮಾಲಾಲಿತಪಾದಪಲ್ಲವಗಳಿಗೆ ಸಾಷ್ಟಾಂಗ ವಂದನೆಗೈದು ಒಂದು ಪ್ರಶ್ನೆಯನ್ನು ಮಾಡುತ್ತೇನೆ. ''ಭಗವನ್, ಈ ಬಾಳಿನಲ್ಲಿ ಜೀವಿಸುವ ಜೀವಿಗಳ ಕಲ್ಯಾಣವು ಯಾವ ಸಾಧನಗಳಿಂದ ಆಗುವುದು? ಮಾನವರ ಕಲ್ಯಾಣದ ಮುಖ್ಯ ಸಾಧನ ಯಾವುದು? ಮನುಷ್ಯ ಜೀವನದ ಕಲ್ಯಾಣಪರಂಪರೆಗೆ ಕೆಲವರು ದಾನವೇ ಸಾಧನ ಎಂದರೆ, ಹಲವರು ಧರ್ಮವೇ ಸಾಧನ ಎನ್ನುವರು. ಕೆಲವರು 'ದಮ' ಇಂದ್ರಿಯ ನಿಗ್ರಹವು ಕಲ್ಯಾಣ ಸಾಧನ ಎಂದು ಅಭಿಪ್ರಾಯ ಪಡುವರು. ತಪಸ್ಸೆಂದು ಮತ್ತೆ ಕೆಲವರು ದ್ರವ್ಯವೆಂದು, ಬಹುಜನರು ಮೋಕ್ಷವೇ ಮುಖ್ಯಸಾಧನವೆಂದು ಪ್ರತಿಪಾದಿಸುವರು. ಹೀಗೆ ಜ್ಞಾನಿಗಳಲ್ಲಿ ಮಾನವ ಕುಲ ಕೋಟಿಯ ಕಲ್ಯಾಣ ಸಾಧನೆಯ ಬಗ್ಗೆ ಬಗೆ ಬಗೆಯ ಭಿನ್ನಾಭಿಪ್ರಾಯಗಳಿರುವವು.

ಈ ನೂರಾರು ಶ್ರೇಯಸ್ಸಾಧನಗಳಲ್ಲಿ ನಿಜವಾದುದು ಯಾವುದು? ಯಾವುದರಿಂದ ನರ ಕುಲಕೋಟಿಗೆ ಕಲ್ಯಾಣ ಪ್ರಾಪ್ತಿ ಆಗುವದು?

**ಶ್ರೀಕೃಷ್ಣ:-** ವತ್ಸ, ಮಾರ್ಮಿಕವಾಗಿದೆ ನಿನ್ನ ಪ್ರಶ್ನೆ. ಅದಕ್ಕೆ ಉತ್ತರವನ್ನು ಹೇಳುತ್ತೇನೆ, ಚಿತ್ತವಿಟ್ಟು ಆಲಿಸು. ಈ ಶ್ರೇಯಸ್ಸಾಧನ ಎಂಬುವುದು ಎಲ್ಲರಿಗೂ ಒಂದೇ ಬಗೆಯದಾಗಿರುವದಿಲ್ಲ. ಬೇರೆ ಬೇರೆ ವರ್ಣದವರಿಗೆ ಬೇರೆ ಬೇರೆ ಬಗೆಯ ಶ್ರೇಯಸ್ಸಾಧನಗಳು ಹೇಳಲ್ಪಟ್ಟಿವೆ. ಬ್ರಾಹ್ಮಣರಿಗೆ ಕಲ್ಯಾಣ ಕಾರಣವಾದ ಶ್ರೇಯಸ್ಸೆಂದರೆ ತಪಸ್ಸು, ಇಂದ್ರಿಯ ನಿಗ್ರಹ, ಸ್ವಾಧ್ಯಾಯ ಹಾಗೂ ಧರ್ಮ ಸ್ವರೂಪ ನಿರೂಪಣ. ಈ ಚತುರ್ವಿಧ ಉಪಾಯದಿಂದ ಬ್ರಾಹ್ಮಣನಾಗಿರುವವನು ತನ್ನ ಶ್ರೇಯಸ್ಸಿನ ಸಾಧನವನ್ನು, ಶ್ರೇಯಸ್ಸಿನ ಅಭಿವೃದ್ಧಿಯನ್ನು ಮಾಡಿಕೊಳ್ಳಬೇಕು. ಕ್ಷತ್ರಿಯರಿಗೆ ಮೊಟ್ಟ ಮೊದಲು ಬಲ, ವೀರ್ಯಗಳನ್ನು ಸಂಪಾದಿಸಿಕೊಂಡು ತನ್ನ ವೀರ ವಿಕ್ರಮದಿಂದ ದುಷ್ಟದಮನ, ಶಿಷ್ಟಪಾಲನೆಯನ್ನು ಮಾಡಿ ಸನಾತನ ಧರ್ಮದ ಸಂರಕ್ಷಣೆಯನ್ನು ಮಾಡುತ್ತ ಶ್ರೇಯಸ್ಸಾಧನ ಮಾಡಿಕೊಳ್ಳಬೇಕು. ವೈಶ್ಯರಿಗೆ ವ್ಯಾಪಾರ, ಉದ್ಯೋಗ, ಪಶುಪಾಲನೆ, ಕೃಷಿ ವಿಜ್ಞಾನ, ಬೇಸಾಯ ವ್ಯವಸಾಯ ಮುಂತಾದವುಗಳಿಂದ ಶ್ರೇಯಸ್ಸಾಧನೆಯು ವಿಹಿತವಾಗಿದೆ. ಶೂದ್ರರಿಗೆ ಸಮಾಜ ಸೇವೆ, ಶಿಲ್ಪಕರ್ಮ, ಕುಶಲ ಕೈಗಾರಿಕೆ ಮುಂತಾದವುಗಳು ಶ್ರೇಯಸ್ಸಾಧನಗಳಾಗಿವೆ.

ಬರ್ಬರೀಕಾ, ನೀನು ಕ್ಷತ್ರಿಯ ಕುಲೋತ್ಪನ್ನ, ಬಲ ಸಂಪಾದನೆ ನಿನ್ನ ಮುಖ್ಯ ಕರ್ತವ್ಯ. ಆ ಬಲವು ಸಾಧಾರಣ ಮಟ್ಟದ ಸಾಮರ್ಥ್ಯವಾದರೆ ಯಾವ ಕೆಲಸಕ್ಕೂ ಬಾರದು. ವೀರ ಕ್ಷತ್ರಿಯನಲ್ಲಿ ಅಸಾಧಾರಣ ಬಲ, ಲೋಕೋತ್ತರ ಶಕ್ತಿ ಪ್ರಚಂಡ ಪರಾಕ್ರಮ ಇರುವದು ಅತ್ಯಾವಶ್ಯಕ. ಇದಲ್ಲದೇ ಸರ್ವಕಾರ್ಯ ಸಾಧಕವಾದ ಯುಕ್ತಿ, ಕ್ಷಮೆ, ಔದಾರ್ಯ, ಹರಿಗುರು ಭಕ್ತಿ ಮುಂತಾದ ಸದ್ಗುಣಗಳು ಪ್ರಭೂತ ಪ್ರಮಾಣದಲ್ಲಿ ಇರುವುದು ಅವಶ್ಯಕ. ಇಂಥ ಅಪ್ರತಿಮವಾದ ಶಕ್ತಿ ಸಾಮರ್ಥ್ಯಗಳನ್ನು ಸಂಪಾದಿಸಿ ಅದರಿಂದ ನೀನು ಲೋಕಕಂಟಕರಾದ ದುಷ್ಟ ಜನರನ್ನು ದಮನಮಾಡಿ. ಧರ್ಮಾತ್ಮರಾದ ಸಾಧು ಸಜ್ಜನರನ್ನು ಸಂರಕ್ಷಿಸು. ಇದು ನಿನ್ನಂಥ ಕ್ಷತ್ರಿಯ ಕುಮಾರರಿಗೆ ಪಾಲಿಸಲು ಯೋಗ್ಯವಾದ ಕರ್ತವ್ಯ ಕರ್ಮ, ಇದೇ ನಿನ್ನ ಜೀವನ ಧರ್ಮ, ಈ ಎಲ್ಲ ಮಹತ್ತರವಾದ ಕಾರ್ಯಗಳನ್ನು ಸಾಧಿಸಲಿಕ್ಕಾಗಿ ನಿನಗೆ ದೇವಿಯ ಆಶೀರ್ವಾದದ ಬೆಂಬಲ ಬೇಕು. ಅದಕ್ಕಾಗಿ ನೀನು ನಿಮ್ಮ ತಾಯಿಯ ತವರುಮನೆಯ ಇಷ್ಟದೇವತೆಯನ್ನು ಆರಾಧನೆ ಮಾಡು.

## ನರಕುಲ ಕಲ್ಯಾಣಕ್ಕೆ ನವದುರ್ಗೆಯರ ಆರಾಧನೆ

**ಬರ್ಬರೀಕ:-** ಪ್ರಭು, ನಾನು ಯಾವ ದೇವಿಯನ್ನು ಆರಾಧಿಸಲಿ? ಇಂಥ ಯಾವ ಕ್ಷೇತ್ರದಲ್ಲಿ ನಿಂತು ಆರಾಧನೆಗೈಯಲಿ? ಆ ದೇವಿಯ ಆರಾಧನೆಯ ರೀತಿ ಯಾವುದು? ಯಾವುದನ್ನೂ ನಾನು ಅರಿಯೆ. ಕರುಣಾಮಯನಾದ ನೀನೇ ನನಗೆ ಈ ವಿಷಯದಲ್ಲಿ ಮಾರ್ಗದರ್ಶನ ಮಾಡಬೇಕು.

**ಕೃಷ್ಣ:-** ಮಹೀಸಾಗರ ಸಂಗಮ ತೀರ್ಥದಲ್ಲಿ ಒಂದು ಗುಪ್ತಕ್ಷೇತ್ರವಿದೆ. ಅಲ್ಲಿ ನಾರದ ಮಹರ್ಷಿಗಳು ಆವಾಹನೆಗೈದ ಒಂಬತ್ತು ದುರ್ಗಾದೇವಿಯರು ಇರುತ್ತಾರೆ. ಆ ನವದುರ್ಗೆಯರು ನರಕುಲದ ಕಲ್ಯಾಣ ಸಾಧನೆಗಾಗಿ ಆ ಕ್ಷೇತ್ರದಲ್ಲಿ ನೆಲೆಸಿದ್ದಾರೆ. ನೀನು ಆ ಗುಪ್ತಕ್ಷೇತ್ರಕ್ಕೆ ಹೋಗು. ಆ ನವದೇವಿಯರನ್ನು ಆರಾಧಿಸು.

ಶ್ರೀಕೃಷ್ಣ ಪರಮಾತ್ಮನು ಘಟೋತ್ಕಚನ ಬಲಿಷ್ಠ ಬಾಲಕನಾದ ಬರ್ಬರೀಕನಿಗೆ ಅವನ

ಭಾವೀ ಜೀವನದ ದಿವ್ಯಮಾರ್ಗದ ಪಥಪ್ರದರ್ಶನವನ್ನು ಮಾಡಿ ಅಲ್ಲಿಯೇ ನಿಂತ ಭೀಮಪುತ್ರನಾದ ಘಟೋತ್ಕಚನನ್ನು ಕುರಿತು ಮಾತನಾಡಿದರು.

**ಕೃಷ್ಣ:-** ಹೈಡಿಂಬೇಯ! ಈ ನಿನ್ನ ಕುಮಾರನು ಒಳ್ಳೆಯ ಸುಕುಮಾರ. ಮಹಾವೀರ, ವೀರನಾಗಿಯೂ ವಿನೀತ. ಮೇಲೆ ಹರಿಭಕ್ತ. ಮತ್ತು ಇದಲ್ಲದೇ ಗುರುನಿಷ್ಠೆ. ಇಂಥ ಶೂರ, ಧೀರ, ಸದ್ಗುಣ ಸುಂದರ, ಮಗನನ್ನು ಪಡೆದ ನೀನು ಧನ್ಯ. ಇವನಿಗೆ ನೀವು ಇಟ್ಟ ಬರ್ಬರೀಕ ಎಂಬ ಹೆಸರು ಏಕೋ ಅಷ್ಟು ಚೆನ್ನಾಗಿ ಕಾಣುವದಿಲ್ಲ. ಅದಕ್ಕೆ ನಾನು ಇವನಿಗೆ ಒಂದು ಹೊಸ ಹೆಸರನ್ನು ಇಡುತ್ತೇನೆ. ಇವನ ಸುಸ್ವಭಾವಕ್ಕೆ ಅನುಸರಿಸಿ 'ಸುಹೃದಯ' ಎಂದು ಇವನ ಹೆಸರು ಆಗಲಿ. 'ಸುಹೃದಯ' ಎಂಬ ಹೆಸರಿನಿಂದ ಜಗದಲ್ಲಿ ಇವನು ಪ್ರಸಿದ್ಧನೂ ಆಗಲಿ.

ಹೀಗೆ ತಿಳಿಸಿ ಹೇಳಿ ಆ ಘಟೋತ್ಕಚ ಕುಮಾರನಿಗೆ ಉಚಿತವಾದ ನವೀನ ನಾಮವನ್ನು ಇಟ್ಟು ಅವನನ್ನು ತಬ್ಬಿಕೊಂಡು, ಮುದ್ದಾಡಿ, ವಿಪುಲವಾದ ಪ್ರೀತಿಯ ಕಾಣಿಕೆಗಳನ್ನು ಕೊಟ್ಟು, ಗುಪ್ತಕ್ಷೇತ್ರಕ್ಕೆ ಹೋಗಲು ಕೃಷ್ಣಭಗವಾನನು ಆಜ್ಞೆ ನೀಡಿದನು. ಆಗ ಆ ಸುಹೃದಯನು ಅರ್ಥಾತ್ ಬರ್ಬರೀಕನು ಭಕ್ತಿಯಿಂದ ಬಾಗಿ ಭಗವನ್ ಮುಕುಂದನ ಸುಂದರವಾದ ಪಾದಾರವಿಂದ ದ್ವಂದ್ವಗಳಿಗೆ ಮೊದಲು ವಂದನೆಯನ್ನು ಸಲ್ಲಿಸಿದನು. ಅನಂತರ ಅಲ್ಲಿ ಕುಳಿತ ಬಲರಾಮ ಉಗ್ರಸೇನ ಮುಂತಾದ ಎಲ್ಲ ಯಾದವರಿಗೂ ನಮಸ್ಕರಿಸಿ ತನ್ನ ತಂದೆ ಘಟೋತ್ಕಚನ ಅಡಿದಾವರೆಗಳಿಗೂ ನಮಸ್ಕರಿಸಿ ಎಲ್ಲರ ಅಪ್ಪಣೆ ಪಡೆದು ಗುಪ್ತಕ್ಷೇತ್ರಕ್ಕೆ ಹೊರಟು ಹೋದನು ಆ ಸುಹೃದಯ. ಅನಂತರ ಘಟೋತ್ಕಚನು ಆ ದೇವಕೀನಂದನನ ನಿರೋಪ ತೆಗೆದುಕೊಂಡು ತನ್ನ ಹಿಡಿಂಬವನಕ್ಕೆ ಪ್ರಯಾಣ ಬೆಳೆಸಿದನು. ಅಲ್ಲಿ ನಿತ್ಯ ನಿರಂತರವೂ ಶ್ರೀಕೃಷ್ಣ ಧ್ಯಾನಗೈಯುತ್ತಾ ತನ್ನ ಹಿರಿಯರಾದ ಪಾಂಡವರ ಆದರ್ಶ ಪಥದಲ್ಲಿ ತನ್ನ ಬಾಳಿನ ರಥವನ್ನು ಮುಂದೆ ನೂಕುತ್ತ ಧರ್ಮಶಾಸನವನ್ನು ನಡೆಸಿದನು.

ಇತ್ತ ಬುದ್ಧಿವಂತನೂ, ಬಲಿಷ್ಠನೂ, ಭಾವುಕನೂ ಆದ ಸುಹೃದಯನು ನೇರವಾಗಿ ಗುಪ್ತಕ್ಷೇತ್ರಕ್ಕೆ ಐತಂದನು. ಓರ್ವ ಮಹಾತಪಸ್ವಿಯಂತೆ ನಡೆಯಿತು ಅವನ ದೈನಂದಿನ ಜೀವನ ಆ ಗುಪ್ತಕ್ಷೇತ್ರದಲ್ಲಿ. ನಸುಕಿನಲ್ಲಿ ಉತ್ಥಾನ, ದೇವಧ್ಯಾನ, ನಂತರ ಸ್ನಾನ, ಅನಂತರ ಆ ನವದುರ್ಗಾದೇವಿಯರ ಷೋಡಶೋಪಚಾರ. ಪೂಜೆ, ಪುಷ್ಪಾರ್ಚನೆ, ಧೂಪ, ದೀಪ, ನೈವೇದ್ಯಾದಿ ಸಮರ್ಪಣೆ. ಕೊನೆಗೆ ಮಂಗಳಾರತಿ, ಅನಂತರ ಪ್ರಾರ್ಥನೆ. ಇದೆಲ್ಲ ನಿತ್ಯಾಹ್ನಿಕ ಮುಗಿದ ಬಳಿಕ ಆ ನವದುರ್ಗೆಯರ ಮುಂದೆ ಕುಳಿತು ಸತತ ಧ್ಯಾನೋಪಾಸನಾ ರೂಪವಾದ ತಪಸ್ಸನ್ನು ಮಾಡುತ್ತಿದ್ದ. ಹೀಗೆ ಮೂರು ವರ್ಷ ಕಾಲ ನಡೆಯಿತು ಅವನ ಈ ದೇವಿಯರ ಆರಾಧನೆ. ಅವನ ಈ ನಿಯಮ ನಿಷ್ಠುರವಾದ ಧ್ಯಾನೋಪಾಸನಾ ರೂಪವಾದ ತಪಸ್ಸಿನಿಂದ ದೇವಿಯರು ಪ್ರಸನ್ನರಾದರು. ಪ್ರತ್ಯಕ್ಷ ದರ್ಶನವಿತ್ತರು ಆ ಸುಹೃದಯನಿಗೆ. ದುರ್ಲಭವಾದ ಶಕ್ತಿ, ಸಾಮರ್ಥ್ಯವನ್ನು ಕೊಟ್ಟು ಕರುಣಿಸಿದರು. ಕೊನೆಗೂ ಅವನಿಗೆ ಒಂದು ಕಿವಿಮಾತನ್ನು ಹೇಳಿದರು.

**ದೇವಿಯರು:-** ''ವೀರ ಕ್ಷತ್ರಪುತ್ರ, ನೀನು ಇಲ್ಲಿಯೇ ಇರು ಇನ್ನೂ ಕೆಲವು ಕಾಲದವರೆಗೆ. ಇನ್ನು ಕೆಲವೇ ದಿನಗಳಲ್ಲಿ ವಿಜಯ ಎಂಬ ಬ್ರಾಹ್ಮಣನು ಇಲ್ಲಿಗೆ ಬರುವನು. ಅವನ ಸಹವಾಸದಿಂದ ನಿನಗೆ ಮುಂದೆ ಕಲ್ಯಾಣವಾಗುವದು.

ದೇವಿಯರ ಈ ಆದೇಶವನ್ನು ಸುಹೃದಯನು ತಲೆಬಾಗಿಸಿ ಸ್ವೀಕರಿಸಿದನು. ಆ ಗುಪ್ತ ಕ್ಷೇತ್ರದಲ್ಲಿಯೇ ದುರ್ಗೆಯ ಆಜ್ಞೆಯಂತೆ ಉಳಿದುಕೊಂಡನು. ಆ ದೇವಿಯರ ಅನನ್ಯ ಸೇವೆಯಲ್ಲಿಯೇ ಹಲವು ಕಾಲ ಸವೆಯಿತು.''

ಒಂದು ದಿನ ಮಗಧದೇಶದ ವಿಪ್ರೋತ್ತಮನಾದ ವಿಜಯನು ಅಲ್ಲಿಗೆ ಆಗಮಿಸಿದನು. ಅವನು ಕುಮಾರೇಶ್ವರ ಮೊದಲಾದ ಏಳು ಲಿಂಗಗಳನ್ನು ಭಕ್ತಿ ಭಾವಯುಕ್ತನಾಗಿ ಪೂಜೆಗೈದನು. ಮತ್ತು ತಾನು ಪಡೆದ ವಿದ್ಯೆಯು ಸಫಲವಾಗಬೇಕೆಂದು ಬಹುಕಾಲದವರೆಗೆ ತಪಸ್ಸನ್ನು ಮಾಡುತ್ತಲೇ ಇದ್ದನು. ಅವನ ತಪಸ್ಸು ಎಂದರೆ ಈ ನವದುರ್ಗಾದೇವಿಯರ ಆರಾಧನೆಯೇ. ಇದರಿಂದ ಸುಪ್ರೀತರಾದರು ಎಲ್ಲ ದೇವಿಯರು. ಅಂದು ರಾತ್ರಿ ಅವನ ಕನಸಿನಲ್ಲಿ ಕಾಣಿಸಿಕೊಂಡರು ಮತ್ತು ಹೀಗೆ ಆದೇಶ ನೀಡಿದರು.

**ದೇವಿಯರು:-** ಬ್ರಹ್ಮನ್! ನೀನು ಸಿದ್ಧಮಾತೆಯ ಎದುರು ಎಲ್ಲ ವಿದ್ಯೆಗಳ ಸಾಧನೆ ಮಾಡಿಕೊ, ಆ ಸುಹೃದಯನು ನಮ್ಮ ಭಕ್ತ. ಅವನು ನಿನಗೆ ಈ ವಿಷಯದಲ್ಲಿ ಸಹಾಯ ಮಾಡುವನು.

ದೇವಿಯರ ಈ ಸ್ವಪ್ನ ಸಂದೇಶವನ್ನು ಕೇಳಿ, ವಿಜಯ ಎಂಬ ವಿಪ್ರನು ಎಚ್ಚತ್ತು ನಿಂತನು. ಆ ಎಲ್ಲ ಒಂಭತ್ತು ದೇವಿಯರಿಗೂ ವಂದನೆ ಮಾಡಿದನು. ಮತ್ತು ಘಟೋತ್ಕಚನ ಕುಮಾರನಾದ ಸುಹೃದಯನು ಇದ್ದಲ್ಲಿಗೆ ಬಂದನು. ಸಂತಸದಿಂದ ನುಡಿದನು.

## ಜಗನ್ಮಾತೆಯ ಜಾಗರ ಸೇವೆ ಮಾಡು

**ವಿಜಯ:-** ''ಸಹೃದಯನಾದ ಸುಹೃದಯ! ನೀನು ದೇವಿಯ ಸ್ತೋತ್ರವನ್ನು ಪಾರಾಯಣ ಮಾಡುತ್ತ ಇಲ್ಲಿಯೇ ಕುಳಿತುಕೊ, ರಾತ್ರಿ ಮಲಗಬೇಡ. ಜಾಗರಣದಿಂದಲೇ ಆ ಜಗನ್ಮಾತೆಯ ಸ್ತೋತ್ರವನ್ನು ಪಠಿಸುತ್ತಾ ಇರು. ನಾನು ವಿದ್ಯಾಸಾಧನ ರೂಪವಾದ ಕರ್ಮಾನುಷ್ಠಾನವನ್ನು ಮಾಡುತ್ತೇನೆ. ಅದಕ್ಕೆ ವಿಘ್ನಬಾರದಂತೆ, ಜಾಗರೂಕನಾಗಿರು. ನಿದ್ದೆ ಬಿಟ್ಟು ದೇವೀಸ್ತೋತ್ರದ ಪಠಣ ಪಾರಾಯಣವನ್ನು ಮಾಡು. ನನ್ನ ಈ ವಿದ್ಯಾ ಸಾಧನರೂಪ ಸತ್ಕರ್ಮಕ್ಕೆ ಯಾವ ರೀತಿಯಿಂದಲೂ ವಿಘ್ನಬಾರದಂತೆ ನೋಡಿಕೊ.''

ಅವನ ಮಾತಿಗೆ ಆನಂದದಿಂದ ಒಪ್ಪಿಕೊಂಡ ಬರ್ಬರೀಕ ಅರ್ಥಾತ್ ಸುಹೃದಯ ವಿಜಯ ಬ್ರಾಹ್ಮಣನ ವಿದ್ಯಾಸಾಧನೆಗೆ ಯಾವ ವಿಘ್ನವೂ ಬಾರದಂತೆ ದಕ್ಷತೆಯಿಂದ ರಕ್ಷಿಸುತ್ತ ನಿಂತುಕೊಂಡ. ಇತ್ತ ಆ ವಿಜಯವಿಪ್ರನು ಪವಿತ್ರವಾದ ಕುಶಾಸನದ ಮೇಲೆ ಮಂಡಿಸಿ ''ಗುಂ ಗುರುಭ್ಯೋ ನಮಃ'' ಎಂಬ ಮಂತ್ರದಿಂದ ಗುರುನಮಸ್ಕಾರಗೈದ. ಈ ಗುರುಮಂತ್ರವನ್ನು ನೂರೆಂಟು ಹೇಳಿ, ನೂರೆಂಟು ಬಾರಿ ಜಪ ಮಾಡಿ, ಮತ್ತೆ ಗುರು ಜನರಿಗೆಲ್ಲ ವಂದನೆಯನ್ನು ಸಲ್ಲಿಸಿ ಅನಂತರ ಗಣೇಶ್ವರ ಪೂಜಾವಿಧಾನವನ್ನು ಆರಂಭಿಸಿದನು.

## ಶ್ರೀ ಗಣೇಶ ಮಂತ್ರದ ಜಪ ಹೋಮಗಳ ವಿಧಿ ವಿಧಾನ

ಗಣಪತಿ ಮಂತ್ರವು ಸರ್ವಕಾರ್ಯಗಳ ಸಿದ್ಧಿಪ್ರದ. ಅದರ ಪಠಣೆಯಿಂದ ಸರ್ವ ಪ್ರಯೋಜನಗಳೂ ಸಿದ್ಧಿಸುವವು. ಆ ಗಣಪತಿ ಮಂತ್ರವು ಹೀಗೆ ಇದೆ. ''ಓಂ ಗಾಂ, ಗೀಂ, ಗೂಂ, ಗೈಂ, ಗೌಂ, ಗಃ' ಇದೇ ಗಣಪತಿ ಸಪ್ತಾಕ್ಷರಿ ಮಂತ್ರ. ಅದರ ವಿನಿಯೋಗ ವಾಕ್ಯ ರಚನೆಯು ಇಂತಿದೆ.

"ಓಂ ಅಸ್ಯ ಶ್ರೀ ಗಣಪತಿ ಮಹಾಮಂತ್ರಸ್ಯ ಗಣೋ ನಾಮ
ಋಷಿರ್ವಿಘ್ನೇಶ್ವರೋ ದೇವತಾ. ಗಂ ಬೀಜಮ್.
ಓಂ ಶಕ್ತಿ: ಪೂಜಾರ್ಥೇ ಜಪಾರ್ಥೆ ತಿಲಕಾರ್ಥೇ ವಾ
ಮನ ಈಪ್ಸಿತಾರ್ಥೇ ಹೋಮಾರ್ಥೇ ವಾ ವಿನಿಯೋಗಃ ॥

ಈ ಗಣಪತಿ ಮಂತ್ರಕ್ಕೆ, ಗಣ ಎಂಬ ಹೆಸರಿನ ಋಷಿ, ವಿಘ್ನೇಶ್ವರ ದೇವತೆ. 'ಗಂ' ಎಂಬುದು ಬೀಜಾಕ್ಷರ. ಓಂಕಾರವೇ ಶಕ್ತಿ, ಪೂಜೆ, ಜಪ ತಿಲಕ, ಮನೋರಥ ಸಿದ್ಧಿ ಅಥವಾ ಹೋಮಕ್ಕಾಗಿ ಇದರ ವಿನಿಯೋಗ ಇರುತ್ತದೆ. ಮೊದಲು ಹೇಳಿದ ಮೂಲ ಮಂತ್ರದಿಂದ ಗಣಪತಿಗೆ ಪೂಜೆ ಮಾಡಿ ಚಂದನವನ್ನು ಲೇಪಿಸಬೇಕು. ಗಂಧ ಹಚ್ಚಬೇಕು. ಹೂ ಏರಿಸಬೇಕು. ಧೂಪವನ್ನು ತೋರಿಸಬೇಕು. ದೀಪವನ್ನು ಬೆಳಗಬೇಕು. ನೈವೇದ್ಯವನು ಅರ್ಪಿಸಬೇಕು. ತಾಂಬೂಲವನ್ನು ನಿವೇದಿಸಬೇಕು. ಅನಂತರ ಅದೇ ಓಂ, ಗಾಂ, ಗೀಂ, ಗೂಂ, ಗೈಂ, ಗೌಂ, ಗಃ ಎಂಬ ಮೂಲಮಂತ್ರವನ್ನು ನೂರು ಎಂಟು, ಇಲ್ಲವೇ ಒಂದು ಸಾವಿರ, ಲಕ್ಷ, ಅಥವಾ ಕೋಟಿ ತನ್ನ ಶಕ್ತ್ಯಾನುಸಾರ ಜಪ ಮಾಡಿ ದಶಾಂಶ ಹೋಮ ಮಾಡಬೇಕು. ನೂರು ಜಪ ಮಾಡಿದರೆ, ಹತ್ತು ಹೋಮ, ಸಾವಿರ ಸಲ ಮಂತ್ರ ಜಪಿಸಿದರೆ, ಅದೇ ಮಂತ್ರದಿಂದ ನೂರು ಹೋಮ ಮಾಡಬೇಕು. ಒಟ್ಟಾರೆ ಮಂತ್ರ ಜಪದ ದಶಮಾಂಶ ಹೋಮವನ್ನು ಮಾಡಬೇಕು. ಈ ಹೋಮಕ್ಕಾಗಿ ಮೊದಲು ವಿಧ್ಯುಕ್ತ ರೀತಿಯಿಂದ ಅಗ್ನಿಪ್ರತಿಷ್ಠೆಯನ್ನು ಮಾಡಿ, "ಗಂ, ಗಣಪತಯೇ ಸ್ವಾಹಾ" ಎಂಬ ಮಂತ್ರದಿಂದ, ಗುಗ್ಗುಳದ ಉಂಡೆಗಳನ್ನು ಮಾಡಿ ಅವುಗಳನ್ನು ಹೋಮಿಸಬೇಕು. ಹೀಗೆ ಮಂತ್ರ ಹಾಗೂ ಹೋಮದ ವಿಧಾನದಿಂದ ಎಲ್ಲ ವಿಘ್ನಗಳೂ ನಷ್ಟವಾಗುತ್ತವೆ. ಮಾನವರ ಮನೋರಥ ಗಳೆಲ್ಲವೂ ಪೂರ್ಣವಾಗುತ್ತವೆ.

ಆ ವಿಜಯ ಬ್ರಾಹ್ಮಣನಿಗೆ, ಈ ಎಲ್ಲ ಗಣೇಶ ಕಲ್ಪದ ವಿಧಿ ವಿಧಾನಗಳ ಪರಿಜ್ಞಾನವು ಚೆನ್ನಾಗಿಯೇ ಇದ್ದಿತು. ಆದುದರಿಂದ ಅವನು ನೂರೆಂಟು ಮಂತ್ರ ಜಪ ದಶಾಂಶ ಗುಗ್ಗುಳಗಳಿಂದ ಆಹುತಿಯನ್ನು ಕೊಟ್ಟು ಶಾಸ್ತ್ರೋಕ್ತವಾಗಿ ಸಿದ್ಧಿ ವಿನಾಯಕನ ಪೂಜೆಯನ್ನು ಮಾಡಿದನು. ಅನಂತರ ಸಿದ್ಧಾಂಬಿಕೆಯ ವಂದನೆಗೈದು, ಅಪರಾಜಿತಾ ಎಂಬ ಮಹಾವಿದ್ಯೆಯ ಸಾಧನಾನುಷ್ಠಾನ ಸಹಿತವಾದ ಜಪವನ್ನು ಮಾಡಿದನು. ಅದರ ಸ್ಮರಣಮಾತ್ರದಿಂದಲೇ ದೂರವಾಗುವವು ಮಾನವರ ದುಃಖ ದುರಿತಗಳೆಲ್ಲವೂ

## ವೈಷ್ಣವೀ ವಿದ್ಯೆಯ ಮಂತ್ರಜಪ

"ಓಂ ನಮೋ ಭಗವತೇ ವಾಸುದೇವಾಯ
ನಮೋಽನಂತಾಯ ಸಹಸ್ರಶೀರ್ಷಿಣೇ ॥

ನಮಃ ಕ್ಷೀರಾಂಬುಧೌ ಶೇಷಭೋಗಶಯ್ಯಾಧಿ ಶಾಯಿನೇ.
ಗರುಡಾರೂಢ ದೇವಾಯ ನಮಃ ಪೀತಾಂಬರಾಯ ತೇ ॥

ಶ್ರೀ ವಾಸುದೇವ ಪ್ರದ್ಯುಮ್ನಾಽನಿರುದ್ಧಾಯ ನಮೋ ನಮಃ
ಸಂಕರ್ಷಣ ಚತುರ್ವ್ಯೂಹ ರೂಪಿಣೇ ತೇ ನಮೋ ನಮಃ ॥

ಹಯಗ್ರೀವಾಖ್ಯ ಸದ್ರೂಪ ಧಾರಿಣೇ ವಿಷ್ಣವೇ ನಮಃ

ನೃಸಿಂಹ ವಾಮನಾಖ್ಯಾಯ ತ್ರಿವಿಕ್ರಮ ನಮೋಽಸ್ತುತೇ ॥
ವರದಾಯ ವಿಶ್ವರೂಪಾಯ ಬಹುರೂಪಾಯ ತೇ ನಮಃ
ಮಧುಸೂಧನ ಗೋವಿಂದ ಪುರುಷೋತ್ತಮ ತೇ ನಮಃ ॥
ದಾಮೋದರ ಹೃಷಿಕೇಶ ಪದ್ಮನಾಭ ನಮೋಽಸ್ತುತೇ
ಮಹಾವರಾಹ ಶ್ರೀ ವಿಷ್ಣೋ ನಾರಾಯಣ ನಮೋಽಸ್ತುತೇ ॥

ಇದಕ್ಕೆ 'ಅಪರಾಜಿತಾ' 'ವೈಷ್ಣವೀ' ಮಹಾವಿದ್ಯೆ ಎನ್ನುವರು. ಈ ವಿದ್ಯೆಯ ಜಪ, ಪಾಠ, ಪಾರಾಯಣ, ಶ್ರವಣ, ಸ್ಮರಣ, ಧಾರಣ, ಕೀರ್ತನ, ಮುಂತಾದವುಗಳನ್ನು ಮಾಡಿದರೆ, ಬೆಂಕಿ, ನೀರು, ಸಿಡಿಲು, ಕಲ್ಲು, ವಜ್ರ, ಮಳೆ, ಗಾಳಿ, ಬಿಸಿಲುಗಳಿಂದ ಯಾವ ಅಪಾಯವೂ ಬರುವುದಿಲ್ಲ.

ವಿಜಯನು ಈ ವಿದ್ಯೆಯನ್ನು ಸಾಧನ ಮಾಡುವ ಕಾರ್ಯದಲ್ಲಿ ತತ್ಪರನಾಗಿದ್ದನು. ಆ ಕಾಲದಲ್ಲಿ ಮಧ್ಯರಾತ್ರಿ, ಸುತ್ತುಮುತ್ತಲು ಬರೀ ಕತ್ತಲು, ಈ ವೈಷ್ಣವೀ ವಿದ್ಯೆಯ ಸಾಧನೆಗೆ ವಿಘ್ನ ಉಂಟುಮಾಡಬೇಕೆಂದು ಅಲ್ಲಿಗೆ ಒಂದು ರಾಕ್ಷಸಿ ಬಂದಿತು. ಜಾಗರೂಕನಾಗಿಯೇ ನಿಂತುಕೊಂಡಿದ್ದ ಬರ್ಬರೀಕ. ಆ ದುಷ್ಟ ರಾಕ್ಷಸಿಯನ್ನು ತನ್ನ ಪರಾಕ್ರಮದಿಂದ ಓಡಿಸಿಬಿಟ್ಟ. ಮುಂದೆ ಸ್ವಲ್ಪ ಸಮಯದಲ್ಲಿ, ಮತ್ತೊಂದು ವಿಘ್ನವು ಉಪಸ್ಥಿತವಾಯಿತು. ಅದನ್ನೂ ನಿವಾರಿಸಿದ ಆ ಘಟೋತ್ಕಚ ಪುತ್ರ. ಆ ಬಳಿಕ ರೇಪಲೇಂದ್ರ ಎಂಬ ಹೆಸರಿನ ಓರ್ವ ದುರ್ದಾನವ, ಜಪಾನುಷ್ಠಾನ ತತ್ಪರನಾದ ವಿಜಯನ ಕಡೆಗೆ ಧಾವಿಸಿದ.

ಅಕರಾಳ ವಿಕರಾಳವಾಗಿತ್ತು ಆ ರೇಪಲೇಂದ್ರನ ದೇಹ. ಎರಡು ಮೈಲು ಉದ್ದ, ನೂರು ತಲೆ, ನೂರು ಹೊಟ್ಟೆ, ಅನೇಕ ಕೈಕಾಲುಗಳು ಉಲ್ಬಣವಾದ ಬೆಂಕಿಯ ಜ್ವಾಲೆಗಳನ್ನೇ ಉಗುಳುತ್ತ ಬರುತ್ತಿದ್ದ ಆ ದಾರುಣ ದೈತ್ಯ. ಅವನನ್ನು ಕಂಡಕೂಡಲೇ ಬರ್ಬರೀಕನು ಅವನೆಡೆಗೆ ಓಡಿದ. ಅವರಿಬ್ಬರ ನಡುವೆ, ಪ್ರಾರಂಭವಾಯಿತು ಭೀಕರ ಹೋರಾಟ. ಮಹಾಪರಾಕ್ರಮ ಶಾಲಿ ಈ ಘಟೋತ್ಕಚ ಕುಮಾರ. ಬೆಟ್ಟದಾಕಾರದ ಆ ಭೂತದೈತ್ಯನನ್ನು ಹೊಡೆದು ಕೆಡವಿದ. ನೆಲದ ಮೇಲೆ ಬೀಳಿಸಿದ. ಭೂಮಿಗುಂಟ ಎಳೆದಾಡಿದ. ಅವನ ಜೀವ ಹೋಗುವವರೆಗೂ ಬಿಡಲೇ ಇಲ್ಲ. ಆ ದುಷ್ಟ ದೈತ್ಯನು ಬರ್ಬರೀಕನ ಹೊಡೆತ ಬಡೆತಗಳನ್ನು ತಾಳಲಾರದೆ ಪ್ರಾಣಬಿಟ್ಟ. ಅವನು ಮರಣ ಹೊಂದಿದ ಬಳಿಕ ಆ ದೈತ್ಯನ ದೆವ್ವದಂಥ ದೇಹವನ್ನು ಆಗ್ನೇಯ ಕೋಣದಲ್ಲಿ ಮಹೀಸಾಗರ ಸಂಗಮತೀರ್ಥದ ದಂಡೆಯ ಮೇಲೆ ಬೀಳುವಂತೆ ತೂರಿ ಒಗೆದ.

ಹೀಗೆ ಬರ್ಬರೀಕನ ಒಂದು ಮಹಾಭೂತವನ್ನು ಕೊಂದು, ಮತ್ತೆ ಆ ವಿಜಯ ಬ್ರಾಹ್ಮಣನ ರಕ್ಷಣೆಗಾಗಿ ಜಾಗರೂಕನಾಗಿ ನಿಂತ. ರಾತ್ರಿಯ ಮೂರನೆಯ ಪ್ರಹರದಲ್ಲಿ ದಕ್ಷಿಣ ದಿಕ್ಕಿನಿಂದ ಬಂದಿತು ಒಂದು ಮಹಾರಾಕ್ಷಸಿ. ನಡೆದಾಡುವ ಗುಡ್ಡದಂತಿದ್ದಿತು ಆ ರಾಕ್ಷಸಿ ನಡೆದಾಡುವಾಗ ನೆಲವೆಲ್ಲ ನಡುಗುತ್ತಿತ್ತು. ಅದರ ಗರ್ಜನೆಯಿಂದ ಮುಗಿಲು ಬಿರಿಯುತ್ತಿತ್ತು. ಆ ರಕ್ಕಸಿಯ ಹೆಸರು ''ದ್ರೋಹದ್ರುಹಾ''. ಅದರ ಆಗಮನದ ಅಬ್ಬರವನ್ನು ನೋಡಿ ಬರ್ಬರೀಕ ನಿರ್ಭಯವಾಗಿ ಎದ್ದು ನಿಂತ. ಅದರ ಹತ್ತಿರ ಹೋದ. ಮುಂದೆ ಬರುವ ಆ ರಕ್ಕಸಿಯನ್ನು ತಡೆದು ನಿಲ್ಲಿಸಿದ. ಮುಷ್ಟಿ ಬಿಗಿದ, ದವಡೆ ಕಚ್ಚಿದ. ತನ್ನ ವಜ್ರಮುಷ್ಟಿಯಿಂದ ಒಂದು ಬಲವಾದ ಪ್ರಹಾರವನ್ನು ಕೊಟ್ಟು ಆ ಹೆಣ್ಣು ರಾಕ್ಷಸಿಯನ್ನು ಹಣಿದ. ಈ ಇವನ ಮುಷ್ಟಿ ಪ್ರಹಾರವನ್ನು ತಾಳಲಾರದೆ ನೆಲದ ಮೇಲೆ ಬಿದ್ದಿತು ಆ ರಾಕ್ಷಸಿ.

ಅದರ ಮೇಲೆ ಬಿದ್ದು ಬರ್ಬರೀಕ ಕತ್ತು ಹಿಸುಕಿದ. ಆ ಕ್ಷಣದಲ್ಲಿಯೇ ಸತ್ತು ಬಿದ್ದಿತು ಆ ಘೋರ ಮಾರಿ.

ಆ ಘೋರ ದಾನವಿಯನ್ನು ಸಂಹರಿಸಿ ವಿಜಯನ ರಕ್ಷಣೆಗಾಗಿ ಮತ್ತೆ ನಡು ಕಟ್ಟಿ ನಿಂತ ಸುಹೃದಯ. ರಾತ್ರಿಯ ನಾಲ್ಕನೆಯ ಪ್ರಹರ. ತಂಗಾಳಿ ತೀಡುತ್ತಲಿತ್ತು. ಮುಗಿಲಿನ ಅಂಗಳದಲ್ಲಿ ನಕ್ಷತ್ರಗಳ ಮಿಣುಕು ದೀಪಗಳ ಮಂಗಳಾರತಿ. ಆ ಕಾಲದಲ್ಲಿ ಅಲ್ಲಿಗೆ ಓರ್ವ ಸನ್ಯಾಸಿಯ ಆಗಮನ. ಅವನ ವೇಷ ದಿಗಂಬರ. ಭಾಷೆ ಗೂಡ ಗುಂಜನ. ಮಹಾ ಸತ್ಪುರುಷನ ಸೋಗು. ಅವನು ಬರ್ಬರೀಕನ ಬಳಿಗೆ ಬಂದ. ಅವನ ಸನ್ಯಾಸಿ ವೇಷ ಕಂಡು ಬರ್ಬರೀಕ ಅವನ ಮೇಲೆ ಅಸ್ತ್ರ ಎತ್ತಲಿಲ್ಲ. ಏರಿ ಹೋಗಲಿಲ್ಲ. ನಿಶ್ಚೇಷ್ಟಿತನಾಗಿ ನಿಂತುಕೊಂಡ. ಅವನ ನಿಷ್ಕ್ರಿಯತೆಯ ಲಾಭವನ್ನು ತೆಗೆದು ಕೊಂಡುಬಿಟ್ಟ ಆ ಕಪಟ ಸನ್ಯಾಸಿ. ಬರ್ಬರೀಕನ ಬಳಿಗೆ ಬಂದು ಮಧುರ ಧ್ವನಿಯಿಂದ ನುಡಿದ.

**ದಿಗಂಬರ ಸಾಧು:-** ಅಕಟಕಟಾ! ಇದು ಏನು ಅನ್ಯಾಯ? ಇದೆಂಥ ಘೋರ ಕೃತ್ಯ. ನಿಮಗೆ ತಿಳಿಯದೆ? "ಅಹಿಂಸಾ ಪರಮೋ ಧರ್ಮಃ" ಯಾರನ್ನೂ ಯಾವ ರೀತಿಯಿಂದಲೂ ಹಿಂಸಿಸಬಾರದು. ಅಹಿಂಸೆಯೆ ಮುಖ್ಯ ಧರ್ಮ. ಆದರೆ, ನೀವು ಇಲ್ಲಿ ಇದನ್ನೇನು ನಡೆಸಿರುವಿರಿ? ಇಲ್ಲಿ ಈಗ ಇಷ್ಟು ಬೆಂಕಿಯನ್ನೇಕೆ ಉರಿಸುತ್ತಿರುವಿರಿ? ಬೆಂಕಿಯಲ್ಲಿ ನೀವು ಆಹುತಿಯನ್ನು ನೀಡುವಾಗ ಅನೇಕ ಸೂಕ್ಷ್ಮಜೀವಿಗಳ ಪ್ರಚಂಡ ಸಂಹಾರವು ಆಗುವುದಿಲ್ಲವೇ? ಪ್ರಾಣಹಿಂಸೆ ಮಹಾಪಾಪ.

**ಬರ್ಬರೀಕ:-** ಅಗ್ನಿಯಲ್ಲಿ ಆಹುತಿ ಕೊಡುವದರಿಂದ ಎಲ್ಲ ದೇವತೆಗಳಿಗೂ ಸಂತೃಪ್ತಿ. ನಮಗೆಲ್ಲರಿಗೂ ಸ್ವರ್ಗಲಾಭ. ಪುಣ್ಯಪ್ರಾಪ್ತಿ, ನೀನಾವನೋ ದುರ್ಬುದ್ಧಿಯ ಪಾಪಿಷ್ಠನು ಈ ಯಜ್ಞಕ್ರಮವನ್ನು ನಿಂದಿಸುತ್ತಿರುವೆ? ನೀನು ಧರ್ಮ ದ್ರೋಹಿ. ನೀನು ನಿಜವಾಗಿಯೂ ದಂಡನೀಯ. ಒಂದು ಕ್ಷಣ ನಿಲ್ಲು. ನಿನ್ನನ್ನು ನೋಡಿಕೊಳ್ಳುವೆ." ಹೀಗೆ ಹೇಳಿ ಬರ್ಬರಿಕನು ಆ ಧೂರ್ತ ಸನ್ಯಾಸಿಯ ಬಳಿಗೆ ಹೋಗಿ ಮುಷ್ಟಿಯಿಂದ ಹೊಡೆದನು. ಮೈತುಂಬ ಗುದ್ದುಗಳನ್ನು ಕೊಟ್ಟನು. ಮುಖದ ಮೇಲೆ ಮೂರು ಏಟ ಕೊಟ್ಟು ಆ ಠಕ್ಕಯತಿಯ ಮೂವತ್ತೆರಡು ಹಲ್ಲುಗಳನ್ನು ಉದುರಿಸಿದನು. ವಾಸ್ತವಿಕವಾಗಿ ಅವನು ಸನ್ಯಾಸಿ ಅಲ್ಲ. ಅವನೊಬ್ಬ ದೈತ್ಯ.

ಬರ್ಬರೀಕನ ಭಯಂಕರ ಮುಷ್ಟಿ ಪ್ರಹಾರದಿಂದ ಮೂರ್ಛೆ ಬಂದು ಬಿದ್ದ ಆ ಕಪಟ ಯತಿ. ಅವನು ಮೂರ್ಛಿತನಾದದ್ದನ್ನು ನೋಡಿ ಬರ್ಬರೀಕ ಅವನನ್ನು ಬಿಟ್ಟು ಇತ್ತ ತಿರುಗಿದ. ಮರುಕ್ಷಣದಲ್ಲಿ ಎಚ್ಚರಾಯಿತು ಆ ದಿಗಂಬರನಿಗೆ. ಎದ್ದು ಬರ್ಬರೀಕನು ತನ್ನ ಕಡೆ ಬೆನ್ನುಹಾಕಿ ಬೇರೆ ಕಡೆ ನೋಡುವುದನ್ನು ಗಮನಿಸಿದ. ಕೂಡಲೇ ಅಲ್ಲಿಂದ ಓಡಿದ. ಬರ್ಬರೀಕನು ತಿರುಗಿ ನೋಡುವಷ್ಟರಲ್ಲಿ ದೂರ ಓಡಿದ್ದ ಸನ್ಯಾಸಿ. ಬರ್ಬರೀಕನ ಕೋಪ ಕೆರಳಿತು. ಆ ಸನ್ಯಾಸಿಯನ್ನು ಬೆನ್ನಟ್ಟಿದ. ಅವನು ಗರುಡನಂತೆ ಓಡಿದರೆ, ಇವನು ಗಾಳಿಯಂತೆ ಹಿಂಬಾಲಿಸಿದ. ಸಂನ್ಯಾಸಿ ಒಂದು ಗುಹೆಯನ್ನು ಹೊಕ್ಕ. ಅಲ್ಲಿಯೇ ಆಗಮಿಸಿದ ಬರ್ಬರೀಕ. ಅಲ್ಲಿಂದ ಆ ಸಂನ್ಯಾಸಿ ಪಾತಾಳಕ್ಕೆ ಇಳಿದ. ಅಲ್ಲಿಯೂ ಸಾರಿದ ಸುಹೃದಯ.

ಅಲ್ಲಿ ಅರವತ್ತು ಯೋಜನ ವಿಸ್ತೀರ್ಣವಾದ ಒಂದು ನಗರ. ಅದರ ಹೆಸರು ಬಹುಪ್ರಭ. ಅಲ್ಲಿಯೂ ಬಿಡಲಿಲ್ಲ ಬರ್ಬರೀಕ ಆ ದಿಗಂಬರ ದೈತ್ಯನನ್ನು. ಆ ನಗರದಲ್ಲಿ ಪಲಾಶಿ ಎಂಬ ಹೆಸರಿನ ಮಾಂಸಾಹಾರಿ ರಾಕ್ಷಸರ ನಿವಾಸ. ಅವರೆಲ್ಲರೂ ಈ ಭೀಕರಾಕಾರದ

ತರುಣ ತೇಜಸ್ವಿ ಬರ್ಬರೀಕನನ್ನು ಕಂಡು ಚೀರ ತೊಡಗಿದರು. "ಓಡಿರಿ, ಹಿಡಿಯಿರಿ. ಬಡಿಯಿರಿ ಕಡಿಯಿರಿ. ಸೀಳಿರಿ. ಕೊಲ್ಲಿರಿ." ಎಂದು ಮುಂತಾಗಿ ಒದರುತ್ತಾ ಬರ್ಬರೀಕನ ಮೇಲೆ ಏರಿ ಬಂದರು. ಹಾರಿ ಹೊಡೆದರು. ಈ ಬರ್ಬರೀಕನು ನಿಜವಾಗಿಯೂ ನಿರ್ಭೀತ. ಆ ಎಲ್ಲ ದೈತ್ಯ ದಾನವರ ಈ ಎಲ್ಲ ಘೋರ ಘೋಷಣೆ. ಭೀಕರ ಉದ್ಗಾರಗಳನ್ನು ಕೇಳಿ ಇನಿತೂ ಅವನು ಹೆದರಲಿಲ್ಲ. ನಿರ್ಭಯನಾದ ಆ ಬರ್ಬರೀಕ ದುಶ್ಚೇಷ್ಟೆಗಳಿಂದ ಅಬ್ಬರಿಸಿ ಬರುವ ಆ ದೈತ್ಯರನ್ನೆಲ್ಲ ಏಕಾಕಿ ಆಗಿ ಎದುರಿಸಿದ.

ಘೋರತರವಾದ ಶಸ್ತ್ರಾಸ್ತ್ರಗಳನ್ನು ಧರಿಸಿದ ಒಂಬತ್ತು ಕೋಟಿ ದುಷ್ಟ ದೈತ್ಯರೂ ಏಕಾಕಿ ಆದ ಅವನ ಮೇಲೆ ಮುಗಿಬಿದ್ದರು. ಇಷ್ಟಾದರೂ ಆ ಘಟೋತ್ಕಚ ಕುಮಾರನು ಅಂಜಲಿಲ್ಲ. ಅಳುಕಲಿಲ್ಲ. ಧೈರ್ಯದಿಂದಲೇ ಶಸ್ತ್ರಾಸ್ತ್ರಗಳಿಂದ ಸುಸಜ್ಜವಾದ ನವಕೋಟಿ ದೈತ್ಯ ದಳಪತಿಗಳನ್ನು ವೀರಾವೇಶದಿಂದ ಕಡಿದು ಕೊಚ್ಚತೊಡಗಿದ. ಕಲಿತನದಿಂದ ಕಾದಿದ. ಶೌರ್ಯದಿಂದ ಹೊಡೆದು ಹೆಣಗಳ ಹಡದಿ ಹಾಸಿದ. ತಂಡ ತಂಡವಾಗಿ ಏರಿಬಂದ ಉದ್ದಂಡ ದೈತ್ಯರೆಲ್ಲರು ಬರ್ಬರೀಕನ ಹೊಡೆತ ತಿಂದು ತುಂಡು ತುಂಡಾಗಿ ಬಿದ್ದರು. ಕೆಲವೇ ಕ್ಷಣದಲ್ಲಿ ಬರ್ಬರೀಕನ ವಿಲಕ್ಷಣ ಪರಾಕ್ರಮದಿಂದ ಆ ರಾಕ್ಷಸರ ಪ್ರಚಂಡ ಸೇನೆಯೆಲ್ಲವೂ ಕ್ಷತ ವಿಕ್ಷತ. ನವಕೋಟಿ ದಾನವರೆಲ್ಲರೂ ಭಿನ್ನ ವಿಚ್ಛಿನ್ನ.

ಬರ್ಬರೀಕನ ಈ ಲೋಕೋತ್ತರವಾದ ಪೌರುಷ ಪರಾಕ್ರಮವನ್ನು ಕಂಡು ಪಾತಾಳ ಲೋಕದ ನಾಗ ಧುರೀಣರೆಲ್ಲರೂ ಭಯಭಕ್ತಿಯಿಂದ ಅಲ್ಲಿಗೆ ಬಂದರು. ತಮ್ಮ ಹಣೆಯ ಮೇಲಿನ ಮಣಿಗಳ ರತ್ನ ಕಾಂತಿಯಿಂದ ನೀರಾಜನಗೈದು ಸೌಜನ್ಯದಿಂದ ಹಾಗೂ ಸಂತಸದಿಂದ ಶಾಂತ ಸ್ವರದಲ್ಲಿ ಸ್ವಾಗತಿಸಿದರು. ಸರ್ಪಸಾರ್ವಭೌಮನಾದ ವಾಸುಕಿಯು ಆ ನಾಗಗಳಿಗೆ ಮುಖವಾಗಿ ಮಾತನಾಡಿದ.

**ವಾಸುಕಿ:-** ಭೈಮನಂದನ! ನೀನು ನಾಗಲೋಕ ನಿವಾಸಿಗಳಾದ ನಮ್ಮೆಲ್ಲರ ಮೇಲೆ ಮಹೋಪಕಾರವನ್ನು ಮಾಡಿರುವೆ. ಇಷ್ಟು ದಿನ ಈ ನಮ್ಮ ಪಾತಾಳಲೋಕಕ್ಕೆ ಬಂದು ನಮ್ಮನ್ನು ಪರಿಪರಿಯಿಂದ ಪೀಡಿಸುತ್ತಿದ್ದ ಈ ಪಲಾಶಿ ದೈತ್ಯರನ್ನು ಏಕೈಕ ವೀರನಾದ ನೀನು ಕಡಿದು ಕೊಂದು ಹಾಕಿದೆ. ಈ ದುಷ್ಟ ದೈತ್ಯರು ನಮ್ಮ ಲೋಕಕ್ಕೆ ಬಂದು ನಮಗೆ ಉಪದ್ರವ ಕೊಟ್ಟು ನಮ್ಮನ್ನೆಲ್ಲ ಇಲ್ಲಿಂದ ಓಡಿಸಿ ಬಿಟ್ಟಿದ್ದರು. ಈಗ ಅವರೆಲ್ಲರನ್ನೂ ನಿರ್ಮೂಲ ಮಾಡಿ ನೀನು ನಮ್ಮೆಲ್ಲರನ್ನೂ ಬದುಕಿಸಿರುವೆ. ನಿನ್ನಿಂದ ನಾವು ಈ ಪಾತಾಳ ಲೋಕದಲ್ಲಿ ಸ್ವರ್ಗಸುಖ ಅನುಭವಿಸುತ್ತ ಸುಖದಿಂದ ಇರುವಂತಾಯ್ತು. ನಿನ್ನ ಉಪಕಾರವನ್ನು ನಾವೆಂದೂ ಮರೆಯಲಾರೆವು. ನಿನಗೆ ಬೇಕಾದ ವರವನ್ನು ಕೇಳು ನಾವು ನೀಡುತ್ತೇನೆ.

**ಬರ್ಬರೀಕ:-** ಫಣೀಶ್ವರರೇ, ನೀವು ನನ್ನ ಮೇಲೆ ಸಂತುಷ್ಟರಾಗಿದ್ದರೆ ಒಂದು ವರವನ್ನು ಕೊಡಿರಿ. ಭೂಲೋಕದಲ್ಲಿ ವಿದ್ಯೆಯ ಸಾಧನೆಗಾಗಿ ಅನುಷ್ಠಾನವನ್ನು ಕೈಕೊಂಡ ವಿಜಯ ಬ್ರಾಹ್ಮಣನ ಜಪತಪಶ್ಚರ್ಯೆಯು ಯಾವ ವಿಘ್ನವೂ ಬಾರದಂತೆ ನಿರಾತಂಕವಾಗಿ ನೆರವೇರಲಿ."

ಬರ್ಬರೀಕನ ಈ ವಿನಂತಿಯನ್ನು ಆ ಎಲ್ಲ ನಾಗಾಧುರೀಣರು ಪ್ರಸನ್ನಮನಸ್ಸಿನಿಂದ ಅಭಿನಂದಿಸಿ ಅವನು ಬೇಡಿದ ವರವನ್ನು ನೀಡಿದರು. ವಿಜಯ ಬ್ರಾಹ್ಮಣನ ಮಂತ್ರ

ವಿದ್ಯಾಸಾಧನೆಯು ನಿರ್ವಿಘ್ನವಾಗಿ ನಡೆಯಲಿ ಎಂದು ಹರಸಿದರು. ಆಗ ಬರ್ಬರೀಕನು ಪಲಾಶಿ ದೈತ್ಯರನ್ನೆಲ್ಲ ಕೊಂದು ತಾನು ಸ್ವಾಧೀನಪಡಿಸಿಕೊಂಡ ಪಾತಾಳಲೋಕವನ್ನೂ ಅದರ ಸ್ವಾಮಿತ್ವವನ್ನೂ ಉದಾರಬುದ್ಧಿಯಿಂದ ಆ ಪನ್ನಗ ಪ್ರಮುಖರಿಗೆ ಒಪ್ಪಿಸಿಕೊಟ್ಟು ಅವರಿಂದ ಸತ್ಕಾರವನ್ನು ಪಡೆದು ತಾನು ಭೂಲೋಕಕ್ಕೆ ಮರಳಿದನು.

ದಿಗಂಬರ ಸನ್ಯಾಸಿಯ ಬೆನ್ನುಹತ್ತಿ ದೊಡ್ಡ ಬಿಲವನ್ನು ಹೊಕ್ಕು ಆ ಗುಹಾಮಾರ್ಗ ವಾಗಿಯೇ ಅವನು ಪಾತಾಳಕ್ಕೆ ಇಳಿದು ಬರುವಾಗ ಅವನಿಗೆ ಆ ಮಾರ್ಗದ ಕಡೆಗೆ ಲಕ್ಷ್ಯವೇ ಇರಲಿಲ್ಲ. ಆ ಸನ್ಯಾಸಿಯೊಬ್ಬನೇ ಅವನ ಏಕಮಾತ್ರ ಲಕ್ಷ್ಯವಾಗಿದ್ದನು. ಈಗ ಮರಳಿ ಅದೇ ಮಾರ್ಗದಿಂದ ಹೋಗುವಾಗ ಅವನಿಗೆ ಯಾವುದೇ ಅವಸರ ಇರಲಿಲ್ಲ. ಎಲ್ಲೆಡೆ ದೃಷ್ಟಿ ಚೆಲ್ಲಿ ನೋಡುತ್ತ ಬಂದನು. ದಾರಿಯಲ್ಲಿ ಅವನಿಗೆ ಒಂದು ಕಲ್ಪವೃಕ್ಷ ಕಂಡಿತು. ಆ ದೇವತರುವಿನ ಬುಡದಡಿಯಲ್ಲಿಯೇ ಒಂದು ರತ್ನಲಿಂಗ. ಅದರ ಕಾಂತಿಕಿರಣಗಳಿಂದ ದಿಗಂತರಾಳವೆಲ್ಲವೂ ಪ್ರಕಾಶಿತ. ಅನೇಕ ನಾಗಕನ್ಯೆಯರು ಅದರ ಪೂಜೆಗೈಯುತ್ತಿದ್ದರು. ಅದನ್ನು ನೋಡಿ ಬರ್ಬರೀಕನಿಗೆ ಇನ್ನಿಲ್ಲದ ಆಶ್ಚರ್ಯ. ಕೇಳಿಯೇ ಬಿಟ್ಟ ಅವನು ಆ ನಾಗಕನ್ಯೆಯರನ್ನು.

## ಶಿವಲಿಂಗದ ಮಹಿಮೆ

**ಬರ್ಬರೀಕ:-** ''ಇದೆಂಥ ಶಿವಲಿಂಗ? ಇದರ ಹೊಳಪು ಸೂರ್ಯನಿಗಿಂತ ಮಿಗಿಲು. ಇದರ ತೇಜ ಅಗ್ನಿಗಿಂತ ಉದ್ದೀಪಿತ. ಈ ನವರತ್ನ ಪ್ರಭಾಭಾಸುರವಾದ ಶಿವಲಿಂಗವನ್ನು ಸ್ಥಾಪನೆ ಮಾಡಿದ ಪುಣ್ಯಾತ್ಮ ಯಾರು? ಈ ಶಿವಲಿಂಗದ ನಾಲ್ಕು ಬದಿಗಳಿಂದಲೂ ನಾಲ್ಕು ದಾರಿಗಳು ಹೋಗಿವೆ. ಆ ದಾರಿಗಳು ಯಾವವು? ಎಲ್ಲಿ ಹೋಗುವವು? ಎಲ್ಲಿ ಕೂಡುವವು? ಇದೆಲ್ಲದರ ಪರಿಚಯವನ್ನು ನನಗೆ ದಯವಿಟ್ಟು ಮಾಡಿಕೊಡಿರಿ.''

ಬರ್ಬರೀಕನ ಮಾತುಗಳನ್ನು ಕೇಳಿ ಆ ನಾಗಕನ್ಯೆಯರು ಸಂಕೋಚದಿಂದ ನಸುನಾಚಿ ಬಳ್ಳಿಯಂತೆ ಬಳುಕುತ್ತ ನುಡಿದರು.

**ನಾಗಕನ್ಯೆಯರು:-** ನಾಗಸಾಮ್ರಾಜ್ಯದ ನಾಯಕನಾದ ಆದಿಶೇಷನು ಉಗ್ರವಾದ ತಪಸ್ಸನ್ನು ಮಾಡಿ ಈ ಮಹಾಲಿಂಗವನ್ನು ಪ್ರತಿಷ್ಠೆ ಮಾಡಿದ ಪುಣ್ಯಾತ್ಮ. ಈ ರತ್ನಲಿಂಗದ ದರ್ಶನದಿಂದ ಪುಣ್ಯ, ಸ್ಪರ್ಶನದಿಂದ ಪಾಪನಾಶ. ಧ್ಯಾನದಿಂದ ಸೌಭಾಗ್ಯ, ಪೂಜೆಯಿಂದ ಸರ್ವಸಮೃದ್ಧಿ. ಈ ಮಹಾಲಿಂಗದ ನಿರಂತರ ಆರಾಧನೆ, ಉಪಾಸನೆ-ಅರ್ಚನಗಳಿಂದ ಸರ್ವಸಿದ್ಧಿಗಳೂ ಸ್ವಾಧೀನವಾಗುವವು. ಈ ಲಿಂಗದಿಂದ ಪೂರ್ವದಿಕ್ಕಿಗೆ ಹೋಗುವ ದಾರಿಯು ಭೂಲೋಕಕ್ಕೆ ಹೋಗುವ ದಾರಿಯು. ಈ ಪೂರ್ವಮಾರ್ಗವು ಭುವನ ಮಂಡಲದಲ್ಲಿದ್ದ ಶ್ರೀಪರ್ವತದ ವರೆಗೆ ಹೋಗಿ ಮುಟ್ಟುವದು. ಈ ನಾಗಲೋಕದಲ್ಲಿಯ ಜನರು ನಿಮ್ಮ ಮಧ್ಯಮ ಲೋಕ ಅಥವಾ ಭೂಲೋಕಕ್ಕೆ ಹೋಗುವ ಹೆದ್ದಾರಿ ಎಂದರೆ ಈ ಪೂರ್ವಮಾರ್ಗವೇ. ಈ ಪಾತಾಳಲೋಕ ಭೂಲೋಕಗಳ ನೇರ ಸಂಪರ್ಕವನ್ನು ಸಾಧಿಸುವ ಈ ಉಭಯ ಲೋಕಗಳ ರಾಜಮಾರ್ಗವನ್ನು ನಿರ್ಮಿಸಿದವನು ಸರ್ಪಕುಲ ಧುರೀಣನಾದ ಇಲಾಪುತ್ರ ಎಂಬ ನಾಗನಾಯಕ.

ಇಲ್ಲಿ ದಕ್ಷಿಣ ದಿಕ್ಕಿನಲ್ಲಿ ಕಾಣುವ ಇನ್ನೊಂದು ಮಾರ್ಗವೂ ಕೂಡ ಭೂಲೋಕದ ಒಂದು ಮಾರ್ಗವಾದ ಭರತಖಂಡದ ಶೂರ್ಪಾರು ಕ್ಷೇತ್ರಕ್ಕೆ ಹೋಗಿ ಕೂಡುತ್ತದೆ.

ಈ ಒಳಮಾರ್ಗವನ್ನು ಕರ್ಕೋಟಕ ಎಂಬ ನಾಗ ನೇತಾರನು ತನಗಾಗಿ ನಿರ್ಮಿಸಿದ್ದಾನೆ. ಇಲ್ಲಿ ಕಾಣುವ ಪಡುವಣ ನಿಟ್ಟಿನ ಮತ್ತೊಂದು ಮಾರ್ಗವು ಪೃಥ್ವೀಮಂಡಲದ ಪ್ರಭಾಸ ತೀರ್ಥಕ್ಕೆ ನೇರವಾಗಿ ಹೋಗಿ ತಲುಪುತ್ತದೆ. ಇದನ್ನು ಐರಾವತ ಎಂಬ ನಾಗೇಂದ್ರನು ಎಲ್ಲ ಸರ್ಪಗಳಿಗೂ ಭೂಲೋಕಕ್ಕೆ ಸರಳವಾಗಿ ಹೋಗಿಬರಲು ಸೌಕರ್ಯವಾಗಲಿ ಎಂದು ಕಷ್ಟಪಟ್ಟು ನಿರ್ಮಿಸಿದ್ದಾನೆ. ನಾಲ್ಕನೆಯದಾದ ಈ ತೆಂಕಣಮಾರ್ಗವು ಧರಾತಲದ ಕುರುಕ್ಷೇತ್ರದ ವರೆಗೆ ನೇರವಾಗಿ ಹೋಗಿದೆ. ತೀಕ್ಷ್ಣಸರ್ಪ ಎಂದು ಇತಿಹಾಸದಲ್ಲಿ ಪ್ರಸಿದ್ಧನಾದ ತಕ್ಷಕನೇ ಈ ತೀಕ್ಷ್ಣಮಾರ್ಗದ ನಿರ್ಮಾಪಕ. ಈ ತಕ್ಷಕನಿಗೆ ತನ್ನ ಅನೇಕ ವ್ಯಾವಹಾರಿಕ ಕಾರಣಗಳಿಗಾಗಿ ಪೃಥ್ವೀಮಂಡಳಕ್ಕೆ ಹೋಗಬೇಕಾಗುತ್ತಿತ್ತು. ಭಾರತದಲ್ಲಿ ನಡೆದ ಅನೇಕ ಸಾಮಾಜಿಕ ಹಾಗೂ ರಾಜಕೀಯ ಘಟನೆಗಳ ಹಿಂದೆ ತಕ್ಷಕ ನಾಗನ ಕೈವಾಡ ಇರುತ್ತಿತ್ತು. ಬೇಕು ಎಂದಾಗ ತತ್‌ಕ್ಷಣ ಭೂಲೋಕಕ್ಕೆ ಹೋಗಿಬರಲು ಅನುಕೂಲವಾಗಲಿ ಎಂದು ತಕ್ಷಕ ಎಂಬ ಪನ್ನಗಪತಿಯು ಕುರುಕ್ಷೇತ್ರದ ಈ ನೇರಮಾರ್ಗವನ್ನು ಅನೇಕ ನಾಗಕಾರ್ಮಿಕರ ಸಹಾಯದಿಂದ ಹಿಂದೆ ನಿರ್ಮಿಸಿಕೊಂಡಿದ್ದಾನೆ.

ಈ ಮಹಾಲಿಂಗದ ಮೇಲ್ಭಾಗದಿಂದ ಬೇರೊಂದು ಮಾರ್ಗವು ಕಾಣುವುದಲ್ಲವೆ? ಆ ಮಾರ್ಗವೇ ನೀವು ಆ ದಿಗಂಬರ ಸನ್ಯಾಸಿಯ ಬೆನ್ನಟ್ಟಿ, ಭೂಲೋಕದ ಒಂದು ಅದ್ಭುತ ಗುಹೆಯಲ್ಲಿ ಹೊಕ್ಕು, ಬಿಲದಲ್ಲಿ ಇಳಿದು, ಈ ನಾಗಲೋಕಕ್ಕೆ ಸಾಗಿಬಂದ ಸೂಕ್ಷ್ಮವಾದ ರಂಧ್ರಮಾರ್ಗ. ಈಗ ನೀವು ಮತ್ತೆ ಮರಳಿ ನಿಮ್ಮ ಮೇದಿನೀ ತಳಕ್ಕೆ ಹೊರಟಿರುವುದು ಇದೇ ಮಾರ್ಗದಿಂದ. ಈ ಕಿರುದಾರಿಯು ಅದೇ ನೀವು ಸಾಗಿಬಂದ ಬಿಲಮಾರ್ಗದಿಂದ ಭೂಲೋಕದ ವರೆಗೆ ಚಾಚಿ ಗುಪ್ತಕ್ಷೇತ್ರದ ಸಿದ್ಧಲಿಂಗದ ಬಳಿಯಲ್ಲಿ ಬಾಯ್ತೆರೆಯುತ್ತದೆ. ಈ ಮಾರ್ಗವನ್ನು ಪೂರ್ವಕಾಲದಲ್ಲಿ ಸರ್ವಸಮರ್ಥನಾದ ಪಾರ್ವತೀ ಪುತ್ರ ಸ್ಕಂದ ಸ್ವಾಮಿಯು ತನ್ನ ಶಕ್ತಿಪ್ರಹಾರದಿಂದ ನಿರ್ಮಿಸಿದ್ದಾನೆ.

ಮಹಾಪುರುಷ! ಈಗ ನಾವು ನಿನ್ನ ಬಿನ್ನಹದ ಮೇರೆಗೆ ನಮ್ಮ ಈ ನಾಗಲೋಕದಿಂದ ನರಲೋಕದವರೆಗೆ ಚಾಚಿರುವ ಪಂಚಮಾರ್ಗಗಳ ಪ್ರಕಾರ, ಹಿನ್ನೆಲೆ, ಇತಿಹಾಸ, ವ್ಯಾಪ್ತಿವಿಸ್ತಾರ ಎಲ್ಲವನ್ನೂ ವಿಸ್ತಾರವಾಗಿ ಬಿತ್ತರಿಸಿದ್ದೇವೆ.

ಆದರೆ, ನಮ್ಮಿಂದ ಈ ನಾಗಲೋಕದ ರಹಸ್ಯವನ್ನೆಲ್ಲ ಕೇಳಿ ತಿಳಿದುಕೊಂಡ ನೀನು ಯಾರು? ನಿನ್ನ ಪ್ರಾಯಪ್ರತಿಷ್ಠಿತವಾದ ಈ ದೇಹಯಷ್ಟಿಯ ಚೆಲುವು. ನಿಲುವು. ಕಾಯಕಾಂತಿ ಹಾಗೂ ತೇಜಸ್ವೀ ಮುಖಮಂಡಲವನ್ನು ಕಂಡು ನಾವು ಮುಗ್ಧರಾಗಿದ್ದೇವೆ. ನೀನು ಇದೀಗ ದಿಗಂಬರ ಸನ್ಯಾಸಿ ವೇಷದಲ್ಲಿದ್ದ ದೈತ್ಯನನ್ನು ಬೆನ್ನಟ್ಟಿ ಬಂದಿರುವೆ. ಈಗ ಒಬ್ಬನೇ ಮರಳಿ ಮಹೀತಳಕ್ಕೆ ಹೊರಟಿರುವೆ, ಇದರ ರಹಸ್ಯವೇನು? ನಮಗೆ ತಿಳಿಸು. ನಿನ್ನ ಈ ವೀರ ವಿಕ್ರಮ ಹಾಗೂ ಸಾಹಸಯಾತ್ರೆಯನ್ನು ಕಂಡು ನಾವು ನಿನ್ನನ್ನು ಮೆಚ್ಚಿದ್ದೇವೆ. ನಿನ್ನನ್ನು ಮದುವೆಯಾಗಲು ಬಯಸಿದ್ದೇವೆ. ನಮ್ಮನ್ನು ನೀನು ಮದುವೆಯಾಗು. ನಿನ್ನನ್ನೇ ಪತಿರೂಪದಿಂದ ಪಡೆಯಬೇಕೆಂಬ ನಮ್ಮ ಆಸೆಯನ್ನು ಪೂರೈಸು. ನಮ್ಮೊಂದಿಗೆ ನೀನು ಇಲ್ಲಿ ಬಗೆಬಗೆಯ ರಮ್ಯ ಪ್ರದೇಶಗಳಲ್ಲಿ ಸ್ವಚ್ಛಂದವಾಗಿ ಆನಂದವಾಗಿ ವಿಹರಿಸು.

**ಬರ್ಬರೀಕ:-** ''ಶುಭಾಂಗಿಯರೇ! ನಾನು ಭೂಮಂಡಲದಲ್ಲಿಯೇ ಪುಣ್ಯಭೂಮಿ ಯೆಂದು ಪ್ರಸಿದ್ಧವಾದ ಭರತಖಂಡದ ಸಾಮ್ರಾಟ್ ಧರ್ಮರಾಜನ ಸಹೋದರ ಬಲಭೀಮನ

ಮೊಮ್ಮಗ. ನಮ್ಮ ತಂದೆ ಘಟೋತ್ಕಚ, ತಾಯಿ ಕಾಮಕಟಂಕಟೆ. ಅವರಿಬ್ಬರ ಹೊಟ್ಟೆಯಿಂದ ಹುಟ್ಟಿದ ನಾನು ಈ ದಿಗಂಬರ ದೈತ್ಯನನ್ನು ಕೊಲ್ಲಬೇಕೆಂದು ಅವನನ್ನು ಬೆನ್ನಟ್ಟಿ ಧಾವಿಸಿ ಇಲ್ಲಿಯವರೆಗೆ ಬಂದೆ. ಅವನನ್ನು ಈ ಲೋಕದಲ್ಲಿ ಸಂಹರಿಸಿ, ಇದೀಗ ಭೂಲೋಕಕ್ಕೆ ಮರಳಿ ಹೊರಟಿದ್ದೇನೆ. ನಿಮ್ಮ ಮದುವೆಯ ಬಿನ್ನಹವನ್ನು ಮನ್ನಿಸುವದು ನನಗೆ ಸಾಧ್ಯವಿಲ್ಲ. ಈ ಲೋಕದ ನಾಗಕನ್ಯೆಯರಾದ ನಿಮ್ಮನ್ನು ವಿವಾಹವಾಗುವದರಿಂದ ಲೋಕಕ್ಕೆ ಉಪಕಾರವಿಲ್ಲ. ಯಾರಿಗೂ ಪ್ರಯೋಜನವೂ ಇಲ್ಲ. ಈ ಜನ್ಮದಲ್ಲಿ ನೈಷ್ಠಿಕ ಬ್ರಹ್ಮಚಾರಿಯಾಗಿಯೇ ಪರೋಪಕಾರಗೈಯುತ್ತ ಬದುಕಬೇಕೆಂದು ನಾನು ನಿರ್ಧರಿಸಿದ್ದೇನೆ.''

ಹೀಗೆ ಹೇಳಿ ಸುಹೃದಯ ಎಂದು ಹೆಸರಾದ ಆ ಬರ್ಬರೀಕನು ಆ ಪಾತಾಳ ಲೋಕದಲ್ಲಿ ಪ್ರತಿಷ್ಠಿತವಾದ ಪರಮೇಶ್ವರನ ಮಹಾಲಿಂಗವನ್ನು ಪೂಜಿಸಿದನು ಭಕ್ತಿಯಿಂದ. ಪ್ರಣಮಿಸಿದನು ಶ್ರದ್ಧೆಯಿಂದ. ಅನೇಕ ಬಾರಿ ಆ ಶಿವಲಿಂಗಕ್ಕೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿದನು. ಮತ್ತೆ ಮತ್ತೆ ಶಿವಸನ್ನಿಧಾನೋಪೇತವಾದ ಆದಿಶೇಷ ಪ್ರತಿಷ್ಠಿತವಾದ ಮಹಾಲಿಂಗವನ್ನು ಭಕ್ತ್ಯುದ್ರೇಕದಿಂದ ಅರ್ಚನೆಗೈದನು. ಅಲ್ಲಿಂದ ಆ ಶಿವಲಿಂಗದ ಮೇಲ್ಭಾಗದಲ್ಲಿ ಇರುವ ಊರ್ಧ್ವಗಾಮಿಯಾದ ಬಿಲಮಾರ್ಗದಿಂದ ನೇರವಾಗಿ ಗುಪ್ತಕ್ಷೇತ್ರದ ಸಿದ್ಧಲಿಂಗದ ಹಿಂಬದಿಯಲ್ಲಿ ಎದ್ದುಬಂದನು. ಆ ಬಿಲದ್ವಾರದ ವಿವರದಿಂದ ಮೇಲಕ್ಕೆ ಎದ್ದುಬಂದಾಗ ಪೂರ್ವದಿಕ್ಕು ಅರುಣಾರುಣವಾದ ಸೂರ್ಯನ ಕಿರಣಗಳಿಂದ ಪ್ರಕಾಶಮಾನವಾಗಿತ್ತು. ಬರ್ಬರೀಕನು ಆನಂದದಿಂದ ಬಂದು ವಿಜಯ ಬ್ರಾಹ್ಮಣನನ್ನು ಕೂಡಿಕೊಂಡ. ಆ ವಿಜಯ ವಿಪ್ರನು ಬರ್ಬರೀಕನ ಸಹಾಯದಿಂದ ತನ್ನ ಸಾಧನೆಗೆ ಒದಗಿದ ವಿಘ್ನ, ವಿಡ್ಡೂರಗಳನ್ನೆಲ್ಲ ಗೆದ್ದು ತನ್ನ ವೈಷ್ಣವೀವಿದ್ಯೆಯ ಮಂತ್ರಸಾಧನೆಯ ಕಾರ್ಯವನ್ನು ಪೂರ್ತಿಯಾಗಿ ಮಾಡಿ ಮುಗಿಸಿದ. ಬರ್ಬರೀಕನನ್ನು ಕಂಡು ಆನಂದದಿಂದ ನುಡಿದ.

## ಉಪಾಕರದ ಸ್ಮರಣೆ, ಸಿದ್ಧಭಸ್ಮದ ವಿತರಣೆ

**ವಿಜಯವಿಪ್ರ:-** ವೀರಾಗ್ರಣಿಯಾದ ಬರ್ಬರೀಕ, ನಿನಗೆ ಧನ್ಯವಾದ. ನಿನ್ನ ಬೆಂಬಲದಿಂದ ಹಾಗೂ ಮುಂಬಲದಿಂದ ನಾನು ಅನುಪಮ ಸಿದ್ಧಿಯನ್ನು ಪಡೆದಿದ್ದೇನೆ. ಮಹಾಬಲಿಷ್ಠನೂ ಸತ್ಯನಿಷ್ಠನೂ ನಿಸ್ಪೃಹಿಯೂ ಆದ ನಿನ್ನ ಸಹಾಯ ಸಹಕಾರಗಳು ಇಲ್ಲದಿದ್ದರೆ ನನ್ನ ವಿದ್ಯಾಸಿದ್ಧಿಯ ಕನಸು ಎಂದೂ ನನಸಾಗುತ್ತಿರಲಿಲ್ಲ. ದುಷ್ಟದೈತ್ಯರು. ನನ್ನ ಈ ಸತ್ಕಾರ್ಯಕ್ಕೆ ಎಷ್ಟೆಷ್ಟೋ ವಿಘ್ನಗಳನ್ನು ತಂದು ಒಡ್ಡಿದರು. ನೀನು ನಿನ್ನ ಶೌರ್ಯ, ಧೈರ್ಯ, ಚಾತರ್ಯಗಳಿಂದ ಆ ಎಲ್ಲ ವಿಘ್ನ ವಿಂಧ್ಯಾಚಲಗಳನ್ನು ನಿನ್ನ ವಜ್ರಕಾಯದಿಂದ ಹುಡಿಗಟ್ಟಿ ನಿವಾರಿಸಿ ನನ್ನ ಈ ಮಂಗಳ ಕಾರ್ಯವು ನಿರಾಂತಕವಾಗಿ ನೆರವೇರುವಂತೆ ಮಾಡಿದೆ. ಇದಕ್ಕಾಗಿ ನಾನು ನಿನಗೆ ಎಷ್ಟು ಕೃತಜ್ಞನಾದರೂ ಕಡಿಮೆಯೇ. ನೀನು ದೀರ್ಘಾಯುಷಿಯಾಗು. ಜೀವನದಲ್ಲಿ ಬಯಸಿದ ಭೋಗ ಭಾಗ್ಯವನ್ನು ಪಡೆ. ದಾನ ನೀಡು. ಧರ್ಮಮಾಡು. ಗೆಲವು ಯಾವಾಗಲೂ ನಿನ್ನ ಬೆನ್ನಿಗೆ ಇರಲಿ. ಶ್ರೇಯಸ್ಸು ನಿನ್ನ ಪದರಿನಲ್ಲಿ ಇರಲಿ. ಇಂದ್ರಿಯಗಳು ನಿನ್ನ ಅಂಕಿತದಲ್ಲಿ ಇರಲಿ. ಇದೇ ನಾನು ನಿನಗೆ ಕೊಡುವ ಆಶೀರ್ವಾದ. ಇದೀಗ ನಾನು ಯಜ್ಞಮಾಡಿದ ಹೋಮ ಕುಂಡದಲ್ಲಿ ಸಿಂಧೂರದಂತೆ ಹೊಂಬಣ್ಣದ ಹುಡಿ ಭಸ್ಮರೂಪವಾಗಿ ಇರುತ್ತದೆ. ಅದು ಪರಮಪವಿತ್ರ. ಅದನ್ನು ಒಂದು ಮುಷ್ಟಿ ತುಂಬ ತೆಗೆದುಕೊ. ಈ ಸಿದ್ಧಭಸ್ಮವನ್ನು ನೀನು ರಣಾಂಗಣದಲ್ಲಿ ನಿನ್ನ ವೈರಿಯ ಮೇಲೆ ತುಸು ಚಿಮುಕಿಸಿದರೂ ಸಾಕು. ಎಂಥ ಬಲಿಷ್ಠ ಶತ್ರುವಾದರೂ

ಕ್ಷಣಾರ್ಧದಲ್ಲಿ ಸುಟ್ಟು ಬೂದಿಯಾಗಿ ಬೀಳುವನು. ಈ ನನ್ನ ಅಗ್ನಿಕುಂಡದ ಹೋಮಭಸ್ಮವು ನಿನಗೆ ವಿಶ್ವವಿಜಯವನ್ನೇ ತಂದುಕೊಡುವುದು. ನೀನು ಹೋದಲ್ಲೆಲ್ಲ ಜಯಲಕ್ಷ್ಮಿಯು ನಿನ್ನ ಅಡಿಯ ಆಳಾಗಿ ನಿನ್ನ ಬೆಂಬಿಡಿದು ಬರುವಳು.

**ಬರ್ಬರೀಕ:**- ವಿಪ್ರ! ನನಗೆ ಈ ನಿನ್ನ ಭಸ್ಮವು ಬೇಕಾಗಿಲ್ಲ. ಇದನ್ನು ಬಯಸುವ ಬೇರಾರಿಗಾದರೂ ಕೊಡು. ಯಾವುದಾದರೂ ಪ್ರಯೋಜನವನ್ನು ಬಯಸಿ ನಾನು ನಿನಗೆ ಸಹಾಯವನ್ನು ಮಾಡಿರುವದಿಲ್ಲ. ಕೇವಲ ಪರೋಪಕಾರ ಬುದ್ಧಿಯಿಂದಲೇ ನಾನು ನಿನಗೆ ನಿನ್ನ ವಿದ್ಯಾಸಾಧನೆಗೆ ಸಹಾಯವನ್ನು ಸಲ್ಲಿಸಿದ್ದು.

**ಉಪಕುರ್ಯಾನ್ನಿರಾಕಾಂಕ್ಷೋ ಯಸ್ಸ ಸಾಧುರಿತೀರ್ಯತೇ ।**
**ಸಾಕಾಂಕ್ಷಮುಪಕುರ್ಯಾದ್ಯಃ ಸಾಧುತ್ವೇ ತಸ್ಯ ಕೋ ಗುಣಃ ॥**

ಯಾವುದೇ ಪ್ರಯೋಜನ ಅಥವಾ ಲಾಭದ ಆಶೆಯಿಲ್ಲದೆ ಮಾಡಿದ ಉಪಕಾರವೇ ನಿಜವಾದ ಉಪಕಾರ; ಅದಕ್ಕೇ ಪರೋಪಕಾರ ಎನ್ನುವರು. ಇಂಥ ನಿಷ್ಕಾಮಭಾವನೆಯಿಂದ ಪರಮೋಪಕಾರ ಮಾಡುವವನಿಗೆ ಸಾಧು ಎಂದು ಕರೆಯುವರು. ಯಾವುದೇ ಪ್ರಯೋಜನದ ಆಕಾಂಕ್ಷೆಯಿಂದ ಉಪಕಾರ ಮಾಡಿದರೆ ಅದರಲ್ಲಿ ಸಜ್ಜನಿಕೆ ಏನು ಬಂತು?

ಪಾಂಡವರ ಪೌತ್ರನಾದ ನಾನು ಇಂಥ ಕ್ಷುದ್ರತರವಾದ ಪರೋಪಕಾರವನ್ನು ಮಾಡಲಾರೆ. ನಾನು ನನ್ನ ಬಾಹುಬಲದಿಂದಲೇ ಪ್ರಾಪ್ತವಾಗುವ ವಿಜಯಶ್ರೀಯನ್ನು ಮೆಚ್ಚುತ್ತೇನೆ. ಹೆರವರು ಮಂತ್ರಿಸಿಕೊಟ್ಟ ಬೂದಿಯಿಂದ ನಾನು ವಿಜಯವನ್ನು ಸಾಧಿಸಿದರೆ ಸ್ವಾಭಿಮಾನಿಗಳಾದ ನಮ್ಮ ಪಾಂಡವರ ಕುಲಕ್ಕೆ ದ್ರೋಹ ಬಗೆದಂತಾಗುವುದು. ಆದುದರಿಂದ ಈ ಬೂದಿಯನ್ನು ಕಾದು ಗೆಲ್ಲಲು ಸ್ವಯಂಶಕ್ತಿ ಇಲ್ಲದ ಬೇರೆ ಯಾರಿಗಾದರೂ ದುರ್ಬಲರಿಗೆ ನೀಡಿರಿ. ನಾನು ರಣಾಂಗಣದಲ್ಲಿ ಗೆದ್ದರೂ, ಬಿದ್ದರೂ ನನ್ನ ಬಾಹುಬಲದಿಂದಲೇ ಏಳುವೆ. ಇಲ್ಲವೇ ಬೀಳುವೆ. ಅದೇ ನನಗೆ ಶ್ರೇಯಸ್ಕರ. ನನಗೆ ಒಂದೇ ಅಪೇಕ್ಷೆ ಇದ್ದಿತು. ನೀವು ಕೈಕೊಂಡ ವೈಷ್ಣವೀ ವಿದ್ಯಾಸಿದ್ಧಿಯಲ್ಲಿ ನೀವು ಯಶಸ್ವಿ ಆಗಬೇಕು. ಆ ಯಶಸ್ಸಾಧನೆಯಿಂದ ನೀವು ಪ್ರಸನ್ನರಾಗಬೇಕು. ಆ ಸಿದ್ಧಿಯ ಸಾಧನೆಯಿಂದ ನಿಮ್ಮ ಮುಖದಲ್ಲಿ ಮೂಡಿದ ಆ ಪ್ರಸನ್ನತೆಯ ಹೊಂಬೆಳಕನ್ನು ನಾನು ನನ್ನ ಕಣ್ಣತುಂಬ ನೋಡಬೇಕು. ಅದು ಈಗ ಪೂರ್ಣವಾಯಿತು. ಅದಕ್ಕಾಗಿ ನಿಮಗೆ ಧನ್ಯವಾದ. ನಾನು ನಿಮಗೆ ಈಗ ಮಾಡಿದ ಸಹಾಯಕ್ಕಾಗಿ ನಾನು ನಿಮ್ಮಿಂದ ಅಪೇಕ್ಷಿಸುವದು ಕೇವಲ ನಿಮ್ಮ ಆಶೀರ್ವಾದ. ಬರ್ಬರೀಕನ ಈ ನಿಸ್ಪೃಹ ವೃತ್ತಿಯನ್ನು ನಿಷ್ಕಾಮ ಪರೋಪಕಾರ ಪ್ರವೃತ್ತಿಯನ್ನೂ ಮನವಾರೆ ಮೆಚ್ಚಿದ ಆ ವಿಜಯವಿಪ್ರ ಆನಂದದಿಂದ ಅಭಿನಂದಿಸಿದ. ಸ್ನೇಹದಿಂದ ಆಲಿಂಗಿಸಿದ. ಪ್ರೀತಿಯಿಂದ ಆಶೀರ್ವದಿಸಿದ.

ಅನಂತರ ವೈಷ್ಣವೀ ವಿದ್ಯೆಯ ಸಿದ್ಧಿಯನ್ನು ಬರ್ಬರೀಕನ ಸಹಾಯದಿಂದ ಪಡೆದ ಆ ವಿಜಯ ಬ್ರಾಹ್ಮಣನನ್ನು ಅನೇಕ ದೇವ ದೇವಿಯರು ಅಲ್ಲಿಯೇ ನೆರೆದ ಸನ್ಯಾಸಿಗಳು ಅವನಿಗೆ ಅನುಪಮವಾದ ಸಿದ್ಧೈಶ್ವರ್ಯವನ್ನು ಪ್ರದಾನ ಮಾಡಿದರು. 'ಸಿದ್ಧಸೇನ' ಎಂದು ಅನ್ವರ್ಥಕವಾದ ಹೊಸ ಹೆಸರನ್ನು ದಯಪಾಲಿಸಿದರು. ಅನೇಕಾನೇಕ ಯೋಗಿಗಳು, ಸಿದ್ಧರು, ಮುನಿಮಹರ್ಷಿಗಳು ಬಂದು ಸಿದ್ಧಸೇನನ ಈ ವೈಷ್ಣವೀ ವಿದ್ಯಾಸಿದ್ಧಿಯನ್ನು ಕೊಂಡಾಡಿ ಅಭಿನಂದನೆಗಳನ್ನು ಸಲ್ಲಿಸಿದರು. ಹೀಗೆ ಪಾಂಡವರ ಪೌತ್ರನಾದ ಬರ್ಬರೀಕನ ಸಹಾಯದಿಂದ ವಿಜಯವಿಪ್ರನು ಸಿದ್ಧಸೇನನಾಗಿ ಜಗತ್ಪ್ರಸಿದ್ಧನಾದನು.

## ಪಾಂಡವರ ವನವಾಸ. ತೀರ್ಥಯಾತ್ರೆಯ ಪ್ರವಾಸ

ಇತ್ತ ಹಲವಾರು ವರ್ಷಗಳು ಕಳೆದ ಬಳಿಕ ಪಂಚಪಾಂಡವರು ಹಸ್ತಿನಾಪುರದಲ್ಲಿ ದುರುಳ ದುರ್ಯೋಧನ ದುಶ್ಶಾಸನರ, ದುರಾಲೋಚನೆಯ ಜಾಲದಲ್ಲಿ ಮೋಸ ಬಿದ್ದು ಲೆತ್ತವಾಡಿದರು. ಆ ವಂಚನೆಯ ಜೂಜಾಟದಲ್ಲಿ ಸಾಧು ಸ್ವಭಾವದ ಪಾಂಡವರು ಸೋಲನ್ನು ಅನುಭವಿಸಿದರು. ಸಾಮ್ರಾಜ್ಯವನ್ನು ಕಳೆದುಕೊಂಡರು. ಶಕುನಿಯ ಕಪಟ ನೀತಿಯಿಂದ ಆ ಲೆತ್ತದಾಟದಲ್ಲಿ ಪಾಂಡವರ ಸರ್ವಸ್ವವನ್ನೂ ಅಪಹರಿಸಲಾಯಿತು. ಪಂಚಪಾಂಡವರು ದುರ್ವಿಧಿಯು ಬೆನ್ನುಹತ್ತಿ ದ್ರೌಪದಿಯೊಂದಿಗೆ ಅಡವೀಪಾಲು ಆದರು. ಆ ವನವಾಸದಲ್ಲಿಯೂ ಅವರ ಧರ್ಮಬುದ್ಧಿ ಜಾಗ್ರತವಾಗಿಯೇ ಇದ್ದಿತು. ವನವಾಸ ಅವರಿಗೆ ಒಂದು ನೆಪ ಮಾತ್ರ. ಆ ವನವಾಸದ ನಿಮಿತ್ತದಿಂದ ಅವರು ಭೂಮಂಡಲದ ಎಲ್ಲ ತೀರ್ಥಕ್ಷೇತ್ರಗಳನ್ನು ಸುತ್ತತೊಡಗಿದರು. ಭಾರತದ ವಿವಿಧ ಭಾಗಗಳ ಘನನಿಬಿಡ ವಿಜನ ವನಾಂತರಗಳಲ್ಲಿದ್ದ ತೀರ್ಥಕ್ಷೇತ್ರಗಳನ್ನೂ ಪರಮಪವಿತ್ರವಾದ ಗುಪ್ತಕ್ಷೇತ್ರಗಳನ್ನೂ ಗೂಢ ತೀರ್ಥಗಳನ್ನೂ ಒಂದೂ ಬಿಡದೇ ಅವರು ಮಿಂದು ಸಂದರ್ಶನವಿತ್ತು ಆ ತಮ್ಮ ವನವಾಸವನ್ನು ಒಂದು ದೊಡ್ಡ ತೀರ್ಥಯಾತ್ರೆಯನ್ನಾಗಿ ಮಾರ್ಪಡಿಸಿಕೊಂಡರು.

ಹೀಗೆ ತೀರ್ಥಯಾತ್ರೆಗೈಯುತ್ತ ಪಂಚಪಾಂಡವರು ತಮ್ಮ ವನವಾಸಕಾಲದಲ್ಲಿ ಈ ಗುಪ್ತಕ್ಷೇತ್ರಕ್ಕೂ ಆಗಮಿಸಿದರು. ಈ ಸಿದ್ಧಲಿಂಗ ಕ್ಷೇತ್ರದಲ್ಲಿ ಕಂಗೊಳಿಸುವ ಚಂಡೀದೇವಿಯ ದರ್ಶನ ತೆಗೆದುಕೊಂಡರು. ದರ್ಶನ ಮಾತ್ರದಿಂದಲೇ ಅವರಿಗೆ ಪರಮಾನಂದವಾಯಿತು. ಅವರೆಲ್ಲರೂ ಬಹುದೂರದ ದಾರಿ ನಡೆದು ಬಂದದ್ದರಿಂದ ಬಳಲಿ ಬೆಂಡಾಗಿದ್ದರು. ತಮ್ಮ ದಣಿವನ್ನು ಆರಿಸಿಕೊಳ್ಳಲಿಕ್ಕಾಗಿ ಆ ಪಂಚಪಾಂಡವರು ದ್ರೌಪದಿಯೊಂದಿಗೆ ಅಲ್ಲಿಯೇ ವಿಶ್ರಮಿಸಿದರು. ಅದೇ ವೇಳೆಯಲ್ಲಿ ಬರ್ಬರೀಕನು ಅಲ್ಲಿಗೆ ಬಂದನು. ಅವನಿಗೆ ಪಾಂಡವರ ಗುರುತೇ ಹತ್ತಲಿಲ್ಲ. ಪಾಂಡವರಿಗೂ ತಮ್ಮ ಮೊಮ್ಮಗನಾದ ಈ ಬರ್ಬರೀಕನ ಗುರುತು ಸಿಕ್ಕಲಿಲ್ಲ. ಹುಟ್ಟಿದ ಬಳಿಕ ಅವನು ಎಂದೂ ತನ್ನ ತಂದೆಯ ತಂದೆಯನ್ನಾಗಲಿ, ಕಕ್ಕಂದಿರನ್ನಾಗಲೀ ನೋಡಿರಲಿಲ್ಲ. ಅವರೂ ಇವನನ್ನು ಕಂಡಿರಲಿಲ್ಲ. ಕಂಟಕಾಕೀರ್ಣವಾದ ಆ ಬೆಂಗಾಡಿನ ದುರ್ಗಮ ಮಾರ್ಗದಲ್ಲಿ ನಡೆನಡೆದು ಅವರೆಲ್ಲರೂ ದಣಿದು ಹೋಗಿದ್ದರು. ಹಸಿವೆಯಿಂದ ಕಸಿವಿಸಿ ಪಡುತ್ತಿದ್ದರು. ಅದಕ್ಕಾಗಿ ಏನಾದರೂ ಉಪಹಾರ ಮಾಡಬೇಕೆಂದು ಅವರು ತಮ್ಮ ಬುತ್ತಿಯ ಗಂಟನ್ನು ಬಿಚ್ಚಿದರು. ಬಾಯಾರಿಕೆಯಿಂದ ಅವರ ಗಂಟಲು ಒಣಗಿ ಹೋಗಿತ್ತು. ನೀರಿಗಾಗಿ ಅವರು ಆಚೀಚೆ ನೋಡಿದರು. ಅಲ್ಲಿಯೇ ಅವರಿಗೆ ತಿಳಿನೀರಿನ ಹೊಕ್ಕರಣಿ ಕಂಡಿತು. ಕೂಡಲೇ ಭೀಮಸೇನನು ಪುಷ್ಕರಣಿಗೆ ಆ ನೀರನ್ನು ತೆಗೆದುಕೊಂಡು ಬರಲು ಹೊರಟನು.

ಒಮ್ಮೆಲೇ ಧರ್ಮರಾಜನು ಭೀಮನಿಗೆ ಕೂಗಿ ಹೇಳಿದನು.

**ಧರ್ಮರಾಜ:-** 'ಭೀಮಸೇನ, ನೀನು ಮೊದಲು ಈ ಪುಷ್ಕರಣಿಯ ನೀರನ್ನು ಪಾತ್ರೆಯಲ್ಲಿ ತೆಗೆದುಕೊಂಡು ಮೇಲೆ ಬಾ. ಮೇಲೆ ಬಂದು ಮುಖ ಕೈಕಾಲುಗಳನ್ನು ತೊಳೆದುಕೊಂಡು ಅನಂತರ ಆ ನೀರನ್ನು ಕುಡಿ. ಇಲ್ಲದಿದ್ದರೆ ಮಹಾದೋಷ ತಗಲೀತು.''

ಆದರೆ ಭೀಮನಿಗೆ ಭಯಂಕರ ಬಾಯಾರಿಕೆ. ನೀರಡಿಕೆಯಿಂದ ಅವನ ನಾಲಿಗೆ ಸೇದುತ್ತಲಿತ್ತು. ಯಾರ ಮಾತನ್ನು ಕೇಳುವ ಪರಿಸ್ಥಿತಿ ಇರಲಿಲ್ಲ. ಧರ್ಮರಾಜನ ಮಾತನ್ನು

ಕೂಡ ಗಮನಿಸದೆ ಧಿಡೀರನೇ ಅವನು ನೀರಿಗೆ ಇಳಿದ. ಆ ತಿಳಿನೀರನ್ನು ಬೊಗಸೆ ತುಂಬ ಕುಡಿಯಬೇಕೆಂದು ಅವನಿಗೆ ತಡೆಯಲಾರದ ಲವಲವಿಕೆ. ಅನಿವಾರ್ಯ ನೀರಡಿಕೆ. ಅವನು ತೀರ್ಥದಲ್ಲಿಯೇ ತನ್ನ ಮುಖ ತೊಳೆದ. ಪಾದ ಪ್ರಕ್ಷಾಳನ ಮಾಡಿಕೊಂಡ. ಎರಡೂ ಕೈಗಳನ್ನು ಶುದ್ಧೀಕರಿಸಿದ. ಹೀಗೆ ಭೀಮನು ತನ್ನ ಕೈ ಕಾಲು ತೊಳೆಯುತ್ತಿರುವಾಗಲೇ ಮೇಲಿನಿಂದ ಬರ್ಬರೀಕನ ಗರ್ಜಿಸಿದ.

**ಬರ್ಬರೀಕ:-** ಎಲೋ, ಬುದ್ಧಿಗೇಡಿಯೇ! ಇದನ್ನೇನು ಮಾಡುತ್ತಿರುವೆ? ಇದು ದೇವಿಯ ಕುಂಡ, ಇದರಲ್ಲಿ ನಿನ್ನ ಕಾಲು ಅದ್ದಿದಿ. ಕೈ ಎದ್ದಿದಿ. ಮುಖ ತೊಳೆದಿ. ನಾನು ಚಂಡೀ ದೇವಿಗೆ ಈ ತೀರ್ಥದಿಂದಲೇ ಪ್ರತಿನಿತ್ಯವೂ ಸ್ನಾನ ಮಾಡಿಸುತ್ತೇನೆ. ನಿನ್ನ ಕೈ ಕಾಲು, ಮುಖ ತೊಳೆದು ದೂಷಿತವಾದ ನೀರನ್ನು ಮಾನವರು ಕೂಡ ಮುಟ್ಟಲಾರರು. ಅಂದ ಬಳಿಕ ಇದರಿಂದ ದೇವತೆಗೆ ಅಭಿಷೇಕವನ್ನು ಹೇಗೆ ಮಾಡುವುದು? ತೀರ್ಥಗಳ ಪಾವಿತ್ರ್ಯ ರಕ್ಷಣೆಯ ಬಗ್ಗೆ ಇಷ್ಟು ಕೂಡ ಬುದ್ಧಿ ಇಲ್ಲದ ನೀನು ತೀರ್ಥಯಾತ್ರೆ ಕೈಕೊಂಡಿದ್ದಾದರೂ ಏಕೆ?

**ಭೀಮಸೇನ:-** ಕ್ರೂರ ರಾಕ್ಷಸಾಧಮನೇ! ನೀನೇಕೆ ಇಷ್ಟು ಕಠೋರವಾಗಿ ಮಾತನಾಡುತ್ತಿರುವೆ? ಪ್ರಾಣಿಗಳ ಸ್ನಾನ-ಪಾನಗಳಿಗಲ್ಲದೇ ನೀರಿನ ಉಪಯೋಗವಾದರೂ ಏನು? ದೊಡ್ಡ ದೊಡ್ಡ ಮುನಿ ಮಹರ್ಷಿಗಳು ಕೂಡ ತೀರ್ಥದಲ್ಲಿ ಸ್ನಾನ ಮಾಡುತ್ತಾರೆ. ಶಾಸ್ತ್ರ ಪುರಾಣಗಳಲ್ಲಿಯೂ ತೀರ್ಥಸ್ನಾನ ಹಾಗೂ ತೀರ್ಥಪಾನ ಅವಶ್ಯ ಕರ್ತವ್ಯ ಎಂದು ವಿಧಿಸಲ್ಪಟ್ಟಿವೆ. ಕೈಕಾಲುಗಳನ್ನು ಅದ್ದದೇ ಮುಖ ತೊಳೆಯದೆ, ಸ್ನಾನ-ಪಾನಗಳನ್ನು ಮಾಡುವದೆಂತು? ಸ್ನಾನ ಎಂದರೆ ಏನು? ಕೈ ಕಾಲು ಮುಂತಾದ ಅವಯವಗಳನ್ನು ತೊಳೆಯುವದೇ ಸ್ನಾನವಲ್ಲವೇ? ಅಂದ ಬಳಿಕ ಈ ತೀರ್ಥದಲ್ಲಿ ನಾನು ನನ್ನ ಕೈಕಾಲುಗಳನ್ನು ತೊಳೆದರೆ, ನೀನೇಕೆ ಆಕ್ಷೇಪಮಾಡುವೆ? ಸ್ನಾನ ಮತ್ತು ಅಂಗ ಪ್ರಕ್ಷಾಳನ ಮುಂತಾದವುಗಳನ್ನು ಮಾಡಬಾರದೆಂದಿದ್ದರೆ, ದೊಡ್ಡ ದೊಡ್ಡ ದಾನಿಗಳೂ ಧರ್ಮಾತ್ಮರೂ ಕೆರೆ ಕಾಲುವೆ ಹಾಗೂ ಹಲವಾರು ಹೊಕ್ಕರಣೆಗಳನ್ನು ಏತಕ್ಕಾಗಿ ನಿರ್ಮಿಸುತ್ತಿದ್ದರು?

## ತೀರ್ಥವಿಜ್ಞಾನ

**ಬರ್ಬರೀಕ:-** ಯಾತ್ರಿಕ! ನೀನು ಹೇಳಿದ ಮಾತೇನೋ ನಿಜ. ಮುಖ್ಯ ಮುಖ್ಯ ತೀರ್ಥಗಳಲ್ಲಿ ಸ್ನಾನಮಾಡಬೇಕೆಂದು ಶಾಸ್ತ್ರದಲ್ಲಿ ಹೇಳಿದ್ದಾರೆ ಎಂಬ ಮಾತು ನನಗೂ ಒಪ್ಪಿಗೆ. ಆದರೆ ಇದರಲ್ಲಿ ಮಾನವನಿಗೆ ವಿವೇಕ ಬೇಕು. ಶಾಸ್ತ್ರದಲ್ಲಿ ಸ್ನಾನ ಮಾಡಬೇಕೆಂದು ಹೇಳಿದಾಕ್ಷಣ ಎಲ್ಲ ತೀರ್ಥಗಳಲ್ಲಿಯೂ ಹೊಕ್ಕು, ಕೈಕಾಲುಗಳನ್ನು ತೊಳೆದು ತನ್ನ ಮೈಮುಖ ಮಾಲಿನ್ಯದಿಂದ ತೀರ್ಥಜಲವನ್ನು ದೂಷಿತಗೊಳಿಸಬೇಕು ಎಂದು ಅರ್ಥವಲ್ಲ. ಧರ್ಮಗ್ರಂಥಗಳಲ್ಲಿ ತೀರ್ಥಸ್ನಾನ ಮಾಡಬೇಕೆಂದು ಹೇಳಿದ ಮಾತು ವಾಸ್ತವಿಕವೆ. ಅದರ ಅರ್ಥ ನದೀ ಝರಣೀ ಹಳ್ಳ ಮುಂತಾದ ಹರಿಯುವ ನೀರಿನ ಜಲಪ್ರವಾಹದಲ್ಲಿ ಅಂಗಾಂಗಳನ್ನು ತೊಳೆದು ಸ್ನಾನ ಮಾಡಬೇಕು. ನಿಂತ ನೀರಿನ ಕುಂಡ, ಹೊಂಡ, ಕುಂಟೆ, ಹೊಕ್ಕರಣೆಗಳಲ್ಲಿ ಮಣ್ಣು ಮೆತ್ತಿದ ಹೊಲಸು ಹತ್ತಿದ, ಮುಖ, ಮಾರ್ಜನ, ಅಂಗ ಪ್ರಕ್ಷಾಳನಾದಿಗಳನ್ನು ಮಾಡಿದರೆ ಆ ನೀರೆಲ್ಲವೂ ಕಲುಷಿತವಾಗದೇ ಇದ್ದೀತೆ? ಬಂದು ಮಿಂದ ಮಾನವರ, ಕೈಕಾಲು ಮೂಗು ಮುಖಗಳ ಹೊಲಸು, ಮಲ ಮಾಲಿನ್ಯಗಳು ಮಡುವುಗಟ್ಟಿದ ಆ ನೀರಿನಿಂದ ದೇವದೇವಿಯರಿಗೆ ಅಭಿಷೇಕವನ್ನು ಮಾಡಿಸುವದೆಂತು?

ಆದುದರಿಂದ ಬಾವಿ, ಸರೋವರ, ಕುಂಟೆ ಮುಂತಾದ ಸ್ಥಾವರ ತೀರ್ಥಗಳಲ್ಲಿ ಎಂದೂ ಮಾನವರ ಮಲದೂಷಿತವಾದ ಅಂಗಾಂಗಗಳನ್ನು ಅದ್ದಬಾರದು. ಈ ಸ್ಥಾವರ ತೀರ್ಥಗಳಿಂದ ತಂಬಿಗೆ, ಕೊಡ, ಬಿಂದಿಗೆಗಳಲ್ಲಿ ನೀರನ್ನು ಎತ್ತಿಕೊಂಡು ಹೊರಗೆ ಹೋಗಿ ಸ್ನಾನ ಕೈ ಕಾಲು ತೊಳೆಯುವದು. ಹಾಗೂ ಮುಖ ಮಾರ್ಜನಗಳನ್ನು ಮಾಡಿಕೊಳ್ಳಬೇಕು.

ತೀರ್ಥಗಳು ಎರಡು ವಿಧ, ಚರತೀರ್ಥ, ಸ್ಥಿರತೀರ್ಥ ಎಂದು. ನದೀ, ನಾಲೆ, ನೀರ್ಝರಿಣಿ, ಹಳ್ಳ ಮುಂತಾದ ಪ್ರವಾಹ ರೂಪವಾಗಿ ಹರಿಯುವ ನೀರು ಉಳ್ಳ ಗಂಗಾ, ಕೃಷ್ಣಾ, ಗೋದಾವರಿ, ಮುಂತಾದ ನದೀ ತೀರ್ಥಗಳು ಚರ ತೀರ್ಥ ಎಂದು ಕರೆಯಲ್ಪಡುತ್ತವೆ. ನೀರು ಹರಿಯದೆ ಒಂದೇ ಠಾವಿನಲ್ಲಿ ಮಡುಗಟ್ಟಿ ನಿಂತುಕೊಂಡ ಬಾವಿ, ಕುಂಟೆ, ಸರೋವರ ಪುಷ್ಕರಣಿ ಮುಂತಾದವುಗಳು ಸ್ಥಾವರ ತೀರ್ಥಗಳು ಎನಿಸುತ್ತವೆ. ಚರ ತೀರ್ಥಗಳಾದ ಹೊಳೆ, ಹಳ್ಳಗಳ ಹರಿಯುವ ನೀರಿನಲ್ಲಿ ಯಾರಾದರೂ ಕೈಕಾಲು ತೊಳೆದು ಮುಖಮಾರ್ಜನೆಗಳನ್ನು ಮಾಡಿಕೊಂಡು ಮುಳುಗಿ, ಈಸಿ ನೀರಾಟವಾಡಿ ಸ್ವಚ್ಛಂದವಾಗಿ ಗಜಸ್ನಾನ ಮಾಡಬಹುದು.

ಆದರೆ ಬಾವಿ, ಕೆರೆ, ಕುಂಟೆಗಳಲ್ಲಿ ಮಾತ್ರ ನೀರನ್ನು ಸೇದಿ ಅಥವಾ ಹೊತ್ತು ತಂದು ತೀರ್ಥದಿಂದ ತುಸು ದೂರದಲ್ಲಿಯೇ ಸ್ನಾನವನ್ನು ಮಾಡಬೇಕು. ಶಾಸ್ತ್ರದಲ್ಲಿ ಹೀಗೆಯೇ ಸ್ನಾನದ ವಿಧಾನವನ್ನು ಹೇಳಿದ್ದಾರೆ.

**ಸ್ನಾತವ್ಯಂ ತೀರ್ಥಮುಖ್ಯೇಷು ಸತ್ಯಮೇತನ್ನ ಸಂಶಯಃ**
**ಚರೇಷು ಕಿಂತು ಸಂವಿಶ್ಯ ಸ್ಥಾವರೇಷು ಬಹಿಃ ಸ್ಥಿತೈಃ ॥**

'ಮುಖ್ಯ ಮುಖ್ಯ ತೀರ್ಥಗಳಲ್ಲಿ ಸ್ನಾನಮಾಡಬೇಕೆಂದು ಹೇಳಿದ್ದೇನೋ ನಿಜ. ಆದರೆ ಇದು ಚರ ತೀರ್ಥಗಳ ವಿಷಯ. ಆದರೆ ಸ್ಥಾವರ ತೀರ್ಥ ಅಥವಾ ಸ್ಥಿರ ತೀರ್ಥ ಎಂದು ಹೇಳಲ್ಪಡುವ ಕುಂಡ, ಕೂಪ, ಹೊಕ್ಕರಣಿ ಕೆರೆ ಹೊಂಡಗಳಲ್ಲಿ ಮಾತ್ರ ಆ ತೀರ್ಥಗಳಲ್ಲಿ ಹೊಕ್ಕು ಸ್ನಾನಪಾನಾದಿಗಳನ್ನು ಸರ್ವಥಾ ಮಾಡಕೂಡದು. ಸ್ಥಾವರ ತೀರ್ಥಗಳಲ್ಲಿಯೂ ಕೂಡ ಒಳಗೆ ಹೊಕ್ಕು ಕೆಲವು ಕಡೆ ಸ್ನಾನ ಮಾಡುವ ವಿಧಾನವನ್ನು ಹೇಳಲಾಗಿದೆ. ಅದರ ಸೂಕ್ಷ್ಮ ವಿವರಗಳನ್ನು ಹೇಳುತ್ತೇನೆ ಕೇಳು. ಯಾವ ಸ್ಥಾವರ ತೀರ್ಥದಿಂದ ದೇವ ದೇವಿಯರ ಅಭಿಷೇಕಕ್ಕೆ ನೀರನ್ನು ಒಯ್ಯುವದಿಲ್ಲವೋ ಯಾವ ಕುಂಟೆ, ಅಥವಾ ಸರೋವರವು ದೇವಸ್ಥಾನದಿಂದ ನೂರು ಮಾರು ದೂರದಲ್ಲಿ ಇರುವುದೋ, ಮತ್ತು ಎಲ್ಲಿ ಹೊಲಸು ನೀರು ಹರಿದುಹೋಗಿ ಹೊಸ ಸ್ವಚ್ಛ ನೀರು ಬರಲು ತಕ್ಕ ಏರ್ಪಾಡು ಇದೆಯೋ, ಯಾವ ಜಲಾಶಯವು ಸಮುದ್ರದಂತೆ ವಿಶಾಲವಾಗಿದೆಯೋ ಇಂಥ ಸ್ಥಾವರ ತೀರ್ಥಗಳಲ್ಲಿ ಇಳಿದು ಮುಖ ಮಾರ್ಜನಾದಿಗಳನ್ನು ಮಾಡಿಕೊಳ್ಳಬಹುದು.

ಇಂಥ ಸ್ಥಾವರ ತೀರ್ಥಗಳಲ್ಲಿ ಕೂಡ ಒಳಗೆ ಪ್ರವೇಶ ಮಾಡುವ ಒಂದು ಶಾಸ್ತ್ರೋಕ್ತ ಕ್ರಮವುಂಟು. ಅದನ್ನೂ ಹೇಳುತ್ತೇನೆ ಕೇಳು. ಇಂಥ ತೀರ್ಥಗಳಲ್ಲಿ ಸ್ನಾನ ಮಾಡುವ ಮೊದಲು ನೀರನ್ನು ಎತ್ತಿಕೊಂಡು ಹೊರಗೆ ಬಂದು, ಕೈ, ಕಾಲು ಮುಖ, ಮೂಗು, ಕಣ್ಣು ಮುಂತಾದ ಅಂಗಗಳನ್ನು ತೊಳೆದುಕೊಂಡು, ಗಂಡೂಷ ವಿಧಿ, ಬಾಯಿಯಲ್ಲಿ ನೀರು ಹಾಕಿಕೊಂಡು ಉಗುಳುವುದು. ಬಟ್ಟೆ ಬರೆಗಳನ್ನು ಒಗೆದು ಒದರಿಕೊಂಡು, ಆ ಮೇಲೆ ಆ ತೀರ್ಥದಲ್ಲಿ ಹೋಗಿ ಸ್ನಾನ ಮಾಡಬೇಕು. ಈ ಸ್ಥಾವರ ತೀರ್ಥ ಎಷ್ಟೇ ದೊಡ್ಡದಿದ್ದರೂ ತನ್ನ ದೇಹದ ಕಲ್ಮಷಗಳನ್ನು ಅದರಲ್ಲಿ ಬಿಡಬಾರದು. ಉಗುಳಬಾರದು.

ಈ ಮಾತನ್ನು ದೇವರೇ ಹೇಳಿದ್ದಾರೆ.

**ಸ್ಥಾವರೇಷ್ವಪಿ ಸಂವಿಶ್ಯ ತತ್ರ ಸ್ನಾನಂ ವಿಧೀಯತೇ ।**
**ನ ಯತ್ರ ದೇವಸ್ನಾನಾರ್ಥಂ ಭಕ್ತೈಃ ಸಂಗೃಹ್ಯತೇ ಜಲಮ್ ॥**
**ಯಚ್ಚ ಹಸ್ತಶತಾದೂರ್ಧ್ವಂ ಸರಸ್ತತ್ರ ವಿಧೀಯತೆ**
**ಸರ್ವೇಷ್ವಪಿ ಕ್ರಮಶ್ಚಾಯಂ ಪಾದೌ ಪ್ರಕ್ಷಾಲ್ಯ ಯದ್ಭಹಿಃ ॥**

ಇದರಲ್ಲಿ ದೇವರ ಸ್ನಾನಕ್ಕೆ ನೀರನ್ನು ಒಯ್ಯದಿರುವ ಹಾಗೂ ದೇವಾಲಯದಿಂದ ನೂರು ಮಾರು ದೂರದ ಸರೋವರದಲ್ಲಿ ಹೊಕ್ಕು ಸ್ನಾನವನ್ನು ಮಾಡಬಹುದೆಂದು ಹೇಳಿದ್ದಾರೆ. ಆದರೆ ಅದಕ್ಕೂ ಮೊದಲು ಕೈಕಾಲುಗಳನ್ನು ತೊಳೆಯಬೇಕಾದರೆ ನೀರನ್ನು ಎತ್ತಿ ಹೊರಗೆ ಪ್ರಕ್ಷಾಲನ ಮಾಡಿಕೊಂಡು ಅನಂತರವೇ ತೀರ್ಥದಲ್ಲಿ ಸ್ನಾನಮಾತ್ರ ಮಾಡಬೇಕು. ಇಂಥ ಸ್ಥಾವರ ತೀರ್ಥಗಳಲ್ಲಿ ಬ್ರಹ್ಮದೇವರು ಹೇಳಿದ ಇನ್ನೊಂದು ಮಾತನ್ನು ತೀರ್ಥಗಳಲ್ಲಿ ಸ್ನಾನ ಮಾಡಬೇಕೆಂದು ಬಯಸುವ ಸಿಷ್ಣಾಸು ಯಾತ್ರಿಕರೆಲ್ಲರೂ ನೆನಪಿನಲ್ಲಿ ಇಟ್ಟುಕೊಳ್ಳುವದು ಆವಶ್ಯಕ.

**ಮಲಂ ಮೂತ್ರಂ ಪುರೀಷಂ ಚ ಶ್ಲೇಷ್ಮ ನಿಷ್ಠೀವಿತಂ ತಥಾ ।**
**ಗಂಡೂಷಮಪ್ಸು ಮುಂಚಂತಿ ಯೇ ತೇ ಬ್ರಹ್ಮಹಭಿಃ ಸಮಾಃ ॥**

ಮಲ, ಮೂತ್ರ, ಹೊಲಸು, ಕಫ, ಸಿಂಬಳ, ಉಗುಳುವದು ಖೇಕರಿಸುವದು, ಮುಂತಾದ ದೇಹದ ಮಲಗಳನ್ನು ಸ್ನಾನ ಮಾಡುವ ನೀರಿನಲ್ಲಿ ಯಾರು ಬಿಡುವರೋ ಅವರು ಬ್ರಹ್ಮಹತ್ಯಾ ಪಾಪವನ್ನು ಮಾಡಿದಂತೆ.

ದುರಾಚಾರಿಯಾದ ಕ್ಷತ್ರಿಯನೇ, ನೀನು ಇವೆಲ್ಲ ಹಿರಿಯರ, ಹಿತೋಕ್ತಿಗಳನ್ನು ಕೇಳಿಲ್ಲವೆ? ಯಾವ ವಿಚಾರವೂ ಇಲ್ಲದೆ, ಅಭಿಷೇಕಕ್ಕೆ ನೀರನ್ನು ಒಯ್ಯುವ ಈ ತೀರ್ಥದಲ್ಲಿ ಹೊಕ್ಕು ಕೈ ಕಾಲುಗಳನ್ನು ತೊಳೆಯುತ್ತಲಿರುವೆ. ಈಗಿಂದೀಗಲೇ ನೀನು ಅಲ್ಲಿಂದ ಎದ್ದು ಬಾ, ನಿನ್ನ ಇಂದ್ರಿಯಗಳು ನಿನ್ನ ಅಧೀನದಲ್ಲಿಲ್ಲದಿದ್ದರೆ ನೀನು ಈ ತೀರ್ಥಕ್ಕೆ ಬಂದದ್ದಾದರೂ ಏಕೆ? ನೀನು ಮಾಡುವ ತೀರ್ಥಯಾತ್ರೆ ಎಲ್ಲವೂ ವ್ಯರ್ಥ.

**ಯಸ್ಯ ಹಸ್ತೌ ಚ ಪಾದೌ ಚ ಮನಶ್ಚೈವ ಸುಸಂಯುತಮ್ ।**
**ನಿರ್ವಿಕಾರಾಃ ಕ್ರಿಯಾಃ ಸರ್ವಾಃ ಸ ಹಿ ತೀರ್ಥಫಲಂ ಲಭೇತ್ ॥**

ಯಾರ ಕೈ, ಕಾಲು ಮನಸ್ಸು ತನ್ನ ನಿಯಂತ್ರಣದಲ್ಲಿ ಇರುವವೋ, ಯಾವನು ದುರ್ವಿಚಾರ ಗಳಿಂದ ರಹಿತನಾಗಿರುವನೋ ಅವನು ಮಾತ್ರ ತೀರ್ಥ ಸ್ನಾನದ ಫಲವನ್ನು ಪಡೆಯುತ್ತಾನೆ.

ಯಾವ ಇಂದ್ರಿಯವೂ ಸ್ವಾಧೀನವಿಲ್ಲದ, ಗಡಿಬಿಡಿಯಿಂದ ತೀರ್ಥಜಲದಲ್ಲಿ ಹೊಕ್ಕು ಕೈಕಾಲು ತೊಳೆಯುವ ನಿನ್ನಂಥ ಅವಿಚಾರಿಗೆ ಯಾವ ತೀರ್ಥಫಲವೂ ದೊರಕದು. ಶಾಸ್ತ್ರೋಕ್ತವಾದ ಕರ್ಮಾನುಷ್ಠಾನ ಮಾಡುತ್ತ ಪವಿತ್ರ ಜೀವನವನ್ನು ನಡೆಸುವ ಮಾನವನು ನಾಲ್ಕು ಗಳಿಗೆ ಬದುಕಿದರೂ ಸಾಕು. ಅವನ ಜೀವನ ಧನ್ಯ. ಇಂದ್ರಿಯ ನಿಗ್ರಹವಿಲ್ಲದ ನರನು ಸಾವಿರ ವರ್ಷ ಬದುಕಿದರೂ ವ್ಯರ್ಥ.

**ಭೀಮಸೇನ:-** ಶತಮೂರ್ಖನೇ, ಕಾಗೆಯಂತೆ ಕರ್ಕಶ ಧ್ವನಿ ಮಾಡುತ್ತ ನನ್ನ ಕಿವಿಯನ್ನು ಏಕೆ ಕೊರೆಯುತ್ತಿರುವೆ? ನಿನ್ನ ವ್ಯರ್ಥಾಲಾಪಗಳನ್ನು ಕೇಳಿ ಕೇಳಿ ಕಿವುಡಾಗಿವೆ

ನನ್ನ ಕಿವಿಗಳು. ಬಾಯಿಗೆ ಬಂದಂತೆ ಬಡಬಡಿಸುತ್ತಾ ನೀನು ಮೇಲೆಯೇ ನಿಲ್ಲು. ನಾನು ಮಾತ್ರ ನೀರಡಿಸಿದ್ದೇನೆ. ನನ್ನಷ್ಟಕ್ಕೆ ನಾನು ನೀರನ್ನು ಕುಡಿದೇ ಬಿಡುತ್ತೇನೆ.

**ಬರ್ಬರೀಕ:-** ನಾನು ಹುಟ್ಟಿನಿಂದ ಕ್ಷತ್ರಿಯ. ಧರ್ಮವನ್ನು ರಕ್ಷಿಸುವದು ನನ್ನ ಕರ್ತವ್ಯ. ನಾನು ಇಲ್ಲಿ ಇರುವವರೆಗೆ ನಿನ್ನ ಕಡೆಯಿಂದ ಅಧರ್ಮ ಕೆಲಸವನ್ನು ಮಾಡಗೊಡಲಾರೆ. ಈ ಪವಿತ್ರ ತೀರ್ಥದ ನೀರು ಕಲುಷಿತವಾಗಗೊಡಲಾರೆ. ಇಲ್ಲಿಯೇ ನಿಂತು ಇಲ್ಲಿ ಬಿದ್ದ ಕಲ್ಲುಗಳಿಂದ ನಿನ್ನನ್ನು ಹೊಡೆದು ನಿನ್ನ ತಲೆಯನ್ನು ಸಾವಿರ ಹೋಳು ಮಾಡುವೆ.

ಹೀಗೆ ಹೇಳಿ ಬರ್ಬರೀಕನು ಅಲ್ಲಿಯೇ ಬಿದ್ದ ಇಟ್ಟಿಗೆಗಳನ್ನು ತೆಗೆದುಕೊಂಡು ತೀರ್ಥದಲ್ಲಿ ನಿಂತ ಭೀಮನಿಗೆ ಗುರಿಯಿಟ್ಟು ಬೀಸತೊಡಗಿದನು. ಅದನ್ನು ನೋಡಿ ಸಂಭ್ರಾಂತನಾದ ಭೀಮನು ಹೇಗೋ ಚಪಲತೆಯಿಂದ ಇಟ್ಟಿಗೆಯ ಪೆಟ್ಟುಗಳನ್ನು ತಪ್ಪಿಸಿಕೊಂಡು ತೀರ್ಥದಿಂದ ಮೇಲೇರಿ ಬಂದನು. ತೀರ್ಥದ ದಂಡೆಯ ಮೇಲೆ ಚಂಡವಿಕ್ರಮರಾದ ಬರ್ಬರೀಕ ಬಲಭೀಮರ ನಡುವೆ ಸುರುವಾಯಿತು ಹಣಾಹಣಿ ಹೋರಾಟ. ಇಬ್ಬರೂ ರಣರಂಗ ಭೈರವರು. ಉದ್ದಂಡ ಪರಾಕ್ರಮದ ಗಂಡುಗಲಿಗಳು. ಒಬ್ಬರಿಗಿಂತ ಇನ್ನೊಬ್ಬರು ಚಂಡಪ್ರಚಂಡರು. ಇಬ್ಬರಲ್ಲಿಯೂ ಕಾದುವ ಕೆಚ್ಚು, ರಣರಂಗ ರಭಸದ ರೊಚ್ಚು ಉಕ್ಕುತ್ತಿದ್ದವು. ಆದರಿಂದ ಅವರು ಇಬ್ಬರಲ್ಲಿಯೂ ಭೀಕರ ಪ್ರಕಾರದಲ್ಲಿಯೇ ನಡೆಯಿತು ನಿಕರದ ಕದನ. ಭೀಮ ಲೋಕವಿಡಂಬನಕ್ಕಾಗಿ ಆ ಹುಡುಗನೊಡನೆ ಹಗುರಾಗಿಯೇ ಹೋರಾಡುತ್ತಿದ್ದ.

ಈ ಅಜ್ಜ ಮೊಮ್ಮಕ್ಕಳು ಪರಿಚಯವಿಲ್ಲದೇ ಬಹಳೇ ಹೊತ್ತು ವೀರಾವೇಶದಿಂದ ಯುದ್ಧ ಮಾಡಿದರು. ಒಬ್ಬರನ್ನೊಬ್ಬರು ದ್ವಂದ್ವ ಯುದ್ಧದಲ್ಲಿ ಗುದ್ದಿ, ಒದ್ದು ಮೈ ಮುದ್ದೆ ಮಾಡಿದರು. ಆದರೆ ಎಷ್ಟಾದರೂ ಬರ್ಬರೀಕ ನವತರುಣ. ಧಡೂತಿ ದೇಹದ ಆ ಧಾಂಡಿಗ ದೈತ್ಯನ ವಜ್ರನಿಷ್ಠುರವಾದ ಮುಷ್ಟಿಪ್ರಹಾರದಿಂದ ಅಜ್ಜನಾದ ಭೀಮನ ವಜ್ರಶರೀರವೂ ಕೂಡ ನುಜ್ಜು ಗುಜ್ಜಾದಂತೆ ಆಯಿತು. ಕೆಲವೇ ನಿಮಿಷಗಳಲ್ಲಿ ಬಲಭೀಮ ಬರ್ಬರೀಕನ ಬಲವಾದ ಏಟಗಳಿಂದ ಜರ್ಜರಿತನಂತಾದ. ಕೊನೆಗೆ ಬಲಿಷ್ಠನಾದ ಬರ್ಬರೀಕನು ತನ್ನ ಭೀಕರವಾದ ಹೊಡೆತಗಳಿಂದ ವಿಹ್ವಲನಾದ ಆ ಭೀಮನನ್ನು ಮಣಿಸಿ ಮೆತ್ತಗೆ ಮಾಡಿ ತನ್ನ ಎರಡೂ ತೋಳುಗಳಿಂದ ಅವನ ವಿರಾಟ ಶರೀರವನ್ನು ಎತ್ತಿ ಹಿಡಿದ. ಅನಂತರ ಆ ಸಮುದ್ರದಲ್ಲಿ ಒಗೆದು ಬಿಡಬೇಕೆಂದು, ಬೆಟ್ಟದಂತೆ ಭಾರವಾದ ಆ ಭೀಮ ದೇಹವನ್ನು ಮೇಲಕ್ಕೆ ಎತ್ತಿದ. ಅದನ್ನು ತನ್ನ ಎರಡೂ ಬಲಿಷ್ಠ ಬಾಹುಗಳಲ್ಲಿ ಹೊತ್ತು ಸಾಗರದಲ್ಲಿ ತೂರಿ ಒಗೆಯಬೇಕೆಂದು ಸಮುದ್ರದೆಡೆಗೆ ಎತ್ತಿಕೊಂಡು ತಂದ. ಆಗ ಒಮ್ಮೆಲೇ ಮಹಾದೇವರು ಈ ಅನಾಹುತವನ್ನು ತಪ್ಪಿಸಬೇಕೆಂದು ಅಲ್ಲಿಗೆ ಬಂದು ಅಂತರಿಕ್ಷದಲ್ಲಿ ನಿಂತುಕೊಂಡು ಬರ್ಬರೀಕನಿಗೆ ಹೇಳಿದರು.

**ಶಂಕರ:-** ರಾಕ್ಷಸೋತ್ತಮನಾದ ಬರ್ಬರೀಕ, ಇದು ಏನು ಅನಾಹುತವನ್ನು ನೀನು ನಡೆಸಿರುವೆ? ಈಗ ಸಾಗರ ಮಧ್ಯದಲ್ಲಿ ತೂರಿ ಒಗೆಯಬೇಕೆಂದು ನೀನು ಹೊತ್ತು ಎತ್ತಿ ತಂದಿರುವ ಈ ವ್ಯಕ್ತಿಯು ಯಾರೆಂದು ತಿಳಿದಿರುವೆ? ಇವನು ಸಾಕ್ಷಾತ್ ಭೀಮಸೇನ. ನಿನ್ನ ತಂದೆಯ ತಂದೆ. ಭರತಕುಲದ ರತ್ನ. ಪಾಂಡವ ಕುಲಲಲಾಮ. ಮೂರುಲೋಕದ ಗಂಡ. ತೀರ್ಥಯಾತ್ರೆಯ ಪ್ರಸಂಗದಿಂದ ಪಂಚಪಾಂಡವ ಸೋದರರು ದ್ರೌಪದೀದೇವಿ

ಯೊಂದಿಗೆ ಈ ಗುಪ್ತಕ್ಷೇತ್ರದ ಯಾತ್ರೆಗೆಂದು ಬಂದಿದ್ದಾರೆ. ಈ ದೇವಿಯ ಕುಂಡದಲ್ಲಿ ಸ್ನಾನ ಮಾಡಲೆಂದು ಬಂದ ಈ ಮಹಾನುಭಾವನೇ ನಿನ್ನ ತಂದೆ ಘಟೋತ್ಕಚನಿಗೆ ಜನ್ಮ ಕೊಟ್ಟಪೂಜ್ಯ ಪಿತೃದೇವ ಭೀಮಸೇನ. ಇವನನ್ನು ಕೂಡಲೇ ಬಿಟ್ಟುಬಿಡು. ಅವನಿಗೆ ನಮಸ್ಕಾರ ಮಾಡಿ ಅಪರಾಧ ಕ್ಷಮೆಯನ್ನು ಕೇಳಿಕೋ.

ಮಹೇಶ್ವರನ ಈ ಮಾತನ್ನು ಕೇಳಿದ ಕೂಡಲೇ ಬರ್ಬರೀಕನು ಸಮುದ್ರದಲ್ಲಿ ತೂರಿ ಒಗೆಯಬೇಕೆಂದು ತನ್ನ ಬಲಿಷ್ಠ ತೋಳುಗಳಲ್ಲಿ ಹೊತ್ತುತಂದ ಆ ಬಲಭೀಮನನ್ನು ಹಗುರಾಗಿ ನೆಲದ ಮೇಲೆ ಇಳಿಸಿದ..ಅವನ ಮುಂದೆ ಅಡ್ಡ ಬಿದ್ದ. ಗಟ್ಟಿಯಾಗಿ ಎರಡೂ ಕಾಲು ಗಳನ್ನು ಹಿಡಿದು ತನ್ನ ತಲೆಯನ್ನು ಅವನ ಪಾದಗಳಿಗೆ ಗಟ್ಟಿಸಿದ. ದೈನ್ಯದಿಂದ ಬೇಡಿಕೊಂಡ.

**ಬರ್ಬರೀಕ:-** ''ಅಕಟಕಟಾ, ನನ್ನಿಂದ ಇದೇನು ಅನ್ಯಾಯವಾಯಿತು? ನನ್ನ ಜನ್ಮಕ್ಕೆ ಧಿಕ್ಕಾರವಿರಲಿ. ನಾನು ಪರಮನೀಚ. ಪೂಜಾರ್ಹರಾದ ನಿಮಗೆ ನಾನು ಎಷ್ಟು ಪೀಡೆ ಕೊಟ್ಟೆ! ನೀವು ಯಾರು ಎಂಬುದನ್ನು ತಿಳಿಯದೆ ನನ್ನ ಕೈಯಿಂದ ಘೋರ ಅಪರಾಧವಾಯಿತು. ನಾನು ಹುಟ್ಟಾ ರಾಕ್ಷಸ. ಪಾಂಡವರ ಪವಿತ್ರ ವಂಶದಲ್ಲಿ ಹುಟ್ಟಿದ್ದೇನೆ ಎಂದು ತಿಳಿದು ಎಷ್ಟು ಧರ್ಮದಿಂದ ನಡೆಯಲು ಪ್ರಯತ್ನಪಟ್ಟರೂ ಕೊನೆಗೂ ನನ್ನ ಕೈಯಿಂದ ಈ ರಾಕ್ಷಸೀ ಕೃತ್ಯ ನಡೆದೇ ಹೋಯಿತು. ಇದಕ್ಕಾಗಿ ತಮ್ಮಲ್ಲಿ ಕ್ಷಮೆ ಕೇಳಲು ಕೂಡ ನನಗೆ ನಾಚಿಕೆಯಾಗುತ್ತದೆ. ಮೊಮ್ಮಗನು ಮಾಡಿದ ಈ ತಪ್ಪನ್ನು ಪಿತಾಮಹನಾದ ನೀನು ದಯವಿಟ್ಟು ಕ್ಷಮಿಸಲಾರೆಯಾ! ಕ್ಷಮಿಸು ಕ್ಷಮಿಸು. ಅಜ್ಜ, ಈ ಪಾಪಿ ಮೊಮ್ಮಗನ ಮಹಾಪರಾಧವನ್ನು ಇದೊಂದು ಸಲ ಕ್ಷಮಿಸಿ ಬಿಡು. ಇನ್ನು ಎಂದೂ ಇಂಥ ದಾರುಣ ತಪ್ಪನ್ನು ಮಾಡುವದಿಲ್ಲ. ಇದೊಂದು ಸಲ ಪ್ರಥಮಾಪರಾಧವೆಂದಾಗಲೀ, ತಿಳಿಯದೇ ಮಾಡಿದ್ದೆಂದಾಗಲೀ, ಬಾಲಕನು ಮಾಡಿದ್ದೆಂದಾಗಲೀ, ಮೊಮ್ಮಗನು ಮಾಡಿದ್ದೆಂದಾಗಲೀ ಬುದ್ಧಿಗೇಡಿತನದಿಂದ ಮಾಡಿದ ತಪ್ಪಿಗಾಗಿ ಬಿದ್ದು ಬೇಡಿಕೊಳ್ಳುತ್ತಿದ್ದಾನೆ. ಎಂಬ ಕರುಣೆಯಿಂದಾಗಲಿ, ಕ್ಷತ್ರಿಯರು ಕ್ಷಮಾ ಭೂಷಣರಾಗಿರಬೇಕು ಎಂಬ ನೀತಿಯಿಂದಾಗಲೀ ನನ್ನನ್ನು ಈ ಬಾರಿ ಕ್ಷಮಿಸಿಬಿಡಿರಿ. ನನ್ನ ಅಜ್ಜನಾದದ್ದಕ್ಕೆ ನನ್ನ ಇದೊಂದು ಪ್ರಾರ್ಥನೆಯನ್ನು ಮನ್ನಿಸಲಾರೆಯಾ? ಇದೊಂದು ಬಾರಿಯಾದರೂ ಈ ರಕ್ಕಸನನ್ನು ಕ್ಷಮಿಸಲಾರೆಯಾ? ಕ್ಷಮಿಸು ಅಜ್ಜ, ಕ್ಷಮಿಸು'' ಎಂದು ಭೀಮನ ಪಾದದ ಮೇಲೆ ಬಿದ್ದು ಉರುಳಾಡತೊಡಗಿದನು.

ಕೊನೆಗೆ ಪಶ್ಚಾತ್ತಾಪದ ಶೋಕೋದ್ರೇಕದಿಂದ ಆ ಬರ್ಬರೀಕನಿಗೆ ಮೂರ್ಛೆಬಂದು ಬಿಟ್ಟಿತು. ಅವನು ನಿಶ್ಚೇಷ್ಟಿತನಾಗಿ ಭೀಮನ ಕಾಲುಗಳ ಮೇಲೆ ಬಿದ್ದುಬಿಟ್ಟನು. ಅದನ್ನು ಕಂಡು ಭೀಮನಿಗೆ ಕರುಣೆ ಉಕ್ಕಿಬಂದಿತು. ಅವನು ಬಾಗಿ ಆ ಮೊಮ್ಮಗನನ್ನು ಎತ್ತಿಕೊಂಡ. ಶೈತ್ಯೋಪಚಾರ ಮಾಡಿದ. ಅದರಿಂದ ಬರ್ಬರೀಕನಿಗೆ ಎಚ್ಚರವಾಯಿತು. ಆಗ ಭೀಮಸೇನನು ಆ ತನ್ನ ಪೌತ್ರನನ್ನು ಬರಸೆಳೆದು ಬಿಗಿದಪ್ಪಿಕೊಂಡ. ಪ್ರೀತಿಯಿಂದ ಅವನನ್ನು ಮೈದಡವಿ, ತೊಡೆಯ ಮೇಲೆ ಕೂಡಿಸಿಕೊಂಡು ನೆತ್ತಿಯನ್ನೂ ಮೂಸಿ, ಸ್ನೇಹಾಮೃತವನ್ನೂ ಸೂಸಿ, ಮಾತನಾಡಿದ.

**ಭೀಮಸೇನ:-** ವತ್ಸ! ನೀನು ದುಃಖಪಡಬೇಡ. ನೀನು ಹುಟ್ಟಿದ ಬಳಿಕ ನಿನಗೂ ನಮಗೂ ಭೆಟ್ಟಿಯೇ ಇಲ್ಲ. ದೂರ ದೇಶದಲ್ಲಿದ್ದುದರಿಂದ ನನಗೂ ನಿಮಗೂ ಸಂಪರ್ಕವೇ ಕಡಿದು ಹೋಗಿದೆ. ಆದುದರಿಂದ ಇದರಲ್ಲಿ ಯಾರ ತಪ್ಪೂ ಇಲ್ಲ. ಘಟೋತ್ಕಚನಿಗೆ ಒಬ್ಬ ಮಗನು ಹುಟ್ಟಿದ್ದಾನೆ ಎಂದು ಶ್ರೀಕೃಷ್ಣನ ಬಾಯಿಂದ ಕೇಳಿದ್ದೆ. ಘಟೋತ್ಕಚನೂ ತನಗೆ

ಪುತ್ರೋತ್ಸವವಾದ ಸಂತಸದ ಸಂಗತಿಯನ್ನು ನನಗೆ ನಿವೇದಿಸಿಕೊಂಡಿದ್ದ.

ನೀನು ದೊಡ್ಡವನಾದ ಬಳಿಕ 'ಈ ಗುಪ್ತಕ್ಷೇತ್ರದಲ್ಲಿ ನೆಲೆಸುವಿ' ಎಂಬುದನ್ನು ಕೂಡ ಆ ಕೃಷ್ಣ ಭಗವಂತನು ನನಗೆ ತಿಳಿಸಿದ್ದ. ಆದರೆ ಬಾಯಾರಿಕೆಯಿಂದ ಬಸವಳಿದು ಕಸಿವಿಸಿಯಲ್ಲಿರುವ ನನಗೆ ಅದೆಲ್ಲವು ಮರೆತೇ ಹೋಗಿತ್ತು. ಹಸಿವು ನೀರಡಿಕೆಯಿಂದ ಕಂಗಾಲಾದ ಮಾನವನ ನೆನಪಿನ ಶಕ್ತಿಯೂ ನಶಿಸಿ ಹೋಗುವದು. ಆದರಿಂದಲೇ ಇಷ್ಟೆಲ್ಲ ಅನರ್ಥವಾಯಿತು. ಇದೆಲ್ಲವು ಕಾಲನಾಮಕ ಪರಮಾತ್ಮನ ಪ್ರೇರಣೆಯಿಂದಲೇ ನಡೆದಿದೆ.

ಈ ವಿಷಯದಲ್ಲಿ ನೀನು ಶೋಕ ಮಾಡಬೇಡ. ನನ್ನ ನಿನ್ನ ನಡುವೆ ಈ ಯುದ್ಧ, ಮೊಮ್ಮಗನಿಂದ ಈ ಅಜ್ಜನ ಪರಾಜಯ, ಶಂಕರನ ಸಂದೇಶದಿಂದ ಮತ್ತೆ ನೀನು ನನ್ನಲ್ಲಿ ಕ್ಷಮೆಕೇಳಿಕೊಂಡಿದ್ದು, ಎಲ್ಲವೂ ವಿಧಿವಿಲಾಸ, ಭಗವದಿಚ್ಛೆ. ಇದರಲ್ಲಿ ನಿನ್ನದೇನೂ ಅಪರಾಧವಿಲ್ಲ. ನೀನು ನ್ಯಾಯವಾಗಿಯೇ ನಡೆದುಕೊಂಡಿರುವೆ. ದಾರಿಬಿಟ್ಟು ನಡೆದ ಯಾರಿಗಾದರೂ ದಂಡ ವಿಧಿಸುವದು ಕ್ಷತ್ರಿಯನ ಕರ್ತವ್ಯವೇ. ಹಾದಿಬಿಟ್ಟು ನಡೆದರೆ, ತನ್ನನ್ನು ಕೂಡ ತಾನು ಕ್ಷಮಿಸಬಾರದು. ತನ್ನಷ್ಟಕ್ಕೆ ತಾನೇ ದಂಡವನ್ನು ವಿಧಿಸಿಕೊಳ್ಳಬೇಕು ಎಂದು ಶಾಸ್ತ್ರದ ಆದೇಶ. ಆದರಂತೆ ತಂದೆ, ತಾಯಿ, ಅಜ್ಜ, ಕಕ್ಕ ಯಾರೇ ತಪ್ಪು ಮಾಡಿದರೂ ತಿದ್ದುವದು, ಕೇಳದಿದ್ದರೆ ಯುದ್ಧ ಮಾಡಿ ಅವರನ್ನು ತಿದ್ದುವದು ಕ್ಷತ್ರಿಯರ, ಹಿರಿಯ ಹೊಣೆಗಾರಿಕೆ, ಅದಕ್ಕೆ ಅನುಗುಣವಾಗಿ ನೀನು ಈಗ ನೀರಡಿಕೆಯ ನಿಮಿತ್ತದಿಂದ ಧರ್ಮರಾಜನ ಮಾತನ್ನು ಕೇಳದೆ ಅಧರ್ಮದಲ್ಲಿ ಕಾಲಿರಿಸಿದ ನನಗೆ ತಕ್ಕ ಶಾಸ್ತಿ ಮಾಡಿದೆ. ಧರ್ಮಮಾರ್ಗದಲ್ಲಿ ನ್ಯಾಯನಿಷ್ಠುರವಾಗಿ ನಡೆದು ತಪ್ಪಿತಸ್ಥರನ್ನು ಧೈರ್ಯದಿಂದ ದಂಡಿಸಿದ ನಿನ್ನ ಕರ್ತವ್ಯದಕ್ಷತೆಯನ್ನು ಕಂಡು ನನಗೆ ಬಹಳ ಹಿಗ್ಗಾಗಿದೆ. ಹೆಮ್ಮೆಯೂ ಎನಿಸಿದೆ. ಇಂಥ ಧರ್ಮನಿಷ್ಠ ನ್ಯಾಯನಿಷ್ಠುರ ಮೊಮ್ಮಗನನ್ನು ಪಡೆದ ನಾನು ಧನ್ಯ. ಧರ್ಮಧುರಂಧರನಾದ ನಿನಗೆ ನಾನು ವರಕೊಡಬೇಕೆಂದು ಮಾಡಿದ್ದೇನೆ. ಬೇಕಾದ ವರ ಕೇಳು, ನೀಡುತ್ತೇನೆ. ನಿನ್ನ ಮನಸ್ಸಿನಲ್ಲಿಯ ದುಃಖವನ್ನು ತೆಗೆದುಹಾಕು. ನಾನು ಅಪರಾಧಿ ಎಂಬ ಭಾವವನ್ನು ತೊಡೆದುಹಾಕು. ಪ್ರಸನ್ನಚಿತ್ತದಿಂದಲೇ ನನ್ನಲ್ಲಿ ವರ ಕೇಳಿಕೊ.

**ಬರ್ಬರೀಕ:-** ''ಪುಣ್ಯಾತ್ಮನಾದ ಅಜ್ಜನೇ! ನಾನು ಮಹಾಪಾಪಿ. ಬ್ರಹ್ಮಹತ್ಯೆಗಿಂತ ಘೋರ ಪಾಪವನ್ನು ನಾನು ಮಾಡಿದ್ದೇನೆ. ನೀವು ನನ್ನನ್ನು ಹೊಗಳಬೇಡಿರಿ. ನಾನು ಮಾಡಿದಂಥ ಘೋರ ಪಾಪವನ್ನು ಹಿಂದೆ ಯಾರೂ ಮಾಡಿಲ್ಲ. ಮುಂದೆ ಯಾರೂ ಮಾಡಲಾರರು. ಮಹಾ ಪಾಪಿಷ್ಠನಾದ ನಿಮ್ಮ ಈ ಮೊಮ್ಮಗ ದುಷ್ಟದೈತ್ಯನನ್ನು ಕಣ್ಣಿನಿಂದ ನೋಡಬೇಡಿರಿ. ಕೈಯಿಂದ ಮುಟ್ಟಬೇಡಿರಿ. ಬ್ರಾಹ್ಮಣರು ಎಲ್ಲ ಪಾಪಗಳಿಗೂ ಪ್ರಾಯಶ್ಚಿತ್ತವನ್ನು ಹೇಳಿದ್ದಾರೆ. ಆದರೆ ಪಿತೃದ್ರೋಹಿಗಳಿಗೆ ಮಾತ್ರ ಯಾವ ಪ್ರಾಯಶ್ಚಿತ್ತವನ್ನೂ ಹೇಳಲಿಲ್ಲ.

**ಸರ್ವೇಷಾಮೇವ ಪಾಪಾನಾಂ ನಿಷ್ಕೃತಿಃ ಪ್ರೋಚ್ಯತೇ ದ್ವಿಜೈಃ ।**
**ಪಿತುರಭಕ್ತಸ್ಯ ಪುನಃ ನಿಷ್ಕೃತಿರ್ನೈವ ವಿದ್ಯತೇ ॥**

ಎಲ್ಲ ಪಾಪಗಳಿಗೂ ಪ್ರಾಯಶ್ಚಿತ್ತವುಂಟು. ಆದರೆ ಪಿತೃದ್ರೋಹಿಗಳಿಗೆ ಮಾತ್ರ ಯಾವ ಪ್ರಾಯಶ್ಚಿತ್ತವೂ ಇಲ್ಲ. ಇಲ್ಲವೆಂದೇ ಬ್ರಾಹ್ಮಣರು ಈ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಹೇಳಿಲ್ಲ.

ಆದುದರಿಂದ ಪ್ರಾಯಶ್ಚಿತ್ತಕ್ಕೆ ಅತೀತವಾದ ಘೋರ ಪಾತಕವನ್ನು ಮಾಡಿದ ಈ ಪಾಪಿಯು ಬದುಕಲಿಕ್ಕೆ ಅನರ್ಹನಾಗಿದ್ದಾನೆ. ಯಾವ ದೈತ್ಯ ದೇಹದಿಂದ ನನ್ನ ಪೂಜ್ಯ

ಅಜ್ಜನನ್ನು ನುಜ್ಜುಗುಜ್ಜಾಗುವಂತೆ ಜಜ್ಜಿ ಹೊಡೆದೆನೋ, ಈ ದುಷ್ಟ ದೈತ್ಯ ದೇಹವನ್ನು ಈ ಮಹೀಸಾಗರ ಸಂಗಮತೀರ್ಥದಲ್ಲಿ ತ್ಯಾಗ ಮಾಡಿಬಿಡುತ್ತೇನೆ. ಅಂದರೆ ಜನ್ಮಾಂತರದಲ್ಲಿ ಆದರೂ ನನ್ನ ಕೈಯಿಂದ ಪಿತೃದ್ರೋಹದ ಈ ಘಾತಕ ಕೃತ್ಯವು ಘಟಿಸಲಿಕ್ಕಿಲ್ಲ. ಅದಕ್ಕಾಗಿ ನನ್ನ ಪಿತಾಮಹನನ್ನು ತೂರಿ ಸಮುದ್ರದಲ್ಲಿ ಚೆಲ್ಲಲಿಕ್ಕೆ ಹೊರಟ ಈ ನನ್ನ ದುಷ್ಟದೇಹವನ್ನೇ ನಾನಾಗಿಯೇ ಸಮುದ್ರದಲ್ಲಿ ಬಿಸಾಕಿ ಆ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತೇನೆ. ಯಾರೂ ನನ್ನನ್ನು ತಡೆಯಬೇಡಿ.'' ಹೀಗೆ ಹೇಳಿ ಬರ್ಬರೀಕನು ನಿಂತಲ್ಲಿಂದಲೇ ಜಿಗಿದು ಸಮುದ್ರತೀರಕ್ಕೆ ಹಾರಿದನು. ಸಮುದ್ರದ ಅಗಾಧ ನೀರಿನ ಪರ್ದೆರೆಗಳ ಮಧ್ಯದಲ್ಲಿಯೇ ಜಿಗಿದು ಬಿಟ್ಟನು. ಅಪರಂಪಾರ ವಾರಿ ವಿಸ್ತಾರದ ಘೋರ ತರಂಗಮಾಲೆಗಳಿಂದ ಘೂರ್ಮಿಸಿದ ಆ ಸಮುದ್ರನಾಥನೂ ಕೂಡ ಒಂದುಕ್ಷಣ ತಬ್ಬಿಬ್ಬಾಗಿ ಹೋದನು. ''ಇಂಥ ಆತ್ಮಬಲಿದಾನಕ್ಕೆ ಸಿದ್ಧನಾದ ವೀರ ಪುರುಷನನ್ನು ನಾನು ಹೇಗೆ ಕೊಲ್ಲಲಿ? ಎಂದು ತಲ್ಲಣಿಸಿ ಹೋಯಿತು ಆ ತೋಯನಿಧಿ.

## ದೇವಿಯ ಸಾಕ್ಷಾತ್ಕಾರ

ಅಷ್ಟರಲ್ಲಿ ಇವನು ಇಷ್ಟುದಿನ ಆರಾಧಿಸಿದ ಸಿದ್ಧಾಂಬಿಕಾದೇವಿಯು ತಕ್ಷಣ ಅಲ್ಲಿಯೇ ಸಮುದ್ರದ ಮಧ್ಯದಲ್ಲಿ ಪ್ರಕಟಳಾದಳು. ಮತ್ತು ಜಲಸಮಾಧಿ ಹೊಂದಲು ಸಿದ್ಧನಾದ ಬರ್ಬರೀಕನನ್ನು ಆ ದೇವಿಯು ಹೊತ್ತುಕೊಂಡು ಮೇಲೆ ತಂದಳು. ನಾಲ್ಕೂ ದಿಕ್ಕುಗಳಿಂದ ಎಲ್ಲ ದೇವಿಯರೂ ಅಲ್ಲಿ ಆಗಮಿಸಿದರು. ಮಹಾರುದ್ರ ದೇವರು ತಕ್ಷಣವೇ ಪ್ರಕಟರಾಗಿ ಬರ್ಬರೀಕನನ್ನು ಹೃದಯ ತುಂಬಿ ಆಲಿಂಗಿಸಿಕೊಂಡರು. ಸಿದ್ಧಾಂಬಿಕಾದೇವಿಯು ಬರ್ಬರೀಕನನ್ನು ಮನತುಂಬಿ ಹರಸುತ್ತಾ ನುಡಿದಳು.

**ಸಿದ್ಧಾಂಬಿಕಾ:-** ವೀರಶ್ರೇಷ್ಠಾ, ನೀನು ಮಾಡಿದ ಪಾಪವೇನೋ ದೊಡ್ಡದೇ. ಆದರೆ ಅದು ತಿಳಿಯದೇ ಮಾಡಿದ ಅಪರಾಧವಾದುದರಿಂದ ಅದಕ್ಕೆ ಯಾವ ದೋಷವೂ ಇಲ್ಲ. ತಿಳಿದು ಮಾಡಿದುದೇ ತಪ್ಪು.

**ಅಜ್ಞಾತವಿಹಿತೇ ಪಾಪೇ ನಾಸ್ತಿ ವೀರೇಂದ್ರ ಕಲ್ಮಷಮ್।**
**ಶಾಸ್ತ್ರೇಷೂಕ್ತಮಿದಂ ವಾಕ್ಯಂ ನಾನ್ಯಥಾ ಕರ್ತುಮರ್ಹಸಿ ॥**

ಶಾಸ್ತ್ರಗಳಲ್ಲಿ ತಿಳಿದು ಮಾಡಿದ ತಪ್ಪಿಗಾಗಿ ಮಾತ್ರ ಪಾಪ ಬರುತ್ತದೆ ಎಂದು ಹೇಳಿದ್ದಾರೆ. ತಿಳಿಯದೇ ಮಾಡಿದ ಅಜ್ಞಾತ ದೋಷಗಳಿಗೆ ಪಾಪವಾಗಲೀ, ಪ್ರಾಯಶ್ಚಿತ್ತವಾಗಲಿ, ಇರುವದಿಲ್ಲ. ಈಗ ನೀನು ತಿಳಿಯದೇ ಈ ಬಲಭೀಮನನ್ನು ಯುದ್ಧದಲ್ಲಿ ಹೊಡೆದು ಗಾಯಗೊಳಿಸುರುತ್ತಿ. ಅದು ಅಜ್ಞಾತ ಅಪರಾಧ. ಇದಕ್ಕೆ ಯಾವ ಪಾಪವೂ ಇಲ್ಲ.

''ಇಕೋ ಇತ್ತ ನೋಡು, ನಿನ್ನ ತಂದೆಯ ತಂದೆಯಾದ ಬಲಭೀಮನು ಮಗು ಕಂದಾ, ವತ್ಸಾ, ನಿಲ್ಲು ನಿಲ್ಲು'' ಎಂದು ಕೂಗುತ್ತಾ ಕರೆಯುತ್ತಾ ನಿನ್ನ ಬೆನ್ನ ಹಿಂದೆ ಬರುತ್ತಲಿದ್ದಾನೆ. ನೀನು ಈಗ ತಿಳಿಯದೇ ಮಾಡಿದ ತಪ್ಪಿಗಾಗಿ ಆತ್ಮಹತ್ಯೆಯನ್ನು ಮಾಡಿಕೊಂಡರೆ ಆ ಬಲಭೀಮನೂ ದುಃಖಾತಿರೇಕದಿಂದ ಪ್ರಾಣಪರಿತ್ಯಾಗ ಮಾಡುವನು. ಈಗ ನೀನು ತಿಳಿಯದೇ ನಿನ್ನ ಪಿತಾಮಹನನ್ನು ಹೊಡೆದು ಬಡೆದಿರುವೆ. ಆದರೆ ಈಗ 'ಇವನು ನನ್ನ ಅಜ್ಜ

ಬಲಭೀಮ' ಎಂದು ತಿಳಿದ ಬಳಿಕವೂ ಅಪ್ರತ್ಯಕ್ಷವಾಗಿ ಅವನ ಮರಣಕ್ಕೆ ಕಾರಣವಾಗುತ್ತಲಿರುವೆ. ಹಿಂದೆ ಮಾಡಿದ್ದು ಅಜ್ಞಾತ ಅಪರಾಧ. ತಿಳಿಯದೇ ಮಾಡಿದ ತಪ್ಪು. ಈಗ ನೀನು ಮಾಡುಲಿತ್ತರುವದು ಜ್ಞಾತಾಪರಾಧ. ಇದಕ್ಕೆ ಬರುವದು ಸಾಮಾನ್ಯ ಪಾಪವಲ್ಲ. ಘೋರ ಪಾಪ. ಪಿತಾಮಹ ಮರಣ ಪಾತಕಕ್ಕೆ ಯಾವ ಪ್ರಾಯಶ್ಚಿತ್ತವೂ ಇಲ್ಲ. ಇದನ್ನೆಲ್ಲ ತಿಳಿದು ವಿಚಾರಿಸಿ ನೋಡು. ಆತ್ಮ ಹತ್ಯಾ, ಪಿತಾಮಹ ಹತ್ಯಾ, ಮುಂತಾದ ಪಾಪಗಳು ನಿನ್ನಿಂದ ಘಟಿಸಬಾರದು ಎಂದಿದ್ದರೆ ನೀನು ನಿನ್ನ ಪ್ರಾಣತ್ಯಾಗರೂಪ ದುಸ್ಸಾಹಸದಿಂದ ಈಗಲೇ ಪರಾವೃತ್ತನಾಗು. ಪ್ರೀತಿದುಂಬಿ ಇಲ್ಲಿ ನಿಂತ ನಿನ್ನ ಅಜ್ಜ ಬಲಭೀಮನನ್ನು ಬಿಗಿದಪ್ಪು.''

''ನಿನಗೆ ಮರಣವೇ ಇಷ್ಟವಾಗಿದ್ದರೆ ಅದು ಇನ್ನು ಕೆಲವೇ ದಿನಗಳಲ್ಲಿ ಸಾಕ್ಷಾತ್ ಶ್ರೀಕೃಷ್ಣನ ಕೈಯಿಂದಲೇ ಒದಗಿ ಬರುವದು. ಕೃಷ್ಣನೆಂದರೆ ಸಾಮಾನ್ಯನೆಂದು ತಿಳಿಯಬೇಡ. ಅವನು ದೇವಾಧಿದೇವ, ಸರ್ವೋತ್ತಮ ದೇವತೆ. ಅವನ ಕೈಯಿಂದ ಮರಣ ಸರ್ವಪಾಪ ಹರಣ, ಸಂಸಾರ ಸಂತರಣ, ಮೋಕ್ಷಕ್ಕೆ ಕಾರಣ. ಆ ಶ್ರೀಕೃಷ್ಣನ ಕೈಯಿಂದ ನಿನಗೆ ಬರಲಿರುವ ಮರಣದ ಮಂಗಳ ಮುಹೂರ್ತವನ್ನು ಕಾದುಕೊಂಡು ಕುಳಿತಿರು. ನಾವು ಈಗ ಮಾಡುತ್ತಲಿರುವ ಹಿತೋಪದೇಶದ ವಚನವನ್ನು ಕೇಳು.''

ಇತರ ದೇವಿಯರಿಂದ ಒಡಗೂಡಿದ ಸಿದ್ಧಾಂಬಿಕಾ ದೇವಿಯ ಈ ಹಿತನುಡಿಗಳನ್ನು ಆಲಿಸಿದ ಬರ್ಬರೀಕ ನಿವೃತ್ತನಾದ ತನ್ನ ಮರಣ ನಿಶ್ಚಯದಿಂದ. ಮರಳಿ ಬಂದು ಭೀಮಸೇನನ ಅಡಿದಾವರೆಗಳನ್ನು ಹಿಡಿದು ಅವನಪಾದದಡಿಯ ಹುಡಿಯನ್ನು ತನ್ನ ಮುಡಿಯಲ್ಲಿ ಧರಿಸಿದ. ''ಕ್ಷಮಿಸಬೇಕು'' ಎಂದು ಮತ್ತೆ ಮತ್ತೆ ಕೇಳಿಕೊಂಡ.

ಅಲ್ಲಿಗೆ ಬಂದ ಎಲ್ಲ ದೇವಿಯರು ''ಈ ಬರ್ಬರೀಕನು ಮುಂದೆ ಚಂಡೀದೇವಿಯ ಕಾರ್ಯಕ್ಕೆ ಸಿದ್ಧನಾಗಿ ಕಲಿತನದಿಂದ ಕದನ ಮಾಡಿ ಅನೇಕ ದೈತ್ಯರೊಡನೆ ಹೋರಾಡುವನು. ಅದರಿಂದಾಗಿ ಈ ಪ್ರಪಂಚದಲ್ಲಿ 'ಚಂಡಿಲ' ಎಂಬ ಹೆಸರಿನಿಂದ ಪ್ರಸಿದ್ಧ ಪಡೆಯುವನು. ಎಲ್ಲರಿಗೂ ಪೂಜನೀಯನೂ ಆಗುವನು.'' ಹೀಗೆ ಹೇಳಿದರು. ಹಾಗೂ ಆ ಎಲ್ಲ ದೇವಿಯರೂ ಅಂತರ್ಧಾನ ಹೊಂದಿದರು.

ಅನಂತರ ಬಲಭೀಮನು ಬರ್ಬರೀಕನನ್ನು ತನ್ನ ಜೊತೆಗೆ ಕರೆದುಕೊಂಡು ತಾವಿದ್ದ ಸ್ಥಳಕ್ಕೆ ಬಂದನು. ಉಳಿದೆಲ್ಲ ಪಾಂಡವರಿಗೂ ನಡೆದ ಸಮಾಚಾರವನ್ನೆಲ್ಲ ತಿಳಿಸಿದನು. ಇದನ್ನೆಲ್ಲ ಕೇಳಿ ಧರ್ಮರಾಜ, ಅರ್ಜುನ, ನಕುಲ, ಸಹದೇವ, ದ್ರೌಪದಿ ಮುಂತಾದವರಿಗೆಲ್ಲರಿಗೂ ಪರಮಾಶ್ಚರ್ಯವಾಯಿತು. ಎಲ್ಲರೂ ಹೊಗಳಿದರು ಆ ಬರ್ಬರೀಕನನ್ನು. ಅನಂತರ ವಿಧಿಪೂರ್ವಕವಾಗಿ ಆ ತೀರ್ಥದಲ್ಲಿ ಎಲ್ಲ ಪಾಂಡವರೂ ಸಂಕಲ್ಪಪೂರ್ವಕವಾಗಿ ಸ್ನಾನಮಾಡಿದರು. ಭಗವಂತನನ್ನು ಭಕ್ತಿಪೂರ್ವಕವಾಗಿ ಪೂಜಿಸಿದರು.

## ಬರ್ಬರೀಕನ ನಿಧನ ಮತ್ತು ಅವನ ಪೂರ್ವಜನ್ಮದ ವೃತ್ತಾಂತ

**ಸೂತ:-** ಹೀಗೆ ಅನೇಕಾನೇಕ ತೀರ್ಥಗಳಲ್ಲಿ ವಿಧಿಪೂರ್ವಕವಾಗಿ ಸ್ನಾನ ಮಾಡಿದರು. ಆ ಪಂಚಪಾಂಡವರು. ಪುಣ್ಯಾರಣ್ಯಗಳಲ್ಲಿರುವ ಎಲ್ಲ ಪವಿತ್ರ ಕ್ಷೇತ್ರಗಳ ಯಾತ್ರೆಗೈದರು. ಹನ್ನೆರಡು ವರ್ಷದ ವನವಾಸವು ಮುಗಿಯಿತು. ಆ ಬಳಿಕ ಮತ್ಸ್ಯರಾಜನ ರಾಜಧಾನಿಯಾದ ವಿರಾಟ ನಗರದಲ್ಲಿ ಒಂದು ವರ್ಷ ಅಜ್ಞಾತವಾಸದಲ್ಲಿ ಕಳೆದರು. ಹೀಗೆ ಒಟ್ಟು ಹದಿಮೂರು ವರ್ಷದ ವನವಾಸವನ್ನು ಶ್ರೀಕೃಷ್ಣನ ದಯೆಯಿಂದ ನಿರಾತಂಕವಾಗಿ ಮಾಡಿ

ಮುಗಿಸಿದರು. ಉಪಪ್ಲಾವ್ಯ ಎಂಬ ಸ್ಥಳದಲ್ಲಿ ಶ್ರೀಕೃಷ್ಣ ಹಿರಿತನದಲ್ಲಿ ಪಾಂಡವರ ಹಿತಚಿಂತಕರ ಸಭೆ ಸೇರಿತು. ಕೌರವರಿಗೆ ಸಂಧಿಯನ್ನು ಮಾಡಿಕೊಳ್ಳಬೇಕು ಎಂದು ಬಿನ್ನವಿಸಿಕೊಳ್ಳಲು ಸ್ವಯಂ ಶ್ರೀಕೃಷ್ಣನೇ ಶಾಂತಿದೂತನಾಗಿ ಹಸ್ತಿನಾವತಿಗೆ ಹೋಗಿಬಂದನು, ದುರ್ಯೋಧನನ ದುರಾಗ್ರಹದಿಂದ ಸಂಧಿ ಏರ್ಪಡಲಿಲ್ಲ. ಯುದ್ಧವು ಅನಿವಾರ್ಯ ಆಯಿತು. ಕುರುಕ್ಷೇತ್ರದಲ್ಲಿ ಕೌರವ ಪಾಂಡವರ ನಡುವೆ ಅತ್ಯಂತ ಭೀಕರವಾದ ಮಹಾಯುದ್ಧವು ಪ್ರಾರಂಭವಾಯಿತು. ಕೌರವರ ಪಕ್ಷದಲ್ಲಿ ಹನ್ನೊಂದು ಅಕ್ಷೋಹಿಣಿ ಸೈನ್ಯವು ಸಿದ್ಧವಾಗಿ ನಿಂತುಕೊಂಡಿತ್ತು ಮಹಾಯುದ್ಧಕ್ಕಾಗಿ.

ಪಾಂಡವರ ದಳದಲ್ಲಿ ಏಳು ಅಕ್ಷೋಹಿಣಿ ಸೈನ್ಯವು ಯುದ್ಧ ಸನ್ನದ್ಧವಾಗಿದ್ದಿತು. ಕೌರವರ ಪಕ್ಷದಲ್ಲಿ ಭೀಷ್ಮ, ದ್ರೋಣ, ಕೃಪ, ಅಶ್ವತ್ಥಾಮ, ದುರ್ಯೋಧನ, ದುಃಶಾಸನ, ಕರ್ಣ, ಭಗದತ್ತ, ಶಲ್ಯ, ಶಕುನಿ, ಏಕಲವ್ಯ ಮುಂತಾದ ಅಸಂಖ್ಯವೀರಾಧಿವೀರರೂ ಧಾರಾತೀರ್ಥದಲ್ಲಿ ಪ್ರಾಣವಿಸರ್ಜನೆಗೆ ಸಿದ್ಧರಾಗಿ ನಿಂತುಕೊಂಡಿದ್ದರು. ಅವರ ಸೇನಾಬಲವೂ ಕೂಡ ಪಾಂಡವರ ಸೈನಿಕಬಲಕ್ಕಿಂತ ನಾಲ್ಕು ಅಕ್ಷೋಹಿಣಿ ಹೆಚ್ಚಿಗೆ ಇದ್ದಿತು. ಹೀಗೆ ಸಂಖ್ಯೆಯಲ್ಲಿಯೂ ಶೌರ್ಯದಲ್ಲಿಯೂ ಕೌರವರ ಬಲವು ಪಾಂಡವರ ಬಲಕ್ಕಿಂತ ಮಿಗಿಲಾಗಿತ್ತು. ಇದನ್ನು ನೋಡಿ ಹಾಗೂ ಎರಡೂ ಸೇನಾದಳಗಳ ಗುಣಗಾತ್ರಗಳನ್ನೂ ಬಲಾಬಲಗಳನ್ನೂ ತೂಗಿನೋಡಿದ ಧರ್ಮರಾಜನಿಗೆ ಗಾಬರಿಯಾಯಿತು. ಅವನು ಹೆದರಿಕೆಯಿಂದ ಹೌಹಾರಿ ಹೋಗಿದ್ದನು. ಉದ್ಭ್ರಾಂತನಾಗಿ ತನ್ನ ಏಳು ಅಕ್ಷೋಹಿಣಿ ಸೈನ್ಯದ ಮುಂಭಾಗದಲ್ಲಿ ನಿಂತು ಎದುರು ಪಕ್ಷದಲ್ಲಿ ಭೋರ್ಗರೆಯುವ ಹನ್ನೊಂದು ಅಕ್ಷೋಹಿಣಿ ಕೌರವ ಸೇನೆಯ ಸಾಗರವನ್ನೂ ಭೀಷ್ಮ, ದ್ರೋಣ, ಕರ್ಣ, ಅಶ್ವತ್ಥಾಮ ಮುಂತಾದ ಅತಿರಥಿ ಮಹಾರಥಿಗಳನ್ನೂ, ಬೆರಳುಮಾಡಿ ತೋರಿಸಿ ಕೇಳಿದನು ತನ್ನ ದಳದ ವೀರವರೇಣ್ಯರನ್ನು.

**ಧರ್ಮರಾಜ:-** ವೀರಾಧಿವೀರರೇ, ಕೌರವೇಶ್ವರನ ಪ್ರಚಂಡ ಸೇನಾ ಸನ್ನಾಹವನ್ನು ನೋಡಿದಿರಾ! ಅಕೋ ಅಲ್ಲಿ ನೋಡಿ, ನಿಂತುಕೊಂಡಿದ್ದಾನೆ ಕೌರವ ಸೇನಾಪತಿ ಭೀಷ್ಮ. ಇಪ್ಪತ್ತೊಂದು ಸಲ ಕ್ಷತ್ರಿಯ ಕುಲವನ್ನೆಲ್ಲ ತರಿದೊಗೆದ ಪರಶುರಾಮನನ್ನು ಕೂಡ ಕದನದಲ್ಲಿ ಕಂಗೆಡಿಸಿದ ವೀರವರೇಣ್ಯ ಈ ಭೀಷ್ಮ. ಈ ದ್ರೋಣ. ಅಶ್ವತ್ಥಾಮರಂತೂ ಮೃತ್ಯುಂಜಯರು. ಯಮಧರ್ಮನೂ ಕೂಡ ಅವರನ್ನು ಗೆಲ್ಲಲಾರ. ಸಾಕ್ಷಾತ್ ಮೃತ್ಯುವೇ ಬಂದರೂ ಇವರನ್ನು ಕೊಲ್ಲಲಾರ. ಕರ್ಣ, ಕೃಪ, ದುರ್ಯೋಧನ, ದುಃಶ್ಯಾಸನಾದಿಗಳ ದೈತ್ಯಬಲವು ದುರ್ಲಂಘ್ಯ, ಹಾಗೂ ದುರ್ಜೇಯ ಎಂಬುದು ವಿಶ್ವಕ್ಕೆಲ್ಲ ವಿದಿತವಾದ ವಿಷಯ. ಇಂಥ ಚಂಡೋದ್ದಂಡ ವೀರಾಗ್ರಣಿಗಳ ಸಮರ್ಥ ನೇತೃತ್ವದಲ್ಲಿ ಯುದ್ಧೋದ್ಯುಕ್ತರಾದ ಈ ಪ್ರಚಂಡ ಕೌರವ ಸೇನಾಸಾಗರವನ್ನು ಎದುರಿಸುವ ಅದಟು ನಮ್ಮಲ್ಲಿ ಯಾವ ವೀರನಿಗೆ ಇದೆ? ಇಂಥ ಮಹಾಪರಾಕ್ರಮಿಗಳನ್ನು ಸಂಹರಿಸುವ ಎಂಟೆದೆಯ ಬಂಟರು ನಮ್ಮಲ್ಲಿ ಯಾರುಂಟು? ಎಂದು ಪ್ರಶ್ನೆ ಮಾಡಿದ.

ಆಗ ಅರ್ಜುನನು ಎದ್ದುನಿಂತನು. ತನ್ನ ಗಾಂಡೀವ ಧನಸ್ಸನ್ನು ಎತ್ತಿ ಹಿಡಿದು ವೀರಾಗ್ರಣಿಗಳಿಗೂ ತೋರಿಸುತ್ತ ಹೀಗೆ ನುಡಿದನು.

**ಅರ್ಜುನ:-** ''ವೀರಾಧಿವೀರರೇ, ಹಾಗೂ ಹಿರಿಯ ಅಣ್ಣನಾದ ಯುಧಿಷ್ಠ ಪ್ರತಿಜ್ಞೆಯನ್ನು ಕೇಳಿರಿ. ಸಂಖ್ಯೆಯಲ್ಲಿ ಕೌರವರು ನಮಗಿಂತ ಎಷ್ಟೇ ಮಿಗಿಲಾ ಸೇನಾಪತಿಗಳೂ, ದಳಪತಿಗಳೂ, ವೀರಾಧಿವೀರರೂ ಎಷ್ಟೇ ಚಂಡಪ

ನಿಮಗೆ ಅದರ ಯೋಚನೆ ಬೇಡ. ನಮ್ಮ ಪಕ್ಷದಲ್ಲಿ ಜಗತ್ಪ್ರಭುವಾದ ಸಾಕ್ಷಾತ್ ಶ್ರೀಕೃಷ್ಣನೇ ಇಲ್ಲವೆ? ಮೃತ್ಯುದೇವತೆಯಾದ ಯಮಧರ್ಮನು ಕೂಡ ಈ ಶ್ರೀಕೃಷ್ಣನ ಅಜ್ಞಾಧಾರಕ. ಪ್ರಪಂಚವನ್ನೆಲ್ಲ ಕಾಲರೂಪದಿಂದ ಸಂಹಾರ ಮಾಡುವ ಸಂಕರ್ಷಣ ಸ್ವರೂಪಿಯೇ ಈ ಶ್ರೀಕೃಷ್ಣ. ಇವನು ನಮ್ಮ ಪಕ್ಷದಲ್ಲಿ ಇದ್ದ ಬಳಿಕ ಹೆದರಿಕೆ ಏಕೆ? ಆ ಶ್ರೀಕೃಷ್ಣನ ಅನುಗ್ರಹ ಒಂದಿದ್ದರೆ ಸಾಕು. ನಾವೆಲ್ಲರೂ ನಿಮಿತ್ತ ಮಾತ್ರ. ನಿಜವಾಗಿ ಈ ಕೌರವ ವೀರರನ್ನು ಸಂಹರಿಸುವವನೂ ಈ ಕಾಲರೂಪಿಯಾದ ಶ್ರೀಕೃಷ್ಣನೇ. ಅವನ ಅಪ್ಪಣೆಯಿಂದ ಅವನು ಕೊಟ್ಟ ಶಕ್ತಿಯಿಂದ ನಾವೆಲ್ಲರೂ ಈ ಕೌರವ ವೀರರನ್ನು ಲೀಲಾಜಾಲವಾಗಿ ಕಡಿದು ಕೊಚ್ಚಿ ಹಾಕುತ್ತೇವೆ. ಅದರಂತೆ ನನ್ನ ಅಣ್ಣನಾದ ಈ ಬಲಭೀಮನಂತೂ ತ್ರಿಲೋಕ ಧೀರ.

ಇವನನ್ನು ಎದುರಿಸಿ, ಕಾದು ಗೆಲ್ಲುವವರು ದೇವದೈತ್ಯರಲ್ಲಿಯೂ ಯಾರೂ ಇಲ್ಲ. ಈ ಕೌರವ ವೀರರ ಪಾಡೇನು? ಮಹಾಬಲಿಷ್ಠನಾದ ನಮ್ಮ ಭೀಮಣ್ಣನ ಮುಂದೆ ಈ ಕೌರವ ವೀರರೆಲ್ಲರೂ ನೊಣ, ನೊರಜುಗಳಿದ್ದಂತೆ. ನೂರು ಜನ ಕೌರವ ವೀರರನ್ನು ಈ ನಮ್ಮ ಬಲಭೀಮನೊಬ್ಬನೇ ತನ್ನ ಚಂಡಗದೆಯಿಂದ ಕೊಂದು ನುಚ್ಚುನೂರು ಮಾಡಿ ಒಗೆಯುವನು. ಅಳಿದುಳಿದು ವೀರರನ್ನೆಲ್ಲ ಶ್ರೀಕೃಷ್ಣನ ಸಾರಥ್ಯದಲ್ಲಿ ರಥಾರೂಢನಾಗಿ ಅವನ ಬೆಂಬಲದಿಂದ ನಾನು ಕೊಂದು ಹಾಕುತ್ತೇನೆ. ಹೀಗೆ ಶ್ರೀಕೃಷ್ಣನ ಅನುಗ್ರಹದ ರಕ್ಷೆಯಲ್ಲಿ ನಾವಿಬ್ಬರೇ ಅಣ್ಣ-ತಮ್ಮಂದಿರು ಕೌರವರ ಈ ಹನ್ನೊಂದು ಅಕ್ಷೋಹಿಣಿ ಸೈನ್ಯವನ್ನು ಹದಿನೆಂಟು ದಿನಗಳಲ್ಲಿ ಸಂಪೂರ್ಣ ನಿಃಪಾತವಾಗುವಂತೆ ನಾಶಮಾಡಿ ಬಿಡುತ್ತೇವೆ. ಇದರಲ್ಲಿ ನಿಮಗಾರಿಗೂ ಸಂದೇಹವೇ ಬೇಡ. ಶ್ರೀಕೃಷ್ಣನ ಪಾದಸಾಕ್ಷಿಯಾಗಿ ನಾನು ಈ ಮಾತನ್ನು ಹೇಳುತ್ತಿದ್ದೇನೆ.''

ಮೂರು ಲೋಕದ ಗಂಡ ಎನಿಸಿದ ಅರ್ಜುನನ ಆತ್ಮವಿಶ್ವಾಸ ಪರಿಪೂರ್ಣವಾದ ಈ ವಿರೋದ್ಗಾರವನ್ನು ಕೇಳಿ ಪಾಂಡವ ವೀರರೆಲ್ಲರೂ ತಲೆದೂಗಿದರು. 'ಭಾಪು ಭಾಪು ಭಲೇ ವೀರ' ಎಂದು ಅರ್ಜುನನನ್ನು ಪ್ರಶಂಸಿದರು. ಆದರೆ ಘಟೋತ್ಕಚನ ಪುತ್ರನಾದ ಬರ್ಬರೀಕನಿಗೆ ಮಾತ್ರ ಈ ಪೌರುಷದ ನುಡಿಗಳು ಸಹನವಾಗಲಿಲ್ಲ. ಪಾಂಡವ ಪಕ್ಷದ ಎಲ್ಲ ವೀರರನ್ನೂ ಧಿಕ್ಕರಿಸಿ ತನ್ನನ್ನೂ ಕೂಡ ಕಡೆಗಣಿಸಿ ಈ ಅರ್ಜುನನು ಜಂಭದ ಮಾತುಗಳನ್ನು ಆಡುತ್ತಿದ್ದಾನೆ ಎಂದು ಬಗೆದು ಅವನು ಎದ್ದು ನಿಂತು ತನ್ನ ಮುಂಗಾಲಿನಿಂದ ನೆಲವನ್ನು ಅಪ್ಪಳಿಸುತ್ತ ತುಂಬಿದ ಮೋಡದಂತೆ ಗುಡುಗಿದ.

**ಬರ್ಬರೀಕ:-** ''ವೀರರೇ, ನೀವೆಲ್ಲರೂ ಈಗ ಈ ಅರ್ಜುನನ ಪ್ರತಿಜ್ಞೆ ಕೇಳಿದಿರಿ. ಅವನ ಆತ್ಮಪೌರುಷದ ಅಹಂಭಾವದ ಮಾತುಗಳನ್ನು ನಾನು ಎಂದಿಗೂ ಸಹಿಸಲಾರೆ. ನನ್ನಂಥ ಅನೇಕ ತರುಣ ವೀರಾಧಿವೀರರನ್ನು ಧಿಕ್ಕರಿಸಿ ಅಹಂಕಾರದಿಂದ ತಾನು ತನ್ನ ಅಣ್ಣ ಭೀಮ ಇಬ್ಬರೇ ಕೌರವ ವೀರರನ್ನು ಗೆಲ್ಲುತ್ತೇವೆ. ಎಂದು ಘೋಷಿಸಿದ್ದಾನೆ. ಹಾಗಾದರೆ ನಾವೆಲ್ಲರೂ, ಮತ್ತು ನೀವೆಲ್ಲ ವೀರರೂ ಹೆಂಗಸರೆ? ಹೇಡಿಗಳೆ? ಈ ಅರ್ಜುನನದು ಏನು ಮಹಾ ಪರಾಕ್ರಮ? ನಿಜವಾಗಿ ಹೇಳಬೇಕೆಂದರೆ ಈ ಭೀಮಾರ್ಜುನರು ಯುದ್ಧಕ್ಕೆ ಬರುವದೇ ಬೇಡ. ನಾನೊಬ್ಬನೇ ಭೀಷ್ಮದ್ರೋಣಾದಿ ಎಲ್ಲ ಕೌರವ ವೀರರನ್ನು ಕ್ಷಣಾರ್ಧದಲ್ಲಿ ಸಂಹರಿಸಿಬಿಡುತ್ತೇನೆ. ಈ ಕೃಷ್ಣನ ಆವಶ್ಯಕತೆಯೇ ಇಲ್ಲ. ಭೀಮ ಬೇಕಾಗಿಲ್ಲ. ಅರ್ಜುನನ ಅಗತ್ಯವಿಲ್ಲ. ಇವರೆಲ್ಲರೂ

ಕೈಕಟ್ಟಿಕೊಂಡು ಸುಮ್ಮನೇ ನಿಂತು ನೋಡಲಿ. ನಾನೊಬ್ಬನೇ ಶ್ರೀಭಗವತೀ ಸಿದ್ಧಾಂಬಿಕಾ ದೇವಿಯು ನನಗೆ ಕೊಟ್ಟ ಈ ಖಡ್ಗ, ಹಾಗೂ ಧನುರ್ಬಾಣಗಳಿಂದ ಈ ಹನ್ನೊಂದು ಅಕ್ಷೋಹಿಣೀ ಸೈನ್ಯವನ್ನು ಕೊಚ್ಚಿ ಕೊಂದುಹಾಕುತ್ತೇನೆ. ಈ ಭೀಮಾರ್ಜುನರಿಂದ ಏನಾಗಬೇಕಾಗಿದೆ? ಹೀಗೆ ಹೇಳಿ ತನ್ನ ಕೈಯಲ್ಲಿಯ ಧನುರ್ಬಾಣಗಳನ್ನು ಹಾಗೂ ದೇವೀದತ್ತವಾದ ಖಡ್ಗವನ್ನೂ ಎತ್ತಿತೋರಿಸಿದನು.

ಆಗ ಅವನ ಈ ಆತ್ಮಪೌರುಷದ ಹಾಗೂ ಭೀಮಾರ್ಜುನರನ್ನು ಧಿಕ್ಕಾರ ಮಾಡಿ ನುಡಿದ ಮಾತುಗಳನ್ನು ಕೇಳಿ ಶ್ರೀಕೃಷ್ಣನಿಗೆ ಕೋಪ ಬಂದಿತು. ತನ್ನ ಪರಮಭಕ್ತರಾದ ಭೀಮಾರ್ಜುನರ ಚಂಡ ಪರಾಕ್ರಮವನ್ನು ಹಳಿದು, ಅವರ ವಿರಾಟ್‌ಶಕ್ತಿಯನ್ನು ಹೀಗಳೆದು, ಎಲ್ಲ ವೀರರನ್ನೂ ಕಡೆಗಣಿಸಿ ನುಡಿದ ಬರ್ಬರೀಕನ ಉದ್ದಟತನವನ್ನು ನೋಡಿ ಕೆರಳಿ ಕೆಂಡದಂತಾದ ಕೃಷ್ಣ ಪರಮಾತ್ಮ. ತನ್ನ ಪಂಚಪ್ರಾಣದಂತಿದ್ದ ಪಾಂಡವರ ಅವಮಾನವನ್ನು ತಾಳಲಾರದೇ ತನ್ನ ಸುದರ್ಶನ ಚಕ್ರವನ್ನು ಎತ್ತಿ ಬರ್ಬರೀಕನ ಮೇಲೆ ಪ್ರಯೋಗಿಸಿಬಿಟ್ಟ. ಆರೆಕ್ಷಣದಲ್ಲಿ ಬರ್ಬರೀಕನ ರುಂಡವು ಅವನ ದೇಹದಿಂದ ಕತ್ತರಿಸಿ ಒಗೆಯಲ್ಪಟ್ಟಿತು. ಅದನ್ನು ನೋಡಿ ಎಲ್ಲರಿಗೂ ಆಶ್ಚರ್ಯದ ಆಘಾತವಾಯಿತು.

ಪಂಚಪಾಂಡವರೆಲ್ಲರೂ ಕಣ್ಣೀರು ಉದುರಿಸಿದರು. ಬರ್ಬರೀಕನ ತಂದೆಯಾದ ಘಟೋತ್ಕಚನು ರುಂಡವಿಲ್ಲದೇ ನೆಲದ ಮೇಲೆ ಬಿದ್ದ ಮಗನ ದೇಹದ ಮೇಲೆ ಬಿದ್ದು "ಅಯ್ಯೋ ಮಗನೇ!" ಎಂದು ಶೋಕಾಕ್ರಾಂತನಾಗಿ ಅಳತೊಡಗಿದನು. ದುಃಖಾತಿರೇಕ ದಿಂದ ಘಟೋತ್ಕಚನಿಗೆ ಮೂರ್ಛೆಬಂದು ಬಿದ್ದುಬಿಟ್ಟನು. ಆಗ ಸಿದ್ಧಾಂಬಿಕೆಯೇ ಮೊದಲಾದ ಹದಿನಾಲ್ಕು ದೇವಿಯರು ಅಲ್ಲಿಗೆ ಬಂದರು ಅವರು ಮೂರ್ಛಿತನಾಗಿಬಿದ್ದ ಘಟೋತ್ಕಚನಿಗೆ ಶೈತ್ಯೋಪಚಾರ ಮಾಡಿದರು. ಎದ್ದುಕುಳಿತ ಅವನನ್ನು ಸಂತೈಸುತ್ತ ನುಡಿದರು.

**ದೇವಿಯರು:-** ಇಲ್ಲಿ ನೆರೆದ ಕೃಷ್ಣ ಭಕ್ತರೆ! ಕೇಳಿರಿ. ಈ ಶ್ರೀಕೃಷ್ಣ ಪರಮಾತ್ಮನು ಹದಿನಾಲ್ಕು ಲೋಕಗಳಿಗೆಲ್ಲ ಒಡೆಯ. ಇವನೊಬ್ಬನೇ ಜಗದೀಶ್ವರ. ಪರಾತ್ಪರ ಪರಂಜ್ಯೋತಿ ಸ್ವರೂಪನಾದ ಪರಮಾತ್ಮನೆಂದರೆ ಈ ಶ್ರೀಕೃಷ್ಣ ಭಗವಂತನೇ ಎನ್ನುವ ವಿಷಯ ಶಾಸ್ತ್ರಸಿದ್ಧಾಂತ. ಈ ಭಗವಂತ ಸರ್ವಸ್ವಾಮಿ ಎನ್ನುವುದನ್ನು ಎಲ್ಲರೂ ಬಲ್ಲಿರಿ. ಇಂಥ ಜಗದೊಡೆಯನು ಬರ್ಬರೀಕನನ್ನು ಕೊಂದದ್ದು ಏಕೆ? ಎಂದು ನಿಮ್ಮೆಲ್ಲರಿಗೂ ಆಶ್ಚರ್ಯವಾಗಿರಬಹುದು. ಅವನ ತಂದೆ-ತಾಯಿ ಬಂಧುಬಳಗದವರಿಗೆ ಮಹಾದುಃಖವೂ ಆಗಿರಬಹುದು. ಆದರೆ ಇದರ ಹಿನ್ನೆಲೆಯ ಕಾರಣವನ್ನು ನಾವು ನಿಮಗೆ ತಿಳಿಸಿ ಹೇಳುತ್ತೇನೆ ಕೇಳಿರಿ. ಬಹಳ ಪೂರ್ವಕಾಲದ ಹಿಂದೆ ಮೇರು ಪರ್ವತದ ಶಿಖರದಲ್ಲಿ ದೇವತೆಗಳ ಒಂದು ಸಭೆ ಸೇರಿತ್ತು. ಆಗ ಅನೇಕಾನೇಕ ರಾಜಮಹಾರಾಜರ ಮತ್ತು ದುಷ್ಟದೈತ್ಯರ ಅತೀ ಭಾರದಿಂದ ಭಗ್ನಭುಗ್ನಳಾದ ಭೂದೇವಿಯು ಅಲ್ಲಿಗೆ ಬಂದಳು. ಅಲ್ಲಿರುವ ದೇವತೆಗಳೆಲ್ಲರಿಗೂ "ನನ್ನ ಮೈಮೇಲಿನ ಭಾರವನ್ನು ಕಡಿಮೆ ಮಾಡಿರಿ" ಎಂದು ಬೇಡಿಕೊಂಡಳು. ಆಗ ಬ್ರಹ್ಮದೇವರು ಭಗವಾನ್ ವಿಷ್ಣುಪರಮಾತ್ಮನಿಗೆ ನಮಸ್ಕರಿಸಿ ಕೈಮುಗಿದು ಕೇಳಿಕೊಂಡರು.

**ಬ್ರಹ್ಮ:-** "ಭಗವನ್, ನಿನಗೆ ನನ್ನ ಅನಂತ ವಂದನೆ. ನನ್ನ ಪ್ರಾರ್ಥನೆಯನ್ನು ಕೇಳು. ಈಗ ನೀನು ಈ ಭೂದೇವಿಯ ಪ್ರಾರ್ಥನೆಯನ್ನು ಕೇಳಿದೆಯಷ್ಟೆ? ಅವಳ ಈ ಭೂಭಾರ

ಹರಣರೂಪ ಕಾರ್ಯವನ್ನು ಮಾಡಲು ನೀನೊಬ್ಬನೇ ಸಮರ್ಥನು ಈ ಪ್ರಪಂಚದಲ್ಲಿ. ನಿನ್ನ ಈ ಭೂಭಾರ ಕ್ಷಪಣ ರೂಪವಾದ ಕಾರ್ಯದಲ್ಲಿ ಈ ದೇವತೆಗಳೆಲ್ಲರೂ ನಿನ್ನ ಅಪ್ಪಣೆಯಾದರೆ ಸಹಾಯಕರಾಗಿ ಅವತರಿಸಿ ಬರುವರು.''

ಎಲ್ಲ ದೇವತೆಗಳ ಪ್ರತಿನಿಧಿ ಭೂತರಾಗಿ ಬ್ರಹ್ಮದೇವರು ಮಾಡಿಕೊಂಡ ಈ ಬಿನ್ನಹವನ್ನು ಕೇಳಿ ಭಗವಂತನು ತನ್ನ ಅಭಯಹಸ್ತವನ್ನು ಎತ್ತಿ 'ತಥಾಸ್ತು' ಎಂದು ಹೇಳಿದನು. ಭೂದೇವಿಗೆ ಆಶ್ವಾಸನೆಯನ್ನು ನೀಡಿದನು. ಅದನ್ನು ಕೇಳಿ ಭೂದೇವಿಗೂ ಉಳಿದೆಲ್ಲ ದೇವತೆಗಳಿಗೂ ಸಂತೋಷವಾಯಿತು.

ಆಗ 'ಸೂರ್ಯವರ್ಚಸ್' ಎಂಬ ಹೆಸರಿನ ಯಕ್ಷರಾಜನು ಎದ್ದು ನಿಂತನು. ಮತ್ತು ತನ್ನ ಅಹಂಕಾರದ ಬಿಂಕದಿಂದ ಹೀಗೆ ನುಡಿದನು.

**ಸೂರ್ಯ ವರ್ಚಸ್:-** ನಾನು ಬದುಕಿ ಇರುವಾಗ ಈ ವಿಷ್ಣು ಏಕೆ ಅವತಾರ ಮಾಡಬೇಕು? ಅವನಿಗೆ ಸಹಾಯಕರಾಗಿ ಉಳಿದ ದೇವತೆಗಳೂ ಏಕೆ ಅವತರಿಸುವಿರಿ? ನೀವು ಯಾರಿಗೂ ಮನುಷ್ಯಲೋಕದಲ್ಲಿ ಅವತಾರ ಮಾಡುವುದು ಬೇಡ. ನಾನೊಬ್ಬನೇ ಭೂಮಿಯಲ್ಲಿ ಅವತರಿಸಿ ಭೂಮಿಯ ಭಾರವನ್ನು ಕಡಿಮೆ ಮಾಡುತ್ತೇನೆ. ಭೂ ಭಾರ ಭೂತರಾದ ಎಲ್ಲ ರಾಜರನ್ನೂ, ದೈತ್ಯರನ್ನೂ ಸಂಹಾರ ಮಾಡುತ್ತೇನೆ.

ಸೂರ್ಯವರ್ಚಸನ ಈ ದರ್ಪದ ನುಡಿಗಳನ್ನು ಕೇಳಿ ಬ್ರಹ್ಮದೇವರಿಗೆ ಕೋಪ ಬಂದಿತು. ಅವರು ಸಿಟ್ಟಿನಿಂದ ಸಿಡಿದು ನುಡಿದರು.

**ಬ್ರಹ್ಮದೇವ:-** ದುರ್ಬುದ್ಧಿಯೇ, ಈ ಪೃಥ್ವಿಯ ಮಹಾಭಾರವನ್ನು ಎಲ್ಲ ದೇವತೆಗಳು ಕೂಡಿಯೂ ಇಳಿಸಲಾರರು. ಈ ಭೂಭಾರವನ್ನು ಸಂಪೂರ್ಣವಾಗಿ ಕಡಿಮೆ ಮಾಡಲು ಭಗವಾನ್ ವಿಷ್ಣು ಒಬ್ಬನೇ ಸಮರ್ಥನು. ಭಗವಂತನ ಈ ಭೂಭಾರಹರಣ ರೂಪವಾದ ಮುಖ್ಯ ಕಾರ್ಯದಲ್ಲಿ ತಾವು ನಿಮಿತ್ತ ಮಾತ್ರ ಸಹಾಯಕರಾಗಿ ಆ ಭಗವಂತನ ಅನುಗ್ರಹ ಪಡೆಯಬೇಕೆಂದು ಈ ದೇವತೆಗಳೆಲ್ಲರೂ ಅವತಾರ ಮಾಡಲಿರುವರು. ಮದಾಂಧನಾದ ನೀನು ಎಲ್ಲ ದೇವಾಧಿದೇವತೆಗಳಿಗೆ ಅಶಕ್ಯವಾದ ಧರಿಣಿಯ ಭಾರಹರಣ ರೂಪವಾದ ಮಹಾಕಾರ್ಯವನ್ನು ''ನಾನೊಬ್ಬನೇ ಮಾಡುತ್ತೇನೆ'' ಎಂದು ದರ್ಪದ ನುಡಿಗಳನ್ನು ಆಡುತ್ತಲಿರುವೆ. ಮೂರ್ಖನೇ! ಭಗವಂತನು ಭೂಲೋಕದಲ್ಲಿ ಅವತಾರ ಮಾಡಿದ ಬಳಿಕ ಧರೆಯ ಭಾರವನ್ನು ಇಳುಹಲಿಕ್ಕಾಗಿ ನಡೆಯುವ ಮಹಾಸಂಗ್ರಾಮದ ಪ್ರಾರಂಭದಲ್ಲಿಯೇ ಶ್ರೀಕೃಷ್ಣನು ತನ್ನ ಸುದರ್ಶನ ಚಕ್ರದಿಂದ ನಿನ್ನನ್ನು ಸಂಹಾರ ಮಾಡುವನು.''

ಬ್ರಹ್ಮದೇವರು ಹೀಗೆ ಶಾಪ ಕೊಟ್ಟಿದ್ದನ್ನು ಕೇಳಿ ಸೂರ್ಯವರ್ಚಸ್ ಎಂಬ ಯಕ್ಷರಾಜನಿಗೆ ತನ್ನ ಅಹಂಕಾರಕ್ಕಾಗಿ ಪಶ್ಚಾತ್ತಾಪವಾಯಿತು. ಆಗ ಅವನು ಭಗವಾನ್ ವಿಷ್ಣುವಿಗೆ ನಮಸ್ಕಾರ ಮಾಡಿ ಕೈ ಜೋಡಿಸಿ ಹೀಗೆ ಪ್ರಾರ್ಥನೆ ಮಾಡಿದನು.

**ಸೂರ್ಯವರ್ಚಸ:-** ಭಗವನ್, ನನ್ನ ಅಪರಾಧವನ್ನು ಕ್ಷಮಿಸು. ಬ್ರಹ್ಮದೇವರ ಶಾಪದಂತೆ ನಾನು ಭೂಮಿಯಲ್ಲಿ ಹುಟ್ಟಿದಾಗಲೂ ನನಗೆ ಸದ್ಬುದ್ಧಿನಾಶವಾಗದಿರಲಿ. ದೇವರಲ್ಲಿಯೂ ಧರ್ಮದಲ್ಲಿಯೂ ಭಕ್ತಿ ವಿಶ್ವಾಸಗಳಿಗೆ ಲೋಪಬಾರದಿರಲಿ. ಯಕ್ಷರಾಜನ ಈ ಬಿನ್ನಹವನ್ನು ಮನ್ನಿಸಿ ಭಗವಂತನ ಮತ್ತು ಆ ದೇವಸಭೆಗೆ ಹೀಗೆ ಹೇಳಿದ.

**ವಿಷ್ಣು:-** ಯಕ್ಷರಾಜನೇ, ನಿನ್ನ ಅಪೇಕ್ಷೆಯಂತೆಯೇ ಆಗಲಿ. ಮುಂದೆ ನನ್ನ ಸುದರ್ಶನ ಚಕ್ರದಿಂದ ಕತ್ತರಿಸಲ್ಪಡುವ ನಿನ್ನ ಮಸ್ತಕವನ್ನು ದೇವಿಯರೂ ಪೂಜಿಸುವಂತಾಗುವದು. ನೀನು ಕೂಡ ಸರ್ವಪೂಜ್ಯನಾಗುವೆ.

ಪರಮಾತ್ಮನ ಆದೇಶದ ಹಾಗೂ ಬ್ರಹ್ಮದೇವರ ಶಾಪಗಳಿಂದ ಅಂದು ದೇವಸಭೆಯಲ್ಲಿ ಉದ್ಧಟತನದಿಂದ ನಡೆದು ಭಗವಂತನನ್ನು ಕೂಡ ಧಿಕ್ಕರಿಸಿ ನುಡಿದ ಸೂರ್ಯವರ್ಚಸ ಎಂಬ ಯಕ್ಷನೇ ಈಗ ಘಟೋತ್ಕಚನ ಪುತ್ರನಾಗಿ, ಬರ್ಬರೀಕ ಎಂಬ ಹೆಸರಿನಿಂದ ಹುಟ್ಟಿ ಬಂದಿದ್ದಾನೆ. ಬ್ರಹ್ಮದೇವರ ಮಾತಿಗನುಗುಣವಾಗಿಯೇ ಈಗಲೂ ಭೀಮಾರ್ಜುನಾದಿ ಭಗವದ್ಭಕ್ತರನ್ನು ಧಿಕ್ಕಾರ ಮಾಡಿದ ಈ ಬರ್ಬರೀಕನ ದರ್ಪೋಕ್ತಿಗಳನ್ನು ಕೇಳಿ ಶ್ರೀಕೃಷ್ಣನು ತನ್ನ ಸುದರ್ಶನ ಚಕ್ರದಿಂದ ಅವನನ್ನು ವಧಿಸಿದ್ದಾನೆ. ಇದರಲ್ಲಿ ಕೃಷ್ಣನದು ಏನೂ ತಪ್ಪಿಲ್ಲ. ಏನಿದ್ದರೂ ಬ್ರಹ್ಮದೇವರ ವಚನವು ನಿಜವಾಗಬೇಕಷ್ಟೇ?

**ಶ್ರೀಕೃಷ್ಣ:-** ಸಜ್ಜನರೇ, ನಾನು ಹಿಂದೆ ಸೂರ್ಯವರ್ಚಸನಿಗೆ ವರವನ್ನು ನೀಡಿದಂತೆ ಈ ಬರ್ಬರೀಕ ಅವತಾರದಲ್ಲಿಯೂ ಇವನಿಗೆ ಸದ್ಬುದ್ಧಿ, ದೇವಶ್ರದ್ಧೆ, ದೇವೀ ಭಕ್ತಿಗಳು ಅವಿಚ್ಛಿನ್ನವಾಗಿ ಉಳಿದಿವೆ. ಅದಕ್ಕಾಗಿಯೇ ನಾನು ಈ ಬರ್ಬರೀಕನನ್ನು ಈ ಗುಪ್ತಕ್ಷೇತ್ರದಲ್ಲಿ ದೇವಿಯರ ಆರಾಧನೆಗಾಗಿ ನಿಯೋಜಿಸಿದ್ದೆ. ಇವನು ಬದುಕಿರುವವರೆಗೂ ಈ ಗುಪ್ತಕ್ಷೇತ್ರದ ಸಿದ್ಧಾಂಬಿಕೆಯೇ ಮೊದಲಾದ ಎಲ್ಲ ದೇವತೆಯರನ್ನು ಭಕ್ತಿಯಿಂದ ಆರಾಧಿಸಿದ್ದಾನೆ. ಆದ್ದರಿಂದ ಈಗ ಈ ದೇವಿಯರೆಲ್ಲರೂ ತಮ್ಮ ಭಕ್ತನಾದ ಈ ಬರ್ಬರೀಕನ ಮುಂಡದಿಂದ ಬೇರ್ಪಟ್ಟ ರುಂಡಕ್ಕೆ ಅಮೃತ ಸಿಂಚನವನ್ನು ಮಾಡಲಿ. ಅಮೃತ ಮಂಥನ ಕಾಲದಲ್ಲಿ ಒಂದು ಕಣ ಅಮೃತಪ್ರಾಶನದಿಂದ ರಾಹುವಿನ ಮಸ್ತಕವು ಅಜರಾಮವಾದಂತೆ ಈ ದೇವಿಯರ ಅಮೃತ ಸೇಚನದಿಂದ ಈ ಬರ್ಬರೀಕನ ಮಸ್ತಕವು ಕೂಡ ಅಜರಾಮರವಾಗಲಿ.

ಶ್ರೀಕೃಷ್ಣನ ಆದೇಶದಂತೆ ಎಲ್ಲ ದೇವಿಯರೂ ಅಮೃತ ಕುಂಡದಿಂದ ಒಂದು ಕಲಶದಲ್ಲಿ ಭಗವದಾಜ್ಞೆಯಿಂದ ಅಮೃತವನ್ನು ತುಂಬಿಕೊಂಡು ತಂದರು. ಅಲ್ಲಿಯೇ ಕುರುಕ್ಷೇತ್ರದಲ್ಲಿ ಬರ್ಬರೀಕನ ದೇಹದ ದಳದಿಂದ ಬೇರ್ಪಟ್ಟು ನಿರ್ಜೀವವಾಗಿ ಬಿದ್ದುಕೊಂಡ ಅವನ ಶಿರಸ್ಸಿನ ಮೇಲೆ ಅಮೃತದ ಬಿಂದುಗಳನ್ನು ಪ್ರೋಕ್ಷಿಸಿದರು. ಅದೇ ಕಾಲಕ್ಕೆ ಶ್ರೀಕೃಷ್ಣಪರಮಾತ್ಮನು ಬರ್ಬರೀಕನ ಮಸ್ತಕವನ್ನು ಅಮೃತದೃಷ್ಟಿಯಿಂದ ಈಕ್ಷಿಸಿದನು. ಇದರಿಂದ ತಕ್ಷಣವೇ ಬರ್ಬರೀಕನ ಶೀರ್ಷಕ್ಕೆ ಜೀವಕಳೆ ತುಂಬಿತು. ಪುನರ್ಜೀವಿತವಾಗಿ ಕೂಡಲೇ ಅದು ಉರುಳುತ್ತ ಕೃಷ್ಣನ ಕಾಲುಗಳ ಮೇಲೆ ಬಂದು ಬಿದ್ದಿತು. ಆ ಬರ್ಬರೀಕನ ಪ್ರಾಣ ಮರಳಿ ಬಂದು ಆ ಮಸ್ತಕವು ಭಗವಂತನಿಗೆ ಬೇಡಿಕೊಂಡಿತು.

**ಬರ್ಬರೀಕನ ಮಸ್ತಕ:-** ಭಗವನ್, ಈಗ ನಡೆಯಲಿರುವ ಕೌರವ ಪಾಂಡವರ ಘನಘೋರ ಸಂಗ್ರಾಮವನ್ನು ಕಣ್ಣಿನಿಂದ ಕಾಣಬೇಕು ಎಂದು ನನ್ನ ಆಪೇಕ್ಷೆ. ಇದಕ್ಕೆ ದಯವಿಟ್ಟು ಅನುಮತಿಯನ್ನು ನೀಡು.

## ಶೈಲ ಶಿಖರದಿಂದಲೇ ಸಂಗ್ರಾಮ ನಿರೀಕ್ಷಣೆ

**ಕೃಷ್ಣ:-** ವತ್ಸ! ಸೂರ್ಯಚಂದ್ರರು ಇರುವವರೆಗೂ ನೀನು ದೀರ್ಘಾಯುಷಿಯಾಗಿ ಲೋಕಪೂಜನೀಯನಾಗಿ ಬದುಕಿ ಉಳಿಯುವೆ. ನೀನು ಇಲ್ಲಿಯೇ ಸಮೀಪದ ಬೆಟ್ಟದ ಮೇಲಿನ ಶಿಖರದ ತುಟ್ಟತುದಿಯ ಮೇಲೆ ಒಂದು ವಿಶಾಲ ಶಿಲಾಫಲಕದ ಮೇಲೆ ಗಟ್ಟಿಯಾಗಿ

ಕುಳಿತುಕೊ. ಅಲ್ಲಿಂದಲೇ ನಿನಗೆ ಈ ಕುರುಕ್ಷೇತ್ರದಲ್ಲಿ ನಡೆಯುವ ವಿಚಿತ್ರ ಸಂಗ್ರಾಮದ ವಿವರ ವಿವರವಾದ ಹೋರಾಟದ ಚಿತ್ರವು ಕಣ್ಣಿಗೆ ಗೋಚರವಾಗುವಂತೆ ನಾನು ಅನುಗ್ರಹಿಸುವೆನು.

ಭಗವಾನ್ ಶ್ರೀವಾಸುದೇವನ ಆಜ್ಞೆಯಂತೆ ಎಲ್ಲವೂ ನಡೆಯಿತು. ಸಿದ್ಧಾಂಬಿಕೆ ಮೊದಲಾದ ದೇವತೆಯರೆಲ್ಲರೂ ಆ ಪರಮಾತ್ಮನ ಪಾದಪಂಕಜಗಳಿಗೆ ಪ್ರಣಮಿಸಿ ಅಂತರ್ಧಾನ ಹೊಂದಿದರು. ಬರ್ಬರೀಕನ ಪುನರ್ಜೀವಿತವಾದ ಮಸ್ತಕವು ಗಿರಿಶಿಖರದ ಮೇಲೆ ಇದ್ದುಕೊಂಡೇ ಘೋರ ಯುದ್ಧದ ಘಟನಾವಳಿಗಳನ್ನೆಲ್ಲ ವಿವರವಾಗಿ ನಿರೀಕ್ಷಣೆ ಗೈದಿತು.

ಕುರುಪಾಂಡವರ ಯುದ್ಧವು ನಡೆದದ್ದು ಹದಿನೆಂಟು ದಿನ. ಪ್ರಾರಂಭದ ದಿನ ಅರ್ಜುನನಿಗೆ ಬಂದ ಮೋಹವನ್ನು ಕಳೆಯಲು ಪಾರ್ಥಸಾರಥಿಯು ಬೋಧಿಸಿದ ಭಗವದ್ಗೀತೆಯು ಹದಿನೆಂಟು ಅಧ್ಯಾಯ. ಈ ಕುರುಕ್ಷೇತ್ರದ ಕರಾಳ ಕದನದಲ್ಲಿ ಸತ್ತವರ ಸಂಖ್ಯೆ ಹದಿನೆಂಟು ಅಕ್ಷೋಹಿಣಿ. ಈ ಎಲ್ಲ ಮಹಾಭಾರತದ ಯುದ್ಧವನ್ನು ವ್ಯಾಸರು ನಿರೂಪಿಸಿದ ಭಾರತ ಗ್ರಂಥವು ಹದಿನೆಂಟು ಪರ್ವ. ಇದೇ ವ್ಯಾಸರು ಸಮಗ್ರ ಮಾನವ ಕುಲದ ಹುಟ್ಟು, ಸಾವು, ಬಾಳು, ಬದುಕಿನ ಬಗೆಬಗೆಯ ಇತಿಹಾಸವನ್ನು ಚಿತ್ರಿಸಿದ್ದು ಹದಿನೆಂಟು ಪುರಾಣಗಳಲ್ಲಿ. ಈ ಹದಿನೆಂಟು ದಿನಗಳಲ್ಲಿ ಶ್ರೀಕೃಷ್ಣನ ನೇತೃತ್ವದಲ್ಲಿ ನಡೆದ ಭಯಂಕರ ನರಮೇಧದಲ್ಲಿ ಭೀಷ್ಮ, ದ್ರೋಣ, ಕರ್ಣ, ದುರ್ಯೋಧನ, ದುಃಶಾಸನ ಮುಂತಾದ ವೀರರು ಒಬ್ಬರಾದ ಮೇಲೆ ಒಬ್ಬರು ಆಹುತಿಯಾಗಿ ಮೃತ್ಯುದೇವತೆಗೆ ತುತ್ತಾದರು. ಕೃಷ್ಣಪರಮಾತ್ಮನನ್ನು ನಂಬಿದ ಪಂಚಪಾಂಡವರಿಗೆ ವಿಜಯಲಕ್ಷ್ಮಿಯು ಒಲಿದು ಗೆಲುವಿನ ಮಾಲೆ ಹಾಕಿದಳು. ಯುದ್ಧವೆಲ್ಲವೂ ಮುಗಿದ ಬಳಿಕ ಹಲವಾರು ಜನರಿಗೆ ಸಂದೇಹ. ಪಾಂಡವರ ಈ ಗೆಲುವಿನ ಗುಟ್ಟು ಏನು? ಇದು ಬಲಭೀಮನ ಪ್ರಚಂಡ ಗದೆಯ ಪ್ರಭಾವದಿಂದ ಈ ವಿಜಯವು ಬಂದಿತೋ ಅಥವಾ ಮೂರು ಲೋಕದ ಗಂಡನಾದ ಅರ್ಜುನನ ಗಾಂಡೀವ ಧನುಸ್ಸಿನ ಭೀಕರ ಬಾಣಪ್ರಹಾರದಿಂದ ಇಂಥ ವಿಶ್ವವಿಜಯವು ಒದಗಿ ಬಂದಿತೋ ಎಂದು. ಹಲವರು ಹೊಗಳಿದರು ಭೀಮನನ್ನು, ಕೆಲವರು ಪ್ರಶಂಸಿಸಿದರು ಅರ್ಜುನನ ಬಿಲ್ಲಾಳುತನವನ್ನು. ಆಗ ಪಂಚಪಾಂಡವರು ಗಿರಿಶಿಖರದ ಮೇಲೆ ಸರ್ವಯುದ್ಧಕ್ಕೂ ಸಾಕ್ಷಿಭೂತವಾಗಿ, ಪ್ರತ್ಯಕ್ಷವಾಗಿ ಸಮರಾಂಗಣದ ಘಟನೆಗಳನ್ನೆಲ್ಲ ಸಾಕ್ಷಾತ್ ತನ್ನ ನಿರ್ನಿಮೇಷ ನಯನಗಳಿಂದ ನಿರೀಕ್ಷಿಸುತ್ತ ಕುಳಿತುಕೊಂಡ ಬರ್ಬರೀಕನ ಮಸ್ತಕದ ಬಳಿ ಬಂದರು. ಆಗ ಬಲಭೀಮನು ಮುಂದೆ ಬಂದು ತನ್ನ ಮೊಮ್ಮಗನ ಮಸ್ತಕವನ್ನು ಮಮತೆಯಿಂದ ನೇವರಿಸಿ ಕೇಳಿದನು:- ''ವತ್ಸ, ಈ ಯುದ್ಧದಲ್ಲಿ ಕೌರವರ ಪ್ರಚಂಡ ಸೇನೆಯನ್ನೆಲ್ಲ ಸಂಹರಿಸಿದವರು ಯಾರು?''

## ಗೆಲುವಿನ ಗುಟ್ಟು ಬರ್ಬರೀಕನಿಂದ ರಟ್ಟು

**ಬರ್ಬರೀಕ:-** ''ಪೂಜ್ಯರಾದ ಹಿರಿಯರೇ! ನಾನು ಸಂಪೂರ್ಣ ಕುರುಕ್ಷೇತ್ರ ಯುದ್ಧವನ್ನು ಪ್ರತ್ಯಕ್ಷವಾಗಿ ಕಂಡಿದ್ದೇನೆ. ಭೀಮಾರ್ಜುನ ಮೊದಲಾದ ಅನೇಕ ವೀರರು ಎಲ್ಲ ಕೌರವ ಸೇನೆಯನ್ನು ಲೋಕದೃಷ್ಟಿಯಿಂದ ಭೀಕರ ಶಸ್ತ್ರಾಸ್ತ್ರಗಳಿಂದ ಸಂಹರಿಸಿದ್ದೇನೋ ನಿಜ. ಆದರೆ ಇವರೆಲ್ಲರೂ ನಿಮಿತ್ತಮಾತ್ರರು. ಯುದ್ಧಕ್ಕೆ ಸಿದ್ಧರಾಗಿ ನಡೆದ ಈ ಎಲ್ಲ ವೀರಾಗ್ರಣಿಗಳ ಮುಂದೆ ನಡೆದವನು ರುದ್ರಾಂತರ್ಗತ ಸಂಕರ್ಷಣ. ಅವನೇ ಪಂಚಮುಖಿ ಪರಮೇಶ್ವರ. ಅವನೇ ಮೊದಲು ಕೌರವರನ್ನೆಲ್ಲ ಕೊಂದುಬಿಟ್ಟಿರುತ್ತಿದ್ದನು.

ಆ ಭಗವಂತನಿಂದ ಹತರಾಗಿ ಮೃತಪ್ರಾಯರಾದ ಕೌರವ ವೀರರ ಮೇಲೆ ಭೀಮಾರ್ಜುನಾದಿ ಪಾಂಡವ ವೀರರು ಶಸ್ತ್ರಪ್ರಯೋಗ ಮಾಡಿ ಸಂಹಾರಸತ್ರವನ್ನು ಪೂರ್ತಿಗೊಳಿಸುತ್ತಿದ್ದರು. ಈ ಎಲ್ಲ ಕೌರವರ ವಿನಾಶ ದೀಕ್ಷೆತೊಟ್ಟು ಮಾರಣ ಹೋಮವನ್ನು ಮುಖ್ಯವಾಗಿ ನಡೆಸಿದ ಆ ಕೃಷ್ಣರೂಪಿ ಪಂಚಮುಖಿ ಪರಮೇಶ್ವರನ ಒಂದು ಮುಖದ ಮೇಲೆ ರತ್ನಖಚಿತವಾದ ಕಿರೀಟ. ಇನ್ನೊಂದರ ಮೇಲೆ ಜಡೆ ಹಾಗೂ ಚಂದ್ರಕಲೆ, ಮತ್ತೊಂದರ ಮೇಲೆ ಮಣಿಮಯ ಮುಕುಟ. ಮಗದೊಂದರ ಮೇಲೆ ಜಟಾಜೂಟ ಹಾಗೂ ದೇವಗಂಗೆ. ಐದನೆಯ ಮುಖದ ಮೇಲೆ ರತ್ನ ಮುಗುಟ. ಆ ಪಂಚಮುಖಿ ಪರಮೇಶ್ವರನಿಗೆ ಹತ್ತು ಕೈಗಳು. ಪ್ರತಿಯೊಂದು ಕೈಯಲ್ಲಿಯೂ ಶಂಖ, ಚಕ್ರ, ತ್ರಿಶೂಲ, ಡಮರು, ಬಿಲ್ಲು, ಬಾಣ, ಖಡ್ಗ ಮುಂತಾದ ಆಯುಧಗಳು. ವಕ್ಷಸ್ಥಳದಲ್ಲಿ ಕೌಸ್ತುಭಮಣಿ, ವೈಜಯಂತೀಮಾಲೆ. ಆ ಪರಮೇಶ್ವರನ ದೇಹಕಾಂತಿಯಿಂದ ದಶದಿಗಂತಗಳೆಲ್ಲ ಭಾಸೋದ್ಭಾಸಿತ. ಈ ಪರಮೇಶ್ವರನೇ ಕೌರವರನ್ನೆಲ್ಲ ಸಂಹರಿಸಿದ್ದು.'' ಬರ್ಬರೀಕನು ಹೀಗೆ ನುಡಿದ ಕೂಡಲೇ ಆಕಾಶದಿಂದ ಪುಷ್ಪವೃಷ್ಟಿ. ಅಂತರಿಕ್ಷದಲ್ಲಿ ದೇವದುಂದುಭಿಗಳ ಮಂದ್ರನಾದ, ಸಿದ್ಧಪುರುಷರ ಭಲೇಭಾಪು. ಭಗವಾನ್ ಶ್ರೀಕೃಷ್ಣನಿಗೆ ಜಯವಾಗಲಿ ಎಂಬ ಉದ್ಗಾರ.

ಅನಂತರ ಪಂಚಪಾಂಡವರೆಲ್ಲರೂ ಶ್ರೀಕೃಷ್ಣ ಪರಮಾತ್ಮನ ಪಾದಪಂಕಜಗಳಿಗೆ ಪೊಡಮಟ್ಟರು ಭಕ್ತಿಯಿಂದ ''ಯುದ್ಧದಲ್ಲಿ ನಾವೇ ಗೆದ್ದೆವು ಎಂಬ ನಮ್ಮ ಹೃದಯದಲ್ಲಿ ಮೊಳಕೆಯೊಡೆದ ಅಹಂಕಾರವು ಎಂದೂ ಅಂಕುರಿಸದಂತೆ ಮಾಡು. ನೀನೇ ಈ ಪ್ರಪಂಚದ ಸರ್ವಕರ್ತಾ, ಸರ್ವಭರ್ತಾ ಹಾಗೂ ಸರ್ವಸಂಹರ್ತಾ, ನಮ್ಮ ಅಪರಾಧವನ್ನೆಲ್ಲ ಕ್ಷಮಿಸು.''

ಆಗ ಶ್ರೀಕೃಷ್ಣ ಪರಮಾತ್ಮನು ನಸುನಕ್ಕು ತನ್ನ ಭಕ್ತಾಗ್ರೇಸರರಾದ ಪಾಂಡವರ ಮೇಲೆ ಪೂರ್ಣಾನುಗ್ರಹವನ್ನು ಮಾಡಿದನು. ಮತ್ತು ಅಲ್ಲಿಯೇ ಇದ್ದ ಬರ್ಬರೀಕನ ಮಸ್ತಕವನ್ನು ದಯಾರ್ದ್ರ ದೃಷ್ಟಿಯಿಂದ ನೋಡಿ ಹೇಳಿದನು.

**ಶ್ರೀಕೃಷ್ಣ:**- ''ವತ್ಸ, ನೀನು ಇನ್ನು ಮೇಲೆ ಇಷ್ಟು ದಿನಗಳವರೆಗೆ ದೇವಿಯರ ಸೇವೆ ಮಾಡಿದ ಆ ಗುಪ್ತಕ್ಷೇತ್ರದಲ್ಲಿಯೇ ನೆಲಿಸು. ನಿನ್ನ ಈ ದೇವತಾರಾಧನ ಕಾರ್ಯವು ಅಲ್ಲಿಯೇ ನಿರಂತರವಾಗಿ ನಡೆಯಲಿ.''

ಭಗವಂತನ ಅನುಗ್ರಹಪೂರ್ಣವಾದ ಈ ಆಶೀರ್ವಚನವನ್ನು ಕೇಳಿ ಬರ್ಬರೀಕನು ಭಕ್ತಿಯಿಂದ ನಮಿಸಿದನು. ಅವನ ಆದೇಶದಂತೆ ಗುಪ್ತಕ್ಷೇತ್ರಕ್ಕೆ ಅಲ್ಲಿಂದ ನಿರ್ಗಮಿಸಿದನು. ಅನಂತರ ಶ್ರೀಕೃಷ್ಣ ಪರಮಾತ್ಮನು ಪಂಚಪಾಂಡವರೊಂದಿಗೆ ಹಸ್ತಿನಾವತಿ ಪಟ್ಟಣಕ್ಕೆ ಬಂದು ಧರ್ಮರಾಜನಿಗೆ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದನು. ಹೀಗೆ ಜಗತ್ತಿನಲ್ಲಿ ಪಾಂಡವರಿಂದ ಧರ್ಮಚಕ್ರವು ಚೆನ್ನಾಗಿ ಪ್ರವರ್ತಿತವಾಗುವಂತೆ ಮಾಡಿ ತಾನು ತನ್ನ ದ್ವಾರಕಾ ಪಟ್ಟಣದಲ್ಲಿ ಧರ್ಮಮಾರ್ಗ ಪ್ರವರ್ತಕನಾಗಿ ಸುಖದಿಂದ ವಾಸಮಾಡಿದ ಆ ಭಗವಾನ್ ಶ್ರೀಕೃಷ್ಣ.

ಬ್ರಾಹ್ಮಣರೇ ಈ ರೀತಿಯಾಗಿ ನಾನು ನಿಮಗೆ ಬರ್ಬರೀಕನ ವೃತ್ತಾಂತವನ್ನು ಈ ಗುಪ್ತಕ್ಷೇತ್ರದ ಮಹಿಮೆಯನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ಈ ಕ್ಷೇತ್ರವು ಇಪ್ಪತ್ತೊಂದು ಮೈಲಿನಷ್ಟು ವಿಶಾಲವಾಗಿದೆ. ಬ್ರಹ್ಮದೇವರು ಕೂಡ ಪ್ರಶಂಸೆ ಮಾಡಿ ಈ ಮಹೀಸಾಗರ ಸಂಗಮ ತೀರ್ಥ ಕ್ಷೇತ್ರವು ಸ್ನಾನ. ಸಂದರ್ಶನ, ಮಹಿಮಾ ಶ್ರವಣ, ಪಠಣ, ಪಾಠಣ, ಪಾರಾಯಣ ಮಾಡುವವರಿಗೆ ಶ್ರೇಯಃಪ್ರದವೂ, ಪುಣ್ಯಪ್ರದವೂ ಆಗಿರುತ್ತದೆ.

**ಬ್ರಹ್ಮದೇವರಿಗೆ ಪುರುಷೋತ್ತಮ ಕ್ಷೇತ್ರಕ್ಕೆ ಹೋಗಲು ಭಗವಾನ್ ವಿಷ್ಣುವಿನ ಆದೇಶ.**

**"ನಾರಾಯಣಂ ನಮಸ್ಕೃತ್ಯ, ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥**

ಸರ್ವಸದ್ಗುಣಗಳಿಂದ ಪರಿಪೂರ್ಣನೂ ದೋಷರಹಿತನೂ ಲಕ್ಷ್ಮೀದೇವಿಗೆ ಆಶ್ರಯಸ್ಥಾನನೂ ಮೋಕ್ಷಪ್ರದಾತನೂ ಆದ ಭಗವಾನ್‌ನಾರಾಯಣನನ್ನು ನಮಸ್ಕಾರ ಮಾಡಿ ಅನಂತರ ಶೇಷದೇವರನ್ನೂ ಜೀವೋತ್ತಮರಾದ ವಾಯುದೇವರನ್ನೂ ವಂದಿಸಿ, ಲಕ್ಷ್ಮೀದೇವಿಯನ್ನು ನೆನೆದು ಸರಸ್ವತಿದೇವಿಯನ್ನು ಪ್ರಣಮಿಸಿ, ಗ್ರಂಥಕಾರರಾದ ಭಗವಾನ್ ವೇದವ್ಯಾಸರನ್ನು ಅಭಿವಂದಿಸಿ, ಪುರಾಣ ಇತಿಹಾಸ ಮುಂತಾದ ಮಂಗಳಗ್ರಂಥಗಳನ್ನು ನಿರೂಪಣೆ ಮಾಡಬೇಕು.

**ಶೌನಿಕಾದಿ ಮುನಿಗಳು:-** ಪೂಜ್ಯರೇ! ತಾವು ಎಲ್ಲ ಶಾಸ್ತ್ರಗಳ ತತ್ವಗಳನ್ನು ಚೆನ್ನಾಗಿ ಅರಿತಿರುವಿರಿ. ಎಲ್ಲ ತೀರ್ಥಗಳ ಮಹಿಮೆಯನ್ನು ಯಥಾರ್ಥವಾಗಿ ಬಲ್ಲಿರಿ. ಮಹನೀಯರೇ! ಎಲ್ಲ ಕ್ಷೇತ್ರಗಳಲ್ಲಿ ಪುರುಷೋತ್ತಮ ಕ್ಷೇತ್ರವು ಅರ್ಥಾತ್ ಜಗನ್ನಾಥ ಪುರಿಯು ಪರಮ ಪಾವನ. ಭಗವಾನ್ ಲಕ್ಷ್ಮೀಪತಿ ನಾರಾಯಣನು ತನ್ನ ವಿಚಿತ್ರ ಲೀಲೆಯನ್ನು ಅನುಸರಿಸಿ ಕಾಷ್ಠಮಯವಾದ ಶರೀರವನ್ನು ಧರಿಸಿ ಈ ಕ್ಷೇತ್ರದಲ್ಲಿ ವಿರಾಜಮಾನನಾಗಿದ್ದಾನೆ. ಈ ಪುರುಷೋತ್ತಮ ಕ್ಷೇತ್ರದಲ್ಲಿ ನೆಲೆನಿಂತ ಆ ಜಗನ್ನಾಥನ ದರ್ಶನಮಾತ್ರದಿಂದಲೇ ಮಾನವನಿಗೆ ಎಲ್ಲ ತೀರ್ಥಕ್ಷೇತ್ರಗಳ ಯಾತ್ರೆಮಾಡಿದ ಪುಣ್ಯಫಲವು ಪ್ರಾಪ್ತಿಯಾಗುತ್ತದೆ. ಭಕ್ತಿಯಿಂದ ಈ ಜಗನ್ನಾಥಸ್ವಾಮಿಯನ್ನು ದರ್ಶನ ಮಾಡಿಕೊಂಡು ಆರಾಧನೆ ಮಾಡಿ ಉಪಾಸನೆಗೈದರೆ ಮಾನವನಿಗೆ ಮೋಕ್ಷವು ದೊರಕುವುದು ನಿಶ್ಚಿತ. ಇಂಥ ಪುರುಷೋತ್ತಮತೀರ್ಥದ ಮಹಿಮೆಯನ್ನು ವಿಸ್ತಾರವಾಗಿ ನಿರೂಪಿಸಿರಿ.

**ಜೈಮಿನಿ ಮಹರ್ಷಿ:-** ಮುನಿಗಳೇ! ನೀವು ಕೇಳಿದ ಪುರುಷೋತ್ತಮ ತೀರ್ಥದ ಮಹಿಮೆಯು ಗೂಢವೂ ರಹಸ್ಯವೂ ಆಗಿದೆ. ಅದನ್ನು ನಾನು ನಿಮಗೆ ವಿವರವಾಗಿ ತಿಳಿಸಿ ಹೇಳುತ್ತೇನೆ ಕೇಳಿರಿ. ಜಗತ್ತಿಗೆಲ್ಲ ಸ್ವಾಮಿಯಾದ ಭಗವಾನ್ ನಾರಾಯಣನು ಎಲ್ಲ ಕಡೆಗೂ ವ್ಯಾಪ್ತನಾಗಿರುತ್ತಾನೆ. ಸರ್ವ ಪ್ರಾಣಿ ಪ್ರಪಂಚವನ್ನೆಲ್ಲಾ ಅವನೇ ನಿರ್ಮಾಣ ಮಾಡಿದ್ದಾನೆ. ಆ ಜಗನ್ನಾಥ ಸ್ವಾಮಿಯು ವಿಶ್ವವ್ಯಾಪಿ ಹಾಗೂ ವಿಶ್ವಾಂತರ್ಯಾಮಿ. ಆದರೂ ಈ ಪುರುಷೋತ್ತಮ ಕ್ಷೇತ್ರದಲ್ಲಿ ಲೋಕಾನುಗ್ರಹಕ್ಕಾಗಿಯೇ ಕಾಷ್ಠಮಯವಾದ ಶರೀರವನ್ನು ಧಾರಣಮಾಡಿ ನಿಂತುಕೊಂಡಿದ್ದಾನೆ. ಆದುದರಿಂದ ಈ ಕ್ಷೇತ್ರವು ಆ ಪುರುಷೋತ್ತಮಸ್ವಾಮಿಯ ಹೆಸರಿನಿಂದಲೇ ಪುರುಷೋತ್ತಮಕ್ಷೇತ್ರ ಅಥವಾ ಜಗನ್ನಾಥಪುರಿ ಎಂದು ಪ್ರಸಿದ್ಧವಾಗಿದೆ.

ಹತ್ತು ಯೋಜನ ವಿಸ್ತಾರವಾಗಿದೆ ಈ ಪುಣ್ಯಕ್ಷೇತ್ರ. ಸಮುದ್ರದ ಮಧ್ಯದಿಂದ ಈ ದಿವ್ಯಕ್ಷೇತ್ರ ಪ್ರಾದುರ್ಭೂತವಾಗಿದೆ. ಆದುದರಿಂದ ಇದರ ಸುತ್ತಲೂ ಮಳಲು ರಾಶಿಯು ವ್ಯಾಪಿಸಿದೆ. ಅದರ ಮಧ್ಯಭಾಗದಲ್ಲಿ ದೊಡ್ಡದಾದ ನೀಲಗಿರಿ ಎಂಬ ಬೆಟ್ಟವು ಈ ಕ್ಷೇತ್ರದ ಶೋಭೆಯನ್ನು ಹೆಚ್ಚಿಸಲು ಕಾರಣವಾಗಿದೆ. ಪೂರ್ವಕಾಲದಲ್ಲಿ ವರಾಹ ರೂಪವನ್ನು ಧರಿಸಿದ ಶ್ರೀಮಹಾವಿಷ್ಣುವು ಈ ಭೂಭಾಗವನ್ನು ಸಮುದ್ರದ ನೀರಿನಿಂದ ಮೇಲಕ್ಕೆ ಎತ್ತಿ ಇಟ್ಟು ಎಲ್ಲ

ತುದಿ ಬದಿಗಳನ್ನು ಸರಿಪಡಿಸಿ ಇದನ್ನು ಇಲ್ಲಿ ಸ್ಥಾಪನೆ ಗೊಳಿಸಿದನು. ಪರ್ವತಗಳ ಮೂಲಕ ಇದನ್ನು ಸುಸ್ಥಿರಗೈದನು. ಅನಂತರ ಬ್ರಹ್ಮದೇವನು ಪೂರ್ವಕಲ್ಪದಂತೆ ಎಲ್ಲ ಚರಾಚರ ಪ್ರಪಂಚವನ್ನು ಸೃಷ್ಟಿ ಮಾಡಿದನು. ಎಲ್ಲ ತೀರ್ಥ, ಕ್ಷೇತ್ರ, ನದಿ, ಸರೋವರ ಮುಂತಾದವುಗಳನ್ನು ಯೋಗ್ಯಸ್ಥಾನದಲ್ಲಿ ಪ್ರತಿಷ್ಠಿತ ಗೊಳಿಸಿದನು. ಎಲ್ಲ ದೇವ ದಾನವ ಮಾನವರನ್ನು ಹಾಗೂ ಉಳಿದೆಲ್ಲ ಜೀವರಾಶಿಗಳನ್ನು ಸೃಷ್ಟಿಮಾಡಿದನು. ಆದರೆ ಸಂಸಾರದಲ್ಲಿ ಒದ್ದಾಡುವ ಈ ಮಾನವರ ಉದ್ಧಾರದ ಬಗೆ ಹೇಗೆ? ಎಂದು ಅವನಿಗೆ ಚಿಂತೆಯಾಯಿತು. ''ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಹೀಗೆ ಮೂರು ವಿಧವಾದ ಸಾಂಸಾರಿಕ ಲೌಪಗಳಿಂದ ಪ್ರತಿಯೊಬ್ಬ ಜೀವನು ಪೀಡಿತನಾಗಿದ್ದಾನೆ. ಈ ಮಾನವಜೀವಿಗಳನ್ನು ಭವಬಂಧನದಿಂದ ಬಿಡುಗಡೆ ಮಾಡಿ ಮೋಕ್ಷಕ್ಕೆ ಕರೆದೊಯ್ಯುವ ಮಹಾಪ್ರಭು ಎಂದರೆ ಶ್ರೀಹರಿ ಮಾತ್ರ. ಆದುದರಿಂದ ನಾನೂ ಆ ಜಗನ್ನಾಥನನ್ನೇ ಸ್ತೋತ್ರ ಮಾಡುತ್ತೇನೆ'' ಎಂದು ಅಂದುಕೊಂಡು ಬ್ರಹ್ಮದೇವರು ಭಗವಂತನನ್ನು ಸ್ತುತಿಸಲು ತೊಡಗಿದರು.

**ಬ್ರಹ್ಮ:-** ಜಗತ್ತಿಗೆ ಆಧಾರನಾದ ಜಗನ್ನಾಥನೇ! ನಿನಗೆ ನಮಸ್ಕಾರ. ಈ ಸಂಪೂರ್ಣ ವಿಶ್ವವನ್ನು ಸೃಷ್ಟಿಮಾಡುವ ಬ್ರಹ್ಮದೇವರು ನಿನ್ನ ನಾಭಿಕಮಲದಿಂದ ಹುಟ್ಟಿದ್ದಾರೆ. ಆದರೆ ನಿಜವಾದ ಈ ವಿಶ್ವದ ಸೃಷ್ಟಿಕರ್ತಾರನು ನೀನೇ ಆಗಿರುವೆ. ನಿನ್ನಿಂದಲೇ ಈ ಪ್ರಪಂಚದ ಪಾಲನೆ. ಪೋಷಣೆ ಬಂಧ ಮೋಕ್ಷ, ಸುಖ-ದುಃಖ ಮುಂತಾದ ಕಾರ್ಯಗಳೆಲ್ಲವೂ ನಡೆಯುತ್ತಿವೆ. ಹೀಗೆ ಈ ಎಲ್ಲ ಚರಾಚರ ಪ್ರಪಂಚಕ್ಕೆ ಸರ್ವಕಾರಕನು ನೀನೇ ಆಗಿರುತ್ತಿ. ಚರಾಚರ ಗುರುವಾದ ದಯಾಮಯನಾದ ಜಗನ್ನಾಥ! ನಾನು ನಿನಗೆ ಶರಣು ಬಂದಿದ್ದೇನೆ. ನನ್ನ ಮೇಲೆ ನೀನು ಪ್ರಸನ್ನನಾಗು.''

ಬ್ರಹ್ಮದೇವರ ಈ ಸ್ತೋತ್ರವನ್ನು ಕೇಳಿ ಪ್ರಸನ್ನನಾದ ಆ ಪರಮಾತ್ಮನು ಗರುಡಾರೂಢನಾಗಿ ಬಂದು ಅಲ್ಲಿ ಪ್ರಕಟವಾದನು ಮತ್ತು ಬ್ರಹ್ಮದೇವನನ್ನು ಕುರಿತು ನುಡಿದನು.

**ವಿಷ್ಣು:-** ಚತುರ್ಮುಖನೇ! ನೀನು ಏತಕ್ಕಾಗಿ ನನ್ನನ್ನು ಸ್ತೋತ್ರ ಮಾಡುತ್ತಲಿರುವಿ ಎಂಬುದು ನನಗೆ ಗೊತ್ತು. ನಿನ್ನ ಉದ್ದೇಶವು ಸಿದ್ಧಿಸುವ ಸಂಭವವು ಕಡಿಮೆ. ಆದರೂ ಅದು ಸಿದ್ಧವಾಗುವ ಮಾರ್ಗವನ್ನು ಹೇಳುತ್ತೇನೆ ಕೇಳು. ಈ ಜಗತ್ತು ಎಲ್ಲವೂ ನನ್ನಿಂದ ಅರ್ಥಾತ್ ವಿಷ್ಣುವಿನಿಂದ ವ್ಯಾಪ್ತವಾಗಿದೆ. ಈ ವಿಶ್ವವೆಲ್ಲವೂ ವಿಷ್ಣುಮಯ. ಈ ಎಲ್ಲ ಪ್ರಪಂಚವನ್ನು ಸೃಷ್ಟಿ ಮಾಡಲಿಕ್ಕಾಗಿ ನಾನೇ ನಿನ್ನನ್ನು ನಿರ್ಮಿಸಿದ್ದೇನೆ. ನೀನು ಕೂಡ ನನ್ನದೇ ಒಂದು ಪ್ರತಿರೂಪ. ನಿನ್ನಲ್ಲಿ ಇದ್ದು ಬ್ರಹ್ಮ ಶಬ್ದವಾಚ್ಯನಾಗಿ ಈ ಎಲ್ಲ ಸೃಷ್ಟಿ ವ್ಯಾಪಾರಗಳನ್ನು ನಾನೇ ನಿನ್ನಿಂದ ಮಾಡಿಸುತ್ತೇನೆ. ಆದುದರಿಂದ ನಿನ್ನಲ್ಲಿ ಇರುವ ಆ ಪರಬ್ರಹ್ಮ ರೂಪಕ್ಕೂ ನನಗೂ ಯಾವ ಭೇದ ಇರುವದಿಲ್ಲ. ನಿನ್ನ ಇಚ್ಛೆಯೇ ನನ್ನ ಇಚ್ಛೆ! ಆದುದರಿಂದ ಈಗ ನಿನ್ನ ಮನೋವಾಂಛಿತವು ಸಿದ್ಧಿಸುವ ಉಪಾಯವನ್ನು ಹೇಳುತ್ತೇನೆ ಕೇಳು.

''ಸಮುದ್ರದ ಉತ್ತರ ತೀರದಲ್ಲಿ ಮಹಾನದಿಯ ದಕ್ಷಿಣಭಾಗದಲ್ಲಿ ಇರುವ ಪ್ರದೇಶವು ಪರಮಪವಿತ್ರ. ಸಮುದ್ರ ತೀರದಲ್ಲಿ ಶೋಭಿಸುವ ಆ ನೀಲಪರ್ವತವೂ ಅತ್ಯಂತ ಶ್ರೇಷ್ಠ ಹಾಗೂ ಪರಮಪಾವನ. ನಿಸ್ಸಂಗನಾದ ನಾನು ಈ ಸ್ಥಾನದಲ್ಲಿ ಕಾಷ್ಠಮಯ ದೇಹಧಾರಣ ಮಾಡಿಕೊಂಡು ನೆಲೆ ನಿಲ್ಲುತ್ತೇನೆ. ಪ್ರಳಯ ಕಾಲದಲ್ಲಿಯೂ ಈ ಪುರುಷೋತ್ತಮ ಕ್ಷೇತ್ರವು ನಷ್ಟವಾಗುವದಿಲ್ಲ. ಇಲ್ಲಿ ನಾನು ಈ ನನ್ನ ಪುರುಷೋತ್ತಮ

**ಬ್ರಹ್ಮದೇವರಿಗೆ ಪುರುಷೋತ್ತಮ ಕ್ಷೇತ್ರಕ್ಕೆ ಹೋಗಲು ಭಗವಾನ್ ವಿಷ್ಣುವಿನ ಆದೇಶ.**

**"ನಾರಾಯಣಂ ನಮಸ್ಕೃತ್ಯ, ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥**

ಸರ್ವಸದ್ಗುಣಗಳಿಂದ ಪರಿಪೂರ್ಣನೂ ದೋಷರಹಿತನೂ ಲಕ್ಷ್ಮೀದೇವಿಗೆ ಆಶ್ರಯಸ್ಥಾನನೂ ಮೋಕ್ಷಪ್ರದಾತನೂ ಆದ ಭಗವಾನ್‌ನಾರಾಯಣನನ್ನು ನಮಸ್ಕಾರ ಮಾಡಿ ಅನಂತರ ಶೇಷದೇವರನ್ನೂ ಜೀವೋತ್ತಮರಾದ ವಾಯುದೇವರನ್ನೂ ವಂದಿಸಿ, ಲಕ್ಷ್ಮೀದೇವಿಯನ್ನು ನೆನೆದು ಸರಸ್ವತಿದೇವಿಯನ್ನು ಪ್ರಣಮಿಸಿ, ಗ್ರಂಥಕಾರರಾದ ಭಗವಾನ್ ವೇದವ್ಯಾಸರನ್ನು ಅಭಿವಂದಿಸಿ, ಪುರಾಣ ಇತಿಹಾಸ ಮುಂತಾದ ಮಂಗಳಗ್ರಂಥಗಳನ್ನು ನಿರೂಪಣೆ ಮಾಡಬೇಕು.

**ಶೌನಿಕಾದಿ ಮುನಿಗಳು:-** ಪೂಜ್ಯರೇ! ತಾವು ಎಲ್ಲ ಶಾಸ್ತ್ರಗಳ ತತ್ವಗಳನ್ನು ಚೆನ್ನಾಗಿ ಅರಿತಿರುವಿರಿ. ಎಲ್ಲ ತೀರ್ಥಗಳ ಮಹಿಮೆಯನ್ನು ಯಥಾರ್ಥವಾಗಿ ಬಲ್ಲಿರಿ. ಮಹನೀಯರೇ! ಎಲ್ಲ ಕ್ಷೇತ್ರಗಳಲ್ಲಿ ಪುರುಷೋತ್ತಮ ಕ್ಷೇತ್ರವು ಅರ್ಥಾತ್ ಜಗನ್ನಾಥ ಪುರಿಯು ಪರಮ ಪಾವನ. ಭಗವಾನ್ ಲಕ್ಷ್ಮೀಪತಿ ನಾರಾಯಣನು ತನ್ನ ವಿಚಿತ್ರ ಲೀಲೆಯನ್ನು ಅನುಸರಿಸಿ ಕಾಷ್ಠಮಯವಾದ ಶರೀರವನ್ನು ಧರಿಸಿ ಈ ಕ್ಷೇತ್ರದಲ್ಲಿ ವಿರಾಜಮಾನನಾಗಿದ್ದಾನೆ. ಈ ಪುರುಷೋತ್ತಮ ಕ್ಷೇತ್ರದಲ್ಲಿ ನೆಲೆನಿಂತ ಆ ಜಗನ್ನಾಥನ ದರ್ಶನಮಾತ್ರದಿಂದಲೇ ಮಾನವನಿಗೆ ಎಲ್ಲ ತೀರ್ಥಕ್ಷೇತ್ರಗಳ ಯಾತ್ರೆಮಾಡಿದ ಪುಣ್ಯಫಲವು ಪ್ರಾಪ್ತಿಯಾಗುತ್ತದೆ. ಭಕ್ತಿಯಿಂದ ಈ ಜಗನ್ನಾಥಸ್ವಾಮಿಯನ್ನು ದರ್ಶನ ಮಾಡಿಕೊಂಡು ಆರಾಧನೆ ಮಾಡಿ ಉಪಾಸನೆಗೈದರೆ ಮಾನವನಿಗೆ ಮೋಕ್ಷವು ದೊರಕುವುದು ನಿಶ್ಚಿತ. ಇಂಥ ಪುರುಷೋತ್ತಮತೀರ್ಥದ ಮಹಿಮೆಯನ್ನು ವಿಸ್ತಾರವಾಗಿ ನಿರೂಪಿಸಿರಿ.

**ಜೈಮಿನಿ ಮಹರ್ಷಿ:-** ಮುನಿಗಳೇ! ನೀವು ಕೇಳಿದ ಪುರುಷೋತ್ತಮ ತೀರ್ಥದ ಮಹಿಮೆಯು ಗೂಢವೂ ರಹಸ್ಯವೂ ಆಗಿದೆ. ಅದನ್ನು ನಾನು ನಿಮಗೆ ವಿವರವಾಗಿ ತಿಳಿಸಿ ಹೇಳುತ್ತೇನೆ ಕೇಳಿರಿ. ಜಗತ್ತಿಗೆಲ್ಲ ಸ್ವಾಮಿಯಾದ ಭಗವಾನ್ ನಾರಾಯಣನು ಎಲ್ಲ ಕಡೆಗೂ ವ್ಯಾಪ್ತನಾಗಿರುತ್ತಾನೆ. ಸರ್ವ ಪ್ರಾಣಿ ಪ್ರಪಂಚವನ್ನೆಲ್ಲಾ ಅವನೇ ನಿರ್ಮಾಣ ಮಾಡಿದ್ದಾನೆ. ಆ ಜಗನ್ನಾಥ ಸ್ವಾಮಿಯು ವಿಶ್ವವ್ಯಾಪಿ ಹಾಗೂ ವಿಶ್ವಾಂತರ್ಯಾಮಿ. ಆದರೂ ಈ ಪುರುಷೋತ್ತಮ ಕ್ಷೇತ್ರದಲ್ಲಿ ಲೋಕಾನುಗ್ರಹಕ್ಕಾಗಿಯೇ ಕಾಷ್ಠಮಯವಾದ ಶರೀರವನ್ನು ಧಾರಣಮಾಡಿ ನಿಂತುಕೊಂಡಿದ್ದಾನೆ. ಆದುದರಿಂದ ಈ ಕ್ಷೇತ್ರವು ಆ ಪುರುಷೋತ್ತಮಸ್ವಾಮಿಯ ಹೆಸರಿನಿಂದಲೇ ಪುರುಷೋತ್ತಮಕ್ಷೇತ್ರ ಅಥವಾ ಜಗನ್ನಾಥಪುರಿ ಎಂದು ಪ್ರಸಿದ್ಧವಾಗಿದೆ.

ಹತ್ತು ಯೋಜನ ವಿಸ್ತಾರವಾಗಿದೆ ಈ ಪುಣ್ಯಕ್ಷೇತ್ರ. ಸಮುದ್ರದ ಮಧ್ಯದಿಂದ ಈ ದಿವ್ಯಕ್ಷೇತ್ರ ಪ್ರಾದುರ್ಭೂತವಾಗಿದೆ. ಆದುದರಿಂದ ಇದರ ಸುತ್ತಲೂ ಮಳಲು ರಾಶಿಯು ವ್ಯಾಪಿಸಿದೆ. ಅದರ ಮಧ್ಯಭಾಗದಲ್ಲಿ ದೊಡ್ಡದಾದ ನೀಲಗಿರಿ ಎಂಬ ಬೆಟ್ಟವು ಈ ಕ್ಷೇತ್ರದ ಶೋಭೆಯನ್ನು ಹೆಚ್ಚಿಸಲು ಕಾರಣವಾಗಿದೆ. ಪೂರ್ವಕಾಲದಲ್ಲಿ ವರಾಹ ರೂಪವನ್ನು ಧರಿಸಿದ ಶ್ರೀಮಹಾವಿಷ್ಣುವು ಈ ಭೂಭಾಗವನ್ನು ಸಮುದ್ರದ ನೀರಿನಿಂದ ಮೇಲಕ್ಕೆ ಎತ್ತಿ ಇಟ್ಟು ಎಲ್ಲ

ತುದಿ ಬದಿಗಳನ್ನು ಸರಿಪಡಿಸಿ ಇದನ್ನು ಇಲ್ಲಿ ಸ್ಥಾಪನೆ ಗೊಳಿಸಿದನು. ಪರ್ವತಗಳ ಮೂಲಕ ಇದನ್ನು ಸುಸ್ಥಿರಗೈದನು. ಅನಂತರ ಬ್ರಹ್ಮದೇವನು ಪೂರ್ವಕಲ್ಪದಂತೆ ಎಲ್ಲ ಚರಾಚರ ಪ್ರಪಂಚವನ್ನು ಸೃಷ್ಟಿ ಮಾಡಿದನು. ಎಲ್ಲ ತೀರ್ಥ, ಕ್ಷೇತ್ರ, ನದಿ, ಸರೋವರ ಮುಂತಾದವುಗಳನ್ನು ಯೋಗ್ಯಸ್ಥಾನದಲ್ಲಿ ಪ್ರತಿಷ್ಠಿತ ಗೊಳಿಸಿದನು. ಎಲ್ಲ ದೇವ ದಾನವ ಮಾನವರನ್ನು ಹಾಗೂ ಉಳಿದೆಲ್ಲ ಜೀವರಾಶಿಗಳನ್ನು ಸೃಷ್ಟಿ ಮಾಡಿದನು. ಆದರೆ ಸಂಸಾರದಲ್ಲಿ ಒದ್ದಾಡುವ ಈ ಮಾನವರ ಉದ್ಧಾರದ ಬಗೆ ಹೇಗೆ? ಎಂದು ಅವನಿಗೆ ಚಿಂತೆಯಾಯಿತು. ''ಅಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಹೀಗೆ ಮೂರು ವಿಧವಾದ ಸಾಂಸಾರಿಕ ಲೌಪಗಳಿಂದ ಪ್ರತಿಯೊಬ್ಬ ಜೀವನು ಪೀಡಿತನಾಗಿದ್ದಾನೆ. ಈ ಮಾನವಜೀವಿಗಳನ್ನು ಭವಬಂಧನದಿಂದ ಬಿಡುಗಡೆ ಮಾಡಿ ಮೋಕ್ಷಕ್ಕೆ ಕರೆದೊಯ್ಯುವ ಮಹಾಪ್ರಭು ಎಂದರೆ ಶ್ರೀಹರಿ ಮಾತ್ರ. ಆದುದರಿಂದ ನಾನೂ ಆ ಜಗನ್ನಾಥನನ್ನೇ ಸ್ತೋತ್ರ ಮಾಡುತ್ತೇನೆ'' ಎಂದು ಅಂದುಕೊಂಡು ಬ್ರಹ್ಮದೇವರು ಭಗವಂತನನ್ನು ಸ್ತುತಿಸಲು ತೊಡಗಿದರು.

**ಬ್ರಹ್ಮ:-** ಜಗತ್ತಿಗೆ ಆಧಾರನಾದ ಜಗನ್ನಾಥನೇ! ನಿನಗೆ ನಮಸ್ಕಾರ. ಈ ಸಂಪೂರ್ಣ ವಿಶ್ವವನ್ನು ಸೃಷ್ಟಿಮಾಡುವ ಬ್ರಹ್ಮದೇವರು ನಿನ್ನ ನಾಭಿಕಮಲದಿಂದ ಹುಟ್ಟಿದ್ದಾರೆ. ಆದರೆ ನಿಜವಾದ ಈ ವಿಶ್ವದ ಸೃಷ್ಟಿಕರ್ತಾರನು ನೀನೇ ಆಗಿರುವೆ. ನಿನ್ನಿಂದಲೇ ಈ ಪ್ರಪಂಚದ ಪಾಲನೆ. ಪೋಷಣೆ ಬಂಧ ಮೋಕ್ಷ, ಸುಖ-ದುಃಖ ಮುಂತಾದ ಕಾರ್ಯಗಳೆಲ್ಲವೂ ನಡೆಯುತ್ತಿವೆ. ಹೀಗೆ ಈ ಎಲ್ಲ ಚರಾಚರ ಪ್ರಪಂಚಕ್ಕೆ ಸರ್ವಕಾರಕನು ನೀನೇ ಆಗಿರುತ್ತಿ. ಚರಾಚರ ಗುರುವಾದ ದಯಾಮಯನಾದ ಜಗನ್ನಾಥ! ನಾನು ನಿನಗೆ ಶರಣು ಬಂದಿದ್ದೇನೆ. ನನ್ನ ಮೇಲೆ ನೀನು ಪ್ರಸನ್ನನಾಗು.''

ಬ್ರಹ್ಮದೇವರ ಈ ಸ್ತೋತ್ರವನ್ನು ಕೇಳಿ ಪ್ರಸನ್ನನಾದ ಆ ಪರಮಾತ್ಮನು ಗರುಡಾರೂಢನಾಗಿ ಬಂದು ಅಲ್ಲಿ ಪ್ರಕಟವಾದನು ಮತ್ತು ಬ್ರಹ್ಮದೇವನನ್ನು ಕುರಿತು ನುಡಿದನು.

**ವಿಷ್ಣು:-** ಚತುರ್ಮುಖನೆ! ನೀನು ಏತಕ್ಕಾಗಿ ನನ್ನನ್ನು ಸ್ತೋತ್ರ ಮಾಡುತ್ತಲಿರುವಿ ಎಂಬುದು ನನಗೆ ಗೊತ್ತು. ನಿನ್ನ ಉದ್ದೇಶವು ಸಿದ್ಧಿಸುವ ಸಂಭವವು ಕಡಿಮೆ. ಆದರೂ ಅದು ಸಿದ್ಧವಾಗುವ ಮಾರ್ಗವನ್ನು ಹೇಳುತ್ತೇನೆ ಕೇಳು. ಈ ಜಗತ್ತು ಎಲ್ಲವೂ ನನ್ನಿಂದ ಅರ್ಥಾತ್ ವಿಷ್ಣುವಿನಿಂದ ವ್ಯಾಪ್ತವಾಗಿದೆ. ಈ ವಿಶ್ವವೆಲ್ಲವೂ ವಿಷ್ಣುಮಯ. ಈ ಎಲ್ಲ ಪ್ರಪಂಚವನ್ನು ಸೃಷ್ಟಿ ಮಾಡಲಿಕ್ಕಾಗಿ ನಾನೇ ನಿನ್ನನ್ನು ನಿರ್ಮಿಸಿದ್ದೇನೆ. ನೀನು ಕೂಡ ನನ್ನದೇ ಒಂದು ಪ್ರತಿರೂಪ. ನಿನ್ನಲ್ಲಿ ಇದ್ದು ಬ್ರಹ್ಮ ಶಬ್ದವಾಚ್ಯನಾಗಿ ಈ ಎಲ್ಲ ಸೃಷ್ಟಿ ವ್ಯಾಪಾರಗಳನ್ನು ನಾನೇ ನಿನ್ನಿಂದ ಮಾಡಿಸುತ್ತೇನೆ. ಆದುದರಿಂದ ನಿನ್ನಲ್ಲಿ ಇರುವ ಆ ಪರಬ್ರಹ್ಮ ರೂಪಕ್ಕೂ ನನಗೂ ಯಾವ ಭೇದ ಇರುವದಿಲ್ಲ. ನಿನ್ನ ಇಚ್ಛೆಯೇ ನನ್ನ ಇಚ್ಛೆ! ಆದುದರಿಂದ ಈಗ ನಿನ್ನ ಮನೋವಾಂಛಿತವು ಸಿದ್ಧಿಸುವ ಉಪಾಯವನ್ನು ಹೇಳುತ್ತೇನೆ ಕೇಳು.

''ಸಮುದ್ರದ ಉತ್ತರ ತೀರದಲ್ಲಿ ಮಹಾನದಿಯ ದಕ್ಷಿಣಭಾಗದಲ್ಲಿ ಇರುವ ಪ್ರದೇಶವು ಪರಮಪವಿತ್ರ. ಸಮುದ್ರ ತೀರದಲ್ಲಿ ಶೋಭಿಸುವ ಆ ನೀಲಪರ್ವತವೂ ಅತ್ಯಂತ ಶ್ರೇಷ್ಠ ಹಾಗೂ ಪರಮಪಾವನ. ನಿಸ್ಸಂಗನಾದ ನಾನು ಈ ಸ್ಥಾನದಲ್ಲಿ ಕಾಷ್ಠಮಯ ದೇಹಧಾರಣ ಮಾಡಿಕೊಂಡು ನೆಲೆ ನಿಲ್ಲುತ್ತೇನೆ. ಪ್ರಳಯ ಕಾಲದಲ್ಲಿಯೂ ಈ ಪುರುಷೋತ್ತಮ ಕ್ಷೇತ್ರವು ನಷ್ಟವಾಗುವದಿಲ್ಲ. ಇಲ್ಲಿ ನಾನು ಈ ನನ್ನ ಪುರುಷೋತ್ತಮ

ರೂಪದಿಂದ ಸದಾ ಸರ್ವದಾ ವಸತಿಯನ್ನು ಮಾಡಿರುತ್ತೇನೆ. ಇಲ್ಲಿ ನಿನ್ನ ಕಣ್ಣೆದುರು ಶಂಖ ಚಕ್ರಾದಿ ಚಿಹ್ನೆಗಳಿಂದ ಕೂಡಿ ನಾನು ಪ್ರಕಟನಾಗಿರುವೆನಷ್ಟೇ! ನೀನು ಅಲ್ಲಿ ಹೋಗಿ ನೋಡು. ಇದೇ ರೂಪದಿಂದ ನಾನು ಆ ಪುರುಷೋತ್ತಮ ಕ್ಷೇತ್ರದಲ್ಲಿ ನಿಂತಿರುತ್ತೇನೆ. ನೀಲಾಚಲದ ಭೂಭಾಗದಲ್ಲಿ ಕಲ್ಪಾಂತಕಾಲದವರೆಗೆ ಸುಸ್ಥಿರವಾಗಿ ಉಳಿಯುವ ಅಕ್ಷಯವಟದ ಸಮೀಪದಲ್ಲಿ ಪಶ್ಚಿಮ ದಿಕ್ಕಿನಲ್ಲಿ ಕಾಹಿಣ ಎಂಬ ಪುಷ್ಕರಣಿ ಇದೆ. ಆ ಪುಷ್ಕರಣಿಯ ತೀರದಲ್ಲಿ ನಾನು ಸ್ವಯಂ ಪ್ರತಿಷ್ಠಿತನಾಗಿದ್ದೇನೆ. ಆ ನನ್ನ ರೂಪವನ್ನು ತಮ್ಮ ಚರ್ಮ ಚಕ್ಷುಸ್ಸಿನಿಂದ ನೋಡಿದ ಮಾನವರು ಮುಕ್ತಿಯನ್ನು ಹೊಂದುತ್ತಾರೆ. ಬ್ರಹ್ಮ! ನೀನು ಈಗ ಅಲ್ಲಿಗೆ ಹೋಗು. ಕಾಷ್ಠಮಯ ಶರೀರವನ್ನು ಧರಿಸಿ ಅಲ್ಲಿ ನಿಂತುಕೊಂಡ ನನ್ನ ದಿವ್ಯ ವಿಗ್ರಹವನ್ನು ನೋಡು. ನನ್ನ ದರ್ಶನವನ್ನು ಪಡೆದು ನೀನು ನನ್ನನ್ನು ಧ್ಯಾನ ಮಾಡುತ್ತ ನಿಂತುಕೊಂಡಾಗ ಆ ಪುರುಷೋತ್ತಮ ಕ್ಷೇತ್ರದ ದಿವ್ಯ ಮಹಿಮೆಯು ನಿನಗೆ ಸ್ವಯಂ ಪ್ರತಿಭಾತವಾಗುವದು. ಈ ಕ್ಷೇತ್ರವು ನನ್ನ ಮಾಯೆಯಿಂದ ಶ್ರುತಿ, ಸ್ಮೃತಿ ಇತಿಹಾಸ ಪುರಾಣಗಳಲ್ಲಿ ಗುಪ್ತವಾಗಿದೆ ಎಲ್ಲರಿಗೂ ಅಜ್ಞಾತವಾಗಿದೆ. ಎಲ್ಲಿಯೂ ಇದರ ವರ್ಣನೆಯು ಬರುವದಿಲ್ಲ. ಈಗ ನನ್ನ ಕೃಪೆಯಿಂದ ಈ ಕ್ಷೇತ್ರದ ಮಹಿಮೆ ಇನ್ನು ಮೇಲೆ ಬೆಳಕಿಗೆ ಬರುವದು. ಮತ್ತು ಎಲ್ಲರ ಪ್ರತ್ಯಕ್ಷಕ್ಕೆ ಉಪಲಬ್ಧವೂ ಆಗುವದು. ಎಲ್ಲ ವಿಧವಾದ ವ್ರತ, ತೀರ್ಥಸ್ನಾನ, ಯಜ್ಞ ದಾನಗಳಿಂದ ಬರುವ ಪುಣ್ಯವು ಈ ಪುರುಷೋತ್ತಮ ಕ್ಷೇತ್ರದಲ್ಲಿ ಒಂದು ದಿನದ ಮಟ್ಟಿಗೆ ಇದ್ದರೆ ಸಾಕು. ಆ ಎಲ್ಲ ಪುಣ್ಯಫಲವು ಪ್ರಾಪ್ತಿಯಾಗುವದು. ಈ ಕ್ಷೇತ್ರದಲ್ಲಿ ಒಂದು ಉಸಿರು ಎಳೆಯುವಷ್ಟು ಸಮಯನಿಂತರೂ ಅಶ್ವಮೇಧ ಯಜ್ಞ ಮಾಡಿದಷ್ಟು ಪುಣ್ಯ ಬರುವದು. ''ಮುನಿಗಳೇ ಈ ರೀತಿಯಾಗಿ ಜಗನ್ನಾಥನಾದ ಆ ಶ್ರೀಮನ್‌ನಾರಾಯಣನು ಬ್ರಹ್ಮದೇವರಿಗೆ ಆದೇಶವನ್ನು ನೀಡಿ ಅಲ್ಲಿಂದ ಅಂತರ್ಧಾನ ಹೊಂದಿದನು.

**ಜೈಮಿನಿ:-** ಮನುಷ್ಯರು ಯಾರ ನಾಮಸ್ಮರಣ ಮಾತ್ರದಿಂದ ಎಲ್ಲ ಪಾಪಗಳಿಂದಲೂ ಮುಕ್ತರಾಗುವರೋ ಅಂಥ ಪರಮಾತ್ಮನ ದಿವ್ಯದೇಹದ ದರ್ಶನ ಮಾಡಿಕೊಂಡ ಬಳಿಕ ಮೋಕ್ಷವು ದೊರಕದೇ ಇದ್ದೀತೇ?

**''ಮನಸಾ ಧ್ಯಾಯನ್ ವಿಷ್ಣುಂ ತ್ಯಜನ್ ಪ್ರಾಣಾನ್ ವಿಮುಚ್ಯತೇ ।**
**ಸಾಕ್ಷಾತ್ಕೃತೋ ಭಗವತಃ ಕಿಂ ಚಿತ್ರಂ ಮುಕ್ತಿಮೇತಿ ಯತ್ ॥**

ಮಾನವನು ಮರಣ ಹೊಂದುವಾಗ ಯಾವ ವಿಷ್ಣುವನ್ನು ಮನಸ್ಸಿನಿಂದ ಧ್ಯಾನಮಾಡಿದರೆ ಮೋಕ್ಷವನ್ನು ಹೊಂದುವನೋ ಅಂಥ ಶ್ರೀಹರಿಯ ಸಾಕ್ಷಾತ್ ದರ್ಶನ ವನ್ನು ಮಾಡಿಕೊಂಡ ಬಳಿಕ ಮುಕ್ತಿ ಹೊಂದುವದು ಏನಾಶ್ಚರ್ಯ! ಅದ್ಭುತವಾಗಿದೆ. ಈ ಪುರುಷೋತ್ತಮ ಕ್ಷೇತ್ರದ ಮಹಿಮೆ. ಜ್ಞಾನಿಗಳಾದ ಯೋಗಿಗಳಿಗೂ, ತಪಸ್ವಿಗಳಿಗೂ ಮುಕ್ತಿಯನ್ನು ಹೊಂದಲು ಅನೇಕ ಸಾಧನಗಳು ಉಂಟು. ಆದರೆ ಅಜ್ಞಾನಿಗಳಾದ ಸಾಮಾನ್ಯ ಮಾನವರಿಗೆ ಮೋಕ್ಷವನ್ನು ಪಡೆಯಲು ಇರುವ ಏಕ ಮಾತ್ರ ಉಪಾಯವೆಂದರೆ ಈ ಪುರುಷೋತ್ತಮ ಕ್ಷೇತ್ರದಲ್ಲಿ ಕಾಷ್ಠರೂಪದಿಂದ ಬಂದು ನಿಂತುಕೊಂಡ ಜಗನ್ನಾಥ ಸ್ವಾಮಿಯ ಸಾಕ್ಷಾತ್‌ದರ್ಶನವನ್ನು ಮಾಡಿಕೊಳ್ಳುವದು. ಅವನ ಮಹಾಮಹಿಮೆಯನ್ನು ತಿಳಿದು ಅವನ ಧ್ಯಾನೋಪಾಸನೆ ಮಾಡುವದು. ಅಜ್ಞರಿಗೂ ಪಾಮರರಿಗೂ ಕೇವಲ

ಸಂದರ್ಶನ ಧ್ಯಾನೋಪಾಸನೆಗಳಿಂದಲೇ ಈ ಕ್ಷೇತ್ರವು ಮುಕ್ತಿದಾಯಕವೆಂದು ಸಿದ್ಧವಾದ ಬಳಿಕ ಜ್ಞಾನವೈರಾಗ್ಯ ಸಂಪನ್ನರಾಗಿ ಇಲ್ಲಿಗೆ ಬಂದು ಜಗನ್ನಾಥಸ್ವಾಮಿಯ ದರ್ಶನವನ್ನು ಪಡೆದುಕೊಳ್ಳುವ ಯೋಗ್ಯರಾದ ಸದ್ಭಕ್ತರ ವಿಷಯದಲ್ಲಿ ಹೇಳುವದೇನು?

**ಋಷಿಗಳು:-** ಜೈಮಿನಿ ಮಹರ್ಷಿಗಳೇ! ಪರಮಾತ್ಮನು ಬ್ರಹ್ಮದೇವರಿಗೆ ನೀಲಾಚಲ ಪರ್ವತಕ್ಕೆ ಹೋಗಿ ಅಲ್ಲಿ ಸನ್ನಿಹಿತವಾದ ತನ್ನ ದಿವ್ಯರೂಪವನ್ನು ನೋಡು ಎಂದು ಆದೇಶವಿತ್ತನೆಂದು ನೀವು ಹಿಂದೆ ಹೇಳಿದಿರಷ್ಟೇ! ಅವನ ಅಪ್ಪಣೆಯಂತೆ ಬ್ರಹ್ಮದೇವರು ನೀಲಾಚಲ ಪರ್ವತಕ್ಕೆ ಹೋಗಿ ಏನು ನೋಡಿದರು? ನಂತರ ಏನು ಮಾಡಿದರು?

**ಜೈಮಿನಿ:-** ಬ್ರಹ್ಮದೇವರು ಆ ನೀಲಾಚಲ ಪರ್ವತಕ್ಕೆ ಆಗಮಿಸಿದರು. ಅಲ್ಲಿಗೆ ಬಂದು ಆ ಪುರುಷೋತ್ತಮನ ಕ್ಷೇತ್ರವನ್ನು ತಮ್ಮ ಕಣ್ಣಿನಿಂದ ನೋಡಿದರು. ಆ ಕ್ಷೇತ್ರದ ಅತ್ಯದ್ಭುತವಾದ ಮಹಿಮೆಯು ಅವರಿಗೆ ದೃಷ್ಟಿಗೋಚರವಾಯಿತು. ಆದರಿಂದ ಆಶ್ಚರ್ಯಚಕಿತರಾಗಿ ಕಣ್ಣುಮುಚ್ಚಿ ಆ ಪರಮಾತ್ಮನ ಧ್ಯಾನವನ್ನು ಮಾಡತೊಡಗಿದರು ಹೀಗೆ ಆ ಪಿತಾಮಹನು ಆ ಪರಮಾತ್ಮನ ಧ್ಯಾನ ಸಮಾಧಿಲೀನರಾಗಿ ಕುಳಿತುಕೊಂಡಾಗಲೇ ಅಲ್ಲಿಗೆ ಯಮಧರ್ಮರಾಜನು ಆಗಮಿಸಿದನು. ಅವನ ಅಧಿಕಾರವು ಮೊಟಕುಗೊಂಡಿದ್ದರಿಂದ ಆ ಯಮಧರ್ಮನಿಗೆ ಬಹಳ ದುಃಖವಾಗಿತ್ತು. ಆದರಿಂದ ವ್ಯಾಕುಲನಾಗಿ ಆ ಪಿತೃಪತಿಯು ಈ ಪುರುಷೋತ್ತಮ ಕ್ಷೇತ್ರಕ್ಕೆ ಬಂದು ಲಕ್ಷ್ಮೀಪತಿಯನ್ನು ಸಾಕ್ಷಾತ್ತಾಗಿ ಕಂಡು ತನ್ನ ದುಗುಡವನ್ನು ಹೇಳಿಕೊಂಡು ಅವನ ಸ್ತೋತ್ರವನ್ನು ಮಾಡತೊಡಗಿದನು.

**ಯಮಧರ್ಮ:-** "ಈ ವಿಶ್ವದ ಸೃಷ್ಟಿ, ಸ್ಥಿತಿ, ಸಂಹಾರಾದಿಗಳನ್ನು ಮಾಡಲು ಏಕಮಾತ್ರ ಕಾರಣಪುರುಷನಾದ ಜಗದೀಶ! ನಿನಗೆ ನನ್ನ ನಮಸ್ಕಾರ! ದಾರದಲ್ಲಿ ಮಣಿಗಳನ್ನು ಪೋಣಿಸಿದಂತೆ ಈ ಪ್ರಪಂಚವೆಲ್ಲವೂ ನಿನ್ನಲ್ಲಿಯೇ ಓತಪ್ರೋತವಾಗಿದೆ. ಪ್ರತಿಯೊಂದು ಪ್ರಾಣಿಯು ಮಾಡುವ ಸರ್ವವ್ಯಾಪಾರಗಳಿಗೂ ನೀನೇ ಸಾಕ್ಷಿ. ನಿನಗೆ ಆದಿಯಿಲ್ಲ. ಅಂತ್ಯವಿಲ್ಲ. ನಿನಗೆ ನನ್ನ ನಮಸ್ಕಾರ ನಿನ್ನ ಕಟಾಕ್ಷ ವಿಕ್ಷೇಪ ಮಾತ್ರದಿಂದ ಸೃಷ್ಟ್ಯಾದಿ ವ್ಯಾಪರಗಳೆಲ್ಲವೂ ನಡೆಯುತ್ತವೆ. ನೀನು ಈ ನೀಲಾಚಲ ಗುಹೆಯಲ್ಲಿ ಬಂದು ನೆಲೆಸಿದ್ದು ಭೂಲೋಕದ ಭಾಗ್ಯ. ನಮ್ಮೆಲ್ಲರ ಪುಣ್ಯ. ನಿನಗೆ ನನ್ನ ಅನಂತಾನಂತ ವಂದನೆಗಳು. ಮತ್ತು ನಿನ್ನ ವಕ್ಷಸ್ಥಲದಲ್ಲಿ ನೆಲೆಸಿರುವ ನಿನ್ನ ಪರಾಪ್ರಕೃತಿ ಎನಿಸಿರುವ ನಿನ್ನ ಪ್ರೇಯಸಿ ಲಕ್ಷ್ಮೀದೇವಿಗೂ ನನ್ನ ಪ್ರಣಾಮ ಪರಂಪರೆ."

ಯಮಧರ್ಮನ ಈ ಸ್ತೋತ್ರವನ್ನು ಕೇಳಿ ಸಂತುಷ್ಟನಾದ ಆ ಜಗದೀಶ. ತನ್ನ ಎಡಬದಿಯಲ್ಲಿ ಕುಳಿತ ಲಕ್ಷ್ಮಿಗೆ ಯಮಧರ್ಮನಿಗೆ ಏನಾದರೂ ಹೇಳಲು ಸಂಕೇತವನ್ನು ಕಟಾಕ್ಷ ವೀಕ್ಷಣೆಯಿಂದಲೇ ಸೂಚಿಸಿದ. ಭಗವಂತನಿಂದ ಪ್ರೇರಣೆಯನ್ನು ಪಡೆದು ಸಂಸಾರದ ದುಃಖಗಳನ್ನು ಕಳೆಯುವ ಲಕ್ಷ್ಮೀದೇವಿಯು ಲೋಕಕಲ್ಯಾಣಕ್ಕಾಗಿ ಯಮಧರ್ಮನಿಗೆ ನುಡಿದಳು.

**ಲಕ್ಷ್ಮೀ:-** ಸೂರ್ಯಪುತ್ರ! ನೀನು ಯಾವ ಉದ್ದೇಶದಿಂದ ನಮ್ಮಿಬ್ಬರನ್ನು ಸ್ತೋತ್ರ ಮಾಡುತ್ತ ಇರುವಿಯೋ ಅದು ನಮಗೆ ತಿಳಿದಿದೆ. ನಿನ್ನ ಉದ್ದೇಶವು ಫಲಿಸಲಾರದು. ಯಾಕೆಂದರೆ ಇದು ಸಿದ್ಧಿಕ್ಷೇತ್ರ, ಮೋಕ್ಷಪುರಿ. ಇಲ್ಲಿ ಬಂದು ಭಕ್ತಿಯಿಂದ ಭಗವಂತನ ದರ್ಶನ ತೆಗೆದುಕೊಂಡು ಜಗನ್ನಾಥನ ಸೇವೆ ಮಾಡುವ ಜನರ ಮೇಲೆ ನಿನ್ನ ಅಧಿಕಾರ

ನಡೆಯಲಾರದು. ಇಲ್ಲಿ ಬಂದು ಭಗವದ್ದರ್ಶನ ತೆಗೆದುಕೊಂಡ ಭಕ್ತರೆಲ್ಲರೂ ವೈಕುಂಠಕ್ಕೆ ಪ್ರಯಾಣ ಬೆಳೆಸುವರು. ಅವರು ಹೇಗೆ ನಿನ್ನ ವಶದಲ್ಲಿ ಬಂದಾರು? ಈ ಭಾಗದ ಜನರ ಮೇಲೆ ನೀನಾಗಲಿ ನಿನ್ನ ಭಟರಾದ ಯಮದೂತರಾಗಲಿ ಎಂದೂ ಕೈ ಮಾಡಲಾರರು. ಆದರಿಂದ ನೊಂದುಕೊಂಡು ಪ್ರಪಂಚದಲ್ಲಿ ಎಲ್ಲ ಕಡೆಗೂ ಇದ್ದಂತೆ ಈ ಪುರುಷೋತ್ತಮ ಕ್ಷೇತ್ರದ ಮೇಲೆಯೂ ಕಳೆದುಹೋದ ನಿನ್ನ ಅಧಿಕಾರವನ್ನು ಮರಳಿ ಪಡೆಯಬೇಕೆಂದು ನೀನು ನಮ್ಮಿಬ್ಬರ ಸ್ತೋತ್ರ ಮಾಡುತ್ತಿರುವೆ. ಆದರೆ ನಿನ್ನ ಅಪೇಕ್ಷೆ ಇಲ್ಲಿ ಪೂರ್ಣವಾಗಲಾರದು. ಇಲ್ಲಿ ಬಂದು ಇಂದ್ರನೀಲ ಮಣಿಯಂತೆ ಶ್ಯಾಮಸುಂದರ ಶರೀರಿಯಾದ ಜಗನ್ನಾಥ ಸ್ವಾಮಿಯನ್ನು ಕಣ್ ತುಂಬನೋಡಿ, ಬಾಯಿತುಂಬ ಹೊಗಳಿ, ಹೃದಯತುಂಬ ಸ್ತೋತ್ರ ಮಾಡುವ ಮನುಷ್ಯರ ಕರ್ಮಬಂಧನವೆಲ್ಲವೂ ತೊಲಗಿ ಹೋಗುವದು. ಭವಬಂಧದಿಂದ ಮುಕ್ತರಾದವರು ಯಮಲೋಕಕ್ಕೆ ಬರುವದು ಸಾಧ್ಯವಿಲ್ಲ. ಬೇರೆ ಕಡೆ ಕರ್ಮಭೂಮಿಯ ಮೇಲೆ ಮಾತ್ರ ನಿನ್ನ ಅಧಿಕಾರ. ಇದು ಕರ್ಮಭೂಮಿ ಅಲ್ಲ. ಇದು ಮುಕ್ತಿಕ್ಷೇತ್ರ. ಬ್ರಹ್ಮದೇವರು ಕೂಡ ಈ ಕ್ಷೇತ್ರದ ಮಹಿಮೆಯನ್ನು ತಿಳಿದು ಆ ಗದಾಧರನನ್ನು ಸ್ತುತಿಸುತ್ತಾನೆ. ಇಲ್ಲಿ ಇರುವವರೆಲ್ಲ-ಇದ್ದು ಇಲ್ಲಿನಿಂತ ಭಗವಂತನ ದಿವ್ಯದರ್ಶನ ತೆಗೆದುಕೊಳ್ಳುವವರೆಲ್ಲ ಜೀವನ್ಮುಕ್ತರು ಎಂದು ತಿಳಿದುಕೊ.

**ಯಮಧರ್ಮ:-** ಪರಮೇಶ್ವರನ ಪಟ್ಟದ ಅರಸಿಯೇ! ನೀನು ಹೇಳಿದ್ದೆಲ್ಲವು ಯಥಾರ್ಥ. ಈ ಪುರುಷೋತ್ತಮ ಕ್ಷೇತ್ರವು ಜಗನ್ನಾಥ ಸ್ವಾಮಿಯ ಸನ್ನಿಧಾನದಿಂದ ಮೋಕ್ಷಪ್ರದವಾದದ್ದು ಯಥಾಯೋಗ್ಯವೆ. ಭಗವಂತನ ಸ್ವತಂತ್ರವಾದ ಇಚ್ಛೆಯನ್ನು ಹೀಗೇಕೆ ಎಂದು ಪೃಚ್ಛಾ ಪೃಚ್ಛೆ ಮಾಡುವದು ಸರ್ವಥಾ ಯೋಗ್ಯವಲ್ಲ. ಇದೆಲ್ಲವನ್ನು ನಾನು ಒಪ್ಪಿದೆ. ಆದರೆ ತಾಯಿ! ನನ್ನನ್ನೂ ಈ ಸ್ವರ್ಗ ನರಕಾದಿಗಳನ್ನೂ ಸೃಷ್ಟಿಸಿದವನು ಅವನೇ ಅಲ್ಲವೆ! "ಪಾಪಿಗಳನ್ನು ಸೆಳೆದೊಯ್ದು ನರಕದಲ್ಲಿ ಶಿಕ್ಷಿಸು" ಎಂದು ನನಗೆ ಕಟ್ಟಪ್ಪಣೆಯನ್ನು ಕೊಟ್ಟು ಮಹಾಪ್ರಭು ಈ ಪುರುಷೋತ್ತಮನೇ ಅಲ್ಲವೇ! ಅವನ ಇಚ್ಛೆಯಂತೆ ಇಲ್ಲಿ ಬಂದು ಇದ್ದು ಮರಣ ಹೊಂದಿದ ಎಲ್ಲರಿಗೂ ಮೋಕ್ಷವನ್ನು ಕೊಡುವ ಸಂಕಲ್ಪವು ಆ ಸ್ವಾಮಿಯದಿದ್ದರೆ ಅದಕ್ಕೆ ವಿರೋಧ ಮಾಡಲು ನಾವು ಎಷ್ಟರವರು! ಆ ಸರ್ವೋತ್ತಮನಾದ ಶ್ರೀಹರಿಯ ಸರ್ವತಂತ್ರ ಸ್ವತಂತ್ರವಾದ ಇಚ್ಛೆಗೆ ತಲೆಬಾಗುವದೊಂದೇ ನಮ್ಮ ಕರ್ತವ್ಯ. ಆದರೆ ಭಗವಂತನು ಗೊತ್ತುಪಡಿಸಿದ ಈ ಮುಕ್ತಿ ಕ್ಷೇತ್ರದ ಸೀಮೆಯಾದರೂ ಎಲ್ಲಿಯವರೆಗೆ? ನನ್ನ ಅಧಿಕಾರ ಈ ಕ್ಷೇತ್ರದ ಎಷ್ಟು ಪರಿಮಿತಿಯಲ್ಲಿ ನಡೆಯಲಾರದು? ಇದನ್ನು ನಾನು ಅರಿತುಕೊಳ್ಳಬೇಡವೇ? ನನ್ನಿಂದ ಮುಂದೆ ನನ್ನ ಅಧಿಕಾರವಿಲ್ಲದ ಈ ಜೀವನ್ಮುಕ್ತರ ಕ್ಷೇತ್ರದಲ್ಲಿ ಪ್ರವೇಶಿಸುವ ಅಪರಾಧ ಆಗಬಾರದು ಎನ್ನುವ ಉದ್ದೇಶದಿಂದ ಈ ಕ್ಷೇತ್ರದ ವಿಸ್ತಾರವನ್ನು ನನಗೆ ತಿಳಿಸಿ ಹೇಳಿರಿ. ಇಲ್ಲಿ ವಾಸಮಾಡುವದರಿಂದ ಬರುವ ಪುಣ್ಯಫಲಗಳನ್ನು ನಿರೂಪಿಸಿರಿ.

**ಲಕ್ಷ್ಮೀದೇವಿ:-** ಸೂರ್ಯನಂದನ! ಹಿಂದೆ ಪ್ರಳಯ ಕಾಲದಲ್ಲಿ ಚರಾಚರ ಪ್ರಪಂಚ ವೆಲ್ಲವೂ ಘೋರ ಸಾಗರದ ಅಪರಂಪಾರವಾದ ನೀರಿನಲ್ಲಿ ಮುಳುಗಿ ಹೋಗಿದ್ದಿತು. ಆಗ ಚಿರಂಜೀವಿಯಾದ ಏಳು ಕಲ್ಪಕಾಲ ದೀರ್ಘಾಯುಷ್ಯವುಳ್ಳ ಮಾರ್ಕಂಡೇಯ ಮಹಾಮುನಿಯು ಒಮ್ಮೆಲೇ ಉಕ್ಕೇರಿ ಭೋರ್ಗರೆಯುವ ಏಕಾರ್ಣವ ಸಾಗರದಲ್ಲಿ ಗಿರಿಯಂತಹ ತೆರೆಗಳ ಸಾಲಿನಲ್ಲಿ ಸಿಕ್ಕು ಈಜಾಡುತ್ತಿದ್ದನು. ಎಲ್ಲಿಯೂ ನಿಲ್ಲಲಿಕ್ಕೆ ಅವನಿಗೆ

ಸ್ಥಳವೇ ಸಿಕ್ಕದೆ ತರಂಗಗಳ ತೊಟ್ಟಿಲಲ್ಲಿ ತೂಗಾಡುತ್ತಿದ್ದನು. ಹಾಗೆಯೇ ವೀಚಿ ಮಾಲೆಗಳ ಆಚೀಚೆ ತೇಲಾಡುತ್ತ ಈ ಪುರುಷೋತ್ತಮ ಕ್ಷೇತ್ರಕ್ಕೆ ಬಂದನು. ದೂರದಿಂದಲೇ ಇಲ್ಲಿಯ ಅಕ್ಷಯ ವಟವು ಅವನ ಕಣ್ಣಿಗೆ ಕಾಣಿಸಿತು.

ಮುಗ್ಧ ಮನೋಹರವಾದ ಒಂದು ಮಗು ತನ್ನ ಮಧುರ ಕಂಠದಿಂದ ತನ್ನನ್ನು ಕುರಿತು ಹೀಗೆ ಹೇಳಿದಂತೆ ಕೇಳಿಸಿತು - ''ಮಾರ್ಕಂಡೇಯ! ದುಃಖಿಸಬೇಡ. ನನ್ನ ಹತ್ತಿರ ಬಾ. ನಿನ್ನ ಚಿಂತೆಯನ್ನು ಬಿಟ್ಟುಬಿಡು.'' ಈ ವಿಚಿತ್ರ ವಚನವನ್ನು ಕೇಳಿ ಆತ್ಯಾಶ್ಚರ್ಯವಾಯಿತು ಆ ಮಾರ್ಕಂಡೇಯ ಮುನಿಗೆ. ಅವನು ತನ್ನಲ್ಲಿಯೇ ತಾನು ಆಲೋಚನೆಗೈದ ಈ ಅತ್ಯಂತ ಭಯಾನಕವಾದ ಏಕಾರ್ಣವವಾದ ಜಲರಾಶಿಯಲ್ಲಿ ಈ ಒಂದು ಕ್ಷೇತ್ರ ಮಾತ್ರ ನೌಕೆಯಂತೆ ಸುರಕ್ಷಿತವಾಗಿ ಕಾಣುತ್ತದೆ. ಅದರಲ್ಲಿ ಈ ದೊಡ್ಡ ಅರಳೆ ಮರವು ವಜ್ರಸ್ತಂಭದಂತೆ ಗಟ್ಟಿಮುಟ್ಟಾಗಿ ನಿಂತಿದೆ. ಈ ಪ್ರಳಯ ಕಾಲದ ಏಕಾರ್ಣವ ಜಲಸಾಗರದ ಅಪಾರ ವಾರಿ ವಿಸ್ತಾರದಲ್ಲಿ ಸ್ಥಾವರ ಜಂಗಮಾತ್ಮಕವಾದ ವಿಶ್ವವೇ ಮುಳುಗಿ ನಷ್ಟವಾಗಿ ಹೋದಾಗ ಭೂತಳದ ಈ ಒಂದು ಪ್ರದೇಶವು ಮಾತ್ರ ಸುಸ್ಥಿರವಾಗಿ ಹೇಗೆ ಉಳಿಯಿತು?''

ಅಷ್ಟರಲ್ಲಿ ಮತ್ತೆ ಅದೇ ಧ್ವನಿ. ಕೂಸಿನ ಕಂಚಿನ ಕಂಠ, ಕರುಳಿನ ಕರೆ 'ಮಾರ್ಕಂಡೇಯ ಇತ್ತ ಬಾ ಇಲ್ಲಿ ಬಾ.' ಎಂದು ಅಕ್ಕರತೆ ಕಕುಲಾತಿ ಎರಡನ್ನು ಉಕ್ಕಿಸುವ ಚಿಕ್ಕ ಮಗುವಿನ ಈ ಪ್ರೀತಿಯ ಆಹ್ವಾನವನ್ನು ಕೇಳಿ ಆ ದನಿ ಬಂದ ಕಡೆಗೆ ತಿರುಗಿದ ಮಾರ್ಕಂಡೇಯ ಮುನಿ. ಆ ತೋಯ ರಾಶಿಯ ತೆರೆಗಳ ತೊಟ್ಟಿಲಲ್ಲಿ ತೇಲಾಡುತ್ತಿದ್ದ ಆ ಮಾರ್ಕಂಡೇಯ ಮುನಿಯು ಕಣ್ಣು ತೆರೆದು ನೋಡಿದ ಕೂಡಲೇ ಶಂಖ ಚಕ್ರಗದಾಧಾರಿಯಾದ ಮಹಾವಿಷ್ಣು ದೃಷ್ಟಿಗೋಚರನಾದ. ಅವನ ಹೃದಯ ಕಮಲವನ್ನು ಶ್ರೀದೇವಿಯು ಆಶ್ರಯಿಸಿದ್ದು ಕಂಡಿತು. ಆಗ ಆ ಮಹಾಮುನಿಯ ಮನಸ್ಸು ಪ್ರಸನ್ನವಾಯಿತು. ಹೃದಯ ತುಂಬಿಬಂದಿತು. ಆ ತರಂಗ ಮಾಲೆಯ ಮೇಲೆಯೇ ಸಾಷ್ಟಾಂಗ ಹಾಕಿದ ಆ ಮುನಿಪುಂಗವ. ಮತ್ತು ಪ್ರಸನ್ನ ಮನಸ್ಸಿನಿಂದ ಸ್ತೋತ್ರವನ್ನು ಮಾಡತೊಡಗಿದ.

**ಮಾರ್ಕಂಡೇಯ:-** ''ಕರುಣಾಸಮುದ್ರನಾದ ಲಕ್ಷ್ಮೀಪತಿಯೇ! ನಿನಗೆ ನನ್ನ ಅನಂತಾನಂತ ವಂದನೆ. ನಿನ್ನ ದೀನಭಕ್ತನಾದ ನನ್ನನ್ನು ಕರುಣೆಯಿಂದ ಕಾಪಾಡು. ಇಷ್ಟುದಿನ ನಾನು ಬೇರೆ ಬೇರೆ ವಿಷಯಗಳಲ್ಲಿ ಆಸಕ್ತನಾಗಿ ನಿನ್ನ ಸೇವೆಯನ್ನು ಸರಿಯಾಗಿ ಮಾಡಲಿಲ್ಲ. ನಿನ್ನಿಂದ ವಿಮುಖನಾಗಿ ಕರ್ಮದ ಜಾಲದಲ್ಲಿ ಸಿಕ್ಕುಬಿದ್ದು ನಿನ್ನ ನಿರಂತರ ಧ್ಯಾನವನ್ನು ಮಾಡದಿರುವುದರ ದುರಂತ ಪರಿಣಾಮವನ್ನು ನಾನು ಈ ವರೆಗೆ ಅನುಭವಿಸಿದ್ದಾಯಿತು. ಈಗ ನನಗೆ ಬುದ್ಧಿ ಬಂದಿದೆ. ನಾನು ಇನ್ನು ಎಂದಿಗೂ ನಿನ್ನ ಪಾದ ಧ್ಯಾನವನ್ನು ಬಿಡಲಾರೆ. ನಿನ್ನ ಚರಣ ಸೇವಕನಾದ ನನ್ನನ್ನು ರಕ್ಷಿಸು. ನಾನು ಸಂಸಾರ ಸಮುದ್ರದಲ್ಲಿ ಮುಳುಗಿದ್ದೇನೆ. ಈ ಪ್ರಳಯ ಸಾಗರಕ್ಕಿಂತ ಭಯಂಕರವಾಗಿದೆ ಆ ಭವಸಾಗರ. ನಿನ್ನನ್ನೇ ನೆರೆ ನಂಬಿದ ನನ್ನನ್ನು ಮೊದಲು ಈ ಪ್ರಳಯ ಸಮುದ್ರದಿಂದಲೂ, ಭವಸಮುದ್ರದಿಂದಲೂ ಪಾರು ಮಾಡು. ನಿನ್ನ ಕರುಣಾಕಟಾಕ್ಷವನ್ನು ನನ್ನ ಮೇಲೆ ಬೀರು. ನನ್ನನ್ನು ಉದ್ಧರಿಸು.''

ಹೀಗೆ ತನ್ನನ್ನು ಸ್ತೋತ್ರ ಮಾಡುತ್ತಿರುವ ಮಾರ್ಕಂಡೇಯನನ್ನು ಕೃಪಾ ತರಂಗಿತವಾದ ದೃಷ್ಟಿಯಿಂದ ನೋಡಿ ನುಡಿದ ಶ್ರೀಹರಿ.

**ನಾರಾಯಣ:-** ''ಮುನಿಪುಂಗವ! ನೀನು ನನ್ನ ಯಥಾರ್ಥ ಸ್ವರೂಪವನ್ನು ತಿಳಿದುಕೊಳ್ಳಲಿಲ್ಲ. ಆದುದರಿಂದ ನಿನಗೆ ಇಂಥ ದೀನ ದಶೆ ಮತ್ತು ದಯನೀಯ ಅವಸ್ಥೆಗಳು ಬಂದಿವೆ. ನೀನು ಹಿಂದೆ ದುಷ್ಕರವಾದ, ಅತ್ಯುಗ್ರ ತಪಸ್ಸನ್ನು ಆಚರಿಸಿದೆ. ಅದರಿಂದ ನಿನಗೆ ಚಿರಜೀವಿತ್ವವು ಪ್ರಾಪ್ತವಾಗಿದೆ. ಮಾರ್ಕಂಡೇಯ! ಅಲ್ಲಿ ಮೇಲೆ ನೋಡು. ಈ ವಟವೃಕ್ಷದ ಒಂದು ಅರಳೆಲೆಯ ಮೇಲೆ ಒಂದು ಸುಂದರವಾದ ಮಗು ಪವಡಿಸಿದೆ. ಆ ಕೂಸು ಕಾಲರೂಪ. ನೀನು ಅದರ ತೆರೆದ ಮುಖದಲ್ಲಿ ಪ್ರವೇಶ ಮಾಡಿ ಅಲ್ಲಿ ಸುಖದಿಂದ ಇರಬಹುದು. ತಿರುಗಾಡಿಯೂ ಬರಬಹುದು. ಬೇಕಾದರೆ ಬೇಕಾದಲ್ಲಿ.

ಭಗವಂತನ ಈ ನುಡಿಯನ್ನು ಕೇಳಿ ಅತ್ಯಾಶ್ಚರ್ಯವಾಯಿತು ಮಾರ್ಕಂಡೇಯ ಮುನಿಗೆ. ಕೂಡಲೇ ಅವನು ಆ ವಟವೃಕ್ಷವನ್ನೇರಿದ. ಅದರ ಒಂದು ಎಲೆಯ ಮೇಲೆ ಮಲಗಿದ ಬಾಲರೂಪದ ಭಗವಂತನನ್ನು ನೋಡಿದ. ಅವನ ಆಜ್ಞೆಯಂತೆ ಆ ಮಗುವಿನ ಪುಟ್ಟ ಬಾಯಿಯಲ್ಲಿ ಪ್ರವೇಶಿಸಿದ. ಬಾಯಿಯಲ್ಲಿಯೇ ಬ್ರಹ್ಮಾಂಡ. ಆ ಮಗುವಿನ ಮುಖದಲ್ಲಿಯೇ ಹದಿನಾಲ್ಕು ಲೋಕಗಳು. ದಿಗ್ದೇವತೆಗಳು ಸಿದ್ಧಗಂಧರ್ವರು, ರಾಕ್ಷಸ, ಋಷಿಗಳು, ತೆರೆಗಳು ಚಾಚಿ ಭೂಮಂಡಲವನ್ನೆಲ್ಲ ಮೇರೆಗಟ್ಟಿದ ಸಪ್ತಸಮುದ್ರಗಳು. ಅವುಗಳ ನಡುವೆ ಸಪ್ತದ್ವೀಪಗಳು. ಸಪ್ತಪರ್ವತಗಳು. ಅನೇಕಾನೇಕ ಧುಮ್ಮುಕ್ಕಿ ಹರಿಯುವ ನದೀ ಪ್ರವಾಹಗಳು. ಅಸಂಖ್ಯ ಪಟ್ಟಣಗಳು. ಪಾತಾಳದಿ ಕೆಳಗಿನ ಏಳು ಲೋಕಗಳು, ಸಹಸ್ರಾರು ನಾಗಕನ್ಯೆಯರು.

ಸಾವಿರ ಹೆಡೆಗಳ ಮೇಲೆ ಬ್ರಹ್ಮಾಂಡವನ್ನೇ ಹೊತ್ತು ನಿಂತ ಆದಿಶೇಷ ಮುಂತಾದವುಗಳನ್ನೆಲ್ಲ ಮಾರ್ಕಂಡೇಯ ಮಹಾಮುನಿಯು ಆ ಪುಟ್ಟ ಬಾಲಕನ ಹೊಟ್ಟೆಯೊಳಗೆ ನೋಡಿದ. ಎಲ್ಲ ಕಡೆಗೂ ತಿರುಗಾಡಿದ. ಎತ್ತ ಹೋದರೂ, ಎಲ್ಲಿ ಬಂದರೂ, ಆ ಮಗುವಿನ ಉದರದ ತುದಿ ಮೊದಲುಗಳು ಸಿಕ್ಕಲೇ ಇಲ್ಲ. ಬ್ರಹ್ಮಾಂಡದಲ್ಲಿ ಬ್ರಹ್ಮದೇವರು ಸೃಷ್ಟಿಸಿದ ವಿಶ್ವಪ್ರಪಂಚವೇ ಆ ಮಗುವಿನ ಉದರಡಿಯಲ್ಲಿ ತನ್ನತನವನ್ನು ತೆರೆದು ತೋರಿತ್ತು. ಅದರ ಅಂತಪಾರವನ್ನು ತಿಳಿದುಕೊಳ್ಳಬೇಕೆಂದು ಮಾರ್ಕಂಡೇಯನು ಇತ್ತಿಂದ ಅತ್ತ, ಅತ್ತಿಂದ ಇತ್ತ ಓಡಾಡಿ ದಣಿದು ಕೊಂಡ. ಕೊನೆಗೂ ಎಲ್ಲಿಯೂ ಅದರ ಕೊನೆಯನ್ನು ಕಾಣದೆ ಅದೇ ಬಾಲಕನ ಕಂಠಮಾರ್ಗದಿಂದ ಹೊರಗೆ ಬಂದ. ಇವನನ್ನು ನೋಡಿ ನಗುತ್ತ ಅಲ್ಲಿ ಶ್ರೀಪುರುಷೋತ್ತಮ ಮೊದಲಿನಂತೆಯೇ ನಿಂತುಕೊಂಡಿದ್ದ.

**ಪುರುಷೋತ್ತಮ:-** ಮಾರ್ಕಂಡೇಯ! ಪ್ರಳಯ ಕಾಲದ ಜಲರಾಶಿಯ ಸ್ಪರ್ಶ ಮಾಡದಿರುವ ಈ ಭೂಭಾಗವೆಲ್ಲವೂ ನನ್ನ ವಿಚಿತ್ರವಾದ ಕ್ಷೇತ್ರ. ಸನಾತನ ಧಾಮ. ಪುರುಷೋತ್ತಮ ಕ್ಷೇತ್ರ ಎಂದು ಕರೆಯುತ್ತಾರೆ ಇದನ್ನು. ಇದು ಸನಾತನ ನಿತ್ಯ ನೂತನವಾದ ನನ್ನ ಧಾಮ. ಕಲ್ಪಾಂತರದಲ್ಲಿ ಇದಕ್ಕೆ ನಾಶ ಇಲ್ಲ. ಕಲ್ಪಾದಿಯಲ್ಲಿ ಸೃಷ್ಟಿಯಿಲ್ಲ. ಇಲ್ಲಿದ್ದವರಿಗೆ ಸಂಸಾರ ಬಂಧನವಂತೂ ಇಲ್ಲವೇ ಇಲ್ಲ. ಮೋಕ್ಷದಾಯಕನಾದ ಪುರುಷೋತ್ತಮನು ಇಲ್ಲಿ ಇರುತ್ತಾನೆ ಎಂದು ತಿಳಿದು ಈ ಕ್ಷೇತ್ರದಲ್ಲಿ ಪ್ರವೇಶ ಮಾಡುವ ಮನುಷ್ಯನು ಘನಾನಂದ ಸ್ವರೂಪನಾಗಿ ತಾಯಿಯ ಗರ್ಭದಲ್ಲಿ ಎಂದೂ ಪ್ರವೇಶಿಸುವುದಿಲ್ಲ. ನಾನು ನನ್ನ ಉದರದಲ್ಲಿ ಪ್ರವೇಶ ಮಾಡಿಸಿ ನಿನಗೆ ನನ್ನ ಉದರಸ್ಥಿತವಾದ ಬ್ರಹ್ಮಾಂಡ ದರ್ಶನ ಮಾಡಿಸಿದೆ. ಅದಕ್ಕೂ ಮೊದಲು ಈ ಪ್ರಳಯ

ಕಾಲದ ಏಕಾರ್ಣವ ಸಾಗರದ ಘೋರ ದೃಶ್ಯವನ್ನು ನಿನಗೆ ತೋರಿಸಿದೆ. ಇಂಥ ಪ್ರಳಯಾಂತಕ ಪ್ರಸಂಗದಲ್ಲಿಯೂ ಆ ಪ್ರಳಯ ರಾಶಿಯ ಒಂದು ಹನಿ ನೀರು ಕೂಡ ಸ್ಪರ್ಶ ಮಾಡದಿರುವ ಮತ್ತು ಕಾಲವನ್ನು ಮೀರಿನಿಂದ ಈ ನನ್ನ ಪುರುಷೋತ್ತಮ ಕ್ಷೇತ್ರ ದರ್ಶನವನ್ನು ನಿನಗೆ ಮಾಡಿಸಿದ್ದೇನೆ.

**ಮಾರ್ಕಂಡೇಯ:-** ಭಗವನ್! ನಿನ್ನ ಅದ್ಭುತವಾದ ಮಹಾಮಹಿಮೆಗಳನ್ನು ಕಂಡು ನಾನು ಧನ್ಯನಾದೆ. ನಿನ್ನ ನಿತ್ಯ ನೂತನವೂ ಸತ್ಯ ಸನಾತನವೂ ಆದ ಈ ಪುರುಷೋತ್ತಮ ಕ್ಷೇತ್ರಮನ್ನು ಕಂಡು ಪುನೀತನಾದೆ. ನಾನು ಇನ್ನು ಮೇಲೆ ಇದೇ ದಿವ್ಯಧಾಮದಲ್ಲಿ ವಾಸ ಮಾಡುತ್ತೇನೆ. ನನ್ನ ಮೇಲೆ ಅನುಗ್ರಹವನ್ನು ಮಾಡು.

**ಭಗವಂತ:-** ಬ್ರಹ್ಮರ್ಷಿಯೇ! ಮೋಕ್ಷಸಾಧಕವಾದ ಈ ಪುರುಷೋತ್ತಮ ಕ್ಷೇತ್ರದಲ್ಲಿ ಪ್ರಳಯ ಕಾಲವು ಸಮಾಪ್ತಿ ಆಗುವವರೆಗೆ ನಾನು ಇರುತ್ತೇನೆ. ಅನಂತರ ನಾನು ಇಲ್ಲಿ ಒಂದು ಸನಾತನ ತೀರ್ಥವನ್ನು ನಿರ್ಮಿಸುವೆನು. ಆ ತೀರ್ಥದ ದಂಡೆಯಲ್ಲಿ ನಿಂತು ನೀನು ನನ್ನ ಇನ್ನೊಂದು ಶರೀರದಂತಿರುವ ಶಂಕರನನ್ನು ಕುರಿತು ತಪಸ್ಸನ್ನು ಮಾಡು. ಆ ಮಹಾದೇವನ ದಯೆಯಿಂದ ಮೃತ್ಯುಂಜಯ ಎನಿಸುವೆ.

ಹೀಗೆ ನಾರಾಯಣನಿಂದ ವರವನ್ನು ಪಡೆದು ಮಾರ್ಕಂಡೇಯ ಮುನಿಯು ಆ ಪುರುಷೋತ್ತಮ ಕ್ಷೇತ್ರದಲ್ಲಿ ನಿವಾಸ ಮಾಡಿದನು. ವಟವೃಕ್ಷದಿಂದ ವಾಯವ್ಯ ಮೂಲೆಯಲ್ಲಿ ಶ್ರೀಹರಿಯ ಚಕ್ರದಿಂದ ನಿರ್ಮಿತವಾದ ಒಂದು ತೀರ್ಥದ ದಂಡೆಯಲ್ಲಿ ನಿಂತು ತಪಸ್ಸನ್ನು ಮಾಡಿದನು. ಮಾರ್ಕಂಡೇಯ ಮುನಿಯ ಉಗ್ರತರವಾದ ಈ ತಪೋನುಷ್ಠಾನದಿಂದ ಮಹಾದೇವನು ಸುಪ್ರೀತರಾಗಿ ಅನುಗ್ರಹ ಮಾಡಿದನು. ಆ ಪರಶಿವನ ದಯೆಯಿಂದ ಮೃತ್ಯುವಿನ ಮೇಲೆ ಗೆಲುವನ್ನು ಸಂಪಾದಿಸಿ ಚಿರಂಜೀವಿ ಯಾದನು ಮಾರ್ಕಂಡೇಯ ಮುನಿ. ಆ ತೀರ್ಥವು ಇಂದಿಗೂ ಮಾರ್ಕಂಡೇಯ ಕುಂಡ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಆ ಮಹಾಮುನಿಯು ಆ ತೀರ್ಥದ ದಂಡೆಯ ಮೇಲೆಯೇ ಒಂದು ಲಿಂಗವನ್ನು ಸ್ಥಾಪಿಸಿದ್ದಾನೆ. 'ಮಾರ್ಕಂಡೇಯೇಶ್ವರ' ಎಂದು ಕರೆಯುತ್ತಾರೆ ಆ ಶಿವಲಿಂಗವನ್ನು. ಮಾರ್ಕಂಡೇಯ ಕುಂಡದಲ್ಲಿ ಸ್ನಾನಮಾಡಿ ಮಾರ್ಕಂಡೆಯೇಶ್ವರನ ದರ್ಶನವನ್ನು ತೆಗೆದುಕೊಂಡವರಿಗೆ ಹತ್ತು ಅಶ್ವಮೇಧ ಯಜ್ಞ ಮಾಡಿದಷ್ಟು ಪುಣ್ಯವು ಬರುವದು. ಈ ಪುರುಷೋತ್ತಮ ಕ್ಷೇತ್ರವು ಹನ್ನೆರಡು ಮೈಲು ಸಮುದ್ರದ ಒಳಗೂ ಐದು ಮೈಲು ಸಮುದ್ರ ತೀರದಲ್ಲಿಯೂ ಇರುತ್ತದೆ. ಅತ್ಯಂತ ನಿರ್ಮಲವಾದ ಬಂಗಾರದ ಮಳಲರಾಶಿಯಿಂದ ವ್ಯಾಪ್ತವಾದ ಈ ಕ್ಷೇತ್ರವು ನೀಲಗಿರಿ ಪರ್ವತದಿಂದ ಶೋಭಾಯಮಾನವಾಗಿದೆ. ವಿಶ್ವನಾಥನಾದ ಭಗವಾನ್ ಶಿವನು ನಾರಾಯಣನ ಒಂದು ವಿಭೂತಿರೂಪವೇ ಆಗಿದ್ದಾನೆ. ಅವನು ಆ ಶಿವನು ಈ ಜಗನ್ನಾಥನ ಉಪಾಸನೆಯನ್ನು ಮಾಡಲಿಕ್ಕಾಗಿ ಇಲ್ಲಿಯೇ ಸಮುದ್ರ ತೀರದಲ್ಲಿ ವಾಸಮಾಡಿದ್ದಾನೆ. ಯಮದಂಡದ ಭಯವನ್ನು ಪರಿಹರಿಸಿದ್ದರಿಂದ 'ಯಮೇಶ್ವರ' ಎಂದು ಅವನನ್ನು ಇಲ್ಲಿ ಕರೆಯುತ್ತಾರೆ. ಈ ಯಮೇಶ್ವರನ ದರ್ಶನ ಹಾಗೂ ಪೂಜೆಗಳಿಂದ ಕೋಟಿ ಶಿವಲಿಂಗಗಳ ದರ್ಶನ ಹಾಗೂ ಪೂಜೆಯ ಫಲವು ಪ್ರಾಪ್ತವಾಗುವದು.

## ಪುರುಷೋತ್ತಮ ತೀರ್ಥಗಳ ಪರಿಚಯ

**ಮಹಾಲಕ್ಷ್ಮೀ:-** ಈ ಕ್ಷೇತ್ರದ ಆಕಾರವು ಶಂಖದಂತೆ ಇರುತ್ತದೆ. ಇದರ ತಲೆಯ ಬದಿಯಲ್ಲಿ ಪಶ್ಚಿಮದ ಸೀಮೆಯಲ್ಲಿ ವಿರಾಜಿಸುತ್ತಿದ್ದಾನೆ ಭಗವಾನ್ ಶಂಕರ. ಶಂಖಾಕಾರದ ಈ ಕ್ಷೇತ್ರದ ಪಡುವಲ ಸೀಮೆಯಲ್ಲಿ ಭಗವಾನ್ ನೀಲಕಂಠನು ನೆಲೆಸಿದ್ದಾನೆ. ಇವೆರಡರ ಮಧ್ಯ ದೇಶವು ಎರಡುವರೆ ಮೈಲಿನಷ್ಟು ವಿಸ್ತಾರವಾಗಿದೆ. ಇದು ನಾರಾಯಣನ ಅತ್ಯಂತ ದುರ್ಲಭವಾದ ಪುಣ್ಯಕ್ಷೇತ್ರ. ಇಲ್ಲಿಯ ಮಸುದ್ರದಲ್ಲಿ ಸ್ನಾನ ಮಾಡುವದರಿಂದ ಸದ್ಗತಿ, ಶಂಖಾಕಾರದ ಈ ತೀರ್ಥದ ಎರಡನೆಯ ತಿರುವಿನಲ್ಲಿ ಕಪಾಲ ಮೋಚನ ಎಂಬ ಲಿಂಗ ಇರುತ್ತಿದೆ. ಇದರ ಮೂರನೇ ತಿರುವಿನಲ್ಲಿ 'ಆದ್ಯಾಶಕ್ತಿ' ಎನಿಸಿದ ವಿಮಲಾದೇವಿಯು ವಿರಾಜಿಸುತ್ತಿದ್ದಾಳೆ. ಭಕ್ತಿಯಿಂದ ಇವಳ ದರ್ಶನವನ್ನು ತೆಗೆದುಕೊಂಡು ಪೂಜಾಪ್ರಣಾಮ ಸಲ್ಲಿಸಿದವರ ಕಾಮನೆಗಳೆಲ್ಲ ಪೂರ್ಣವಾಗುವವು. ಶಂಖದ ನಾಭಿ ಸ್ಥಾನದಲ್ಲಿ ವಟವೃಕ್ಷ, ಪುರುಷೋತ್ತಮ ಹಾಗು ಪುಷ್ಕರಣಿಗಳು ಇರುತ್ತವೆ. ಕಪಾಲಮೋಚನದಿಂದ ಅರ್ಧಾಂಶಿನಿಯವರೆಗೆ ಶಂಖದ ಮಧ್ಯಭಾಗವೆಂದು ತಿಳಿಯಬೇಕು. ಅರ್ಧಾಂಶಿನಿಯ ದರ್ಶನ ಮಾಡಿಕೊಂಡು ಅವಳಿಗೆ ನಮಸ್ಕಾರ ಮಾಡಿದವನು ಅಕ್ಷಯ ಭೋಗ ಭಾಗ್ಯಗಳನ್ನು ಪಡೆಯುತ್ತಾನೆ. ಈ ಪ್ರಪಂಚದಲ್ಲಿ ಅಥವಾ ಮೂರು ಲೋಕಗಳಲ್ಲಿ ಸ್ವರ್ಗ ಮೋಕ್ಷಪ್ರದ ಎಂದು ಪ್ರಸಿದ್ಧವಾದ ಎಲ್ಲ ತೀರ್ಥಗಳಲ್ಲಿ ಈ ಪುರುಷೋತ್ತಮ ತೀರ್ಥವು ತೀರ್ಥರಾಜ ಎಂದು ಕರೆಯಲ್ಪಡುತ್ತದೆ. ಮುಕ್ತಿದಾಯಕ ಕ್ಷೇತ್ರಗಳಲ್ಲಿ ಈ ಕ್ಷೇತ್ರವು ಸಾಯುಜ್ಯಮುಕ್ತಿಯನ್ನು ನೀಡುವ ಮಹಾ ಕ್ಷೇತ್ರವಾಗಿದೆ.

ಇಲ್ಲಿರುವ "ಕೌರುಣ" ಎಂಬ ಕುಂಡವು ಪರಮಾತ್ಮನ ಕರುಣಾಜಲದಿಂದಲೇ ತುಂಬಿದೆ. ಇದರ ಸ್ಪರ್ಶಮಾತ್ರದಿಂದಲೇ ಭವಬಂಧನದಿಂದ ಮುಕ್ತಿ. ಪ್ರಳಯ ಕಾಲದಲ್ಲಿ ಬ್ರಹ್ಮಾಂಡದ ತುಂಬ ಉಕ್ಕಿ ಮಿಕ್ಕಿ ಮೇರೆವರೆದು ಮೊರೆಯುವ ನೀರರಾಶಿಯೆಲ್ಲವೂ ಪ್ರಳಯದ ಕೊನೆಗೆ ಈ ಕೌರುಣ ಕುಂಡಲದಲ್ಲಿಯೇ ವಿಲೀನವಾಗಿ ಹೋಗುವದು. ಯಮಧರ್ಮನೇ! ಇಲ್ಲಿ ನೆಲೆಸಿರುವವರೆಲ್ಲರೂ ಮೋಕ್ಷಕ್ಕೆ ಅಧಿಕಾರಿಗಳು. ಇಲ್ಲಿ ಇದ್ದವರು ನೇರವಾಗಿ ವೈಕುಂಠಕ್ಕೆ ಹೋಗುವರು. ಇದರ ಮೇಲೆ ನಿನ್ನ ಅಧಿಕಾರವು ಎಂದೂ ನಡೆಯಲಾರದು.

ಇಲ್ಲಿಯ ಕಾಮಾಖ್ಯ ಕ್ಷೇತ್ರಪಾಲರ ಮಧ್ಯದಲ್ಲಿ ವಿಪುಲಾಶಕ್ತಿಯು ನಿಂತುಕೊಂಡಿದೆ. ಪುರುಷೋತ್ತಮ ಮಂದಿರದ ದರ್ಶನದಲ್ಲಿ ಹಿರಣ್ಯಕಶಿಪುವಿನ ಹೊಟ್ಟೆ ಸೀಳಿ ಕರುಳಮಾಲೆಯನ್ನೇ ಕೊರಳಿಗೆ ಹಾಕಿಕೊಂಡ ಶ್ರೀನೃಸಿಂಹ ದೇವರು ಬಂದು ನಿಂತಿದ್ದಾನೆ. ಅವನ ದರ್ಶನ ಮಾತ್ರದಿಂದ ಸರ್ವಪಾಪಗಳು ಪರಿಹಾರವಾಗುತ್ತವೆ. ಕಾಶಿಯಲ್ಲಿ ಮರಣ ಹೊಂದಿದ ಪ್ರಾಣಿಗಳ ಕಿವಿಯಲ್ಲಿ ಪರಮೇಶ್ವರನು ಬ್ರಹ್ಮಜ್ಞಾನವನ್ನು ಉಪದೇಶಿಸುತ್ತಾನೆ. ಮುಂದೆ ಅದರಂತೆ ನಡೆದು, ಅಭ್ಯಾಸ ಮಾಡಿ ಸಾಧನಾನುಷ್ಠಾನ ಮಾಡಿದ ಬಳಿಕ ಮೋಕ್ಷವು ದೊರಕುವದು ಎಂದು ಹೇಳುತ್ತಾರೆ. ಆದರೆ ಈ ಪುರುಷೋತ್ತಮ ಕ್ಷೇತ್ರದಲ್ಲಿ ಪ್ರಾಣತ್ಯಾಗ ಮಾಡುವದರಿಂದ ತತ್ಕಾಲದಲ್ಲಿ ಮುಕ್ತಿ ದೊರೆಯುವದು. ಇಲ್ಲಿಯ ಸಮುದ್ರದಲ್ಲಿ ಸ್ನಾನ, ಭಗವಾನ್ ಪುರುಷೋತ್ತಮ ದರ್ಶನ, ಇಲ್ಲಿಯ ವಟವೃಕ್ಷದ ನೆರಳಿನಲ್ಲಿ ತಂಗುವದು ಇವು ಮೂರು ಮೋಕ್ಷದ ಸುಲಭ ಮಾರ್ಗಗಳು. ಇಡೀ ಕ್ಷೇತ್ರದ ಯಾವದೇ ಭಾಗದಲ್ಲಿ ಮೃತ್ಯು ಬಂದರೂ ಆ ಮಾನವನು ಮೋಕ್ಷಕ್ಕೆ ಅಧಿಕಾರಿಯಾಗುತ್ತಾನೆ.

ಈ ಪುರುಷೋತ್ತಮ ಕ್ಷೇತ್ರದ ರಕ್ಷಣೆಗಾಗಿ ಎಂಟು ಶಕ್ತಿಗಳು ನಿರ್ಮಿತವಾಗಿವೆ. ವಟವೃಕ್ಷದ ಬುಡದಲ್ಲಿ ಮಂಗಲಾ, ಪಶ್ಚಿಮದಲ್ಲಿ ವಿಮಲಾ, ವಿಜಯಾ ಐದು ಮೈಲು ಸಮುದ್ರ ಉತ್ತರದಲ್ಲಿ ಅರ್ಧಾಂಶಿನೀ ಮತ್ತು ಲಂಬಾ, ದಕ್ಷಿಣದಲ್ಲಿ ಕಾಲರಾತ್ರಿ, ಪೂರ್ವದಲ್ಲಿ ಮರೀಚಿಕಾ ಮತ್ತು ಕಾಲರಾತ್ರಿಯ ಹಿಂದೆ ಚಂಡರೂಪಾ ಎಂಬ ಶಕ್ತಿಯು ಸಂಸ್ಥಿತವಾಗಿವೆ. ಈ ಎಂಟೂ ಶಕ್ತಿಗಳ ದರ್ಶನ ನಾಮ ಸಂಕೀರ್ತನೆಯಿಂದ ಎಲ್ಲ ಪಾಪಗಳು ನಾಶ ಹೊಂದುತ್ತವೆ. ಈ ಎಂಟೂ ಶಕ್ತಿಗಳು ಮಹಾಸತಿ ಪಾರ್ವತಿದೇವಿಯ ಒಂದೊಂದು ಪ್ರತಿರೂಪಗಳೇ. ಪಾರ್ವತಿಯ ರೂಪಗಳ ಈ ಎಂಟು ಪ್ರಭೇದಗಳನ್ನು ನೋಡಿ ಸ್ವಯಂ ಶಂಕರನು ತಾನು ಕೂಡ ಎಂಟು ರೂಪಗಳಲ್ಲಿ ವ್ಯಕ್ತನಾಗಿ ಇಲ್ಲಿಯ ಕ್ಷೇತ್ರಸ್ವಾಮಿಯಾದ ಪುರುಷೋತ್ತಮನನ್ನು ಸೇವೆ ಮಾಡುತ್ತಾನೆ.

ಕಪಾಲಮೋಚನ, ಕ್ಷೇತ್ರಪಾಲ, ಯಮೇಶ್ವರ, ಮಾರ್ಕಂಡೇಯೇಶ್ವರ, ಈಶಾನ ಬಿಲ್ವೇಶ್ವರ, ನೀಲಕಂಠ ಮತ್ತು ವಟೇಶ್ವರ ಎಂಬ ಹೆಸರಿನ ಮಹಾದೇವರ ಎಂಟು ಶಿವಲಿಂಗಗಳನ್ನು ಪೂಜೆಮಾಡಿ ಭಕ್ತಿಯಿಂದ ಆರಾಧಿಸಿದರೆ ಮನುಷ್ಯನು ಮುಕ್ತಿಯನ್ನು ಹೊಂದುತ್ತಾನೆ. ಈ ಕ್ಷೇತ್ರದಲ್ಲಿ ಮರಣ ಹೊಂದಿದವರ ಮೇಲೆ ಯಮರಾಜನ ಅಧಿಕಾರವು ಎಷ್ಟು ಮಾತ್ರಕ್ಕೂ ನಡೆಯದು. ಅಲ್ಲಿಮೃತರನ್ನೆಲ್ಲ ಮೋಕ್ಷಕ್ಕೆ ಕಳಿಸುವ ಹೊಣೆಯನ್ನು ಹೊತ್ತು ನಿಂತಿದ್ದಾನೆ ಇಲ್ಲಿ ಆ ಭಕ್ತವತ್ಸಲ ಭಗವಂತ. ಆದರೆ ಯಮರಾಜನ ಅತಿಶಯ ಪ್ರಾರ್ಥನೆಯನ್ನು ಮನ್ನಿಸಿ ಆ ಭಗವಂತನು ಲಕ್ಷ್ಮೀ ಹಾಗೂ ಸುದರ್ಶನ ಚಕ್ರಗಳಿಂದ ಕೂಡಿಕೊಂಡು ಅವ್ಯಕ್ತನಾಗಿ ಬಂಗಾರ ಬಣ್ಣದ ಇಲ್ಲಿಯ ಮಳಲು ರಾಶಿಯಿಂದ ಆವೃತನಾಗಿ ಈ ಉತ್ತಮವಾದ ತೀರ್ಥದಲ್ಲಿ ಅದೃಶ್ಯ ರೂಪದಿಂದ ಇರುವನು.''

ತಮ್ಮ ಎದುರು ಬಂದು ಭಕ್ತಿಯಿಂದ ಪ್ರಾರ್ಥನೆಮಾಡಿ ಕೈಜೋಡಿಸಿ ನಿಂತು ಕೊಂಡ ಯಮಧರ್ಮನಿಗೆ ಇಷ್ಟೆಲ್ಲ ಮಾತುಗಳನ್ನು ಹೇಳಿ, ವಿಷಯಗಳನ್ನು ತಿಳಿಸಿ, ಅನುಗ್ರಹವನ್ನು ಮಾಡಿ ಲಕ್ಷ್ಮೀದೇವಿಯು ಬ್ರಹ್ಮದೇವರ ಕಡೆಗೆ ತಿರುಗಿನೋಡಿದಳು. ಬ್ರಹ್ಮದೇವನು ಬಹಳ ಹೊತ್ತಿನವರೆಗೆ ಈ ಪುರಷೋತ್ತಮ ತೀರ್ಥದ ಬಗೆಯನ್ನು ಚಿಂತಿಸಿ ಹರಿಧ್ಯಾನದಲ್ಲಿ ಚಿರಕಾಲ ಮಗ್ನನಾಗಿ ನಿಂತುಕೊಂಡ. ಬಳಿಕ ಕಣ್ಣು ತೆರೆದು ನೋಡಿದನು. ಲಕ್ಷ್ಮೀನಾರಾಯಣರು ಪ್ರಸನ್ನಚಿತ್ತರಾಗಿ ಅಲ್ಲಿ ಮಂಡಿಸಿದ್ದರು. ಅಲ್ಲಿಯೇ ಯಮಧರ್ಮನು ಕೈಮುಗಿದುಕೊಂಡು ಕುಳಿತಿದ್ದ. ಅವನಿಗೆ ತಿಳಿಸಬೇಕಾದ ವಿಷಯವನ್ನು ಹೇಳಿದ ಬಳಿಕ ಲಕ್ಷ್ಮೀದೇವಿಯು ಬ್ರಹ್ಮದೇವರ ಕಡೆಗೆ ನೋಡಿ ನುಡಿದಳು.

**ಲಕ್ಷ್ಮೀ:-** ''ಸತ್ಯಯುಗದಲ್ಲಿ ಇಂದ್ರದ್ಯುಮ್ನ ಎಂಬ ರಾಜನು ಜನಿಸಲಿರುವನು. ಅವನು ಪರಮ ಭಗವದ್ಭಕ್ತ. ಶಾಸ್ತ್ರದಲ್ಲಿ ಪ್ರಕಾಂಡ ಪಂಡಿತನೂ ಆಗುವನು. ಆ ಇಂದ್ರದ್ಯುಮ್ನ ರಾಜನ ಮೇಲೆ ಪರಮಾನುಗ್ರಹವನ್ನು ಮಾಡಲಿಕ್ಕಾಗಿ ಈ ನಾರಾಯಣನು ಒಂದು ಕಟ್ಟಿಗೆಯಿಂದ ಉತ್ಪನ್ನವಾದ ನಾಲ್ಕು ಪ್ರತಿಮೆಗಳ ರೂಪದಲ್ಲಿ ಅಭಿವ್ಯಕ್ತನು ಆಗುವನು. ಆ ಕಟ್ಟಿಗೆಯ ನಾಲ್ಕೂ ಪ್ರತಿಮೆಗಳನ್ನು ಸ್ವಯಂ ವಿಶ್ವಕರ್ಮನೇ ನಿರ್ಮಿಸುವನು. ನೀನು ಇಂದ್ರದ್ಯುಮ್ನ ರಾಜರ್ಷಿಯ ಮೇಲೆ ಪ್ರಸನ್ನನಾಗಿ ಆ ನಾಲ್ಕೂ ಪ್ರತಿಮೆಗಳನ್ನು ಸ್ಥಾಪನೆ ಮಾಡು.''

ಲಕ್ಷ್ಮೀದೇವಿಯ ಮಾತನ್ನು ಕೇಳಿ ಬ್ರಹ್ಮದೇವರಿಗೂ ಯಮಧರ್ಮನಿಗೂ ಅತ್ಯಂತ ಸಂತೋಷವಾಯಿತು. ಅವರಿಬ್ಬರು ಲಕ್ಷ್ಮೀನಾರಾಯಣನನ್ನು ವಂದಿಸಿ ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

ಮುನಿಗಳೇ! ಈಗ ಆ ಪುರುಷೋತ್ತಮ ಕ್ಷೇತ್ರದಲ್ಲಿ ಇಂದ್ರದ್ಯುಮ್ನ ರಾಜನ ಭಕ್ತಿಯಿಂದ ಸಂತುಷ್ಟನಾಗಿ ಭಗವಾನ್ ನಾರಾಯಣನು ಕಾಷ್ಠಮಯವಾದ ಶರೀರವನ್ನು ಧಾರಣಮಾಡಿ ಲೋಕೋದ್ಧಾರಕ್ಕಾಗಿ ನೀಲಾಚಲದ ಗುಹೆಯಲ್ಲಿ ವಿರಾಜಮಾನನಾಗಿದ್ದಾನೆ. ಕರುಣೆಯ ಸಮುದ್ರನೇ ಆದ ಶ್ರೀಹರಿಯು ಈ ನೀಲಾಚಲ ಗುಹೆಯಲ್ಲಿ ಇದ್ದು ಕಾಷ್ಠನಿರ್ಮಿತವಾದ ಬಲರಾಮ, ಸುಭದ್ರಾ ಮತ್ತು ಸುದರ್ಶನ ಚಕ್ರದ ಪ್ರತಿಮೆಗಳೊಂದಿಗೆ ಕೂಡಿ ತಾನು ಅದರಂತೆ ದಾರುಮಯವಾದ ದೇಹವನ್ನು ಧರಿಸಿ ಶರಣಾಗತರನ್ನು ರಕ್ಷಣೆ ಮಾಡುತ್ತಾ ನಿಂತುಕೊಂಡಿದ್ದಾನೆ. ಭಗವಂತನ ಈ ಕಾಷ್ಠ ಪ್ರತಿಮೆಯ ದರ್ಶನವನ್ನು ಮಾಡಿಕೊಂಡವರು ಸಂಸಾರದಿಂದ ಪಾರಾಗುತ್ತಾರೆ. ಮುನೀಶ್ವರರೇ, ನೀವು ಕೂಡ ಈ ಜಗನ್ನಾಥ ಸ್ವಾಮಿಗೆ ಶರಣು ಹೋಗಿರಿ. ಸ್ವಲ್ಪ ಭಕ್ತಿಯನ್ನು ಮಾಡಿದರೂ ಸಾಕು. ಈ ಭಗವಂತನು ಭಕ್ತರ ನೂರಾರು ಸಾವಿರಾರು ಅಪರಾಧಗಳನ್ನೂ ಕ್ಷಮಿಸಿಬಿಡುತ್ತಾರೆ.

ಕುರುಕ್ಷೇತ್ರದಲ್ಲಿ ಹಿಂದೆ ಒಬ್ಬ ಬ್ರಾಹ್ಮಣನಿದ್ದನು. ಅವನಿಗೆ ಇನ್ನೊಬ್ಬ ಕ್ಷತ್ರಿಯ ಮಿತ್ರನು ಇದ್ದನು. ಇಬ್ಬರಲ್ಲಿಯೂ ಅನ್ಯೋನ್ಯ ಸಂಬಂಧವು ಮಧುರವಾಗಿದ್ದಿತು. ಒಮ್ಮೆ ಇಬ್ಬರೂ ಕೂಡಿ ಸ್ನೇಹದಿಂದ ಪರದೇಶ ಯಾತ್ರೆಯನ್ನು ಮಾಡಿಕೊಂಡು ಬಂದರು. ಅವರಿಬ್ಬರ ಆಹಾರ, ವಿಹಾರ, ವಿಚಾರ, ಅಭಿರುಚಿ, ಅಭಿನಿವೇಶ ಒಂದೇ ಮಾದರಿಯವು ಆಗಿದ್ದವು. ಸದಾಚಾರದ ಮಾರ್ಗದಿಂದ ಇಬ್ಬರೂ ಭ್ರಷ್ಟರಾಗಿದ್ದರು ಸ್ವಚ್ಛಂದವಾಗಿ ಶಾಸ್ತ್ರನಿಷಿದ್ಧ ಆಚರಣೆಯನ್ನು ಇಬ್ಬರೂ ಮಾಡುತ್ತಿದ್ದರು. ಮದ್ಯ, ಮಾನಿನಿ, ಮೋಹ, ಕಳವು, ಕೊಲೆ ಮುಂತಾದ ಎಲ್ಲ ಪಾಪಗಳನ್ನು ಅವರು ಮಾಡಿ ಮುಗಿಸಿದ್ದರು. ಹೀಗೆ ಅವರ ಅರ್ಧ ಆಯುಷ್ಯವು ಕಳೆದುಹೋಯಿತು. ಒಂದು ದಿನ ಅವರಿಬ್ಬರು ದುರಾಚಾರಿಗಳು ತಿರುಗಾಡುತ್ತ ಒಂದು ಯಜ್ಞ ಶಾಲೆಗೆ ಬಂದರು. ಅಲ್ಲಿ ಒಂದು ಕಡೆ ಪರಮಾತ್ಮನ ಸ್ತೋತ್ರಪಾಠ, ಇನ್ನೊಂದು ಕಡೆ ವೇದಾಂತ ಚರ್ಚೆಗಳು ನಡೆದಿದ್ದವು. ಅವರಿಬ್ಬರೂ ಯಜ್ಞಶಾಲೆಯಲ್ಲಿ ಹೋಮ ನಡೆಯುವಲ್ಲಿ ಕುಳಿತು ಅನಂತರ ಸ್ತೋತ್ರ ನಡೆಯುವಲ್ಲಿಗೆ ಬಂದರು. ಅಲ್ಲಿ ನಡೆದ ವೇದೋಕ್ತ ಮಂತ್ರ ಸ್ತೋತ್ರಗಳನ್ನು ಕಿವಿತೆರೆದು ಕೇಳಿದರು. ಅನಂತರ ಶಾಸ್ತ್ರ ಚರ್ಚೆ ನಡೆದಲ್ಲಿ ಬಂದು ವೇದಾಂತ ವಿಚಾರವನ್ನು ತುಸು ಹೊತ್ತು ಕುಳಿತು ಕೇಳಿದರು. ಇದರಿಂದ ಅವರಿಗೆ ಮನಸ್ಸು ಪರಿವರ್ತನೆ ಆಯಿತು. ಧರ್ಮದ ಬಗ್ಗೆ ಇಬ್ಬರಿಗೂ ಶ್ರದ್ಧೆ ಉದಿಸಿತು.

ಅವರಲ್ಲಿ ಬ್ರಾಹ್ಮಣನ ಹೆಸರು ಪುಂಡರೀಕ. ಅವನ ಕ್ಷತ್ರಿಯ ಮಿತ್ರನ ಹೆಸರು ಅಂಬರೀಷ. ಅವರಿಬ್ಬರಿಗೂ ತಮ್ಮ ಉಚ್ಚಜಾತಿಯ ನೆನಪು ಬಂದಿತು. ತಾವು ಈ ವರೆಗೆ ಮಾಡಿದ ಅನಾಚಾರ, ಪಾಪಾಚಾರಗಳ ನೆನಪೂ ಆಯಿತು. ಇದರಿಂದ ಅವರಿಗೆ ಬಹಳೇ ಪಶ್ಚಾತ್ತಾಪವಾಯಿತು. ಒಬ್ಬರಿಗೊಬ್ಬರು ಹೇಳಿಕೊಂಡರು- ''ನಾವಿಬ್ಬರೂ ಸೇರಿ ಭಯಂಕರ ಪಾಪಕೃತ್ಯಗಳನ್ನು ಮಾಡಿದ್ದೇವೆ. ಈ ನಮ್ಮ ಪಾಪಗಳಿಗೆ ಯಾವ ಪ್ರಾಯಶ್ಚಿತ್ತವನ್ನೂ ಶಾಸ್ತ್ರದಲ್ಲಿ ಹೇಳಿಲ್ಲ. ನಾವು ಮಾಡಿದ ವಿಲಕ್ಷಣ ಪಾಪಗಳ ಹೆಸರೇ ಗೊತ್ತಿಲ್ಲ ಪಾಪ ಆ ಶಾಸ್ತ್ರ ಬರೆದವರಿಗೆ. ಇಂಥ ಘೋರ ಪಾಪಗಳಿಗೆ ಅವರು ಏನೆಂದು ಪ್ರಾಯಶ್ಚಿತ್ತ ಹೇಳುವರು! ಈ ನಮ್ಮ ದಾರುಣವಾದ ಪಾಪಗಳಿಗೆ ಪ್ರಾಯಶ್ಚಿತ್ತವು ಅತ್ಯಂತ ದುರ್ಲಭ. ಆದರೂ ಕೂಡ ನಾವು ಈಗ ಯಜ್ಞಶಾಲೆಯಲ್ಲಿರುವ ಬ್ರಾಹ್ಮಣರನ್ನು ಉದ್ದೇಶಿಸಿ ಕೇಳೋಣ ನಮ್ಮ ಉದ್ಧಾರದ ಉಪಾಯವನ್ನು.''

ಹೀಗೆ ನಿಶ್ಚಯ ಮಾಡಿಕೊಂಡು ಅವರಿಬ್ಬರು ಮಿತ್ರರು ಯಜ್ಞಶಾಲೆಯಲ್ಲಿ ಕುಳಿತುಕೊಂಡ ಬ್ರಾಹ್ಮಣರಿಗೆ ನಮಸ್ಕಾರ ಮಾಡಿದರು. ಅವರ ಮುಂದೆ ತಾವು ಈ ವರೆಗೆ ಮಾಡಿದ ತಮ್ಮ ಸಣ್ಣದೊಡ್ಡ ಪಾಪಗಳ ವಿವರವಾದ ಯಾದಿಯನ್ನೇ ಮಾಡಿಕೊಟ್ಟರು. ಇವರಿಬ್ಬರ ಮಾತುಗಳನ್ನು ಕೇಳಿಕೊಂಡು ಯಜ್ಞಶಾಲೆಯ ಬ್ರಾಹ್ಮಣರು ತುಸು ಹೊತ್ತು ಕಣ್ಣು ಮುಚ್ಚಿಕೊಂಡು ಕುಳಿತುಕೊಂಡರು. ಯಾವ ಮಾತನ್ನು ಆಡಲಿಲ್ಲ. ಕೆಲ ಸಮಯದ ಬಳಿಕ ಅಲ್ಲಿ ಕುಳಿತ ವೈಷ್ಣವ ಎಂಬ ಹೆಸರಿನ ಬ್ರಾಹ್ಮಣನು ನಕ್ಕು ಅವರಿಬ್ಬರಿಗೂ ಹೇಳಿದನು. ''ಮಿತ್ರರೇ! ನೀವು ಮಾಡಿದ ಪಾಪಗಳು ಘೋರಾದ್ ಘೋರತರ. ಇವುಗಳಿಗೆ ಯಾವ ಪ್ರಾಯಶ್ಚಿತ್ತವೂ ಇಲ್ಲ. ಆದರೂ ನೀವು ಭಯಪಡುವ ಕಾರಣವಿಲ್ಲ. ಈ ಘೋರ ಪಾಪ ಪರಿಹಾರಕ್ಕಾಗಿ ಉಪಾಯವನ್ನು ಹೇಳುತ್ತೇನೆ ಕೇಳಿರಿ. ನೀವಿಬ್ಬರೂ ಈಗಲೇ ಪುರುಷೋತ್ತಮ ಕ್ಷೇತ್ರಕ್ಕೆ ಹೋಗಿರಿ.

ಅಲ್ಲಿ ಇಂದ್ರದ್ಯುಮ್ನ ರಾಜರ್ಷಿಯ ಮೇಲೆ ಅನುಗ್ರಹವನ್ನು ಮಾಡಲಿಕ್ಕಾಗಿ ಭಗವಾನ್ ನಾರಾಯಣನು ಕಟ್ಟಿಗೆಯ ದೇಹವನ್ನು ಧರಿಸಿ ಬಂದು ನಿಂತುಕೊಂಡಿದ್ದಾನೆ. ಶಂಖ ಚಕ್ರ ಗಧಾಧಾರಿಯಾದ ಆ ಜಗನ್ನಾಥನ ಆರಾಧನೆಯನ್ನು ನೀವು ಸರಿಯಾಗಿ ಭಕ್ತಿಯಿಂದ ಮಾಡಿದರೆ ನೀವು ಬಯಸಿದಂತೆ ನೀವು ಹಿಂದೆ ಮಾಡಿದ ಪಾಪಗಳೆಲ್ಲವೂ ನಶಿಸಿ ಹೋಗುವವು. ಮುಂದೆ ನೀವು ಮೋಕ್ಷವನ್ನು ಕೂಡ ಹೊಂದಲು ಸಮರ್ಥರಾಗುವಿರಿ. ಇದರಲ್ಲಿ ಸಂದೇಹವಿಲ್ಲ. ನೀಲಾಚಲದ ಗುಹೆಯಲ್ಲಿ ಕಾಷ್ಠಮಯ ಶರೀರದಿಂದ ನಿಂತುಕೊಂಡ ಜಗನ್ನಾಥ ಸ್ವಾಮಿಯು ಸಂದರ್ಶನದಿಂದ ಮಾನವರ ಎಲ್ಲ ಪಾಪಗಳು ಕ್ಷಯಿಸಿ ಹೋಗುವವು. ಮೋಕ್ಷವು ಕೂಡ ಅವರಿಗೆ ದೊರೆಯುವದು. ಇದು ಧ್ರುವ ಸತ್ಯ. ಆದುದರಿಂದ ನೀವಿಬ್ಬರು ಉತ್ಕಲದೇಶದಲ್ಲಿ ದಕ್ಷಿಣ ಸಮುದ್ರದ ತೀರದಲ್ಲಿ, ನೀಲಾಚಲ ಪರ್ವತದ ಶಿಖರದ ಮೇಲೆ ವಾಸಮಾಡುತ್ತಿರುವ ಸರ್ವವ್ಯಾಪಿಯಾದ ಶ್ರೀ ಜಗನ್ನಾಥಸ್ವಾಮಿಯನ್ನೇ ಶರಣು ಹೋಗಿರಿ. ಕರುಣೆಯ ಕೈವಾರಿಯಾದ ಆ ಲಕ್ಷ್ಮೀಪತಿಯು ಖಂಡಿತವಾಗಿಯೂ ನಿಮ್ಮನ್ನು ನುಗ್ರಹಿಸುವನು. ನಿಮ್ಮ ಮನೋರಥವನ್ನ ಪೂರ್ಣ ಮಾಡುವನು.''

ವೈಷ್ಣವ ಮಹಾತ್ಮನ ಈ ಆದೇಶವನ್ನು ಕೇಳಿ ಆ ಇಬ್ಬರೂ ಮಿತ್ರರು ಅತ್ಯಂತ ಸಂತೋಷದಿಂದ ಅಲ್ಲಿಂದ ಹೊರಟರು. ಪುರುಷೋತ್ತಮ ಕ್ಷೇತ್ರದ ದಾರಿಹಿಡಿದು ನಡೆದರು.

## ಪುಂಡರೀಕ-ಅಂಬರೀಷರು ಮಾಡಿದ ಸ್ತೋತ್ರ

**ಜೈಮಿನಿ:-** ಆ ಇಬ್ಬರು ಸ್ನೇಹಿತರ ಮನಸ್ಸಿನಲ್ಲಿ ನಿಜವಾಗಿಯೂ ವೈರಾಗ್ಯವು ಉದಿಸಿತ್ತು. ತಾವು ಮಾಡಿದ ದುಷ್ಕರ್ಮಗಳಿಗೆ ಪಶ್ಚಾತ್ತಾಪವೂ ಅವರಿಗೆ ಸಾಕಷ್ಟು ಆಗಿದ್ದಿತು. ಅವರು ಆ ಕ್ಷಣದಿಂದಲೇ ತಮ್ಮ ಮಿತ್ರರಾದ ಇನ್ನೂ ಅನೇಕ ದುಷ್ಟರ ಸಂಗ ಸಹವಾಸಗಳನ್ನು ಬಿಟ್ಟುಬಿಟ್ಟರು. ತಮ್ಮ ಮನಸ್ಸಿನಲ್ಲಿಯೇ ಸದಾ ಸರ್ವದಾ ವಿಷ್ಣುವಿನ ಧ್ಯಾನ ಗಾನವನ್ನು ಮಾಡತೊಡಗಿದರು. ಶುದ್ಧವಾದ ಆಹಾರವನ್ನು ಸ್ವೀಕರಿಸಿ ಏಕಾದಶಿ ಮೊದಲಾದ ವ್ರತಗಳನ್ನು ಪಾಲಿಸುತ್ತ ಮಡಿಯಿಂದಲೇ ಮಾರ್ಗವನ್ನು ನಡೆದು ಪುರುಷೋತ್ತಮ ಕ್ಷೇತ್ರಕ್ಕೆ ಬಂದು ಮುಟ್ಟಿದರು. ಆದರೆ ಅಲ್ಲಿ ಬಂದ ಬಳಿಕ ದುರ್ದೈವದಿಂದ ಅವರಿಗೆ ಭಗವಂತನ ದರ್ಶನವು ಆಗಲಿಲ್ಲ. ಬಹಳ ದುಃಖವಾಯಿತು ಇದರಿಂದ ಅವರಿಗೆ. ಭಗವಂತನ ದರ್ಶನ ಆಗುವವರೆಗೆ ನಾವು ಯಾವ ಆಹಾರವನ್ನು

ಮುಟ್ಟುವದು ಬೇಡ'' ಎಂದು ನಿರ್ಧರಿಸಿ ಅವರು ಉಪವಾಸವಿದ್ದೇ ಭಗವಂತನ ನಾಮಸ್ಮರಣವನ್ನು ಅಖಂಡವಾಗಿ ಮಾಡತೊಡಗಿದರು.

ಮೂರು ದಿನಗಳು ಹೀಗೆ ಕಳೆದವು. ಒಂದು ಕ್ಷಣವೂ ವಿರಾಮ ಇಲ್ಲದೆ ಅವರು ಭಗವಂತನ ಧ್ಯಾನ ಗಾನ ಭಜನ ಸಂಕೀರ್ತನಗಳನ್ನು ಅವಿಚ್ಛಿನ್ನವಾಗಿ ನಡೆಸಿದರು. ಮೂರನೇ ದಿನ ರಾತ್ರಿ ಅವರಿಗೆ ಒಂದು ಜ್ಯೋತಿಷ್ಪುಂಜದ ದರ್ಶನವಾಯಿತು. ಅಷ್ಟಕ್ಕೆ ಅವರು ನಿಲ್ಲಿಸಲಿಲ್ಲ ತಮ್ಮ ಧ್ಯಾನ ಭಜನಾ ಸಪ್ತಾಹ ಕಾರ್ಯಕ್ರಮವನ್ನು ಮತ್ತೆ ಮೂರು ದಿನ ಹಾಗೇ ಉಪವಾಸವಿದ್ದು ಜಗನ್ನಾಥನ ಅಖಂಡ ಧ್ಯಾನವನ್ನು ಮಾಡಿದರು. ಏಳನೇಯ ದಿನ ರಾತ್ರಿ ಅವರಿಗೆ ಪರಮಾತ್ಮನ ನಿಜವಾದ ಸ್ವರೂಪದ ದರ್ಶನ ಆಯಿತು.

ಅವರ ಅಂತರಂಗದಲ್ಲಿ ಆಗಲೇ ದಿವ್ಯ ಜ್ಞಾನೋದಯವು ಆಯಿತು. ಅವರ ಪಾಪಗಳೆಲ್ಲವೂ ಪ್ರಣಷ್ಟವಾಗಿದ್ದವು. ಭಗವಾನ್ ಜಗನ್ನಾಥ ದೇವನ ಸಾಕ್ಷಾತ್ ದರ್ಶನವು ಆಗ ಅವರಿಗೆ ಆಯಿತು. ಅವರು ಕಣ್ ತುಂಬ ನೋಡಿದರು ಆ ಭಗವಂತನ ದಿವ್ಯರೂಪವನ್ನು. ಶಂಖ ಚಕ್ರ ವಿಭೂಷಿತವಾದ ಪೀತಾಂಬರಧಾರಿ ಆ ಭಗವನ್ ಮೂರ್ತಿಯು ರತ್ನದ ಪಾದುಕೆಗಳ ಮೇಲೆ ತನ್ನ ಅಡಿದಾವರೆಗಳನ್ನು ಇರಿಸಿ ನಿಂತುಕೊಂಡಿತ್ತು. ಪಕ್ಕದಲ್ಲಿ ಮಹಾಲಕ್ಷ್ಮೀ, ಎದುರುಗಡೆ ಭಗವಂತನ ಗಾನ ಮಾಡುವ ಪ್ರಹ್ಲಾದಾದಿ ವೈಷ್ಣವರು, ವಕ್ಷಸ್ಥಳದಲ್ಲಿ ಲಕ್ಷ್ಮೀದೇವಿ, ಕಂಧರದಲ್ಲಿ ಕೌಸ್ತುಭಮಣಿ, ಇಂಥ ದಿವ್ಯವಾದ ಭಗವನ್ ಮೂರ್ತಿಯನ್ನು ಕಂಡಕೂಡಲೇ ಅವರಿಬ್ಬರೂ ಮಿತ್ರರಿಗೆ ತತ್ವಜ್ಞಾನವು ಸ್ಫುರಿಸಿ ಅವರು ಸರ್ವವಿದ್ಯಾಪಾರಂಗತರಾದರು. ಅವರಿಬ್ಬರು ಮೂರುಸಲ ಆ ಜಗನ್ನಾಥನಿಗೆ ಪ್ರದಕ್ಷಿಣೆಯನ್ನು ಹಾಕಿ ಐದುಸಲ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಭಕ್ತಿಯಿಂದ ಭಗವಂತನ ಸ್ತೋತ್ರವನು ಮಾಡಿದರು.

**ಪುಂಡರೀಕ:-** ಜಗದಾಧಾರನಾದ ಜಗನ್ನಾಥ! ನಿನಗೆ ನಮ್ಮ ನಮಸ್ಕಾರ! ನಾರಾಯಣ! ನಾವು ನಿನಗೆ ಶರಣು ಬಂದಿದ್ದೇವೆ. ದೀನಬಂಧುವಾದ ನೀನು ನಮ್ಮ ಮೇಲೆ ದಯೆದೋರು. ಅಕಸ್ಮಾತ್ ನಿನ್ನ ನಾರಾಯಣ ಎಂಬ ನಾಲ್ಕು ಅಕ್ಷರದ ನಾಮವನ್ನು ಉಚ್ಚರಿಸಿದರೆ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ವಿಧವಾದ ಪುರುಷಾರ್ಥಗಳು ಸಿದ್ಧಿಸುವವು. ನಾವು ಈ ವರೆಗೇ ಅನೇಕ ಪಾಪಕೃತ್ಯಗಳನ್ನು ಮಾಡಿ ಮಹಾಪಾಪಿಷ್ಠರಾಗಿದ್ದೇವೆ. ನಮಗೆ ಉದ್ಧಾರದ ಬೇರೆ ಯಾವ ಮಾರ್ಗವೂ ತೋರದೆ ನಿನ್ನ ಚರಣಗಳಿಗೆ ಶರಣು ಬಂದಿದ್ದೇವೆ ನಿನ್ನ ಪಾದಕಮಲಗಳಲ್ಲಿ ಧೃಢತರವಾದ ಭಕ್ತಿಯನ್ನು ಕೊಡು. ಭಯಂಕರವಾದ ಈ ಸಂಸಾರ ಸಾಗರದಿಂದ ನಮ್ಮನ್ನು ಪಾರು ಮಾಡು. ನಿನ್ನ ದಿವ್ಯವಾದ ಜ್ಞಾನವನ್ನು ನಮಗೆ ಕರುಣಿಸಿ ಧ್ಯಾನವನ್ನು ನಮ್ಮಿಂದ ನೀನೇ ಮಾಡಿಸಿ ಆ ಧ್ಯಾನಾನಂದದ ಸಮುದ್ರದಲ್ಲಿ ನಾವು ಮುಳುಗುವಂತೆ ಮಾಡು.'' ಹೀಗೆ ಜಗನ್ನಾಥನನ್ನು ಸ್ತೋತ್ರಮಾಡಿ ಬ್ರಾಹ್ಮಣನಾದ ಪುಂಡರೀಕನು ಗದ್ಗದಿತ ಕಂಠನಾಗಿ ಕಣ್ಣಿನಿಂದ ಕಂಬನಿಯ ಕೋಡಿಯನ್ನೇ ಹರಿಸುತ್ತ 'ತ್ರಾಹಿ ಕೃಷ್ಣ' 'ಪಾಹಿ ಜಗನ್ನಾಥ' ಎಂದು ಕೂಗಿ ಒದರಿ, ಆ ಜಗನ್ನಾಥನ ಕಾಲುಗಳ ಮೇಲೆ ಉರುಳಿಬಿದ್ದನು. ಅನಂತರ ಕ್ಷತ್ರಿಯನಾದ ಅಂಬರೀಷನು ಕೈ ಮುಗಿದು ಸ್ತೋತ್ರ ಮಾಡತೊಡಗಿದನು.

**ಅಂಬರೀಷ:-** ಸರ್ವಾಂತರ್ಯಾಮಿಯಾದ ಜಗನ್ನಾಥ ಸ್ವಾಮಿಯೇ! ನಿನಗೆ ನನ್ನ ಅನಂತ ನಮಸ್ಕಾರ. ನಿನ್ನ ತಲೆ, ಭುಜ, ಪಾದ, ಕಣ್ಣು ಎಲ್ಲವೂ ಅಸಂಖ್ಯ. ನೀನು

ವಿಶ್ವಮೂರ್ತಿ. ನೀನು ಮೂವತ್ತಾರು ತತ್ವಗಳ ಆಚೆಗೆ ಸರ್ವೋತ್ತಮನಾಗಿ ಇರುವೆ. ಅಂಡಜ, ಸ್ವೇದಜ, ಉದ್ಭಿಜ, ಜರಾಯುಜ ಎಂದು ನಾಲ್ಕು ವಿಧವಾದ ಪ್ರಾಣಿಗಳಿಗೆಲ್ಲ ನೀನೇ ಆಧಾರ. ನಿನ್ನ ಕಾಲಿನಿಂದ ಪ್ರಕಟವಾದ ಗಂಗೆಯೇ, ಬ್ರಹ್ಮಹತ್ಯಾದಿ ಪಾಪಗಳನ್ನು ದೂರ ಮಾಡಿ ಜನರನ್ನು ಉದ್ಧರಿಸುತ್ತಾಳೆ. ನಿನ್ನ ದರ್ಶನದಿಂದ ಪಾಪಿಗಳ ಉದ್ಧಾರ ಆಗುವದು ಏನು ಆಶ್ಚರ್ಯ? ನಿನ್ನ ನಾಮಸ್ಮರಣೆ ಮಾತ್ರದಿಂದಲೇ ಸರ್ವಸಿದ್ಧಿಗಳು ಕರಗತವಾಗುವವು. ನಿನ್ನ ಪಾದೋದಕವನ್ನು ಸೇವಿಸಿದವರ ಸಂತಾಪವು ದೂರಾಗುವದು. ಭಗವನ್! ನಾವು ಈಗ ಮೂರು ತಾಪಗಳಿಂದ ಅಸಂಖ್ಯ ಪಾಪಗಳಿಂದ ಪೀಡಿತರಾಗಿದ್ದೇವೆ. ನಿನ್ನ ಚರಣದಲ್ಲಿ ನಮಗೆ ಧೃಡವಾದ ಭಕ್ತಿಯನ್ನು ಕೊಡು. ಜಗನ್ನಾಥಾ! ನಾನು ನಿನ್ನ ಚರಣಗಳಿಗೆ ಸಹಸ್ರವಂದನೆಗಳನ್ನು ಮಾಡಿ ಒಂದೇ ಯಾಚನೆಯನ್ನು ಮಾಡುತ್ತಿದ್ದೇನೆ. ನಾನು ಬದುಕಿ ಇರುವವರೆಗೆ ನಿನ್ನ ಚರಣಕಮಲಗಳಲ್ಲಿ ನನ್ನ ಭಕ್ತಿಯು ಅವಿಚ್ಛಿನ್ನವಾಗಿ ಗಟ್ಟಿಯಾಗಿ ಇರಲಿ. ನಮ್ಮನ್ನು ಉದ್ಧರಿಸಲು ನಿನ್ನ ಭಕ್ತಿಯ ಹೊರತು ಬೇರೆ ಯಾವ ಉಪಾಯವೂ ಇಲ್ಲ. ಆಶ್ರಯವೂ ಇಲ್ಲ. ಶರಣಾಗತನಾದ ನನ್ನ ಮೇಲೆ ನಿನ್ನ ಕೃಪಾದೃಷ್ಟಿ ಹರಿಸು.''

ಹೀಗೆ ಸ್ತೋತ್ರವನ್ನು ಮಾಡುತ್ತ ಆ ಅಂಬರೀಷನು ಆ ಜಗನ್ನಾಥ ಸ್ವಾಮಿಯ ಚರಣ ಸಮೀಪದಲ್ಲಿ ಬಂದು -

''ಪ್ರಭೋ ಪ್ರಸೀದ'' ''ಪ್ರಭೋ ಪ್ರಸೀದ''

ಮಹಾಪ್ರಭುವೇ ಪ್ರಸನ್ನನಾಗು ಎಂದು ಉಚ್ಚರಿಸುತ್ತ ದಂಡದಂತೆ ಉರುಳಿಬಿದ್ದನು. ಅನಂತರ ಪರಮಾತ್ಮನ ಪಾದಸನ್ನಿಧಿಯಲ್ಲಿ. ಅವನ ಅಡಿಯ ಹುಡಿಯಲ್ಲಿ ಉರುಳಿ ಹೊರಳಿ ಎದ್ದ ಆ ಇಬ್ಬರು ಮಿತ್ರರು ಕಣ್ಣುತೆರೆದು ನೋಡಿದರು. ದಿವ್ಯ ಸಿಂಹಾಸನದಲ್ಲಿ ವಿರಾಜಮಾನನಾದ ಶ್ಯಾಮಸುಂದರ ಶರೀರದ ಪುರುಷೋತ್ತಮನು ಅವರ ಚರ್ಮ ಚಕ್ಷುಸ್ಸಿಗೆ ಗೋಚರನಾದ. ಶಂಖ, ಚಕ್ರ, ಗಧಾ, ಪದ್ಮ, ಕೌಸ್ತುಭ, ವನಮಾಲಾ, ವೈಜಯಂತಿ, ಶ್ರೀವತ್ಸಲಾಂಛನ, ರತ್ನಕಿರೀಟ, ಪೀತಾಂಬರ, ಅಂಗದ, ಕಡಗ, ಕಂಕಣ ಮೊದಲಾದ ದಿವ್ಯ ವಸ್ತ್ರಾಭರಣಗಳಿಂದ ವಿಭೂಷಿತನಾದ ಭಗವಾನ್ ಜಗನ್ನಾಥನು ಭಕ್ತರ ಅಭೀಷ್ಟವನ್ನು ಪೂರ್ಣಮಾಡಲು ಸಾಕ್ಷಾತ್ ಕಲ್ಪವೃಕ್ಷವೇ ಈ ಆಕಾರವನ್ನು ಪಡೆದು ಬಂದು ಕುಳಿತಂತೆ ಕಾಣುತ್ತಿತ್ತು. ಅವನ ಬಲಭಾಗದಲ್ಲಿ ನೀಲಾಂಬರವನ್ನು ಧರಿಸಿದ ಶೇಷಾವತಾರಿ ಬಲಭದ್ರನು ತನ್ನ ಆಯುಧವಾದ ನೇಗಿಲವನ್ನು ಹಿಡಿದುಕೊಂಡು ಕುಳಿತಿದ್ದನು. ಈ ಇಬ್ಬರು ಅಣ್ಣ-ತಮ್ಮಂದಿರ ನಡುವೆ ಶುಭಾಂಗಿ ಸುಭದ್ರಾದೇವಿಯು ಕುಳಿತುಕೊಂಡು ತನ್ನ ಕುಂಕುಮದ ಕಾಂತಿಯಿಂದ ಶೋಭಿಸುತ್ತಿದ್ದಳು. ಪುರುಷೋತ್ತಮನ ಎಡಭಾಗದಲ್ಲಿ ಉಜ್ವಲ ಕಾಂತಿಯಿಂದ ಬೆಳಗುವ ಸುದರ್ಶನ ಚಕ್ರದ ಕಾಷ್ಠರೂಪವು ಶೋಭಿಸುತ್ತಿತ್ತು.

ಈ ಭಗವಂತನ ದಿವ್ಯಮೂರ್ತಿಯನ್ನು ನೋಡಿ ಆ ಇಬ್ಬರು ಮಿತ್ರರು ಪ್ರಪಂಚನ್ನೆಲ್ಲ ಮರೆತು ಆ ಪರಮಾತ್ಮನ ಅಖಂಡವಾದ ಧ್ಯಾನಮಾಡುತ್ತ ಅಲ್ಲಿಯೇ ನಿಂತುಕೊಂಡರು. ರಾತ್ರಿಯಾಗುವವರೆಗೂ ಅಲ್ಲಿ ನಿಂತು ದೇವರನ್ನು ಕಣ್‌ತುಂಬ ನೋಡುತ್ತ ಧ್ಯಾನ ಮಾಡಿದರು. ರಾತ್ರಿಯಾದ ಬಳಿಕ ಕತ್ತಲೆಯಲ್ಲಿ ಕಣ್ಣು ಕಾಣದಾದ ಬಳಿಕ ಹೊರಗೆ ಬಂದು

ವಿಶ್ರಮಿಸಿದರು. ರಾತ್ರಿ ಮಲಗಿದಾಗಲೂ ಅವರ ಕನಸಿನಲ್ಲಿ ಆ ಭಗವಂತನದೇ ದಿವ್ಯಮೂರ್ತಿಯು ಸ್ವಪ್ನಸುಂದರವಾಗಿ ಕಾಣಿಸಿಕೊಂಡಿತು. ಆದರಿಂದ ಪರಮಾನಂದ ಭರಿತರಾಗಿ ಸುಖನಿದ್ರೆಯನ್ನು ಮಾಡಿ ಉಷಃಕಾಲದಲ್ಲಿಯೇ ಎದ್ದರು. ಪರಸ್ಪರ ಕನಸಿನ ಸುದ್ದಿಯನ್ನು ಹೇಳಿ ಅಲ್ಲಿಯೇ ಮುಂದೆ ಇರುವ ಕುಂಡದಲ್ಲಿ ಸ್ನಾನಮಾಡಿ ಮತ್ತೆ ಭಗವಂತನೆದುರು ಬಂದು ನಿಂತರು. ಎವೆ ಮಿಳುಕಿಸದೆ ಜಗನ್ನಾಥ ಸ್ವಾಮಿಯ ನಾಲ್ಕು ರೂಪಗಳನ್ನು ನೋಡುವುದು, ಅವನ ವೇದಶಾಸ್ತ್ರೋಕ್ತವಾದ ಹಾಡು ಹಾಡುವದು, ಅಖಂಡ ಧ್ಯಾನ ಭಜನೆಗಳನ್ನು ಮಾಡುವುದು, ಹೀಗೆ ರಾತ್ರಿಯಾಗುವವರೆಗೆ ಭಗವಂತನ ದರ್ಶನ ಹಾಗೂ ಧ್ಯಾನವನ್ನು ಮಾಡಿ ಪ್ರತಿನಿತ್ಯವು ಸಂಜೆಯಾದ ಬಳಿಕವೇ ಅವರು ಹೊರಗೆ ಬರುತ್ತಿದ್ದರು. ಹೊರಗೆ ಯದೃಚ್ಛೆಯಾಗಿ ಬಂದ ಭಗವತ್ ಪ್ರಸಾದವನ್ನು ಮಾತ್ರ ತಿಂದು ಭಗವಂತನ ನಾಮಸ್ಮರಣೆ ಮಾಡುತ್ತಲೇ ಮಲಗುವರು. ಮಲಗಿದಾಗ ಜಗನ್ನಾಥನ ಸ್ವಪ್ನ ಸಂದರ್ಶನ. ಎಚ್ಚರವಿದ್ದಾಗ ಸಾಕ್ಷಾತ್‌ದರ್ಶನ. ಹೀಗೆ ಹಗಲೂ ರಾತ್ರಿ ಜಗನ್ನಾಥ ಸ್ವಾಮಿಯ ದರ್ಶನವನ್ನು ಮಾಡಿಕೊಂಡು ಭಜನ ಧ್ಯಾನಗಳಲ್ಲಿ ಲೀನರಾಗಿ ಆ ಇಬ್ಬರು ಬ್ರಾಹ್ಮಣ ಕ್ಷತ್ರಿಯ ಮಿತ್ರರು ಬಹುಕಾಲ ಆ ಪುರುಷೋತ್ತಮ ಕ್ಷೇತ್ರದಲ್ಲಿ ವಾಸ ಮಾಡಿದರು. ಕೊನೆಗೆ ಆ ಪರಮಾತ್ಮನ ಪರಮ ಪ್ರಸಾದದಿಂದ ಅತ್ಯಂತ ದುರ್ಲಭವಾದ ಮೋಕ್ಷವನ್ನು ಹೊಂದಿದರು.

## ಉತ್ಕಲದೇಶದ ಪರಿಚಯ

**ಮುನಿಗಳು:-** ದ್ವಿಜಶ್ರೇಷ್ಠರೇ! ಕಟ್ಟಿಗೆಯ ಮೂರ್ತಿಯ ರೂಪದಲ್ಲಿ ಭಗವಾನ್ ನಾರಾಯಣನು ವಿರಾಜಮಾನನಾದ ಆ ಪುರುಷೋತ್ತಮ ಕ್ಷೇತ್ರವು ಯಾವ ದೇಶದಲ್ಲಿ ಇರುತ್ತದೆ?

**ಜೈಮಿನಿ:-** ಉತ್ತರಭಾರತದಲ್ಲಿ ಉತ್ಕಲ (ಓರಿಸಾ) ಎಂಬ ಹೆಸರಿನ ಒಂದು ಪವಿತ್ರವಾದ ದೇಶವಿದೆ. ಇಲ್ಲಿ ಅನೇಕ ತೀರ್ಥಗಳು ಸುಂದರವಾದ ದೇವಮಂದಿರಗಳು ಇರುತ್ತವೆ. ದಕ್ಷಿಣ ಸಮುದ್ರದ ತೀರದಲ್ಲಿರುವ ಆ ಉತ್ಕಲ ದೇಶವು ಎಲ್ಲ ರೀತಿಯಿಂದಲೂ ಒಂದು ಆದರ್ಶವಾದ ದೇಶ. ಸೃಷ್ಟಿಯ ಆದಿಕಾಲದಲ್ಲಿ ಯಜ್ಞ ಹಾಗು ವೇದಾಧ್ಯಯನಗಳು ಅಲ್ಲಿಂದಲೇ ಪ್ರಾರಂಭವಾಗುತ್ತವೆ. ಆದುದರಿಂದ ಅಲ್ಲಿ ಇರುವ ಬ್ರಾಹ್ಮಣರು ಹದಿನೆಂಟು ವಿದ್ಯೆಗಳ ನಿಧಿಯಂತಿದ್ದು ಬೇರೆ ಶಾಸ್ತ್ರಗಳ ಪ್ರವರ್ತಕರೂ ಆಗಿರುತ್ತಾರೆ. ಅಲ್ಲಿ ಇರುವ ಜನರೆಲ್ಲರೂ ವಿಷ್ಣುಭಕ್ತರೂ ಪರೋಪಕಾರಿಗಳೂ ಆಗಿದ್ದಾರೆ. ಸ್ತ್ರೀಯರು ಪರಮ ಪತಿವ್ರತೆಯರು. ಶೀಲ ಸಂಪನ್ನರು ಧರ್ಮಪರಾಯಣೆಯರು, ಲಜ್ಜಾವತಿಯರು, ಸೌಂದರ್ಯಶಾಲಿನಿಯರೂ ಆಗಿರುತ್ತಾರೆ. ಉಳಿದ ಎಲ್ಲ ಜಾತಿ ಜನರು ತಮ್ಮ ತಮ್ಮ ವರ್ಣ, ಜಾತಿ, ಆಶ್ರಮಗಳಿಗೆ ಅನುಸಾರವಾಗಿ ಧರ್ಮಕರ್ಮಗಳ ಅನುಷ್ಠಾನವನ್ನು ಮಾಡುತ್ತ ಇರುತ್ತಾರೆ. ದಕ್ಷಿಣ ಸಮುದ್ರಕ್ಕೆ ಕೂಡುವ ಋಷಿಕುಲ್ಯಾ ನದಿಯವರೆಗೆ ಮುಟ್ಟಿ ಸ್ವರ್ಣ ರೇಖಾ ಹಾಗು ಮಹಾನದೀ ನಡುವೆ ಪ್ರತಿಷ್ಠಿತವಾದ ಪ್ರದೇಶವೇ ಉತ್ಕಲದೇಶ ಎನಿಸುತ್ತದೆ.

ಸತ್ಯಯುಗದಲ್ಲಿ ಇಂದ್ರದ್ಯುಮ್ನ ಎಂಬ ಹೆಸರಿನ ಓರ್ವ ಪ್ರಸಿದ್ಧ ರಾಜನು ಸೂರ್ಯವಂಶದಲ್ಲಿ ಜನಿಸಿದನು. ಸತ್ಯವಾದಿಯೂ ಸದಾಚಾರಿಯೂ ಪರಮ ಸಾತ್ವಿಕನೂ

ಆದ ಆ ಇಂದ್ರದ್ಯುಮ್ನನು ತನ್ನ ಪ್ರಜೆಗಳನ್ನು ಮಕ್ಕಳೆಂದು ತಿಳಿದು ಪ್ರೀತಿಯಿಂದ ಪಾಲನ ಮಾಡುತ್ತಿದ್ದನು. ಶಸ್ತ್ರವಿದ್ಯೆ ಶಾಸ್ತ್ರವಿದ್ಯೆ ಎರಡರಲ್ಲಿಯೂ ಕುಶಲನಾದ ಆ ರಾಜರ್ಷಿಯು ಶೂರನಿದ್ದಂತೆ ಭಗವದ್ಭಕ್ತನೂ ಆಗಿದ್ದ. ಸೌಂದರ್ಯ, ಸೌಭಾಗ್ಯ, ಔದಾರ್ಯ, ಸೌಶೀಲ್ಯ, ಸೌಜನ್ಯ ಮುಂತಾದ ಸದ್ಗುಣಗಳ ಮೇಲನಸ್ಥಲವೆಂದರೆ ಆ ಇಂದ್ರದ್ಯುಮ್ನ ರಾಜ. ಪರಮ ಧಾರ್ಮಿಕನಾದ ಅವನು ಅಶ್ವಮೇಧ ರಾಜಸೂಯ ಮುಂತಾದ ಅನೇಕ ಯಜ್ಞಗಳನ್ನು ನೆರವೇರಿಸಿದನು. ಮಾಲವ ದೇಶದ ಅವಂತಿ ಎಂಬ ನಗರದಲ್ಲಿ ಆ ಧರ್ಮಿಷ್ಠನೂ, ಬಲಿಷ್ಠನೂ ಆದ ಮಹಾರಾಜನು ವಾಸಮಾಡಿದ್ದನು.

ಒಂದು ದಿನ ದೇವರ ಪೂಜೆಯ ವೇಳೆಯಲ್ಲಿ ತನ್ನ ಪುರೋಹಿತರಿಗೆ ಹೇಳಿದನು- "ಪೂಜ್ಯರೇ! ನಮಗೆ ನಮ್ಮ ಇವೇ ತೊಗಲಿನ ಕಣ್ಣುಗಳಿಂದ ಜಗನ್ನಾಥನ ದರ್ಶನ ಮಾಡಿಸುವ ಯಾವುದಾದರೂ ಕ್ಷೇತ್ರವಿದ್ದರೆ ನೀವು ಶೋಧಿಸಿರಿ." ಪರಮ ವಿಷ್ಣುಭಕ್ತನಾದ ಇಂದ್ರದ್ಯುಮ್ನ ರಾಜನ ಅಭಿಪ್ರಾಯವನ್ನು ತಿಳಿದು ಅವನ ಪುರೋಹಿತರು ಅಲ್ಲಿಗೆ ಬಂದ ಯಾತ್ರಿಕರ ಒಂದು ಗುಂಪನ್ನು ನೋಡಿ ಹೇಳಿದರು "ಯಾತ್ರಿಕರೇ! ನೀವು ಎಲ್ಲ ದೇಶಗಳನ್ನು ಸುತ್ತಾಡುತ್ತ ಇದ್ದೀರಿ. ಎಲ್ಲ ತೀರ್ಥಗಳಲ್ಲಿಯೂ ಅತ್ಯುತ್ತಮ ತೀರ್ಥ ಯಾವುದು ಎನ್ನುವುದನ್ನು ನೀವು ಬಲ್ಲಿರಾ? ನಿಮ್ಮ ಪೈಕಿ ಯಾರಾದರೂ ಅಂಥ ಸರ್ವೋತ್ತಮ ತೀರ್ಥಕ್ಕೆ ಹೋಗಿದ್ದರೆ?"

ಪುರೋಹಿತರ ಅಭಿಪ್ರಾಯವನ್ನು ತಿಳಿದುಕೊಂಡು ಆ ಯಾತ್ರಿಕರ ಗುಂಪಿನಲ್ಲಿಯ ಓರ್ವ ಧೀರ ಧೀಮಂತನು ಮುಂದೆ ಬಂದು ಕೈಜೋಡಿಸಿ ಹೇಳಿದನು- "ಮಹಾರಾಜನೆ! ನಾನು ಬಾಲ್ಯದಿಂದಲೇ ತೀರ್ಥಸಂಚಾರವನ್ನು ಮಾಡುತ್ತಲಿದ್ದೇನೆ. ಭಾರತದಲ್ಲಿ ಓಢ್ರ ಎಂಬ ಒಂದು ದೇಶವಿದೆ. ಆ ದೇಶದ ದಕ್ಷಿಣ ಸಮುದ್ರದ ತೀರದಲ್ಲಿ ನೀಲಾಚಲ ಪರ್ವತದ ಪರಿಸರದಲ್ಲಿ ಪುರುಷೋತ್ತಮ ಕ್ಷೇತ್ರವು ಇರುತ್ತದೆ. ಸುತ್ತಲೂ ವನಶ್ರೇಣಿ. ಮಧ್ಯದಲ್ಲಿ ಕಲ್ಪವೃಕ್ಷ ಎಂಬ ಹೆಸರನ್ನು ಹೊತ್ತ ವಟವೃಕ್ಷ. ಅದರ ಪಶ್ಚಿಮ ಭಾಗದಲ್ಲಿ ಭಗವಂತನ ಕರುಣ ಕಲ್ಲೋಲಿನಿಯೇ ಮಡುಗಟ್ಟಿದಂತಿರುವ ರೌಹಿಣಕುಂಡ. ಅದರ ಪೂರ್ವದಿಕ್ಕಿನ ದಂಡೆಯಲ್ಲಿ ಇಂದ್ರನೀಲಮಣಿಯಿಂದ ನಿರ್ಮಿತವಾದ ಒಂದು ಭಗವಾನ್ ವಾಸುದೇವನ ಪ್ರತಿಮೆ ಇದೆ. ಆ ಕುಂಡದಲ್ಲಿ ಸ್ನಾನಮಾಡಿ ಪುರುಷೋತ್ತಮ ದರ್ಶನ ಮಾಡಿಕೊಂಡವರು ಮುಕ್ತರಾಗುತ್ತಾರೆ.

ಈ ಭಗವಂತನ ದಿವ್ಯವಿಗ್ರಹದ ಪಶ್ಚಿಮ ದಿಕ್ಕಿನಲ್ಲಿ ಶಬರದೀಪಕ ಎಂಬ ಹೆಸರಿನ ಒಂದು ಉತ್ತಮ ಆಶ್ರಮ ಇರುತ್ತದೆ. ಆ ಆಶ್ರಮದಿಂದ ಆ ಜಗನ್ನಾಥನ ಸ್ಥಾನದವರೆಗೆ ಒಂದು ಶಿಲಾಮಾರ್ಗವು ಇರುತ್ತದೆ. ಅಲ್ಲಿ ಶಂಖ, ಚಕ್ರಾದಿಗಳನ್ನು ಧರಿಸಿದ ಭಗವಾನ್ ಜಗನ್ನಾಥನು ವಿರಾಜಮಾನನಾಗಿದ್ದಾನೆ. ಕರುಣಾಸಮುದ್ರನಾದ ಆ ಮಹಾವಿಷ್ಣುವು ದರ್ಶನಮಾತ್ರದಿಂದಲೇ ಮೋಕ್ಷವನ್ನು ನೀಡುವನು. ರಾಜನೇ! ಆ ಜಗನ್ನಾಥನ ಪ್ರಸನ್ನತೆಗಾಗಿಯೇ ನಾನು ಒಂದು ವರುಷದವರೆಗೆ ಈ ಕ್ಷೇತ್ರದಲ್ಲಿ ವಾಸವಾಗಿದ್ದೆನು. ನಾನು ಮೊದಲು ಮಹಾಮೂರ್ಖ, ಮಂದ, ಆಗಿದ್ದರೂ ಆ ಭಗವಂತನ ಅನುಗ್ರಹದಿಂದ ಈಗ ಹದಿನೆಂಟು ವಿದ್ಯೆಗಳಲ್ಲಿ ಪ್ರವೀಣನಾಗಿದ್ದೇನೆ. ನೀನು ಅನೂಚಾನ ಪರಂಪರೆ ನಡೆದು ಬಂದಂತೆ ಉತ್ತಮ ವ್ರತಗಳನ್ನು ಪಾಲನೆ ಮಾಡುವ ವಿಷ್ಣುಭಕ್ತನಾಗು. ಇದಕ್ಕಾಗಿಯೇ ನಾನು ಇಲ್ಲಿಗೆ ಬಂದಿದ್ದೇನೆ. ನಾನು ನಿನ್ನಿಂದ ಭೂಮಿ, ಧನ, ಅಧಿಕಾರ ಯಾವುದನ್ನೂ

ಬಯಸಲಾರೆ. ಆದರೆ ನಿನ್ನಲ್ಲಿ ನನ್ನದೊಂದು ಬಿನ್ನಹ. ನೀನು ನಾನು ನುಡಿದ ಮಾತನ್ನು ಸುಳ್ಳು ಎಂದು ತಿಳಿಯಬೇಡ ಮತ್ತು ಈ ಪುರುಷೋತ್ತಮ ಕ್ಷೇತ್ರದಲ್ಲಿ ನೆಲೆಸಿದ ಭಗವಾನ್ ಲಕ್ಷ್ಮೀಪತಿಯನ್ನು ಸತತವೂ ಭಜನೆ ಮಾಡು.''

ಹೀಗೆ ಉಪದೇಶ ಮಾಡಿ ಆ ಧೀಮಂತ ಯಾತ್ರಿಕನು ಎಲ್ಲರೂ ನೋಡು ನೋಡುತ್ತಿರುವಾಗಲೇ ಅದೃಶ್ಯನಾದ. ಆ ಜಟಾಧಾರಿಯಾದ ಅಪರಿಚಿತ ಯಾತ್ರಿಕನು ಮಟಾಮಾಯ ಆದದ್ದನ್ನು ಕಂಡು ಕೌತುಕದ ಕೊನೆ ಏರಿನಿಂತ ಇಂದ್ರದ್ಯುಮ್ನ. ಸಂಭ್ರಮದಿಂದ ಪುರೋಹಿತರನ್ನು ಕೇಳಿದ-ಪೂಜ್ಯರೇ! ಇಂದು ನಾನು ಒಂದು ಅಲೌಕಿಕ ವೃತ್ತಾಂತವನ್ನು ಅಲೌಕಿಕ ಪುರುಷನಿಂದಲೇ ಕೇಳಿದಂತಾಯಿತು. ಈಗ ಜಗನ್ನಾಥಸ್ವಾಮಿ ಇರುವಲ್ಲಿ ಹೋಗಬೇಕೆಂದು ನನ್ನ ಹೃದಯವು ತುಡಿಯುತ್ತಿದೆ. ಆ ಭಗವಂತನ ದಿವ್ಯದರ್ಶನವನ್ನು ಎಂದು ತೆಗೆದುಕೊಳ್ಳುವೆನೋ'' ಎಂಬ ಉತ್ಕಂಠೆಯು ಹಂಬಲದ ರೂಪ ತೆಗೆದುಕೊಂಡಿದೆ. ದ್ವಿಜಶ್ರೇಷ್ಠರೇ! ನನ್ನ ಧರ್ಮ ಅರ್ಥ ಕಾಮಗಳ ಒಂದಕ್ಕೊಂದು ಅನುಕೂಲವಾಗಿ ನಿಮ್ಮ ಅಧೀನದಾಗಿ ಇರುತ್ತವೆ.

ನಿಮ್ಮ ಪ್ರಸಾದದಿಂದ ನಾನು ತ್ರಿವರ್ಗ ಸಾಧನೆಯನ್ನೇನೋ ಚೆನ್ನಾಗಿ ಮಾಡಿಕೊಂಡಿದ್ದೇನೆ. ತಾವು ಈಗ ನನ್ನೊಡನೆ ಭಗವಾನ್ ಶ್ರೀಜಗನ್ನಾಥನ ದರ್ಶನ ಕಾರ್ಯದಲ್ಲಿಯೂ ಸಹಕಾರ ನೀಡಿ ನನ್ನೊಡನೆ ಬಂದರೆ ನನಗೆ ನಾಲ್ಕನೆಯ ಪುರುಷಾರ್ಥವಾದ ಮೋಕ್ಷ ಕಾರ್ಯದಲ್ಲಿಯೂ ಸಹಾಯ ಮಾಡಿದಂತಾಗುವದು.

**ಪುರೋಹಿತ:-** ರಾಜನೇ! ನಾವು ನಿನ್ನ ಎಲ್ಲ ಧರ್ಮಕಾರ್ಯಗಳಲ್ಲಿ ಸಹಾಯ ಸಹಾಕರಗಳನ್ನು ನೀಡುವದು ನಮ್ಮ ಕರ್ತವ್ಯವೆಂದೇ ಭಾವಿಸಿದ್ದೇವೆ. ಈಗ ನಿನ್ನೊಡನೆ ಪುರುಷೋತ್ತಮ ಕ್ಷೇತ್ರಕ್ಕೆ ಬರುವುದು ನನ್ನ ಸೌಭಾಗ್ಯವೆಂದು ತಿಳಿಯುತ್ತೇನೆ. ಸಾಕ್ಷಾತ್ ಲಕ್ಷ್ಮೀಪತಿ ನಾರಾಯಣನ ದರ್ಶನದ ಹೊರತು ಜನ್ಮಸಾಫಲ್ಯವಾದರು ಏನು ಇದೆ? ಈಗ ನನ್ನ ತಮ್ಮನಾದ ವಿದ್ಯಾಪತಿಯು ದೂತರೊಡನೆ ಮುಂದೆ ಆ ಪುರುಷೋತ್ತಮ ಕ್ಷೇತ್ರಕ್ಕೆ ಹೋಗುವನು. ಜಗನ್ನಾಥ ಸ್ವಾಮಿಯ ದರ್ಶನ ತೆಗೆದುಕೊಂಡು ಬರುವನು. ಅಲ್ಲಿಯ ನೀಲಪರ್ವತದ ಮೇಲೆ ನಮ್ಮ ಸೈನಿಕರು ಹಾಗೂ ಪರಿವಾರದವರು ಉಳಿದುಕೊಳ್ಳಲಿಕ್ಕೆ ಯೋಗ್ಯವಾದ ಸ್ಥಾನವನ್ನು ನೋಡಿಕೊಂಡು ಬರುವನು.

**ಇಂದ್ರದ್ಯುಮ್ನ:-** ''ವಿಪ್ರೋತ್ತಮರೆ! ನೀವು ಹೇಳಿದ್ದು ಸರಿ. ಹಾಗೆಯೇ ಮಾಡಿರಿ. ನಾನಂತು ಇದೋ ಹೊರಟೆ. ಆ ಪುರುಷೋತ್ತಮ ಕ್ಷೇತ್ರಕ್ಕೆ ಹೋಗಿ ಆ ಜಗನ್ನಾಥನ ಪಾದದ ಸಮೀಪದಲ್ಲಿಯೇ ಕುಳಿತುಕೊಳ್ಳುತ್ತೇನೆ'' ಹೀಗೆ ಹೇಳಿ ರಾಜನು ತನ್ನ ಅಂತಃಪುರದಲ್ಲಿ ಪ್ರವೇಶ ಮಾಡಿದನು.

ರಾಜಪುರೋಹಿತರು ಅಲ್ಲಿಗೆ ಬಂದ ಎಲ್ಲ ಯಾತ್ರಿಕರಿಗೂ ಯಥಾ ಯೋಗ್ಯವಾದ ಸಂಭಾವನೆ ಇತ್ತು ಗೌರವವನ್ನು ಮಾಡಿ ಅವರವರ ಆಶ್ರಮಕ್ಕೆ ಕೊಟ್ಟುಕಳಿಸಿದರು. ತನ್ನ ತಮ್ಮನಾದ ವಿದ್ಯಾಪತಿಯನ್ನು ಒಳ್ಳೇ ಸುಮೂಹೂರ್ತದಲ್ಲಿ ಸ್ವಸ್ತಿವಾಚನ ಮಾಡಿಸಿ ಪುರುಷೋತ್ತಮ ಕ್ಷೇತ್ರಕ್ಕೆ ಮುಂದೆ ಕಳುಹಿಸಿಕೊಟ್ಟರು. ಅವನ ಸೋದರ ವಿದ್ಯಾಪತಿಯು ಕೆಲವು ತನ್ನ ನಂಬುಗೆಯ ಪುರುಷರೊಂದಿಗೆ ರಥಾರೂಢನಾಗಿ ಹೊರಟನು. ದಾರಿಯಲ್ಲಿ ಹೋಗುವಾಗ ಅವನಿಗೆ ತನಗೆ ಕೆಲ ಸಮಯದಲ್ಲಿಯೇ ಒದಗಿ ಬರಲಿರುವ

ಶ್ರೀಪುರುಷೋತ್ತಮನ ದರ್ಶನ ಭಾಗ್ಯವನ್ನು ನೆನೆದು ಮೈರೋಮಾಂಚಿತವಾಯಿತು. ಅವನು ರಥದಲ್ಲಿ ಕುಳಿತಲ್ಲಿಯೇ ಯೋಚನೆ ಮಾಡತೊಡಗಿದ- ''ಇಂದು ನನ್ನ ಜನ್ಮ ಫಲ. ಇಂದಿನ ರಾತ್ರಿ ನನಗೆ ಮಂಗಳಮಯ. ನಾಳಿನ ಸುಪ್ರಭಾತ ದರ್ಶನ ಮಾಡಿಸುವ ಶುಭರಾತ್ರಿ. ಶಿವರಾತ್ರಿ.

ನಾಳೆ ನಾನು ಜಗದೀಶನಾದ ಆ ಜಗನ್ನಾಥನ ಮುಖಾರವಿಂದವನ್ನು ಸಾಕ್ಷಾತ್ತಾಗಿ ಕಾಣುವೆನು. ಅವನ ಸ್ವರೂಪ ದರ್ಶನದಿಂದ ಈ ಸಂಸಾರ ಸಾಗರವನ್ನು ಸುಖರೂಪವಾಗಿ ದಾಟುವೆನು. ನೀಲಾಚಲ ಶಿಖರದಲ್ಲಿ ಎಲ್ಲ ಯೋಗಿಗಳು, ಜ್ಞಾನಿಗಳು, ಭಕ್ತರು, ಶ್ರವಣ ಮನನ ನಿಧಿಧ್ಯಾಸಗಳಿಂದ ಹೃದಯ ಕಮಲದಲ್ಲಿ ಕಾಣಬಹುದಾದ ಆ ಚಕ್ರಪಾಣಿಯು ನೀಲಾಚಲ ಶಿಖರದಲ್ಲಿ ತನ್ನ ದಿವ್ಯವಾದ ಸಾಕ್ಷಾತ್ ದೇಹವನ್ನು ಧರಿಸಿ ನಿಂತದ್ದನ್ನು ನೋಡುತ್ತೇನೆ. ಇದು ನನ್ನ ಎಂಥ ಸೌಭಾಗ್ಯ! ನನ್ನ ಈ ಇದೇ ತೊಗಲಗಣ್ಣಿನಿಂದ ತಾವರೆಗಣ್ಣಿನ ಜಗನ್ನಾಥನನ್ನು ಪ್ರತ್ಯಕ್ಷವಾಗಿ ನೋಡುತ್ತೇನೆ.''

ಹೀಗೆ ವಿಚಾರ ಮಾಡುತ್ತ ರಥದಲ್ಲಿ ಕುಳಿತಾಗ ಅವನ ಕಣ್ಣೆದುರು ದಾರಿಯೇ ಕಾಣಲಿಲ್ಲ. ರಥದ ವೇಗವೂ ತಿಳಿಯಲಿಲ್ಲ. ಅನೇಕ ಊರು. ಕೇರಿ, ಪಳ್ಳಿ, ಪುರಿ, ವನ, ಉಪವನ ಬೆಟ್ಟ, ಬಯಲು, ಕಾಡು, ನಾಡು, ಕೆರೆ, ತೊರೆ ಮುಂತಾದವುಗಳನ್ನೆಲ್ಲ ದಾಟಿ ಸೂರ್ಯಾಸ್ತದ ವೇಳೆಗೆ ಮಹಾನದಿ ಎಂಬ ತರಂಗಿಣಿಯ ತೀರಕ್ಕೆ ಬಂದರು. ಆಗ ಸಂಧ್ಯಾಕಾಲ, ಅವನು ರಥದಿಂದ ಇಳಿದ. ವಿಧಿಪೂರ್ವಕವಾಗಿ ಸಂಧ್ಯಾವಂದನೆ ಮಾಡಿದ. ಗಾಯತ್ರಿಯನ್ನು ಜಪಿಸಿದ. ಮಂತ್ರಗಳನ್ನು ಪಠಿಸಿದ. ಸ್ತೋತ್ರಗಳನ್ನು ಹಾಡಿದ.

ಅನಂತರ ಜಗನ್ನಾಥನ ಧ್ಯಾನವನ್ನು ಮಾಡುತ್ತ ತನ್ನ ರಥದಲ್ಲಿ ಬಂದು ಕುಳಿತುಕೊಂಡ. ಅಲ್ಲಿಯೇ ರಾತ್ರಿಯನ್ನು ಕಳೆದ. ಬೆಳಗಾದ ಬಳಿಕ ಆ ಮಹಾನದಿಯಲ್ಲಿ ತನ್ನ ಸ್ನಾನ, ಆಹ್ನೀಕಗಳನ್ನು ಮುಗಿಸಿಕೊಂಡು ಏಕಾಂಬರ ವನಕ್ಕೆ ಬಂದ. ಅಲ್ಲಿಂದಲೇ ವಟವೃಕ್ಷದಿಂದ ಭೂಷಿತವಾದ ನೀಲಾಚಲ ಶಿಖರವು ಕಣ್ಣಿಗೆ ಬಿದ್ದಿತು. ಅಲ್ಲಿಂದ ಮುಂದೆ ದೇವಸ್ಥಾನಕ್ಕೆ ಹೋಗುವ ದಾರಿಯು ದೊರಕಲಿಲ್ಲ. ಬೇಗನೆ ಅತ್ತಿತ್ತ ಹತ್ತಾರು ಕಡೆ ಹುಡುಕಿದ. ಸರಿಯಾದ ದಾರಿ ಕಾಣದೆ ಮನದಲ್ಲಿ ಮಿಡುಕಿದ. ಸರಿಯಾದ ಮಾರ್ಗವು ದೊರಕದಂತಾದಾಗ ಆ ಭಗವಂತನಿಗೇ ಶರಣುಹೋಗಿ ದರ್ಭೆಹಾಸಿ ಆ ಪುರುಷೋತ್ತಮ ತೀರ್ಥದ ಕಡೆಗೆ ತಲೆಮಾಡಿ ಮಲಗಿಬಿಟ್ಟ. ತುಸುಹೊತ್ತಿನ ಬಳಿಕ ಅವನ ಕಿವಿಗೆ ಒಂದು ಅಲೌಕಿಕ ವಾಣಿಯು ಕೇಳಿ ಬಂದಿತು. ಕೂಡಲೇ ಅವನು ಎದ್ದು ಪ್ರಸನ್ನ ಮನಸ್ಸಿನಿಂದ ಆ ಸದ್ದಿನ ಸುಳಿವು ಹಿಡಿದು ಮುನ್ನಡೆದ. ಸ್ವಲ್ಪದೂರದಲ್ಲಿ ಶಬರದೀಪಕವೆಂಬ ಆಶ್ರಮವಿದ್ದಿತು. ಅಲ್ಲಿ ಅನೇಕ ಭಕ್ತರು ಅವರಿಗೆಲ್ಲ ಪ್ರಣಮಿಸಿದ ವಿದ್ಯಾಪತಿ. ಕೈಜೋಡಿಸಿ ನಿಂತುಕೊಂಡ.

ಆಗ ವಿಶ್ವಾವಸು ಎಂಬ ಬೇಡನು ವಿಷ್ಣುವಿನ ಪೂಜೆಯನ್ನು ಮುಗಿಸಿಕೊಂಡು ಕೈಯಲ್ಲಿ ಪ್ರಸಾದವನ್ನು ಹಿಡಿದುಕೊಂಡು ಪರ್ವತದ ಮಧ್ಯದಿಂದ ಎದ್ದು ಬಂದನು. ಮತ್ತು ಚಿಂತಾತುರನಾಗಿ ನಿಂತುಕೊಂಡ ವಿದ್ಯಾಪತಿಯನ್ನು ಕೇಳಿದನು.

**ಶಬರ:**- ವಿಪ್ರೋತ್ತಮ! ನೀವು ಎಲ್ಲಿಂದ ಬಂದಿರಿ? ಇದು ಘೋರ ಗೊಂಡಾರಣ್ಯ. ಇಲ್ಲಿ ದಾರಿ ಸಿಗುವದೇ ದುಷ್ಕರ. ನೀವು ಬಹಳ ಬಳಲಿದಂತೆ ತೋರುವಿರಿ ಬಾಯಾರಿಕೆ ಹಾಗು ಹಸಿವೆಗಳಿಂದ. ಈ ಆಸನದ ಮೇಲೆ ಕುಳಿತುಕೊಳ್ಳಿರಿ ಸುಖವಾಗಿ. ತುಸು ಹೊತ್ತು ವಿಶ್ರಾಂತಿಯನ್ನು ಪಡೆಯಿರಿ'' ಎಂದು ಹೀಗೆ ಹೇಳಿ ಆ ವಿಶ್ವಾವಸು ಬೇಡನು ವಿದ್ಯಾಪತಿಗೆ

ಆಸನವನ್ನು ನೀಡಿದನು. ಅರ್ಘ್ಯ ಪಾದ್ಯಗಳನ್ನು ಕೊಡಮಾಡಿದನು. ವಿನಯದಿಂದ ಮೃದುವಾದ ಮಾತಿನಲ್ಲಿ ಕೇಳಿದನು - "ಪೂಜ್ಯರೆ! ತಮಗೆ ನಾವು ಅಟ್ಟ ಅಡಿಗೆಯು ಆಗಬಹುದೆ? ಅಥವಾ ಫಲಾಹಾರ ಮಾಡುವಿರಾ? ತಮ್ಮ ಅಪೇಕ್ಷೆಯಂತೆ ಭೋಜನವನ್ನು ಏರ್ಪಡಿಸುತ್ತೇನೆ. ನಿಜವಾಗಿಯೂ ಇಂದು ನಮ್ಮ ಅಹೋಭಾಗ್ಯ. ನನ್ನ ಜನ್ಮ ಸಫಲ. ನಿಮ್ಮ ರೂಪದಿಂದ ಸಾಕ್ಷಾತ್ ಶ್ರೀಹರಿಯೇ ನನ್ನ ಮನೆಗೆ ಬಂದಿದ್ದಾನೆಂದು ನಾನು ತಿಳಿದಿರುವೆ."

**ವಿದ್ಯಾಪತಿ:-** ವೈಷ್ಣವ ಶ್ರೇಷ್ಠನೇ, ನಾನು ಊಟವನ್ನು ಮಾಡುವದಿಲ್ಲ. ಫಲಗಳನ್ನು ತಿನ್ನುವದಿಲ್ಲ. ನೀರನ್ನೂ ಕುಡಿಯುವುದಿಲ್ಲ. ನಾನು ಆವಂತಿಪುರಿಯ ಮಹಾರಾಜ ಇಂದ್ರದ್ಯುಮ್ನರ ಪುರೋಹಿತ. ಪುರುಷೋತ್ತಮ ಕ್ಷೇತ್ರದಲ್ಲಿ ಜಗನ್ನಾಥನ ದರ್ಶನ ಮಾಡಿಕೊಂಡು ರಾಜರಿಗೆ ನಾನು ಇಲ್ಲಿಯ ಸ್ಥಿತಿಗತಿ, ಸೌಕರ್ಯ, ಅವಕಾಶ ಮುಂತಾದವುಗಳನ್ನು ಹೋಗಿ ತಿಳಿಸಬೇಕಾಗಿದೆ. ಆದುದರಿಂದ ನಾನು ಮೊದಲು ಪುರುಷೋತ್ತಮ ಕ್ಷೇತ್ರಕ್ಕೆ ಹೋಗಿ ದೇವರ ದರ್ಶನ ಮಾಡಿಕೊಂಡು ಅಲ್ಲಿಯ ಸ್ಥಾನ, ಸೌಕರ್ಯ, ದರ್ಶನದ ಅವಕಾಶ, ಮಾರ್ಗದ ಸುಗಮತೆ ಮುಂತಾದವುಗಳನ್ನೆಲ್ಲ ನೋಡಿಕೊಂಡು ಮಹಾರಾಜರಿಗೆ ಬೇಗನೇ ಈ ಯಾತ್ರೆಯ ವಿವರವನ್ನು ತಿಳಿಸುವವರೆಗೆ ನಾನು ಏನನ್ನೂ ತಿನ್ನುವದಿಲ್ಲ. ಯಾವದನ್ನೂ ಕುಡಿಯುವದಿಲ್ಲ. ಕೈಕೊಂಡ ಕಾರ್ಯವು ಮುಗಿಯುವವರೆಗೆ ನಾನು ನಿರಾಹಾರನಾಗಿಯೇ ಇರುತ್ತೇನೆ. ನೀವು ನನ್ನನ್ನು ಆ ಪುರುಷೋತ್ತಮ ಕ್ಷೇತ್ರಕ್ಕೆ ಕರೆದೊಯ್ದು ಜಗನ್ನಾಥನ ದರ್ಶನವನ್ನು ಮಾಡಿಸಿರಿ.

## ವಿದ್ಯಾಪತಿಗೆ ನೀಲಮಾಧವನ ದರ್ಶನ.

**ಜೈಮಿನಿ:-** ವಿದ್ಯಾಪತಿಯ ಈ ಮಾತನ್ನು ಕೇಳಿ ವಿಶ್ವಾವಸು ಬೇಡನು ನಾರಾಯಣನನ್ನು ನೆನೆಯುತ್ತಲೇ ಹೇಳಿದ- "ಈ ಪುರುಷೋತ್ತಮ ಕ್ಷೇತ್ರಕ್ಕೆ ಇಂದ್ರದ್ಯುಮ್ನ ರಾಜನು ಬರುವನು. ಇಲ್ಲಿಯೇ ನೆಲೆಸುವನು ಎಂದು ನಾವು ಈ ಮೊದಲೇ ಕೇಳಿದ್ದೇವೆ. ನಡೆಯಿರಿ. ನಾವು ಈ ಬೆಟ್ಟವನ್ನು ಏರಿ ಹೋಗೋಣ" ಹೀಗೆ ಹೇಳಿ ಆ ಶಬರನು ಈ ಪುರೋಹಿತನನ್ನು ಕರೆದುಕೊಂಡು ಮುನ್ನಡೆದನು ಆ ವನವೀಥಿಯಲ್ಲಿ. ಮೇಲೆ ಮೇಲೆ ಏರಿದಂತೆ ದಾರಿಯು ಇಕ್ಕಟ್ಟಾಗುತ್ತ ಹೋಯಿತು. ಒಬ್ಬನೇ ಹಾದು ಹೋಗುವಂತೆ ಅತ್ಯಂತ ಸಂಕುಚಿತವಾದ ಮಾರ್ಗದ ಮಧ್ಯದಲ್ಲಿ ಮುಳ್ಳು ಕಲ್ಲುಗಳು. ಬರಬರುತ್ತಾ ವನಮಾರ್ಗ ಘನನಿಬಿಡವಾಗಿ ಮರಗಳ ದಟ್ಟ ನೆರಳಿನಿಂದ ಕತ್ತಲು ಏರಿ ಬಂದಂತಾಯಿತು. ಆದರೂ ಆ ಬೇಡನು ಈ ಬ್ರಾಹ್ಮಣನನ್ನು ಕರೆದುಕೊಂಡು ಆ ದುರ್ಗಮ ಮಾರ್ಗದಲ್ಲಿ ಮೆಲ್ಲನೆ ನಡೆದಿದ್ದನು. ಮಾರ್ಗದಲ್ಲಿ ಅವನಿಗೆ ಭಯವಾಗ ಬಾರದು. ಬೇಸರವೂ ಬರಬಾರದು ಎಂದು ಆ ವನಸ್ಥಾನಗಳ ಮತ್ತು ಅಲ್ಲಿಯ ಬೇರೆ ಬೇರೆ ದಾರಿಗಳ ಪರಿಚಯವನ್ನು ಮಾಡಿಕೊಡುತ್ತ ನಡೆದಿದ್ದನು.

ಹೀಗೆ ಮಾತಿನ ಭರದಲ್ಲಿ ಅವನಿಗೆ ತಿಳಿಯದೆ ದಾರಿಯು ಸವೆದಿತ್ತು. ಸಮಯವೂ ಸರಿದಿತ್ತು. ನಾಲ್ಕು ಗಳಿಗೆಯ ಸಂಚಾರದ ನಂತರ ಅವರು ಇಬ್ಬರು ರೌಹಿಣಕುಂಡದ ದಂಡೆಗೆ ಬಂದನು. ಅದನ್ನು ನೋಡಿ ಆ ಕಿರಾತನು ಹೇಳಿದನು. - "ವಿಪ್ರವರ್ಯ! ಇದು ರೌಹಿಣಕುಂಡ. ಎಲ್ಲ ತೀರ್ಥಗಳ ಉತ್ಪತ್ತಿ ಸ್ಥಾನ. ನೇರವಾಗಿ ವೈಕುಂಠಕ್ಕೆ

ಹೋಗಬಯಸುವವರು ಇಲ್ಲಿ ಸ್ನಾನಮಾಡಬೇಕು. ಇದರ ಪೂರ್ವಭಾಗದಲ್ಲಿ ಇದ್ದ ಅರಳೆಯ ಮರಕ್ಕೆ ಕಲ್ಪವಟ ಎನ್ನುವರು. ಇದರ ನೆರಳಿನಲ್ಲಿ ಬಂದವರ ಬ್ರಹ್ಮಹತ್ಯೆ ಬಿಟ್ಟು ಹೋಗುವದು. ಇವೆರಡರ ನಡುವಿನ ಲತಾಕುಂಜದಲ್ಲಿ ವೇದಾಂತ ಪ್ರತಿಪಾದ್ಯನಾದ ಜಗನ್ನಾಥನು ವಿರಾಜಿಸುತ್ತಿದ್ದಾನೆ. ಅವನ ದರ್ಶನವನ್ನು ತೆಗೆದುಕೊಳ್ಳಿರಿ.''

ಆಗ ವಿದ್ಯಾಪತಿಯು ಆ ಕುಂಡದಲ್ಲಿ ಸ್ಥಾನ ಮಾಡಿದನು. ಅಲ್ಲಿರುವ ಜಗದೀಶನ ಮೂರ್ತಿಯನ್ನು ವಂದಿಸಿದನು ಭಕ್ತಿಯಿಂದ. ಆನಂದಗದ್ಗದ ಕಂಠದಿಂದ ಸ್ತೋತ್ರಮಾಡಿದನು. ''ಸರ್ವವ್ಯಾಪ್ತಯಾದ ಪರಾತ್ಪರನೇ! ನಿನಗೆ ನನ್ನ ಅನಂತ ನಮಸ್ಕಾರ. ನಾನು ನಿನ್ನ ಚರಣಗಳಿಗೆ ಶರಣು ಬಂದಿದ್ದೇನೆ. ಈ ಸಾಂಸಾರಿಕ ದುಃಖದಿಂದ ನನ್ನನ್ನು ಬಿಡುಗಡೆ ಮಾಡು.''

ಹೀಗೆ ಭಗವಂತನನ್ನು ಸ್ತೋತ್ರ ಮಾಡಿ ಪ್ರಣವರೂಪಿಯಾದ ಮತ್ತು ಪ್ರಣವ ಮಂತ್ರ ಪ್ರತಿಪಾದ್ಯನಾದ ಆ ಶ್ರೀಹರಿಯನ್ನು ನೋಡುತ್ತ ತನ್ನ ನಿತ್ಯದ ಪ್ರಣವ ಮಂತ್ರದ ಜಪವನ್ನು ಮಾಡಿ ಮುಗಿಸಿದನು. ಅನಂತರ ಆ ಬೇಡನು ನುಡಿದನು - ''ಪೂಜ್ಯರೇ! ತಾವು ಭಗವಂತನ ದರ್ಶನ ಪಡೆದು ಕೃತಾರ್ಥರಾದಿರಿ. ಈಗ ಹೊತ್ತು ಕಂತಿದೆ. ದಿನಮಣಿಯು ಪಶ್ಚಿಮ ಸಮುದ್ರದಲ್ಲಿ ಸ್ನಾನ ಮಾಡಲು ತವಕಿಸುತ್ತಿದ್ದಾನೆ. ಈಗ ನೀವು ಬಹಳ ದಣಿದಿದ್ದೀರಿ, ಹಸಿದಿದ್ದೀರಿ ನೀರಡಿಸಿದ್ದೀರಿ, ಬಳಲಿದ್ದೀರಿ, ಮನೆಗೆ ಹೋಗೋಣ, ಈ ಅರಣ್ಯವು ಕ್ರೂರ ಹಿಂಸ್ರ ಪ್ರಾಣಿಗಳ ತಂಗುದಾಣ. ಇಲ್ಲಿ ರಾತ್ರಿ ಇರುವದು ಬಹಳ ಅಪಾಯ. ಆದುದರಿಂದ ಕತ್ತಲೆ ಆಗುವದರೊಳಗಾಗಿ ಮನೆ ಸೇರೋಣ ನಡೆಯಿರಿ.'' ಹೀಗೆ ಹೇಳಿ ಆ ಬ್ರಾಹ್ಮನನೊಂದಿಗೆ ಈ ಬೇಡನು ಬೇಗ ಬೇಗನೆ ನಡೆಯುತ್ತ ಆಶ್ರಮದ ಕಡೆಗೆ ನಡೆದ. ಬರುವಾಗ ವಿದ್ಯಾಪತಿಯು ಜಗನ್ನಾಥನ ದರ್ಶನದ ಆನಂದದಲ್ಲಿ ತೇಲಾಡುತ್ತಿದ್ದ. ಅವನ ಹಸಿವು ಬಾಯಾರಿಕೆ ಹಿಂಗಿ ಹೋಗಿದ್ದವು. ದಣಿವು ಮರೆತಿತ್ತು ಮನಸ್ಸು ಉಲ್ಲಸಿತವಾಗಿತ್ತು.

ಆ ದುರ್ಗಮ ವನಮಾರ್ಗದ ಕಲ್ಲು ಕಂಟಿ ಕಂಟಕಗಳ ಮೇಲೆ ಹಾಯ್ದು ಅವಸರದಿಂದ ಬಂದರೂ ಅವನಿಗೆ ಆಯಾಸವೇ ಎನಿಸಲಿಲ್ಲ. ಭಗವಂತನ ದಿವ್ಯರೂಪವನ್ನೇ ಮನದಲ್ಲಿ ಧ್ಯಾನಿಸುತ್ತ ಬರುತ್ತಿರುವ ಆ ಬ್ರಾಹ್ಮಣನ ದೇಹ ವನಮಾರ್ಗದಲ್ಲಿ ನಡೆದಿದ್ದರೂ ಅವನ ಜೀವ ಮಾತ್ರ ಜಗನ್ನಾಥನ ದಿವ್ಯಮೂರ್ತಿಯ ಸುತ್ತ ಸುತ್ತಾಡುತ್ತ ಪ್ರದಕ್ಷಿಣೆ ಹಾಕುತ್ತಲಿತ್ತು. ಅವನು ತಾನು ಇದೀಗ ಕಂಡ ಜಗನ್ನಾಥನ ಧ್ಯಾನಸಮಾಧಿಯಲ್ಲಿ ಲೀನನಾಗಿದ್ದಾನೆ ಎಂದು ತಿಳಿದು ಆ ಬೇಡನು ಅವನನ್ನು ಮಾತಿಗೆ ಎಳೆಯಲಿಲ್ಲ. ಅವರಿಬ್ಬರ ಮೌನ ಆ ದುರ್ಗಮ ವನದ ಏಕಾಂತಕ್ಕೆ ಮತ್ತಿಷ್ಟು ಗಾಂಭೀರ್ಯವನ್ನು ತಂದು ಕೊಟ್ಟಿತು. ಇಬ್ಬರೂ ಮರಳಿ ಬೇಡನ ಪರ್ಣಕುಟೀರಕ್ಕೆ ಬಂದರು. ವಿಶ್ವಾವಸು ವ್ಯಾಧನು ತನ್ನ ಆ ಅತಿಥಿಯನ್ನು ಆಶ್ರಮದ ಒಳಗೆ ಕರೆದೊಯ್ದು ಮಿದುವಾದ ಆಸನದ ಮೇಲೆ ಕುಳ್ಳಿರಿಸಿದ. ಅರ್ಘ್ಯಪಾದ್ಯಗಳನ್ನು ನೀಡಿದ. ಬಗೆ ಬಗೆಯ ತಿಂಡಿ ತಿನಿಸು ಭಕ್ಷ್ಯ ಭೋಜ್ಯ ಪೇಯಗಳನ್ನು ಅವನ ಮುಂದೆ ತಂದಿರಿಸಿದ. ಅದೆಲ್ಲವನ್ನು ಕೈಯಿಂದ ಮುಟ್ಟಿ ದೂರ ಸರಿಸಿದ. ವಿದ್ಯಾಪತಿಯು ''ಮಹಾರಾಜರ ಮುಖ ನೋಡುವವರೆಗೆ ಹಾಗೂ ಅವರಿಗೆ ಇಲ್ಲಿಯ ಸಮಾಚಾರವನ್ನು ತಿಳಿಸುವವರೆಗೆ ನಾನು ಏನೂ ಸ್ವೀಕರಿಸಬಾರದೆಂದು ಮನಸ್ಸಿನಲ್ಲಿ ಮಾಡಿಕೊಂಡಿದ್ದೇನೆ. ಆದುದರಿಂದ ನನಗೆ ಇದಾವದೂ ಬೇಡ. ನಿನ್ನ ಆತಿಥ್ಯಕ್ಕಾಗಿ ನಾನು ಕೃತಜ್ಞ.'' ಎಂದು ನಯವಾಗಿಯೇ ನಿಷೇಧಿಸಿದ.

ಇದನ್ನು ಕೇಳಿ ವಿಶ್ವಾವಸು ವ್ಯಾಧನಿಗೆ ಮನಸ್ಸು ನೊಂದಿತು. ದುಃಖದಿಂದ ಕಂಬನಿ ದುಂಬಿತು. ಅವನು ಕೈಮುಗಿದು ಕೇಳಿಕೊಂಡ-''ಪೂಜ್ಯರೆ! ತಾವು ಇಂದು ನನ್ನ ಅತಿಥಿ. ಮನೆಗೆ ಬಂದ ಅತಿಥಿ-ಅದರಲ್ಲಿಯೂ. ನಿಮ್ಮಂಥ ವೇದ ವೇದಾಂತ ಪಾರಂಗತನಾದ ಸದಾಚಾರಿ ಭಗವದ್ ಭಕ್ತನಾದ ಅತಿಥಿಯು ಬರೀ ಅತಿಥಿ ಅಲ್ಲ ಇಂದು ಅತಿಥಿದೇವ. ನೀವು ನನ್ನ ಮನೆಗೆ ಬಂದದ್ದು ಮಹಾ ಸೌಭಾಗ್ಯ. ಆದರೆ ನನ್ನ ಮನೆಯಲ್ಲಿ ನನ್ನ ಅತಿಥ್ಯವನ್ನು ಸ್ವೀಕರಿಸದೆ ಹಾಗೆ ಹೋದರೆ ನನ್ನ ಪರಮ ದೌರ್ಭಾಗ್ಯ.

ತಾವು ಮಹಾರಾಜರ ಕೆಲಸವನ್ನು ಮಾಡಿ ಮುಗಿಸಿದಂತಾಗಿದೆ. ದೇವರ ದರ್ಶನ ಪಡೆಯುವದಕ್ಕಿಂತ ಮೊದಲು ಇಲ್ಲಿಗೆ ಬಂದಾಗ ತಾವು ನನ್ನ ಆತಿಥ್ಯ ತಿರಸ್ಕರಿಸಿದಿರಿ. ಅದು ಯೋಗ್ಯ ಎನಿಸಿತು. ತನಗೆ ಬಂದ ಕಾರ್ಯ ಪೂರ್ಣವಾಗದೆ ಮಧ್ಯದಲ್ಲಿ ಹೊಟ್ಟೆ ತುಂಬಿಸುತ್ತ ಹೊತ್ತು ಕಳೆಯಬಾರದು ಎಂಬುದೇ ನ್ಯಾಯವೇ. ಆದರೆ ಈಗ ನೀವು ಬಂದ ಕಾರ್ಯ ಮುಗಿದಂತಾಗಿದೆ. ಇನ್ನೇಕೆ ಉಪವಾಸ? ಮೇಲಾಗಿ ನಾನು ತಮ್ಮ ಮುಂದೆ ತಂದು ಇರಿಸಿದ ಪದಾರ್ಥಗಳೆಲ್ಲವೂ ಆ ಜಗನ್ನಾಥನ ಪ್ರಸಾದ. ದೇವರ ನೈವೇದ್ಯ. ಯಾತ್ರಿಕರು ಆ ಭಗವಂತನಿಗೆ ನಿವೇದಿಸಿದ ಪ್ರಸಾದವನ್ನು ಎಂದೂ ತಿರಸ್ಕರಿಸಬಾರದು. ತಾವು ಶಿಷ್ಟರು. ಇದು ಭಗವಂತನ ಉಚ್ಛಿಷ್ಟ. ಇದನ್ನು ಸ್ವೀಕರಿಸಿದರೆ ಯಾವ ದೋಷವೂ ಇಲ್ಲ. ಸ್ವೀಕರಿಸದಿದ್ದರೆ ಮಹಾ ಅನರ್ಥ. ಆದುದರಿಂದ ತಾವು ಈ ಭಗವತ್ ಪ್ರಸಾದವನ್ನು ಸ್ವೀಕರಿಸಿ ಧನ್ಯರಾಗಿರಿ. ನನ್ನನ್ನು ಕೃತಾರ್ಥನನ್ನಾಗಿ ಮಾಡಿರಿ.''

ಆ ವಿಶ್ವಾವಸು ಬೇಡನ ಯುಕ್ತಿ ಯುಕ್ತವಾದ ಈ ವಚನೋಪನ್ಯಾಸ ಕೇಳಿ ವಿದ್ಯಾಪತಿಗೆ ತನ್ನ ತಪ್ಪಿನ ಅರಿವಾಯಿತು. ಹಾಗು ಬೇಡನ ಘನತೆಯ ಗುರುತಾಯಿತು. ಶಬರನ ಹಿತೋಪದೇಶವನ್ನು ಮನ್ನಿಸಿ ಅವನು ತನಗೆ ನೀಡಿದ ಭಗವಂತನ ಪ್ರಸಾದವನ್ನು ಸ್ವೀಕರಿಸಬೇಕೆಂದು ನಿರ್ಧರಿಸಿದ. ಅವನ ಹೊಟ್ಟೆಯು ಹಸಿದು ತಾಳ ಹಾಕುತ್ತಿತ್ತು. ದಣಿವು ದೇಹವನ್ನು ಕ್ಷೀಣಗೊಳಿಸಿತ್ತು. ಅವನು ಮತ್ತೊಮ್ಮೆ ಅತಿಥಿ ಪರಾಯಣನಾದ ಬೇಡನು ತನ್ನ ಮುಂದೆ ತಂದು ಇರಿಸಿದ ಪದಾರ್ಥಗಳನ್ನೆಲ್ಲ ಪುನಃ ಕಣ್ಣೆತ್ತಿ ನೋಡಿದ. ಅವೆಲ್ಲವು ಬಗೆಬಗೆಯ ಪಕ್ವಾನ್ನಗಳು. ಅಲೌಕಿಕ ಮೃಷ್ಟಾನ್ನಗಳು. ಅಲ್ಲಿಯ ಪ್ರತಿಯೊಂದು ಪದಾರ್ಥಕ್ಕೂ ದಿವ್ಯವಾಸನೆ. ಅಂಥ ಮನೋಹರವಾದ ಸುಗಂಧಿ ಭಕ್ಷ್ಯ, ಭೋಜ್ಯ, ಮೃಷ್ಟಾನ್ನಗಳನ್ನು ಅವನು ಜನ್ಮದಲ್ಲಿಯೇ ಕಂಡಿರಲಿಲ್ಲ. ರಾಜರ ಅರಮನೆಯಲ್ಲಿಯೂ ಇಂಥ ಅಲೌಕಿಕ ಪದಾರ್ಥಗಳು ಅವನ ಕಣ್ಣಿಗೆ ಬಿದ್ದಿರಲಿಲ್ಲ. ಆ ಎಲ್ಲ ಪದಾರ್ಥಗಳು ದೇವ ಭೋಜ್ಯ ಎನಿಸಿತು ಆ ವಿದ್ಯಾಪತಿಗೆ. ಅವನು ಆಶ್ಚರ್ಯಪಟ್ಟು ಕೇಳಿದ.

**ವಿದ್ಯಾಪತಿ:-** ಕಿರಾತ ಮಿತ್ರ! ಇದೇನು ನಿನ್ನ ಮನೆಯಲ್ಲಿ ಇಷ್ಟೆಲ್ಲ ದೇವಭೋಗ್ಯ ವಸ್ತುಗಳಂತೆ ಕಾಣುವ ಅಲೌಕಿಕ ಪದಾರ್ಥಗಳು ಹೇಗೆ ಬಂದವು? ನೀನೊಬ್ಬ ಕಾಡುಬೇಡ. ಪ್ರಾಯಃ ಕಡುಬಡವ. ನಿನ್ನ ಮನೆಯಲ್ಲಿ ಇಂಥ ಅಮೂಲ್ಯವಾದ ಪದಾರ್ಥಗಳು ಎಲ್ಲಿಂದ ಬಂದವು?

**ವಿಶ್ವಾವಸು:-** ಅತಿಥಿ ದೇವ! ಇದೆಲ್ಲವೂ ಆ ಭಗವಂತನ ಪ್ರಸಾದ. ಪ್ರತಿದಿನವೂ ಈ ಜಗನ್ನಾಥಸ್ವಾಮಿಯ ಸನ್ನಿಧಾನಕ್ಕೆ ಇಂದ್ರಾದಿ ದೇವತೆಗಳು ಬರುತ್ತಾರೆ. ಬರುವಾಗ ಸ್ವರ್ಗಾದಿಲೋಕಗಳಿಂದ ದಿವ್ಯ ಉಪಚಾರಗಳನ್ನು ಉಪಹಾರಗಳನ್ನು ತರುತ್ತಾರೆ.

ಭಕ್ತಿಯಿಂದ ಭಗವಂತನ ಪೂಜೆ ಮಾಡುತ್ತಾರೆ. ಬಗೆಬಗೆಯ ಸೇವೆ ಸಲ್ಲಿಸುತ್ತಾರೆ. ಪೂಜೆಯ ನಂತರ ಪ್ರದಕ್ಷಿಣೆ ಹಾಕುತ್ತಾರೆ. ನಮಸ್ಕಾರ ಹಾಕುತ್ತಾರೆ. ಹಾಡು ಹಾಡುತ್ತಾರೆ. ವಾದ್ಯಗಳನ್ನು ಬಾರಿಸುತ್ತಾರೆ. ಕುಣಿದು ನೃತ್ಯಸೇವೆಯನ್ನು ಸಲ್ಲಿಸುತ್ತಾರೆ. ತಾವು ಸ್ವರ್ಗಾದಿ ಲೋಕಗಳಿಂದ ತಂದ ದಿವ್ಯ ಪದಾರ್ಥಗಳನ್ನೆಲ್ಲ ಆ ಭಗವಂತನ ಮುಂದೆ ಇಟ್ಟು ಸಮರ್ಪಣೆಗೈದು ಸ್ವೀಕರಿಸಬೇಕೆಂದು ಪ್ರಾರ್ಥಿಸಿ ತಮ್ಮ ಲೋಕಕ್ಕೆ ಹೋಗುತ್ತಾರೆ. ಅವೇ ಈ ಪದಾರ್ಥಗಳು. ಇದೆಲ್ಲವೂ ಜಗನ್ನಾಥನ ನೈವೇದ್ಯ. ಭುಕ್ತಶೇಷ ಪ್ರಸಾದ. ಇಲ್ಲಿರುವ ಭಕ್ತ ಜನರೆಲ್ಲರೂ ದೇವತೆಗಳು ತಂದಿಟ್ಟ ಈ ಪದಾರ್ಥಗಳು ಪರಮಾತ್ಮನ ಉಚ್ಛಿಷ್ಟ, ಪರಮ ಪ್ರಸಾದ ಎಂದು ಸಂತೋಷದಿಂದ ಸ್ವೀಕರಿಸುತ್ತಾರೆ. ಈ ಪ್ರಸಾದ ಸೇವನೆಯಿಂದ ಇಲ್ಲಿಯ ಅನೇಕ ಜನರ ಉಲ್ಬಣವಾದ ರೋಗಗಳು ವಾಸಿಯಾಗಿವೆ. ಚಿಂತಾ ಸಂತಾಪಗಳು ದೂರಾಗಿವೆ. ನಿಜ ಹೇಳಬೇಕೆಂದರೆ ಈ ಭಗವತ್ಪ್ರಸಾದವನ್ನು ಭಕ್ಷಣ ಮಾಡಿದವರ ಮುಪ್ಪು, ಸಾವು, ನೋವುಗಳು ಕೂಡ ದೂರಾಗಿವೆ. ಈ ಪ್ರಸಾದದ ಪ್ರಭಾವದಿಂದ ಇಲ್ಲಿರುವ ಭಕ್ತರಿಗೆಲ್ಲ ನಿತ್ಯ ಯೌವ್ವನ ಇ ಲೆ ಅನುಗ್ರಹ ಮಾಡು. ನಿನ್ನ ಜೊತೆಗೆ ಗೆಳೆತನವನ್ನು ಬೆಳೆಸಬೇಕೆಂದು ನಿರ್ಧರಿಸಿದ್ದೇನೆ. ವೈಷ್ಣವರ ಮೈತ್ರಿಯು ಸಂಸಾರದಿಂದ ಮಾನವರನ್ನು ಮುಕ್ತರನ್ನಾಗಿ ಮಾಡುತ್ತದೆ. ನಿನ್ನ ಸಹವಾಸದಿಂದ ನನಗೆ ಮತ್ತೆ ಮತ್ತೆ ಜಗನ್ನಾಥನ ದರ್ಶನ ಆಗುವದು. ಮಿತ್ರ! ನಾನು ಮರಳಿ ರಾಜಧಾನಿಗೆ ಹೋದ ಬಳಿಕ ನನ್ನಿಂದ ಇಲ್ಲಿಯ ಎಲ್ಲ ಸಮಾಚಾರ ತಿಳಿದ ನಂತರ ಇಂದ್ರದ್ಯುಮ್ನ ರಾಜನು ಇಲ್ಲಿಯೇ ಬಂದು ನೆಲೆಸುವನು. ಈ ಜಗನ್ನಾಥಸ್ವಾಮಿಯ ಮೇಲೆ ಒಂದು ದೊಡ್ಡ ವಿಶಾಲವಾದ ಮಂದಿರವನ್ನು ಕಟ್ಟಿಸಬೇಕೆಂದು ಅವನ ಅಪೇಕ್ಷೆ ಇದೆ. ಈ ಮಹಾಪ್ರಭುವಿನ ಸೇವೆ ಹಾಗೂ ಪೂಜಾ ಪರ್ಯುಪಾಸನೆಗಳಿಗಾಗಿ ಸಹಸ್ರಾ ು ಎಲ್ಲರೂ ವೈಕುಂಠದ ನಾಗರಿಕರೇ ಆಗುವರು. ಭಗವಂತನ ದರ್ಶನ ಮಾತ್ರದಿಂದ ಎಲ್ಲರ ಪಾಪಗಳು ಪರಿಹಾರವಾಗಿ ನರಕದ ಕಡೆ ಯಾವದೇ ಒಂದು ಪ್ರಾಣಿಯೂ ಬರುವದಿಲ್ಲ. ನಮ್ಮ ಈ ನರಕಾದಿ ಲೋಕಗಳನ್ನೆಲ್ಲ ನೀನು ಸೃಷ್ಟಿಸಿದ್ದಾದರೂ ಏಕೆ? ಎಂಬ ಯಮಧರ್ಮನ ಆಕ್ಷೇಪ. ಅದನ್ನು ಮನ್ನಿಸಿ ಭಗವಂತನು ಯಮಧರ್ಮನಿಗೆ - ''ನಾನು ಅತಿ ಶೀಘ್ರವಾಗಿ ಇಲ್ಲಿಯ ಬಂಗಾರದ ಮಳಲಿನಲ್ಲಿ ಅಡಗಿ ಅದೃಶ್ಯನಾಗುವೆನು'' ಎಂದು ವಚನವಿತ್ತಿದ್ದಾನೆ. ನಿನ್ನ ಪುಣ್ಯರಾಶಿಯು ಬಲವತ್ತರವಾಗಿದ್ದುದರಿಂದ ಈಗ ನಿನಗೆ ಆ ಭಗವಂತನ ಪ್ರತ್ಯಕ್ಷ ದರ್ಶನ ದೊರೆತಿದೆ. ಇಂದ್ರದ್ಯುಮ್ನ ಮಹಾರಾಜನು ಬರುವ ಹೊತ್ತಿಗೆ ನಿಶ್ಚಿತವಾಗಿಯೂ ಪರಮಾತ್ಮನು ಇಲ್ಲಿಂದ ಅದೃಶ್ಯನಾಗುವನು. ಆದರೆ ನೀನು ಇದನ್ನು ಇಂದ್ರದ್ಯುಮ್ನ ರಾಜರ ಮುಂದೆ ಹೇಳುವದು ಬೇಡ. ಮುಂದೆ ಆಗುವದೆಲ್ಲವೂ ಒಳ್ಳೆಯದಕ್ಕೆ ಆಗಲಿ ಎಂದು ಹಾರೈಸೋಣ.

ಹೀಗೆ ಅವರಿಬ್ಬರು ಮಿತ್ರರು ಸರಿರಾತ್ರಿಯ ವರೆಗೆ ಪುಣ್ಯಮಯವಾದ ಸಂಭಾಷಣೆ ಕಥಾಲಾಪನವನ್ನು ಮಾಡುತ್ತ ಚಿಗುರು ತಳಿರಿನ ಹಾಸಿಗೆಯ ಮೇಲೆ ಮಲಗಿದರು. ಬೆಳಗಾದ ಬಳಿಕ ಇಬ್ಬರೂ ತೀರ್ಥಸ್ನಾನ ಮಾಡಿ ಮತ್ತೊಮ್ಮೆ ಭಗವಂತನ ದರ್ಶನ ತೆಗೆದುಕೊಂಡು ರಾಜರು ಇಳಿದುಕೊಳ್ಳಲಿಕ್ಕೂ, ಉಳಿದುಕೊಳ್ಳಲಿಕ್ಕೂ ಯೋಗ್ಯವಾದ ಸ್ಥಾನಗಳನ್ನು ಆಯ್ಕೆಮಾಡಿ ಗುರುತಿಸಿಕೊಂಡು ಮರಳಿದರು. ಅನಂತರ ವಿದ್ಯಾಪತಿಯು ರಥಾರೂಢನಾಗಿ ಆವಂತಿಪುರಕ್ಕೆ ಹೊರಟನು. ರಥದಲ್ಲಿ ಕುಳಿತ ವಿದ್ಯಾಪತಿಯು 'ನನಗೆ ಈಗ ಜಗನ್ನಾಥ ಎಂದು ಹೆಸರಾದ ನೀಲಮಾಧವನ ದರ್ಶನವಾಯಿತು. ನಾನು ಆದರಿಂದ

ಧನ್ಯನಾದೆ. ಆದರೆ ಈ ಪುರುಷೋತ್ತಮ ತೀರ್ಥದ ಪ್ರದಕ್ಷಿಣೆ ಹಾಕಲು ನನಗೆ ಆಗಲಿಲ್ಲ. ಬೇಗನೇ ಈಗ ಈ ಕ್ಷೇತ್ರಪ್ರದಕ್ಷಿಣೆಯನ್ನು ಹಾಕಿಕೊಂಡು ಮರಳುವೆನು.'' ಎಂದು ನಿರ್ಧರಿಸಿ ಬಹು ಪರಿಶ್ರಮದಿಂದ ಆ ಕ್ಷೇತ್ರಪ್ರದಕ್ಷಿಣೆಯನ್ನು ಮಾಡಿ ಮುಗಿಸಿದನು. ಅನಂತರ ಭಗವಂತನ ಧ್ಯಾನವನ್ನು ಮಾಡುತ್ತ ಏನನ್ನೂ ತಿನ್ನದೇ ಕುಡಿಯದೇ ಸಂಜೆಯೊಳಗಾಗಿ ಆವಂತಿಪುರಕ್ಕೆ ಬಂದು ಮುಟ್ಟಿದನು.

ವಿದ್ಯಾಪತಿ ವಿಪ್ರನ ನೀಲಾಚಲದ ಶಿಖರದಲ್ಲಿ ವಿಶ್ವಾವಸು ಎಂಬ ಬೇಡನು ಎದುರು ತಂದಿರಿಸಿದ ಅನೇಕ ಅಲೌಕಿಕ ಪದಾರ್ಥಗಳಲ್ಲಿ ಜಗನ್ನಾಥ ಸ್ವಾಮಿಯ ಕೊರಳಲ್ಲಿ ಹಾಕಿದ ನಿರ್ಮಾಲ್ಯ ಪುಷ್ಪಮಾಲೆಯು ಇದ್ದಿತು. ಆ ಶಬರನು ಶ್ರದ್ಧೆಯಿಂದ ಕೊಟ್ಟ ನಾರಾಯಣನ ನಿರ್ಮಾಲ್ಯ ಪುಷ್ಪಮಾಲೆಯನ್ನು ಮಹಾರಾಜರಿಗೆ ಕೊಡಲಿಕ್ಕೆಂದು ವಿದ್ಯಾಪತಿಯು ತನ್ನೊಡನೆ ತೆಗೆದುಕೊಂಡು ಬಂದಿದ್ದ. ಅದನ್ನು ಈಗ ಕೈಯಲ್ಲಿ ಹಿಡಿದುಕೊಂಡು ಅರಮನೆಯನ್ನು ಪ್ರವೇಶಿಸಿದ. ರಾಜನು ತನ್ನ ಮಂತ್ರಿ ಪರಿವಾರದೊಂದಿಗೆ ವಿದ್ಯಾಪತಿಯ ದಾರಿಯನ್ನು ಕಾಯುತ್ತಲೇ ಕುಳಿತಿದ್ದ. ಕೈಯಲ್ಲಿ ಹಾರಹಿಡಿದುಕೊಂಡು, ಒಳಗೆ ಪ್ರವೇಶಿಸಿದ ಪುರೋಹಿತರನ್ನು ಕಂಡಕೂಡಲೇ ಸಿಂಹಾಸದಿಂದ ಎದ್ದು ನಿಂತು-

**ಜಯತು ಜಯತು ಜಗದೀಶಃ**
**ಜಯತು ಜಯತು ಜಗನ್ನಾಥಃ**
**ಪ್ರಸೀದತು ಪರಮಾತ್ಮಾ ।**

ಎಂದು ಬಾಯಿಂದ ನುಡಿಯುತ್ತ ಆ ವಿದ್ಯಾಪತಿಯ ಸಮೀಪಕ್ಕೆ ಬಂದನು. ಹಾಗೂ ಕೈಜೋಡಿಸಿ ನುಡಿದನು - ''ಇಂದು ನಾನು ಧನ್ಯನಾದೆ! ಆ ಜಗನ್ನಾಥನ ಕೊರಳಲ್ಲಿ ಹಾಕಿದ ಮಾಲೆಯನ್ನು ನೋಡಿ ನನಗೆ ಅವನನ್ನೇ ಕಂಡಂತಾಯಿತು. ಯಾವನ ಅಡಿಯ ಹುಡಿಯನ್ನು ತಮ್ಮ ಮುಡಿಯಲ್ಲಿ ಮುಡಿದುಕೊಂಡು ಬ್ರಹ್ಮಾದಿ ದೇವಗಳು ಭಾಗ್ಯೈಶ್ವರ್ಯಗಳನ್ನು ಪಡೆದಿರುವರೋ ಅಂಥ ಜಗದೀಶ್ವರನ ಮೈಗೆ ಹತ್ತಿ ಕೊರಳಿಗೆ ಹಾಕಿ ಎದೆ ಮುಟ್ಟಿ, ಉದರ ತಟ್ಟಿ, ಬಾಹುಗಳಿಗೆ ಹತ್ತಿ, ತಲೆಗೆ ಹಾಕಿ ಬಂದ ಅವನ ದೇಹದ ಸುಗಂಧದಿಂದ ಒಡಗೂಡಿದ ನಾರಾಯಣನ ಈ ನಿರ್ಮಾಲ್ಯ ಕುಸುಮ ಮಾಲೆಗೆ ನಾನು ಮೊದಲು ನಮಸ್ಕರಿಸುತ್ತೇನೆ'' ಎಂದು ಹೇಳಿ ವಿದ್ಯಾಪತಿಯ ಕೈಯಲ್ಲಿರುವ ಆ ಹೂವಿನ ಹಾರಕ್ಕೆ ಇಂದ್ರದ್ಯುಮ್ನ ರಾಜನು ಸಾಷ್ಟಾಂಗ ಪ್ರಣಾಮವನ್ನು ಮಾಡಿದ.

ಆಗ ವಿದ್ಯಾಪತಿ ಪುರೋಹಿತನು ''ನೀಲಾಚಲ ಶಿಖರದಲ್ಲಿರುವ ನೀಲ ಮಾಧವನು ನಿನ್ನನ್ನು ಅನುಗ್ರಹಿಸಲಿ'' ಎಂದು ಹೇಳಿ ಆಶೀರ್ವದಿಸಿ ತನ್ನ ಕೈಯಲ್ಲಿರುವ ನಾರಾಯಣನ ಆ ಪುಷ್ಪಹಾರವನ್ನು ಇಂದ್ರದ್ಯುಮ್ನ ರಾಜನ ಕೊರಳಲ್ಲಿ ಹಾಕಿದನು. ಸಾಕ್ಷಾತ್ ಶ್ರೀಹರಿಯೇ ತನ್ನ ಹೃದಯದಲ್ಲಿ ಬಂದು ಕುಳಿತಂತೆ ಎನಿಸಿತು ಆ ಮಹಾರಾಜನಿಗೆ. ಆಗ ಅವನು ಗದ್ಗದಿತ ಕಂಠನಾಗಿ ರೋಮಾಂಚಿತ ಶರೀರನಾಗಿ ಅಶ್ರುಪೂರ್ಣನೇತ್ರನಾಗಿ ಜಗನ್ನಾಥಸ್ವಾಮಿಯನ್ನು ಸ್ತೋತ್ರ ಮಾಡಿದನು.

**ಇಂದ್ರದ್ಯುಮ್ನ:-** ಭಗವನ್! ನಾರಾಯಣ. ಜಗನ್ನಾಥರೂಪಿಯಾದ ನಿನಗೆ ಜಯವಾಗಲಿ. ನಿನ್ನ ಒಂದೊಂದು ರೋಮ ರೋಮಗಳಲ್ಲಿಯೂ ಅಸಂಖ್ಯ ಬ್ರಹ್ಮಾಂಡಗಳು ಅಡಗಿವೆ. ಅನಾದಿಯಾದ ಸಂಸಾರ ಚಕ್ರದಲ್ಲಿ ಸಿಕ್ಕು ದುಃಖಪಡುವ ನಾನು ನಿನಗೆ ಶರಣು ಬಂದಿದ್ದೇನೆ. ನೀನು ರಕ್ಷಣೆಯನ್ನು ಮಾಡು.

ಹೀಗೆ ಭಗವಂತನ ಸ್ತೋತ್ರವನ್ನು ಮಾಡಿ ಇಂದ್ರದ್ಯುಮ್ನ ಮಹಾರಾಜನು ಹದಿನೆಂಟು ವಿದ್ಯೆಗಳಲ್ಲಿ ಕುಶಲನಾದ ವಿದ್ಯಾಪತಿ ಪುರೋಹಿತನನ್ನು ವೈಭವದಿಂದ ಪೂಜೆಮಾಡಿ ಸಭೆಯಲ್ಲಿ ಸತ್ಕರಿಸಿದನು. ಉಚ್ಚ ಆಸನದ ಮೇಲೆ ಕೂಡಿಸಿ ಅವನ ಬಾಯಿಂದ ಜಗನ್ನಾಥ ಕ್ಷೇತ್ರದ ಎಲ್ಲ ವಿಷಯ ವಿವರಗಳನ್ನು ವಿಶದವಾಗಿ ತಿಳಿದುಕೊಂಡನು. ವಿದ್ಯಾಪತಿಯು ಮಹಾರಾಜನ ಪ್ರಶ್ನೆಗೆ ಅನುಗುಣವಾಗಿ ಶಬರದ್ವೀಪದಲ್ಲಿ ತಾನು ಪ್ರವೇಶಿಸಿದ ಮೊದಲುಮಾಡಿ ಅವಂತೀಪುರಕ್ಕೆ ಬರುವವರೆಗೆ ಎಲ್ಲ ಸಮಾಚಾರವನ್ನು ಬಿತ್ತರಿಸಿ ಹೇಳಿದನು. ಮತ್ತು ಆ ಪುರುಷೋತ್ತಮ ಕ್ಷೇತ್ರದ ಯಾತ್ರೆಯ ವಿಷಯ ದಲ್ಲಿಯೂ ನೀಲಾಚಲ, ಶಿಖರಾರೋಹಣ, ನೀಲಮಾಧವ ದರ್ಶನ, ರೌಹಿಣ ಕುಂಡಸ್ನಾನ, ಕಲ್ಪವಟದ ಮಹಿಮೆ ಶ್ರೀನರಸಿಂಹದೇವರ ಪ್ರತಿಷ್ಠೆ ಎಂಟು ಶಿವಶಕ್ತಿಯರ ಸ್ಥಿತಿ, ರಥದಲ್ಲಿ ಕುಳಿತು ತಾನು ಪುರುಷೋತ್ತಮ ತೀರ್ಥದ ಪ್ರದಕ್ಷಿಣೆಯನ್ನು ಮಾಡುವಾಗ ತನ್ನ ದೃಷ್ಟಿಕ್ಷೇಮದಿಂದ ಅಳೆದು ತಿಳಿದುಕೊಂಡ ಆ ಕ್ಷೇತ್ರದ ಅಗಲ ಉದ್ದಳತೆ ಎಲ್ಲವನ್ನು ಮಹಾರಾಜನಿಗೆ ಬಣ್ಣಿಸಿ ಹೇಳಿದ. ಅವನು ಹೇಳುವದನ್ನು ಕೇಳಿದಾಗ ಮಹಾರಾಜನಿಗೆ ತಾನೇ ಆ ಕ್ಷೇತ್ರವನ್ನು ಪ್ರತ್ಯಕ್ಷವಾಗಿ ನೋಡುತ್ತಿದ್ದೇನೆ ಎಂಬುವ ಅನುಭವ ಉಂಟಾಯಿತು. ಇದನ್ನೆಲ್ಲಾ ಕೇಳಿ ಪ್ರಸನ್ನ ಮನಸ್ಕನಾದ ಮಹಾರಾಜನು ವಿದ್ಯಾಪತಿ ವಿಪ್ರನಿಗೆ ಕೇಳಿದನು-ಪುರೋಹಿತರೇ, ಆ ಜಗನ್ನಾಥ ಸ್ವಾಮಿಯ ಶ್ಯಾಮಸುಂದರವಾದ ವಿಗ್ರಹದ ಯತಾರ್ಥ ವರ್ಣನೆಯನ್ನು ಮಾಡಿರಿ.

**ವಿದ್ಯಾಪತಿ:-** ರಾಜಶ್ರೇಷ್ಠ! ಆ ಪರಮಾತ್ಮನ ದಿವ್ಯ ಮೂರ್ತಿಯು ಅತ್ಯಂತ ಪ್ರಾಚೀನತಮ. ಇಂದ್ರ ನೀಲಮಣಿ ಎಂಬ ನೀಲಶಿಲೆಯಿಂದ ಅದು ನಿರ್ಮಿತವಾಗಿದೆ. ಬ್ರಹ್ಮರುದ್ರ ಇಂದ್ರಾದಿ ದೇವತೆಗಳು ಪ್ರತಿದಿನವು ಬಂದು ಪೂಜೆಯನ್ನು ಮಾಡುತ್ತಾರೆ ದೇವತೆಗಳು ಬಂದು ಭಗವಂತನ ಪೂಜೆ ಮಾಡಿ ಅವನ ಕೊರಳಲ್ಲಿ ಹಾಕಿರುವದೇ ಈ ದಿವ್ಯಮಾಲೆ. ಅದನ್ನೇ ನಾನು ಅವನ ಪ್ರಸಾದ ಎಂದು ನಿನಗೆ ತಂದು ಕೊಟ್ಟಿದ್ದೇನೆ. ಇದು ಎಂದೂ ಬಾಡುವದಿಲ್ಲ. ಬತ್ತುವದಿಲ್ಲ. ಎಷ್ಟು ದಿನವಾದರೂ ಇದರ ದಿವ್ಯ ಸುಗಂಧವು ಕಡಿಮೆ ಆಗುವದಿಲ್ಲ ದೇವತೆಗಳು ಆ ಪರಮಾತ್ಮನಿಗೆ ದಿವ್ಯ ಉಪಹಾರವೆಂದು ತಂದಿಟ್ಟ ಪ್ರಸಾದವನ್ನು ಭಕ್ಷಣ ಮಾಡಿದ್ದರಿಂದ ನನ್ನ ಪಾಪಗಳೆಲ್ಲವೂ ಕಳೆದು ಹೋಗಿವೆ. ದುಷ್ಕರ್ಮಗಳೆಲ್ಲವೂ ಅಳಿದು ಹೋಗಿವೆ ದೈವೀ ಕಾಂತಿಯು ನನ್ನ ದೇಹದಲ್ಲಿ ಈಗ ಮಿಂಚುತ್ತಲಿದೆ. ನಿನ್ನ ಕಣ್ಣಿಗೆ ಕಾಣುತ್ತಿಲ್ಲವೆ? ಮಹಾರಾಜಾ! ಭೋಗ ಮತ್ತು ಮೋಕ್ಷ ಎರಡೂ ಒಂದು ಕಡೆ ಕೂಡಿರುವ ಸ್ಥಾನವೆಂದರೆ ಈ ಪುರುಷೋತ್ತಮ ಕ್ಷೇತ್ರ. ಅಲ್ಲಿ ನೆಲೆನಿಂತ ಭಗವಾನ್ ಜಗನ್ನಾಥನು ಶರಣಾಗತರಾದವರಿಗೆ ಅಮೃತಮಯವಾದ ಮೋಕ್ಷವನ್ನು ಕರುಣಿಸುತ್ತಾನೆ.

### ಜಗನ್ನಾಥ ಸ್ವಾಮಿಯ ನೀಲಮಣಿಮಯ ಮೂರ್ತಿಯ ವರ್ಣನೆ

**ಇಂದ್ರದ್ಯುಮ್ನ:-** ಪುರೋಹಿತ ಶ್ರೇಷ್ಠರೇ! ನೀವು ಹುಟ್ಟಿದ ಬಳಿಕ ಈ ಮೊದಲು ಒಮ್ಮೆಯೂ ಪುರುಷೋತ್ತಮ ಕ್ಷೇತ್ರಕ್ಕೆ ಹೋಗಿಲ್ಲ. ಅಲ್ಲಿಯ ದಿವ್ಯ ವೃತ್ತಾಂತಗಳನ್ನೆಲ್ಲ ಹೇಗೆ ತಿಳಿದುಕೊಂಡಿರಿ?

**ವಿದ್ಯಾಪತಿ:-** ಮಹಾರಾಜರೇ! ನಾನು ಸಂಧ್ಯಾಸಮಯದಲ್ಲಿ ಆ ಪುರುಷೋತ್ತಮ ತೀರ್ಥದ ಸಮೀಪದ ಕಾಡಿನಲ್ಲಿ ಹೊರಟಿದ್ದೆ, ಅಲ್ಲಿ ವಿಶ್ವಾವಸು ಎಂಬ ಒಬ್ಬ ಬೇಡರ ಜಾತಿಯ ನನ್ನ ಮಿತ್ರನು ನನಗೆ ದಿವ್ಯ ಭೋಜನ ದಿವ್ಯ ಉಪಹಾರ ಹಾಗೂ ದಿವ್ಯಮಾಲೆಗಳನ್ನು ಕೊಟ್ಟನು. ಎಂದೂ ಬಾಡದ ಈ ದೇವ ಪುಷ್ಪಗಳ ಮಾಲೆಯು ಪಾಪಗಳನ್ನು ತೊಡೆಯುತ್ತದೆ. ದಾರಿದ್ರ್ಯವನ್ನು ದೂರ ಮಾಡುತ್ತದೆ. ರಾಜ್ಯಸುಖವನ್ನು ನೀಡುತ್ತದೆ. ಆದುದರಿಂದ ಇದು ನಿಮಗೆ ಯೋಗ್ಯ ಎಂದು ಇದನ್ನು ನಿಮಗೆ ತಂದು ಕೊಟ್ಟಿದ್ದೇನೆ.

ಪರಮಾತ್ಮನ ಆ ದಿವ್ಯಕ್ಷೇತ್ರವು ಸುತ್ತಕಡೆಯಿಂದ ವನಶ್ರೇಣಿಯಿಂದ ಆವೃತವಾಗಿದೆ. ಅದರ ನಟ್ಟ ನಡುವೆ ನೀಲಾಚಲ. ಅದರ ಉದ್ದಳತೆ ಹನ್ನೆರಡು ಮೈಲು. ಸಮುದ್ರ ತೀರದಲ್ಲಿ ಬಂಗಾರದ ಬಣ್ಣದ ಮಳಲರಾಶಿಯಿಂದ ವ್ಯಾಪ್ತವಾಗಿದೆ ಆ ಪ್ರದೇಶ. ಪರ್ವತದ ಶಿಖರದಲ್ಲಿ ಎತ್ತರವಾದ ಒಂದು ಅರಳೆಯ ಮರುವಿದೆ. ಪ್ರಳಯ ಕಾಲದಲ್ಲಿಯೂ ದು ಮುಳುಗುವದಿಲ್ಲ. ಅದಕ್ಕೆ ಹೂವಿಲ್ಲ. ಹಣ್ಣಿಲ್ಲ. ಯಾವಾಗಲೂ ಬಣ್ಣ ಬಣ್ಣದ ಚಿಗುರುಗಳಿಂದ ಹೊಗರೇರಿ ನಿಂತಿರುತ್ತದೆ. ಅಲ್ಲಿಂದ ಪಶ್ಚಿಮಕ್ಕೆ ರೋಹಿಣಿ ಕುಂಡ ಎಂಬ ಜಲಾಶಯ. ಅದರಲ್ಲಿ ಇಳಿಯಲು ನೀಲ ಹರಳಿನ ಮೆಟ್ಟಲುಗಳು. ಆ ಹೊಕ್ಕರಣಿಯ ಹೊರಗೆ ನಾಲ್ಕು ದಿಕ್ಕುಗಳಲ್ಲಿ ಸ್ಫಟಿಕ ಮಣಿಯ ವೇದಿಕೆಗಳು. ಪೂರ್ವ ದಿಕ್ಕಿನ ವೇದಿಕೆಯ ಮಧ್ಯಭಾಗದಲ್ಲಿ ಇಂದ್ರನೀಲಮಣಿಯ ಕಾಂತಿಯಿಂದ ಒಡಗೂಡಿದ ಭಗವಾನ್ ಶ್ರೀವಿಷ್ಣುವು ವಿರಾಜಮಾನನಾಗಿದ್ದಾನೆ.

ಈ ಪರಮಾತ್ಮನ ನೀಲಮೇಘಶ್ಯಾಮ ಸುಂದರವಾದ ವಿಗ್ರಹವು ಎಂಬತ್ತೊಂದು ಅಂಗುಲ ಉದ್ದವಾಗಿದ್ದು ಬಂಗಾರದ ಕಮಲದ ಮೇಲೆ ನಿಂತುಕೊಂಡಿದೆ. ಈ ಭಗವನ್ ಮೂರ್ತಿಯ ಮುಖ ಚಂದ್ರಕಾಂತಿಯಿಂದ ಮೂರು ವಿಧವಾದ ಸಂಸಾರ ತಾಪಗಳು, ನೂರು ವಿಧವಾದ ಸಂಸಾರ ಚಿಂತೆಗಳು ನಿವಾರಣೆಗೊಳ್ಳುವವು ಇದೊಂದು ಕಲ್ಲಿನ ಮೂರ್ತಿಯಾದರೂ ತುಟಿಯಲ್ಲಿ ಸುಂದರವಾದ ಮಂದಹಾಸವು ಯಾವಾಗಲೂ ಮಿನುಗುತ್ತಿರುವದು. ಕಿವಿಗಳಲ್ಲಿ ಕುಂಡಲ, ವಕ್ಷಸ್ಥಳದಲ್ಲಿ ಕೌಸ್ತುಭಮಣಿ, ನಡುವಿನಲ್ಲಿ ಪೀತಾಂಬರ. ತಲೆಯ ಮೇಲೆ ಮುಕುಟ, ಕೈಗಳಲ್ಲಿ ಶಂಖ ಚಕ್ರಾದಿ ಆಯುಧಗಳು ಎಡಬದಿಯಲ್ಲಿ ವೀಣಾಪಾಣಿಯಾದ ಲಕ್ಷ್ಮೀದೇವಿ, ಹಿಂಬದಿಯಲ್ಲಿ ತನ್ನ ಹೆಡೆಗಳನ್ನು ಕೊಡೆಯಂತೆ ಬಿಡಿಸಿ ಹಿಡಿದ ಆದಿಶೇಷ. ಎದುರುಗಡೆ ಪ್ರಕಾಶಸ್ವರೂಪವಾಗಿ ದಿವ್ಯದೇಹವನ್ನು ಧರಿಸಿಕೊಂಡು ನಿಂತ ದಿವ್ಯಚಕ್ರ. ಅದರ ಬದಿಯಲ್ಲಿಯೇ ಕೈಜೋಡಿಸಿ ನಿಂತುಕೊಂಡ ಗರುಡದೇವ. ಇಂಥ ಅದ್ಭುತರೂಪವನ್ನು ಧರಿಸಿ ಭಕ್ತರ ಮೇಲೆ ಅನುಗ್ರಹವನ್ನು ಮಾಡಲು ಬಂದು ನಿಂತ ಶ್ರೀಜಗನ್ನಾಥಸ್ವಾಮಿಯ ದಿವ್ಯ ವಿಗ್ರಹವನ್ನು ಕಂಡಬಳಿಕ ಮನಸ್ಸು ಎಲ್ಲಿದ್ದರೂ ಹಗ್ಗಹಾಕಿ ಎಳೆದಂತೆ ಮತ್ತೆ ಮತ್ತೆ ಅಲ್ಲಿಯೇ ಹೋಗುವದು. ಅವನನ್ನೇ ನೆನೆಯುವುದು, ಅಲ್ಲಿಯೇ ಸುತ್ತು ಹಾಕುವದು. ಯಾವ ಯಜ್ಞ ತಪಸ್ಸು, ವ್ರತಗಳಿಂದಲೂ ಭಗವಂತನ ಇಂಥ ರೂಪವನ್ನು ಸಾಕ್ಷಾತ್ಕರಿಸುವದು ಸಾಧ್ಯವಿಲ್ಲ. ಈ ಭಗವಂತನ ಧ್ಯಾನ ಮಾಡಿ ದವರು, ದರ್ಶನ ತೆಗೆದುಕೊಂಡವರು ಭಕ್ತಿಯಿಂದ ಸೇವಿಸಿದವರು. ಎಲ್ಲ ಬಂಧನದಿಂದ ಮುಕ್ತರಾಗಿ ವೈಕುಂಠ ಮಂದಿರದಲ್ಲಿ ಪ್ರವೇಶಿಸುವರು. ರಾಜನ್! ಆ ಜಗನ್ನಾಥಸ್ವಾಮಿಯ ಅಲ್ಲಿರುವ ಆ ಸೇವಕನಿಂದಲೇ ಭಗವಂತನ ಈ ಎಲ್ಲ ಮಹಾತ್ಮೆಯನ್ನು ತಿಳಿದುಕೊಂಡು ಬಂದು ನಿನಗೆ ನಾನು ಹೇಳಿದ್ದೇನೆ. ನಿನ್ನ ಇಚ್ಛೆಯಂತೆ ನೀನು ಮಾಡಬಹುದು.

**ಇಂದ್ರದ್ಯುಮ್ನ:-** ''ಪೂಜ್ಯರೇ! ನಿಮ್ಮ ಮಾತಿನ ಮೇಲೆ ನನಗೆ ಸಂಪೂರ್ಣ ವಿಶ್ವಾಸವಿದೆ. ನಿಮ್ಮ ಬಾಯಿಂದ ಭಗವಂತನ ಸ್ವರೂಪದ ವರ್ಣನೆಯನ್ನು ಕೇಳಿ ದಿವ್ಯವಾದ ಈ ಪ್ರಸಾದದ ಮಾಲೆಯನ್ನು ಪಡೆದು, ಇಂದು ನಾನು ಕೃತಕೃತ್ಯನಾದೆ. ನನ್ನ ಪಾಪರಾಶಿಯೆಲ್ಲವೂ ನಷ್ಟವಾಗಿ ಹೋಗಿದೆ. ಈಗ ನಾನು ಆ ಭಗವಂತನಾದ ಲಕ್ಷ್ಮೀಪತಿಯ ದರ್ಶನಕ್ಕೆ ಅಧಿಕಾರಿ ಆಗಿದ್ದೇನೆ. ಈಗ ಸರ್ವಪ್ರಯತ್ನದಿಂದ ಆ ಪುರುಷೋತ್ತಮ ತೀರ್ಥದ ಯಾತ್ರೆಯನ್ನು ಕೈಕೊಳ್ಳುತ್ತೇನೆ. ಆ ತೀರ್ಥದ ದಂಡೆಯಲ್ಲಿ ದೇವರಿಗೆ ಒಂದು ದಿವ್ಯ ಧಾಮ. ಸುತ್ತಲೂ ನಗರ, ದುರ್ಗ, ಪ್ರಾಕಾರ ಎಲ್ಲವನ್ನು ಮಾಡಿಸುತ್ತೇನೆ. ಪ್ರತಿದಿನವೂ ನೂರಾರು ರೀತಿಗಳಿಂದ ಆ ಪರಮಾತ್ಮನ ಸೇವಾ ಶುಶ್ರೂಷಾ, ಪೂಜೆ, ಆರಾಧನೆ, ಪರ್ಯುಪಾಸನೆ, ಮೊದಲಾಗಿ ಬೇರೆ ಬೇರೆ ಅರ್ಚನೆಯ ಪ್ರಕಾರಗಳಿಂದ ಉಪಚಾರಗಳನ್ನು ಏರ್ಪಡಿಸುತ್ತೇನೆ.''

ಹೀಗೆ ಇಂದ್ರದ್ಯುಮ್ನ ಮಹಾರಾಜನು ಆ ಪುರುಷೋತ್ತಮ ಕ್ಷೇತ್ರದಲ್ಲಿ ತಾನು ಮಾಡಬೇಕೆಂದಿರುವದನ್ನು ವಿವರಿಸುತ್ತಿರುವಾಗಲೇ ಅಲ್ಲಿಗೆ ನಾರದರು ಬಂದರು. ಅವರಿಗೆ ಸ್ವಾಗತ ನೀಡಿ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಆಸನದ ಮೇಲೆ ಕೂಡಿಸಿ ಕೈಜೋಡಿಸಿ ಕೇಳಿದ. ''ದೇವ ಮುನಿಯೇ, ತಮ್ಮ ಆಗಮನದಿಂದ ನನ್ನ ಯಜ್ಞ, ದಾನ, ತಪ, ಸ್ವಾಧ್ಯಾಯ ಎಲ್ಲವೂ ಸಾರ್ಥಕವಾದವು. ನಾನು ತಮ್ಮ ಯಾವ ಸೇವೆಯನ್ನು ಮಾಡಬೇಕು?''

**ನಾರದ:-** ರಾಜನೇ! ನಿನ್ನ ನಿರ್ಮಲವಾದ ಗುಣಗಳಿಂದ ಬ್ರಹ್ಮಾದಿದೇವತೆಗಳು ಸರ್ವಮುನಿ ಮನುಜರು ಪ್ರಸನ್ನರಾಗಿದ್ದಾರೆ. ನೀಲಾಚಲ ಗುಹೆಯಲ್ಲಿ ವಾಸಮಾಡಿದ ಮಾಧವನ ಸೇವೆಗಾಗಿ ನೀನು ಅಲ್ಲಿ ಮಾಡಬೇಕೆಂದಿರುವ ಕಾರ್ಯಯೋಜನೆಗಳೆಲ್ಲವೂ ಸರ್ವಥಾ ಶ್ಲಾಘನೀಯ. ಈ ಸಂಸಾರ ಸಮುದ್ರದಲ್ಲಿ ಮುಳುಗುವ ಮನುಷ್ಯರನ್ನು ತಾರಣ ಮಾಡುವ ಒಂದೇ ಒಂದು ನೌಕೆ ಎಂದರೆ ವಿಷ್ಣುಭಕ್ತಿ. ಪ್ರಾಣಿಗಳ ಪಾಪರಾಶಿಗಳೆಲ್ಲವು ವಿಷ್ಣುಭಕ್ತಿ ಎಂಬ ಅಗ್ನಿಯಲ್ಲಿ ಅರಳೆಯಂತೆ ಉರಿದು ಹೋಗುತ್ತವೆ.

**ಅಶ್ವಮೇಧಃ ಕ್ರತುವರೋ ದಾನಾನಿ ಸುಮಹಾಂತಿ ಚ ।**
**ವ್ರತೋಪವಾಸ ನಿಯಮಾಃ ಸಹಸ್ರಾಣ್ಯರ್ಜಿತಾ ಅಪಿ ॥**

**ಸಮೂಹ ಏಷಾಮೇಕತ್ರ ಗಣಿತಃ ಕೋಟಿ ಕೋಟಿಭಿಃ ।**
**ವಿಷ್ಣುಭಕ್ತೇಃ ಸಹಸ್ರಾಂಶಸಮಾಸ್ತಾ ನ ಹಿ ಕೀರ್ತಿತಾಃ**

ಯಜ್ಞಗಳಲ್ಲಿ ಶ್ರೇಷ್ಠವಾದ ಅಶ್ವಮೇಧ ಯಜ್ಞ, ದೊಡ್ಡ ದೊಡ್ಡ ದಾನಗಳು, ವ್ರತ, ಉಪವಾಸ, ನಿಯಮ ಮುಂತಾದವುಗಳನ್ನು ಸಾವಿರ ಬಾರಿ ಮಾಡಿ ಗಳಿಸಿದ ಪುಣ್ಯರಾಶಿಯನ್ನು ಕೋಟಿಸಂಖ್ಯೆಯಿಂದ ಗುಣಿಸಿದಷ್ಟು ಪ್ರಮಾಣದ ಪುಣ್ಯವು ಕೂಡ ವಿಷ್ಣುಭಕ್ತಿಯ ಸಾವಿರದ ಒಂದು ಅಂಶಕ್ಕೂ ಸಮನಾಗುವದಿಲ್ಲ.'' ನಾರದರು ಹೇಳಿದ ಈ ವಿಷ್ಣುಭಕ್ತಿಯ ಮಾಹಾತ್ಮ್ಯವನ್ನು ಕೇಳಿ ಇಂದ್ರದ್ಯುಮ್ನರಾಜನ ಮನಸ್ಸಿನಲ್ಲಿ ವಿಷ್ಣುಭಕ್ತಿಯ ಸ್ವರೂಪವನ್ನು ತಿಳಿದುಕೊಳ್ಳಬೇಕು ಎಂಬ ಇಚ್ಛೆಯು ಹುಟ್ಟಿತು. ಆದುದರಿಂದ ಅವನು ಕೇಳಿದನು- ''ಪೂಜ್ಯರೇ, ಭಕ್ತಿಯ ಲಕ್ಷಣವೇನು? ಭಕ್ತಿಯ ಸ್ವರೂಪ ಏನು? ಇದನ್ನು ನನಗೆ ಹೇಳಿರಿ.''

**ನಾರದ**-ರಾಜನೇ! ಭಕ್ತಿಯ ಲಕ್ಷಣವನ್ನು ಹೇಳುತ್ತೇನೆ. ಸಾವಧಾನವಾಗಿ ಕೇಳು. ಸಾತ್ವಿಕ, ರಾಜಸ, ತಾಮಸ ಮತ್ತು ನಿರ್ಗುಣ ಎಂದು ನಾಲ್ಕು ವಿಧವಾಗಿದೆ ಈ ಭಗವದ್ಭಕ್ತಿ. ಕಾಮ ಕ್ರೋಧದಿಂದ ಮಾಡುವ ಭಕ್ತಿಯೂ ಉಂಟು. ಸ್ವಾರ್ಥ ಹಾಗು ಇನ್ನೊಬ್ಬರಿಗೆ

ಕೇಡನ್ನು ಮಾಡುವ ಭಕ್ತಿಯೂ, ತನಗೆ ಮಾತ್ರ ಲಾಭ, ಹೆರವರಿಗೆ ಹಾನಿಯಾಗಲಿ ಎಂದು ಮಾಡುವ ಭಕ್ತಿಯೂ ತಾಮಸೀ ಭಕ್ತಿ'' ಎಂದು ಕರೆಯಲ್ಪಡುತ್ತದೆ. ಹೆಚ್ಚಿನ ಯಶಸ್ಸಿನ ಪ್ರಾಪ್ತಿಗಾಗಿ ಅಥವಾ ಇನ್ನೊಬ್ಬರೊಡನೆ ಸ್ಪರ್ಧೆಯನ್ನು ಮಾಡಿ ಬೆಳೆಸಿದ ಭಕ್ತಿಯೂ ಒಂದು ವಿಶಿಷ್ಟ ಉದ್ದೇಶಕ್ಕಾಗಿ ಮಾಡುವ ಭಕ್ತಿಯೂ, ರಾಜಸೀ ಭಕ್ತಿ ಎಂದು ಕರೆಯಲ್ಪಡುತ್ತವೆ. ಈ ಸಂಸಾರವೆಲ್ಲವೂ ನಶ್ವರ, ಮೋಕ್ಷವೇ ಶಾಶ್ವತ ಎಂದು ತಿಳಿದುಕೊಂಡು ತನ್ನ ವರ್ಣಾಶ್ರಮ ಧರ್ಮವನ್ನು ಬಿಡದೆ ಆತ್ಮಜ್ಞಾನಕ್ಕಾಗಿ ಮಾಡುವ ಭಕ್ತಿಯು ಸಾತ್ವಿಕ ಭಕ್ತಿ ಎಂದು ಕರೆಯಲ್ಪಡುತ್ತದೆ. ಈ ಜಗತ್ತೆಲ್ಲವೂ ಪರಮಾತ್ಮನ ಸ್ಥೂಲರೂಪ. ಅವನ ಹೊರತು ಬೇರೆ ಯಾರೂ ಈ ಜಗತ್ತಿಗೆ ಕಾರಣರಲ್ಲ. ನಾನು ಕೂಡ ಆ ಭಗವಂತನದೇ ಒಂದು ಭಿನ್ನ ಅಂಶ. ಹೀಗೇ ತಿಳಿದು ಬಾಹ್ಯ ಉಪಾಧಿಗಳನ್ನೆಲ್ಲ ಬಿಟ್ಟು ಭಗವಂತನ ಸ್ವರೂಪವನ್ನು ಅತ್ಯಧಿಕ ಪ್ರೇಮದಿಂದ ಚಿಂತಿಸುತ್ತ ಇರುವದಕ್ಕೆ ನಿರ್ಗುಣಭಕ್ತಿ ಎನ್ನುವರು. ಇದಕ್ಕೆ ಅದ್ವೈತ ಭಕ್ತಿ ಎಂತಲೂ ಕರೆಯುವರು. ಈ ಅದ್ವೈತಭಕ್ತಿಯು ಮೋಕ್ಷಕ್ಕೆ ಸಾಕ್ಷಾತ್ ಸಾಧನವಾಗಿದೆ.

ಈಗ ನಾನು ವಿಷ್ಣುಭಕ್ತರ ಲಕ್ಷಣವನ್ನು ಹೇಳುತ್ತೇನೆ ಕೇಳು. ಯಾರ ಮನಸ್ಸು ಅತ್ಯಂತ ಶಾಂತವಾಗಿದೆಯೋ ಮತ್ತು ಯಾವಾಗಲೂ ತನ್ಮಯವಾಗಿ ಭಗವಂತನಲ್ಲಿ ನೆಟ್ಟಿರುವದೋ ಸದಾ ಸರ್ವದಾ ಶ್ವಾಸೋಚ್ಛ್ವಾಸದಂತೆ ಯಾರು ಧ್ಯಾನವನ್ನು ಮಾಡುತ್ತಾ ಇರುತ್ತಾರೋ, ಅವನು ನಿಜವಾದ ವಿಷ್ಣುಭಕ್ತನೆಂದು ತಿಳಿಯಬೇಕು. ಇಂದ್ರಿಯ ವಿಜಯ, ಭೂತದಯೆ, ಪರದ್ರೋಹದಿಂದ ಪರಾಙ್ಮುಖತೆ, ಸದಾಚಾರ, ಅಹಿಂಸೆ, ಪರೋಪಕಾರ, ಭಗವದ್ಭಕ್ತಿ, ವೇದಶಾಸ್ತ್ರಗಳಲ್ಲಿ ವಿಶ್ವಾಸ, ಇವು ಭಗವದ್ಭಕ್ತರಲ್ಲಿ ಇರಬೇಕಾದ ಮುಖ್ಯ ಗುಣಗಳು. ಇವೇ ಅವರ ಪ್ರಧಾನ ಲಕ್ಷಣಗಳೂ ಆಗಿವೆ. ಅವಿವೇಕಿಗಳು ವಿಷಯ ಸುಖಗಳಲ್ಲಿ ಸ್ತ್ರೀ, ಧನ ಮುಂತಾದವುಗಳ ಮೇಲೆ ಮಾಡುವ ಪ್ರೀತಿಯನ್ನು ನಿಜವಾದ ಭಕ್ತರು ಶ್ರೀಹರಿಯಲ್ಲಿ ನೂರು ಕೋಟಿ ಪಟ್ಟು ಮಿಗಿಲಾಗಿ ಮಾಡುವರು.

**ವಿಷಯೇಷ್ವ ವಿವೇಕಿನಾಂ ಯಾ ಪ್ರೀತಿರುಪಜಾಯತೇ**
**ವಿತನ್ವತೇ ತು ತಾಂ ಪ್ರೀತಿಂ ಶತಕೋಟಿಗುಣಾಂ ಹರೌ ॥**

ಎಲ್ಲಕ್ಕಿಂತಲೂ ಹರಿಯಲ್ಲಿಯೇ ನಿಜವಾದ ಭಕ್ತರಿಗೆ ಅಧಿಕಾಧಿಕವಾದ ಪ್ರೇಮ ಪ್ರವಾಹವು ಹೃದಯದಲ್ಲಿ ಉಕ್ಕಿ ಹರಿಯುತ್ತಿದೆ. ಇಂಥ ಭಕ್ತರು ಯಾವ ದೇವರನ್ನು ಪೂಜಿಸಿದರೂ ಅಲ್ಲಿ ಎಲ್ಲ ವಿಷ್ಣುವನ್ನೇ ಕಂಡು ವಿಷ್ಣುಪೂಜೆಯನ್ನೇ ಮಾಡುತ್ತಾರೆ. ಪಿತೃಗಳನ್ನು ಉದ್ದೇಶಿಸಿ ಮಾಡಿದ ಶ್ರಾದ್ಧದಲ್ಲಿಯೂ ಆ ಪಿತ್ರಂತರ್ಗತನಾದ ಜನಾರ್ದನನ್ನೇ ಉದ್ದೇಶಿಸಿ ಶ್ರೀವಿಷ್ಣುಪ್ರೀತಿಯಾಗಲಿ ಎಂದು ಪಿತೃಕಾರ್ಯ ಮಾಡುತ್ತಾರೆ.

ವಿಷ್ಣುವಿನ ಹೊರತು ಬೇರೆ ಪೂಜನೀಯ ವಸ್ತುಗಳೇ ಅವರಿಗೆ ಇರುವದಿಲ್ಲ. ವ್ಯಷ್ಟಿ, ಸಮಷ್ಟಿ ಎಲ್ಲವೂ ಭಗವತ್ ಸ್ವರೂಪ. ಶ್ರೀಹರಿಯು ಜಗತ್ತಿನಿಂದ ಭಿನ್ನನಾದರೂ ಅವೆಲ್ಲವುಗಳ ಅಂತರ್ಯಾಮಿಯಾಗಿ ಸರ್ವತ್ರವೂ ವ್ಯಾಪ್ತನಾಗಿ ಸರ್ವಸತ್ತಾಪ್ರದನಾಗಿ, ಸರ್ವಚೇಷ್ಟಾಕಾರಣನಾಗಿ ಇದ್ದುದರಿಂದ ಅವನು ಸರ್ವಮಯ ಎನ್ನುವ ಅರ್ಥದಲ್ಲಿ ಎಲ್ಲದರಿಂದ ಅಭಿನ್ನನೂ ಆಗಿದ್ದಾನೆ. ಇಂಥ ಸರ್ವಾತ್ಮಕನಾದ ಹರಿಯು ಸರ್ವತ್ರ ಇದ್ದುದರಿಂದ ಹರಿಭಕ್ತರು ಉಚ್ಚ, ನೀಚ, ಶತ್ರು, ಮಿತ್ರ ಮುಂತಾದರಲ್ಲೆಲ್ಲ ಸಮಾನ ದೃಷ್ಟಿ ಉಳ್ಳವರು ಆಗಿರುತ್ತಾರೆ.

**ದೃಷದಿ ಪರಧನೇ ಲೋಷ್ಠಖಂಡೇ**
**ಪರವನಿತಾಸು ಕೂಟ ಶಾಲ್ಮಲೀಷು ॥**
**ಸಖಿ-ರಿಪು-ಸಹಜೇಷು ಬಂಧುವರ್ಗೇ ।**
**ಸಮಮತಯಃ ಖಲು ವೈಷ್ಣವಾಃ ಪ್ರಸಿದ್ಧಾಃ ॥**

ಕಲ್ಲು, ಪರದ್ರವ್ಯ, ಕಟ್ಟಿಗೆಯ ತುಂಡು, ಪರಸ್ತ್ರೀ, ಮುಳ್ಳುಕಂಟಿ, ಮಿತ್ರ, ವೈರಿ, ಬಂಧುವರ್ಗ ಮುಂತಾದ ಎಲ್ಲರಲ್ಲಿಯೂ ಶ್ರೀಹರಿಯ ಸನ್ನಿಧಾನ ಇರುತ್ತದೆ ಎಂದು ಸಮಾನ ದೃಷ್ಟಿಯಿಂದ ನೋಡುವ ಸಾಧು-ಸಂತರು ವೈಷ್ಣವ ಎಂದರೆ ವಿಷ್ಣುಭಕ್ತರು ಎಂದು ಕರೆಯಲ್ಪಡುತ್ತಾರೆ. ಅಹಂಕಾರ, ಕ್ರೋಧ, ಕಾಮ, ಲೋಭಗಳ ವಶರಾಗದೆ ಸತತವೂ ಭಗವಂತನ ನಾಮ ಸಂಕೀರ್ತನ ಗೈಯುತ್ತ ಶ್ರೀನೃಸಿಂಹ ದೇವರ ಪೂಜೆ ಮಾಡುವವರು ವಿಷ್ಣುಭಕ್ತರು ಎಂದು ತಿಳಿದುಕೊ.

ಇನ್ನು ಯಾರು ಭಕ್ತರು ಅಲ್ಲ ಎನ್ನುವದನ್ನು ಹೇಳುತ್ತೇನೆ ಕೇಳು. ಸ್ವಯಂ ಸದಾಚರಣೆಯನ್ನು ಮಾಡದವರು, ವೇದಶಾಸ್ತ್ರೋಕ್ತವಾದ ಧರ್ಮಕರ್ಮಾನುಷ್ಠಾನಗಳನ್ನು ತಪ್ಪದೇ ಮಾಡುವವರ ದ್ವೇಷ ಮಾಡುವವರು, ತಮ್ಮ ತಮ್ಮ ಹೃದಯದಲ್ಲೇ ಇರುವ ಶ್ರೀಹರಿಯನ್ನು ಒಮ್ಮೆಯೂ ನೆನೆಯದೆ ಕೇವಲ ದ್ರವ್ಯ, ಮಡದಿ ಮಕ್ಕಳು ಹಾಗೂ ವಿಷಯ ಭೋಗಗಳಲ್ಲಿಯೇ ಆಸಕ್ತರಾಗಿರುವರು ಮತ್ತು ಯಾರ ಮನಸ್ಸಿನಲ್ಲಿ ಪರಸ್ತ್ರೀ, ಪರಧನ, ಪರದ್ರೋಹಗಳ ಬಗೆಗೆ ಆತ್ಯಾಸಕ್ತಿಯಿದ್ದು ಅದಕ್ಕಾಗಿಯೇ ಯಾರು ಪ್ರಯತ್ನವನ್ನು ಯಾವಾಗಲು ಮಾಡುತ್ತಲಿರುವರೋ ಮತ್ತು ಹಿಂಸೆ ಪರಪೀಡೆ, ದುರ್ಜನರ ಸಹವಾಸ, ವೇದಶಾಸ್ತ್ರ ದ್ವೇಷ, ಹರಿದ್ವೇಷಗಳನ್ನು ಮಾಡುವರೋ, ಅವರೆಲ್ಲರೂ ದೇವರ ಭಕ್ತರು ಅಲ್ಲ ಎಂದು ಗುರುತಿಸಬೇಕು ಮತ್ತು ಅಂಥ ದೇವ ದ್ವೇಷಿಗಳಿಂದ ಆದಷ್ಟು ದೂರವೇ ಇರಬೇಕು.

## ಇಂದ್ರದ್ಯುಮ್ನ ರಾಜನ ಪುರುಷೋತ್ತಮ ಕ್ಷೇತ್ರ ದರ್ಶನ

**ಜೈಮಿನಿ:-** ಬ್ರಹ್ಮಪುತ್ರರಾದ ದೇವರ್ಷಿನಾರದರು ಈ ರೀತಿಯಾಗಿ ಭಗವದ್ ಭಕ್ತಿಯ ವರ್ಣನೆಯನ್ನು ಮಾಡಿದ್ದು ಕೇಳಿ ಅತ್ಯಂತ ಸುಪ್ರಸನ್ನನಾದ ಇಂದ್ರದ್ಯುಮ್ನ ಮಹಾರಾಜನು ನಾರದರನ್ನು ಕುರಿತು ಈ ರೀತಿಯಾಗಿ ಹೇಳಿದ "ಪೂಜ್ಯರೆ, ಸಾಧು ಸತ್ಪುರುಷರ ಸಂಗವು, ಸಂಸಾರ ರೂಪವಾದ ರೋಗವನ್ನು ಪರಿಹರಿಸುವದು ಎಂದು ಹಿಂದಿನ ಹಿರಿಯರು ಹೇಳುವದನ್ನು ನಾನು ಕೇಳಿದೆ. ಇಂದು ಅಂಥ ಸತ್ಪುರುಷರ ಸಂಗವು ನನಗೆ ತಾನಾಗಿ ಈಗ ಒದಗಿ ಬಂದಿದೆ. ತಮ್ಮಂಥ ಸಾಧು ಶ್ರೇಷ್ಠರ ಸಹವಾಸ ಹಾಗೂ ಸತ್ಸಂಗಗಳಿಂದ ನನ್ನ ಅಜ್ಞಾನರೂಪವಾದ ಅಂಧಕಾರವು ತೊಲಗಿದೆ.

ಮನಸ್ಸಿನಲ್ಲಿ ಆ ನೀಲಮಾಧವನ ಪೂಜೆಯನ್ನು ಮಾಡಬೇಕು ಎಂಬ ಉತ್ಕಟ ಇಚ್ಛೆಯು ಉತ್ಪನ್ನವಾಗಿದೆ. ಆದುದರಿಂದ ತಾವು ಈಗ ನನ್ನ ರಥದಲ್ಲಿ ಕೂಡಬೇಕು. ಭಗವಾನ್ ನೀಲಮಾಧವನ ದರ್ಶನವನ್ನು ಮಾಡಿಕೊಳ್ಳಬೇಕು. ತಮ್ಮ ಮುಖದಿಂದ ಪುರುಷೋತ್ತಮ ಕ್ಷೇತ್ರ ತೀರ್ಥದ ಜ್ಞಾನವನ್ನು ಮಾಡಿಕೊಂಡು ಆ ನೀಲಮಾಧವನ ದರ್ಶನ ಹಾಗೂ ವಿಶೇಷ ಸೇವೆಗಳನ್ನು ಸಲ್ಲಿಸಬೇಕೆಂದು ನಾನು ನಿರ್ಧರಿಸಿದ್ದೇನೆ.

**ನಾರದ:-** ಮಹಾರಾಜ! ನೀನು ಹೇಳಿದಂತೆ ಆಗಲಿ. ಆ ನೀಲಮಾಧವನ ದರ್ಶನ ತೆಗೆದುಕೊಳ್ಳುವದು ನನಗೆ ಪರಮಾನಂದ ವಿಷಯವೇ. ನಾನು ನಿನ್ನೊಡನೆ ಆ ಪುಣ್ಯಕ್ಷೇತ್ರಕ್ಕೆ ಸಂತೋಷದಿಂದ ಬರುತ್ತೇನೆ. ಆ ಪುರುಷೋತ್ತಮ ಕ್ಷೇತ್ರ ಮತ್ತು ತೀರ್ಥಗಳ ದರ್ಶನವನ್ನು

ಮಾಡಿಸುತ್ತೇನೆ. ಮತ್ತು ಅಲ್ಲಿಯ ತೀರ್ಥಗಳಲ್ಲಿ ಪ್ರತಿಷ್ಠಿತವಾದ ಶಿವಶಕ್ತಿಗಳನ್ನು ನಿನಗೆ ತೋರಿಸುತ್ತೇನೆ. ಆ ಕ್ಷೇತ್ರದ ಮಾಹಾತ್ಮ್ಯವನ್ನು ಪರಿಚಯ ಮಾಡಿಕೊಡುತ್ತೇನೆ. ನೀನು ಅಲ್ಲಿಗೆ ಹೋಗಿ ಭಕ್ತರಿಗಾಗಿ ಆತ್ಮಸಮರ್ಪಣೆಯನ್ನೇ ಮಾಡುವ ಆ ಪುರುಷೋತ್ತಮ ಸ್ವಾಮಿಯ ಸಾಕ್ಷಾತ್ ದರ್ಶನವನ್ನು ಮಾಡಿಕೊಳ್ಳುವಿಯಂತೆ.''

ಹೀಗೆ ಪರಸ್ಪರ ಸಂಭಾಷಣೆಯನ್ನು ಮಾಡಿದ ಬಳಿಕ ಆ ರಾಜ ಹಾಗು ಋಷಿ ಇಬ್ಬರ ಮನಸ್ಸು ಪ್ರಸನ್ನವಾದವು, ಅವರು ಅಂದಿನ ತಮ್ಮ ನಿತ್ಯಾಹ್ನಿಕ ಎಲ್ಲವನ್ನೂ ಮಾಡಿ ಮುಗಿಸಿದರು. ಜ್ಯೇಷ್ಠ ಶುದ್ಧ ಪಂಚಮಿ ಬುಧವಾರ ಪುಷ್ಯನಕ್ಷತ್ರದಂದು ಹೊರಡುವದು ಎಂದು ಮನಸಾ ನಿರ್ಧರಿಸಿ ಮಲಗಿಕೊಂಡರು. ಬೆಳಗಾದ ಕೂಡಲೇ ಇಂದ್ರದ್ಯುಮ್ನ ಮಹಾರಾಜನು ರಾಜ್ಯದಲ್ಲಿ ಎಲ್ಲ ಕಡೆಗೆ ಡಂಗುರ ಹೊಡೆಸಿದನು. 'ನಾವು ಪುರುಷೋತ್ತಮ ಕ್ಷೇತ್ರಕ್ಕೆ ಹೊರಟದ್ದೇವೆ. ಇನ್ನು ಮುಂದೆ ಬದುಕಿ ಇರುವವರೆಗೂ ನಾವು ಅಲ್ಲಿಯೇ ನೆಲೆಸುವೆವು. ರಾಜಪರಿವಾರದವರು ರಾಣೀವಾಸ, ಮಂತ್ರಿ ಪರಿವಾರ, ಆನೆ, ಕುದುರೆ, ಕಾಲಾಳು, ಕೋಶ, ಸೇನಾಸಹಿತವಾಗಿ ಎಲ್ಲರೂ ಅಲ್ಲಿಗೆ ಬರಬೇಕು.''

ತನ್ನ ಘೋಷಣೆಯಂತೆ ಮಹಾರಾಜನು ಎದುರು ನಿಂತ ನಾರದ ಮಹರ್ಷಿಗಳಿಗೆ ಪ್ರದಕ್ಷಿಣೆ ಹಾಕಿ ನಮಸ್ಕಾರ ಮಾಡಿದನು. ಅನೇಕ ವಿದ್ವಾಂಸರನ್ನು ಶ್ರೋತ್ರಿಯರನ್ನು ಕರೆಯಿಸಿ ಅವರಿಗೆ ವಸ್ತ್ರ, ಆಭೂಷಣ ದಕ್ಷಿಣಾದಿಗಳನ್ನು ಕೊಟ್ಟು ಪೂಜೆಮಾಡಿದನು. ಆಗಲೇ ನೂರಾರು ಶಂಖ ಧ್ವನಿಗಳು ಮೊಳಗಿದವು. ಮಂಗಳ ವಾದ್ಯಗಳು ಭೋರ್ಗರೆದವು. ಮಹಾರಾಜನು ತನ್ನ ರಾಜಧಾನಿಯಲ್ಲಿ ಇದ್ದ ಸುಪ್ರಸಿದ್ಧ ವಿಷ್ಣುಮಂದಿರ ಹಾಗೂ ದುರ್ಗಾ ದೇವಾಲಯಗಳಿಗೆ ಹೋಗಿ ಪ್ರದಕ್ಷಿಣೆ ನಮಸ್ಕಾರಮಾಡಿ, ಅಲ್ಲಿಯೆ ಉತ್ಸವ ಪ್ರತಿಮೆಗಳನ್ನು ಪಾಲಕಿಯಲ್ಲಿ ತಂದು ಕೂಡಿಸಿದ. ಅನಂತರ ತಾನು ಮುಂದೆ ನಡೆದು ಬಾಗಿಲ ಬಳಿ ಬಂದಾಗ ಅವನ ರಥವು ಸಿದ್ಧವಾಗಿ ನಿಂತು ಕೊಂಡಿತ್ತು. ನಾರದರೊಡನೆ ಕೂಡಿಕೊಂಡು ಇಂದ್ರದ್ಯುಮ್ನ ರಥದಲ್ಲಿ ಕುಳಿತುಕೊಂಡ ಇವರಿಬ್ಬರು ಕುಳಿತ ರಥದ ಎರಡೂ ಬದಿಗಳಲ್ಲಿ ಅನೇಕ ಸಾಮಂತರ ಚಿಕ್ಕ ಚಿಕ್ಕ ರಥಗಳು ಇವರನ್ನು ಅನುಸರಿಸಿಕೊಂಡು ನಡೆದವು. ಇದೇ ವೇಳೆಯಲ್ಲಿ ಆ ಅವಂತಿಪುರದ ನಾಗರಿಕರು ತಮ್ಮ ತಮ್ಮ ಆವಶ್ಯಕ ಸಾಮಾನುಸರಂಜಾಮುಗಳನ್ನು ತೆಗೆದುಕೊಂಡು, ಕುದುರೆ, ಒಂಟೆ, ಬಂಡಿ ಮೊದಲಾದ ವಾಹನಗಳನ್ನು ಏರಿಕೊಂಡು ಹೊರಟರು. ರಾಜ ಮಹಾರಾಜರ ಎಲ್ಲ ಪಟ್ಟದ ರಾಣಿಯರೂ ಅಂತಃಪುರದ ಪರಿವಾರ ವರ್ಗದವರೂ, ಮೇಣೆ, ಪಲ್ಲಕ್ಕಿ, ಆನೆ, ಒಂಟೆ, ಕುದುರೆ ಮುಂತಾದ ವಾಹನಾರೂಢರಾಗಿ ರಾಜಭವನದಿಂದ ಹೊರಬಿದ್ದರು. ಈ ಮಹಾರಾಜನ ಮಾಂಡಲೀಕರೂ, ಸೇವಕರು, ಮಂತ್ರಿಗಳು, ಪುರೋಹಿತರು, ಎಲ್ಲರೂ ತಮಗೆ ಉಪಯುಕ್ತವಾದ ಸಾಮಾನುಗಳನ್ನು ತಮ್ಮ ಜತೆಗೆ ತೆಗೆದುಕೊಂಡು ರಾಜರೊಡನೆ ಪ್ರಸ್ಥಾನ ಬೆಳೆಸಿದರು. ಕೋಶಾಧಿಕಾರಿಗಳು ತಮ್ಮ ಸಂರಕ್ಷಣ ಸಿಬ್ಬಂದಿಯೊಂದಿಗೆ ರಾಜ್ಯದ ಕೋಶ ಭಂಡಾರವನ್ನು ತೆಗೆದುಕೊಂಡು ಪುರುಷೋತ್ತಮ ಕ್ಷೇತ್ರದಲ್ಲಿ ಸ್ವಾಮಿಯ ಸೇವೆಗೆಂದು ಉಪಸ್ಥಿತರಾದರು. ಸಮಗ್ರ ರಾಜಧಾನಿಯೇ ಪುರುಷೋತ್ತಮ ಕ್ಷೇತ್ರಕ್ಕೆ ಪ್ರಯಾಣ ಬೆಳೆಸುವದನ್ನು ನೋಡಿ ಆ ಊರಿಲ್ಲಿಯ ಎಲ್ಲ ವ್ಯಾಪಾರಿಗಳೂ, ಉದ್ಯೋಗದವರೂ ತಮ್ಮ ಎಲ್ಲ ಮಾರಾಟದ ಪದಾರ್ಥಗಳನ್ನು ತೆಗೆದುಕೊಂಡು ಆ ಕ್ಷೇತ್ರಕ್ಕೆ ನಡೆದರು.

ಹೀಗೆ ಇಂದ್ರದ್ಯುಮ್ನ ಮಹಾರಾಜನು ತನ್ನ ಚತುರಂಗ ಸೈನ್ಯದೊಡನೆ ಕಾಡು ಬೀಡಿನ ಕಂಟಕಾಕೀರ್ಣ ದುರ್ಗಮ ವನಮಾರ್ಗವನ್ನು ತುಳಿಯುತ್ತ, ನಾಡುಗಳನ್ನು ನೋಡುತ್ತ, ಬೆಟ್ಟ ಬಯಲುಗಳನ್ನು ದಾಟುತ್ತ, ಮಹಾನದಿ ತೀರಕ್ಕೆ ಬಂದರು. ಅಲ್ಲಿ ಮಧ್ಯಾಹ್ನ ಕಾಲದಲ್ಲಿ ಎಲ್ಲ ಜನರೊಡನೆ ಪುರೋಹಿತರನ್ನು ಮುಂದೆ ಮಾಡಿಕೊಂಡು ನದಿಯಲ್ಲಿ ಸ್ನಾನ ಮಾಡಿ ಭಗವಂತನನ್ನು ಪೂಜಿಸಿ, ದೇವತೆಗಳಿಗೂ, ಪಿತೃಗಳಿಗೂ ತರ್ಪಣಕೊಟ್ಟನು. ನಾರದರೂ ಕುಳಿತುಕೊಂಡು ಭೋಜನ ಮಾಡಿದರು. ಅನಂತರ ಕೆಲ ಸಮಯವು ಕಳೆದಬಳಿಕ ಸಾಯಂಕಾಲದ ಉಪಾಸನೆಯನ್ನು ಮುಗಿಸಿಕೊಂಡು ಕೈಮುಗಿದು ನಾರದರಿಗೆ ಬಿನ್ನವಿಸಿದನು- "ಪೂಜ್ಯರೇ! ತಾವು ವೇದ ವೇದಾಂಗಗಳ ನಿಧಿ. ಪರಮಾತ್ಮನ ಪರಮ ಪ್ರಿಯಭಕ್ತರು. ನನ್ನ ಮೇಲೆ ತಮ್ಮ ಕೃಪೆಯಿದ್ದರೆ ತಾವು ಈಗ ವಿಷ್ಣು ಕಥಾ ರೂಪವಾದ ಅಮೃತದಿಂದ ನಮ್ಮ ಅಂತಃಕರಣವನ್ನು ಪರಿಶುದ್ಧಗೊಳಿಸಿರಿ."

ಹೀಗೆ ಆ ದೇವರ್ಷಿ ಮತ್ತೆ ರಾಜರ್ಷಿಗಳ ನಡುವೆ ಸ್ನೇಹ ಸಂಭಾಷಣೆ ನಡೆದಾಗ ದ್ವಾರಪಾಲಕನು ಬಂದು ಕೈಮುಗಿದು ಹೇಳಿದನು -"ಮಹಾರಾಜ! ಉತ್ಕಲದೇಶದ ರಾಜರು ತಮ್ಮ ದರ್ಶನಕ್ಕಾಗಿ ಬಂದು ಬಾಗಿಲಲ್ಲಿ ಕಾದಿದ್ದಾರೆ."

**ಇಂದ್ರದ್ಯುಮ್ನ:-** "ಓಢ್ರ ನರೇಶನನ್ನು ಕೂಡಲೇ ಒಳಗೆ ಕರೆದುಕೊಂಡು ಬನ್ನಿರಿ. ಸ್ವಾಗತ ಸತ್ಕಾರ ಮಾಡಿ ಇಲ್ಲಿಗೆ ಕರೆತನ್ನಿರಿ. ಅವನು ಪರಮ ಭಗವದ್ ಭಕ್ತ. ಅವನ ದರ್ಶನದಿಂದಲೇ ನಾವೆಲ್ಲರೂ ಪುನೀತರಾಗುವೆವು." ಮಹಾರಾಜರ ಈ ಮಾತನ್ನು ಕೇಳಿ ದ್ವಾರಪಾಲಕನು ಬೇಗನೆ ಉತ್ಕಲ ಮಹಾರಾಜನನ್ನು ಒಳಗೆ ಕರೆತಂದನು. ಆ ರಾಜನು ತನ್ನ ಮಂತ್ರಿ ಪರಿವಾರದವರಿಂದ ಕೂಡಿ ಇಂದ್ರದ್ಯುಮ್ನ ಮಹಾರಾಜನ ಚರಣಗಳಿಗೆ ನಮಸ್ಕಾರ ಮಾಡಿದನು. ಆಗ ಇಂದ್ರದ್ಯುಮ್ನ ಮಹಾರಾಜನು ತಾನು ಆಸನವನ್ನು ಬಿಟ್ಟು ಎದ್ದು ಬಂದು ಓಢ್ರ ರಾಜನನ್ನು ಎಬ್ಬಿಸಿ ಆಸನದ ಮೇಲೆ ಕೂಡಿಸಿ ನುಡಿದನು - "ರಾಜನ್! ನೀವೆಲ್ಲರು ಕುಶಲದಿಂದ ಇರುವಿರಷ್ಟೆ? ಓಢ್ರ ಪತಿಯೇ! ನೀಲಾಚಲ ಶಿಖರದಲ್ಲಿರುವ ಭಗವಾನ್ ಶ್ರೀ ನೀಲಮಾಧವನಲ್ಲಿ ನಿಮಗೆ ಭಕ್ತಿಯು ಬೆಳೆಯುತ್ತಿದೆಯಷ್ಟೆ.!"

ಆಗ ಉತ್ಕಲದ ರಾಜನು ಕೈಜೋಡಿಸಿ ನಮ್ರತೆಯಿಂದ ಹೇಳಿದನು- "ಮಹಾರಾಜ! ತಮ್ಮ ಚರಣ ಕೃಪೆಯಿಂದ ನಮ್ಮೆಲ್ಲರಿಗೂ ಕುಶಲ, ದಕ್ಷಿಣ, ಸಮುದ್ರದ ತೀರದಲ್ಲಿ ವನಶ್ರೇಣಿಯಿಂದ ಆವೃತವಾಗಿ ನೀಲಾಚಲ ಪರ್ವತವು ತಲೆಎತ್ತಿ ನಿಂತಿದೆ. ಅಲ್ಲಿ ಜನರು ಹೋಗಿ ಬರುವದು ಕಡಿಮೆ. ಭಗವಾನ್ ನೀಲಮಾಧವನು ಅಲ್ಲಿ ಮಂಡಿಸಿದ್ದಾನೆ. ಆದರೆ ಮೊನ್ನೆ ಬೀಸಿದ ಭಯಂಕರ ಬಿರುಗಾಳಿಯಿಂದಾಗಿ ಸ್ತಂಭಾಕಾರವಾಗಿ ಎದ್ದ ಮಳಲರಾಶಿಯಿಂದ ನೀಲಮಾಧವನ ಸುಂದರವಾದ ವಿಗ್ರಹವು ಮುಚ್ಚಿ ಹೋಗಿದೆ ಎಂದು ಕೇಳಿದ್ದೇನೆ. ಇದರಿಂದ ನಮ್ಮ ರಾಜ್ಯದಲ್ಲಿಯೂ ಬರಗಾಲ, ರೋಗ, ಸಾವು-ನೋವುಗಳ ಭಯವು ಪ್ರಾಪ್ತವಾಗಿದೆ. ತಾವಂತೂ ಎಲ್ಲರೂ ಈಗ ಕ್ಷೇಮದಿಂದಿರುವಿರಷ್ಟೆ?" ಉತ್ಕಲರಾಜನ ಮಾತುಗಳನ್ನು ಕೇಳಿ ಇಂದ್ರದ್ಯುಮ್ನನ ಮುಖದಲ್ಲಿ ವಿಷಾದದ ಛಾಯೆ ಮೂಡಿತು. ಅವನು ಉತ್ಕಲರಾಜನನ್ನು ಮಾತನಾಡಿ ಕಳಿಸಿ ಬಂದು ನಾರದರನ್ನು ಕುರಿತು ಕೇಳಿದನು- "ಮುನಿಗಳೇ ! ಮುಂದೆ ಏನು ಗತಿ?"

**ನಾರದ:-** ರಾಜನೇ, ಈ ವಿಷಯದಲ್ಲಿ ನೀನು ಚಿಂತೆ ಮಾಡಬೇಡ. ಶ್ರೇಷ್ಠ ವೈಷ್ಣವರು ಭಾಗ್ಯವಂತರೇ ಇರುತ್ತಾರೆ. ವೈಷ್ಣವರ ಮನೋರಥಗಳು ಎಂದೂ ನಿಷ್ಫಲ ವಾಗುವದಿಲ್ಲ. ಜರಾಮರಣ ರಹಿತನಾದ ಆ ನಾರಾಯಣನು ಪ್ರತ್ಯಕ್ಷ ಶರೀರಧಾರಣ ಮಾಡಿ ಸಿದ್ಧಿಕ್ಷೇತ್ರವಾದ ಈ ಪುರುಷೋತ್ತಮ ಕ್ಷೇತ್ರದಲ್ಲಿ ನಿಂತಿದ್ದನ್ನು ನೀನು ಅವಶ್ಯವಾಗಿ ಕಾಣುವೆ. ನಿನ್ನ ಮೇಲೆ ಅನುಗ್ರಹ ಮಾಡುವದಕ್ಕಾಗಿಯೇ ಭೂಮಿಯ ಮೇಲೆ ಇಳಿದು ಬರುವನು, ಭಕ್ತ ಪರಾಧೀನ ಆ ಪರಮಾತ್ಮ. ಇಂದ್ರದ್ಯುಮ್ನ ಮಹಾರಾಜನೇ, ಬ್ರಹ್ಮದೇವರ ಸಂತಾನ ಪರಂಪರೆಯಲ್ಲಿ ನೀನು ಐದನೆಯವ. ಹದಿನೆಂಟು ವಿದ್ಯೆಗಳಲ್ಲಿಯೂ ನಿನಗೆ ಪ್ರಚಂಡ ಪಾಂಡಿತ್ಯ, ಧರ್ಮನಿಷ್ಠನಾಗಿ ರಾಜ್ಯವನ್ನು ಪಾಲನ ಮಾಡಿರುವೆ, ಬ್ರಹ್ಮಜ್ಞಾನಿಗಳನ್ನು ಆದರಿಸಿರುವೆ. ಆದುದರಿಂದ ನಿನಗೆ ಈ ಪುರುಷೋತ್ತಮ ಕ್ಷೇತ್ರದಲ್ಲಿ ಈ ನಿನ್ನ ತೊಗಲಿನ ಕಣ್ಣಿನಿಂದಲೇ ಪುರುಷೋತ್ತಮನ ದರ್ಶನಭಾಗ್ಯವು ಅವಶ್ಯವಾಗಿ ದೊರೆಯುವದು, ನಿನ್ನ ಈ ಕಾರ್ಯದಲ್ಲಿ ಸ್ವಯಂ ಬ್ರಹ್ಮದೇವರೇ ನಿನಗೆ ಮುನ್‌ಸೂಚನೆ ಕೊಡಲು ನನ್ನನ್ನು ನೇಮಿಸಿದ್ದಾರೆ. ನೀನು ಪುರುಷೋತ್ತಮ ಕ್ಷೇತ್ರಕ್ಕೆ ಹೋದ ಬಳಿಕ ನಾನು ನಿನಗೆ ಎಲ್ಲ ಮಾತುಗಳನ್ನು ಹೇಳುತ್ತೇನೆ. ಈಗ ರಾತ್ರಿ ಬಹಳ ಆಗಿದೆ. ಮೂರನೇ ಪ್ರಹರ. ಎಲ್ಲ ರಾಜರಿಗೂ ತಮ್ಮ ತಮ್ಮ ವಿಶ್ರಾಂತಿ ಸ್ಥಾನಗಳಿಗೆ ಹೋಗಲು ಹೇಳು. ನೀನು ವಿಶ್ರಮಿಸು.''

## ಏಕಾಮ್ರ ಕ್ಷೇತ್ರದಲ್ಲಿ ಇಂದ್ರದ್ಯುಮ್ನ-ಶಿವ-ನಾರದರ ಸಂವಾದ

**ಜೈಮಿನಿ:-** ನಾರದರು ಹೀಗೆ ಆಶ್ವಾಸನೆ ಕೊಟ್ಟ ಬಳಿಕ ಇಂದ್ರದ್ಯುಮ್ನ ರಾಜನಿಗೆ ಸಮಾಧಾನವಾಯಿತು. ಅವನು ನಾರದರನ್ನು ತನ್ನೊಡನೆ ಅಂತಃಪುರಕ್ಕೆ ಕರೆದುಕೊಂಡು ಬಂದ. ಇಬ್ಬರು ಬಹಳ ಹೊತ್ತಿನ ವರೆಗೆ ಮಾತನಾಡುತ್ತ ವಿಶ್ರಮಿಸಿದರು. ರಾತ್ರಿ ಕಳೆಯಿತು. ಬೆಳಕು ಹರಿಯಿತು. ಇಬ್ಬರೂ ತಮ್ಮ ಪ್ರಾತರ್ ಆಹ್ನಿಕ ಮಾಡಿಕೊಂಡರು. ಅನಂತರ ಎಲ್ಲರೂ ಕೂಡಿ ಮಹಾನದಿಯನ್ನು ದಾಟಿದರು. ಆ ಓಢ್ರದೇಶದ ರಾಜನು ತೋರಿದ ಮಾರ್ಗದಿಂದ ಇಂದ್ರದ್ಯುಮ್ನ ಮಹಾರಾಜನು ತನ್ನ ಸೇನೆಯೊಂದಿಗೆ ಏಕಾಮ್ರವನ ಕ್ಷೇತ್ರಕ್ಕೆ ಹೊರಟನು. ದಾರಿಯಲ್ಲಿ ಗಂಧವಹಾ ಎಂಬ ನದಿಯು ವೇಗದಿಂದ ಹರಿಯುತ್ತಿತ್ತು. ಅದನ್ನು ದಾಟಿದ ಬಳಿಕ ಎಲ್ಲ ರಾಜಪರಿವಾರದವರಿಗೆ ಶಂಖ ಮುಂತಾದ ವಾದ್ಯಗಳ ಧ್ವನಿಯು ಕೇಳಿ ಬರತೊಡಗಿತು. ಆಗ ಇಂದ್ರದ್ಯುಮ್ನನು ನಾರದರನ್ನು ಕೇಳಿದನು- ''ಮುನಿಗಳೇ! ಈ ಶಬ್ದವು ಎಲ್ಲಿಂದ ಬರುತ್ತಲಿದೆ?''

**ನಾರದ:-** ರಾಜನೇ! ಇದು ಅತ್ಯಂತ ದುರ್ಲಭವಾದ ಕ್ಷೇತ್ರ, ವಿಷ್ಣು ಭಗವಂತನು ಇದನ್ನು ಗುಪ್ತವನ್ನಾಗಿ ಇರಿಸಿದ್ದಾನೆ. ನಿನ್ನ ಪುರೋಹಿತನಾದ ವಿದ್ಯಾಪತಿಗೆ ನೀಲಮಾಧವನ ದರ್ಶನವಾದದ್ದು ನಿನ್ನ ಸೌಭಾಗ್ಯವೆಂದೇ ತಿಳಿ. ಇಲ್ಲಿಂದ ಮೂರು ಯೋಜನೆಗಳ ಮೇಲೆ ಅರ್ಥಾತ್ ಇಪ್ಪತ್ತೇಳು ಮೈಲುಗಳ ಮೇಲೆ ಗೌರೀಪತಿಯ ಏಕಾಮ್ರವನ ಎಂಬ ಹೆಸರಿನ ಒಂದು ಕ್ಷೇತ್ರವಿದೆ. ಅಲ್ಲಿ ಪೂರ್ವಕಾಲದಲ್ಲಿ ಶಂಕರನು ಈ ಸಮಸ್ತ ಸಂಸಾರದ ಆದಿಕಾರಣನಾದ ಪುರುಷೋತ್ತಮನನ್ನು ಹೀಗೆ ಸ್ತೋತ್ರ ಮಾಡಿದನು. ''ದಯಾಘನ ನಾರಾಯಣ! ಸಚ್ಚಿದಾನಂದಮಯ ವೈಭವದಿಂದ ಕೂಡಿದ ನಿರಂಜನ ಪರಮೇಶ್ವರನೇ, ನಿನಗೆ ನನ್ನ ನಮಸ್ಕಾರ. ಸ್ವ ಪ್ರಕಾಶನಾದ ನೀನು ನಿನ್ನ ಯೋಗ ಮಾಯೆಯಿಂದ ಗಾಢ ಗೂಢನಾಗಿರುವೆ. ನೀನು ಈ ಪ್ರಪಂಚದ ಒಳಗೂ, ಹೊರಗೂ ವ್ಯಾಪಿಸಿರುವೆ. ನೀನು ದೂರ

ಇದ್ದರೂ ಅತ್ಯಂತ ಹತ್ತಿರದಲ್ಲಿಯೇ ಇರುವೆ. ನೀನು ಅಣೋರಣೀಯ ಮಹತೋ ಮಹೀಯ, ನಿನ್ನ ಕಟಾಕ್ಷ ವಿಲಾಸ ಮಾತ್ರದಿಂದ ಕೋಟಿ ಬ್ರಹ್ಮರು ಕೋಟಿರುದ್ರರು ಉತ್ಪನ್ನರಾಗುತ್ತಾರೆ. ಇಂಥ ಕಾಲರೂಪಿಯಾದ ಶ್ರೀಹರಿಗೆ ನನ್ನ ನಮಸ್ಕಾರ.''

ತ್ರಿಪುರಾಸುರನನ್ನು ಸುಟ್ಟು ಹಾಕಿದ ಭಗವಾನ್ ಶಂಕರನು ಮಾಡಿದ ಈ ಸ್ತೋತ್ರವನ್ನು ಕೇಳಿ ಕರುಣಾನಿಧಿಯಾದ ಮಹಾವಿಷ್ಣು ಮಹಾದೇವನನ್ನು ಕುರಿತು ನುಡಿದ- ''ಪರಮೇಶ್ವರ! ದಕ್ಷಿಣ ಸಮುದ್ರದ ದಂಡೆಯಲ್ಲಿ ನೀಲಾಚಲದಿಂದ ವಿಭೂಷಿತವಾದ ಒಂದು ಕ್ಷೇತ್ರವಿದೆ. ಹತ್ತು ಯೋಜನ ವಿಸ್ತೀರ್ಣವಾದ ಆ ಕ್ಷೇತ್ರವು ಚಿತ್ರೋತ್ಪಲಾ ನದಿಯಿಂದ ಸಮುದ್ರದವರೆಗೆ ಹಬ್ಬಿದೆ. ಅದರ ಉತ್ತರಕ್ಕೆ ಏಕಾಮ್ರವನ ಎಂಬ ಸುಂದರವಾದ ವನವು ಇರುತ್ತದೆ. ಅಲ್ಲಿ ನೀನು ಪಾರ್ವತಿಯ ಜೊತೆಗೆ ನೆಲಿಸು. ಬ್ರಹ್ಮನು ನನ್ನ ಆದೇಶದಂತೆ ಕೋಟಿ ಲಿಂಗಗಳ ಅಧೀಶ್ವರಪದದಲ್ಲಿ ನಿನಗೆ ಅಭಿಷೇಕ ಮಾಡುವನು.''

ಭಗವಾನ್ ಶ್ರೀವಿಷ್ಣುವಿನ ಈ ಮಾತನ್ನು ಕೇಳಿ ಮಹಾದೇವನು ನುಡಿದನು. ''ಜಗನ್ನಾಥ! ನನಗೆ ಪುರುಷೋತ್ತಮ ಕ್ಷೇತ್ರಕ್ಕೆ ಹೋಗಲು ನೀನು ನೀಡಿದ ಆಜ್ಞೆ ನನಗೆ ಶಿರೋಧಾರ್ಯ. ನಿನ್ನ ಆದೇಶದಂತೆ ಮೋಕ್ಷದಾಯಕವಾದ ಆ ಕಲ್ಯಾಣ ತೀರ್ಥಕ್ಕೆ ನಾನು ಹೋಗುವೆನು.'' ಹೀಗೆ ಹೇಳಿ ಪಾರ್ವತೀ ಪತಿಯು ತನ್ನ ಪ್ರೇಯಸಿಯೊಂದಿಗೆ ಅಲ್ಲಿಗೆ ಬಂದನು. ಸ್ವಯಂ ಬ್ರಹ್ಮದೇವರೇ ಆ ಕೈಲಾಸಪತಿಯನ್ನು ಅಲ್ಲಿ ಪ್ರತಿಷ್ಠೆಗೊಳಿಸಿದರು.

ರಾಜನೇ, ಈಗ ನಾವೆಲ್ಲರೂ ಆ ಏಕಾಮ್ರವನಕ್ಕೆ ಹೋಗೋಣ. ಶಿವ ಭಗವಂತನ ದರ್ಶನವನ್ನು ಮಾಡಿಕೊಳ್ಳೋಣ. ಪರಮೇಶ್ವರನ ಏಕಾಮ್ರವನ ಕ್ಷೇತ್ರವು ತಮೋಗುಣ ನಾಶಕವಾಗಿದೆ. ರಜೋಗುಣವನ್ನು ಹೋಗಲಾಡಿಸುವ ಒಂದು ಕ್ಷೇತ್ರವು ಅಲ್ಲಿಯೇ ಸಮೀಪ ದಲ್ಲಿದೆ. ಅದಕ್ಕೆ ವಿರಜ ಮಂಡಲ ಎಂದು ಕರೆಯುತ್ತಾರೆ. ಸತ್ವಗುಣದ ಪ್ರಾಚುರ್ಯ ಇದ್ದ ಮೂಲಕ ಈ ಪುರುಷೋತ್ತಮ ಕ್ಷೇತ್ರವು ಮುಕ್ತಿದಾಯಕ ಕ್ಷೇತ್ರವೆಂದು ಕರೆಯಲ್ಪಡುತ್ತದೆ.''

ನಾರದರ ಈ ನುಡಿಗಳನ್ನು ಕೇಳಿ ಅತ್ಯಾಶ್ಚರ್ಯವಾಯಿತು ಇಂದ್ರದ್ಯುಮ್ನ ಮಹಾರಾಜನಿಗೆ. ಅವನ ಮನಸ್ಸು ಪರಮೇಶ್ವರನ ಪ್ರಭಾವ ಹಾಗೂ ಮಹಿಮೆಗಳನ್ನು ಕೇಳಿ ಪ್ರಸನ್ನವಾಯಿತು. ಅವನು ಸಂತಸದಿಂದ ನುಡಿದ -''ಪೂಜ್ಯರೇ! ಇಲ್ಲಿಯ ಈ ದಿವ್ಯವಾದ ಶೈವ ಕ್ಷೇತ್ರದ ಪರಿಚಯವನ್ನು ಹೇಳಿ ನೀವು ನನ್ನ ಮೇಲೆ ಪರಮೋಪಕಾರವನ್ನು ಮಾಡಿರುವಿರಿ. ಭಗವಾನ್ ಉಮಾಪತಿಯು ಉಮಾದೇವಿಯೊಂದಿಗೆ ಸಾಕ್ಷಾತ್ ಸನ್ನಿಹಿತನಾದ ಆ ಪುಣ್ಯಕ್ಷೇತ್ರಕ್ಕೆ ನಾವು ಅವಶ್ಯವಾಗಿ ಹೊರಡೋಣ.''

ಹೀಗೆ ನಿಶ್ಚಯ ಮಾಡಿ ದೇವಮುನಿ ನಾರದ ಹಾಗೂ ಇಂದ್ರದ್ಯುಮ್ನ ಮಹಾರಾಜ ಇಬ್ಬರು ಮಧ್ಯಾಹ್ನ ಎರಡು ಗಂಟೆಯ ಸಮಯಕ್ಕೆ ಸರಿಯಾಗಿ ತಮ್ಮ ಸೇನೆಯೊಂದಿಗೆ ಏಕಾಮ್ರವನ ಕ್ಷೇತ್ರಕ್ಕೆ ಬಂದು ತಲುಪಿದರು. ಅಲ್ಲಿರುವ ಒಂದು ತೀರ್ಥದಲ್ಲಿ ಸ್ನಾನಮಾಡಿ ಅದರ ತೀರವಾಸಿಯಾದ ಶ್ರೀಪುರುಷೋತ್ತಮನನ್ನು ಅರ್ಚಿಸಿದರು. ಬಳಿಕ ಕೋಟೇಶ್ವರ ಮಹಾಲಯ ಕ್ಷೇತ್ರಕ್ಕೆ ಹೋಗಿ ತ್ರಿಭುವನೇಶ್ವರ ಎಂಬ ಶಿವಲಿಂಗವನ್ನು ಸ್ನಾನಮಾಡಿ ಪೂಜಿಸಿದರು. ರಾಜರ್ಷಿಯ ಈ ಪೂಜಾ ಪ್ರಕಾರದಿಂದ ಪ್ರಸನ್ನನಾದ ಪರಮೇಶ್ವರನು ಸ್ಪಷ್ಟವಾಗಿಯೇ ಎಲ್ಲರಿಗೂ ಕೇಳುವಂತೆ ಹೇಳಿದನು- ''ಇಂದ್ರದ್ಯುಮ್ನನೇ, ನಿನ್ನ ಮನೋರಥವು ಬೇಗನೇ ಪೂರ್ಣವಾಗುವದು.''

ಅನಂತರ ಅದೇ ಪರಮೇಶ್ವರನು ಅಲ್ಲಿ ನಿಂತ ಎಲ್ಲ ಜನರ ಕಿವಿ ಕೇಳುವಂತೆ ಸ್ಪಷ್ಟವಾಣಿಯಲ್ಲಿ ನಾರದರನ್ನು ಉದ್ದೇಶಿಸಿ ನುಡಿದನು- ''ಮಹಾನುಭಾವನೇ! ಬ್ರಹ್ಮದೇವರ ಅಪ್ಪಣೆಯಂತೆ ನೀನು ಈ ಇಂದ್ರದ್ಯುಮ್ನ ರಾಜನಿಂದ ಅಶ್ವಮೇಧ ಯಜ್ಞವನ್ನು ಮಾಡಿಸು. ಈ ಪುರುಷೋತ್ತಮ ಕ್ಷೇತ್ರವು ಶ್ರೀವಿಷ್ಣುವಿನ ಸಾಕ್ಷಾತ್ ಸ್ವರೂಪಭೂತವೇ ಆಗಿದೆ. ಅದರಲ್ಲಿಯೂ ಪುಣ್ಯಮಯವಾದ, ಅಂತರ್‌ವೇದಿಯು ಶ್ರೀಹರಿಯು ಹೃದಯಕ್ಕೆ ಸಮಾನವೆಂದು ಮನ್ನಿಸಲ್ಪಡುತ್ತದೆ. ಅದರ ರಕ್ಷಣೆಗಾಗಿ ಆ ನಾರಾಯಣನು ನನ್ನನ್ನು ಎಂಟು ರೂಪಗಳಿಂದ ಇಲ್ಲಿ ಸ್ಥಾಪನೆ ಮಾಡಿದ್ದಾನೆ. ಈ ಪುರುಷೋತ್ತಮ ಕ್ಷೇತ್ರವು ಶಂಖದ ಆಕಾರದಲ್ಲಿ ಇರುತ್ತದೆ.

ಇದರ ಮುಂಭಾಗದಲ್ಲಿ ನಾನು ದುರ್ಗಾದೇವಿಯೊಂದಿಗೆ ನೀಲಕಂಠ ಎಂಬ ಹೆಸರಿನಿಂದ ವಾಸ ಮಾಡಿದ್ದೇನೆ. ಈ ಮಹಾರಾಜನನ್ನು ನೀನು ಅಲ್ಲಿಗೆ ಕರೆದುಕೊಂಡು ಹೋಗು. ಈಗ ನೀಲಮಣಿಮಯವಾದ ವಿಗ್ರಹಉಳ್ಳ ಶ್ರೀಜಗನ್ನಾಥನು ಅದೃಶ್ಯನಾಗಿದ್ದಾನೆ. ನೀನು ಇಲ್ಲಿ ಶ್ರೀನೃಸಿಂಹ ದೇವರನ್ನು ಸ್ಥಾಪಿಸು. ಇದು ನಿನಗೆ ನನ್ನ ಆಜ್ಞೆ. ಇದು ಮುಂದೆ ನೃಸಿಂಹ ಕ್ಷೇತ್ರವೇ ಆಗಲಿ. ಈ ಕ್ಷೇತ್ರದಲ್ಲಿ ನಾನು ಹಾಗೂ ನೃಸಿಂಹ ದೇವರ ಸನ್ನಿಧಾನದಲ್ಲಿ ಈ ಇಂದ್ರದ್ಯುಮ್ನ ರಾಜರ್ಷಿಯು ಒಂದು ಸಾವಿರ ಅಶ್ವಮೇಧ ಯಜ್ಞವನ್ನು ಮಾಡಲಿ. ಯಜ್ಞವು ಮುಗಿದ ಬಳಿಕ ಅವನಿಗೆ ಈ ಅತ್ಯದ್ಭುತವಾದ ಬ್ರಹ್ಮಸ್ವರೂಪಿ ವೃಕ್ಷವನ್ನು ತೋರಿಸು. ಅದರ ಕಟ್ಟಿಗೆಯಿಂದ ವಿಶ್ವಕರ್ಮನು ನಾಲ್ಕು ಪ್ರತಿಮೆಗಳನು ನಿರ್ಮಿಸಲಿ. ಆ ನಾಲ್ಕೂ ಪ್ರತಿಮೆಗಳ ಸ್ಥಾಪನೆಯ ಸಮಯದಲ್ಲಿ ಸ್ವಯಂ ಬ್ರಹ್ಮದೇವರು ಇಲ್ಲಿಗೆ ಬರುವರು. ಅನಂತರ ಈ ಮಹಾರಾಜನು ದರ್ಶನವನ್ನು ಪಡೆಯಲಿ. ಕಾಷ್ಠಮಯ ಶರೀರವನ್ನು ಧರಿಸಿ ಪ್ರಕಟನಾದ ಭಗವಾನ್ ಜಗನ್ನಾಥನು ದರ್ಶನ ಮಾತ್ರದಿಂದಲೇ ಭಕ್ತರಿಗೆ ಮೋಕ್ಷವನ್ನು ನೀಡಲಿ, ಭಕ್ತವತ್ಸಲನಲ್ಲವೆ ಆ ಭಗವಂತ?''

ಆಗ ನಾರದರು ಭಕ್ತಿಯಿಂದ ಮಹಾದೇವರಿಗೆ ನಮಸ್ಕಾರ ಮಾಡಿದರು. ಎರಡು ಕೈಗಳನ್ನು ಜೋಡಿಸಿ ನುಡಿದರು -''ಪ್ರಭು ಪರಮೇಶ್ವರ! ನೀನು ಈಗ ಆಜ್ಞೆ ಮಾಡಿದಂತೆಯೇ ಈ ಮೊದಲು ಬ್ರಹ್ಮದೇವರು ನನಗೆ ಅಪ್ಪಣೆಯನ್ನು ಕೊಟ್ಟಿದ್ದಾರೆ. ಗೌರೀನಾಥಾ! ನೀನು ಹಾಗೂ ಚತುರ್ಮುಖ ಬ್ರಹ್ಮನು ಮಹಾವಿಷ್ಣುವಿನಿಂದ ಭಿನ್ನರಾದರೂ ಈ ತ್ರಿಮೂರ್ತಿಗಳೆಂದರೆ ಏಕಜೀವ ಇದ್ದಂತೆ. ಅಷ್ಟು ಸಾಮರಸ್ಯ ಅವರಲ್ಲಿ. ನೀವು ಮೂರು ಮಹಾನ್ ದೇವತೆಗಳು ಈ ಇಂದ್ರದ್ಯುಮ್ನ ರಾಜನಿಗೆ ಇಂಥ ಅನುಗ್ರಹವನ್ನು ಮಾಡಿದ್ದರಿಂದ ಅವನು ಭಾಗ್ಯವಂತ ಮತ್ತು ಪುಣ್ಯವಂತ. ಈ ಕ್ಷೇತ್ರದ ಅಧಿದೇವತೆಯಾದ ವಿಷ್ಣು ಭಗವಂತನ ಲೀಲೆಗಳು ಅದ್ಭುತ, ಅಗಮ್ಯ ಮತ್ತು ಅನಂತ. ಎಷ್ಟೆಷ್ಟೋ ಯೋಗಿಗಳು ವಿದ್ವಾಂಸರು ಯಜ್ಞ ಯಾಗಗಳನ್ನು ಮಾಡಿ ವ್ರತೋಪವಾಸದಿಂದ ಅವನನ್ನು ಬಹುಕಾಲ ಆರಾಧಿಸಿದರೂ ಅವನನ್ನು ಹೊಂದುವದಿಲ್ಲ. ಆದರೆ ತುರುಕರುಗಳನ್ನು ಕಾಯುವ ಕಾಡುಗೊಲ್ಲ ಸ್ತ್ರೀಯರು ಆ ವಿಷ್ಣುವಿನ ಸ್ನೇಹ ಸಂಬಂಧವನ್ನು ಹೊಂದಿ ಮುಕ್ತಿಯನ್ನು ಪಡೆದಿದ್ದಾರೆ. ಶಿಶುಪಾಲನು ಬಾಲ್ಯದಿಂದಲೇ ಕೃಷ್ಣನ ದ್ವೇಷಮಾಡಿ ಪಾಂಡವರ ರಾಜಸೂಯ ಯಾಗದಲ್ಲಿ ತುಂಬಿದ ಸಭೆಯ ನಡುವೆ ಮನಬಂದಂತೆ ಕೃಷ್ಣನನ್ನು ನಿಂದೆ ಮಾಡಿಯೂ ಕೊನೆಗೆ ಮೋಕ್ಷವನ್ನು ಹೊಂದಿದನು.

ಹೀಗೆ ಈ ಭಗವಂತನ ಚಾರುಚರಿತ್ರೆ ಚಿತ್ರ ವಿಚಿತ್ರ. "ಇದಮಿತ್ಥಂ" ಎಂದು ನಿರ್ಣಯಿಸಿ ಹೀಗೆ ಎಂದು ಯಾರೂ ಆ ಭಗವಂತನ ಸಂಕಲ್ಪದ ಬಗ್ಗೆ ಹೇಳಲಾರರು. ಭಾಗ್ಯವಂತರು ಮಾತ್ರ ಬಹುಜನ್ಮದ ಭಕ್ತಿ ಹಾಗೂ ಸುಕೃತ ರಾಶಿಯ ಪರಿಪಾಕದಿಂದ ಅವನ ಪ್ರಸಾದವನ್ನು ಹೊಂದಿ ಮೋಕ್ಷವನ್ನು ಪಡೆಯುವರು. ಆ ವಿಷ್ಣುವಿನ ಚಿತ್ತ ಲಹರಿಯು ಯಾರಿಗೂ ತಿಳಿಯದು. ಈ ಪ್ರಪಂಚದಲ್ಲಿ ಆ ಭಗವಂತನು ಪುರುಷೋತ್ತಮ ಕ್ಷೇತ್ರದ ಮೇಲೆ ವಿಶೇಷ ಅನುಗ್ರಹವನ್ನು ಮಾಡಿರುತ್ತಾನೆ. ಈ ಕ್ಷೇತ್ರದಲ್ಲಿ ನೆಲಿಸಿ ಜಗನ್ನಾಥ ಸ್ವಾಮಿಯ ದರ್ಶನವನ್ನು ಮಾಡಿಕೊಳ್ಳುವವರಿಗೆ ಸಾಯುಜ್ಯ ಮೋಕ್ಷವನ್ನು ಕರುಣಿಸುತ್ತಾನೆ.

ಈ ನೀಲಮಾಧವ ಸ್ವಾಮಿಯು ಈ ಇಂದ್ರದ್ಯುಮ್ನ ಮಹಾರಾಜನ ಸಲುವಾಗಿ ಇಲ್ಲಿ ಇರುವ ಎಲ್ಲ ಜನರಿಗೂ ತನ್ನ ಪ್ರತ್ಯಕ್ಷ ದರ್ಶನವನ್ನು ಕರುಣಿಸಲಿದ್ದಾನೆ." ಎಂದು ನಾರದರು ಶಿವನಿಗೆ ಹೇಳಿದರು. ಅನಂತರ ಮಹಾದೇವರು ಹಾಗೆಯೇ ಆಗಲಿ ಎಂದು ಹೇಳಿ ಕೂಡಲೇ ಅಂತರ್ಧಾನ ಹೊಂದಿದರು.

## ನೀಲಮಾಧವನ ದರ್ಶನ

**ಜೈಮಿನಿ:-** ಅನಂತರ ನಾರದರು ಹಾಗೂ ಇಂದ್ರದ್ಯುಮ್ನ ಮಹಾರಾಜ ಇಬ್ಬರು ಪುರೋಹಿತರಾದ ವಿದ್ಯಾಪತಿಗಳೊಂದಿಗೆ ಪುರುಷೋತ್ತಮ ಕ್ಷೇತ್ರದಲ್ಲಿ ಮಹಾದೇವರು ನೀಲಕಂಠ ಎಂಬ ಹೆಸರಿನಿಂದ ನೆಲೆಸಿದ ಸ್ಥಾನಕ್ಕೆ ಬಂದರು. ಅಲ್ಲಿ ಮಹಾದೇವರನ್ನು ಪೂಜೆಗೈದರು. ದುರ್ಗಾದೇವಿಗೆ ಪ್ರಣಾದು ಸಲ್ಲಿಸಿದರು. ಅನಂತರ ಎಲ್ಲರೂ ತಮ್ಮ ತಮ್ಮ ರಥವಾಹನಗಳನ್ನು ಅಲ್ಲಿಯೇ ಬಿಟ್ಟು ಪಾದಚಾರಿಗಳಾಗಿ ಆ ನೀಲಾಚಲವನ್ನು ಏರತೊಡಗಿದರು ಮೆಲ್ಲ ಮೆಲ್ಲನೆ. ಆ ಬೆಟ್ಟ ಬಗೆ ಬಗೆಯ ಮರ ಬಳ್ಳಿಗಳಿಂದ ನಿಬಿಡವಾಗಿತ್ತು. ಕೋಗಿಲೆ, ಗಿಳಿ, ಸಾರಿಕೆ, ನವಿಲು, ಮುಂತಾದ ಪಕ್ಷಿಗಳ ಮಂಜುಳ ಕಲಕಲ ಧ್ವನಿಯಿಂದಲೂ, ಹೂಗಳ ಬಂಡನ್ನು ಉಂಡು ಝೇಂಕರಿಸುವ ದುಂಬಿಗಳ ಗೀತ ಗುಂಜಾರವದಿಂದಲೂ, ಮುಖರಿತವಾಗಿತ್ತು ಆ ವನಾಂತರವೆಲ್ಲ. ನೀಲಗಿರಿ ಪರ್ವತವು ನಾಲ್ಕು ಬದಿಗಳಿಂದಲೂ ಗೋಲಾಕಾರವಾಗಿ ಗಗನದಲ್ಲಿ ಗೋಪುರ ನಿರ್ಮಿಸಿದಂತೆ ತೋರುತ್ತಿತ್ತು. ದೂರದಿಂದ ಅವರೆಲ್ಲರೂ ಕಾಲಾಗುರು ಮರಗಳ ಕೆಳಗೆ ನೃಸಿಂಹ ರೂಪವನ್ನು ಧರಿಸಿ ಭಗವಾನ್ ಶ್ರೀವಿಷ್ಣುವು ವಾಸ ಮಾಡಿದ ದಿವ್ಯಸ್ಥಾನಕ್ಕೆ ಮೊದಲು ಬಂದರು. ಆ ನೃಸಿಂಹದೇವರ ಮುಖ ತೆರೆದಿದೆ. ಅಗಲವಾಗಿ ಅದರಲ್ಲಿ ದೊಡ್ಡ ದೊಡ್ಡ ಹಲ್ಲುಗಳು ಎದ್ದು ಕಾಣುತ್ತಿವೆ. ಕೆಂಬಣ್ಣದ ಕೇಶರ ಜಡೆಗಳಿಂದ ಸಿಂಹದಮುಖ ಮಂಡಲವು ಉದ್ದೀಪ್ತವಾಗಿದೆ. ಮೂರು ಕಣ್ಣುಗಳಿಂದ ಹೊಳೆಯುವ ನೃಸಿಂಹ ದೇವರ ಮುಖವು ಇನ್ನೂ ಭಯಾನಕವಾಗಿ ಕಾಣುತ್ತಿದೆ. ತನ್ನ ತೊಡೆಯ ಮೇಲೆ ಬೆನ್ನು ಹಚ್ಚಿ ಅಂಗಾತ ಮಲಗಿದ ಹಿರಣ್ಯಕಶಿಪುವಿನ ವಕ್ಷಸ್ಥಳವನ್ನು ತನ್ನ ವಜ್ರಕಠೋರವಾದ ಉಗುರುಗಳಿಂದ ಸೀಳುತ್ತಿದ್ದಾನೆ ಆ ಉಗ್ರನೃಸಿಂಹ, ಮುಖದಲ್ಲಿ ಅಟ್ಟಹಾಸ. ಅದರಲ್ಲಿ ಕೆಂಪುಲಾಲವಾಗಿ ಜೋಲಾಡುವ ನಾಲಿಗೆ. ಕೈಗಳಲ್ಲಿ ಶಂಖ, ಚಕ್ರ, ತಲೆಯ ಮೇಲೆ ಮುಕುಟ. ಕಣ್ಣುಗಳಿಂದ ಕಿಡಿಗಳು ಉದುರುತ್ತಲೇ ಇವೆ. ಇಂಥ ಭೀಕರವಾದ ನೃಸಿಂಹ ದೇವರ ದರ್ಶನವನ್ನು ಮಾಡಿ ಎಲ್ಲರೂ ನಮಸ್ಕಾರ ಮಾಡಿದರು.

ಇಂದ್ರದ್ಯುಮ್ನ ಮಹಾರಾಜನು ಶ್ರೀನೃಸಿಂಹ ದೇವರ ದರ್ಶನವನ್ನು ಮಾಡಿಕೊಂಡು ಕೈಮುಗಿದು ಪ್ರದಕ್ಷಿಣೆ ನಮಸ್ಕಾರ ಮಾಡಿ ಸೇವೆ ಸಲ್ಲಿಸಿ ಕೃತಕೃತ್ಯನಾದನು. ಮತ್ತು

ಕೃತಾರ್ಥಭಾವದಿಂದ ನಾರದರಿಗೆ ಹೇಳಿದನು - "ಮಹರ್ಷಿಗಳೇ! ಇಂದು ನನ್ನ ಜನ್ಮ ಧನ್ಯವಾಯಿತು. ಈ ನರಹರಿಯ ದರ್ಶನದಿಂದ, ನನ್ನ ಪಾಪಗಳೆಲ್ಲವೂ ದಗ್ಧವಾಗಿ ಹೋದವು ಈ ನೃಸಿಂಹ ದರ್ಶನದಿಂದ. ನಾರದರೇ! ಜಗನ್ನಾಥ ಸ್ವಾಮಿಯ ಇಂದ್ರನೀಲಮಣಿಮಯವಾದ ಮೂರ್ತಿಯು ಯಾವ ಸ್ಥಾನದಲ್ಲಿ ವಿರಾಜಮಾನವಾಗಿರುತ್ತದೆ. ನನಗೆ ಅದನ್ನು ತೋರಿಸಿರಿ."

ಆಗ ನಾರದರು ಇಂದ್ರದ್ಯುಮ್ನ ಮಹಾರಾಜನನ್ನು ಆ ಪರಮ ಪಾವನವಾದ ಸ್ಥಾನಕ್ಕೆ ಕರೆದುಕೊಂಡು ಹೋದರು. ಮೊದಲು ಜಗನ್ನಾಥ ಸ್ವಾಮಿಯು ಸ್ವಯಂ ತಾನೇ ಕಾಷ್ಠಮಯ ದೇಹವನ್ನು ಧರಿಸಿ ಇದೇ ಸ್ಥಾನದಲ್ಲಿ ನಿಂತು ಎಲ್ಲರಿಗೂ ತನ್ನ ಪ್ರತ್ಯಕ್ಷ ದರ್ಶನವನ್ನು ಕೊಡುತ್ತಿದ್ದನು. ಆದರೆ ಇತ್ತೀಚೆಗೆ ಯಮದೇವರ ಅಪೇಕ್ಷೆಯಂತೆ ಆ ಮೂರ್ತಿಯು ಹೊಂಪುಡಿಯಂತಿರುವ ಮಳಲಿನಿಂದ ಆಚ್ಛಾದಿತವಾಗಿ ಹೋಗಿದೆ. ನಾರದರು ಮಹಾರಾಜನನ್ನು ಅಲ್ಲಿಗೆ ಕರೆದುಕೊಂಡು ಹೋಗಿ ಹೇಳಿದರು- "ಮಹಾರಾಜ! ಎರಡು ಯೋಜನ ಎತ್ತರ ಒಂದು ಯೋಜನ ಅಗಲ ಬೆಳೆದುನಿಂತ ಈ ವಟವೃಕ್ಷವನ್ನು ನೋಡು. ಈ ವೃಕ್ಷರಾಜವು ಪ್ರಳಯ ಕಾಲದಲ್ಲಿಯೂ ಕೂಡ ಹೀಗೇ ಸ್ಥಿರವಾಗಿ ನಿರಪಾಯವಾಗಿ ನಿಂತಿರುತ್ತದೆ.

ಇದರ ನೆರಳು ಬಿದ್ದರೂ ಸಾಕು ಮಾನವರು ಮರಳಿ ಬರುವುದಿಲ್ಲ ಸಂಸಾರಕ್ಕೆ. ಇದರ ದೊಡ್ಡೆಯ ಮೂಲ ಭಾಗದಿಂದ ಪಶ್ಚಿಮದಲ್ಲಿ ನೃಸಿಂಹ ದೇವರು, ಉತ್ತರದಲ್ಲಿ ನೀಲಮಾಧವ ಸ್ವಾಮಿಯು ವಿರಾಜಮಾನರಾಗಿದ್ದಾರೆ. ಇನ್ನು ಮೇಲೆ ಆ ನೀಲಮಾಧವ ಸ್ವಾಮಿಯು ನಿನ್ನ ಮೇಲೆ ಅನುಗ್ರಹ ಮಾಡಲಿಕ್ಕಾಗಿ ನಾಲ್ಕು ರೂಪಗಳಿಂದ ಪ್ರಕಟವಾಗಲಿರುವನು. ವಿಷ್ಣುವಿನ ಪರಂಧಾಮದಲ್ಲಿ ಶ್ವೇತದ್ವೀಪವು ಇದ್ದಂತೆ ಈ ಜಂಬೂದ್ವೀಪದಲ್ಲಿ ಈ ಪುರುಷೋತ್ತಮ ಕ್ಷೇತ್ರವು ಭಗವಂತನು ವಾಸಮಾಡುವ ದಿವ್ಯಧಾಮವಾಗಿದೆ. ಮೋಕ್ಷಕ್ಕೆ ಅಧಿಕಾರಿಗಳಾದವರೇ ಈ ಭಗವಂತನ ಮಹಾಮಹಿಮೆಯನ್ನು ತಿಳಿಯುತ್ತಾರೆ. ಇದನ್ನು ನಂಬದೇ ಇದ್ದವರು ಪಾಪಿಗಳು. ಪರಮಾತ್ಮನು ಹಿಂದೆ ಮತ್ಸ್ಯ, ಕೂರ್ಮ, ವರಾಹ, ನೃಸಿಂಹ, ವಾಮನ, ರಾಮ, ಕೃಷ್ಣ ಮುಂತಾಗಿ ಅನೇಕ ಅವತಾರಗಳನ್ನು ಮಾಡಿದ್ದಾನೆ. ಆ ಅವತಾರದ ಕಾರ್ಯವು ಸಮಾಪ್ತವಾದ ಬಳಿಕ ಪರಂಧಾಮಕ್ಕೆ ಪ್ರಯಾಣ ಮಾಡುತ್ತಾನೆ. ಯಾವ ಅವತಾರದಲ್ಲಿಯೂ ಅವನು ಈ ಭೂಲೋಕದಲ್ಲಿ ಕೊನೆಯವರೆಗೆ ವಾಸಮಾಡುವದಿಲ್ಲ. ಆದರೆ ಈ ಪುರುಷೋತ್ತಮ ಕ್ಷೇತ್ರದಲ್ಲಿ ಮಾತ್ರ ದಯಾಸಾಗರನಾದ ನಾರಾಯಣನು ಯಾವ ಕಾರಣವೂ ಇಲ್ಲದೇ ಈ ಕ್ಷೇತ್ರದಲ್ಲಿ ನಿತ್ಯನಿವಾಸವನ್ನು ಮಾಡಿದ್ದಾನೆ. ಶ್ವೇತದ್ವೀಪದಲ್ಲಿದ್ದರೂ ಭಗವಂತನು ಬೇರೆ ಬೇರೆ ಕಡೆ ಅವತಾರ ಮಾಡುವಂತೆ ಇಲ್ಲಿ ಇದ್ದರೂ ದ್ವಾರಕಾ, ಕಂಚಿ, ಪುಷ್ಕರ ಮೊದಲಾದ ಸ್ಥಳಗಳಲ್ಲಿ ಕರುಣೆಯಿಂದ ಪ್ರಕಟವಾಗುತ್ತಾನೆ."

ನಾರದರು ತೋರಿಸಿದ ಆ ದಿವ್ಯಸ್ಥಾನವನ್ನು ನೋಡಿದ ಇಂದ್ರದ್ಯುಮ್ನ ಮಹಾರಾಜ! ಸಾಷ್ಟಾಂಗ ಪ್ರಣಾಮ ಮಾಡಿದ ಭಕ್ತಿಯಿಂದ. ಸಾಕ್ಷಾತ್ ಆ ಲಕ್ಷ್ಮೀಪತಿಯು ತನ್ನ ಎದುರು ಆ ತನ್ನ ಮೊದಲಿನ ಸ್ಥಾನದಲ್ಲಿ ಪ್ರತ್ಯಕ್ಷ ಬಂದು ನಿಂತಿದ್ದಾನೆ ಎಂದು ಭಾವಿಸಿ ಈ ರೀತಿಯಾಗಿ ಸ್ತೋತ್ರ ಮಾಡಿದನು - "ಶರಣಾಗತ ವತ್ಸಲನಾದ ಜಗನ್ನಾಥ! ನಾನು ಭವಸಾಗರದಲ್ಲಿ

ಮುಳುಗುತ್ತಿದ್ದೇನೆ. ನನ್ನನ್ನು ಉದ್ಧರಿಸು. ಈ ಜಗತ್ತಿನಲ್ಲಿ ದುರಿತರಾಶಿಯನ್ನು ಕಳೆದು ದುಃಖರಾಶಿಯನ್ನು ಧ್ವಂಸಮಾಡುವ ಸಮರ್ಥ ವ್ಯಕ್ತಿ ಎಂದರೆ ನೀನೊಬ್ಬನೇ.'' ಭಕ್ತಿಯಿಂದ ನಿನ್ನ ಆರಾಧನೆ ಮಾಡಿದ ಮನುಷ್ಯರಿಗೆ ಮೋಕ್ಷವನ್ನು ಕರುಣಿಸುವ ಮಹಾಪ್ರಭು ನೀನೇ ಎಂಬುದು ಅನೇಕ ದೃಷ್ಟಾಂತಗಳಿಂದ ಸಿದ್ಧವಾಗಿದೆ. ಅಜಾಮಿಳ ಬ್ರಾಹ್ಮಣನು ತನ್ನ ವರ್ಣಾಶ್ರಮಗಳಿಗೆ ಯೋಗ್ಯವಾದ ಕರ್ಮಗಳನ್ನು ಬಿಟ್ಟು ಅನೇಕ ಪಾಪಕರ್ಮಗಳನ್ನು ಮಾಡಿದ್ದ. ಅವನು ಮಾಡದೇ ಇರುವ ಪಾಪವಾದರೂ ಯಾವದು? ಇಷ್ಟಾದರೂ ಮರಣಿಸುವ ಮುನ್ನ ಒಮ್ಮೆ ಭಕ್ತಿಯಿಂದ ನಾರಾಯಣ! ಎಂದು ಕೂಗಿದ. ''ಹೇ ನಾಥ ದಯಾನಿಧಿ ನಾರಾಯಣ,'' ಎಂದು ಮುಂತಾಗಿ ಭಗವನ್ನಾಮವನ್ನು ಉಚ್ಚಾರ ಮಾಡುವ ಮಾತ್ರದಿಂದಲೇ ಮುಕ್ತನಾಗಿ ಹೋದ. ದೇವೇಶ್ವರ, ಜಗತ್ತಿಗೆಲ್ಲ ನಿಜವಾಗಿ ಆಶ್ರಯ ಕೊಡುವವನು ನೀನೇ. ಈ ದೀನನ ಮೇಲೆ ಅನುಗ್ರಹ ಮಾಡು. ನಾನು ನಿನ್ನಲ್ಲಿ ಕೇಳುವದೇನಂದರೆ ಇಷ್ಟು ಮಾತ್ರ. ನಿನ್ನ ಯಾವ ಮೂರ್ತಿಯು ಇಲ್ಲಿ ಅದೃಶ್ಯರೂಪದಿಂದ ವಿರಾಜಮಾನವಾಗಿದೆಯೋ ಅದನ್ನು ನಾನು ಈಗ ನನ್ನ ಕಣ್ಣಿನಿಂದ ನೋಡುವಂತಾಗಲಿ. ಇದರ ಹೊರತು ನನಗೆ ಬೇರೆ ಯಾವ ಅಪೇಕ್ಷೆಯು ಇಲ್ಲ'' ಹೀಗೆ ಭಗವಂತನನ್ನು ಪ್ರಾರ್ಥಿಸಿದ ಇಂದ್ರದ್ಯುಮ್ನ ಮಹಾರಾಜನು ಭಗವಂತನನ್ನು ಸ್ತೋತ್ರಮಾಡಿ ನೆಲದ ಮೇಲೆ ಅಡ್ಡಬಿದ್ದು ಸಾಷ್ಟಾಂಗ ನಮಸ್ಕಾರವನ್ನು ಹಾಕಿದನು. ಅವನ ಕಂಗಳಿಂದ ಧಾರಾಕಾರವಾಗಿ ನೀರು ಹರಿಯತೊಡಗಿತ್ತು. ಆಗ ಒಮ್ಮೆಲೆ ಆಕಾಶವಾಣಿ ಆಯಿತು- ''ರಾಜನೇ, ಚಿಂತೆ ಮಾಡಬೇಡ. ನಾನು ನಿನಗೆ ಪ್ರತ್ಯಕ್ಷ ದರ್ಶನವನ್ನು ಕೊಡುವೆನು. ದೇವರ್ಷಿನಾರದರು ಬ್ರಹ್ಮದೇವರ ಅಪ್ಪಣೆಯನ್ನು ನಿನಗೆ ಹೇಳಿರುವರಷ್ಟೆ! ಇದಕ್ಕೆ ಅನುಸಾರವಾಗಿ ಕಾರ್ಯವನ್ನು ಮಾಡುತ್ತ ಹೋಗು''ಈ ದಿವ್ಯ ವಾಣಿಯನ್ನು ಕೇಳಿ ರಾಜನು ನಾರದರಿಗೆ ಹೇಳಿದ.

''ಮಹರ್ಷಿಯೇ! ಬ್ರಹ್ಮದೇವರ ಆದೇಶದಂತೆ ನನಗೆ ನೀವು ಹೇಳಿಡ ಮಾತನ್ನೇ ಈ ಆಕಾಶವಾಣಿಯು ಕೂಡ ಅನುಮೋದನೆ ಮಾಡಿದೆ. ನೀವು ಬ್ರಹ್ಮದೇವರ ಮಕ್ಕಳು. ನಿಮ್ಮ ವಚನವೆಂದರೆ ಭಗವದ್‌ವಚನವೇ ಸರಿ. ಅದನ್ನು ನಾನು ಪ್ರಯತ್ನಪೂರ್ವಕವಾಗಿ ಪಾಲನೆ ಮಾಡುತ್ತೇನೆ.''

## ನಾರದರಿಂದ ನೃಸಿಂಹ ದೇವರ ಸ್ಥಾಪನೆ

**ನಾರದ:-** ''ರಾಜನೇ! ನಡೆ, ನಾವು ಮೊದಲು ನೀಲಕಂಠನ ಸಮೀಪ ಹೋಗೋಣ. ಅಲ್ಲಿಯೇ ಸರ್ವ ರಾಕ್ಷಸರನ್ನು ಸಂಹರಿಸುವ ಮತ್ತು ಎಲ್ಲ ವಿಘ್ನವನ್ನು ಪರಿಹರಿಸುವ ನೃಸಿಂಹದೇವರನ್ನು ಸ್ಥಾಪನೆ ಮಾಡೋಣ. ಪಶ್ಚಿಮಾಭಿಮುಖವಾಗಿ ಅದರಿಂದ ಉಸುಕಿನ ರಾಶಿಯಲ್ಲಿ ಅಂತರ್ಧಾನ ಹೊಂದಿದ ಭಗವಾನ್ ಮಹಾವಿಷ್ಣುವು ನೃಸಿಂಹ ರೂಪದಿಂದ ಪ್ರಕಟನಾಗುವನು. ನರಹರಿಯ ಸಮೀಪದಲ್ಲಿ ಮಾಡಿದ ಯಜ್ಞವು ಆತಿಶಯ ಫಲಪ್ರದ. ನೀನು ಮುಂದೆ ನಡೆ. ಅಲ್ಲಿ ಒಂದು ಮಂದಿರವನ್ನು ಕಟ್ಟಿಸು. ನೀನು ಸ್ಮರಣೆ ಮಾಡಿದ ಕೂಡಲೇ ವಿಶ್ವಕರ್ಮನ ಮಗನು ಅಲ್ಲಿಗೆ ಆಗಮಿಸುವನು. ಸ್ಥಾಪತ್ಯ ವಿಜ್ಞಾನ, ಶಿಲ್ಪ ವಿಜ್ಞಾನಗಳಲ್ಲಿ ಒಳ್ಳೆ ಪಳಗಿದ ಆ ಚತುರ ಶಿಲ್ಪಿಯು. ಬಂದು ಬಹುಬೇಗನೇ ಪಶ್ಚಿಮಕ್ಕೆ ಮುಖಮಾಡಿ ಒಂದು ದಿವ್ಯವಾದ ಮಂದಿರವನ್ನು ನಿರ್ಮಾಣ ಮಾಡುವನು. ಭಗವಾನ್ ನೀಲಕಂಠನ ದಕ್ಷಿಣಕ್ಕೆ ನೂರು ಮಾರುದೂರದಲ್ಲಿ ಬಹುದೊಡ್ಡದಾದ ಒಂದು ಚಂದನ ವೃಕ್ಷವು ಇರುತ್ತದೆ. ಪಶ್ಚಿಮ

ಸ್ಥಾನವು ಕ್ಷೇತ್ರವಾಗಿ ರೂಪುಗೊಳ್ಳುವದು. ಅಲ್ಲಿಯೇ ನೀನು ನೆರವೇರಿಸಬೇಕು ಸಾವಿರ ಯಜ್ಞಗಳನ್ನು. ನೀನು ಇಂದೇ ಹೊರಡು. ಈಗಲೇ ನಡೆ. ನಾನು ಐದು ದಿನಗಳವರೆಗೆ ಇಲ್ಲಿಯೇ ನಿಂತುಕೊಳ್ಳುತ್ತೇನೆ. ಶ್ರೀನೃಸಿಂಹ ರೂಪಿ ನಾರಾಯಣನ ಆರಾಧನೆಯನ್ನು ಮಾಡಿ ಒಂದು ಅರ್ಚಾ ವಿಗ್ರಹದಲ್ಲಿ ಅವನನ್ನು ಪ್ರತಿಷ್ಠಾಪನೆ ಮಾಡುತ್ತೇನೆ.''

ನಾರದರ ಈ ಮಾತನ್ನು ಕೇಳಿ ಇಂದ್ರದ್ಯುಮ್ನ ರಾಜನು ಚಂದನವೃಕ್ಷದ ಸಮೀಪಕ್ಕೆ ಹೋದನು. ಅಷ್ಟರಲ್ಲಿ ಅಲ್ಲಿಗೆ ಬಂದಿದ್ದನು ವಿಶ್ವಕರ್ಮನ ಮಗನಾದ ಸುಘಟಕ. ಅವನು ಇಂದ್ರದ್ಯುಮ್ನನನ್ನು ನೋಡಿದ. ಕೈಜೋಡಿಸಿ ನಮ್ರತೆಯಿಂದ ನುಡಿದ- ''ದೇವ! ನಾನು ಶಿಲ್ಪಶಾಸ್ತ್ರವನ್ನು ಅರಿತಿದ್ದೇನೆ ಚೆನ್ನಾಗಿ. ಈಗ ನಿಮ್ಮ ಹೇಳಿಕೆಯಂತೆ ಸುಂದರವಾದ ನೃಸಿಂಹ ಭವನವನ್ನು ನಿರ್ಮಾಣ ಮಾಡುವೆನು.''

**ಇಂದ್ರದ್ಯುಮ್ನ:-** ''ವಿಶ್ವಕರ್ಮ ಕುಮಾರ! ನೀನು ಸಾಧಾರಣ ಶಿಲ್ಪಿ ಅಲ್ಲ. ಈ ಶಿಲ್ಪಶಾಸ್ತ್ರ ನಿನಗೆ ತಂದೆಯಿಂದ ಬಂದ ಬಳುವಳಿ. ನಿಮ್ಮದೆಲ್ಲರದು ಪಳಗಿದ ಕೈ. ಇದನ್ನು ನಾರದರು ಮೊದಲೇ ತಿಳಿಸಿದ್ದಾರೆ. ಪ್ರಾಕಾರ ತೋರಣ ಸಹಿತವಾಗಿ ಶ್ರೀನೃಸಿಂಹ ದೇವರ ಒಂದು ಸುಂದರವಾದ ಮಂದಿರವನ್ನು ಬೇಗನೆ ರಚಿಸು. ಅದರ ಮುಖ್ಯ ತಲೆಬಾಗಿಲು ಪಶ್ಚಿಮಾಭಿಮುಖವಾಗಿರಲಿ.''

ಮಾಡಿ ಅವನಿಗೆ ಮಂದಿರ ನಿರ್ಮಾಣ ಕಾರ್ಯವನ್ನು ಒಪ್ಪಿಸಿದನು. ಮತ್ತು ಅದಕ್ಕಾಗಿ ಒಳ್ಳೊಳ್ಳೆ ಕಲ್ಲುಗಳನ್ನು ಸಂಗ್ರಹ ಮಾಡಿಕೊಂಡು ಆ ಕಲ್ಲಿನ ಕೆಲಸ ಮಾಡುವ ಸೇವಕ ಶಿಲ್ಪಿಗಳಿಗೂ, ಮುಂಗಡ ಹಣವನ್ನು ಕೊಟ್ಟು ಆ ಕಾರ್ಯದಲ್ಲಿ ತೊಡಗಿಸಿದನು. ಆ ಎಲ್ಲ ಶಿಲ್ಪಿಗಳು ಸುಘಟಕ ಶಿಲ್ಪಿಯ ನೇತೃತ್ವದಲ್ಲಿ ಸ್ವಯಂ ಭಕ್ತಿಯಿಂದ ಹಗಲಿರುಳು ಆ ಕಾರ್ಯವನ್ನು ಅತ್ಯಂತ ಉತ್ಸಾಹದಿಂದ ಮಾಡಿದರು. ಬೇರೆ ಕಡೆ ವರುಷಾರು ತಿಂಗಳು ಕಷ್ಟಪಟ್ಟೂ ಮುಗಿಯದ ಆ ಕಾರ್ಯವು ದೇವತಾ ಅನುಗ್ರಹ ವಿಶೇಷದಿಂದ ನಾಲ್ಕು ದಿನಗಳಲ್ಲಿ ಸಿದ್ಧವಾಯಿತು.

ಐದನೆ ದಿನ ಪ್ರಾತಃಕಾಲದಲ್ಲಿ ಪ್ರತಿಷ್ಠಾವಿಧಿಗಾಗಿ ಎಲ್ಲ ಸಿದ್ಧತೆಯನ್ನು ಮಾಡಿ ಮಹಾರಾಜರು ನಾರದರ ದಾರಿ ನೋಡುತ್ತ ನಿಂತುಕೊಂಡರು. ಆಗಲೇ ಶಂಖ, ಮೃದಂಗ, ಗೀತ, ತೂರ್ಯ, ಕೊಂಬು ಕಹಳೆಗಳ ಮಂಗಳ ವಾದ್ಯವು ಹಾಗೂ ಆನೆಗಳ ಕೊರಳಲ್ಲಿ ಹಾಕಿದ ಘಂಟಾನಾದದ ಕಿಂಕಿಣಿ ಶಬ್ದವು ಒಮ್ಮೆಲೆ ಕೇಳಿ ಬಂದಿತು. ಅದರ ಜೊತೆಗೆ ಉಚ್ಚ ಕಂಠದಲ್ಲಿ ಕೂಗುವ ಶ್ರೀ ಜಗನ್ನಾಥಸ್ವಾಮಿ ಹಾಗೂ ನೃಸಿಂಹ ದೇವರ ಜಯ ಜಯಕಾರಗಳು ಆಕಾಶ ಮಂಡಲದಲ್ಲಿ ಮೊಳಗ ತೊಡಗಿದವು. ಅಷ್ಟರಲ್ಲಿ ನಾರದರು ವಿಶ್ವಕರ್ಮನು ತಯಾರ ಮಾಡಿದ ಶ್ರೀ ನೃಸಿಂಹ ದೇವರ ದಿವ್ಯವಿಗ್ರಹವನ್ನು ತೆಗೆದುಕೊಂಡು ಅಲ್ಲಿಗೆ ಬಂದರು. ಆ ನೃಸಿಂಹ ಮೂರ್ತಿಯಲ್ಲಿ ಪ್ರಾಣಪ್ರತಿಷ್ಠೆಯನ್ನು ಆಗಲೇ ಮಾಡಲಾಗಿತ್ತು. ಕೊರಳಲ್ಲಿ ದಿವ್ಯಮಾಲೆಯನ್ನು ಹಾಕಿ ವಸ್ತ್ರ ಉಡಿಸಿ ಮೈಗೆಲ್ಲ ದಿವ್ಯಚಂದನವನ್ನು ಬಳಿಯಲಾಗಿತ್ತು.

ಆ ಸುಂದರವಾದ ಮೂರ್ತಿಯ ದಿವ್ಯಕಾಂತಿಯು ತನ್ನ ತೇಜಃಪುಂಜದಿಂದ ಸುತ್ತಲು ಒಂದು ಪ್ರಭಾವಲಯವನ್ನೆ ನಿರ್ಮಿಸಿತ್ತು. ಅದನ್ನು ನೋಡಿ ಮಹಾರಾಜನು ಮತ್ತು ಪರಿವಾರದವರು ಪ್ರಸನ್ನರಾಗಿ ನಾರದರನ್ನು ಹೊಗಳಿದರು. ಆ ನೃಸಿಂಹಮೂರ್ತಿಗೆ ಎಲ್ಲರೂ ಪ್ರದಕ್ಷಿಣೆ ಹಾಕಿ ನೆಲದುದ್ದ ಬಿದ್ದು ದೀರ್ಘದಂಡ ನಮಸ್ಕಾರ ಹಾಕಿದರು.

ರಾಜನ ಬಿನ್ನಹದ ಮೇರೆಗೆ ನಾರದ ಮುನಿಗಳು ಶ್ರೀದೇವಿ ಭೂದೇವಿ ಸಹಿತವಾದ ಶ್ರೀನೃಸಿಂಹದೇವರ ಪ್ರತಿಮೆಯನ್ನು ರತ್ನದ ವೇದಿಕೆಯ ಮೇಲೆ ಪ್ರತಿಷ್ಠೆಗೊಳಿಸಿದರು. ಅನಂತರ ಅನೇಕ ವಿಷ್ಣುಭಕ್ತರು, ಬೇರೆ ಬೇರೆ ರಾಜರು ಹಾಗೂ ಮಹಾರಾಜ ಇಂದ್ರದ್ಯುಮ್ನನು ನಾರದರೊಂದಿಗೆ ಕೂಡಿಕೊಂಡು ವೇದ ಉಪನಿಷತ್ ಹಾಗೂ ಆಗಮ ಗ್ರಂಥಗಳಲ್ಲಿ ಹೇಳಿದ ಅನೇಕ ನೃಸಿಂಹ ದೇವರ ಮಂತ್ರಗಳನ್ನು ಪಠಿಸಿದರು. ಮತ್ತು ಭಕ್ತಿಯಿಂದ ಎಲ್ಲರೂ ನೃಸಿಂಹ ದೇವರ ಸ್ತೋತ್ರ ಮಾಡಿದರು. ಇಂದ್ರದ್ಯುಮ್ನ ರಾಜನಿಗಂತೂ ಲಕ್ಷ್ಮೀದೇವಿ ಹಾಗೂ ಭೂದೇವಿಯರೊಂದಿಗೆ ಒಡಗೂಡಿ ಅಲ್ಲಿ ಸನ್ನಿಹಿತನಾದ ಶ್ರೀನೃಸಿಂಹ ಸ್ವಾಮಿಯನ್ನು ಕಂಡು ಭಕ್ತಿಯು ಉದ್ರಿಕ್ತವಾಯಿತು. ನೆಲದ ಮೇಲೆ ಮತ್ತೆ ಮತ್ತೆ ಅಡ್ಡಬಿದ್ದು ದಂಡಪ್ರಣಾಮವನ್ನು ಮಾಡಿದನು. ಜ್ಯೇಷ್ಠ ಮಾಸದ ಶುಕ್ಲಪಕ್ಷ ದ್ವಾದಶೀ ದಿನದಂದು ಸ್ವಾತೀನಕ್ಷತ್ರಯೋಗದಲ್ಲಿ ಈ ನೃಸಿಂಹ ದೇವರ ಪ್ರತಿಷ್ಠೆ ಮಾಡಲ್ಪಟ್ಟಿತು.

## ನೃಸಿಂಹ ಪೂಜಾಫಲ

ನಾರದರಿಂದ ಸುಪ್ರತಿಷ್ಠಿತವಾದ ಈ ನೃಸಿಂಹ ಸ್ವಾಮಿಯ ದರ್ಶನ ಮಾಡುವುದರಿಂದ ಸಾವಿರ ಅಶ್ವಮೇಧ ಯಾಗ ಮಾಡಿದ ಪುಣ್ಯವು ಲಭಿಸುವದು. ಯಾರು ಪಂಚಾಮೃತ ಇಲ್ಲವೇ ಕೇವಲ ಹಸುವಿನ ಹಾಲು, ಅಥವಾ ತೆಂಗಿನ ನೀರು ಇಲ್ಲವೇ ಸುಗಂಧ ನೀರಿನಿಂದ ನೃಸಿಂಹ ದೇವರ ಅಭಿಷೇಕ ಮಾಡಿ ಪಾಯಸ ಮೊದಲಾದ ಭಕ್ಷ ಭೋಜ್ಯ ನೈವೇದ್ಯ ಸಮರ್ಪಿಸಿ ಪೂಜೆಯನ್ನು ಮಾಡುವರೋ ಮತ್ತು ಜಪಾಕುಸುಮದ ಮಾಲೆ ಹಾಕಿ ಚಂದನ, ಧೂಪ, ದೀಪ, ತಾಂಬೂಲ, ಸ್ತೋತ್ರ ಪಾಠ, ಜಯ ಜಯಕಾರ, ಪ್ರದಕ್ಷಿಣೆ, ನಮಸ್ಕಾರ ಮುಂತಾದವುಗಳಿಂದ ಈ ನೃಸಿಂಹದೇವರನ್ನು ಸಂತೋಷಪಡಿಸುವರೋ ಅವರು ಕೊನೆಗೆ ಬ್ರಹ್ಮಲೋಕಕ್ಕೆ ಹೋಗುತ್ತಾರೆ. ವೈಶಾಖ ಶುಕ್ಲಪಕ್ಷ ಚತುರ್ದಶಿ ದಿನ ಸ್ವಾತೀ ನಕ್ಷತ್ರ ಯೋಗವಿದ್ದಾಗ ಪ್ರದೋಷ ಸಮಯದಲ್ಲಿ ಮೂಲ ನೃಸಿಂಹ ದೇವರು ಭಕ್ತಪ್ರಲ್ಹಾದನನ್ನು ರಕ್ಷಿಸಲು ಭೂಮಂಡಲದಲ್ಲಿ ಸ್ತಂಭದಿಂದ ಪ್ರಾದುರ್ಭೂತನಾಗಿದ್ದನು. ಆ ಶುಭದಿನದಂದು ಈ ನೃಸಿಂಹ ದೇವರ ಪೂಜೆಯನ್ನು ವಿಧಿಪೂರ್ವಕವಾಗಿ ಮಾಡಿದರೆ ಜನ್ಮ ಜನ್ಮಾಂತರಗಳ ಪಾಪಗಳು ತಕ್ಷಣ ಸುಟ್ಟು ಬೂದಿಯಾಗುವವು. ಈ ನೃಸಿಂಹ ದೇವರ ದರ್ಶನ, ಸ್ಪರ್ಶನ, ಪ್ರಣಾಮ ಹಾಗು ಸ್ತೋತ್ರ ಮಾಡಿದವರು ಸರ್ವಪಾಪಗಳಿಂದಲೂ ಮುಕ್ತರಾಗುವರು.

## ಇಂದ್ರದ್ಯುಮ್ನ ರಾಜನಿಂದ ಸಾವಿರ ಅಶ್ವಮೇಧ ಯಜ್ಞ

**ಮುನಿಗಳು:-** ಜೈಮಿನಿ ಮಹರ್ಷಿಗಳೇ! ಆ ಕ್ಷೇತ್ರದಲ್ಲಿ ನೃಸಿಂಹ ದೇವರ ಪ್ರತಿಷ್ಠೆ ಆದ ಬಳಿಕ ಇಂದ್ರದ್ಯುಮ್ನ ಮಹಾರಾಜನು ಏನು ಮಾಡಿದನು?

**ಜೈಮಿನಿ:-** ಮಹಾರಾಜನು ಮೊದಲು ಇಂದ್ರಾದಿ ದೇವತೆಗಳನ್ನು ಆಹ್ವಾನ ಮಾಡಿದ. ಆರು ಅಂಗಸಹಿತವಾದ ನಾಲ್ಕು ವೇದಗಳನ್ನು ಪದ, ಕ್ರಮ, ಜಟಾ, ಘನಸಹಿತವಾಗಿ ಅಧ್ಯಯನ ಮಾಡಿ ಪಂಡಿತರಾದ ಸಾವಿರಾರು ವಿದ್ವಾಂಸರನ್ನು ಋಷಿಗಳನ್ನು, ಬ್ರಾಹ್ಮಣರನ್ನು ಆಮಂತ್ರಿಸಿದ. ಅವರೆಲ್ಲರೂ ಉತ್ತರ ಮೀಮಾಂಸಾ ಶಾಸ್ತ್ರದಲ್ಲಿಯೂ, ಯಜ್ಞವಿದ್ಯೆಯಲ್ಲಿಯೂ ಪಾರಂಗತರಾಗಿದ್ದರು. ರಾಜ ಹಾಗು ಅವರ ಪರಿವಾರಕ್ಕಾಗಿ

ಒಂದು ದೊಡ್ಡ ಸಭಾಭವನವನ್ನು ಕಲ್ಲುಗಳಿಂದ ನಿರ್ಮಿಸಲಾಗಿತ್ತು. ಸ್ವಯಂ ಮಹಾರಾಜನು ನಿರಂತರವಾಗಿ ಆ ಕ್ಷೇತ್ರದಲ್ಲಿಯೆ ನೆಲೆಸುವ ವಿಚಾರ ಮಾಡಿದ್ದರಿಂದ ಈ ರಾಜಭವನವನ್ನು ಅರಮನೆಯಂತೆಯೇ ದಿವ್ಯ ಭವ್ಯವಾಗಿ ಕಟ್ಟಲಾಗಿತ್ತು. ಎರಡು ಮೈಲು ವಿಸ್ತೀರ್ಣವಾದ ಆ ರಾಜಮಂದಿರವು ಮುಗಿಲೆತ್ತರ ಉನ್ನತವಾಗಿದ್ದಿತು. ಕೆಳಗಿನ ನೆಲಗಟ್ಟಣೆಯನ್ನು ಕೆಲವು ಕಡೆ ಸ್ಫಟಿಕ ಮಣಿಗಳಿಂದಲೂ ಹಲವೆಡೆ ರತ್ನಗಳಿಂದಲೂ, ಕೆಲವು ಕಡೆ ಬಂಗಾರದಿಂದಲೂ ಮಾಡಲಾಗಿತ್ತು.

ಆ ರಾಜಭವನಕ್ಕೆ ನಾಲ್ಕೂ ಬದಿಗಳಲ್ಲಿ ಹತ್ತಿ ಇಳಿಯಲು ಬರುವಂತೆ ನೂರಾರು ಮೆಟ್ಟಲು ರಚಿಸಲಾಗಿತ್ತು. ಒಂದು ಶುಭ ದಿನದ ಸುಮೂಹೂರ್ತದಲ್ಲಿ ಮಹಾರಾಜನು ತನ್ನ ಆ ನೂತನ ಸಭಾಮಂಟಪದಲ್ಲಿ ದರ್ಬಾರವನ್ನು ನಡೆಸಿದನು. ಎಲ್ಲ ಜನರು ತಮ್ಮ ತಮ್ಮ ಸ್ಥಾನದಲ್ಲಿ ಕುಳಿತಬಳಿಕ ಇಂದ್ರದ್ಯುಮ್ನ ಮಹಾರಾಜನು ತನ್ನ ಪುರೋಹಿತರೊಂದಿಗೆ ಉಪಸ್ಥಿತನಾದನು. ಆಗ ದೇವಲೋಕದಿಂದ ಆಹೂತರಾಗಿ ಇಂದ್ರಾದಿ ದೇವತೆಗಳು ಸ್ವಯಂ ತಾವೇ ತಮ್ಮ ದಿವ್ಯ ರೂಪದಿಂದ ಅಲ್ಲಿಗೆ ಆಗಮಿಸಿದರು. ಅವರನ್ನು ರತ್ನ ಸಿಂಹಾಸನದ ಮೇಲೆ ಕೂಡಿಸಿದನು. ಸಿಂಹಾಸನಾರೂಢನಾದ ಶಚೀಪತಿ ದೇವೇಂದ್ರನನ್ನು ಎಲ್ಲರಿಗಿಂತ ಮೊದಲು ದಿವ್ಯಮಾಲೆ, ಚಂದನ ಹಾಗೂ ವಸ್ತ್ರಾಲಂಕಾರಗಳನ್ನು ಕೊಟ್ಟು ಅಗ್ರಪೂಜೆಯನ್ನು ಮಾಡಿ ಗೌರವಿಸಿದನು ಇಂದ್ರದ್ಯುಮ್ನ. ಅನಂತರ ಉಳಿದ ದೇವತೆಗಳ ಹಾಗೂ ವಿಷ್ಣುಭಕ್ತಮುನಿ ಮಹರ್ಷಿಗಳ ಪೂಜೆ ಮಾಡಿ ಮಹಾರಾಜನು ನಾರದ ಪುರೋಹಿತರೊಂದಿಗೆ ಕೂಡಿಕೊಂಡು ಇಂದ್ರದೇವರಿಗೆ ಹೇಳಿದನು.

**ಇಂದ್ರದ್ಯುಮ್ನ:-** ದೇವತಾ ಸಾರ್ವಭೌಮ! ನಾನು ಅಶ್ವಮೇಧ ಯಜ್ಞಗಳ ಮುಖಾಂತರ ಯಜ್ಞ ಪುರುಷನಾದ ಮಹಾವಿಷ್ಣುವನ್ನು ಪೂಜೆ ಮಾಡಬೇಕೆಂದು ಸಂಕಲ್ಪಿಸಿದ್ದೇನೆ. ಅದೆಲ್ಲವೂ ತಮ್ಮ ನೇತೃತ್ವದಲ್ಲಿಯೇ ನಡೆಯಬೇಕು ಎಂದು ನನ್ನ ಅಪೇಕ್ಷೆ ಇದೆ. ಈ ಸಾವಿರ ಅಶ್ವಮೇಧ ಯಜ್ಞಗಳು ಮುಗಿಯುವವರೆಗೆ ತಾವು ತಮ್ಮ ದೇವತಾ ಪರಿವಾರದೊಂದಿಗೆ ವಿನೂತನವಾಗಿ ನಿರ್ಮಿಸಿದ ಈ ರಾಜಭವನದಲ್ಲಿಯೇ ಇರಬೇಕು. ತಮ್ಮ ನಿವಾಸಕ್ಕೆಂದೇ ಈ ರಾಜಭವನವನ್ನು ಅತ್ಯಂತ ವಿಶಾಲವಾಗಿ ಕಟ್ಟಿಸಲಾಗಿದೆ. ತಾವೆಲ್ಲರೂ ಇಲ್ಲಿ ಈ ಮೊದಲು ಶರೀರಧಾರಿ ನೀಲಮಾಧವನ ಸಾಕ್ಷಾತ್ ದರ್ಶನವನ್ನು ಮಾಡಿಕೊಂಡಿದ್ದೀರಿ. ನಮ್ಮ ದುರ್ದೈವದಿಂದ ಆ ಜಗನ್ನಾಥ ಸ್ವಾಮಿಯು ಈ ಉಸುಕಿನ ರಾಶಿಯಲ್ಲಿ ಈಗ ಮರೆಯಾಗಿದ್ದಾನೆ. ಮತ್ತೆ ಈಗ ಅವನು ಪ್ರಕಟನಾದರೆ ಎಲ್ಲರಿಗೆ ಕಲ್ಯಾಣವಾಗುವದು. ಮಾನವ ಕುಟುಂಬದ ಉದ್ಧಾರವೂ ಆಗುವದು. ಅದಕ್ಕಾಗಿಯೇ ಈ ಎಲ್ಲ ನನ್ನ ಪ್ರಯತ್ನ.''

ಮಹಾರಾಜನ ಈ ಮಾತುಗಳನ್ನು ಕೇಳಿ ಇಂದ್ರಾದಿ ದೇವತೆಗಳು ನುಡಿದರು - ''ಇಂದ್ರದ್ಯುಮ್ನ! ನೀನು ನಿಜವಾಗಿಯೂ ಮಹಾತ್ಮ. ನೀನು ಪೃಥ್ವಿಯಲ್ಲಿ ಸತ್ಯವ್ರತವನ್ನು ಪಾಲನ ಮಾಡಿರುವೆ. ಮೂರು ಲೋಕಗಳನ್ನು ಪಾವನಗೊಳಿಸುವದು ಈ ನಿನ್ನ ಪುಣ್ಯ ಕಾರ್ಯ. ನಾವು ನಿನಗೆ ಎಲ್ಲ ರೀತಿಯಿಂದಲೂ ಸಹಾಯ ಮಾಡುತ್ತೇವೆ. ನೀನು ಭಕ್ತವತ್ಸಲನಾದ ಆ ಭಗವಂತನನ್ನು ಉದ್ದೇಶಿಸಿ ಸಾವಿರ ಅಶ್ವಮೇಧ ಯಜ್ಞವನ್ನು ಪೂರ್ತಿಗೊಳಿಸು. ಈ ಯಜ್ಞರೂಪ ಪೂಜೆಯಿಂದ ಸುಪ್ರೀತನಾಗಿ ನಿನ್ನ ಮನೋಭೀಷ್ಟವನ್ನು ಈಡೇರಿಸಲಿ ಆ ಜಗನ್ನಾಥಸ್ವಾಮಿ.''

ಅನಂತರ ಮಹಾರಾಜನು ಯಜ್ಞದ ದೇವತೆಯಾದ ಮಹಾವಿಷ್ಣುವನ್ನು ಪೂಜೆಮಾಡಿದ. ಆ ಸಭಾಭವನದಲ್ಲಿ ಇಷ್ಟದೇವತೆಯ ಸ್ಥಾನದಲ್ಲಿ ಭಗವಾನ್ ಶ್ರೀವಾಸುದೇವನನ್ನೇ ಪ್ರತಿಷ್ಠೆಗೊಳಿಸಿದ. ತನ್ನ ಮಡದಿಯೊಂದಿಗೆ ನಿಶ್ಚಿತ ಲಗ್ನದ ಸುಮುಹೂರ್ತವನ್ನು ಪ್ರತೀಕ್ಷೆ ಮಾಡತೊಡಗಿದ. ಸ್ವಸ್ತಿವಾಚನವಾದ ಬಳಿಕ ಪುಣ್ಯಾಹವಾಚನ ಹಾಗೂ ಆಭ್ಯುದಯಿಕ ಶ್ರಾದ್ಧವನ್ನು ಮಾಡಿದ. ಅನಂತರ ರಾಜನು ಋತ್ವಿಜರಿಗೆ ವರಣವನ್ನು ಕೊಡಮಾಡಿದ. ತದನಂತರ ಮಡದಿಯೊಂದಿಗೆ ಯಜ್ಞದ ದೀಕ್ಷೆಯನ್ನು ಸ್ವೀಕರಿಸಿದ. ವೇದಿಕೆ ಸಂಸ್ಕಾರ ಮಾಡಿ ಆದರ ಮೇಲೆ ಪ್ರಜ್ವಲಿತವಾದ ಆಹವನೀಯಾಗ್ನಿಯನ್ನು ಋತ್ವಿಜರು ಸ್ಥಾಪನೆ ಮಾಡಿದರು. ಯಜ್ಞಕಾರ್ಯವು ಪ್ರಾರಂಭವಾಯಿತು.

ಅನಂತರ ವೇದ ಸೂಕ್ತಗಳಿಂದ ಪ್ರೋಕ್ಷಣೆ ಮಾಡಿ ವಿಧ್ಯುಕ್ತ ರೀತಿಯಿಂದ ಅಭಿಮಂತ್ರಣಗೈದು ಅಶ್ವಮೇಧ ಕುದುರೆಯನ್ನು ಪೃಥ್ವೀ ಪರ್ಯಟನೆಗಾಗಿ ಬಿಡಲಾಯಿತು. ಆದರ ಹಿಂದೆ ಕೆಲವು ಸೇನಾಪತಿಗಳು ಮತ್ತು ಕಾದಿಟ್ಟ ಶೂರ ಸೇನಾ ಪಡೆಯು ಬೆಂಗಾವಲಾಗಿ ವಿಶ್ವವಿಜಯಕ್ಕೆ ಹೊರಟರು. ಮಹಾರಾಜನು ಯಜ್ಞದ ದೀಕ್ಷೆಯನ್ನು ಸ್ವೀಕರಿಸಿ ಬ್ರಹ್ಮ ಹಾಗೂ ಉಳಿದ ಋತ್ವಿಜರ ಆದೇಶದಂತೆ ಮೃಗ ಚರ್ಮದ ಮೇಲೆ ಆಸೀನನಾಗಿ ಯಜ್ಞಕರ್ಮವನ್ನು ಮಾಡುತ್ತ ಕುಳಿತನು. ಆ ಯಜ್ಞವನ್ನು ನೋಡುವದಕ್ಕೆ ದಿಗ್ ದೇಶದಿಂದ ಲಕ್ಷಾವಧಿ ಜನರು ಬರತೊಡಗಿದರು. ದಿನ ದಿನವೂ ಬೆಳೆಯುತ್ತಲೇ ನಡೆಯಿತು ಬರುವವರ ಹಾಗೂ ಅಲ್ಲಿಯೇ ಇರುವವರ ಸಂಖ್ಯೆ. ಎಲ್ಲ ಜನರಿಗೂ ಆರು ವಿಧವಾದ ಪಕ್ವಾನ್ನ. ಷಡ್ರಸ ಭರಿತವಾದ ಮೃಷ್ಟಾನ್ನ. ರುಚಿಕರ ಪೇಯಪಾನ, ಕೈ ತುಂಬ ದಕ್ಷಿಣೆ ದಾನ. ಮೇಲೆ ಅತ್ಯಾದರದ ಸನ್ಮಾನ. ಹೀಗೆ ಅತ್ಯದ್ಭುತವಾಗಿ ನಡೆದವು ಇಂದ್ರದ್ಯುಮ್ನನ ಅಶ್ವಮೇಧ ಯಜ್ಞಗಳು.

ಆ ಯಜ್ಞಮಂಟಪಕ್ಕೆ ಬಂದವರು ಯಾರೂ ಬರಿಗೈಯಿಂದ ಹೋಗಲಿಲ್ಲ. ಯಾರಿಗೂ ಯಾಚನೆ ಮಾಡುವ ಪ್ರಸಂಗವೇ ಬರಲಿಲ್ಲ. ಬಂದವರೆಲ್ಲರಿಗೂ ಸನ್ಮಾನ ಸಂತೃಪ್ತಿ, ಸಂತೋಷ. ಅಗ್ನ್ಯಾಧಾನದಿಂದ ಆರಂಭಿಸಿ ಅವಭೃಥದವರೆಗೆ ತೊಂಬತ್ತೊಂಬತ್ತು ಯಜ್ಞಗಳು ಶಾಸ್ತ್ರೋಕ್ತವಾದ ಯಾವ ವಿಧಿವಿಧಾನಗಳಿಗೂ ಲೋಪಬಾರದಂತೆ ಸುಸಂಪನ್ನವಾಗಿಯೇ ನೆರವೇರಿದವು, ನೂರರ ವರೆಗೆ ನಡೆದ ಈ ಅಶ್ವಮೇಧ ಯಜ್ಞಗಳಲ್ಲಿ ಎಲ್ಲಿಯೂ ಒಂದು ಸಲವೂ ಲೋಪಬರಲಿಲ್ಲ. ನ್ಯೂನತೆ ಉಂಟಾಗಲಿಲ್ಲ ಮಂತ್ರ ತಪ್ಪಲಿಲ್ಲ. ಅಪಸ್ವರವಾಗಲಿಲ್ಲ. ಶ್ರೌತ ಭಾಗದಲ್ಲಿ ಎಲ್ಲಿಯೂ ತ್ರುಟಿ ತಲೆ ದೋರಲಿಲ್ಲ. ಋತ್ವಿಜರು ಎಲ್ಲರೂ ಅತ್ಯಂತ ಜಾಗರೂಕರಾಗಿ ದಕ್ಷತೆಯಿಂದ ಯಜ್ಞಕಾರ್ಯವನ್ನು ಪೂರೈಸುತ್ತಿದ್ದರು. ಯಜ್ಞ ಪ್ರಕ್ರಿಯೆಗಳನ್ನು ರೂಪಿಸಿದ ಅಥವಾ ಹೊಂದಿಸಿ ಹೇಳಿದ ಯಾಜ್ಞವಲ್ಕ್ಯ ಮೊದಲಾದ ಋಷಿಗಳು ಋತ್ವಿಜರ ಮಂಡಲದ ಸದಸ್ಯರಾಗಿ ಸ್ವಯಂ ತಾವೇ ನಿಂತು ಎಲ್ಲ ಕಾರ್ಯವನ್ನು ಯಥಾ ಸಾಂಗವಾಗಿಯೇ ನಡೆಯುವಂತೆ ಮಾಡುತ್ತಿದ್ದುದರಿಂದ ಇಂದ್ರದ್ಯುಮ್ನನ ತೊಂಬಂತ್ತೊಂಬತ್ತು ಯಜ್ಞಗಳು ಯಥಾ ಸಾಂಗವಾಗಿ ನಿರ್ವಿಘ್ನದಿಂದ ನೆರವೇರಿದವು.

## ಯಜ್ಞಮಂಟಪದಲ್ಲಿ ಜ್ಞಾನಯಜ್ಞ

ಇತ್ತ ಅಗ್ನಿಶಾಲೆಯಲ್ಲಿ ಅವಿಚ್ಛಿನ್ನವಾಗಿ ಹೋಮ ಹವನಗಳು ನಡೆಯುತ್ತಿದ್ದಂತೆಯೇ ಯಜ್ಞಮಂಟಪದ ಸಭಾಭವನದಲ್ಲಿ ಮಹಾ ಮಹಾ ಪಂಡಿತರು ಋಷಿಗಳು ಕೂಡಿ

ವೈದಿಕವಾಕೋ ವಾಕ್ಯಗಳ ಹಾಗೂ ಸಂದಿಗ್ಧ ಸೂಕ್ತಗಳ ಮತ್ತು ಗುಹ್ಯ ಉಪನಿಷತ್ತಗಳ ಬಗ್ಗೆ ಚರ್ಚೆ, ವಿಚಾರ ಸಂಕಿರಣ, ಸಂವಾದ, ಉಪದೇಶ, ಉಪನ್ಯಾಸ ಮುಂತಾದ ಜ್ಞಾನ ಕಾರ್ಯಗಳನ್ನು ಅವಿಚ್ಛಿನ್ನವಾಗಿ ನಡೆಸಿದ್ದರು. ಆ ಯಜ್ಞಮಂಟಪದ ಇನ್ನೊಂದು ಭಾಗದಲ್ಲಿ ಭಗವಂತನ ಚರಿತ್ರಕಥಾ ನಿರೂಪಣೆಯು ಅಲ್ಲಿ ನಡೆಯುತ್ತಿತ್ತು.

ಇಂದ್ರದ್ಯುಮ್ನ ಮಹಾರಾಜನ ಯಜ್ಞದಲ್ಲಿ ಇಂದ್ರಾದಿ ಸರ್ವ ದೇವತೆಗಳು ಸ್ವಯ ಮೇವ ಉಪಸ್ಥಿತರಾಗಿ ಪ್ರತ್ಯಕ್ಷವಾಗಿ ಕಾಣಿಸಿಕೊಂಡು ತಮ್ಮ ಕೈಯಲ್ಲಿಯೇ ಆಹುತಿಗಳನ್ನು ಸ್ವೀಕರಿಸುತ್ತಿದ್ದರು. ಕೊನೆಯದಾದ ನೂರನೆಯ ಯಜ್ಞವು ಪ್ರಾರಂಭವಾಯಿತು. ಇಂದ್ರದ್ಯುಮ್ನನಿಗೆ ಪ್ರತಿದಿನವೂ ದಿವ್ಯ ಅವಸ್ಥೆಯು ಬರುತ್ತಿತ್ತು. ಆಗ ಯಾವದೋ ಒಂದು ದೈವೀಶಕ್ತಿ ಅವನ ಮೇಲೆ ಸವಾರಿ ಮಾಡಿದಂತೆ ಅವನು ಇರುತ್ತಿದ್ದ. ದೈವದ ಕೈಯಲ್ಲಿಯ ಕೂಸಿನಂತೆ ಇರುತ್ತಿದ್ದ. ಸುತ್ಯಾದಿನದಿಂದ (ಸೋಮರಸವನ್ನು ತೆಗೆಯುವ ದಿನ) ಏಳು ದಿನಗಳ ಅನಂತರ ಕೊನೆಯ ರಾತ್ರಿಯಲ್ಲಿ ನಾಲ್ಕನೆಯ ಪ್ರಹರದಲ್ಲಿ ಇಂದ್ರದ್ಯುಮ್ನ ರಾಜನು ಧ್ಯಾನಾರೂಢನಾಗಿ ಕುಳಿತುಕೊಂಡಿದ್ದನು.

## ಧ್ಯಾನ ದರ್ಶನ

ಆ ಧ್ಯಾನದಲ್ಲಿ ಅವನಿಗೆ ಸ್ಫಟಿಕ ಮಣಿಮಯವಾದ ಶ್ವೇತದ್ವೀಪವು ಗೋಚರಿಸಿದಂತೆ ಆಯಿತು. ಅದರ ನಾಲ್ಕೂ ಬದಿಗಳಲ್ಲಿಯೂ ಹಾಲಿನ ಕಡಲುಗಳು ತೂರಾಡತ್ತಿದ್ದವು. ಆ ಶ್ವೇತದ್ವೀಪದ ಮಧ್ಯಭಾಗದಲ್ಲಿ ಒಂದು ರತ್ನಮಯ ಮಂಟಪ. ಅದರ ಒಳಗೆ ಒಂದು ರತ್ನ ಸಿಂಹಾಸನದ ಮಧ್ಯಭಾಗದಲ್ಲಿ ಶಂಖ ಚಕ್ರ ಗಧಾಧಾರಿಯಾದ ಭಗವಾನ್ ಶ್ರೀಕೃಷ್ಣನ ದರ್ಶನವಾಯಿತು ಮಹಾರಾಜನಿಗೆ. ವನಮಾಲಾ ವಿಭೂಷಿತನಾದ ಆ ಭಗವಂತನ ನೀಲಮೇಘ ಶ್ಯಾಮಸುಂದರವಾದ ದಿವ್ಯರೂಪವನ್ನು ತನ್ನ ಧ್ಯಾನ ಸಮಾಧಿಯಲ್ಲಿ ನೋಡಿ ಇಂದ್ರದ್ಯುಮ್ನ ಮಹಾರಾಜನಿಗೆ ಹರ್ಷೋತ್ಕರ್ಷವಾಯಿತು. ಆ ಭಗವಂತನ ದಿವ್ಯದರ್ಶನವನ್ನು ಪಡೆದು ಧನ್ಯ ಧನ್ಯನಾದ ಮಹಾರಾಜನು ದೀರ್ಘದಂಡ ನಮಸ್ಕಾರವನ್ನು ಮಾಡಿ ಎರಡೂ ಕೈಜೋಡಿಸಿ ಭಕ್ತಿಯಿಂದ ನುಡಿದನು.

''ಜಗದಾಧಾರನಾದ ನಾರಾಯಣ, ನಿನಗೆ ನಮಸ್ಕಾರ. ನೀನು ಜಗದಾತ್ಮ, ಸರ್ವಾತ್ಮನಾದ ನಿನಗೆ ಮತ್ತೆ ಮತ್ತೆ ವಂದನೆ, ನೀನು ಜ್ಞಾನಾನಂದ ಸ್ವರೂಪಿ, ಹದಿನಾಲ್ಕು ಲೋಕಗಳೆಂಬ ದೊಡ್ಡ ಮನೆಗೆ ಮೂಲಸ್ತಂಭವೆಂದರೆ ಈ ಮಹಾವಿಷ್ಣು. ಕೋಟಿ ಕೋಟಿ ಬ್ರಹ್ಮಾಂಡಗಳ ರಚನೆ ಮಾಡುವ ವಿಶ್ವ ವಿಧಾತನಾದ ನಿನಗೆ ನಮ್ಮ ವಂದನೆ. ದೇವ! ನೀನೊಂದು ಕರುಣೆಯ ಸಿಂಧು, ದೀನ ದಲಿತರ ಹಾಗೂ ಪತಿತ ಪಾಖಂಡಿಗಳ ಉದ್ಧಾರಕ್ಕೆ ಆ ದಯಾಸಿಂಧುವಿನ ಒಂದೊಂದು ಬಿಂದುವೂ ಸಮರ್ಥವಾಗಿದೆ. ಬೆಳಗುವ ಸೂರ್ಯನಲ್ಲಿರುವ ಪ್ರಕಾಶ ನೀನು. ತೊಳಗುವ ಚಂದ್ರನಲ್ಲಿ ಇದ್ದ ಆಹ್ಲಾದ ನೀನು, ಮನಸ್ಸಿನ ಪಾಪಗಳನ್ನೆಲ್ಲ ಸುಟ್ಟುಹಾಕುವ ಅಗ್ನಿ ನೀನು. ಪ್ರಪಂಚದ ಎಲ್ಲ ವಸ್ತುಗಳಲ್ಲಿ ಅತ್ಯಂತ ಪವಿತ್ರತಮನೆಂದರೆ ನೀನೆ. ನಿನಗೆ ನನ್ನ ಅನಂತಾನಂತ ವಂದನೆ. ಜಗನ್ನಾಥ, ನನ್ನ ರಕ್ಷಣೆಯನ್ನು ಮಾಡು. ಶ್ರೀಹರಿ ಎಂಬ ಉತ್ತಮ ನೌಕೆಯನ್ನು ಪಡೆದು ನಾನು ಇಂದು ಈ ಸಂಸಾರ ಸಮುದ್ರವನ್ನು ದಾಟಿದೆನು. ರಮಾನಾಥ, ನಿನ್ನ ದರ್ಶನವು ಆಗುವದರಿಂದ ನನ್ನ ಎಲ್ಲ ದುಃಖ ದೈನ್ಯ, ದುರವಸ್ಥೆಗಳು ದೂರವಾದವು. ನೀನೇ ಸಚ್ಚಿದಾನಂದ ಮಯನಾದ ಸಾಕ್ಷಾತ್ ಶ್ರೀ ಮಹಾವಿಷ್ಣು. ನಾನು ನಿನಗೆ ಶರಣು ಬಂದಿದ್ದೇನೆ, ನನ್ನನ್ನು ರಕ್ಷಿಸು.''

ಹೀಗೆ ಧ್ಯಾನಸ್ಥನಾದ ಇಂದ್ರದ್ಯುಮ್ನ ರಾಜನು ಆ ಮಹಾಪ್ರಭುವನ್ನು ಸ್ತೋತ್ರಮಾಡಿ ನಮಸ್ಕಾರ ಮಾಡಿದ. ಇದೆಲ್ಲವೂ ಘಟನೆ ಅವನ ಧ್ಯಾನಾವಸ್ಥೆಯಲ್ಲಿಯೇ ನಡೆದವು. ಧ್ಯಾನಸಮಾಧಿ ಇಳಿದ ಬಳಿಕ ಅವನಿಗೆ ತಿಳಿಯಿತು ''ಇಷ್ಟು ಹೊತ್ತಿನವರೆಗೆ ತಾನು ಇದ್ದುದು, ಭಗವಂತನ ದರ್ಶನ ಮಾಡಿದುದು. ಅವನಿಗೆ ಪ್ರರ್ಥನೆಯನ್ನು ಸಲ್ಲಿಸಿದುದು. ಎಲ್ಲವೂ ತನ್ನ ಧ್ಯಾನಸ್ಥಿತಿಯಲ್ಲಿ ಮಾತ್ರ. ನಿಜಸ್ಥಿತಿಯಲ್ಲಿ ಅಲ್ಲ'' ಎಂದು.

**ಜೈಮಿನಿ:-** ಅನಂತರ ಇಂದ್ರದ್ಯುಮ್ನನ ಅಶ್ವಮೇಧ ಯಜ್ಞದಲ್ಲಿ ಸುತ್ಯಾ ಉತ್ಸವ ಎಂದರೆ ಸೋಮರಸವನ್ನು ತೆಗೆಯುವ ಸಮಾರಂಭವು ಸುರುವಾಯಿತು. ಅದರಲ್ಲಿ ಬಂದವರಿಗೆಲ್ಲ, ಬೇಡಿದ್ದನ್ನೆಲ್ಲ, ಬಯಸಿದ್ದನ್ನೆಲ್ಲ ದಾನ ನೀಡಲಾಯಿತು. ಆಗ ನಾರದರು ಇಂದ್ರದ್ಯುಮ್ನನಿಗೆ ಹೇಳಿದರು - ''ರಾಜನೇ! ಇನ್ನು ಮೇಲೆ ಪೂರ್ಣಾಹುತಿಯ ಕಾರ್ಯವು ನೆರವೇರಲಿ. ಈ ಮೊದಲು ನೀನು ನಿನ್ನ ಧ್ಯಾನಾವಸ್ಥೆಯಲ್ಲಿ ನೋಡಿದ್ದೆಲ್ಲವೂ ಸತ್ಯ ಸೃಷ್ಟಿಯಲ್ಲಿ ಇಳಿಯಲಿದೆ. ಶ್ವೇತದ್ವೀಪದಲ್ಲಿ ಇರುವ, ನೀನು ನೋಡಿದ ಆ ವಿಷ್ಣುವಿನ ಶರೀರದಿಂದ ಉದುರಿಬಿದ್ದ ಒಂದು ಕೂದಲವು ಮರವಾಗುತ್ತದೆ. ಅದು ಈ ಭೂಲೋಕದಲ್ಲಿ ಶ್ರೀವಿಷ್ಣುವಿನ ಸ್ಥಾವರ ರೂಪದ ಅಂಶಾವತಾರ ಎನಿಸುವದು. ಭಕ್ತವತ್ಸಲನಾದ ಆ ಭಗವಂತನು ಈಗ ಈ ಕಾಷ್ಠ ರೂಪದಲ್ಲಿಯೇ ಅವತಾರ ತಾಳಿರುವನು. ನಿಮ್ಮೆಲ್ಲರ ಸೌಭಾಗ್ಯದಿಂದ ಆ ಪರಮಾತ್ಮನು ಈ ಸ್ಥಾನದಲ್ಲಿ ಎಲ್ಲ ಜನರ ಕಣ್ಣಿಗೆ ಕಾಣುವನು. ಈಗ ನೀವೆಲ್ಲರೂ ಅವಭೃಥಸ್ನಾನ ಮಾಡಿ ವೃಕ್ಷರೂಪದಿಂದ ಪ್ರಕಟನಾದ ಆ ಯಜ್ಞೇಶ್ವರನಾದ ಶ್ರೀವಿಷ್ಣುವನ್ನು ಈ ಮಹಾವೇದಿಕೆಯ ಮೇಲೆ ಸ್ಥಾಪಿತಗೊಳಿಸಿರಿ.''

## ವೃಕ್ಷರೂಪದಲ್ಲಿ ಲಕ್ಷ್ಮೀಪತಿ

ನಾರದರ ಈ ವಿಚಾರಪೂರ್ಣವಾದ ಆದೇಶವನ್ನು ಕೇಳಿ ಪರಮ ಸಂತೋಷವಾಯಿತು ಆ ಮಹಾರಾಜನಿಗೆ. ನಾರದ ಹಾಗೂ ಮಹಾರಾಜ ಕೂಡಿ ಪ್ರಸನ್ನ ಮನಸ್ಸಿನಿಂದ ಅಲ್ಲಿಗೆ ಹೋದರು. ಅಲ್ಲಿ ಪ್ರಕಟವಾದ ಆ ವೃಕ್ಷವನ್ನು ನೋಡಿ ''ಈ ವೃಕ್ಷದ ರೂಪದಲ್ಲಿ ಸಾಕ್ಷಾತ್ ಲಕ್ಷ್ಮೀಪತಿಯು ಈಗ ಪ್ರಕಟನಾಗಿದ್ದಾನೆ'' ಎಂದು ಉದ್ಗಾರ ತೆಗೆದರು. ಎಲ್ಲ ಜನರು ಇದನ್ನು ಕೇಳಿ, ಅದನ್ನು ನೋಡಿ ಪರಮ ಪ್ರಸನ್ನರಾದರು. ನಾಲ್ಕು ಶಾಖೆಗಳಿಂದ ಕೂಡಿದ ಆ ಚತುರ್ಭುಜ ವೃಕ್ಷದ ದರ್ಶನ ತೆಗೆದುಕೊಂಡರು. ರಾಜನು ತನ್ನ ಪರಿಶ್ರಮವು ಸಾರ್ಥಕವಾಯಿತೆಂದು ತಿಳಿದ. ಮತ್ತು ''ನೀಲಮಣಿ ಮಾಧವನು ಈ ದಿವ್ಯಕ್ಷೇತ್ರದಿಂದ ಅಂತರ್ಧಾನ ಹೊಂದಿದ'' ಎಂಬ ಶೋಕ ವ್ಯಾಕುಲತೆಯು ರಾಜನ ಹೃದಯದಿಂದ ದೂರವಾಯಿತು. ಮತ್ತೆ ಮತ್ತೆ ವಂದಿಸಿದ ಆ ವೃಕ್ಷರೂಪಿಯಾದ ಅಧೋಕ್ಷಜನಿಗೆ. ಅವನ ಕಣ್ಣುಗಳಿಂದ ಆನಂದ ಬಾಷ್ಪಗಳು ಹರಿಯತೊಡಗಿದವು. ಅಲ್ಲಿ ಇದ್ದ ಬ್ರಾಹ್ಮಣರಿಂದ ಆ ವೃಕ್ಷದ ಬಗೆಗೆ ಪ್ರಾರ್ಥನೆ ಮಾಡಿಕೊಂಡ. ಆ ಋತ್ವಿಜರು ಅದಕ್ಕೆ ಹೂವಿನ ಮಾಲೆಗಳನ್ನು ಹಾಕಿ ಚಂದನವನ್ನು ಲೇಪಿಸಿ ವಿಷ್ಣುವಿನ ಆ ದಿವ್ಯ ವೃಕ್ಷವನ್ನು ಮಹಾವೇದಿಕೆಯ ಮೇಲೆ ತೆಗೆದುಕೊಂಡು ಬಂದರು.

ನಾರದರ ನಿರ್ದೇಶದಂತೆ ಇಂದ್ರದ್ಯುಮ್ನನು ಆ ಮರವನ್ನು ಪೂಜೆ ಮಾಡಿದ ಮತ್ತು ನಾರದರಿಗೆ ಕೇಳಿದ - ''ಮುನಿವರ್ಯರೇ! ಭಗವಾನ್ ಮಹಾವಿಷ್ಣುವಿನ ಪ್ರತಿಮೆಗಳನ್ನು ಹೇಗೆ ಮಾಡುವುದು? ಮತ್ತು ಯಾರು ಮಾಡುವರು?

ರಾಜನ ಪ್ರಶ್ನೆಗೆ ನಾರದರು- ''ರಾಜನ್! ಭಗವಂತನ ಲೀಲೆಯನು ಯಾರು ಬಲ್ಲರು. ಮಾನವ ಮಾತ್ರರಿಗೆ ಅದು ಅಗಮ್ಯ'' ಎಂದು ಉತ್ತರ ಹೇಳಿದರು.

ಹೀಗೆ ನಾರದ ಹಾಗೂ ನರೇಶರಲ್ಲಿ ಸಂಭಾಷಣೆ ನಡೆದಾಗ, ಒಮ್ಮೆಲೆ ಆಕಾಶವಾಣಿ ಆಯಿತು- ''ಭಗವಾನ್ ವಿಷ್ಣುವು ಅತ್ಯಂತ ಗುಪ್ತವಾಗಿದ್ದ ಮಹಾವೇದಿಕೆಯ ಮೇಲೆ ಸ್ವಯಂ ತಾನೇ ಅವತರಿಸಿ ಬರುತ್ತಾನೆ. ಹದಿನೈದು ದಿನಗಳವರೆಗೆ ಅದನ್ನು ಮುಚ್ಚಿಬಿಡಿರಿ. ಕೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ಓರ್ವ ಮುಪ್ಪಿನ ಮುದುಕನಾದ ಸ್ಥಪತಿಯು ಬರುವನು. ಅವನನ್ನು ಒಳಗೆ ಬಿಟ್ಟು ಎಲ್ಲರೂ ಬಾಗಿಲ ಹಾಕಿಕೊಂಡು ಹೊರಗೆ ಹೋಗಬೇಕು. ಮೂರ್ತಿಗಳ ರಚನೆಯೂ ಪೂರ್ತಿ ಆಗುವವರೆಗೆ ಹೊರಗೆ ಮಂಗಳ ವಾದ್ಯಗಳು ಮೊಳಗುತ್ತ ಇರಲಿ. ಶಂಖ, ಕಹಳೆ, ಕೊಂಬು, ನಗಾರಿ, ಜಾಗಟೆ ಮುಂತಾದವುಗಳನ್ನು ಹೊರಗೆ ಜನರು ಬಾರಿಸುತ್ತ ಇರಲಿ. ಯಾಕೆಂದರೆ ಒಳಗೆ ಮೂರ್ತಿಗಳನ್ನು ಮಾಡುವ ಸಪ್ಪಳವು ಹೊರಗೆ ಯಾರ ಕಿವಿಗಾದರು ಬಿದ್ದರೆ ಅವರು ಕೂಡಲೇ ಕಿವುಡರಾಗಿ ಹೋಗುವರು. ಈ ಮೂರ್ತಿಗಳ ರಚನಾ ಕಾರ್ಯವು ಒಳಗೆ ನಡೆದಾಗ ಅದನ್ನು ನೋಡುವ ಸಾಹಸವನ್ನು ಯಾರೂ ಮಾಡುವುದು ಬೇಡ. ಅಲ್ಲಿ ಕೆಲಸ ಮಾಡುವವರ ಹೊರತು ಬೇರೊಬ್ಬರು ಅಲ್ಲಿ ಹಣಕಿ ನೋಡಿದರೆ ಅವರ ಎರಡೂ ಕಣ್ಣುಗಳು ಕುರುಡಾಗಿ ಹೋಗುವವು.''

ಅನಂತರ ಇಂದ್ರದ್ಯುಮ್ನ ಮಹಾರಾಜನು ಆಕಾಶವಾಣಿಯು ನಿರ್ದೇಶಿಸಿದಂತೆ ಎಲ್ಲ ವ್ಯವಸ್ಥೆಯನ್ನು ಸರಿಯಾಗಿ ಮಾಡಿದ. ಮಹಾವೇದಿಕೆಯ ಮೇಲೆ ವೃಕ್ಷವನ್ನು ತಂದು ಇರಿಸಿದ. ಆ ಸಮಗ್ರ ಯಜ್ಞಮಂಟಪವನ್ನೆಲ್ಲ ಬಂದ ಮಾಡಿದ. ಆ ವೃದ್ಧಶಿಲ್ಪಿಯನ್ನು ಅವರ ಪರಿವಾರದವರನ್ನು ಮಾತ್ರ ಒಳಗೆ ಬಿಟ್ಟು ಬಾಗಿಲು ಹಾಕಿದ.

ಹದಿನೈದನೇ ದಿನ ಪ್ರಾತಃಕಾಲದಲ್ಲಿ ನಾಲ್ಕು ದಿವ್ಯ ಸುಂದರವಾದ ವಿಗ್ರಹಗಳಲ್ಲಿ ಭಗವಾನ್ ಮಹಾವಿಷ್ಣುವು ಪ್ರಕಟನಾದ. ಬಲಭದ್ರ, ಸುಭದ್ರಾ, ಹಾಗೂ ಸುದರ್ಶನಚಕ್ರ ಗಳೊಂದಿಗೆ ಭಗವಾನ್ ಜನಾರ್ದನನು ದಿವ್ಯ ಸಿಂಹಾಸನದ ಮೇಲೆ ವಿರಾಜಮಾನನಾದ. ಭಗವಂತನ ನಾಲ್ಕು ದಿವ್ಯರೂಪಗಳು ಸಂಪನ್ನವಾದ ಬಳಿಕ ಸಂಪೂರ್ಣ ವಿಶ್ವಕ್ಕೆ ಉಪಕಾರ ಮಾಡಲಿಕ್ಕಾಗಿ ಮತ್ತೊಮ್ಮೆ ಆಕಾಶವಾಣಿ ಆಯಿತು. ''ರಾಜನ್! ಈ ನಾಲ್ಕು ಪ್ರತಿಮೆಗಳನ್ನು ಚೆನ್ನಾಗಿ ವಸ್ತ್ರಗಳಿಂದ ಆಚ್ಛಾದಿತವನ್ನಾಗಿ ಮಾಡು. ಈ ಎಲ್ಲ ಪ್ರತಿಮೆಗಳಿಗೂ ಅವರವರ ಸ್ವಾಭಾವಿಕ ಬಣ್ಣವು ಬರುವಂತೆ ಏರ್ಪಡಿಸು. ಭಗವಾನ್ ವಾಸುದೇವನು ಕಪ್ಪು ಮೋಡಕ್ಕೆ ಸಮಾನವಾದ ನೀಲವರ್ಣದಿಂದ ಶೋಭಿಸಲಿ. ಬಲಭದ್ರನು ಮತ್ತು ಶಂಖವು ಚಂದ್ರನಂತೆ ಗೌರವರ್ಣದಿಂದ ಹೊಳೆಯಲಿ. ಸುದರ್ಶನ ಚಕ್ರವು ಮಾತ್ರ ಹೊಂಬಣ್ಣದ ಹೊಳಪಿನಿಂದ ಮಿಂಚುವಂತಾಗಲಿ. ಸುಭದ್ರಾದೇವಿಯು ತನ್ನ ಕುಂಕುಮ ವರ್ಣದ ಅರುಣ ಕಾಂತಿಯ ಬಣ್ಣದಿಂದ ಬೆಳಗಲಿ. ಹೀಗೆ ನಾಲ್ಕೂ ವಿಗ್ರಹಗಳಿಗೆ ಬೇರೆ ಬೇರೆ ಬಣ್ಣವನ್ನು ಲೇಪಿಸಿರಿ. ಈ ಮೂರ್ತಿಗಳ ಮೈಮೇಲಿನ ಈ ಬಣ್ಣವು ಮಾಸಿಹೋದಕೂಡಲೇ ಅದಕ್ಕೆ ಪ್ರತಿವರ್ಷವೂ ನೂತನ ವರ್ಣ ಸಂಸ್ಕಾರವನ್ನು ಮಾಡತಕ್ಕದ್ದು. ಕೇವಲ ದಿವ್ಯವಲ್ಕಲ ಲೇಪವು ಉಳಿಯುವಂತೆ ಮಾಡಬೇಕು. ಪ್ರಮಾದದಿಂದ ಯಾರಾದರೂ ಲೇಪವನ್ನು ದೂರ ಮಾಡಿದರೆ ರಾಜ್ಯದಲ್ಲಿ ಕ್ಷಾಮ ಡಾಮರಗಳು ತಲೆ ಎತ್ತುವವು. ಮಹಾಮಾರಿ ಮುಂತಾದ ರೋಗಗಳು ಹಬ್ಬುವವು.

"ರಾಜನ್! ನೀನು ಕೂಡ ನಗ್ನರೂಪದಲ್ಲಿ ಈ ಮೂರ್ತಿಗಳನ್ನು ನೋಡತಕ್ಕದ್ದಲ್ಲ. ಆದರಂತೆ ಯಾರೂ ಮೂರ್ತಿಗಳನ್ನು ನಗ್ನಾವಸ್ಥೆಯಲ್ಲಿ ಕಾಣಕೂಡದು. ಎಲ್ಲರೂ ಬೇರೆ ಬೇರೆ ಬಣ್ಣಗಳನ್ನು ಲೇಪಿಸಿ, ವಸ್ತ್ರಾಭರಣಗಳಿಂದ ಭೂಷಿತವಾದ ಶೃಂಗಾರಿತ ಪ್ರತಿಮೆಗಳನ್ನು ಮಾತ್ರ ನೋಡಬೇಕು. ಮಹಾರಾಜನೇ! ನಿನ್ನ ಮೇಲೆ ಅನುಗ್ರಹವನ್ನು ಮಾಡಲಿಕ್ಕಾಗಿಯೇ ಪರಮಾತ್ಮನು ಚತೂರೂಪಗಳಿಂದ ಇಲ್ಲಿ ಪ್ರಕಟನಾಗುತ್ತಾನೆ. ನಿನ್ನ ಪುಣ್ಯದಿಂದ ಎಲ್ಲ ಜನರಿಗೂ ಪರಮಾತ್ಮನ ಪ್ರಸಾದವು ಲಭ್ಯವಾಗಿ ಮೋಕ್ಷಕ್ಕೆ ದಾರಿಯು ಸುಗಮವಾಗುವದು."

"ನೀಲಾಚಲದ ಮೇಲೆ ಇರುವ ಕಲ್ಪವೃಕ್ಷದ ವಾಯವ್ಯ ಕೋಣದಲ್ಲಿ ನೂರು ಮೊಳ ದೂರದಲ್ಲಿ ಭಗವಾನ್ ನೃಸಿಂಹದೇವರ ಉತ್ತರ ನಿಟ್ಟಿನಲ್ಲಿ ಒಂದು ದೊಡ್ಡ ಬಯಲು ಜಾಗ ಇರುತ್ತದೆ. ಅಲ್ಲಿ ಗಟ್ಟಿಮುಟ್ಟಿಯಾದ ಒಂದು ಸಾವಿರ ಮೊಳ ಎತ್ತರದ ವಿಶಾಲವಾದ ಮಂದಿರವನ್ನು ಕಟ್ಟಿಸಿ ಅಲ್ಲಿ ಈ ಭಗವಂತನ ಮೂರ್ತಿಗಳನ್ನು ಸ್ಥಾಪನೆ ಮಾಡು. ಈ ಸ್ಥಳದಲ್ಲಿ ಪ್ರತಿದಿನವೂ ಭಗವಾನ್ ನೀಲಮಾಧವನ ಪೂಜೆಯನ್ನು ಈ ಮೊದಲು ವಿಶ್ವಾವಸು ಎಂಬ ಹೆಸರಿನ ಬೇಡನು ಮಾಡುತ್ತಲಿದ್ದ. ನಿಜವಾಗಿ ಆ ವ್ಯಾಧನು ವೈಷ್ಣವರಲ್ಲಿಯೂ ಅತ್ಯಂತ ಶ್ರೇಷ್ಠನಾದ ವೈಷ್ಣವ. ಅವನ ಜೊತೆಗೆ ನಿನ್ನ ಪುರೋಹಿತನಾದ ವಿದ್ಯಾಪತಿಗೆ ಘನಿಷ್ಠವಾದ ಮೈತ್ರೀ ಸಂಬಂಧವು ಬೆಳೆದಿದೆ. ಇವರಿಬ್ಬರ ಸಂತತಿಯವರೇ ಮುಂದೆ ಭಾವೀ ಕಾಲದಲ್ಲಿ ಉತ್ಸವಗಳಲ್ಲಿ ಪರಮಾತ್ಮನ ವಿಗ್ರಹ ಲೇಪ ಮತ್ತು ಸಂಸ್ಕಾರಗಳನ್ನು ಮಾಡುವ ಕಾರ್ಯದಲ್ಲಿ ನಿಯುಕ್ತರಾಗಲಿ."

ಹೀಗೆ ಹೇಳಿ ಆಕಾಶವಾಣಿಯು ಮೌನವಾಯಿತು. ಆದರ ಉಪದೇಶವನ್ನು ಕೇಳಿ ರಾಜನು ಪ್ರಸನ್ನ ಮನಸ್ಸಿನಿಂದ ಅದನ್ನು ಪಾಲಿಸಿದನು. ಬಲರಾಮ ಶ್ರೀಕೃಷ್ಣ ಸುಭದ್ರಾ ಹಾಗೂ ಸುದರ್ಶನ ಚಕ್ರಗಳಿಗೆ ಆಕಾಶವಾಣಿಯ ಸೂಚನೆಯಂತೆ, ಲೇಪ ಮುಂತಾದ ಸಂಸ್ಕಾರಗಳು ಆದಕೂಡಲೇ ಅತ್ಯಂತ ಸುಂದರವಾಗಿ ತೋರತೊಡಗಿದವು ಆ ನಾಲ್ಕೂ ಪ್ರತಿಮೆಗಳು. ಮಹಾರಾಜನು ಯಜ್ಞಮಂಟಪದ ಮುಚ್ಚಿದ ಬಾಗಿಲವನ್ನು ತೆರೆದನು. ಮಹಾವೇದಿಯ ಮುಂದೆ ಹಾಕಿದ ತೆರೆಯನ್ನು ಸರಿಸಿದನು. ರತ್ನ ಸಿಂಹಾಸನದ ಮೇಲೆ ವಸ್ತ್ರಾಲಂಕಾರ ಸಹಿತವಾಗಿ ನಾಲ್ಕೂ ಮೂರ್ತಿಗಳು ಶೋಭಾಯಮಾನವಾಗಿ ತೋರತೊಡಗಿದವು. ಇಂದ್ರದ್ಯುಮ್ನ ಮಹಾರಾಜನಿಗಂತೂ ಆ ಪರಮಾತ್ಮನ ದಿವ್ಯಸುಂದರ ಮೂರ್ತಿಗಳನ್ನು ತನ್ನ ಕಣ್ಣಿನ ಯುಗಲಗಳಿಂದ ನೋಡಿ ಆನಂದ ಸಮುದ್ರದಲ್ಲಿಯೇ ಈಜಾಡಿದ ಅನುಭವ. ಅವನು ಆ ಮೂರ್ತಿಗಳ ಎದುರು ಉನ್ಮೀಲಿತ ನೇತ್ರನಾಗಿ ಆನಂದ ಬಾಷ್ಪಗಳನ್ನು ಹರಿಸುತ ಬಂದು ಕಂಬದಂತೆ ನಿಂತುಬಿಟ್ಟನು.

## ನಾರದರ ಆದೇಶ, ಸ್ತೋತ್ರ ಮಾಡಲಿಕ್ಕೆ ಉಪದೇಶ

ಆಗ ನಾರದರು ರಾಜನಿಗೆ ಹೇಳಿದರು- "ನೃಪೋತ್ತಮ! ತಾವರೆಗಣ್ಣಿನ ಈ ಜಗನ್ನಾಥ ಸ್ವಾಮಿಯ ದರ್ಶನವನ್ನು ಮಾಡಿಕೊ. ಭಕ್ತರ ಮೇಲೆ ಅನುಗ್ರಹವನ್ನು ಮಾಡುವ ಸಂಪೂರ್ಣ ಜ್ಞಾನದ ನಿಧಿಯೇ ಇವನು. ಇದೇ ಈ ಶ್ರೀಹರಿಯನ್ನು ನೋಡಲು ಯೋಗಿಗಳು ಮನಸ್ಸನ್ನು ನಿಗ್ರಹಿಸಿ ಯಾವಾಗಲು ಪ್ರಯತ್ನ ಮಾಡುತ್ತಾರೆ. ಅಂಥ ಭಗವಾನ್ ಶ್ರೀವಿಷ್ಣುವು ಇಂದು ಕಟ್ಟಿಗೆಯ ದೇಹದಲ್ಲಿ ಇದ್ದು ನಿನ್ನ ಮೇಲೆ ಅನುಗ್ರಹ ಮಾಡುವದಕ್ಕಾಗಿ ಇಲ್ಲಿ ಪ್ರತ್ಯಕ್ಷನಾಗಿದ್ದಾನೆ. ಅವನನ್ನು ನೀನು ಸ್ತೋತ್ರ ಮಾಡು."

ನಾರದರು ಹೇಳಿದ ಬಳಿಕ ಇಂದ್ರದ್ಯುಮ್ನ ಮಹಾರಾಜನು ಕರುಣಾಮಯನಾದ ಜಗನ್ನಾಥ ಸ್ವಾಮಿಯ ಸ್ತೋತ್ರವನ್ನು ಮಾಡಿದನು - ''ದಯಾಸಮುದ್ರನಾದ ಮುರಾರಿಯೇ! ಬ್ರಹ್ಮ ರುದ್ರೇಂದ್ರಾದಿಗಳಿಂದ ವಂದನೀಯವಾದ ನಿನ್ನ ಪಾದಾರವಿಂದವು ಎಲ್ಲಿ? ಮಲಮೂತ್ರ ರಕ್ತಮಾಂಸ, ಮೂಳೆಗಳಿಂದ ರಚಿತವಾಗಿ ಮೇಲೆ ತೊಗಲು ಬಿಗಿದ ಈ ನಮ್ಮ ಅಧಮ ಶರೀರವೆಲ್ಲಿ! ಈ ಅಸಾರವಾದ ಸಂಸಾರದಲ್ಲಿ ತಿರುಗಿ ತಿರುಗಿ ಬಳಲಿ ಬೆಂಡಾದ ನಾನು ನಿನ್ನನ್ನು ಹೇಗೆ ತಿಳಿಯಲಿ? ನೀನೇ ನನ್ನ ಮೇಲೆ ಅನುಗ್ರಹವನ್ನು ಮಾಡಿ ನಿನ್ನ ಸ್ವರೂಪವನ್ನು ತಿಳಿಸಿಕೊಡು. ನನ್ನನ್ನು ರಕ್ಷಿಸು.

''ಬಲಿಷ್ಠರಲ್ಲಿ ಶ್ರೇಷ್ಠನಾದ ಬಲಭದ್ರನೇ! ನಿನ್ನ ವಿಗ್ರಹವು ಸಾವಿರ ಹೆಡೆಗಳಿಂದ ಆವೃತವಾಗಿರುತ್ತದೆ. ನಾನು ನಿನಗೆ ಶರಣು ಬಂದಿದ್ದೇನೆ.''

''ದೇವತೆಗಳಿಗೆಲ್ಲ ಆಶ್ರಯ ಕೊಡುವ ಮಂಗಳಮಯೀ ಆದ ಸುಭದ್ರಾದೇವಿಯೆ, ನಿನ್ನ ಎರಡೂ ಚರಣಕಮಲಗಳಿಗೆ ನಮಸ್ಕಾರವನ್ನು ಮಾಡುತ್ತೇನೆ. ದೈತ್ಯ ಸೇನೆಯ ಸಂಹಾರ ಮಾಡುವ ಸುದರ್ಶನ ಚಕ್ರದ ರೂಪದಲ್ಲಿರುವ ನಿನಗೆ ನನ್ನ ಪ್ರಣಾಮ.''

ಈ ರೀತಿಯಾಗಿ ಸ್ತೋತ್ರಮಾಡಿ ಇಂದ್ರದ್ಯುಮ್ನ ರಾಜನು ಭಗವಂತನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಮತ್ತು ಕೈಜೋಡಿಸಿ ಹೇಳಿದನು- ''ಅನಾಥ ಬಂಧುವಾದ ಜಗನ್ನಾಥನೇ! ನಾನು ಈಗ ಸಂಸಾರ ಸಮುದ್ರದಲ್ಲಿ ಮುಳುಗಿ ಹೋಗಿದ್ದೇನೆ. ನನ್ನಂತೆ ದುಃಖ ವ್ಯಾಕುಲರಾದ ಎಲ್ಲ ಮಾನವರ ಉದ್ಧಾರವನ್ನು ಕೃಪೆಗೈದು ಮಾಡು.

## ನಾರದ ಕೃತ ನಾರಾಯಣರ ಸ್ತುತಿ

ಹೀಗೆ ಇಂದ್ರದ್ಯುಮ್ನ ರಾಜನು ನಾಲ್ಕು ರೂಪಗಳಿಂದ ಅಭಿವ್ಯಕ್ತನಾದ ಆ ಜಗನ್ನಾಥನನ್ನು ಪ್ರಾರ್ಥಿಸಿದ ಬಳಿಕ ಅಲ್ಲಿಯೇ ಇದ್ದ ನಾರದರು ಕೂಡ ಆ ನೀಲಮಾಧವನನ್ನು ಸ್ತೋತ್ರ ಮಾಡಿದರು.

**ನಾರದರು:-** ಅಪಾರ ಭವಸಾಗರದಿಂದ ಭಕ್ತರನ್ನು ಉದ್ಧರಿಸುವ ದೀನ ಬಂಧು ನಾರಾಯಣನೇ! ನಿನಗೆ ಜಯವಾಗಲಿ. ಜಗದೀಶ್ವರನೇ! ನಿನಗೆ ಜಯವಾಗಲಿ, ಸನಕ, ಸನಂದನ, ಸನಾತನ, ನಾಕೂ ಮೊದಲಾದ ಸನತ್ಕುಮಾರರೇ ಯೋಗೇಶ್ವರರು ನಿನ್ನನ್ನು ಸದಾ ಸರ್ವದಾ ಪರಾತ್ಪರ ತತ್ವವೆಂದು ಆರಾಧನೆ ಮಾಡಿ ಉದ್ಧೃತರಾಗಿರುತ್ತಾರೆ. ನೀನು ವಿಶ್ವರೂಪಿಯೂ ವಿಶ್ವೋಪಕಾರಕನೂ, ವಿಶ್ವವಂದನೀಯನೂ ಆಗಿರುವೆ. ಕೋಟಿ ಕೋಟಿ ಬ್ರಹ್ಮ, ರುದ್ರ, ಇಂದ್ರ, ಮರುದ್ಗಣ ಅಶ್ವಿನೀಕುಮಾರ. ಸಾಧ್ಯ, ಹಾಗೂ ಸಿದ್ಧ, ಸುರ, ದಾನವ, ಮಾನವರೂ ಇತರ ಎಲ್ಲಾ ಚೇತನಾऽಚೇತನಾತ್ಮಕ ಪ್ರಪಂಚವೂ ನಿನ್ನಿಂದಲೇ ಹುಟ್ಟಿ, ನಿನ್ನಿಂದಲೇ ಬೆಳೆದು, ಉಳಿದು, ಕೊನೆಗೆ ನಿನ್ನಲ್ಲಿಯೇ ಲೀನವಾಗುವದು. ನಿನ್ನನ್ನು ಯಾರೂ ಪೂರ್ಣವಾಗಿ ತಿಳಿಯಲಾರರು. ಇಂಥ ನಿನಗೆ ನನ್ನ ಅನಂತಾನಂತ ವಂದನೆಗಳು.''

ಆ ಬಳಿಕ ಉಳಿದ ಅನೇಕ ಉಪಸ್ಥಿತರಿದ್ದ ರಾಜರೂ ಆ ಭಗವಂತನನ್ನು ಸ್ತೋತ್ರ ಮಾಡಿದರು. ವೇದ ಪಾರಂಗತರಾದ ಶ್ರೋತ್ರಿಯರು ಹೊಗಳಿದರು. ಬ್ರಾಹ್ಮಣರು ಮಂತ್ರಸ್ತೋತ್ರಗಳಿಂದ ಸ್ತುತಿಸಿದರು. ಕ್ಷತ್ರಿಯರು ಹಾಡಿದರು. ವೈಶ್ಯರು ಪಾಡಿದರು. ಶೂದ್ರರು ಸೇವೆ ಸಲ್ಲಿಸಿದರು. ಪೌರಾಣಿಕರು ಪುರಾಣೋಕ್ತ ಸ್ತೋತ್ರಗಳಿಂದ ಭಗವಂತನ

ಗುಣಗಾನವನ್ನು ಮಾಡಿದರು. ಅನಂತರ ನಾರದರು ಉಪದೇಶಿಸಿದ ರೀತಿಯಲ್ಲಿ ಇಂದ್ರದ್ಯುಮ್ನ ಮಹಾರಾಜನು ಮಂತ್ರೋಚ್ಚಾರ ಪೂರ್ವಕವಾಗಿ ಆ ಎಲ್ಲ ಪ್ರತಿಮೆಗಳನ್ನು ಪೂಜೆ ಮಾಡಿದನು. "ಓಂ ನಮೋ ಭಗವತೇ ವಾಸುದೇವಾಯ" ಎಂಬ ದ್ವಾದಶಾಕ್ಷರ ಮಂತ್ರಗಳಿಂದ ಶ್ರೀಮನ್ನಾರಾಯಣನ ಶುಕ್ಲಕೇಶ ಹಾಗೂ ಕೃಷ್ಣಕ್ಲೇಶಗಳ ಅವತಾರ ರೂಪಗಳಾದ ಬಲರಾಮ ಹಾಗೂ ಶ್ರೀಕೃಷ್ಣನನ್ನು ಪೂಜೆ ಮಾಡಿದನು. ಹಿಂದೆ ಇದೇ ದ್ವಾದಶಾಕ್ಷರ ಮಂತ್ರದಿಂದ ಪರಮಾತ್ಮನ ಉಪಾಸನೆಯನ್ನು ಮಾಡಿ ಧ್ರುವರಾಯನು ಪರಮಪದವನ್ನು ಹೊಂದಿದನು.

ಪುರುಷ ಸೂಕ್ತದಿಂದ ರಾಜನು ಎರಡೂ ಪ್ರತಿಮೆಗಳಿಗೆ ಅಭಿಷೇಕಾದಿ ಷೋಡಶೋಪಚಾರ ಸಲ್ಲಿಸಿದನು. ದೇವೀ ಸೂಕ್ತದಿಂದ ಸುಭದ್ರೆಯನ್ನೂ ಸುದರ್ಶನ ಮಂತ್ರಗಳಿಂದ ಚಕ್ರವನ್ನೂ ಪೂಜೆ ಮಾಡಿದನು. ಹೀಗೆ ತನ್ನ ವೈಭವಕ್ಕೆ ಅನುಗುಣವಾಗಿ ನಾಲ್ಕು ದೇವತಾ ಮೂರ್ತಿಗಳನ್ನು ಭಕ್ತಿಯಿಂದ ಪೂಜೆ ಮಾಡಿ ಅಲ್ಲಿಗೆ ಬಂದ ವಿದ್ವಾಂಸರಿಗೆಲ್ಲ ಯಥಾ ಯೋಗ್ಯ ಪೂಜೆ ಮಾಡಿ ದಾನ ದಕ್ಷಿಣೆಗಳನ್ನಿತ್ತು ಗೌರವಿಸಿದನು. ಆ ದಿವ್ಯವಾದ ಪ್ರತಿಮೆಗಳನ್ನು ಮಾಡಿದ ಶಿಲ್ಪಿಗಳನ್ನು ಪ್ರಭೂತ ದ್ರವ್ಯವನ್ನು ಪಾರಿತೋಷಕವನ್ನಾಗಿ ನೀಡಿ ಗೌರವಿಸಿದನು.

## ಬ್ರಹ್ಮಾದಿ ದೇವತೆಗಳಿಂದ ಭಗವನ್ ಮೂರ್ತಿಗಳ ಸ್ಥಾಪನೆ ಹಾಗೂ ಸ್ತೋತ್ರ

**ಜೈಮಿನಿ:-** ಅನಂತರ ಇಂದ್ರದ್ಯುಮ್ನ ಮಹಾರಾಜನು ಶಿಲ್ಪಶಾಸ್ತ್ರ ಪ್ರವೀಣರಾದ ಈ ಎಲ್ಲ ಶಿಲ್ಪಿಗಳನ್ನು, ಬಡಿಗರನ್ನೂ, ಉಪ್ಪಾರನನ್ನೂ ಕರೆದು ಮಂದಿರದ ನಿರ್ಮಾಣ ಕಾರ್ಯದಲ್ಲಿ ನಿಯೋಜಿಸಿದನು. ಕೆಲವೇ ಸಮಯದಲ್ಲಿ ಆ ದೇವಮಂದಿರವು ದಿವ್ಯ ಭವ್ಯವಾಗಿ ರೂಪಗೊಂಡಿತು. ಆಗಸದ ಅಂಗಳದ ವರೆಗೆ ಬೃಹದಾಕಾರವಾಗಿ ಬೆಳೆದು ಭವ್ಯವಾಗಿ ತಲೆಎತ್ತಿ ನಿಂತ ಪರಮ ಸುಂದರವಾದ ಆ ದೇವಮಂದಿರದ ತುದಿಯು ನೆಲದ ಮೇಲೆ ನಿಂತವರಿಗೆ ಕಾಣುತ್ತಿರಲಿಲ್ಲ.

ಆ ಕಾಲದಲ್ಲಿ ಭಾರತ ದೇಶದಲ್ಲಿ ಇದ್ದ ರಾಜರೆಲ್ಲರು ಆ ಬೃಹತ್ಕಾರ್ಯದಲ್ಲಿ ಸಹಕರಿಸಿ ಭಾಗವಹಿಸಿ ಈ ಬೃಹದ್ ಭವನದ ಪೂರ್ಣತೆಗಾಗಿ ಪರಿಶ್ರಮಿಸಿದರು. ಎತ್ತರದಲ್ಲಿ ಆ ಮಹಾಮಂದಿರವು ಮುಗಿಲಿಗೆ ಹತ್ತಿರ ಹತ್ತಿರವಾದರೆ ಅಗಲದಲ್ಲಿ ಎಲ್ಲ ದಿಕ್ಕುಗಳನ್ನು ತುಂಬಿದಂತೆ ಕಾಣುತ್ತಿತ್ತು. ಆ ಮಂದಿರದಲ್ಲಿ ಹಲವಾರು ಸ್ಥಾನಗಳು ಸುವರ್ಣಮಯವಾದರೆ ಕೆಲವು ಕಡೆ ರತ್ನಖಚಿತವಾಗಿದ್ದವು. ಇಂಥ ಪರಮ ಸುಂದರವಾಗಿ ನಿರ್ಮಿಸಿದ ಆ ವಿಶಾಲ ಮಂದಿರದಲ್ಲಿ ವಿಧಿಪೂರ್ವಕವಾಗಿ ಗರ್ಭ ಪ್ರತಿಷ್ಠೆಯನ್ನು ಮಾಡಿ ಸಿಡಿಲು ಬೀಳುವ ಉಪದ್ರವದಿಂದ ಯಾವುದೆ ಹಾನಿ ಆಗದಂತೆ ಶಿಲ್ಪ ಶಾಸ್ತ್ರೋಕ್ತವಾದ ವಿಧಾನದಿಂದ ತಾನು ಪ್ರಯತ್ನಪೂರ್ವಕ ಸಂಪಾದಿಸಿದ ಎಲ್ಲ ಮಣಿ ಮುಂತಾದವುಗಳನ್ನು ಯೋಗ್ಯಸ್ಥಾನದಲ್ಲಿ ಇರಿಸಿದನು. ಹೀಗೆ ಅತ್ಯಪೂರ್ವವಾಗಿ ಮಂದಿರವು ನಿರ್ಮಾಣಗೊಂಡ ಬಳಿಕ ರಾಜನಿಗೆ ಪರಮ ಸಂತೋಷವಾಯಿತು.

ಅವನು ನಾರದರ ಬಳಿಗೆ ಬಂದು ವಂದಿಸಿ ಕೃತಜ್ಞತೆಯಿಂದ ಹೇಳಿದನು- "ಮಹರ್ಷಿಗಳೇ! ದೇವತೆಗಳಿಗೂ ಅಸುರರಿಗೂ ಮಾಡಲು ಅಶಕ್ಯವಾದ ಈ ಮಹಾಕಾರ್ಯವನ್ನು, ತಾವು ನನ್ನನ್ನು ನಿಮಿತ್ತ ಮಾಡಿಕೊಂಡು ತಾವೇ ಪೂರ್ಣಗೊಳಿಸಿದಿರಿ. ಇದರ ಎಲ್ಲ ಸಂಪೂರ್ಣ ಶ್ರೇಯಸ್ಸು ತಮ್ಮದು. ಇದಕ್ಕಾಗಿ ತಮ್ಮ ಪಾದಾರವಿಂದಗಳಿಗೆ ಸಹಸ್ರ ಸಹಸ್ರ ವಂದನೆಗಳು.

**ನಾರದರು:-** ರಾಜನೇ! ನೀನು ಈಗ ನಿಜವಾಗಿಯೂ ಜೀವನ್ಮುಕ್ತನಾಗಿದ್ದೀಯೆ. ಈಗ ನಿನ್ನ ಚಿತ್ತವು ಸಂಪೂರ್ಣವಾಗಿ ಭಗವಂತನ ಚರಣಾರವಿಂದಗಳಲ್ಲಿ ಅನನ್ಯ ಭಕ್ತಿಯಿಂದ ಲೀನವಾಗಿದೆ. ಮಾನವರಿಗೆ ಇದಕ್ಕಿಂತ ಮಿಗಿಲಾದ ಪುರುಷಾರ್ಥ ಬೇರೆ ಯಾವುದಿದೆ? ರಾಜನೇ! ಉಗ್ರತಪಸ್ಸು, ಭೂರಿಯಜ್ಞ, ಪ್ರಭೂತ ದಕ್ಷಿಣೆ, ಸಂತತ ಸ್ವಾಧ್ಯಾಯ, ನಿರಂತರ ಜಪ, ಮಹಾ ಕಠಿಣತರ ವ್ರತ, ಸರ್ವತೀರ್ಥಾವಗಾಹನ ಮುಂತಾದ ಎಲ್ಲ ಪುಣ್ಯ ಕರ್ಮಾನುಷ್ಠಾನಗಳಿಂದ ಹೊಂದಲು ಅಶಕ್ಯವಾದ ಭಗವತ್‌ಕಾರ್ಯವನ್ನು ಹಾಗೂ ಭಗವತ್ ಪ್ರಸಾದವನ್ನು ನೀನು ಈಗ ಮಾಡಿ ಪಡೆದು ಧನ್ಯನಾಗಿರುವೆ. ನೀನು ದೀರ್ಘಕಾಲದ ವರೆಗೆ ಈ ಪೃಥ್ವೀಮಂಡಲದಲ್ಲಿ ಇದ್ದು ದೊಡ್ಡ ದೊಡ್ಡ ಉತ್ಸವಗಳನ್ನು ಮಾಡಿ, ಮಾಡಿಸಿ ಬಗೆಬಗೆಯ ಉಪಚಾರಗಳಿಂದ ಈ ಜಗನ್ನಾಥನ ಪೂಜೆಯನ್ನೂ ಮಾಡು.

ಅನಂತರ ಇಂದ್ರದ್ಯುಮ್ನ ಮಹಾರಾಜನು ಮತ್ತೊಮ್ಮೆ ಆ ಜಗನ್ನಾಥಸ್ವಾಮಿಗೆ ದಂಡಪ್ರಣಾಮ ಮಾಡಿ ಸ್ತೋತ್ರ ಮಾಡಿದನು- ''ಬ್ರಹ್ಮಣ್ಯ ದೇವನಾದ ಭಗವಂತನಿಗೆ ನಮಸ್ಕಾರ. ಶರಣಾಗತರ ದುಃಖವನ್ನು ದೂರ ಮಾಡುವ ಹಾಗೂ ನಾಲ್ಕೂ ಪುರುಷಾರ್ಥಗಳನ್ನು ಪ್ರದಾನ ಮಾಡಬಲ್ಲ ಏಕಮಾತ್ರ ಸಮರ್ಥ ದೇವತೆ ಎನಿಸಿದ ಶ್ರೀನಾರಾಯಣನೇ, ನಿನಗೆ ನನ್ನ ವಂದನೆ. ಹಿರಣ್ಯಗರ್ಭ ರೂಪನಾದ ಪುರುಷನು ವ್ಯಕ್ತನಾದ ಈ ಎಲ್ಲ ಪ್ರಾಕೃತ ಜಗತ್ತು ನಿನ್ನದೇ ಸ್ವರೂಪ ಆಗಿವೆ. ಸಚ್ಚಿದಾನಂದ ವಿಗ್ರಹನಾದ ವಾಸುದೇವನಿಗೆ ನಮಸ್ಕಾರ.''

ಹೀಗೆ ಭಕ್ತಿಯಿಂದ ಸ್ತೋತ್ರ ಮಾಡುತ್ತಿರುವಾಗಲೇ ರಾಜನ ಕಣ್ಣಿನಿಂದ ಕಂಬನಿಗಳ ಕೋಡಿ ಹರಿಯಿತು. ಅವನು ಮತ್ತೆ ಮತ್ತೆ ಪ್ರದಕ್ಷಿಣೆ ನಮಸ್ಕಾರಾದಿಗಳನ್ನು ಮಾಡಿದನು. ಹೀಗೆ ಭಗವದ್ಭಕ್ತಿಯ ಆವೇಶದಿಂದ ಮೇಲಿಂದ ಮೇಲೆ ಪರಮಾತ್ಮನ ಪಾದೈಕ ಪ್ರವಣನಾಗಿ ಬಹುಕಾಲ ತನ್ಮಯತೆಯ ಅನುಭವದಲ್ಲಿ ಲೀನನಾಗುತ್ತಿರುವ ಇಂದ್ರದ್ಯುಮ್ನ ರಾಜನ ಜೀವನ ಯೋಗ್ಯತೆಯನ್ನು ಅರಿತ ದೇವತೆಗಳಿಗೂ ಪರಮಕೌತುಕವಾಯಿತು.

ಅವನ ಯಜ್ಞಕಾರ್ಯಕ್ಕಾಗಿ ಆಗಮಿಸಿದ ಎಲ್ಲ ದೇವತೆಗಳಿಗೆ ಭಗವಂತನ ಚತುರ್ಮೂರ್ತಿಗಳನ್ನು ಕಣ್‌ತುಂಬ ನೋಡಿ ತಮ್ಮ ಜನ್ಮ ಧನ್ಯವಾಯಿತು ಎನಿಸಿತು. ದೇವಲೋಕದಲ್ಲಿಯೂ ದುರ್ಲಭವಾದ ಇಂಥ ಮಹಾವಿಷ್ಣುವಿನ ದಿವ್ಯಮೂರ್ತಿಗಳನ್ನು ಕಂಡು ಅವುಗಳ ದರ್ಶನಾನಂದವನ್ನುಂಡು, ಅವರೆಲ್ಲರೂ ಪುಲಕಿತಗಾತ್ರರಾದರು. ಭಕ್ತಿ ಪರವಶತೆಯಿಂದ ಆ ಕ್ಷೇತ್ರವನ್ನೂ ಸಮಗ್ರ ಭೂಲೋಕವನ್ನೂ ಭೂಷಿತವನ್ನಾಗಿಯೂ ಪವಿತ್ರತಮಯವನ್ನಾಗಿಯೂ ಮಾಡಿದ ಶ್ರೀ ಜಗನ್ನಾಥ ಸ್ವಾಮಿಯನ್ನು ಕೈಮುಗಿದು ಅವರೆಲ್ಲರೂ ಸ್ತೋತ್ರ ಮಾಡತೊಡಗಿದರು.

**ದೇವತೆಗಳು:-** ಭಗವನ್! ಜಗನ್ನಾಥ ಸ್ವಾಮಿಯೇ! ವೇದವೇದಾಂತಗಳಲ್ಲಿ ಪರಬ್ರಹ್ಮತತ್ವ ಎಂದೂ ಪುರಾಣಗಳಲ್ಲಿ ಪರಮಾತ್ಮನೆಂದೂ ನಿನ್ನನ್ನೇ ವರ್ಣನೆ ಮಾಡಲಾಗಿದೆ. ಮತ್ಸ್ಯ, ಕೂರ್ಮ, ವರಾಹ, ನೃಸಿಂಹ, ರಾಮ, ಕೃಷ್ಣಾದಿ ರೂಪಗಳಿಂದ ನೀನು ಮಾಡಿದ ಲೋಕೋದ್ಧಾರ ಲೀಲೆಗಳೇ ಪೌರಾಣಿಕ ಗ್ರಂಥಗಳಲ್ಲಿ ನಿನ್ನ ಮಹಿಮಾಗಾನರೂಪವಾಗಿ ನಿರೂಪಿಸಲ್ಪಟ್ಟಿವೆ. ವೇದಗಳು ನಿನ್ನಿಂದಲೇ ಪ್ರಕಟವಾಗಿವೆ. ಯಜ್ಞಪುರುಷನು ನಿನ್ನ ಅಪರಾವತಾರ.''

"ನಿನ್ನ ಮುಖದಿಂದ ಬ್ರಾಹ್ಮಣ, ಬಾಹುಗಳಿಂದ ಕ್ಷತ್ರಿಯ, ತೊಡೆಗಳಿಂದ ವೈಶ್ಯ, ಚರಣದಿಂದ ಶೂದ್ರ, ಮನಸ್ಸಿನಿಂದ ಚಂದ್ರ, ನೇತ್ರದಿಂದ ಸೂರ್ಯ, ಕಿವಿ ಹಾಗೂ ಪ್ರಾಣಗಳಿಂದ ವಾಯು, ನಾಲಿಗೆಯಿಂದ ಅಗ್ನಿ, ಹೊಕ್ಕಳದಿಂದ ಆಕಾಶ, ಮಸ್ತಕದಿಂದ ಸ್ವರ್ಗ, ಪಾದಗಳಿಂದ ಪೃಥ್ವಿ, ಕರ್ಣಗಳಿಂದ ಎಂಟು ದಿಕ್ಕುಗಳು, ಎಲ್ಲವೂ ಉತ್ಪನ್ನವಾಗಿರುತ್ತವೆ. ಈ ಜಗತ್ತಿಗೆಲ್ಲ ನೀನೇ ಸರ್ವಸ್ವಾಮಿಯಾಗಿ ನಿನ್ನಿಂದಲೇ ವಿರಾಟ್ ಉತ್ಪನ್ನವಾಗಿರುತ್ತದೆ. ಈ ಜಗತ್ತಿಗೆಲ್ಲ ನೀನೇ ಸರ್ವಸ್ವಾಮಿಯಾಗಿ ವಿರಾಟ್ ಎನಿಸುವೆ. ನಿನ್ನ ಮೇಲೆ ಯಾರ ನಿಯಂತ್ರಣವೂ ಇಲ್ಲ. ಆದುದರಿಂದ ಸ್ವರಾಟ್ ಎಂದು ಕರೆಯುವರು. ವಿಶ್ವದಲ್ಲೆಲ್ಲಾ ವ್ಯಾಪಿಸಿದ್ದರಿಂದ ವಿರಾಟ್ ಎಂತಲೂ ನಿನಗೆ ಹೆಸರು. ಪ್ರಪಂಚಕ್ಕೆಲ್ಲ ನಿಜವಾದ ನಿರಂಕುಶ ಏಕಸ್ವಾಮಿ ಆಗಿರುವದರಿಂದ ಸಮ್ರಾಟ್ ಎಂತಲೂ ನಿನಗೆ ಹೆಸರು ಬಂದಿದೆ.

ಪ್ರಭು! ಸಮಸ್ತ ಕರ್ಮಗಳ ಭೋಕ್ತಾರನು ನೀನೇ ಆಗಿರುವೆ. ಆ ಎಲ್ಲ ಕರ್ಮಗಳಿಗೂ ಫಲಪ್ರದಾನವನ್ನು ಮಾಡುವವನು ನೀನೇ. ಆ ಸತ್ಕರ್ಮಗಳನ್ನು ಮಾಡಲು ನೀನೇ ಪ್ರೇರಣೆಯನ್ನು ಮಾಡುತ್ತಿ. ಹೃಷೀಕೇಶ! ಈ ಜಗತ್ತಿನಲ್ಲಿ ನಿನ್ನ ಹೊರತು ಮುಕ್ತಿ ಕೊಡುವವರು ಬೇರೆ ಯಾರೂ ಇಲ್ಲ. ಆದುದರಿಂದ ನಿನಗೆ ನಮ್ಮ ಅನಂತ ವಂದನೆಗಳು.

ಈ ರೀತಿಯಾಗಿ ದೇವತೆಗಳೆಲ್ಲರೂ ಆ ಭಗವಂತನನ್ನು ಸ್ತೋತ್ರ ಮಾಡಿ ಮತ್ತೆ ಮತ್ತೆ ಪ್ರಣಾಮಗೈದರು. ಅನಂತರ ಇಂದ್ರದ್ಯುಮ್ನ ರಾಜನ ಜೊತೆಗೆ ಎಲ್ಲರೂ ಅಲ್ಲಿಂದ ಹೊರಟು ಭಗವಾನ್ ನೃಸಿಂಹದೇವರ ಕ್ಷೇತ್ರಕ್ಕೆ ಬಂದರು. ಆ ಭಗವಂತನಿಗೆ ಎಂಟು ವಿಧವಾದ ಅಂಗಗಳಿಂದ ಸಹಿತವಾದ ನಮಸ್ಕಾರವನ್ನು ಮಾಡಿ ಭಕ್ತಿಯಿಂದ ಪೂಜೆಯನ್ನು ಸಲ್ಲಿಸಿದರು. ಅನಂತರ ಅವರೆಲ್ಲರೂ ನೀಲಾಚಲ ಪರ್ವತದ ಶಿಖರ ಪ್ರದೇಶಕ್ಕೆ ಹೋದರು.

ಅಲ್ಲಿ ಅತ್ಯುತ್ತಮವಾದ ಒಂದು ಪ್ರಾಸಾದ ನಿರ್ಮಾಣವಾಗಿತ್ತು. ಅದು ಮುಗಿಲೆತ್ತರ ಬೆಳೆದಿದ್ದಿತು. ಆಕಾಶದ ಅಂಚಿನ ವರೆಗೆ ತಲುಪಿದ ಆ ವಿಶಾಲ ಮಂದಿರವನ್ನು ನೋಡಿ ಇಂದ್ರದ್ಯುಮ್ನ ಮಹಾರಾಜನು ವಿಚಾರ ಮಾಡಿದನು. "ಈ ಪೂರ್ಣವಾದ ಭಗವನ್ ಮಂದಿರವು ಬಹು ದೀರ್ಘಕಾಲದ ಬಳಿಕ ನನ್ನ ದೃಷ್ಟಿ ಪಥದಲ್ಲಿ ಬಂದಿದೆ. ಇದೆಲ್ಲವೂ ಪರಮಾತ್ಮನ ಅನುಗ್ರಹದಿಂದಲೇ ರೂಪುಗೊಂಡಿದೆ. ನಾವೆಲ್ಲ ನೆಪಮಾತ್ರ. ಇದರಿಂದ ಮನುಷ್ಯರಿಗೆ ಯಾವ ಪುರುಷಾರ್ಥವೂ ಇಲ್ಲ" ಹೀಗೆಲ್ಲ ಯೋಚಿಸಿ ಅವನು ತನ್ನ ಸಹಾಯಕರನ್ನು ಕುರಿತು ನುಡಿದ.

**ರಾಜ:-** ಭಗವಾನ್ ಮಹಾವಿಷ್ಣುವು ಕಾಷ್ಠಮಯ ಶರೀರವನ್ನು ಧಾರಣ ಮಾಡಿ ಇಲ್ಲಿ ಪ್ರಕಟವಾದಾಗ, ಆಕಾಶವಾಣಿಯು ನನಗೆ "ನೀಲಾಚಲ ಶಿಖರದ ಮೇಲೆ ಜಗನ್ನಾಥ ಸ್ವಾಮಿಯ ಪ್ರತಿಷ್ಠೆಯನ್ನು ಮಾಡುವದಕ್ಕಾಗಿ ಒಂದು ಸಾವಿರ ಮಾರು ಉದ್ದದ ಮಂದಿರವನ್ನು ಕಟ್ಟಿಸು. ಆ ಜಗದೀಶನ ಪ್ರತಿಷ್ಠೆಯ ಸಮಯದಲ್ಲಿ ಸ್ವಯಂ ಬ್ರಹ್ಮದೇವರು ದೇವತೆಗಳಿಂದಲೂ, ಬ್ರಹ್ಮರ್ಷಿಗಳಿಂದಲೂ, ಸಿದ್ಧಪುರುಷರಿಂದಲೂ ಕೂಡಿಕೊಂಡು ಅಲ್ಲಿಗೆ ಬರುವರು "ಈಗ ಆ ಸಮಯವು ಬಂದಿದೆ. ನೀವು ಎಲ್ಲ ಸಿದ್ಧತೆಯನ್ನು ಮಾಡಿರಿ" ಎಂದು ಹೇಳಿತು.

ಹೀಗೆ ತನ್ನ ಪರಿವಾರ ವರ್ಗದ ಎಲ್ಲರಿಗೂ ಕಾರ್ಯೋನ್ಮುಖರಾಗಲು ಆದೇಶವನ್ನು ನೀಡಿ ರಾಜನು ನಾರದರನ್ನು ಕೇಳಿದನು "ಮುನಿಪುಂಗವರೇ, ನನಗೆ ಪ್ರತಿಷ್ಠಾವಿಧಿಗೆ ಬೇಕಾಗುವ ವಸ್ತುಗಳ ವಿಷಯಗಳ ಜ್ಞಾನವಿಲ್ಲ. ಏನು ಮಾಡಬೇಕು ಗೊತ್ತಿಲ್ಲ. ಹೇಗೆ

ಮಾಡಬೇಕು ಪರಿಚಯವಿಲ್ಲ. ಆದುದರಿಂದ ತಾವು ನಮಗೆ ಯಾವ ಯಾವ ವಸ್ತುಗಳನ್ನು ಹೇಗೆ ಸಿದ್ಧಪಡಿಸಬೇಕು ಎಂಬುದನ್ನೂ ಮುಂದಿನ ಕಾರ್ಯಕ್ರಮವನ್ನು ಹೇಗೆ ಮಾಡಬೇಕೆಂಬುದನ್ನೂ ಕ್ರಮ ಪ್ರಕಾರವಾಗಿ ಹೇಳಿಕೊಡಿರಿ.''

ಇಂದ್ರದ್ಯುಮ್ನ ಮಹಾರಾಜನು ಹೀಗೆ ಕೇಳಿಕೊಂಡ ಬಳಿಕ ನಾರದರು ವಿಚಾರ ಮಾಡಿ ಆಗಮ ಪುರಾಣ ತಂತ್ರಗಳಲ್ಲಿ ಹೇಳಿದ ರೀತಿಯಿಂದ ಬೇಕಾಗುವ ಸಾಮಗ್ರಿಗಳ ಒಂದು ಸೂಚೀ ಪತ್ರ ತಯಾರಿಸಿ ಮಹಾರಾಜನ ಕೈಯಲ್ಲಿ ಕೊಟ್ಟರು. ರಾಜನು ಅದನ್ನು ಪದ್ಮನಿಧಿ ಎಂಬ ಹೆಸರಿನ ತನ್ನ ಮಂತ್ರಿಯ ಕೈಯಲ್ಲಿ ಕೊಟ್ಟು ಹೇಳಿದನು.

''ಇದರಲ್ಲಿ ಬರೆದ ಎಲ್ಲ ವಸ್ತುಗಳನ್ನು ಸಂಗ್ರಹಿಸಿರಿ. ಬ್ರಹ್ಮದೇವರ ಸಲುವಾಗಿ ಒಂದು ದಿವ್ಯ ಭವನವನ್ನು ನಿರ್ಮಿಸಿರಿ. ಇಂದ್ರಾದಿ ದೇವತೆಗಳಿಗೂ, ಬ್ರಹ್ಮರ್ಷಿಗಳಿಗೂ, ಸಿದ್ಧಪುರುಷರಿಗೂ ಮುನಿಮನುಜ ಮಹಾನುಭಾವರೆಲ್ಲರಿಗೂ ಯಥಾ ಯೋಗ್ಯವಾದ ಸ್ಥಾನಗಳನ್ನು ನಿರ್ಮಾಣ ಮಾಡಿರಿ.''

## ರಥ ನಿರ್ಮಿತಿಗೆ ಆದೇಶ

ಹೀಗೆ ತನ್ನ ಪರಿವಾರ ವರ್ಗದವರಿಗೆ ಉಚಿತವಾದ ಆದೇಶವನ್ನು ನೀಡಿ ಎಲ್ಲ ಸಿದ್ಧತೆಯನ್ನು ಸ್ವಯಂ ತನ್ನ ಮೇಲ್ವಿಚಾರಣೆಯಲ್ಲಿ ಮಾಡಿಸುತ್ತಿರುವ ಇಂದ್ರದ್ಯುಮ್ನನನ್ನು ಕರೆದು ನಾರದರು ಹೇಳಿದರು- ''ರಾಜನೇ! ಮೂರು ರಥಗಳನ್ನು ನಿರ್ಮಾಣ ಮಾಡಿಸು. ಒಂದು ಕೃಷ್ಣನಿಗಾಗಿ, ಎರಡನೆಯದು ಬಲಭದ್ರನಿಗಾಗಿ, ಮೂರನೆಯದು ಸುಭದ್ರಾಳ ಸಲುವಾಗಿ. ಇವುಗಳಲ್ಲಿ ಭಗವಾನ್ ಶ್ರೀವಾಸುದೇವನ ಸಲುವಾಗಿ ನಿರ್ಮಿಸಿದ ಮೊದಲನೆಯ ರಥದ ಮೇಲೆ ಗರುಡಧ್ವಜವು ಹಾರಾಡುವಂತೆ ಮಾಡಿರಿ. ಸುಭದ್ರಾದೇವಿಯ ರಥದ ಮೇಲೆ ಕಮಲ ಚಿಹ್ನದಿಂದ ಕೂಡಿದ ಪತಾಕೆಯು ಹಾರಾಡುತ್ತ ಇರಲಿ. ಬಲರಾಮದೇವರ ರಥದ ಮೇಲೆ ತಾಲಧ್ವಜವು ಅರ್ಥಾತ್ ನೇಗಿಲದ ಚಿನ್ಹೆ ಇರುವ ನಿಶಾನೆಯು ತೂನೆದಾಡುತ್ತ ಇರಲಿ, ಶ್ರೀಕೃಷ್ಣನ ರಥದ ವಿಸ್ತಾರವು ಹದಿನಾರು ಮೊಳ, ಬಲಭದ್ರನ ರಥ ಹದಿನಾಲ್ಕು ಮೊಳ, ಸುಭದ್ರಾದೇವಿಯ ರಥವು ಹನ್ನೆರಡು ಮೊಳದ ಅಳತೆಯದು ಇರಲಿ.''

ನಾರದರ ಈ ಮಾತನ್ನು ಕೇಳಿ ರಾಜನು ಒಂದು ದಿನದಲ್ಲಿ ಮೂರೂ ರಥಗಳನ್ನು ತಯಾರು ಮಾಡಿಸಿದನು. ಆ ಮೂರು ರಥಗಳ ಗಾಲಿ, ನೊಗ, ಕಂಬ, ಹಾರಿ, ದ್ವಾರ ಎಲ್ಲವೂ ಒಂದಕ್ಕಿಂತ ಒಂದು ಸುಂದರವಾಗಿಯೇ ಇದ್ದವು. ಮೂರು ರಥಗಳಲ್ಲಿ ಬಗೆಬಗೆಯ ಬಣ್ಣದ ಕುದುರೆಗಳನ್ನು ಹೂಡಲಾಗಿತ್ತು. ನಾರದರು ಶಾಸ್ತ್ರೋಕ್ತ ವಿಧಿಯಿಂದ ಆ ರಥಗಳ ಪ್ರತಿಷ್ಠೆಯನ್ನು ಮಾಡಿದರು. ಅನಂತರ ಬ್ರಹ್ಮದೇವರ ಪ್ರೇರಣೆಯಿಂದ ರಾಜನು ನಿರ್ಮಾಣ ಮಾಡಿಸಿದ ಆ ಭವ್ಯಮಂದಿರದ ಸಮೀಪಕ್ಕೆ ಶುಭ ಮುಹೂರ್ತದಲ್ಲಿ ಎಲ್ಲ ದೇವತೆಗಳೂ ಬಂದು ತಲುಪಿದರು. ಇಂದ್ರದ್ಯುಮ್ನನ ಆಜ್ಞೆಯಂತೆ ವಿಶ್ವಕರ್ಮನು ಒಂದು ದೊಡ್ಡ ರತ್ನಮಯವಾದ ಶಾಲೆಯನ್ನು ಸಿದ್ಧಗೊಳಿಸಿದನು. ಅದರಲ್ಲಿ ಪ್ರತಿಷ್ಠಾ ಕಾರ್ಯಕ್ಕೆ ಉಪಯೋಗವಾಗುವ ಹವಿಷ್ಯ, ಸಮಿಧೆ, ಕಾಷ್ಠ ಮುಂತಾದ ಪದಾರ್ಥಗಳನ್ನು ತಂದು ಇರಿಸಲಾಯಿತು. ಬಗೆಬಗೆಯ ಭೋಜನ ಉಪಹಾರಗಳ ಸಿದ್ಧತೆಯನ್ನು ಮಾಡಲಾಯಿತು. ದಾನ ದಕ್ಷಿಣಾದಿಗಳನ್ನು ನೀಡಲು ವಿಪುಲವಾಗಿ ಧನರಾಶಿಯಿಂದ ತುಂಬಿದ ಕೋಶಗಳನ್ನು ಅಲ್ಲಿಯೇ ತಂದು ಇರಿಸಲಾಯಿತು.

## ಗಾಲರಾಜನ ದುರ್ವರ್ತನೆ-ಪರಿವರ್ತನೆ

ಆ ಸಮಯದಲ್ಲಿ ಗಾಲ ಎಂಬ ರಾಜನು ಒಂದು ಭೂಭಾಗದಲ್ಲಿ ರಾಜ್ಯಶಾಸನವನ್ನು ಮಾಡುತ್ತಿದ್ದನು. ಅವನು ಕೂಡ ಶಿಲಾಮಯವಾದ ಒಂದು ಮಾಧವನ ಮೂರ್ತಿಯನ್ನು ಶಿಲ್ಪಿಗಳಿಂದ ಕಟೆದು ತಯಾರು ಮಾಡಿಸಿ ಒಂದು ಚಿಕ್ಕದಾದ ಮಂದಿರದಲ್ಲಿ ಪ್ರತಿಷ್ಠೆ ಮಾಡಿ ಪೂಜೆ ಮಾಡುತ್ತಿದ್ದನು. ದೂತರ ಮುಖಾಂತರ ಆ ಗಾಲರಾಜನಿಗೆ ತಿಳಿದುಬಂದಿತು ಇಂದ್ರದ್ಯುಮ್ನನ ಈ ಉದ್ಯೋಗ. ನೀಲಾಚಲ ಪರ್ವತದಲ್ಲಿ ಇಂದ್ರದ್ಯುಮ್ನ ರಾಜನು ಜಗನ್ನಾಥಸ್ವಾಮಿಯ ಪ್ರತಿಷ್ಠೆಯನ್ನು ಮಾಡಲಿರುವನು ಎನ್ನುವ ಸುದ್ಧಿಯನ್ನು ಕೇಳಿ ಅವನಿಗೆ ಬಹಳ ಕೋಪ ಬಂದಿತು. ಅವನು ತನ್ನ ಸೇನೆಯನ್ನೆಲ್ಲ ತೆಗೆದುಕೊಂಡು ನೀಲಾಚಲ ಪರ್ವತಕ್ಕೆ ಏರಿ ಬಂದನು. ಅಲ್ಲಿ ಬಂದ ಬಳಿಕ ಶ್ರೀ ಜಗನ್ನಾಥನ ಪ್ರತಿಷ್ಠೆಗಾಗಿ ಅಲ್ಲಿ ನಡೆದ ಬೃಹದ್ ಯೋಜನೆ, ವಿರಾಟ್ ಮಂದಿರ, ಅಪೂರ್ವವಾದ ವ್ಯವಸ್ಥೆ ಎಲ್ಲವನ್ನೂ ನೋಡಿ ಅತ್ಯಂತ ಆಶ್ಚರ್ಯವಾಯಿತು ಆ ಗಾಲರಾಜನಿಗೆ. ಅಲ್ಲಿ ನಡೆಯಲಿರುವ ಮನುಷ್ಯ ದುರ್ಲಭವಾದ ಪ್ರತಿಷ್ಠಾ ಕಾರ್ಯವನ್ನೂ, ದೈವೀವ್ಯಾಪಾರಗಳನ್ನೂ ಕಂಡು, ಕೇಳಿ ಅವನಿಗೆ ಮನಸ್ಸು ಪರಿವರ್ತನೆ ಆಯಿತು. ಆ ಕಾಲದಲ್ಲಿ ಪ್ರತ್ಯಕ್ಷವಾಗಿ ಅಲ್ಲಿ ನಡೆದ ದೇವತಾ ಕಾರ್ಯದ ಯಥಾರ್ಥ ಸ್ವರೂಪವನ್ನು ತಿಳಿದು, ವ್ಯವಸ್ಥೆಯನ್ನು ಕಣ್ಣಿನಿಂದ ನೋಡಿ ಅವನಿಗೆ ಕೃತಾರ್ಥತೆ ಎನಿಸಿತು. ಇದಕ್ಕಿಂತ ಹೆಚ್ಚಿನ ಕಲ್ಯಾಣ ಕಾರ್ಯವೇ ಇಲ್ಲ ಎಂದು ಅವನು ನಿರ್ಧರಿಸಿದ. ಅವನು ಇಂದ್ರದ್ಯುಮ್ನ ರಾಜನ ಬಳಿಗೆ ಬಂದು ಕೈಜೋಡಿಸಿ ಹೇಳಿದ- "ದೇವ! ನೀವು ರಾಜರೆಲ್ಲರಿಗೂ ರಾಜರು. ಹಾಗು ಜೀವನ್ಮುಕ್ತರು. ನಿಮ್ಮಂಥ ಮಹಾಪುರುಷರನ್ನು ನಾನು ಎಂತು ಸ್ತುತಿಸಲಿ, ನೀವು ನನ್ನ ಮೇಲೆ ಪ್ರಸನ್ನರಾಗಿರಿ."

ಹೀಗೆ ನುಡಿಯುತ್ತ ಇರುವ ಗಾಲರಾಜನನ್ನು ನೋಡಿ ಇಂದ್ರದ್ಯುಮ್ನನು ಹೇಳಿದನು- "ರಾಜನೇ! ನೀನು ನಿನ್ನನ್ನು ಹೀನನನ್ನಾಗಿ ತೋರಿಸಲು ಏಕೆ ಪ್ರಯತ್ನಿಸುವೆ? ನನ್ನನ್ನು ಏಕೆ ಇಷ್ಟು ಬಣ್ಣಿಸಿ ಮಾತನಾಡುವೆ? ನೀನು ಕೂಡ ನನ್ನಂತೆ ಒಂದು ಭೂಭಾಗಕ್ಕೆ ಸಾರ್ವಭೌಮ ಮಹಾರಾಜನಾಗಿರುವೆ. ಮತ್ತು ನೀನು ಕೂಡ ಪರಮ ವೈಷ್ಣವ. ಮಹಾ ಭಗವದ್ಭಕ್ತ. ಪ್ರಜರನ್ನೆಲ್ಲ ಪುತ್ರರಂತೆ ರಕ್ಷಿಸುತ್ತಿರುವೆ. ನ್ಯಾಯಮಾರ್ಗದಿಂದ ನಿನ್ನ ರಾಜ್ಯದಲ್ಲಿ ಧರ್ಮಶಾಸನವನ್ನು ನಡೆಸಿದ್ದೀಯೆ. ಇಹಲೋಕದಲ್ಲಿ ಕೀರ್ತಿ, ಪರಲೋಕದಲ್ಲಿ ಧರ್ಮ, ಎರಡನ್ನೂ ಸಂಪಾದಿಸಿದ ಪುಣ್ಯ ಪುರುಷ ನೀನು. ರಾಜನೇ, ಕಾಷ್ಠರೂಪದಲ್ಲಿ ಅವತರಿಸಿದ ಭಗವಾನ್ ವಿಷ್ಣುವಿನ ಸಲುವಾಗಿ ನಡೆದಿದೆ ಈ ಪ್ರಾಸಾದ ನಿರ್ಮಾಣ. ನಾಲ್ಕು ರೂಪಗಳಿಂದ ವ್ಯಕ್ತನಾದ ಆ ಪುರುಷೋತ್ತಮನನ್ನು ಇಲ್ಲಿ ವಿಧಿಪೂರ್ವಕವಾಗಿ ಪ್ರತಿಷ್ಠೆಗೊಳಿಸಿ ಈ ಜಗನ್ನಾಥ ಮಂದಿರವನ್ನೆಲ್ಲ ನಾನು ನಿನಗೆ ಒಪ್ಪಿಸಿ ಬಿಡುತ್ತೇನೆ." ಇಂದ್ರದ್ಯುಮ್ನ ಮಹಾರಾಜನ ಈ ನಿರ್ಧಾರದ ನುಡಿಯನ್ನು ಕೇಳಿ ಅತ್ಯಧಿಕ ಆನಂದ ವಾಯಿತು ಗಾಲರಾಜನಿಗೆ. ಭಗವಂತನ ಸೇವಾ ಸೌಭಾಗ್ಯವು ತನಗೆ ದೊರೆಯಲಿದೆ ಎಂಬ ಮಾತು ಅವನ ಹಿಗ್ಗಿನ ಬುಗ್ಗೆ ಪುಟಿದೇಳಲು ಕಾರಣವಾಗಿತ್ತು. ಇಂದ್ರದ್ಯುಮ್ನ ಮಹಾರಾಜನು ಆದೇಶ ಮಾಡಿದ್ದನ್ನೆಲ್ಲ ಕೂಡಲೇ ಕಾರ್ಯಗತ ಗೊಳಿಸಲು, ಗಾಲರಾಜನು ತನ್ನ ಸೇನಾಪರಿವಾರದೊಂದಿಗೆ ಅಣಿಯಾಗಿ ನಿಂತುಕೊಂಡನು. ಹೀಗೆ ಎಲ್ಲ ಸಿದ್ಧತೆಯು ಸಂಪನ್ನವಾದ ಬಳಿಕ ಎಲ್ಲ ಜನರು ಮುಹೂರ್ತದ ನಿರೀಕ್ಷೆಯನ್ನು ಮಾಡತೊಡಗಿದರು. ಅಷ್ಟರಲ್ಲಿ ದೇವತೆಗಳ ಜಯ

ಜಯಕಾರ ಧ್ವನಿಯೊಂದಿಗೆ ಬ್ರಹ್ಮದೇವರ ಸವಾರಿಯು ಅಲ್ಲಿಗೆ ಚಿತ್ತೈಸಿತು. ಇಂದ್ರದ್ಯುಮ್ನ ಮಹಾರಾಜನು ಎರಡೂ ಕೈ ಗಳನ್ನು ಜೋಡಿಸಿ ನೆಲಕ್ಕೆ ಹಣೆಹಚ್ಚಿ ನಮಸ್ಕರಿಸಿದನು ಆ ಶಾರದಾಪತಿಗೆ. ನಾರದ ಹಾಗೂ ಗಾಲರಾಜರು ಸಾಷ್ಟಾಂಗ ಪ್ರಣಾಮವನ್ನು ಹಾಕಿದರು ಆ ವಿಧಾತೃ ದೇವನಿಗೆ.

**ಬ್ರಹ್ಮ:-** ಇಂದ್ರದ್ಯುಮ್ನ! ನಿನ್ನ ಸೌಭಾಗ್ಯ ಎಂಥದಿದೆ ನೋಡು! ಈ ಎಲ್ಲ ದೇವತೆಗಳು, ಋಷಿಗಳು, ಮುನಿಗಳು ಮತ್ತು ನಾನು, ಉಳಿದೆಲ್ಲ ಸಿದ್ಧ, ಪಿತೃ, ವಿದ್ಯಾಧರ ಮುನಿ ಮನುಜ ಮಹಾನುಭಾವರೆಲ್ಲರು ನೀನು ಮಾಡುವ ಈ ಪುಣ್ಯಕಾರ್ಯಕ್ಕೆ ಸ್ವಯಂ ಉಪಸ್ಥಿತರಾಗಿದ್ದಾರೆ.

ಹೀಗೆ ಹೇಳಿ ಬ್ರಹ್ಮದೇವರು ಅಲ್ಲಿಂದ ನಾರಾಯಣನ ರಥದ ಸಮೀಪದಲ್ಲಿ ಹೋದರು. ಆ ಜಗನ್ನಾಥ ಸ್ವಾಮಿಗೆ ಮೂರುಬಾರಿ ಪ್ರದಕ್ಷಿಣೆ ಮಾಡಿ ಐದು ನಮಸ್ಕಾರಗಳನ್ನು ಹಾಕಿ ಕೈ ಮುಗಿದು ರೋಮಾಂಚಿತಗಾತ್ರರಾಗಿ ಗದ್ಗದಿತ ಕಂಠದಿಂದ ಅವನನ್ನು ಸ್ತೋತ್ರ ಮಾಡತೊಡಗಿದರು.

## ಬ್ರಹ್ಮಕೃತ ಪರಬ್ರಹ್ಮ ಸ್ತೋತ್ರ

**ಚತುರ್ಮುಖ ಬ್ರಹ್ಮ:-** ಪ್ರಭು ಪರಮೇಶ್ವರ! ನಿನಗೆ ನನ್ನ ನಮಸ್ಕಾರ. ನೀನು ಸ್ವಯಂ ಪ್ರಕಾಶ. ಅದ್ವಿತೀಯ. ಈ ಜಗತ್ತಿಗೆಲ್ಲ ಪ್ರಕಾಶ ಬರುವದು ನಿನ್ನಿಂದ. ನೀನು ಸ್ಥೂಲನೂ ಅಹುದು. ಸೂಕ್ಷ್ಮನೂ ಅಹುದು. ಅಣುವೂ ಆಗಿರುವೆ. ಮಹಾನ್‌ನೂ ಆಗಿರುವೆ, ಗುಣಗಳಿಗೆಲ್ಲ ಆಧಾರನೂ ಆಗಿರುವೆ. ಗುಣಾತೀತನೂ ಆಗಿರುವೆ. ತ್ರಿಗುಣಾತೀತನಾದ ನಿನಗೆ ವಂದನೆ. ನಾನು ನಿನ್ನ ನಾಭೀಕಮಲದಿಂದ ಉತ್ಪನ್ನನಾದ ಒಬ್ಬ ಬ್ರಹ್ಮ. ಇದರಂತೆಯೇ ನಿನ್ನ ಒಂದೊಂದು ರೋಮರೋಮಕ್ಕೂ ಅನೇಕ ಬ್ರಹ್ಮಾಂಡಗಳು. ಆ ಎಲ್ಲ ಬ್ರಹ್ಮಾಂಡಗಳಲ್ಲಿ ನನ್ನಂತಹ ಅಸಂಖ್ಯ ಬ್ರಹ್ಮರೂ ಇರುತ್ತಾರೆ.

ಈ ಎಲ್ಲ ನಿನ್ನ ಮಹಿಮೆಯು ಅಂಚಿತ್ಯವೂ, ಅಪಾರವೂ, ಅಪರಿಮೇಯವೂ ಆಗಿದೆ. ಇಂಥ ದುರ್ಜ್ಞೇಯನಾದ ನಿನಗೆ ಹಲವಾರು ನಮಸ್ಕಾರ. ಹೆಜ್ಜೆ ಹೆಜ್ಜೆಗೂ ಪ್ರಣಾಮ. ಭಗವನ್! ದುರ್ಲಭವಾದ ಜೀವಿಗಳ ಕಾಮನೆಗಳನ್ನು ಪೂರ್ಣಮಾಡಲು ನೀನು ಒಂದು ಕಲ್ಪವೃಕ್ಷದಂತೆ ಇರುವೆ. ಶರಣಾಗತರ ದುಃಖ ರಾಶಿಯನ್ನು ಪರಿಹರಿಸಲು ಕಟಿಬದ್ಧನಾಗಿ ನಿಂತುಕೊಂಡ ದೇವತಾವ್ಯಕ್ತಿಯೆಂದರೆ ನೀನೊಬ್ಬನೆ. ದುಃಖದ ಸಮುದ್ರದಲ್ಲಿ ಮುಳುಗಿದ ಪ್ರಾಣಿಗಳ ಮೇಲೆ ನೀನು ಪ್ರಸನ್ನನಾಗು. ನಿನ್ನ ಕರುಣೆಯ ಕಿರಣಗಳನ್ನು ಎಲ್ಲೆಡೆಗೂ ಎರಚು. ಇಲ್ಲಿಗೆ ಬರುವ ಭಕ್ತರೆಲ್ಲರನ್ನು ನಿನ್ನ ಕೃಪಾಕಟಾಕ್ಷ ವಿಕ್ಷೇಪದಿಂದ ಉದ್ಧಾರ ಮಾಡು.''

ಹೀಗೆ ವೇದಮಂತ್ರಗಳ ಗುಹ್ಯಾರ್ಥವನ್ನು ಒಳಗೊಂಡ ಶ್ರೀ ಜಗನ್ನಾಥ ಸ್ತೋತ್ರವನ್ನು ಮಾಡಿ ಬ್ರಹ್ಮದೇವರು ಬಲಭದ್ರನ ದರ್ಶನವನ್ನು ಮಾಡಿಕೊಂಡರು. ಮತ್ತು ಭಕ್ತಿಯಿಂದ ಭಗವಂತನ ಆವೇಶವುಳ್ಳ ಆ ಶೇಷಾವತಾರಿ ಬಲರಾಮದೇವರನ್ನು ಮತ್ತು ಆ ಅಣ್ಣತಮ್ಮಂದಿರ ಪಕ್ಕದಲ್ಲಿ ಕುಳಿತುಕೊಂಡ ಸುಭದ್ರಾದೇವಿಯನ್ನು ಮತ್ತೊಂದು ರಥದಲ್ಲಿ ವಿರಾಜಮಾನವಾದ ವಿಷ್ಣುಚಕ್ರವಾದ ಸುದರ್ಶನವನ್ನು ಕಂಡು ನಮಸ್ಕಾರ ಮಾಡಿ ಸ್ತೋತ್ರ ಮಾಡಿದರು. ಭಗವಂತನ ದಿವ್ಯ ಸನ್ನಿಧಾನೋಪೇತವಾದ

ಈ ನಾಲ್ಕೂ ಪ್ರತಿಮೆಗಳನ್ನು ಬ್ರಹ್ಮದೇವರು ಬಾಯಿತುಂಬ ಹೊಗಳಿ ಭಕ್ತಿಯಿಂದ ಸ್ತೋತ್ರಮಾಡಿದ್ದನ್ನು ಕೇಳಿ ಅಲ್ಲಿ ನೆರೆದ ದೇವತೆಗಳಿಗೂ ಋಷಿಮುನಿಗಳಿಗೂ ಪರಮಸಂತೋಷವಾಯಿತು. ಈ ಬ್ರಹ್ಮಕೃತ ಸ್ತೋತ್ರವನ್ನು ಅವರೆಲ್ಲರೂ ಮತ್ತೆ ಮತ್ತೆ ಸಂತೋಷದಿಂದ ಪಠಿಸಿ ಪುಣ್ಯಭಾಗಿಗಳಾದರು.

ಈ ರೀತಿಯಾಗಿ ಪ್ರಣಾಮಗೈದು ಸ್ತೋತ್ರಮಾಡಿ ರಥಾರೂಢವಾದ ನಾಲ್ಕು ದಿವ್ಯ ವಿಗ್ರಹಗಳನ್ನು ಮಾಡಿಕೊಂಡು ಬ್ರಹ್ಮದೇವರು ದೇವತೆಗಳೊಂದಿಗೆ ನೂತನ ಮಂದಿರದ ಸಮೀಪಕ್ಕೆ ಹೋದರು. ಅಲ್ಲಿಯ ಸುಂದರವಾದ ಶಾಲಾ, ಸಭಾಭವನ, ಪ್ರಕೋಷ್ಠ ಮುಂತಾದವುಗಳನ್ನೆಲ್ಲ ನೋಡಿದರು. ಅನಂತರ ಇಂದ್ರದ್ಯುಮ್ನನು ತೋರಿದ ದಿವ್ಯ ಸಿಂಹಾಸನದ ಮೇಲೆ ಕುಳಿತುಕೊಂಡರು. ಬ್ರಹ್ಮದೇವರ ಆಜ್ಞೆಯಂತೆ ಇಂದ್ರದ್ಯುಮ್ನ ಮಹಾರಾಜನು ಶಾಂತಿಕರ್ಮವನ್ನು ಮಾಡಲಿಕ್ಕಾಗಿ ಮಹಾಮುನಿ ಭರದ್ವಾಜರನ್ನು ವರಣ ಮಾಡಿದನು. ಪ್ರತಿಷ್ಠಾ ಕರ್ಮದಲ್ಲಿಯೂ ಮತ್ತು ಹೋಮಕಾರ್ಯದಲ್ಲಿಯೂ ಅಭೀಷ್ಟ ಸಿದ್ಧಿಗಾಗಿ ಪೂಜೆ ಮಾಡಲ್ಪಡುವ ದೇವತೆಗಳೂ, ಆಹುತಿಗಳನ್ನು ಸ್ವೀಕರಿಸುವ ದೇವತೆಗಳೂ, ರಾಜನು ಧ್ಯಾನ ಮಾಡಿದ ಕೂಡಲೇ ಬ್ರಹ್ಮದೇವರ ಆಜ್ಞೆಯಂತೆ ತಮ್ಮ ತಮ್ಮ ಸ್ಥಾನಗಳಲ್ಲಿ ಸ್ವಯಂ ಮೂರ್ತಿಮಂತಾಗಿ ಬಂದು ನಿಂತುಕೊಂಡರು.

ಅವರೆಲ್ಲರನ್ನು ಮಹಾರಾಜನು ಗಂಧ, ಪುಷ್ಪಮಾಲೆ, ಅಲಂಕಾರ, ಆಭರಣ ಮುಂತಾದವುಗಳನ್ನು ಕೊಟ್ಟು ಪೂಜೆ ಮಾಡಿದನು. ಆ ಬಳಿಕ ಮಹಾರಾಜನನ್ನು ಮುಂದೆ ಕೂಡಿಸಿಕೊಂಡು ಭರದ್ವಾಜ ಮುನಿ ಮಹರ್ಷಿಗಳು ಬ್ರಹ್ಮದೇವರು ಹಾಗು ಸರ್ವದೇವರ ಸಮಕ್ಷಮದಲ್ಲಿಯೇ ಆ ಮಹಾಕಾರ್ಯವನ್ನು ಆರಂಭಿಸಿದರು. ಮೊದಲು ಮಂದಿರ ಪ್ರತಿಷ್ಠಾಪನೆಯನ್ನು ವಾಸ್ತುಶಾಂತಿ, ವಿಧಾನಪೂರ್ವಕವಾಗಿ ನೆರವೇರಿಸಿ ಆ ಪ್ರಾಸಾದದ ಶಿಖರಾಗ್ರ ಭಾಗದಲ್ಲಿ ಸುದರ್ಶನ ಚಕ್ರದಿಂದ ಅಂಕಿತವಾದ ಭಗವದ್ ಧ್ವಜವನ್ನು ಹಾರಿಸಿದರು. ಅನಂತರ ಭರದ್ವಾಜ ಮಹಾಮುನಿಗಳು ಆ ಎಲ್ಲ ಭಗವದ್ ವಿಗ್ರಹಗಳಲ್ಲಿ ಪ್ರಾಣ ಪ್ರತಿಷ್ಠೆಯನ್ನು ಮಾಡಲು ಬ್ರಹ್ಮದೇವರನ್ನು ಬಿನ್ನವಿಸಿಕೊಂಡರು. ಆಗ ಬ್ರಹ್ಮದೇವರು ಎದ್ದು ನಾರದ ಮೊದಲಾದ ಋಷಿಗಳು ಹಾಗೂ ವಿದ್ವಾನ್ ಬ್ರಾಹ್ಮಣರ ಜೊತೆಗೆ ತಾವು ಮೊದಲು ಸ್ವಸ್ತಿವಾಚನವನ್ನು ಹೇಳಿದರು. ವಿದ್ವಾಂಸರು ವೇದೋಕ್ತವಾದ ಮಂತ್ರಸೂಕ್ತಗಳನ್ನೂ ಪಠಿಸತೊಡಗಿದರು. ಒಂದೊಂದಾಗಿ ಮಂಗಳ ವಾದ್ಯಗಳು ಮೊಳಗಲು ಮೊದಲಾಯಿತು. ಆ ಸಮಯದಲ್ಲಿ ಎಲ್ಲರೂ ರಥದ ಸಮೀಪಕ್ಕೆ ಹೋದರು. ಸುಂದರವಾಗಿ ನಿರ್ಮಿಸಿದ ಏಣಿಯ ಮೆಟ್ಟಿಲು ಮಾರ್ಗದಿಂದ ಆ ಭಗವನ್ ಮೂರ್ತಿಗಳನ್ನು ಸಾವಧಾನವಾಗಿ ಕೆಳಗೆ ಇಳಿಸಿಕೊಂಡು ಕರೆತಂದರು. ಎರಡೂ ಬಗಲು ತೋಳು ತಲೆ ಹಾಗೂ ಪಾದತಳಗಳಲ್ಲಿ ಕೈ ಹಾಕಿ ಮೆಲ್ಲ ಮೆಲ್ಲನೆ ಭಗವಾನ್ ಶ್ರೀ ನಾರಾಯಣನನ್ನು ಮೆತ್ತಗಿನ ಗಾದಿಯ ಮೇಲೆ ಒರಗಿಸಿಕೊಂಡು ಮಂದಿರ ಸಮೀಪಕ್ಕೆ ಕರೆದುಕೊಂಡು ಬಂದರು. ಮೇಲಿನಿಂದ ಪಾರಿಜಾತ ಹೂಗಳ ಮಳೆಯು ಸುರಿಯತೊಡಗಿತು. ಆಗ ಬ್ರಹ್ಮದೇವರು ಭಗವಂತನ ಜಯ ಜಯಕಾರವನ್ನು ಮಾಡಿದರು.

**ಬ್ರಹ್ಮ:-** ''ಜಗನ್ನಾಥನಿಗೆ ಜಯವಾಗಲಿ. ಶ್ರೀಕೃಷ್ಣನಿಗೆ ಜಯವಾಗಲಿ, ಲೀಲೆಯಿಂದ ಕಟ್ಟಿಗೆಯ ಮೈತಳೆದು ನಿಂತ ಮಾಧವನಿಗೆ ಜಯವಾಗಲಿ. ಜೀವರಾಶಿಯನ್ನು ಉದ್ಧರಿಸುವ

ಜಗದೀಶನಿಗೆ ಜಯವಾಗಲಿ. ದೀನರ ಉದ್ಧಾರಕ್ಕಾಗಿ ಸಿದ್ಧನಾಗಿ ಬಂದಿರುವ ಶ್ರೀಧರನಿಗೆ ಜಯವಾಗಲಿ. ಅಚ್ಯುತಾ! ಅನಂತ! ಈಶಾನ! ನಿನಗೆ ಜಯವಾಗಲಿ, ಜಯವಾಗಲಿ, ಜಯವಾಗಲಿ, ಪ್ರಭೋ! ನಿನಗೆ ನನ್ನ ನಮಸ್ಕಾರವು'' ಹೀಗೆ ಬ್ರಹ್ಮದೇವರು ಭಗವಂತನನ್ನು ಸ್ತೋತ್ರ ಮಾಡುತ್ತ ಜಯ ಜಯಕಾರವನ್ನು ಹೇಳಿದರು. ಬ್ರಹ್ಮದೇವರು ಭಗವಂತನ ಈ ಜಯ ಜಯಕಾರ ಮಾಡಿದ ಬಳಿಕ ಮತ್ತೆ ತಮ್ಮ ಮಧುರ ಕಂಠದಿಂದ ಸ್ತೋತ್ರಮಾಡಿ ಹೊಗಳಿ ಹಾಡಿದರು. ಬ್ರಹ್ಮ ದೇವರು ಹೀಗೆ ಭಗವಂತನ ಗುಣಗಾನ ಮಾಡುವಾಗ ನಾರದರು ತಮ್ಮ ತಂಬೂರಿಯ ತಂತಿಗಳನ್ನು ಮೀಟುತ್ತ ಆ ಬ್ರಹ್ಮ ಸಂಗೀತಕ್ಕೆ ವೀಣೆಯ ಶ್ರುತಿಯನ್ನು ಒದಗಿಸಿದರು. ಪರಮಾತ್ಮನ ತಲೆಯ ಮೇಲೆ ಹಿಂಬದಿಯಿಂದ ಎರಡು ರತ್ನ ಛತ್ರಗಳನ್ನು ಎತ್ತಿ ಹಿಡಿಯಲಾಗಿತ್ತು.

ಎರಡೂ ಪಾರ್ಶ್ವ ಭಾಗದಲ್ಲಿ ಚಾಮರ ಹಿಡಿದ ದೇವತೆಗಳು ಸಾಲಾಗಿ ನಿಂತುಕೊಂಡಿದ್ದರು. ಮೆಲ್ಲ ಮೆಲ್ಲನೆ ಚಾಮರ ಬೀಸುತ್ತ ಇದೇ ರೀತಿಯಾಗಿ ಬಲಭದ್ರ ಸುಭದ್ರಾ ಹಾಗೂ ಸುದರ್ಶನ ಚಕ್ರಗಳ ಶ್ರೀವಿಗ್ರಹಗಳನ್ನು ರಥದಿಂದ ಇಳಿಸಿ ತರಲಾಯಿತು. ಮಂದಿರದ ಮುಖ್ಯದ್ವಾರದ ಬಳಿಯಲ್ಲಿ ರತ್ನದ ಸ್ತಂಭಗಳ ಮೇಲೆ ಒಂದು ಶೃಂಗಾರಿತವಾದ ಮಂಟಪವನ್ನು ಸಜ್ಜುಗೊಳಿಸಲಾಗಿತ್ತು. ಅದರಲ್ಲಿ ಅಭಿಷೇಕಕ್ಕಾಗಿ ಶ್ರೀಜಗನ್ನಾಥನ ವಿಗ್ರಹವನ್ನೂ ತಂದು ಕೂಡಿಸಿದರು ಮೂರು ವಿಗ್ರಹಗಳೊಂದಿಗೆ. ಆ ಎಲ್ಲ ವಿಗ್ರಹಗಳ ಎದುರು ಒಂದೊಂದು ಕನ್ನಡಿಯನ್ನು ಇರಿಸಲಾಗಿತ್ತು. ಬಂಗಾರದ ಕಲಶಗಳಿಂದ ಪುರುಷಸೂಕ್ತ, ಶ್ರೀಸೂಕ್ತ, ವೇದೋಕ್ತಮಂತ್ರ ಹೇಳುತ್ತ ಸ್ವಯಂ ಬ್ರಹ್ಮದೇವರು ಆ ಮೂರ್ತಿಗಳಿಗೆ ಅಭಿಷೇಕ ಮಾಡಿದರು. ಅನಂತರ ಅವುಗಳಿಗೆ ವಸ್ತ್ರಗಳನ್ನು ಉಡಿಸಿ, ಅಲಂಕಾರಗಳನ್ನು ತೊಡಿಸಿ ಗಂಧವನ್ನು ಲೇಪಿಸಿ, ಮಾಲೆಗಳನ್ನು ಹಾಕಿ-ಶೃಂಗಾರಿತವನ್ನಾಗಿ ಮಾಡಿ ಸ್ವಯಂ ಬ್ರಹ್ಮದೇವರೇ ಕೊನೆಗೆ ತಾವೇ ಆರತಿ ಎತ್ತಿದರು. ಮತ್ತು ಮಂತ್ರಸೂಕ್ತಗಳನ್ನು ಹೇಳುತ್ತ ಆ ಎಲ್ಲ ವಿಗ್ರಹಗಳನ್ನು ರತ್ನಮಯವಾದ ಸಿಂಹಾಸನಗಳ ಪೀಠದ ಮೇಲೆ ಒಯ್ದು ಕೂಡಿಸಿದರು, ಮತ್ತು ಕೈ ಮುಗಿದು ನಂತರ ಪಾದಾದಿ ಕೇಶಾಂತ ವಿಗ್ರಹಗಳ ಅಂಗಾಂಗಳನ್ನೆಲ್ಲ ಮುಟ್ಟಿ ಬ್ರಹ್ಮದೇವರು ನ್ಯಾಸ ಮಂತ್ರಗಳನ್ನು ಹೇಳಿ, ನಾಲ್ಕೂ ವಿಗ್ರಹಗಳನ್ನು ರತ್ನಮಯ ಸಿಂಹಾಸನದ ಮೇಲೆ ಸ್ಥಾಪಿತಗೊಳಿಸಿದರು. ಮತ್ತು ಪ್ರಾರ್ಥಿಸಿಕೊಂಡರು.

ಬ್ರಹ್ಮ:- ಜಗದಾಧಾರನಾದ ಜನಾರ್ದನ! ನೀನು ಈ ಮಂದಿರದಲ್ಲಿ ಸುಸ್ಥಿರ ಭಾವದಿಂದ ವಿರಾಜಮಾನನಾಗು. ಈ ಪ್ರತಿಷ್ಠೆಯು ಸುಪ್ರತಿಷ್ಠೆ ಆಗಲಿ. ನೀನು ಇಲ್ಲಿ ಪ್ರತಿಷ್ಠಿತನಾದ ಬಳಿಕ. ನಾವೆಲ್ಲರೂ ಪ್ರತಿಷ್ಠಿತರಾಗುತ್ತೇವೆ. ನಿನ್ನ ಆಜ್ಞೆ ಹಾಗೂ ಪ್ರಸಾದದಿಂದ ಈ ಪ್ರತಿಷ್ಠೆಯೂ ಪರಿಪೂರ್ಣವಾಗಲಿ.''

ಈ ರೀತಿಯಾಗಿ ಬ್ರಹ್ಮದೇವರು ಜಗನ್ನಾಥಸ್ವಾಮಿಯ ಸ್ಥಾಪನೆಯನ್ನು ಮಾಡಿದರು ಅನಂತರ ಪ್ರತಿಷ್ಠಿತವಾದ ಆ ಪರಬ್ರಹ್ಮನ ಹೃದಯಕಮಲವನ್ನು ಮುಟ್ಟಿ ಕೆಳಗಿನ ಅನುಷ್ಟುಪ ಮಂತ್ರರಾಜ ಎಂದು ಹೆಸರಾದ ಚಿಕ್ಕಮಂತ್ರವನ್ನು ಸಾವಿರಸಲ ಜಪಿಸಿದರು.

ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋಮುಖಂ ।
ನೃಸಿಂಹ ಭೀಷಣಂ, ಭದ್ರಂ ಮೃತ್ಯು ಮೃತ್ಯುಂ ನಮಾಮ್ಯಹಂ ॥

ಈ ಮಂತ್ರದಿಂದ ಸಹಸ್ರ ಜಪಮಾಡಿ ಸಂದರ್ಶಕರ ಸರ್ವಪಾಪಗಳ ಭಸ್ಮವಾಗಿ ಹೋಗುವಂತೆ ಮಾಡಿದರು. ವೈಶಾಖ ಮಾಸದ ಶುಕ್ಲಪಕ್ಷದ ಅಷ್ಟಮಿ ದಿನ ದಂಡ ಪುಷ್ಯ

ಅನಂತರ ಸುಭದ್ರಾದೇವಿಯ ಪೂಜೆಯನ್ನು ಮಾಡಿ ನಮಸ್ಕರಿಸಿ ಅವಳನ್ನು ಹೀಗೆ ಸ್ತುತಿಗೈಯಬೇಕು- ''ದೇವಿ ಸುಭದ್ರಾದೇವಿಯೇ, ನಿನಗೆ ಜಯವಾಗಲಿ, ಸಂಸಾರದಿಂದ ಪಾರು ಮಾಡುವ ಮಹಾದೇವಿಯೇ! ನೀನು ಪ್ರಸನ್ನಳಾಗು. ನಿನಗೆ ನನ್ನ ನಮಸ್ಕಾರ.

ಅನಂತರ ಸಮುದ್ರ ಸ್ನಾನಕ್ಕೆ ಹೋಗಲು ಪರಮಾತ್ಮನನ್ನು ''ಪ್ರಭು ನನ್ನ ಸಮುದ್ರ ಸ್ನಾನವು ನಿರ್ವಿಘ್ನವಾಗಿ ಪೂರ್ಣವಾಗಲಿ, ನನಗೆ ಸಾಗರ ಸ್ನಾನಕ್ಕೆ ಅನುಮತಿಯನ್ನು ನೀಡು'' ಎಂದು ಅಪ್ಪಣೆ ಪಡೆದು ಸಮುದ್ರತೀರಕ್ಕೆ ಹೋಗಬೇಕು. ಅಲ್ಲಿ ಸಮುದ್ರಕ್ಕೆ ವಂದನೆಯನ್ನು ಮಾಡಿ ಸುದರ್ಶನ ಚಕ್ರವನ್ನು ಮನಸ್ಸಿನಲ್ಲಿಯೇ ನೆನೆದು ನಮಿಸಿ ಈ ಮಂತ್ರವನ್ನು ಹೇಳಿ ಪ್ರಾರ್ಥಿಸಬೇಕು.

''ಸುದರ್ಶನ ನಮಸ್ತೇಽಸ್ತು ಕೋಟಿ ಸೂರ್ಯ ಸಮಪ್ರಭ ।
ಅಜ್ಞಾನ ತಿಮಿರಾಂಧಸ್ಯ ವಿಷ್ಣೋರ್ಮಾರ್ಗಂ ಪ್ರದರ್ಶಯ ॥

ಹೀಗೆ ಸುದರ್ಶನವನ್ನು ಸ್ತೋತ್ರಮಾಡಿ ಸಮುದ್ರದನೀರಿನ ಬಳಿಗೆ ಹೋಗಿ ನೆಲದ ಮೇಲೆ ಮಂಡೆ ಊರಿ ಆ ಸಾಗರವನ್ನು ನಮಸ್ಕರಿಸಿ ಹೀಗೆ ಪ್ರಾರ್ಥಿಸಬೇಕು.

ತೀರ್ಥರಾಜ ಸಮಸ್ತುಭ್ಯಂ ಜಲ ರೂಪಾಯ ವಿಷ್ಣವೇ ।
ಜೀವನಾಯ ಚ ಜಂತೂನಾಂ ಪರಂ ನಿರ್ವಾಣ ಹೇತವೇ ॥

ಈ ಮಂತ್ರವನ್ನು ಪಠಿಸುತ್ತ ನೀರಿನೊಳಗೆ ಪ್ರವೇಶ ಮಾಡಬೇಕು. ಸಮುದ್ರದ ನೀರಿನೊಳಗೆ ನದಿ ಅಥವಾ ಸರೋವರಗಳಲ್ಲಿ ಮಾಡಿದಂತೆ ಮುಳುಗಿ ಜಪ ಮಾಡುವ ವಿಧಾನ ಶಾಸ್ತ್ರದಲ್ಲಿ ಹೇಳಿಲ್ಲ. ಸಮುದ್ರದ ದಂಡೆಯಲ್ಲಿ ಮೇಲೆ ಹೇಳಿದ ಮಂತ್ರವನ್ನು ಪಠಿಸುತ್ತಲೇ ಒಮ್ಮೆ ಮುಳುಗು ಹಾಕಿದರೆ ಸಾಕು. ಮೇಲೆ ಎದ್ದು ಆಚಮನ ಮಾಡಿ ''ತೀರ್ಥರಾಜನೆ, ನಿನಗೆ ನಮಸ್ಕಾರ. ನನ್ನ ಹಿಂದಿನ ಕೋಟಿ ಜನ್ಮಗಳಲ್ಲಿ ಮಾಡಿದ ಪಾಪರಾಶಿಯೆಲ್ಲವೂ ನಷ್ಟವಾಗಲಿ'' ಎಂದು ಪ್ರಾರ್ಥಿಸಿ ಸ್ನಾನ ಮಾಡಿ ಎದ್ದು ದಂಡೆಗೆ ಬಂದು ವಸ್ತ್ರವನ್ನು ಧರಿಸಬೇಕು. ಚತುರ್ಭುಜನಾದ ನಾರಾಯಣನ ಧ್ಯಾನ ಮಾಡಿ ಮಾನಸಿಕ ಪೂಜೆಯನ್ನು ಮಾಡಬೇಕು. ಈ ಮಾನಸ ಪೂಜೆಯ ವಿಧಾನವು ಹೀಗೆ ಇರುತ್ತದೆ.

## ಮಾನಸ ಪೂಜೆಯ ವಿಧಾನ

ದೇವ ದೇವನಾದ ಲಕ್ಷ್ಮೀಪತಿಗೆ ತನ್ನ ಮನಸ್ಸಿನಿಂದಲೇ ಒಂದು ರತ್ನ ಸಿಂಹಾಸನವನ್ನು ಕಲ್ಪಿಸಿ ''ರತ್ನ ಸಿಂಹಾಸನಂ ಸಮರ್ಪಯಾಮಿ'' ಎಂದು ಹೇಳಿ ನಿವೇದಿಸಿ ಆ ಪರಮಾತ್ಮನು ಸಿಂಹಾಸನರೂಢನಾಗಿ ಕುಳಿತಿದ್ದಾನೆ ಎಂದು ಚಿಂತಿಸಬೇಕು. ಅವನಿಗೆ ಬಹಿರಂಗ ಪೂಜೆಯಲ್ಲಿ ಸಲ್ಲಿಸುವಂತೆ 'ಅರ್ಘ್ಯಂ ಸಮರ್ಪಯಾಮಿ,' 'ಪಾದ್ಯಂ ಸಮರ್ಪಯಾಮಿ' ಎಂದು ಮುಂತಾಗಿ ಮನಸ್ಸಿನಲ್ಲಿಯೇ ಹೇಳಿ ಅರ್ಘ್ಯವನ್ನು ಭಗವಂತನಿಗೆ ಸಮರ್ಪಣೆ ಮಾಡಬೇಕು. ಅರ್ಘ್ಯವನ್ನು ಬೆಳ್ಳಿ ಬಂಗಾರ ತಾಮ್ರ ಅಥವಾ ಶಂಖದ ಪಾತ್ರೆಯಲ್ಲಿ ನೀರನ್ನು ಹಾಕಿ ಅದರಲ್ಲಿ ಗಂಧ, ಹೂ, ಕರಿಕೆ, ಅಕ್ಕಿಕಾಳು, ಹಣ್ಣು ಮೊದಲಾದವುಗಳನ್ನು ಹಾಕಿ ಆ ನೀರನ್ನು ತಲೆಯ ಮೇಲೆ ಪ್ರೋಕ್ಷಿಸಬೇಕು. ಉಳಿದ ನೀರನ್ನು ದೇವರ ಎದುರೇ ನೆಲದ ಮೇಲೆ ಸಿಂಪಡಿಸಬೇಕು. ಇದು ಅರ್ಘ್ಯದ ವಿಧಿ. ಅನಂತರ ಕಮಲ ದೂರ್ವಾಶ್ಯಾಮಾಕ ಮುಂತಾದವುಗಳನ್ನು ಹಾಕಿದ ಸ್ವಚ್ಛವಾದ ಪವಿತ್ರ ನೀರನ್ನು ಭಗವಂತನ ಪಾದಾರ ವಿಂದಗಳಲ್ಲಿ ನಿವೇದಿಸಬೇಕು. ಸುಗಂಧಿ ನೀರನ್ನು ದೇವರಿಗೆ ಆಚಮನಕ್ಕಾಗಿ ನೀಡಬೇಕು.

ಅನಂತರ ರೇಶ್ಮೆ ಇಲ್ಲವೆ ಅರಳೆಯಿಂದ ಮಾಡಿದ ಎರಡು ವಸ್ತ್ರಗಳನ್ನು ಸಮರ್ಪಿಸಬೇಕು. ಆ ಬಳಿಕ ಯಥಾಶಕ್ತಿ ಹಾರ, ಕೇಯೂರ, ಮುಕುಟ ಕಂಠಾಭರಣಾದಿಗಳನ್ನು ತೊಡಿಸಬೇಕು ಪರಮಾತ್ಮನ ಅಂಗಾಂಗಳಿಗೆ. ಅನಂತರ ಯಜ್ಞೋಪವೀತ, ಗಂಧ, ಕಸ್ತೂರಿ, ಚಂದನ, ಕುಂಕುಮ ಮುಂತಾದವುಗಳನ್ನು ನಿವೇದಿಸಬೇಕು. ಸುಗಂಧ ಪುಷ್ಪಗಳ ಮಾಲೆ ಮಾಡಿ ತುಳಸಿ ಮಾಲೆಯೊಂದಿಗೆ ಭಗವಂತನ ಕೊರಳಲ್ಲಿ ಹಾಕಬೇಕು. ಬಿಡಿ ಹೂಗಳನ್ನು ಬೊಗಸೆ ತುಂಬ ತೆಗೆದುಕೊಂಡು ದೇವರ ತಲೆಯ ಮೇಲೆ ಪುಷ್ಪವೃಷ್ಟಿ ಮಾಡಿದಂತೆ ಚಲ್ಲಬೇಕು.

ಕಂಠದಿಂದ ಕಾಲಿನವರೆಗೆ ಉದ್ದವಾದ ಹೂವಿನ ಅಥವಾ ತುಳಸಿಯ ಹಾರಕ್ಕೆ ಮಾಲಾ ಎಂದೂ ಕಂಠದಿಂದ ತೊಡೆ ಅಥವಾ ಮೊಳಕಾಲವರೆಗೆ ಇರುವ ಹೂವಿನ ಸರಕ್ಕೆ ಮಾಲ್ಯ ಎಂದೂ ಕೇವಲ ಕೂದಲುಗಳಲ್ಲಿ ಮಾತ್ರ ಮುಡಿಯಬಹುದಾದ ಚಿಕ್ಕ ಹೂವಿನ ಹಾರಕ್ಕೆ ಗರ್ಭಕ ಎಂದೂ ಹೇಳುತ್ತಾರೆ. ಹೀಗೆ ಪುಷ್ಪಾಂಜಲಿಯನ್ನು ಸಮರ್ಪಿಸಿದ ಬಳಿಕ ಗುಗ್ಗಳು, ಅಗರು ಚಂದನದ ಹುಡಿ, ಜೇನುತುಪ್ಪ, ತುಪ್ಪ ಶರ್ಕರ ಮುಂತಾದ ಸುಗಂಧಿ ದ್ರವ್ಯಗಳನ್ನು ಹಾಕಿ ಸಿದ್ಧಪಡಿಸಿದ ದಶಾಂಗವನ್ನು ಕೆಂಡದ ಮೇಲೆ ಇಟ್ಟು ಧೂಪಾರತಿಯನ್ನು ಬೆಳಗಬೇಕು. ಅನಂತರ ಹಸುವಿನ ತುಪ್ಪದಿಂದ ಬತ್ತಿ ತೋಯಿಸಿ ದೀಪವನ್ನು ಬೆಳಗಿಸಬೇಕು. ಅಥವಾ ಎಣ್ಣೆಯ ದೀಪವನ್ನು ಹಾಗೂ ಎಣ್ಣೆಯಲ್ಲಿ ತೋಯಿಸಿದ ಬತ್ತಿಗಳನ್ನು ಹಚ್ಚಿ ಆರತಿಯನ್ನು ಬೆಳಗಬೇಕು.

## ನೈವೇದ್ಯ ಸಮರ್ಪಣ

ಅನಂತರ ತುಪ್ಪದಲ್ಲಿ ತಯಾರ ಮಾಡಿದ ಪಕ್ವಾನ್ನಗಳನ್ನು ಅಕ್ಕಿಯ ಅನ್ನವನ್ನೂ ಆಕಳ ಹಾಲು ಮೊಸರನ್ನೂ ಹಸುವಿನ ಹಾಲಿನಲ್ಲಿ ಬೇಯಿಸಿ ಸಕ್ಕರೆ ಕೂಡಿಸಿ ಮಾಡಿದ ಪಾಯಸ ಮೊದಲಾದ ಮೃಷ್ಟಾನ್ನಗಳನ್ನೂ. ಬಗೆ ಬಗೆಯ ವ್ಯಂಜನ ಪದಾರ್ಥಗಳಿಂದ ಯುಕ್ತವಾದ ಅನೇಕ ಭಕ್ಷ್ಯ ಭೋಜ್ಯ, ಪದಾರ್ಥಗಳನ್ನೂ ಮನಸ್ಸಿನಲ್ಲಿಯೆ ತಯಾರಿಸಿ ಭಗವಂತನಿಗೆ ನೈವೇದ್ಯ ಸಮರ್ಪಣವನ್ನು ಮಾಡಬೇಕು. ಧೂಪ, ದೀಪ, ನೈವೇದ್ಯ ಸ್ನಾನ, ಅರ್ಘ್ಯ ಮಧುಪರ್ಕ ವಸ್ತ್ರ ಯಜ್ಞೋಪವೀತ ಇವುಗಳನ್ನು ಒಂದೊಂದನ್ನು ಅರ್ಪಣ ಮಾಡಿದ ಕೂಡಲೇ ದೇವರಿಗೆ ಆಚಮನವನ್ನು ಸಮರ್ಪಿಸಬೇಕು. ಉಳಿದ ಕಡೆ ಆಚಮನಕ್ಕೆ ಬರೀ ನೀರು ಕೊಟ್ಟರೂ ಸಾಕು. ಆದರೆ ನೈವೇದ್ಯದ ಅನಂತರ ಕರೋದ್ವರ್ತನಕ್ಕಾಗಿ ಚಂದನವನ್ನೂ ಗಂಡೂಷ ಜಲವನ್ನೂ ಮತ್ತೆ ಮತ್ತೆ ಸಮರ್ಪಿಸಬೇಕು. ಕೊನೆಗೆ ಲವಂಗ ಯಾಲಕ್ಕಿ, ಜಾಜಿಕಾಯಿ. ಪಚ್ಚಕರ್ಪೂರ ಮುಂತಾದ ಸುವಾಸನೆಯ ವಸ್ತುಗಳೊಂದಿಗೆ ಎಲೆ ಅಡಿಕೆಗಳನ್ನು ನೀಡಬೇಕು. ಅನಂತರ ನೂರ ಎಂಟು ಬಾರಿ ಮೂಲ ಮಂತ್ರವನ್ನು ಎಂದರೆ ನಾರಾಯಣ ಅಷ್ಟಾಕ್ಷರೀ ಮಂತ್ರವನ್ನು ಜಪಿಸಬೇಕು.

ಕೊನೆಗೆ ಸ್ತೋತ್ರ ಪಾಠವನ್ನು ಪ್ರದಕ್ಷಿಣೆ ನಮಸ್ಕಾರಾದಿಗಳನ್ನು ಮಾಡಿ ಭಗವಂತನನ್ನು ಹೀಗೆ ಪ್ರಾರ್ಥಿಸಬೇಕು- "ಎಲ್ಲ ತೀರ್ಥಗಳ ಪ್ರವರ್ತಕನಾದ ಜಗನ್ನಾಥನೆ! ನೀನು ಸರ್ವ ತೀರ್ಥಮಯ. ಮತ್ತು ದೇವಮಯ. ಪಾಪರಾಶಿಯಲ್ಲಿ ಮುಳುಗಿದ ಈ ನಿನ್ನ ಸೇವಕನನ್ನು ರಕ್ಷಿಸು. ನಿನಗೆ ನನ್ನ ನಮಸ್ಕಾರ." ಈ ಎಲ್ಲ ಪ್ರಕಾರಗಳಿಂದ ಪರಮಾತ್ಮನ ಮಾನಸಿಕ ಪೂಜೆಯನ್ನು ಮಾಡಿ ನಂತರ ಅಲ್ಲಿಯೇ ಪ್ರತಿಮೆ ಸಾಲಿಗ್ರಾಮವನ್ನಿಟ್ಟು ಬಾಹ್ಯಪೂಜೆಯನ್ನು ಶಾಸ್ತ್ರೋಕ್ತ ವಿಧಾನವನ್ನು ಅನುಸರಿಸಿ ಮಾಡಬೇಕು.

ತೀರ್ಥರಾಜನಾದ ಸಮುದ್ರದಲ್ಲಿ ಸ್ನಾನ ಮಾಡುವದರಿಂದ ಮಾನವನು ಸರ್ವ ತೀರ್ಥಗಳ ಸ್ನಾನ ಫಲವನ್ನು ಹೊಂದುತ್ತಾನೆ. ಕೋಟಿಗೋದಾನ, ಕೋಟಿಯಜ್ಞ, ಕೋಟಿ ಮಹಾದಾನಗಳಿಂದ ಬರುವ ಪುಣ್ಯಕ್ಕಿಂತ ಮಿಗಿಲಾದ ಪುಣ್ಯವು ಸಮುದ್ರಸ್ನಾನ ಪೂರ್ವಕ ಭಗವತ್ ಪೂಜೆಯಿಂದ ಪ್ರಾಪ್ತವಾಗುವದು. ಪಂಚಮಹಾ ಪಾತಕಗಳನ್ನು ಮಾಡಿದವರು ಸಮುದ್ರ ಸ್ನಾನ ಮಾಡಿದರೆ ಪಾಪ ರಹಿತರಾಗುತ್ತಾರೆ. ಈ ಸ್ನಾನದ ಮೊದಲು ಮತ್ತು ಕೊನೆಗೆ ಜಗನ್ನಾಥನ ಪೂಜೆ ಹಾಗೂ ಧ್ಯಾನವನ್ನು ಮಾಡಿದರೆ ಮನುಷ್ಯನು ಮೋಕ್ಷಕ್ಕೆ ಭಾಗಿಯಾಗುತ್ತಾನೆ.

## ಇಂದ್ರದ್ಯುಮ್ನ ಸರೋವರದಲ್ಲಿ ಸ್ನಾನ ನೃಸಿಂಹ ದರ್ಶನ

**ಜೈಮಿನಿ:-** ಹೀಗೆ ಸಮುದ್ರ ಸ್ನಾನ ಹಾಗೂ ಭಗವತ್ ಪೂಜೆಗಳನ್ನು ಮಾಡಿದ ಬಳಿಕ ಯಾತ್ರಿಕರು ಅಶ್ವಮೇಧ ಯಜ್ಞದ ಅಂಗದಿಂದ ನಿರ್ಮಾಣಗೊಂಡ ಇಂದ್ರದ್ಯುಮ್ನ ಸರೋವರಕ್ಕೆ ಹೋಗಬೇಕು. ಅಲ್ಲಿ ವಾಸ ಮಾಡಿದ ನೃಸಿಂಹ ದೇವರನ್ನು "ಶ್ರೀ ನೃಸಿಂಹನೇ! ನಿನಗೆ ನಮಸ್ಕಾರ ಈ ಸರೋವರದಲ್ಲಿ ಸ್ನಾನ ಮಾಡಲು ಅಪ್ಪಣೆ ನೀಡು."

ಹೀಗೆ ಪ್ರಾರ್ಥಿಸಿ ಸರೋವರಕ್ಕೆ ಹೋಗಬೇಕು. ಅಲ್ಲಿ ಕೈ ತೊಳೆದು ಆಚಮನ ಮಾಡಿ ಆ ಸರೋವರನ್ನು ಪ್ರಾರ್ಥಿಸಬೇಕು - "ತೀರ್ಥಪ್ರವರ! ಇಂದ್ರದ್ಯುಮ್ನನ ಅಶ್ವಮೇಧ ಯಜ್ಞದಲ್ಲಿ ದಾನ ಕೊಡಲಿಕ್ಕಾಗಿ ಕೋಟಿ ಆಕಳುಗಳನ್ನು ತಂದು ಇಲ್ಲಿ ನಿಲ್ಲಿಸಿದ್ದರು. ಆ ಹಸುಗಳ ಖುರಪುಟಗಳಿಂದ ಕೆದರಿದ ನೆಲದ ತಗ್ಗಿನಲ್ಲಿ ಆ ಹಸುಗಳ ಮೂತ್ರ ಹಾಗೂ ಬಾಯಿಯ ಬುರುಗು ಬಿದ್ದು ಅದರಲ್ಲಿ ಗೋದಾನ ನೀಡಿದ ಸಂಕಲ್ಪದ ನೀರು ಸೇರಿ ಈ ಪವಿತ್ರವಾದ ತೀರ್ಥವು ರೂಪಗೊಂಡಿದೆ. ಇದರಲ್ಲಿ ಸ್ನಾನ ಮಾಡಲು ಬಂದ ನನಗೆ ಅಪ್ಪಣೆ ನೀಡು. ಈ ಸ್ನಾನದಿಂದ ನನ್ನ ಎಲ್ಲ ಪಾಪಗಳನ್ನು ಪರಿಹರಿಸು."

ಹೀಗೆ ಪ್ರಾರ್ಥಿಸಿ ನೀರಲ್ಲಿ ಹೊಕ್ಕು ಮುಳುಗಿ ಸ್ನಾನ ಮಾಡಬೇಕು. ಉಸಿರು ಬಿಗಿ ಹಿಡಿದು ಸೊಂಟದ ವರೆಗೆ ನೀರಿನಲ್ಲಿ ನಿಂತು ಮುಳುಗು ಹಾಕಿ ಮೂರು ಸಲ ಅಘಮರ್ಷಣ ಮಂತ್ರವನ್ನು ಜಪಿಸಬೇಕು. "ಅಶ್ವಮೇಧದ ಅಂಗದಿಂದ ಹುಟ್ಟಿದ ತೀರ್ಥವೇ, ನಿನ್ನ ಸ್ನಾನದಿಂದ ನನ್ನ ಪಾಪಗಳು ನಷ್ಟವಾಗಲಿ" ಹೀಗೆ ತೀರ್ಥವನ್ನು ಮೂರು ಬಾರಿ ಪಾರ್ಥಿಸಿ ಮುಳುಗು ಹಾಕಬೇಕು. ಶ್ರೀ ನೃಸಿಂಹ ದೇವರನ್ನು ಸ್ಮರಿಸಬೇಕು. ಅನಂತರ ದೇವತೆಗಳಿಗೂ ಋಷಿಗಳಿಗೂ ಪಿತೃಗಳಿಗೂ ವಿಧಿ ಪೂರ್ವಕವಾಗಿ ತರ್ಪಣವನ್ನು ಜಲಾಂಜಲಿಗಳಿಂದ ನೀಡಬೇಕು. ಆ ಬಳಿಕ ಪಶ್ಚಿಮಾಭಿಮುಖನಾಗಿ ನಿಂತ ನೃಸಿಂಹ ದೇವರನ್ನೂ ಅಥರ್ವಣ ಮಂತ್ರಗಳಿಂದ ಪೂಜಿಸಬೇಕು. ಹಿಂದಿನ ಅಧ್ಯಾಯಗಳಲ್ಲಿ ಹೇಳಿದ ಎಲ್ಲ ಉಪಚಾರಗಳನ್ನು ಅರ್ಪಿಸಿ ಬಗೆ ಬಗೆಯ ಪಕ್ವಾನ್ನಗಳನ್ನು ತಯಾರಿಸಿ ನೈವೇದ್ಯವನ್ನು ಸಮರ್ಪಿಸಬೇಕು ನೃಸಿಂಹ ದೇವರಿಗೆ. ಭಗವಾನ್ ಶ್ರೀ ನೃಸಿಂಹ, ದರ್ಶನ, ಚರಣ ಸ್ಪರ್ಶನ, ನಮಸ್ಕಾರ, ಪೂಜೆ, ಭಜನಗಳಿಂದ ಮಾನವನ ಎಲ್ಲ ಮನೋರಥಗಳು ಪೂರ್ಣವಾಗುವವು. ಅನಂತರ ಪೂರ್ಣಮಾದಿ ತಿಥಿಗಳಂದು ಪ್ರಾತಃಕಾಲದಲ್ಲಿ ಸ್ನಾನಮಾಡಿ ದೇವರನ್ನು ಪೂಜಿಸಿ ಇಂದ್ರಿಯಗಳನ್ನು ನಿಗ್ರಹಿಸಿ, ಭಗವಂತನ ಪ್ರೀತಿಗಾಗಿ ಐದುದಿನ

ಒಂದೇ ಹೊತ್ತು ಊಟ ಮಾಡಬೇಕು. ಅನಂತರ ಮಂದಿರದಲ್ಲಿ ಪ್ರವೇಶಿಸಿ ಮಂಚದ ಮೇಲೆ ವಿರಾಜಮಾನನಾದ ಶ್ರೀಕೃಷ್ಣ ಬಲರಾಮ ಹಾಗೂ ಸುಭದ್ರಾ ದೇವಿಯರನ್ನು ದರ್ಶನ ಮಾಡಿ ಕೊಳ್ಳಬೇಕು. ಅದರಿಂದ ಮನುಷ್ಯನು ಪಾಪ ಮುಕ್ತನಾಗುವನು.

## ಭಗವನ್ಮೂರ್ತಿಗೆ ಸ್ನಾನ ಮಾಡಿಸುವ ವಿಧಾನ

ಚತುರ್ದಶಿ ದಿನ ಹುಲ್ಲು ಅಥವಾ ಕಟ್ಟಿಗೆಯ ಗಟ್ಟಿಯಾದ ಮಂಚವನ್ನು ಮಾಡಿ ಹಸಿರು ಹುಲ್ಲು ಬೆಳೆದ ನೆಲದ ಮೇಲೆ ಸ್ಥಾಪಿಸಬೇಕು. ಅದನ್ನು ಅಲಂಕರಿಸಿ ಅದರ ದಕ್ಷಿಣ ಭಾಗದಲ್ಲಿ ಬಾವಿಗಳಿಂದ ನೀರನ್ನು ತೆಗೆದು ಕಲಶಗಳನ್ನು ತುಂಬಿ ಒಳಗೆ ಇಡಬೇಕು. ಆ ಕಲಶಗಳಲ್ಲಿ ಪವಮಾನ ಮಂತ್ರಗಳಿಂದ ಸುವಾಸಿತ ನೀರನ್ನು ತುಂಬಬೇಕು. ಇದೆಲ್ಲವನ್ನು ಚತುರ್ದಶಿಯ ರಾತ್ರಿಯೇ ಮಾಡಿ ಇಟ್ಟುಕೊಳ್ಳಬೇಕು. ಅನಂತರ ರಾಮ ಕೃಷ್ಣರನ್ನು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಯಾರಾದರು ಕರೆದುಕೊಂಡು ಬರಬೇಕು. ದೇವರ ಶರೀರದ ಮೇಲೆ ಮೊದಲೇ ಮಾಡಿದ ಲೇಪವನ್ನು ಬಿಡಿಸಬಾರದು. ಸುಗಂಧಿತ ಲೇಪಗಳಿಂದ ದೇವರ ಅಂಗವು ಪುಷ್ಟ ಆಗುವಂತೆ ಮಾಡಬೇಕು.

ದೇವರ ಮೂರ್ತಿಯನ್ನು ಎತ್ತಿಕೊಂಡು ಒಯ್ಯುವ ಮನುಷ್ಯರು ಸಾವಧಾನನೂ ಸದಾಚಾರಿಯೂ ಆಗಿರಬೇಕು. ಆ ಪ್ರತಿಮೆಗಳನ್ನು ಒಯ್ದು ಹೊರಗೆ ಹುಲ್ಲು ಹಾಸಿನಲ್ಲಿ ಇರಿಸಿದ ಮಂಚದ ಮೇಲೆ ಕೂಡಿಸಬೇಕು. ಶಾಂತಿ ಪೂರ್ವಕವಾಗಿ ಆಧಿವಾಸಿತಗೊಳಿಸಿದ ಕಲಶಗಳ ನೀರಿನಿಂದ ಸಮುದ್ರ ಜ್ಯೇಷ್ಠಾ ಎಂಬ ವೇದಮಂತ್ರವನ್ನು ಹೇಳಿ ಭಗವಂತನ ಮೂರ್ತಿಗಳಿಗೆ ಸ್ನಾನ ಮಾಡಿಸಬೇಕು. ಈ ಸ್ನಾನವನ್ನು ಮಾಡಿಸುವವನೂ, ಸ್ನಾನ ಮಾಡಿಸುವಾಗ ದೇವರ ಮೂರ್ತಿಯನ್ನು ನೋಡುವವನೂ ಸಂಸಾರ ಸಮುದ್ರದಲ್ಲಿ ಪುನಃ ಎಂದೂ ಬೀಳುವದಿಲ್ಲ. ಆ ಮೂರ್ತಿಗಳು ಮೂರಾದರೂ ಮೂವರು ಮೂರ್ತಿಗಳಲ್ಲಿ ಒಬ್ಬನೇ ಜಗನ್ನಾಥ ಸ್ವಾಮಿಯು ಪೂರ್ಣತಯಾ ಆಂಶಿಕವಾಗಿ ನಿಂತುಕೊಂಡಿದ್ದಾನೆ. ಈ ಭಗವಂತನಿಗೆ ಸ್ನಾನ ಮಾಡಿಸುವಾಗ ಜಯರಾಮಭದ್ರ! ಜಯಸುಭದ್ರೆ! ಜಯ ಕೃಷ್ಣ! ಜಯ ಜಗನ್ನಾಥ! ಎಂದು ಮುಂತಾಗಿ ಉಚ್ಚಕಂಠದಿಂದ ಉಚ್ಚರಿಸುತ ಇರಬೇಕು. ಇದರಿಂದ ಸದ್ಗತಿಯು ಪ್ರಾಪ್ತವಾಗುವದು.

## ಶ್ರೀ ಜಗನ್ನಾಥನ ರಥಯಾತ್ರೆ ಗುಂಡಿಚಾ ಮಹೋತ್ಸವ

**ಜೈಮಿನಿ:-** ಹೀಗೆ ಸ್ನಾನಮಾಡಿಸಿ ಆ ಮೂರು ದೇವತೆಗಳನ್ನು ಹಿಂದೆ ಹೇಳಿದ ಬಗೆಬಗೆಯ ಉಪಚಾರಗಳನ್ನು ಅರ್ಪಿಸಿ ಪೂಜೆ ಮಾಡಬೇಕು. ಅನಂತರ ಉತ್ಸವದಿಂದ ಭಗವನ್ಮೂರ್ತಿಗಳನ್ನು ಮಂದಿರದ ಒಳಗೆ ಕರೆದುಕೊಂಡು ಹೋಗಬೇಕು. ಆರತಿಯನ್ನು ಮಾಡಿ ಪುನಃ ಸ್ವಸ್ಥಾನಗಳಲ್ಲಿ ಆ ಮೂರು ಮೂರ್ತಿಗಳನ್ನು ಕುಳ್ಳಿರಿಸಬೇಕು. ಆಮೇಲೆ ಪುನಃ ಬೆಳಗಾಗುವರೆಗೆ ದೇವರ ಕಡೆಗೆ ನೋಡಬಾರದು. ಜ್ಯೇಷ್ಠ ಶುಕ್ಲಪಕ್ಷದ ಪೂರ್ಣಿಮೆಯಂದು ಜಗನ್ನಾಥನ ದರ್ಶನ ಹಾಗೂ ಪೂಜೆ ಮಾಡುವ ಮನುಷ್ಯರು ಎಲ್ಲ ಪಾಪಗಳಿಂದ ಬಿಡುಗಡೆ ಹೊಂದುವರು. ವೈಶಾಖದ ಶುಕ್ಲಪಕ್ಷ ಪೌರ್ಣಿಮೆಯಂದು ರೋಹಿಣಿ ನಕ್ಷತ್ರ ಯೋಗವಿದ್ದಾಗ ರಾಜರು ಸಂಕಲ್ಪಪೂರ್ವಕವಾಗಿ ಓರ್ವ ಆಚಾರ್ಯರನ್ನು ವರಣವನ್ನು ಮಾಡಬೇಕು. ಮೂವರು ಬಡಿಗರಿಂದ ಹಿಂದೆ ಹೇಳಿದಂತೆ ಕೃಷ್ಣ ಬಲರಾಮ ಸುಭದ್ರೆಯರಿಗಾಗಿ ಮೂರು ರಥಗಳನ್ನು ತಯಾರು ಮಾಡಿಸಬೇಕು.

ನಕ್ಷತ್ರದ ಯೋಗದಲ್ಲಿ ಗುರುವಾರದ ದಿನ ಶ್ರೀ ಜಗನ್ನಾಥ ಸ್ವಾಮಿಯ ಪ್ರತಿಷ್ಠೆಯು ಮಾಡಲ್ಪಟ್ಟಿತು. ಆದುದರಿಂದ ಆ ದಿನ ಪರಮ ಪವಿತ್ರ. ಸರ್ವಪಾಪ ಪರಿಹಾರಕ. ಅಂದು ಮಾಡಿದ ಸ್ನಾನ, ದಾನ, ಜಪ, ತಪ, ಹೋಮಾದಿ ಸರ್ವಕಾರ್ಯಗಳು ಅನಂತ ಪುಣ್ಯದಾಯಕವಾಗುತ್ತವೆ. ಆ ದಿನದಂದು ಭಕ್ತಿಯಿಂದ ಶ್ರೀಕೃಷ್ಣ, ಬಲರಾಮ, ಸುಭದ್ರಾ, ಸುದರ್ಶನಗಳ ದರ್ಶನ ಮಾಡಿಕೊಂಡವರು ಮೋಕ್ಷ ಭಾಗಿಗಳಾಗುವರು. ಪೂಜೆ ಮಾಡಿದವರು ಮುಕ್ತರಾಗುವರು.

**ಜೈಮಿನಿ:-** ಪ್ರತಿಷ್ಠೆಯ ಕಾರ್ಯಗಳೆಲ್ಲ ಮುಗಿದ ಬಳಿಕ ಇಂದ್ರದ್ಯುಮ್ನನು ಮನಸ್ಸಿನಲ್ಲಿಯೇ ಆಶ್ಚರ್ಯಚಕಿತನಾಗಿ ಬ್ರಹ್ಮದೇವರನ್ನು ಕೇಳಿದನು- "ಹಂಸ ವಾಹನ! ಯಜ್ಞದ ಕೊನೆಗೆ ಭಗವಾನ್ ವಿಷ್ಣುವು ರಥಾರೂಢವಾದ ಕಾಷ್ಠನಿರ್ಮಿತ ಮೂರ್ತಿಗಳಂತೆಯೇ ವಿಗ್ರಹವನ್ನು ಧರಿಸಿ ಪ್ರಕಟನಾದನು. ತಾವು ಮಂದಿರದಲ್ಲಿ ಕೂಡ ಅವೇ ವಿಗ್ರಹಗಳ ರೂಪದಲ್ಲಿ ಭಗವಂತನ ಪ್ರತಿಷ್ಠೆಯನ್ನು ಮಾಡಿದಿರಿ. ಮೊದಲು ಆಕಾಶವಾಣಿಯು ಕೂಡ ನನಗೆ "ಪರಮಾತ್ಮನು ಈ ಅಪೌರುಷೇಯ ವೃಕ್ಷದಿಂದ ನಾಲ್ಕು ಸ್ವರೂಪಗಳಲ್ಲಿ ವ್ಯಕ್ತವಾಗುವನು " ಎಂದು ಹೇಳಿದ್ದಿತು. ಆದರೆ ಈಗ ಒಂದು ಸಚ್ಚಿದಾನಂದ ಘನವಾದ ಬ್ರಹ್ಮರೂಪದಲ್ಲಿ ಪ್ರತಿಷ್ಠಿತವಾದದ್ದು ಕಂಡು ಬರುತ್ತದೆ. ಪ್ರಭು! ತಾವು ನನ್ನನ್ನು ಈ ರಹಸ್ಯವನ್ನು ತಿಳಿಯಲು ಅಧಿಕಾರಿ ಎದು ಭಾವಿಸಿದ್ದರೆ ನನಗೆ ಸರಿಯಾಗಿ ತಿಳಿಸಿ ಹೇಳಬೇಕು ಈ ಗುಹ್ಯ ವಿಷಯವನ್ನು.

**ಬ್ರಹ್ಮ:-** ರಾಜನ್! ಇದೊಂದು ಕಟ್ಟಿಗೆಯ ಮೂರ್ತಿ ಎಂದು ವಿಚಾರಿಸಿ ನಿನ್ನ ಮನಸ್ಸಿನಲ್ಲಿ ಇದರ ಬಗೆಗೆ ಸಾಧಾರಣ ಪ್ರತಿಮಾ ಬುದ್ಧಿಯನ್ನು ಮಾಡಬೇಡ. ವಾಸ್ತವಿಕವಾಗಿ ಇದು ಪರಬ್ರಹ್ಮ ಸ್ವರೂಪವೇ. ವಿದಾರಣ ಮಾಡುವದಕ್ಕೂ ಅಂದರೆ ಸೀಳುವ ಕಾರ್ಯವನ್ನು ಮಾಡುವದಕ್ಕೂ ದಾನ ನೀಡುವದಕ್ಕೂ 'ದಾರು' ಎನ್ನುತ್ತಾರೆ ಸಂಸ್ಕೃತದ ವ್ಯಾಕರಣದಲ್ಲಿ. ಪರಬ್ರಹ್ಮನಾದ ಶ್ರೀ ವಿಷ್ಣುವು ತನ್ನ ಸ್ವಭಾವದಿಂದಲೇ ಎಲ್ಲರ ದುಃಖಗಳನ್ನು ನಿವಾರಣ ಮಾಡುತ್ತಾನೆ. ಮತ್ತು ಮೋಕ್ಷರೂಪವಾದ ಆನಂದದ ದಾನವನ್ನು ಮಾಡುತ್ತಾನೆ. ಆದುದರಿಂದ ಇಲ್ಲಿ ಆ ಪರಮಾತ್ಮನು ದಾರುಮಯನಾಗಿದ್ದಾನೆ. ನಾಲ್ಕು ವೇದಗಳು ಈ ದಾರುಮಯ ಶ್ರೀಹರಿಯನ್ನು ಪ್ರತಿಪಾದನ ಮಾಡುತ್ತವೆ. ಈ ನಾಲ್ಕು ವೇದಗಳ ಅನುಸಾರವಾಗಿಯೂ ಶ್ರೀಹರಿಯು ದಾರುಮಯ. ಭಗವಾನ್! ಬಲಭದ್ರನು ಋಗ್ವೇದ ಸ್ವರೂಪನಾಗಿದ್ದಾನೆ. ಶ್ರೀನೃಸಿಂಹದೇವರು ಸಾಮವೇದ ಸ್ವರೂಪನಾಗಿದ್ದಾನೆ. ಸುಭದ್ರಾದೇವಿಯು ಯಜುರ್ವೇದ ಮೂರ್ತಿಯಾಗಿದ್ದಾಳೆ. ಈ ಸುದರ್ಶನ ಚಕ್ರವು ಅಥರ್ವಣವೇದ ಸ್ವರೂಪದ್ದಾಗಿದೆ. ವೇದಗಳು ನಾಲ್ಕು ಎನ್ನುವುದೇ ಮೊದಲು ಭೇದ ದೃಷ್ಟಿ. ವಾಸ್ತವಿಕವಾಗಿ ಎಲ್ಲ ವೇದವು ಒಂದು ಜ್ಞಾನರಾಶಿ. ಅದರಂತೆ ಈ ಎಲ್ಲ ಭಗನ್ಮೂರ್ತಿಗಳು ಒಂದೇ. ಒಂದು ಪರಬ್ರಹ್ಮ ಶಕ್ತಿಯು ನಾಲ್ಕು ಅಧಿಷ್ಠಾನಗಳಲ್ಲಿ ಕಾಣಿಸಿಕೊಂಡಿದೆ. ನಾನು ಈ ರೀತಿಯಾಗಿ ನಿನಗೆ ಜಗನ್ನಾಥನ ಭೇದ ಅಭೇದ ಎರಡನ್ನು ಹೇಳಿದ್ದೇನೆ. ಈ ಭೇದಾಭೇದಗಳೆರಡೂ ದೃಷ್ಟಿ ಭೇದ ಮೂಲಕ. ಎರಡನ್ನು ಈಗ ಇಲ್ಲಿ ಹೇಳಿದ್ದೇನೆ.

ನಿನ್ನ ಮನಸ್ಸಿಗೆ ಸಂತೋಷ ಆಗುವ ರೀತಿಯಲ್ಲಿ ನಿನ್ನದೇ ದೃಷ್ಟಿಯಿಂದ ಭಕ್ತಿಪೂರ್ವಕವಾಗಿ ಭಗವಂತನ ಆರಾಧನೆಯನ್ನು ಮಾಡು. ಅವನು ಸರ್ವರೂಪಮಯನು, ಸರ್ವಮಂತ್ರಮಯನೂ ಆಗಿರುತ್ತಾನೆ. ಯಾರು ಯಾವ ಭಾವನೆಯಿಂದ ಅವನನ್ನು

ಆರಾಧಿಸುವರೋ ಅವರಿಗೆ ಅದೇ ರೀತಿಯ ಫಲವನ್ನು ಕೊಡುತ್ತಾನೆ. ನೀನು ಮಾತ್ರ ಶುದ್ಧಮನಸ್ಸು, ನಿರ್ದುಷ್ಟವಾಣಿ ಹಾಗು ನಿಷ್ಕಲ್ಮಷ ಕರ್ಮಗಳಿಂದ ಈ ದಾರುದೇಹ ಧಾರಣ ಮಾಡಿದ ಭಗವಾನ್ ಗೋವಿಂದನ ಆರಾಧನೆಯನ್ನು ಮಾಡು.

ರಾಜನೇ! ನಿನಗೆ ಇನ್ನೊಂದು ರಹಸ್ಯದ ಮಾತನ್ನು ಹೇಳುತ್ತೇನೆ. ಚಿತ್ತವಿಟ್ಟು ಕೇಳು. ಸಮುದ್ರದ ತೀರದಲ್ಲಿ ನೀಲಾಚಲ ಪರ್ವತದ ಶಿಖರದಲ್ಲಿ ವಟವೃಕ್ಷದ ಬುಡದಲ್ಲಿ ಕಟ್ಟಿಗೆಯ ಮೂರ್ತಿಯ ವ್ಯಾಜದಿಂದ ನಿಂತುಕೊಂಡದ್ದೇ ಅಮೃತಮಯ ಪರಬ್ರಹ್ಮ. ಅದರ ದರ್ಶನವನ್ನು ಮಾಡಿಕೊಂಡ ಮಾನವರಿಗೆ ಮೋಕ್ಷಪ್ರಾಪ್ತಿ ನಿಶ್ಚಿತ.''

ಬ್ರಹ್ಮದೇವರು ರಾಜನ ನೆಪ ಮಾಡಿಕೊಂಡು ಎಲ್ಲ ಜನರಿಗೂ ಈ ವಿಷಯವನ್ನು ತಿಳಿಸಿದರು. ಮೊದಲೇ ಪ್ರಕಾಶಗೊಂಡ ಭಗವಾನ್ ವಿಷ್ಣುವಿನ ನಾಲ್ಕು ವಿಧ ರೂಪಗಳನ್ನು ಪ್ರಕಟ ಮಾಡಿದರು. ರಥದಿಂದ ಇಳಿಯುವಾಗ ಎಲ್ಲ ಜನರು ನೋಡಿದ ನಾಲ್ಕು ಮೂರ್ತಿಗಳೇ ಈಗ ಸಿಂಹಾಸನದ ಮೇಲೆ ವಿರಾಜಮಾನವಾಗಿರುತ್ತವೆ. ಇದನ್ನು ಎಲ್ಲ ಜನರು ಪ್ರತ್ಯಕ್ಷ ನೋಡಿದರು. ಅನಂತರ ಬ್ರಹ್ಮದೇವರು ದ್ವಾದಶಾಕ್ಷರ ಮಂತ್ರದಿಂದ ಬಲರಾಮ ದೇವರಿಗೂ, ಪುರುಷ ಸೂಕ್ತದಿಂದ ಭಗವಾನ್ ನಾರಾಯಣನಿಗೂ, ದೇವೀ ಸೂಕ್ತದಿಂದ ಸುಭದ್ರಾದೇವಿಗೂ ಮತ್ತು ದ್ವಾದಶಾಕ್ಷರ ಮಂತ್ರದಿಂದ ಸುದರ್ಶನ ಚಕ್ರಕ್ಕೂ ಪೂಜೆಯನ್ನು ಮಾಡಿದರು. ಅನಂತರ ಬ್ರಹ್ಮದೇವರು ಇಂದ್ರದ್ಯುಮ್ನ ರಾಜನ ಮೇಲೆ ಅನುಗ್ರಹ ಮಾಡಲಿಕ್ಕಾಗಿ ಭಗವಂತನನ್ನು ಬೇಡಿಕೊಂಡರು.

**ಬ್ರಹ್ಮ:-** ಭಗವನ್! ಭಕ್ತರ ಮೇಲೆ ಅನುಗ್ರಹ ಮಾಡುವದು ನಿನ್ನ ಒಂದು ವ್ರತ. ಈ ಇಂದ್ರದ್ಯುಮ್ನ ರಾಜನು ಬಹು ದೀರ್ಘಕಾಲದಿಂದ ನಿನ್ನಲ್ಲಿ ಅಚ್ಚಿನ್ನ ಭಕ್ತಿ ಮಾಡಿ ನಿನ್ನನೇ ನಂಬಿ ನಿರಂತರ ಧ್ಯಾನೋಪಾಸನೆಯನ್ನು ಮಾಡುತ್ತ ಬಂದಿದ್ದಾನೆ. ಈಗ ಅವನಿಗೆ ನಿನ್ನ ಸಾಕ್ಷಾತ್ ದರ್ಶನ ಆಯಿತು. ಯದ್ಯಪಿ ನಿನ್ನ ದರ್ಶನವು ಸಾಯುಜ್ಯ ಮೋಕ್ಷವನ್ನು ನೇರವಾಗಿ ಕೊಡಲು ಕಾರಣವಾಗಿದೆ. ಆದರೂ ಈ ಇಂದ್ರದ್ಯುಮ್ನ ಮಹಾರಾಜನಿಗೆ ಬೇಕಾಗಿಲ್ಲ ಆ ಮೋಕ್ಷ. ಅವನು ಭಕ್ತಿಯಿಂದ ನಿನ್ನ ಪೂಜೆಯನ್ನೇ ಸಂತತವಾಗಿ ಮಾಡಬೇಕೆಂದು ಅಪೇಕ್ಷೆಯನ್ನು ಹೊಂದಿದ್ದಾನೆ. ಆದುದರಿಂದ ಅವನಿಗೆ ಆ ಸೇವಾ ಸೌಭಾಗ್ಯಕ್ಕೆ ಅವಕಾಶವನ್ನು ನೀಡು.''

## ಜಗನ್ನಾಥ ಉವಾಚ

ಹೀಗೆ ಬ್ರಹ್ಮದೇವರು ನಿವೇದನ ಮಾಡಿಕೊಂಡ ಬಳಿಕ ಕಾಷ್ಠಮಯ ಶರೀರವನ್ನು ಧಾರಣ ಮಾಡಿದ ಸ್ವಯಂ ಶ್ರೀಜಗನ್ನಾಥ ಸ್ವಾಮಿಯು ಗಂಭೀರವಾಣಿಯಿಂದ ನುಡಿದನು- ''ಇಂದ್ರದ್ಯುಮ್ನ! ನಿನ್ನ ಭಕ್ತಿ ಹಾಗು ನಿಷ್ಕಾಮ ಕರ್ಮಗಳಿಂದ ನಾನು ಅತ್ಯಂತ ಪ್ರಸನ್ನನಾಗಿದ್ದೇನೆ. ನಿನ್ನ ಭಕ್ತಿಯು ಸುಸ್ಥಿರವಾಗಲಿ. ಒಂದು ಕೋಟಿಗಿಂತ ಮಿಗಿಲಾಗಿ ಹಣವನ್ನು ವೆಚ್ಚಮಾಡಿ ನನ್ನ ಮಂದಿರವನ್ನು ನಿರ್ಮಾಣ ಮಾಡಿರುವೆ. ಕಾಲಕ್ರಮದಿಂದ ಇದು ಜೀರ್ಣವಾಗಿ ನಾಶವಾಗಿ ಹೋದರೂ ನಾನು ಮಾತ್ರ ಈ ಸ್ಥಾನವನ್ನು ಬಿಡುವದಿಲ್ಲ. ಬಿದ್ದು ಹೋದ ಮಂದಿರವನ್ನು ಬೇರೆ ಯಾರಾದರೂ ಕಟ್ಟಿಸಬಹುದು. ನೀನು ಮೊಟ್ಟ ಮೊದಲು ಕಟ್ಟಿಸಿದ ಈ ಮಂದಿರವು ಯಾವ ಕಾರಣದಿಂದಾದರೂ ನಷ್ಟವಾದರೆ ಪುನಃ ಇದರ ಜೀರ್ಣೋದ್ಧಾರ ಮಾಡಿಕಟ್ಟಿಸಿದವನು ನಿನ್ನಂತೆ ನನಗೆ ಪರಮ ಪ್ರೀತ್ಯಾಸ್ಪದನಾಗುವನು. ಬ್ರಹ್ಮದೇವರ ಎರಡನೇ ಪರಾರ್ಧವು ಪೂರ್ತಿ ಆಗುವ ವರೆಗೆ ನಾನು ಇದೇ ಕಾಷ್ಠಮಯ ವಿಗ್ರಹರೂಪದಿಂದ ಇಲ್ಲಿ ವಾಸ ಮಾಡುವೆನು. ಸತ್ಯಯುಗದ

ಪ್ರಥಮ ವರುಷದ ಜ್ಯೇಷ್ಠದಲ್ಲಿ ಈ ಯಜ್ಞವು ಪ್ರಾರಂಭವಾಯಿತು. ಜ್ಯೇಷ್ಠ ಅಮವಾಸ್ಯೆಯ ದಿನ ಕಾಷ್ಠರೂಪದಿಂದ ನಾನು ಇಲ್ಲಿ ಅವತರಿಸಿ ಬಂದೆನು. ಇದೇ ನನ್ನ ಪವಿತ್ರವಾದ ಜನ್ಮದಿನ. ಆ ದಿನದಂದು ಮಹಾಸ್ನಾನದ ವಿಧಿಯಿಂದ ಜಲಾಧಿವಾಸ ಪೂರ್ವಕವಾಗಿ ನನಗೆ ಸ್ನಾನ ಮಾಡಿಸಬೇಕು. ಆ ದಿನ ನನ್ನ ದರ್ಶನ ಮಾಡಿಕೊಳ್ಳುವವರಿಗೆ ಸರ್ವತೀರ್ಥಸ್ನಾನ ಫಲ. ಸರ್ವ ಯಜ್ಞಾಚರಣದ ಪುಣ್ಯ.

## ಡೋಲೋತ್ಸವ

ವಟವೃಕ್ಷದ ಉತ್ತರ ದಿಕ್ಕಿನಲ್ಲಿ ಒಂದು ಕೂಪ ಇದೆ. ಅದು ಸರ್ವತೀರ್ಥಮಯ. ಅದನ್ನು ಅಗೆದು ಬೆಳಕಿಗೆ ತೆಗೆದುಕೊಂಡು ಬಾ. ಜ್ಯೇಷ್ಠ ಅಮವಾಸ್ಯೆ ದಿನದಂದು ಪ್ರಾತಃಕಾಲದಲ್ಲಿ ನನ್ನನ್ನು ಬಲರಾಮನನ್ನು ಸುಭದ್ರೆಯನ್ನು ಆ ಕೂಪದ ಜಲದಿಂದ ಸ್ನಾನ ಮಾಡಿಸಿದ ಮನುಷ್ಯನಿಗೆ ವಿಷ್ಣುಲೋಕ ಪ್ರಾಪ್ತಿ. ಆಷಾಢ ಶುಕ್ಲ ದ್ವಿತೀಯಾ ದಿನ ಪುಷ್ಯ ನಕ್ಷತ್ರಯೋಗವಿದ್ದಾಗ ಈ ಕೂಪದಲ್ಲಿ ಸ್ನಾನ ಮಾಡಿದರೆ ಮೋಕ್ಷ ಸುಲಭ. ಪುಷ್ಯ ನಕ್ಷತ್ರವಿಲ್ಲದಿದ್ದರೂ ಈ ತೀರ್ಥಯಾತ್ರೆಯನ್ನು ಅಂದು ಮಾಡಿದರೆ ನಾನು ಪ್ರಸನ್ನನಾಗುತ್ತೇನೆ. ಅದೇ ದಿನದಂದು ಪುಷ್ಯಯೋಗವಿದ್ದಾಗ ನನ್ನನ್ನು ಬಲರಾಮನನ್ನು ಸುಭದ್ರೆಯನ್ನು ರಥದಲ್ಲಿ ಕೂಡಿಸಿಕೊಂಡು ಉತ್ಸವಕ್ಕಾಗಿ 'ಗುಂಡಿಚಾಮಂಡಪ' ಎಂಬ ಸ್ಥಾನಕ್ಕೆ ಕರೆದುಕೊಂಡು ಹೋಗಬೇಕು. ನಾನು ಮೊದಲು ಪ್ರಕಟವಾದದ್ದು ಅಲ್ಲಿಯೇ. ಸಹಸ್ರ ಅಶ್ವಮೇಧ ಯಜ್ಞಗಳ ಮಹಾವೇದಿಯು ಅಲ್ಲಿಯೇ ಇದ್ದಿತು. ಆ ಸಮಯದಲ್ಲಿ ನೃಸಿಂಹ ಕ್ಷೇತ್ರದಲ್ಲಿಯ ನಿನ್ನ ಯಜ್ಞಗಳ ಆ ಮಹಾವೇದಿಯು ಮತ್ತು ನನ್ನ ಉತ್ಪತ್ತಿ ಸ್ಥಾನವಾದ ಗುಂಡಿಚಾಮಂಡಪವು ನನಗೆ ಅತ್ಯಂತ ಪ್ರೀತಿಯ ಸ್ಥಾನಗಳಾಗಿವೆ. ನಾನು ನಿನ್ನ ಭಕ್ತಿಯಿಂದ ಪ್ರಸನ್ನನಾಗಿ ಯಾವಾಗಲೂ ಈ ಸ್ಥಾನದಲ್ಲಿ ವಾಸಿಸುತ್ತೇನೆ. ಆಷಾಢ ಶುಕ್ಲಪಕ್ಷದ ಶಯನೀ ಏಕಾದಶಿ, ಕಾರ್ತಿಕ ಶುಕ್ಲಪಕ್ಷದ ಪ್ರಬೋಧಿನೀ ಏಕಾದಶಿ ಮತ್ತು ನಾನು ಮಗ್ಗಲು ಬದಲಿಸುವ ಭಾದ್ರಪದ ಶುದ್ಧ ಏಕಾದಶಿ ಹಾಗೂ ಆ ಆ ದ್ವಾದಶಿ ದಿನಗಳಂದು ನನ್ನ ಉತ್ಸವವನ್ನು ವಿಶೇಷರೂಪದಿಂದ ಮಾಡಿಸಬೇಕು. ಫಾಲ್ಗುಣ ಹುಣ್ಣಿಮೆಯಂದು ನನಗೆ ಡೋಲೋತ್ಸವ ಎಂದರೆ ತೊಟ್ಟಿಲು ಅಥವಾ ಮಂಚದಲ್ಲಿ ಕೂಡಿಸಿ ತೂಗುವ ಉತ್ಸವವನ್ನು ಮಾಡಬೇಕು. ತೂಗುವ ಮಂಚ ಅಥವಾ ತೊಟ್ಟಿಲಲ್ಲಿ ದಕ್ಷಿಣಾಭಿಮುಖವಾಗಿ ಕುಳಿತು ಪೂಜೆಗೊಳ್ಳುವ ನನ್ನ ದರ್ಶನವನ್ನು ತೆಗೆದುಕೊಂಡವರು ಬ್ರಹ್ಮಹತ್ಯಾದಿ ಪಾಪಗಳಿಂದ ಮುಕ್ತರಾಗುತ್ತಾರೆ.

## ಸಮುದ್ರ ಸ್ನಾನದ ವಿಧಿ ಮತ್ತು ಭಗವದ್ ವಿಗ್ರಹಗಳ ವರ್ಣನೆ

**ಮುನಿಗಳು:-** ಮಹರ್ಷಿಯೆ! ಇಂದ್ರದ್ಯುಮ್ನನು ಲಕ್ಷ್ಮೀಪತಿಯ ಜ್ಯೇಷ್ಠ ಸ್ನಾನದ ಉತ್ಸವವನ್ನು ಹೇಗೆ ಆಚರಿಸಿದನು? ಇದರ ಹೊರತು ಭಗವಂತನ ಉಳಿದ ಎಲ್ಲ ಬಗೆಯ ಉತ್ಸವಗಳ ವಿಧಿಪೂರ್ವಕ ಆಚರಣೆಯ ಕ್ರಮವನ್ನು ನನಗೆ ತಿಳಿಸಿ ಹೇಳಿರಿ.

**ಜೈಮಿನಿ:-** ಮುನಿಶ್ರೇಷ್ಠರೇ! ಈಗ ನಾನು ಜ್ಯೇಷ್ಠ ಸ್ನಾನದ ವರ್ಣನೆಯನ್ನು ಮಾಡುತ್ತೇನೆ. ಜ್ಯೇಷ್ಠ ಶುಕ್ಲ ದಶಮಿಯ ದಿನ ವ್ರತ ಸಂಕಲ್ಪವನ್ನು ಮಾಡಿ ಮೌನದಿಂದ ಇರಬೇಕು. ಪ್ರಾತಃಕಾಲದಲ್ಲಿಯೇ ಎದ್ದು "ಮಾರ್ಕಂಡೇಯಾವಟ" ಎಂಬ ಹೆಸರಿನ ತೀರ್ಥಕ್ಕೆ ಹೋಗಿ ಆಚಮನ ಮಾಡಿ ಎರಡೂ ಕೈ ಜೋಡಿಸಿ ಮಾರ್ಕಂಡೇಯೇಶ್ವರನಿಗೆ

ನಮಸ್ಕರಿಸಿ ಭೈರವನಿಂದ ಆಜ್ಞೆಯನ್ನು ಪಡೆದುಕೊಳ್ಳಬೇಕು. ಮತ್ತು ತೀರ್ಥದಲ್ಲಿ ಅವಗಾಹನಮಾಡಿ ವರುಣ ದೇವತೆಗೆ ಸಂಬಂಧಿಸಿದ ಐದು ವೇದ ಮಂತ್ರಗಳನ್ನು ಹೇಳಿ ಮೂರು ಸಲ ಅಘಮರ್ಷಣ ಸೂಕ್ತದಿಂದಲೂ ಹಾಗು ಕೆಳಗೆ ಹೇಳಿದ ಮಂತ್ರಗಳಿಂದಲೂ ಮುಳುಗು ಹಾಕಿ ಸ್ನಾನ ಮಾಡಬೇಕು.

"ಸಂಸಾರ ಸಾಗರೇ ಮಗ್ನಂ ಪಾಪಗ್ರಸ್ತಮಚೇತನಮ್ ।
ತ್ರಾಹಿ ಮಾಂ ಭಗನೇತ್ರಘ್ನ ತ್ರಿಪುರಾರೆ, ನಮೋಽಸ್ತು ತೇ ॥

ಹೀಗೆ ಸ್ನಾನಮಾಡಿ ತೀರ್ಥದಿಂದ ಮೇಲಕ್ಕೆ ಎದ್ದು ಅಹ್ನಿಕವನ್ನು ಮುಗಿಸಿಕೊಂಡು ಶಂಕರನ ದರ್ಶನ ಪಡೆದು ಮೌನದಿಂದ ಭಗವಾನ್ ನಾರಾಯಣನ ಸಮೀಪಕ್ಕೆ ಹೋಗಬೇಕು. ಮಾರ್ಕಂಡೇಯೇಶ್ವರನ ದಕ್ಷಿಣಕ್ಕೆ ಒಂದು ವಟವೃಕ್ಷವು (ಅರಳೆಮರ) ಇರುತ್ತದೆ. ಅದರ ದರ್ಶನ ಮಾತ್ರದಿಂದ ಪಾಪರಾಶಿ ನಾಶ. ಅದಕ್ಕೆ ನಮಸ್ಕಾರ ಮಾಡಿ ಕೆಳಗೆ ಹೇಳಿದ ಮಂತ್ರದಿಂದ ಅದರ ಪ್ರದಕ್ಷಿಣೆಯನ್ನು ಹಾಕಬೇಕು.

"ಅಮರಸ್ತ್ವಂ ಸದಾ ಕಲ್ಪ ವಿಷ್ಣೋರಾಯತನಂ ಮಹತ್ ।
ನ್ಯಗ್ರೋಧ ಹರ ಮೇ ಪಾಪಂ ವಿಷ್ಣುರೂಪ ನಮೋಽಸ್ತು ತೇ ॥
ನಮೋಽಸ್ತ್ವ ವ್ಯಕ್ತ ರೂಪಾಯ ಮಹಾ ಪ್ರಳಯ ಸ್ಥಾಯಿನೇ ।
ಏಕಾಶ್ರಯಾಯ ಜಗತಾಂ ಕಲ್ಪವೃಕ್ಷಾಯ ತೇ ನಮಃ ॥

ಹೀಗೆ ಸ್ತೋತ್ರವನ್ನು ಮಾಡಿ ಆ ಗಿಡದಡಿಯಲ್ಲಿ ಕುಳಿತು ವಿಷ್ಣುವಿನ ನಾಮ ಜಪವನ್ನು ಮಾಡಬೇಕು. ಈ ಮರದ ನೆರಳು ಬಿದ್ದರೂ ಮಾನವನ ಪಾಪಗಳೆಲ್ಲವೂ ದೂರವಾಗಿ ಹೋಗುವವು. ಅನಂತರ ವಿಷ್ಣುವಿನ ವಾಹನವಾದ ಗರುಡದೇವನನ್ನು

"ಛಂದೋಮಯ ಜಗದ್ಧಾಮನ್ ಯಾನರೂಪ ತ್ರಿವೃದ್ವಪುಃ ।
ಯಜ್ಞರೂಪ ಜಗದ್ವ್ಯಾಪಿನ್ ಹರಿವಾಹಾಯ ತೇ ನಮಃ ॥

ಎಂಬ ಮಂತ್ರದಿಂದ ನಮಸ್ಕಾರವನ್ನು ಮಾಡಬೇಕು.

ಹೀಗೆ ಗರುಡನ ಸ್ತೋತ್ರ ಮಾಡಿ ಮಂದಿರದ ಒಳಗೆ ಪ್ರವೇಶ ಮಾಡಬೇಕು. ಒಳಗೆ ಹೋದ ಬಳಿಕ ಪುರುಷ ಸೂಕ್ತ ಅಥವಾ ವಾಸುದೇವ ದ್ವಾದಶಾಕ್ಷರ ಮಂತ್ರ ವಿಷ್ಣುಸೂಕ್ತ ಮೊದಲಾದ ವೇದಮಂತ್ರಗಳಿಂದ ಶ್ರೀ ಜಗನ್ನಾಥನ ಷೋಡಶೋಪಚಾರ ಪೂಜೆಯನ್ನು ವಿಧಿಪೂರ್ವಕವಾಗಿ ಮಾಡಬೇಕು. ಪೂಜೆಯ ಅನಂತರ ಕೈ ಜೋಡಿಸಿ ಹೀಗೆ ಸ್ತೋತ್ರ ಮಾಡಬೇಕು. "ದೇವ ದೇವ ಜಗನ್ನಾಥ ನಿನಗೆ ಜಯವಾಗಲಿ, ನಾನು ನಿನ್ನ ಚರಣಗಳಿಗೆ ಪ್ರಣಮಿಸುತ್ತೇನೆ. ನೀನು ಯಾವಾಗಲೂ ನನ್ನ ರಕ್ಷಣೆಯನ್ನು ಮಾಡು. ನಾನು ನಿನಗೆ ಶರಣು ಬಂದಿದ್ದೇನೆ. ನೀನು ಶರಣಾಗತ ರಕ್ಷಕನಲ್ಲವೆ! ಆದುದರಿಂದ ನಿನ್ನ ಭಕ್ತನಾದ ನನ್ನನ್ನು ಈ ಭವಸಾಗರದಿಂದ ಕರುಣೆಯಿಂದ ತಾರಣ ಮಾಡು.

ಅನಂತರ ಶೇಷ ಮಂತ್ರದಿಂದ ಬಲರಾಮನ ಪೂಜೆಯನ್ನು ಮಾಡಿ ಹೀಗೆ ಸ್ತೋತ್ರ ಮಾಡಬೇಕು. ಸಚ್ಚಿದಾನಂದ ಸ್ವರೂಪಿಯಾದ ಬಲರಾಮನೆ! ನಿನಗೆ ಜಯವಾಗಲಿ. ನಿನ್ನ ನಿರ್ಮಲವಾದ ಆಕಾರವು ಅವಿದ್ಯಾ ರೂಪವಾದ ಕೆಸರಿನಿಂದ ರಚಿತವಾಗಿದೆ. ಸಂಪೂರ್ಣ ಜಗತ್ತಿನ ಭಾರವನ್ನು ಎಂದೂ ದಣಿಯದೆ ಧರಿಸಿದ ನಿನಗೆ ನನ್ನ ನಮಸ್ಕಾರ.

"ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತು ಸರ್ವತೋಮುಖಂ ।
ನೃಸಿಂಹಂ ಭೀಷಣಂ ಭದ್ರಂ ಮೃತ್ಯು ಮೃತ್ಯುಂ ನಮಾಮ್ಯಹಂ ॥

ಈ ನೃಸಿಂಹ ಮಂತ್ರವು ಮಂತ್ರರಾಜ ಎಂದು ಕರೆಯಲ್ಪಡುತ್ತದೆ. ಈ ಮಂತ್ರರಾಜ ಜಪದ ಪ್ರಭಾವದಿಂದ ಶ್ವೇತರಾಜನಿಗೆ ಶ್ರೀಲಕ್ಷ್ಮೀ ನೃಸಿಂಹದೇವರ ಪ್ರತ್ಯಕ್ಷ ದರ್ಶನವು ಆಯಿತು. ಕಮಲ ಪೀಠದ ಮೇಲೆ ಯೋಗಾಸನದಲ್ಲಿ ಮಂಡಿಸಿದ್ದ ನೃಸಿಂಹಸ್ವಾಮಿ. ಅವನ ಎಡಭಾಗದಲ್ಲಿ ಮಹಾಲಕ್ಷ್ಮಿ. ದೇವತಾ ಸಿದ್ಧಿ ಹಾಗೂ ಮುನಿ ಮಹರ್ಷಿಗಳು ಅವನ ಸ್ತೋತ್ರವನ್ನು ಮಾಡುತ್ತಿದ್ದಾರೆ.

ಭಗವಂತನ ಈ ದಿವ್ಯದರ್ಶನದಿಂದ ಪುಲಕಿತಗೊಂಡ ಮಹಾರಾಜನು ಗದ್ಗದ ಕಂಠದಿಂದ "ನಾಥ ಪ್ರಭೋ ಪ್ರಸೀದ" ಎನ್ನುತ್ತ ನೆಲದ ಮೇಲೆ ಉರುಳಿದ. ತಪಸ್ಸಿನಿಂದ ದುರ್ಬಲವಾಗಿತ್ತು ಅವನ ದೇಹ. ತನ್ನ ಅಡಿದಾವರೆಗಳಲ್ಲಿ ಉರುಳಿದ ಆ ಶ್ವೇತರಾಜನನ್ನು ಎಬ್ಬಿಸಿ ಭಕ್ತವತ್ಸಲನಾದ ಭಗವಂತ ಹೇಳಿದ - "ವತ್ಸ! ಏಳು ಭಕ್ತಿಯಿಂದ ನಾನು ಪ್ರಸನ್ನ. ನಿನಗೆ ಬೇಕಾದ ವರ ಬೇಡು."

ಭಗವಂತನ ಈ ವಚನವನ್ನು ಕೇಳಿ ಎದ್ದುನಿಂತ ಶ್ವೇತರಾಜ-ಎರಡೂ ಕೈಗಳನ್ನು ಜೋಡಿಸಿದ. ಭಕ್ತಿಯಿಂದ ಬಾಗಿ ನಮ್ರತೆಯಿಂದ ನಮಿಸಿ ನುಡಿದ. "ಸ್ವಾಮಿನ್! ನನ್ನ ಮೇಲೆ ನಿನ್ನ ದುರ್ಲಭವಾದ ಕೃಪೆಯು ಇದೇ ರೀತಿ ಸುತತ ಧಾರೆಯಾಗಿ ಹರಿಯಲಿ. ಮರಣಾನಂತರ ನಿನ್ನ ಸ್ವಾಮೀಪ್ಯರೂಪವಾದ ಮೋಕ್ಷವನ್ನು ನನಗೆ ಕರುಣಿಸು. ನಾನು ಬದುಕಿ ಇರುವವರೆಗೆ ನನ್ನ ರಾಜ್ಯದಲ್ಲಿ ಯಾರಿಗೂ ಅಕಾಲಮೃತ್ಯು ಬರುವದು ಬೇಡ. ಅಕಾಲಮೃತ್ಯು ಬರದೆ ಮೃತರಾದವರಿಗೆಲ್ಲರಿಗೂ ಸದ್ಗತಿ ಉಂಟಾಗಲಿ."

ಶ್ವೇತರಾಜನ ಮಾತುಗಳನ್ನು ಕೇಳಿ ನೃಸಿಂಹ ದೇವರು ಸಂತೋಷದಿಂದ ಹೇಳಿದರು. "ರಾಜನೇ! ನಿನ್ನ ಮನೋರಥವು ಪೂರ್ಣವಾಗಲಿ, ಒಂದು ಸಾವಿರ ವರ್ಷಗಳವರೆಗೆ ನೀನು ಸಮೃದ್ಧವಾದ ಈ ಸಾಮ್ರಾಜ್ಯದ ಉಪಭೋಗವನ್ನು ಮಾಡು. ಪ್ರತಿದಿನವೂ ನನ್ನ ನೈವೇದ್ಯ ಭಕ್ಷಣದಿಂದ ನಿನ್ನ ಪಾಪವೆಲ್ಲವೂ ನಷ್ಟವಾಗಿ ಹೋಗುವದು. ಅಂತಃಕರಣವು ಪರಿಶುದ್ಧವಾಗುವದು. ಅನಂತರ ನಿನಗೆ ನನ್ನ ಸಾಮೀಪ್ಯ ಮುಕ್ತಿಯು ಪ್ರಾಪ್ತವಾಗುವದು. ನಿನ್ನ ರಾಜ್ಯದಲ್ಲಿ ಯಾರು ನನ್ನ ಪ್ರಸಾದವನ್ನು ಭಕ್ಷಣಮಾಡುವರೋ ಅವರಿಗೆ ಎಂದೂ ಅಕಾಲಮೃತ್ಯು ಬರುವದಿಲ್ಲ."

ಶ್ವೇತರಾಜನಿಗೆ ವರದಾನ ಮಾಡಿ ಅಂತರ್ಧಾನ ಹೊಂದಿದ ಶ್ರೀನೃಸಿಂಹ ಪ್ರಭು. ಅವನ ಉಚ್ಛಿಷ್ಟವಾದ ನೈವೇದ್ಯ ಬಹು ಸ್ವಾದಿಷ್ಟ. ಭಗವಂತನ ಈ ಪ್ರಸಾದವನ್ನು ಭಕ್ಷಣ ಮಾಡುವದರಿಂದ ಎಲ್ಲ ಪಾಪಗಳೂ ನಾಶವಾಗುವವು. ಸ್ವಯಂ ಶ್ರೀಲಕ್ಷ್ಮೀನಾರಾಯಣರು ಊಟಮಾಡಿ ಉಳಿದ ನೈವೇದ್ಯ ಶೇಷವೆಲ್ಲವೂ ಪರಮ ಪವಿತ್ರವೆಂದು ತಿಳಿಯಬೇಕು. ವ್ರತಗಳ ಆಚರಣೆ ಮಾಡುವವರೂ, ತಪಸ್ವಿಗಳೂ, ಯಜ್ಞದಲ್ಲಿನ ದೀಕ್ಷಿತರೂ, ವಿಧವಾ ಸ್ತ್ರೀಯರೂ, ಯತಿಗಳೂ, ವರ್ಣಾಶ್ರಮ ಧರ್ಮವನ್ನು ಅನೂಚಾರವಾಗಿ ಪಾಲಿಸುವ ಶಿಷ್ಟರೂ ಈ ಭಗವದುಚ್ಛಿಷ್ಟ ರೂಪವಾದ ನೈವೇದ್ಯ ಪ್ರಸಾದವನ್ನು ಭಕ್ಷಿಸಿದರೆ ಪವಿತ್ರರಾಗುತ್ತಾರೆ.

ದರಿದ್ರನಿರಲಿ, ಶ್ರೀಮಂತನಿರಲಿ, ರಾಜನೇ ಇರಲಿ, ದಾಸನೇ ಇರಲಿ, ಪಂಡಿತನೇ ಇರಲಿ, ಪಾಮರನೇ ಇರಲಿ, ಶಿಷ್ಟನೇ ಇರಲಿ, ದುಷ್ಟನೇ ಇರಲಿ ಭಗವಂತನ ಪ್ರಸಾದ

ಸ್ವೀಕರಿಸುವ ವಿಷಯದಲ್ಲಿ ತಿರಸ್ಕಾರವನ್ನು ಎಂದೂ ತೋರಿಸಬಾರದು. ಭಕ್ತಿಯಿಂದಾಗಲೀ, ಲೋಭದಿಂದಾಗಲಿ, ಕುತೂಹಲದಿಂದಾಗಲಿ, ಹಸಿವೆಯಿಂದಾಗಲಿ ಪ್ರಸಾದವನ್ನು ಭಕ್ಷಣ ಮಾಡಿದರೆ ಸರ್ವಪಾಪಗಳು ಪರಿಹಾರ ಆಗುವದು ನಿಶ್ಚಿತ.

ಯಾವ ಪಂಡಿತನು ತಾನು ಮಹಾಧಾರ್ಮಿಕ ಎಂಬ ಅಭಿಮಾನದಿಂದ ಪ್ರಸಾದವನ್ನು ಭಕ್ಷಿಸದೇ ಅದರ ನಿಂದೆಯನ್ನು ಮಾಡುವನೋ ಅವನಿಗೆ ಅಧೋಗತಿ ಆಗುವದು. ಈ ಪ್ರಸಾದವನ್ನು ಮಾರಾಟ ಮಾಡುವದು ಘೋರ ಅಪರಾಧ. ಅದನ್ನು ಬೆಲೆಗೆ ಕೊಂಡು ಕೊಳ್ಳುವದು ಶುದ್ಧ ತಪ್ಪು. ಈ ಭಗವಂತನ ನೈವೇದ್ಯ ಪ್ರಸಾದವು ಹಳತಾದರೂ ಒಣಗಿದ್ದರೂ ದೇಶಾಂತರಕ್ಕೆ ಒಯ್ದರೂ ದೂಷಿತವಾಗುವದಿಲ್ಲ. ಎಲ್ಲಿಯೇ ಆಗಲಿ ಯಾವ ರೂಪದಲ್ಲಿಯೇ ಇರಲಿ ಅದನ್ನು ಭಕ್ಷಣ ಮಾಡಿದರೆ ಎಲ್ಲ ಪಾಪಗಳ ಪರಿಹಾರ ವಾಗುವದು. ಶ್ರೀ ಜಗನ್ನಾಥನ ಪ್ರಸಾದವು ಗಂಗಾಜಲವಿದ್ದಂತೆ. ಇದು ಯಾವ ಕಾಲಕ್ಕೂ ಅಪವಿತ್ರವಾಗುವದಿಲ್ಲ. ಪಾಪಿಗಳಾದವರಿಗೆ ಈ ಭಗವಂತನ ನೈವೇದ್ಯರೂಪ ಪ್ರಸಾದದಲ್ಲಿ ವಿಶ್ವಾಸ ಮೂಡುವುದಿಲ್ಲ. ಆದರೆ ವಾಸ್ತವಿಕವಾಗಿ ಕಲಿಕಾಲದಲ್ಲಿ ಜನರಲ್ಲಿ ಪಾಪವೃದ್ಧಿ ಆಗಿ ಜನರಿಗೆ ಹೆಚ್ಚಿನ ಧರ್ಮ ಕರ್ಮ ತಪೋನುಷ್ಠಾನಗಳನ್ನು ಮಾಡಲಿಕ್ಕೆ ಆಗುವುದಿಲ್ಲ. ಅಂಥವರಿಗೆಲ್ಲ ಪಾಪ ಪರಿಹಾರಕ್ಕೂ ಪುಣ್ಯಸಾಧನೆಗೂ ಈ ಜಗನ್ನಾಥ ಸ್ವಾಮಿಯ ಪ್ರಸಾದ ಭಕ್ಷಣವು ಒಳ್ಳೆಯ ಸಾಧನವಾಗಿದೆ. ಕಲಿಪ್ರಭಾವದಿಂದ ನಾಸ್ತಿಕ ಮತಗಳ ಪ್ರಾಬಲ್ಯವಾಗಿ ಜನರು ಮಾಡಿದ ಅನೇಕ ವಿಧವಾದ ಪಾಪರಾಶಿಯನ್ನು ನಾಶಮಾಡಲಿಕ್ಕಾಗಿಯೇ ಈ ಪುರುಷೋತ್ತಮ ಕ್ಷೇತ್ರದಲ್ಲಿ ಭಕ್ಷಣಗಳು ಸಾಕ್ಷಾತ್ ಮೋಕ್ಷದಾಯಕ ಆಗಿವೆ.

ಜಗದೀಶ್ವರನಾದ ಶ್ರೀಹರಿಯು ಈ ಕ್ಷೇತ್ರದಲ್ಲಿ ಮಾತ್ರ ಅವನಿಗೆ ಅರ್ಪಣ ಮಾಡಿ ನೈವೇದ್ಯ ಮಾಡಿದ ಭಕ್ಷ್ಯವನ್ನು ಸಾಕ್ಷಾತ್ ಊಟ ಮಾಡುತ್ತಾನೆ. ಆದುದರಿಂದಲೇ ಇಲ್ಲಿಯ ನೈವೇದ್ಯಕ್ಕೆ ಇಷ್ಟು ಮಹತ್ವ. ಇಲ್ಲಿಯ ಜಗನ್ನಾಥ ಸ್ವಾಮಿಯ ಕೊರಳಲ್ಲಿ ಹಾಕಿದ ಅಥವಾ ಮೈ ಮೇಲೆ ಏರಿಸಿದ ತುಳಸಿಯ ಮಾಲೆಯನ್ನು ತನ್ನ ತಲೆಯ ಮೇಲೆ ಮುಡಿದುಕೊಂಡರೆ, ಹಾಗೂ ತುಳಸೀ ದಳವನ್ನು ಭಕ್ಷಣ ಮಾಡಿದರೆ ಮಾನವನಿಗೆ ವೈಕುಂಠ ಲೋಕ ಪ್ರಾಪ್ತಿ. ತುಳಸೀದಳದಿಂದ ಕೂಡಿದ ಭಗವತ್ಪ್ರಸಾದವನ್ನು ಭಕ್ಷಣ ಮಾಡುವದರಿಂದ ಮನುಷ್ಯರಿಗೆ ಸದ್ಗತಿ. ಶ್ರೀವಿಷ್ಣುವಿನ ಚರಣೋದಕ ಅಥವಾ ಸ್ನಾನಜಲ ಎಂದರೆ ತೀರ್ಥವು ಎಲ್ಲ ಪಾಪಗಳನ್ನು ಪರಿಹರಿಸುವದು. ಶವ ಮುಂತಾದ ಅಪವಿತ್ರ ವಸ್ತುಗಳನ್ನು ಮುಟ್ಟಿದಾಗ ತೀರ್ಥಜಲವನ್ನು ಪ್ರೋಕ್ಷಿಸಿದರೆ ಪಾವಿತ್ರ್ಯ ಉಂಟಾಗುವದು. ಭಗವಂತನ ಚರಣಾಮೃತ ರೂಪವಾದ ತೀರ್ಥವು ಅಕಾಲ ಮೃತ್ಯುವನ್ನೂ ರೋಗಗಳ ಸಮೂಹಗಳನ್ನೂ ಪರಿಹರಿಸುವುದು.

### ಜಗನ್ನಾಥ ಸ್ವಾಮಿಯ ಉತ್ಥಾಪನ ಮತ್ತು ಪ್ರಾವರಣ ಉತ್ಸವಗಳ ಮಹತ್ವ

**ಜೈಮಿನಿ:-** ಜಗನ್ಮಯನಾದ ಪುರುಷೋತ್ತಮನು ಲೋಕ ಕಲ್ಯಾಣಕ್ಕಾಗಿ ಅನೇಕ ಲೀಲೆಗಳನ್ನು ಮಾಡುತ್ತಾನೆ. ಬಗೆಬಗೆಯ ದೇಹಗಳನ್ನು ಧರಿಸುತ್ತಾನೆ. ಅದಕ್ಕೆ ಅನುಗುಣವಾಗಿ ಈ ಪುರುಷೋತ್ತಮ ಕ್ಷೇತ್ರದಲ್ಲಿಯೂ ವಿಶ್ವಕ್ಷೇಮಕ್ಕಾಗಿ ಪರಮಾತ್ಮನು ಕಾಷ್ಠರೂಪದಿಂದ ಬಂದು ನಿಂತಿದ್ದಾನೆ. ಲೋಕ ವಿಡಂಬನಾರ್ಥವಾಗಿ ಅವನು ಅಷಾಢ

ಶುದ್ಧ ಏಕಾದಶಿಯಂದು ಶಯನ ಮಾಡುತ್ತಾನೆ. ಭಾದ್ರಪದ ಶುದ್ಧ ಏಕಾದಶಿಯಂದು ಮಗ್ಗಲು ಬದಲಿಸುತ್ತಾನೆ. ಕಾರ್ತೀಕ ಶುದ್ಧ ಏಕಾದಶಿಯಂದು ಏಳುತ್ತಾನೆ. ಈ ಎಲ್ಲ ಭಗವಂತನ ಉತ್ಸವವನ್ನು ಮಾಡಿಸಿದವರು ನೋಡಿದವರು ಪುಣ್ಯಭಾಗಿಗಳು ಆಗುತ್ತಾರೆ.

ಭಾದ್ರಪದ ಶುಕ್ಲ ಏಕಾದಶಿ ದಿನ ಜಗನ್ನಾಥ ಸ್ವಾಮಿಯನ್ನು ಮಲಗಿಸಿದ ಶಯನಗೃಹದಲ್ಲಿ ಮೆಲ್ಲನೆ ಉತ್ಸವ ಮಾಡುವವರು ಪ್ರವೇಶಿಸಬೇಕು. ಹಾಸಿಗೆಯ ಮೇಲೆ ಶಯನ ಮಾಡಿದ ಜಗದೀಶ್ವರನಿಗೆ ನಮಸ್ಕಾರ ಮಾಡಿ ಅವನ ಚರಣಗಳನ್ನು ಪೂಜಿಸಬೇಕು. ಉಪನಿಷತ್ತಿನ ಮಂತ್ರಗಳಿಂದ ಸ್ತೋತ್ರ ಮಾಡಬೇಕು. ಅನಂತರ ಕೆಳಗೆ ಹೇಳಿದಂತೆ ಪ್ರಾರ್ಥನೆ ಮಾಡಿ ಆ ಭಗವನ್ಮೂರ್ತಿಗಳನ್ನು ಮಗ್ಗಲು ಬದಲಿಸಿ ಶಯನ ಮಾಡಿಸಬೇಕು. ಅದಕ್ಕಾಗಿ ಆ ದೇವನನ್ನು ಹೀಗೆ ಪ್ರಾರ್ಥಿಸಬೇಕು. ''ಭಗವನ್! ನೀನು ಸ್ವೇಚ್ಛೆಯಿಂದಲೇ ಜಾಗ್ರತ್, ಸ್ವಪ್ನ ಸುಷುಪ್ತಿ ರೂಪ ಚೇಷ್ಟೆಗಳ ಮುಖಾಂತರ ಜಗತ್ತಿಗೆ ಹಿತವನ್ನು ಉಂಟುಮಾಡಲಿಕ್ಕಾಗಿಯೇ ಶಯನವನ್ನು ಮಾಡಿರುತ್ತಿ. ನೀನು ಮಲಗಿ ಬಹಳ ಕಾಲ ಆಯಿತು. ಈಗ ಮಗ್ಗಲನ್ನು ಬದಲಿಸು. ಜಗತ್ತನ್ನು ಪಾಲನ ಮಾಡುವ ನೀನು ಈಗ ಮಗ್ಗಲನ್ನು ಬದಲಿಸಿ ಮಲಗುವ ಕಾಲವು ಸನ್ನಿಹಿತವಾಗಿದೆ!'' ಹೀಗೆ ಪ್ರಾರ್ಥನೆಯನ್ನು ಮಾಡಬೇಕು. ಭಗವತ್ಪ್ರಾರ್ಥನೆಯ ನಂತರ ಚಾಮರ ಬೀಸಿ ಸುಗಂಧಯುಕ್ತವಾದ ಚಂದನವನ್ನು ದೇವರ ಅಂಗಾಂಗಳಿಗೆ ಲೇಪಿಸಬೇಕು. ಅನಂತರ ರುಚಿಕರವಾದ ಮಿಠಾಯಿ ಖೀರು, ಹಲ್ವಾ ಮೊದಲಾದ ಪಕ್ವಾನ್ನಗಳನ್ನು, ಹಣ್ಣುಹಂಪಲಗಳನ್ನು, ಸ್ವಾದಿಷ್ಟವಾದ ವ್ಯಂಜನಗಳನ್ನು ತುಪ್ಪದಲ್ಲಿ ಮಾಡಿದ ಬೇರೆ ಬೇರೆ ಪಕ್ವಾನ್ನಗಳನ್ನು ಎಲೆ ಅಡಿಕೆ ತಾಂಬೂಲವನ್ನು ಶಯನಗೃಹದ ಬಾಗಿಲ ಬಳಿ ಇಟ್ಟು ಭಗವಂತನಿಗೆ ನಿವೇದನ ಮಾಡಬೇಕು.

ಕೌಮುದೀ ಎಂಬ ಮಹೋತ್ಸವದ ಸಮಯದಲ್ಲಿ ಜಗನ್ನಾಥ ಸ್ವಾಮಿಯ ಪೂಜೆಯನ್ನು ಮಾಡಿ ಹುಣ್ಣಿಮೆಯ ರಾತ್ರಿಯಂದು ಅತ್ಯಂತ ಭಕ್ತಿಯಿಂದ ಭಗವಂತನನ್ನು ಪೂಜಿಸಬೇಕು. ಬಳಿಕ ಕಾರ್ತೀಕ ಮಾಸವು ಆರಂಭವಾದ ನಂತರ ವ್ರತದ ಸಂಕಲ್ಪಮಾಡಿ ಶುಕ್ಲಪಕ್ಷ ಏಕಾದಶಿಯವರೆಗೆ ನಿಯಮದಿಂದ ಇರಬೇಕು. ಏಕಾದಶಿಯ ದಿನ ಶಯನ ಮಾಡಿದ ಸ್ವಾಮಿಯನ್ನು ಎಬ್ಬಿಸಬೇಕು. ಶುಕ್ಲಪಕ್ಷ ಏಕಾದಶಿಯ ದಿನ ಉಪವಾಸ ಮಾಡಿ ದೇವರ ಪೂಜಾದಿಗಳನ್ನು ಸಕಾಲದಲ್ಲಿ ಆಚರಿಸಬೇಕು. ಅರ್ಧರಾತ್ರಿಯ ಸಮಯದಲ್ಲಿ ಜಗನ್ನಾಥಸ್ವಾಮಿಯ ವಿಶೇಷ ಪೂಜೆ ಮಾಡಿ ಕೆಳಗೆ ಹೇಳಿದ ಮಂತ್ರಗಳನ್ನು ಹೇಳಿ ಮಲಗಿದ ಶ್ರೀಹರಿಯನ್ನು ಎಬ್ಬಿಸಬೇಕು.

> ಉತ್ತಿಷ್ಠ ದೇವ ದೇವೇಶ ತೇಜೋರಾಶೇ ಜಗತ್ಪತೇ ।
> ವೀಕ್ಷಸ್ವ ಸಕಲಂ ದೇವ ಪ್ರಸುಪ್ತಂ ತವ ಮಾಯಯಾ ॥
> ಪ್ರಫುಲ್ಲ-ಪುಂಡರೀಕ -ಶ್ರೀ-ಹಾರಿಣಾ ನಯನೇನ ವೈ ।
> ತ್ವಯಾ ದೃಷ್ಟಂ ಜಗದಿದಂ ಪಾವಿತ್ರ್ಯಂ ಪರಮೇಷ್ಯತಿ ॥

''ದೇವತೆಗಳಿಗೆಲ್ಲ ಪರದೇವತೆ ಎನಿಸಿದ, ತೇಜಸ್ಸಿನ ರಾಶಿಯಂತಿದ್ದ, ಜಗನ್ನಾಥನೇ! ಏಳು. ನಿನ್ನ ಮಾಯೆಯಿಂದ ಮಲಗಿರುವ ಈ ಪ್ರಪಂಚವನ್ನೆಲ್ಲ ನೋಡು. ಬಿರಿದ ತಾವರೆಯ ಸಿರಿಯನ್ನು ಅಪಹರಿಸುವ ಈ ನಿನ್ನ ಕಣ್ಣುಗಳಿಂದ ನೋಡಲ್ಪಟ್ಟ ಈ ಪ್ರಪಂಚವೆಲ್ಲವೂ ಪರಮ ಪವಿತ್ರವಾಗುವದು.''

ಈ ಮಂತ್ರ ಹೇಳಿ ಮಲಗಿದ ದೇವರನ್ನು ಎಬ್ಬಿಸಬೇಕು. ಈ ವೇಳೆಯಲ್ಲಿ ಶಂಖ, ಜಾಗಟೆ, ಡೊಳ್ಳು, ನಗಾರಿ, ತಾಳ, ಕೊಂಬು, ಕಹಳೆ, ಬಜಂತ್ರಿ ಮುಂತಾದ ಬಗೆಬಗೆಯ ವಾದ್ಯಗಳನ್ನು ಮೊಳಗಿಸುತ್ತಾ ಹಾಡುಗಳನ್ನು ಹಾಡುತ್ತಾ ಮಲಗಿದ ಮೂರ್ತಿಗಳನ್ನು ಎತ್ತಿಕೊಂಡು ನೃತ್ಯ ಮಂಟಪಕ್ಕೆ ಕರೆದುಕೊಂಡು ಬರಬೇಕು. ಅಲ್ಲಿ ಸುಗಂಧಿ ಎಣ್ಣೆಯನ್ನು ಮೈಗೆ ಲೇಪನ ಮಾಡಿ ಪಂಚಾಮೃತದಿಂದ ಅಭಿಷೇಕ ಮಾಡಬೇಕು. ತೆಂಗಿನ ನೀರಿನಿಂದ ಸ್ನಾನ ಮಾಡಿಸಬೇಕು. ಚಂದನದ ಹುಡಿ ಅಥವಾ ತುಳಸಿಯ ಚೂರ್ಣಗಳಿಂದ ತಿಕ್ಕಿ ಚಂದನ ನೀರಿನಿಂದ ತೊಳೆದು ಪ್ರತಿಮೆಗಳನ್ನು ಸ್ವಚ್ಛ ಮಾಡಿ ನಂತರ ನೀರಿನಿಂದ ಸ್ನಾನ ಮಾಡಿಸಬೇಕು.

ಅನಂತರ ವಸ್ತ್ರಾಭರಣಗಳನ್ನು ಧಾರಣ ಮಾಡಿಸಿ ಆರತಿ ಬೆಳಗಬೇಕು. ಮತ್ತು ಕೈ ಮುಗಿದು "ಪ್ರಭು, ಈ ಪ್ರಪಂಚವೆಲ್ಲವೂ ನಿನಗೆ ಶರಣಾಗತವಾಗಿದೆ. ನಿನ್ನ ಕೃಪಾ ದೃಷ್ಟಿಯಿಂದ ನೋಡಿ ಎಲ್ಲವನ್ನೂ ಪವಿತ್ರಗೊಳಿಸು" ಎಂದು ಪ್ರಾರ್ಥಿಸಬೇಕು. ಅನಂತರ ಉಳಿದ ರಾತ್ರಿಯನ್ನೆಲ್ಲ ಭಗವಂತನ ಭಜನೆ, ಧ್ಯಾನ, ನಾಮ ಸಂಕೀರ್ತನೆ, ನೃತ್ಯ ಗೀತೆಗಳನ್ನು ಹಾಡುತ್ತ, ಮಾಡುತ್ತ, ನೋಡುತ್ತ ಕಳೆಯಬೇಕು. ಹೀಗೆ ಭಗವಂತನ ಉತ್ಥಾಪನೆ ಮಹೋತ್ಸವವನ್ನು ಮಾಡಿಸಿದವರು ನೋಡಿದವರು ಮತ್ತು ಶಯನದಿಂದ ಎದ್ದುಕುಳಿತ ಗದಾಧರನ ದರ್ಶನ ಮಾಡಿಕೊಂಡವರು ತಮ್ಮ ಅಜ್ಞಾನ ನಿದ್ರೆಯಿಂದ ಹೊರಬಂದು ದಿವ್ಯ ಸದ್ಗತಿಯನ್ನು ಹೊಂದುತ್ತಾರೆ.

ಸಾಲಿಗ್ರಾಮ ಶಿಲೆಯಲ್ಲಿ ಭಗವಂತನು ನಿತ್ಯವೂ ಸನ್ನಿಹಿತನಾಗಿರುತ್ತಾನೆ. ಆ ಶಿಲೆಯಲ್ಲಿ ಚಕ್ರರೂಪದಿಂದ ಇರುವ ಭಗವಂತನ ನಿತ್ಯ ಪೂಜೆಯು ಸರ್ವಪಾಪ ಪರಿಹಾರಕ. ಮಾರ್ಗಶಿರ ಶುಕ್ಲಪಕ್ಷ ಷಷ್ಠೀ ದಿನದಂದು ದೇವರಿಗೆ ಪ್ರಾವರಣೋತ್ಸವವನ್ನು ಮಾಡಿಸಬೇಕು. ಮಾರ್ಗಶೀರ್ಷ ಶುಕ್ಲ ಪಂಚಮೀ ದಿನವೇ ರಾತ್ರಿ ಭಗವಂತನಿಗೆ ಭಕ್ತಿಯಿಂದ ವಸ್ತ್ರಾಧಿವಾಸವನ್ನು ಮಾಡಬೇಕು. ಎಂದರೆ, ವಸ್ತ್ರಗಳ ಮಧ್ಯದಲ್ಲಿಯೇ ಮೂರ್ತಿಯನ್ನು ಇರಿಸಿ, ಮೇಲೆ ಬೇರೆ ವಸ್ತ್ರದಿಂದ ಹೊದಿಸಬೇಕು ಮತ್ತು ಆ ವಸ್ತ್ರವನ್ನು ಕೈಯಿಂದ ಮುಟ್ಟಿ- "ವಸ್ತ್ರವೇ! ಜಗದ್ವ್ಯಾಪಿಯಾದ ವಿಷ್ಣುವನ್ನು ಆಚ್ಛಾದಿಸುವದರಿಂದ, ನೀನು ಮಾನ, ಅಥವಾ ವಸ್ತ್ರ ಎಂದು ಕರೆಯಲ್ಪಡುವೆ. ನೀನು ಜಗದೀಶ್ವರನ ವಾಸಸ್ಥಾನದಲ್ಲಿ ನಿವಾಸ ಮಾಡು" ಎಂದು ಪ್ರಾರ್ಥಿಸಬೇಕು. ಅನಂತರ ಚಂದನ ಪುಷ್ಪಗಳಿಂದ ಭಗವಂತನ ಮೂರ್ತಿಯನ್ನು ಪೂಜಿಸಿ, ಭಗವಂತನ ಧ್ಯಾನ, ಗಾನ, ನೃತ್ಯ, ಭಜನೆ ಮುಂತಾದವುಗಳಿಂದ ಜಾಗರಣ ಮಾಡಿ ಉಳಿದ ರಾತ್ರಿಯನ್ನೆಲ್ಲ ಕಳೆಯಬೇಕು.

ಅರುಣೋದಯ ಕಾಲದಲ್ಲಿ ಹಿಂದಿನಂತೆ ಏಕಾಗ್ರ ಮನಸ್ಸಿನಿಂದ ಮತ್ತೆ ಮತ್ತೆ ಪರಮಾತ್ಮನ ಪೂಜೆಯನ್ನು ಮಾಡಬೇಕು. ಅನಂತರ ಆ ದೇವಮಂದಿರದ ಹೊರಗಿನ ಸುತ್ತಿನಲ್ಲಿ ಮೂರು ಪ್ರದಕ್ಷಿಣೆ ಹಾಕಿ ಒಳಗಿನ ಪ್ರಾವರಣದಲ್ಲಿಯೂ ಆ ಮೂರ್ತಿಗೆ ಪ್ರದಕ್ಷಿಣೆ ಹಾಕಿ ಗರ್ಭಾಗಾರದಲ್ಲಿ ಕರೆದೊಯ್ಯಬೇಕು. ಆ ವಸ್ತ್ರವನ್ನು ತೆಗೆದು ಬೇರೆ ವಸ್ತ್ರಾಭರಣವನ್ನು ಇಡಿಸಿ ಅಲಂಕರಣಗೊಳಿಸಿ ಪೂಜೆಮಾಡಿ ಆರತಿಯನು ಬೆಳಗಬೇಕು. ಹೇಮಂತ ಋತುವಿನಲ್ಲಿ, ನೃಸಿಂಹದೇವರಿಗೆ ಉತ್ತಮ ವಸ್ತ್ರಗಳನ್ನು ಯಾರು ಸಮರ್ಪಿಸುವರೋ ಅಥವಾ ಆಚ್ಛಾದನ ಮಹೋತ್ಸವವನ್ನು ನೋಡುವರೋ ಅವರು ಎಂದೂ ಅಜ್ಞಾನ ಮೋಹಗಳಿಂದ ಆಚ್ಛಾದಿತರು ಆಗುವದಿಲ್ಲ. ದೇವಾಧಿದೇವನಾದ

ಶಾಸ್ತ್ರೋಕ್ತ ವಿಧಿಯಿಂದ ವೇದಮಂತ್ರಗಳಿಂದ ಅವುಗಳ ಪ್ರತಿಷ್ಠೆ ಮಾಡಬೇಕು. ರಥ ಹೋಗಿ ಬರುವ ದಾರಿಯನ್ನು ಚೆನ್ನಾಗಿ ಗುಡಿಸಿ, ನೀರಿನಿಂದ ಥಳಿಹಾಕಿ ಸುಗಂಧಿ ಜಲವನ್ನು ಸಿಂಪಡಿಸಿ ಮಾರ್ಗದ ಎರಡೂ ಬದಿಗಳಲ್ಲಿ ಕಬ್ಬಿಣದ ತುಂಡುಗಳನ್ನು ನಿಲ್ಲಿಸಿ ಮಧ್ಯದಲ್ಲಿ ಹೂವಿನ ಮಂಟಪ, ಕಮಾನು, ಹಂದರ, ಚಾಮರ, ನಿಶಾನೆ, ಸುಂದರ ವಸ್ತ್ರ, ಹೂವಿನಗುಚ್ಛ, ಹಸಿರು ಬಳ್ಳಿ ಮುಂತಾದವುಗಳನ್ನು ಅಲ್ಲಲ್ಲಿ ಇಟ್ಟು ನೆಟ್ಟು ಜಾಲಾಡಿಸಿ ತೂಗಾಡಿಸಿ ಮಾರ್ಗವನ್ನು ಶೃಂಗಾರಗೊಳಿಸಬೇಕು. ನೋಡುವವರಿಗೆ ಇದೊಂದು ಸುಂದರವಾದ ಹೂವಿನ ಹಂದರಗಳಿಂದ ಸುಶೋಭಿತವಾದ ವನಗಳ ಪಂಕ್ತಿಯೋ ಎಂದು ಕಾಣುವಂತೆ ಆಗಬೇಕು.

ಹೆಜ್ಜೆ ಹೆಜ್ಜೆಗೆ ದಾರಿಯ ಎರಡೂ ಅಕ್ಕಪಕ್ಕಗಳಲ್ಲಿ ಧೂಪ ಪಾತ್ರೆಗಳನ್ನು ಇಟ್ಟು ಅದರಲ್ಲಿ ಗುಗ್ಗಳು, ಲೋಬಾನ ಮುಂತಾದವುಗಳನ್ನು ಹಾಕಿ ಕಿಡಿ ತಾಕಿಸಿ ಸುಗಂಧವು ಎಲ್ಲೆಡೆಗೂ ಇಡುಗುವಂತೆ ಮಾಡಬೇಕು. ಬೀದಿಯ ಉದ್ದಕ್ಕೂ ಹಾಗೂ ತುದಿಬದಿಗಳಲ್ಲಿಯೂ ಚಂದನದ ನೀರನ್ನು ಪ್ರೋಕ್ಷಿಸಬೇಕು. ರಥೋತ್ಸವ ಕಾಲದಲ್ಲಿ ನಗಾರಿ, ಕೊಂಬು, ಕಹಳೆ, ಬಾಜಾ ಬಜಂತ್ರಿ ಮುಂತಾದ ಮಂಗಳವಾದ್ಯಗಳನ್ನು ಊದಿಸಬೇಕು, ಬೀದಿಗುಂಟ ನಿಶಾನೆಗನೂ ನೆಲದುದ್ದಕ್ಕೂ ತಳಿರು ಚಿಗುರು ಹೂವಿನ ಮಾಲೆಗಳನ್ನೂ ಸೂರೆ ಮಾಡಿಸಬೇಕು. ಮೆರವಣಿಗೆಯಿಂದ ನಡೆಯುವಂತೆ ಮಾಡಬೇಕು. ಆಷಾಢ ಶುಕ್ಲಪಕ್ಷದಲ್ಲಿ ಪುಷ್ಯನಕ್ಷತ್ರಯುಕ್ತವಾದ ದ್ವಿತೀಯಾ ತಿಥಿಯು ಬಂದ ಬಳಿಕ ಅರುಣೋದಯ ಸಮಯದಲ್ಲಿಯೇ ದೇವರ ಪೂಜೆ ಮಾಡಬೇಕು. ವೈಷ್ಣವರು ತಪಸ್ವಿಗಳು, ಯತಿಗಳು, ವಿದ್ವಾಂಸರು ಇವರನ್ನು ಮುಂದೆ ಮಾಡಿಕೊಂಡು ರಾಜರು ಭಗವಂತನನ್ನು ಯಾತ್ರೆ ಹೊರಡಲು ಪ್ರಾರ್ಥಿಸಬೇಕು.

"ಪ್ರಭೋ! ಹಿಂದೆ ನೀನು ಇಂದ್ರದ್ಯುಮ್ನ ರಾಜನಿಗೆ ಅಪ್ಪಣೆ ನೀಡಿದಂತೆ ಈಗ ರಥದಿಂದ ಗುಂಡಿಚಾಮಂಟಪಕ್ಕೆ ವಿಜಯಯಾತ್ರೆಯನ್ನು ಮಾಡುವವನಾಗು. ಅದಕ್ಕಾಗಿ ಪೃಥ್ವಿಯ ಮೇಲೆ ಚರಣವನ್ನು ಇರಿಸಿ ದಯಮಾಡಿಸು."

ಹೀಗೆ ಪ್ರಾರ್ಥಿಸಿ ದೇವರ ಮೂರ್ತಿಗಳನ್ನು ಮೆಲ್ಲನೆ ಎತ್ತಿಕೊಂಡು ಕರೆದೊಯ್ಯುವಾಗಲ್ಲೂ ದೇವಸ್ಥಾನಗಳಿಂದ ಮೂರ್ತಿಗಳನ್ನು ಕರೆದೊಯ್ಯುವಾಗಲ್ಲೂ ಕೆಲವರು ದಾರಿಗುಂಟ ಮಂಗಳ ಗೀತೆಗಳನ್ನು ಹಾಡಬೇಕು. ಕೆಲವರು ಜಯ ಜಯಕಾರ. ಹಲವರು ಜಿಂತಂತೇಸ್ತೋತ್ರ, ಉಳಿದವರು ನಾಮ ಸಂಕೀರ್ತನೆ. ವಿದ್ವಾಂಸರು ಬೇರೆ ಬೇರೆ ವೇದ ಮಂತ್ರಗಳನ್ನು ಹೇಳುತ್ತ ದೇವರ ಮುಂದೆ ಸಾಗಬೇಕು. ಸೂತ ಮಾಗಧರು ಭಗವಂತನ ಯಶೋಗೀತಗಾಥೆಗಳನ್ನು ಮೈದುಂಬಿ ಹಾಡಿಕುಣಿಯಬೇಕು. ಜಾಗಟೆ, ತಾಳ, ಕೊಳಲು, ತಂಬೂರಿ, ಬಜಂತ್ರಿ, ನಾಗಸ್ವರ ಮುಂತಾದ ವಿವಿಧ ವಾದ್ಯಗಳಿಂದ ಮಧುರ ಸ್ವರವನ್ನು ಹೊಮ್ಮಿಸಬೇಕು. ಪ್ರತಿಮೆಗಳನ್ನು ಹಿಡಿದುಕೊಂಡವರು ಮಾತ್ರ ಬಹಳ ಮೆಲ್ಲ ಮೆಲ್ಲನೆ ಹೆಜ್ಜೆಗಳನ್ನು ಇರಿಸುತ್ತ ದೇವರ ಮೂರ್ತಿಗಳನ್ನು ರಥದ ವರೆಗೆ ತಂದು ಪ್ರದಕ್ಷಿಣೆ ಹಾಕಿ ರಥದ ಮಧ್ಯದಲ್ಲಿ ಶೃಂಗಾರಿತವಾದ ಸುಭದ್ರ ಮಂಟಪದಲ್ಲಿ ಸ್ಥಾಪನೆ ಮಾಡಿಸಬೇಕು. ಮೂರು ಮೂರ್ತಿಗಳನ್ನು ಮೂರು ರಥಗಳ ಮಧ್ಯಭಾಗದಲ್ಲಿ ಮೆತ್ತನೆಯ ಗಾದಿಯ ಮೇಲೆ ಮೆಲ್ಲನೆ ಕೂಡಿಸಿ ವಸ್ತ್ರ ಆಭೂಷಣ ಮಾಲೆಗಳಿಂದ ಅಲಂಕರಿಸಿ ಬಗೆ ಬಗೆಯ ಉಪಚಾರಗಳನ್ನು ಸಲ್ಲಿಸಿ ಪೂಜೆ ಮಾಡಬೇಕು. ಅನಂತರ ಮಂಗಳವಾದ್ಯ ಘೋಷ

ಪೂರ್ವಕವಾಗಿ ಜಯ ಜಯಕಾರಗಳನ್ನೂ ಮಾಡುತ್ತ ಎಲ್ಲರೂ ಉತ್ಸಾಹದಿಂದ ಭಕ್ತಿಯಿಂದ ರಥಕ್ಕೆ ವಂದನೆ ಮಾಡಿ ದೇವರಿಗೆ ಕೈ ಮುಗಿದು ರಥಯಾತ್ರೆಯನ್ನು ಹೊರಡಿಸಬೇಕು.

ರಥಾರೂಢನಾದ ಶ್ರೀ ಜಗನ್ನಾಥನನ್ನು ಭಕ್ತಿಯಿಂದ ಒಮ್ಮೆ ನೋಡಿದವರು ಆ ಭಗವಂತನ ಮಂದಿರದಲ್ಲಿಯೇ ಮುಂದೆ ವಾಸ ಮಾಡುವರು. ರಥೋತ್ಸವದಲ್ಲಿ ದೇವರ ನಾಮ ಸಂಕೀರ್ತನೆ ಮಾಡುವದರಿಂದ ನೂರು ಜನ್ಮದಲ್ಲಿ ಮಾಡಿದ ಪಾಪಗಳೆಲ್ಲವೂ ನಷ್ಟವಾಗಿ ಹೋಗುವವು. ರಥದಲ್ಲಿ ಕುಳಿತು ಮಹಾವೇದಿಯ ಕಡೆಗೆ ಹೊರಟ ಶ್ರೀಕೃಷ್ಣ ಬಲರಾಮ ಸುಭದ್ರೆಯರ ದರ್ಶನ ಮಾತ್ರದಿಂದ ಮಾನವರ ಕೋಟಿ ಜನ್ಮದ ಪಾಪಗಳೆಲ್ಲವೂ ತೊಳೆದು ಹೋಗುವವು. ರಥೋತ್ಸವ ನಡೆದಾಗ ಅಕಸ್ಮಾತ್ ಮಳೆ ಆಗಿ ಮಾರ್ಗವು ಕೆಸರಾದರೂ ಉತ್ಸವವನ್ನು ನಿಲ್ಲಿಸಬಾರದು.

ಆ ಕೆಸರಿನ ವೀಥಿಯಲ್ಲಿಯೇ ಭಗವಂತನಿಗೆ ಅಡ್ಡ ಬಿದ್ದು ಸಾಷ್ಟಾಂಗ ಪ್ರಣಾಮವನ್ನು ಮಾಡಿದರೆ ಅನಾದಿ ಕಾಲದಿಂದಲೂ ಮಾನವನ ಮೇಲೆ ಬೆಳೆದುಬಂದ ಪಾಪದ ಕೆಸರು ಎಲ್ಲವು ತೊಡೆದು ಹೋಗುವದು. ಉತ್ಸವವು ಹೊರಟಾಗ ರಥದ ಮುಂದೆ ದೇವರ ಜಯ ಜಯಕಾರ, ಮಂತ್ರಸ್ತೋತ್ರ, ಗಾನನೃತ್ಯ ಮಾಡುವವರ ಪಾಪಗಳೆಲ್ಲವೂ ದೂರವಾಗಿ ಮೋಕ್ಷವು ಕರಗತವಾಗುವದು. ರಥವು ಮುಂದೆ ನಡೆದಾಗ ಚಾಮರ, ಬೀಸಣಿಕೆ, ಹೂವಿನ ಗುಚ್ಛ ಮುಂತಾದವುಗಳನ್ನು ಬೀಸಿ ಏರಿಸಿ ಸೇವೆ ಮಾಡುವವರೂ ವಿಷ್ಣು ಸಹಸ್ರನಾಮವನ್ನು ಪಠಿಸುವವರೂ ವೈಕುಂಠಲೋಕಕ್ಕೆ ಪ್ರಯಾಣ ಬೆಳೆಸುವರು.

ಹೀಗೆ ಗುಂಡಿಚಾ ನಗರದ ವರೆಗೆ ಹೋಗಿ ಜಗನ್ನಾಥ ಸ್ವಾಮಿಯು ಬಂದು ತೀರ್ಥದ ದಂಡೆಯ ಮೇಲೆ ಇಂದ್ರದ್ಯುಮ್ನ ರಾಜನಿಗೆ ಹಿಂದೆ ವರವನ್ನು ನೀಡಿದ ಪ್ರಕಾರ ಏಳು ದಿವಸ ವಾಸ ಮಾಡುತ್ತಾನೆ. ಆ ಏಳು ದಿನಗಳಲ್ಲಿಯೂ ತ್ರಿಕಾಲ ಸ್ನಾನ ಮಾಡಿ ಭಗವನ್ ಮೂರ್ತಿಗಳಿಗೆ ಭಕ್ತಿಯಿಂದ ಪೂಜೆ ಮಾಡಬೇಕು. ತುಪ್ಪ ಅಥವಾ ಎಣ್ಣೆಯ ದೀಪವನ್ನು ಹೊತ್ತಿಸಿಯಿಟ್ಟು ಅದು ಏಳು ದಿನವೂ ಆರದಂತೆ ಹಗಲೂ ರಾತ್ರಿ ರಕ್ಷಿಸಬೇಕು. ಹಗಲು ಮೌನದಿಂದಲೂ, ರಾತ್ರಿ ಜಾಗರಣದಿಂದಲೂ ಜಪ, ಮಂತ್ರ, ಪಾಠ, ಸ್ತೋತ್ರ, ನಾಮ ಸಂಕೀರ್ತನೆಗಳನ್ನು ಮಾಡುತ್ತ ಇರಬೇಕು. ಎಂಟನೆಯ ದಿನ ಆ ರಥಗಳನ್ನು ದಕ್ಷಿಣಾಭಿಮುಖವನ್ನಾಗಿ ಮಾಡಿ ಮೊದಲಿನಂತೆ ವಸ್ತ್ರ, ಮಾಲೆ, ಪತಾಕೆ ಚಾಮರ, ಪೀಠ, ಮಂಟಪ, ಗಾದಿ, ಆಸನ ಮುಂತಾದವುಗಳಿಂದ ಶೃಂಗರಿಸಬೇಕು. ಆಷಾಢ ಶುಕ್ಲ ನವಮಿ ಪ್ರಾತಃಕಾಲದಲ್ಲಿಯೇ ಆ ಎಲ್ಲ ಭಗವನ್ ಮೂರ್ತಿಗಳನ್ನು ರಥದಲ್ಲಿ ಕೂಡಿಸಿ ಮಂದಿರಕ್ಕೆ ಕರೆತರಬೇಕು. ಭಗವಂತನ ಈ ದಕ್ಷಿಣಾಭಿಮುಖ ಯಾತ್ರೆಯು ಅತ್ಯಂತ ದುರ್ಲಭ. ಇದರಲ್ಲಿಯೂ ಮೊದಲಿನ ಯಾತ್ರೆಯಂತೆ ಮರಳಿ ಬರುವಾಗ ಎಲ್ಲರೂ ಭಕ್ತಿಯಿಂದ ಭಾಗವಹಿಸಬೇಕು. ಉತ್ಸಾಹದಿಂದ ರಥವನ್ನು ಮೆಲ್ಲ ಮೆಲ್ಲನೆ ಮರಳಿ ಕರೆತರಬೇಕು. ಎರಡೂ ಯಾತ್ರೆಗಳು ಮೋಕ್ಷದಾಯಕ. ಭಗವಂತನ ಯಾತ್ರೆ ಮತ್ತು ಮರಳಿ ಮಂದಿರ ಪ್ರವೇಶ ಎರಡೂ ಕೂಡಿಯೇ ಒಂದು ಉತ್ಸವ ಎಂದು ಗಣಿಸಲ್ಪಡುವದು. ಈ ಯಾತ್ರೆಯು ಒಂಬತ್ತು ದಿನಗಳ ಒಂದು ನವರಾತ್ರಿ ಉತ್ಸವದಂತೆ ನಡೆಯುತ್ತದೆ. ಗುಂಡಿಚಾ ಮಂಟಪದಿಂದ ರಥದಲ್ಲಿ ಕೂತು ದಕ್ಷಿಣ ದಿಕ್ಕಿನ ಕಡೆಗೆ ಬರುತ್ತಲಿರುವ ಶ್ರೀಕೃಷ್ಣ ಬಲರಾಮ ಸುಭದ್ರೆಯರ ರಥಾರೂಢ ಪ್ರತಿಮೆಗಳ ದರ್ಶನ ಮಾಡಿಕೊಂಡವರು ಮೋಕ್ಷಕ್ಕೆ ಮುಖ್ಯಾಧಿಕಾರಿಗಳಾಗಿ ವೈಕುಂಠ ಲೋಕದಲ್ಲಿ ನಿರಂತರವಾಸ ಮಾಡುವರು

## ಚಾತುರ್ಮಾಸ್ಯದ ಮಹಿಮೆ

ಸೂರ್ಯನು ಕರ್ಕ ರಾಶಿಯಲ್ಲಿದ್ದಾಗ ಆಷಾಢ ಶುಕ್ಲ ಏಕಾದಶಿಯಿಂದ ಕಾರ್ತಿಕ ಶುಕ್ಲ ಏಕಾದಶಿಯವರೆಗೆ ಮಳೆಗಾಲದ ನಾಲ್ಕು ತಿಂಗಳುಗಳಲ್ಲಿ ಭಗವಾನ್ ಶ್ರೀವಿಷ್ಣುವು ಶಯನಮಾಡುತ್ತಾನೆ. ಇದು ಶ್ರೀಹರಿಯ ಆರಾಧನೆಯನ್ನು ಮಾಡಲು ಪರಮ ಪವಿತ್ರವಾದ ಸಮಯ. ಈ ಮಳೆಗಾಲದ ನಾಲ್ಕು ತಿಂಗಳುಗಳಲ್ಲಿ ಜಗನ್ನಾಥ ಸ್ವಾಮಿಯ ಸಮೀಪದಲ್ಲಿ ಎಷ್ಟು ದಿನ ಮನುಷ್ಯನು ಇರುತ್ತಾನೋ ಅಷ್ಟು ಸಮಯ ಪ್ರತಿದಿನವೂ ಅಶ್ವಮೇಧ ಯಜ್ಞ ಮಾಡಿದ ಪುಣ್ಯಫಲಕ್ಕೆ ಬಾಧ್ಯಸ್ಥನು ಆಗುತ್ತಾನೆ ಸಮುದ್ರದ ಪವಿತ್ರ ನೀರಿನಲ್ಲಿ ಸ್ನಾನ ಮಾಡಿ ಶ್ರೀಪುರುಷೋತ್ತಮನ ದರ್ಶನವನ್ನು ಮಾಡುತ್ತ ಚಾತುರ್ಮಾಸ್ಯ ವ್ರತದ ಪಾಲನ ಮಾಡುವದು ಮುಕ್ತಿಯ ಸಾಧನವಾಗಿದೆ.

ಚಾತುರ್ಮಾಸ್ಯದಲ್ಲಿ ಶ್ರೀಹರಿಯು ಹಾವಿನ ಹಾಸಿಗೆಯ ಮೇಲೆ ಶಯನ ಮಾಡುತ್ತಾನೆ. ಎಂಟು ತಿಂಗಳು ಪುರುಷೋತ್ತಮ ಕ್ಷೇತ್ರದಲ್ಲಿ ವಾಸ ಮಾಡಿ ಪ್ರತಿದಿನವೂ ಜಗನ್ನಾಥನ ದರ್ಶನ ಮಾಡುವದರಿಂದ ಬರುವ ಪುಣ್ಯವು ಚಾತುರ್ಮಾಸ್ಯದಲ್ಲಿ ಒಂದು ದಿನ ಮಾತ್ರ ಕ್ಷೇತ್ರವಾಸ ಹಾಗೂ ಭಗವಂತನ ದರ್ಶನದಿಂದ ಪಡೆಯುತ್ತಾನೆ ಭಕ್ತ. ಚಾತುರ್ಮಾಸ್ಯ ಕಾಲದಲ್ಲಿ ಶಾಕವ್ರತ, ಕ್ಷೀರವ್ರತ ದಧಿವ್ರತ, ದ್ವಿದಳವ್ರತ ಹೀಗೆ ನಾಲ್ಕು ಬಗೆಯಾದ ವ್ರತಗಳನ್ನು ಮಾಡಬೇಕು. ಮೊದಲನೆಯ ತಿಂಗಳು ಆಷಾಢ ಶುದ್ಧ ದಶಮಿಯಿಂದ ಶ್ರಾವಣ ಶುದ್ಧ ದಶಮಿ ದಿನ ಪೂರ್ತಿ ಶಾಕವ್ರತ ಎಂದರೆ ಯಾವದೇ ಬಗೆಯ ತರಕಾರಿ, ಕಾಯಿಪಲ್ಲೆಗಳನ್ನು ಆಗ ತಿನ್ನಕೂಡದು. ಶ್ರಾವಣ ಶುದ್ಧ ದಶಮಿಯಿಂದ ಭಾದ್ರಪದ ಶುದ್ಧ ದಶಮಿ ದಿನ ಪೂರ್ತಿವರೆಗೆ ದಧಿವ್ರತ. ಈ ಒಂದು ತಿಂಗಳ ಕಾಲ ಮೊಸರನ್ನ ಸೇವಿಸಕೂಡದು ಭಾದ್ರಪದ ಶುದ್ಧ ದ್ವಾದಶಿಯಿಂದ ಆರಂಭಿಸಿ ಆಶ್ವಿನಶುದ್ಧ ದಶಮಿಯ ದಿನ ಪೂರ್ತಿಯಾಗುವ ವರೆಗೆ ಕ್ಷೀರವ್ರತ ಈ ಒಂದು ತಿಂಗಳು ಹಾಲನ್ನು ಸೇವಿಸಕೂಡದು. ಆಶ್ವೀನ ಶುಕ್ಲ ದ್ವಾದಶಿಯಿಂದ ದ್ವಿದಳವ್ರತವು ಆರಂಭ. ಬೇಳೆ ಆಗುವ ಯಾವ ಧಾನ್ಯವನ್ನು ತಿನ್ನಕೂಡದು. ಒಂದು ತಿಂಗಳಕಾಲ ಈ ದ್ವಿದಳ ವ್ರತವು ಕಾರ್ತೀಕ ಶುಕ್ಲಪಕ್ಷ ದಶಮಿಯ ದಿನ ಪೂರ್ತಿಯಾಗುವವರೆಗೆ ಪಾಲಿಸಲ್ಪಡಬೇಕು.

ಚಾತುರ್ಮಾಸ್ಯಕಾಲದಲ್ಲಿ ಈ ಜಗನ್ನಾಥ ಕ್ಷೇತ್ರದಲ್ಲಿ ಈ ನಾಲ್ಕೂ ವ್ರತಗಳನ್ನು ಪಾಲಿಸಿದ ಮನುಷ್ಯನು ವಿಶೇಷ ಪುಣ್ಯವನ್ನು ಪಡೆಯುತ್ತಾನೆ. ಶ್ರೀಹರಿಯು ಪ್ರಸನ್ನನಾಗಲು ಈ ಪುಣ್ಯಕ್ಷೇತ್ರದಲ್ಲಿ ಈ ವಿಷ್ಣುಪಂಚಕ, ಭೀಷ್ಮಪಂಚಕ, ಧಾರಣೆ ಪಾರಣೆ, ಕೃಚ್ಛ್ರ. ಚಾಂದ್ರಾಯಣ ಮುಂತಾದ ಅನೇಕ ವ್ರತಗಳನ್ನು ಮಾಡುವದರಿಂದ ಭಗತ್ಪ್ರಸಾದವು ಸುಲಭವಾಗಿ ದೊರಕುವುದು.

ಮುನಿಗಳೇ! ನಿಮಗೆ ಒಂದು ರಹಸ್ಯ ಮಾತನ್ನು ಹೇಳುತ್ತೇನೆ. ಶ್ರೀ ವಿಷ್ಣುವಿನಲ್ಲಿ ಭಕ್ತಿಯಿಲ್ಲದೇ ಮಾನವನು ಎಷ್ಟು ವ್ರತಗಳನ್ನು ಪಾಲನಮಾಡಿದರೂ ವ್ಯರ್ಥ. ಆದರೆ ಶ್ರೀವಿಷ್ಣುವಿನಲ್ಲಿ ಅವಿಚ್ಛಿನ್ನ ಭಕ್ತಿಯನ್ನು ಮಾಡಿದರೆ ಎಲ್ಲ ವ್ರತಗಳನ್ನೂ ಮಾಡಿದ ಪುಣ್ಯಫಲವು, ಎಲ್ಲ ತೀರ್ಥಗಳ ಸ್ನಾನದ ಫಲವೂ, ಆ ಎಲ್ಲ ಸಾತ್ವಿಕ ದಾನಗಳ ಮಹಾಪುಣ್ಯವೂ, ಉಗ್ರ ತಪೋನುಷ್ಠಾನದ ಉತ್ತಮ ಪುಣ್ಯವೂ ಅನಾಯಾಸದಿಂದ ಲಭಿಸುವವು.

ತ್ರೇತಾಯುಗದಲ್ಲಿ ಶ್ವೇತ ಎಂಬ ರಾಜನು ಇದ್ದನು. ಅವನು ಚಾತುರ್ಮಾಸ್ಯ ಕಾಲದಲ್ಲಿ ಎಲ್ಲ ವ್ರತಗಳನ್ನು ಸರಿಯಾಗಿ ಪಾಲನ ಮಾಡುತ್ತಾ ಪುರುಷೋತ್ತಮನಲ್ಲಿ ಅತ್ಯಂತ ಭಕ್ತಿಯನ್ನು ಮಾಡುತ್ತಿದ್ದನು. ಇಂದ್ರದ್ಯುಮ್ನ ಮಹಾರಾಜನು ನಿಶ್ಚಿತಗೊಳಿಸಿದ ಪದ್ಧತಿಯಲ್ಲಿಯೇ ಜಗನ್ನಾಥಸ್ವಾಮಿಗೆ ಪ್ರತಿದಿನವೂ ಬಗೆಬಗೆಯ ಭಕ್ಷ್ಯ, ಭೋಜ್ಯ, ಪಕ್ವಾನ್ನ ಮೃಷ್ಟಾನ್ನಗಳನ್ನು ಷಡ್ರಸಗಳ ಭೋಜನವನ್ನು ಏರ್ಪಡಿಸಿ ಭಗವಂತನ ಸೇವೆಗೆ ನೈವೇದ್ಯಕ್ಕಾಗಿ ಕಳಿಸಿ ಕೊಡುವ ವ್ಯವಸ್ಥೆಯನ್ನು ಮಾಡಿದ್ದನು. ಒಂದು ದಿನ ಆ ಶ್ವೇತರಾಜನು ಪ್ರಾತಃಕಾಲದಲ್ಲಿ ಪೂಜೆಯ ಸಮಯದಲ್ಲಿ ಭಗವಂತನ ದರ್ಶನಕ್ಕಾಗಿ ತಾನೇ ಬಂದನು. ಅರ್ಚಕರು ಪೂಜೆಮಾಡುವಾಗ ಶ್ರೀಹರಿಯ ದರ್ಶನ ಮಾಡಿಕೊಂಡನು. ಮಂದಿರದ ಬಾಗಿಲ ಬಳಿ ಕೈ ಜೋಡಿಸಿ ಕೊಂಡು ನಿಂತನು. ಜಗನ್ನಾಥ ಸ್ವಾಮಿಗೆ ತಾನು ತಯಾರುಮಾಡಿ ಕಳಿಸಿದ ನಾನಾಬಗೆಯ ಭಕ್ಷ್ಯ ಭೋಜ್ಯ ರಸಪಾಕಗಳೆಲ್ಲವೂ ನೈವೇದ್ಯಕ್ಕಾಗಿ ದೇವರ ಎದುರು ಇರಿಸಲ್ಪಟ್ಟಿದ್ದವು. ಆಗ ಅವನ ಮನಸ್ಸಿನಲ್ಲಿ ಒಂದು ವಿಚಾರ ಬಂದಿತು. ''ಭಗವಾನ್ ಶ್ರೀಹರಿಯು ಮನುಷ್ಯನಿರ್ಮಿತವಾದ ಈ ಎಲ್ಲ ಭೋಜ್ಯ ಅಥವಾ ನೈವೇದ್ಯವನ್ನು ಸ್ವೀಕರಿಸುವನೇ? ಈ ಎಲ್ಲ ಬಾಹ್ಯಪೂಜನದ ಸಾಮಗ್ರಿಗಳು ಭಾವ ದೂಷಿತವಾದುದರಿಂದ ನಿಶ್ಚಿತವಾಗಿಯೂ ಭಗವಂತನನ್ನು ಪ್ರಸನ್ನಗೊಳಿಸಲಿಕ್ಕಿಲ್ಲ.''

ಹೀಗೆ ವಿಚಾರ ಮಾಡುತ್ತ ರಾಜನು ಕಣ್ಣು ತೆರೆದು ನೋಡಿದನು. ಒಂದು ವಿಚಿತ್ರ ದೃಶ್ಯವು ಆಗ ಅವನ ಕಣ್ಣಿಗೆ ಬಿದ್ದಿತು. ದಿವ್ಯ ಸಿಂಹಾಸನದ ಮೇಲೆ ಸಾಕ್ಷಾತ್ ಶ್ರೀವಿಷ್ಣುವು ವಿರಾಜಮಾನನಾಗಿದ್ದಾನೆ. ವಸ್ತ್ರಾಭರಣಗಳಿಂದ ವಿಭೂಷಿತಳಾಗಿ ಜಗದಂಬೆಯಾದ ಲಕ್ಷ್ಮೀದೇವಿಯು ನೈವೇದ್ಯಕ್ಕೆ ಇರಿಸಿದ ಬಗೆ ಬಗೆಯ ಪಕ್ವಾನ್ನಗಳನ್ನು ಬಡಿಸುತ್ತಿದ್ದಾಳೆ ಅಕ್ಕರತೆಯಿಂದ. ಜಗನ್ನಾಥಸ್ವಾಮಿಯು ಬಾಯಿ ತೆರೆದು ತಿನ್ನುತ್ತಿದ್ದಾನೆ ಪ್ರೀತಿಯಿಂದ. ಈ ಸುಂದರವಾದ ದೃಶ್ಯವನ್ನು ಕಂಡು ರಾಜನಿಗೆ ರೋಮಾಂಚನವಾಯಿತು. ಈ ದಿವ್ಯದೃಶ್ಯವನ್ನು ಕಂಡ ತನ್ನ ಜನ್ಮವೇ ಧನ್ಯ ಎಂದುಕೊಂಡ ಆ ಶ್ವೇತರಾಜ. ಅದನ್ನು ಕಣ್ಣುಬಿಟ್ಟು ನೋಡುವ ಧೈರ್ಯವಾಗದೇ ಭಯದಿಂದ ಕಣ್ಣುಮುಚ್ಚಿದ. ಆದರೆ ಇನ್ನೊಮ್ಮೆ ಧೈರ್ಯಮಾಡಿ ಮತ್ತೆ ಕಣ್ಣು ತೆರೆದ. ಪುನಃ ಅದೇ ದೃಶ್ಯ. ಶ್ರೀದೇವಿ ಬಡಿಸುತ್ತಿದ್ದಾಳೆ. ಶ್ರೀಹರಿಯು ಉಣ್ಣುತ್ತಿದ್ದಾನೆ. ಅಂದು ರಾಜನಿಗೆ ಬ್ರಹ್ಮಾನಂದವಾಯಿತು. ದೇವರ ನೈವೇದ್ಯವು ಮುಗಿದ ಬಳಿಕ ಆ ಲಕ್ಷ್ಮೀನಾರಾಯಣರ ಪ್ರಸಾದ ಶೇಷವನ್ನು ಭಕ್ತಿಯಿಂದ ಮಹಾರಾಜನು ತಾನು ಭಕ್ಷಣ ಮಾಡಿದ.

ಅಂದಿನಿಂದ ಆ ರಾಜನು ತನ್ನ ಜನ್ಮವನ್ನೆಲ್ಲ ಶ್ರೀಪುರುಷೋತ್ತಮನ ಸೇವೆಗಾಗಿಯೇ ಮೀಸಲಿಟ್ಟ. ಎಲ್ಲ ವ್ರತಗಳನ್ನು ಆಚರಿಸಿ ತಪಸ್ಸನ್ನು ಅನುಷ್ಠಾನ ಮಾಡಿದ. ಹಿಂದೆ ಹೇಳಿದ ಅನುಷ್ಟುಪ ಮಂತ್ರರಾಜನನ್ನು ನಿಯಮದಿಂದ ಜಪಿಸಿದ. ಆದರಿಂದ ಅವನ ರಾಜ್ಯದಲ್ಲಿ ಎಂದೂ ಕ್ಷಾಮ, ಅಕಾಲಮೃತ್ಯು, ರೋಗ, ಉಪದ್ರವಾದಿಗಳು ತಲೆದೋರಲಿಲ್ಲ. ಹೀಗೆ ನೂರು ವರ್ಷಗಳವರೆಗೆ ಧರ್ಮರಾಜ್ಯ ಶಾಸನ ಹಾಗೂ ಜಪ, ತಪೋನುಷ್ಠಾನ ಎರಡನ್ನೂ ಸಾಧಿಸಿ ಆ ಶ್ವೇತರಾಜನು ಕೊನೆಗೆ ಶ್ರೀ ನೃಸಿಂಹ ದೇವರ ಸಾಕ್ಷಾತ್ ದರ್ಶನವನ್ನು ಪಡೆದುಕೊಂಡು ಧನ್ಯನಾದ.

ಜಗನ್ನಾಥ ಸ್ವಾಮಿಯ ಈ ಪ್ರಾವರಣ ಮಹೋತ್ಸವವನ್ನು ಕಣ್ಣಿನಿಂದ ನೋಡುವವರು ಮತ್ತು ಭಕ್ತಿಪೂರ್ವಕವಾಗಿ ಭಗವಂತನ ದರ್ಶನವನ್ನು ಮಾಡಿಕೊಳ್ಳುವವರು ತಮ್ಮ ಮನೋಭೀಷ್ಟಗಳನ್ನೆಲ್ಲ ಪಡೆಯುತ್ತಾರೆ.

## ಪುಷ್ಯ ಸ್ನಾನೋತ್ಸವ

**ಜೈಮಿನಿ:**-ಪುಷ್ಯ ಮಾಸದಲ್ಲಿ ಪೂರ್ಣಿಮಾ ದಿನದಂದು ಪುಷ್ಯ ನಕ್ಷತ್ರಯೋಗವಿದ್ದಾಗ ಭಗವಂತನಿಗೆ ಪುಷ್ಯ ಸ್ನಾನೋತ್ಸವವನ್ನು ಮಾಡಬೇಕು. ಚತುರ್ದಶಿಯ ದಿನದಂದು ರಾತ್ರಿಯ ಕಾಲದಲ್ಲಿ ಎಂಬತ್ತೊಂದು ಕಲಶಗಳ ಅಧಿವಾಸನವನ್ನು ಮಾಡಬೇಕು. ದೇವರ ಎದುರು ಸರ್ವತೋಭದ್ರ ಮಂಡಲವನ್ನು ರಚಿಸಿ ಅದರ ನಟ್ಟನಡುವೆ ಒಂದು ದೊಡ್ಡ ಕನ್ನಡಿಯನ್ನು ಇರಿಸಬೇಕು. ರಾತ್ರಿಯಲ್ಲಿ ದೇವರ ಧ್ಯಾನ, ಭಜನ, ಗೀತ, ನೃತ್ಯ ಮುಂತಾದವುಗಳಿಂದ ಜಾಗರಣವನ್ನು ಮಾಡಬೇಕು. ಪ್ರಾತಃಕಾಲದಲಿ ಕನ್ನಡಿಯಲ್ಲಿ ಪ್ರತಿಬಿಂಬಿತವಾಗಿದ್ದ ಪುರುಷೋತ್ತಮನ ಮೂರ್ತಿಯನ್ನು ಬೇರೆ ಬೇರೆ ಉಪಚಾರಗಳಿಂದ ಪೂಜಿಸಬೇಕು. ಅನಂತರ ಭಗವಂತನ ದಿವ್ಯ ವಿಗ್ರಹಗಳಿಗೆ ಪುರುಷ ಸೂಕ್ತದಿಂದ ಅಭಿಮಂತ್ರಿತವಾದ ಕಲಶದಲ್ಲಿಯ ನೀರನ್ನು ದೇವರ ಮೂರ್ತಿಗಳ ಮೈ ತುಂಬಾ ಸುರಿಸುತ್ತಾ ಅಭಿಷೇಕ ಮಾಡಿಸಬೇಕು. ಪವಮಾನ ಸೂಕ್ತ ಹಾಗೂ ಶ್ರೀಸೂಕ್ತಗಳಿಂದ ಬಲಭದ್ರ ಹಾಗೂ ಸುಭದ್ರಾ ದೇವಿಯರಿಗೆ ಸ್ನಾನ ಮಾಡಿಸಬೇಕು. ಮತ್ತೆ "ಓಂ ನಮೋ ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ತನ್ನೋ ವಿಷ್ಣುಃ ಪ್ರಚೋದಯಾತ್' ಎಂಬ ವಿಷ್ಣು ಗಾಯತ್ರಿ ಮಂತ್ರದಿಂದ ಸುಗಂಧಿ ಜಲದಿಂದ ಸ್ನಾನಮಾಡಿಸಿ ಲಕ್ಷ್ಮೀ ಸೂಕ್ತದಿಂದ ಪೂಜೆಯನ್ನು ಮಾಡಬೇಕು. ಅನಂತರ ದೇವರ ಅಂಗಗಳಿಗೆ ಗಂಧ ಬಳಿದು ಚಂದನವನ್ನು ಲೇಪಿಸಬೇಕು. ಸುವಾಸನೆಯ ಹೂಗಳ ಮಾಲೆಯನ್ನು ಮೂರ್ತಿಗಳ ಕೊರಳಲ್ಲಿ ಹಾಕಬೇಕು. ಛತ್ರ ಚಾಮರ, ನೃತ್ಯ, ಗೀತೆ ಮುಂತಾದ ಸೇವೆಗಳನ್ನೆಲ್ಲಾ ಸಲ್ಲಿಸಬೇಕು. ಕರ್ಪೂರ ಬತ್ತಿ ಮುಂತಾದವುಗಳಿಂದ ಮೆಲ್ಲ ಮೆಲ್ಲನೆ ಅಡಿಯಿಂದ ಮುಡಿಯವರೆಗೆ, ಕಂಠದಿಂದ ಕೇಶದವರೆಗೆ, ಹೃದಯದಿಂದ ಮುಖ ಮಂಡಲದ ಸುತ್ತಲೂ ಹಂತ ಹಂತವಾಗಿ ಮಂಗಳಾರತಿಯನ್ನು ಮಾಡಬೇಕು. ಬಳಿಕ ಸುಗಂಧಿ ದ್ರವ್ಯಗಳಿಂದೊಡಗೂಡಿದ ಮಸಾಲೆಯ ತಾಂಬೂಲವನ್ನು ಸಮರ್ಪಿಸಬೇಕು. ಕೊನೆಗೆ ಆಚಾರ್ಯರಿಗೆ ದಕ್ಷಿಣೆಯನ್ನು ನೀಡಬೇಕು.

ಸೂರ್ಯನು ಉತ್ತರ ದಿಕ್ಕಿಗೆ ತಿರುಗಿ ಮಕರರಾಶಿಗೆ ಬಂದಾಗ ಉತ್ತರಾಯಣವು ಪ್ರಾರಂಭವಾಗುವದು. ಆ ಸಂಕ್ರಮಣ ಕಾಲಕ್ಕಿಂತ ಮೊದಲಿನ ಇಪ್ಪತ್ತು ಕಲಾಪರಿಮಿತವಾದ ಸಮಯವು ಪುಣ್ಯಕಾಲ ಎಂದೆನಿಸಲ್ಪಡುವದು. ಅದು ಪಿತೃಗಳಿಗೂ ದೇವತೆಗಳಿಗೂ ಅತ್ಯಂತ ಪ್ರಿಯವಾದುದು. ಈ ಸಂಕ್ರಮಣದ ಪರ್ವಕಾಲದಲ್ಲಿ ವಿಧಿಪೂರ್ವಕವಾಗಿ ಸಮುದ್ರ ಸ್ನಾನ ಮಾಡಿ ನಾರಾಯಣನನ್ನು ಪೂಜಿಸಬೇಕು. ಮೊದಲು ದಾರಿಯಲ್ಲಿ ಕಲ್ಪವೃಕ್ಷವನ್ನು ನಮಿಸಿ ಪ್ರವೇಶಿಸಬೇಕು ದೇವಮಂದಿರದಲ್ಲಿ. ನಂತರ ಮೂರುಬಾರಿ ಪುರುಷೋತ್ತಮನ ಪ್ರದಕ್ಷಿಣೆಗೈದು ಹಿಂದೆ ಹೇಳಿದ ಮಂತ್ರರಾಜದಿಂದ ಭಗವಂತನ ಪೂಜೆಗೈಯಬೇಕು. ಇದೇ ರೀತಿ ಬಲಭದ್ರ ಹಾಗೂ ಸುಭದ್ರಾದೇವಿಯರ ಪೂಜೆಯನ್ನು ಅವರವರ ಮಂತ್ರದಿಂದ ಮಾಡಬೇಕು. ಉತ್ತರಾಯಣದ ಪ್ರಾರಂಭ ಕಾಲದಲ್ಲಿ ಭಗವಾನ್ ವಿಷ್ಣುವಿನ ದರ್ಶನ ಮಾಡಿಕೊಂಡ ಮಾನವನುಸಂಸಾರ ಬಂಧನದಿಂದ ವಿಮುಕ್ತನಾಗುತ್ತಾನೆ. ಪೂರ್ವಕಾಲದಲ್ಲಿ

ಕಶ್ಯಪ ಮಹರ್ಷಿಗಳು ಸೃಷ್ಟಿ ರಚನೆಯಾದ ಬಳಿಕ ಶ್ರೀಜಗನ್ನಾಥಸ್ವಾಮಿಯ ಪ್ರೀತಿಗಾಗಿ ಈ ಉತ್ಸವವನ್ನು ಪ್ರಾರಂಭಿಸಿದರು. ಇದಕ್ಕೆ ಉತ್ತರಾಯಣೋತ್ಸವ ಎನ್ನುತ್ತಾರೆ. ಇದರಲ್ಲಿ ಅಡಿಗೆ ಮಾಡುವ ಪಾಕಶಾಲೆ ಭೋಜನ ಶಾಲೆಗಳನ್ನು ವಿಧಿಪೂರ್ವಕವಾಗಿ ಪರಿಷ್ಕರಿಸಬೇಕು. ಅನಂತರ ಅಗ್ನಿಯನ್ನು ಪ್ರತಿಷ್ಠೆಗೈದು ಭಗವಂತನ ನೈವೇದ್ಯಕ್ಕಾಗಿ ಎಲ್ಲ ಸೀದಾ ಸಾಮಗ್ರಿಗಳನ್ನು ಆ ಪಾಕಶಾಲೆಯಲ್ಲಿ ತಂದು ಇರಿಸಬೇಕು.

ಅಗ್ನ್ಯಾಧಾನಪೂರ್ವಕವಾಗಿ ಅಗ್ನಿಗೆ ಸಂಸ್ಕಾರವಾದ ಬಳಿಕ ಪ್ರತಿದಿನವೂ ದಿವ್ಯರೂಪಳಾದ ಸಾಕ್ಷಾತ್ ಲಕ್ಷ್ಮೀದೇವಿಯು ಅದೃಶ್ಯರೂಪದಿಂದ ಅಲ್ಲಿ ಬಂದು ಪರಮಾತ್ಮನಿಗೆ ಪಕ್ವಾನ್ನ ಭೋಜನಕ್ಕಾಗಿ ಬಗೆಬಗೆಯ ಮೃಷ್ಟಾನ್ನಗಳನ್ನು ಭಕ್ಷ ಭೋಜ್ಯ ವ್ಯಂಜನ ಶಾಕ ಪಾಕಾದಿಗಳನ್ನು ಸ್ವಯಂ ತಾನೇ ನಿಂತು ತಯಾರು ಮಾಡುತ್ತಾಳೆ. ಭಗವಂತನಿಗೆ ನೈವೇದ್ಯ ಸಮರ್ಪಣೆಯನ್ನು ಮಾಡಿ ವೈಶ್ವದೇವ ಬಲಿಹರಣಗಳನ್ನು ಮಾಡಿ ಯತಿಗಳಿಗೂ, ಯೋಗಿಗಳಿಗೂ ಶಿಷ್ಟ ವಿಶಿಷ್ಟ ಪಂಡಿತರಿಗೂ ಮೊದಲು ಭೋಜನ ಮಾಡಿಸಬೇಕು. ಅನಂತರ ಇಷ್ಟ ಮಿತ್ರ ಪರಿವಾರ ಪರಿಚಾರಕರೊಂದಿಗೆ ಯಾತ್ರಿಕನು ಭಗವಂತನ ಪ್ರಸಾದವನ್ನು ಸ್ವೀಕರಿಸಬೇಕು. ಈ ಕ್ಷೇತ್ರದಲ್ಲಿ ಮಕರ ಸಂಕ್ರಾಂತಿಯ ಉತ್ಸವದಲ್ಲಿ ನೀಡಿದ ದಾನ, ಮಾಡಿದ ಸ್ನಾನ, ಗೈದ ತಪ, ಕೈಕೊಂಡ ಹೋಮ, ನಡೆಸಿದ ಸ್ವಾಧ್ಯಾಯ, ಕೊಟ್ಟ ಪಿತೃತರ್ಪಣ, ಭಗವತ್ ಸೇವೆ ಎಲ್ಲವೂ ಅಕ್ಷಯ ಫಲಪ್ರಾಪ್ತಿಗೆ ಕಾರಣ.

ಫಾಲ್ಗುಣ ಮಾಸದಲ್ಲಿ ಶ್ರೀ ನಾರಾಯಣನಿಗೆ ಡೋಲಾ ಆರೋಹಣದ ಉತ್ಸವವನ್ನು ಮಾಡಬೇಕು. ಶ್ರೀವಿಷ್ಣುವಿನ ಗೋವಿಂದ ಎಂಬ ಹೆಸರಿನಿಂದ ಪ್ರಸಿದ್ಧವಾದ ಒಂದು ಪ್ರತಿಮೆಯನ್ನು ಮಾಡಿಸಬೇಕು. ದೇವಾಲಯದ ಮುಂದೆ ಹದಿನಾಲ್ಕು ಕಂಬಗಳ ಒಂದು ಎತ್ತರವಾದ ಚೌಕೋನ ಆಕಾರದ ಮಂಟಪವನ್ನು ತಯಾರು ಮಾಡಬೇಕು. ಈ ಮಂಟಪದ ನಾಲ್ಕೂ ಬಾಗಿಲಗಳ ಮೇಲೆ ನಾಲ್ಕು ಕಮಾನುಗಳನ್ನು ಮಾಡಿ ಮಧ್ಯದಲ್ಲಿ ಸುಂದರವಾದ ವೇದಿಕೆಯನ್ನು ನಿರ್ಮಿಸಬೇಕು. ಕಟ್ಟೆಯ ಮೇಲ್ಭಾಗದಲ್ಲಿ ಶ್ರೀ ಪರ್ಣಿ ಎಂಬ ಕಟ್ಟಿಗೆಯಿಂದ ಮಾಡಿದ ಭದ್ರಾಸನವನ್ನು ಸ್ಥಾಪಿತಗೊಳಿಸಿ ಐದು ದಿನ ಇಲ್ಲವೇ ಮೂರು ದಿನ ಫಾಲ್ಗುಣೋತ್ಸವವನ್ನು ಮಾಡಬೇಕು.

ಗೋವಿಂದನ ಪ್ರತಿಮೆಯಲ್ಲಿ ಆವಾಹನೆಯನ್ನು ಮಾಡಿ ಗಂಧ, ವಸ್ತ್ರ, ಮಾಲೆ, ಆಭರಣ ಅಲಂಕಾರಗಳಿಂದ ಆ ಮೂರ್ತಿಯನ್ನು ಶೃಂಗರಿಸಿ ಊರಲ್ಲಿ ಮೆರವಣಿಗೆಯಿಂದ ಜಗನ್ನಾಥನ ಮಂದಿರಕ್ಕೆ ಕರೆದೊಯ್ಯಬೇಕು. ಚತುರ್ದಶಿಯ ದಿನ ಪ್ರಾತಃಕಾಲದಲ್ಲಿ ಗೋವಿಂದನ ಶೃಂಗಾರಿತವಾದ ಆ ಪ್ರತಿಮೆಯನ್ನು ಜಗನ್ನಾಥನ ಎದುರು ಸ್ಥಾಪಿಸಿ ಎರಡೂ ದೇವರ ಪೂಜೆಯನ್ನು ಮಾಡಬೇಕು. ಅನಂತರ ವಸ್ತ್ರಮಾಲೆಗಳನ್ನು ತೆಗೆದು ಮಂತ್ರಜ್ಞರಾದ ಆ ಪುರುಷರು ಆ ಗೋವಿಂದನ ಉತ್ಸವ ಪ್ರತಿಮೆಯಲ್ಲಿ ನ್ಯಾಸವನ್ನು ಮಾಡಬೇಕು. ಮಂತ್ರಸಿದ್ಧಿಯುಳ್ಳ ವಿದ್ವಾಂಸರ ಆವಾಹನ, ನ್ಯಾಸ, ಮಂತ್ರ, ಜಪಗಳಿಂದ ಆ ಪ್ರತಿಮೆಯು ಒಮ್ಮೆಲೆ ಪುರುಷೋತ್ತಮನ ಪ್ರತಿರೂಪ ಆಗಿಬಿಡುವದು.

ಬಳಿಕ ಆ ಗೋವಿಂದನ ಮೂರ್ತಿಯನ್ನು ರತ್ನದ ಡೋಲಿಯಲ್ಲಿ ಕೂಡಿಸಿ ಸ್ನಾನ ಮಂಟಪಕ್ಕೆ ಕರೆದುಕೊಂಡು ಹೋಗಬೇಕು. ಅಲ್ಲಿ ಭದ್ರಾಸನದಲ್ಲಿ ಕೂಡಿಸಿ ಸುಗಂಧಿ ಜಲದಿಂದ ಶ್ರೀಸೂಕ್ತ, ಪುರುಷಸೂಕ್ತ, ವಿಷ್ಣುಸೂಕ್ತ ಸಮುದ್ರಸೂಕ್ತಾದಿಗಳಿಂದ ಅಭಿಷೇಕ ಮಾಡಬೇಕು. ಅಭಿಷೇಕ ಅನಂತರದಲ್ಲಿ ವಸ್ತ್ರ ಅಲಂಕಾರ ಹಾಗೂ ಪುಷ್ಪಹಾರಗಳಿಂದ

ಭಗವಂತನ ಮೂರ್ತಿಯನ್ನು ಶೃಂಗಾರಗೊಳಿಸಿ ಪೂಜೆ ಆರತಿಗಳನ್ನು ಮಾಡಿ ಏಳು ಸಲ ಮಂದಿರವನ್ನು ಪ್ರದಕ್ಷಿಣೆ ಹಾಕಬೇಕು.

ಅನಂತರ ಆ ಗೋವಿಂದನ ಮೂರ್ತಿಯನ್ನು ಡೋಲಾಮಂಟಪಕ್ಕೆ ಕರೆದುಕೊಂಡು ಬರಬೇಕು. ಮಂಟಪದ ಕೆಳಭಾಗದಲ್ಲಿ ಹಾಗೂ ಮೇಲ್ಭಾಗ ಮತ್ತು ಸ್ತಂಭವೇದಿಕೆಗಳ ಸುತ್ತ ಏಳು ಬಾರಿ ತಿರುಗಿಸಿಕೊಂಡು ರತ್ನ ಖಚಿತವಾದ ತೂಗು ಮಂಟದ ಮೇಲೆ ಭಗವಂತನನ್ನು ತಂದು ಕೂಡಿಸಬೇಕು. ಬಗೆಬಗೆಯ ಬೆಲೆಬಾಳುವ ಬಂಗಾರ-ಮುತ್ತು- ರತ್ನಗಳ ಆಭರಣಗಳಿಂದ ಶೃಂಗಾರಿತವಾದ ಆ ಗೋವಿಂದನ ಸುಂದರ ಮೂರ್ತಿಯನ್ನು ಅರಳಿದ ಕಮಲ ಪುಷ್ಪದ ಮಧ್ಯದಲ್ಲಿ ಕೂಡಿಸಿ ಲಕ್ಷ್ಮೀ ದೇವಿಯ ಮೂರ್ತಿಯನ್ನು ಅದರೊಂದಿಗೆ ಇರಿಸಬೇಕು.

ನಾಲ್ಕೂ ದಿಕ್ಕುಗಳಲ್ಲಿ ಸುಗಂಧವಾದ ಚಂದನದ ಪುಡಿಯನ್ನು ಎಲ್ಲೆಡೆ ಚಿಮುಕಿಸುತ್ತ, ಪನ್ನೀರನ್ನು ಸಿಂಪಡಿಸುತ್ತ ಗೋವಿಂದನ ಪೂಜೆಯನ್ನು ಮಾಡಬೇಕು. ಹೀಗೆ ಪೂಜೆ ಮಾಡಿ ಲಕ್ಷ್ಮೀನಾರಾಯಣರಿಂದ ಅಧಿಷ್ಠಿತವಾದ ಆ ಮಂಚವನ್ನು ಮಂತ್ರ ಸ್ತೋತ್ರ ಹಾಗೂ ಹಾಡುಗಳನ್ನು ಹಾಡುತ್ತಾ ತೂಗಬೇಕು. ಹೀಗೆ ಮೆಲ್ಲಮೆಲ್ಲನೆ ಧೂಪ-ದೀಪ-ನೈವೇದ್ಯಗಳನ್ನು ನಿವೇದಿಸಿ ಚಾಮರ ಬೀಸುತ್ತಾ ಮತ್ತೆ ಮತ್ತೆ ತೂಗಬೇಕು. ಪಕ್ಕದಲ್ಲಿ ಇರುವವರು ಭಗವಂತನಿಗೆ ಛತ್ರ ಎತ್ತಿ, ಚಾಮರ ಬೀಸಿ, ಬೀಸಣಿಕೆಯಿಂದ ಗಾಳಿ ಹಾಕಿ, ಮಂಗಳಾರತಿ ಮಾಡಿ, ಜೈ ಜೈ ಕಾರ ನುಡಿದು, ಹಾಡು ಹಾಡಿ ವಾದ್ಯಗಳನ್ನು ಬಾರಿಸಿ, ಕುಣಿದು ಸ್ತುತಿಸಿ, ವಿಜೃಂಭಣೆಯಿಂದ ಉತ್ಸವವನ್ನು ಮಾಡಬೇಕು. ಉತ್ಸವಕ್ಕೆ ಬಂದವರೆಲ್ಲರೂ ಏಳು ಬಾರಿ ದೇವರ ಆ ತೂಗು ಮಂಚವನ್ನು ತೂಗಬೇಕು. ತೂಗಾಡುವ ತೊಟ್ಟಿಲು ಅಥವಾ ಮಂಚದಲ್ಲಿ ಕುಳಿತುಕೊಂಡ ಶ್ರೀಗೋವಿಂದನ ಮೂರ್ತಿಯನ್ನು ದರ್ಶನ ಮಾಡಿದವರಿಗೆ ಮೋಕ್ಷವಾಗುವದರಲ್ಲಿ ಸಂದೇಹವಿಲ್ಲ. ಈ ಡೋಲೋತ್ಸವದಲ್ಲಿ ಜೂಲಾಡುತ್ತಿದ್ದ ತೊಟ್ಟಿಲು ಏರಿದ, ಮಂಚಾರೂಢನಾದ ಗೋವಿಂದನನ್ನು ಕಣ್ತುಂಬ ನೋಡಿ ಕೈಯಿಂದ ತೂಗಿ ಬಾಯಿಂದ ಹಾಡಿ ಉತ್ಸವದಲ್ಲಿ ಭಾಗಿಯಾದ ಮನುಷ್ಯನು ಸಕಲ ವಿಧವಾದ ಪಾಪಗಳಿಂದ ಮುಕ್ತನಾಗಿ ಮುಕ್ತಿಮಂಟಪದಲ್ಲಿ ಪ್ರವೇಶವನ್ನು ಪಡೆಯುವನು.

## ದ್ವಾದಶ ಆದಿತ್ಯ ಉಪಾಸನೆ; ದಕ್ಷಪ್ರಜಾಪತಿಗೆ ವರಪ್ರಾಪ್ತಿ

**ಜೈಮಿನಿ:-** ಮುನಿಗಳೇ, ಅನಾದಿ ದೇವನಾದ ಭಗವಾನ್, ಶ್ರೀ ವಿಷ್ಣುವಿನ ಹನ್ನೆರಡು ಮೂರ್ತಿಗಳು ಇರುತ್ತವೆ. ಅವುಗಳನ್ನು ಪ್ರತಿ ತಿಂಗಳು ಪೂಜಿಸಬೇಕು. ಒಂದೊಂದು ಮೂರ್ತಿಯನ್ನು ಒಂದೊಂದು ತಿಂಗಳು ಪೂಜೆ ಮಾಡುತ್ತ ಒಂದು ವರ್ಷದಲ್ಲಿ ಈ ದ್ವಾದಶ ಮೂರ್ತಿಗಳ ಪೂಜೆಯನ್ನು ಮಾಡಿ ಮುಗಿಸಬೇಕು. ಹನ್ನೆರಡು ಹೂ ಹನ್ನೆರಡು ಹಣ್ಣುಗಳಿಂದ ಪೂಜೆಯು ನಡೆಯಬೇಕು.

ಅಶೋಕ, ಮಲ್ಲಿಗೆ, ಪಾದರಿ, ಕನೇರ, ಚಮೇಲಿ, ಮಾಲತಿ, ಶತದಳ, ಕಮಲ, ನೀಲಕಮಲ, ವಾಸಂತಿ ಕಂದ, ಪುನ್ನಾಗ-ಈ ಹನ್ನೆರಡು ವಿಧವಾದ ಹೂಗಳಲ್ಲಿ ಒಂದೊಂದು ತಿಂಗಳು ಒಂದೊಂದು ಹೂವನ್ನು ಏರಿಸುತ್ತ ಹೋಗಬೇಕು. ಇದರಂತೆ ತೆಂಗು, ಮಾವು, ಖರ್ಜೂರ, ತಾಳ, ನಿಂಬೆ, ಶ್ರೀಫಲ, ನಾರಂಗಿ, ಅಡಿಕೆ, ಪೇರಲ, ನೀರಲ, ದ್ರಾಕ್ಷಿ, ಬೋರೆ ಈ ಹನ್ನೆರಡು ಹಣ್ಣುಗಳನ್ನು ಪ್ರತಿ ತಿಂಗಳು ಒಂದೊಂದನ್ನು ದೇವರಿಗೆ ಸಮರ್ಪಣೆ ಮಾಡಬೇಕು (ಇದರ ಅರ್ಥ ಒಂದು ತಿಂಗಳಲ್ಲಿ ಒಂದೇ ಹೂ ಒಂದೇ

ಹಣ್ಣನ್ನು ಸಮರ್ಪಿಸಬೇಕು ಎಂದಲ್ಲ. ಈ ಒಂದು ಜಾತಿಯ ಅನೇಕ ಹೂಗಳನ್ನು ಅನೇಕ ಹಣ್ಣುಗಳನ್ನು ದೊರೆತಷ್ಟು ಸಮರ್ಪಿಸಬಹುದು). ಇವಲ್ಲದೇ ಬಗೆ ಬಗೆಯ ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ ಎಂದರೆ ತಿನ್ನುವದು. ಚರ್ವಿಸುವದು, ಚೀಪುವದು, ನೆಕ್ಕುವದು ಎಂದು ನಾಲ್ಕು ಬಗೆಯಾದ ಬಗೆ ಬಗೆಯ ಷಡ್ರಸೋಪೇತವಾದ ಭೋಜನವನ್ನು ಸಾಧ್ಯವಾದಷ್ಟು ಸ್ವಾದಿಷ್ಟವನ್ನಾಗಿ ಮಾಡಿ ಪರಮಾತ್ಮನಿಗೆ ಸಮರ್ಪಿಸಬೇಕು ಮತ್ತು ಕೈಜೋಡಿಸಿ ಸ್ತೋತ್ರ ಮಾಡಬೇಕು- "ಸರ್ವವ್ಯಾಪಿಯಾದ ಜಗನ್ನಾಥ! ನೀನು ಭೂತ, ಭವಿಷ್ಯ, ವರ್ತಮಾನ ಎಂಬ ಮೂರು ಕಾಲಗಳಿಗೂ ನಿಯಾಮಕನಾಗಿರುತ್ತಿ. ಹಿಂದೆ ನೀನು ಏಕಾರ್ಣವ ಜಲದಲ್ಲಿ ಶಯನ ಮಾಡಿ ಮಧುಕೈಟಭರೆಂಬ ದುಷ್ಟ ದೈತ್ಯರನ್ನು ವಧಿಸಿದೆ. ತ್ರಿವಿಕ್ರಮನಾಗಿ ಮೂರು ಪಾದ ಭೂಮಿ ಬೇಡಿ. ಮೂರು ಲೋಕಗಳನ್ನು ಅಳೆದುಕೊಂಡು, ದೈತ್ಯರನ್ನು ಸಂಹರಿಸಿ ಮೂರು ಲೋಕಗಳನ್ನು ರಕ್ಷಿಸಿರುವೆ. ಋಗ್ವೇದ, ಯಜುರ್ವೇದ, ಸಾಮವೇದ, ಎಂಬ ಮೂರು ವೇದಗಳು ನಿನ್ನನ್ನು ಸ್ತೋತ್ರ ಮಾಡುತ್ತವೆ.

ನಿನ್ನ ಸಂಕಲ್ಪದಂತೆ ಬ್ರಹ್ಮ, ವಿಷ್ಣು, ಮಹೇಶ್ವರ ಈ ತ್ರಿಮೂರ್ತಿಗಳು ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರ ರೂಪ ಈ ಮೂರು ಕಾರ್ಯಗೈಯುವರು. ಅವರಲ್ಲಿ ನಿಂತು ನೀನೇ ಮಾಡಿಸುವೆ. ತ್ರಿಗುಣಾತ್ಮಕವಾದ ಪ್ರಕೃತಿಯಿಂದ ಚರಾಚರ ಜಗತ್ತನ್ನೆಲ್ಲ ನೀನೇ ಬಂಧಿಸಿರುವೆ. ಇಂಥ ನಿನ್ನನ್ನು ಯಶೋದಾ ಎಂಬ ಗೋಪಿಯು ತನ್ನ ಹಗ್ಗದಿಂದ ಬಿಗಿದು ಕಟ್ಟಿದ್ದರಿಂದ ನಿನಗೆ "ದಾಮೋದರ" ಎಂಬ ಹೆಸರು ಬಂದಿತು. ಹೀಗೆ ಅಚಿಂತ್ಯಾದ್ಭುತವಾದ ಮಹಿಮೆಯುಳ್ಳ ಸರ್ವವ್ಯಾಪಿ ನಾರಾಯಣನಿಗೆ ನಮಸ್ಕಾರ. ನಿನ್ನ ಅನುಗ್ರಹದಿಂದ ನನ್ನ ವ್ರತವು ಸಂಪೂರ್ಣವಾಗಲಿ" ಹೀಗೆ ಪ್ರತಿ ತಿಂಗಳು ದೇವರನ್ನು ಶಾಸ್ತ್ರೋಕ್ತ ದೇವಪೂಜಾ ಪದ್ಧತಿಯಂತೆ ಪೂಜೆ ಮಾಡಬೇಕು. ಭಕ್ತಿಯಿಂದ ಕೈ ಮುಗಿದು ಪ್ರಾರ್ಥನೆಯನ್ನು ಮೇಲಿನಂತೆ ಸಲ್ಲಿಸಬೇಕು. ಹಿಂದೆ ದಕ್ಷ ಪ್ರಜಾಪತಿಯು ವೈಶಾಖ ಶುಕ್ಲಪಕ್ಷ ತದಿಗೆಯ ದಿನ ಈ ಜಗನ್ನಾಥ ಸ್ವಾಮಿಯ ಅಂಗಗಳಿಗೆ ಚಂದನದ ಲೇಪವನ್ನು ಮಾಡಿ ಪ್ರಸನ್ನ ಮನಸ್ಸಿನಿಂದ ಹೀಗೆ ಸ್ತೋತ್ರ ಮಾಡಿದನು.

"ದೇವ ದೇವನಾದ ಜಗನ್ನಾಥ! ನೀನು ಸದಾ ಆನಂದಪೂರ್ಣ. ನಾವು ದುಃಖ ಪೂರ್ಣರು. ನಾವು ಸಂಸಾರದ ಚಿಂತಾ-ಸಂತಾಪಗಳಿಂದ ಸಂತಪ್ತರಾಗಿದ್ದೇವೆ. ಶ್ರೀಕೃಷ್ಣನೇ, ನೀನು ನಿನ್ನ ಕೃಪಾರಸವನ್ನು ಸುರಿಸುವ ಮೇಘನಾಗು. ನಿನ್ನ ಕರುಣೆಯ ರಸವೃಷ್ಟಿ ನನ್ನ ಮೇಲೆ ಆಗಲಿ. ಕಲಿಯುಗದ ಪಾಪದಿಂದ ಮೋಹಿತರಾದ ಮಾನವರ ಉದ್ಧಾರಕ್ಕಾಗಿಯೇ ನೀನು ಈ ನೀಲಾಚಲ ಗುಹೆಯಲ್ಲಿ ಅವತರಿಸಿ ನಿಂದಿರುವೆ. ಅವಿನಾಶಿಯಾದ ಪರಮೇಶ್ವರ, ನೀನು ಪ್ರಸನ್ನನಾಗು. ಈ ದೀನ ಹೀನನಾದ ಅಜ್ಞಾನಿ ಮಾನವನ ಮೇಲೆ ಕೃಪೆಯನ್ನು ಮಾಡು. "ಪ್ರಸೀದ, ಪ್ರಸೀದ ಜಗನ್ನಾಥ, ಕರುಣಾಂ ಕುರು" ಜಗದೀಶನೇ, ಪ್ರಸನ್ನನಾಗು. ನನ್ನ ಮೇಲೆ ನಿನ್ನ ಕರುಣೆಯ ಕೋಡಿ ಹರಿಸು". ಹೀಗೆ ಹೇಳುತ್ತ ದಕ್ಷನು ದಂಡಪ್ರಣಾಮ ಹಾಕಿದನು ಆ ಭಗವಂತನಿಗೆ. ಆಗ ಜಗದೀಶ್ವರನು ಹೇಳಿದನು.

**ವಿಷ್ಣು**:- "ವತ್ಸ! ಏಳು ನಾನು ನಿನ್ನ ಮೇಲೆ ಪ್ರಸನ್ನನಾಗಿದ್ದೇನೆ. ನಿನಗೆ ಬೇಕಾದ ವರವನ್ನು ನೀಡುತ್ತೇನೆ. ನನ್ನ ಅನುಗ್ರಹದಿಂದ ಪೂರ್ಣವಾಗುವದು ನಿನ್ನ ಮನೋರಥ. ನಾನು ನಿನಗೆ ವರವನ್ನು ಕೊಡುತ್ತೇನೆ. ಯಾವ ಮನುಷ್ಯನು ಭಕ್ತಿಯಿಂದ ಅಕ್ಷಯ ತೃತೀಯಾದ ದಿನ ಜಗನ್ನಾಥನ ಯಾತ್ರೆ ಮಾಡುವನೋ ಅವನು ಆ ಸಮಯದಲ್ಲಿ ಇಚ್ಛಾ

ಮಾಡಿದ್ದೆಲ್ಲವನ್ನೂ ಪಡೆಯುತ್ತಾನೆ. ಇಲ್ಲಿಯ ಗುಂಡಿಚಾ ಮಂಟಪ ಮೊದಲಾದ ಹನ್ನೆರಡು ಸ್ಥಳಗಳ ಮಹಾಯಾತ್ರೆಯು ಪರಮಪುಣ್ಯದಾಯಕ. ಇವೆಲ್ಲವೂ ಮುಕ್ತಿದಾಯಕ. ಇವುಗಳಲ್ಲಿಯ ಒಂದೊಂದು ತೀರ್ಥಕ್ಷೇತ್ರ ಯಾತ್ರೆಯೂ ಧರ್ಮಾರ್ಥ, ಕಾಮ, ಮೋಕ್ಷ ರೂಪವಾದ ನಾಲ್ಕು ಪುರುಷಾರ್ಥಗಳನ್ನು ಪ್ರದಾನ ಮಾಡುವದು.''

ಪ್ರಜಾಪತಿ ದಕ್ಷನನ್ನು ಕುರಿತು ಹೀಗೆ ಹೇಳಿ ಹರಿ ಅಂತರ್ಧಾನ ಹೊಂದಿದನು. ಶ್ರದ್ಧಾಳು ಆದ ದಕ್ಷಪ್ರಜಾಪತಿಯು ಒಂದು ವರ್ಷದವರೆಗೆ ನೀಲಾಚಲ ಪರ್ವತದ ಮೇಲೆ ಇದ್ದು ಅಲ್ಲಿ ನಡೆಯುವ ದೊಡ್ಡ ದೊಡ್ಡ ಉತ್ಸವಗಳನ್ನು ನೋಡಿದನು. ಆದರಿಂದ ಅವನ ಇಹಲೋಕದ ಮನದ ಕಾಮನೆಗಳೆಲ್ಲವೂ ಪೂರ್ಣವಾಗಿ ಮುಂದೆ ಅವನು ಮೋಕ್ಷಮಾರ್ಗ ಗಾಮಿಯಾದನು. ಈ ಸಂಸಾರದಲ್ಲಿ ಇರುವ ಸಮಸ್ತ ಚರಾಚರ ವಿಭೂತಿಗಳೆಲ್ಲವೂ ಶ್ರೀ ವಿಷ್ಣುವಿನ ವಿಭೂತಿಗಳೇ. ಅವನ ಅನುಗ್ರಹದಿಂದ ರೂಪಗೊಂಡವುಗಳೇ. ಯಾರು ಯಾವ ಭಾವನೆ ಯಿಂದ ಅವನ ಸೇವೆ ಮಾಡುವರೋ ಅವರು ಅಂಥ ಫಲ ಹೊಂದುವರು. ಧರ್ಮ, ಅರ್ಥ, ಕಾಮ, ಮೋಕ್ಷ ಈ ನಾಲ್ಕು ವಿಧವಾದ ಪುರುಷಾರ್ಥ ಪ್ರಾಪ್ತಿಗಾಗಿ ಇರುವ ಏಕೈಕ ಉಪಾಯ ವೆಂದರೆ ಕಟ್ಟಿಗೆಯ ಬ್ರಹ್ಮದ ಉಪಾಸನೆ ಅರ್ಥಾತ್ ಶ್ರೀ ಜಗನ್ನಾಥ ಸ್ವಾಮಿಯ ಆರಾಧನೆ.

ಧರ್ಮದ ಯಥಾರ್ಥ ಸ್ವರೂಪವನ್ನು ಯಾರೂ ನಿಶ್ಚಯ ಮಾಡಲು ಸಮರ್ಥರಿಲ್ಲ. ಭಗವಾನ್ ವಿಷ್ಣುವೇ ಧರ್ಮ. ಈ ಜನಾರ್ದನನು ಧರ್ಮ ಮತ್ತು ಜಗತ್ತು ಎರಡಕ್ಕೂ ಸ್ವಾಮಿ ಆಗಿದ್ದಾನೆ. ದೇವೇಂದ್ರನು ಈ ಜಗನ್ನಾಥ ಸ್ವಾಮಿಯನ್ನು ಭಕ್ತಿಯಿಂದ ಆರಾಧಿಸಿದ್ದರಿಂದ ಅವನಿಗೆ ತ್ರಿಲೋಕದ ಅಧಿಪತ್ಯವನ್ನು ಪ್ರದಾನ ಮಾಡಿದ್ದಾನೆ ಈ ಭಗವಂತ. ಆದ್ದರಿಂದ ಐಶ್ವರ್ಯವನ್ನು ಅಪೇಕ್ಷಿಸುವವರು 'ಇಂದ್ರನಲ್ಲಿ ಅಂತರ್ಯಾಮಿ ಯಾಗಿರುವ. ಇಂದ್ರ' ಎಂಬ ರೂಪವನ್ನು ಭಕ್ತಿಯಿಂದ ಪೂಜಿಸಬೇಕು. ಬ್ರಹ್ಮನಲ್ಲಿ ಇರುವ ಪರಬ್ರಹ್ಮ ರೂಪವನ್ನು ಆರಾಧಿಸಿದರೆ ವಂಶವು ಅಭಿವೃದ್ಧಿ ಹೊಂದುವದು. ಸನತ್ಕುಮಾರ ರೂಪದಲ್ಲಿರುವ ಆ ಭಗವಂತನನ್ನು ಅದೇ ರೂಪದಿಂದ ಚಿಂತನ ಮಾಡಿದರೆ ದೀರ್ಘಾಯುಷ್ಯ ಪ್ರಾಪ್ತಿಯಾಗುವದು. ಈ ಜಗನ್ನಾಥ ಸ್ವಾಮಿಯನ್ನು ಪೃಥುರಾಜನಲ್ಲಿರುವ ಪೃಥು ರೂಪದಿಂದ ಉಪಾಸನೆಗೈದರೆ ಸಂಪತ್ತು. ಬೃಹಸ್ಪತಿ ರೂಪದಲ್ಲಿ ಉಪಾಸಿಸಿದರೆ ಜ್ಞಾನ. ಸೂರ್ಯಂತರ್ಯಾಮಿಯಾದ ಆ ಆದಿತ್ಯ ಬ್ರಹ್ಮನನ್ನು ಧ್ಯಾನಮಾಡಿದರೆ ಅಜ್ಞಾನಾಂಧಕಾರವು ಕೂಡಲೇ ನಷ್ಟವಾಗುವದು. ಚಂದ್ರನ ರೂಪದಿಂದ ಉಪಾಸನೆಗೈದರೆ, ಅನುಪಮ ಸೌಭಾಗ್ಯ, ವಾಣೀಪತಿ ರೂಪದಿಂದ ಉಪಾಸಿಸಿದರೆ ಜ್ಞಾನ, ಯಜ್ಞೇಶ್ವರ ರೂಪದಿಂದ ಚಿಂತನೆ ಮಾಡಿದರೆ ಅಶ್ವಮೇಧ ಯಜ್ಞ ಮಾಡಿದ ಫಲ. ಕುಬೇರ ರೂಪದಿಂದ ಮಾಡಿದರೆ ಧನ ಸಮೃದ್ಧಿಯನ್ನು ಹೊಂದುತ್ತಾನೆ. ಹೀಗೆ ಬಗೆಬಗೆಯಾಗಿ ಅನಾಥರ ಮೇಲೆ ಅನುಗ್ರಹ ಮಾಡಲು ದಯಾ ಸಮುದ್ರನಾದ ಭಗವಾನ್ ನಾರಾಯಣನು ಕಾಷ್ಠಮಯ ಶರೀರ ಧಾರಣ ಮಾಡಿ ನಿವಾಸ ಮಾಡಿದ್ದಾನೆ ಈ ನೀಲಗಿರಿ ಬೆಟ್ಟದ ಮೇಲೆ.

**ಮುನಿಗಳು:-** ಪೂಜ್ಯರೇ, ವಿಷ್ಣುಭಕ್ತನಾದ ಇಂದ್ರದ್ಯುಮ್ನ ಮಹಾರಾಜನು ಮಂದಿರದ ಪ್ರತಿಷ್ಠೆ ಮಾಡಿದ ಬಳಿಕ ಏನು ಕಾರ್ಯ ಮಾಡಿದನು?

**ಜೈಮಿನಿ:-** ಸಾಕ್ಷಾತ್ ಪರಬ್ರಹ್ಮ ಸ್ವರೂಪನಾದ ಜಗನ್ನಾಥ ಸ್ವಾಮಿಯಿಂದ ವರ ಪಡೆದ ಬಳಿಕ ಇಂದ್ರದ್ಯುಮ್ನ ಮಹಾರಾಜನಿಗೆ ತಾನು ಕೃತಾರ್ಥ ಆದೆನು ಎನಿಸಿತು. ಪರಮಾತ್ಮನ ಆಜ್ಞೆಯಂತೆ ಅವನು ಎಲ್ಲ ತೀರ್ಥಯಾತ್ರೆಗಳನ್ನು ಮಾಡಿದನು. ಬಗೆಬಗೆಯ ಉತ್ಸವಗಳಿಂದ ಎಲ್ಲ ವಿಧವಾದ ಉಪಚಾರಗಳಿಂದ ಶ್ರೀಹರಿಯ ನಾನಾ ಪ್ರಕಾರದ ಪೂಜೆಗಳನ್ನು ಮಾಡಿದನು. ಮತ್ತು ಶ್ವೇತರಾಜನಿಗೆ ಪರಮಾತ್ಮನ ಆಜ್ಞೆ ಎಲ್ಲವನ್ನೂ ತಿಳಿಸಿ ಹೇಳಿ ನ್ಯಾಯೋಪೇತವಾದ ಈ ನುಡಿಗಳನ್ನು ಆಡಿದನು.

''ರಾಜನೇ, ನೀನು ಬಹುಶ್ರುತನಾದ ಮಹಾ ಪಂಡಿತ. ಧರ್ಮದಲ್ಲಿ ನಿನಗೆ ನಿಷ್ಠೆಯಿದೆ. ಭಗವಂತನಲ್ಲಿ ಭಕ್ತಿಯಿದೆ. ಪರಮ ಕರುಣಾಸಾಗರ ಆ ಪ್ರಭು. ನನ್ನ ಮೇಲೆ ಅನುಗ್ರಹ ಮಾಡುವ ಉದ್ದೇಶದಿಂದ ಆ ಭಗವಂತನು ಇಲ್ಲಿ ಅವತರಿಸಿ ಬಂದಿದ್ದಾನೆ. ಇಲ್ಲಿರುವ ದೀನ ದುಃಖಿತರನ್ನೆಲ್ಲ ಉದ್ಧಾರ ಮಾಡಲು ಇಲ್ಲಿಯೇ ನೆಲೆಸುತ್ತಾನೆ. ಭಗವದವತಾರಕ್ಕೆ ಉದ್ದೇಶ ನಾನು ಒಬ್ಬನಾದರೂ ಉದ್ಧಾರ ಎಲ್ಲರದೂ ಆಗುತ್ತದೆ. ಇದೊಂದು ಸಾಧಾರಣವಾದ ಕಟ್ಟಿಗೆಯ ಮೂರ್ತಿ ಎಂದು ಈ ಜಗನ್ನಾಥನನ್ನು ವ್ಯಾವಹಾರಿಕ ಬುದ್ಧಿಯಿಂದ ನೋಡಿದವರು ಅಧಃಪಾತವನ್ನು ಹೊಂದುತ್ತಾರೆ. ಈ ಮಂದಿರ ಪ್ರವೇಶ ಕಾಲದಲ್ಲಿ ಮೂರು ಲೋಕದ ಜನರು ಇಲ್ಲಿಗೆ ಬಂದುದನ್ನು ನೀನು ಪ್ರತ್ಯಕ್ಷ ನೋಡಿರುವೆ. ಬ್ರಹ್ಮಾದಿ ದೇವತೆಗಳೂ ಕೂಡ ಏಕಕಾಲದಲ್ಲಿ ಇಲ್ಲಿಗೆ ಬಂದಿದ್ದರು.

ಕಟ್ಟಿಗೆಯ ರೂಪದಿಂದ ಇಲ್ಲಿಗೆ ಬಂದು ನಿಂತವನು ಸಾಕ್ಷಾತ್ ಶ್ರೀವಿಷ್ಣುವೇ. ಭೂಲೋಕದಲ್ಲಿ ಇವನು ಒಂದು ಕಲ್ಪವೃಕ್ಷ. ಇವನ ಉಪಾಸನೆಯಿಂದ ಸಕಲ ಫಲಗಳೂ ಲಭ್ಯ. ಇಂಥ ಭೋಗ ಮತ್ತು ಮೋಕ್ಷ ಎರಡೂ ಫಲಗಳನ್ನು ನೀಡುವ ಆ ಜಗದೀಶ್ವರನನ್ನು ನೀನು ಸೇವೆ ಮಾಡು. ಪೌರರು ಹಾಗೂ ಪ್ರಜೆಗಳ ದ್ವಾರಾ ಪರಮಾತ್ಮನ ಎಲ್ಲ ಉತ್ಸವಗಳೂ ನಿರಂತರವಾಗಿ ಅವಿಚ್ಛಿನ್ನವಾಗಿ ನಡೆಯುವಂತೆ ನೋಡಿಕೋ. ಎಲ್ಲ ಉಪಚಾರಗಳನ್ನೂ ಸಲ್ಲಿಸಿ, ಮೂರೂ ಸಂಧ್ಯಾಕಾಲಗಳಲ್ಲಿ ನೃಸಿಂಹ ದೇವರ ಭಜನೆ ಪೂಜನೆಗಳನ್ನು ಮಾಡು. ಇದರಿಂದ ನಿನಗೆ ಶಾಂತಿ ದೊರೆಯುವದು.''

ಇದನ್ನು ಕೇಳಿ ಶ್ವೇತರಾಜನು ಆನಂದ ಪಟ್ಟು ಇಂದ್ರದ್ಯುಮ್ನನ ಅಪ್ಪಣೆಯನ್ನು ತಲೆಯಲ್ಲಿ ಹೊತ್ತು ನಡೆಸುವ ನಿರ್ಧಾರ ಮಾಡಿದನು. ರಾಜರ್ಷಿಯಾದ ಇಂದ್ರದ್ಯುಮ್ನನು ಇರುವವರೆಗೆ ಇಲ್ಲಿ ಎಲ್ಲ ವಿಧವಾದ ಪುಣ್ಯಕರ್ಮಗಳನ್ನು ಯಜ್ಞಯಾಗಗಳನ್ನು ಇಷ್ಟಾಪೂರ್ತಗಳನ್ನು ಪರೋಪಕಾರ. ಪರಶೋಕಾಪಹಾರ, ಅಧ್ಯಾತ್ಮ ಸಾಧನೆಗಳನ್ನು ಮಾಡಿಕೊಂಡು ಜಗನ್ನಾಥ ಸ್ವಾಮಿಯನ್ನು ಪ್ರಸನ್ನ ಮನಸ್ಕನನ್ನಾಗಿ ಮಾಡಿ ನಾರದರೊಂದಿಗೆ ಬ್ರಹ್ಮಲೋಕಕ್ಕೆ ಹೊರಟು ಹೋದನು.

''ಮುನಿಗಳೇ, ನಾನು ನಿಮಗೆ ಈ ಪುರುಷೋತ್ತಮ ಕ್ಷೇತ್ರದ ಮಹಾತ್ಮೆಯನ್ನು ನಿರೂಪಣೆ ಮಾಡಿದೆ. ಇಲ್ಲಿ ನಿತ್ಯ ನಿರಂತರವೂ ನೆಲೆಸಿ ನಿಂತ ಈ ಕಾಷ್ಠಬ್ರಹ್ಮನಾದ ಜಗನ್ನಾಥ ಸ್ವಾಮಿಯ ಮಾಹಾತ್ಮ್ಯೆಯನ್ನು ಭಕ್ತಿಪೂರ್ವಕವಾಗಿ ಹೇಳಿದವರು, ಕೇಳಿದವರು ಅನೇಕ ಅಶ್ವಮೇಧ ಯಜ್ಞ ಮಾಡಿದ ಫಲವನ್ನು ಹೊಂದುತ್ತಾರೆ.

ಈ ಪುರಾಣ ಶ್ರವಣವನ್ನು ಮಾಡುವ ವಿಧಾನವನ್ನು ಹೇಳುತ್ತೇನೆ. ಈ ಪುರಾಣವನ್ನು ಹೇಳಲಿಕ್ಕಾಗಿ ಶುದ್ಧ ಕುಲದಲ್ಲಿ ಹುಟ್ಟಿದ, ಪುರಾಣಸಾಗರವನ್ನು ಆಲೋಚನೆ ಮಾಡಿದ

ಮಹಾಪಂಡಿತನನ್ನು ಆಹ್ವಾನ ಮಾಡಬೇಕು. ಈ ವಿದ್ವಾಂಸನನ್ನು ಎತ್ತರವಾದ ಆಸನದ ಮೇಲೆ ಕೂಡಿಸಿ, ಕೊರಳಲ್ಲಿ ಮಾಲೆ ಹಾಕಿ ಚಂದನದಿಂದ ಹಣೆಯ ಮೇಲೆ ಲೇಪಿಸಿ, ಗೌರವಿಸಿ ಪುರಾಣ ಪ್ರಾರಂಭ ಮಾಡಿಸಬೇಕು. ಪುರಾಣ ಪ್ರವಚನ ಮಾಡುವ ವಿದ್ವಾಂಸನಲ್ಲಿ ವ್ಯಾಸರ ಸನ್ನಿಧಾನವು ಇರುತ್ತದೆ. ಆದ್ದರಿಂದ ಅವರಿಗೆ ಪ್ರಾರಂಭದಲ್ಲಿಯೇ ವಸ್ತ್ರ, ಚಂದನ, ಮಾಲೆ, ಆಭರಣಾದಿಗಳನ್ನು ಕೊಟ್ಟು ವಿವಿಧ ಉಪಚಾರಗಳಿಂದ ಅವರಲ್ಲಿ ಅಂತರ್ಗತ ವ್ಯಾಸರ ಪೂಜೆ ಮಾಡಿ ಪುರಾಣವನ್ನು ಶ್ರವಣ ಮಾಡಬೇಕು. ಕೇಳಲು ಬರುವ ಎಲ್ಲ ಭಕ್ತರಿಗೂ ಕೂಡಲು ಸರಿಯಾಗಿ ಆಸನಾದಿಗಳನ್ನು ಮಾಡಬೇಕು. ಪುರಾಣ ಹೇಳುವವರಿಗಿಂತ ಎತ್ತರ ಆಸನದಲ್ಲಿ ಕೂಡಬಾರದು. ಪುರಾಣ ನಡೆದಾಗ ಬೇರೆಯವರ ಜೊತೆ ಮಾತು. ವ್ಯರ್ಥ ವಾದಗಳನ್ನು ಮಾಡಬಾರದು. ಪುರಾಣ ಮುಗಿದ ಬಳಿಕ ಜಯಕೃಷ್ಣ ಜಗನ್ನಾಥ ಹರೇ ಎಂದು ಚಪ್ಪಾಳೆ ಇಕ್ಕಿ ಭಗವಂತನ ನಾಮ ಸಂಕೀರ್ತನವನ್ನು ಮಾಡಬೇಕು. ಪ್ರತಿದಿನವೂ ಭಕ್ತಿಯಿಂದ ಬಂಧು ಬಾಂಧವರಿಂದ ಒಡಗೂಡಿ ಸಂಪೂರ್ಣ ಪುರಾಣ ಶ್ರವಣವನ್ನು ಮಾಡಬೇಕು. ಪುರಾಣ ಪ್ರವಚನವೆಲ್ಲವೂ ಮುಗಿದ ಬಳಿಕ ಆ ಆಚಾರ್ಯರಲ್ಲಿ ಸಾಕ್ಷಾತ್ ವೇದವ್ಯಾಸರೇ ಬಂದು ನಿಂತಿದ್ದಾರೆ ಎಂದು ಭಾವಿಸಿ ಅವರಿಗೆ ವಸ್ತ್ರ, ಮಾಲೆ, ಚಂದನ ಮತ್ತು ಆಭೂಷಣಾದಿಗಳನ್ನು ಕೊಡಬೇಕು. ವಿಧಿಪೂರ್ವಕವಾಗಿ ಆಚಾರ್ಯ ಪೂಜೆ ಮಾಡಿ ಅವರಿಗೆ ಸಂತೋಷ ಆಗುವಂತೆ ದಕ್ಷಿಣೆಯನ್ನು ನೀಡಬೇಕು. ಅನಂತರ ಪುರಾಣ ಹೇಳಿದ ಪಂಡಿತರಿಗೂ ಕೇಳಲುಬಂದ ಭಾವಿಕರಿಗೂ ಯಥೇಚ್ಛ ಭೋಜನ ಮಾಡಿಸಬೇಕು.

**ಮುನಿ:-** ಪೂಜ್ಯರೇ, ಪಾಪರಾಶಿಯನ್ನು ನಾಶಮಾಡುವ ಈ ಪುರುಷೋತ್ತಮ ಕ್ಷೇತ್ರದ ಮಹಾತ್ಮೆಯನ್ನು ತಮ್ಮ ಮುಖದಿಂದ ಕೇಳಿ ನಾವು ಧನ್ಯರಾದೆವು. ಈ ಮಹಾಪುರಾಣ ಶ್ರವಣದ ಪುಣ್ಯವು ನಮಗೆ ಪ್ರಾಪ್ತವಾಗಬೇಕು ಎಂದು ತಮಗೆ ಯಥಾಶಕ್ತಿ ದಕ್ಷಿಣೆಯನ್ನು ನೀಡುತ್ತೇವೆ. ದಯಮಾಡಿ ತಾವು ಸ್ವೀಕರಿಸಬೇಕು.''

ಹೀಗೆ ಹೇಳಿ ಆ ಎಲ್ಲ ಮುನಿಗಳೂ ಜೈಮಿನಿ ಮಹರ್ಷಿಗಳಿಗೆ ಅರಳೀ ಕಟ್ಟಿಗೆ. ದರ್ಭೆ, ಹೂ, ಹಣ್ಣು ಮುಂತಾದವುಗಳನ್ನು ಕೊಟ್ಟು ನಮಸ್ಕಾರ ಮಾಡಿ ಅವರ ಅನುಮತಿ ಪಡೆದು ಅತ್ಯಂತ ಆನಂದದಿಂದ ಪ್ರಯಾಣ ಬೆಳೆಸಿದರು ತಾವು ಈ ವರೆಗೆ ಕೇಳಿದ ಆ ಪುರುಷೋತ್ತಮ ಕ್ಷೇತ್ರಕ್ಕೆ

*ಉತ್ಕಲ ಖಂಡ ಅಥವಾ ಪುರುಷೋತ್ತಮ ಕ್ಷೇತ್ರ ಮಾಹಾತ್ಮ್ಯ ಮುಗಿದುದು*

—o—

**ಶ್ರೀ ವೇದವ್ಯಾಸ ಉವಾಚ**

> **ಶ್ರೀ ಸಚ್ಚಿದಾನಂದ ಘನಸ್ವರೂಪಿಣೇ**
> **ಕೃಷ್ಣಾಯ ಚಾನಂತಸುಖಾಭಿವರ್ಷಿಣೇ ॥**
> **ವಿಶ್ವೋದ್ಭವ ಸ್ಥಾನ ನಿರೋಧಹೇತವೇ**
> **ನಮೋ ನಮೋಭಕ್ತಿರಸಾಪ್ತಯೇಽನಿಶಮ್ ॥**

ಜ್ಞಾನಾನಂದ ಸ್ವರೂಪಿಯಾಗಿ ಭಕ್ತರ ಮೇಲೆ ಅನಂತ ಸುಖದ ಮಳೆಗರೆಯುವ ಶ್ರೀಕೃಷ್ಣನನ್ನು ನಾವು ವಂದಿಸುತ್ತೇವೆ. ಈ ಎಲ್ಲ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಕಾರಣನಾಗಿದ್ದಾನೆ ಈ ಶ್ರೀಕೃಷ್ಣ. ಅವನಲ್ಲಿ ನಿತ್ಯನಿರಂತರವಾದ ಭಕ್ತಿರಸವನ್ನು ಪಡೆಯುವುದೇ ನಮ್ಮ ಈ ಪ್ರಣಾಮದ ಉದ್ದೇಶ.

ನೈಮಿಷಾರಣ್ಯದಲ್ಲಿ ನಡೆದ ಸಾವಿರ ವರ್ಷದ ಜ್ಞಾನಸತ್ರದಲ್ಲಿ ದೀಕ್ಷಿತರಾದ ಶೌನಕರೇ ಮೊದಲಾದ ಮುನಿಗಳು ಸೂತಾಚಾರ್ಯರಿಗೆ ವಂದಿಸಿ ಪ್ರಶ್ನೆ ಮಾಡಿದರು.

**ಋಷಿಗಳು:-** ಸೂತರೇ, ಶ್ರೀಕೃಷ್ಣನು ಪರಂಧಾಮಕ್ಕೆ ಪ್ರಯಾಣ ಮಾಡಿದ ಸಮಾಚಾರವನ್ನು ತಿಳಿದು ಧರ್ಮರಾಜನೇ ಮೊದಲಾದ ಪಂಚಪಾಂಡವರು ಕೃಷ್ಣನಿಲ್ಲದ ಈ ಭೂಮಂಡಲದಲ್ಲಿ ತಾವೂ ಇರಬಾರದೆಂದು ನಿರ್ಧರಿಸಿ ಹಿಮಾಚಲದ ಕಡೆ ಮಹಾಪ್ರಸ್ಥಾನ ಹೊರಟರು. ಹೋಗುವಾಗ ಯಾದವರ ಸಾಮ್ರಾಜ್ಯವಾದ ಮಥುರಾ ಮಂಡಲದಲ್ಲಿ ಕೃಷ್ಣನ ಮೊಮ್ಮಗ ಅನಿರುದ್ಧನ ಮಗನಾದ ವಜ್ರನನ್ನೂ. ಹಸ್ತಿನಾಪುರದಲ್ಲಿ ತಮ್ಮ ಮೊಮ್ಮಗ ಪರೀಕ್ಷಿತನನ್ನೂ ಸಿಂಹಾಸನದ ಮೇಲೆ ಪ್ರತಿಷ್ಠೆಗೊಳಿಸಿದರು. ಪಾಂಡವರು ಸ್ವರ್ಗಾರೋಹಣ ಮಾಡಿದ ಬಳಿಕ ಯಾದವ ರಾಜನಾದ ವಜ್ರನೂ, ಕೌರವ ರಾಜನಾದ ಪರೀಕ್ಷಿತನೂ ಯಾವ ಯಾವ ಕಾರ್ಯಗಳನ್ನು ಮಾಡಿದರು? ಇದನ್ನು ನಮಗೆ ತಿಳಿಸಿರಿ.

**ಸೂತ:-** ಋಷಿಗಳೇ! ಪಾಂಡವರು ಸ್ವರ್ಗಕ್ಕೆ ತೆರಳಿದ ಬಳಿಕ ಒಂದು ದಿನ ಪರೀಕ್ಷಿತ ರಾಜನು ಯಾದವರ ರಾಜಧಾನಿಯಾದ ಮಥುರಾ ಪಟ್ಟಣಕ್ಕೆ ಹೋದನು. ಯಾದವರ ಸಾಮ್ರಾಟನಾದ ವಜ್ರನಾಭನು ಈ ಅಭಿಮನ್ಯು ಕುಮಾರನನ್ನು ಅತ್ಯಾದರದಿಂದ ಸ್ವಾಗತಿಸಿದನು. ಪ್ರೀತಿಯಿಂದ ಉಪಚರಿಸಿದನು. ಪರೀಕ್ಷಿತ ರಾಜನು ಪರಮ ಭಗವದ್ಭಕ್ತ. ಶ್ರೀಕೃಷ್ಣನ ಮೊಮ್ಮಗನಾದ ವಜ್ರನಾಭನನ್ನು ಕಂಡು ಅವನ ಹೃದಯ ಹಿಗ್ಗಿ ಗರಿಗೆದರಿತು. ಪ್ರೀತಿಯಿಂದ ಆ ಅನಿರುದ್ಧ ಕುಮಾರನನ್ನು ಗಟ್ಟಿಯಾಗಿ ಬಿಗಿದಪ್ಪಿದನು. ಅನಂತರ ಪರೀಕ್ಷಿತನು ಅಂತಃಪುರದಲ್ಲಿ ಹೋಗಿ ಶ್ರೀಕೃಷ್ಣನ ಬದುಕಿ ಉಳಿದ ಪತ್ನಿಯರಿಗೆಲ್ಲ ನಮಸ್ಕಾರ ಮಾಡಿದನು. ಆ ಎಲ್ಲ ಕೃಷ್ಣಪತ್ನಿಯರು ಕೌರವ ಪಾಂಡವವಂಶಗಳ ಏಕಮಾತ್ರ ತಂತುವಿನಂತಿದ್ದ ಈ ಪರೀಕ್ಷಿತ ರಾಜನನ್ನು ಗೌರವಿಸಿದರು. ಅವರೆಲ್ಲರೂ ಪರಸ್ಪರ ಕುಶಲಾಲಾಪವನ್ನು ಮಾಡಿದ ಬಳಿಕ ಪರೀಕ್ಷಿತ ರಾಜನು ವಜ್ರನಾಭನಿಗೆ ನುಡಿದನು.

**ಪರೀಕ್ಷಿತ:-** ವತ್ಸ ವಜ್ರ! ನಿನ್ನ ತಂದೆ ಹಾಗೂ ಅಜ್ಜನಾದ ಶ್ರೀಕೃಷ್ಣನು ನನ್ನ ತಂದೆ ಹಾಗೂ ಅಜ್ಜಂದಿರನ್ನು ದೊಡ್ಡ ದೊಡ್ಡ ಅನೇಕ ಸಂಕಟಗಳಿಂದ ಪಾರುಮಾಡಿದ್ದಾರೆ. ನನ್ನ ಪ್ರಾಣ ರಕ್ಷಣೆಯನ್ನು ಮಾಡಿದವನೂ ಕೂಡ ಶ್ರೀಕೃಷ್ಣನೇ.

**ವಜ್ರನಾಭ:-** ಮಹಾರಾಜ! ನೀನು ನುಡಿದ ಮಾತು ನಿನ್ನ ಕುಲಶೀಲ ಸ್ವಭಾವಗಳಿಗೆ ಅನುಗುಣವೇ ಆಗಿದೆ. ನಿನ್ನ ತಂದೆಯಾದ ಅಭಿಮನ್ಯುವು ನನಗೆ ಬಿಲ್ಲು ವಿದ್ಯೆಯನ್ನು ಕಲಿಸಿ ಮಹೋಪಕಾರ ಮಾಡಿದ್ದಾನೆ. ಆ ಧನುರ್ವಿದ್ಯಾ ಕೌಶಲ್ಯದಿಂದ ನಾನು ವೈರಿಗಳ ಮೇಲೆ ವಿಜಯವನ್ನು ಸಾಧಿಸಿ ಸುಖದಿಂದ ಇರುತ್ತೇನೆ. ನನಗೆ ಈಗ ಅದರ ಚಿಂತೆಯೂ ಇಲ್ಲ. ಆದರೆ ಈಗ ಈ ಮಧುರಾ ಮಂಡಲದಲ್ಲಿ ಪ್ರಜೆಗಳ ಸಂಖ್ಯೆ ಬಹಳ ಕಡಿಮೆ ಆಗಿದೆ. ನಿರ್ಜನವಾದ ವನ ಪ್ರದೇಶದಲ್ಲಿ ರಾಜ್ಯವಾಳಿದಂತೆ ಎನಿಸುವುದು ನನಗೆ. ಪ್ರಜಾ ಜನರು ಈ ಮಧುರಾ ಮಂಡಲವನ್ನು ಏಕೆ ಬಿಟ್ಟು ಹೋದರು? ಎಲ್ಲಿ ಹೋದರು? ಪ್ರಜಾಪರಿವಾರ ಜನರು ಇದ್ದರೆ ಮಾತ್ರ ಅದನ್ನು ಆಳುವ ಜನರಿಗೆ ಸುಖ ಸಮಾಧಾನ. ಇಲ್ಲದಿದ್ದರೆ ನಿರ್ಜನ ವನವನ್ನು ಆಳಿದಂತೆನಿಸುವದು.''

ವಜ್ರನಾಭನು ತನ್ನ ಮನದ ಅಳಲನ್ನು ತೋಡಿಕೊಂಡ ಬಳಿಕ ಪರೀಕ್ಷಿತ ರಾಜನು ಅವನ ಮನಸ್ಸಿನ ಸಂಶಯವನ್ನು ದೂರಮಾಡಲಿಕ್ಕಾಗಿ ಶಾಂಡಿಲ್ಯ ಮುನಿಗಳನ್ನು ಕರೆಕಳಿಸಿದನು. ಪರೀಕ್ಷಿತ ರಾಜನ ಈ ಆದರದ ಆಮಂತ್ರಣವನ್ನು ಮನ್ನಿಸಿ ಶಾಂಡಿಲ್ಯ ಮಹಾ ಋಷಿಗಳು ಆಗಮಿಸಿದರು ಆ ಮಧುರಾಪುರಿಗೆ. ವಜ್ರನಾಭ ಹಾಗೂ ಪರೀಕ್ಷಿತ ರಾಜರು ಆ ಮಹಾಮುನಿಗೆ ಸ್ವಾಗತ ಸತ್ಕಾರ ಮಾಡಿದರು. ಬಳಿಕ ಉಚ್ಚ ಆಸನದ ಮೇಲೆ ಆಸೀನರಾದ ಮಹಾಋಷಿಗಳು ಇಬ್ಬರನ್ನೂ ಸಂತೈಸುತ್ತ ನುಡಿದರು.

**ಶಾಂಡಿಲ್ಯ ಮಹರ್ಷಿ:-** ರಾಜರ್ಷಿಗಳೇ! ನಿಮಗೆ ಈಗ ನಾನು ವ್ರಜಭೂಮಿಯ ರಹಸ್ಯವನ್ನು ಹೇಳುತ್ತೇನೆ ಕೇಳಿರಿ. ವ್ರಜ ಶಬ್ದದ ಅರ್ಥ ವ್ಯಾಪ್ತಿ, ಹರವು. ವ್ಯಾಪಕವಾಗಿ ಎಲ್ಲೆಡೆ ಹರಡಿದ್ದರಿಂದ ಈ ಭೂಮಿಗೆ ವ್ರಜ ಭೂಮಿ ಎಂದು ಕರೆಯುವರು. ಈ ಪ್ರಪಂಚದಲ್ಲಿ ಸತ್ವ, ರಜ, ತಮ ಎಂಬ ಮೂರು ಗುಣಗಳನ್ನು ಮೀರಿ ಗುಣಾತೀತನಾಗಿ ನಿಂತುಕೊಂಡ ಪರಬ್ರಹ್ಮನೇ ವ್ರಜ ಶಬ್ದದ ನಿಜವಾದ ಅರ್ಥ. ಸದಾನಂದ ಸ್ವರೂಪಿಯಾದ ಆ ಪರಬ್ರಹ್ಮವು ಈ ವ್ರಜಧಾಮದಲ್ಲಿ ನಂದಗೋಪನ ಮಗನಾಗಿ ಬಹುಕಾಲ ನೆಲೆಸಿತ್ತು. ಈಗಲೂ ಕೂಡ ಇಲ್ಲಿ ಆ ಭಗವಂತನ ನಿತ್ಯ ಸನ್ನಿಧಾನವು ಇರುತ್ತದೆ. ಆ ಭಗವಂತನೂ ಆಪ್ತಕಾಮ. ಸ್ವಯಂ ಪರಿಪೂರ್ಣ ಸುಖಪೂರ್ಣ. ಅವನಿಗೆ ಏನೂ ಬೇಕಾಗಿಲ್ಲ. ಎಲ್ಲವೂ ಸಿದ್ಧವಿದೆ. ಕಾಮ ಎಂದರೆ ಕಾಮನೆ, ಅಭಿಲಾಷೆ, ಅಪೇಕ್ಷೆ ಎಂದು ಅರ್ಥ. ಶ್ರೀಕೃಷ್ಣನಿಗೆ ಅಭಿಲಷಿತವಾದ ವಸ್ತುಗಳೆಂದರೆ ಹಸು, ಕರು, ಗೋಪಾಲಕರು ಹಾಗೂ ಗೋಪಿಯರು. ಇವೆಲ್ಲವೂ ಅವನಿಗೆ ಈ ಮಧುರಾ ಮಂಡಲದಲ್ಲಿ ಅವನ ಅವತಾರ ಲೀಲೆ ನಡೆದಾಗ ಸಹಜ ಲಭ್ಯವಾಗಿದ್ದವು. ಆದುದರಿಂದ ಈ ವಜ್ರಮಂಡಲದಲ್ಲಿಯೂ ಆಪ್ತಕಾಮ ಎನಿಸಿದ್ದ ಭಗವಾನ್ ಶ್ರೀಕೃಷ್ಣನ ಈ ರಹಸ್ಯ ಲೀಲೆಯು ಪ್ರಕೃತಿಯನ್ನೂ ಸತ್ವ, ರಜ, ತಮ ಮುಂತಾದ ಪ್ರಾಕೃತಿಕ ಗುಣಗಳನ್ನೂ ಮೀರಿದುದಾಗಿವೆ. ಇಂಥ ರಹಸ್ಯಲೀಲೆಗಳನ್ನು ಆಡಲು ಅವತಾರ ಮಾಡಿದಾಗ ಅವನ ಅತ್ಯಂತ ಪ್ರೀತ್ಯಾಸ್ಪದರಾದ ಅನೇಕ ದೇವತೆಗಳೂ, ಋಷಿಗಳೂ, ಭಕ್ತರೂ ತಾವೂ ಭೂಮಂಡಲದಲ್ಲಿ ಅವತರಿಸಿ ಬಂದು ಆ ಪರಮಾತ್ಮನ ಅಂತರಂಗ ಪರಿವಾರದವರಿಗಾಗಿ ಅಲ್ಲಿ ಸಮ್ಮಿಲಿತರಾಗಿ ಆ ಲೀಲಾ ರಸದ ಅಸ್ವಾದವನ್ನು ಮಾಡುವರು. ಅವನ ವಿಶೇಷ ಅನುಗ್ರಹವನ್ನು ಪಡೆಯುವರು.

ಶ್ರೀಕೃಷ್ಣ ಪರಮಾತ್ಮನು ವ್ರಜಭೂಮಿ ಹಾಗೂ ದ್ವಾರಕಾ ಪಟ್ಟಣಗಳಲ್ಲಿ ನೆಲೆನಿಂತು ತನ್ನ ಅನಂತ ಲೀಲೆಗಳನ್ನು ಮಾಡುತ್ತಲಿರುವಾಗ ಅವನ ಅಚ್ಚನ್ನ ಭಕ್ತರಾದ ಅವನ ಪಾರ್ಷದರೂ, ಅನುಚರರೂ ದೇವತೆಗಳೂ ಅವನೊಡನೆಯೇ ಇದ್ದು ಕೂಡಿ ಆಡಿ ಸೇವೆ ಮಾಡಿ ಅವನ ಅನುಗ್ರಹಕ್ಕೆ ಪಾತ್ರರಾಗಿ ಇದ್ದರು. ಅವತಾರ ಸಮಾಪ್ತಿ ಕಾಲದಲ್ಲಿ ಬ್ರಾಹ್ಮಣ ಶಾಪದಿಂದ ಸಾಂಬನ ಹೊಟ್ಟೆಯಲ್ಲಿ ಒಂದು ಒನಕೆ ಉತ್ಪನ್ನವಾಗಿ ಪ್ರಕಟವಾಯಿತು. ಅದನ್ನು ಕಡಿದು ಚೂರುಮಾಡಿ ಸಮುದ್ರದಲ್ಲಿ ಚೆಲ್ಲಿದರೂ ಅದರಿಂದ ಪ್ರಭಾಸ ಕ್ಷೇತ್ರದಲ್ಲಿ 'ಏರಕಾ' ಎಂಬ ಹುಲ್ಲು ಹುಟ್ಟಿತು. ಯಾದವರು ಕೊನೆಗಾಲದಲ್ಲಿ ಪರಸ್ಪರ ಕಲಹ ಮಾಡಿ ಆ ಏರಕಾ ಎಂಬ ಹುಲ್ಲಿನ ಸೂಡು ಹಿಡಿದು ಹೊಡೆದಾಡಿ ಮರಣ ಹೊಂದಿದರು. ಹೀಗೆ ಕೃಷ್ಣನ ಅವತಾರ ಲೀಲೆಯಲ್ಲಿ ಭಾಗವಹಿಸಲು ಬಂದ ದೇವ ಋಷಿಮುನಿಗಳೆಲ್ಲರೂ ಅವನು ಪರಂಧಾಮಕ್ಕೆ ಹೋಗುವ ಮುನ್ನ ಮರಣಿಸಿ ತಮ್ಮ ತಮ್ಮ ಸ್ಥಾನಕ್ಕೆ ಹೊರಟು ಹೋದರು. ಆದುದರಿಂದ ಈ ಯಾದವ ಸಾಮ್ರಾಜ್ಯವೆಲ್ಲವೂ ಈಗ ನಿರ್ಜನವಾಗಿ ಕಾಡಿನಂತೆ ಕಾಣುವದು.

ವಜ್ರನಾಭ! ಇದ್ದಕ್ಕಾಗಿ ನೀನು ಚಿಂತೆ ಮಾಡಬೇಡ. ಈಗ ನಾನು ಹೇಳಿದಂತೆ ಮಾಡು. ಶ್ರೀಕೃಷ್ಣ ಪರಮಾತ್ಮನು ಎಲ್ಲಿ ಎಲ್ಲಿ ಯಾವ ಯಾವ ಲೀಲೆಗಳನ್ನು ಮಾಡಿರುವನೋ ಅಲ್ಲಲ್ಲಿ ಅದಕ್ಕೆ ಅನುಗುಣವಾಗಿ ಹೆಸರನ್ನು ಇಟ್ಟು ಅನೇಕ ಗ್ರಾಮಗಳನ್ನು ನಿರ್ಮಿಸು. ಗೋವರ್ಧನ, ದೀರ್ಘಪುರ, ಮಧುರಾ, ಗೋಕುಲ, ನಂದಿಗ್ರಾಮ, ಬೃಹತ್ಸಾನು ಮುಂತಾದ ಕಡೆಗಳಲ್ಲೆಲ್ಲ ನೀನು ನಿಂತು ಗ್ರಾಮಧಾಮಗಳನ್ನು ಏರ್ಪಡಿಸು. ಶ್ರೀಕೃಷ್ಣ ಪರಮಾತ್ಮನು ಓಡಾಡಿದ ಈ ಮಧುರಾ ಮಂಡಲದ ನದೀ, ಪರ್ವತ, ಕಂದರ, ಸರೋವರ, ಕುಂಜವನ, ಮರ, ತೀರ, ತರು, ಬಳ್ಳೀವಾಡ ಮುಂತಾದವುಗಳಲ್ಲಿಯೂ ಈ ನೆಲದ ಮಣ್ಣಿನ ಕಣಕಣಗಳಲ್ಲಿಯೂ ಈಗಲೂ ಒಂದು ರೂಪದಿಂದ ಅವ್ಯಕ್ತನಾಗಿ ನೆಲೆಸಿರುತ್ತಾನೆ. ನೀನು ಈ ಎಲ್ಲ ಸ್ಥಳಗಳಲ್ಲಿ ಸ್ವಯಂ ನಿಂತು ವಸತಿ ಸೌಕರ್ಯಗಳನ್ನು ಏರ್ಪಡಿಸಿ ಪ್ರಜೆಗಳು ಸುಖಸೌಕರ್ಯಗಳಿಂದ ವಾಸಿಸುವಂತೆ ಮಾಡಿದರೆ ಕೆಲವೇ ದಿನಗಳಲ್ಲಿ ಈ ಭೂಭಾಗವೆಲ್ಲವೂ ಜನನಿಬಿಡವಾಗುವದು. ಇಲ್ಲಿ ನೆಲೆನಿಂತ ಜನರು ಆರೋಗ್ಯ ಐಶ್ವರ್ಯದಿಂದ ಸಂಪನ್ನರಾಗಿ ಸುಖದಿಂದ ಉತ್ಕರ್ಷವನ್ನು ಹೊಂದುವರು. ಹೀಗೆ ನೀನು ಈ ವ್ರಜಭೂಮಿಯ ಸೇವೆಯನ್ನು ಮಾಡುತ್ತ ಇದ್ದರೆ ಒಂದುದಿನ ನಿನಗೆ ಶ್ರೀಕೃಷ್ಣನ ಅಂತರಂಗದ ಭಕ್ತನಾದ ಉದ್ಧವನು ಸಿಕ್ಕುವನು. ಭಗವಂತನ ಏಕಾಂತ ಭಕ್ತನಾದ ಆ ಉದ್ಧವನ ಮುಖದಿಂದ ನೀನು ತಾಯಂದಿರು ಈ ವ್ರಜ ಭೂಮಿಯ ಮಹತ್ವವನ್ನೂ ಕೃಷ್ಣಾವತಾರದ ಲೀಲಾರಹಸ್ಯವನ್ನೂ ಕೇಳಿ ತಿಳಿದುಕೊಳ್ಳಿರಿ.''

ಮುನಿವರೇಣ್ಯರಾದ ಶಾಂಡಿಲ್ಯ ಮಹರ್ಷಿಗಳು ಪರೀಕ್ಷಿತ ಹಾಗೂ ವಜ್ರನಾಭ ಮಹಾರಾಜರಿಗೆ ಹೀಗೆ ತಿಳಿಸಿ ಹೇಳಿ ಸಮಾಧಾನಪಡಿಸಿ ಶ್ರೀಕೃಷ್ಣ ಪರಮಾತ್ಮನನ್ನು ಸ್ಮರಿಸುತ್ತ ತಮ್ಮ ಆಶ್ರಮಕ್ಕೆ ನಡೆದರು. ಅವರ ಹಿತವಚನಗಳನ್ನು ಕೇಳಿ ಸಮಾಧಾನವಾಯಿತು ವಜ್ರನಾಭನಿಗೆ. ಸಂತೋಷವೆನಿಸಿತು ಪರೀಕ್ಷಿತ ರಾಜನಿಗೆ.

**ಸೂತ:-** ಪರೀಕ್ಷಿತ ಮಹಾರಾಜ ಬದುಕಿದ್ದು ಕೃಷ್ಣನಿಂದ. ಬಾಳಿದ್ದು ಬೆಳೆದಿದ್ದು ಬೆಳಗಿದ್ದು ಎಲ್ಲವೂ ಕೃಷ್ಣಚಂದ್ರನ ಕರುಣಾಕಟಾಕ್ಷಪಾತದಿಂದಲೇ. ಅಂಥ ಕೃಷ್ಣನ

ಮರಿಮಗನಾದ ವಜ್ರನಾಭನ ಅಭ್ಯುದಯಕ್ಕಾಗಿ ಅವನು ಏನು ಮಾಡಲಾರ! ಆ ಕಾಲದಲ್ಲಿ ಪರೀಕ್ಷಿತ ಅಖಂಡ ಭೂಮಂಡಲಕ್ಕೆ ಏಕಮಾತ್ರ ಸಾಮ್ರಾಟ. ಅವನ ಅಣತಿಯನ್ನು ಪಾಲಿಸದವರಾರು! ಅವನು ತನ್ನ ರಾಜಧಾನಿಗೆ ಮರಳಿ ಬಂದು ದೇಶದಲ್ಲಿಯ ಅನೇಕ ವಿದ್ವಾನ್ ಬ್ರಾಹ್ಮಣರಿಗೂ ಕ್ಷತ್ರಿಯರಿಗೂ ಮತ್ತು ದೊಡ್ಡದೊಡ್ಡ ವ್ಯಾಪಾರಸ್ಥರಿಗೂ ವ್ಯವಸಾಯಿಗಳಿಗೂ ಮಧುರಾ ಮಂಡಲದಲ್ಲಿ ಹೋಗಿ ನೆಲೆಸಲು ಆಜ್ಞೆ ಮಾಡಿದ.

ವಜ್ರನಾಭನು ಪರೀಕ್ಷಿತ ರಾಜನ ಆದೇಶದಂತೆ ಅಲ್ಲಿ ಇರಲಿಕ್ಕೆಂದು ಬಂದ ಎಲ್ಲ ಜಾತಿ ಜನಾಂಗದ ಜನರಿಗೂ ಅಲ್ಲಿ ನೆಲೆ ನಿಲ್ಲಲಿಕ್ಕೂ ಮನೆ ಹೊಲ ಬೇಸಾಯ ವ್ಯವಸಾಯ ಉದ್ಯೋಗ ವ್ಯಾಪಾರ ಮಾಡಲಿಕ್ಕೂ ಸಕಲ ವಿಧ ಸೌಕರ್ಯವನ್ನೂ ಒದಗಿಸಿದ. ಅನೇಕ ಶ್ರೋತ್ರಿಯ ಕುಟುಂಬಗಳು ಮಧುರಾ ನಗರದಲ್ಲಿ ಬಂದು ವಾಸ್ತವ್ಯ ಹೂಡಿದವು. ಹೀಗೆ ಪರೀಕ್ಷಿತನ ಸಹಾಯ ಹಾಗೂ ಶಾಂಡಿಲ್ಯ ಋಷಿಗಳ ಆಶೀರ್ವಾದದಿಂದ ವಜ್ರನಾಭನು ಶ್ರೀಕೃಷ್ಣ ಪರಮಾತ್ಮನು ಅಸಂಖ್ಯ ಗೋಪ-ಗೋಪಿಯರೊಡನೆ ಲೀಲಾ ವಿಹಾರಗೈದ ಭಿನ್ನ ಭಿನ್ನ ತಾಣಗಳನ್ನೆಲ್ಲ ಪರಿಶೋಧಿಸಿ ಅಲ್ಲೆಲ್ಲ ಕಡೆಗೂ ಒಂದೊಂದು ನಗರ ಗ್ರಾಮ ಅಗ್ರಹಾರಗಳನ್ನು ಕೂಡಿಸಿದ.

ಶ್ರೀಕೃಷ್ಣನ ಲೀಲಾ ವ್ಯಾಪಾರಗಳಿಗೆ ಸೂಚಕವಾದ ಬೇರೆ ಬೇರೆ ಹೆಸರುಗಳನ್ನು ಅವುಗಳಿಗೆ ಇಟ್ಟು ಅಲ್ಲಿ ಎಲ್ಲ ಕಡೆಗೂ ಗೋವಿಂದದೇವ ಹರಿದೇವ ಗೋಪಾಲದೇವ ಎಂಬ ಹೆಸರಿನ ಕೃಷ್ಣನ ವಿಗ್ರಹಗಳನ್ನು ಸ್ಥಾಪಿಸಿ ದೊಡ್ಡ ದೊಡ್ಡ ದೇವಾಲಯಗಳನ್ನು ಕಟ್ಟಿಸಿದ. ಅನೇಕ ಶಿವಮಂದಿರಗಳನ್ನೂ ಹರಿಮಂದಿರಗಳನ್ನೂ ಸುಂದರವಾಗಿ ನಿರ್ಮಿಸಿ ಎಲ್ಲ ಕಡೆಗೂ ಕೆರೆ, ಕಾಲುವೆ, ಬಾವಿ, ಸರೋವರ, ತೋಪು, ತೋಟ, ಛತ್ರ, ಲತಾಮಂಟಪ ಮುಂತಾದವುಗಳನ್ನು ನಿರ್ಮಿಸಿದ. ಉತ್ತರ ಭಾರತದ ಎಲ್ಲ ಕಡೆಗೂ ಜನರಿಗೆ ಶ್ರೀಕೃಷ್ಣನ ನೆನಪು ಮಾಸಿ ಅಳಿಸಿ ಹೋಗದಂತೆ ಗುಡಿ, ಗ್ರಾಮ, ಧಾಮ. ಆರಾಮಾದಿಗಳನ್ನು ರೂಪಿಸಿ ಶ್ರೀಕೃಷ್ಣಭಕ್ತಿಯ ಪ್ರಚಾರವು ಎಲ್ಲೆಡೆಗೂ ಆಗುವಂತೆ ಏರ್ಪಾಡನ್ನು ಮಾಡಿದ. ಅವನ ಈ ಪ್ರಶಂಸನೀಯವಾದ ಕಾರ್ಯದಿಂದ ಭರತಖಂಡದಲ್ಲಿ ಮತ್ತೊಮ್ಮೆ ಕೃಷ್ಣಭಕ್ತಿಯ ಮಹಾಪೂರವೇ ಹರಿದುಬಂದಂತಾಯಿತು. ನೋಡಿದಲ್ಲೆಲ್ಲ ಶ್ರೀಕೃಷ್ಣನ ದೇವಾಲಯ. ಶ್ರೀಕೃಷ್ಣನ ಹೆಸರಿನ ಗ್ರಾಮ-ನಗರಗಳು. ಎಲ್ಲ ಕಡೆಗೂ ಶ್ರೀಕೃಷ್ಣನ ವಿವಿಧ ಚರಿತ್ರಗಾನ, ಕೃಷ್ಣ ಕಥಾ ನಿರೂಪಣಗಳು ಎಡಬಿಡದೇ ನಡೆದವು. ಇದರಿಂದ ಯದುರಾಜನಾದ ವಜ್ರನಾಭನಿಗೆ ಅತ್ಯಂತ ಸಂತೋಷ ಎನಿಸಿತು. ಶಾಂಡಿಲ್ಯ ಮಹರ್ಷಿಗಳ ಆದೇಶದಂತೆ ತಾನು ಪರೀಕ್ಷಿತ ರಾಜನ ಸಹಕಾರದೊಂದಿಗೆ ಮಾಡಿದ ಕೃಷ್ಣಭಕ್ತಿಯ ಪ್ರಚಾರಕಾರ್ಯ ಯಶಸ್ವಿಯಾದದ್ದರಿಂದ ಮನಸ್ಸಿಗೆ ಕೃತಕೃತ್ಯತೆ ಎನಿಸಿತು.

ಒಂದು ದಿನ ಶ್ರೀಕೃಷ್ಣನ ಹದಿನಾರು ಸಾವಿರ ಹೆಂಡಂದಿರೆಲ್ಲರೂ ಯಮುನಾ ನದಿಗೆ ಸ್ನಾನಕ್ಕೆ ಹೋಗಿದ್ದರು. ಅವರೆಲ್ಲರೂ ತಮ್ಮ ಪ್ರೀತಿಯ ಮನದನ್ನನಾದ ಶ್ರೀಕೃಷ್ಣ ಪ್ರಭುವಿನ ವಿರಹದಿಂದ ಬೆಂದು ಬಸವಳಿದು ಬೆಂಡಾಗಿದ್ದರು. ಅವರಂತೆ ನದಿಯಾದ ಕಾಲಿಂದಿಯೂ ಕೃಷ್ಣನ ಪ್ರೇಯಸಿಯೇ ಅಲ್ಲವೇ! ಆದರೆ ಅವಳು ಈ ಉಳಿದ ಕೃಷ್ಣ ಕಾಮಿನಿಯರಂತೆ ಖಿನ್ನ ವಿಷಣ್ಣಳಾಗಿರಲಿಲ್ಲ. ಎಂದಿನಂತೆ ತನ್ನ ತರಳ ತರಂಗ ಮಾಲೆಗಳ ಕಲಕಲ ಮಂಜುಳ ನಿನಾದದೊಂದಿಗೆ ಮಂದಗತಿಯಿಂದ ಹರಿಯುತ್ತಲಿದ್ದಳು. ತಮ್ಮ

ಸವತಿಯಾದ ಯಮುನೆಯ ಈ ಲಹರೀ ಲೀಲಾಲಾಸ್ಯವನ್ನು ಕಂಡು ಕೌತುಕಗೊಂಡು ಕೇಳಿದರು ಆ ಎಲ್ಲ ಕೃಷ್ಣಕಾಂತೆಯರು.

**ಕೃಷ್ಣಪತ್ನಿಯರು:-** ತಂಗಿ ಯಮುನೆ! ನೀನೂ ನಮ್ಮಂತೆಯೇ ಶ್ರೀಕೃಷ್ಣನ ಪ್ರೇಯಸಿಯೇ ತಾನೇ! ನಾವೆಲ್ಲರೂ ಆ ಭಗವಂತನ ವಿರಹಾಗ್ನಿಯಲ್ಲಿ ಬೆಂದು ಹೋಗಿದ್ದೇವೆ. ನಮ್ಮ ಹೃದಯಗಳೆಲ್ಲವೂ ಆ ಮುಕುಂದನ ವಿಯೋಗ ವ್ಯಥೆಯಿಂದ ಉತ್ತಪ್ತವಾಗಿ ಹೋಗಿವೆ. ಆದರೆ ನೀನು ಮಾತ್ರ ಉಲ್ಲಸಿತಳಾಗಿಯೇ ಇರುವೆ. ನಿನಗೆ ಕೃಷ್ಣನ ವಿರಹದಿಂದ ವ್ಯಥೆಯಾಗಿಲ್ಲವೇ! ಆದರೂ ಹೀಗೆ ಹೇಗೆ ಉಲ್ಲಾಸದಿಂದ ಇರುವೆ?

**ಯಮುನಾ:-** ಸಖಿಯರೇ, ಭಗವಾನ್ ಶ್ರೀಕೃಷ್ಣ ಆತ್ಮಾರಾಮ. ಸ್ವರಮಣ. ಅವನ ಆತ್ಮ ಎಂದರೆ ಶ್ರೀರಾಧಾ. ನಾನು ದಾಸಿಯಂತೆ ಶ್ರೀರಾಧಾ ದೇವಿಯ ಸೇವೆಯನ್ನು ಮಾಡುತ್ತೇನೆ. ಈ ನನ್ನ ಮನಸ್ಸಿನ ಪ್ರಸನ್ನತೆ ಆ ರಾಧಾ ಸೇವೆಯ ಫಲ. ಅವಳ ದಾಸ್ಯಭಾವದ ಸೇವೆನೆಯ ಪ್ರಭಾವದಿಂದ ವಿರಹಶೋಕವು ಎಂದೂ ನನ್ನನ್ನು ತಟ್ಟಲಾರದು. ಶ್ರೀಕೃಷ್ಣ ಚಂದ್ರನ ಎಲ್ಲ ರಾಣಿಯರೂ ಶ್ರೀ ರಾಧಾದೇವಿಯ ಒಂದೊಂದು ಅಂಶಭೂತರೇ ಆಗಿದ್ದಾರೆ. ರಾಧಾ-ಕೃಷ್ಣ ಇಬ್ಬರೂ ನಿತ್ಯವೂ ಅವಿಯೋಗಿಗಳು. ಎಂದೂ ವಿಯೋಗ ವಿರಹ ಎಂಬುದೇ ಇಲ್ಲ. ಕೃಷ್ಣನ ಎದುರು ಯಾವಾಗಲೂ ರಾಧೆ ಇರುತ್ತಾಳೆ. ರಾಧೆಯ ಸಮ್ಮುಖದಲ್ಲಿ ಶ್ರೀಕೃಷ್ಣನು ಇರುತ್ತಾನೆ. ರಾಧೆಗೆ ಸಂತತವೂ ಕೃಷ್ಣನ ಸಂಯೋಗವು ಇದ್ದೇ ಇರುತ್ತದೆ. ಅದರಿಂದ ರಾಧೆಯ ಅಂಶಗಳ ವಿಸ್ತಾರರೂಪವಾದ ಈ ಎಲ್ಲ ಕೃಷ್ಣ ಕಾಂತೆಯರಿಗೂ ಶ್ರೀಕೃಷ್ಣನ ಸಂಯೋಗವು ನಿತ್ಯವೂ ಇದ್ದೇ ಇರುತ್ತದೆ. ರಾಧೆ ಎಂದರೆ ಕೃಷ್ಣ. ಕೃಷ್ಣ ಎಂದರೆ ರಾಧೆ. ಇಷ್ಟು ಅನ್ಯೋನ್ಯವಾಗಿದೆ ಅವರ ಅವಿನಾಭಾವ ಸಂಬಂಧ. ರಾಧಾಂಶರಾದ ನಿಮಗೂ ಶ್ರೀಕೃಷ್ಣನಿಂದ ಎಂದೂ ವಿರಹ ಉಂಟಾಗುವುದಿಲ್ಲ.

ರುಕ್ಮಿಣೀ ಸತ್ಯಭಾಮಾ ನೀಲಾ ಮಿತ್ರವಿಂದಾ ಲಕ್ಷ್ಮಣಾ ಜಾಂಬವತಿ ಮುಂತಾದ ಅಷ್ಟ ಮಹಿಷಿಯರೂ ಕೂಡ ಶ್ರೀ ರಾಧಾದೇವಿಯದೇ ಒಂದೊಂದು ರೂಪಗಳು. ಇದನ್ನು ನಾನು ಪ್ರತ್ಯಕ್ಷವಾಗಿ ಕಂಡಿದ್ದೇನೆ. ಹಿಂದೆ ಅಕ್ರೂರನು ಕೃಷ್ಣನನ್ನು ಕರೆದುಕೊಂಡು ಮಥುರೆಗೆ ಹೋದ. ಅದರಿಂದ ಕೃಷ್ಣನ ಪ್ರೇಯಸಿಯರಾದ ಗೋಪಿಕೆಯರೆಲ್ಲರೂ ವಿರಹದಿಂದ ವ್ಯಾಕುಲಾಕುಲಿತರಾಗಿ ಪರಿತಪಿಸಿದರು. ಅದೂ ಕೂಡ ಶ್ರೀಕೃಷ್ಣನ ವಿರಹಾಭಾಸವೇ ಸರಿ. ವಾಸ್ತವವಾದ ವಿರಹ ಆ ಗೋಪಕನ್ಯೆಯರಿಗೆ ಆಗಿರಲೇ ಇಲ್ಲ. ಭಗವಂತನ ನಿತ್ಯ ಸ್ನಾನಿಧ್ಯದ ಅರಿವು ಅವರಿಗೆ ಇರಲಿಲ್ಲವಾದುದರಿಂದ ವಿರಹವ್ಯಥೆ ಅವರಿಗೆ ತಾಪವನ್ನು ಉಂಟುಮಾಡಿತು.

ಅದರಂತೆ ನಿಮಗೂ ಸರ್ವತ್ರವ್ಯಾಪ್ತನಾದ ಆ ವ್ರಜ ಚಂದ್ರನ ನಿತ್ಯ ಸನ್ನಿಧಾನದ ಅರಿವು ಮತ್ತು ನಿತ್ಯಾವಿಯೋಗಿನಿಯಾದ ರಾಧೆಯ ಅಂಶ ನಿಮ್ಮಲ್ಲಿ ಇದ್ದುದರ ಅರಿವು ನಿಮಗೆ ಇಲ್ಲದ್ದರಿಂದ ಈ ವಿರಹವೇದನೆ ಉಂಟಾಗಿದೆ. ಭಗವಂತನ ಅಚ್ಛಿನ್ನ ಭಕ್ತನಾದ ಉದ್ಧವ ಹಿಂದೆ ಗೋಪಿಕೆಯರಿಗೆ ಈ ತತ್ವರಹಸ್ಯವನ್ನು ತಿಳಿಸಿ ಹೇಳಿ ಆ ಗವಳಿ ಹೆಂಗಳೆಯರ ಚಿಂತಾ ಸಂತಾಪಗಳನ್ನು ಕಳೆದು ಅವರಿಗೆ ಶ್ರೀಕೃಷ್ಣಸಾಂಮುಖ್ಯದ ಎಚ್ಚರವನ್ನು ಹುಟ್ಟಿಸಿದ್ದ. ನಿಮಗೂ ಆ ಉದ್ಧವನ ಸತ್ಸಂಗ ಲಾಭವಾದರೆ ಅವನು ನಿಮಗೂ ಶ್ರೀಕೃಷ್ಣನ ನಿತ್ಯಸಂಯೋಗದ ರಹಸ್ಯವನ್ನು ತಿಳಿಸಿಕೊಡುವನು. ಅದರಿಂದ ನೀವು ಮತ್ತೆ ಶ್ರೀಕೃಷ್ಣನ ನಿತ್ಯಸಂಯೋಗ ಹಾಗೂ ನಿತ್ಯವಿಹಾರದ ಸುಖವನ್ನು ಅನುಭವಿಸಬಹುದು.

**ಕೃಷ್ಣಪತ್ನಿಯರು:-** ಕಾಲಿಂದಿ, ಉದ್ಧವನು ಈಗ ಎಲ್ಲಿ ಇರುವನು! ನಮಗೆ ಅವನ ದರ್ಶನವಾಗುವ ಉಪಾಯ ಏನು?

**ಕಾಲಿಂದಿ:-** ಉದ್ಧವನು ಶ್ರೀಕೃಷ್ಣನ ಮಂತ್ರಿಯಾಗಿದ್ದ. ಪರಂಧಾಮಕ್ಕೆ ತೆರಳುವಾಗ ಭಗವಂತನ ಉದ್ಧವನಿಗೆ ಬದರಿಕಾಶ್ರಮಕ್ಕೆ ಹೋಗಿ ನೆಲೆಸಲು ಆಜ್ಞೆ ನೀಡಿದ. ಭಗವದಾದೇಶದಂತೆ ಈಗ ಉದ್ಧವ ಇರುವದು ಬದರೀ ಕ್ಷೇತ್ರದಲ್ಲಿಯೇ. ಅಲ್ಲಿ ಇರುವ ಭಗವದ್ಭಕ್ತರಿಗೆ ಈಗಲೂ ಅವನು ಪ್ರತ್ಯಕ್ಷವಾಗಿಯೇ ಶ್ರೀಕೃಷ್ಣನ ಮಹಾಮಹಿಮೆಯನ್ನು ಬೋಧಿಸುತ್ತಿದ್ದಾನೆ. ಅದರಂತೆ ಶ್ರೀಕೃಷ್ಣನ ಕ್ರೀಡಾಸ್ಥಾನವಾದ ಈ ವಜ್ರಭೂಮಿಯು ಸಾಧನ ಫಲರೂಪವಾದ ಭೂಮಿಯಾಗಿದೆ. ಇಲ್ಲಿಯ ಗೋವರ್ಧನ ಪರ್ವತದ ಸಮೀಪದಲ್ಲಿ ಗೋಪೀವಿಹಾರ ಸ್ಥಳವೊಂದಿದೆ. ಶ್ರೀಕೃಷ್ಣನ ಪರಮ ಪ್ರೇಯಸಿಯರಾದ ಗೋಪಿಕಾ ಸ್ತ್ರೀಯರ ಚರಣಧೂಳೀಕಣಗಳು ತನ್ನ ಮೇಲೆ ಯಾವಾಗಲೂ ಬೀಳಬೇಕೆಂದು ಉದ್ಧವನು ಈ ಗೋಪೀಕೃಷ್ಣ ವಿಹಾರ ಸ್ಥಳದಲ್ಲಿ ಮರ ಬಳ್ಳಿ ಮುಗುಳು ಚಿಗುರುಗಳ ರೂಪದಿಂದ ವಾಸ ಮಾಡಿದ್ದಾನೆ. ನೀವು ಅಲ್ಲಿಗೆ ಹೋಗಿರಿ. ಉತ್ಸವವನ್ನು ಆಚರಿಸಿರಿ.

ಭಗವಂತನ ಉತ್ಸವವನ್ನು ವೀಣಾ, ವೇಣು, ಮೃದಂಗ ಮುಂತಾದ ವಾದ್ಯಗಳನ್ನು ಬಾರಿಸುತ್ತ ಸಂಗೀತ ಭಂಗಿಯಿಂದ ಹಾಡಿ ಪಾಡಿ ಕೊಂಡಾಡುತ್ತ ಆಚರಿಸಿರಿ. ಶ್ರೀಕೃಷ್ಣನ ದಿವ್ಯ ಕಥಾಮೃತದ ಸರಸ ಸಂಗೀತಮಯವಾದ ಸಂಕೀರ್ತನೆಯಿಂದ ಉತ್ಸವವು ವಿಸ್ತಾರಗೊಂಡಂತೆ ಅಲ್ಲಿ ಅವಶ್ಯವಾಗಿ ಉದ್ಧವನ ದರ್ಶನವು ಆಗುವದು ಖಂಡಿತ.

**ಸೂತ:-** ಯಮುನಾ ನದಿಯ ಈ ಮಾತುಗಳನ್ನು ಆಲಿಸಿ ಪರಮ ಸಂತೋಷ ವಾಯಿತು ಆ ಎಲ್ಲ ಕೃಷ್ಣ ಕುಟುಂಬಿನಿಯರಿಗೆ. ಅವರೆಲ್ಲರೂ ಪ್ರಸನ್ನ ಮನಸ್ಸಿನಿಂದ ಆ ಕಾಲಿಂದಿಗೆ ನಮಸ್ಕರಿಸಿದರು. ಮನೆಗೆ ಬಂದು ವಜ್ರನಾಭನಿಗೂ ಪರೀಕ್ಷಿತರಾಜನಿಗೂ ಆ ಸಮಾಚಾರವನ್ನೆಲ್ಲ ತಿಳಿಸಿದರು. ಕೂಡಲೇ ಅವರಿಬ್ಬರೂ ಆ ಕೃಷ್ಣಕಾಂತೆಯರನ್ನೆಲ್ಲ ಕರೆದುಕೊಂಡು ಗೋವರ್ಧನ ಬೆಟ್ಟದ ಬಳಿಗೆ ಬಂದರು. ವೃಂದಾವನದಲ್ಲಿ ಇರುವ ಕುಸುಮ ಸರೋವರದ ತಡಿಯಲ್ಲಿದ್ದ ಗೋಪೀಕೃಷ್ಣ ವಿಹಾರ ಸ್ಥಳವನ್ನು ಹುಡುಕಿಕೊಂಡು ಬಂದು ತಲುಪಿದರು.

ಅಲ್ಲಿ ಶ್ರೀಕೃಷ್ಣನ ಎಲ್ಲ ಹದಿನಾರು ಸಾವಿರ ವಿಧವಾ ವನಿತೆಯರೂ ಪರೀಕ್ಷಿತರಾಜನೂ ವಜ್ರನಾಭನೂ ಸೇರಿ ಶ್ರೀಹರಿಯ ಗುಣಗಾನ ಮಾಡುತ್ತ ನಾಮಸಂಕೀರ್ತನೆಯ ಮಹೋತ್ಸವವನ್ನು ಪ್ರಾರಂಭಿಸಿದರು. ಭಕ್ತಿಭರದಿಂದ ಪರವಶರಾಗಿ ಶ್ರೀಕೃಷ್ಣನ ದಿವ್ಯ ಲೀಲಾವತಾರದ ಚಾರುಚರಿತ್ರೆಯನ್ನು ಏಕಾಗ್ರಮನಸ್ಸಿನ ತನ್ಮಯತೆಯಲ್ಲಿ ತಲ್ಲೀನರಾಗಿ ಹಾಡಿಪಾಡಿ ಕೊಂಡಾಡಿ ಸ್ತುತಿಸತೊಡಗಿದರು. ಅವರಾರಿಗೂ ಬಾಹ್ಯ ಪ್ರಪಂಚದ ಅರಿವು ಇರಲಿಲ್ಲ. ವಾತಾವರಣವೆಲ್ಲವೂ ಧ್ಯಾನ ಗಾನಮಯವಾಗಿ ಅಲ್ಲಿಯ ಪಶುಪಕ್ಷಿ ಮರಬಳ್ಳಿ, ಕುಂಜನಿಕುಂಜಗಳೂ ಕೂಡ ಭಕ್ತಿಯ ಆವೇಶದಿಂದ ತೂಗಾಡ ತೊಡಗಿದವು. ದಶದಿಕ್ಕುಗಳೆಲ್ಲವೂ ಅಖಂಡ ನಾಮಸ್ಮರಣೆಯ ಮಧುರ ಸಂಗೀತದ ಮೃದಂಗನಾದ ತರಂಗಗಳಿಂದ ದುಂದುಮಿಸಿದವು. ಆಗ ಎಲ್ಲರೂ ನೋಡುತ್ತಿದ್ದಂತೆಯೇ ಅಲ್ಲಿ ತೃಣಲತಾಗುಲ್ಮ ಹಾಗೂ ಗಿಡಗಂಟಿಗಳ ಗುಂಪಿನಿಂದ ಭಗವದ್ಭಕ್ತಿಜೀವಿ ಉದ್ಧವನು ಪ್ರಕಟನಾಗಿ ಎಲ್ಲರ ಎದುರು ಬಂದು ನಿಂತುಕೊಂಡನು.

ಶಾಲಿಗ್ರಾಮದಂತೆ ಶ್ಯಾಮಸುಂದರ ಶರೀರ. ಕೊರಳಲ್ಲಿ ಗುಲಗಂಜಿ ತುಳಸೀದಳಗಳ ವನಮಾಲೆ. ಮುಖದಿಂದ ಉಚ್ಚಸ್ವರದಲ್ಲಿ ಶ್ರೀಕೃಷ್ಣನ ಲೀಲಾವತಾರದ ಮಹಾಮಹಿಮೆಗಳನ್ನು ಭಕ್ತಿಯ ಉನ್ಮಾದದ ಆವೇಶದಿಂದ ಗಾನ ಮಾಡುತ್ತ ಎದ್ದು ಬಂದ ಉದ್ಧವನ ಆಗಮನದಿಂದ ಶ್ರೀಹರಿಯ ಆ ನಾಮ ಸಂಕೀರ್ತನೆಯ ಮಹೋತ್ಸವಕ್ಕೆ ಇನ್ನೂ ಹೆಚ್ಚಿನ ಕಳೆಕಟ್ಟಿತು. ಎಲ್ಲರೂ ಮೈ ಮೇಲೆ ಎಚ್ಚರವಿಲ್ಲದೇ ಶ್ರೀಕೃಷ್ಣನ ಧ್ಯಾನ್ಯಗಾನ ತಾನ್ಯೆಕಲೀನ ಮಾನಸರಾಗಿ ಬಹಳ ಹೊತ್ತು ಕುಣಿದು ಕುಪ್ಪಳಿಸಿ ಹಾಡಿ ಭಗವಂತನ ಭಕ್ತಿರಸದಲ್ಲಿ ಈಜಾಡಿದರು. ಹೀಗೆ ಬಹುಸಮಯದ ವರೆಗೆ ಭಗವದ್ಭಕ್ತಿಯ ಆನಂದ ರಸೋದಧಿಯಲ್ಲಿ ತೇಲಾಡಿ ತೂರಾಡಿ ಆತ್ಮಾನುಭವದ ತುತ್ತತುದಿಯಲ್ಲಿ ನಲಿದಾಡಿದ ಬಳಿಕ ಅವರೆಲ್ಲರಿಗೂ ನಿದಾನವಾಗಿ ಬಾಹ್ಯದ ಇರುವು ಅರಿವಾಗ ತೊಡಗಿತು. ಅವರೆಲ್ಲರೂ ತಮ್ಮ ಕಣ್ಣೆದುರು ಬಂದು ನಿಂತ ಭಕ್ತಜೀವಿ ಉದ್ಧವನನ್ನು ಆಶ್ಚರ್ಯದಿಂದ ಅಗಲವಾದ ಬಿಡುಗಣ್ಣಿನಿಂದ ನೋಡಿದರು. ಸಾಕ್ಷಾತ್ ಶ್ರೀಕೃಷ್ಣನನ್ನೇ ಕಣ್ಣಿನಿಂದ ಕಂಡಷ್ಟು ಹಿಗ್ಗಾಯಿತು ಅವರೆಲ್ಲರಿಗೂ. ಕೃಷ್ಣ ಕುಟುಂಬಿನಿಯರೂ ಪರೀಕ್ಷಿತರಾಜ ಹಾಗೂ ವಜ್ರನಾಭನೂ ಸೇರಿ ಭಗವಂತನ ಏಕಾಂತಭಕ್ತಮನೀಷಿಯಾದ ಆ ಉದ್ಧವನ ಸ್ವಾಗತ ಸತ್ಕಾರಮಾಡಿ ಪೂಜೆ ಮಾಡತೊಡಗಿದರು.

## ಭಾಗವತದ ಮಾಹಾತ್ಮ್ಯ, ಭಾಗವತ ಶ್ರವಣದಿಂದ ದಿವ್ಯಗತಿ ಪ್ರಾಪ್ತಿ

**ಸೂತ:-** ಪುಣ್ಯಪುರುಷನಾದ ಉದ್ಧವನು ಅಲ್ಲಿ ನೆರೆದು ಶ್ರೀಹರಿಯ ನಾಮ ಸಂಕೀರ್ತನೆಯಲ್ಲಿ ಏಕಾಗ್ರಮನಸ್ಸಿನಿಂದ ಭಾಗವಹಿಸಿ ಭಕ್ತಿ ಪರವಶತೆಯಿಂದ ಭಜನೆ ಮಾಡುತ್ತಲಿರುವ ಆ ಶ್ರೀಕೃಷ್ಣನ ಪರಿವಾರವನ್ನು ಕಂಡು ಸುಪ್ರಸನ್ನನಾದ. ಮತ್ತು ಪರೀಕ್ಷಿತ ರಾಜನನ್ನು ಸಂತೋಷದಿಂದ ಸತ್ಕರಿಸಿ ಆಲಿಂಗಿಸಿಕೊಂಡು ನುಡಿದನು.

**ಉದ್ಧವ:-** ಪರೀಕ್ಷಿತ! ಶ್ರೀಕೃಷ್ಣನ ನಾಮ ಸಂಕೀರ್ತನೆಯ ಮಹೋತ್ಸವದಲ್ಲಿ ಭಕ್ತಿಯ ಉದ್ರೇಕದಿಂದ ಭಾಗಿಗಳಾಗಿ ಅಖಂಡ ಶ್ರೀಹರಿಯ ಗುಣಗಾನ ಮಾಡುತ್ತಲಿರುವ ನೀವೆಲ್ಲರೂ ಧನ್ಯರು. ನನಗೆ ಮಾನ್ಯರು. ಶ್ರೀಕೃಷ್ಣನ ಕರುಣೆಯ ಕೂಸಾಗಿ ಮೈದಾಳಿ ಭೂಮಿಗೆ ಬಂದು ಭಗವದನುಗ್ರಹದ ಜೀವಂತ ನಿದರ್ಶನವಾಗಿ ನಿಂತ ನೀನು ಅವನ ಮರಿಮಗ ಇದ್ದಂತೆ ನೀನು ಹಾಗೂ ಶ್ರೀಕೃಷ್ಣ ಚಂದ್ರನ ಕೈಹಿಡಿದ ಕಾಂತೆಯರ ಮೇಲೆ ಪ್ರೀತಿ ವಿಶ್ವಾಸ ಹೊಂದಿರುವದು ಯೋಗ್ಯವೇ ಆಗಿದೆ. ಶ್ರೀಕೃಷ್ಣ ಪರಮಾತ್ಮನು ಪರಂಧಾಮಕ್ಕೆ ಹೋಗುವಾಗ ತನ್ನ ರಾಜಧಾನಿಯಾದ ದ್ವಾರಕೆಯ ನಾಗರಿಕರನ್ನೆಲ್ಲ ಈ ವ್ರಜಮಂಡಲದಲ್ಲಿ ತಂದು ಇರಿಸಬೇಕೆಂದು ಅರ್ಜುನನಿಗೆ ಅಪ್ಪಣೆ ನೀಡಿದ್ದನು. ಅದರಂತೆ ಅರ್ಜುನನಿಂದ ಇಲ್ಲಿ ತಂದು ಇರಿಸಲ್ಪಟ್ಟ ಈ ಎಲ್ಲ ವ್ರಜ ವಾಸಿಗಳೂ ಧನ್ಯರೇ. ಈ ವ್ರಜಭೂಮಿಯಲ್ಲಿ ಶ್ರೀರಾಧಾದೇವಿಯೊಂದಿಗೆ ಒಡಗೂಡಿ ಶ್ರೀಕೃಷ್ಣ ಪ್ರಭುವು ತನ್ನ ಮುಖಚಂದ್ರನ ಕಾಂತಿಕಿರಣಗಳನ್ನು ಎಲ್ಲೆಡೆ ಹರಡಿ ಶೋಭಾಯಮಾನವಾಗಿ ನಿಂತುಕೊಂಡಿರುತ್ತಾನೆ. ಈ ವ್ರಜ ಭೂಮಿಯು ಶ್ರೀಕೃಷ್ಣನ ಒಂದು ಪ್ರಾಕೃತಸ್ವರೂಪ. ಇಲ್ಲಿಯ ಕಣಕಣಗಳಲ್ಲಿಯೂ ಭಗವಂತನ ಸನ್ನಿಧಾನ. ಇಲ್ಲಿಯ ಎಲ್ಲ ವ್ರಜವಾಸಿಗಳೂ ಭಗವಂತನ ಅಂಗವನ್ನೇ ಆಶ್ರಯಿಸಿ ನಿಂತಿರುವರು. ಎಲ್ಲ ಜೀವರ ಅಂತಃಕರಣದಲ್ಲಿಯೂ ಶ್ರೀಕೃಷ್ಣ ತತ್ವದ ಪ್ರಕಾಶವು ಇರುತ್ತದೆ. ಆದರೆ ಅದರ ಮೇಲೆ ಮಾಯೆಯ ತೆರೆ ಬಿದ್ದಿರುತ್ತದೆ. ಇಪ್ಪತ್ತೆಂಟನೆಯ ದ್ವಾಪರಯುಗದ ಕೊನೆಯಲ್ಲಿ ಸ್ವಯಂ ಶ್ರೀಕೃಷ್ಣನು

ಎಲ್ಲರ ಸಮ್ಮುಖದಲ್ಲಿಯೇ ಪ್ರಕಟನಾಗಿ ಆ ಮಾಯೆಯ ಪರದೆಯನ್ನು ಎತ್ತುತ್ತಾನೆ. ಆದರಿಂದ ಎಲ್ಲ ಜೀವರಿಗೂ ಶ್ರೀಕೃಷ್ಣ ತತ್ವದ ಪ್ರಕಾಶವು ಗೋಚರವಾಗುವದು. ಆದರೆ ಶ್ರೀಕೃಷ್ಣನು ಪರಂಧಾಮಕ್ಕೆ ತೆರಳಿದ ಬಳಿಕ ಮತ್ತೆ ಆ ಮಾಯೆಯ ಪರದೆ ಭಗವತ್ ತತ್ವ ಪ್ರಕಾಶಕ್ಕೆತಿರೋಧಾಯಕವಾಗಿ ಇಳಿದು ಅಡ್ಡ ನಿಂತಿದೆ.

ಈಗ ಅದಕ್ಕೆ ನಾನು ಒಂದು ಉಪಾಯವನ್ನು ಹೇಳುತ್ತೇನೆ ಕೇಳಿರಿ. ಇಪ್ಪತ್ತೆಂಟನೆಯ ದ್ವಾಪರದ ಕೊನೆಗಾಲವನ್ನು ಬಿಟ್ಟು ಬೇರೆ ಕಾಲದಲ್ಲಿ ಯಾರಾದರೂ ಶ್ರೀಕೃಷ್ಣ ಪರಮಾತ್ಮನ ನಿಜವಾದ ಭಗವತ್‌ತತ್ತ್ವದ ಪ್ರಕಾಶವನ್ನು ಪಡೆಯ ಬಯಸಿದರೆ ಅವರು ಮೊದಲು ಶ್ರೀವ್ಯಾಸಮಹರ್ಷಿಗಳಿಂದ ರಚಿತವಾದ ಶ್ರೀಮದ್ ಭಾಗವತ ಗ್ರಂಥವನ್ನು ಆಶ್ರಯಿಸಬೇಕು. ಭಗವತ್‌ತತ್ವದ ಪ್ರಕಾಶ ಆಗುವದು ಶ್ರೀಮದ್‌ಭಾಗವತದಿಂದ ಮಾತ್ರ. ಭಕ್ತರು ಎಲ್ಲಿ ಶ್ರೀಮದ್‌ಭಾಗವತ ಶಾಸ್ತ್ರದ ಪಠಣ ಪ್ರವಚನ ಪಾರಾಯಣ ಶ್ರವಣ ಮುಂತಾದವುಗಳನ್ನು ಮಾಡುವರೋ ಅಲ್ಲಿ ಭಗವಾನ್ ಶ್ರೀಕೃಷ್ಣನು ಸಾಕ್ಷಾತ್ ರೂಪದಿಂದ ವಿರಾಜಮಾನನಾಗಿರುತ್ತಾನೆ. ಗೋಪಿಕಾ ಸ್ತ್ರೀಯರೊಂದಿಗೆ ಒಂದು ಅಧ್ಯಾಯ ಒಂದು ಶ್ಲೋಕವಾದರೂ ಭಾಗವತ ಗ್ರಂಥದ ಶ್ರವಣ ಪಠಣ ಮಾಡಿದವರು ತಮ್ಮ ತಂದೆ ತಾಯಿ, ಹಾಗೂ ಮಡದಿ ಮೂವರ ಮೂರು ಕುಲಗಳನ್ನು ಉದ್ಧಾರ ಮಾಡುವರು.

ಈ ಭಾಗವತ ಶಾಸ್ತ್ರಕ್ಕೆ ಜಾತಿ ಮತ ಪಂಥಗಳ ಕಟ್ಟು ಕಟ್ಟಲೆಗಳ ಕಾಟವಿಲ್ಲ. ಸ್ತ್ರೀಯರೂ ಶೂದ್ರರೂ ಚಾಂಡಾಲರೂ ಕೂಡ ಶ್ರೀ ಭಾಗವತ ಗ್ರಂಥದ ಶ್ರವಣ ಸೇವೆಗಳಿಂದ ಉದ್ಧಾರ ಹೊಂದಬಲ್ಲರು.

ಈ ಶ್ರೀಮದ್ ಭಾಗವತವನ್ನು ಸಾಕ್ಷಾತ್ ಪರಬ್ರಹ್ಮನಾದ ನಾರಾಯಣನೇ ಮೊಟ್ಟ ಮೊದಲು ಬ್ರಹ್ಮದೇವರಿಗೆ ಉಪದೇಶಿಸಿದನು. ಬ್ರಹ್ಮದೇವರೇ ಭಗವಂತನಿಂದ ಭಾಗವತದ ಉಪದೇಶ ಪಡೆದು ಪರಮಾತ್ಮನ ನಿತ್ಯಪ್ರಾಪ್ತಿಗಾಗಿ ಶ್ರೀಮದ್ ಭಾಗವತದ ಸಪ್ತಾಹ ಪಾರಾಯಣವನ್ನು ಮಾಡಿದರು. ಈ ಭಾಗವತ ಪಾರಾಯಣದ ಮಹಿಮೆಯಿಂದ ಬ್ರಹ್ಮದೇವರಿಗೆ ಶ್ರೀಹರಿಯ ಸಂತತ ಸಾಕ್ಷಾತ್ಕಾರವು ಲಭ್ಯವಾಯಿತು. ಈ ಸಮಾಚಾರ ವನ್ನೆಲ್ಲ ನನಗೆ ದೇವಗುರು ಬೃಹಸ್ಪತ್ಯಾಚಾರ್ಯರು ಹೇಳಿ ಶ್ರೀಮದ್ ಭಾಗವತವನ್ನು ಉಪದೇಶಿಸಿದರು. ಅನಂತರ ನಾನೂ ಕೂಡ ಒಂದು ತಿಂಗಳ ವರೆಗೆ ಭಾಗವತದ ದಿವ್ಯ ಕಥಾಮೃತದ ರಸಸ್ವಾದನೆಯನ್ನು ಮಾಡಿ ಧನ್ಯನಾದೆ. ಅದರಿಂದಲೇ ನಾನು ಅಷ್ಟು ಪ್ರೀತಿಯ ಮಿತ್ರ. ವಿಶ್ವಾಸದ ಮಂತ್ರಿ. ಆತ್ಮೀಯ ಪರಿಚಾರಕನೂ ಆಗಿದ್ದೆ ಶ್ರೀಕೃಷ್ಣ ಭಗವಾನನಿಗೆ.

ಅನಂತರ ಶ್ರೀಕೃಷ್ಣನು ಮಧುರಾ ಪಟ್ಟಣಕ್ಕೆ ತೆರಳಿದ ಬಳಿಕ ವಿರಹ ವ್ಯಾಕುಲರಾದ ಗೋಪಿಕಾ ಸ್ತ್ರೀಯರ ಸೇವೆಗೆಂದು ನನ್ನನ್ನು ನಿಯಮಿಸಿದ. ಶ್ರೀಕೃಷ್ಣನಿಗೂ ರಾಧೆಗೂ ಹಾಗೂ ರಾಧಾಂಶ ಸಂಭೂತರಾದ ಗೋಪಿಯರಿಗೂ ಎಂದೂ ವಿಯೋಗ ಇಲ್ಲ. ಅವರೆಲ್ಲರೂ ಸಂತತವೂ ಅಂತರಂಗದಲ್ಲಿ ಭಗವಚ್ಚಿಂತನೆಗೈದು ಅವನ ನಿತ್ಯ ಸನ್ನಿಧಾನದ ಸುಖವನ್ನು ಅನುಭವಿಸತೊಡಗಿದರು.

ಶ್ರೀರಾಧಾಕೃಷ್ಣರು ನಿತ್ಯಾऽವಿಯೋಗಿಗಳು ಹಾಗೂ ವಿವಿಧ ರೂಪಗಳಿಂದ ವ್ರಜ ಭೂಮಿಯಲ್ಲಿ ನಿತ್ಯ ವಿಹಾರಿಗಳು. ಅವರ ಲೀಲಾ ವಿಹಾರದ ವಿಶದವೃತ್ತಾಂತವನ್ನು ವಿವರವಾಗಿ ಬಿತ್ತರಿಸುವ ಬೃಹದ್ಗ್ರಂಥವೇ ಭಾಗವತ. ಅದರ ಈ ರಮ್ಯ ರಹಸ್ಯವನ್ನು ಸಂಪೂರ್ಣವಾಗಿ ಅರಿಯಲಿಕ್ಕೆ ನನ್ನಿಂದ ಆಗಲಿಲ್ಲ. ಆದರೆ ಅದರ ಚಮತ್ಕಾರವನ್ನು ಪ್ರತ್ಯಕ್ಷವಾಗಿ ಕಾಣುವ ಭಾಗ್ಯ ನನ್ನದಾಗಿತ್ತು.

ಇದರ ನಂತರ ಎಷ್ಟೋ ವರ್ಷಗಳ ಬಳಿಕ ಕೃಷ್ಣಾವತಾರದ ಉಪಸಂಹಾರದ ಕಾಲವು ಸಂಪ್ರಾಪ್ತವಾಯಿತು. ಒಂದು ಆಲದ ಮರದ ಅಡಿಯಲ್ಲಿ ನನ್ನ ಎದುರಿಗೆ ನಿಂತು ಶ್ರೀಕೃಷ್ಣ ಭಗವಂತನು ಭಾಗವತದ ಈ ಪರಮ ರಹಸ್ಯವನ್ನು ಉಪದೇಶ ನೀಡಿದ. ನನ್ನ ಹೃದಯದಲ್ಲಿ ಅದು ದೃಢವಾಗಿ ಬೇರೂರುವಂತೆ ಮಾಡಿದ. ಆ ಭಗವದುಪದೇಶದಿಂದ ಪ್ರಭಾವಿತನಾಗಿಯೇ ನಾನು ಈ ಬದರೀಕ್ಷೇತ್ರದಲ್ಲಿ ಇದ್ದರೂ ಈ ವ್ರಜ ಭೂಮಿಯಲ್ಲಿ ನಿತ್ಯ ನಿರಂತರವೂ ಲೀಲಾವಿಹಾರಿಗಳಾದ ರಾಧಾ ಕೃಷ್ಣರ ಮತ್ತು ಗೋಪೀ ಕೃಷ್ಣರ ಚರಣಧೂಳೀ ಕಣಗಳ ಲಾಭದ ಲೋಭದಿಂದ ಇಲ್ಲಿಯ ಹುಲ್ಲು ಬಳ್ಳಿ ಮೆದೆ ಪೊದೆಗಳ ರೂಪದಿಂದ ನೆಲೆಸಿರುತ್ತೇನೆ. ಇಲ್ಲಿಯ ನಾರದ ಕುಂಡದ ತೀರದಲ್ಲಿ ಅವರ ಅಡಿ ಹುಡಿಯ ಕಣಗಳನ್ನು ಅರಸುತ್ತ ಸಂಚರಿಸುತ್ತೇನೆ. ಶ್ರೀಮದ್ ಭಾಗವತ ಶಾಸ್ತ್ರದ ಸೇವನೆಯಿಂದ ಭಗವಾನ್ ಶ್ರೀಕೃಷ್ಣ ರಾಧಾ ತತ್ವದ ಪ್ರಕಾಶದ ಅರಿವು ಮೂಡುವದು. ಆದುದರಿಂದ ಇಲ್ಲಿ ನೆರೆದು ಭಕ್ತಿಯಿಂದ ಭಗವಂತನ ಭಜನ ಧ್ಯಾನ ಗಾನಾದಿ ಕಾರ್ಯಕ್ರಮಗಳನ್ನು ಕೈಕೊಂಡ ಭಕ್ತವೃಂದದ ಎದುರು ನಾನು ಭಾಗವತದ ಪಾಠ ಹೇಳುತ್ತೇನೆ. ನೀವೆಲ್ಲರೂ ನನ್ನ ಈ ಭಾಗವತ ಪ್ರವಚನದ ಕಾರ್ಯದಲ್ಲಿ ಸಹಕರಿಸಬೇಕು.

**ಪರೀಕ್ಷಿತ:-** ಹರಿದಾಸ ಶ್ರೇಷ್ಠ ಉದ್ಧವ! ತಾವು ಶ್ರೀಮದ್ಭಾಗವತ ಕಥಾ ಕೀರ್ತನೆಯನ್ನು ನಿಶ್ಚಿಂತೆಯಿಂದ ಮಾಡಿರಿ. ಈ ಪುಣ್ಯಕಾರ್ಯದಲ್ಲಿ ನಾವು ತಮಗೆ ಏನು ಹೇಗೆ ಸಹಾಯ ಮಾಡಬೇಕು ಆಜ್ಞಾಪಿಸಿರಿ.

**ಉದ್ಧವ:-** ''ರಾಜನ್! ಶ್ರೀಕೃಷ್ಣ ಭಗವಂತನು ಈ ಭೂಮಂಡಲವನ್ನು ಪರಿತ್ಯಜಿಸಿ ಪರಂಧಾಮಕ್ಕೆ ತೆರಳಿದ ಬಳಿಕ ಇಲ್ಲಿ ಎಲ್ಲ ಕಡೆಗೂ ಕಲಿಯ ಪ್ರಭುತ್ವ ನಡೆದಿದೆ. ಇಲ್ಲಿ ಶುಭ ಕಾರ್ಯವು ಪ್ರಾರಂಭವಾದ ಕೂಡಲೇ ಕಲಿಯು ಇದಕ್ಕೆ ವಿಘ್ನವನ್ನು ಒಡ್ಡುವ ವಿಷಯದಲ್ಲಿ ಸಂದೇಹವೇ ಇಲ್ಲ. ಆದುದರಿಂದ ನೀನೀಗ ದಿಗ್ವಿಜಯಕ್ಕೆ ಹೊರಡು. ಎಲ್ಲೆಡೆಗೂ ತನ್ನ ಕೈಚಾಚುತ್ತಿರುವ ಕಲಿಯನ್ನು ನಿಗ್ರಹಿಸಿ ನಿನ್ನ ವಶದಲ್ಲಿ ತೆಗೆದುಕೋ. ನಾನು ಇತ್ತ ನಿನ್ನ ಸಹಾಯದ ಬಲದಿಂದ ಇಲ್ಲಿಯೇ ಶ್ರೀಮದ್ ಭಾಗವತ ಪ್ರವಚನವನ್ನು ಶುರು ಮಾಡಿ ಭಕ್ತರಿಗೆಲ್ಲ ಒಂದು ತಿಂಗಳ ವರೆಗೆ ಶ್ರೀಕೃಷ್ಣ ಕಥಾಮೃತದ ಪಾನವನ್ನು ಮಾಡಿಸುತ್ತೇನೆ. ಮತ್ತು ಶ್ರೀ ಹರಿಕಥಾಮೃತಪಾನದಿಂದ ವಿಧೂತಪಾಪರಾದ ಈ ಎಲ್ಲ ಭಾಗವತದ ಶ್ರೋತಾರರನ್ನು ಮಧುಸೂದನನ ನಿತ್ಯಧಾಮವಾದ ಗೋ ಲೋಕಕ್ಕೆ ಕರೆದುಕೊಂಡು ಹೋಗುತ್ತೇನೆ.''

ಉದ್ಧವನ ಈ ಮಾತನ್ನು ಕೇಳಿ ಪರೀಕ್ಷಿತ ರಾಜನಿಗೆ ಅತ್ಯಂತ ಸಂತಸವಾಯಿತು. ಕಲಿಯ ಮೇಲೆ ವಿಜಯ ಹೊಂದುವ ವಿಚಾರದಿಂದಲೇ ಅವನ ಮನಸ್ಸು ಪ್ರಫುಲ್ಲಿತವಾಯಿತು. ಕೂಡಲೇ ಕಲಿ ನಿಗ್ರಹಕ್ಕಾಗಿ ಹೊರಡಬೇಕು ಎಂದು ಉತ್ಸಾಹದ ಆವೇಶದಲ್ಲಿ ಅವನು ಎದ್ದು ನಿಂತನು. ಆದರೆ ತಾನು ಅತ್ತ ಹೋದರೆ ಇತ್ತ ಉದ್ಧವನು ಶುರು ಮಾಡಿದ ಶ್ರೀಮದ್ ಭಾಗವತದ ಕಥಾಮೃತವನ್ನು ಕೇಳುವ ಸುಯೋಗ ತನಗೆ ತಪ್ಪಿಹೋಗುವದೆಂದು ಅವನು ಖಿನ್ನನಾದನು. ಏನಾದರೂ ಅವನಿಗೆ ಭಗವತ್ಕಥಾ ಶ್ರವಣದಿಂದ ವಂಚಿತನಾಗುವುದು ಬೇಕಿರಲಿಲ್ಲ. ಆದುದರಿಂದ ಅವನು ಉದ್ಧವನ ಎದುರು ತನ್ನ ಮನದ ಅಳಲನ್ನು ತೋಡಿಕೊಂಡ.

**ಪರೀಕ್ಷಿತ:-** ಭಕ್ತಶ್ರೇಷ್ಠ ಉದ್ಧವ! ನೀನು ಆಜ್ಞೆ ಮಾಡಿದಂತೆ ನಾನು ಕಲಿಯನ್ನು ನಿಗ್ರಹಿಸುತ್ತೇನೆ. ಆದರೆ ಭಾಗವತ ಕಥಾಮೃತದ ಶ್ರವಣವು ನನಗೆ ತಪ್ಪಿ ಹೋಗುವುದು. ನಾನು ನಿನ್ನ ಚರಣಗಳಿಗೆ ಶರಣು ಬಂದಿದ್ದೇನೆ. ನನಗೆ ಹೇಗಾದರೂ ಮಾಡಿ ಈ ಜನ್ಮದಲ್ಲಿಯೇ ಸಂಪೂರ್ಣ ಭಾಗವತವನ್ನು ಕೇಳುವ ಸುಯೋಗವು ಒದಗಿಬರುವಂತೆ ಆಶೀರ್ವದಿಸಿರಿ.

**ಉದ್ಧವ:-** "ರಾಜನೇ, ನೀನು ಚಿಂತೆ ಮಾಡಬೇಡ. ಭಾಗವತವನ್ನು ಕೇಳಬೇಕು ಎಂಬ ನಿನ್ನ ಹಂಬಲವನ್ನು ನಾನು ಚೆನ್ನಾಗಿ ಬಲ್ಲೆ. ಪರಮ ಭಗವದ್ಭಕ್ತನಾದ ನೀನೇ ಭಾಗವತ ಶಾಸ್ತ್ರದ ಮುಖ್ಯ ಶ್ರವಣಾಧಿಕಾರಿ. ಇನ್ನು ಮುಂದೆ ನಿನ್ನಿಂದಲೇ ಈ ಭಾಗವತ ಶಾಸ್ತ್ರವು ಭೂಮಂಡಲದಲ್ಲಿ ಅದರಲ್ಲಿಯೂ ವಿಶೇಷತಃ ಭಾರತದೇಶದಲ್ಲಿ ಪ್ರಚುರವಾದ ಪ್ರಚಾರವನ್ನು ಹೊಂದುವದು. ಮತ್ತು ಅಸಂಖ್ಯ ಭಗವದ್ಭಕ್ತರಿಗೆ ನಿನ್ನಿಂದ ಶ್ರೀ ಮದ್ಭಾಗವತವು ಪಠಣ, ಪ್ರವಚನ, ಶ್ರವಣಾದಿಗಳಿಗೆ ಲಭ್ಯವಾಗುವುದು. ಮತ್ತು ಈ ಭಾಗವತದ ಶ್ರವಣ ಪಠಣಾದಿಗಳಿಂದ ಪಾಪಗಳೆಲ್ಲವೂ ತೊಳೆದುಹೋಗಿ ಈ ಭಗವತ್ಕಥಾಮೃತ ಪಾನದಿಂದ ಬಹು ಜನರಿಗೆ ಜ್ಞಾನಾನಂದ ರೂಪಿಯಾದ ಪರಮ ಪದ ಪ್ರಾಪ್ತಿ ಆಗುವದು. ಅವಧೂತ ಶಿಖಾಮಣಿ ಶುಕಾಚಾರ್ಯರು ರುದ್ರಾವತಾರರು. ನಂದನಂದನ ಗೋವಿಂದನ ಸುಸ್ವರೂಪವನ್ನು ಚೆನ್ನಾಗಿ ಅರಿತು ಧ್ಯಾನಗಾನ ಮಾಡಿ ತನ್ಮಯತೆಯಿಂದ ಶ್ರೀಕೃಷ್ಣಮಯರಾಗಿ ಶ್ರೀಕೃಷ್ಣನ ಸ್ವರೂಪವೇ ಎಂದು ಎನಿಸುವಷ್ಟು ತಲ್ಲೀನತೆಯ ಸುಖವನ್ನು ಅನುಭವಿಸುವವರು. ಮತ್ತು ಶ್ರೀಮನ್ನಾರಾಯಣನ ಅವತಾರ ಭೂತರಾದ ಭಗವಾನ್ ಶ್ರೀ ವೇದವ್ಯಾಸರ ಸಾಕ್ಷಾತ್ ಪುತ್ರರು. ಅವರು ನಿನಗೆ ಶ್ರೀಮದ್ ಭಾಗವತದ ದಿವ್ಯ ಕಥಾಮೃತವನ್ನು ಪಾನ ಮಾಡಿಸಬೇಕೆಂದೇ ನೀನಿದ್ದಲ್ಲಿಗೆ ಬರುವರು. ಸಂಪೂರ್ಣ ಭಾಗವತವನ್ನು ಅವರು ನಿನಗೆ ಶ್ರವಣ ಮಾಡಿಸುವರು. ಆ ಭಾಗವತ ಕಥಾಶ್ರವಣದಿಂದ ನೀನು ಆ ಶ್ರೀಕೃಷ್ಣ ಪರಮಾತ್ಮನ ನಿತ್ಯಧಾಮವಾದ ವೈಕುಂಠ ಲೋಕವನ್ನು ಹೊಂದುವೆ. ನಿನ್ನ ಅನಂತರ ಈ ಭೂಲೋಕದಲ್ಲೆಲ್ಲ ಅಧಿಕಾಧಿಕವಾಗಿ ಭಾಗವತದ ಪ್ರಚಾರವಾಗಿ ಎಲ್ಲೆಡೆಗೂ ಹರಿಭಕ್ತಿಯ ಪ್ರಸಾರವಾಗುವುದು. ಆದುದರಿಂದ ಪರೀಕ್ಷಿತ ರಾಜ, ನೀನೀಗ ಹೊರಡು. ಕಲಿಯನ್ನು ಇದ್ದಲ್ಲಿ ಬೆನ್ನಟ್ಟಿ ನಿಗ್ರಹಿಸು."

ಉದ್ಧವನು ಹೀಗೆ ನುಡಿದ ಬಳಿಕ ಪರೀಕ್ಷಿತ ರಾಜನು ಅವನಿಗೆ ಪ್ರದಕ್ಷಿಣೆ ಹಾಕಿ ನಮಸ್ಕಾರ ಮಾಡಿ ದಿಗ್ವಿಜಯಕ್ಕಾಗಿ ಹೊರಟನು. ಇತ್ತ ವಜ್ರನಾಭನಾದರೂ ತನ್ನ ಮಗನಾದ ಪ್ರತಿಬಾಹುವಿಗೆ ಮಧುರಾ ಮಂಡಲದ ರಾಜಸಿಂಹಾಸನದಲ್ಲಿ ಪಟ್ಟಾಭಿಷೇಕಗೈದು ಶ್ರೀಕೃಷ್ಣನ ಎಲ್ಲ ರಾಣಿಯರೊಂದಿಗೆ ಉದ್ಧವನ ಭಾಗವತ ಪ್ರವಚನವನ್ನು ಕೇಳಲಿಕ್ಕೆಂದು ಅಲ್ಲಿಗೆ ಬಂದು ವಾಸಗೈದನು. ಗೋವರ್ಧನ ಪರ್ವತದ ಸಮೀಪದಲ್ಲಿ ವೃಂದಾವನದಲ್ಲಿ ಒಂದು ತಿಂಗಳವರೆಗೆ ಉದ್ಧವನು ಭಾಗವತದ ದಿವ್ಯಕಥಾಮೃತದ ರಸಧಾರೆಯನ್ನು ಹರಿಸಿದನು.

ಶ್ರೀಮದ್ ಭಾಗವತವು ದಿವ್ಯ ಗ್ರಂಥ. ಉದ್ಧವನಂಥ ಪರಮ ಭಗವದೈಕ ನಿಷ್ಠನಾದ ಭಕ್ತಶ್ರೇಷ್ಠ ಪ್ರವಚನಕಾರ. ಸಾಕ್ಷಾತ್ ಕೃಷ್ಣಪರಮಾತ್ಮನ ದಿವ್ಯಲೀಲೆಗಳಲ್ಲಿ ಸ್ವಯಂ ಭಾಗವಹಿಸಿ ಅವನ ಮಹಾಮಹಿಮೆಯನ್ನು ಕಂಡು ಅದರ ಸುಖಾನುಭವವನ್ನು ಉಂಡು ತಣಿದು ತೃಪ್ತಿಗೊಂಡವ. ಈಗ ಅದನ್ನೇ ನೆನೆದು ಮೆಲಕಾಡಿಸುತ್ತಿರುವ ಕೃಷ್ಣನ, ಕೈಹಿಡಿದ ಕಾಂತೆಯರೂ ಮರಿಮಗ ವಜ್ರನಾಭನೂ ಶ್ರೋತಾರರು. ಅಂದ ಬಳಿಕ ಕೇಳುವದೇನು! ಭಗವತ್ಕಥೆಯ ಅಮೃತಪ್ರವಾಹವೇ ಹರಿಯತೊಡಗಿತು. ಉದ್ಧವರ ಅದ್ಭುತಪ್ರವಚನ

ಶಕ್ತಿಯಿಂದ ಎಲ್ಲರ ಕಣ್ಣೆದುರಿಗೂ ಕೃಷ್ಣನ ಮೂರ್ತಿ ನಿಂತಂತೆ ತೋರತೊಡಗಿತು. ಎಲ್ಲರಿಗೂ ತಾವೆಲ್ಲರೂ ಕೃಷ್ಣಮಯರೇ ಆದಂತೆ ಭಾಸ. ಕೃಷ್ಣ ಸ್ವರೂಪರೇ ತಾವು ಎಂಬ ಆಪಾತತಃ ಅನುಭವ, ವಜ್ರನಾಭನಿಗೆ ತಾನು ಶ್ರೀಕೃಷ್ಣನ ಬಲಗಾಲಿನಲ್ಲಿಯೇ ವಿಲೀನನಾಗಿ ನಿಂತಂತೆ ಅನಿಸಿಕೆ. ಆದರಿಂದ ಅವನಿಗೆ ಶ್ರೀಕೃಷ್ಣ ವಿರಹ ವ್ಯಾಕುಲತೆ ಮಾಯವಾಯಿತು. ರೋಹಿಣೀ ಮೊದಲಾದ ಕೃಷ್ಣನ ಮಾತೆಯರಿಗೂ ಉಳಿದೆಲ್ಲ ಕೃಷ್ಣಕಾಂತೆಯರಿಗೂ ಭಾಗವತ ಪ್ರವಚನದ ಮಹಿಮೆಯಿಂದ ಶ್ರೀಕೃಷ್ಣ ದಿವ್ಯವಿಗ್ರಹದ ತೇಜೋವಲಯ ದಲ್ಲಿಯೇ ತಾವೂ ಒಂದು ಪ್ರಭೆಯ ರೂಪದಿಂದ ಕರಗಿ ನಿಂತುಕೊಂಡಂತೆ ಎನಿಸಿತು.

ಆದರಿಂದ ಅವರೆಲ್ಲರಿಗೂ ತಮ್ಮ ಪ್ರಾಣಕ್ಕಿಂತ ಪ್ರಿಯನಾದ ಶ್ರೀಕೃಷ್ಣ ವಿರಹ ವ್ಯಥೆ ತೊಲಗಿ ಹೋಯಿತು. ಇವರಲ್ಲದೇ ಅಲ್ಲಿ ಭಾಗವತ ಕಥಾ ಶ್ರವಣಕ್ಕಾಗಿ ನೆರೆದ ಶ್ರೋತೃಗಳಿಗೆಲ್ಲರಿಗೂ ಬಾಹ್ಯ ಪ್ರಪಂಚದ ಅರಿವು ಅಸ್ಮಿತೆಗಳು ಮಾಯವಾಗಿ ಈ ಜಗತ್ತಿನಿಂದಲೇ ಅಂತರ್ಧಾನ ಹೊಂದಿ ಶ್ರೀಕೃಷ್ಣನ ಲೀಲಾ ವಿಹಾರಗಳಲ್ಲಿ ಸಮ್ಮಿಲಿತರಾದಂತೆ ವಿಚಿತ್ರ ಅನುಭೂತಿ. ಅವರೆಲ್ಲರಿಗೂ ಆಗ ಗೋವರ್ಧನ ಪರ್ವತದ ಸುಂದರ ಕಂದರಗಳಲ್ಲಿ ಹೂವಿನ ಹಂದರ, ಹಾಗೂ ಲತಾಕುಂಜ ನಿಕುಂಜಗಳಲ್ಲಿ ತುರು ಕರುಗಳ ನಡುವೆ ಕೊಳಲನೂದುತ್ತ ಅಲೆದಾಡುವ ನಂದಕಿಶೋರನೊಡನೆಯೇ ಅಂಡಲೆಯುತ್ತಿರುವಂತೆ ಭಾಸ. ಆದರಿಂದ ಜನ್ಮದಲ್ಲಿಯೇ ಒಮ್ಮೆಯೂ ಅನುಭವಿಸದ ಉಲ್ಲಾಸ. ಹೀಗೆ ವ್ರಜಭೂಮಿಯಲ್ಲಿ ಶ್ರೀಮದ್ ಭಾಗವತವನ್ನು ಹೇಳುವವರೂ ಕೇಳುವವರೂ ಕೂಡಿಯೇ ತಮ್ಮತನವನ್ನು ಮರೆತು, ಕೃಷ್ಣನ ಭಕ್ತಿಭಾವದಲ್ಲಿ ಬೆರೆತು, ಕಾಲಾತೀತರಾಗಿ, ಕೃಷ್ಣಾನುಭೂತಿಯ ಆನಂದದಲ್ಲಿ ಏಕರಸರಾಗಿ ಭಗವಂತನ ಅಪರೋಕ್ಷಾನುಭವದ ವಿಚಿತ್ರ ಮಾಧುರಿಯ ಒಂದು ಮಾದರಿಯನ್ನು ಕಂಡುಕೊಂಡರು.

## ಶ್ರೀಮದ್ ಭಾಗವತದ ಪ್ರವಚನ ಹಾಗೂ ಶ್ರವಣಗಳ ವಿಧಾನ

**ಸೂತ:-** ಋಷಿಗಳೇ, ಶ್ರೀಮದ್‌ಭಾಗವತ ಗ್ರಂಥ ಎಂದರೆ ಭಗವಂತನ ಸಾಕ್ಷಾತ್ ಸ್ವರೂಪವೇ ಇದ್ದಂತೆ. ಭಗವಂತನ ವಿಷಯದಲ್ಲಿ ಭಕ್ತರ ಹೃದಯದಲ್ಲಿ ಇರುವ ಮಧುರ ಭಾವನೆಯನ್ನು ಅಭಿವ್ಯಕ್ತಗೊಳಿಸಿ ಭಗವನ್ಮಾಹಾತ್ಮ್ಯದ ರಸಮಾಧುರ್ಯವನ್ನು ಎಲ್ಲರಿಗೂ ಉಣಿಸಿ ತಣಿಸುವ ದಿವ್ಯ ಪ್ರಬಂಧವೇ ಭಾಗವತ. ವಾಕ್ಯ, ಜ್ಞಾನ, ವಿಜ್ಞಾನ, ಭಕ್ತಿ ಇವುಗಳ ಅಂಗಭೂತವಾದ ಸಾಧನ ಚತುಷ್ಟಯವನ್ನು ಪ್ರಕಾಶಪಡಿಸಿ ಮಾಯಾ ಜಾಲದ ಉಪಮರ್ದನ ವನ್ನು ಮಾಡಬಲ್ಲ ಏಕೈಕ ಗ್ರಂಥರತ್ನವೆಂದರೆ ಶ್ರೀಮದ್ ಭಾಗವತ. ಈ ಭಾಗವತವು ಅನಂತ, ಅಕ್ಷರ ಸ್ವರೂಪವಾಗಿದೆ. ಇದರ ಪ್ರಮಾಣ ಪರಿಮಿತಿಗಳನ್ನು ಇಷ್ಟೇ ಎಂದು ಖಚಿತವಾಗಿ ಯಾರು ಹೇಳಬಲ್ಲರು? ಹಿಂದೆ ಪೂರ್ವಕಾಲದಲ್ಲಿ ಭಗವಾನ್ ಶ್ರೀಹರಿಯು ಚತುರ್ಮುಖ ಬ್ರಹ್ಮದೇವರನ್ನು ಕುರಿತು ನಾಲ್ಕು ಶ್ಲೋಕಗಳನ್ನು ಹೇಳಿ ಭಾಗವತದ ದಿಗ್ದರ್ಶನ ಮಾಡಿದ್ದನು. ಮುಂದೆ ಅದು ವಿಸ್ತಾರವಾಗುತ್ತ ಬಂದು ಶ್ರೀವೇದವ್ಯಾಸರ ಮುಖದಿಂದ ಶ್ರೀ ಶುಕಾಚಾರ್ಯರಿಗೆ ಉಪದೇಶಿಸಲ್ಪಟ್ಟಾಗ ಹದಿನೆಂಟು ಸಾವಿರ ಶ್ಲೋಕಗಳಷ್ಟಾಗಿ ರೂಪುಗೊಂಡಿತು. ಸಂಸಾರ ಸಾಗರದಲ್ಲಿ ಕಲಿ ಎಂಬ ಮೊಸಳೆ ಹಿಡಿದ ಪ್ರಾಣಿಗಳನ್ನು ಪಾರುಮಾಡಲಿಕ್ಕೆ ಏಕಮಾತ್ರವಾದ ನಿರಪಾಯ ಉಪಾಯ ಎಂದರೆ ಶ್ರೀಭಾಗವತ.

ಈ ಭಾಗವತ ಪುರಾಣವನ್ನು ಶ್ರವಣ ಮಾಡುವ ಅರ್ಥಾತ್ ಕೇಳುವ ಶ್ರಾವಕರಲ್ಲಿ ಎರಡು ಬಗೆ ಇದೆ. ಪ್ರವರ ಶ್ರೋತಾ, ಅವರ ಶ್ರೋತಾ ಎಂದು. ಪ್ರವರ ಶ್ರೋತಾ ಎಂದರೆ

ಉತ್ತಮ ಶ್ರೋತಾ. ಅವರ ಎಂದರೆ ಅಧಮ ಶ್ರೋತಾ ಎಂದು ಅರ್ಥ. ಪ್ರವರ ಶ್ರೋತಾರದಲ್ಲಿ ಚಾತಕ, ಹಂಸ, ಶುಕ, ಮೀನ ಎಂದು ನಾಲ್ಕು ಬಗೆಗಳು ಇವೆ. ಅವರ ಶ್ರೋತೃಗಳಲ್ಲಿ ವೃಕ. ಭೂರುಂಡ, ವೃಷ, ಉಷ್ಟ್ರ-ಎಂದು ನಾಲ್ಕು ಪ್ರಭೇದಗಳು.

ಚಾತಕವು ಮಳೆಯ ನೀರನ್ನು ಬಿಟ್ಟು ಬೇರೆ ನೀರು ಬೇಕಾದಷ್ಟು ಬಳಿಯಲ್ಲಿಯೇ ಇದ್ದರೂ ಮುಟ್ಟುವದಿಲ್ಲ. ಬಾಯಾರಿಕೆಯಿಂದ ಬಳಲುತ್ತಿದ್ದರೂ ಕಾದುಕುಳಿತು ಮಳೆನೀರನ್ನೇ ಕುಡಿಯುತ್ತದೆ. ಅದರಂತೆ ಉಳಿದೆಲ್ಲ ವಿಷಯವಾರ್ತೆಗಳನ್ನು ಬಿಟ್ಟು ಶ್ರೀಕೃಷ್ಣನ ಕಥಾಮೃತವನ್ನು ಮಾತ್ರ ಪಾನಮಾಡಬೇಕೆಂದು ನಿಯಮಬದ್ಧರಾದ ಶ್ರೋತೃಗಳು ಚಾತಕ ಶ್ರೋತೃಗಳು ಎನಿಸಲ್ಪಡುತ್ತಾರೆ. ಹಂಸವು ಹಾಲು ನೀರು ಬೆರೆಸಿ ಇಟ್ಟರೂ ಹಾಲನ್ನು ಮಾತ್ರ ಪರಿಗ್ರಹಿಸಿ ನೀರನ್ನು ತ್ಯಜಿಸಿಬಿಡುತ್ತದೆ. ಅದರಂತೆ ಅನೇಕ ಶಾಸ್ತ್ರ ಪುರಾಣಗಳನ್ನು ಶ್ರವಣ ಮಾಡಿದರೂ ಅದರಲ್ಲಿ ಸಾರಭೂತವಾದ ಭಗವತ್ತತ್ವವನ್ನು ಮಾತ್ರ ಪರಿಗ್ರಹಿಸುವ, ಶ್ರೋತ್ರಗಳು ಹಂಸಶ್ರೋತ್ರಗಳು. ಭಾಗವತವನ್ನು ಕೇಳಿ ಓದಿ ಭಕ್ತಜನರಿಗೆ ಸುಂದರ ಶೈಲಿಯಲ್ಲಿ ಬಣ್ಣಿಸಿ ಹೇಳಿ ಶ್ರೀ ವ್ಯಾಸರಿಗೂ ಉಳಿದ ಶ್ರಾವಕರಿಗೂ ಆನಂದವನ್ನು ಉಂಟು ಮಾಡುವವರು 'ಶುಕ' ಎಂದು ಕರೆಯಲ್ಪಡುವರು. ಹಾಲುಗಡಲಿನಲ್ಲಿ ಈಜಾಡುವ ಮೀನವು ಮೌನವಾಗಿದ್ದು ತನ್ನ ತೆರೆದ ಕಣ್ಣುಗಳಿಂದ ನೋಡುತ್ತ ಹಾಲನ್ನು ಪಾನ ಮಾಡುವಂತೆ ಕಥಾಪ್ರವಚನ ಕಾಲದಲ್ಲಿ ಮಾತನಾಡದೇ ಬಿಡುಗಣ್ಣಿನಿಂದ ನೋಡುತ್ತ ಕಥಾಮೃತ ಪಾನಮಾಡುವವರು ಮೀನ ಎಂದು ಕರೆಯಲ್ಪಡುವರು. ಇವರೆಲ್ಲರೂ ಪ್ರವರ ಎಂಬ ಮೊದಲನೇ ವರ್ಗದ ಶ್ರೇಷ್ಠ ಶ್ರಾವಕರು. ಇನ್ನು ಅವರ ಶ್ರೋತೃಗಳ ನಾಲ್ಕು ಪ್ರಕಾರಗಳನ್ನು ಕೇಳು.

ವನಾಂತರದಲ್ಲಿ ಮಧುರವಾದ ವೇಣುನಾದವನ್ನು ಮೈ ಮರೆತು ಕೇಳುತ್ತಿರುವ ಚಿಗರೆಗಳನ್ನು ಕರ್ಕಶ ಧ್ವನಿಯಿಂದ ಹಾಗೂ ಚೀತ್ಕಾರದಿಂದ ತೋಳಗಳು ಕಂಗೆಡಿಸುತ್ತವೆ. ಅದರಂತೆ ಅತ್ಯಂತ ಭಕ್ತಿಯಿಂದ ಭಗವತ್ಕಥೆಯನ್ನು ಶ್ರವಣ ಮಾಡುತ್ತಿರುವ ರಸಿಕ ಶ್ರೋತಾರರನ್ನು ಉದ್ವೇಗಗೊಳಿಸುತ್ತ ನಡುವೆ ಹರಟೆ ಮಾತುಕತೆ ಆಡಿ ಸದ್ದುಗದ್ದಲ ಮಾಡುವವರು ವೃಕ ಎಂದು ಕರೆಯಲ್ಪಡುತ್ತಾರೆ.

ಹಿಮಾಲಯ ಪರ್ವತದಲ್ಲಿ ಭೂರುಂಡ ಎಂಬ ಒಂದು ಪಕ್ಷಿಯಿದೆ. ಅದು ಬೇರೊಬ್ಬರು ಹೇಳಿದ ನೀತಿಯ ಮಾತನ್ನು ಅವರು ಹೇಳಿದಂತೆಯೇ ತಾನೂ ಉಚ್ಚರಿಸುತ್ತದೆ. ಆದರೆ ಅದರಿಂದ ತಾನು ಯಾವ ಲಾಭವನ್ನೂ ಮಾಡಿಕೊಳ್ಳುವದಿಲ್ಲ. ಅದರಂತೆ ನೀತಿ, ಶಾಸ್ತ್ರ, ಸಿದ್ಧಾಂತದ ಮಾತುಗಳನ್ನು ಪರರಿಗೆ ಉಪದೇಶಮಾಡಿ ತಾನು ಹೇಳಿದ್ದನ್ನು ಎಂದೂ ಆಚರಣೆಯಲ್ಲಿ ತರದೇ ಇರುವ ಮನುಷ್ಯನು ಭೂರುಂಡ ಎನಿಸುತ್ತಾನೆ.

ಎತ್ತು ತನ್ನ ಮುಂದೆ ಇರುವ ಸಿಹಿ ಸಪ್ಪೆ ಸೊಪ್ಪು ದವಸ ಧಾನ್ಯ ದಂಟು ಎಲ್ಲವನ್ನು ಯಾವ ವಿವೇಕವೂ ಇಲ್ಲದೇ ಒಂದೇ ರೀತಿಯಿಂದ ತಿನ್ನುತ್ತದೆ. ಹಾಗೆ ಕೇಳಿದ್ದೆಲ್ಲವನ್ನೂ ಸಾರಾಸಾರ ವಿಚಾರ ಮಾಡದೇ ಸ್ವೀಕರಿಸುವ ಕೇಳುಗರು ವೃಷ ಎಂದು ಕರೆಯಲ್ಪಡುತ್ತಾರೆ. ಒಂಟೆಯ ಮುಂದೆ ಮಾವು ಬೇವು ತಂದಿಟ್ಟರೂ ಮಾವನ್ನು ಬಿಟ್ಟು ಬೇವಿನ ತೊಪ್ಪಲನ್ನು ಮಾತ್ರ ತಿನ್ನುತ್ತದೆ. ಹಾಗೆಯೇ ದಿವ್ಯವಾದ ಭಗವತ್ಕಥಾವನ್ನು ಬಿಟ್ಟು ಹೇಯವಾದ ಸಾಂಸಾರಿಕ ವಿಷಯಗಳಲ್ಲಿಯೇ ಆಸಕ್ತರಾಗುವವರು ಉಷ್ಟ್ರ ಎಂದು ಕರೆಯಲ್ಪಡುತ್ತಾರೆ.

ಇವರಲ್ಲದೆ ಅವರ ಪ್ರವರ ಎಂಬ ಎರಡು ಬಗೆಯ ಶ್ರೋತೃಗಳು ಭ್ರಮರ ಗರ್ದಭ ಮುಂತಾಗಿ ಇನ್ನೂ ಅನೇಕ ತೆರನಾಗಿದ್ದಾರೆ. ಈ ಎಲ್ಲ ಭೇದಗಳನ್ನು ಶ್ರೋತೃಗಳ ಸ್ವಾಭಾವಿಕ ಆಚಾರ ವ್ಯವಹಾರಗಳನ್ನು ಪರೀಕ್ಷಿಸಿ ನಿರ್ಧರಿಸಬೇಕಾಗುವದು.

ಒಟ್ಟಿನ ಮೇಲೆ ಪ್ರವಚನಕಾರರ ಎದುರು ನಮ್ರತೆಯಿಂದ ಕುಳಿತು, ಪ್ರವಚನ ನಡೆದಾಗ ತಮ್ಮ ಸಂಸಾರದ ಬೇರೆ ವಿಷಯಗಳನ್ನು ಮಾತನಾಡದೇ ಭಕ್ತಿಯಿಂದ ಭಗವತ್ಕಥಾಮೃತವನ್ನು ಪಾನ ಮಾಡುವವರು ಉತ್ತಮ ಶ್ರೋತೃಗಳೆಂದು ಎನಿಸಲ್ಪಡುವರು. ಇದರಂತೆ ಭಗವಂತನಲ್ಲಿ ಮನಸ್ಸನ್ನು ಇಟ್ಟು ಬೇರೆ ಯಾವ ಲಾಭ ಅಥವಾ ಪ್ರಯೋಜನವನ್ನು ಅಪೇಕ್ಷಿಸದೇ ಭಗವತ್ಪ್ರೀತಿಗಾಗಿಯೇ ಎಲ್ಲ ಜನರಿಗೂ ರಂಜನೆ ಯಾಗುವಂತೆ ಸರಸಸುಂದರವಾದ ಶೈಲಿಯಲ್ಲಿ ಕಥಾಭಾಗ ತತ್ವಭಾಗ ಎರಡನ್ನೂ ಮನಂಬುಗವ ರೀತಿಯಲ್ಲಿ ಹೇಳಬಲ್ಲ ಪ್ರವಚನಕಾರನು ಉತ್ತಮ ವಕ್ತಾ ಎನ್ನಿಸುವನು.

ಮುನಿಗಳೇ! ಭಾಗವತ ಶ್ರವಣ ಹಾಗೂ ಪ್ರವಚನದ ವಿಧಿಯನ್ನು ಹೇಳುತ್ತೇನೆ ಕೇಳಿರಿ. ಭಾಗವತ ಶಾಸ್ತ್ರ ಸೇವನೆಯು ಸಾತ್ವಿಕ, ರಾಜಸ, ತಾಮಸ ಮತ್ತು ನಿರ್ಗುಣ ಎಂದು ನಾಲ್ಕು ಬಗೆಯಾಗಿದೆ.

ಭಾರಿ ಅಬ್ಬರ ಅಡಂಬರದಿಂದ ಯಜ್ಞಯಾಗದಂತೆ ಅದ್ಭುತ ತಯಾರಿ ಮಾಡಿ ಪ್ರಸಿದ್ಧಿಕೊಟ್ಟು, ಎಲ್ಲ ವಿಧ ಸಲಕರಣೆಗಳನ್ನು ಸಿದ್ಧಪಡಿಸಿಕೊಂಡು ಏಳೇ ದಿನಗಳಲ್ಲಿ ಗಡಿಬಿಡಿಯಿಂದ ಭಾಗವತವನ್ನು ಹೇಳಿ ಮುಗಿಸುವ ಸಪ್ತಾಹ ವಿಧಾನಕ್ಕೆ ರಾಜಸ ಎನ್ನುವರು. ತಿಂಗಳ ಅಥವಾ ಎರಡು ತಿಂಗಳ ವರೆಗೆ ಪ್ರತಿದಿನವು ೩-೪ಗಂಟೆಗೆ ವರೆಗೆ ಪ್ರತಿಸ್ಕಂದದ ಎಲ್ಲ ಪದ್ಯಗಳ ಸಾರಾರ್ಥ ಸ್ವಾರಸ್ಯವನ್ನು ವಿಶದಪಡಿಸಿ ವಿವರಿಸುತ್ತ ಪೂರ್ಣಮಾಡಿದ ಭಾಗವತಕಥಾಪುರಾಣ ನಿರೂಪಣ ಕ್ರಮವು ಸಾತ್ವಿಕ ಎನಿಸುತ್ತದೆ.

ವರ್ಷಗಟ್ಟಲೆ ನಡನಡುವೆ ಬಿಟ್ಟುಬಿಟ್ಟು ಶ್ರದ್ಧೆ ಇಲ್ಲದೇ ಹೇಳುತ್ತ, ಅಥವಾ ಹಿಂದಿನದನ್ನು ಮುಂದೆ, ಮುಂದಿನದನ್ನು ಹಿಂದೆ ಮಾಡಿ ನಿರೂಪಿಸುತ್ತ ಕುಂಟುತ್ತ ಸಾಗಿದ ಪ್ರವಚನಕ್ಕೆ ತಾಮಸ ಸೇವನ ಎನ್ನುವರು. ಆದರೆ ಎಂದೂ ಏನೂ ಭಾಗವತ ಪ್ರವಚನವನ್ನು ಮಾಡದೇ ಇರುವದಕ್ಕಿಂತಲೂ ಈ ತಾಮಸ ಸೇವನೆಯೂ ಒಳ್ಳೆಯದಾಗಿದೆ.

ದಿನ, ವರ್ಷ, ತಿಂಗಳುಗಳ ನಿರ್ಬಂಧವಿಲ್ಲದೇ ಸದಾ ಪ್ರೇಮದಿಂದ, ಭಗವಂತನ ಪ್ರೀತಿಯ ಉದ್ದೇಶದಿಂದ ಸಂತತವೂ ಭಾಗವತ ಶ್ರವಣವೇ ವ್ರತ ಅಥವಾ ದೇವರ ಪೂಜೆ ಎಂದು ಮಾಡುತ್ತ ಇರುವದು ನಿರ್ಗುಣ ಭಾಗವತ ಸೇವನ ಎಂದು ಕರೆಯಲ್ಪಡುವದು. ಶುಕಾಚಾರ್ಯರು ಮತ್ತು ಪರೀಕ್ಷಿತ ರಾಜನ ಸಂವಾದ ರೂಪವಾದ ಭಾಗವತ ಸೇವನೆಯು ಇಂಥ ನಿರ್ಗುಣ ಭಾಗವತ ಸೇವೆಯಾಗಿದೆ. ಭಾಗವತ ಪುರಾಣವು ಮೋಕ್ಷದ ಉಪಾಯ. ಭವರೋಗದ ಔಷಧ. ಧನ, ಧಾನ್ಯ, ಐಶ್ವರ್ಯ, ಸಂತಾನ, ಕೀರ್ತಿ, ಕಾಮಿನೀ, ಕಾಂಚನ, ವಾಹನ, ಸಿದ್ಧಿ, ನಿಷ್ಕಂಟಕ ರಾಜ್ಯ ಮುಂತಾದ ಲೌಕಿಕ ಅಭೀಷ್ಟಗಳನ್ನೂ ಶ್ರೀಮದ್ ಭಾಗವತದ ಶ್ರವಣ ಪಠಣ ಪಾರಾಯಣಗಳಿಂದ ಪಡೆಯುತ್ತಾರೆ ಭಕ್ತರು. ಭಾಗವತ ಕಥೆಯನ್ನು ಹೇಳುವವರಿಗೂ ಭಕ್ತಿಯಿಂದ ಅದನ್ನು ಬಿಡದೇ ಕೇಳುವವರಿಗೂ ಸರ್ವರೀತಿಯಿಂದ ಸಹಾಯವನ್ನು ಮಾಡಬೇಕು. ಭಾಗವತ ಪುರಾಣದ ಪ್ರವಚನ ಮಾಡುವ ವಕ್ತಾ ಮತ್ತು ಶ್ರೋತಾ ಅಂದರೆ ಹೇಳುವವರು ಮತ್ತು ಕೇಳುವವರು ಕೆಲವು ನಿಯಮಗಳನ್ನು ಪಾಲಿಸಬೇಕು.

ಪ್ರತಿದಿನವೂ ಪ್ರಾತಃಕಾಲದಲ್ಲಿ ಎದ್ದು ಸ್ನಾನ, ದೇವರ ಪೂಜೆ ಹಾಗೂ ನಿತ್ಯಾನ್ಹಿಕಗಳನ್ನು ಮಾಡಿ ಭಗವಂತನ ಪಾದೋದಕವನ್ನು ಸ್ವೀಕರಿಸಿ ಶ್ರೀಮದ್ ಭಾಗವತ ಪುರಾಣ ಪುಸ್ತಕವನ್ನು ವ್ಯಾಸಪೀಠದಲ್ಲಿ ಇರಿಸಬೇಕು. ಮತ್ತು ವೇದವ್ಯಾಸದೇವರು ಆ ಪುಸ್ತಕ ರೂಪದಿಂದ ಮಂಡಿಸಿದ್ದಾರೆ ಎಂದು ಭಾವಿಸಿ ವ್ಯಾಸಪೂಜೆಯನ್ನು ಮಾಡಬೇಕು. ಸಪ್ತಾಹಕ್ರಮದಿಂದ ಭಾಗವತ ಪ್ರವಚನ ನಡೆದಾಗ ಹೇಳುವವರೂ ಕೇಳುವವರೂ ಉಪವಾಸವಿರಬೇಕು. ಪ್ರವಚನದ ನಂತರ ಪಾಯಸ ಮುಂತಾದ ಲಘು ಆಹಾರವನ್ನು ಮೌನದಿಂದಲೇ ಸ್ವೀಕರಿಸಬೇಕು. ಪ್ರವಚನ ಮುಗಿಯುವವರೆಗೆ ಬ್ರಹ್ಮಚರ್ಯವನ್ನು ಪಾಲಿಸಬೇಕು. ನೆಲದ ಮೇಲೆಯೇ ಮಲಗಬೇಕು. ಸಿಟ್ಟು ಬಿಡಬೇಕು. ಆಶೆಯನ್ನು ತ್ಯಜಿಸಬೇಕು. ಪ್ರತಿದಿನ ರಾತ್ರಿ ಹರಿನಾಮ ಸಂಕೀರ್ತನ ಗೈಯಬೇಕು. ಅಥವಾ ಸಮಾಪ್ತಿಯ ದಿನದಂದು ರಾತ್ರಿ ಜಾಗರಣ ಮಾಡಬೇಕು. ಪುರಾಣ ಸಮಾಪ್ತಿ ಆದಬಳಿಕ ಬ್ರಾಹ್ಮಣಭೋಜನ ಮಾಡಿಸಿ ದಕ್ಷಿಣೆ ಕೊಟ್ಟು ಎಲ್ಲರನ್ನೂ ಸಂತೋಷಗೊಳಿಸಬೇಕು. ಪುರಾಣ ಹೇಳಿದ ಆಚಾರ್ಯರಿಗೆ ವಸ್ತ್ರ ಆಭರಣ ಹಸು, ದಕ್ಷಿಣೆ ಮುಂತಾದವುಗಳನ್ನು ಯಥಾಶಕ್ತಿ ಕೊಟ್ಟು ಸತ್ಕಾರ ಮಾಡಬೇಕು. ಈ ಎಲ್ಲ ವಿಧಿ ವಿಧಾನಪೂರ್ವಕವಾಗಿ ಭಾಗವತ ಕಥಾಮೃತವನ್ನು ಶ್ರವಣ ಪ್ರವಚನ ಪಾರಾಯಣ ಮಾಡುವವರು ಪರದಲ್ಲಿ ಮುಕ್ತಿಯನ್ನೂ ಇಹದಲ್ಲಿ ಭುಕ್ತಿಯನ್ನೂ ಪಡೆಯುವರು. ಭಾಗವತ ಪಠಣ ಶ್ರವಣ ಮಾಡುವವರಿಗೆ ಮನೆ ಮಡದಿ ಮಕ್ಕಳು ಐಶ್ವರ್ಯ ಅಧಿಕಾರ ಕೀರ್ತಿ ಎಲ್ಲವೂ ತಾವಾಗಿ ಪ್ರಾಪ್ತವಾಗುವವು. ಆದರೆ ಯಾವದೇ ಫಲದ ಕಾಮನೆ ಅಥವಾ ಪ್ರಯೋಜನದ ಆಶೆ ಇಟ್ಟುಕೊಂಡು ಭಾಗವತ ಪ್ರವಚನ ಶ್ರವಣ ಪಾರಾಯಣಾದಿಗಳನ್ನು ಮಾಡಬಾರದು. ನಿಷ್ಕಾಮ ಬುದ್ಧಿಯಿಂದಲೇ ಈ ಭಾಗವತವನ್ನು ಸೇವಿಸಬೇಕು. ಅದರಿಂದ ಮಾನವರ ಅಭೀಷ್ಟಗಳೆಲ್ಲವೂ ತಾವಾಗಿ ಸಿದ್ಧಿಸುವವು. ಶ್ರೀ ಶುಕಾಚಾರ್ಯರ ಬಾಯಿಂದ ಹೊರಹೊಮ್ಮಿದ ಈ ಭಾಗವತ ಪುರಾಣವು ಕಲಿಯುಗದಲ್ಲಿ ಶ್ರೀಕೃಷ್ಣ ಪರಮಾತ್ಮನ ಪ್ರಾಪ್ತಿಗೆ ಮುಖ್ಯ ಸಾಧನವಾಗಿದೆ. ಇದನ್ನು ಕ್ಷುದ್ರ ಕಾಮನಾ ಪೂರ್ತಿಗಾಗಿ ಎಂದು ಉಪಯೋಗಿಸಬಾರದು.

*ಇತಿ ಸ್ಕಂದ ಪುರಾಣದಲ್ಲಿ ಭಾಗವತ ಮಾಹಾತ್ಮ್ಯ ಸಂಪೂರ್ಣ*



**ನಮಾಮಿ ಪರಮಾತ್ಮಾನಂ ರಾಮಂ ರಾಜೀವಲೋಚನಮ್ ।**
**ಅತಸೀ-ಕುಸುಮ-ಶ್ಯಾಮಂ ರಾವಣಾಂತಕಮವ್ಯಯಮ್ ॥**

ಅಗಸಿಯ ಹೂವಿನಂತೆ ಕಪ್ಪು ಬಣ್ಣದಿಂದ ಒಪ್ಪುವ, ಹೊಂದಾವರೆಯಂತೆ ಸುಂದರ ಕಣ್ಣುಗಳುಳ್ಳ, ರಾವಣನನ್ನು ಸಂಹರಿಸಿದ, ನಾಶರಹಿತನಾದ ಶ್ರೀರಾಮ ಎಂಬ ಪರಮಾತ್ಮನನ್ನು ವಂದಿಸುತ್ತೇನೆ.

ಮಹಾತ್ಮನೂ ಪರಮಾತ್ಮನೂ ಆದ ಶ್ರೀ ರಾಮಚಂದ್ರನು ಕುರುಕ್ಷೇತ್ರದಲ್ಲಿ ಹಿಂದೆ ತ್ರೇತಾಯುಗದಲ್ಲಿ ಒಂದು ದ್ವಾದಶ ವಾರ್ಷಿಕ ಯಜ್ಞವನ್ನು ಕೈಕೊಂಡಿದ್ದನು. ವೇದ ವೇದಾಂತಗಳಲ್ಲಿ ವಿದ್ವಾಂಸರೂ ಜಪ ತಪೋನುಷ್ಠಾನ ತತ್ಪರರೂ ಆದ ಮಹಾ ಮಹಾ ಮುನಿಮನೀಷಿ ಮಹರ್ಷಿಗಳೆಲ್ಲರೂ ದಯಮಾಡಿಸಿದ್ದರು ಶ್ರೀರಾಮ ಪ್ರಭುವಿನ ಆ ಯಜ್ಞಕ್ಕೆ. ಭಗವಾನ್ ಭರದ್ವಾಜ ಮುನಿ ಮುಂದಾಳು ಆ ಮಹರ್ಷಿ ಮಂಡಲಕ್ಕೆ. ಎಲ್ಲರೂ ಉಚಿತಾಸನಗಳಲ್ಲಿ ಮಂಡಿಸಿದ್ದರು ಶ್ರೀರಾಮನಿಂದ ಸಂಪೂಜಿತರಾಗಿ. ಅದೇ ವೇಳೆಯಲ್ಲಿ ಅಲ್ಲಿಗೆ ಶ್ರೀವೇದವ್ಯಾಸರ ಮೆಚ್ಚಿನ ಶಿಷ್ಯರಾದ ರೋಮಹರ್ಷಣ ಸೂತರು ಆಗಮಿಸಿದರು. ಸ್ವಾಗತ, ಸತ್ಕಾರ, ಕುಶಲ ಪ್ರಶ್ನೆಯ ಉಪಚಾರಾದಿಗಳೆಲ್ಲ ಮುಗಿದ ಬಳಿಕ ಮಹರ್ಷಿ ಭರದ್ವಾಜ ಮುಂತಾದ ಮುನಿ ಮಹನೀಯರು ಸೂತಾಚಾರ್ಯರನ್ನು ಕೇಳಿದರು.

**ಮುನಿಗಳು:-** ಸೂತಮುನಿಯೇ! ಅಯೋಧ್ಯಾ ಪಟ್ಟಣವು ಶ್ರೀವಿಷ್ಣುವಿಗೆ ಪರಮ ಪ್ರಿಯವಾದ ಸ್ಥಾನ ಎಂದು ಕೇಳಿದ್ದೇವೆ. ಈ ಪಟ್ಟಣವು ಶ್ರೀಹರಿಗೆ ಇಷ್ಟು ಇಷ್ಟಶ್ರೇಷ್ಠವಾಗಲಿಕ್ಕೆ ಕಾರಣವೇನು? ಇದರ ಮಹಿಮೆ ಎಂತಹದು? ಇದರಲ್ಲಿ ಯಾವ ಯಾವ ತೀರ್ಥಗಳಿವೆ? ಈ ತೀರ್ಥಗಳ ಸ್ನಾನ ಪಾನ ಸೇವನೆಗಳಿಂದ ಎಂಥ ಪುಣ್ಯಫಲ ಪ್ರಾಪ್ತಿಯಾಗುವದು? ಇದನ್ನೆಲ್ಲ ತಿಳಿಸಬೇಕು.

**ಸೂತ:-** ತಪಸ್ವಿಗಳೇ! ನಾನು ನನ್ನ ಗುರುಗಳಾದ ಭಗವಾನ್ ಶ್ರೀವೇದವ್ಯಾಸರನ್ನು ವಂದಿಸಿ ಹಾಗೂ ಪರಬ್ರಹ್ಮಸ್ವರೂಪಿಯಾದ ಶ್ರೀರಾಮಚಂದ್ರನನ್ನು ನಮಸ್ಕರಿಸಿ ಅಯೋಧ್ಯಾಪುರಿಯ ರಹಸ್ಯ ಯುಕ್ತವಾದ ಅಧ್ಯಾತ್ಮಿಕ ಮಾಹಾತ್ಮ್ಯವನ್ನು ಹೇಳುತ್ತೇನೆ ಕೇಳಿರಿ.

ಸಾಕ್ಷಾತ್ ಶ್ರೀಹರಿಯ ಅವತಾರಭೂತನಾದ ಶ್ರೀರಾಮಚಂದ್ರನು ಬಂದು ನೆಲಿಸಿದ ಈ ಅಯೋಧ್ಯಾಪುರಿಯು ಪರಮ ಪವಿತ್ರ. ಸರಯೂ ನದಿಯ ತಡಿಗಡಿಯಲ್ಲಿ ತಲೆಎತ್ತಿ ನಿಂತಿರುವ ಈ ಪುಣ್ಯಪುರಿಯು ತನ್ನ ದಿವ್ಯ ಶೋಭೆಯಿಂದ ಶ್ವೇತದ್ವೀಪದಂತೆ ಕಂಗೊಳಿಸುತ್ತದೆ. ಇಕ್ವಾಕು, ಭಗೀರಥ, ಹರಿಶ್ಚಂದ್ರ, ದಿಲೀಪ, ರಘುರಾಜ ಮುಂತಾದ ಪುಣ್ಯಶ್ಲೋಕ ರಾದ ರಾಜರ್ಷಿಗಳು ಇಲ್ಲಿ ಆಗಿ ಹೋದರು. ಹಿಮಾಲಯ ಶೈಲದ ಶಿಖರ ಸೀಮೆಯಲ್ಲಿ ಇರುವ ಮಾನಸ ಸರೋವರದಿಂದ ಹುಟ್ಟಿ ಹರಿಯುವ ಸರಯೂ ನದಿಯು ತನ್ನ ತರಲ ತರಂಗಗಳಿಂದ ಈ ಅಯೋಧ್ಯೆಯ ಉತ್ಸಂಗಾಂಗಣವನ್ನು ತೊಳೆದು ತೀರ್ಥಳಾಗಿದ್ದಾಳೆ. ಶ್ರೀಮಹಾವಿಷ್ಣುವಿನ ಬಲಗಾಲಿನ ಹೆಬ್ಬೆರಳಿನಿಂದ ಗಂಗೆ ಗುಟ್ಟಿದಂತೆ ಎಡಗಾಲಿನ ಹೆಬ್ಬೆರಳಿನ ತುದಿಯಿಂದ ಸರಯೂ ನದಿಯು ಉದ್ಭವಿಸಿದ್ದಾಳೆ. ಆದುದರಿಂದ ಈ ಎರಡೂ ನದಿಗಳು ಪ್ರಪಂಚದ ಎಲ್ಲ ನದಿಗಳಿಗಿಂತ ಪರಮ ಪವಿತ್ರ ಎಂದು ಪೂಜಿಸಲ್ಪಟ್ಟಿವೆ ಮುನಿ ಮನುಜ ದೇವತಾ ಮಹರ್ಷಿಗಳಿಂದ.

'ಅಯೋಧ್ಯಾ' ಎಂಬಲ್ಲಿಯ ಮೊದಲಿನ ಅಕ್ಷರ 'ಅ' ಎಂದರೆ ಬ್ರಹ್ಮ. 'ಯ' ಎಂದರೆ ವಿಷ್ಣು. 'ಧ' ಎಂದರೆ ಶಿವ. ಹೀಗೆ ದೇವತಾಶ್ರೇಷ್ಠರಾದ ತ್ರಿಮೂರ್ತಿಗಳ ಹೆಸರಿನ ಒಂದೊಂದು ಅಕ್ಷರಗಳಿಂದ ಈ ದಿವ್ಯ ಪುರಿಯ 'ಅಯೋಧ್ಯಾ' ಎಂಬ ಹೆಸರು ರೂಪುಗೊಂಡಿದೆ. ಈ 'ಅಯೋಧ್ಯಾ' ಎಂಬ ಈ ಪುಣ್ಯಪುರಿಯ ನಾಮಕ್ಕೆ ಇನ್ನೂ ಒಂದು ನಿರ್ವಚನವಿದೆ. 'ನ ಯೋಧ್ಯಾ, ಅಯೋಧ್ಯಾ'. ಜಗತ್ತಿನಲ್ಲಿಯ ಬ್ರಹ್ಮಹತ್ಯಾ ಮುಂತಾದ ಮಹಾಪಾಪಗಳೂ ಉಪಪಾತಕಗಳೂ ಎಲ್ಲ ಸೇರಿದರೂ ಈ ದಿವ್ಯಕ್ಷೇತ್ರದ ಪುಣ್ಯರಾಶಿಯೊಂದಿಗೆ ಯುದ್ಧ ಮಾಡಿ ಗೆಲ್ಲಲಾರವು. ಆದುದರಿಂದ 'ಅ- ಯೋಧ್ಯಾ' ಎಂದು ಈ ನಗರವು ಪ್ರಸಿದ್ಧವಾಗಿದೆ.

ಸಹಸ್ರಧಾರಾ ತೀರ್ಥದಿಂದ ಪೂರ್ವಕ್ಕೆ ಒಂದು ಯೋಜನ (ಸುಮಾರು ಒಂಬತ್ತು ಮೈಲು) 'ಸಮ' ಎಂಬ ಸ್ಥಾನದಿಂದ ಪಶ್ಚಿಮಕ್ಕೆ ಒಂದು ಯೋಜನ. ಸರಯೂ ನದಿಯಿಂದ ದಕ್ಷಿಣಕ್ಕೆ ಒಂದು ಯೋಜನ, ತಮಸಾ ನದಿಯ ಉತ್ತರಕ್ಕೆ ಒಂದು ಯೋಜನದ ಅಂತರಾಳದಲ್ಲಿ ಪ್ರತಿಷ್ಠೆಗೊಂಡಿದೆ ಈ ಪುಣ್ಯಕ್ಷೇತ್ರ. ಇದಕ್ಕೆ ವಿಷ್ಣುಪುರಿ ಎಂದೂ ಕರೆಯುತ್ತಾರೆ. ಮೀನದ ಆಕಾರದಂತಿದೆ ಈ ಕ್ಷೇತ್ರದ ಹೊರನೋಟವು ಹರವು. ಗೋಪ್ರತಾರ ತೀರ್ಥದಿಂದ ಅಸೀ ತೀರ್ಥದವರೆಗೆ ಈ ಕ್ಷೇತ್ರದ ಮಸ್ತಕ ಭಾಗ. ಪೂರ್ವ ದಿಕ್ಕಿನೆಡೆ ಚಾಚಿದ ಭಾಗವೇ ಇದರ ಪುಚ್ಛ. ದಕ್ಷಿಣೋತ್ತರ ಭಾಗವೆಲ್ಲ ಇದರ ಮಧ್ಯಭಾಗ.

## ಚಕ್ರತೀರ್ಥದ ಉತ್ಪತ್ತಿ, ಶ್ರೀಹರಿಯ ಪ್ರತಿಷ್ಠೆ

ಪೂರ್ವಕಾಲದಲ್ಲಿ ವಿಷ್ಣುಶರ್ಮಾ ಎಂಬ ಬ್ರಾಹ್ಮಣನಿದ್ದ. ಅವನು ಸದಾಚಾರ ಸಂಪನ್ನ. ವೇದವೇದಾಂತ ಪಾರಂಗತ. ಪರಮಭಗವದ್ಭಕ್ತ. ಸಂತತವೂ ಹರಿಸೇವಾ ಪರಾಯಣ. ವಿಷ್ಣುಶರ್ಮ ಒಮ್ಮೆ ತೀರ್ಥಯಾತ್ರೆಗೆ ಹೊರಟ. ಅಯೋಧ್ಯಾ ಪಟ್ಟಣಕ್ಕೂ ಬಂದ. ತನ್ನ ತಪೋನುಷ್ಠಾನಕ್ಕೆ ತಕ್ಕದ್ದು ಎನಿಸಿತು ಈ ತಾಣ ಆ ತಪಸ್ವಿಗೆ. ಸರಿ ಸುರುವೇ ಮಾಡಿದ ತಪಶ್ಚರ್ಯೆಯನ್ನು. ಅರುಣೋದಯಕ್ಕೆ ಸ್ನಾನ, ಸೂರ್ಯೋದಯಕ್ಕೆ ಜಪ. ಸೂರ್ಯಾಸ್ತದವರೆಗೂ ತಪ. ರಾತ್ರಿಯೆಲ್ಲ ಭಗವಚ್ಚಿಂತನ. ಹಗಲಿರುಳೂ ನಾರಾಯಣನದೇ ನಿಧಿಧ್ಯಾಸ. ಪ್ರತಿದಿನವೂ ಮಧ್ಯಾಹ್ನ ಪ್ರತಿಮಾಪೂಜೆ. ಅದಕ್ಕೆ ಮೊದಲು ಮಾನಸಪೂಜೆ. ಮನಸ್ಸಿನಲ್ಲಿಯೇ ಶಂಖಚಕ್ರ ಗದಾಪದ್ಮಧಾರಿಯಾದ ದಿವ್ಯ ಭಗವನ್ಮೂರ್ತಿಯ ಧ್ಯಾನೋಪಾಸನೆ. ಆ ಧ್ಯಾನಗೋಚರನಾದ ಶ್ರೀಹರಿಯ ವಾಸನಾಮಯ ವಾದ ದೀರ್ಘಕಾಲೀನ ದರ್ಶನದಿಂದಲೇ ಅವನಿಗೆ ಬ್ರಹ್ಮಾನಂದ. ಅದಕ್ಕಾಗಿ ಅವನು ಸಂಸಾರ ಮರೆತ. ತಿಂಡಿ ತಿನಿಸು ತೊರೆದ. ಬರಿ ಗಾಳಿ ಕುಡಿದು ಉಸಿರು ಬಿಗಿ ಹಿಡಿದು 'ಓಂ ನಮೋ ಭಗವತೇ ವಾಸುದೇವಾಯ' ಎಂಬ ದ್ವಾದಶಾಕ್ಷರಿಯನ್ನು ಸಂತತವೂ ಜಪಿಸಿದ. ಅದರಿಂದ ಪ್ರೀತನಾದ ಹರಿ. ಅವನಿಗೆ ತನ್ನ ಪ್ರತ್ಯಕ್ಷದರ್ಶನವನ್ನೇ ಕರುಣಿಸಿದ.

ಶ್ರೀಹರಿಯ ಈ ದಿವ್ಯ ಸಾಕ್ಷಾತ್ಕಾರದಿಂದ ಸಂತೋಷೋದ್ರೇಕವಾಯಿತು ವಿಷ್ಣುಶರ್ಮನಿಗೆ. ಅವನು ಕಣ್ತುಂಬ ನೋಡಿದ. ಹೃದಯ ತುಂಬಿ ವಂದಿಸಿದ. ಬಾಯ್ತುಂಬ ಹಾಡಿ ಕೊಂಡಾಡಿದ. ಅವನ ಸ್ತೋತ್ರವನ್ನು ಕೇಳಿ ಸುಪ್ರಸನ್ನನಾದ ಪರಮಾತ್ಮ. 'ಬೇಕಾದ ವರ ಬೇಡು ಎಂದ. ಆದರೆ ನಿಸ್ಪೃಹಶಿಖಾಮಣಿ ಈ ವಿಷ್ಣುಶರ್ಮ. ಭಗವಂತನ ಹೊರತು ಏನೂ ಬೇಕಾಗಿದ್ದಿಲ್ಲ ಅವನಿಗೆ. ''ನಿನ್ನಲ್ಲಿ ಅವಿಚ್ಛಿನ್ನ ಭಕ್ತಿಯನ್ನು ಕೊಡು'' ಎಂದು ಕೇಳಿದ.

ಮತ್ತಷ್ಟೂ ಸಂತೋಷವಾಯಿತು ಶ್ರೀಹರಿಗೆ. ತಾನಾಗಿ ವರದ ಹಸ್ತವನ್ನು ಅವನ ನಡು ನೆತ್ತಿಯ ಮೇಲೆ ಇರಿಸಿ "ಗಂಗೆಯು ಇಲ್ಲ ಪ್ರಕಟವಾಗಲಿ". ಎಂದು ಹೇಳಿ ಶ್ರೀನಾರಾಯಣನು ತನ್ನ ಚಕ್ರದಿಂದ ಅಲ್ಲಿಯ ನೆಲವನ್ನು ಅಗಿದನು. ಕೂಡಲೆ ಅಲ್ಲಿ ಪಾತಾಳಗಂಗೆಯ ಪ್ರಕಟವಾದಳು. ಅಂದಿನಿಂದ ಅದಕ್ಕೆ ಚಕ್ರತೀರ್ಥ ಎಂದು ಹೆಸರು ಬಂದಿತು. ಈ ಚಕ್ರತೀರ್ಥದಲ್ಲಿ ಸ್ನಾನ ಮಾಡುವದರಿಂದ ಮಾನವನು ಮುಂದೆ ಮುಕುಂದನ ಮುಕ್ತಿಮಂದಿರದಲ್ಲಿ ಆನಂದದಿಂದ ವಾಸಮಾಡುವನು. ಅನಂತರ ಪರಮಾತ್ಮನು ತನ್ನ ಭಕ್ತನಾದ ವಿಷ್ಣುಶರ್ಮನಿಗೆ ಹೇಳಿದನು- "ವಿಪ್ರೋತ್ತಮ! ಭಕ್ತರಿಗೆಲ್ಲ ಮುಕ್ತಿ ಕೊಡುವ ನನ್ನ ವಿಷ್ಣುಮೂರ್ತಿಯು ಈ ಕ್ಷೇತ್ರದಲ್ಲಿ ವಿಷ್ಣು ಹರಿ ಎಂಬ ಹೆಸರಿನಿಂದ ಪ್ರಸಿದ್ಧವಾಗಲಿ." ಪರಮಾತ್ಮನ ಈ ಮಾತನ್ನು ಕೇಳಿ ವಿಷ್ಣುಶರ್ಮನು ಆ ಸ್ಥಳದಲ್ಲಿ ಚಕ್ರತೀರ್ಥದ ದಂಡೆಯ ಮೇಲೆ ಶಂಖ ಚಕ್ರ ಗದಾಪದ್ಮಧಾರಿಯಾದ ಮಹಾವಿಷ್ಣುವಿನ ದಿವ್ಯವಿಗ್ರಹವನ್ನು ಪ್ರತಿಷ್ಠಾಪನೆಗೈದನು. ಕಾರ್ತಿಕ ಶುಕ್ಲಪಕ್ಷ ದಶಮಿಯಿಂದ ಹುಣ್ಣಿಮೆಯವರೆಗೆ ಅಲ್ಲಿ ಪ್ರತಿವರ್ಷವೂ ಯಾತ್ರಾಮಹೋತ್ಸವವು ಜರುಗುವದು. ಈ ಚಕ್ರತೀರ್ಥದಲ್ಲಿ ಭಕ್ತಿಯಿಂದ ಸ್ನಾನಮಾಡಿ ಅಲ್ಲಿಯ ಶ್ರೀವಿಷ್ಣುಹರಿಯನ್ನು ಪೂಜಿಸಿ ಪಿತೃಗಳಿಗೆ ಪಿಂಡಪ್ರದಾನ ಮಾಡಿದರೆ ಪಿತೃಗಳೆಲ್ಲರೂ ತೃಪ್ತರಾಗಿ ವೈಕುಂಠಲೋಕಕ್ಕೆ ಹೋಗುವರು.

## ಬ್ರಹ್ಮಕುಂಡ ಋಣಮೋಚನಾದಿ ತೀರ್ಥಗಳ ಮಹಿಮೆ

**ಸೂತ:-** ಪ್ರಾಚೀನ ಕಾಲದಲ್ಲಿ ಮಹಾವಿಷ್ಣು ಅಯೋಧ್ಯೆಯಲ್ಲಿ ವಾಸಮಾಡಿದ್ದನ್ನು ನೋಡಿ ಬ್ರಹ್ಮದೇವರು ತಾವೂ ಕೂಡ ಅಯೋಧ್ಯೆಯಲ್ಲಿಯೇ ಬಂದು ನೆಲೆಸಿದರು. ಮತ್ತು ತಮ್ಮ ಹೆಸರಿನಿಂದ ಒಂದು ದೊಡ್ಡ ಕುಂಡವನ್ನು ನಿರ್ಮಿಸಿದರು. ಕನ್ನೈದಿಲೆ ಕಲ್ಹಾರ ಕೆಂದಾವರೆ ಮುಂತಾದ ಹೂಬಳ್ಳಿಗಳಿಂದ ಶೋಭಿಸುವ ಈ ಬ್ರಹ್ಮಕುಂಡವು ಸ್ನಾನ ಮಾಡಿದವರ ಎಲ್ಲ ಪಾತಕಗಳನ್ನು ತೊಳೆದುಬಿಡುವದು. "ಅಲ್ಲಿ ಮಾಡಿದ ದಾನ, ಹೋಮ, ಸ್ನಾನ ಜಪ ಮುಂತಾದ ಪುಣ್ಯಕರ್ಮಗಳಿಂದ ಅಶ್ವಮೇಧ ಯಜ್ಞ ಮಾಡಿದ ಮಹಾಪುಣ್ಯವು ಲಭಿಸುವದು" ಎಂದು ಬ್ರಹ್ಮದೇವರು ಹೇಳಿ ಒಂದು ರೂಪದಿಂದ ಅಲ್ಲಿಯೇ ವಾಸಿಸುತ್ತೇನೆ, ಎಂದು ಹೇಳಿದರು. ಅಂದಿನಿಂದ ಈ ಕುಂಡವು ಬ್ರಹ್ಮಕುಂಡ ಎಂದು ಹೆಸರಾಯಿತು. ಬ್ರಹ್ಮಕುಂಡದಿಂದ ಏಳುನೂರು ಮಾರು ಅಂತರದ ದೂರದಲ್ಲಿ ಸರಯೂ ಜಲದಲ್ಲಿ ಋಣಮೋಚನ ಎಂಬ ತೀರ್ಥವಿರುತ್ತದೆ. ಪೂರ್ವಕಾಲದಲ್ಲಿ ಲೋಮಶ ಎಂಬ ಮುನಿವರ್ಯರು ಪುಣ್ಯಕ್ಷೇತ್ರಗಳ ಯಾತ್ರೆಯನ್ನು ಕೈಕೊಂಡಿದ್ದರು. ಆ ಪ್ರಸಂಗದಲ್ಲಿ ಅವರು ಈ ಋಣಮೋಚನ ತೀರ್ಥದಲ್ಲಿ ಸ್ನಾನಮಾಡಿದರು. ಅದರಿಂದ ನಷ್ಟವಾದವು ಅವರ ಎಲ್ಲ ಪಾಪಗಳು. ಆಗ ಆ ಮುನಿಗಳು ಸಂತೋಷದಿಂದ ಆನಂದಾಶ್ರುಗಳನ್ನು ಉದುರಿಸುತ್ತ ಹೇಳಿದರು. "ಈ ಋಣಮೋಚನ ತೀರ್ಥದಲ್ಲಿ ಸ್ನಾನ ಮಾಡುವದರಿಂದ ಮಾನವನು ದೇವ ಋಣ, ಪಿತೃಋಣ, ಋಷಿಋಣ ಎಂಬ ಈ ಮೂರು ಋಣದಿಂದ ಮುಕ್ತನಾಗುತ್ತಾನೆ. ಹೀಗೆ ಈ ತೀರ್ಥದ ಮಹಿಮೆಯನ್ನು ಹೇಳಿ ಲೋಮಶ ಮುನಿಗಳು ಅಲ್ಲಿಂದ ಅದೃಶ್ಯರಾದರು. ಈ ಋಣಮೋಚನ ತೀರ್ಥದಿಂದ ಪೂರ್ವಕ್ಕೆ ಇಪ್ಪತ್ತು ಮಾರು ದೂರದ ಸರಯೂ ತೀರದಲ್ಲಿ ಪಾಪಮೋಚನವೆಂದು ಒಂದು ತೀರ್ಥ ಇರುತ್ತದೆ. ಅಲ್ಲಿ ಸ್ನಾನ ಮಾಡುವದರಿಂದ ಮಾನವನು ಸರ್ವಪಾಪಗಳನ್ನು ಕಳೆದುಕೊಂಡು ಪರಿಶುದ್ಧನಾಗುತ್ತಾನೆ.

ಹಿಂದೆ ಪಾಂಚಾಲದಲ್ಲಿ ನರಹರಿ ಎಂಬ ಹೆಸರಿನ ಒಬ್ಬ ಬ್ರಾಹ್ಮಣನು ಇದ್ದನು. ಅವನು ತಿನ್ನಬಾರದ್ದನ್ನು ತಿಂದನು. ಕುಡಿಯಬಾರದ್ದನ್ನು ಕುಡಿದನು. ಮಾಡಬಾರದ ಪಾಪಗಳನ್ನೆಲ್ಲ ಮಾಡಿ ಮುಗಿಸಿದನು. ಒಂದು ಸಲ ಅವನು ಆಕಸ್ಮಿಕವಾಗಿ ಒದಗಿದ ಸಜ್ಜನರ ಸಹವಾಸದಿಂದ ಇಲ್ಲಿಗೆ ಬಂದನು. ಈ ಪಾಪಮೋಚನ ತೀರ್ಥದಲ್ಲಿ ಸ್ನಾನ ಮಾಡಿದನು. ಆದರಿಂದ ಅವನ ಪಾಪಗಳೆಲ್ಲವೂ ನಾಶಹೊಂದಿದವು. ವೈಕುಂಠ ಲೋಕದಿಂದ ದಿವ್ಯ ವಿಮಾನವು ಬಂದಿತು ಅವನನ್ನು ಕರೆಯಲಿಕ್ಕೆ. ಈ ತೀರ್ಥಸ್ನಾನದ ಪುಣ್ಯದಿಂದ ಆ ನರಹರಿಯು ನಾರಾಯಣ ಲೋಕಕ್ಕೆ ತೆರಳಿದನು. ಮಾಘ ಕೃಷ್ಣ ಚತುರ್ದಶಿಯ ದಿನ ಈ ಪಾಪ ವಿಮೋಚನ ತೀರ್ಥದಲ್ಲಿ ಸ್ನಾನ ದಾನಾದಿಗಳಿಂದ ದಿವ್ಯ ಸದ್ಗತಿಯು ಪ್ರಾಪ್ತವಾಗುವದು.

ಈ ಪಾಪ ಮೋಚನ ತೀರ್ಥದಿಂದ ಪೂರ್ವಕ್ಕೆ ನೂರು ಬಿಲ್ಲುಗಳ ದೂರದಲ್ಲಿ ಸಹಸ್ರಧಾರಾ ಎಂದು ಒಂದು ತೀರ್ಥವು ಇರುತ್ತದೆ. ಈ ತೀರ್ಥದಲ್ಲಿ ಹಿಂದೆ ರಾಮಾನುಜನಾದ ಲಕ್ಷ್ಮಣನು ಶ್ರೀರಾಮಚಂದ್ರನ ಆಜ್ಞೆಯ ಮೇರೆಗೆ ಯೋಗಮಾರ್ಗದಿಂದ ಪ್ರಾಣತ್ಯಾಗ ಮಾಡಿ ತನ್ನ ಆದಿಶೇಷ ಸ್ವರೂಪವನ್ನು ಹೊಂದಿದನು. ರಘುಕುಲದ ಚೂಡಾಮಣಿಯಾದ ಶ್ರೀರಾಮಚಂದ್ರನು ತನ್ನ ಅವತಾರ ಕಾರ್ಯ ವನ್ನೆಲ್ಲ ಸಮಾಪ್ತಿ ಮಾಡಿ ಒಂದು ದಿನ ತನ್ನನ್ನು ಪರಂಧಾಮಕ್ಕೆ ಕರೆಯಬಂದ ಕಾಲಪುರುಷ ನೊಡನೆ ಏಕಾಂತದಲ್ಲಿ ಗುಪ್ತ ಆಲೋಚನೆ ಮಾಡುತ್ತ ಕುಳಿತುಕೊಂಡಿದ್ದನು. ಬಾಗಿಲದಲ್ಲಿ ಲಕ್ಷ್ಮಣನನ್ನು ಕೂಡಿಸಿ ಯಾರನ್ನು ಒಳಗೆ ಬಿಡಕೂಡದು ಎಂದು ಕಟ್ಟಪ್ಪಣೆ ಮಾಡಿದ್ದನು. ಅದೇ ಸಮಯದಲ್ಲಿ ಕೋಪಿಷ್ಠ ದುರ್ವಾಸರು ಅಲ್ಲಿಗೆ ಆಗಮಿಸಿದರು. ಅವನು ಲಕ್ಷ್ಮಣನಿಗೆ "ಸುಮಿತ್ರಾನಂದನ, ನೀನು ಈಗಲೇ ಶ್ರೀರಾಮನಿಗೆ ನಾನು ಬಂದ ಸಮಾಚಾರವನ್ನು ತಿಳಿಸು. ನಾನು ಈಗ ಬಹಳ ಹಸಿದಿದ್ದೇನೆ. ರಾಮಚಂದ್ರನೇ ಈಗ ನನಗೆ ಊಟಕ್ಕೆ ಏರ್ಪಡಿಸಬೇಕು. ವಿಲಂಬ ಮಾಡಬೇಡ. ಈಗಲೇ ಹೋಗಿ ಅವನಿಗೆ ನಾನು ಬಂದ ಸಮಾಚಾರವನ್ನು ತಿಳಿಸು" ಎಂದು ಒತ್ತಾಯ ಪಡಿಸಿದರು.

ಚಂಡಕೋಪರಾದ ದುರ್ವಾಸರ ಶಾಪಕ್ಕೆ ಹೆದರಿ ಪಾಪ ಲಕ್ಷಣ ಶ್ರೀರಾಮನು ಕುಳಿತಲ್ಲಿಗೆ ನುಗ್ಗಿದ. ಕಾಲನೊಡನೆ ಗುಪ್ತಾಲೋಚನೆ ಗೈಯುತ್ತಿದ್ದ ಅಣ್ಣನಿಗೆ ದುರ್ವಾಸರು ಬಂದ ಸಮಾಚಾರವನ್ನು ತಿಳಿಸಿದ. ಆಗ ಶ್ರೀರಾಮನು ಕಾಲಪುರುಷನನ್ನು ಬೀಳ್ಕೊಟ್ಟು ಹೊರಗೆ ಬಂದನು. ದುರ್ವಾಸ ಋಷಿಗಳಿಗೆ ಅಪೇಕ್ಷಿತವಾದ ಭೋಜನವನ್ನು ಏರ್ಪಡಿಸಿ ತೃಪ್ತಿಪಡಿಸಿದನು. ದುರ್ವಾಸರು ಆನಂದದಿಂದ ಹೊರಟು ಹೋದ ಬಳಿಕ ತನ್ನ ಆಜ್ಞೆಯನ್ನು ಉಲ್ಲಂಘಿಸಿ ಕಾಲಪುರುಷನೊಡನೆ ತಾನು ಗುಪ್ತಾಲೋಚನೆಯಲ್ಲಿದ್ದಾಗ ಒಳಗೆ ಬಂದನೆಂದು ಲಕ್ಷ್ಮಣನನ್ನು ರಾಮನು ಪರಿತ್ಯಾಗ ಮಾಡಿದನು.

ಅಣ್ಣ ಶ್ರೀರಾಮನು ಬಿಟ್ಟ ಬಳಿಕ ಅವನ ವಿರಹವನ್ನು ತಾಳಲಾಗದೆ ಲಕ್ಷ್ಮಣನು ನೇರವಾಗಿ ಸರಯೂ ತೀರಕ್ಕೆ ಬಂದನು. ಸ್ನಾನ ಮಾಡಿದನು. ಪರಮಾತ್ಮನ ಧ್ಯಾನವನ್ನು ಮಾಡುತ್ತ ಅದೇ ನದೀ ತಟಾಕದಲ್ಲಿ ಅವಿಚಲ ಭಾವದಿಂದ ಕುಳಿತುಕೊಂಡನು. ಆಗ ಸಾವಿರ ಹೆಡೆಗಳಿಂದ ಶೇಷನಾಗನು ಪೃಥ್ವಿಯನ್ನು ಸೀಳಿಕೊಂಡು ಅಲ್ಲಿ ಪ್ರಕಟವಾದನು. ಇಂದ್ರಾದಿ ದೇವತೆಗಳೂ ಅಲ್ಲಿಗೆ ಬಂದರು. ಶೇಷನಾಗನ ಹೆಡೆಗಳ ಮೇಲೆ ಹೊಳೆಯುವ ಸಾವಿರ ರತ್ನಗಳ ಪ್ರಖರ ಕಿರಣಗಳಿಂದ ಅಲ್ಲಿಯ ಭೂಭಾಗವೆಲ್ಲವೂ ಸುಟ್ಟುಹೋಯಿತು. ಆದುದರಿಂದ ಸರಯೂ ತಟದಲ್ಲಿರುವ ಈ ಶುಭತೀರ್ಥಕ್ಕೆ ಸಹಸ್ರಧಾರಾ ಎಂದು ಹೆಸರು

ಬಂದಿತು. ಈ ತೀರ್ಥದಲ್ಲಿ ಶ್ರದ್ಧೆಯಿಂದ ಸ್ನಾನ ದಾನ ಶ್ರಾದ್ಧಾದಿ ಮುಂತಾದವುಗಳನ್ನು ಮಾಡಿದವರು ವಿಷ್ಣುಲೋಕಕ್ಕೆ ಹೋಗುವರು. ಇಲ್ಲಿ ಸ್ನಾನಮಾಡಿ ಆದಿಶೇಷನನ್ನು ಪೂಜಿಸುವವರು ವೈಕುಂಠಕ್ಕೆ ಪ್ರಯಾಣ ಬೆಳೆಸುವರು. ಶ್ರಾವಣ ಶುಕ್ಲಪಕ್ಷದ ನಾಗರಪಂಚಮಿಯಂದು ಇಲ್ಲಿ ನಾಗಗಳ ಉದ್ದೇಶದಿಂದ ಉತ್ಸವವನ್ನು ಆಚರಿಸಬೇಕು. ಈ ಉತ್ಸವದಲ್ಲಿ ಆದಿಶೇಷನನ್ನು ಪೂಜಿಸಬೇಕು. ಇದರಿಂದ ಎಂದೂ ಸರ್ಪಬಾಧೆ ಆಗುವದಿಲ್ಲ. ಇಲ್ಲಿ ವೈಶಾಖ ಮಾಸದಲ್ಲಿ ಸ್ನಾನ ದಾನದಿಂದ ಶೇಷಶಾಯಿ ಶ್ರೀಹರಿಯ ದಿವ್ಯಲೋಕ ಪ್ರಾಪ್ತಿ ಆಗುವುದು.

## ಚಂದ್ರ ಸಹಸ್ರ ವ್ರತದ ಉದ್ಯಾಪನ ವಿಧಿ

**ಸೂತ:-** ಸರಯೂ ನದಿಯ ಸಲಿಲ ಪ್ರವಾಹದಲ್ಲಿಯ ಸಹಸ್ರಧಾರಾ ತೀರ್ಥದಿಂದ ಪೂರ್ವಕ್ಕೆ ಆರುನೂರಾ ಮೂವತ್ತು ಮಾರು ಅಳತೆಯವರೆಗೆ ಸ್ವರ್ಗದ್ವಾರ ತೀರ್ಥ ಎಂದು ಹೇಳುತ್ತಾರೆ. ಈ ಸ್ವರ್ಗದ್ವಾರ ತೀರ್ಥದಲ್ಲಿ ಸ್ನಾನಮಾಡುವುದರಿಂದ ಪ್ರಪಂಚದಲ್ಲಿಯ ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿದ ಪುಣ್ಯವು ಪ್ರಾಪ್ತವಾಗುವದು. ಇಲ್ಲಿ ಸ್ನಾನ, ದಾನ, ಜಪ, ತಪ, ಹೋಮ, ಹವನ, ಧ್ಯಾನ. ಅಧ್ಯಯನ ಮುಂತಾದ ಪುಣ್ಯಕರ್ಮ ಮಾಡುವವರೂ ಮಾಸೋಪವಾಸ ಮಾಡುವವರೂ ವೈಕುಂಠಕ್ಕೆ ಪ್ರಯಾಣ ಮಾಡುವರು. ಭಗವಾನ್ ಶ್ರೀರಾಮಚಂದ್ರನು ಇಲ್ಲಿ ತನ್ನ ಲಕ್ಷ್ಮಣ, ಭರತ, ಶತ್ರುಘ್ನ ಎಂಬ ಸಹೋದರರೊಂದಿಗೆ ನಿತ್ಯ ಸನ್ನಿಹಿತನಾಗಿರುತ್ತಾನೆ.

ಹಿಂದೊಮ್ಮೆ ಅತ್ರಿಪುತ್ರನಾದ ಚಂದ್ರನು ಇಲ್ಲಿಗೆ ಬಂದು ಶ್ರೀಹರಿಗೆ ವಂದಿಸಿ ಈ ಅಯೋಧ್ಯಾ ಕ್ಷೇತ್ರದ ಎಲ್ಲ ತೀರ್ಥಗಳ ವಿಧಿಪೂರ್ವಕ ಯಾತ್ರೆ ಮಾಡಿದನು. ಮತ್ತು ಅಲ್ಲಿ ನಿಂತು ಉಗ್ರತಪಸ್ಸನ್ನು ಮಾಡಿ ಶ್ರೀಹರಿಯನ್ನು ಸಂತೋಷಪಡಿಸಿದನು. ಇಲ್ಲಿ ಶ್ರೀಹರಿಯ ಒಂದು ಮೂರ್ತಿಯನ್ನು ಪ್ರತಿಷ್ಠೆಗೊಳಿಸಿದನು. ಚಂದ್ರನು ಸ್ಥಾಪಿಸಿದ ಆ ಮೂರ್ತಿಯು ''ಚಂದ್ರಹರಿ'' ಎಂದು ಪ್ರಸಿದ್ಧವಾಗಿದೆ. ಸಮಸ್ತ ಸಾಧು ಸಜ್ಜನ ಸದ್ಭಕ್ತರಿಗೆಲ್ಲ ಮೋಕ್ಷವನ್ನು ಕರುಣಿಸುವ ಶ್ರೀರಾಮಚಂದ್ರ ಪ್ರಭುವು ಸ್ವಯಂ ನೆಲಿಸಿ ನಿಂತ ಈ ದಿವ್ಯಸ್ಥಾನದಲ್ಲಿ ಅನೇಕ ಸಿದ್ಧಪುರುಷರು ಶ್ರೀವಿಷ್ಣುವಿನ ವ್ರತಗ್ರಹಣ ಮಾಡಿ ವಾಸಿಸುತ್ತಾರೆ. ಇಲ್ಲಿಯ ಚಂದ್ರಹರಿ ಎಂಬ ಶ್ರೀಹರಿಯ ಸನ್ನಿಧಾನದಲ್ಲಿ ಸಹಸ್ರ ಚಂದ್ರ ವ್ರತದ ಉದ್ಯಾಪನೆಯನ್ನು ಮಾಡಬೇಕು.

ಮಾನವನ ಜೀವನದಲ್ಲಿ ಅಧಿಕಮಾಸ* ಸೇರಿ ಎಂಭತ್ತು ಮೂರು ವರ್ಷ ನಾಲ್ಕು ತಿಂಗಳು ಆದರೆ ಒಂದು ಸಾವಿರ ಹುಣ್ಣಿಮೆ ತಿಥಿಗಳು ಬಂದಿರುತ್ತವೆ. ಭಗವಂತನು ಎಂಬತ್ತು ಮೂರು ವರ್ಷದ ನಂತರವೂ ಬದುಕಿ ಉಳಿಯುವ ಭಾಗ್ಯವನ್ನು ಕರುಣಿಸಿದರೆ ಅವನ ಉಪಕಾರ ಸ್ಮರಣೆಗಾಗಿ ಈ ಸಹಸ್ರಚಂದ್ರ ವ್ರತವನ್ನೂ ಅದರ ಉದ್ಯಾಪನೆಯನ್ನೂ ಇಲ್ಲಿಗೆ ಬಂದು ಆಚರಿಸಬೇಕು. ಚತುರ್ದಶಿ ದಿನದಂದು ದಂತಧಾವನ ಪೂರ್ವಕ ಸ್ನಾನ ಮಾಡಿ ಬ್ರಹ್ಮಚರ್ಯ ವ್ರತವನ್ನು ಪಾಲನಮಾಡಿ ಚಂದ್ರನ ಪೂಜೆಯನ್ನು ಮಾಡಬೇಕು. ವ್ರತಸ್ಥನಾಗಿ ಇರಬೇಕು. ಅದರಂತೆ ಪೂರ್ಣಿಮಾ ದಿನದಂದು ಚಂದ್ರನನ್ನು ಪೂಜಿಸಬೇಕು. ಮೊದಲು ಗೌರಿ ಮೊದಲಾದ ಮಾತೃಕಾದೇವಿಯರನ್ನು ಪೂಜಿಸಬೇಕು. ನಂತರ ನಾಂದಿ ಶ್ರಾದ್ಧ ಮಾಡಿ ಋತ್ವಿಜರ ಪೂಜೆ ಮಾಡಬೇಕು. ಚಂದ್ರಮಂಡಲದ ಆಕಾರದ ಒಂದು

ಬಂಗಾರದ ಚಂದ್ರನ ಪ್ರತಿಮೆ ಮಾಡಿಸಿ ಶಾಸ್ತ್ರೋಕ್ತ ವಿಧಿಯಿಂದ ಸೋಮಮಂತ್ರವನ್ನು ಉಚ್ಚರಿಸಿ. ಸೋಮಸೂಕ್ತವನ್ನು ಪಠಿಸಿ ಚಂದ್ರನ ಪೂಜೆ ಮಾಡಬೇಕು. ಅಕ್ಷತೆಗಳಿಂದ ಚಂದ್ರಬಿಂಬಕ್ಕೆ ಒಂದು ಸಮಾನ ಮಂಡಲವನ್ನು ಮಾಡಿ ಅದರಲ್ಲಿ ಚಂದ್ರನ್ಯಾಸ, ಕಲಾನ್ಯಾಸ, ಮಾಡಬೇಕು. ಅದರ ಮಧ್ಯದಲ್ಲಿ ಹಸುವಿನ ಹಾಲುತುಂಬಿ ಕಲಶವನ್ನು ಸ್ಥಾಪಿಸಬೇಕು. ಆ ಮಂಡಲದಲ್ಲಿ ಚಂದ್ರನ ಭಿನ್ನ ಭಿನ್ನ ನಾಮಗಳನ್ನು ಉಚ್ಚರಿಸುತ್ತ ಚಂದ್ರಪೂಜೆಯನ್ನು ಮಾಡಬೇಕು. ''ಹಿಮಾಂಶವೇ ನಮಃ ಸೋಮಚಂದ್ರಾಯ ನಮಃ ಚಂದ್ರಾಯ ನಮಃ ವಿಧವೇ ನಮಃ, ಕುಮುದ ಬಂಧವೇ ನಮಃ, ಸುಧಾಂಶವೇನಮಃ, ಸೋಮಾಯ ನಮಃ, ಓಷಧೀಶಾಯ ನಮಃ, ಅಬ್ಜಾಯನಮಃ, ಮೃಗಾಂಕಾಯನಮಃ, ಕಲಾನಿಧಯೇ ನಮಃ, ನಕ್ಷತ್ರನಾಥಾಯ ನಮಃ, ಶರ್ವರೀಪತಯೇ ನಮಃ, ಜೈವಾತೃಕಾಯ ನಮಃ, ದ್ವಿಜರಾಜಾಯ ನಮಃ, ಚಂದ್ರಮಸೇ ನಮಃ, ಎಂಬ ಈ ಹದಿನಾರು ನಾಮಗಳಿಂದ ಚಂದ್ರನ ಪೂಜೆಯನ್ನು ಮಾಡಬೇಕು. ಅನಂತರ ಶಂಖದಲ್ಲಿ ನೀರು. ಹೂ, ಹಣ್ಣು, ಗಂಧಗಳನ್ನು ಹಾಕಿ ಕೆಳಗೆ ಹೇಳಿದ ಮಂತ್ರದಿಂದ ಚಂದ್ರನಿಗೆ ಅರ್ಘ್ಯವನ್ನು ಕೊಡಬೇಕು.

**''ನಮಸ್ತೇ ಮಾಸಮಾಸಾಂತೇ ಜಾಯಮಾನ ಪುನಃ ಪುನಃ ।**
**ಗೃಹಾಣಾರ್ಘ್ಯಂ ಶಶಾಂಕ ತ್ವಂ ರೋಹಿಣ್ಯಾ ಸಹಿತೋ ಮಮ ॥**

ಈ ಮಂತ್ರದಿಂದ ಅರ್ಘ್ಯಕೊಟ್ಟು ಚಂದ್ರನಿಗೆ ನಮಸ್ಕಾರ ಮಾಡಬೇಕು. ಹಾಲು ತುಂಬಿದ ಹದಿನಾರು ಕಲಶಗಳಿಗೆ ವಸ್ತ್ರವನ್ನು ಹೊದಿಸಿ ವಿದ್ವಾಂಸರಿಗೆ ದಾನ ಕೊಡಬೇಕು. ಅನಂತರ ಹಸುವಿನ ಹಾಲನ್ನು ನೀರಲ್ಲಿ ಕೂಡಿಸಿ ಚಂದ್ರನಿಗೆ ಅಭಿಷೇಕಗೈದು ಚಂದ್ರನ ಪೂಜೆ ಮಾಡಬೇಕು. ತನ್ನ ಯೋಗ್ಯತಾನುಸಾರವಾಗಿ ಋತ್ವಿಜರಿಗೆ ದಕ್ಷಿಣೆ ಇತ್ತು ದ್ವಿಜರಿಗೆ ದಂಪತಿ ಪೂಜೆ ಮಾಡಿ ವಸ್ತ್ರ ಆಭರಣಾದಿಗಳನ್ನು ಕೊಟ್ಟು ಬ್ರಾಹ್ಮಣ ಭೋಜನ ಮಾಡಿಸಬೇಕು. ಅಂದು ತಾನು ಊಟ ಮಾಡದೆ ಉಪಹಾರ ಸ್ವೀಕರಿಸಬೇಕು. ಮರುದಿನ ಇದೇ ರೀತಿಯಿಂದ ಶ್ರೀಹರಿಯನ್ನು ಪೂಜಿಸಿ ವಿದ್ವಾಂಸರಿಗೆ ಭೋಜನ ದಕ್ಷಿಣಾ ದಾನಾದಿಗಳನ್ನಿತ್ತು ನಂತರ ತಾನು ಬಂಧು ಬಳಗದವರೊಂದಿಗೆ ಭೋಜನ ಮಾಡಬೇಕು. ಈ ರೀತಿಯಾಗಿ ಸಹಸ್ರ ಚಂದ್ರ ವ್ರತದ ಉದ್ಯಾಪನೆಯನ್ನು ಈ ಅಯೋಧ್ಯಾ ಕ್ಷೇತ್ರದಲ್ಲಿ ಶ್ರೀಚಂದ್ರರ ಹರಿ ದೇವೋತ್ತಮನ ಸನ್ನಿಧಾನದಲ್ಲಿ ವಿಧಿಪೂರ್ವಕವಾಗಿ ಆಚರಿಸಿದ ಮಾನವನ ಪಾಪಗಳೆಲ್ಲವೂ ಪರಿಹೃತವಾಗಿ ಅವನು ಚಂದ್ರಲೋಕಕ್ಕೆ ಹೋಗುವನು.

### ಧರ್ಮಹರಿಯ ಸ್ಥಾಪನೆ, ಸ್ವರ್ಣಖಣಿ ತೀರ್ಥ, ರಘುರಾಜನ ಸರ್ವಸ್ವ ದಾನ, ಕೌತ್ಸನ ತೃಪ್ತಿ

**ಸೂತ:-** ಚಂದ್ರಹರಿ ದೇವಸ್ಥಾನದಿಂದ ಮುಂದೆ ಆಗ್ನೇಯ ಕೋಣದಲ್ಲಿ ಧರ್ಮ ಹರಿ ಎಂಬ ಕ್ಷೇತ್ರವಿದೆ. ಹಿಂದೆ ಧರ್ಮ ಎಂಬ ಬ್ರಾಹ್ಮಣನು ತೀರ್ಥಯಾತ್ರೆ ಗೈಯುತ್ತ ಅಯೋಧ್ಯಾಪುರಿಗೆ ಬಂದು ಶ್ರೀಹರಿಯ ಸೇವೆಗೈದ. ಬಗೆಬಗೆಯಿಂದ ಭಗವಂತನನ್ನು ಪ್ರಾರ್ಥಿಸಿ ಸ್ತುತಿ ಮಾಡಿದ. ಅವನ ಸ್ತೋತ್ರದಿಂದ ಪರಮಾತ್ಮನು ಪ್ರಸನ್ನನಾದ. ಅವನಿಗೆ ತನ್ನ ಪ್ರತ್ಯಕ್ಷ ದರ್ಶನವನ್ನು ನೀಡಿದ. ''ನಿನಗೆ ಬೇಕಾದ ವರವನ್ನು ಬೇಡು'' ಎಂದು

ಹೇಳಿದ. ಅದನ್ನು ಕೇಳಿ ಆ ಧರ್ಮ ಬ್ರಾಹ್ಮಣನು ''ಸ್ವಾಮಿ! ನೀನು ನನ್ನ ಮೇಲೆ ಸುಪ್ರಸನ್ನನಾಗಿದ್ದರೆ ನೀನು ಇಲ್ಲಿ ನಿರಂತರವಾಗಿ ನೆಲೆನಿಲ್ಲು'' ಎಂದು ಬೇಡಿಕೊಂಡ. ಅದಕ್ಕೆ ಶ್ರೀಹರಿಯು 'ತಥಾಸ್ತು' ಎಂದು ಅನುಗ್ರಹಿಸಿದ. ಆಗ ಆ ಧರ್ಮ ಬ್ರಾಹ್ಮಣನು ಅಲ್ಲಿ ಒಂದು ದಿವ್ಯವಾದ ಭಗವನ್ಮೂರ್ತಿಯನ್ನು ಪ್ರತಿಷ್ಠಾಪಿಸಿದ. ಅದು ಧರ್ಮಹರಿ ಎಂಬ ನಾಮದಿಂದ ಪ್ರಸಿದ್ಧವಾಯಿತು. ಸ್ವರ್ಗದ್ವಾರ ತೀರ್ಥದಲ್ಲಿ ಸ್ನಾನಮಾಡಿ ಧರ್ಮಹರಿಯ ದರ್ಶನ ತೆಗೆದುಕೊಂಡ ಮಾನವರು ಸರ್ವಪಾಪಗಳಿಂದ ಮುಕ್ತರಾಗುವರು.

ಧರ್ಮಹರಿ ದೇವಸ್ಥಾನದಿಂದ ದಕ್ಷಿಣಕ್ಕೆ ಒಂದು ಬಂಗಾರದ ಖಣಿಯಿರುತ್ತದೆ.

ಪೂರ್ವಕಾಲದಲ್ಲಿ ಇಕ್ಷ್ವಾಕು ವಂಶದಲ್ಲಿ ರಘು ಮಹಾರಾಜನು ರಾಜ್ಯವನ್ನು ಆಳುತ್ತಿದ್ದ. ಧರ್ಮಪ್ರಾಣನಾಗಿದ್ದ ಆ ರಘುಭೂಪಾಲ. ಅವನು ದ್ವಿಗಿಜಯ ಮಾಡಿ ಅಪರಂಪಾರ ಐಶ್ವರ್ಯವನ್ನು ಸಂಪಾದಿಸಿದ. ಅನಂತರ ಅವನು ತನ್ನ ಕುಲಗುರು ವಸಿಷ್ಠರ ಸಲಹೆ ಸೂಚನೆಯನ್ನು ಅನುಸರಿಸಿ ವಿಶ್ವಜಿತ್ ಎಂಬ ಯಜ್ಞವನ್ನು ಪ್ರಾರಂಭಿಸಿದ. ವಶಿಷ್ಠ, ವಾಸುದೇವ, ವಿಶ್ವಾಮಿತ್ರ, ಕಶ್ಯಪ ಮುಂತಾದ ಮಹಾನುಭಾವರಾದ ಮುನಿಪುಂಗವರನ್ನು ಆಮಂತ್ರಿಸಿದ. ಈ ಎಲ್ಲ ಮಹಾಮುನಿಗಳ ನೇತೃತ್ವದಲ್ಲಿ ವೈಭವದಿಂದ ನೆರವೇರಿತು ವಿಶ್ವಜಿತ್ ಎಂಬ ಯಜ್ಞ. ಮಹಾರಾಜನು ತಾನು ದಿಗ್ವಿಜಯದಲ್ಲಿ ಗಳಿಸಿತಂದ ಅಪರಿಮಿತ ಐಶ್ವರ್ಯವನ್ನೆಲ್ಲ ದಾನ ನೀಡಿದ. ಅಲ್ಲಿಗೆ ಬಂದ ತಪಸ್ವಿಗಳಿಗೂ, ಯೋಗಿಗಳಿಗೂ, ವಿದ್ವಾಂಸರಿಗೂ ಸರ್ವಸ್ವ ದಕ್ಷಿಣೆಯನ್ನು ನೀಡಿ ಸಂತೃಪ್ತಿಪಡಿಸಿದ. ಹೀಗೆ ರಘುರಾಜನ ವಿಪುಲವಾದ ದಾನ ದಕ್ಷಿಣೆಗಳಿಂದ ಸಂತುಷ್ಟರಾಗಿ ಮುನಿ ಮಹಾನುಭಾವರೆಲ್ಲರೂ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು. ನಂತರ ವಿಶ್ವಾಮಿತ್ರ ಮಹರ್ಷಿಗಳ ಶಿಷ್ಯನಾದ ಕೌತ್ಸಮುನಿಯು ಅಲ್ಲಿಗೆ ಬಂದ. ಅವನು ತನ್ನ ಗುರುಗಳಿಗೆ ಕೊಡಬೇಕಾದ ಗುರು ದಕ್ಷಿಣೆಯ ದ್ರವ್ಯವನ್ನು ರಘುರಾಜನಿಂದ ಪಡೆಯಬೇಕೆಂದು ಬಂದಿದ್ದ.

ಅಲ್ಲಿಗೆ ಆಗಮಿಸಿದ ಕೌತ್ಸಮುನಿಗೆ ರಘುರಾಜನು ಸ್ವಾಗತ ನೀಡಿದ ಅತ್ಯಾನಂದದಿಂದ. ಆದರದಿಂದ ಕೂಡಿಸಿದ ಉಚ್ಚ ಆಸನದ ಮೇಲೆ. ರಘುರಾಜ ವಿಶ್ವಜಿತ್ ಯಜ್ಞದಲ್ಲಿ ತನ್ನ ಸರ್ವಸಂಪತ್ತನ್ನೂ ದಾನಮಾಡಿ ರಿಕ್ತನಾಗಿ ಕುಳಿತಿದ್ದ. ಅರಮನೆಯಲ್ಲಿಯ ಪಾತ್ರೆ ಪರಡಿ ಗಿಂಡಿ ತಟ್ಟೆ ತಂಬಿಗೆ ಹರಿವಾಣ ಮುಂತಾದ ಎಲ್ಲ ಬೆಳ್ಳಿ ತಾಮ್ರ ಹಿತ್ತಾಳೆಯ ಪಾತ್ರೆಗಳನ್ನೂ ಬಡವರಿಗೂ ಬ್ರಾಹ್ಮಣರಿಗೂ ದಾನ ಕೊಟ್ಟು ಆಗಿತ್ತು. ಕೌತ್ಸುಮುನಿಗೆ ಪಾದಪೂಜೆ ಮಾಡಲಿಕ್ಕೆ ಬೇಕಾಗುವ ಧಾತುಮಯ ತಟ್ಟೆ ಗಿಂಡೆಗಳು ಅವನ ಮನೆಯಲ್ಲಿ ಇರಲಿಲ್ಲ. ಆದರಿಂದ ಮಹಾರಾಜನು ಮಣ್ಣಿನ ಮಡಿಕೆಯಲ್ಲಿ ನೀರು ತುಂಬಿಕೊಂಡು ಮಣ್ಣಿನ ಹರಿವಾಣದಲ್ಲಿಯೇ ಕೌತ್ಸನ ಪಾದ ತೊಳೆದ. ಇದರಿಂದ ಕೌತ್ಸಋಷಿಗೆ ಅರ್ಥವಾಯಿತು ರಘುರಾಜನ ದಟ್ಟದಾರಿದ್ರ್ಯ. ಸಂತೈಸುವ ನುಡಿಯಲ್ಲಿ ಅವನು ಮಹಾರಾಜನಿಗೆ ಹೇಳಿದ- ''ರಾಜನೇ! ನಿನಗೆ ಕಲ್ಯಾಣವಾಗಲಿ. ಉತ್ತರೋತ್ತರ ಉತ್ಕರ್ಷ ನಿನ್ನ ಪಾಲಿನದಾಗಲಿ. ದಾನಕೊಟ್ಟು ನೀನು ದರಿದ್ರನಾಗಿರುವೆ. ನಾನು ಈಗ ಬೇರೆ ದಾನಿಯ ಕಡೆಗೆ ಹೋಗುತ್ತೇನೆ. ನನಗೆ ನನ್ನ ಗುರುಗಳಿಗೆ ಕೊಡಲಿಕ್ಕಾಗಿ ಹಣ ಬೇಕಾಗಿತ್ತು. ಅದಕ್ಕಾಗಿ ನಿನ್ನ ಬಳಿಗೆ ಬಂದಿದ್ದೆ. ಆದರೆ ಸರ್ವಸ್ವ ದಾನ ನೀಡಿ ಧನ್ಯನಾದ ನಿನ್ನ ಹತ್ತಿರ ನಾನು ಬೇಡುವದಿಲ್ಲ.''

ಕೌತ್ಸಮುನಿಯ ಈ ಮಾತುಗಳನ್ನು ವೈರಿವರ್ಗ ವಿಜೇತಾರನಾದ ರಘುರಾಜನು ಕೇಳಿ ಅವನಿಗೆ ನಮ್ರತೆಯಿಂದ ನುಡಿದ ''ಪೂಜ್ಯರೆ! ತಾವು ಗುರುದಕ್ಷಿಣೆಗಾಗಿ ದ್ರವ್ಯವನ್ನು

ಕೇಳಲಿಕ್ಕೆ ನನ್ನಲ್ಲಿ ಬಂದು ಬರಿಗೈಯಿಂದ ಮರಳಿ ಹೋಗಬಾರದು. ದಯಮಾಡಿ ಒಂದು ದಿನ ತಾವು ನನ್ನ ಮನೆಯಲ್ಲಿ ಉಳಿದುಕೊಳ್ಳಬೇಕು. ಅಷ್ಟರಲ್ಲಿ ನಾನು ತಮಗೆ ಅಪೇಕ್ಷಿತ ಪ್ರಮಾಣದಲ್ಲಿ ಧನವನ್ನು ಕೊಡಲಿಕ್ಕೆ ಪ್ರಯತ್ನಿಸುತ್ತೇನೆ.''

ಉದಾರಬುದ್ಧಿಯ ರಾಜರ್ಷಿ ರಘುಮಹಾರಾಜನ ಕೋರಿಕೆಯಂತೆ ಕೌತ್ಸಮುನಿ ಒಂದು ದಿನ ತಂಗಿದ ಅವನ ಅರಮನೆಯಲ್ಲಿ. ದಾನಿಶ್ರೇಷ್ಠನಾದ ಈ ದೊರೆಯ ಉದಾರ ಬುದ್ಧಿ ವಿಶಾಲ ದೃಷ್ಟಿ ಹಾಗೂ ಸರ್ವಸ್ವ ದಾನದಿಂದ ಅವನಿಗೆ ಬಂದ ದಟ್ಟದಾರಿದ್ರ್ಯ ಮತ್ತು ಇಂಥ ಕಡುಬಡತನದಲ್ಲಿಯೂ ಕೌತ್ಸಮುನಿಗೆ ಗುರುದಕ್ಷಿಣೆಗಾಗಿ ಬಯಸಿದಷ್ಟು ಹಣವನ್ನು ಕೊಡುತ್ತೇನೆ ಎಂದು ಅವನು ನೀಡಿದ ಆಶ್ವಾಸನೆ ಮುಂತಾದ ಸಮಾಚಾರವೆಲ್ಲ ಧನದ ದೇವತೆಯಾದ ಕುಬೇರನಿಗೆ ಈ ಮೊದಲೇ ತಿಳಿದಿತ್ತು. ಆದರೂ ಕುಬೇರ ಸುಮ್ಮನಿದ್ದ. ಕೌತ್ಸಮುನಿ ಬಂದು ಮನೆಯಲ್ಲಿ ಕುಳಿತ ಬಳಿಕ ರಘುರಾಜನು ಕುಬೇರನನ್ನೇ ಗೆದ್ದು ಅವನ ದ್ರವ್ಯಭಾಂಡಾರದಿಂದ ಹಣವನ್ನು ತಂದು ಕೌತ್ಸನಿಗೆ ಕೊಡಬೇಕು ಎಂದು ಯೋಚಿಸಿದ್ದ. ಅದರಂತೆ ಅವನ ಕುಬೇರನ ರಾಜಧಾನಿಯ ಮೇಲೆ ದಂಡೆತ್ತಿ ಹೊರಟ. ಇದನ್ನು ತಿಳಿದು ಕುಬೇರನು ರಘುರಾಜನಿಗೆ ದೂತನ ಮುಖಾಂತರ ಸಂದೇಶವನ್ನು ಕಳುಹಿಸಿ ಅಯೋಧ್ಯಾ ಪಟ್ಟಣದ ಮೇಲೆ ಬಂಗಾರದ ಮಳೆಯನ್ನೇ ಸುರಿಸಿದ. ಈ ಸುವರ್ಣವೃಷ್ಟಿ ಆದ ತಾಣದಲ್ಲಿ ಬಂಗಾರದ ಗಣಿಯೇ ರೂಪುಗೊಂಡಿತು. ಆ ಬಂಗಾರದ ಖಣಿಯನ್ನು ರಾಜನು ಕೌತ್ಸಮುನಿಗೆ ತೋರಿಸಿ ಅದನ್ನು ಅವನಿಗೆ ದಾನ ನೀಡಿದ. ಆದರೆ ಕೌತ್ಸನೂ ಅಷ್ಟೇ ನಿಸ್ಪೃಹಿ.

ತಾನು ಗುರುಗಳಿಗೆ ಕೊಡಬೇಕಾದಷ್ಟು ಮಾತ್ರ ಬಂಗಾರವನ್ನು ತೆಗೆದುಕೊಂಡು ಉಳಿದುದನ್ನೆಲ್ಲ ರಘುರಾಜನಿಗೆ ಮರಳಿಕೊಟ್ಟ. ಮತ್ತು ಉದಾರ ಮನಸ್ಸಿನ ಆ ಮಹಾಮನೀಷಿ ರಾಜರ್ಷಿಗೆ ವರಪ್ರದಾನಗೈಯುತ್ತ ಹೇಳಿದ- ''ಭೂಪಾಲ! ನಿನಗೆ ಸರ್ವಗುಣ ಸಂಪನ್ನನಾದ ಸತ್ಪುತ್ರನು ಜನಿಸಲಿ. ಈ ಬಂಗಾರದ ಖಣಿ ಇದ್ದ ತಾಣದಲ್ಲಿ ಒಂದು ದಿವ್ಯ ತೀರ್ಥವು ನಿರ್ಮಿತವಾಗಲಿ. ವೈಶಾಖ ಶುಕ್ಲ ಪಕ್ಷ ದ್ವಾದಶೀದಿನದಂದು ಇಲ್ಲಿ ವಾರ್ಷಿಕ ಯಾತ್ರಾ ಮಹೋತ್ಸವವು ನೆರವೇರಲ್ಪಡಲಿ. ಇಲ್ಲಿ ಸ್ನಾನ ಮಾಡಿದವರ ಸರ್ವಾಭೀಷ್ಟಗಳೂ ಸಿದ್ಧಿಸಲಿ.'' ಹೀಗೆ ಮಹಾರಾಜನಿಗೆ ವರವನ್ನಿತ್ತು ಕೌತ್ಸಮುನಿಯು ತನ್ನ ಗುರುದಕ್ಷಿಣೆಯ ಪ್ರಮಾಣದ ಸುವರ್ಣ ಭಾರವನ್ನು ಹೊತ್ತುಕೊಂಡು ತನ್ನ ಆಚಾರ್ಯರ ಆಶ್ರಮಕ್ಕೆ ಪ್ರಯಾಣ ಬೆಳೆಸಿದ.

### ಸಂಭೇದ ತೀರ್ಥ, ಸೀತಾಕುಂಡ, ಗುಪ್ತಹರಿ ಮತ್ತು ಚಕ್ರಹರಿ ತೀರ್ಥಗಳು

**ಸೂತ**:- ಸುವರ್ಣ ಖಣಿಯಿಂದ ದಕ್ಷಿಣಕ್ಕೆ ಮುಂದೆ ಸಿದ್ಧಮುನಿ ಮಹರ್ಷಿಗಳಿಂದ ಸೇವಿತವಾದ ಸಂಭೇದ ಎಂಬ ಒಂದು ತೀರ್ಥವಿದೆ. ತಿಲೋದಕೀ ಸರಯೂ ಈ ಎರಡೂ ಪುಣ್ಯನದಿಗಳ ಸಂಗಮಸ್ಥಾನದಲ್ಲಿ ಏರ್ಪಟ್ಟ ಈ ಸಂಭೇದ ತೀರ್ಥದಲಿ ಸ್ನಾನ ಮಾಡುವದರಿಂದ ಹತ್ತು ಅಶ್ವಮೇಧ ಯಜ್ಞ ಮಾಡಿದ ಪುಣ್ಯ ಪ್ರಾಪ್ತಿ ಆಗುತ್ತದೆ. ಸ್ವಯಂ ಶ್ರೀರಾಮಚಂದ್ರನೇ ಆ ಭಾಗದ ಜನರ ನೀರಿನ ಬರವನ್ನು ಹಿಂಗಿಸಲಿಕ್ಕಾಗಿ ಕಪ್ಪುನೀರಿನ ಈ ತಿಲೋದಕೀ ನದಿಯನ್ನು ನಿರ್ಮಿಸಿದ್ದನು. ಆದುದರಿಂದ ಸರಯೂ ತಿಲೋದಕೀ ಸಂಗಮಸ್ಥಾನದಲ್ಲಿ ಸ್ನಾನದಿಂದ ಮಹಾ ಪುಣ್ಯಪ್ರಾಪ್ತಿ ನಿಶ್ಚಿತ. ಈ ಸಂಗಮದಿಂದ ಮುಂದೆ

ಪಶ್ಚಿಮ ತೀರದಲ್ಲಿ ಸೀತಾಕುಂಡ ಎಂಬ ತೀರ್ಥ. ಸೀತಾದೇವಿಯು ಈ ಕುಂಡವನ್ನು ನಿರ್ಮಿಸಿದ್ದಳು. ಇದನ್ನು ತಿಳಿದು ಶ್ರೀರಾಮಚಂದ್ರನು ಈ ಸೀತಾಕುಂಡದಲ್ಲಿ ಸ್ನಾನ ದಾನಾದಿಗಳನ್ನು ಮಾಡಿದವರಿಗೆ ಅಕ್ಷಯ ಪುಣ್ಯಫಲ ದೊರಕಲಿ ಎಂದು ವರವಿತ್ತಿದ್ದಾನೆ. ಆದುದರಿಂದ ಈ ಸೀತಾ ಕುಂಡದಲ್ಲಿ ಸ್ನಾನಮಾಡಿ ಶ್ರೀರಾಮಚಂದ್ರ ಹಾಗೂ ಸೀತಾದೇವಿಯರನ್ನು ಭಕ್ತಿಯಿಂದ ಪೂಜಿಸಿದವರು ಅದರಲ್ಲಿಯೂ ಮಾರ್ಗಶೀರ್ಷದಲ್ಲಿ ಇಲ್ಲಿ ಸ್ನಾನಮಾಡಿ ಹರಿಪೂಜೆಗೈದವರು ಪುನಃ ತಾಯಿಯ ಹೊಟ್ಟೆಯಿಂದ ಹುಟ್ಟಿ ಬರುವದಿಲ್ಲ.

ಇಲ್ಲಿಂದ ಮುಂದೆ ಚಕ್ರಹರಿ ಎಂಬ ಪುಣ್ಯಕ್ಷೇತ್ರವಿದೆ. ಇದರ ಪಶ್ಚಿಮಕ್ಕೆ ಹರಿಸ್ಮೃತಿ ಎಂಬ ಭಗವಂತನ ದಿವ್ಯಮಂದಿರವೊಂದಿದೆ. ಈ ಚಕ್ರಹರಿ ಮತ್ತು ಹರಿಸ್ಮೃತಿ ಎರಡೂ ಪುಣ್ಯಧಾಮಗಳ ಸಂದರ್ಶನದಿಂದಲೇ ಕರಗಿ ಹೋಗುವವು ಮಾನವರ ಪಾಪರಾಶಿಗಳೆಲ್ಲವೂ.

ಹಿಂದೊಮ್ಮೆ ದೇವ-ದಾನವರಲ್ಲಿ ಘನಘೋರ ಸಂಗ್ರಾಮ. ದೇವತೆಗಳ ಪರಾಜಯ. ದೈತ್ಯರ ಗೆಲುವು. ಸೋಲು ಸಾವು-ನೋವು ಉಂಡ ಸುರಪುರನಾಗರಿಕರ ಪಲಾಯನ, ಹಾಲು ಗಡಲಿನ ತಡಿಗೆ ದೇವಗಣದ ಆಗಮನ. ಬ್ರಹ್ಮದೇವ ಅವರ ಮುಂದಾಳು. ಶಿವ ಅವರಿಗೆ ಮುಖಿ. ಶಂಕರನಿಂದ ಶ್ರೀಹರಿಯ ಪ್ರಾರ್ಥನೆ. ಸರ್ವಸುರಸತ್ತಮರ ಅನುಮೋದನೆ. ಸಾಮೂಹಿಕ ಪ್ರಣಾಮ. ಅದರಿಂದ ಶ್ರೀಹರಿಯ ಸಂತೋಷ. ದೇವತೆಗಳಿಗೆ ಆಶ್ವಾಸನೆ.

**ಶ್ರೀಹರಿ:-** ''ನಿಮ್ಮ ಭಾವ ನನಗೆ ಸುವಿದಿತ. ನಿಮ್ಮ ತೇಜಸ್ಸು ಹ್ರಾಸವಾಗಿದೆ. ನಿಮ್ಮ ಆ ತೇಜೋವೃದ್ಧಿಗಾಗಿ ನಾನು ಅಯೋಧ್ಯಾಪುರಿಗೆ ಹೋಗುತ್ತೇನೆ. ಅಲ್ಲಿ ಗುಪ್ತವಾಗಿ ನಿಂತು ತಪಸ್ಸನ್ನು ಮಾಡುತ್ತೇನೆ. ಲೋಕಶಿಕ್ಷಣಕ್ಕಾಗಿ ನನ್ನ ಈ ತಪಸ್ಸು. ನೀವೂ ಹೋಗಿರಿ. ತಪಶ್ಚರ್ಯೆಯನ್ನು ಕೈಕೊಳ್ಳಿರಿ. ತಪಸ್ಸು ಇಲ್ಲದೆ ಸಿದ್ಧಿಸಲಾರದು ನಿಮ್ಮ ಮನೋರಥ. ನಿಮ್ಮಲ್ಲಿ ತಪೋಬಲ ಇಲ್ಲದಿದ್ದರೆ ಒಬ್ಬ ದೈತ್ಯನೂ ಸಾಯಲಾರ.'' ಹೀಗೆ ಹೇಳಿ ಹರಿ ಬಂದ ಅಯೋಧ್ಯೆಗೆ. ತಪಸ್ಸನ್ನು ಕೈಕೊಂಡ. ಅದೂ ಗುಪ್ತರೂಪದಲ್ಲಿ. ಅದಕ್ಕಾಗಿ ಹೆಸರು ಅವನಿಗೆ ಗುಪ್ತಹರಿ ಎಂದು. ಇಲ್ಲಿಗೆ ಮೊದಲು ಬಂದಾಗ ಸುದರ್ಶನ ಚಕ್ರವು ಶ್ರೀಹರಿಯ ಕೈಯಿಂದ ಕೆಳಗೆ ಬಿದ್ದಿತು. ಆದುದರಿಂದ ಇದಕ್ಕೆ ಚಕ್ರಹರಿ ಎಂದು ಹೆಸರು. ಈ ಗುಪ್ತಹರಿ ಮತ್ತು ಚಕ್ರಹರಿ ಎರಡು ದೇವತಾಮೂರ್ತಿಗಳ ಸಂದರ್ಶನದಿಂದ ಮಾನವರ ಪಾಪಗಳೆಲ್ಲವೂ ನಷ್ಟವಾಗುವವು. ಹೀಗೆ ಗುಪ್ತರೂಪದಿಂದ ತಪಿಸುತ್ತಿರುವ ಶ್ರೀಹರಿಯನ್ನು ಕುರಿತು ಎಲ್ಲ ದೇವತೆಗಳೂ ತಪಸ್ಸನ್ನು ಮಾಡಿದರು. ಅದರಿಂದ ಮುಖ್ಯವಾಗಿ ಶ್ರೀಹರಿಯ ಅನುಗ್ರಹದಿಂದ ದೇವತೆಗಳ ತೇಜೋವೃದ್ಧಿ ಆಯಿತು. ಯುದ್ಧದಲ್ಲಿ ದೈತ್ಯರನ್ನು ಗೆದ್ದು ವಿಜಯಶ್ರೀಯಿಂದ ಸ್ವರ್ಗಸೀಮೆಯಲಿ ಮೆರೆದರು ಎಲ್ಲ ಸುರಸತ್ತಮರು. ಅನಂತರ ತಮ್ಮ ಗುರು ಬೃಹಸ್ಪತ್ಯಾಚಾರ್ಯರನ್ನು ಮುಂದೆ ಮಾಡಿಕೊಂಡು ಎಲ್ಲ ದೇವೋತ್ತಮರೂ ಈ ಅಯೋಧ್ಯೆಗೆ ಬಂದು ಗುಪ್ತಹರಿಯ ದರ್ಶನ ಮಾಡಿ ನಮಸ್ಕರಿಸಿ ನಿಂತರು. ಆಗ ಶ್ರೀಹರಿಯು ಅವರಿಗೆ ''ನಿಮ್ಮ ಅಪೇಕ್ಷೆ ಏನು? ನಿಮಗೆ ಯಾವ ವರವನ್ನು ನೀಡಲಿ?'' ಎಂದು ಕೇಳಿದನು. ಅದಕ್ಕೆ ದೇವತೆಗಳು ತಲೆ ಬಾಗಿ ನಮ್ರತೆಯಿಂದ ನುಡಿದರು.- ''ಭಗವನ್! ನೀನು ನಿಜವಾಗಿಯೂ ನಮ್ಮ ಮೇಲೆ ಸಂತುಷ್ಟನಾಗಿದ್ದರೆ ನೀನು ಈ ಕ್ಷೇತ್ರದಲ್ಲಿ ನಿರಂತರವೂ ವಾಸಮಾಡು.''

ದೇವತೆಗಳ ಈ ಪ್ರಾರ್ಥನೆಯನ್ನು ಮನ್ನಿಸಿ ಶ್ರೀಹರಿಯು ನೆಲೆನಿಂತು ಆ ಆದಿತಿ ಕುಮಾರರಿಗೆ ಹೇಳಿದನು. ''ಈ ಚಕ್ರಹರಿ ಹಾಗೂ ಗುಪ್ತಹರಿ ಮೂರ್ತಿಗಳಲ್ಲಿ ಸ್ವಯಂ

ನಾನು ಸಂತತವು ಸನ್ನಿಹಿತನಾಗಿದ್ದೇನೆ. ಇಲ್ಲಿ ಮಾಡಿದ ಸ್ನಾನ, ತಪ, ಜಪ, ಪೂಜೆ, ದಾನ ಧರ್ಮಗಳು ಅನಂತ ಪುಣ್ಯದಾಯಕ. ಇದರ ಹತ್ತಿರವೇ ಗೋಪ್ರತಾರ ಘಾಟಿಯಿಂದ ಮೂರು ಯೋಜನ ದೂರದಲ್ಲಿ ಘಾಘರಾ ಮತ್ತು ಸರಯೂ ನದಿಗಳ ಸಂಗಮವಿದೆ. ಅಲ್ಲಿ ವಿಧಿಪೂರ್ವಕ ಸ್ನಾನದಿಂದ ಮನೋರಥ ಸಿದ್ಧಿ.''

ಹೀಗೆ ಹೇಳಿ ಶ್ರೀಹರಿಯು ಅದೃಶ್ಯನಾದನು. ಶ್ರೀಹರಿಯ ಸೇವೆಗಾಗಿ ದೇವತೆಗಳೂ ಅಯೋಧ್ಯೆಯಲ್ಲಿಯೇ ನೆಲೆಸಿದರು. ಸರಯೂ ಘಾಘರಾ ನದೀಸಂಗಮದಿಂದ ಮುಂದೆ ಗೋಪ್ರತಾರ ಎಂಬ ತೀರ್ಥವಿದೆ. ಅಲ್ಲಿ ಸ್ನಾನದಿಂದ ಮಾನವರ ಸರ್ವಕಾಮನಾ ಪೂರ್ತಿಯಾಗುವದು. ಮಾರ್ಗಶೀರ್ಷ ಶುಕ್ಲ ದ್ವಾದಶಿಯ ದಿನ ಈ ಚಕ್ರಹರಿ ಗುಪ್ತಹರಿ ಯಾತ್ರೆಮಾಡಿ ಗೋಪ್ರತಾರ ಹಾಗೂ ಸರಯೂ ಘಾಘುರಾ ನದೀ ಸಂಗಮ ಸ್ನಾನಮಾಡಿದವರಿಗೆ ವಿಷ್ಣು-ಲೋಕದಲ್ಲಿ ಪರಮಾನಂದ ಅವಾಪ್ತಿ ಖಂಡಿತ.

## ಶ್ರೀರಾಮನ ಪರಂಧಾಮಗಮನ ವೃತ್ತಾಂತ

ಸರಯೂ ಘಾಘುರಾ ಸಂಗಮದಲ್ಲಿ ಹತ್ತು ಕೋಟಿ ಹತ್ತುಸಾವಿರ ತೀರ್ಥಗಳು ಇರುತ್ತವೆ. ಇಲ್ಲಿ ಹುಣ್ಣಿಮೆ ಅಮಾವಾಸ್ಯಾ ದ್ವಾದಶೀ ದಿನಗಳಂದು ಸ್ನಾನ, ದಾನ, ಪಿತೃತರ್ಪಣ, ಹೋಮ-ಹವನ ಮುಂತಾದವುಗಳಿಂದ ವೈಕುಂಠ ಲೋಕ ಪ್ರಾಪ್ತಿ ಖಂಡಿತ. ಈ ಸಂಗಮದ ಸಮೀಪದಲ್ಲಿ ಇರುವ ಗೋಪ್ರತಾರ ತೀರ್ಥವು ಕಾಶೀ ಮಣಿಕರ್ಣಿಕೆ, ಉಜ್ಜೈನಿಯ ಮಹಾ ಕಾಲಮಂದಿರ, ನೈಮಿಷಾರಣ್ಯದ ಚಕ್ರವಾಸೀ ತೀರ್ಥಗಳಿಗಿಂತ ಶ್ರೇಷ್ಠವಾಗಿರುತ್ತದೆ.

ಹೀಗೆ ರಾಮಾವತಾರದ ಪರಿಸಮಾಪ್ತಿಯ ಕಾಲದಲ್ಲಿ ಪ್ರಭು ಶ್ರೀರಾಮಚಂದ್ರ ದೇವರು ತನ್ನ ಸಹೋದರೊಂದಿಗೆ ತನ್ನ ದಿವ್ಯ ಧಾಮ ಅರ್ಥಾತ್ ಪರಂಧಾಮಕ್ಕೆ ತೆರಳಬೇಕೆಂದು ಸಂಕಲ್ಪಿಸಿದ. ಈ ಸಮಾಚಾರ ಜಗತ್ತಿನ ತುಂಬ ಹರಡಿತು. ರಾಮ ಭಕ್ತರಾದ ಅನೇಕ ನರರೂ, ವಾನರರೂ, ಕರಡಿಗಳೂ, ರಾಕ್ಷಸರೂ, ಮುನಿಗಳೂ ಹಿಂಡು ಹಿಂಡಾಗಿ ಅಯೋಧ್ಯಾಪುರಿಗೆ ಆಗಮಿಸಿದರು. ಅವರೆಲ್ಲರೂ ಭಗವಾನ ಶ್ರೀರಾಮ ಪ್ರಭುವಿಗೆ ಅವನೊಡನೆಯೇ ವಿಷ್ಣು ಲೋಕಕ್ಕೆ ಬರುವ ತಮ್ಮ ನಿರ್ಧಾರವನ್ನು ತಿಳಿಸಿದರು. ನಿನ್ನನ್ನು ಬಿಟ್ಟು ನಾವು ಈ ಲೋಕದಲ್ಲಿ ಬದುಕಿ ಇರಲಾರೆವೆಂದು ಸ್ಪಷ್ಟವಾಗಿ ಹೇಳಿದರು.

ಆಗ ಶ್ರೀರಾಮಚಂದ್ರನು ರಾಕ್ಷಸರ ಒಡೆಯನಾದ ವಿಭೀಷಣನನನ್ನು ಕರೆದು ''ವಿಭೀಷಣ, ನೀನು ಚಿರಂಜೀವಿಯಾಗಿ ಈ ಲಂಕಾಪಟ್ಟಣದಲ್ಲಿ ಇರು.'' ಎಂದು ಹೇಳಿದನು ಮತ್ತು ತನ್ನ ಏಕಾಂತ ಭಕ್ತನಾದ ಹನುಮಂತನನ್ನು ಕರೆದು ''ವಾಯುಪುತ್ರ! ನೀನು ಚಿರಂಜೀವಿಯಾಗಿ ನನ್ನ ಧ್ಯಾನ ಮಾಡುತ್ತ ಇಲ್ಲಿಯೇ ಇರು. ನನ್ನ ಮಹಿಮೆಯ ಕಥೆ ಭೂಲೋಕದಲ್ಲಿ ಪ್ರಚಾರದಲ್ಲಿ ಇರುವವರೆಗೆ ನೀನು ನನ್ನ ಭಕ್ತಿಯ ಪ್ರತೀಕನಾಗಿ ಈ ನೆಲದಲ್ಲಿ ನಿಂತುಕೊಂಡಿರು.'' ಎಂದು ಆದೇಶಿಸಿದನು. ಅದರಂತೆ ದ್ವಿವಿದ ಮೈಂದ ಎಂಬ ವಾನರರಿಗೆ ನೀವಿಬ್ಬರೂ ''ಅಮೃತಪ್ರಾಶನ ಮಾಡಿದ್ದೀರಿ ಆದುದರಿಂದ ನೀವೂ ಕೂಡ

---

* ಗತೇ ವರ್ಷದ್ವಯೇ ಸಾರ್ಧೇ ಪಂಚಪಕ್ಷೇ ದಿನದ್ವಯೇ ॥ ದಿವಸಸ್ಯಾಷ್ಟಮೇ ಭಾಗೇ ಪತತ್ಯಧಿ ಮಾಸಕಃ ಎರಡು ವರ್ಷ ಎಂಟು ತಿಂಗಳ ಎಪ್ಪತ್ತು ದಿನ ಕಳೆದ ನಂತರ ದಿನದ ಎಂಟನೇ ಭಾಗದಲ್ಲಿ ಒಂದು ಅಧಿಕ ಮಾಸವು ಬರುತ್ತದೆ.

ದೀರ್ಘಾಯುಗಳಾಗಿ ಭೂಲೋಕದಲ್ಲಿ ಬಾಳಿರಿ'' ಎಂದು ಆಜ್ಞೆ ಮಾಡಿದನು. ಈ ರೀತಿಯಾಗಿ ತನ್ನ ಪ್ರೀತಿಯ ನಾಲ್ಕು ಜನ ಅನುಚರರಿಗೆ ಚಿರಂಜೀವಿಗಳಾಗಿ ಭೂತಳದಲ್ಲಿಯೇ ಬದುಕಿ ಉಳಿಯಲು ಆದೇಶವಿತ್ತನು. ತನ್ನೊಡನೆ ವೈಕುಂಠಲೋಕಕ್ಕೆ ಆಗಮಿಸಲು ಸಿದ್ಧರಾಗಿ ಬಂದ ಮುನಿ, ಮನುಜ, ಕಪಿ, ಕರಡಿಗಳಿಗೆಲ್ಲ ತನ್ನೊಡನೆ ಬರಲಿಕ್ಕೆ ಆದೇಶ ನೀಡಿದನು. ಅವರೆಲ್ಲರೂ ಸಿದ್ಧರಾದರು. ಮರುದಿನ ಪ್ರಾತಃಕಾಲದಲ್ಲಿ ಶ್ರೀರಾಮದೇವರು ಕುಲಗುರು ವಸಿಷ್ಠರನ್ನು ಕರೆದು ಹೇಳಿದರು- ''ಪ್ರಜ್ವಲಿತವಾದ ಅಗ್ನಿಹೋತ್ರದ ಹೋಮಾಗ್ನಿಯು ಎಲ್ಲಕ್ಕಿಂತ ಮುಂದೆ ಕರೆದೊಯ್ಯಲ್ಪಡಲಿ. ವಾಜಪೇಯ ಅತಿರಾತ್ರಗಳ ಯಜ್ಞಾಗ್ನಿಗಳು ಮುಂದೆ ಮುಂದೆ ಸಾಗಲಿ, ಅದೇ ಮಾರ್ಗದಿಂದ ಅವುಗಳನ್ನು ಹಿಂಬಾಲಿಸಿ ನಾವೂ ಮಹಾಪ್ರಸ್ಥಾನವನ್ನು ಬೆಳೆಸುತ್ತೇವೆ.''

ಹೀಗೆ ಹೇಳಿದ ರಾಮಪ್ರಭುವಿನ ಮಾತಿನಂತೆ ತೇಜೋನಿಧಿಗಳೂ ತಪೋನಿಧಿಗಳೂ ಆದ ಭಗವಾನ್ ಶ್ರೀ ವಸಿಷ್ಠರು ಶ್ರೀರಾಮ ಜಗದೀಶ ಮಹಾಪ್ರಸ್ಥಾನದ ಕಾಲೋಚಿತವಾದ ಎಲ್ಲ ಧಾರ್ಮಿಕ ವಿಧಿವಿಧಾನಗಳನ್ನು ಮಾಡಿ ಪೂರೈಸಿದರು. ಅನಂತರ ರೇಶಿಮೆಯ ವಸ್ತ್ರಗಳನ್ನು ಧಾರಣ ಮಾಡಿ ಪ್ರಭು ಶ್ರೀರಾಮಚಂದ್ರನು ಎರಡೂ ಕೈಗಳಲ್ಲಿ ದರ್ಭೆಗಳನ್ನು ಹಿಡಿದು ಅಯೋಧ್ಯೆಯನ್ನು ಬಿಟ್ಟು, ಮನೆ ಮಾರುಗಳನ್ನು ತೊರೆದು ಹೊರಹೊರಟನು. ಯಾರಿಗೂ ಏನೂ ಹೇಳಲಿಲ್ಲ. ಏನನ್ನೂ ಕೇಳಲಿಲ್ಲ. ಶುಭವನ್ನು ನುಡಿಯಲಿಲ್ಲ. ಅಶುಭವನ್ನು ಉಚ್ಚರಿಸಲಿಲ್ಲ. ಗಂಭೀರವಾಗಿದ್ದಿತು ಅವನ ನಿಲುಮೆ. ಅಗಮ್ಯವಾಗಿದ್ದಿತು ಅವನ ಚರ್ಯೆ. ಕಣ್ಣನಲ್ಲಿ ಅದೇನೋ ಅಗಾಧತೆ. ಚರ್ಯೆಯಲ್ಲಿ ಸ್ಥೈರ್ಯ, ಲೋಲಕಮಲ ಹಿಡಿದ ಲಕ್ಷ್ಮೀ ಎಡಬದಿಯಲ್ಲಿ, ಕೌಸಲ್ಯಾದೇವಿ ಬಲಪಕ್ಕದಲ್ಲಿ, ಕೋದಂಡ ಬಿಲ್ಲು, ಅಕ್ಷಯಬಾಣ, ಖಡ್ಗ, ಗದೆ ಮುಂತಾದ ಅವನ ವಿವಿಧ ಆಯುಧಗಳೆಲ್ಲವೂ ಮೂರ್ತಿಮಂತವಾಗಿ ಮೈದಳೆದು ಹಿಂದೆ ಹೊರಟಿದ್ದವು. ನಾಲ್ಕು ವೇದಗಳೂ ಬ್ರಾಹ್ಮಣರೂಪ ಧರಿಸಿ ಎಡಭಾಗದಲ್ಲಿ ಶ್ರೀರಾಮನನ್ನು ಅನುಸರಿಸಿ ಸಾಗಿದ್ದವು. ಬಲಭಾಗದಲ್ಲಿ ಗಾಯತ್ರಿಯ ಗಮನ, ಓಂಕಾರ ವಷಾಟ್ಕಾರಗಳೂ ಜೊತೆ ಜೊತೆಗೇ ನಡೆದಿದ್ದವು. ರಾಣೀವಾಸದ ಸ್ತ್ರೀಯರೆಲ್ಲರನ್ನೂ ಕರೆದುಕೊಂಡು ಶತ್ರುಘ್ನನು ಅಣ್ಣನನ್ನು ಹಿಂಬಾಲಿಸಿದನು. ಇವರೆಲ್ಲರ ಹಿಂದೆ ರಾಮಭಕ್ತರಾದ ಅನೇಕ ಶ್ರೋತ್ರಿಯರೂ, ರಾಮನಿಷ್ಠ ಕ್ಷತ್ರಿಯರೂ, ರಾಮಪ್ರಿಯ ವೈಶ್ಯರೂ, ರಾಮಪ್ರಾಣ ಶೂದ್ರರೂ, ರಾಮನೇ ಸರ್ವಸ್ವ ಎಂದು ತಿಳಿದ ಎಲ್ಲ ಸ್ತ್ರೀ ಪುರುಷ ಸೇವಕ ಸೇನಾಪತಿ ಮಂತ್ರಿ ಪ್ರಜಾಪರಿವಾರದವರೂ ಇನ್ನೂ ಅನೇಕಾನೇಕ ವಾನರ, ಕರಡಿ, ರಾಕ್ಷಸ, ಬೇಡ, ಪಶುಪಕ್ಷಿ, ಮನುಜ ನಾನಾ ಜಾತಿಯ ರಾಮಾರ್ಪಿತ ಜೀವಗಳು ಅತ್ಯಾನಂದದಿಂದ ಶ್ರೀರಾಮ ಭಗವಂತನನ್ನು ಅವನ ಮಹಾಪ್ರಸ್ಥಾನದಲ್ಲಿ ಕುತೂಹಲದಿಂದಲೂ ಭಕ್ತಿಯಿಂದಲೂ ಉತ್ಸಾಹದಿಂದಲೂ ಹಿಂಬಾಲಿಸಿದ್ದರು. ಅಯೋಧ್ಯೆಯಿಂದ ಮುಂದೆ ಅರ್ಧ ಯೋಜನ ಹೋದಬಳಿಕ ರಾಮನ ಈ ಮೆರವಣಿಗೆ ಪಶ್ಚಿಮಕ್ಕೆ ತಿರುಗಿತು. ಅಲ್ಲಿ ಸರಯೂ ನದಿ ಹರಿಯುತ್ತಿತ್ತು. ಆಗ ಎಲ್ಲ ದೇವತೆಗಳೂ ಬ್ರಹ್ಮದೇವರೂ ಶ್ರೀರಾಮ ಭಗವಂತನ ದರ್ಶನಕ್ಕಾಗಿ ಬಂದರು. ಸಹಸ್ರಾರು ದಿವ್ಯವಿಮಾನಗಳು ವೈಕುಂಠಲೋಕದಿಂದ ಆಗಮಿಸಿ ಮುಗಿಲು ಮಂಟಪವನ್ನೆಲ್ಲ ವ್ಯಾಪಿಸಿ ನಿಂತವು. ಅವುಗಳ ದಿವ್ಯಕಾಂತಿಯಿಂದ ಆಗಸದ

ಅಂಗಳವೆಲ್ಲವೂ ತೇಜೋಭಾಸುರವಾಗಿ ಮಿಂಚತೊಡಗಿತು. ಮಂದಮಾರುತವು ತನ್ನ ಸುಗಂಧ ಸ್ಪಂದನದಿಂದ ಎಲ್ಲರಿಗೂ ಆನಂದವನ್ನು ಉಂಟು ಮಾಡುತ್ತಿತ್ತು. ಮರ್‍ಯಾದಾ ಪುರುಷೋತ್ತಮ ಶ್ರೀರಾಮಚಂದ್ರನು ತನ್ನ ಪಾದದಿಂದ ಸರಯೂ ಜಲವನ್ನು ಸ್ಪರ್ಶ ಮಾಡಿದನು.

ಆಗ ಬ್ರಹ್ಮದೇವರು ಮುಂದೆ ಬಂದು ನಮಸ್ಕರಿಸಿ ಎರಡೂ ಕೈಗಳನ್ನು ಜೋಡಿಸಿ ಭಗವಾನ್ ಶ್ರೀರಾಮಚಂದ್ರ ಪ್ರಭುವನ್ನು ಸ್ತೋತ್ರ ಮಾಡಿದರು. ''ಪರಬ್ರಹ್ಮ ರೂಪಿಯಾದ ಶ್ರೀರಾಮನೇ ನಿನಗೆ ನಮಸ್ಕಾರ. ಹದಿನಾಲ್ಕು ಲೋಕಗಳಿಗೆಲ್ಲ ನೀನೊಬ್ಬನೇ ಪತಿ. ನೀನೇ ಗತಿ. ನಿನ್ನ ಮಹಿಮೆಯನ್ನು ಹಾಗೂ ಸ್ವರೂಪವನ್ನು ಸಂಪೂರ್ಣವಾಗಿ ಯಾರೂ ತಿಳಿಯಲಾರರು. ಈಗ ನಿನಗೆ ಯೋಗ್ಯವೆನಿಸಿದ ರೂಪವನ್ನು ನೀನು ಸ್ವೀಕರಿಸಬಹುದು.'' ಹೀಗೆ ಬ್ರಹ್ಮದೇವರು ಸ್ತೋತ್ರ ಮಾಡಿದ ಬಳಿಕ ಭಗವಾನ್ ಶ್ರೀರಾಮಚಂದ್ರನು ತನ್ನ ಮೂಲ ಸ್ವರೂಪವಾದ ಶ್ರೀನಾರಾಯಣ ದೇಹದೊಡನೆ ತನ್ನ ಮೂವರೂ ಸಹೋದರರ ಜೊತೆಗೆ ಏಕೀಭೂತನಾದನು. ಅನಂತರ ಎಲ್ಲ ದೇವತೆಗಳೂ ನೋಡುತ್ತಿರುವಂತೆಯೇ ರಾಮ ರೂಪವು ಅದೃಶ್ಯವಾಗಿ ಶ್ರೀಮಹಾವಿಷ್ಣು ಸ್ವರೂಪದಿಂದ ಎಲ್ಲರ ಕಣ್ಣಿಗೂ ಗೋಚರನಾಗಿ ನಿಂತುಕೊಂಡನು. ಆಗ ಎಲ್ಲ ದೇವತೆಗಳೂ ಆ ಮಹಾವಿಷ್ಣುವಿನ ಪೂಜೆಯನ್ನು ಮಾಡಿದರು. ಅನಂತರ ಮಹಾವಿಷ್ಣುವು ಬ್ರಹ್ಮದೇವನನ್ನು ಕರೆದು ''ನನ್ನನ್ನು ಬೆಂಬತ್ತಿ ಬಂದ ಈ ಎಲ್ಲ ಭಕ್ತ ಜನರಿಗೆ ಉತ್ತಮ ಲೋಕವನ್ನು ಕೊಡು'' ಎಂದು ಆಜ್ಞೆ ಇತ್ತ.

'ಅಪ್ಪಣೆ' ಎಂದು ತಲೆಬಾಗಿ ನುಡಿದು ಬ್ರಹ್ಮದೇವರು ಅಲ್ಲಿ ನೆರೆದ ಜನರಿಗೆಲ್ಲ ಹೇಳಿದರು. ''ಈ ಸ್ವರ್ಗದ್ವಾರ ತೀರ್ಥದಲ್ಲಿ ಶ್ರೀರಾಮ ಚಿಂತನ ಮಾಡುತ್ತ ಪ್ರಾಣಾರ್ಪಣ ಮಾಡಿ ದೇಹಬಿಟ್ಟವರಿಗೆಲ್ಲ ಸಾಂತಾನಿಕ ಲೋಕದಲ್ಲಿ ಸ್ವರೂಪಾನಂದದ ಆವಿರ್ಭಾವ ವಾಗುವುದು. ಸಾಂತಾನಿಕ ಲೋಕ ನನ್ನ ಸತ್ಯಲೋಕದ ಮೇಲೆ ಇದೆ. ಕಲ್ಪಾವಸಾನದ ವರೆಗೆ ಅಲ್ಲಿ ಶ್ರೀರಾಮನ ಸಂತತ ಚಿಂತನ ಮಾಡುತ್ತ ಇದ್ದು ಕೊನೆಗೆ ಬ್ರಹ್ಮದೇವರೊಂದಿಗೆ ಅವರೆಲ್ಲರಿಗೂ ಮೋಕ್ಷ ಪ್ರಾಪ್ತಿಯಾಗುವದು.'' ಬ್ರಹ್ಮದೇವರು ಹೀಗೆ ಹೇಳಿದ ಬಳಿಕ ಗೋಪ್ರತಾರ ತೀರ್ಥದ ನೀರೆಲ್ಲವೂ ಸೂಸಿ ಸರಯೂ ನದಿಯಲ್ಲಿ ಹರಿಯಿತು. ಅದರಿಂದ ಸರಯೂ ನದಿಗೆ ಮಹಾಪೂರ ಬಂದಂತಾಗಿ ಅದು ತುಂಬಿ ಸೂಸಿ ಹರಿಯತೊಡಗಿತು. ಆಗ ನಿಜವಾದ ರಾಮಭಕ್ತರಾದ ನರರೂ ಪಶುಪಕ್ಷಿಗಳೂ, ಕರಡಿಗಳೂ, ಕೋತಿಗಳೂ ದೈತ್ಯರೂ ಎಲ್ಲರೂ ಆನಂದದಿಂದ ಸರಯೂ ನದಿಯ ಆ ಮಹಾಪೂರದಲ್ಲಿ ಹಾರಿಕೊಂಡು ಪ್ರಾಣಾರ್ಪಣ ಗೈದು ನರದೇಹಗಳನ್ನು ತ್ಯಜಿಸಿದರು. ಅವರೆಲ್ಲರೂ ದಿವ್ಯದೇಹವನ್ನು ಧಾರಣಮಾಡಿ ವೈಕುಂಠ ಲೋಕದ ವಿಮಾನಗಳಲ್ಲಿ ಹೋಗಿ ಕುಳಿತರು. ಬ್ರಹ್ಮದೇವರ ಆದೇಶದಂತೆ ಸಾಂತಾನಿಕ ಲೋಕಕ್ಕೆ ಪ್ರಯಾಣಿಸಿದರು. ಬ್ರಹ್ಮದೇವರ ಆದೇಶದಂತೆ ಸಾಂತಾನಿಕ ಲೋಕಕ್ಕೆ ಹೋಗಿ ಅಲ್ಲಿ ಈ ಪುಣ್ಯಜೀವಿಗಳು ಸಂತತವೂ ಭಗವಂತನಾದ ಶ್ರೀರಾಮಚಂದ್ರನ ನಿರಂತರ ಭಜನ, ಧ್ಯಾನ, ಚಿಂತನಗೈಯುತ್ತ ಬ್ರಹ್ಮಾನಂದ ಸಗಂಧ ಎಂದರೆ ಸಮಾನವಾದ ಆನಂದವನ್ನು ಅನುಭವಿಸುತ್ತ ವಾಸಮಾಡಿದರು. ಶ್ರೀಮನ್ನಾರಾಯಣ ಸ್ವರೂಪಿಯಾದ ಶ್ರೀರಾಮಚಂದ್ರ ಪ್ರಭುವು ತನ್ನ ಪಾರ್ಷದರೊಂದಿಗೆ ತನ್ನ ವೈಕುಂಠಲೋಕಕ್ಕೆ ಪ್ರಯಾಣ ಮಾಡಿದನು.

ಹೀಗೆ ಎಲ್ಲರನ್ನೂ ಸಂಸಾರದಿಂದ ತಾರಣ ಮಾಡಿಸಿದ್ದರಿಂದ ಈ ತೀರ್ಥಕ್ಕೆ ಗೋಪ್ರತಾರ ತೀರ್ಥ ಎಂದು ಹೆಸರು ಬಂದಿತು. ಈ ಗೋಪ್ರತಾರ ತೀರ್ಥದಲ್ಲಿ

ದೀರ್ಘಾಯುಗಳಾಗಿ ಭೂಲೋಕದಲ್ಲಿ ಬಾಳಿರಿ'' ಎಂದು ಆಜ್ಞೆ ಮಾಡಿದನು. ಈ ರೀತಿಯಾಗಿ ತನ್ನ ಪ್ರೀತಿಯ ನಾಲ್ಕು ಜನ ಅನುಚರರಿಗೆ ಚಿರಂಜೀವಿಗಳಾಗಿ ಭೂತಳದಲ್ಲಿಯೇ ಬದುಕಿ ಉಳಿಯಲು ಆದೇಶವಿತ್ತನು. ತನ್ನೊಡನೆ ವೈಕುಂಠಲೋಕಕ್ಕೆ ಆಗಮಿಸಲು ಸಿದ್ಧರಾಗಿ ಬಂದ ಮುನಿ, ಮನುಜ, ಕಪಿ, ಕರಡಿಗಳಿಗೆಲ್ಲ ತನ್ನೊಡನೆ ಬರಲಿಕ್ಕೆ ಆದೇಶ ನೀಡಿದನು. ಅವರೆಲ್ಲರೂ ಸಿದ್ಧರಾದರು. ಮರುದಿನ ಪ್ರಾತಃಕಾಲದಲ್ಲಿ ಶ್ರೀರಾಮದೇವರು ಕುಲಗುರು ವಸಿಷ್ಠರನ್ನು ಕರೆದು ಹೇಳಿದರು- ''ಪ್ರಜ್ವಲಿತವಾದ ಅಗ್ನಿಹೋತ್ರದ ಹೋಮಾಗ್ನಿಯು ಎಲ್ಲಕ್ಕಿಂತ ಮುಂದೆ ಕರೆದೊಯ್ಯಲ್ಪಡಲಿ. ವಾಜಪೇಯ ಅತಿರಾತ್ರಗಳ ಯಜ್ಞಾಗ್ನಿಗಳು ಮುಂದೆ ಮುಂದೆ ಸಾಗಲಿ, ಅದೇ ಮಾರ್ಗದಿಂದ ಅವುಗಳನ್ನು ಹಿಂಬಾಲಿಸಿ ನಾವೂ ಮಹಾಪ್ರಸ್ಥಾನವನ್ನು ಬೆಳೆಸುತ್ತೇವೆ.''

ಹೀಗೆ ಹೇಳಿದ ರಾಮಪ್ರಭುವಿನ ಮಾತಿನಂತೆ ತೇಜೋನಿಧಿಗಳೂ ತಪೋನಿಧಿಗಳೂ ಆದ ಭಗವಾನ್ ಶ್ರೀ ವಸಿಷ್ಠರು ಶ್ರೀರಾಮ ಜಗದೀಶ ಮಹಾಪ್ರಸ್ಥಾನದ ಕಾಲೋಚಿತವಾದ ಎಲ್ಲ ಧಾರ್ಮಿಕ ವಿಧಿವಿಧಾನಗಳನ್ನು ಮಾಡಿ ಪೂರೈಸಿದರು. ಅನಂತರ ರೇಶಿಮೆಯ ವಸ್ತ್ರಗಳನ್ನು ಧಾರಣ ಮಾಡಿ ಪ್ರಭು ಶ್ರೀರಾಮಚಂದ್ರನು ಎರಡೂ ಕೈಗಳಲ್ಲಿ ದರ್ಭೆಗಳನ್ನು ಹಿಡಿದು ಅಯೋಧ್ಯೆಯನ್ನು ಬಿಟ್ಟು, ಮನೆ ಮಾರುಗಳನ್ನು ತೊರೆದು ಹೊರಹೊರಟನು. ಯಾರಿಗೂ ಏನೂ ಹೇಳಲಿಲ್ಲ. ಏನನ್ನೂ ಕೇಳಲಿಲ್ಲ. ಶುಭವನ್ನು ನುಡಿಯಲಿಲ್ಲ. ಅಶುಭವನ್ನು ಉಚ್ಚರಿಸಲಿಲ್ಲ. ಗಂಭೀರವಾಗಿದ್ದಿತು ಅವನ ನಿಲುಮೆ. ಅಗಮ್ಯವಾಗಿದ್ದಿತು ಅವನ ಚರ್ಯೆ. ಕಣ್ಣಿನಲ್ಲಿ ಅದೇನೋ ಅಗಾಧತೆ. ಚರ್ಯೆಯಲ್ಲಿ ಸ್ಥೈರ್ಯ, ಲೋಲಕಮಲ ಹಿಡಿದ ಲಕ್ಷ್ಮೀ ಎಡಬದಿಯಲ್ಲಿ, ಕೌಸಲ್ಯಾದೇವಿ ಬಲಪಕ್ಕದಲ್ಲಿ, ಕೋದಂಡ ಬಿಲ್ಲು, ಅಕ್ಷಯಬಾಣ, ಖಡ್ಗ, ಗದೆ ಮುಂತಾದ ಅವನ ವಿವಿಧ ಆಯುಧಗಳೆಲ್ಲವೂ ಮೂರ್ತಿಮಂತವಾಗಿ ಮೈದಳೆದು ಹಿಂದೆ ಹೊರಟಿದ್ದವು. ನಾಲ್ಕು ವೇದಗಳೂ ಬ್ರಾಹ್ಮಣರೂಪ ಧರಿಸಿ ಎಡಭಾಗದಲ್ಲಿ ಶ್ರೀರಾಮನನ್ನು ಅನುಸರಿಸಿ ಸಾಗಿದ್ದವು. ಬಲಭಾಗದಲ್ಲಿ ಗಾಯತ್ರಿಯ ಗಮನ, ಓಂಕಾರ ವಷಾಟ್ಕಾರಗಳೂ ಜೊತೆ ಜೊತೆಗೇ ನಡೆದಿದ್ದವು. ರಾಣೀವಾಸದ ಸ್ತ್ರೀಯರೆಲ್ಲರನ್ನೂ ಕರೆದುಕೊಂಡು ಶತ್ರುಘ್ನನು ಅಣ್ಣನನ್ನು ಹಿಂಬಾಲಿಸಿದನು. ಇವರೆಲ್ಲರ ಹಿಂದೆ ರಾಮಭಕ್ತರಾದ ಅನೇಕ ಶ್ರೋತ್ರಿಯರೂ, ರಾಮನಿಷ್ಠ ಕ್ಷತ್ರಿಯರೂ, ರಾಮಪ್ರಿಯ ವೈಶ್ಯರೂ, ರಾಮಪ್ರಾಣ ಶೂದ್ರರೂ, ರಾಮನೇ ಸರ್ವಸ್ವ ಎಂದು ತಿಳಿದ ಎಲ್ಲ ಸ್ತ್ರೀ ಪುರುಷ ಸೇವಕ ಸೇನಾಪತಿ ಮಂತ್ರಿ ಪ್ರಜಾಪರಿವಾರದವರೂ ಇನ್ನೂ ಅನೇಕಾನೇಕ ವಾನರ, ಕರಡಿ, ರಾಕ್ಷಸ, ಬೇಡ, ಪಶುಪಕ್ಷಿ, ಮನುಜ ನಾನಾ ಜಾತಿಯ ರಾಮಾರ್ಪಿತ ಜೀವಗಳು ಆತ್ಮಾನಂದದಿಂದ ಶ್ರೀರಾಮ ಭಗವಂತನನ್ನು ಅವನ ಮಹಾಪ್ರಸ್ಥಾನದಲ್ಲಿ ಕುತೂಹಲದಿಂದಲೂ ಭಕ್ತಿಯಿಂದಲೂ ಉತ್ಸಾಹದಿಂದಲೂ ಹಿಂಬಾಲಿಸಿದ್ದರು. ಅಯೋಧ್ಯೆಯಿಂದ ಮುಂದೆ ಅರ್ಧ ಯೋಜನ ಹೋದಬಳಿಕ ರಾಮನ ಈ ಮೆರವಣಿಗೆ ಪಶ್ಚಿಮಕ್ಕೆ ತಿರುಗಿತು. ಅಲ್ಲಿ ಸರಯೂ ನದಿ ಹರಿಯುತ್ತಿತ್ತು. ಆಗ ಎಲ್ಲ ದೇವತೆಗಳೂ ಬ್ರಹ್ಮದೇವರೂ ಶ್ರೀರಾಮ ಭಗವಂತನ ದರ್ಶನಕ್ಕಾಗಿ ಬಂದರು. ಸಹಸ್ರಾರು ದಿವ್ಯವಿಮಾನಗಳು ವೈಕುಂಠಲೋಕದಿಂದ ಆಗಮಿಸಿ ಮುಗಿಲು ಮಂಟಪವನ್ನೆಲ್ಲ ವ್ಯಾಪಿಸಿ ನಿಂತವು. ಅವುಗಳ ದಿವ್ಯಕಾಂತಿಯಿಂದ ಆಗಸದ

ಅಂಗಳವೆಲ್ಲವೂ ತೇಜೋಭಾಸುರವಾಗಿ ಮಿಂಚತೊಡಗಿತು. ಮಂದಮಾರುತವು ತನ್ನ ಸುಗಂಧ ಸ್ಪಂದನದಿಂದ ಎಲ್ಲರಿಗೂ ಆನಂದವನ್ನು ಉಂಟು ಮಾಡುತ್ತಿತ್ತು. ಮರ್ಯಾದಾ ಪುರುಷೋತ್ತಮ ಶ್ರೀರಾಮಚಂದ್ರನು ತನ್ನ ಪಾದದಿಂದ ಸರಯೂ ಜಲವನ್ನು ಸ್ಪರ್ಶ ಮಾಡಿದನು.

ಆಗ ಬ್ರಹ್ಮದೇವರು ಮುಂದೆ ಬಂದು ನಮಸ್ಕರಿಸಿ ಎರಡೂ ಕೈಗಳನ್ನು ಜೋಡಿಸಿ ಭಗವಾನ್ ಶ್ರೀರಾಮಚಂದ್ರ ಪ್ರಭುವನ್ನು ಸ್ತೋತ್ರ ಮಾಡಿದರು. ''ಪರಬ್ರಹ್ಮ ರೂಪಿಯಾದ ಶ್ರೀರಾಮನೇ ನಿನಗೆ ನಮಸ್ಕಾರ. ಹದಿನಾಲ್ಕು ಲೋಕಗಳಿಗೆಲ್ಲ ನೀನೊಬ್ಬನೇ ಪತಿ. ನೀನೇ ಗತಿ. ನಿನ್ನ ಮಹಿಮೆಯನ್ನು ಹಾಗೂ ಸ್ವರೂಪವನ್ನು ಸಂಪೂರ್ಣವಾಗಿ ಯಾರೂ ತಿಳಿಯಲಾರರು. ಈಗ ನಿನಗೆ ಯೋಗ್ಯವೆನಿಸಿದ ರೂಪವನ್ನು ನೀನು ಸ್ವೀಕರಿಸಬಹುದು.'' ಹೀಗೆ ಬ್ರಹ್ಮದೇವರು ಸ್ತೋತ್ರ ಮಾಡಿದ ಬಳಿಕ ಭಗವಾನ್ ಶ್ರೀರಾಮಚಂದ್ರನು ತನ್ನ ಮೂಲ ಸ್ವರೂಪವಾದ ಶ್ರೀನಾರಾಯಣ ದೇಹದೊಡನೆ ತನ್ನ ಮೂವರೂ ಸಹೋದರರ ಜೊತೆಗೆ ಏಕೀಭೂತನಾದನು. ಅನಂತರ ಎಲ್ಲ ದೇವತೆಗಳೂ ನೋಡುತ್ತಿರುವಂತೆಯೇ ರಾಮ ರೂಪವು ಅದೃಶ್ಯವಾಗಿ ಶ್ರೀಮಹಾವಿಷ್ಣು ಸ್ವರೂಪದಿಂದ ಎಲ್ಲರ ಕಣ್ಣಿಗೂ ಗೋಚರನಾಗಿ ನಿಂತುಕೊಂಡನು. ಆಗ ಎಲ್ಲ ದೇವತೆಗಳೂ ಆ ಮಹಾವಿಷ್ಣುವಿನ ಪೂಜೆಯನ್ನು ಮಾಡಿದರು. ಅನಂತರ ಮಹಾವಿಷ್ಣುವು ಬ್ರಹ್ಮದೇವನನ್ನು ಕರೆದು ''ನನ್ನನ್ನು ಬೆಂಬತ್ತಿ ಬಂದ ಈ ಎಲ್ಲ ಭಕ್ತ ಜನರಿಗೆ ಉತ್ತಮ ಲೋಕವನ್ನು ಕೊಡು'' ಎಂದು ಆಜ್ಞೆ ಇತ್ತ.

'ಅಪ್ಪಣೆ' ಎಂದು ತಲೆಬಾಗಿ ನುಡಿದು ಬ್ರಹ್ಮದೇವರು ಅಲ್ಲಿ ನೆರೆದ ಜನರಿಗೆಲ್ಲ ಹೇಳಿದರು. ''ಈ ಸ್ವರ್ಗದ್ವಾರ ತೀರ್ಥದಲ್ಲಿ ಶ್ರೀರಾಮ ಚಿಂತನ ಮಾಡುತ್ತ ಪ್ರಾಣಾರ್ಪಣ ಮಾಡಿ ದೇಹಬಿಟ್ಟವರಿಗೆಲ್ಲ ಸಾಂತಾನಿಕ ಲೋಕದಲ್ಲಿ ಸ್ವರೂಪಾನಂದದ ಆವಿರ್ಭಾವ ವಾಗುವುದು. ಸಾಂತಾನಿಕ ಲೋಕ ನನ್ನ ಸತ್ಯಲೋಕದ ಮೇಲೆ ಇದೆ. ಕಲ್ಪಾವಸಾನದ ವರೆಗೆ ಅಲ್ಲಿ ಶ್ರೀರಾಮನ ಸಂತತ ಚಿಂತನ ಮಾಡುತ್ತ ಇದ್ದು ಕೊನೆಗೆ ಬ್ರಹ್ಮದೇವರೊಂದಿಗೆ ಅವರೆಲ್ಲರಿಗೂ ಮೋಕ್ಷ ಪ್ರಾಪ್ತಿಯಾಗುವದು.'' ಬ್ರಹ್ಮದೇವರು ಹೀಗೆ ಹೇಳಿದ ಬಳಿಕ ಗೋಪ್ರತಾರ ತೀರ್ಥದ ನೀರೆಲ್ಲವೂ ಸೂಸಿ ಸರಯೂ ನದಿಯಲ್ಲಿ ಹರಿಯಿತು. ಅದರಿಂದ ಸರಯೂ ನದಿಗೆ ಮಹಾಪೂರ ಬಂದಂತಾಗಿ ಅದು ತುಂಬಿ ಸೂಸಿ ಹರಿಯತೊಡಗಿತು. ಆಗ ನಿಜವಾದ ರಾಮಭಕ್ತರಾದ ನರರೂ ಪಶುಪಕ್ಷಿಗಳೂ, ಕರಡಿಗಳೂ, ಕೋತಿಗಳೂ ದೈತ್ಯರೂ ಎಲ್ಲರೂ ಆನಂದದಿಂದ ಸರಯೂ ನದಿಯ ಆ ಮಹಾಪೂರದಲ್ಲಿ ಹಾರಿಕೊಂಡು ಪ್ರಾಣಾರ್ಪಣ ಗೈದು ನರದೇಹಗಳನ್ನು ತ್ಯಜಿಸಿದರು. ಅವರೆಲ್ಲರೂ ದಿವ್ಯದೇಹವನ್ನು ಧಾರಣಮಾಡಿ ವೈಕುಂಠ ಲೋಕದ ವಿಮಾನಗಳಲ್ಲಿ ಹೋಗಿ ಕುಳಿತರು. ಬ್ರಹ್ಮದೇವರ ಆದೇಶದಂತೆ ಸಾಂತಾನಿಕ ಲೋಕಕ್ಕೆ ಪ್ರಯಾಣಿಸಿದರು. ಬ್ರಹ್ಮದೇವರ ಆದೇಶದಂತೆ ಸಾಂತಾನಿಕ ಲೋಕಕ್ಕೆ ಹೋಗಿ ಅಲ್ಲಿ ಈ ಪುಣ್ಯಜೀವಿಗಳು ಸಂತತವೂ ಭಗವಂತನಾದ ಶ್ರೀರಾಮಚಂದ್ರನ ನಿರಂತರ ಭಜನ, ಧ್ಯಾನ, ಚಿಂತನಗೈಯುತ್ತ ಬ್ರಹ್ಮಾನಂದ ಸಗಂಧ ಎಂದರೆ ಸಮಾನವಾದ ಆನಂದವನ್ನು ಅನುಭವಿಸುತ್ತ ವಾಸಮಾಡಿದರು. ಶ್ರೀಮನ್ನಾರಾಯಣ ಸ್ವರೂಪಿಯಾದ ಶ್ರೀರಾಮಚಂದ್ರ ಪ್ರಭುವು ತನ್ನ ಪಾರ್ಷದರೊಂದಿಗೆ ತನ್ನ ವೈಕುಂಠಲೋಕಕ್ಕೆ ಪ್ರಯಾಣ ಮಾಡಿದನು.

ಹೀಗೆ ಎಲ್ಲರನ್ನೂ ಸಂಸಾರದಿಂದ ತಾರಣ ಮಾಡಿಸಿದ್ದರಿಂದ ಈ ತೀರ್ಥಕ್ಕೆ ಗೋಪ್ರತಾರ ತೀರ್ಥ ಎಂದು ಹೆಸರು ಬಂದಿತು. ಈ ಗೋಪ್ರತಾರ ತೀರ್ಥದಲ್ಲಿ

ಶ್ರೀವಿಷ್ಣುವಿನ ನಿತ್ಯ ಸನ್ನಿಧಾನವಿದ್ದುದು ನಿಶ್ಚಿತ. ಇದರಲ್ಲಿ ಸ್ನಾನ ಮಾಡಿದವರು ಇಂದಿಗೂ ಅಂದಿನಂತೆ ದಿವ್ಯವಾದ ಶ್ರೀಹರಿ ಸ್ಥಾನವನ್ನು ಸೇರುತ್ತಾರೆ. ವಿಶೇಷವಾಗಿ ಕಾರ್ತಿಕ ಮಾಸದಲ್ಲಿ ಹುಣ್ಣಿಮೆಯದಿನ ಇದರಲ್ಲಿ ಸ್ನಾನಮಾಡಿ ಅನ್ನ, ಸುವರ್ಣ, ವಸ್ತ್ರ, ಮುಂತಾದವುಗಳನ್ನು ದಾನ ಮಾಡಿದರೆ ಹಾಗೂ ಶ್ರೀರಾಮಚಂದ್ರ, ಸೀತಾದೇವಿಯರನ್ನ ಭಕ್ತಿಪೂರ್ವಕವಾಗಿ ವಿಧ್ಯುಕ್ತ ಪ್ರಕಾರದಿಂದ ಪೂಜೆ ಮಾಡಿದರೆ ಸರ್ವಪಾಪ ಪರಿಹಾರವಾಗಿ ಸಾಯುಜ್ಯ ಮೋಕ್ಷ ಪ್ರಾಪ್ತಿಯು ನಿಶ್ಚಿತವಾಗಿಯೂ ಆಗುವದು.

## ಕ್ಷೀರೋದಕ ತೀರ್ಥದ, ಬೃಹಸ್ಪತಿಕುಂಡ ರುಕ್ಮಿಣೀ ಕುಂಡಗಳ ಮಹಾತ್ಮ್ಯೆ

**ಸೂತ:-** ಸೀತಾಕುಂಡದಿಂದ ವಾಯವ್ಯ ನಿಟ್ಟಿನಲ್ಲಿ ಇರುತ್ತದೆ ಒಂದು ಪುಣ್ಯತೀರ್ಥ. ಕ್ಷೀರೋದಕ ತೀರ್ಥ ಎಂದು ಅದಕ್ಕೆ ಹೆಸರು. ಪೂರ್ವಕಾಲದಲ್ಲಿ ಸಂತಾನಕ್ಕಾಗಿ ದಶರಥ ಮಹಾರಾಜನು ಯಜ್ಞ ಮಾಡಿದ್ದು ಅದೇ ಸ್ಥಳದಲ್ಲಿ. ಆ ಪುತ್ರಿಕಾಮೇಷ್ಟಿ ಯಜ್ಞದ ಕೊನೆಯಲ್ಲಿ ಅಗ್ನಿನಾರಾಯಣನು ತನ್ನ ಕೈಯಲ್ಲಿ ಹವಿಷ್ಯದಿಂದ ತುಂಬಿದ ಸುವರ್ಣದ ಪಾತ್ರೆಯನ್ನು ಹಿಡಿದು ಎಲ್ಲರ ದೃಷ್ಟಿಗೆ ಗೋಚರನಾದ. ವಿಷ್ಣು ತೇಜದಿಂದ ವ್ಯಾಪ್ತವಾದ ಆ ಹವಿಷ್ಯವನ್ನು ನೀಡಿದ ದಶರಥ ರಾಜನಿಗೆ. ಮಹಾರಾಜನು ಹವಿಷ್ಯವಾದ ಆ ದಿವ್ಯಪಾಯಸವನ್ನು ನಾಲ್ಕು ಭಾಗಮಾಡಿ ಕೊಟ್ಟನು ತನ್ನ ಮೆಚ್ಚಿನ ಮಡದಿಯರಿಗೆ. ಅಗ್ನಿನಾರಾಯಣನು ಪ್ರಸಾದ ರೂಪವಾಗಿ ಆ ಪಾಯಸವನ್ನು ಅಥವಾ ಹವಿಷ್ಯವಾದ ಹಾಲನ್ನು ಮಹಾರಾಜನಿಗೆ ಕೊಡಮಾಡಿದ ಈ ಸ್ಥಳದಲ್ಲಿ ಕ್ಷೀರೋದಕ ಎಂಬ ತೀರ್ಥವು ನಿರ್ಮಿತವಾಗಿದೆ. ಜಿತೇಂದ್ರಿಯನಾದ ಪುರುಷನು ಈ ಕ್ಷೀರೋದಕ ತೀರ್ಥದಲ್ಲಿ ಭಕ್ತಿಯಿಂದ ಸ್ನಾನಮಾಡಿ ಶ್ರೀರಾಮಚಂದ್ರನನ್ನು ಅರ್ಚಿಸಿದರೆ ದಶರಥನಂತೆ ಸತ್ಪುತ್ರರನ್ನು ಪಡೆಯುವನು. ಎಲ್ಲ ಭೋಗ ಭಾಗ್ಯಗಳು ಅವನ ಸ್ವತ್ತಾಗುವವು.

ಇಲ್ಲಿಂದ ನೈಋತ್ಯ ಕೋಣದಲ್ಲಿ ಸರ್ವಪಾಪಗಳನ್ನು ಪರಿಹರಿಸುವ ಪವಿತ್ರ ಜಲವುಳ್ಳ ಬೃಹಸ್ಪತಿಕುಂಡ ಎಂಬ ತೀರ್ಥವು ಶೋಭಿಸುತ್ತಲಿದೆ. ಭಾದ್ರಪದ ಶುಕ್ಲಪಕ್ಷ ಪಂಚಮಿಯಂದು ಈ ಬೃಹಸ್ಪತಿ ಕುಂಡದಲ್ಲಿ ಸ್ನಾನ ದಾನಗಳಿಂದ ವೈಕುಂಠಪ್ರಾಪ್ತಿ. ಇಲ್ಲಿಂದ ಮುಂದೆ ದಕ್ಷಿಣ ದಿಕ್ಕಿನಲ್ಲಿ ಶ್ರೀಕೃಷ್ಣನ ಪಟ್ಟದ ರಾಣಿ ರುಕ್ಮಿಣೀ ದೇವಿಯು ಸ್ವಯಂ ನಿರ್ಮಾಣ ಮಾಡಿದ ರುಕ್ಮಿಣೀಕುಂಡ ಎಂಬ ತೀರ್ಥವು ಸುಪ್ರಸಿದ್ಧವಾಗಿರುತ್ತವೆ. ತನ್ನ ಪ್ರಾಣಪ್ರಿಯ ಪ್ರೇಯಸಿಯಾದ ರುಕ್ಮಿಣಿದೇವಿಯ ಮೇಲಿನ ಪ್ರೀತಿಯಿಂದ ಶ್ರೀಕೃಷ್ಣ ಪರಮಾತ್ಮನು ಯಾವಾಗಲೂ ಈ ಕುಂಡದಲ್ಲಿ ವಾಸಮಾಡಿರುತ್ತಾನೆ. ಜಿತೇಂದ್ರಿಯನಾದ ಮನುಷ್ಯನು ಕಾರ್ತಿಕ ಮಾಸದಲ್ಲಿ ಅದರಲ್ಲಿಯೂ ಕೃಷ್ಣಪಕ್ಷ ನವಮೀ ದಿನದಂದು ಇಲ್ಲಿ ಸ್ನಾನಮಾಡಿ ಶ್ರೀಹರಿಯ ಪೂಜೆ, ವಿಷ್ಣು ಸೂಕ್ತದಿಂದ ಹೋಮ, ಯಥಾಶಕ್ತಿ ದಾನ ಹಾಗೂ ಶ್ರೀಹರಿಯ ಧ್ಯಾನ, ಮಾಡಿದರೆ ಈ ಲೋಕದಲ್ಲಿ ಭೋಗಭಾಗ್ಯಗಳನ್ನೂ, ಪರಲೋಕದಲ್ಲಿ ಮೋಕ್ಷ ಸುಖವನ್ನೂ ಹೊಂದುತ್ತಾನೆ. ಈ ರುಕ್ಮಿಣೀ ಕುಂಡದಿಂದ ಮುಂದೆ ವಾಯವ್ಯ ನಿಟ್ಟಿನಲ್ಲಿ ಧನಯಕ್ಷ ಎಂಬ ಸುಪ್ರಸಿದ್ಧವಾದ ತೀರ್ಥವು ಇರುತ್ತದೆ. ಹಿಂದೆ ರಾಜಸೂಯ ಯಜ್ಞವನ್ನು ಮಾಡುತ್ತಲಿದ್ದ ಹರಿಶ್ಚಂದ್ರ ದೊರೆಯಿಂದ ವಿಶ್ವಾಮಿತ್ರರು ಸಂಪೂರ್ಣ ಸಾಮ್ರಾಜ್ಯವನ್ನು ದಕ್ಷಿಣಾ ರೂಪದಿಂದ ಸ್ವೀಕರಿಸಿದರು. ವಿರಕ್ತರಾದ ಆ ಮುನಿಗಳಿಗೆ ದ್ರವ್ಯದ ಆಶೆ ಇರಲಿಲ್ಲ. ಛಲದಿಂದ ಸ್ವೀಕರಿಸಿದ ಆ ಎಲ್ಲ ರಾಜ್ಯವನ್ನು ಹಾಗೂ ಅಪಾರ

ಐಶ್ವರ್ಯವನ್ನು ಓರ್ವ ಯಕ್ಷನ ರಕ್ಷಣೆಯಲ್ಲಿ ಒಪ್ಪಿಸಿ ಹೊರಟು ಹೋದರು. ಪ್ರಾಮಾಣಿಕನಾದ ಆ ಯಕ್ಷನು ವಿಶ್ವಾಮಿತ್ರರು ತನಗೆ ಇತ್ತ ಆ ಅಕ್ಷಯ ನಿಧಿಯನ್ನು ತಾನು ಉಪಯೋಗಿಸದೇ ಇಲ್ಲಿಯೇ ರಕ್ಷಣೆ ಮಾಡಿಕೊಂಡು ವಾಸವಾಗಿದ್ದನು. ಇದನ್ನು ನೋಡಿ ಪ್ರಸನ್ನರಾದ ವಿಶ್ವಾಮಿತ್ರ ಮಹರ್ಷಿಗಳು ಆ ಯಕ್ಷನಿಗೆ ಆಶೀರ್ವಾದ ಮಾಡಿ ನುಡಿದರು. ''ಯಕ್ಷ, ಈ ತೀರ್ಥವು ಇನ್ನು ಮುಂದೆ ಧನಯಕ್ಷ ಎಂಬ ನಿನ್ನ ಹೆಸರಿನಿಂದ ಪ್ರಸಿದ್ಧವಾಗಲಿ. ನವನಿಧಿಗಳು ಈ ತೀರ್ಥದಲ್ಲಿಯೇ ಇರುತ್ತವೆ.

**''ಮಹಾಪದ್ಮ: ತಥಾ ಪದ್ಮ: ಶಂಖೋ ಮಕರ ಕಚ್ಛಪೌ ॥**
**ಮುಕುಂದ ಕುಂದ ನೀಲಾಶ್ಚ ಖರ್ವಶ್ಚ ನಿಧಯೋ ನವ ॥**

ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ನೀಲ, ಖರ್ವ ಈ ಒಂಭತ್ತು ನಿಧಿಗಳು ನವನಿಧಿಗಳು ಎಂದು ಪ್ರಸಿದ್ಧವಾಗಿದ್ದು ಈ ಕುಂಡದಲ್ಲಿ ನೆಲೆಸಿರುತ್ತವೆ. ಈ ಧನಯಕ್ಷ ಕುಂಡದಲ್ಲಿ ಇರುವ ನವನಿಧಿಗಳ ಅಧಿದೇವತೆಯಾದ ನಿಧಿಲಕ್ಷ್ಮಿಯನ್ನು ಪೂಜೆ ಮಾಡಬೇಕು. ಮಾಘ ಕೃಷ್ಣ ಚತುರ್ದಶಿಯಂದು ಇಲ್ಲಿ ಜಾತ್ರೆ ಕೂಡಿಸಿ ಸ್ನಾನ, ಪಿತೃತರ್ಪಣ ಮಾಡುವದರಿಂದ ದಿವ್ಯಗತಿ ಪ್ರಾಪ್ತವಾಗುವದು. ಈ ಧನಯಕ್ಷ ತೀರ್ಥದಿಂದ ಉತ್ತರಕ್ಕೆ ವಶಿಷ್ಠಕುಂಡ ಎಂಬ ಹೆಸರಿನ ಪಾಪವನ್ನು ಕಳೆಯುವ ತೀರ್ಥವು ಇರುತ್ತದೆ. ತಪೋನಿಧಿಗಳಾದ ವಶಿಷ್ಠರು ತಮ್ಮ ಧರ್ಮಪತ್ನಿ ಅರುಂಧತಿಯೊಂದಿಗೆ ಇಲ್ಲಿ ನಿತ್ಯನಿವಾಸಗೈದಿದ್ದಾರೆ. ಈ ತೀರ್ಥದಲ್ಲಿ ಸ್ನಾನ ಹಾಗೂ ಈ ಧರ್ಮಿಷ್ಠ ದಂಪತಿಗಳ ಪೂಜೆ ಮತ್ತು ದಾನ ಮಾಡಿದವರು ವಶಿಷ್ಠರಂತೆ ದಿವ್ಯಜ್ಞಾನವನ್ನು ಪಡೆಯುವರು. ವಶಿಷ್ಠ ಕುಂಡದಿಂದ ಮುಂದೆ ಪಶ್ಚಿಮ ದಿಕ್ಕಿನಲ್ಲಿ ಸಾಗರ ಕುಂಡ ಎಂಬ ತೀರ್ಥವಿದೆ. ಇಲ್ಲಿ ಸ್ನಾನ ಮಾಡುವದರಿಂದ ಮಾನವರ ಕಾಮನಾಪೂರ್ತಿ ಆಗುವದು. ಈ ಸಾಗರ ತೀರ್ಥದಿಂದ ಮುಂದೆ ನೈಋತ್ಯ ಕೋಣದಲ್ಲಿ ಅರವತ್ತುನಾಲ್ಕು ಯೋಗಿನಿಯರು ವಾಸಮಾಡಿದ ಯೋಗಿನೀಕುಂಡ ಎಂಬ ತೀರ್ಥವಿರುತ್ತದೆ. ಆ ಯೋಗಿನೀ ಕುಂಡದಿಂದ ಪೂರ್ವದಿಕ್ಕಿನಲ್ಲಿ ಊರ್ವಶೀ ಕುಂಡವು ಇರುತ್ತದೆ. ಇಲ್ಲಿ ಸ್ನಾನ ಹಾಗೂ ವಿಷ್ಣುಪೂಜೆ ಯಿಂದ ವಿಷ್ಣುಲೋಕ ಪ್ರಾಪ್ತಿ. ಊರ್ವಶೀ ಕುಂಡದ ದಕ್ಷಿಣಕ್ಕೆ ಘೋಷಾರ್ಕ ಎಂಬ ತೀರ್ಥವಿದೆ. ಇಲ್ಲಿ ಸ್ನಾನದಾನಗಳಿಂದ ಮಾನವನು ಸೂರ್ಯಲೋಕದಲ್ಲಿ ಸುಪ್ರತಿಷ್ಠಿತ ನಾಗುವನು. ರವಿವಾರ ಸಪ್ತಮಿಯ ಯೋಗವಿದ್ದಾಗ ಇಲ್ಲಿಯ ಸ್ನಾನದಿಂದ ಕುಷ್ಠ, ದಮ್ಮು, ಕೆಮ್ಮು, ಹೃದಯರೋಗ, ಶೀತ ಜ್ವರ ಮುಂತಾದ ರೋಗಗಳೆಲ್ಲವೂ ಬಿಟ್ಟು ಹೋಗುವವು.

ಘೋಷ ಎಂಬ ರಾಜನು ಇಲ್ಲಿಗೆ ಬಂದು ಸ್ನಾನ ಸಂಧ್ಯೆ ಹಾಗೂ ದೇವತಾರ್ಚನೆ ಗಳನ್ನು ಮಾಡುತ್ತಲಿರುವ ಮುನಿಗಳನ್ನು ಕಣ್ಣಿನಿಂದ ನೋಡಿದ. ಅದರಂತೆ ತಾನೂ ಇಲ್ಲಿ ಸ್ನಾನಮಾಡಿ ಹರಿಪೂಜೆಗೈದ. ಕೂಡಲೇ ಪ್ರಾಪ್ತವಾಯಿತು ಅವನಿಗೆ ದಿವ್ಯದೇಹ. ಆನಂದ ತುಂದಿಲವಾಯಿತು ಅವನ ಮನಸ್ಸು. ಭಕ್ತಿಯಿಂದ ಅವನು ತನಗೆ ದಿವ್ಯ ದೇಹವನ್ನು ದಯಪಾಲಿಸಿದ ಸೂರ್ಯದೇವನನ್ನು ವಂದಿಸಿ ಸ್ತೋತ್ರವನ್ನು ಮಾಡಿದ. ಭಾವಭರಿತವೂ ಅರ್ಥಪೂರ್ಣವೂ ಆದ ಘೋಷರಾಜನ ಸ್ತೋತ್ರದಿಂದ ಸೂರ್ಯನಾರಾಯಣನು ಪ್ರಸನ್ನನಾಗಿ ಅಲ್ಲಿಯೇ ಪ್ರತ್ಯಕ್ಷನಾದ ಮತ್ತು ಕೈ ಜೋಡಿಸಿ ಸ್ತೋತ್ರ ಮಾಡುತ್ತ ನಿಂತುಕೊಂಡ ಆ ಘೋಷರಾಜನಿಗೆ ಅನುಗ್ರಹಗೈಯುತ್ತ ನುಡಿದ- ''ರಾಜೇಂದ್ರನೇ, ನಿನ್ನ

ಈ ಸ್ತೋತ್ರದಿಂದ ನಾನು ಸಂತುಷ್ಟನಾಗಿದ್ದೇನೆ. ನಿನ್ನ ಮನೋರಥಗಳನ್ನು ಪೂರ್ಣ ಮಾಡುತ್ತೇನೆ. ಇಂದಿನಿಂದ ಈ ತೀರ್ಥವು ನಿನ್ನ ಹೆಸರಿನಿಂದಲೇ ಪ್ರಖ್ಯಾತವಾಗುವದು ಈ ಪೃಥ್ವೀತಳದಲ್ಲಿ. ಇಲ್ಲಿ ಸ್ನಾನ ಮಾಡಿದವರ ಮನಃ ಕಾಮನೆಗಳೆಲ್ಲವೂ ನನ್ನ ವರದಾನದಿಂದ ಈಡೇರುವವು." ಹೀಗೆ ವರವನ್ನು ಕೊಟ್ಟು ಅಂತರ್ಧಾನ ಹೊಂದಿದ ಸೂರ್ಯನಾರಾಯಣ.

ಅನಂತರ ಆ ಘೋಷರಾಜನು ದಿವ್ಯವಾದ ಸೂರ್ಯನ ಮೂರ್ತಿಯನ್ನು ಇಲ್ಲಿ ಸ್ಥಾಪನೆಗೈದ. ಅಂದಿನಿಂದ ಈ ತೀರ್ಥವು ಘೋಷಾರ್ಕತೀರ್ಥ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ.

**ಸೂತ:-** ಘೋಷಾರ್ಕ ತೀರ್ಥದಿಂದ ಮುಂದೆ ಪಶ್ಚಿಮ ದಿಕ್ಕಿನಲ್ಲಿ ರತಿಕುಂಡ. ಕುಸುಮಾಯುಧ ಕುಂಡ ಎಂಬ ಎರಡು ತೀರ್ಥಗಳಿವೆ. ಇಲ್ಲಿ ಸ್ನಾನಮಾಡುವುದರಿಂದ ನಾರಿಯರಿಗೆ ರತಿಯಂಥ ಸುಂದರ ರೂಪವು. ಪುರುಷರಿಗೆ ಕಾಮನಂತೆ ಸುಂದರ ಶರೀರವು ಪ್ರಾಪ್ತವಾಗುವವು. ಅಲ್ಲಿಂದ ಮುಂದೆ ಪಶ್ಚಿಮ ನಿಟ್ಟಿನಲ್ಲಿ ಮಂತ್ರೇಶ್ವರ ತೀರ್ಥವು ಇರುತ್ತದೆ. ಅಲ್ಲಿ ಇರುವ ಮಂತ್ರೇಶ್ವರ ಎಂಬ ಮಹಾದೇವರ ದರ್ಶನ ಹಾಗೂ ಅದರ ಉತ್ತರಕ್ಕಿರುವ ಸುಂದರ ಕಮಲಗಳಿರುವ ಸರೋವರದಲ್ಲಿ ಸ್ನಾನ ದಾನಗಳಿಂದ ಅನಂತ ಪುಣ್ಯಪ್ರಾಪ್ತಿ. ಅಲ್ಲಿಂದ ಮುಂದೆ ಪೂರ್ವದಿಕ್ಕಿನಲ್ಲಿ ಮಹಾರಥ ಎಂಬ ಶ್ರೇಷ್ಠ ತೀರ್ಥವಿರುತ್ತದೆ. ಭಾದ್ರಪದ ಕೃಷ್ಣ ಚತುರ್ದಶಿಯಂದು ಅಲ್ಲಿ ವಾರ್ಷಿಕ ಜಾತ್ರೆಯು ಸೇರುತ್ತಲಿದ್ದು ಅಲ್ಲಿ ಸ್ನಾನ, ದಾನ, ಹರಿಪೂಜೆ ಮಾಡುವವರ ಮನೋರಥಗಳೆಲ್ಲ ಪೂರ್ಣವಾಗುವವು. ಅಲ್ಲಿಂದ ಮುಂದೆ ನೈಋತ್ಯಕೋಣದಲ್ಲಿ ದುರ್ಭರ ಎಂಬ ಸರೋವರವು ಇರುತ್ತದೆ. ಅಲ್ಲಿ ಸ್ನಾನ ಮಾಡಿದವರು ಪಾರ್ವತೀ ಪರಮೇಶ್ವರರ ಕೈಲಾಸಲೋಕದಲ್ಲಿ ವಾಸ ಮಾಡುವರು.

ಈ ದುರ್ಭರ ತೀರ್ಥದಿಂದ ಮುಂದೆ ಈಶಾನ್ಯ ಕೋಣದಲ್ಲಿ ಮಹಾವಿದ್ಯಾ ಎಂಬ ತೀರ್ಥ. ಇದರ ದರ್ಶನ ಮಾತ್ರದಿಂದಲೇ ಮಾನವರ ಮನೋರಥ ಸಿದ್ಧಿ. ಸುಪ್ರಸಿದ್ಧವಾದ ಸಿದ್ಧಪೀಠವಿರುವದು ಈ ಮಹಾವಿದ್ಯಾ ತೀರ್ಥದ ತೀರದಲ್ಲಿಯೇ. ಇಲ್ಲಿ ಶಿವ, ಶಕ್ತಿ, ಗಣಪತಿ ಹಾಗೂ ವಿಷ್ಣು ಮುಂತಾದ ದೇವತೆಗಳ ವೇದೋಕ್ತ ಮಂತ್ರಗಳನ್ನು ಏಕಾಗ್ರ ಮನಸ್ಸಿನಿಂದ ಜಪ ಮಾಡುವವರು ಸಿದ್ಧಿಯನ್ನು ಪಡೆಯುತ್ತಾರೆ. ಅಶ್ವೀನ ಶುಕ್ಲಪಕ್ಷದ ನವರಾತ್ರಿ ಕಾಲದಲ್ಲಿ ಈ ಮಹಾವಿದ್ಯಾ ತೀರ್ಥದ ಯಾತ್ರೆ ಮಾಡಿದವರು ಮುಕ್ತರಾಗುವರು ಸರ್ವಪಾಪಗಳಿಂದ. ಇದರ ಸಮೀಪದಲ್ಲಿಯೇ ಕ್ಷೀರಕುಂಡ ತೀರ್ಥದ ದಂಡೆಯ ಮೇಲೆ ದುಗ್ಧೇಶ್ವರ ಎಂಬ ಮಹಾದೇವರ ಮಂದಿರವಿರುತ್ತದೆ. ಈ ಕ್ಷೀರ ಸಂಗಮಕುಂಡವು ಸೀತಾದೇವಿಗೆ ಹೆಚ್ಚಿನ ಮೆಚ್ಚಿನ ತೀರ್ಥವಾಗಿತ್ತು. ಆದುದರಿಂದ ಸೀತಾಕುಂಡ ಎಂದು ಇದಕ್ಕೆ ಹೆಸರು ಬಂದಿದೆ. ಈ ಸೀತಾಕುಂಡದಲ್ಲಿ ಸ್ನಾನಮಾಡಿ ಶ್ರೀಸೀತಾ. ಶ್ರೀರಾಮ ಹಾಗೂ ಲಕ್ಷ್ಮಣ ಮತ್ತು ದುಗ್ಧೇಶ್ವರ ನಾಥರನ್ನು ಪೂಜೆ ಮಾಡುವದರಿಂದ ಮನುಷ್ಯರ ಮನೋರಥಗಳೆಲ್ಲವೂ ಪೂರ್ಣವಾಗುತ್ತವೆ. ಜ್ಯೇಷ್ಠ ಮಾಸ ಚತುರ್ದಶಿ ದಿನದಂದು ಅಲ್ಲಿ ವಾರ್ಷಿಕೋತ್ಸವವು ನೆರೆಯುವದು. ಅದರ ಪೂರ್ವಕ್ಕೆ ಸುಗ್ರೀವನು ನಿರ್ಮಿಸಿದ ತಪೋನಿಧಿ ತೀರ್ಥವು ವಿಶ್ವವಿಖ್ಯಾತವಾಗಿರುತ್ತದೆ. ಅಲ್ಲಿಂದ ಪಶ್ಚಿಮಕ್ಕೆ ಹನುಮಂತ ಕುಂಡ.

ಹನುಮಂತ ಕುಂಡದ ಮುಂದೆ ವಿಭೀಷಣ ಕುಂಡ ಎಂಬ ತೀರ್ಥಗಳಿರುತ್ತವೆ. ಈ ಮೂರು ತೀರ್ಥಗಳಲ್ಲಿಸ್ನಾನ, ದಾನ, ಶ್ರೀರಾಮದೇವರ ಪೂಜೆ ಹಾಗೂ ಧ್ಯಾನ ಮಾಡುವದರಿಂದ ಮಾನವರ ಮನಸ್ಸಿನಲ್ಲಿ ಮೂಡಿದ ಬಯಕೆಗಳೆಲ್ಲವೂ ಪೂರ್ಣವಾಗುವವು.

ಹಿಂದೆ ಒಂದಾನೊಂದು ಸಮಯದಲ್ಲಿ ವಿಭೀಷಣನೇ ಮುಂತಾದ ಭಗವದ್ ಭಕ್ತರು ವಸಿಷ್ಠರನ್ನು ಕುರಿತು ''ಅಯೋಧ್ಯಾ ಕ್ಷೇತ್ರದ ದಿವ್ಯವಾದ ಮಹಿಮೆಯನ್ನು ನಮಗೆ ಹೇಳಿರಿ'' ಎಂದು ಬಿನ್ನಹ ಮಾಡಿಕೊಂಡರು. ಅದಕ್ಕೆ ವಶಿಷ್ಠರು ಸಂತಸಪಟ್ಟು ಅಯೋಧ್ಯೆಯ ಮಹಿಮೆಯನ್ನು ವರ್ಣಿಸತೊಡಗಿದರು.

**ವಶಿಷ್ಠ:-** ಈ ಅಯೋಧ್ಯಾ ತೀರ್ಥವು ಅತ್ಯಂತ ರಹಸ್ಯವಾದ ತೀರ್ಥವಾಗಿದೆ. ಇಲ್ಲಿ ಶ್ರೀಹರಿಯು ಸ್ವಸಂತೋಷದಿಂದ ನಿತ್ಯವೂ ನೆಲಿಸಿರುತ್ತಾನೆ. ಇಲ್ಲಿ ಬಂದು ಸ್ನಾನ, ದಾನ ಹಾಗೂ ವಿಷ್ಣು ಪೂಜೆ ಮುಂತಾದ ಸತ್ಕರ್ಮಗಳನ್ನು ಮಾಡಿ ಶ್ರೀಹರಿಗೆ ಅರ್ಪಣ ಮಾಡಿದವರು ದುರ್ಲಭವಾದ ಮೋಕ್ಷವನ್ನು ಪಡೆಯುವರು. ವಿಷಯಗಳಲ್ಲಿ ಆಸಕ್ತರಾಗಿ ಧರ್ಮಮಾರ್ಗ ದಿಂದ ದೂರ ಸರಿದವರೂ ಕೂಡ ಈ ಅಯೋಧ್ಯಾತೀರ್ಥದಲ್ಲಿ ಬಂದು ಸ್ನಾನ ಹಾಗೂ ಶ್ರೀರಾಮನ ಪೂಜೆ ಮಾಡುತ್ತ ಇದೇ ಕ್ಷೇತ್ರದಲ್ಲಿ ಮರಣ ಹೊಂದಿದರೆ ಸಾವಿರ ಜನ್ಮ ಯೋಗಾಭ್ಯಾಸ ಮಾಡಿದರೂ ಯೋಗಿಗಳಿಗೆ ದುರ್ಲಭವಾದ ಮೋಕ್ಷವನ್ನು ಸುಲಭವಾಗಿ ಪಡೆಯುತ್ತಾರೆ.'' ವಶಿಷ್ಠರು ಹೇಳಿದ ಈ ಅಯೋಧ್ಯಾ ಮಾಹಾತ್ಮ್ಯವನ್ನು ಕೇಳಿ ವಿಭೀಷಣ ಮುಂತಾದವರಿಗೆ ಸಂತೋಷವಾಯಿತು.

## ತೀರ್ಥಗಳ ಮಹಿಮೆ ಮತ್ತು ಗ್ರಂಥದ ಉಪಸಂಹಾರ

**ಸೂತ:-** ಈ ಅಯೋಧ್ಯಾ ಕ್ಷೇತ್ರದ ಆಗ್ನೇಯ ಕೋಣದಲ್ಲಿ ಗಯಾ ಕೂಪ ಎಂಬ ತೀರ್ಥವು ಇರುತ್ತದೆ. ಇಲ್ಲಿ ಸ್ನಾನ, ಯಥಾಶಕ್ತಿ ದಾನ, ಪಿತೃಗಳ ಉದ್ದೇಶದಿಂದ ಶ್ರಾದ್ಧ ಮುಂತಾದವುಗಳನ್ನು ಮಾಡುವದರಿಂದ ನರಕದಲ್ಲಿ ಬಿದ್ದ ಪಿತೃಗಳು ಉದ್ಧಾರ ಹೊಂದುತ್ತಾರೆ. ಅಲ್ಲಿಂದ ಮುಂದೆ ಪೂರ್ವ ದಿಕ್ಕಿನಲ್ಲಿ ಪಿಶಾಚ ಮೋಚನ ಎಂಬ ತೀರ್ಥವಿರುತ್ತದೆ. ಅಲ್ಲಿ ಸ್ನಾನ ಮಾಡುವುದರಿಂದ ಪಿಶಾಚಿ ಬಾಧೆಯು ಕೂಡಲೇ ಬಿಟ್ಟು ಹೋಗುವದು. ಅಲ್ಲಿಂದ ಮುಂದೆ ಪೂರ್ವ ದಿಕ್ಕಿನಲ್ಲಿ ಇರುವ ಮಾನಸ ತೀರ್ಥದಲ್ಲಿ ಸ್ನಾನ ಮಾಡುವದರಿಂದ ಮನಸ್ಸಿನಲ್ಲಿ ಇದ್ದದ್ದೆಲ್ಲವೂ ಪೂರ್ಣವಾಗುವವು. ಈ ಮಾನಸ ತೀರ್ಥದ ದಕ್ಷಿಣಕ್ಕೆ ತಮಸಾ ನದಿಯು ಹರಿಯುತ್ತದೆ. ಈ ತಮಸಾ ನದಿಯ ದಂಡೆಯ ಮೇಲೆ ಹಿಂದೆ ಮಾಂಡವ್ಯ, ಗೌತಮ, ಚ್ಯವನ, ಪರಾಶರ ಮುಂತಾದ ಅನೇಕ ಮಹನೀಯರಾದ ಮುನಿ ಮಹರ್ಷಿಗಳು ಆಶ್ರಮ ಕಟ್ಟಿಕೊಂಡು ತಪಸ್ಸುಮಾಡಿ ಸಿದ್ಧಿ ಪಡೆದಿದ್ದಾರೆ. ಇಲ್ಲಿ ಮಾಡಿದ ಸ್ನಾನ, ದಾನ, ಶ್ರಾದ್ಧ ಕ್ರಿಯೆಗಳಿಂದ ಮಾನವರ ಮನಸ್ಸಿನಲ್ಲಿಯ ಮಂಡಿಗೆಗಳೆಲ್ಲವೂ ಸಿದ್ಧಿಸುವವು. ಮಾರ್ಗಶಿರ ಹುಣ್ಣಿಮೆಯ ದಿನದಂದು ಈ ತಮಸಾ ನದಿಯಲ್ಲಿ ಸ್ನಾನದಿಂದ ವಿಶೇಷ ಫಲವುಂಟು. ಈ ತಮಸಾ ನದಿಯ ಉತ್ತರ ಭಾಗದಲ್ಲಿ ಭರತ ಕುಂಡವೆಂಬ ತೀರ್ಥವಿದೆ. ಹಿಂದೆ ಶ್ರೀರಾಮನು ವನವಾಸಕ್ಕೆ ಹೋದ ಬಳಿಕ ಅವನ ತಮ್ಮನಾದ ಭರತನು ''ಶ್ರೀರಾಮನು ವನವಾಸದಿಂದ ಮರಳಿ ಬರುವವರೆಗೆ ಅಯೋಧ್ಯೆಯನ್ನು ನಾನು ಪ್ರವೇಶಿಸುವದಿಲ್ಲ'' ಎಂದು ಪ್ರತಿಜ್ಞೆಗೈದು ಈ ಭರತ ಕುಂಡದ ತೀರದಲ್ಲಿ ಇರುವ ನಂದಿ ಗ್ರಾಮದಲ್ಲಿ ವಾಸಿಸಿದನು. ಅಂದಿನಿಂದ ಇದಕ್ಕೆ ''ಭರತಕುಂಡ'' ಎಂಬ ಹೆಸರು ಬಂದಿತು. ಇದರ ಪಶ್ಚಿಮಕ್ಕೆ ''ಜಟಾಕುಂಡ'' ಎಂಬ ತೀರ್ಥವಿರುತ್ತದೆ.

ಶ್ರೀರಾಮಲಕ್ಷ್ಮಣರು ಹದಿನಾಲ್ಕು ವರ್ಷದ ತಮ್ಮ ವನವಾಸದಿಂದ ಮರಳಿ ಬಂದ ಬಳಿಕ ಇಲ್ಲಿಯೇ ಮುನಿವೇಷದ ತಮ್ಮ ಜಡೆಗಳನ್ನು ತೆಗೆಸಿದರು. ಆದುದರಿಂದ ಇದು 'ಜಟಾ ಕುಂಡ' ಎಂದು ಪ್ರಸಿದ್ಧ ವಾಯಿತು. ಈ ಭರತಕುಂಡ ಹಾಗೂ ಜಟಾಕುಂಡಗಳಲ್ಲಿ ಸ್ನಾನಮಾಡಿ ಶ್ರೀಸೀತಾರಾಮ ಲಕ್ಷ್ಮಣ ಭರತರನ್ನು ಪೂಜಿಸಿದವರ ವಿಷ್ಣುಲೋಕಕ್ಕೆ ಹೋಗುವರು. ಇದರ ಉತ್ತರಕ್ಕೆ ಅಯೋಧ್ಯಾ ಕ್ಷೇತ್ರವನ್ನು ರಕ್ಷಿಸುವ ಗಜೇಂದ್ರನು ಇರುತ್ತಾನೆ. ಅದರ ಪಶ್ಚಿಮ ಭಾಗದಲ್ಲಿ ವೀರ ಪಿಂಡಾರಕ ಸ್ಥಾನವಿದೆ. ಅದರ ಪಶ್ಚಿಮಕ್ಕೆ ವಿಘ್ನೇಶ್ವರ ಮೂರ್ತಿಯಿದೆ. ಈ ಮೂರು ಕ್ಷೇತ್ರಪಾಲಕರನ್ನು ಸರಯೂ ನದಿಯಲ್ಲಿ ಸ್ನಾನ ಮಾಡಿ ಪೂಜೆ ಮಾಡಿದರೆ ಎಲ್ಲ ವಿಘ್ನಗಳೂ ದೂರವಾಗಿ ಮನೋರಥಗಳೆಲ್ಲವೂ ಸಿದ್ಧಿಸುವವು. ಈ ವಿಘ್ನೇಶ್ವರ ದೇವಸ್ಥಾನದಿಂದ ಮುಂದೆ ಈಶಾನ್ಯ ನಿಟ್ಟಿನಲ್ಲಿ ಜನ್ಮ ಸ್ಥಾನ ಎಂಬ ಒಂದು ತೀರ್ಥ ವಿರುತ್ತದೆ. ಇದು ಶ್ರೀರಾಮಚಂದ್ರದೇವರ ಜನ್ಮ ಸ್ಥಳ. ಶ್ರೀರಾಮ ನವಮಿಯ ದಿನದಂದು ಇಲ್ಲಿ ಸ್ನಾನ. ವ್ರತ, ದಾನ ಮತ್ತು ಮಂತ್ರ ಪಾಠಗಳಿಂದ ಜನ್ಮ ಮೃತ್ಯುಗಳ ಭಯದಿಂದ ಮುಕ್ತನಾಗುತ್ತಾನೆ ಮಾನವ. ಬೇರೆ ಕಡೆ ಅಗ್ನಿಹೋತ್ರ ರಾಜಸೂಯ ಮುಂತಾದ ಯಜ್ಞಾನುಷ್ಠಾನಗಳಿಂದ ಬರುವ ಪುಣ್ಯವು ಇಲ್ಲಿಯ ಶ್ರೀರಾಮ ಜನ್ಮಸ್ಥಾನ ದರ್ಶನ ಮಾತ್ರದಿಂದಲೇ ಲಭಿಸುವದು. ಈ ಅಯೋಧ್ಯೆಯ ಉತ್ಸಂಗದ ಅಂಗಳದಲ್ಲಿಯೇ ಹರಿಯುವ ಸರಯೂ ನದಿಯ ದರ್ಶನದಿಂದಲೇ ಮಾನವನು ಮುಕ್ತನಾಗುತ್ತಾನೆ ಜನ್ಮ ಜನ್ಮಾಂತರಗಳ ಪಾಪಗಳಿಂದ. ಈ ಅಯೋಧ್ಯಾ ಕ್ಷೇತ್ರವನ್ನು ದೂರ ದೇಶದಲ್ಲಿ ಇದ್ದಾದರೂ ಸ್ಮರಣ ಮಾಡಿದರೆ ಮನುಷ್ಯರಿಗೆ ಪುನರಾವೃತ್ತಿ ಇಲ್ಲ. ಅಂದರೆ ಮತ್ತೊಮ್ಮೆ ಜನನ ಮರಣದ ಜಂಜಾಟದಲ್ಲಿ ಭಕ್ತರು ಬೀಳುವದಿಲ್ಲ. ಈ ಅಯೋಧ್ಯೆಯ ಸ್ಮರಣದಿಂದ ಸರಯೂ ನದಿಯು ಮೋಕ್ಷದಾಯಕವಾದ ತೀರ್ಥವೆನಿಸಿದೆ. ಇದೊಂದು ಜಲರೂಪವಾದ ಪರಬ್ರಹ್ಮವೇ ಸರಿ ಇಲ್ಲಿಯ ನೀರಿನಲ್ಲಿ ಮೈ ಎದ್ದಿದ ಪಶುಪಕ್ಷಿ ಖಗಮೃಗ ಮುಂತಾದ ಪ್ರಾಣಿಗಳೂ ಕೂಡ ಶ್ರೀರಾಮನ ಅನುಗ್ರಹದಿಂದ ಭವಬಂಧನದಿಂದ ಮುಕ್ತರಾಗಿ ಸ್ವರ್ಗವನ್ನು ಪಡೆಯುತ್ತವೆ. ವಾಸ್ತವಿಕವಾಗಿ ಹೊರಗಿನ ಈ ಬಾಹ್ಯ ತೀರ್ಥದಲ್ಲಿ ಮೈಯನ್ನು ಎದ್ದಿದ ಮಾತ್ರಕ್ಕೆ ಯಾರೂ ಶುದ್ಧವಾಗಲಾರರು. ಭಗವಂತನಲ್ಲಿ ಭಕ್ತಿಯಿಂದ, ಸತ್ಯ, ಅಹಿಂಸೆ, ಭೂತದಯೆ, ಇಂದ್ರಿಯ ನಿಗ್ರಹ, ಕ್ಷಮೆ ಮುಂತಾದ ಸುದ್ಗುಣಗಳಿಂದ ಮಾನವನ ಹೃದಯವೇ ಒಂದು ತೀರ್ಥವಾಗಬೇಕು. ಮನಸ್ಸು ಪರಿಶುದ್ಧವಾಗಿ ಕಾಮ ಕ್ರೋಧಾದಿ ಮಲಗಳಿಂದ ಮುಕ್ತವಾಗಿ ನಿರ್ಮಲವಾಗಿದ್ದರೆ ಅದೇ ಒಂದು ಮಾನಸ ತೀರ್ಥ ಎಂದು ಎನಿಸಲ್ಪಡುವದು.

ಸತ್ಯ ತೀರ್ಥಂ ಕ್ಷಮಾ ತೀರ್ಥಂ ತೀರ್ಥಮಿಂದ್ರಿಯ ನಿಗ್ರಹಃ ॥
ಸರ್ವಭೂತ ದಯಾ ತೀರ್ಥಂ ತೀರ್ಥಾನಾಂ ಸತ್ಯವಾದಿತಾ ॥
ಜ್ಞಾನ ತೀರ್ಥಂ ತಪಸ್ತೀರ್ಥಂ ಕಥಿತಂ ತೀರ್ಥಸಪ್ತಕಂ ॥
ಸರ್ವ ಭೂತ ದಯಾ ತೀರ್ಥೇ ವಿಶುದ್ಧಿರ್ಮನಸೋ ಭವೇತ್ ॥
ನ ತೋಯಪೂತ ದೇಹಸ್ಯ ಸ್ನಾನಮಿತ್ಯಭಿದೀಯತೇ ॥
ಸ ಸ್ನಾತೋ ಯಸ್ಯ ವೈ ಪುಂಸಃ ಸುವಿಶುದ್ಧಂ ಮನೋ ಮತಂ ॥

ಸತ್ಯ ಎಂಬುದೇ ಒಂದು ತೀರ್ಥ. ತಪ್ಪು ಮಾಡಿದವರನ್ನು ಕ್ಷಮಿಸಿಬಿಡುವ ಕ್ಷಮಾಗುಣವು ಇನ್ನೊಂದು ತೀರ್ಥ. ಎಲ್ಲ ಇಂದ್ರಿಯಗಳನ್ನು ನಿಗ್ರಹ ಮಾಡುವುದು

ಮತ್ತೊಂದು ತೀರ್ಥ. ಎಲ್ಲ ಪ್ರಾಣಿಗಳ ಮೇಲೆ ದಯೆ ತೋರುವುದೇ ಮಗದೊಂದು ತೀರ್ಥ. ಸತ್ಯವಾದಿತ್ವವು ಇನ್ನೂ ಒಂದು ಬೇರೆ ತೀರ್ಥ. ಭಗವಂತನ ಮಹಿಮೆಯ ದಿವ್ಯ ಜ್ಞಾನವೆಂಬುದು ಮತ್ತು ಒಂದು ದಿವ್ಯತೀರ್ಥ. ಸಂತತವು ಭಗವತ್ ಚಿಂತನೆ ಎಂಬುದು ಏಳನೆಯ ತೀರ್ಥ. ಹೀಗೆ ಏಳು ತೀರ್ಥಗಳು ಮಾನವನ ಮನೋರಂಗದಲ್ಲಿಯೇ ಇರುತ್ತವೆ. ಸರ್ವಪ್ರಾಣಿಗಳ ಮೇಲೆ ದಯಾಪೂರ್ಣನಾಗಿರುವುದೇ ಮುಖ್ಯವಾದ ತೀರ್ಥ. ಈ ದಯಾತೀರ್ಥದಲ್ಲಿ ಸ್ನಾನಮಾಡಿದರೆ ಮಾನವನ ಮುಖ್ಯವಾದ ಶುದ್ಧಿ. ಬರಿ ಹೊರಗಿನ ನೀರಿನಲ್ಲಿ ದೇಹವನ್ನು ಎದ್ದಿ ತೆಗೆದ ಮಾತ್ರಕ್ಕೆ ಸ್ನಾನವಾಗುವುದಿಲ್ಲ. ಮೈ ಮೇಲಿನ ಕೊಳೆಯನ್ನು ಕಳೆದ ಮಾತ್ರವೇ ಸ್ನಾನವಲ್ಲ. ಮನಸ್ಸಿನ ಕೊಳೆಯನ್ನು ತೊಳೆಯುವುದೇ ನಿಜವಾದ ಸ್ನಾನ. ಮನಃಶುದ್ಧಿಯೇ ತೀರ್ಥಸ್ನಾನದ ನಿಜವಾದ ಶುದ್ಧಿ. ನೀರಿನಲ್ಲಿ ಇರುವ ಮೀನು ಮೊಸಳೆಗಳು ತೀರ್ಥದಲ್ಲಿ ನಿರಂತರವೂ ವಾಸ ಮಾಡುತ್ತವೆ. ಆದರಿಂದ ಆ ಜಲಚರ ಪ್ರಾಣಿಗಳಿಗೆ ಪುಣ್ಯವೂ ಬರುವುದಿಲ್ಲ. ಸ್ವರ್ಗವೂ ದೊರಕುವುದಿಲ್ಲ. ಮೇಲೆ ಹೇಳಿದ ಸತ್ಯಭೂತ ದಯಾ ಮುಂತಾದ ತೀರ್ಥಗಳಲ್ಲಿ ಸ್ನಾನಪೂರ್ವಕವಾಗಿ ನಿರ್ಮಲವಾದ ಮನಸ್ಸು ಮಾತ್ರ ನಿರ್ಮಲ ಸ್ನಾನದ ಫಲವನ್ನು ಪಡೆಯುತ್ತದೆ. ವಿಷಯಗಳಲ್ಲಿ ಆಸಕ್ತಿ, ಕಾಮ, ಕ್ರೋಧ, ಲೋಭ, ಸ್ವಾರ್ಥ, ಅಸೂಯೆ ಮುಂತಾದವುಗಳು ಮನಸ್ಸಿನ ಕೊಳೆ ಎನಿಸುವವು. ಇವನ್ನೆಲ್ಲ ತೊಳೆದುಕೊಂಡು ನಿರ್ಮಲವಾದ ಅಂತಃಕರಣ ದಿಂದ ನೀಡಿದ ದಾನ, ಮಾಡಿದ ಯಜ್ಞ, ಅನುಷ್ಠಿಸಿದ ತಪಸ್ಸು. ಆಚರಿಸಿದ ಪೂಜೆ, ಸೇವಿಸಿದ ತೀರ್ಥ, ಗೈದ ವೇದಾಧ್ಯಯನ ಇವೆಲ್ಲವೂ ನಿಜವಾದ ತೀರ್ಥವೆನಿಸುತ್ತವೆ. ಎಲ್ಲ ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಂಡ ಪುರುಷನು ನೆಲೆಸಿದ ನೆಲವೇ ನೈಮಿಷ. ವಾಸಿಸಿದ ಸ್ಥಳವೇ ಕುರುಕ್ಷೇತ್ರ. ಇದ್ದ ಪ್ರದೇಶವೇ ಪುಷ್ಕರ.

**ಸೂತ:-** ಯಾವ ಮನುಷ್ಯನು ಪವಿತ್ರವಾದ ಮನಸ್ಸಿನಿಂದ ಈ ಅಯೋಧ್ಯಾ ಕ್ಷೇತ್ರದ ಮಹಿಮೆಯನ್ನು ಪಠಿಸುವನೋ ಅಥವಾ ಶ್ರವಣ ಮಾಡುವನೋ ಅವನಿಗೆ ಶ್ರೀಹರಿಯ ಪರಮಪ್ರಸಾದದಿಂದ ದಿವ್ಯ ಸದ್ಗತಿಯು ಪ್ರಾಪ್ತವಾಗುವುದು. ದೂರ ದೇಶದಲ್ಲಿದ್ದರೂ ಈ ಅಯೋಧ್ಯಾ ಕ್ಷೇತ್ರದ ಮಹಿಮೆಯನ್ನು ಕೇಳಿ ತಾವು ಸ್ವಯಂ ಇಲ್ಲಿಗೆ ಬರಬೇಕು.

ಇಲ್ಲಿಯ ಎಲ್ಲ ಸಂಗಮತೀರ್ಥಗಳಲ್ಲಿ ಸ್ನಾನಮಾಡಿ ಶ್ರೀ ವಿಷ್ಣು ಹರಿಯ ದರ್ಶನ ವನ್ನು ತೆಗೆದುಕೊಳ್ಳಬೇಕು. ಅನಂತರ ಬ್ರಹ್ಮಕುಂಡ ಚಕ್ರತೀರ್ಥಗಳಲ್ಲಿ ಸ್ನಾನ ಮಾಡಿ ಚಕ್ರಹರಿ, ಧರ್ಮಹರಿ ಎಂಬ ಭಗವಾನ್ ಮೂರ್ತಿಗಳ ದರ್ಶನ ಮಾಡಿಕೊಳ್ಳಬೇಕು.

ಮರುದಿನ ಪ್ರಾತಃಕಾಲದಲ್ಲಿ ಎದ್ದು ಸ್ವರ್ಗದ್ವಾರ ತೀರ್ಥದಲ್ಲಿ ಸ್ನಾನಮಾಡಿ ಅಯೋಧ್ಯಾಪುರಿಯ ದರ್ಶನ ಮಾಡಿಕೊಳ್ಳಬೇಕು. ಅನಂತರ ವೀರಮತ್ತ ಗಜೇಂದ್ರ, ನಂದೀ ದೇವಿ, ಶೀತಲಾದೇವಿ ವಟುಕಭೈರವರ ದರ್ಶನ ಮಾಡಿಕೊಂಡು ಅದರ ಮುಂದಿರುವ ಸರೋವರದಲ್ಲಿ ಸ್ನಾನಮಾಡಿ ಮಹಾವಿದ್ಯೆಯ ಅನಂತರ ಪಿಂಡಾರಕ ಹಾಗೂ ವಿಘ್ನೇಶ್ವರ ದರ್ಶನವನ್ನು ತೆಗೆದುಕೊಳ್ಳಬೇಕು. ಮೂರನೆಯ ದಿನ ಬ್ರಹ್ಮಕುಂಡ ಸ್ನಾನ, ವಿಷ್ಣು ಹರಿ, ಮಂತ್ರೇಶ್ವರ, ಮಹಾದಿವ್ಯಾದಿ ದರ್ಶನ ಮಾಡಿಕೊಂಡು ಉಳಿದೆಲ್ಲ ಅಯೋಧ್ಯಾಪುರಿಯನ್ನು ದರ್ಶನಮಾಡಿ ಸ್ವರ್ಗದ್ವಾರ ತೀರ್ಥಕ್ಕೆ ಬರಬೇಕು. ಇಲ್ಲಿ ಉಟ್ಟ ಬಟ್ಟೆ ಸಹಿತವಾಗಿಯೇ ಸ್ನಾನ ಮಾಡಬೇಕು. ಇದರಿಂದ ಮಾನವರ ಸರ್ವ ಪಾಪಗಳು

ನಷ್ಟವಾಗುವವು. ಈ ಅಯೋಧ್ಯಾ ಕ್ಷೇತ್ರವು ಭಗವಾನ್ ಶ್ರೀವಿಷ್ಣುವಿನ ಕೈಯಲ್ಲಿಯ ಸುದರ್ಶನ ಚಕ್ರದಲ್ಲಿಯೇ ಪ್ರತಿಷ್ಠಿತವಾಗಿರುತ್ತದೆ. ಆದುದರಿಂದ ಇದು ಎಲ್ಲ ತೀರ್ಥಕ್ಷೇತ್ರಗಳಿಗಿಂತ ಸರ್ವಶ್ರೇಷ್ಠ ಕ್ಷೇತ್ರ ಎಂದು ಪರಿಗಣಿತ ವಾಗಿದೆ. ಈ ಅಯೋಧ್ಯಾ ಕ್ಷೇತ್ರದ ಮಾಹಾತ್ಮ್ಯೆಯ ಶ್ರವಣ ಪಠನಪಾರಾಯಣ ಗಳಿಂದ ಸಂತಾನ, ಸೌಭಾಗ್ಯ, ಸಂಪತ್ತು, ಸದ್ಗತಿಗಳನ್ನು ಮಾನವರು ನಿಶ್ಚಿತವಾಗಿಯೂ ಪಡೆಯುತ್ತಾರೆ.

*ಅಯೋಧ್ಯ ಮಹಾತ್ಮೆ ಮುಗಿಯುವುದರೊಂದಿಗೆ ಕುಮಾರಿಕಾ ಖಂಡ ಸಂಪೂರ್ಣ*

## ೩. ಅರುಣಾಚಲ ಮಾಹಾತ್ಮ್ಯ ಖಂಡ

### ಅಧ್ಯಾಯ - ೪೧

**ಶೌನಕ:-** ಸೂತಾಚಾರ್ಯರೇ, ನಮಗೆ ಅರುಣಾಚಲದ ಮಹಿಮೆಯನ್ನು ಕೇಳುವ ಅಪೇಕ್ಷೆ. ಅದೂ ಕೂಡಾ ತಮ್ಮ ಮುಖದಿಂದ.

**ಸೂತ:-** ಋಷಿಗಳೇ! ಅರುಣಾಚಲದ ಮಹಿಮೆಯನ್ನು ನಿಮಗಾಗಿ ನಿರೂಪಿಸುವೆ. ಅವಹಿತ ಮನಸ್ಕರಾಗಿ ಆಲಿಸಿರಿ. ಬಹಳ ಹಿಂದಿನ ಕಾಲದ ಮಾತು. ಪುಣ್ಯಧಾಮವಾದ ಸತ್ಯಲೋಕ. ಬ್ರಹ್ಮದೇವರ ಅಧಿಷ್ಠಾನ. ಕಮಲಪೀಠದಲ್ಲಿ ಚತುರ್ಮುಖ ಆಸೀನ. ಅಲ್ಲಿಗೇ ಮಹಾತ್ಮರಾದ ಸನಕ ಮಹಾಮುನಿಗಳ ಆಗಮನ. ಬ್ರಹ್ಮದೇವರಿಗೆ ಸಾಷ್ಟಾಂಗ ದಂಡಪ್ರಣಾಮ. ಭಕ್ತಿಯಿಂದ ಅಂಜಲಿಬಂಧನ. ಮುಖದಿಂದ ಶಾರದಾ ಪತಿಯ ಸ್ತವನ.

**ಸನಕ:-** ಭಗವನ್! ಅನಂತ ವಂದನೆ ನಿಮ್ಮ ಪಾದಾರವಿಂದಗಳಿಗೆ. ಹದಿನಾಲ್ಕು ಲೋಕಗಳಿಗೆ ತಾವೇ ಆಧಾರ. ನೀವು ವೇದಪಾಠಕರು ಇದ್ದಂತೆ ವೇದ ವೇದ್ಯರೂ ಆಗಿರುವಿರಿ. ನನಗೆ ಸಂಪೂರ್ಣ ದಿವ್ಯ ಜ್ಞಾನೋದಯವಾದದ್ದು ತಮ್ಮ ಕೃಪಾಬಲದಿಂದಲೇ. ಈಗ ನಿಮ್ಮಲ್ಲಿ ನನ್ನದೊಂದು ವಿಜ್ಞಾಪನೆ. ಈ ಭೂಮಂಡಲದಲ್ಲಿ ಅಲ್ಲಲ್ಲಿ ಇರುವ ಶಿವಲಿಂಗಗಳು ಅಸಂಖ್ಯ. ಅವುಗಳಲ್ಲಿ ಮಹಾಮಹಿಮೆಯಿಂದ ಬೆಳಗುವ ಜಗದಾಧಾರವಾದ ಪರಮೇಶ್ವರನ ವಿಶಿಷ್ಟ ಸನ್ನಿಧಾನೋಪೇತವಾದ ಶಿವಲಿಂಗವು ಯಾವುದು? ಯಾವ ಶಿವಲಿಂಗದ ಸ್ಮರಣಮಾತ್ರದಿಂದ ಪಾಪ ನಾಶ? ಆತ್ಮವಿಕಾಸ? ಶಿವನ ಸಾರೂಪ್ಯವನ್ನೇ ಭಕ್ತರಿಗೆ ಕರುಣಿಸುವ ಶಕ್ತಿ ಯಾವ ಶಿವಲಿಂಗದಲ್ಲಿ ಉಂಟು? ಪ್ರಪಂಚದ ಹುಟ್ಟು, ಉಳಿವು ಅಳಿವುಗಳಿಗೆಲ್ಲ ಕಾರಣನಾದ ಕೈಲಾಸಪತಿಯ ದಿವ್ಯ ದರ್ಶನವು ಯಾವ ಶಿವಲಿಂಗದ ಆರಾಧನೆಯಿಂದ ಸುಲಭ ಸಾಧ್ಯ? ಇದನ್ನೆಲ್ಲ ನನಗೆ ತಾವು ವಿವರಿಸಿರಿ.

**ಬ್ರಹ್ಮದೇವ:-** ವತ್ಸ! ಮೊದಲು ನಿನಗೆ ಧನ್ಯವಾದ. ಈ ಪ್ರಶ್ನೆಯಿಂದ ಆ ರುದ್ರಾಂತರ್ಗತ ಸಂಕರ್ಷಣನ ನೆನಪು ನನಗುಂಟಾಗುವಂತೆ ಮಾಡಿದೆಯಲ್ಲವೆ! ಅದರಿಂದ ಹರಿಭಕ್ತಿಯೋಗದ ಸ್ಮೃತಿ ಉದ್ಭೂತವಾಯಿತು ನನ್ನ ಚಿತ್ತದಲ್ಲಿ. ಈ ಪ್ರಶ್ನೆಯನ್ನು ಕೇಳಿದ ನೀನು ನನ್ನ ಮಾನಸಕುವರ. ನನ್ನ ಆನಂದದ ಗ್ರಂಥಿಯೇ ನೀನು. ನಿನ್ನ ಪ್ರಶ್ನೆಗೆ ಸರಿಯಾಗಿ ಉತ್ತರ ಕೊಡಬೇಕು. ಅದಕ್ಕಾಗಿ ನಾನೀಗ ಮತ್ತೆ ಮತ್ತೆ ಆ ಭಕ್ತಿಯೋಗದ ವಿಷಯವನ್ನೇ ಮೆಲುಕು ಹಾಕುತ್ತಿದ್ದೇನೆ. ಶಿವಾಂತರ್ಯಾಮಿಯಾದ ಕೇಶವನನ್ನು ಕುರಿತು ಅತ್ಯುಗ್ರವಾದ ತಪಸ್ಸನ್ನು ಮಾಡಿದವನು ಸನಕ. ಆದರೆ ಅದರಿಂದ ಚಿತ್ತದಲ್ಲಿ ಭಕ್ತಿಯೋಗದ ಸಮೃದ್ಧಿಯನ್ನು ಕಂಡವ ನಿನ್ನ ಜನಕ. ನನ್ನ ಹೃದಯಾಂಗಣದಲ್ಲಿ ಇದೀಗ ಹರಿಹರ

ಭಕ್ತಿಯ ಮಹೋದಯ. ಅದರಿಂದ ನನ್ನ ಹೃದಯವು ಆಕೃಷ್ಟವಾಗಿ ನಿರಂತರವೂ ದೇವೋನ್ಮುಖವಾಗಿದೆ. ಯಾರ ಪ್ರಶಾಂತವಾದ ಅಂತಃಕರಣದಲಿ ದೇವನಿಷ್ಠೆಯು ಎಂದೂ ನಂದದ ನಂದಾದೀಪವಾಗಿ ಸಂತತವು ಬೆಳಗುತ್ತಿರುವದೋ ಅಂತಹ ಮನುಷ್ಯನು ನಿಜವಾಗಿ ಪುಣ್ಯ ಪುರುಷ. ಅವರ ಜೀವನ ಪರಮಪಾವನ. ಹರಿಹರರೊಂದಿಗೆ ಸಂಭಾಷಣೆ, ಸಹವಾಸ, ಸಂಗತಿ ಸಂದರ್ಶನ, ಸ್ಮರಣ ಎಲ್ಲವೂ ಪಾಪ ಪರಿಹಾರಕ, ಪುಣ್ಯಕಾರಕ.

ಪೂರ್ವಕಾಲದಲ್ಲಿ ಪಾಪರಾಶಿಗಳನ್ನೆಲ್ಲ ಕರಗಿಸುವ ಶಿವನ ತೇಜವು ಒಂದು ವಿಚಿತ್ರ ರೀತಿಯಲ್ಲಿ ಪ್ರಕಟವಾಯಿತು. ಆ ಸಮಾಚಾರವನ್ನು ಬಿತ್ತರಿಸುತ್ತೇನೆ ಕೇಳು.

ಹಿಂದೆ ಒಂದು ಸಮಯದಲ್ಲಿ ನಾನು ಭಗವಾನ್ ಶ್ರೀಹರಿಯ ಸಂದರ್ಶನದ ಭಾಗ್ಯವನ್ನು ಪಡೆದಿದ್ದೆ. ಆ ಸಮಯದಲ್ಲಿ ನಮ್ಮಿಬ್ಬರ ಸಮಕ್ಷಮದಲ್ಲಿ ಒಂದು ಅಗ್ನಿಸ್ತಂಬವು ಪ್ರಕಟವಾಯಿತು. ಎಲ್ಲ ಲೋಕಗಳನ್ನು ದಾಟಿ ಆಚೆಗೆ ಚಾಚಿತ್ತು ಅದರ ಜ್ವಾಲಾಮಾಲೆ. ಮೇಲಿಂದ ಕೆಳಗಿನವರೆಗೆ ಎಲ್ಲ ಕಡೆಯಿಂದಲೂ ಅಗ್ನಿಯಂತೆ ಪ್ರಜ್ವಲಿಸುತ್ತಿತ್ತು ಆ ಅಗ್ನಿಸ್ತಂಭ. ಅದರ ತುದಿ ಎಲ್ಲಿ? ಮೊದಲು ಎಲ್ಲಿ? ಯಾವದೂ ಗೊತ್ತಾಗದಂತೆ ದಿಗ್‌ದಿಗಂತಗಳನ್ನೆಲ್ಲ ದಹಿಸುತ್ತಿತ್ತು ಆ ತೇಜಸ್ತಂಭ. ಭಗವಾನ್ ಮಹೇಶ್ವರನ ಆ ತೇಜೋಮಯ ರೂಪವನ್ನು ಕಂಡು ಭಕ್ತಿ ಹೊರಹೊಮ್ಮಿತು ಹೃದಯದಲ್ಲಿ. ಭಕ್ತಿಯುಕ್ತವಾದ ಬಿತ್ತದಿಂದ ನಾನು ಅದರ ಪೂಜೆಗೈದೆ ಮಾನಸ ಪೂಜಾವಿಧಿಯಿಂದ, ನನ್ನ ನಾಲ್ಕು ಮುಖಗಳಿಂದಲೂ ನಿರಂತರ ನಡೆದಿತ್ತು ವೇದಘೋಷ. ವೇದಪಾರಾಯಣ ಪರಿಪೂತವಾದ ನನ್ನ ನಾಲಿಗೆಯಿಂದ ಭವಾನೀಪತಿಯಾದ ಆ ಭಗವಂತನನ್ನು ಬಾಯಿತುಂಬ ಹೊಗಳಿದೆ. ಹೃದಯ ತುಂಬಿ ಹಾಡಿದೆ. ಭಕ್ತಿಭಾವ ಭರಿತನಾಗಿ ಸ್ತೋತ್ರ ಮಾಡಿದೆ.

**ಬ್ರಹ್ಮ:-** ಶಿವನಿಗೆ ನಮಸ್ಕಾರ. ಜಗದಂಡ ಮಂಡಲದ ನಿರ್ಮಾಪಕನಿಗೆ ನಮಸ್ಕಾರ. ಚರಾಚರ ಪ್ರಪಂಚವನ್ನೆಲ್ಲ ಪ್ರಕಾಶಮಾನವಾಗಿ ಗೈಯ್ಯುವ ತೇಜೋಮೂರ್ತಿಗೆ ವಂದನೆ. ಭಗವನ್! ನಿನ್ನ ಈ ವಿಶ್ವವ್ಯಾಪಿಯಾದ ಈ ಪ್ರಕಾಶ ಪುಂಜದಿಂದ ಜಗತ್ತೆಲ್ಲವೂ ಬೆಳಗುತ್ತಲಿದೆ. ಆದರೆ ನಿನ್ನ ಈ ದಿವ್ಯವಾದ ತೇಜಸ್ತಂಭದ ದರ್ಶನವನ್ನು ಪಾಮರರು ಮಾಡಿಕೊಳ್ಳಲಾರರು. ಹುಟ್ಟುಗುರುಡನು ಬೆಳಕಿನ ಬೆಟ್ಟವಾದ ಸೂರ್ಯನನ್ನು ನೋಡಬಲ್ಲನೇ! ಅದರಂತೆ ಇದೀಗ ಇಲ್ಲಿ ನಮ್ಮ ಕಣ್ಣೆದುರು ಉದ್ಭೂತವಾದ ಈ ನಿನ್ನ ತೇಜೋಲಿಂಗವು ಅಧ್ಯಾತ್ಮ ದೃಷ್ಟಿಯಿಂದ ಮಾತ್ರ ನೋಡಲು ಯೋಗ್ಯವಾಗಿದೆ. ಕನ್ನಡಿಯು ತನ್ನಲ್ಲಿ ಪ್ರತಿಬಿಂಬವನ್ನು ಧರಿಸಿದಂತೆ ಯೋಗಿಜನರು ತಮ್ಮ ಅಂತರಾತ್ಮದ ಅಂತರಂಗದಲ್ಲಿ ನಿನ್ನ ಈ ಜಾಜ್ವಲ್ಯಮಾನವಾದ ತೇಜೋರೂಪವನ್ನು ಕಾಣುವರು. ಈ ಪ್ರಪಂಚದಲ್ಲಿ ನಿನಗಿಂತ ಮಿಗಿಲಾದ ಮಹಾನ್ ವಸ್ತುವು ಬೇರೊಂದಿಲ್ಲ. ಅದರಂತೆ ನಿನ್ನನ್ನು ಆಶ್ರಯಿಸಿ ನಿನ್ನನ್ನು ಭಕ್ತಿಯಿಂದ ಪೂಜಿಸುವ ನನಗಿಂತ ಮಿಗಿಲಾದ ದೇವಭಕ್ತರಿಲ್ಲ. ನಿನ್ನಲ್ಲಿ ನಿರಂತರವೂ ನೆಟ್ಟ ನನ್ನ ಮನಸ್ಸು ಒಂದು ಕ್ಷಣಮಾತ್ರವೂ ನಿನ್ನನ್ನು ಬಿಟ್ಟು ಇರಲಾರದು. ಅದಕ್ಕಾಗಿ ನಿನ್ನ ಚರಣಗಳಲ್ಲಿ ನನ್ನ ಚಿತ್ತವು ಸದಾಲೀನ, ನಿನ್ನ ಮಹಿಮಾವರ್ಣನೆಯಲ್ಲಿ ನನ್ನ ವಾಣಿಯು ಸದಾಕಾಲವೂ ಸಂಲಗ್ನವಾಗಲಿ. ನನ್ನ ಎಲ್ಲ ಕಾಯ ಕರಣ ಪ್ರವೃತ್ತಿಗಳು ನಿನ್ನ ಸೇವಾವಿಧಾನದಲ್ಲಿಯೇ ಸಾರ್ಥಕತೆಯನ್ನು ಕಂಡುಕೊಳ್ಳಲಿ. ನಾನು ನಿನ್ನ ಪಾದಾರವಿಂದಗಳಲ್ಲಿ ಪ್ರಣತನಾಗಿದ್ದೇನೆ. ನಾನು ಏನು ಮಾಡಬೇಕು ಆಜ್ಞೆ ಮಾಡು, ನಿನ್ನ ಆಜ್ಞೆಯನ್ನು ಪಾಲಿಸಲಿಕ್ಕಾಗಿ ನಾನು ಉತ್ಸುಕನಾಗಿದ್ದೇನೆ.

ವಿನಯಪೂರ್ವಕವಾಗಿ ಹೀಗೆ ನಿವೇದನೆ ಗೈದು ಕೈಜೋಡಿಸಿ ಆ ಪರಮೇಶ್ವರನಿಗೆ ಪುನಃ ಪುನಃ ಪ್ರಣಾಮಗೈದ. ಅನಂತರ ಶ್ರಾವಣದ ಮೋಡದಂತೆ ಗಂಭೀರ ಧ್ವನಿಯಲ್ಲಿ ಶ್ರೀಹರಿಯು ಶಂಕರರನ ಮಹಾಮಹಿಮೆಯನ್ನು ಕೀರ್ತನೆಗೈಯುತ್ತ ಇಂತು ನುಡಿದನು, - ಇದು ಶ್ರೀಹರಿಯ ಲೋಕ ವಿಡಂಬನಾತ್ಮಕ ನುಡಿ.

**ವಿಷ್ಣು**:- ಮೂರು ಲೋಕದ ಒಡೆಯನಾದ ಗಂಗಾಧರನೆ, ನಿನಗೆ ಜಯವಾಗಲಿ, ಶಿರದಲ್ಲಿ ಮರಿಚಂದಿರನನ್ನು ಧರಿಸಿದ ಅರ್ಧನಾರೀ ನಟೇಶ್ವರನಿಗೆ ಗೆಲವು. ದೇವ ದೇವನಾದ ಮಹಾದೇವ! ನಿನ್ನ ಕರುಣೆಗೆ ಎಣೆ ಇಲ್ಲ. ಭಕ್ತ ಜನರ ಮೇಲೆ ಆ ನಿನ್ನ ಕರುಣೆಯು ಯಾವ ಕಾರಣವಿಲ್ಲದಿದ್ದರೂ ಅಭಿವೃದ್ಧಿಯನ್ನು ಹೊಂದುತ್ತಾ ಇರುತ್ತದೆ. ಸರ್ವ ವಿದ್ಯೆಗಳಲ್ಲಿಯೂ ಸಕಲವಿಧ ಜ್ಞಾನ ವಿಜ್ಞಾನಗಳಲ್ಲಿಯೂ, ಪಾಂಡಿತ್ಯ ಅಥವಾ ಪ್ರಭುತ್ವವು ಪ್ರಾಪ್ತವಾಗುವದು ನಿನ್ನ ಕೃಪಾದೃಷ್ಟಿಯಿಂದ ಮಾತ್ರ. ಬಲ ಐಶ್ವರ್ಯ ಆನಂದ ಮುಂತಾದವುಗಳ ಪ್ರಾಪ್ತಿಯು ಭಕ್ತರಿಗೆ ನಿನ್ನ ಕರುಣಾ ಕಟಾಕ್ಷಪಾತದಿಂದ ಮಾತ್ರ ಸಾಧ್ಯ. ನಿನ್ನ ಮಹಿಮೆಯನ್ನು ಪೂರ್ಣವಾಗಿ ತಿಳಿಯಲಿಕ್ಕೆ ನೀನೊಬ್ಬನೇ ಸಮರ್ಥನು. ಅಥವಾ ನಿನ್ನ ಪೂರ್ಣ ಕೃಪಾಪ್ರಸಾದವನ್ನು ಪಡೆದು ಧನ್ಯರಾದ ಭಕ್ತರು ಮಾತ್ರ ಈ ವಿಷಯದಲ್ಲಿ ಶಕ್ತರು. ಭ್ರಮರವು ಕೀಟವನ್ನು ತನ್ನೆಡೆಗೆ ಸೆಳೆದುಕೊಂಡು ಅದನ್ನು ತನ್ನಂತೆಯೇ ಮಾಡಿ ತನ್ನ ಸಾರೂಪ್ಯವನ್ನೆ ತಂದುಕೊಡುತ್ತದೆ. ಅದರಂತೆ ನೀನು ಕೂಡಾ ನಿನ್ನ ಕ್ಷುದ್ರ ಭಕ್ತನನ್ನು ನಿನಗೆ ಸಮಾನನನ್ನಾಗಿ ಮಾಡಿಕೊಳ್ಳುವೆ. ನಿಜವಾದ ಶಿವಭಕ್ತರೆಲ್ಲರೂ ನಿಜವಾಗಿ ಹರಿಭಕ್ತರೇ ಆಗುವರು. ದೇವತೆಗಳೆಲ್ಲರೂ ನನ್ನ ಅಂಶದಿಂದಲೇ ಉತ್ಪನ್ನರಾಗಿರುತ್ತಾರೆ. ಇದರಿಂದಲೇ ಅವರು ಇಷ್ಟು ಪ್ರಭಾವಶಾಲಿಗಳಾಗಿದ್ದಾರೆ. ನನ್ನ ಪೂರ್ಣಾನುಗ್ರಹಕ್ಕೆ ಪಾತ್ರರಾದ ಆ ದೇವತೆಗಳೂ, ಭಕ್ತರೂ, ನಿನಗೆ ಸಮಾನರೇ ಆಗಿರುತ್ತಾರೆ. ನಿಗಿ ನಿಗಿ ಬೆಂಕಿಯ ಉರಿಗೆ ಕಾದು ಕೆಂಪಗಾದ ಕಬ್ಬಿಣದಲ್ಲಿ ಇದ್ದ ಅಗ್ನಿಯು ಮೂಲ ನಿಗಿ ನಿಗಿ ಬೆಂಕಿಯಷ್ಟೇ ದೇದೀಪ್ಯಮಾನವಾಗಿ ಪ್ರಜ್ವಲಿಸುವದಿಲ್ಲವೆ? ಅದರಂತೆ ನನ್ನ ಕೃಪಾಪಾತ್ರರೆಲ್ಲರೂ ನಿನ್ನಂತೆಯೇ ದೀಪ್ತಿಮಂತರಾಗಿ ತೇಜೋಮೂರ್ತಿಗಳಾಗಿ ಬೆಳಗುವರು. ಸರ್ವಾಧಾರನಾದ ಶಂಕರದೇವನೆ! ದಯೆದೋರು ನಮ್ಮ ಕಣ್ಣುಗಳಿಗೆ ಪರಮಾನಂದವನ್ನು ನೀಡುವ ದಿವ್ಯ ದರುಶನ ಮಾಡಿಸು.

**ಸೂತ**:- ಈ ರೀತಿಯಾಗಿ ಅಜ್ಞ ಜನಮೋಹನಾರ್ಥವಾಗಿ ಹೊಗಳಿ ಹಾಡುವ ವಿಷ್ಣು ಹಾಗು ಬ್ರಹ್ಮದೇವರ ಅಂತರ್ಯಾಮಿ ವಿವಿಕ್ಷೆಯಿಂದ ಮಾಡಿದ ಸ್ತುತಿಪಾಠವನ್ನು ಕೇಳಿ ಸುಪ್ರಸನ್ನನಾದನು ಆ ಸತೀಪತಿ. ಅವರ ಪ್ರಾರ್ಥನೆಯನ್ನು ಮನ್ನಿಸಿ ಆ ತೇಜೋಮಯ ಸ್ತಂಭದಿಂದ ಧವಲ ದೀಧಿತಿಯುಳ್ಳ ಗೌರವರ್ಣದ ಗೌರೀಪತಿಯು ಪುರುಷ ರೂಪದಿಂದ ಪ್ರಕಟನಾದನು. ತಲೆಯ ಮೇಲೆ ಅರ್ಧಚಂದ್ರ, ತೊಳಗುವ ಮುಕುಟ, ಕೈಗಳಲ್ಲಿ ಕೊಡಲಿ, ಬಾಲಮೃಗ, ಅಭಯ ಹಾಗು ವಿಶ್ರಾಮ ಮುದ್ರೆ, ಜಡೆಯಲ್ಲಿ ಗಂಗೆ, ಮುಖದಲ್ಲಿ ಮಂದಹಾಸ, ಕೊರಳಲ್ಲಿ ರುಂಡಮಾಲೆ ಮೈಮೇಲೆ ವ್ಯಾಘ್ರಾಂಬರ. ಪ್ರಸನ್ನಮುಖದ ಪರಮೇಶ್ವರನು ಬ್ರಹ್ಮ ಹಾಗು ವಿಷ್ಣುದೇವೋತ್ತಮರನ್ನು ಕುರಿತು ಮಾತನಾಡಿದನು- ಹರಿಬ್ರಹ್ಮರೇ! ನಿಮ್ಮ ಭಕ್ತಿಯಿಂದ ನಾನು ಸಂತುಷ್ಟನಾಗಿರುತ್ತೇನೆ. ನೀವು ನನ್ನಿಂದ ಏನಾದರೂ ನಿಮಗೆ ಅಪೇಕ್ಷಿತ ವರವನ್ನು ಕೇಳಿರಿ.

ಭಗವಾನ್ ಪರಮೇಶ್ವರನ ಈ ನುಡಿಯನ್ನು ಆಲಿಸಿ ತುಂಬ ಸಂತಸವಾಯಿತು ಆ ದೇವತಾಶ್ರೇಷ್ಠರಿಗೆ. ಅವರಿಬ್ಬರೂ ಕೈ ಜೋಡಿಸಿದರು. ತಮ್ಮ ತಮ್ಮ ಉದ್ದೇಶವನ್ನು ನಿವೇದಿಸಿದರು. ಆ ತ್ರಿಭುವನ ವಿಧಾತಾರನನ್ನು ವೇದೋಕ್ತ ಮಂತ್ರಗಳಿಂದ ಸ್ತುತಿಸಿದರು. ಆನತಮಸ್ತಕರಾಗಿ ಪ್ರಣಮಿಸಿ ವಿಜ್ಞಾಪನೆಗೈದರು.

**ಹರಿಬ್ರಹ್ಮ:-** ಭಗವನ್! ಭವಾನೀನಾಥ, ದಿವ್ಯ ದೀಧಿತಿಯುಕ್ತವಾದ ಈ ನಿನ್ನ ದಿವ್ಯ ರೂಪಕ್ಕೆ ನಮ್ಮ ನಮಸ್ಕಾರ. ನೀನು ಎಲ್ಲ ಭಕ್ತರಿಗೂ ವರವನ್ನು ಕೊಡಲು ಈಶನಾಗಿರುವಿ. ಆದುದರಿಂದ ನಿನಗೆ ಈಶ್ವರನೆಂದು ಹೆಸರು. ಮೂವತ್ತು ಮೂರು ಕೋಟಿ ದೇವತೆಗಳಲ್ಲಿ ನಮ್ಮ ಅನಂತರದಲ್ಲಿ ನೀನು ಶ್ರೇಷ್ಠನಾದುದರಿಂದ ನೀನು ಮಹಾದೇವ. ನಿನ್ನ ಅನುಪಮ ತೇಜಸ್ಸಿನ ಪ್ರಭೆಯಿಂದ ಆಕಾಶದ ಅಂತರಾಳ ಎಲ್ಲವೂ ಪರಿಪೂರ್ಣವಾಗಿ ತುಂಬಿಹೋಗಿದೆ. ನಿನ್ನ ಈ ದಿವ್ಯವಾದ ದೀಪ್ತ ದಿಧೀತಿಯಿಂದ ಜಗದಂಡಮಂಡಲ ಎಲ್ಲವೂ ಪ್ರಭಾಪುಂಜ ಪಿಂಜರಿತವಾದಂತೆ ತೋರುತ್ತದೆ.

ಇನ್ನು ಮುಂದೆ ಈ ನಿನ್ನ ಕಾಂತಿ ಮಹಾಪೂರವು ಬೆಳೆಯುತ್ತ ಹೋದರೆ ದೇವಲೋಕ ಯಾವುದು? ನಕ್ಷತ್ರಲೋಕ ಯಾವುದು? ಧ್ರುವಮಂಡಲ ಎಲ್ಲಿ? ಭೂಮಂಡಲ ಎಲ್ಲಿ? ಗುರುತಿಸುವದೇ ಕಠಿಣವಾಗುವದು. ಆ ನಿನ್ನ ತೇಜಸ್ತಂಭದ ದಿವ್ಯದೀಪ್ತಿಯು ಇನ್ನೂ ದೇದೀಪ್ಯಮಾನವಾಗಿ ಬೆಳೆಯುತ್ತ ಹೋದರೆ ಅರ್ಥಾತ್ ಪ್ರಜ್ವಲಿಸುತ್ತ ನಡೆದರೆ ಪ್ರಪಂಚವೆಲ್ಲವೂ ಭಸ್ಮವಾದೀತು. ಈಗಾಗಲೇ ನಿನ್ನ ಈ ತೇಜಸ್ತಂಭದ ಉಗ್ರಕಾಂತಿ ಕಿರಣಗಳ ಕಾವಿನಿಂದ ಬೆಂದುಹೋಗಿದೆ ಬಾಂದೊಡಲು. ಉದ್ದೀಪಿತವಾಗಿದೆ ಅಮರಾವತಿ. ಉತ್ತಪ್ತವಾಗಿದೆ ನಕ್ಷತ್ರಲೋಕ. ಸಿದ್ಧಚಾರಣ ಗಂಧರ್ವದೇವತೆ ಮಹರ್ಷಿಗಳಿಗೆಲ್ಲ ಪ್ರಪಂಚದ ವಕ್ಷಸ್ಥಳವಾದ ಅಂತರಿಕ್ಷದಲ್ಲಿ ನಿಲ್ಲಲು ಬಾರದಂತಾಗಿದೆ. ಈ ಭೂಮಂಡಲವೂ ಕೂಡಾ ಬಾಣಲೆಯಲ್ಲಿ ಬೇಯಲು ಇಟ್ಟಂತೆ, ಕಿಚ್ಚಿನಲ್ಲಿ ಕುದಿಯಲಿಟ್ಟಂತೆ ಬೇಗೆಯಿಂದ ಬಸವಳಿದಿದೆ. ಆದುದರಿಂದ ನೀನು ಈ ಎಲ್ಲ ಚರಾಚರ ಜಗತ್ತಿನ ಮೇಲೆ ಅನುಗ್ರಹ ಮಾಡು. ನಿನ್ನ ಈ ತೇಜೋರೂಪವನ್ನು ಉಪಸಂಹರಿಸು. ವಿಶ್ವವ್ಯಾಪಿಯಾದ ನಿನ್ನ ಬ್ರಹ್ಮಾಂಡ ಪರ್ಯಾಪ್ತವಾದ ತೇಜಃಪಿಂಡವನ್ನು ಉಪಸಂಹರಿಸಿ ಒಂದೇ ಒಂದು ಪ್ರಶಾಂತವಾದ ಸೌಮ್ಯ ಸ್ವರೂಪದ ಸ್ಥಾವರ ಲಿಂಗರೂಪದಿಂದ ಪರಿವರ್ತನೆಗೊಳಿಸು. ಅದಕ್ಕೆ ಅರುಣಾಚಲ ಎಂಬ ಹೊಸ ಹೆಸರನ್ನು ದಯಪಾಲಿಸು. ಯಾವ ಮಾನವನು ನಿನ್ನ ಅರುಣಾಚಲ ಎಂಬ ಈ ಜ್ಯೋತಿರ್ಮಯ ಸ್ವರೂಪವನ್ನು ಭಕ್ತಿಯಿಂದ ವಂದಿಸುವನೋ ಅವನಿಗೆ ದೇವತೆಗಳಿಗಿಂತ ಮಿಗಿಲಾದ ಮಹತ್ವ, ಮಾನ ಮರ್ಯಾದೆ ಪ್ರಾಪ್ತವಾಗುವವು. ಅರುಣಾಚಲೇಶ! ಒಮ್ಮೆ ನಿನಗೆ ಶರಣು ಬಂದರೆ ಸಾಕು. ಐಶ್ವರ್ಯ, ಸೌಭಾಗ್ಯ ಮಹತ್ವ ಪ್ರಾಪ್ತಿ. ಇದೆಲ್ಲಕ್ಕಿಂತ ಮಿಗಿಲಾಗಿ ಸಾವನ್ನು ಮೀರಿ ನಿಲ್ಲುವ ಮೃತ್ಯುಂಜಯತ್ವ ಮಹಿಮೆಯು ಕೂಡ ಲಭ್ಯವಾಗುವದು.''

ದೇವಶ್ರೇಷ್ಠರಾದ ವಿಷ್ಣು ವಿಧಾತರ ಈ ಸ್ತುತಿಯಿಂದ ಸಂತುಷ್ಟನಾದ ಸದಾ ಶಿವ. ಆನಂದದಿಂದ ಉದ್ಗರಿಸಿದ. ''ತಥಾಸ್ತು!'' ಮತ್ತೆ ಆಗ ಅಂತರಂಗದಲ್ಲಿ ಸಂತತವೂ ಭಕ್ತಿ ತುಂಬಿ ತುಳುಕಾಡುತ್ತಿದ್ದ ಕಮಲಾಕಾಂತನು ಅರುಣಾಚಲೇಶ್ವರನನ್ನು ಪ್ರಾರ್ಥನೆ ಮಾಡುತ್ತ

ಹೀಗೆ ಹೇಳಿದನು. "ಕರುಣಾಸಾಗರನಾದ ಅರುಣಾಚಲೇಶ್ವರ! ಪ್ರಸನ್ನನಾಗು. ಭಗವನ್! ನೀನು ಪ್ರಕಟವಾದದ್ದು ಲೋಕಕ್ಕೆಲ್ಲ ಕ್ಷೇಮಕರ, ನಮಗಂತೂ ವಿಶೇಷ ಶಿವಶಂಕರ. ನಾನು ಹಾಗೂ ಬ್ರಹ್ಮದೇವರು ಲೋಕಶಿಕ್ಷಣಾರ್ಥವಾಗಿ ನಿನ್ನನ್ನು ಮಂತ್ರಗಳಿಂದ ಸ್ತೋತ್ರ ಮಾಡಿದ್ದೇವೆ. ನಿನ್ನನ್ನು ಪೂಜಿಸಿದ ಮನುಷ್ಯನೇ ಧನ್ಯ. ಬಗೆ ಬಗೆಯ ಪೂಜೆಯ ಉಪಕರಣ ಹಾಗೂ ಯಥೋಚಿತವಾದ ಮಂತ್ರ ತಂತ್ರಗಳಿಂದ ಒಡಗೂಡಿ ನಿನ್ನ ಪೂಜೆಯನ್ನು ಮಾಡಿದರೆ ಅವನು ಮುಂದಿನ ಜನ್ಮದಲ್ಲಿ ಖಂಡಿತವಾಗಿಯೂ, ಚಕ್ರವರ್ತಿ ಮಹಾರಾಜನಾಗಿ ಜನಿಸುತ್ತಾನೆ. ಈ ಜನ್ಮದಲ್ಲಿ ಕೂಡಾ ಎಲ್ಲ ಪಾಪಗಳಿಂದ ಮುಕ್ತನಾಗಿ ನಿರಂತರ ದೇವತಾ ಸಮಾರಾಧನೆ ಗೈಯ್ಯುತ್ತಾನೆ. ನಿನ್ನ ಬಳಿಗೆ ಬಂದ ಮಾನವರ ಅಹಂಕಾರವನ್ನು ಅಳಿದು, ಮಡದಿ ಮಕ್ಕಳಲ್ಲಿ ಮಮತೆಯನ್ನು ಕಳೆದು, ಭಗವಂತನ ಪಾದಾರವಿಂದಗಳಲ್ಲಿ ಅದ್ಭುತ ಭಕ್ತಿಯನ್ನು ಉಂಟು ಮಾಡಿ ಮಾನವನ ಮೋಕ್ಷಕ್ಕೆ ಕಾರಣವಾಗುತ್ತದೆ ಈ ಅರುಣಾಚಲೇಶ್ವರನ ಭಕ್ತಿಯುಕ್ತವಾದ ಪೂಜೆ."

ಚಂದ್ರಚೂಡನು ಈ ಚಾರುತರ ವಚನ ರಚನೆಯನ್ನು ಕೇಳಿ ಪ್ರೀತ ಪ್ರಸನ್ನನಾಗಿ ಭಗವಾನ್ ವಿಷ್ಣುವಿಗೆ ವಂದಿಸಿ, ತಾನು ಅರುಣಾಚಲ ರೂಪದಿಂದ ಸ್ಥಾವರ ಲಿಂಗವಾಗಿ ಪರಿಣಮಿಸಿದನು. ಪರಶಿವನ ತೈಜಸಲಿಂಗವಾದ ಈ ಶಿವಲಿಂಗವು "ಅರುಣಾಚಲ" ಎಂಬ ಹೆಸರಿನಿಂದ ಧರಣೀತಲದಲ್ಲಿ ಪ್ರಖ್ಯಾತವಾಗಿ ಸದ್ಭಕ್ತದೃಷ್ಟಿ ಗೋಚರವಾಗುತ್ತದೆ. ಪ್ರಳಯಕಾಲದಲ್ಲಿ ಬೆಟ್ಟ ಬಯಲು, ಬಾನು ಕಾನನಗಳನ್ನೆಲ್ಲಾ ತುಂಬಿ ವಿಜೃಂಭಿಸುವ ಚತುಃಸಾಗರಗಳು ಈ ಅರುಣಾಚಲದ ಪರಿಸರವನ್ನು ಪ್ರವೇಶ ಕೂಡ ಮಾಡಲಾರವು. ಇದನ್ನೆಲ್ಲ ಮುಳುಗಿಸಿ ಬಿಡುವ ಮಾತಂತೂ ದೂರ ಉಳಿಯಿತು.

**ಬ್ರಹ್ಮದೇವ:-** ಸನಕ ಮುನಿಯೇ! ಅರುಣಾಚಲ ರೂಪದಿಂದ ನಿಂತಿರುವ ಭಗವಾನ್ ಪರಮೇಶ್ವರನ ದರ್ಶನ ಮಾಡಿಕೊಂಡವರು ಕೃತಾರ್ಥರಾಗುವರು. ನಮಸ್ಕರಿಸಿದವರು ಧನ್ಯರಾಗುವರು. ಸಮಸ್ತ ತೀರ್ಥಗಳಲ್ಲಿ ಸ್ನಾನ ಮಾಡಿದ ಫಲವು ದೊರಕುವದು ಈ ಅರುಣಾಚಲ ದರ್ಶನದಿಂದ. ಸರ್ವಯಜ್ಞಗಳ ಅನುಷ್ಠಾನದ ಫಲ ಈ ಗಿರಿಯ ಸಂದರ್ಶನದಿಂದ ಲಭ್ಯ. ಇಲ್ಲಿ ಪ್ರದಕ್ಷಿಣೆ ನಮಸ್ಕಾರ ಮಾಡಿ ತಪಶ್ಚರ್ಯವನ್ನು ಕೈಕೊಂಡವರಿಗೆ ಶಿವನು ಸ್ವಯಂ ಇಷ್ಟಾರ್ಥದಾನಕ್ಕೆ ಸಿದ್ಧನಾಗಿ ನಿಂತುಕೊಂಡಿರುವನು. ಅರುಣಾಚಲ ಲಿಂಗದ ಪೂಜೆಗೈದವನಿಗೆ ಕಲಿಬಾಧೆ ತಟ್ಟುವದಿಲ್ಲ. ಪಾಪಲೇಪ ಆಗುವದಿಲ್ಲ. ಆದಿವ್ಯಾಧಿಗಳು ಬಾಧಿಸುವದಿಲ್ಲ.

**ಶೌನಕ:-** ಎಲ್ಲ ಸ್ಥಾನಗಳಲ್ಲೂ ಅತ್ಯುತ್ತಮವಾದ ಶಿವಸ್ಥಾನವು ಯಾವದು? ಇದನ್ನು ನನಗೆ ಹೇಳಿರಿ.

**ಸೂತ:-** ಪೂರ್ವ ಕಾಲದಲ್ಲಿ ಮಾರ್ಕಂಡೇಯ ಮಹಾಮುನಿಗಳು ಪ್ರಶ್ನೆ ಮಾಡಿದಾಗ ಪರಮೇಶ್ವರನ ವಾಹನವಾದ ನಂದೀಶ್ವರನು ಉತ್ತರ ರೂಪವಾಗಿ ಹೇಳಿದ್ದನ್ನು ನಿನಗೆ ತಿಳಿಸುತ್ತೇನೆ ಕೇಳು.

**ಮಾರ್ಕಂಡೇಯ:-** ನಂದೀಶ್ವರ! ಮೂರು ಲೋಕಗಳಲ್ಲಿ ಪುರಾಣ ಮತ್ತು ನಿಗಮಾಗಮದಲ್ಲಿ ನಿನಗೆ ತಿಳಿಯದೆ ಇರುವದು ಯಾವದು ಇದೆ? ಆದರೆ ತಾವು ಈ ಮೊದಲು ನಮಗೆ ತಿಳಿಸಿದ್ದು ಇಷ್ಟೆ. ಮಾನವರಿಗೆ ಭೂಲೋಕದಲ್ಲಿ ದೊರೆಯತಕ್ಕ ಪದಾರ್ಥಗಳು ಮೂರು, ತಾರಕ ಸುಖ, ಸ್ವರ್ಗಭೋಗ ಮತ್ತು ಕೈವಲ್ಯ. ಈ ಮೂರರಲ್ಲಿ ಮೊದಲನೆಯ ತಾರಕ ಸುಖ ಮತ್ತು ಸ್ವರ್ಗಭೋಗ ಇವು ಎರಡು ಪುಣ್ಯ ಸವೆದ ಬಳಿಕ

ನಷ್ಟವಾಗುವವು. ಆದರೆ ಕೊನೆಯದಾದ ಕೈವಲ್ಯ ಅರ್ಥಾತ್ ಮೋಕ್ಷಕ್ಕೆ ಮಾತ್ರ ಎಂದೂ ನಾಶವಿಲ್ಲ. ಈ ಮೋಕ್ಷವು ಪ್ರಾಪ್ತವಾಗುವದು ದಿವ್ಯಜ್ಞಾನದಿಂದ ಮಾತ್ರ. ಇಂಥ ವಿಶುದ್ಧ ಜ್ಞಾನವು ದೇಹಧಾರಿಗಳಿಗೆ ದೊರಕುವದು ಅತ್ಯಂತ ದುರ್ಲಭ. ಇಂಥ ಅತ್ಯಂತ ದುರ್ಲಭವಾದ ಶುದ್ಧಾತ್ ಶುದ್ಧತರವಾದ ದಿವ್ಯಜ್ಞಾನವು ಅತ್ಯಂತ ದುರ್ಲಭವಾಗಿದ್ದರೂ ಕೆಲವೊಂದು ವಿಶಿಷ್ಟ ಕ್ಷೇತ್ರಗಳಲ್ಲಿ ಅಧ್ಯಯನಾದಿ ಪ್ರಯಾಸವಿಲ್ಲದೆ ಸ್ವಯಂ ಲಭ್ಯವಾಗುತ್ತದೆಂದು ಕೇಳಿದ್ದೇನೆ. ಈ ವಿಶಿಷ್ಟ ಶಿವಕ್ಷೇತ್ರಗಳಲ್ಲಿ ಪರಮೇಶ್ವರನ ಪೂಜೆ ಮಾಡಿದರೆ ಸಾಕು. ಆ ಕ್ಷೇತ್ರದ ಮಹಿಮೆ ಹಾಗೂ ಈಶ್ವರನ ಪ್ರಸಾದದಿಂದ ಮನುಷ್ಯನಿಗೆ ದಿವ್ಯ ಜ್ಞಾನೋದಯ ವಾಗುತ್ತದೆ. ಆ ಕ್ಷೇತ್ರ ಯಾವದು? ಅಧ್ಯಯನಾದಿಗಳು ಇಲ್ಲದೆ ಮಾನವರಿಗೆ ದುರ್ಲಭವಾದ ಜ್ಞಾನಪ್ರಾಪ್ತಿಯನ್ನು ಮಾಡಿಕೊಡುವ ಅಂಥ ಮಹಾಕ್ಷೇತ್ರದ ಮಹಿಮೆಯನ್ನು ನನಗೆ ಹೇಳಿರಿ.

ಹೀಗೆ ಕೇಳಿ ಮಹಾನ್ ಮುನಿಗಳಾದ ಮಾರ್ಕಂಡೇಯರು ಉಳಿದ ಮನೀಷಿ ಮಹರ್ಷಿಗಳಿಂದ ಕೂಡಿಕೊಂಡು ಶಿಲಾದ ಪುತ್ರನಾದ ನಂದೀಶ್ವರನ ಅಡಿದಾವರೆಗಳಿಗೆ ವಂದಿಸಿದರು. ಜ್ಞಾನೋಪದೇಶವನ್ನು ಮಾಡಬೇಕೆಂದು ಕೇಳಿಕೊಂಡರು.

**ನಂದೀಶ್ವರ:-** ಮುನೀಶ್ವರನಾದ ಮಾರ್ಕಂಡೇಯ! ನೀನು ಒಳ್ಳೆ ಮಾರ್ಮಿಕ ಪ್ರಶ್ನೆ ಮಾಡಿದೆ. ಈ ಧರಣೀಮಂಡಲದಲ್ಲಿ ಶಿವಪ್ರಧಾನವಾದ ಅನೇಕ ತೀರ್ಥಸ್ಥಾನಗಳು ಇವೆ. ಲೋಕ ಕ್ಷೇಮಾಕಾಂಕ್ಷಿಯಾದ ಆ ವಿರೂಪಾಕ್ಷನು ಲೋಕ ಕಲ್ಯಾಣಕ್ಕಾಗಿ ಹಾಗೂ ಭಕ್ತಜೀವರ ಉದ್ಧಾರಕ್ಕಾಗಿ ಕೆಲವೊಂದು ಅಂಥ ದಿವ್ಯ ಸ್ಥಾನವನ್ನು ಪ್ರಕಟಗೊಳಿಸಿದ್ದಾನೆ.

ಆ ಎಲ್ಲ ಶಿವಕ್ಷೇತ್ರಗಳಲ್ಲಿ ಪ್ರಧಾನತರವಾದುದೆಂದರೆ, ವಾರಣಾಸಿ ಅರ್ಥಾತ್ ಕಾಶಿ. ಈ ವಾರಣಾಶಿ ಕ್ಷೇತ್ರದ ಸುತ್ತು ಮುತ್ತು ಐದು ಯೋಜನದ ಸ್ಥಳವೆಲ್ಲವೂ ಪರಮ ಪಾವನ, ಈ ಕ್ಷೇತ್ರದ ಮುಖ್ಯ ಅಧಿದೇವತೆ ಮಹಾದೇವ. ಆ ಮಹಾದೇವನು ಕಾಶಿಯಲ್ಲಿ ಮರಣ ಹೊಂದಿದವರಿಗೆ ರಾಮತಾರಕ ಮಂತ್ರವನ್ನು ಉಪದೇಶಿಸುತ್ತಾನೆ. ಅವನಿಗೆ ಅವಿಮುಕ್ತ ಎಂದು ಹೆಸರು. ಅವನಿಂದ ಈ ಕಾಶೀಕ್ಷೇತ್ರಕ್ಕೆ ಅವಿಮುಕ್ತ ಕ್ಷೇತ್ರ ಎಂಬ ಹೆಸರು ಬಂದಿದೆ. ಈ ಕಾಶಿಯನ್ನು ಬಿಟ್ಟು ಪರಮೇಶ್ವರನು ಎಂದೂ ಹೋಗುವದಿಲ್ಲ. ಆದುದರಿಂದ ಅವಿಮುಕ್ತ ಕ್ಷೇತ್ರವೆಂಬ ಇದರ ಶುಭನಾಮ ಸಾರ್ಥಕ. ಈ ಆದಿ ಮುಕ್ತೀಶ್ವರನನ್ನು ಇಲ್ಲಿರುವ ವಿಶಾಲಾಕ್ಷಿ ದೇವಿಯು ಪೂಜೆ ಮಾಡುತ್ತಾಳೆ. ಕಪಾಲಮೋಚನ ತೀರ್ಥ ಇರುವದು ಇದೇ ಅವಿಮುಕ್ತ ಕ್ಷೇತ್ರದಲ್ಲಿ. ಕಾಲಭೈರವನ ನಿವಾಸವೂ ಇಲ್ಲಿಯೇ. ಈ ಕಾಶೀಕ್ಷೇತ್ರದಲ್ಲಿ ಮರಣವನ್ನು ಅಪ್ಪಿದ ಜೀವ ಶಿವಸ್ವರೂಪನಾಗುತ್ತಾನೆ. ಇಲ್ಲಿ ಪಿತೃಗಳನ್ನು ಉದ್ದೇಶಿಸಿ ಪಿಂಡ ಪ್ರದಾನ ಮಾಡುವದರಿಂದ ಅತ್ಯಂತ ಸಂತೃಪ್ತವಾಗುತ್ತದೆ ಪಿತೃಗಣ.

ನೀನು ಕೇದಾರತೀರ್ಥದ ಮಹಿಮೆಯನ್ನು ಕೇಳಿರುವಿಯಷ್ಟೆ! ಅಲ್ಲಿ ಇಂದಿಗೂ ಶಂಕರನು ಮಹಿಷ ರೂಪವನ್ನು ಧರಿಸಿದ್ದಾನೆ. ಈ ಭೂಮಂಡಲದಲ್ಲಿರುವ ಬದರಿಕಾಶ್ರಮ ಎಂಬ ಪುಣ್ಯ ಕ್ಷೇತ್ರವಂತೂ ಮನುಷ್ಯ ಮಾತ್ರರಿಗೆ ಶುದ್ಧಿಪ್ರದವಾಗಿದೆ. ಸಿದ್ಧಿಪ್ರದವೂ ಅಹುದು. ಈ ಬದರಿಕಾಶ್ರಮದ ಕ್ಷೇತ್ರದಲ್ಲಿಯೇ ಪರಮೇಶ್ವರನು ನರನಾರಾಯಣರಿಂದ ಪರಿಪೂಜಿತನಾಗುವನು. ನೈಮಿಷಾರಣ್ಯದ ಹೆಸರನ್ನು ನೀನು ಕೇಳಿರಲು ಸಾಕು. ತ್ರಿಪುರನನ್ನು ಕೊಂದು ಕೈಲಾಸಪತಿಯು ಇಲ್ಲಿ ನೆಲೆಸಿದ್ದಾನೆ ನಿತ್ಯ ನಿರಂತರವಾಗಿ.

ಅಮರೇಶ ತೀರ್ಥವು ಧರ್ಮಾದಿ ಚತುರ್ವಿಧ ಪುರುಷಾರ್ಥಗಳ ಸಿದ್ಧಿಪ್ರದ. ಓಂಕಾರ ಎಂಬ ಹೆಸರಿನ ಮಹಾದೇವನು ಚಂಡಿಕಾ ಎಂಬ ನಾಮದಿಂದ ಪ್ರಸಿದ್ಧಳಾದ ಪಾರ್ವತಿ ದೇವಿಯೊಡನೆ ಇಲ್ಲಿ ವಾಸಮಾಡಿದ್ದಾನೆ. ಪುಷ್ಕರ ಎಂದು ಮತ್ತೊಂದು ತೀರ್ಥ. ರಜೋನಂದ ಎಂಬ ಹೆಸರಿನ ಶಿವನ ನಿತ್ಯ ಸನ್ನಿಧಾನ ಅಲ್ಲಿ. ಪುರುಹೂತಾ ಎಂಬ ಹೆಸರಿನಿಂದ ಪಾರ್ವತಿಯು ಪರಮೇಶ್ವರನ ಪಕ್ಕದಲ್ಲಿಯೇ ನೆಲೆಸಿ ಭಕ್ತರ ಇಷ್ಟಾರ್ಥಗಳನ್ನು ಪೂರ್ಣ ಮಾಡುತ್ತಾಳೆ.

ಆಷಾಡಿ ಎಂಬುದು ಮತ್ತೊಂದು ತೀರ್ಥ. ಆಷಾಢೇಶ ಅಲ್ಲಿಯ ಕ್ಷೇತ್ರ ದೇವತೆ. ಆ ಆಷಾಢೇಶನ ಸೇವೆಗೈಯುವ ಭವಾನೀ ದೇವಿಗೆ ರತಿ ಎಂದು ನಾಮಧೇಯ. ದಂಡಮುಂಡಿ ಎಂಬ ತೀರ್ಥಸ್ಥಾನವು ಪರಮಪವಿತ್ರ. ಮುಂಡಿ ಎಂಬ ಮಹಾದೇವನ ರೂಪವು ಅಲ್ಲಿಯ ಕ್ಷೇತ್ರಪತಿ. ದಂಡಿಕಾ ಎಂಬ ಹೆಸರಿನಿಂದ ಮಹಾದೇವಿಯು ಆ ಶಿವಸೇವೆಗೆ ಸಿದ್ಧಳಾಗಿ ನಿಂತಿದ್ದಾಳೆ. ಲಾಕುಲಿ ಎಂಬ ಕ್ಷೇತ್ರದಲ್ಲಿ ಲಾಕುಲೀಶ ಸರ್ವಮಂಗಳೆ ಎಂಬ ಹೆಸರಿನಿಂದ ಶಿವಪಾರ್ವತಿಯರು ನೆಲಿಸಿ ಎಲ್ಲರಿಂದಲೂ ಪೂಜೆಗೊಳ್ಳುತ್ತಾರೆ. ಭಾರಭೂತಿ ಎಂಬ ಕ್ಷೇತ್ರದಲ್ಲಿ ಭಾರ ಎಂಬ ಹೆಸರಿನ ಶಿವನು, ಭೂತಿ ಎಂಬ ಹೆಸರಿನ ಪಾರ್ವತಿಯು ವಾಸ ಮಾಡುತ್ತಿದ್ದಾರೆ.

ಅರಾಲಕೇಶ್ವರ ಕ್ಷೇತ್ರದಲ್ಲಿ ಸೂಕ್ಷ್ಮ ಸೂಕ್ಷ್ಮಾ ಎಂಬ ಹೆಸರಿನ ಶಿವ ಸತಿಯರು ವಾಸ ಮಾಡುತ್ತಿದ್ದಾರೆ. ಕುರುಕ್ಷೇತ್ರದಲ್ಲಿ ಸ್ಥಾಣು ಸ್ಥಾಣುಪ್ರಿಯಾ ಎಂಬ ಹೆಸರಿನಿಂದ ಪರಮೇಶ್ವರ ದಂಪತಿಗಳು ನೆಲೆಸಿದ್ದಾರೆ. ಕನಖಲ ಕ್ಷೇತ್ರದಲ್ಲಿ ಉಗ್ರ ಉಮಾನಾಮದಿಂದ ನೆಲೆಸಿದ್ದಾರೆ ನೀಲಕಂಠ ದಂಪತಿಗಳು. ತಾಲಕ ಕ್ಷೇತ್ರದಲ್ಲಿ ಸ್ವಯಂಭೂ ಸ್ವಾಯಂಭುವಿ ಎಂಬ ಹೆಸರಿನಿಂದ ವಾಸಿಸಿರುತ್ತದೆ ಈ ಜೋಡಿ. ಅಟ್ಟಹಾಸ ಎನ್ನುವದು ಒಂದು ವಿಶಿಷ್ಟ ತೀರ್ಥ. ಸೂರ್ಯದೇವನು ಭಗವಾನ್ ಶಂಕರನನ್ನು ವಿಶಿಷ್ಟರೂಪದಿಂದ ಪೂಜೆಗೈದದ್ದು ಇದೇ ಕ್ಷೇತ್ರದಲ್ಲಿ. ಅವನು ಮನೋರಥ ಸಿದ್ಧಿಯಾದದ್ದು ಇಲ್ಲೆ.

ಕೃತ್ತಿವಾಸ ಎನ್ನುವದು ಮತ್ತೊಂದು ಉತ್ತಮವಾದ ಶೈವಕ್ಷೇತ್ರ. ಕೈಲಾಸಕ್ಕಿಂತ ಹೆಚ್ಚಿನ ಮೋಹ ಪರಮೇಶ್ವರನಿಗೆ ಈ ಕ್ಷೇತ್ರದ ಬಗೆಗೆ. ಶ್ರೀಶೈಲ ಕ್ಷೇತ್ರದಲ್ಲಿ ಮಲ್ಲಿಕಾರ್ಜುನ ಎಂಬ ಹೆಸರಿನಲ್ಲಿ ಮಂಡಿಸಿದ್ದಾನೆ ಮಹಾದೇವ. ಅಲ್ಲಿ ಅವನ ಪೂಜಾಪರ್ಯುಪಾಸನಗಳನ್ನು ಮಾಡುವ ಮಹಾತಾಯಿಯು ಭ್ರಮರಾಂಬಿಕೆ. ಬ್ರಹ್ಮದೇವನು ಸೃಷ್ಟಿಯ ಆರಂಭ ಕಾಲದಲ್ಲಿ ತಾನು ಮಾಡಲಿರುವ ಜಗತ್‌ಸರ್ಜನ ರೂಪವಾದ ಮಹಾಕಾರ್ಯವನ್ನು ಕೈಕೊಳ್ಳುವ ಮುನ್ನ ಈ ಶ್ರೀಶೈಲ ಕ್ಷೇತ್ರಪಾಲರಾದ ಮಲ್ಲಿಕಾರ್ಜುನ ಭ್ರಮರಾಂಬಿಕೆಯರ ಸೇವೆ ಮಾಡಿ ತದಂತರ್ಗತ ಭಗವಂತನ ಆಶೀರ್ವಾದ ಪಡೆದುಕೊಂಡು ಹೋದನಂತೆ. ಆದರಿಂದ ಅವನು ಕೈಕೊಂಡ ಸೃಷ್ಟಿಕಾರ್ಯವು ನಿರಾಂತಕವಾಗಿ ನೆರವೇರುತ್ತಲಿದೆ.

ಸುವರ್ಣಮುಖರಿ ಎಂಬ ನದಿಯ ದಂಡೆಯ ಮೇಲಿರುವ ಶಿವ ಕಾಳಹಸ್ತಿ ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ಆ ಕಾಳಹಸ್ತಿ ಈಶ್ವರನ ಜೊತೆಗೆ ಭ್ರಮರಾಲಕಾ ಎಂಬ ಹೆಸರಿನಿಂದ ಮಹಾದೇವಿಯು ಪತಿ ಸೇವೆಗೈಯುತ್ತಲಿದ್ದಾಳೆ.

ಕಾಂಚೀಪುರಿಯಲ್ಲಿ ಒಂದು ಮಾಮರದ ಬುಡದಲ್ಲಿ ಕಾಮಾಕ್ಷಿದೇವಿಯೊಂದಿಗೆ ಕಾಮಶಾಸನ ನಾಮದಿಂದ ಶಂಕರನು ನೆಲೆಸಿದ್ದಾನೆ.

ವ್ಯಾಘ್ರಪುರ ಎಂಬ ತೀರ್ಥದ ದಂಡೆಯ ಮೇಲೆ ನೃತ್ಯ ಭಂಗಿಯಲ್ಲಿರುವ ನಟರಾಜ ಪರಮೇಶ್ವರನನ್ನು ಮಹರ್ಷಿ ಪತಂಜಲಿಯು ಉಪಾಸನೆಗೈಯುತ್ತಲಿದ್ದಾನೆ. ಸೇತುಬಂಧ ಎಂಬ ತೀರ್ಥದಡಿಯಲ್ಲಿ ಮರ್ಯಾದಾ ಪುರುಷೋತ್ತಮನಾದ ಪ್ರಭು ಶ್ರೀರಾಮಚಂದ್ರನು ರಾಮೇಶ್ವರ ಲಿಂಗವನ್ನು ಸ್ಥಾಪಿಸಿದ್ದಾನೆ.

ಗಜಪ್ರಪಾ ಎಂಬ ತೀರ್ಥ ಸ್ಥಾನದಲ್ಲಿ ಅಶ್ವತ್ಥ ಗಿಡದಡಿಯಲ್ಲಿ ಶಿವನ ಸನ್ನಿಧಾನ, ವೃಷಭಧ್ವಜ ಎಂಬ ಹೆಸರಿನಿಂದ ಸಲ್ಲುತ್ತದೆ ಆ ಪರಮೇಶ್ವರನಿಗೆ ಪೂಜೆ. ಮಣಿಮುಕ್ತಾನದಿಯ ದಂಡೆಯ ಮೇಲಿರುವ ವೃದ್ಧಾಚಲ ಕ್ಷೇತ್ರದಲ್ಲಿ ಶಂಕರನ ನಿತ್ಯ ಸನ್ನಿಧಾನ. ಮಧ್ಯಾರ್ಜನ ಎಂಬ ಕ್ಷೇತ್ರದಲ್ಲಿ ಪಾರ್ವತಿಯೊಂದಿಗೆ ಸಂತತವೂ ಸನ್ನಿಹಿತನಾದ ಮಹಾದೇವನು ಭಕ್ತರ ಮನೋವಾಂಛಿತಗಳನ್ನೆಲ್ಲಾ ಪೂರ್ಣಗೊಳಿಸುವನು.

ಸೋಮನಾಥ ಕ್ಷೇತ್ರದ ಹೆಸರನ್ನೂ ಕೇಳದವರಾರು? ಅಲ್ಲಿ ಇರುವ ಸೋಮ ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಸ್ವರ್ಗ. ದೇಹ ತ್ಯಾಗ ಮಾಡಿದವರಿಗೆ ಮೋಕ್ಷ.

ಸಿದ್ಧವಟ ಕ್ಷೇತ್ರದ ಹೆಸರನ್ನು ನೀನು ಕೇಳಿರಬಹುದು. ಅಲ್ಲಿರುವ ಸಿದ್ಧಪುರುಷರು ಜೋತಿರ್ಲಿಂಗ ಎಂಬ ಹೆಸರಿನ ಪರಮೇಶ್ವರನ ಲಿಂಗವನ್ನು ಪೂಜೆಗೈಯುತ್ತಾರೆ.

ಕಮಲಾಲಯ ಎಂಬುದು ಮತ್ತೊಂದು ಕ್ಷೇತ್ರ, ಅಲ್ಲಿ ನೆಲೆಸಿದ ಮಹದೇವನಿಗೆ ವಾಲ್ಮಿಕೇಶ್ವರನೆಂದು ಕರೆಯುವರು. ಈ ವಾಲ್ಮಿಕೇಶ್ವರನ ಸೇವೆಯಿಂದ ಜ್ಞಾನಪ್ರಾಪ್ತಿ, ಐಶ್ವರ್ಯ ಪ್ರಾಪ್ತಿ ಎರಡೂ ಆಗುವದು.

ದ್ರೋಣಪುರ ಎಂಬ ತೀರ್ಥದ ಹೆಸರನ್ನೂ ನೀನು ಕೇಳಿರುವೆಯಷ್ಟೆ. ಆದರೆ ಅದರ ಮಹಿಮೆಯನ್ನೂ ನೀನು ಅರಿತಿರಲಿಕ್ಕಿಲ್ಲ. ಕಲಿಯುಗ ಮುಗಿದ ಬಳಿಕ ಅವಾಂತರ ಪ್ರಳಯ ನಡೆಯುವದು. ಗಾಳಿ ಬೀಸುವದು, ಬೆಂಕಿ ಮಳೆ ಸುರಿಯುವದು, ಎಲ್ಲ ಸಾಗರಗಳು ಉಕ್ಕಿ ಮುಕ್ಕಿ ಘೋರ್ಗರೆಯ ತೊಡಗುವವು. ಹೀಗೆ ಚತುಃಸಾಗರಗಳು ಪ್ರಕ್ಷುಬ್ಧಗೊಂಡು ಸಾಗರದ ಆಳ ಅಗಲದಲ್ಲೆಲ್ಲಾ ತೆರೆಯ ರಾಶಿಗಳು ತೇರ್ಸೈಸಿ ಬಂದಾಗ ಪಾರ್ವತೀ ಪತಿಯಾದ ಪರಮೇಶ್ವರನು ಆ ದ್ರೋಣಪುರ ತೀರ್ಥದಲ್ಲಿಯೇ ಅದ್ಭುತವಾದ ನೌಕೆಯನ್ನೂ ಆರೋಹಣ ಮಾಡಿ ಇದೇ ದ್ರೋಣಪುರ ಕ್ಷೇತ್ರದಿಂದ ತನ್ನ ಪ್ರಳಯ ಜಲಧಿ ಸಂಚಾರವನ್ನು ಪ್ರಾರಂಭಿಸುವನು. ಬ್ರಹ್ಮಪುರ ಎಂಬುದು ಅಷ್ಟೇ ದೊಡ್ಡ ಕ್ಷೇತ್ರ. ಇಲ್ಲಿ ಒಂದು ಪವಿತ್ರವಾದ ಪುಷ್ಕರಣಿ ದಂಡೆಯ ಮೇಲೆ ಬ್ರಹ್ಮದೇವನು ಶಂಕರನ ಪ್ರತಿಷ್ಠೆಗೈದನು.

ಕೋಟಿಕಾ ಎಂಬುದು ಇನ್ನೊಂದು ಅನನ್ಯ ಸಾಮಾನ್ಯ ತೀರ್ಥ. ಈ ತೀರ್ಥದಲ್ಲಿ ಮಿಂದು ಬಂದರೆ ಕೋಟ್ಯಾವಧಿ ಪಾಪ ಮಾಡಿದ್ದರೂ ಪರಿಹರಿಸಿಬಿಡುತ್ತಾನೆ ಆ ಪರಮೇಶ್ವರನು.

ಮೂರು ಲೋಕಗಳಲ್ಲಿಯೇ ಪ್ರಸಿದ್ಧವಾದ ಗೋಕರ್ಣದ ಹೆಸರನ್ನು ಕೇಳದವರಾರು? ಈ ಕ್ಷೇತ್ರದಲ್ಲಿ ತನ್ನ ಪಾದೋದಕಧಾರಿಯಾದ ಗಂಗಾಧರನನ್ನು ಆರಾಧಿಸಬೇಕೆಂದು ಅಪೇಕ್ಷೆಯಿಂದ ಭಗವಾನ್ ಪರಶುರಾಮನು ಸ್ವರ್ಗಸುಖವನ್ನು ಕೂಡ ಧಿಕ್ಕರಿಸಿ ಇಲ್ಲಿಯೇ ನೆಲೆನಿಂತಿದ್ದಾನೆ. ತ್ರಿಪುರಾಂತಕ ಕ್ಷೇತ್ರದಲ್ಲಿ ಸುಪ್ರತಿಷ್ಠಿತನಾದ ತ್ರ್ಯಂಬಕನ ದರ್ಶನವನ್ನು ಮಾಡಿಕೊಂಡ ಮಾನವನಿಗೆ ನರಕದರ್ಶನ ಎಂದೂ ಆಗಲಾರದು.

ಕಾಲಂಜರ ಕ್ಷೇತ್ರದಲ್ಲಿ ನೀಲಕಂಠ ಎಂಬ ಹೆಸರಿನಿಂದ ನಿತ್ಯ ಸನ್ನಿಹಿತನಾಗಿದ್ದಾನೆ ಪರಮೇಶ್ವರ. ಅವನ ದರ್ಶನ ಸ್ಪರ್ಶನ ಮಾಡಿಕೊಂಡವರಿಗೆ ಭವರೋಗವೇ ಪರಿಹಾರವಾಗಿ ಹೋಗುವದು.

ಪ್ರಿಯಾಲ ಎಂಬುದು ಒಂದು ದೊಡ್ಡ ವನವೂ ಆಹುದು. ಕ್ಷೇತ್ರವೂ ಅಹುದು. ಇಲ್ಲಿ ನೆಲೆಸಿದ ಅಂಬಿಕಾಪತಿಯ ಮಹಿಮೆ ಅಗಾಧ. ಭಗವದ್ಭಕ್ತನಾದ ಉಪಮನ್ಯುವಿಗೆ ಹಾಲು ಕುಡಿಯಬೇಕೆಂದು ಇಚ್ಛೆ ಆಯಿತಂತೆ. ಅವನಿಗೊಂದು ಕ್ಷೀರಸಾಗರವನ್ನೇ ದಯಪಾಲಿಸಿದ ವಿರೂಪಾಕ್ಷ. ಪ್ರಭಾಸ ಕ್ಷೇತ್ರವಂತೂ ಪ್ರಪಂಚದಲ್ಲಿಯೇ ಸುಪ್ರಸಿದ್ಧ. ಅಲ್ಲಿ ಶೈವ ಮೂರ್ತಿಯ ಹೆಸರು ಚಂದ್ರಾರ್ಧಶೇಖರ. ಅಲ್ಲಿ ಪೂಜೆ ಸಲ್ಲಿಸುವವರು ಸಾಕ್ಷಾತ್ ಶ್ರೀಕೃಷ್ಣ ಮತ್ತು ಅವನ ಅಣ್ಣ ಬಲರಾಮ.

ಇದೊಂದು ಭಾರತದ ದೊಡ್ಡ ತೀರ್ಥ. ಪ್ರಜಾಪತಿದಕ್ಷನು ಮೋಕ್ಷದ ಸಲುವಾಗಿ ಇದೇ ಕ್ಷೇತ್ರದಲ್ಲಿ ನಿಂತು ಶಂಕರನ ಪ್ರಾರ್ಥನೆ ಮಾಡಿ, ಪೂಜೆಗೈದು ಮನೋರಥ ಸಿದ್ಧಿಯನ್ನು ಪಡೆದ.

ಹೇಮಕೂಟ ಎಂಬುದು ತ್ರಿಲೋಚನ ಎಂಬ ಹೆಸರಿನ ಶಿವನ ಮತ್ತೊಂದು ಕ್ಷೇತ್ರ. ಇಲ್ಲಿ ಜಪ ಜಪಿಸಿದವರಿಗೆ ಪುನರ್ಜನ್ಮವಿಲ್ಲ. ತಪ ತಪಿಸಿದವನಿಗೆ ಸಂಸಾರ ಬಂಧನವಿಲ್ಲ.

ವೇಣುವನ ಎಂಬುದು ಒಂದು ವಿಚಿತ್ರ ಕ್ಷೇತ್ರ. ದಳ್ಳುರಿಯು ಬಿದುರು ಮಳೆಗಳನ್ನು ಸುಟ್ಟುಹಾಕುವಂತೆ ಪಾಪದ ರಾಶಿಯನ್ನೇ ದಹಿಸಿಬಿಡುವದು ಈ ಪುಣ್ಯಕ್ಷೇತ್ರ. ಅಂಶಲತಾ ದೇವಿಯ ಗರ್ಭದಿಂದ ರತ್ನಲಿಂಗದ ರೂಪದಿಂದ ಪ್ರಕಟನಾಗಿದ್ದಾನೆ ಪರಮೇಶ್ವರ.

ಜಾಲಂಧರ ಎನ್ನುವದು ಪ್ರಸಿದ್ಧ ಶೈವ ಕ್ಷೇತ್ರ. ಜಲಂಧರನು ಇಲ್ಲಿ ತಪಂಗೈದು ಶಿವಗಣದ ಆಧಿಪತ್ಯವನ್ನು ಪಡೆದನು. ಜ್ವಾಲಾಮುಖಿ ಕ್ಷೇತ್ರದಲ್ಲಿರುವ ಕಾಲರುದ್ರನನ್ನು ಜ್ವಾಲಾಮುಖಿ ದೇವಿಯು ಪೂಜೆಗೈಯುತ್ತಿದ್ದಾಳೆ.

ಭದ್ರಪಟ ಇನ್ನೊಂದು ತೀರ್ಥದ ಹೆಸರು. ಇಲ್ಲಿರುವ ತ್ರಿಲೋಚನದೇವನನ್ನು ಪೂಜಿಸಿದವರಿಗೆ ಅಪರಂಪಾರ ಐಶ್ವರ್ಯ ಪ್ರಾಪ್ತಿ. ಗಂಧಮಾದನ ಕ್ಷೇತ್ರದಲ್ಲಿ ಮೃತ್ಯುಂಜಯನ ಪೂಜೆ ಮಾಡಿದವನಿಗೆ ಸುಖ ಸೌಭಾಗ್ಯ ಪ್ರಾಪ್ತಿ ನಿಶ್ಚಿತ. ಗೋ ಪರ್ವತ ಎಂಬ ಕ್ಷೇತ್ರದಲ್ಲಿ ಪರಮೇಶ್ವರನನ್ನು ಉಪಾಸನೆ ಮಾಡಿ ಪಾಣಿನಿಯು ವ್ಯಾಕರಣ ಪಾಂಡಿತ್ಯವನ್ನು ಪಡೆದು, ವ್ಯಾಕರಣಶಾಸ್ತ್ರಕ್ಕೆ ಪ್ರವರ್ತಕ ಮಹರ್ಷಿ ಎನಿಸಿದ. ವೀರಕೋಷ್ಠ ಎಂಬ ಶಿವಕ್ಷೇತ್ರದಲ್ಲಿ ವಾಲ್ಮೀಕಿ ಮಹರ್ಷಿಯೂ ಶಿವಾರಾಧನೆ ಗೈದು ಕವಿತಾ ಶಕ್ತಿ ಪಡೆದು ಆದಿಕವಿ ಎನಿಸಿದ. ಮಹಾತೀರ್ಥದ ವಿಷಯದಲ್ಲಿ ನೀನು ಈಗಾಗಲೇ ಕೇಳಿರಬಹುದು. ಇಲ್ಲಿ ಮಹಾರುದ್ರನು ಬ್ರಹ್ಮಾದಿದೇವತೆಗಳಿಗೆ ಶಾಸ್ತ್ರ ಪಾಠ ಹೇಳಿದನು. ಮಯೂರ ಎಂಬುದು ಶೈವಕ್ಷೇತ್ರಗಳಲ್ಲಿ ಸುಪ್ರಸಿದ್ಧ ಕ್ಷೇತ್ರ. ಇಲ್ಲಿಯೇ ದೇವೇಂದ್ರನು ಧೂರ್ಜಟಿಯನ್ನು ಆರಾಧಿಸಿ ವಜ್ರಾಯುಧವನ್ನು ಪಡೆದು ಕೊಂಡ. ವೇದವತಿಯ ನದಿಯ ದಂಡೆಯ ಮೇಲೆ ಶ್ರೀ ಸುಂದರಾ ಎಂಬ ಕ್ಷೇತ್ರವು ಹೆಸರಿಗೆ ತಕ್ಕಂತೆ ನಿಜವಾಗಿಯೂ ಸುಂದರವಾಗಿದೆ. ಅಲ್ಲಿ ನೆಲೆಸಿರುವ ಪರಮೇಶ್ವರನ ದಿವ್ಯ ವಿಗ್ರಹವು ತನ್ನ ಶೋಭೆಯಿಂದ ನಿಜವಾಗಿಯೂ ಪ್ರೇಕ್ಷಣೀಯವಾಗಿದೆ.

ದಕ್ಷಿಣ ಭಾರತದಲ್ಲಿ ಅತ್ಯಂತ ಸುಪ್ರಸಿದ್ಧವಾದ ಕ್ಷೇತ್ರವೆಂದರೆ ಕುಂಭಕೋಣ. ದೇವ ಗಂಗೆಯು ತನ್ನಲ್ಲಿ ಪಾಪಿಗಳು ಬಿಟ್ಟುಹೋದ ಪಾತಕಗಳ ಹೊರೆಯನ್ನು ಇಳಿಸಿಕೊಳ್ಳಲು ಪ್ರತಿ ವರುಷವೂ ಇಲ್ಲಿಯ ತೀರ್ಥದಲ್ಲಿ ಮಾಘ ಮಾಸ ಒಂದು ತಿಂಗಳ ಕಾಲ ಬಂದು

ನೆಲೆಸುತ್ತಾಳೆ. ಗೋದಾವರಿ ನದಿಯ ತೀರದಲ್ಲಿ ತ್ರ್ಯಂಬಕ ಎನ್ನುವದು ಮಹಾ ಶೈವಕ್ಷೇತ್ರ. ಕಾರ್ತೀಕೇಯ ಸ್ವಾಮಿಯು ತಾರಕಾಸುರನನ್ನು ಸಂಹರಿಸಲು ಶಕ್ತ್ಯಾಯುಧವನ್ನು ಪಡೆದುದು ಇದೇ ಪುಣ್ಯಕ್ಷೇತ್ರದಲ್ಲಿ. ಶ್ರೀ ಪಾಟಲದಲ್ಲಿ ವ್ಯಾಘ್ರಪುರ ಎಂಬ ಒಂದು ದಿವ್ಯಕ್ಷೇತ್ರವಿದೆ. ಇಲ್ಲಿ ತ್ರಿಶಂಕುಮುನಿಯು ತನ್ನ ಜಾತಿಶುದ್ಧಗಾಗಿ ಗಂಗಾಧರ ಎಂಬ ಶಿವಲಿಂಗ ಪೂಜೆ ಮಾಡಿದನು.

ಕದಂಬಪುರ ಎಂಬ ಕ್ಷೇತ್ರವನ್ನು ನೀನು ಎಂದಿಗೂ ಮರೆಯಲು ಶಕ್ಯವಿಲ್ಲ. ಮಾರ್ಕಂಡೇಯ ಮುನಿಯೆ, ಇದೇ ಕದಂಬ ಕ್ಷೇತ್ರದಲ್ಲಿ ನಿನ್ನನ್ನು ರಕ್ಷಿಸಲಿಕ್ಕಾಗಿ ಮಹಾದೇವನು ಕಾಲಮೃತ್ಯುವಿನ ಮೇಲೆ ತ್ರಿಶೂಲದಿಂದ ಆಘಾತ ಮಾಡಿದ್ದ.

ಅವಿನಾಶ ಎಂಬ ಶೈವ ಕ್ಷೇತ್ರದಲ್ಲಿ ಪರಮೇಶ್ವರ ದಂಪತಿಗಳು ನಿತ್ಯ ಸನ್ನಿಹಿತ ರಾಗಿರುತ್ತಾರೆ. ರಕ್ತಕಾನನ ಕ್ಷೇತ್ರದಲ್ಲಿ ಕಪಾಲಿಯು ಮಿತ್ರ ಮತ್ತು ವರುಣ ದೇವತೆಗಳಿಗೆ ವರ ನೀಡಿ ಅನುಗ್ರಹಿಸಿದ. ಪಾತಾಳದಲ್ಲಿರುವದು ಹಾಟಕೇಶ್ವರ ಕ್ಷೇತ್ರ. ಇಲ್ಲಿ ವಿರೋಚನ ಕುಮಾರನಾದ ಬಲಿ ಚಕ್ರವರ್ತಿಯು ತನ್ನ ಅಭಿಲಷಿತವಾದ ಪದ ಪ್ರಾಪ್ತಿಗಾಗಿ ಮಹಾದೇವರ ಪೂಜೆಗೈದ.

ಭಗವಾನ್ ಮಹೇಶ್ವರನ ಪ್ರೀತಿಯ ಕ್ಷೇತ್ರವಾದ ಕೈಲಾಸದ ಹೆಸರನ್ನೂ ಕೇಳದ ಶೈವರು ಯಾರಿದ್ದಾರೆ ಈ ಪ್ರಪಂಚದಲ್ಲಿ. ಯಕ್ಷರಾಜನಾದ ಕುಬೇರನು ಭಕ್ತಿ ಭಾವದಿಂದ ಇಲ್ಲಿ ತ್ರಿಲೋಚನನ ನಿತ್ಯ ನಿರಂತರಪರ್ಯುಪಾಸನೆಯನ್ನು ಮಾಡುತ್ತಲಿದ್ದಾನೆ. ಪರಮ ಪೂಜ್ಯನಾದ ಪರಮೇಶ್ವರನ ದಿವ್ಯ ಸನ್ನಿಧಾನದಿಂದ ಈ ಎಲ್ಲ ಶೈವಕ್ಷೇತ್ರಗಳು ಪುಣ್ಯಧಾಮಗಳೆಂದು ಪ್ರಖ್ಯಾತವಾಗಿವೆ. ಈ ಪ್ರಪಂಚದಲ್ಲಿ ಈ ಶೈವಕ್ಷೇತ್ರಗಳಲ್ಲಿ ಭಕ್ತಿಯಿಂದ ಭಗವಾನ್ ಭವಾನೀಪತಿಯನ್ನು ಆರಾಧನೆಗೈಯುವವರು ಪಾರ್ವತೀ ಪರಮೇಶ್ವರರ ಪರಮಾನುಗ್ರಹಕ್ಕೆ ಪಾತ್ರರಾಗುವರು.

## ಸರ್ವಫಲಪ್ರದ ಅರುಣಾಚಲ

**ಮಾರ್ಕಂಡೇಯ:-** ಪ್ರಭೋ! ನೀವು ಅನೇಕಾನೇಕ ದಿವ್ಯ ಕ್ಷೇತ್ರಗಳ ವರ್ಣನೆಯನ್ನು ಮಾಡಿದಿರಿ. ಈ ಎಲ್ಲ ತೀರ್ಥಕ್ಷೇತ್ರಗಳಲ್ಲಿ ಮಿಂದು ಬಂದು ಹರಿಹರೇಶ್ವರನನ್ನು ಭಜಿಸಿದವನಿಗೆ ಬೇರೆ ಬೇರೆ ಫಲಗಳು ಪ್ರಾಪ್ತವಾಗುತ್ತವೆ. ಆದರೆ ಈ ಎಲ್ಲ ತೀರ್ಥಕ್ಷೇತ್ರಗಳ ಯಾತ್ರೆಯಿಂದ ಬರುವ ಎಲ್ಲ ಪುಣ್ಯವು ಪ್ರಾಪ್ತವಾಗುವ, ಎಲ್ಲ ಫಲವೂ ಯಾವ ಒಂದು ತೀರ್ಥಕ್ಷೇತ್ರದ ಯಾತ್ರೆಯಿಂದ ಲಭ್ಯವಾಗುವದೋ ಅದನ್ನು ಹೇಳಿರಿ. ಸರ್ವತೀರ್ಥಗಳ ಫಲವನ್ನು, ಸರ್ವಕ್ಷೇತ್ರಗಳ ಪುಣ್ಯವನ್ನೂ, ಏಕಕಾಲಕ್ಕೆ ನೀಡುವ ಯಾವದಾದರೂ ಒಂದು ಪುಣ್ಯಸ್ಥಳವಿದ್ದರೆ ನನಗೆ ಹೇಳಿರಿ. ಅಂತಹ ಸ್ಥಾನ ಯಾವದು? ಆ ದೇಶ ಯಾವದು? ಇದನ್ನು ದಯವಿಟ್ಟು ತಿಳಿಸಿರಿ.

**ನಂದೀಶ್ವರ:-** ಮಹಾಮುನಿಯೇ! ನೀನು ನನ್ನ ಸೇವೆಯನ್ನು ಮಾಡಿರುವೆ ಅನನ್ಯ ಭಕ್ತಿಯಿಂದ. ನಿನ್ನ ಮೇಲಿರುವಷ್ಟು ಪ್ರೀತಿಯು ನನಗೆ ಬೇರೆ ಯಾರ ಮೇಲೂ ಇಲ್ಲ. ಆದುದರಿಂದ ನಾನು ನಿನಗೆ ಮಹಾದೇವರ ಆ ಗುಪ್ತಕ್ಷೇತ್ರದ ಉಪದೇಶವನ್ನು ಮಾಡುತ್ತೇನೆ. ಭಕ್ತಿಯನ್ನು ಬಯಸುವವರು ಮುಕ್ತಿಯನ್ನು ಅಪೇಕ್ಷಿಸುವವರು ಮಹಾದೇವರ ಈ ಗುಪ್ತಕ್ಷೇತ್ರದ ಉಪದೇಶವನ್ನು ಅವಶ್ಯವಾಗಿ ಕೇಳಲೇಬೇಕು. ನಾನು ಆ ಪಶುಪತಿಯ ರಹಸ್ಯವನ್ನು ಈಗ ನಿನಗೆ ಉಪದೇಶಿಸುತ್ತೇನೆ.

ಅದಕ್ಕೂ ಮೊದಲು ಆ ಸ್ಮರಹರನ ಸ್ಮರಣೆ ಮಾಡು. ಅಂಬಿಕೆಯ ಚರಣಗಳಿಗೆ ನಮಸ್ಕರಿಸು. ತದನಂತರ ಓಂಕಾರದ ಉಚ್ಚಾರ ಮಾಡು. ಇದು ನಿನಗೆ ಅತ್ಯಂತ ಕಲ್ಯಾಣಕಾರಕ. ತಪೋಧನನೇ! ದಕ್ಷಿಣ ದಿಕ್ಕಿನಲ್ಲಿ ದ್ರವಿಡದೇಶದಲ್ಲಿ ಅರುಣಾಚಲ ಎಂಬ ಮಹತ್ತರ ಕ್ಷೇತ್ರ ಒಂದಿದೆ. ಅದರ ವಿಸ್ತಾರ ಮೂರು ಯೋಜನ. ಶಿವ ಭಕ್ತರು ಆ ಕ್ಷೇತ್ರದ ಸೇವೆಯನ್ನು ಅವಶ್ಯವಾಗಿ ಮಾಡಬೇಕು. ಆ ಪ್ರದೇಶವು ಪೃಥ್ವಿಯ ಹೃದಯ. ಜಗತ್ತಿಗೆಲ್ಲ ಕ್ಷೇಮಂಕರನಾದ ಮಹಾದೇವರು ಆ ಕ್ಷೇತ್ರದಲ್ಲಿ ಪರ್ವತ ರೂಪದಿಂದ ಪ್ರಕಟಗೊಂಡು ಅರುಣಾಚಲ ಎಂಬ ಹೆಸರಿನಿಂದ ಪ್ರಖ್ಯಾತನಾಗಿದ್ದಾನೆ. ಈ ಅರುಣಾಚಲ ಕ್ಷೇತ್ರವು ಅನೇಕಾನೇಕ ಸಿದ್ಧಮಹರ್ಷಿ, ಸಿದ್ಧದೇವತೆ ವಿದ್ಯಾಧರ, ಯಕ್ಷ ಗಂಧರ್ವ ಹಾಗೂ ಅಪ್ಸರೆಯರ ಆವಾಸ ಸ್ಥಾನವಾಗಿದೆ. ಅರುಣಾಚಲವು ಸಾಕ್ಷಾತ್ ಪರಮೇಶ್ವರನ ಸ್ವರೂಪವೇ ಆದುದರಿಂದಲೇ ಸಹಸ್ರಾಧಿಕ ಸಿದ್ಧ, ಮಹರ್ಷಿ, ದೇವತಾ. ವಿದ್ಯಾಧರ, ಗಂಧರ್ವ, ಅಪ್ಸರೆಯರೇ ಮೊದಲಾದವರ ನಿವಾಸ ಸ್ಥಾನವಾಗಿದೆ. ಈ ಅರುಣಾಚಲದಲ್ಲಿ ತಮ್ಮ ಸ್ವಾಭಾವಿಕ ಮರಣದಿಂದ ದೇಹತ್ಯಾಗ ಮಾಡಿದ ಸಿಂಹ ವ್ಯಾಘ್ರವೇ ಮೊದಲಾದ ಕ್ರೂರ ಪಶುಗಳು ಕೂಡ ಶಿವಗಣದಲ್ಲಿ ಸೇರ್ಪಡೆಯಾಗುವರು. ಲಕ್ಷ ಲಕ್ಷ ವೃಕ್ಷ, ರೆಂಬೆ, ಕೊಂಬೆ, ಚಿಗುರು. ತಳಿರು ಕುಡಿಮಿಡಿಗಳನ್ನು ಜಡೆಯಂತೆ ಧರಿಸಿದ ಈ ಅರುಣಾಚಲವು ಸಾಕ್ಷಾತ್ ಶಿವನಂತೆ ತೋರುವದು. ಮಹಾದೇವನು ಸ್ಥಾಣು ಎಂಬ ತನ್ನ ಹೆಸರಿನ ಸಾರ್ಥಕತೆಯನ್ನು ಪಡೆದಿದ್ದು ಈ ಅರುಣಾಚಲದಲ್ಲೆ.

## ಅರುಣಾಚಲ ಮಹಿಮೆ

ಹಿಂದೆ ಪೂರ್ವಕಾಲದಲ್ಲಿ ಬಹು ವರ್ಷಗಳ ಮೊದಲು ಯೋಗಿರಾಜ ಎಂದು ಹೆಸರಾದ ಗೌತಮ ಮುನಿಗಳು ಸಾವಿರ ವರುಷ ತಪಸ್ಸು ಮಾಡಿ ಇದೇ ಅರುಣಾಚಲದಲ್ಲಿ ಶಿವನ ಸಾಕ್ಷಾತ್ಕಾರವನ್ನು ಪಡೆದುಕೊಂಡರು.

ಹಿಮಾಲಯ ಪರ್ವತದ ಪುತ್ರಿಯಾದ ಉಮಾದೇವಿಯು ಈ ಅರುಣಾಚಲ ಕ್ಷೇತ್ರದಲ್ಲಿಯೇ ನಿಂತು ತಪಸ್ಸುಮಾಡಿ ಶಿವನ ಅರ್ಧ ಅಂಗವನ್ನು ವ್ಯಾಪಿಸುವ ಸೌಭಾಗ್ಯವನ್ನು ಪಡೆದಳು. ಗೌರೀದೇವಿಯು ತಾನು ಶಿವನ ಅರ್ಧಾಂಗಿನಿ ಆಗುವ ಸೌಭಾಗ್ಯವನ್ನು ಪಡೆದ ಈ ಸಿದ್ಧಿಕ್ಷೇತ್ರದಲ್ಲಿಯೇ ಇದರ ನೆನಪಿಗಾಗಿ ಇಲ್ಲಿ ಅರುಣಾಚಲೇಶ್ವರ ಲಿಂಗದ ಸೇವೆಯಿಂದ ಮಾನವರಿಗೆ ಭಕ್ತಿ, ಮುಕ್ತಿ ಎರಡೂ ದೊರಕುತ್ತವೆ. ಪಾರ್ವತಿಯ ಆಜ್ಞೆಯಿಂದ ಇಲ್ಲಿ ಮಹಿಷಾಸುರ ಮರ್ದಿನಿಯಾದ ಸಾಕ್ಷಾತ್ ದುರ್ಗಾದೇವಿ ನೆಲೆಸಿದ್ದಾಳೆ. ಅವಳ ಆರಾಧನೆಯಿಂದ ಭಕ್ತರಿಗೆ ನಿರ್ವಿಘ್ನವಾಗಿ ಜಪ-ತಪ ಮಂತ್ರ ತಂತ್ರ ಮುಂತಾದವು ಸಿದ್ದಿಸುತ್ತವೆ. ಅಲ್ಲಿ ಸ್ವಯಂ ದುರ್ಗಾದೇವಿ ಪೂಜಿಸಿದ ಪಾಪನಾಶನ ಎಂಬ ಲಿಂಗವು ಶೋಭಾಯಮಾನವಾಗಿದೆ. ಒಮ್ಮೆಯಾದರೂ ಆ ಶಿವಲಿಂಗಕ್ಕೆ ನಮಸ್ಕಾರ ಮಾಡಿದರೆ ಮಾನವರ ಸಮಸ್ತ ಪಾಪಗಳು ಪರಿಹಾರವಾಗುತ್ತವೆ. ಈ ಕ್ಷೇತ್ರದಲ್ಲಿ ವಜ್ರಾಂಗದ ಎಂಬ ರಾಜನಿದ್ದನು. ಯಾವದೋ ಒಂದು ಕ್ಷುದ್ರಕಾರಣಕ್ಕಾಗಿ ಅವನು ಕುಬೇರನಲ್ಲಿ ತಪ್ಪು ಮಾಡಿದ. ಅದರಿಂದ ಒಮ್ಮೆಲೆ ಅವನ ಗ್ರಹಗತಿ ತಿರುಗಿತು. ದುರ್ಗತಿ ಪ್ರಾರಂಭವಾಯಿತು. ಎಷ್ಟೇ ಕಷ್ಟ ನಷ್ಟಗಳು ಬಂದರೂ ನಿಲ್ಲಲಿಲ್ಲ ಅವನ ಶಿವಪೂಜೆ. ನಿತ್ಯ ನಿರಂತರವೂ ನಡೆದ ಅವನ ಪರಮೇಶ್ವರನ

ಆರಾಧನೆಯ ಪ್ರಭಾವದಿಂದ ಅವನ ಪಾಪಗಳೆಲ್ಲ ಪರಿಹೃತವಾದವು. ಅಂತಃಕರಣದಲ್ಲಿ ಶಿವಭಕ್ತಿ ಮೂಡಿದ ಆ ಎಲ್ಲ ಭಕ್ತರು ಶಿವಸಾಯುಜ್ಯವನ್ನು ಪಡೆದರು.

ಅರುಣಾಚಲದ ಪ್ರದಕ್ಷಿಣೆ ಮಾಡುವ ಕಲಾಧರನೆಂಬ ವಿದ್ಯಾಧರ ರಾಜನು ದುರ್ವಾಸರ ಶಾಪಬಂಧನದಿಂದ ಬಿಡುಗಡೆ ಹೊಂದಿದನು. ಭಗವಾನ್ ಶಂಕರನನ್ನು ಅರಿಯುವದಕ್ಕಿಂತ ಮಿಗಿಲಾದ ಜ್ಞಾನವಿಲ್ಲ. ರುದ್ರಮಂತ್ರಕ್ಕೆ ಮಿಗಿಲಾದ ಮಂತ್ರವಿಲ್ಲ. ಭಗವಾನ್ ವಿಷ್ಣುವಿಗಿಂತ ಹೆಚ್ಚಿನ ಶ್ರೇಷ್ಠ ದೇವರಿಲ್ಲ. ವಿಭೂತಿಗಿಂತ ಹೆಚ್ಚಿನ ರಕ್ಷಣೆಯ ಸಾಧನವಿಲ್ಲ. ಭಕ್ತಿಗಿಂತ ಮಿಗಿಲಾದ ಸದಾಚಾರವಿಲ್ಲ. ದೀಕ್ಷಾ ಕೊಟ್ಟವನ ಹೊರತು ಬೇರೆ ಗುರುವಿಲ್ಲ. ರುದ್ರಾಕ್ಷಿಗಿಂತ ಹೆಚ್ಚಿನ ಒಡವೆ ಅಲಂಕಾರಗಳಿಲ್ಲ. ಹರಿಶಾಸ್ತ್ರಕ್ಕಿಂತ ಮಿಗಿಲಾದ ಬೇರೆ ಶಾಸ್ತ್ರವಿಲ್ಲ. ತುಳಸಿಗಿಂತ ಒಳ್ಳೆ ವೃಕ್ಷ ಇಲ್ಲ. ಮನಸ್ಸಿಗಿಂತ ಒಳ್ಳೇ ಹೂ ಇಲ್ಲ. ವೈರಾಗ್ಯಕ್ಕಿಂತ ಒಳ್ಳೇ ಆನಂದವಿಲ್ಲ. ಮುಕ್ತಿಗಿಂತ ಹೆಚ್ಚಿನ ಪದವಿ ಇಲ್ಲ.''

ಶಿಲಾದನ ಮಗನಾದ ನಂದೀಕೇಶ್ವರನು ಹೀಗೆ ಉಪದೇಶ ಮಾಡಿದ ಬಳಿಕ ಮಾರ್ಕಂಡೇಯನ ಮನಸ್ಸು ಬಹಳ ಪ್ರಸನ್ನವಾಯಿತು. ಅವನು ಆಶ್ಚರ್ಯಚಕಿತನಾದನು. ಮೇಲಿಂದ ಮೇಲೆ ಆನಂದದಿಂದ ಆ ನಂದೀಶ್ವರನನ್ನು ಕುರಿತು ಆತ್ಮನಿವೇದನೆ ಗೈಯುತ್ತ ಈ ರೀತಿಯಾಗಿ ಮಾತನಾಡಿದನು.

**ನಂದೀಶ್ವರ:-** ಪ್ರಭು! ಮಾನವರ ಯಾವ ಯಾವ ಕರ್ಮಗಳು ಯಾವ ಯಾವ ಫಲವನ್ನು ನೀಡುತ್ತವೆ? ಮತ್ತು ಅವುಗಳಿಂದ ನರಕ ಪ್ರಾಪ್ತಿ ಹೇಗೆ ಆಗುತ್ತವೆ? ಆ ಕರ್ಮಗಳಿಗೆ ಪ್ರಾಯಶ್ಚಿತ್ತವೇನು? ಇದೆಲ್ಲವನ್ನು ನನ್ನ ಸಲುವಾಗಿ ನಿರೂಪಣೆ ಮಾಡಿರಿ.

## ಮೂರು ವಿಧ ಕರ್ಮ

**ನಂದೀಶ್ವರ:-** ಮಹಾಮುನಿಯೇ! ಈ ಸಂಸಾರದಲ್ಲಿ ಕರ್ಮಗಳು ಮೂರು ವಿಧವಾಗಿರುತ್ತವೆ ಸಾತ್ವಿಕ. ರಾಜಸ, ತಾಮಸವೆಂದು. ಸಾತ್ವಿಕ ಕರ್ಮಾನುಷ್ಠಾನದಿಂದ ಮೋಕ್ಷ, ರಾಜಸ ಕರ್ಮಗಳಿಂದ ಸ್ವರ್ಗ, ತಾಮಸ ಕರ್ಮಗಳಿಂದ ನರಕ. ದುರ್ವಿಚಾರದ ದುರಾಚಾರಿ ಜನರು ತಮಃಪ್ರಧಾನವಾದ ದುಷ್ಕಾರ್ಯಗಳನ್ನು ಆಚರಿಸುತ್ತಾರೆ. ಇಂಥ ದುರ್ ವ್ಯಾಪಾರ ಮಾಡಿದವರು ತಾವು ಮಾಡಿದ ದುಷ್ಕಾರ್ಯಗಳಿಗೆ ಅನುಗುಣವಾದ ದುಃಖಾನುಭವವನ್ನು ಹೊಂದಲೇ ಬೇಕಾಗುವದು. ಅದಕ್ಕಾಗಿ ಬ್ರಹ್ಮದೇವರು ಬಗೆ ಬಗೆಯ ನರಕಗಳನ್ನು ನಿರ್ಮಾಣ ಮಾಡಿದ್ದಾರೆ. ಯಾವ ದುಷ್ಕಾರ್ಯದಿಂದ ಎಂಥ ನರಕ ಪ್ರಾಪ್ತಿ ಆಗುವದು ಅನ್ನುವದನ್ನು ಹೇಳುತ್ತೇನೆ ಕೇಳು.

## ದುಷ್ಕಾರ್ಯಗಳು ಮತ್ತು ಅವುಗಳ ಫಲ

ಜ್ಞಾನಿಯಾದ ಬ್ರಾಹ್ಮಣನನ್ನು ಕೊಲ್ಲುವದಕ್ಕೆ ಬ್ರಹ್ಮಹತ್ಯೆ ಎನ್ನುವರು. ಜ್ಞಾನಿಯಾದವನನ್ನು ಸಂಹರಿಸಿದ ಪಾಪದಿಂದ ಮಾನವನು ಮರಣದ ನಂತರ ಮೊದಲು ಕತ್ತೆ, ನಾಯಿ, ಹಂದಿ ಮುಂತಾದ ದುರ್‌ಯೋನಿಗಳಲ್ಲಿ ಜನಿಸಿ ಕೊನೆಗೆ ಪತಿತ ಜನ್ಮವನ್ನು ಪಡೆಯುವನು. ಸುರಾಪಾನ ಅಂದರೆ ಸೆರೆ ಕುಡಿದರೆ ಬಹುಕಾಲ ನರಕದಲ್ಲಿ ಬಿದ್ದು ಅನಂತರ ಹುಳಹುಪ್ಪಡಿ ಆಗಿ ಜನಿಸುವನು. ಬ್ರಾಹ್ಮಣರ ಸೊತ್ತು ಸಂಪತ್ತು ಎತ್ತಿಹಾಕಿದರೆ ಬ್ರಹ್ಮರಾಕ್ಷಸ ಜನ್ಮ ಬರುವದು. ತನಗೆ ವಿದ್ಯೆ ಕಲಿಸಿದ ತನ್ನ ಗುರುವಿನ ಮಡದಿಯೊಂದಿಗೆ

ಸರಸವಾಡುವ ಪಾಪಿಗೆ ಅಸಿಪತ್ರವನ ಎಂಬ ನರಕದಲ್ಲಿ ಬಹುಕಾಲ ದುಃಖವನ್ನು ಅನುಭವಿಸಬೇಕಾಗುವದು. ಕೊನೆಗೆ ಅವನು ಮಾನವಾಗಿ ಹುಟ್ಟಿದರೂ ನಪುಂಸಕನಾಗಿ ದುಃಖ ಪಡುವನು. ಹೆತ್ತವರ ಹೆಂಡಿರೊಡನೆ ಕಾಮ ಕೇಳಿಗೆ ಇಳಿದ ಕೀಳು ಮನುಷ್ಯನು ಕಾಲಸೂತ್ರ ಎಂಬ ನರಕದಲ್ಲಿ ಕಾದ ಕಬ್ಬಿಣದ ಸರಳು ಹಾರೆಗಳಿಂದ ಹೊಡೆಯಲ್ಪಡುವನು.

ಮತ್ತೊಬ್ಬರ ಮನೆಗೆ ಬೆಂಕಿ ಹಚ್ಚಿದ ಮತ್ತು ಇನ್ನೊಬ್ಬರಿಗೆ ವಿಷವಿಕ್ಕಿದ ಪಾಪಿಗಳು ಅವೀಚಿ ಎಂಬ ನರಕದಲ್ಲಿ ಬಹುಕಾಲ ಮಹಾದುಃಖವನ್ನು ಅನುಭವಿಸಬೇಕಾಗುವದು.

ಇದರಂತೆ ಮಿತ್ರದ್ರೋಹಿ ಮಾನವರಿಗೆ ಕರಾಳ ಎಂಬ ನರಕ. ಪರರ ಹಿಂಸೆ ಮಾಡಿದವನಿಗೂ, ಗುಪ್ತವಾಗಿ ಪಾಪ ಮಾಡುವವನಿಗೂ ಪರದ್ರವ್ಯವನ್ನು ಅಪಹರಿಸುವವರಿಗೂ, ಸುಳ್ಳು ಮಾತನಾಡುವವರಿಗೂ, ಭೀಮ, ಸಂಹಾರ, ಭಯಾನಕ, ಅತಿಘೋರ ಮುಂತಾದ ನರಕಗಳು ಪ್ರಾಪ್ತವಾಗುವವು. ಇದರಂತೆ ಪರದ್ರೋಹ ಪರಾಯಣನಾದ ಪುರುಷನಿಗೆ ವಜ್ರನರಕ, ಮಾಂಸ ಭಕ್ಷಣ ಮಾಡುವವನಿಗೆ ತರಲ, ತಾಯಿ-ತಂದೆಗಳ ದ್ರೋಹ ಬಗೆಯುವವನಿಗೆ ತೀಕ್ಷಣ, ಜಪ ತಪಗಳ ನಿಂದೆ ಮಾಡುವವನಿಗೆ ತಾಪನ, ಕುದುರೆಗಳನ್ನು ಕೊಲ್ಲುವವನಿಗೆ ನಿರುಛ್ವಾಸ, ಹಸುಗಳನ್ನು ಕೊಲ್ಲುವವನಿಗೆ ದಾರುಣ, ಎಳೆಮಗು ಅಥವಾ ಭ್ರೂಣಹತ್ಯೆ ಮಾಡುವವನಿಗೆ ಚಂಡ, ಸ್ತ್ರೀ ಹತ್ಯೆ ಮಾಡುವವನಿಗೆ ಕೂಲಕ, ದೇವಸ್ಥಾನ ಅಥವಾ ಮಠದ ಹಣವನ್ನು ಅಪಹರಿಸುವವನಿಗೆ ದಹನ, ಪರದ್ರವ್ಯ ಅಪಹರಿಸುವವನಿಗೆ ಘೋರ ಎಂಬ ಹೆಸರಿನ ನರಕಗಳಲ್ಲಿ ಬಹುಕಾಲದವರಿಗೆ ಬಹುವಿಧವಾದ ಯಮಯಾತನೆಗಳನ್ನು ಅನುಭವಿಸಬೇಕಾಗುವದು.

ಯಮದೂತರಿಗೆ ಕಿಂಚಿತ್ತಾದರೂ ದಯೆ ಇಲ್ಲ. ಯಾರ ಬಗೆಗೂ ದಾಕ್ಷಿಣ್ಯವಿಲ್ಲ. ಪಾಪ ಮಾಡಿದ್ದಾನೆಂದು ಗೊತ್ತಾದರೆ ಸಾಕು ಅಂಥ ಪಾಪಿಗಳನ್ನು ಸೆಳೆದೊಯ್ದು ನರಕದಲ್ಲಿ ಬೀಳಿಸುತ್ತಾರೆ. ಹಗ್ಗಗಳಿಂದ ಬಿಗಿಯುತ್ತಾರೆ. ಬಡಿಗೆಯಿಂದ ಬಡಿಯುತ್ತಾರೆ. ಸುತ್ತಿಗೆಗಳಿಂದ ಜಡಿಯುತ್ತಾರೆ. ತೀಕ್ಷ್ಣವಾದ ಚುಂಚುಳ್ಳ ಹದ್ದು ಕಾಗೆ ಮುಂತಾದ ಪಕ್ಷಿಗಳಿಂದ ಚುಚ್ಚಿಸಿ ಚುಚ್ಚಿಸಿ ಭಯಂಕರವಾದ ನೋವನ್ನು, ಉಂಟುಮಾಡಿಸುತ್ತಾರೆ. ಹುಲಿ, ಹಾವು, ಆನೆ, ಸಿಂಹ ಮುಂತಾದ ಕ್ರೂರ ಪ್ರಾಣಿಗಳಿಂದ ಕಚ್ಚಿಸಿ ಕಡಿಸಿ ವಿಲಕ್ಷಣ ವೇದನೆಯನ್ನು ಮಾಡುತ್ತಾರೆ. ಶಸ್ತ್ರಗಳಿಂದ ಹೊಡೆದು ಕಡಿದು, ತುಂಡು ತುಣುಕು ಮಾಡಿ ನರಿ-ನಾಯಿಗಳಿಂದ ಎಳೆದಾಡಿಸುತ್ತಾರೆ. ದೇಹವನ್ನು ಬೆಂಕಿಯಲ್ಲಿ ಹಾಕಿ ಕಾಸಿ ಕುದಿಸಿ ಭಯಂಕರ ಯಾತನೆಯನ್ನು ಅನುಭವಿಸುವಂತೆ ಮಾಡುತ್ತಾರೆ. ಕುದಿಯುವ ಎಣ್ಣೆಯ ಕಡಾವಿಗೆಯಲ್ಲಿ ಕರಿದು ತೆಗೆಯುತ್ತಾರೆ. ತೀಕ್ಷ್ಣವಾದ ಸೂಜಿಯಿಂದ ಅಂಗಾಂಗಗಳನ್ನು ಚುಚ್ಚಿ ಚುಚ್ಚಿ ಗಾಯಮಾಡುತ್ತಾರೆ.

ಹೀಗೆ ಯಮದೂತರು ಪಾಪಿಗಳಿಗೆ ಕೊಡುವ ಬಗೆ ಬಗೆಯ ಯಾತನೆಗಳಿಗೆ ಲೆಕ್ಕವೇ ಇಲ್ಲ. ಪಾಪಿ ಜೀವರು ನರಕದಲ್ಲಿ ಅನುಭವಿಸುವ ದುಃಖಗಳಿಗೆ ಅಂತ್ಯವಿಲ್ಲ. ಬವಣೆಗಳಿಗೆ ಪಾರವಿಲ್ಲ. ಭಗವಾನ್ ವಿಷ್ಣುವಿಗೆ ದ್ರೋಹ ಬಗೆದ ಮಾನವನು ಗಿರಿಗಿಟ ಎಂಬ ನರಕದೊಳಗೆ ಬೀಳುವನು. ಶಿವನಿಗೆ ದ್ರೋಹ ಬಗೆದ ಮಾನವನು ಮರ್ಕಟನಾಗುವನು. ಈ ರೀತಿಯಾಗಿ ವಿವಿಧ ಪಾಪಗಳಿಂದ ಒದಗಿ ಬರುವ ನರಕಗಳ ಭೀಕರತೆಯನ್ನು ತಿಳಿದು ಪುರುಷರು ಅಂಥ ಘೋರ ನರಕ ದುಃಖಗಳ ಶಾಂತಿಗಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬಹುದು. ಇಂಥ ಪ್ರಾಯಶ್ಚಿತ್ತಗಳನ್ನು ಮಾಡುವ ಮೊದಲು ಆ ಪಾಪ

ಮಾಡಿದ ಮನಸ್ಸಿನಲ್ಲಿ ತಾನು ಮಾಡಿದ ದುಷ್ಕರ್ಮಗಳ ಬಗೆಗೆ ಪಶ್ಚಾತ್ತಾಪ ಉಂಟಾಗಿರಬೇಕು. ಆ ಪಶ್ಚಾತ್ತಾಪದಿಂದಲೇ ಆ ಪಾಪಗಳಲ್ಲಿ ಕೆಲವಂಶ ಉಪಮರ್ದವನ್ನು ಹೊಂದಿರುತ್ತವೆ. ಅದರ ಮೇಲೆ ಪಶ್ಚಾತ್ತಾಪವಾದ ಮಾನವನು ಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತವನ್ನು ವಿಧಿಪೂರ್ವಕ ಮಾಡಿಕೊಂಡರೆ ಅವನಿಗೆ ನರಕದ ಭಯವು ಕಮ್ಮಿ ಆಗುವದು. ಅದರಲ್ಲೂ ಆಸ್ತಿಕರಾದ ಮಾನವರು ಈ ಅರುಣಾಚಲ ಕ್ಷೇತ್ರದಲ್ಲಿ ತಮ್ಮ ದುಷ್ಕರ್ಮಗಳಿಗೆಲ್ಲಾ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವದು ಉಚಿತವಾಗಿದೆ.

## ಯಾವ ಪಾಪಕ್ಕೆ ಯಾವ ಪ್ರಾಯಶ್ಚಿತ್ತ?

ಈ ಅರುಣಾಚಲ ಕ್ಷೇತ್ರದಲ್ಲಿ ಪಾಪ ಶುದ್ಧಿಗಾಗಿ ಹೇಗೆ ಯಾವ ಪಾಪಕ್ಕೆ ಎಂಥ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು ಎನ್ನುವದನ್ನು ವಿವರಿಸುತ್ತೇನೆ ಕೇಳಿರಿ. ಬ್ರಹ್ಮಹತ್ಯೆ ಮಾಡಿದ ಪಾಪಿಯು ಅರುಣಾಚಲಕ್ಕೆ ಹೋಗಬೇಕು. ಅಲ್ಲಿ ಕದ್ರು ತೀರ್ಥದಲ್ಲಿ ಮುಳುಗು ಹಾಕಿ ನಾಮ ಧರಿಸಿ ತುಳಸೀಮಾಲೆಯನ್ನು ಹಾಕಿಕೊಂಡು "ಓಂ ನಮಃ ಕೃಷ್ಣಾಯ" ಎಂಬ ಪಂಚಾಕ್ಷರಿ ಮಂತ್ರವನ್ನು ಜಪಿಸಬೇಕು. ಇಂದ್ರಿಯಗಳನ್ನು ಹಾಗೂ ಮನಸ್ಸನ್ನು ವಶದಲ್ಲಿಟ್ಟುಕೊಂಡು ಉಪವಾಸ ಮಾಡಿ ಹರಿಯ ಪೂಜೆ ಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಅನಂತರ ಐದು ವರ್ಷದವರೆಗೆ ಭಿಕ್ಷಾನ್ನದ ಮೇಲೆ ಉಪಜೀವನ ಮಾಡಿ ಜಿತೇಂದ್ರಿಯಭಾವದಿಂದ ಅರುಣಾಚಲೇಶ್ವರನ ಅಂತರ್ಗತನಾದ ಸಂಕರ್ಷಣದ ವಿಶೇಷ ಪೂಜೆಯನ್ನು ಮಾಡಿದರೆ ಬ್ರಹ್ಮಹತ್ಯಾ ದೋಷವು ತೊಲಗಿ ಹೋಗುವದು.

ಸುರಾಪಾನ ಮಾಡುವ ಪುರುಷನು ಈ ಅರುಣ ಕ್ಷೇತ್ರದಲ್ಲಿ ಒಂದು ವರ್ಷದವರೆಗೆ ಇರಬೇಕು. ಈ ಅವಧಿಯಲ್ಲಿ ಆಚಾರಶುದ್ಧಿ ಬಹಳ ಮುಖ್ಯ. ನಮ್ಮ ಮನಸ್ಸಿನಲ್ಲಿ ಕೂಡ ದುರ್ವಿಚಾರವನ್ನು ತರಕೂಡದು. ಶಿವಪೂಜೆಯನ್ನು ಒಂದು ದಿನವೂ ತಪ್ಪಿಸಬಾರದು. ಪ್ರತಿದಿನವು ಶತರುದ್ರಿಯ ಪಾರಾಯಣ ಮಾಡಿ ಮಹಾದೇವರಿಗೆ ಕ್ಷೀರಾಭಿಷೇಕವನ್ನು ಮಾಡಬೇಕು. ಹೀಗೆ ಒಂದು ವರುಷ ಮಾಡಿದ ಬಳಿಕ ಆ ಮನುಷ್ಯನು ಸುರಾಪಾನದ ಪಾಪದಿಂದ ಮುಕ್ತನಾಗುತ್ತಾನೆ.

ಬಂಗಾರ ಕಳವು ಮಾಡಿದ ಪಾಪಿಯು ಈ ಅರುಣಕ್ಷೇತ್ರದಲ್ಲಿ ಗಂಗಾಜನಕನನ್ನು ತುಳಸಿಯಿಂದ ಪೂಜಿಸಬೇಕು. ಯಥಾಶಕ್ತಿ ಬ್ರಾಹ್ಮಣಭೋಜನವನ್ನು ಮಾಡಿಸಬೇಕು. ಇದರಿಂದ ಸ್ವರ್ಣಸ್ತೇಯ ಎಂಬ ಘೋರಪಾತಕದಿಂದ ಮುಕ್ತನಾಗುವನು.

ಗುರುಪತ್ನಿ ಗಮನ ಮಾಡಿದ ಪಾತಕಿಯು ಈ ಅರುಣ ಕ್ಷೇತ್ರಕ್ಕೆ ಹೋಗಬೇಕು. ಅಲ್ಲಿ ವ್ರತನೇಮಿಷ್ಠನಾಗಿ ಇದ್ದು ಪ್ರತಿ ದಿನವೂ ಓಂ ನಮಃ ಶಿವಾಯ ಎಂಬ ಶಿವಷಡಕ್ಷರ ಮಂತ್ರವನ್ನು ಜಪಮಾಡಬೇಕು. ಇದರಿಂದ ಈ ಘೋರಪಾಪವು ಪರಿಹೃತವಾಗುವದು ಪರಸ್ತ್ರೀಯರೊಡನೆ ಸರಸವಾಡಿದ ಕಾಮಿ ಮನುಷ್ಯನು ಅರುಣಾಚಲ ಕ್ಷೇತ್ರಕ್ಕೆ ಬಂದು ಜಿತೇಂದ್ರಿಯನಾಗಿ ವಾಸ ಮಾಡಬೇಕು. ಒಂದು ತಿಂಗಳವರೆಗೆ ಪ್ರತಿದಿನವೂ ಹೊಸ ಹೊಸ ಹೂಗಳಿಂದ ಅರುಣೇಶ್ವರನನ್ನು ಪೂಜೆಮಾಡಬೇಕು. ಹಾಗೂ ತನ್ನ ಯೋಗ್ಯತೆಗೆ ತಕ್ಕಂತೆ ದಾನ-ಧರ್ಮ ಮತ್ತು ಬಗೆ ಬಗೆ ಪುಣ್ಯ ಕರ್ಮಗಳನ್ನು ಆಚರಿಸಬೇಕು. ಇದರಿಂದ ತತ್ಕಾಲದಲ್ಲಿಯೇ ಪಾಪ ಮುಕ್ತಿ ಆಗುವುದು.

ವಿಷಪ್ರಾಶನ ಮಾಡಿಸಿದ ಪಾಪಿಯು ಈ ಅರುಣಾಚಲ ಕ್ಷೇತ್ರದಲ್ಲಿ ವ್ರತಸ್ಥನಾಗಿ ಇದ್ದು ಶಾಸ್ತ್ರೋಕ್ತ ಶಿವಪೂಜೆ ಮಾಡಿದರೆ ದೋಷಮುಕ್ತನಾಗುವನು. ಹಸು, ಹೆಂಗಸು, ಹುಡುಗ-ಹುಡುಗಿಯರನ್ನು ಸಂಹಾರ ಮಾಡಿದ ಹಂತಕನು ಈ ಅರುಣಾಕ್ಷೇತ್ರಕ್ಕೆ ಬಂದು ವ್ಯತೀಪಾತಯೋಗದಲ್ಲಿ ಜ್ಞಾನಿಗಳನ್ನು ಕರೆದು ಭಕ್ತಿಯಿಂದ ಎಳ್ಳನ್ನು ದಾನ ಕೊಡಬೇಕು. ಅದರಿಂದ ಪಾಪ ಪರಿಹಾರ ನಿಶ್ಚಿತ.

ಗುಟ್ಟಾಗಿ ಪಾಪ ಮಾಡಿದವರು ಈ ಅರುಣ ಕ್ಷೇತ್ರದಲ್ಲಿ ಇಂದ್ರಿಯ ನಿಗ್ರಹ ಮಾಡಿಕೊಂಡು ಗುಪ್ತ ದಾನವನ್ನು ಮಾಡಿದರೆ ಅವರ ಪಾಪ ಪರಿಹಾರವಾಗುವದು. ಸುಳ್ಳು ಮಾತನಾಡಿದ ಮಾನವನು ಈ ಅರುಣ ಕ್ಷೇತ್ರದಲ್ಲಿ ಆರು ತಿಂಗಳು ಇದ್ದು ಪ್ರತಿದಿನವೂ ಅರುಣಾಚಲೇಶ್ವರನ ಸ್ತೋತ್ರವನ್ನು ಪಾಠ ಮಾಡುವದರಿಂದ ಪಾಪ ರಹಿತನಾಗುತ್ತಾನೆ.

ಇನ್ನೊಬ್ಬರ ಮನೆಯನ್ನು ಅನ್ಯಾಯದಿಂದ ಅಪಹರಿಸಿದ ಪಾಪಿಯು ಈ ಅರುಣ ಕ್ಷೇತ್ರಕ್ಕೆ ಬಂದು ಹೊಸ ಶಿವಮಂದಿರವನ್ನು ಕಟ್ಟಿಸಿದರೆ ಅವನ ಪಾಪ ಪರಿಹಾರವಾಗುವದು.

ಮಾನವನಿಗೆ ಏನೇ ಅಪೇಕ್ಷೆ ಇರಲಿ ಯಾವದೇ ವಸ್ತು ಬೇಕಾಗಿರಲಿ ಅವರು ನೇರವಾಗಿ ಈ ಅರುಣಾಚಲಕ್ಕೆ ನಡೆದು ಬರಬೇಕು. ಪಾದಚಾರಿಯಾಗಿ ಈ ಅರುಣಗಿರಿಗೆ ಪ್ರದಕ್ಷಿಣೆ ಹಾಕಬೇಕು. ಇದರಿಂದ ಅವರ ಇಷ್ಟಾರ್ಥಗಳು ಸಿದ್ಧಿಸುವವು. ಮನುಷ್ಯನಿಗೆ ಯಾವದೇ ದುಃಖ ಬರಲಿ, ಅನಾರೋಗ್ಯ ತಲೆದೋರಲಿ, ಮೂರ್ಛಾದಿ ರೋಗಗಳು ಬರಲಿ, ಕೆಟ್ಟ ಕನಸನ್ನು ಕಾಣಲಿ, ಜೀವನದಲ್ಲಿ ಯಾವದೇ ಅನಿಷ್ಟ ತಲೆ ದೋರಲಿ ಹೆದರುವ ಕಾರಣವಿಲ್ಲ. ನೇರವಾಗಿ ಅರುಣಾಚಲಕ್ಕೆ ಹೋಗಬೇಕು. ಅರುಣಾಚಲೇಶನನ್ನು ಪೂಜಿಸಬೇಕು. ಅವನ ನಾಮೋಚ್ಚಾರಣವನ್ನು ನಿರಂತರವಾಗಿ ಮಾಡಬೇಕು. ತನ್ನ ಶಕ್ತ್ಯಾನುಸಾರ ದಾನ ಧರ್ಮ, ಪುಣ್ಯಕರ್ಮಗಳನ್ನು ಆಚರಿಸಬೇಕು ಈ ಕ್ಷೇತ್ರದಲ್ಲಿ. ಅದರಿಂದ ಅವರ ಕಷ್ಟಾನಿಷ್ಟಗಳೆಲ್ಲ ಪರಿಹಾರವಾಗಿ ರೋಗ-ರುಜಿನಗಳೆಲ್ಲ ದೂರವಾಗಿ ನ್ಯೂನತೆ ಹೀನತೆಗಳೆಲ್ಲ ಕಳೆದುಹೋಗಿ ಮನೋಭೀಷ್ಟಗಳೆಲ್ಲ ಪೂರ್ಣವಾಗುವವು. ಇಲ್ಲಿ ಶಂಕರನ ಹಾಗೂ ಶ್ರೀ ಶಿವಾಂತರ್ಯಾಮಿ ಶ್ರೀಹರಿಯ ಕ್ಷೇಮಕರವಾದ ನಾಮಗಳನ್ನು ಉಚ್ಚರಿಸಿ ಜಪಾನುಷ್ಠಾನ ಗೈದರೆ ಕಾಶಿ, ಗಯಾ, ಪ್ರಯಾಗ, ಪುಷ್ಕರ, ಸೇತುಬಂಧ ಮುಂತಾದ ತೀರ್ಥಕ್ಷೇತ್ರಗಳ ಯಾತ್ರೆ ಮಾಡಿದ್ದಕ್ಕಿಂತ ಅತ್ಯಧಿಕವಾದ ಪುಣ್ಯಫಲವು ಅನಾಯಾಸದಿಂದಲೇ ಪ್ರಾಪ್ತವಾಗುವವು. ಅರುಣ ಕ್ಷೇತ್ರದ ಸಮೀಪದಲ್ಲಿ ಮಾಡುವ ಶಾಸ್ತ್ರೋಕ್ತ ಹದಿನಾರು ದಾನಗಳಿಂದ ಇಮ್ಮಡಿ ಪುಣ್ಯಫಲವು ಪ್ರಾಪ್ತವಾಗುವದು.

## ಅರುಣಾಚಲೇಶ್ವರನನ್ನು ಸೇವಿಸುವ ಬಗೆ

**ನಂದಿಕೇಶ್ವರ:-** ಓಂ ನಮಃ ಶಿವಾಯ ಎಂಬ ಶಿವ ಷಡಕ್ಷರ ಮಂತ್ರದಿಂದ ಹಾಗೂ ಪ್ರಣವ ಮಂತ್ರದಿಂದ ಹಾಲು ಮೊಸರು ಮುಂತಾದ ಗವ್ಯ ಪದಾರ್ಥಗಳಿಂದ ಪರಮೇಶ್ವರನಿಗೆ ಅಭಿಷೇಕ ಮಾಡಬೇಕು. ದಕ್ಷಿಣಾಯನ. ಉತ್ತರಾಯಣ ಪ್ರಾರಂಭದ ದಿನದಲ್ಲಿಯೂ ಹಾಗೂ ವಿಷುವ ಯೋಗದಲ್ಲಿಯೂ ಅರುಣಾಚಲೇಶ್ವರನಿಗೆ ಮುಂಜಾವಿನಲ್ಲಿಯೇ ಎದ್ದು ಭಕ್ತಿಪೂರ್ವಕವಾಗಿ ತುಳಸಿಯನ್ನು ಏರಿಸಿ ಪೂಜೆ ಮಾಡಬೇಕು. ಘೋರ ಅಘೋರ ಮಂತ್ರಗಳ ಒಂದೊಂದು ಮಂತ್ರದಿಂದ ಒಂದು ಸಾವಿರ ಕಲಶಗಳನ್ನು ಸುರಿದು ಶಿವನಿಗೆ ಶುದ್ಧೋದಕ ಸ್ನಾನ ಮಾಡಿಸಬೇಕು.

ಶಿವರಾತ್ರಿ ದಿನದಂದು ಪೂಜೆ ಇನ್ನೂ ವಿಶೇಷ. ಪೂಜಕನು ಜಿತೇಂದ್ರಿಯನಾಗಿ ಶತರುದ್ರ ಪಾರಾಯಣ ಮಾಡುತ್ತ ಬಿಲ್ವಪತ್ರಿಗಳನ್ನು ಅರ್ಪಿಸಿ ಅರುಣಾಚಲೇಶ್ವರನಿಗೆ ವಿಶೇಷ ಪೂಜೆಯನ್ನು ಸಲ್ಲಿಸಬೇಕು. ರಾತ್ರಿಯಲ್ಲಿ ಜಾಗರಣೆ ಮಾಡಬೇಕು. ಕಮಲ, ಕಲ್ಹಾರ ಮುಂತಾದ ಹೂಗಳಿಂದ ಪೂಜೆ ಮಾಡಿ ದೇವರ ಎದುರು ನೃತ್ಯಸೇವೆ, ಸಂಗೀತ ಸೇವೆ ಮುಂತಾದವುಗಳನ್ನು ಸಲ್ಲಿಸುತ್ತ ಆಗಮೋಕ್ತ ವಿಧಿಯಿಂದ ಶಿವಕೇಶವರ ಪೂಜೆಯನ್ನೂ ಮಾಡಬೇಕು. ಭಕ್ತಿಯುಕ್ತನಾದ ಮರ್ತ್ಯನು ತನ್ನ ಹುಟ್ಟಿದ ದಿನ ಅಥವಾ ಯಾವದಾದರೂ ಸಂಪತ್ತು, ಆಪತ್ತು, ಕುತ್ತು, ಪ್ರಾಪ್ತವಾದ ವಿಶೇಷ ಸಂದರ್ಭದಲ್ಲಿ ಅರುಣಾಚಲೇಶ್ವರನ ಭಕ್ತಿಯುಕ್ತವಾದ ಪೂಜೆಯನ್ನು ಮಾಡಬೇಕು. ಈ ಕ್ಷೇತ್ರದಲ್ಲಿ ನೆಲಿಸಿ ಶಿವಪೂಜೆಯನ್ನು ಅರ್ಥಾತ್ ಅರುಣಾಚಲೇಶ್ವರನ ಪೂಜೆಯನ್ನು ಮಾಡಿದರೆ ಸ್ವರ್ಗವು ಸ್ವಾಧೀನ. ಮೋಕ್ಷವು ಕರತಲಾಮಲಕ. ಇಂಥ ಮಹಾಕ್ಷೇತ್ರದಲ್ಲಿ ಜನ್ಮ ಪಡೆದು ಇಲ್ಲಿಯ ಕ್ಷೇತ್ರಪತಿಯ ಪೂಜೆಯನ್ನು ವಿದ್ಯುಕ್ತ ರೀತಿಯಿಂದ ಮಾಡಿದರೆ ಬದುಕಿರುವವರೆಗೂ ಭೋಗ, ಮರಣಾನಂತರ ಮೋಕ್ಷ ಎರಡೂ ದೊರಕುವದು.

## ವಿಶ್ವನಿರ್ಮಾಣದ ಪ್ರಾರಂಭ ಇಲ್ಲಿಯೇ

ಮಹಾಮುನಿಯೇ! ಪೂರ್ವಕಾಲದಲ್ಲಿ ದೇವಕಲ್ಪದ ಆರಂಭ ಕಾಲದಲ್ಲಿ ವಿಕಲ್ಪ ಶೂನ್ಯವಾದ ಪರಬ್ರಹ್ಮನು ತನ್ನ ಇಚ್ಛೆಯಿಂದಲೇ ವಿಶ್ವವನ್ನು ನಿರ್ಮಾಣ ಮಾಡಿದನು. ವಿಶ್ವೋತ್ಪತ್ತಿಯ ಅನಂತರ ಈ ಜಗತ್ತಿನ ಪರಂಪರೆಯು ಮುಂದುವರೆಯಬೇಕು ಹಾಗೂ ಸೃಷ್ಟವಾದ ಪದಾರ್ಥಗಳೆಲ್ಲವೂ ಸುರಕ್ಷಿತವಾಗಿ ಉಳಿಯಬೇಕು ಎನ್ನುವ ಉದ್ದೇಶದಿಂದ ತನ್ನ ದೇಹದ ಬಲಬದಿಯಿಂದ ಬ್ರಹ್ಮನನ್ನು, ಎಡಬದಿಯಿಂದ ಶಿವನನ್ನು ಪ್ರಕಟ ಗೊಳಿಸಿದನು. ದೇವದೇವನಾದ ಪರಬ್ರಹ್ಮನ ಆಣತಿಯನ್ನು ತಲೆಯಲ್ಲಿ ಹೊತ್ತು ಅವರಿಬ್ಬರೂ ದೇವತೆಗಳು ಸೃಷ್ಟಿ ಮತ್ತು ಸಂಹಾರ ಕಾರ್ಯಗಳಲ್ಲಿ ತತ್ಪರರಾಗಿ ಸಂಪೂರ್ಣ ಜಗತ್ತಿನ ಶಾಸನ ಕಾರ್ಯವನ್ನು ಮಾಡತೊಡಗಿದರು. ಸ್ವಯಂ ಪರಬ್ರಹ್ಮನು ಸಂರಕ್ಷಣ ಕಾರ್ಯ ಮಾಡುವನು.

ಅನಂತರ ಬ್ರಹ್ಮದೇವನು ತನ್ನ ಮನಃ ಸಂಲ್ಪದಿಂದ ಹತ್ತು ಜನ ಗಂಡು ಮಕ್ಕಳನ್ನೂ ಬಲಗೈ ಹೆಬ್ಬೆರಳಿನಿಂದ ದಕ್ಷ ಪ್ರಜಾಪತಿಯನ್ನೂ ಉತ್ಪನ್ನ ಮಾಡಿದನು. ಅನಂತರ ಮುಖದಿಂದ ಬ್ರಾಹ್ಮಣರನ್ನೂ, ಬಾಹುಗಳಿಂದ ಕ್ಷತ್ರಿಯರನ್ನೂ, ತನ್ನ ಎರಡು ತೊಡೆಗಳಿಂದ ವೈಶ್ಯರನ್ನೂ ಎರಡು ಚರಣಗಳಿಂದ ಶೂದ್ರರನ್ನೂ ಉತ್ಪನ್ನಗೈದನು. ಬ್ರಹ್ಮದೇವರ ಮಾನಸ ಪುತ್ರರಾದ ಕಶ್ಯಪ ಮಹರ್ಷಿಗಳು ದೇವತೆಗಳನ್ನು ಅಸುರರನ್ನು ಮರುತ, ನಾಗ, ಯಕ್ಷ, ಗಂಧರ್ವ, ಅಪ್ಸರೆ ಮುಂತಾದವರನ್ನು ಹುಟ್ಟಿಸಿದರು. ಇದರಂತೆ ಬ್ರಹ್ಮದೇವರಿಂದಲೇ ಹುಟ್ಟಿದ ಮನು ಮಹರ್ಷಿಯು ಮಾನವಕುಲದ ಉತ್ಪತ್ತಿಗೆ ಕಾರಣನಾಗಿ ಬ್ರಹ್ಮಸೃಷ್ಟಿಯನ್ನು ಸಮೃದ್ಧಗೊಳಿಸಿದನು. ಮನುವಿನಿಂದ ಉತ್ಪನ್ನವಾದ ಸಂತಾನಕ್ಕೆ ಮಾನವಕುಲ ಎಂದು ಹೆಸರು. ಮಹರ್ಷಿ ಅತ್ರಿ ಮುನಿಯಿಂದ ಋಷಿಗಳ ಸಂತಾನವು ಹಾಗೂ ಕ್ಷತ್ರಿಯರ ಬೇರೆ ಬೇರೆ ವಂಶಗಳು ಉತ್ಪನ್ನವಾದವು. ಪುಲಸ್ತ್ಯ, ಪುಲಹ ಎಂಬ ಬ್ರಹ್ಮಮಾನಸ ಪುತ್ರರಿಂದ ಯಕ್ಷ ಮತ್ತು ರಾಕ್ಷಸಕುಲಗಳು ಉತ್ಪನ್ನವಾದವು. ಅಂಗಿರಸ ಮುನಿಯಿಂದ ಉತಥ್ಯ ಹಾಗೂ ಬ್ರಹಸ್ಪತಿ ಎಂಬ ಸೋದರರು ಜನ್ಮ ಪಡೆದರು. ಭೃಗುಮುನಿಯಿಂದ ಚ್ಯವನ ಹಾಗೂ ಅಗ್ನಿ ಮುಂತಾದವರ ಉತ್ಪತ್ತಿ. ಇದರಂತೆ ವಶಿಷ್ಠರು

ಮೊದಲಾದ ಬ್ರಹ್ಮಋಷಿಗಳಿಂದ ಅನೇಕ ಮಹಾ ಮಹರ್ಷಿಗಳ ಜನ್ಮವಾಯಿತು. ಹೀಗೆ ಬ್ರಹ್ಮದೇವರು ತಮ್ಮ ಸಂತಾನ ಸೃಷ್ಟಿಯಿಂದ ಈ ಜಗತ್ತನ್ನು ತುಂಬಿಸಿ ಬಿಟ್ಟರು.

ಹಿಂದೆ ಒಂದಾನೊಂದು ಕಾಲದಲ್ಲಿ ಭಗವಾನ್ ಶ್ರೀ ವಿಷ್ಣುವು ಭಗವಾನ್ ಶ್ರೀ ಮಹೇಶ್ವರನನ್ನು ಹೀಗೆ ಸ್ತೋತ್ರ ಮಾಡಿದನು ಲೋಕವಿಡಂಬನಾರ್ಥವಾಗಿ.

''ಪೃಥ್ವೀರೂಪವನ್ನು ಧರಿಸಿದ ಮಹದೇವನೇ, ನಿನಗೆ ಜಯವಾಗಲಿ! ಜಲರೂಪ ಧಾರಿಯಾದ ಜಟಾಧಾರಿಯೇ ನಿನಗೆ ಜಯವಾಗಲಿ! ಸೂರ್ಯರೂಪಿಯಾದ ಶಂಕರನೇ ಚಂದ್ರನನ್ನು ಜಡೆಯಲ್ಲಿ ಮುಡಿದುಕೊಂಡ ರುದ್ರನೇ, ನಿನಗೆ ಜಯವಾಗಲಿ! ಅಗ್ನಿರೂಪ ಮಹೇಶ್ವರ, ಪರ್ವತರೂಪಿ ಪರಮೇಶ್ವರ, ಕಾಲರೂಪಿ ಮೃತ್ಯುಂಜಯ, ತ್ರಿಗುಣಾತೀತನಾದ ತ್ರ್ಯಂಬಕ, ಅಕ್ಷಯ ಐಶ್ವರ್ಯ ಸಂಪನ್ನನಾದ ಮಹಾದೇವ, ಕರುಣಾ ಸಮುದ್ರನಾದ ಕೈಲಾಸಪತಿ ನಿನಗೆ ಜಯವಾಗಲಿ. ಸರ್ವದೇವತಾ ಶ್ರೇಷ್ಠನಾದ ನಿನ್ನನ್ನು ನಾನು ಎಷ್ಟೆಂದು ಹೊಗಳಲಿ. ಸರ್ವೋತ್ತಮದ ನಿನಗೆ ನಮ್ಮ ಅನಂತಾನಂತ ಪ್ರಣಾಮಗಳು.

## ಪಾರ್ವತಿಯ ತಪಸ್ಸಿನ ಬಗೆ

**ಮಾರ್ಕಂಡೇಯ:-** ಪೂಜ್ಯರೇ, ಪರಮೇಶ್ವರನ ಪ್ರೇಯಸಿಯಾದ ಪಾರ್ವತಿ ದೇವಿಯು ಅರುಣಾಚಲ ತೀರ್ಥದಲ್ಲಿ ನಿಂತು ತಪಸ್ಸನ್ನು ತಪಿಸಿದಳಂತೆ. ಅದರ ಬಗೆಯನ್ನು ತಿಳಿಯಬೇಕೆಂದು ನನ್ನ ಬಯಕೆ. ದಯಮಾಡಿ ಬಿತ್ತರಿಸಿರಿ.

**ನಂದೀಶ್ವರ:-** ಮತಿಮಂತ ಮುನಿಯಾದ ಮಾರ್ಕಂಡೇಯ! ಪೂರ್ವಕಾಲದಲ್ಲಿ ಭಗವಾನ್ ಶಂಕರನು ದಕ್ಷಕನ್ಯೆಯಾದ ಸತೀದೇವಿಯೊಡನೆ ಮದುವೆ ಮಾಡಿಕೊಂಡ ಸಮಾಚಾರವನ್ನು ನೀನು ಬಲ್ಲೆಯಷ್ಟೆ? ಆ ಸತಿಯು ರೂಪದಿಂದ ರತಿ. ಗುಣದಿಂದ ಸತಿ. ಆದುದರಿಂದಲೇ ಪರಮೇಶ್ವರನಿಗೆ ದಾಕ್ಷಾಯಣಿ ಎಂದರೆ ಅಚ್ಚುಮೆಚ್ಚು.

ಒಂದು ವಿಷಮ ಘಳಿಗೆ. ದಕ್ಷ ಪ್ರಜಾಪತಿಗೆ ತನ್ನ ಅಳಿಯ ತ್ರಿಶೂಲಿಯ ಬಗ್ಗೆ ದ್ವೇಷ. ಆದರಿಂದ ಅವನ ಮೇಲೆ ರೋಷ. ಆದರ ಪರಿಣಾಮವಾಗಿ ದಕ್ಷನಿಂದ ಶಿವನ ದ್ರೋಹ. ಈ ಶಿವದ್ರೋಹವನ್ನು ಸರ್ವಾತ್ಮನಾ ತಾಳಲಿಕ್ಕೆ ಆಗಲಿಲ್ಲ ಆ ಶರ್ವಾಣಿಗೆ. ನಖಶಿಖಾಂತವಾಗಿ ಸಿಟ್ಟು ಅವಳಿಗೆ ತಂದೆಯ ಬಗ್ಗೆ. ಆದರೂ ಏನೂ ಮಾಡುವಂತಿಲ್ಲ. ಹಡೆದ ತಂದೆಯಲ್ಲವೇ ದಕ್ಷ? ಆದರೆ ಶಿವನಿಂದೆಯನ್ನು ಹೇಗೆ ಕೇಳುವದು, ಕೇಳಿದ ಬಳಿಕ ಹೇಗೆ ತಾಳುವದು? ಅವಳಿಂದ ತನ್ನ ಪತಿ ವಿರೂಪಾಕ್ಷನನ್ನು ಅಧಿಕ್ಷೇಪಿಸಿ ಆಡಿದ ದಕ್ಷಪ್ರಜಾಪತಿಯ ಮಾತುಗಳನ್ನು ಸಹಿಸಲಿಕ್ಕೆ ಆಗಲಿಲ್ಲ. ತನ್ನ ದೇಹದಲ್ಲಿ ಯೋಗಾಗ್ನಿಯನ್ನು ಉದ್ದೀಪಿಸಿ ತನ್ನ ಶರೀರತ್ಯಾಗ ಮಾಡಿದಳು.

ದಾಕ್ಷಾಯಣಿಯ ದೇಹದಹನ ಸಮಾಚಾರ ತಿಳಿಯಿತು ಪರಮೇಶ್ವರನಿಗೆ. ತಕ್ಷಣವೇ ವೀರಭದ್ರನ ಉತ್ಪತ್ತಿ. ದಕ್ಷಯಜ್ಞದ ವಿಧ್ವಂಸ ಮಾಡಲು ಪರಮೇಶ್ವರನ ಅಪ್ಪಣೆ. ಅನುಪದದಲ್ಲಿಯೇ ದಕ್ಷನ ಯಜ್ಞವೆಲ್ಲವೂ ವಿಧ್ವಂಸ, ವೀರಭದ್ರನಿಂದ ದಕ್ಷ ಪ್ರಜಾಪತಿಯ ಸಂಹಾರ, ಇದೆಲ್ಲವೂ ಇತಿಹಾಸದ ಗತಗೋಷ್ಠಿ.

ಅನಂತರ ಆ ಸತೀದೇವಿಯು ಮತ್ತೆ ಪರ್ವತ ಸಾರ್ವಭೌಮನಾದ ಹಿಮವಂತನ ಹೊಟ್ಟೆಯಿಂದ ಹುಟ್ಟಿ ಬಂದಳು. ಆಗ ಅವಳ ಹೆಸರು ಪಾರ್ವತಿ. ಉಮಾ, ಕೆಲದಿನಗಳ ನಂತರ ಪಾರ್ವತಿಯು ಸ್ಥಾಣುವನದಲ್ಲಿ ಆ ಗಂಗಾಧರನ ಏಕಾಂತ ಸೇವೆಯನ್ನು ಮಾಡತೊಡಗಿದಳು. ಆದೇ ಕಾಲದಲ್ಲಿ ಕಂದರ್ಪನು ಮಹಾದೇವನ ಮೇಲೆ ತನ್ನ ಹೂ

ಬಾಣಗಳನ್ನು ಸುರಿಸಿದನು. ಒಮ್ಮೆ ಕಣ್ ತೆರೆದು ನೋಡಿದ ಆ ಭರ್ಗ. ಕಾಮ ಬಾಣಪ್ರಹಾರದಲ್ಲಿ, ರತನಾಗಿದ್ದ. ಅದನ್ನು ಕಂಡು ಸ್ಥಾಣುವಿನ ಹಣೆಗಣ್ಣಿನ ಅಗ್ನಿಕುಂಡ ಭುಗಿಲ್ಲೆಂದಿತು. ಆರೆಕ್ಷಣದಲ್ಲಿ ಶೃಂಗಾರ ಮೂರುತಿ ಮನ್ಮಥ ಬೂದಿಯಾದ. ಅನಂತರ ವಿರೂಪಾಕ್ಷನು ಬೇರೊಂದು ತಾಣದಲ್ಲಿ ಇನ್ನೂ ಉಗ್ರ ತಪವನ್ನು ಕೈ ಕೊಂಡ.

ಇತ್ತ ಗೌರೀದೇವಿಯು ವನವಾಸಿನಿಯಾಗಿ ಪರಮೇಶ್ವರನನ್ನು ಪತಿಯನ್ನಾಗಿ ಪಡೆಯಲೇಬೇಕೆಂದು ಛಲ ತೊಟ್ಟಳು. ಮನೆ ಬಿಟ್ಟಳು. ಕಾಡಿನ ಒಂದು ಗೂಡಿನಲ್ಲಿ ಕಡುಕಷ್ಟಬಡುತ್ತ ಘೋರ ತಪವನ್ನು ಮುಂದುವರಿಸಿದಳು. ಅತ್ಯುಗ್ರವಾಗಿತ್ತು ಅವಳ ತಪಸ್ಸು, ಶಿವೈಕನಿಷ್ಠವಾಗಿತ್ತು ಅವಳ ಮನಸ್ಸು. ತಪೋನುಷ್ಠಾನದ ಉಗ್ರತೆಗೆ ಅವಳ ದೇಹ ಸೊರಗಿತ್ತು, ಮೈ ಕರಗಿತ್ತು. ಅದರ ಜೊತೆಗೆ ಶಿವನ ಅಂತಃಕರಣವೂ ಕರಗಿತ್ತು.

ಆ ಹೆಣ್ಣುಜೀವ ತನಗಾಗಿ ಪಡುವ ಬವಣೆಯನ್ನು ಕಂಡು ಶಿವಹೃದಯ ಮಮ್ಮಲನೆ ಮರುಗಿತು. ಸಪ್ತಋಷಿಗಳನ್ನು ಹಿಮವಂತನೆಡೆಗೆ ಕಳುಹಿಸಿ ಪಾರ್ವತಿಯನ್ನು ಯಾಚಿಸಿದ ಪರಮೇಶ್ವರ. ಮದುವೆಯ ಮಂಗಳದಲ್ಲಿ ಶಿವಸತಿಯರ ಮಧುರ ಮಿಲನವಾಯಿತು. ರಸಿಕ ಶಿಖಾಮಣಿಯಾದ ಮಹಾದೇವನು ತಾನು ಮೆಚ್ಚಿ ಮದುವೆಯಾದ ಉಮಾದೇವಿಯೊಡನೆ ಪ್ರಸನ್ನ ಮನಸ್ಸಿನಿಂದ ಏಕಾಂತವಲ್ಲಿ ವಿಹಾರಗೈದನು. ಇದೇ ಕಾಲದಲ್ಲಿ ಶುಂಭ ನಿಶುಂಭ ಎಂಬ ದೈತ್ಯರು ಬ್ರಹ್ಮದೇವನನ್ನು ಕುರಿತು ಘೋರ ತಪಸ್ಸನ್ನು ಮಾಡಿದರು, ಆ ತಪೋನಿಷ್ಠೆಯಿಂದ ಚತುರ್ಮುಖ ಸುಪ್ರಸನ್ನ. ಅಪೇಕ್ಷಿತ ವರ ನೀಡುವ ಆಶ್ವಾಸನ. ಅದರಿಂದ ಸಂತಸಗೊಂಡ ದೈತ್ಯವರರ ಯಾಚನೆ. ''ನಾವು ಯಾರಿಂದಲೂ ಸಾಯಬಾರದು. ದೇವತೆಗಳಿಂದ ನಮಗೆ ಮೃತ್ಯು ಬರಬಾರದು. ಯಾವ ದಾನವರಿಂದಾಗಲಿ ಸಾಯಬಾರದು.''

'ತಥಾಸ್ತು' ಬ್ರಹ್ಮದೇವರ ವರದಾನ, ದೈತ್ಯರಿಗೆ ಪರಮಾನಂದ. ಆದರೆ ದೇವತೆ ಗಳಿಗೆಲ್ಲಾ ಹೃದಯದಲ್ಲಿ ಕಂಪನ, ದೇಹದಲ್ಲಿ ನಡುಕ, ಮನಸ್ಸಿನಲ್ಲಿ ಆತಂಕ, ವಿಷ್ಣುವಿನನ್ನು ಮುಂದೆ ಮಾಡಿಕೊಂಡು ಮೊರೆಯಿಟ್ಟರು ಎಲ್ಲ ದೇವತೆಗಳು ಮಹಾದೇವನಲ್ಲಿ. ಪರಮೇಶ್ವರನಿಂದ ಅಭಯದಾನ- ''ಹೆದರಬೇಡಿರಿ ಸಾವನ್ನು ಯಾವನೂ ಮೀರಿ ನಿಲ್ಲಲಾರ. ಈ ಶುಂಭ ನಿಶುಂಭರು ಮೃತ್ಯುಂಜಯರಲ್ಲ. ಅವರ ಸಾವಿನ ಗಳಿಗೆ ಸಮೀಪಿಸುತ್ತಲಿದೆ.'' ಮಹಾದೇವರ ಈ ಮೃದು ಮಾತಿನಿಂದ ದೇವತೆಗಳು ಸಮಾಧಾನದ ನಿಟ್ಟುಸಿರು ಬಿಟ್ಟರು. ಅವರನ್ನು ಬೀಳ್ಕೊಟ್ಟು ಆ ಪಶುಪತಿಯು ಮತ್ತೆ ತನ್ನ ಮೆಚ್ಚಿನ ಮಡದಿಯೊಡನೆ ಮಧುಚಂದ್ರ ವಿಹಾರದಲ್ಲಿ ಮಗ್ನನಾದ.

ಪಾರ್ವತಿಯ ಬಣ್ಣ ಅವಳ ಕಾಳೀ ಎಂಬ ಹೆಸರಿಗೆ ಅನುಗುಣವಾಗಿ ಕಪ್ಪು ಕಪ್ಪಾಗಿತ್ತು. ಈ ಕರಿಬಣ್ಣ ಸರಿ ಎನಿಸಲಿಲ್ಲ ಅವಳ ಪತಿ ಪರಮೇಶ್ವರನಿಗೆ. ತನ್ನ ಪ್ರಿಯಕರನ ಪ್ರೀತಿಯೇ ಆ ಸತೀದೇವಿಯ ಜೀವನದ ಪರಮ ಉದ್ದೇಶ. ಕಪ್ಪು ಬಣ್ಣ ತನ್ನ ಮನದನ್ನನಿಗೆ ಒಪ್ಪಿಗೆಯಾಗಿಲ್ಲವೆಂದು ತಿಳಿಯಿತು ಆ ಶೈಲಬಾಲೆಗೆ. ತಕ್ಷಣವೇ ಕಿತ್ತಿ ಒಗೆದಳು. ತನ್ನ ದೇಹದ ಮೇಲಿನ ಆ ಕರಿ ತೊಗಲನ್ನು. ಪಾರ್ವತಿಯು ತನ್ನ ದೇಹದ ಕರಿ ತೊಗಲನ್ನು ತೆಗೆದೊಗೆದ ಸ್ಥಲವು ಮಹಾಕಾಲಿ ಪ್ರಪಾತ ಎಂಬ ಹೆಸರಿನಿಂದ ಉತ್ತಮ ಕ್ಷೇತ್ರ ಎನಿಸಿತು. ಅನಂತರ ಆ ಮಹಾಕಾಳಿಯು ಕೌಶಿಕಿ ಎಂಬ ಹೆಸರಿನಿಂದ ಪ್ರಸಿದ್ಧಳಾಗಿ ವಿಂಧ್ಯ ಪರ್ವತದ ಒಂದು ಕಂದರದಲ್ಲಿ ನಿಂತು ತಪಸ್ಸನ್ನು ಮಾಡತೊಡಗಿದಳು. ಅವಳ ರೂಪಸಿರಿಯನ್ನು

ಕಂಡು ಮುಗ್ಧರಾದರು ಶುಂಭ ನಿಶುಂಭ ಎಂಬ ಇಬ್ಬರು ಹುಂಬ ದೈತ್ಯರು. ಅದೇ ಮಹಾತಾಯಿಯಿಂದ ಅವರಿಬ್ಬರೂ ಅಲ್ಪಾವಧಿಯಲ್ಲಿಯೇ ಸಂಹೃತರಾದರು. ಅನಂತರ ನಿಸರ್ಗ ಸೌಂದರ್ಯದ ನೆಲೆಬೀಡಾದ ಗೌರೀಶಂಕರದಲ್ಲಿ ನಿಂತು ಉಗ್ರ ತಪಸ್ಸನ್ನು ಆಚರಿಸಿದಳು ಆ ಗೌರೀದೇವಿ. ಈ ಘೋರ ತಪದಿಂದ ಭವಿನಿಯ ಬಣ್ಣವೇ ಬದಲಾಯಿತು. ಬಿಳಿ ಬಣ್ಣದಿಂದ ಅವಳ ದೇಹವು ಧವಲ ದೀಧಿತಿಯಿಂದ ದೇದೀಪ್ಯಮಾನವಾಗಿ ಕಂಗೊಳಿಸತೊಡಗಿತು. ಅತ್ಯಂತ ಪರಿಶುಭ್ರವಾದ ಗೌರವರ್ಣದಿಂದ ಅವಳ ಗೌರಿ ಎಂಬ ಹೆಸರು ಸಾರ್ಥಕವಾಯಿತು. ಗೌರಿಯ ಈ ಒಲವು, ನಿಲುವು, ಚೆಲುವುಗಳನ್ನು ಕಂಡು ಪ್ರೀತ ಪ್ರಸನ್ನನಾದ ಪರಮೇಶ್ವರ.

## ದಾಂಪತ್ಯದ ರಸನಿಮಿಷಗಳು

ಕೆಲ ಸಮಯದ ನಂತರ ಪಾರ್ವತಿಯು ಗರ್ಭಿಣಿಯಾದಳು. ಗಣಪತಿ, ಸ್ಕಂದ ಎಂಬ ಇಬ್ಬರು ಗಂಡು ಮಕ್ಕಳನ್ನು ಹೆತ್ತಳು. ಅವರಿಬ್ಬರು ಮಕ್ಕಳು ತೇಜಸ್ವಿಗಳು. ಒಬ್ಬರಿಗಿಂತ ಒಬ್ಬರು ಚಲುವರು, ಒಬ್ಬ ಮದನಸುಂದರ, ಇನ್ನೊಬ್ಬ ವಿಶ್ವಮನೋಹರ, ಇಬ್ಬರೂ ಗುಣನಿಧಿಗಳು ಜ್ಞಾನದ ತವನಿಧಿಗಳು. ಜ್ಞಾನದ ಸಾಗರರು. ದಯಾದಾಕ್ಷಿಣ್ಯದ ಆಗರರು. ಇಂಥ ಪುತ್ರರತ್ನರನ್ನು ನೋಡಿ ಶಿವಪಾರ್ವತಿಯರಿಬ್ಬರಿಗೂ ಹಿಗ್ಗು. ಆ ದಂಪತಿ ಗಳಿಬ್ಬರಿಗೂ ತಮ್ಮ ಈ ಜೋಡಿ ಮಕ್ಕಳ ಬಗ್ಗೆ ಅತ್ಯಂತ ಹೆಮ್ಮೆ.

ಶಿವ-ಪಾರ್ವತಿಯರಿಬ್ಬರೂ ಸದಾ ಸರ್ವದಾ ಆನಂದ ತುಂದಿಲರು. ಒಮ್ಮೆ ಸರಸಸಲ್ಲಾಪ, ಮತ್ತೊಮ್ಮೆ ಮಧುರಾಲಾಪ. ಇನ್ನೊಮ್ಮೆ ವೀಣಾವಾದನ, ಮಗದೊಮ್ಮೆ ಸಂಗೀತ ಪ್ರಸಂಗ, ಮಧ್ಯೇ ಶಾಸ್ತ್ರಚರ್ಚೆ, ಆಗಾಗ ಪುರಾಣ ಪರಿಶೀಲನ, ಒಂದೊಂದು ಸಂದರ್ಭಲ್ಲಿ ಮತ್ತೊಂದು ವೇದಾಂತ ವಿಚಾರ.

ಇಂದು ಮೈನಾಕ, ನಾಳೆ ಮಂದರ, ಮುಂಜಾನೆ ನಂದನ, ಸಂಜೆ ಗಂಧಮಾದನ, ಹಗಲು ಕೈಲಾಸ, ರಾತ್ರಿ ಸ್ವರ್ಗವಿಲಾಸ ಹೀಗೆ ಹಲವಾರು ಬಗೆಯಿಂದ ಸಾಗಿತ್ತು ಅವರ ಶೃಂಗಾರಯಾತ್ರೆ, ಬಗೆಬಗೆಯಿಂದ ರಸವತ್ತಾಗಿ ನಡೆದಿತ್ತು ಅವರ ದಾಂಪತ್ಯಲೀಲೆ. ಹೀಗೆ ಚರಾಚರ ಜಗತ್ತಿನ ತಾಯಿ ತಂದೆಯರೆನಿಸಿದ ಆ ಪಾರ್ವತಿ ಪರಮೇಶ್ವರರು ಮೇರು, ಮಂದರ, ಹಿಮಗಿರಿಕಂದರ, ನಂದನ, ಚೈತ್ರರಥ ಮುಂತಾದ ಸುಂದರ ತಾಣಗಳಲ್ಲಿ ನೆಲಿಸಿ ನಲಿದು, ಒಲಿದು, ಉಲಿದು ದೀರ್ಘಕಾಲದ ವರೆಗೆ ದಾಂಪತ್ಯಜೀವನದ ರಸನಿಮಿಷಗಳನ್ನು ಅನುಭವಿಸುತ್ತ ಆನಂದಪೂರ್ಣರಾಗಿ ವಿಹರಿಸಿದರು.

ಹಿಂದೆ ಒಂದಾನೊಂದು ದಿನ ಹಿಮಗಿರಿ ನಂದಿನಿಯಾದ ಪಾರ್ವತಿದೇವಿಯು ಅರುಣಾಚಲ ಪರ್ವತದಲ್ಲಿ ಸಹಜ ಸಂಚಾರ ಕೈ ಕೊಂಡಿದ್ದಳು. ನೋಡಿದಲ್ಲೆಲ್ಲಾ ಹಸಿರು ಹುಲ್ಲು ಹೂವು ಹಣ್ಣುಗಳ ಭಾರದಿಂದ ಬಾಗಿದ ಮರಬಳ್ಳಿಗಳು, ಮಾಲತಿ, ಮಲ್ಲಿಗೆ, ಸೇವಂತಿ ಮುಂತಾದ ಲತಾ ಬಳ್ಳಿಗಳ ರಂಜನೀಯವಾದ ಕುಂಜನಿಕುಂಜಗಳು. ಹಿಂಡು ಹಿಂಡು ಹೂಗಳ ಬಂಡನ್ನು ಹೀರಿ ಝೇಂಕರಿಸುವ ತುಂಬಿಗಳ ಗೀತ ಗುಂಜಾರವ. ಇಂಥ ಮಂಜುಳ ಮನೋಹರ ಏಕಾಂತ ವನಾಂತರದಲ್ಲಿ ಒಂದು ಪುಣ್ಯಾಶ್ರಮ, ಅಲ್ಲಿ ಪಾರ್ವತೀ ದೇವಿಯ ಕಣ್ಣಿಗೆ ಒಳ್ಳೆ ಕೌತುಕದ ದೃಶ್ಯ ಕಂಡು ಬಂದಿತು. ಪರಸ್ಪರ ವೈರಿಗಳಾದ ಪ್ರಾಣಿಗಳು ಪ್ರೀತಿಯಿಂದ ಒಂದಕ್ಕೊಂದು ಹೊಂದಿಕೊಂಡು ಕೂಡಿ ಆಡುತ್ತಲಿದ್ದವು.

**ಕಾಕೋಲೂಕೈಃ ಶುಕಶ್ಯೇನೈಃ ಮೃಗವ್ಯಾಘ್ರೈರ್ಹರಿದ್ವಿಪೈಃ ।**
**ಕಲಾಪಿಸರ್ಪೈರ್ಯತ್ರಾಖುಮಾರ್ಜಾರೈಃ ಸೌಹೃದಂ ಶ್ರಿತಮ್ ॥**

ಜಾತಿ ವೈರಿಗಳಾದ ಕಾಗೆಗಳೂ ಗೂಗೆಗಳೂ ಒಡನಾಟ ನಡೆಸಿದ್ದವು. ಗಿಳಿ, ಹದ್ದುಗಳು ಕೂಡಿ ಆಡುತ್ತಿದ್ದವು. ಹುಲಿ ಚಿಗರೆಗಳ ಸರಸಾಟ, ಸಿಂಹ ಆನೆಗಳ ಚೆಲ್ಲಾಟ, ನವಿಲು ಹಾವುಗಳ ಕ್ರೀಡಾ ವಿಲಾಸ, ಇಲಿ ಬೆಕ್ಕುಗಳ ಪ್ರೀತಿಯಸಹವಾಸ ಮುಂತಾದ ಆಶ್ಚರ್ಯಕಾರಕ ಘಟನೆಗಳು ಆ ಸತೀಮಣಿಯ ಕಣ್ಣಿಗೆ ಬಿದ್ದವು. ಆ ಆಶ್ರಮದಲ್ಲಿ ತಪೋನುಷ್ಠಾನ ಕೈಕೊಂಡು ತಮ್ಮ ತಮ್ಮ ಯೋನಿ ಸಹಜವಾದ ವೈರಭಾವವನ್ನು ಮರೆತುಬಿಟ್ಟಿದ್ದವು. ಸ್ನೇಹ ಸಂಬಂಧದಿಂದ ಅವು ಒಂದಕ್ಕೊಂದು ಕೂಡಿ ಪ್ರೀತಿಯಿಂದ ಆಟವಾಡುತ್ತಿದ್ದವು. ಆಶ್ರಮದಲ್ಲಿ ಅಗ್ನಿಕುಂಡದಲ್ಲಿ ಮುನಿಗಳು ಹಾಕಿದ ಆಹುತಿಗಳ ಸುಗಂಧವು ದಿಗಂತರಾಲವನ್ನು ಸುರಭೀಕರಿಸಿತು. ಅಲ್ಲಿಯ ಹೋಮ ಧೂಮವು ಆ ವನಾಂತರದ ವಾತಾವರಣದಿಂದ ಪ್ರಸನ್ನಳಾದಳು ಪರಮೇಶ್ವರಿ. ಅವಳು ಆಶ್ರಮದ ಅಂಗಳದಲ್ಲಿ ಪ್ರವೇಶಿದಳು. ಅಲ್ಲಿ ಓರ್ವ ಮುನಿಗಳು ಆಸನದ ಮೇಲೆ ಆಸೀನರಾಗಿ ತಪೋನಿರತರಾಗಿದ್ದರು. ಅವರ ಕೈಯಲ್ಲಿ ರುದ್ರಾಕ್ಷಿ ಮಾಲೆ ಇದ್ದಿತು.

ಪಾರ್ವತೀ ದೇವಿಯು ಅವರ ಹತ್ತಿರ ಬಂದು ಪ್ರಶ್ನಿಸಿದಳು. ''ತಪೋಧನರೇ, ನೀವು ಯಾರು? ನೀವು ಕುಳಿತ ತಪಶ್ಚರ್ಯೆಯನ್ನು ಮಾಡುತ್ತಲಿರುವ ಈ ಪರ್ವತವಾದರೂ ಯಾವುದು? ಇದರ ಹೆಸರು ಏನು?

**ತಪಸ್ವಿ:-** ''ದೇವಿ, ಈ ಪರ್ವತವು ಅರುಣಾಚಲ. ಇದು ಪರ್ವತವಿದ್ದಂತೆ ಪುಣ್ಯಕ್ಷೇತ್ರವೂ ಆಗಿದೆ. ನನ್ನ ಹೆಸರು ಗೌತಮ. ನಾನು ಈ ಪುಣ್ಯಾರಣ್ಯದ ಈ ಪಾವನತರ ಆಶ್ರಮದಲ್ಲಿ ತಪೋವ್ರತವನ್ನು ಕೈಕೊಂಡಿದ್ದೇನೆ. ಇದರ ಉದ್ದೇಶ ಶಿವಪ್ರಸಾದ. ಭಗವಾನ್ ಭವಾನೀ ಪತಿಯನ್ನು ಪ್ರಸನ್ನಗೊಳಿಸಲಿಕ್ಕಾಗಿ ಉಗ್ರ ತಪಸ್ಸನ್ನು ಕೈಕೊಂಡಿದ್ದೇನೆ ಈ ಏಕಾಂತ ವನಾಂತರದಲ್ಲಿ.

ಪಾರ್ವತೀ ದೇವಿಯ ಜೊತೆಗೆ ವಿಜಯಾ ಮೊದಲಾದ ಗೆಳತಿಯರ ದೊಡ್ಡ ಬಳಗವೇ ಇದ್ದಿತು. ಅವರ ಬಾಯಿಂದ ಕೇಳಿ ತಿಳಿದುಕೊಂಡ ಆ ಗೌತಮ ಮುನಿ ಇವಳೇ ಸಾಕ್ಷಾತ್ ಜಗಜ್ಜನನಿ ಪಾರ್ವತಿದೇವಿ ಎಂದು. ಕೂಡಲೇ ಆ ಮುನಿಯು ತನ್ನ ಕೈಯಲ್ಲಿಯ ಜಪಮಾಲೆಯನ್ನು ಕೆಳಗೆ ಇಟ್ಟ, ತನ್ನ ತಪಸ್ಸನ್ನು ಬಿಟ್ಟ. ಇದ್ದಲ್ಲಿಂದಲೇ ದೀರ್ಘದಿಂದ ನಮಸ್ಕಾರ ಹಾಕಿದ ಆ ಶಿವ ಕುಟುಂಬಿನಿಗೆ, ಅನಂತರದಲ್ಲಿ ತನ್ನ ಎಲೆಮನೆಯ ಒಳಗೆ ಓಡಿದ. ಅಲ್ಲಿ ಇದ್ದ ಗಡ್ಡೆಗೆಣಸು, ಹಣ್ಣು ಹಂಪಲಗಳನ್ನು ಕೈಯಲ್ಲಿ ಹಿಡಿದುಕೊಂಡು ಹೊರಬಂದ. ದೇವಿಯ ಎದುರು ಅವೆಲ್ಲವುಗಳನ್ನು ಇರಿಸಿದ. ಕೈಮುಗಿದು ಕೇಳಿಕೊಂಡ. ಈ ಭಕ್ತ ಪರಮಾಣುವಿನ ಅತ್ಯಲ್ಪ ಅತಿಥ್ಯವನ್ನು ಸ್ವೀಕರಿಸು ಅನುಗ್ರಹಿಸು ಎಂದು.

ಹೀಗೆ ಯಥಾಶಕ್ತಿ ಆ ಪರ್ವತಪುತ್ರಿಯ ಆತಿಥ್ಯವನ್ನು ಮಾಡಿದ ಬಳಿಕ ಆ ಅರುಣಾಚಲ ಕ್ಷೇತ್ರದ ಜ್ಯೋತಿಸ್ತಂಭದ ಪ್ರಾದುರ್ಭಾವದಿಂದ ಆರಂಭಿಸಿ ಎಲ್ಲ ಮಹಿಮೆಯನ್ನು ಬಣ್ಣಿಸಿ ಹೇಳಿದ.

ಆ ಕ್ಷೇತ್ರ ಮಹಿಮೆಯನ್ನು ಕೇಳಿ ಗೌರಿಗೆ ಅಲ್ಲಿಯೇ ಆ ಅರುಣಾಚಲ ಕ್ಷೇತ್ರದಲ್ಲಿ ಒಂದು ಪರ್ಣಕುಟೀರವನ್ನು ಕಟ್ಟಿಕೊಂಡು ತಪಸ್ಸನ್ನು ಮಾಡಬೇಕು ಎಂದು ಬಯಕೆ

ಉಂಟಾಯಿತು. ತನ್ನ ಹೃದಯದ ಹೆಬ್ಬಯಕೆಯನ್ನು ಆ ಗೌತಮ ಮಹಾ ಮುನಿಯ ಎದುರು ಮೃಡಾನಿಯು ನಿವೇದಿಸಿದಳು. ಅದನ್ನು ಕೇಳಿ ಆ ಯೋಗಿ ರಾಜನಿಗೆ ಪರಮಾನಂದವಾಯಿತು.

ಅವನು ಬಾಗಿ ಬಿನ್ನವಿಸಿದ ಆ ಅಪರ್ಣಾದೇವಿಗೆ : ''ತಾಯಿ, ನಾನು ಇಲ್ಲಿ ಭಗವಾನ್ ಶಂಕರನ ಪ್ರತಿಷ್ಠೆಗೈದು ಅತ್ಯಂತ ಭಕ್ತಿ ಭಾವೋದ್ರೇಕದಿಂದ ಅವನ ಆರಾಧನೆಯನ್ನು ಮಾಡುತ್ತಿದ್ದೇನೆ. ಈ ನನ್ನ ಆಶ್ರಮದ ಸಮೀಪದಲ್ಲಿಯೇ ಒಂದು ಪುಣ್ಯಕ್ಷೇತ್ರವು ಇರುತ್ತವೆ. ಅಲ್ಲಿ ನಿರ್ಮಿತವಾಗಲಿ ನಿಮ್ಮ ಪುಣ್ಯಾಶ್ರಮ. ನಿರಂತರ ಸಾಗಲಿ ತ್ರಿಶೂಲಿಯನ್ನು ಕುರಿತು ತಪೋನುಷ್ಠಾನ.''

ಆ ಮುನಿ ಮನೀಷಿಯ ಸಲಹೆ ಸೂಚನೆಗಳು ಹಿಡಿಸಿದವು ಹಿಮಗಿರಿನಂದಿನಿಗೆ. ಅಲ್ಲಿಯೇ ಸಮೀಪದಲ್ಲಿ ಅರಣಾಚಲ ಕ್ಷೇತ್ರದ ಒಂದು ಪವಿತ್ರತಾಣದಲ್ಲಿ ಒಂದು ಆಶ್ರಮವನ್ನು ಕಟ್ಟಿಕೊಂಡು ತಪಶ್ಚರ್ಯವನ್ನು ಮಾಡಬೇಕು ಎಂದು ಅವಳು ನಿಶ್ಚೈಸಿದಳು. ಆ ಮಹಾತಾಯಿಯ ಮನಸ್ಸಿಗೆ ಬಂದ ಬಳಿಕ ಏನು ತಡ? ಕೂಡಲೇ ಸಿದ್ಧವಾಯಿತು ತಪೋವನ. ಪೂರ್ಣವಾಯಿತು ಪರ್ಣಕುಟೀರದ ರಚನೆ. ಸಿದ್ಧವಾಯಿತು. ಪರಿಶುದ್ಧವಾದ ಪುಣ್ಯಾಶ್ರಮ, ಪ್ರಾರಂಭವಾಯಿತು ದುರ್ಗಾದೇವಿಯ ದುಷ್ಕರವಾದ ತಪಶ್ಚರ್ಯೆ. ಅವಳು ತನ್ನ ತಪೋವನದ ರಕ್ಷಣೆಗಾಗಿ ಸುಭಗಾ, ಧುಂದುಮಾರಿ ದೇವಿಯರನ್ನು ನಿಯಮಿಸಿದಳು. ಸಂಪೂರ್ಣ ಆ ಪುಣ್ಯಾರಣ್ಯದ ರಕ್ಷಣೆ ಅಲ್ಲಿ ಪ್ರವೇಶ ಬಯಸುವ ದುಷ್ಟಶಕ್ತಿಗಳ ಶಿಕ್ಷಣ ಮುಂತಾದ ಕಾರ್ಯಗಳ ಭಾರವನ್ನು ತನ್ನದೇ ಆದ ಮತ್ತೊಂದು ದುರ್ಗಾರೂಪಕ್ಕೆ ಒಪ್ಪಿಸಿದಳು. ಅನಂತರ ಮಂದಾರ ಕುಸುಮ ಮಾಲೆಯನ್ನು ಮುಡಿದ ತನ್ನ ನೀಲವರ್ಣದ ನೀಳಗೂದಲನ್ನು ಹೆರಳು ಬಿಡಿಸಿ ಜಡೆಯನ್ನಾಗಿ ಮಾರ್ಪಡಿಸಿದಳು. ತಾನು ಮೊದಲು ಉಟ್ಟುಕೊಂಡ ರೇಶ್ಮೆಯ ಸೂಕ್ಷ್ಮ ಪೀತಾಂಬರವನ್ನು ತ್ಯಜಿಸಿ ಕಠೋರವಾದ ನಾರುಬಟ್ಟೆಯನ್ನು ಉಟ್ಟುಕೊಂಡಳು. ಆಹಾರದಲ್ಲಿ ಮಿತಿ, ಮಾತಿನಲ್ಲಿ ಸಂಯಮ. ಆಚರಣೆಯಲ್ಲಿ ಯಮನಿಯಮ. ಯಾವಾಗಲೂ ಪ್ರಾಣಾಯಾಮ ಪ್ರತ್ಯಾಹಾರ. ಸರ್ವದಾ ಸಮಾಧಿ. ಹೀಗೆ ನಡೆಯಿತು ಅವಳ ತಪೋನುಷ್ಠಾನ.

ಪ್ರತಿದಿನವೂ ಪಂಚ ಪಂಚ ಉಷಃಕಾಲದಲ್ಲಿ ಉತ್ಥಾನ. ಶೀತಪೂತವಾದ ನದಿಯ ತಣ್ಣೀರಿನಲ್ಲಿ ಸ್ನಾನ. ಅರುಣೋದಯಕ್ಕೆ ಸೂರ್ಯನಾರಾಯಣನಿಗೆ ಅರ್ಘ್ಯದಾನ. ಸೂರ್ಯೋದಯ ಕಾಲದಲ್ಲಿ ಜಪ, ಮಧ್ಯಾಹ್ನದವರೆಗೂ ತಪ. ಅನಂತರ ತಾನೆ ಪ್ರತಿಷ್ಠೆಗೈದ ಶಿವಲಿಂಗದ ವಿಧ್ಯುಕ್ತಪೂಜೆ, ಅರ್ಘ್ಯಪಾದ್ಯ ನಿವೇದನ. ವೇದಮಂತ್ರಗಳಿಂದ ಅಭಿಷೇಕ, ಶಿವಲಿಂಗದ ಮೇಲೆ ಚಂದನ ಲೇಪನ, ನಂತರ ಪುಷ್ಪಾರ್ಚನೆ. ಧೂಪ, ದೀಪ, ನೈವೇದ್ಯ, ಮಂಗಳಾರತಿ, ಅನಂತರ ಸಾವಿರ ಪ್ರದಕ್ಷಿಣೆ, ಒಂದು ಸಾವಿರ ನಮಸ್ಕಾರ. ಅನಂತರ ಧ್ಯಾನ, ಗಾನ, ಉಪಾಸನೆ, ಆರಾಧನೆ.

ಹೀಗೆ ಸಾಯಂಕಾಲದವರೆಗೂ ಶಿವಪೂಜೆ, ಪರಮೇಶ್ವರಾರಾಧನೆ, ಅನಂತರ ಮತ್ತೆ ರಾತ್ರಿಕಾಲದ ಪಂಚೋಪಚಾರ ಪೂಜೆ. ಈ ಎರಡೂ ಪೂಜೆಗಳ ಮಧ್ಯಕಾಲದಲ್ಲಿ ಶಿವಶಾಸ್ತ್ರೋಕ್ತವಾದ ವಿಧಿಯಿಂದ ಹೋಮಕುಂಡದಲ್ಲಿ ಶಿವನನ್ನು ಉದ್ದೇಶಿಸಿ ಆಹುತಿ ದಾನ. ಈ ವೇಳೆಯಲ್ಲಿ ಯಾರಾದರೂ ಅತಿಥಿಗಳು ಬಂದರೆ ಆ ಯಜ್ಞ ಶೇಷವನ್ನು ಅವರಿಗೆ ಹಾಕಿ ಯಥೇಷ್ಟವಾಗಿ ಉಣಬಡಿಸುತ್ತಿದ್ದಳು.

ಪಾರ್ವತೀದೇವಿಯ ತಪೋನುಷ್ಠಾನದ ರೀತಿಯು ಕಾಲಕ್ಕೆ ತಕ್ಕಂತೆ ಬದಲಾವಣೆಯನ್ನು ಹೊಂದುತ್ತಿತ್ತು. ಬೇಸಿಗೆಯ ಕಾಲದಲ್ಲಿ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ತನ್ನ ಪಾದದ ಅಂಗುಟವನ್ನು ಮಾತ್ರ ನೆಲದ ಮೇಲೆ ಊರಿ ಸೂರ್ಯನಲ್ಲಿ ದೃಷ್ಟಿಯನ್ನು ನೆಟ್ಟು ಆ ಸರ್ವಮಂಗಳೆಯು ಅತ್ಯುಗ್ರವಾದ ತಪಸ್ಸನ್ನು ಮಾಡುತ್ತಿದ್ದಳು. ಮಳೆಗಾಲದಲ್ಲಿ ಧಾರಾಕಾರವಾಗಿ ಸುರಿಯುವ ಮಳೆಯಲ್ಲಿಯೇ ಕುಳಿತು ಮೈಯೆಲ್ಲ ತೊಯ್ದು ತೊಪ್ಪಡಿಯಾಗಿ ತಪೋನುಷ್ಠಾನವನ್ನು ಮುಂದುವರೆಸುತ್ತಿದ್ದಳು ಆ ತಾಯಿ. ಚಳಿಗಾಲದಲ್ಲಿಯಂತೂ ನಡುನೀರಿನಲ್ಲಿ ನಿಂತುಕೊಂಡೇ ನಡೆಯುತ್ತಿತ್ತು ಅವಳ ತಪಶ್ಚರಣೆ. ಈ ಎಲ್ಲ ಅತ್ಯುಗ್ರ ತಪೋನುಷ್ಠಾನದ ವಿಧಿ ವಿಧಾನಗಳನ್ನೆಲ್ಲ ಶಾಸ್ತ್ರೋಕ್ತವಾಗಿ ಅನುಷ್ಠಾನವನ್ನು ಮಾಡುತ್ತಿರುವಾಗ ಅವಳು ಯಾವಾಗಲೂ ತನ್ನ ಬಾಯಿಂದ ಓಂ ನಮಃ ಶಿವಾಯ ಎಂಬ ಶಿವಪಂಚಾಕ್ಷರಿ ಮಂತ್ರವನ್ನು ಎಡೆಬಿಡದೇ ಬಾಯಿಯಿಂದ ಜಪಿಸುತ್ತಿದ್ದಳು. ಮನಸ್ಸಿನಿಂದ ಮನನ ಮಾಡುತ್ತಿದ್ದಳು. ತಪೋಲೀನಳಾದ ಅವಳ ರೋಮಗಳಿಂದಲೂ "ನಮಃ ಶಿವಾಯ, ನಮಃ ಶಿವಾಯ" ಎಂಬ ಧ್ಯಾನ ಧ್ವನಿಯು ಹೊರಟಂತೆಯೇ ಇರುತ್ತಿತ್ತು. ಹೀಗೆ ದೀರ್ಘಕಾಲದವರೆಗೆ ನಡೆಯಿತು ಆ ಅಂಬಿಕಾದೇವಿಯ ಅತ್ಯದ್ಭುತವಾದ ತೀಕ್ಷ್ಣತರವಾದ, ತೀವ್ರತಮವಾದ ತಪೋನುಷ್ಠಾನ.

ಈ ಮಧ್ಯದಲ್ಲಿ ಭೂಲೋಕದಲ್ಲಿ ಒಂದು ಅವಾಂತರ ನಡೆದುಹೋಗಿತ್ತು. ಎಲ್ಲಿ ನೋಡಿದಲ್ಲೆಲ್ಲ ಮಹಿಷಾಸುರನ ಅಧ್ವಾನ. ಸ್ವರ್ಗವನ್ನೂ ಬಿಟ್ಟಿರಲಿಲ್ಲ ಅವನ ಉರವಣಿಗೆ, ಎಲ್ಲ ಲೋಕಗಳೂ ಅವನ ಉಪಟಳದಿಂದ ಸಂತ್ರಸ್ತ. ಇಂದ್ರನ ಅಧಿಕಾರ ವೈಭವಗಳೆಲ್ಲವೂ ಆ ಮಹಿಷ ದೈತ್ಯನಿಂದ ವಿಧ್ವಸ್ತ. ದೇವಾಧಿದೇವತೆಗಳೆಲ್ಲರೂ ದಿಕ್ಪಾಪಾಲು, ಮೂರುಲೋಕಗಳ ಆಧಿಪತ್ಯವೆಲ್ಲವೂ ಮಹಿಷನ ಪಾಲು. ಈ ದರ್ಪೋದ್ಧತನಾದ ದೈತ್ಯಾಧಮನು ಒಮ್ಮೆ ಕೇಳಿದ ಕಿವಿಯಿಂದ, "ಅರುಣಾಚಲ ಕ್ಷೇತ್ರದಲ್ಲಿ ಪಾರ್ವತಿಯು ತಪೋನಿರತಳಾಗಿದ್ದಾಳೆ" ಎಂದು. ಇದನ್ನು ನಿಶ್ಚಿತಗೊಳಿಸಿ ಕೊಳ್ಳಬೇಕಾಗಿತ್ತು ಆ ಪಾಪಿಗೆ. ತನ್ನ ಓರ್ವ ದೂತಿಯನ್ನು ಅಟ್ಟಿದ ಅರುಣ ಬೆಟ್ಟಕ್ಕೆ. 'ನೋಡಿಕೊಂಡು ಬಾ ಆ ಶಿವಸುಂದರಿಯು ಅರುಣಾಚಲದಲ್ಲಿ ತಪೋಮಗ್ನಳಾಗಿರುವುದು ನಿಜವೇ ಎಂಬುದನ್ನು.'

ವರದಾನದ ಪ್ರಭಾವದಿಂದ ದೇವತೆಗಳಿಂದ ಅವಧ್ಯನಾಗಿದ್ದ ಆ ದೈತ್ಯ. ಯಾವ ಶಸ್ತ್ರಾಸ್ತ್ರಗಳೂ ತಗಲುತ್ತಿದ್ದಿಲ್ಲ ಅವನ ಆ ಕೋಣ ತೊಗಲಿಗೆ. ನಮುಚಿ, ವೃತ್ರಾಸುರ, ಪುಲೋಮ, ರಾವಣ, ಕುಂಭಕರ್ಣ ಹಿರಣ್ಯಕಶ್ಯಪು ಮುಂತಾದ ಎಲ್ಲ ಬಲಿಷ್ಠ ದೈತ್ಯರಿಗಿಂತ ಮಿಗಿಲಾಗಿದ್ದ ವೀರವಿಕ್ರಮಗಳಲ್ಲಿ ಈ ಮಹಿಷಾಸುರ, ಅವನು ತನ್ನ ಕಣ್ಣಿಗೆ ಕಂಡ ತಪಸ್ವಿಗಳನ್ನೆಲ್ಲ ಕೊಂದು ಹಾಕಿದ. ಕೈಗೆ ಸಿಕ್ಕ ಮುನಿಪತ್ನಿಯರ ಶೀಲಭಂಗ ಮಾಡಿದ. ತನಗೆ ತಿಳಿದು ಬಂದ ತಾಪಸ ಮುನಿ ಮನುಜ ದೇವಋಷಿ, ಯಕ್ಷ, ಕಿನ್ನರ, ಕಿಂಪುರುಷರನ್ನೆಲ್ಲ ಹೊಸಕಿ ಹಾಕಿದ.

ಈ ದುಷ್ಟ ದೈತ್ಯಾಧಮನು ಕಳಿಸಿದ ದೈತ್ಯದೂತಿಯು ತಪಸ್ವಿನಿಯ ವೇಷ ತಳೆದು ಅರುಣಾಚಲ ಕ್ಷೇತ್ರಕ್ಕೆ ಬಂದಳು. ಮೆಲ್ಲನೆ ಪಾರ್ವತಿದೇವಿಯ ಆಶ್ರಮದಲ್ಲಿ ಪ್ರವೇಶ ಪಡೆದಳು. ಅವಳ ಮಾತಿನಲ್ಲಿ ವಿನಯ, ರೀತಿಯಲ್ಲಿ ಅನುನಯ, ನಡತೆಯಲ್ಲಿ ಸೌಜನ್ಯ, ನಮ್ರತೆಯಿಂದ ವಂದಿಸಿ ಪಾರ್ವತಿದೇವಿಯನ್ನೂ ಕೇಳಿದಳು :- ಹೇಮವತೀ! ನೀನು ತ್ರಿಲೋಕ ಸುಂದರಿ, ಚಿಕ್ಕ ಪ್ರಾಯ, ಆದರೆ ನೀನು ನೆಲೆಸಿರುವ ಈ ತಪೋವನವು ಒಂದು

ದೊಡ್ಡ ಗೊಂಡಾರಣ್ಯ. ನಿನ್ನಂಥ ಸೌಂದರ್ಯ ಶಾಲಿನಿಯು ಈ ಭಯಂಕರವಾದ ವನಗರ್ಭದಲ್ಲಿ ಏಕೆ ನೆಲೆಸಿರುವೆ? ನಿನ್ನಂಥ ಕೋಮಲಾಂಗಿಯು ಈ ಘೋರಾರಣ್ಯದಲ್ಲಿ ನಿಂತು ಇಂಥ ಕಠಿಣ ತಪಸ್ಸನ್ನು ಮಾಡುವದನ್ನು ಕಂಡು ನನಗಂತೂ ಬಹಳ ಕೆಡಕೆನಿಸಿದೆ. ಮನೋಹರವಾದ ಅರಮನೆ, ಅಂತಃಪುರಗಳಲ್ಲಿ ಸುಖ ಸೌಭಾಗ್ಯಗಳ ಸುಪ್ಪತ್ತಿಗೆಯಲ್ಲಿ ಭೋಗಾನುಭೋಗಗಳ ತೂಗು ಮಂಚದಲ್ಲಿ ತೂಗುಯ್ಯಾಲೆ ಆಡುತ್ತ ಆನಂದದಿಂದ ನಕ್ಕು ನಲಿದಾಡುತ್ತ ಇರುವದನ್ನು ಬಿಟ್ಟು ಈ ತಪಸ್ಸಿನ ದುಃಖವನ್ನು ಅನುಭವಿಸುತ್ತ ಈ ದುರ್ಗಮ ವನಪ್ರಾಂತದಲ್ಲಿ ದುಃಖಪಡಲು ನಿನಗೆ ಯಾರು ಹೇಳಿದ್ದಾರೆ? ಏತಕ್ಕಾಗಿ ಈ ಕಷ್ಟ? ಶಿವನ ಪೂಜೆಯನ್ನು ನೀನು ಮೊದಲೇ ಮಾಡಿ ಬಿಟ್ಟಿರುವೆ. ಅವನ ಕೈ ಹಿಡಿದು ನೀನು ಏನು ಸುಖ ಕಂಡಿರುವೆ? ನಿಜವಾಗಿಯೂ ನಿನಗೆ ಯೋಗ್ಯನಾದ ವರನೆಂದರೆ ಮಹಿಷಾಸುರನೊಬ್ಬನೇ. ಅವನು ಈಗ ಮೂರು ಲೋಕಗಳಿಗೆಲ್ಲ ಏಕಮಾತ್ರ ಪ್ರಭು, ದೇವ-ದಾನವರಿಗೆಲ್ಲ ಅಧಿರಾಜ. ನೀನು ಒಮ್ಮೆ ಅವನನ್ನು ನೋಡಿದರೆ ಸಾಕು. ಬೇರೆ ಯಾರನ್ನೂ ಬಯಸಲಾರೆ. ಮುಂದೆ ಈ ಶಿವಾರಾಧನೆಯನ್ನು ಇಲ್ಲಿಯೇ ಬಿಟ್ಟು ಕಾಮ ಸುಂದರನಾದ ಆ ಮಹಿಸಾಸುರನ ಬೆನ್ನುಹತ್ತಿ ಹೋಗುವದು ಖಂಡಿತ. ನೀನು ಇಲ್ಲಿ ತಪಸ್ಸನ್ನು ಮಾಡುತ್ತಿರುವಿ ಎಂಬ ಸಮಾಚಾರವನ್ನು ಕೇಳಿ ಕಾಮಾತುರನಾದ ಆ ಮಹಿಷ ಪ್ರಭುವು ನನ್ನನ್ನು ಕಳುಹಿಸಿಕೊಟ್ಟಿದ್ದಾನೆ. ಇಲ್ಲಿಗೆ ನಿನ್ನ ಬಳಿಯಲ್ಲಿ ನಿನ್ನನ್ನು ಕರೆದೊಯ್ಯಲಿಕ್ಕೆಂದೇ ನಾನು ಇಲ್ಲಿಗೆ ಬಂದಿದ್ದೇನೆ'' ಎಂದು ನುಡಿದಳು.

ದಾನವ ದೂತಿಯ ಈ ದುರುದ್ದೇಶದ ಅಪದ್ಧ, ಮನೋವಿರುದ್ಧ ಮಾತುಗಳನ್ನು ಕೇಳಿ ಪಾರ್ವತಿಯ ಹೃದಯವು ಸಂತಪ್ತವಾಯಿತು. ಕಂಗಳು ಕೆಂಪಡರಿದವು. ಅವಳ ಮುಖ ಲಕ್ಷಣವನ್ನು ಅರಿತು ಪಾರ್ವತಿಯ ಗೆಳತಿಯಾದ ವಿಜಯಾ ದೇವಿಯು ಆ ದೈತ್ಯಾಧಮನ ದೂತಿಯನ್ನು ಬಲತ್ಕಾರದಿಂದ ಆಶ್ರಮದಿಂದ ಹೊರದೂಡಿದಳು. ಆಗ ಆ ದುಷ್ಟೆಯು ತನ್ನ ತಪಸ್ವಿನಿಯ ವೇಷವನ್ನು ಬಿಟ್ಟು ನಿಜರೂಪದಿಂದ ದಾರುಣ ದೈತ್ಯಾಂಗನೆಯಾಗಿ ನಿಂತುಕೊಂಡಳು. ಮತ್ತು ಕಣ್ಣುಗಳಿಂದ ಕೆಂಗಿಡಿಗಳನ್ನು ಉದುರಿಸುತ್ತ ''ಈ ಪಾರ್ವತಿಯನ್ನು ಮಹಿಷಾಸುರನ ಬಳಿಗೆ ಇಂದಿಲ್ಲ ನಾಳೆ ನಾನೇ ಸೆಳೆದೊಯ್ಯುತ್ತೇನೆ'' ಎಂದು ಪ್ರತಿಜ್ಞೆಗೈದು ಅಲ್ಲಿಂದ ಹೊರಟು ಹೋದಳು. ಮಹಿಷಾಸುರನ ಬಳಿಗೆ ಹೋಗಿ ಎಲ್ಲ ಸಮಾಚಾರವನ್ನು ತಿಳಿಸಿದಳು.

ಘಾತಕಿಯಾದ ಆ ದೂತಿಯ ಮಾತುಗಳನ್ನು ಕೇಳಿ ಆ ಮಹಿಷಾಸುರನು ಸಿಟ್ಟಿನಿಂದ ಬೆಂಕಿಯ ಬೆಟ್ಟವಾಗಿ ನಿಂತುಕೊಂಡ. ಅವನ ಕಣ್ಣು ಕೆಂಪು ಆದವು. ಮೈಯೆಲ್ಲ ಕಂಪಿಸತೊಡಗಿತು. ಕೂಡಲೇ ಅವನು ಕೂಡಿಸಿದ ಕೋಟ್ಯಾವಧಿ ದೈತ್ಯ ದಾನವರನ್ನು. ಪಾರ್ವತಿಯನ್ನು ಸೆಳೆದು ತರಬೇಕೆಂದು ಆಗಲೇ ಹೊರಟುಬಿಟ್ಟ. ಆನೆ, ಕುದುರೆ, ರಥ, ಕಾಲಾಳು, ಚತುರಂಗಸೇನೆ ಅವನ ಹಿಂದೆ. ಕರಾಲ, ದುರ್ದರ, ಜಿಷ್ಣು, ವಿಕರಾಳ, ಬಾಷ್ಕಲ, ದುರ್ಮುಖ, ಚಂಡ, ಪ್ರಚಂಡ, ಅಮರಾಸುರ, ಮಹಾಹನು, ಮಹಾಮೌಳಿ, ಮಹಾಧನು, ವಿಕಚೇಕ್ಷಣ, ಉಗ್ರಾಸ್ಯ, ಜ್ವಾಲಾಮುಖ, ದಹನ ಮುಂತಾದ ಸೇನಾಪತಿಗಳು ಮಂಚೂಣಿಯಲ್ಲಿ. ಅಪರಂಪಾರವಾದ ಈ ದೈತ್ಯಸೇನೆಯ ತೊತ್ತುಳಿದಾಟದ ಭಾರದಿಂದ ಪೃಥ್ವೀಮಂಡಲವೆಲ್ಲ ನಡುಗಿ ಹೋಯಿತು. ದೈತ್ಯಾಧಮನ ಈ ಕದನ ಕೋಲಾಹಲವನ್ನು

ದೂರದಿಂದಲೇ ಕೇಳಿದಳು ಕಾಳೀದೇವಿ. ತಾನು ತಪೋನುಷ್ಠಾನಗೈಯುತ್ತಿದ್ದ ಪುಣ್ಯಾಶ್ರಮದ ಸಂರಕ್ಷಣೆಗಾಗಿ ನೇಮಿಸಿದ್ದ ದುರ್ಗಾದೇವಿಯನ್ನು ಕರೆದು ಆ ದುರುಳದಾನವರನ್ನೆಲ್ಲ ಸಂಹರಿಸಲು ಆಜ್ಞೆ ನೀಡಿದಳು.

ದೇವಿಯ ಆದೇಶದಂತೆ ಆ ದುರ್ಗೆಯು ಅರುಣಾಚಲದ ಏಕಾಂತ ಗುಹೆಯಲ್ಲಿ ತನ್ನ ವಾಹನವಾದ ಸಿಂಹವನ್ನು ಆರೋಹಣ ಮಾಡಿದಳು. ತನ್ನ ಕೈಯಲ್ಲಿ ಭೀಕರವಾದ ಶಸ್ತ್ರಾಸ್ತ್ರ ಹಿಡಿದು ಮಹಿಷಾಸುರನ ಸೇನಾ ಸಮುದ್ರದ ಎದುರು ಬಂದು ನಿಂತಳು. ಸಿಟ್ಟಿನಿಂದ ಸಿಂಹನಾದ ಮಾಡಿದಳು. ಸಾವಿರ ಮೋಡಗಳು ಒಮ್ಮೆಲೆ ಗುಡುಗಿದಂತಿತ್ತು ಅವಳ ಭೀಷಣ ಸಿಂಹನಾದ. ರೋಷಾಂಧಳಾಗಿ ಸಿಂಹಗರ್ಜನೆ ಮಾಡುವ ಆ ದುರ್ಗಾದೇವಿಯ ಅಂಗಾಂಗಳಿಂದ ಸಹಸ್ರ ಸಹಸ್ರ ಯೋಗಿನಿಯರು, ಮಾತೃಕಾದೇವಿಯರೂ ಶಸ್ತ್ರಧಾರಿಣಿ ಯಾಗಿ ಹೊರಬಿದ್ದರು. ಅವರೆಲ್ಲರೂ ಕಮಲ ಕೋಮಲಾಂಗಿಯರಾದರೂ ತಮ್ಮ ಭಯಂಕರ ಶಸ್ತ್ರಾಸ್ತ್ರಗಳಿಂದ ವೈರಿ ಭೀಕರಿಯರೂ ಆಗಿದ್ದರು. ಕಮಲಮುಖಿಯರಾದ ಈ ಎಲ್ಲ ಮಾತೃಕೆಯರು ಹುಲಿಗಳ ಬೆನ್ನ ಮೇಲೆ ಸವಾರಿಯಾಗಿ ಒಮ್ಮೆಲೇ ಮಹಿಷಾಸುರನ ಕೋಟಿ ಕೋಟಿ ಸೈನಿಕರನ್ನೆಲ್ಲ ಸುತ್ತುವರೆದರು. ಆ ಯೋಗಿನೀಮಂಡಲ, ಹಾಗೂ ದಾನವ ಸೇನೆಗಳು ನಡುವೆ ಭಯಂಕರ ಯುದ್ಧವು ನಡೆಯಿತು. ಎಲ್ಲ ಯೋಗಿನಿಯರು ತಮ್ಮ ಕೈಯಲ್ಲಿಯ ಬಿಲ್ಲು, ಬಾಣ, ಭರ್ಚಿ, ತ್ರಿಶೂಲ, ಖಡ್ಗ, ಕೊಡಲಿ, ಸಲಾಕೆ, ಹಾರಿ ಮುಂತಾದ ಉಗ್ರಾಯುಧಗಳಿಂದ ಮಹಿಷಾಸುರನ ಅನುಚರರಾದ ದೈತ್ಯಾಧಮರ ರುಂಡ ಮುಂಡಗಳನ್ನು ಕಡಿ ಕಡಿದು ಒಟ್ಟಿದರು. ಪೃಥ್ವೀ ಮಂಡಳದ ಹಲವು ದೈತ್ಯರ ಛಿನ್ನ ವಿಚ್ಛಿನ್ನವಾದ ದೇಹ, ದಂಡ, ರುಂಡ ಮುಂಡಗಳಿಂದಲೂ ಕ್ಷತವಿಕ್ಷತವಾಗಿ ಕಡಿದು ಕತ್ತರಿಸಿ ಒಗೆಯಲ್ಪಟ್ಟ ಕೈಕಾಲು, ತಲೆ, ಬುರುಡೆಗಳಿಂದಲೂ ತುಂಬಿಹೋಯಿತು ಸಮರಾಂಗಣ. ರಕ್ತದ ನದಿಗಳೇ ಹರಿದವು.

ಹೀಗೆ ಕೆಲವೇ ಗಳಿಗೆಯಲ್ಲಿ ದಾನವೀರರೆಲ್ಲರೂ ಧರಾಶಾಯಿಗಳಾದರು. ಚಾಮುಂಡಾ ದೇವಿಯು ತನ್ನ ಘೋರ ಚಕ್ರದಿಂದ ಚಂಡ ಮುಂಡ, ದೈತ್ಯನ ರುಂಡವನ್ನು ಚಂಡಾಡಿದಳು. ಆದರಿಂದಲೇ ಅವಳಿಗೆ "ಚಾಮುಂಡಾ" ಎಂಬ ಹೊಸ ಹೆಸರು ಬಂದಿತು.

ಇದನ್ನೆಲ್ಲ ಕಂಡು ಕೋಪದಿಂದ ಕೆಂಡದ ಹೊಂಡವಾಗಿ ನಿಂತ ಮಹಿಷಾಸುರ. ಸ್ವಯಂ ತಾನೇ ಕ್ರೋಧಾಂಧನಾಗಿ ದೇವಿಯ ಮೇಲೆ ಆಕ್ರಮಣಕ್ಕೆ ಹೊರಟ. ಈ ಮೊದಲು ಯೋಗಿನಿಯರ ವೀರಾವೇಶದ ಆರ್ಭಟವನ್ನು ಕೇಳಿ ಓಡಿ ಹೋಗಿ ತಲೆ ಮರೆಸಿಕೊಂಡಿದ್ದ ಅವನ ಸೇನಾಪತಿಗಳೆಲ್ಲರೂ ಒಟ್ಟುಗೂಡಿ ಈಗ ಮಹಿಷಾಸುರನನ್ನು ಹಿಂಬಾಲಿಸಿದರು. ಕಾಲನೇಮಿ, ವಿಪ್ರಚಿತ್ತಿ, ಪ್ರಚಂಡ, ಚಾಮರ, ಮಹಾಮೌಲಿ, ಮಹಾಮನು, ಉಗ್ರಾಸ್ಯ, ವಿಕಟಾಕ್ಷ, ಜ್ವಾಲಾಸ್ಯ ಮುಂತಾದ ದಾನವ ಸೇನಾಪತಿಗಳು ಕಬ್ಬಿಣದ ಅಂಗಿ ಹಾಗೂ ಉಕ್ಕಿನ ಶಿರಸ್ತ್ರಾಣಗಳನ್ನು ಧರಿಸಿ ರಥಾರೂಢರಾಗಿ ಮಾತೃಕಾ ಮಂಡಲವನ್ನೂ ಯೋಗಿನಿ ಗಣವನ್ನೂ ಎದುರಿಸಿದರು. ಆಗ ಆ ಎಲ್ಲ ಯೋಗಿನಿಯರೂ, ಮಾತೃಕೆಯರೂ ಕೂಡಿ ದುರ್ಗಾದೇವಿಯನ್ನು ಹೀಗೆ ಸ್ತೋತ್ರ ಮಾಡಿದರು.

"ದೇವಿ ನೀನು ಬ್ರಹ್ಮನ ಸೃಷ್ಟಿಶಕ್ತಿಯೂ ವಿಷ್ಣುವಿನ ಪಾಲನಶಕ್ತಿಯೂ ರುದ್ರನ ಸಂಹಾರ ಶಕ್ತಿಯೂ ಆಗಿರುವೆ. ನೀನು ಶ್ರೀಕೃಷ್ಣನ ತಂಗಿಯಾಗಿ, ಯಶೋದಾ, ನಂದಗೋಪರ ಹೊಟ್ಟೆ ಯಿಂದ ಹುಟ್ಟಿಬಂದೆ. ಏಕಾನಂಶಾ ಎಂದು ನಿನ್ನ ಹೆಸರು. ಕಂಸನೇ ಮೊದಲಾದ ರಕ್ಕಸರ

ಸಂಹಾರ ಕಾರ್ಯದಲ್ಲಿ ನೀನು ಶ್ರೀಕೃಷ್ಣನಿಗೆ ಸಹಾಯ ಮಾಡಿದಿ. ದುರ್ಗಾದೇವಿಯೇ ನೀನೇ ಮಹಾಮಾಯೆ, ನೀನೇ ಲಕ್ಷ್ಮೀ, ಸರಸ್ವತಿಯೂ ನೀನೇ, ಪಾರ್ವತಿಯೂ ನೀನೇ.''

ಮಾತೃಕಾ ಮಂಡಲದವರೂ ಹಾಗೂ ಯೋಗಿನೀ ಗಣದವರೂ ಕೂಡಿ ಸಾಮೂಹಿಕವಾಗಿ ಮಾಡಿದ ಭಕ್ತಿಯುಕ್ತವಾದ ಈ ಸ್ತೋತ್ರವನ್ನು ಕೇಳಿ ಪರಿತುಷ್ಟಳಾದಳು ದುರ್ಗಾದೇವಿ. ಅವರೆಲ್ಲರಿಗೂ ನೀಡಿದಳು ಅಭಯ ದಾನವನ್ನು. ವೀರಾವೇಶದಿಂದ ಹೊರಟಳು ಮಹಿಷಾಸುರನೊಡನೆ ಯುದ್ಧ ಮಾಡಲು. ಮಹಿಷನಿಗಿಂತ ಮೊದಲು ಅವನ ಬೆಂಬಲಿಗರಾಗಿ ಬಂದ ದೈತ್ಯ ಸೇನಾಪತಿಗಳೆಲ್ಲರನ್ನೂ ತರಿದೊಗೆಯಬೇಕೆಂದು ಸಂಕಲ್ಪಿಸಿದಳು ಆ ಮಹಾದೇವಿ. ಕೂಡಲೇ ಅವಳು ತನ್ನ ಎಂಟು ಕೈಗಳಲ್ಲಿಯ ಒಂದೊಂದು ಆಯುಧದಿಂದ ಒಬ್ಬೊಬ್ಬ ದೈತ್ಯ ಸೇನಾಪತಿಯನ್ನು ಕಡಿದು ಹಾಕಿದಳು. ಹಲಾಯುಧದಿಂದ ಪ್ರಚಂಡಾಸುರನನ್ನು ಹೊಡೆದು ಹಾಕಿದಳು. ಭಿಂದಿಪಾಲದಿಂದ ಅಮರಾಸುರನನ್ನು ಭೇದಿಸಿದಳು. ಚೂರಿಯಿಂದ ಮಹಾಮೌಲಿಯ ಮಸ್ತಕವನ್ನು ಸೀಳಿದಳು. ಮಹಾಹನುವನ್ನು ಖಡ್ಗದಿಂದ ಕೊಚ್ಚಿದಳು. ಉಗ್ರಾಸ್ಯನನ್ನು ಕೊಡಲಿಯಿಂದ ಕಡಿದು ಹಾಕಿದಳು. ಶಕ್ತಿಪ್ರಯೋಗದಿಂದ ವಿಕಟಾಕ್ಷನನ್ನು ವಧಿಸಿದಳು. ಜ್ವಾಲಾಮುಖನನ್ನು ಮುದ್ಗರಾಸ್ತ್ರದಿಂದ ಮಣ್ಣುಗೊಡಿಸಿದಳು. ದಹನ ಎಂಬ ದಾನವ ಧುರೀಣನನ್ನು ತನ್ನ ಕೈಯಲ್ಲಿಯ ಒನಕೆಯಿಂದ ಥಳಿಸಿ ಕೊಂದು ಹಾಕಿದಳು.

ದೇವಿಯು ಹೀಗೆ ಸೇನಾಪತಿಗಳನ್ನೆಲ್ಲ ಸಂಹಾರ ಮಾಡಿ ಮಹಿಷಾಸುರನ ಮೇಲೆ ಏರಿ ಬಂದಳು. ಸಿಟ್ಟಿನಿಂದ ಸಿಂಹನಾದ ಮಾಡಿದಳು. ಅದನ್ನು ಕೇಳಿ ಕೆರಳಿಹೋದ ಮಹಿಷಾಸುರನು ದುರ್ಗಾದೇವಿಯ ಬಾಯಿ ಹಾಗೂ ಕಣ್ಣುಗಳ ಮೇಲೆ ಭೀಕರವಾದ ಬಾಣಗಳನ್ನು ಬಿಟ್ಟನು. ಆಗ ದುರ್ಗಾದೇವಿಯು ಕೂಡ ಕುಪಿತಳಾಗಿ ದೈತ್ಯನ ಮೇಲೆ ಉರಿಯುವ ಬಾಣಗಳನ್ನು ಬಿಟ್ಟಳು. ಅವಳ ಬಾಣಪ್ರಹಾರದಿಂದ ಮಹಿಷಾಸರನ ಸಾರಥಿಯು ಉರುಳಿ ಬಿದ್ದನು. ಕುದುರೆಗಳೆಲ್ಲವೂ ಹತ ಪತಿತವಾದವು. ಅವನ ಕೈಯಲ್ಲಿಯ ಬಿಲ್ಲು ಬಾಣಗಳು ಕತ್ತರಿಸಲ್ಪಟ್ಟವು. ರಥದ ಧ್ವಜವು ಉರುಳಿ ಕೆಳಗೆ ಬಿದ್ದಿತು.

ಆಗ ದೈತ್ಯರಾಜನಾದ ಮಹಿಷಾಸುರನು ಪಾದಚಾರಿಯಾಗಿಯೇ ದುರ್ಗೆಯ ಮೇಲೆ ಏರಿ ಬಂದನು. ಮೃತ್ಯುದಂಡದಂತಿರುವ ಶತಘ್ನೀ ಎಂಬ ಉರಿಯುವ ಆಯುಧವನ್ನು ದೇವಿಯ ಮೇಲೆ ಪ್ರಯೋಗಿಸಿದನು. ದೇವತೆಗಳೆಲ್ಲರೂ ಹಾಹಾಕಾರ ಮಾಡಿದರು. ಮಾತೃಕೆಯರೆಲ್ಲರೂ ಓಡತೊಡಗಿದರು. ಆದರೆ ದುರ್ಗಾದೇವಿಯು ಮಾತ್ರ ಬೆದರದೆ, ಬೆಚ್ಚದೆ, ಧೈರ್ಯದಿಂದ ಅವನ ಶತಘ್ನಿಯನ್ನೂ ಕೈಯಲ್ಲಿ ಹಿಡಿದು ಮುರಿದು ಹಾಕಿದಳು. ಅನಂತರ ಮಹಿಷನು ಆ ದೇವಿಯ ಮೇಲೆ ತನ್ನ ಘೋರವಾದ ಬಿಲ್ಲು, ಬಾಣ, ಪಾಶ, ಖಡ್ಗ; ಭುಶುಂಡಿ, ಕೀಲ, ಶಕ್ತಿ, ಗವ, ಚಕ್ರ, ತೋಮರ, ಫಲ, ಅಂಕುಶ, ಭಿಂಡಿಪಾಶ, ಪಟ್ಟಿಶ, ದಂಡ ಮೊದಲಾದ ಅನೇಕಾನೇಕ ಶಸ್ತ್ರಾಸ್ತ್ರಗಳ ಮಳೆಯನ್ನೇ ಸುರಿಸಿದನು. ಆದರೆ ದೇವಿಯು ಅವೆಲ್ಲವನ್ನು ತನ್ನ ಕೈಯಲ್ಲಿ ಹಿಡಿದು ಆನೆಯು ಕಮಲದ ದೇಟನ್ನು ಮುರಿಯುವಂತೆ ಮುರಿದು ಪುಡಿ ಪುಡಿ ಮಾಡಿ ಬಿಸುಟಿದಳು.

ಹೀಗೆ ತನ್ನ ಶಸ್ತ್ರಾಸ್ತ್ರಗಳೆಲ್ಲ ವ್ಯರ್ಥವಾದುದನ್ನೂ ಕಂಡು, ಕುಪಿತನಾದ ಆ ಮಹಿಷಾಸುರನು ಸಿಂಹ, ಆನೆ, ಕೋಣ, ಕಾಡುಹಂದಿ, ಹುಲಿ ಮುಂತಾದ ಬೇರೆ ಬೇರೆ

ಕ್ರೂರ ಪ್ರಾಣಿಗಳ ರೂಪ ತೆಗೆದುಕೊಂಡು ದೇವಿಯೊಡನೆ ಯುದ್ಧ ಮಾಡಿದನು. ಅತ್ಯಂತ ಸಿಟ್ಟಿನಿಂದ ತೀಕ್ಷ್ಣವಾದ ಕೋಡುಗಳಿಂದ ತಿವಿದು ಚುಚ್ಚಿ ದೇವಿಯನ್ನೂ ಅವಳ ಸಿಂಹವನ್ನೂ ಗಾಯಗೊಳಿಸಿದ ಅವನು ಒಂದು ಕ್ಷಣ ನೆಲದ ಮೇಲಿದ್ದರೆ ಮರುಕ್ಷಣದಲ್ಲಿ ಆಕಾಶದಲ್ಲಿ. ಒಮ್ಮೆ ಪೂರ್ವದಿಕ್ಕು, ಒಮ್ಮೆ ಪಶ್ಚಿಮ, ಇನ್ನೊಮ್ಮೆ ಉತ್ತರ, ಮತ್ತೊಮ್ಮೆ ದಕ್ಷಿಣ ಹೀಗೆ ತಿರುಗುತ್ತಾ ಗರ್ಜನೆಗೈಯುತ್ತಾ ಹೋರಾಡಿದನು. ಕೊನೆಗೊಮ್ಮೆ ಆ ಮಹಿಷಾಸುರನು ತನ್ನ ನಿಜವಾದ ರೂಪದಲ್ಲಿಯೇ ದೇವಿಯ ಎದುರು ಬಂದನು. ಧೈರ್ಯದಿಂದ ಅವಳನ್ನು ಎದುರಿಸಿದನು. ಆಗ ದುರ್ಗಾದೇವಿಯು ತನ್ನ ಕೈಯಲ್ಲಿಯ ಖಡ್ಗದಿಂದ ಆ ಮಹಿಷಾಸುರನ ಮಸ್ತಕವನ್ನು ಕಡಿದು ಹಾಕಿದಳು. ಮತ್ತು ಕತ್ತರಿಸಿದ ಆ ರುಂಡವನ್ನು ಹಿಡಿದುಕೊಂಡು ರಣಭೂಮಿಯಲ್ಲಿ ಕುಣಿದು ಕುಪ್ಪಳಿಸಿದಳು.

ಈ ರೀತಿಯಾಗಿ ದುರ್ಗಾದೇವಿಯು ಲೋಕಕಂಟಕನಾದ ಮಹಿಷಾಸುರನನ್ನು ಕೊಂದು ಹಾಕಿದ್ದನ್ನು ಕಂಡು ದೇವತೆಗಳೆಲ್ಲರೂ ಆನಂದದಿಂದ ನರ್ತನ ಮಾಡಿದರು. ಮುನಿ ಮಹರ್ಷಿಗಳು ಹೊಗಳಿ ಹಾಡಿದರು. ಜಗತ್ತಿನಲ್ಲಿಯ ಸಾಧು-ಸಜ್ಜನರೆಲ್ಲರೂ ಸಂತಸದ ನಿಟ್ಟುಸಿರನ್ನು ಬಿಟ್ಟರು. ಸ್ವರ್ಗಲೋಕದಿಂದ ಪುಷ್ಪವೃಷ್ಟಿಯಾಯಿತು. ಮುನಿ, ಮನುಜ, ಮಾನವ, ದಾನವ, ಸಿದ್ಧ, ನಾಗ, ಯಕ್ಷ, ಕಿನ್ನರ, ಕಿಂಪುರುಷಾದಿಯಾಗಿ ಸಮಸ್ತರೂ ದೇವಿಯ ಮೇಲೆ ಪ್ರಶಂಸಾವೃಷ್ಟಿಗೈದರು.

## ಜಲಾಶಯೊಂದರ ನಿರ್ಮಾಣ, ಪಾಪನಾಶನ ಲಿಂಗದ ಪ್ರತಿಷ್ಠಾಪನೆ

**ಮಾರ್ಕಂಡೇಯ:-** ಈ ರೀತಿಯಾಗಿ ಭದ್ರಕಾಳಿಯು ದುರ್ಗಾದೇವಿಯ ರೂಪದಿಂದ ಮಹಿಷಾಸುರನನ್ನು ಸಂಹರಿಸಿದ ಬಳಿಕ ತಪೋನಿರತಳಾದ ಪಾರ್ವತೀದೇವಿಯು ಮುಂದೆ ಏನು ಮಾಡಿದಳು?

**ನಂದೀಶ್ವರ:-** ಮುನಿಯೇ, ಅನಂತರ ದುರ್ಗಾದೇವಿಯು ಒಂದು ಕೈಯಲ್ಲಿ ಮಹಿಷಾಸುರನ ರುಂಡವನ್ನೂ ಇನ್ನೊಂದು ಕೈಯಲ್ಲಿ ಖಡ್ಗವನ್ನೂ ಹಿಡಿದುಕೊಂಡು ಪಾರ್ವತೀದೇವಿಗೆ ನಮಸ್ಕಾರವನ್ನು ಮಾಡಿದಳು. ಆನಂದದಿಂದ ನರ್ತನ ಮಾಡುತ್ತಿರುವ ದುರ್ಗಾದೇವಿಯನ್ನು ದಯಾಪೂರ್ಣ ದೃಷ್ಟಿಯಿಂದ ನೋಡಿದಳು ಆ ಗಿರಿಜಾದೇವಿ. ತನ್ನ ಶುಭ್ರವಾದ ದಂತಪಂಕ್ತಿಯ ಕಿರಣಕಾಂತಿಯನ್ನು ಎಲ್ಲೆಡೆಗೂ ಚೆಲ್ಲುತ್ತ ಮಂದಹಾಸಗೈದು ಮುಗ್ಧ ಮುಖದಿಂದ ದೇವಿಯು ನುಡಿದಳು :-

**ಪಾರ್ವತಿ:-** ವಿಂಧ್ಯವಾಸಿಯಾದ ದುರ್ಗಾದೇವಿಯೇ! ನೀನು ಮಾಡಿದ ಕಾರ್ಯ ಅನನ್ಯ ಸಾಧ್ಯ. ನಿನ್ನ ಪರಾಕ್ರಮ ಅಪರಿಮಿತ. ನಿನ್ನ ಗೈಮೆ ಅದ್ಭುತ. ಮೈ ಮೆಲೋಕೋತ್ತರ. ನಿನ್ನ ಶಕ್ತಿ ಪರಾಕ್ರಮಗಳ ಪುಣ್ಯ ಪ್ರಭಾವದಿಂದ ನನ್ನ ತಪೋನುಷ್ಠಾನಕ್ಕೆ ಬಂದ ವಿಘ್ನಗಳೆಲ್ಲವೂ ದೂರವಾದವು. ದೇವಿ! ನಿನ್ನ ಚರಿತ್ರ ಜಗತ್ಪವಿತ್ರ. ನೀನು ಈಗ ಕೈಯಲ್ಲಿ ಹಿಡಿದಿರುವ ಮಹಿಷಾಸುರನ ಮುಂಡವು ಅಷ್ಟೇ ಅಪವಿತ್ರ ಮತ್ತು ಅಸಹ್ಯ ಹಾಗೂ ಭಯಂಕರ. ಅದನ್ನು ಒಗೆದು ಬಿಡು. ಇಲ್ಲಿ ಒಂದು ಹೊಚ್ಚ ಹೊಸ ತೀರ್ಥವನ್ನು ನಿರ್ಮಿಸು. ಅದರಲ್ಲಿ ಸ್ನಾನ ಮಾಡುವದರಿಂದ ಎಲ್ಲರ ಪಾಪಗಳು ತೊಳೆದು ಹೋಗುವಂತಾಗಲಿ.

ಗೌರೀದೇವಿಯು ಹೀಗೆ ಹೇಳಿದ ಕೂಡಲೇ ಅವಳ ಅಪ್ಪಣೆಯನ್ನು ಶಿರೋಮಾನ್ಯ ಮಾಡಿದಳು ದುರ್ಗೆ. ತನ್ನ ಕೈಯಲ್ಲಿರುವ ಖಡ್ಗದಿಂದ ಅಲ್ಲಿಯೇ ಸಮೀಪದಲ್ಲಿದ್ದ ಒಂದು

ಗಂಡ ಶಿಲಾಖಂಡವನ್ನು ಹೊಡೆದಳು. ಪರ್ವತಾಕಾರವಾಗಿ ಭೂಗರ್ಭದ ಆಳದಲ್ಲಿ ಹೂತುಹೋದ ಆ ಶಿಲಾಖಂಡದ ನಟ್ಟನಡುವೆ ದುರ್ಗಾದೇವಿಯ ಕೈಯಲ್ಲಿಯ ಖಡ್ಗ ಪ್ರಹಾರದಿಂದ ಒಂದು ದೊಡ್ಡ ಬಿರುಕು ಅಥವಾ ಛಿದ್ರವು ಬಿದ್ದಿತು. ಪಾತಾಳದ ತಳದ ವರೆಗೆ ದೊಡ್ಡದೊಂದು ಸುರಂಗ ಮಾರ್ಗವೇ ಏರ್ಪಟ್ಟಂತಾಯಿತು. ಆ ಛಿದ್ರದಿಂದ ಒಮ್ಮೆಲೇ ತಿಳಿ-ತಿಳಿಯಾದ ಸ್ವಚ್ಛ-ಶುಭ್ರವಾದ ನೀರು ತರಂಗ- ತರಂಗವಾಗಿ ಮೇಲೆ ಪುಟಿದು ಬರತೊಡಗಿತು. ಪರಮ ಪವಿತ್ರವೂ ಅತ್ಯಂತ ನಿರ್ಮಲವೂ ಆದ ಆ ನೀರಿನಿಂದ ಒಂದು ಗಂಭೀರ ಜಲಾಶಯವು ನಿರ್ಮಾಣಗೊಂಡಿತು. ಮಹಿಷಾಸುರನನ್ನು ಕೊಂದು ಮತ್ತು ಅವನ ಮಸ್ತಕವನ್ನು ಕಡಿದು ಕೈಯಲ್ಲಿ ಹಿಡಿದು ಕುಣಿದಾಡಿದ್ದರಿಂದ ತನಗೆ ಮೈಲಿಗೆಯಾಗಿದೆ ಎಂದು ಭಾವಿಸಿದ್ದರಿಂದ ದೇವಿಯು ಆ ಜಲಾಶಯದಲ್ಲಿ ಒಮ್ಮೆಲೇ ಇಳಿದು "ನಮಃ ಶೋಣಾದ್ರಿನಾಥಾಯ" ಎಂದು ಸ್ನಾನ ಮಾಡಿದಳು.

ಆ ಹೊಸ ಜಲಾಶಯದ ನಿರ್ಮಲವಾದ ನೀರಿನಲ್ಲಿ ಸ್ನಾನಕ್ಕಾಗಿ ಧುಮುಕುವ ಮೊದಲು ತನ್ನ ಕೈಯಲ್ಲಿ ಹಿಡಿದ ಮಹಿಷಾಸುರನ ರುಂಡದ ಕೊರಳಲ್ಲಿ ಇದ್ದ ಶಿವಲಿಂಗವು ಅಲ್ಲಿಯೇ ಆ ತೀರ್ಥದ ದಂಡೆಯ ಮೇಲೆ ಬಿದ್ದಿತು. ಮತ್ತು ಅದು ಅಲ್ಲಿ ಸ್ವಯಂ ಪ್ರತಿಷ್ಠಿತವಾಗಿ "ಪಾಪನಾಶನ ಲಿಂಗ" ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆಯಿತು. ದುರ್ಗಾದೇವಿಯು ತಾನು ಕೈಯಲ್ಲಿ ಹಿಡಿದ ಮಹಿಷಾಸುರನ ಮುಂಡ ಮತ್ತು ತನ್ನ ಕೈ ಖಡ್ಗಗಳೊಂದಿಗೆ ಆ ಜಲಾಶಯದ ನೀರಿನಲ್ಲಿ ಅವಗಾಹನ ಸ್ನಾನ ಮಾಡಿ ಮೇಲೆ ಎದ್ದಳು. ಅವಳ ಕೈಯಲ್ಲಿಯ ಮಹಿಷಮಸ್ತಕವು ದಂಡೆಯ ಮೇಲೆಯೇ ಬಿದ್ದಿತ್ತು. ಮತ್ತೊಮ್ಮೆ ಅವಳು ಕೈ ತೊಳೆದುಕೊಂಡು ವಿಧಿಪೂರ್ವಕವಾಗಿ ಸ್ನಾನ ಮಂತ್ರವನ್ನು ಹೇಳಿ ಆ ತೀರ್ಥದಲ್ಲಿ ಅವಗಾಹನ ಸ್ನಾನ ಮಾಡಿದಳು.

## ಜ್ಯೋತಿ ಸ್ವರೂಪದಲ್ಲಿ ಕಾಣಿಸಿಕೊಂಡ ಪಶುಪತಿಯ ಸ್ತುತಿ

ಅನಂತರ ಕಾರ್ತಿಕ ಹುಣ್ಣಿಮೆಯ ದಿನ ರಾತ್ರಿ ಕಾಲದಲ್ಲಿ ಅರುಣಾಚಲದ ಶಿಖರದ ಮೇಲೆ ಒಂದು ಅಪೂರ್ವ ಜ್ಯೋತಿಯು ಜಗಮಗಿಸತೊಡಗಿತು. ಅದೊಂದು ಸೌದೆ, ಎಣ್ಣೆ, ಕಟ್ಟಿಗೆ, ಬತ್ತಿ ಯಾವದೂ ಇಲ್ಲದೇ ಉರಿಯುವ ಮಹಾ ಪ್ರದೀಪವಾಗಿದ್ದಿತು. ಅದನ್ನು ಕಂಡು ಪರಮವಿಸ್ಮಯವಾಯಿತು ಪಾರ್ವತಿದೇವಿಗೆ. ಆಗ ಅವಳು ಅರುಣಾಚಲನಾಥನಿಗೆ ನಮಸ್ಕಾರ ಮಾಡಿ ಈ ರೀತಿಯಾಗಿ ಸ್ತೋತ್ರ ಮಾಡಹತ್ತಿದಳು.

ಪಾರ್ವತಿ-ಮೇರುಗಿರಿಯ ಮಸ್ತಕದ ಮೇಲೆ ನೆಲೆ ನಿಂತ ಕೈಲಾಸಪತಿಗೆ ನಮಸ್ಕಾರ, ಅರುಣಾಚಲ ರೂಪಧರಿಸಿದ ಹಿಮಾಚಲದ ಅಳಿಯನಿಗೆ ವಂದನೆ. ವರುಣ, ಕುಬೇರ, ಇಂದ್ರ ಮುಂತಾದ ದೇವತಾ ಧುರೀಣರಿಂದ ಪೂಜನೀಯನೂ, ಮಧ್ಯಾಹ್ನ ಸೂರ್ಯನಂತೆ ತೇಜಸ್ವಿಯೂ, ಕರುಣಾಮೂರ್ತಿಯೂ ಆದ ಅರುಣಾಚಲನಾಥನಿಗೆ ಪ್ರಣಾಮ. ಭಗವಂತನೇ ನಿನ್ನ ತಲೆಯ ಮೇಲೆ ಜಟಾಜೂಟದಲ್ಲಿ ಜಾಹ್ನವಿಯ ಜಲ-ಜಾಲ. ಇನ್ನೊಂದೆಡೆ ಚಂದ್ರಕೋರ, ಕೈಯಲ್ಲಿ ತ್ರಿಶೂಲ, ಮೈಯಲ್ಲೆಲ್ಲ ಹರಿದಾಡುವ ಹಾವುಗಳು. ಆನೆಯ ತೊಗಲೇ ನಿನಗೆ ಬಟ್ಟೆ. ಸ್ಮಶಾನದಲ್ಲಿ ನಿವಾಸ, ಆದರೂ ನೀನು ನಿರಂತರವಾಗಿ ನೆಲೆಸಿರುವದು ಕೈಲಾಸ. ಸ್ಮಶಾನದಲ್ಲಿದ್ದರೂ ನೀನು ಪವಿತ್ರಮೂರ್ತಿ, ಮುಂಡಮಾಲಾಧಾರಿಯಾದರೂ ನೀನು ನಿತ್ಯ ನಿರಂತರವೂ ಪರಮ ಪವಿತ್ರ. ನೀನು ಹರಿಯ

ದಯೆಯಿಂದ ನಾರಾಯಣನ ಸ್ವರೂಪವನ್ನು ಧಾರಣಮಾಡಿ ಅನೇಕ ಅವತಾರ ಲೀಲೆಗಳನ್ನು ಮಾಡಿರುವೆ. ಆನಂದದಿಂದ ಸಂಜೆಯ ಹೊತ್ತು ನೀನು ಶಿವತಾಂಡವ ನೃತ್ಯವನ್ನು ಮಾಡಿ ಮಹಾನಟ ಎಂದು ಪ್ರಸಿದ್ಧನಾಗಿರುವೆ. ಸಿದ್ಧ ಗಂಧರ್ವ, ದೇವ ವಿದ್ಯಾಧರ, ದೈತ್ಯದಾನವರಿಂದ ಪರಿಪೂಜಿತನಾದ ನೀನು ಗಣಪತಿಗೂ ಜನ್ಮದಾತನಾಗಿರುವೆ. ಆರು ಮುಖವುಳ್ಳ ಸ್ಕಂದನೂ ಕೂಡ ನಿನ್ನ ಮೆಚ್ಚಿನ ಮಗನೇ. ಹಿಮಾಚಲ ಕುಮಾರಿಯಾದ ಪಾರ್ವತೀದೇವಿಯ ಪ್ರೀತಿಯ ಪತಿದೇವನಾದ ಪರಮೇಶ್ವರ ಪ್ರಭುವೇ ನಿನಗೆ ಜಯವಾಗಲಿ. ''ಜಯ ಜಯ ಶಂಭೋ, ನಮೋ ನಮಃ ಶಿವಶಂಕರ.''

## ಕಲ್ಯಾಣ ರೂಪದಿಂದ ಶಿವನ ಪ್ರಾದುರ್ಭಾವ

ಈ ರೀತಿಯಾಗಿ ಭಕ್ತಿಭಾವ ಭರಿತಳಾಗಿ ಅರುಣಾಚಲದ ಶಿಖರದ ಮೇಲೆ ಉದಿತೋದಿತವಾಗಿ ಬೆಳಗುತ್ತಿರುವ ಜ್ಯೋತಿಃಪುಂಜದಲ್ಲಿಯೇ ದೃಷ್ಟಿಯನ್ನು ನೆಟ್ಟು ಸ್ತೋತ್ರ ಮಾಡುತ್ತಲಿರುವ ಪಾರ್ವತಿಯನ್ನು ನೋಡಿ, ಸುಪ್ರಸನ್ನನಾದ ಆ ಪರಮೇಶ್ವರ. ಅವಳ ಮೇಲೆ ಇನ್ನೂ ಹೆಚ್ಚಿನ ಅನುಗ್ರಹವನ್ನು ಮಾಡಬೇಕೆಂಬ ಬಯಕೆಯಿಂದ ಒಂದು ಕ್ಷಣ ತನ್ನ ಆ ಜ್ಯೋತಿಃ ಸ್ವರೂಪವನ್ನು ಅಂತರ್ಧಾನಗೊಳಿಸಿದ. ಆಗ ದೇವಿಯು ಚಕಿತಚಿತ್ತಳಾಗಿ ಇದು ಹೀಗೇಕೆ ಆಯಿತು ಎಂದು ನೋಡುವಷ್ಟರಲ್ಲಿ ವೃಷಭಾರೂಢನಾಗಿ ಮಹಾದೇವನು ಅವಳ ಮುಂದೆ ತನ್ನ ಕಲ್ಯಾಣರೂಪದಿಂದ ಕಾಣಿಸಿಕೊಂಡ. ತನ್ನ ಕಡೆ ಬರುತ್ತಿರುವ ಸಾಕ್ಷಾತ್ ತನ್ನ ಪತಿ ಪರಮೇಶ್ವರನನ್ನ ನೋಡಿ ಉಮಾದೇವಿಗೆ ಆನಂದ ವಾಯಿತು. ದೀರ್ಘಕಾಲದ ತನ್ನ ಪತಿವಿರಹದ ದುಃಖವನ್ನು ಕೂಡ ಅವಳು ಆ ಕ್ಷಣದಲ್ಲಿ ಮರೆತುಬಿಟ್ಟಳು. ತನ್ನ ಅಚ್ಚು ಮೆಚ್ಚಿನ ಪ್ರಾಣಪ್ರಿಯ ಪತಿದೇವನಾದ ಪರಮೇಶ್ವರನು ಪ್ರೇಮಪೂರ್ಣ ಕಟಾಕ್ಷದಿಂದ ನೋಡುತ್ತ ಸಮೀಪದಲ್ಲಿ ಬಂದ ಕೂಡಲೇ ಅವಳ ಶರೀರವೆಲ್ಲವೂ ರೋಮಾಂಚಿತವಾಯಿತು. ಮುಖದ ಮೇಲೆ ಮುತ್ತಿನಂತೆ ಬೆವರು ಹನಿಗಳು ಸಾಲುಗೊಂಡವು. ಅವಳು ನಸುನಡಗುತ್ತ ಪರಮೇಶ್ವರನ ಪಾದದ ಬೆರಳುಗಳನ್ನು ನಿರುಕಿಸತೊಡಗಿದಳು. ಮಹಾದೇವನ ಪಾದಾಂಗುಲಗಳಿಗೆ ತನ್ನ ತಲೆಯನ್ನು ಬಾಗಿಸಿ ತಾಗಿಸಿ, ನಮ್ರ ಕೈಗಳಿಂದ ನಮಿಸಿದಳು. ಕೂಡಲೇ ಮಹಾದೇವನು ಎತ್ತಿನ ಹೆಗಲ ಮೇಲಿಂದ ಕೆಳಗೆ ಇಳಿದು ಪಾರ್ವತಿಯ ಕೈಯನ್ನು ತನ್ನ ಕೈಯಿಂದ ಹಿಡಿದನು. ಪ್ರಸನ್ನ ಮುಖದಿಂದ ಪ್ರೇಮಪೂರ್ವಕವಾಗಿ ಮಾತನಾಡಿದನು.

**ಮಹಾದೇವ:-** ದೇವಿ, ನೀನು ಕಾರಣವಿಲ್ಲದೇ ಏಕೆ ಇಷ್ಟು ವ್ಯಾಕುಲಳಾಗಿರುವೆ? ನೀನು ತಿಳಿದಿಲ್ಲವೆ? ನಾವ್ಬಿಬರೂ ಪರಸ್ಪರ ಅಭಿನ್ನರು ಚಂದ್ರ-ಚಂದ್ರಿಕೆಯರಂತೆ. ನಾನು ನಾರಾಯಣ ನೀನು ಲಕ್ಷ್ಮಿ. ನಾನು ಬ್ರಹ್ಮ ನೀನು ಸರಸ್ವತಿ. ನಾನು ಆದಿ ಶೇಷ ನೀನು ವಾರುಣಿ. ನಾನು ಅಗ್ನಿ ನೀನು ಸ್ವಾಹಾ. ನಾನು ಸೂರ್ಯ ನೀನು ಸುವರ್ಚಲಾ. ನಾನು ಪುರುಷ ನೀನು ಪ್ರಕೃತಿ. ನಾನು ಅರ್ಥ ನೀನು ವಾಣಿ. ನಾನು ಈಶ್ವರ ನೀನು ನನ್ನ ಶಕ್ತಿ. ಆದ್ದರಿಂದ ನೀನು ಸರ್ವಸಾಧಾರಣ ಜನರಂತೆ ನನ್ನ ನಿನ್ನಲ್ಲಿ ಭೇದ ಭಾವವನ್ನು ತಿಳಿಯಬೇಡ. ನಾವಿಬ್ಬರೂ ಚೈತನ್ಯ ಸ್ವರೂಪರು. ಪ್ರಕಾಶರೂಪರು. ನಾವಿಬ್ಬರೂ ನಮ್ಮ ಇಚ್ಛೆಯಿಂದಲೇ ಬೇರೆ ಬೇರೆ ಶರೀರವನ್ನು ಧರಿಸಿರುತ್ತೇವೆ.

## ಪರಮೇಶ್ವರ ಅರ್ಧನಾರೀನರೇಶ್ವರನಾದುದು

ಹೀಗೆ ನುಡಿದು ಮಹಾದೇವನು ಆ ಅರುಣಾಚಲದ ಶಿಖರದ ಮೇಲೆ ಕುಳಿತು ಕೊಂಡನು. ತನ್ನ ಎಡಬದಿಯಲ್ಲಿ ಪಾರ್ವತೀ ದೇವಿಯ್ನನು ಕುಳ್ಳಿರಿಸಿ ಕೊಂಡನು. ಆ ಸತೀ ದೇವಿಯು ಲಜ್ಜೆಯಿಂದ ಪರಮೇಶ್ವರ ವಾಮಾಂಗದಲ್ಲಿ ಅಡಗತೊಡಗಿದಳು. ಪ್ರೇಮದಿಂದ ಆ ಪಾರ್ವತೀ ಪರಮೇಶ್ವರರಿಬ್ಬರೂ ಒಬ್ಬರಿಗೊಬ್ಬರ ದೇಹದಲ್ಲಿ ಲೀನರಾದರು. ಈವರೆಗೆ ಎರಡಾಗಿದ್ದ ದೇಹಗಳು ಈಗ ಐಕ್ಯವನ್ನು ಹೊಂದಿ ಒಂದೇ ದೇಹವಾಯಿತು. ಹೀಗೆ ಶಿವಾಶಿವೆಯರ ಏಕೀಭೂತವಾದ ಆ ದೇಹವು ವಿಚಿತ್ರ ಕಾಂತಿಯಿಂದ ಕಂಗೊಳಿಸತೊಡಗಿತು. ಪ್ರೇಮಾತಿರೇಕದಿಂದ ಏಕೀಭೂತವಾದ ಆ ಪಾರ್ವತೀ ಪರಮೇಶ್ವರರ ಉಭಯ ಸಮ್ಮಿಲಿತವಾದ ಒಂದು ದೇಹದಲ್ಲಿ ಅರ್ಧಭಾಗವು ಕರ್ಪೂರದಂತೆ ಬೆಳ್ಳಗೆ. ಉಳಿದ ಅರ್ಧ ಭಾಗವು ಬಂಗಾರದಂತೆ ಹೊಂಬಣ್ಣದಿಂದ ಶೋಭಿಸುತ್ತಿತ್ತು. ತಲೆಯ ಅರ್ಧಭಾಗದಲ್ಲಿ ಜಟಾಜೂಟ, ಇನ್ನು ಅರ್ಧಭಾಗದಲ್ಲಿ ಹಾರ. ಇನ್ನೊಂದರಲ್ಲಿ ಮುಂಡಮಾಲೆ. ಒಂದು ಕಾಲಲ್ಲಿ ಪೈಜಣ. ಮತ್ತೊಂದು ಪಾದದಲ್ಲಿ ನಾಟ್ಯಭಂಗಿ. ಒಂದು ಕೈಯಲ್ಲಿ ಕಂಕಣ ಮತ್ತೊಂದು ಕೈಯಲ್ಲಿ ಹಾವಿನ ಕಡಗ. ಹೀಗೆ ಪಾರ್ವತೀ ಪರಮೇಶ್ವರರ ಆ ಅರ್ಧನಾರೀಶ್ವರ ರೂಪವು ಒಳ್ಳೆ ಮನೋಹರ ನೋಡಲು. ಒಳ್ಳೆಯ ಸುಂದರ ಪಾಡಲು. ಹೀಗೆ ತನ್ನ ದೇಹದ ಎಡಬದಿಯ ಅರ್ಧಭಾಗವನ್ನೇ ಪಾರ್ವತೀದೇವಿಗೆ ಸಮರ್ಪಣೆಗೈದು ಪರಮೇಶ್ವರನು ನುಡಿದನು.

**ಮಹಾದೇವ:-** ಶೈಲ ನಂದಿನಿ! ಇನ್ನು ಮೇಲಾದರೂ ನೀನು ನನ್ನ ಮೇಲೆ ಸಿಟ್ಟಾಗಿ ದೂರ ಹೋಗಲಾರೆ. ಒಂದಿಲ್ಲ ಒಂದು ನೆಪ ಮಾಡಿ ನನ್ನ ಮೇಲೆ ರೋಷ ಉಕ್ಕಿ ನೀನು ನನ್ನನ್ನು ಬಿಟ್ಟು ಯಾವುದೋ ಬೆಟ್ಟದ ತುಟ್ಟ ತುದಿಯಲ್ಲಿ ನಿಂತು ತಪಂಗೈಯುತ್ತಿದ್ದೆ ಅಥವಾ ನನ್ನನ್ನು ಬಿಟ್ಟು ತಂದೆಯ ಮನೆಗೆ ಹೋಗುತ್ತಿದ್ದೆ. ನಾನು ನಿನ್ನ ವಿರಹದ ವ್ಯಾಕುಲತೆಯಿಂದ ಒದ್ದಾಡುತ್ತಿದ್ದೆ. ವಿಯೋಗದ ವಹ್ನಿಯಲ್ಲಿ ಬೆಂಕಿಯಿಲ್ಲದೇ ಬೆಂದು ಹೋಗುತ್ತಿದ್ದೆ. ನಿನ್ನನ್ನು ಹುಡುಕಲು ಕಾಡು ಮೇಡುಗಳಲ್ಲಿ ಅಲೆಯುತ್ತಿದ್ದೆ. ಹುಡುಕಿ ಮಿಡುಕುತ್ತಿದ್ದೆ. ಹುಚ್ಚರಂತೆ ಎಲ್ಲೆಡೆಗೂ ನಿನ್ನ ಅನ್ವೇಷಣೆಯಲ್ಲಿ ಅಲೆದಾಡುತ್ತಿದ್ದೆ. ಇಂಥ ಪ್ರಸಂಗವು ಇನ್ನು ಮುಂದೆ ಬರಲಾರದು ಎಂದು ತಿಳಿದು ಈಗ ನನ್ನ ವಾಮಾಂಗವನ್ನೇ ನಿನಗೆ ಅರ್ಪಿಸಿಬಿಟ್ಟಿದ್ದೇನೆ. ಈಗ ನನ್ನ ನಿನ್ನ ದೇಹ ಅಭಿನ್ನ. ಪ್ರಾಣಗಳೂ ಅಭಿನ್ನ. ಇನ್ನು ಎಂದೂ ನನ್ನ ವಿಯೋಗ ನಿನಗಿಲ್ಲ. ನಿನ್ನ ವಿರಹ ನನಗಿಲ್ಲ.

## ಮತ್ತೆ ಕೆಲವು ತೀರ್ಥಗಳಿಗೆ ನಾಮಕರಣ

ಈಗ ನೋಡು ನೀನು ಹಾಲು ಕುಡಿಯುವ ನಮ್ಮ ಹಸುಳೆ, ಷಣ್ಮುಖನನ್ನು ಕೂಡ ಮನೆಯಲ್ಲಿ ಬಿಟ್ಟು ಈ ಬೆಟ್ಟಕ್ಕೆ ತಪಸ್ಸಿಗಾಗಿ ಬಂದಿರುವೆ. ಆದರಿಂದ ಈಗ ನೀನು ತಪಸ್ಸು ಮಾಡುತ್ತ ನಿಂತ ಈ ತೀರ್ಥವು 'ಅಪೀತಸ್ತನಿ' ಎಂಬ ಹೆಸರಿನಿಂದ ಪ್ರಸಿದ್ಧವಾಗುವದು. ದೇವಿ ''ಅಪೀತಸ್ತನಿ'' ಎಂಬ ಹೆಸರಿನಿಂದ ನಿನ್ನನ್ನು, 'ಅರುಣಾಚಲೇಶ್ವರ' ಎಂಬ ಹೆಸರಿನಿಂದ ನನ್ನನ್ನೂ ಉಪಾಸನೆಗೈದು ಆರಾಧನೆ ಮಾಡುವವರಿಗೆ ಸರ್ವ ಭೋಗಗಳ ಲಾಭ. ಕೊನೆಗೆ ಮೋಕ್ಷಸುಖ ಪ್ರಾಪ್ತಿ. ನಿನ್ನ ಅಂಶದಿಂದ ಹುಟ್ಟಿದ ಮಹಿಷಾಸುರನನ್ನು ಮರ್ದಿಸಿ ಕಡಿದು ಹಾಕಿದ ಈ ದುರ್ಗಾದೇವಿಯು ಇಲ್ಲಿ ಬಂದು ತಪಸ್ಸು ಮಾಡುವವರಿಗೆ

ಮಂತ್ರಸಿದ್ಧಿಯನ್ನು ಪ್ರದಾನ ಮಾಡುವಳು, ಮಹಿಷಾಸುರನನ್ನು ಕೊಂದು ತನ್ನ ಖಡ್ಗವನ್ನು ಪಡೆದ ಇಲ್ಲಿಯ ಬೇರೊಂದು ತೀರ್ಥವು 'ಖಡ್ಗತೀರ್ಥ' ಎಂದು ಹೆಸರು ಪಡೆದಿರುವದು. ಈ ಖಡ್ಗತೀರ್ಥದಲ್ಲಿ ಸ್ನಾನ ಮಾಡುವುದರಿಂದ ಮಾನವನ ಎಲ್ಲ ರೋಗಗಳ ಪರಿಹಾರ ಸರ್ವಪಾಪಗಳ ವಿನಾಶ. ಇಲ್ಲಿ ನೆಲೆಸಿದ 'ಅರುಣಾಚಲನಾಥ' ಎಂಬ ಹೆಸರಿನ ನಾನು ನಮ್ಮಿಬ್ಬರ ಅರ್ಧನಾರೀ ನರೇಶ್ವರ ರೂಪವನ್ನು ಶ್ರದ್ಧೆಯಿಂದ ಭಜಿಸುವವರಿಗೆ ನಿರಂತರವೂ ಐಶ್ವರ್ಯವನ್ನು ಪ್ರದಾನ ಮಾಡುತ್ತೇನೆ.

ದೇವಿ, ನಿನಗೆ ಇಲ್ಲಿ ನೆಲೆ ನಿಂತು ತಪಸ್ಸನ್ನು ಮಾಡಲು ಅನುಕೂಲ ಮಾಡಿಕೊಟ್ಟ ಗೌತಮ ಮುನಿಯು ನಮ್ಮಿಬ್ಬರ ಕೃಪಾಪಾತ್ರನಾಗಿದ್ದಾನೆ. ಸೂರ್ಯ ಚಂದ್ರರಿರುವರೆಗೂ ಅವನು ಪುಣ್ಯಲೋಕಗಳಲ್ಲಿ ಸುಖ ಸೌಭಾಗ್ಯವನ್ನು ಪಡೆಯಲಿ. ಸಪ್ತಲೋಕಗಳಿಗೆಲ್ಲ ಜನನಿಯರಾದ ಈ ಏಳು ಮಾತೃಕಾದೇವಿಯರು ಈ ಅರುಣಾಚಲ ಕ್ಷೇತ್ರದಲ್ಲಿಯೇ ನೆಲೆ ನಿಲ್ಲಲಿ. ಶಾಸಕನಾದ ಭೈರವ, ಕ್ಷೇತ್ರಪಾಲನಾದ ಬಟುಕ, ಈ ಅರುಣಾಚಲ ಕ್ಷೇತ್ರದಲ್ಲಿ ನಿತ್ಯವೂ ನಿವಾಸ ಮಾಡಲಿ. ಕರುಣಾಮಯಿಯಾದ ನೀನು ''ಅರುಣಾದೇವಿ'' ಎಂಬ ಹೆಸರಿನಿಂದಲೂ, ಕರುಣಾಮಯನಾದ ನಾನು ''ಅರುಣ'' ಎಂಬ ಹೆಸರಿನಿಂದಲೂ ಈ ಅರುಣಾಚಲ ಕ್ಷೇತ್ರದಲ್ಲಿ ನಿರಂತರ ನಿವಾಸವನ್ನು ಮಾಡೋಣ. ಆದ್ದರಿಂದ ಈ ಅರುಣಾಚಲ ಕ್ಷೇತ್ರದಲ್ಲಿ ಎಲ್ಲ ವಿಧವಾದ ಸಿದ್ಧಿಗಳು ಸುಲಭವಾಗಿ ಪ್ರಾಪ್ತವಾಗುವವು.''

ಗಿರಿರಾಜ ನಂದಿನಿಯಾದ ಪಾರ್ವತಿದೇವಿಯು ಅರುಣಾಚಲೇಶ್ವರನನ್ನು ಪ್ರಸನ್ನಗೊಳಿಸಿ ಅರ್ಧನಾರೀನರೇಶ್ವರನಾಗಿ ಇಲ್ಲಿ ನೆಲೆ ನಿಂತ ಪಾವನ ಪ್ರಸಂಗವನ್ನು ಯಾರು ಕೇಳುವರೋ ಮತ್ತು ಹೇಳುವರೋ ಅವರ ಕಾಮಕ್ರೋಧಾದಿ ದೋಷಗಳೆಲ್ಲವೂ ದೂರವಾಗಿ ಸ್ವರ್ಗವು ಸುಲಭವಾಗಿ ದೊರಕುವದು. ಮೋಕ್ಷವು ಸಹಜವಾಗಿ ಲಭಿಸುವದು.

## ವಜ್ರಾಂಗದನ ವೃತ್ತಾಂತ

**ಮಾರ್ಕಂಡೇಯ:-** ಪೂಜ್ಯರೇ! ಪಾಂಡ್ಯ ದೇಶದ ದೊರೆಯಾದ ವಜ್ರಾಂಗದನು ಭಗವಾನ್ ಅರುಣಾಚಲೇಶ್ವರನ ಉಲ್ಲಂಘನವನ್ನು ಮಾಡಿದನಂತೆ. ಅದೇ ಅರುಣಾಚಲೇಶ್ವರನ ಮೇಲಿನ ಭಕ್ತಿಯಿಂದ ಮತ್ತೆ ಮರಳಿ ತನ್ನ ವೈಭವವನ್ನೆಲ್ಲ ಪಡೆದನಂತೆ. ಇದೆಲ್ಲವೂ ಕೇವಲ ನಾನು ಕರ್ಣಾಕರ್ಣಿಕವಾಗಿ ಕೇಳಿದ್ದು. ಆದರೆ ಈಗ ತಾವು ನನಗೆ ಅಧಿಕೃತವಾಗಿ ಈ ಎಲ್ಲ ವೃತ್ತಾಂತವನ್ನು ವಿಶದವಾಗಿ ನಿರೂಪಿಸಿರಿ. ಕಾಂತಿಶಾಲಿ ಮತ್ತು ಕಲಾಧರ ಎಂಬ ಇಬ್ಬರು ವಿದ್ಯಾಧರರ ಅರಸರು ಭಗವಾನ್ ಅರುಣಾಚಲೇಶ್ವರನ ಕೃಪೆಯಿಂದ ದುರ್ವಾಸ ಮಹರ್ಷಿಗಳ ಶಾಪದಿಂದ ಬಿಡುಗಡೆ ಹೊಂದಿದರಂತೆ. ಆ ವೃತ್ತಾಂತವನ್ನೂ ತಾವು ನನಗೆ ನಿರೂಪಿಸಬೇಕು.

**ನಂದಿಕೇಶ್ವರ:-** ಮುನೀಶ್ವರರೇ, ನೀವು ಕೇಳಿದ್ದು ಒಂದು ಕೌತುಕದ ಘಟನೆ. ಅದೆಲ್ಲವನ್ನೂ ಅಧಿಕೃತವಾಗಿ ಬಲ್ಲೆ. ಅದನ್ನು ಹೇಳುತ್ತೇನೆ ನಿಮಗಾಗಿ ಈಗ. ಸಾವಧಾನ ಚಿತ್ತರಾಗಿ ಆಲಿಸಿರಿ. ಹಿಂದೆ ಪಾಂಡ್ಯದೇಶದಲ್ಲಿ ವಜ್ರಾಂಗದ ಎಂಬ ಓರ್ವ ದೊರೆ. ಅವನು ಯಾವಾಗಲೂ ಶಿವಪೂಜಾ ಪರಾಯಣ. ಒಳ್ಳೆ ಧರ್ಮನಿಷ್ಠ. ಅವನ ಇಂದ್ರಿಯಗಳು ಮನಸ್ಸಿಗೆ ಅಧೀನ. ಮನಸ್ಸು ಅವನ ಅಧೀನ. ಹೀಗೆ ಪಿಂಡಾಂಡದಲ್ಲಿ ಎಲ್ಲವೂ ಅವನ

ಕೈವಶ. ಕ್ಷಮೆ ಅವನ ಮುಖ್ಯ ಗುಣ. ಗಾಂಭೀರ್ಯ ಅವನ ಸ್ವಭಾವ. ಔದಾರ್ಯ ಅವನ ಸಹಜ ಧರ್ಮ. ಒಳ್ಳೆ ಬುದ್ಧಿ ಅವನಿಗೊಂದು ದೇವರ ಕೊಡುಗೆ. ಏಕಪತ್ನೀವ್ರತ ಅವನು ಸ್ವಯಂ ಕೈಕೊಂಡ ಪ್ರತಿಜ್ಞೆ. ಇಂಥ ಪುಣ್ಯಾತ್ಮ ಆ ಮಹಾತ್ಮ.

ಇವೆಲ್ಲ ಸುದ್ಗುಣಗಳಿಂದಾಗಿ ರಾಜಾ ವಜ್ರಾಂಗದನು ಧರ್ಮಮೂರ್ತಿಯೇ ಎನಿಸಿದ್ದನು. ಅಂದಿನ ಶೀಲವಂತರಲ್ಲಿ ಇವನ ಹಂತವನ್ನು ತಲುಪಿದವರು ಬೆರಳ ಮೇಲೆ ಎಣಿಸುವಷ್ಟು ವಿರಳ.

## ಚಿಗರೆ ಕುದುರೆಗಳು ವಿದ್ಯಾಧರರಾದರು

ಒಂದಾನೊಂದು ದಿನ ಕುದುರೆಯ ಮೇಲೆ ಸವಾರಿ ಏರಿದ ಆ ತರುಣ ರಾಜ. ಬೇಟೆಯಾಡುವದು ಅವನ ಈ ವನ ಪ್ರಯಾಣದ ಉದ್ದೇಶ. ಅರುಣಾಚಲದ ಗೊಂಡಾರಣ್ಯವು ಕ್ರೂರ ಮೃಗಗಳ ಹಿಂಡಿಗೆ ತಂಗುದಾಣ. ಕಂಡಲ್ಲೆಲ್ಲ ಕ್ರೂರ ಶ್ವಾಪದಗಳು ಹಿಂಡುಹಿಂಡಾಗಿ ಈ ಗಹನಾರಣ್ಯದಲ್ಲಿ. ಹಿಂಸ್ರ ಪ್ರಾಣಿಗಳನ್ನು ಹೊಡೆಯುವ ಹಂಬಲದ ಬೆಂಬತ್ತಿ ಆ ಕಾಡಿನ ಗೂಡಿನಲ್ಲಿಯೇ ಒಳಹೊಕ್ಕ ಆ ವಜ್ರಾಂಗದ ಭೂಪತಿ. ಅರುಣಾಚಲದ ದುರ್ಗಮ ಮಾರ್ಗದಲ್ಲಿ ನಡೆದು ಆ ವನಾಂತರದ ಅಂತರಂಗಕ್ಕೆ ಬಂದಿಳಿದ ಮಹಾರಾಜ. ಎಲ್ಲೆಡೆಗೂ ಹಸಿರು ಕುಸುರೊಡೆದ ಆ ಶ್ಯಾಮಲ ಶಾದ್ವಲದಲ್ಲಿ ಆ ರಾಜನ ಕಣ್ಣಿಗೆ ಒಂದು ಕಸ್ತೂರಿ ಮೃಗ ಕಂಡಿತು. ಹುಲ್ಲು ಮೇಯುತ್ತ ನಿಂದ ಆ ಹುಲ್ಲೆಯ ಮೈಯಿಂದ ಹೂವಿನ ಸುಗಂಧ. ಅದರ ಸುವಾಸನೆ ಯಿಂದ ನಾಕು ದಿಕ್ಕುಗಳೂ ಪರಮಳ ಭರಿತ. ಮಹಾರಾಜನಿಗೆ ಆ ಚಿಗರೆಗಿಂತ ಅದರ ಮೈಯಿಂದ ಸೂಸಿ ಬರುವ ಸೌಗಂಧವು ಹುಚ್ಚು ಹಿಡಿಸಿತು. ಕುತೂಹಲ ಅವನನ್ನು ಎಳೆಯಿತು. ಮೃಗದ ಹಿಂದೆ ಅವನ ಕುದುರೆ ಓಡಿತು. ಪ್ರಾಣಿಗಳಲ್ಲೆಲ್ಲ ಹರಿಣ ಬಹು ಚಪಲ ಚರಣ ಗಾಳಿಯನ್ನೂ ಹಿಂದೆ ಹಾಕುತ್ತಿತ್ತು ಓಟದಲ್ಲಿ ಆ ಜಿಂಕೆ. ಆದರೆ ರಾಜನೇನು ಕಡಿಮೆಯೇ? ಅವನ ರಥದ ವೇಗಕ್ಕೆ ಮನೋವೇಗದ ಗತಿ ಇದ್ದಿತು. ಅಂತೂ ಆ ಕುರಂಗ ಹಾಗೂ ಈ ವಜ್ರಾಂಗದರ ನಡುವೆ ಓಟದ ಮೇಲಾಟವೇ ನಡೆಯಿತು. ಮುಂದೆ ಮುಂದೆ ಚಿಗರೆ ಅದರ ಹಿಂದೆ ರಾಜನ ಕುದುರೆ. ಬೆನ್ನಟ್ಟಿ ಬರುವ ರಾಜನ ಬಾಣಾಘಾತದ ಭಯದಿಂದ ಆ ಚಿಗರೆಯು ಅರುಣಾಚಲಕ್ಕೆ ಪ್ರದಕ್ಷಿಣೆ ಆಕಾರವಾಗಿ ಓಡತೊಡಗಿತು. ಅದರ ಬೆನ್ಹತ್ತಿ ರಾಜನೂ ಕೂಡ ಪರ್ವತದ ಸುತ್ತು ಮುತ್ತು ನಾಲ್ಕು ದಿಕ್ಕಿನಲ್ಲಿ ಪ್ರದಕ್ಷಿಣೆ ಹಾಕಲು ಓಡಾಡಿದನು. ಅವನಿಗೆ ಅದರಿಂದ ಅತ್ಯಧಿಕ ಪರಿಶ್ರಮವಾಯಿತು. ಓಟದಿಂದ ಬಳಲಿದ ರಾಜನು ಕುದುರೆಯಿಂದ ಕೆಳಗೆ ಉರುಳಿ ಬಿದ್ದನು. ಆಗ ಮಧ್ಯಾಹ್ನ ಕಾಲ, ಸೂರ್ಯನ ಪ್ರಖರ ಕಿರಣಗಳಿಂದ ಅವನಿಗೆ ಬಿದ್ದಲ್ಲಿಯೇ ಅಸಹ್ಯ ಪೀಡೆಯಾಗಿ ಬಿಸಿಲಿನ ಬೇಗೆಯಿಂದ ಕುದಿಯತೊಡಗಿದ. ಆಕಸ್ಮಿಕವಾಗಿ ತಾನು ಕುದುರೆಯಿಂದ ಕುಸಿದು ಕೆಳಗೆ ಬಿದ್ದುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಅವನು ತನ್ನ ಮನದಲ್ಲಿ ತಾನೇ ವಿಚಾರಿಸಿದನು. ನನ್ನ ಎದುರು ಓಡುತ್ತಲಿದ್ದ ಆ ಚಿಗರೆಯು ನನ್ನನ್ನು ಈ ಪರ್ವತ ಪ್ರದೇಶದಲ್ಲಿ ಬಿಟ್ಟು ಎಲ್ಲಿಗೆ ಹೋಯಿತು? ಹೀಗೆ ರಾಜನು ಚಿಂತಿಸತೊಡಗಿದಾಗಲೇ ಆಕಾಶದಲ್ಲಿ ಒಂದು ಮಿಂಚಿನ ಬಳ್ಳಿಯೇ ಗೊಂಚಲಾಡಿ ದಂತಾಯಿತು. ಅವನು ನೋಡು ನೋಡುತ್ತಿದ್ದಂತೆಯೇ ತಾನು ಹತ್ತಿ ಬಂದ ಕುದುರೆ ಹಾಗೂ ತನ್ನ ಮುಂದೆ ಓಡಿದ ಚಿಗರೆ ಎರಡೂ ತಮ್ಮ ಪಶು ದೇಹವನ್ನು ಬಿಟ್ಟು ವಿದ್ಯಾಧರ ರೂಪವನ್ನು ಧರಿಸಿದವು. ತಲೆಯ ಮೇಲೆ ಕಿರೀಟ, ಕಿವಿಯಲ್ಲಿ ಕುಂಡಲ, ಕೊರಳಲ್ಲಿ ಹಾರ, ಮೈಮೇಲೆ ರೇಷ್ಮೆ ಬಟ್ಟೆಗಳನ್ನು ಧರಿಸಿ ಆ ದಿವ್ಯ ಪುರುಷರು ಹೊಳೆಯುತ್ತಿದ್ದರು.

ಕೌತುಕಾಕ್ರಾಂತನಾಗಿ ನಿಂತ ಆ ರಾಜನನ್ನು ನೋಡಿ ಅವರಿಬ್ಬರೂ ವಿದ್ಯಾಧರರು ನುಡಿದರು-ರಾಜನೇ! ಮನದಲ್ಲಿ ವಿಷಾದ ಪಡಬೇಡ. ನೀನು ನಾವಿಬ್ಬರೂ ಈ ಅರುಣಾಚಲ ಬೆಟ್ಟಕ್ಕೆ ಹಾಗೂ ಇಲ್ಲಿ ನೆಲೆ ನಿಂತ ಅರುಣಾಚಲೇಶನಿಗೆ ಪ್ರದಕ್ಷಿಣೆ ಹಾಕಿದ್ದರಿಂದ ಆ ಪುಣ್ಯದಿಂದ ನಮಗೆ ಈ ದಿವ್ಯ ದೇಹ ಪ್ರಾಪ್ತವಾಗಿದೆ.

## ವಿದ್ಯಾಧರರಿಗೆ ದೂರ್ವಾಸರ ಶಾಪ ಮತ್ತು ಅದರ ವಿಮೋಚನೆ

ವಿದ್ಯಾಧರರ ಈ ಮಾತಿನಿಂದ ರಾಜನಿಗೆ ತುಸು ಸಮಾಧಾನವಾಯಿತು. ಕೈ ಜೋಡಿಸಿ ಇಬ್ಬರನ್ನು ಅವನು ವಿನಯದಿಂದ ಕೇಳಿಕೊಂಡನು- ಪೂಜ್ಯರೇ! ನೀವಿಬ್ಬರು ಯಾರು? ನಾನು ಒಮ್ಮೆಲೇ ಓಡಿ ಓಡಿ ಸೋತು ಕುದುರೆಯಿಂದ ಕುಸಿದು ಬಿದ್ದ ಕಾರಣವೇನು? ನೀವಿಬ್ಬರೂ ನನ್ನ ಕಣ್ಣಿಗೆ ಒಳ್ಳೆ ಪುಣ್ಯ ಪುರುಷರಾಗಿ ಕಾಣುವಿರಿ. ಆದುದರಿಂದ ದಯವಿಟ್ಟು ಉತ್ತರ ನೀಡಿರಿ ನನ್ನ ಪ್ರಶ್ನೆಗೆ.

ಆಗ ಆ ಇಬ್ಬರು ವಿದ್ಯಾಧರರಲ್ಲಿ ಕಲಾಧರ ಎಂಬ ಹೆಸರಿನವನು ಕಾಂತಿಶಾಲಿ ಎಂಬ ಹೆಸರಿನ ಇನ್ನೊಬ್ಬ ವಿದ್ಯಾಧರನ ಆಜ್ಞೆ ಪಡೆದು ಹೀಗೆ ನುಡಿದನು- ''ರಾಜನೇ! ನಾವಿಬ್ಬರು ಮೊದಲು ವಿದ್ಯಾಧರರ ರಾಜರು. ನಮ್ಮಿಬ್ಬರಲ್ಲಿ ಗಾಢ ಸ್ನೇಹ. ಮನ್ಮಥ ಮತ್ತು ವಸಂತ ಋತುವಿನಂತೆ ನಾವಿಬ್ಬರೂ ಘನಿಷ್ಠ ಮಿತ್ರರು. ಒಂದಾನೊಂದು ದಿನ ಮೇರುಗಿರಿಯ ಶೃಂಗಾಂಗಣದಲ್ಲಿದ್ದ ದುರ್ವಾಸ ಋಷಿಗಳ ತಪೋವನದಲ್ಲಿ ನಾವಿಬ್ಬರೂ ಪ್ರವೇಶಿಸಿದೆವು. ಅಲ್ಲಿ ಪರಮೇಶ್ವರನ ಪೂಜೆಗೆಂದು ಆ ಮುನಿಪುಂಗವರು ಒಂದು ಪವಿತ್ರವಾದ ಪುಷ್ಪಗಳ ಉದ್ಯಾನವನ್ನು ನಿರ್ಮಿಸಿದ್ದರು. ಮೂರು ಮೈಲಿನಷ್ಟು ಉದ್ದ, ಅಷ್ಟೇ ಅಗಲವಾಗಿತ್ತು ಆ ಕುಸುಮ ವಾಟಿಕೆಯ ಹರವು. ತರತರಹದ ಬಣ್ಣ ರಂಗುಗಳಿಂದ ಕಂಗೊಳಿಸುವ ಸುಗಂಧ ಪುಷ್ಪಗಳು ಅರಳಿ ಸುಂದರವಾದ ಬಳ್ಳಿಗಳು ಹಂದರದ ಮೇಲೆ ಗಾಳಿಯ ಅಲೆಗೆ ತೊನೆದಾಡುತ್ತಿದ್ದವು.

ಆ ಸುಗಂಧ ಪುಷ್ಪಗಳನ್ನು ಹರಿಯಬೇಕೆಂದು ನಾವಿಬ್ಬರೂ ಆ ಪುಷ್ಪೋದ್ಯಾನದಲ್ಲಿ ಆಚೀಚೆ ಓಡಾಡಿ ಬಳ್ಳಿಗಳನ್ನು ಅಲುಗಾಡಿಸಿ ಹೂಗಳಿಗೆ ಕೈ ಹಾಕಿದೆವು.

ಅಲ್ಲಿಯೇ ಒಂದು ಬಿಲ್ವವೃಕ್ಷದ ಬುಡದಲ್ಲಿ ವ್ಯಾಘ್ರಾಸನದ ಮೇಲೆ ಆಸೀನರಾಗಿದ್ದರು ತಪಸ್ವಿಗಳಾದ ದುರ್ವಾಸರು. ಅವರು ನಮ್ಮನ್ನು ಸುಟ್ಟು ಬಿಡುವಂತೆ ಕೆಂಗಣ್ಣಿಂದ ನಮ್ಮ ಕಡೆ ನೋಡುತ್ತ ಸಮೀಪ ಬಂದರು. ಮತ್ತು ಧಿಕ್ಕರಿಸಿ ನುಡಿದರು- ''ಪಾಪಿಗಳೇ! ನೀವು ಸಜ್ಜನೋಚಿತವಾದ ಸದಾಚಾರದ ಉಲ್ಲಂಘನೆಯನ್ನು ಮಾಡಿರುವಿರಿ. ಅಹಂಕಾರದಿಂದ ಮದಾಂಧರಾಗಿ ಈ ಪವಿತ್ರ ತಪೋವನವನ್ನು ತುಳಿದಾಡುತ್ತಿರುವಿರಿ. ಈ ನನ್ನ ಆಶ್ರಮವು ನಿರುಪದ್ರವಿ ಪ್ರಾಣಿಗಳ ಪೋಷಣೆಗಾಗಿ ಇರುತ್ತದೆ. ಇದನ್ನು ಪಾದಪ್ರಹಾರದಿಂದ ದೂಷಿತವನ್ನಾಗಿ ಮಾಡುವ ನಿಮ್ಮಲ್ಲಿಯ ಒಬ್ಬನು ಇನ್ನೊಬ್ಬರ ಭಾರಹೊತ್ತು ಓಡುವ ಕುದುರೆಯಾಗಿ ಜನಿಸಲಿ. ಮತ್ತು ಇಲ್ಲಿಯ ಹೂಗಳ ಸುಗಂಧದ ಲೋಭದಿಂದ ಆ ಹೂಗಳನ್ನು ಕಿತ್ತುಕೊಳ್ಳಲು ಹೊರಟ ನಿಮ್ಮಲ್ಲಿಯ ಇನ್ನೊಬ್ಬನು ಕಸ್ತೂರಿಯ ಮೃಗನಾಗಿ ಇಲ್ಲಿಯ ವನಕಂದರಗಳಲ್ಲಿ ಅಲೆದಾಡಲಿ'' ಈ ರೀತಿಯಾಗಿ ಕೋಪಾಟೋಪದಿಂದ ಬೆಂಕಿಯ ಬಣವೆಯಾಗಿ ನಮ್ಮನ್ನು ಶಪಿಸುತ್ತಿರುವ ಆ ಮುನಿಗಳ ಪಾದದ ಮೇಲೆ ಬಿದ್ದು ನಾವು ಬೇಡಿಕೊಂಡೆವು.

''ಪೂಜ್ಯರೇ! ನಮ್ಮದು ಸರ್ವಾಪರಾಧವಾಯಿತು. ದಯವಿಟ್ಟು ತಾವು ಕ್ಷಮಿಸಬೇಕು. ತಾವು ಸಿದ್ಧಪುರುಷರು. ತಾವು ಹೇಳಿದ ಮಾತು ಎಂದೂ ತಪ್ಪದು. ಪಾಪ ಮಾಡಿದ ನಮಗೆ ತಮ್ಮ ಶಾಪ ಅನಿವಾರ್ಯ. ಆದರೆ ಆ ಶಾಪಕ್ಕೆ ಕೊನೆ ಎಂದು? ತಮ್ಮ ಶಾಪದಿಂದ ನಮಗೆ ಮುಂದೆ ಬರಲಿರುವ ಪಶುಯೋನಿಯಿಂದ ಮೋಚನ ಎಂದು?''

ವಿನಯಾತಿಶಯದ ನಮ್ಮ ಈ ಬಿನ್ನಹವನ್ನು ಕೇಳಿ ಚಂಡಕೋಪರಾದ ಆ ದುರ್ವಾಸರ ಕಣ್ಣು ಕ್ರೋಧದಿಂದ ಉದ್ದೀಪಿತವಾಗಿ ಅಗ್ನಿಕುಂಡದಂತೆ ಉರಿಯುತ್ತಿದ್ದರೂ ಕರುಣೆಯ ಸೆಲೆ ಅಲ್ಲಿ ಚಿಮ್ಮಿ ಹರಿಯುವಂತೆ ಕಂಡಿತು. ಅವರು ಕ್ಷಮಾಪಣೆಯ ಕರುಣಾಕಟಾಕ್ಷಪೂರ್ಣ ದೃಷ್ಟಿಯಿಂದ ನಮ್ಮೆಡೆಗೆ ನೋಡಿ ನುಡಿದರು. ''ನೀವಿಬ್ಬರು ಇನ್ನು ಮೇಲೆ ಎಂದೂ ಇಂಥ ದುಷ್ಕಾರ್ಯವನ್ನು ಮಾಡದಿರಿ. ಅರುಣಾಚಲವನ್ನು ಪ್ರದಕ್ಷಿಣೆ ಮಾಡುವದರಿಂದ ನಿಮಗೆ ನಾನು ಕೊಟ್ಟ ಶಾಪದಿಂದ ವಿಮೋಚನೆ ಆಗುವದು. ಈ ಅರುಣಾಚಲವು ಸಾಕ್ಷಾತ್ ಶಿವನ ಸ್ವರೂಪವೇ. ಪೂರ್ವ ಕಾಲದಲ್ಲಿ ಇಂದ್ರ ಉಪೇಂದ್ರ ಯಮ ಮುಂತಾದ ದೇವಾಧಿ ದೇವತೆಗಳು ದಿಕ್‌ಪಾಲಕರು ನೂರಾರು ವರ್ಷಗಳ ವರೆಗೆ ಉಪಾಸನೆಗೈದರು ಈ ಅರುಣಾ ಚಲೇಶನನ್ನು ಒಲಿಸಲಿಕ್ಕಾಗಿ. ಸಿದ್ಧಿಯ ಶಿಖರವನ್ನು ಮುಟ್ಟಿದರು ಇಲ್ಲಿಯೇ ತಪಂಗೈದು.

## ಗಣೇಶನ ಬುದ್ಧಿ ಚಾತುರ್ಯ

ಆ ಕಾಲದಲ್ಲಿ ಒಂದು ದಿನ ದೇವಾಧಿದೇವನಾದ ಮಹೇಂದ್ರನು ತನ್ನ ಅಧಿಕಾರದಲ್ಲಿರುವ ನಂದನವನದಲ್ಲಿಯ ಒಂದು ಪರಿಪಕ್ವವಾದ ಹಣ್ಣನ್ನು ತಂದು ಮಹಾದೇವರಿಗೆ ಕಾಣಿಕೆಯಾಗಿ ಇತ್ತನು, ಆ ಹಣ್ಣು ನೋಡಲು ಒಳ್ಳೆರಸತುಂಬಿ ಆಕರ್ಷಕವಾಗಿ ಕಾಣುತ್ತಿತ್ತು. ಅದನ್ನು ನೋಡಿ ಶಿವಪುತ್ರರಾದ ಗಣಪತಿ ಹಾಗು ಸ್ಕಂದ ಇಬ್ಬರೂ ಕುತೂಹಲದಿಂದ ತಮಗೆ ಕೊಡಬೇಕೆಂದು ಶಂಕರನನ್ನು ಕೇಳತೊಡಗಿದರು. ಇಬ್ಬರೂ ಬಾಲಕರೇ ಅಲ್ಲವೆ? ಮಕ್ಕಳಿಗೆ ಹಣ್ಣಿನ ಮೇಲೆ ಹಂಬಲ ಸ್ವಾಭಾವಿಕ. ಆ ಇಬ್ಬರೂ ಚಿರಂಜೀವಿಗಳ ಆ ಫಲಾಭಿಲಾಷೆಯನ್ನು ಗಮನಿಸಿ ಮಹಾದೇವರು ಆ ಹಣ್ಣನ್ನು ತಮ್ಮ ಮುಷ್ಟಿಯಲ್ಲಿ ಮುಚ್ಚಿ ಹಿಡಿದರು. ಇಬ್ಬರಿಗೂ ಹೀಗೆ ಹೇಳಿದರು.

''ಮಕ್ಕಳೆ, ಲೋಕಾಲೋಕ ಪರ್ವತದಿಂದ ಸುತ್ತುವರಿಯಲ್ಪಟ್ಟ ಈ ಉತ್ತುಂಗವಾದ ಧರಣೀಮಂಡಲವನ್ನು ಮೊದಲು ಯಾರು ಪ್ರದಕ್ಷಿಣೆ ಮಾಡಿ ಬರುವಿರೋ ಅವರಿಗೆ ಈ ಹಣ್ಣನ್ನು ಕೊಡಲಾಗುವದು.''

ಪರಮೇಶ್ವರನ ಈ ಮಾತನ್ನು ಕೇಳಿದ ಕೂಡಲೇ ಹೊರಟೇಬಿಟ್ಟ ಕಾರ್ತಿಕೇಯ ಪೃಥ್ವೀಪ್ರದಕ್ಷಿಣೆಗೆ. ಆದರೆ ಗಣಪತಿಯು ಮಾತ್ರ ಎಲ್ಲಿಯೂ ಹೋಗಲಿಲ್ಲ.

ಅವನ ಸೋದರನಾದ ಷಣ್ಮುಖನು ನವಿಲಿನ ವಾಹನವನ್ನು ಏರಿ ಬೇಗ ಪೃಥ್ವೀ ಪ್ರದಕ್ಷಿಣೆ ಮಾಡಿಕೊಂಡು ಬರಬೇಕೆಂದು ಹಾರಿಹೋದದ್ದನ್ನು ನೋಡಿದರೂ ಸುಮ್ಮನೆ ಕುಳಿತಿದ್ದ ಆ ಗಣಾಧಿಪತಿ. ಅನಂತರ ಎದ್ದು ಆ ವಿಘ್ನೇಶ್ವರನು ಅರುಣಾಚಲ ರೂಪಿಯಾದ ತನ್ನ ತಂದೆ ಮಹಾದೇವರನ್ನು ಒಂದು ಬಾರಿ ಪ್ರದಕ್ಷಿಣೆ ಹಾಕಿ ಬಂದು ವಂದನೆಗೈದು ನಿಂತುಕೊಂಡ. ಅರುಣಾಚಲರೂಪಿಯಾದ ದೇವ ದೇವೋತ್ತಮ ಎನಿಸಿದ ಆ ಮಹಾದೇವನು ವಿಶ್ವರೂಪಿ. ಚರಾಚರ ಪ್ರಪಂಚವೆಲ್ಲವೂ ಅವನನ್ನೇ ಆಧರಿಸಿಕೊಂಡು ನಿಂತಿದೆ. ಇಂಥ ಜಗದಾಧಾರನಾದ ಪರಮೇಶ್ವರನ ಪ್ರದಕ್ಷಿಣೆ ಮಾಡಿದರೆ ಜಗತ್‌ಪ್ರದಕ್ಷಿಣೆ

ಮಾಡಿದಂತಾಯಿತು ಎಂದು ಅವನ ಆಶಯ, ಸುಕುಮಾರನಾದ ತಮ್ಮ ಗಣೇಶನ ಈ ಬುದ್ಧಿ ಚಾತುರ್ಯವನ್ನು ಯುಕ್ತಿ ಕೌಶಲ್ಯವನ್ನು ಕಂಡು ಪರಮ ಸಂತೋಷವಾಯಿತು ಆ ಭವಾನೀಪತಿಗೆ. ಪ್ರೀತಿಯಿಂದ ಆ ಗಣೇಶಕುಮಾರನನ್ನು ಕರೆದು ತನ್ನ ಕೈಯಲ್ಲಿದ್ದ ಹಣ್ಣನ್ನು ಕೊಟ್ಟು ಆಶೀರ್ವದಿಸಿದನು. ಹಾಗು ಅಲ್ಲಿ ನೆರೆದ ದೇವತೆಗಳು, ಅಸುರರು, ಸಿದ್ಧ ಗಂಧರ್ವರು ಕೂಡಿ ಸಭೆಯಲ್ಲಿ ಘೋಷಣೆ ಮಾಡಿದ ಆ ಶಂಕರ.

**ಶಂಕರ:-** ಈ ಅರುಣಾಚಲವು ನನ್ನ ಸ್ಥಾವರ ಶರೀರ, ಇದನ್ನು ಪ್ರದಕ್ಷಿಣೆ ಮಾಡಿದವನು ಎಲ್ಲ ವಿಧ ಐಶ್ವರ್ಯಕ್ಕೂ ಅಧಿಕಾರಿಯಾಗುತ್ತಾನೆ. ಈ ಪರ್ವತವನ್ನು ಬಲಕ್ಕೆ ಮಾಡಿಕೊಂಡು ಇದರ ನಾಲ್ಕು ದಿಕ್ಕುಗಳನ್ನು ಒಮ್ಮೆ ಸುತ್ತು ಹಾಕಿ ಬಂದವನು ಚಕ್ರವರ್ತಿ ರಾಜನ ಗದ್ದುಗೆಯನ್ನು ಪಡೆಯುವನು.

ಮಹಾದೇವರ ಈ ಆಜ್ಞೆಯಿಂದ ಎಲ್ಲ ದೇವತೆಗಳು ಅರುಣಾಚಲ ಎಂಬ ಬೆಟ್ಟದ ಪ್ರದಕ್ಷಿಣೆಯನ್ನು ಹಾಕಿ ಪಡೆದುಕೊಂಡರು ತಮ್ಮ ತಮ್ಮ ಮನೋಭಿಷ್ಟಗಳನ್ನು. ಆದುದರಿಂದ ನೀವು ಕೂಡ ಎಂದು ಅರುಣಾಚಲ ಪರ್ವತವನ್ನು ಸುತ್ತುಹಾಕುವಿರೋ ಅಂದಿಗೆ ನಿಮಗೆ ನಾನು ಈಗ ಕೊಟ್ಟ ಶಾಪದಿಂದ ಮುಕ್ತಿ. ನೀವು ಪಶುಯೋನಿಯಲ್ಲಿದ್ದಾಗ ಪಾಂಡ್ಯದೇಶದ ದೊರೆ ವಜ್ರಾಂಗನಿಂದ ನಿಮಗೆ ಆ ಅಜ್ಞಾನಿ ಜನ್ಮದಲ್ಲಿಯೂ ಈ ಅರುಣಗಿರಿಯನ್ನು ಸುತ್ತುಹಾಕುವ ಸಂದರ್ಭವು ಒದಗಿ ಬರುವದು.

## ಸುತ್ತುವರಿಸಿದ್ದಕ್ಕಾಗಿ ಕೃತಜ್ಞತೆ

**ಕಲಾಧರ:-** ರಾಜಶ್ರೇಷ್ಠನೇ! ಅನಂತರ ನನ್ನ ಮಿತ್ರನಾದ ಕಾಂತಿಶಾಲಿಯು ಕಾಂಬೋಜ ದಲ್ಲಿ ಕುದುರೆಯಾಗಿ ಹುಟ್ಟಿದನು. ನಾನಾದರೂ ಈ ವನ ಪ್ರಾಂತದಲ್ಲಿ ಕಸ್ತೂರಿ ಮೃಗವಾಗಿ ಜನಿಸಿದೆ. ನನ್ನ ಗಂಧದ ಮರುವಾಸನೆಗೆ ನಾನೇ ಮರಗೆಟ್ಟು ಮದಿತ ಮುದಿತನಾಗಿ ಈ ಅರುಣಾಚಲದ ವಿಪಿನ ಉಪವನಗಳಲ್ಲಿ ಕಂಪಿನ ಭಾರ ಹೊತ್ತು ತಿರುಗುತ್ತಿದ್ದೆ. ಕಾಂಬೋಜ ದೇಶದಲ್ಲಿ ಹುಟ್ಟಿದ ಈ ನನ್ನ ಮಿತ್ರರಾದ ಕಾಂತಿಶಾಲಿಯು ಕುದುರೆ ರೂಪದಲ್ಲಿದ್ದಾಗ ಅವನ ಮೇಲೆ ಸವಾರಿಯಾಗಿ ನೀವು ಇಲ್ಲಿಗೆ ಬಂದಿರಿ. ಇಲ್ಲಿಗೆ ಹುಲ್ಲುಗಾವಲಿನಲ್ಲಿ ಹರಿಣವಾಗಿ ಹರಿದಾಡುವ ನನ್ನನ್ನು ನೋಡಿದಿರಿ. ಹಿಡಿಯಬೇಕೆಂದೂ ಹೊಡೆಯಬೇಕೆಂದೂ ನನ್ನ ಬೆನ್ನು ಹತ್ತಿದಿರಿ. ಬಾಣ ತಪ್ಪಿಸಿಕೊಂಡು ಪ್ರಾಣ ಉಳಿಸಿಕೊಳ್ಳಬೇಕೆಂದು ನಾನು ಓಡಿದೆ. ನೀವು ಬೆನ್ನಟ್ಟಿದಿರಿ. ಮುಂದೆ ನಾನು ಕುರಂಗ. ನನ್ನನ್ನು ಬೆನ್ನುಹತ್ತಿ ನಿಮ್ಮ ವಾಹನ ತುರಂಗ. ಅದರ ಮೇಲೆ ಅದನ್ನು ಓಡಿಸುತ್ತ ಬರುವ ನೀವು ವಜ್ರಾಂಗ. ಮೂವರಿಗೂ ಆನುಷಂಗಿಕವಾಗಿ ಈ ಅರುಣಾಚಲವನ್ನು ಸಂಪೂರ್ಣವಾಗಿ ಸುತ್ತುಹಾಕುವ ಪ್ರಸಂಗ ಒದಗಿಬಂದಿತು. ನಮ್ಮ ಶಾಪಕ್ಕೆ ಅನುಗುಣವಾಗಿ ಈ ಅರುಣಾಚಲದ ಪ್ರದಕ್ಷಿಣೆಯಿಂದ ನಮಗೆ ಆ ಪಶುಯೋನಿಯಿಂದ ಬಿಡುಗಡೆಯಾಯಿತು. ನಿಮ್ಮನ್ನು ಓಡಿಸಿ ದಣಿಸಿಹಾಕುವಂತೆ ಸೆಳೆದೋಡಿದ ನನಗೂ ನಿಮ್ಮನ್ನು ಬೆನ್ನಮೇಲೆ ಹೊತ್ತು ಓಡಿದ ಈ ಕುದುರೆಗೂ ಮುಕ್ತಿಯಾಗಿದೆ. ಅದು ಈ ಪರ್ವತ ಪ್ರದಕ್ಷಿಣೆಯ ಪ್ರಭಾವ. ನೀವು ಈ ಬೆಟ್ಟವನ್ನು ನಮ್ಮೊಟ್ಟಿಗೆ ಸುತ್ತಿದ್ದೀರಿ. ಆದರೆ ನಮ್ಮಂತೆ ಪಾದಚಾರಿಗಳಾಗಿ ಅಲ್ಲ. ವಾಹನಾರೂಢರಾಗಿ ನೀವು ಪ್ರದಕ್ಷಿಣೆಗೈದಿರಿ ಈ ಶ್ರೀಶೈಲವನ್ನು. ಅದರಿಂದ ನಿಮಗೆ ಈ ಕೇವಲ ಪ್ರದಕ್ಷಿಣೆ ಮಾತ್ರದಿಂದ ಇನ್ನೂ ಉದ್ಧಾರ ವಾಗಲಿಲ್ಲ. ಆದರೆ

ನಮ್ಮನ್ನು ಬೆನ್ನಟ್ಟಿ ಈ ಬೆಟ್ಟವನ್ನು ಪ್ರದಕ್ಷಿಣೆ ಹಾಕುವಂತೆ ಮಾಡಿ ಪಶುಯೋನಿಯಿಂದ ನಾವು ಮುಕ್ತರಾಗುವಂತೆ ಮಾಡಿದ ನಿಮಗೆ ಕೃತಜ್ಞರಾಗಿದ್ದೇವೆ. ನಿಮಗೆ ನನ್ನ ವಂದನೆ.

## ವಜ್ರಾಂಗದನ ಉದ್ಧಾರಕ್ಕೆ ಮಾರ್ಗ

ಕಲಾಧರನು ವಜ್ರಾಂಗ ಮಹಾರಾಜನಿಗೆ ಹೀಗೆ ಹೇಳಿ ತನ್ನ ಮಿತ್ರ ಕಾಂತಿಶಾಲಿ ಯೊಂದಿಗೆ ತಮ್ಮ ಸ್ವಸ್ಥಾನಕ್ಕೆ ಹೊರಟು ನಿಂತನು. ಆಗ ಆ ವಜ್ರಾಂಗದ ರಾಜನು ಅವರಿಬ್ಬರಿಗೂ ಕೈಮೋಡಿಸಿ ಕೇಳಿಕೊಂಡನು. - ''ಪುಣ್ಯಪುರುಷರೇ, ಈ ದುರ್ಯೋನಿ ಯಿಂದ ಪಾರಾಗಿ ಅರುಣಾಚಲ ಪ್ರದಕ್ಷಿಣೆಯ ಪುಣ್ಯದಿಂದ ನೀವು ನಿಜರೂಪವನ್ನು ಪಡೆದದ್ದು ನನಗೂ ಸಂತೋಷ. ಆದರೆ ನನ್ನ ಗತಿ ಏನು? ನಾನು ಈಗ ಈ ಬೆಟ್ಟದ ಮೇಲಿದ್ದರೂ ಅಧಃಪಾತಕ್ಕೆ ಬಿದ್ದಂತೆಯೇ ಸರಿ. ನೀವು ಏರಿದಷ್ಟು ನಾನು ಇಳಿಯುತ್ತಿದ್ದೇನೆ. ಮುಂದೆ ನನ್ನ ಅಭ್ಯುತ್ಥಾನಕ್ಕೆ ಏನು ಉಪಾಯ?

**ಕಲಾಧರ:-** ರಾಜನೇ, ನಿನ್ನ ಹಿತಕ್ಕಾಗಿ ನಾನು ನಾಲ್ಕು ಮಾತುಗಳನ್ನು ಹೇಳುತ್ತೇನೆ ಕೇಳು. ಈ ಅರುಣಾಚಲನಾಥ ಕರುಣಾಸಾಗರ. ಪಶುಯೋನಿಯಲ್ಲಿ ಬಿದ್ದು ಒದ್ದಾಡುತ್ತಿರುವ ನಮ್ಮನ್ನೇ ಉದ್ಧರಿಸಿದ ಈ ಅರುಣಾಚಲನಾಥನಿಗೆ ಅಶಕ್ಯವೇನಲ್ಲ ನಿನ್ನಂಥ ಸದ್ಬುದ್ಧಿಯ ರಾಜನ ಉದ್ಧಾರ. ಆದರೆ ಅದಕ್ಕೆ ಮೊದಲು ನೀನು ಮನಸ್ಸು ಮಾಡಬೇಕು. ಈ ಪರ್ವತೇಶ್ವರನಿಗೆ ಪಾದಚಾರಿಯಾಗಿ ಪ್ರದಕ್ಷಿಣೆ ಹಾಕಬೇಕು. ಕಸ್ತೂರಿ ಸುಗಂಧ ಅತ್ಯಂತ ಇಷ್ಟ ಈ ಅರುಣಾಚಲೇಶ್ವರನಿಗೆ. ಆದುದರಿಂದ ಕಸ್ತೂರಿ ಚಂದನ ಹಾಗೂ ಕಚನಾರಪುಷ್ಪಗಳಿಂದ ಈ ಅರುಣಾಚಲನನ್ನು ಪೂಜೆಮಾಡು. ನೀನು ಹೇಗೂ ರಾಜ. ನಮ್ಮಂತೆ ದರಿದ್ರನಲ್ಲ. ದೇವರು ನಿನಗೆ ಕೊಟ್ಟ ಐಶ್ವರ್ಯವನ್ನೆಲ್ಲ ಇಲ್ಲಿಯ ಅರುಣಾಚಲೇಶ್ವರ ಮಂದಿರ, ಗೋಪುರ, ಗೋಡೆ, ಛಾವಣಿ, ನೆಲಗಟ್ಟಣಿ, ಸಾರಣಿ ಕಾರಣಿ ಮುಂತಾದವುಗಳನ್ನು ಮಾಡಲು ವಿನಿಯೋಗಿಸು. ಇದರಿಂದ ನಿನಗೂ ಕೂಡಲೇ ಸಿದ್ಧಿ ದೊರೆಯುವದು. ಮನು, ಮಾಂಧಾತ, ನಾಭಾಗ, ಭಗೀರಥ ಮೊದಲಾದ ಹಿಂದಿನ ರಾಜ ಋಷಿಗಳಂತೆ ನೀನು ಕೂಡ ಖ್ಯಾತಾಭಿಗೀತನಾಗುವೆ.'' ಆ ವಿದ್ಯಾಧರ ಮಿತ್ರರ ಹಿತೋಪದೇಶಗಳನ್ನು ಕೇಳಿ ದೂರವಾಯಿತು ವಜ್ರಾಂಗದನ ಮನಸ್ಸಿನ ಸಂದೇಹ. ನಿಚ್ಚಳವಾಯಿತು ಮುಂದಿನ ಮಾರ್ಗ. ಆಗಲೆ ಅವನು ನಿರ್ಧರಿಸಿಬಿಟ್ಟನು ತನ್ನ ಕರ್ತವ್ಯವನ್ನು. ತನ್ನ ರಾಜಧಾನಿಗೆ ಮರಳುವ ವಿಚಾರವನ್ನೆ ತೆಗೆದುಹಾಕಿದ. ಅಲ್ಲಿಯೇ ಅರುಣಾಚಲನಾಥನ ಪಾದ ಮೂಲದಲ್ಲಿಯೇ ಇದ್ದು ಅವನನ್ನು ಆರಾಧಿಸಿ ಒಲಿಸಿಕೊಳ್ಳಬೇಕೆಂದು ನಿರ್ಧರಿಸಿದ.

## ವಜ್ರಾಂಗದ ಕೈಕೊಂಡ ಅರುಣಾಚಲನ ಸೇವೆ

ಅಷ್ಟರಲ್ಲಿ ಅವನು ಚಿಗರೆಯ ಬೆನ್ನುಹತ್ತಿ ಓಡಿ ಬರುವ ಮುನ್ನ ಹಿಂದೆ ಬಿಟ್ಟು ಬಂದ ಚತುರಂಗ ಸೇನೆಯೆಲ್ಲವೂ ಕುದುರೆಯ ಹೆಜ್ಜೆಗಳನ್ನು ಗುರುತಿಸುತ್ತ ಅಲ್ಲಿಗೆ ಬಂದಿತು. ಪುರೋಹಿತ, ಮಂತ್ರಿ ಸಾಮಂತ, ಸೇನಾಪತಿ, ಮಿತ್ರ ಪರಿವಾರದವರೆಲ್ಲರೂ ಅಲ್ಲಿ ಬಂದು ಸೇರಿದ ಬಳಿಕ ಅವರಿಗೆ ತನ್ನ ನಿರ್ಣಯವನ್ನು ತಿಳಿಸಿದ. ''ತಾನು ಇನ್ನು ಮರಳಿ ಊರಿಗೆ ಬರುವದಿಲ್ಲ. ಈಗ ಯುವರಾಜನಾಗಿದ್ದ ನನ್ನ ಮಗ ರಾಜಕುಮಾರ ರತ್ನಾಂಗದನನ್ನು ನನ್ನ

ಉತ್ತರಾಧಿಕಾರಿಯನ್ನಾಗಿ ಮಾಡಿಕೊಂಡು ರಾಜ್ಯಶಾಸನವನ್ನು ನಡಿಸಿರೆಂದು'' ತಿಳಿಸಿದ. ಮಹಾರಾಜನ ಈ ಅಚಲ ನಿರ್ಧಾರವನ್ನು ಕೇಳಿ ಮಂತ್ರಿ ಪರಿವಾರದವರೆಲ್ಲರೂ ರಾಜಧಾನಿಗೆ ಮರಳಿದರು.

ಇತ್ತ ಮಹಾರಾಜನು ತನ್ನೊಡನೆ ಅರುಣಾಚಲೇಶ್ವರನ ಸೇವೆಗಾಗಿ ಆ ಬೆಟ್ಟದಲ್ಲಿಯೇ ತಂಗುವ ನಿರ್ಧಾರವನ್ನು ಕೈಕೊಂಡ. ಕೆಲವು ಮಂತ್ರಿ ಪರಿವಾರದೊಂದಿಗೆ ಆ ಗೌತಮ ಋಷಿಯ ತಪೋವನದ ಬಳಿಯಲ್ಲಿಯೇ ಒಂದು ಪರ್ಣಕುಟೀರವನ್ನು ನಿರ್ಮಿಸಿಕೊಂಡು ನೆಲೆನಿಂತ. ರಾಜನ ಉಳಿದ ಮಂತ್ರಿ ಸೇನಾಪತಿ, ಮಿತ್ರ ಪರಿವಾರದವರೆಲ್ಲರೂ ತಿರುಗಿ ರಾಜಧಾನಿಗೆ ಮರಳಿದರು. ರಾಜಕುಮಾರ ರತ್ನಾಂಗದನನ್ನು ಸಿಂಹಾಸನದ ಮೇಲೆ ಕೂಡಿಸಿದರು. ಅರಣ್ಯದಲ್ಲಿ ಅರುಣಾಚಲೇಶನ ಸೇವೆಗಾಗಿ ನಿಂತುಕೊಂಡ ರಾಜ, ಮಂತ್ರಿ, ಹಾಗೂ ಪರಿವಾರ ವರ್ಗದವರ ವೆಚ್ಚಕ್ಕಾಗಿ ಹಾಗೂ ಅಲ್ಲಿಯ ಮಂದಿರ, ಶಿಖರ, ಪ್ರಾಕಾರಾದಿ ನಿರ್ಮಾಣಕ್ಕಾಗಿ ಬೇಕಾಗುವಷ್ಟು ಹಣವನ್ನು, ಸಾಕಾಗುವಷ್ಟು ಕಲ್ಲು ಕಟ್ಟಿಗೆ ಗಾರೆ ಮುಂತಾದ ಸಲಕರಣೆಗಳನ್ನು ನಿಯಮಿತವಾಗಿ ಕೊಟ್ಟು ಕಳುಹಿಸುತ್ತಿದ್ದರು.

ಮಹಾರಾಜ ವಜ್ರಾಂಗದನು ಅರುಣಾಚಲದ ನಾಲ್ಕು ನಿಟ್ಟಿನಲ್ಲಿ ನೀರು ತುಂಬಿ ತುಳುಕುವ ಜಲಾಶಯಗಳನ್ನು ಅಗಿಸಿ ತೆಗೆಸಿದನು. ಅಗ್ನಿಸ್ತಂಭ ರೂಪಿಯಾದ ಆರುಣಾಚಲನಾಥನ ತೇಜಸ್ಸಿನಿಂದ ಆ ದೇಶವೆಲ್ಲವೂ ಬಹುದಿನದಿಂದ ನಿರ್ಜಲವಾದ ಬೆಂಗಾಡಾಗಿಯೇ ಬಿಸಿಲಲ್ಲಿ ಬೀಳುತ್ತಿತ್ತು. ಅಲ್ಲಿಗೆ ಬಂದವರೆಲ್ಲ ನೀರಿಲ್ಲದೆ ಬಾಯಾರಿಕೆಯಿಂದ ಬೆಂದು ಬಸವಳಿದು ಬೆಂಡಾಗಿ ಹೋಗುತ್ತಿದ್ದರು. ವಜ್ರಾಂಗದ ಮಹಾರಾಜನು ಅಲ್ಲಿ ಅನೇಕ ಕೆರೆಬಾವಿ, ಹೊಂಡ. ಸರೋವರಗಳನ್ನು ತೋಡಿಸಿ, ಆ ಕಾಡನ್ನೆಲ್ಲ ಸಲಿಲ ಸಂಪದ್ಭರಿತವನ್ನಾಗಿ ಮಾಡಿದನು.

ಮಹಿಷಾಸುರಮರ್ದಿನಿಯಾದ ದುರ್ಗಾದೇವಿ ಹಾಗೂ ಅರುಣಾಚಲನಾಥನ ಸೇವೆಯನ್ನು ಪ್ರತಿದಿನವೂ ಪ್ರಾತಃಕಾಲದಲ್ಲಿ ಎದ್ದು ಸ್ನಾನ ಮಾಡಿ ತಪ್ಪದೇ ಮಾಡುತ್ತಿದ್ದನು. ಶಿವಪಂಚಾಕ್ಷರಿ ಜಪವನ್ನು ಅತ್ಯಂತ ಭಕ್ತಿಯಿಂದ ನಿರಂತರವಾಗಿ ನಡೆಸುತ್ತಿದ್ದ. ಕಸ್ತೂರಿ, ಕಲ್ಹಾರ, ಪಚ್ಚ ಕರ್ಪೂರಾದಿಗಳನ್ನು ಹಾಕಿದ ಸಾವಿರ ಸುವರ್ಣ ಕಲಶಗಳಿಂದ ಪ್ರತಿನಿತ್ಯವೂ ಮಹಾದೇವರಿಗೆ ಅಭಿಷೇಕ, ಶೈವಶಾಸ್ತ್ರೋಕ್ತವಾದ ಪೂಜೆ, ಧ್ಯಾನ, ಭಜನೆ, ಗಾನ, ನರ್ತನಾದಿ ಸೇವೆಗಳನ್ನು ಅನುದಿನವೂ ನೆರವೇರಿಸುತ್ತಿದ್ದ. ಕಾರ್ತಿಕ ಹುಣ್ಣಿಮೆಯ ದಿನ ಒಳ್ಳೆ ಸಂಭ್ರಮದಿಂದ ದೀಪೋತ್ಸವವನ್ನು ಏರ್ಪಡಿಸುತ್ತಿದ್ದ. ಪ್ರತಿದಿನವೂ ಅರುಣಾಚಲೇಶ್ವರನಿಗೆ ರಥೋತ್ಸವವನ್ನು ನಡೆಸುತ್ತಿದ್ದ.

ಹೀಗೆ ಪ್ರತಿದಿನ ಪಂಚಾಮೃತ, ಕಲಶಾರ್ಚನೆ, ಪುಷ್ಪಾರ್ಚನೆ, ದೀಪಾರಾಧನೆ, ರಥೋತ್ಸವ, ತೆಪ್ಪೋತ್ಸವ, ವಾಹನೋತ್ಸವ, ಪಂಚೋಪಚಾರ, ಷೋಡಶೋಪಚಾರ, ಪೂಜಾ, ಪಾರಾಯಣ ಮುಂತಾಗಿ ಬಗೆಬಗೆಯ ರೀತಿಯಿಂದ ಅರುಣಾಚಲೇಶ್ವರನ ಸೇವೆಯನ್ನು ಮಾಡುತ್ತಲಿದ್ದ.

## ಸೇವೆಗೆ ಒಲಿದ ಅರುಣಾಚಲೇಶ್ವರ, ಬೀರಿದ ಕರುಣೆ

ಹೀಗೆ ಮೂರು ವರ್ಷದವರೆಗೆ ನಡೆದ ಈ ಅರುಣಾಚಲೇಶ್ವರನ ಅಖಂಡ ಜಪತಪ, ಆರಾಧನೆ, ಪೂಜನ, ಸೇವನೆಗಳಿಂದ ಸಂತುಷ್ಟನಾದ ಆ ಅರುಣಾಚಲನಾಥ. ತನ್ನ

ಭಕ್ತಾಗ್ರಣಿಯಾದ ಆ ಮಹಾರಾಜನಿಗೆ ಪ್ರತ್ಯಕ್ಷದರ್ಶನವನ್ನೇ ಕರುಣಿಸಿದ. ಹಿಮಧವಲ ನಾದ ನಂದೀಶ್ವರನ ಮೇಲೆ ಪಾರ್ವತಿದೇವಿಯೊಂದಿಗೆ ಕುಳಿತು ಆ ರಾಜನ ಎದುರಿಗೆ ಬಂದು ನಿಂತುಕೊಂಡ. ಬ್ರಹ್ಮಋಷಿ ವಶಿಷ್ಠ, ದೇವಋಷಿ ನಾರದ, ಮಹರ್ಷಿ ದುರ್ವಾಸ ಮುಂತಾದ ಮುನೀಶ್ವರರೂ, ದೇವದಾನವರೂ ಸುತ್ತು ಮುತ್ತು ನಿಂತುಕೊಂಡು ಅರುಣಾಚಲೇಶ್ವರನ ಮಹಿಮೆಗಳನ್ನು ಜಯಜಯಕಾರದೊಂದಿಗೆ ಉಗ್ಗಡಿಸುತ್ತಿದ್ದರು.

ಹೀಗೆ ದೇವಾದಿದೇವನಾದ ಮಹಾದೇವನು ಅಲ್ಲಿಗೆ ಬಂದದ್ದನ್ನು ನೋಡಿ ಆನಂದತುಂಬಿದವನಾಗಿ ನಿಂತುಕೊಂಡ ವಜ್ರಾಂಗದ. ತಲೆಬಾಗಿಸಿದ, ಕೈ ಜೋಡಿಸಿದ, ಭಕ್ತಿಯಿಂದ ಬೇಡಿಕೊಂಡ.

**ವಜ್ರಾಂಗದ:-** ದೇವೋತ್ತಮ! ನಾನು ನಿನ್ನ ಮಹಿಮೆಯನ್ನು ತಿಳಿಯಲಿಲ್ಲ. ಕುದುರೆಯ ಮೇಲೆ ಕುಳಿತೇ ಈ ಬೆಟ್ಟವನ್ನು ಸುತ್ತುಹಾಕಿದೆ. ನನ್ನ ಅಪರಾಧವನ್ನು ಕ್ಷಮಿಸು. ಕರುಣೆ ತೋರು. ಕೃಪಾದೃಷ್ಟಿಯನ್ನು ನನ್ನ ಮೇಲೆ ಬೀರು.''

ಹೀಗೆ ದೀನಭಾವದಿಂದ ಪ್ರಾರ್ಥಿಸುವ ವಜ್ರಾಂಗದನ ಬಿನ್ನಹವನ್ನು ಕೇಳಿ ಕರುಣೆ ತುಂಬಿದ ಆ ಕೈಲಾಸಪತಿ. ತನ್ನ ಭಕ್ತನಾದ ವಜ್ರಾಂಗದನಿಗೆ ಅಭಯದ ಆಶ್ವಾಸನೆಯನ್ನು ನೀಡುತ್ತ ನುಡಿದ.

**ಅರುಣಾಚಲೇಶ್ವರ:-** ವತ್ಸ! ಗಾಬರಿಯಾಗಬೇಡ. ನಿನಗೆ ಕಲ್ಯಾಣವಾಗಲಿ. ನನ್ನ ಎಂಟು ಮೂರ್ತಿಗಳುಂಟು. ಅವೆಲ್ಲ ಜೀವ ಜಗತ್ತಿನ ಕಲ್ಯಾಣಕ್ಕಾಗಿಯೇ ರೂಪಗೊಂಡಿರುತ್ತವೆ. ಹಿಂದೆ ಪೂರ್ವಕಾಲದಲ್ಲಿ ನೀನು ಇಂದ್ರನಾಗಿದ್ದೆ. ಆಗ ನಿನ್ನಲ್ಲಿ ಅಹಂಕಾರ ತುಂಬಿತ್ತು. ಮದ ಮಸ್ತಕಕ್ಕೆ ಏರಿತ್ತು. ಐರಾವತಕ್ಕಿಂತ ಹೆಚ್ಚಾಗಿಯೇ ಸರಿಯುತ್ತಿತ್ತು ನಿನ್ನ ಮೈಯಿಂದ ಮದೋದಕ, ಆಗ ನೀನು ಕೈಲಾಸ ಶಿಖರದಲ್ಲಿ ಅಧ್ಯಾಸೀನ ನಾದ ನನಗೆ ಅವಮಾನ ಗೈದಿದ್ದೆ. ಆಗ ನಾನು ದೃಷ್ಟಿಕ್ಷೇಪಮಾತ್ರದಿಂದ ನಿನ್ನನ್ನು ಜಡೀಭೂತನನ್ನಾಗಿ ಮಾಡಿದ್ದೆ. ನಿನ್ನ ಕೈಕಾಲುಗಳನ್ನು ಅಲುಗಾಡಿಸಲೂ ಆಗಲಿಲ್ಲ. ಆಗ ನಿನಗೆ ಆ ಕ್ಷಣದಲ್ಲಿಯೇ ಇಳಿದುಹೋಯಿತು ಜ್ವರದಂತೆ ನಿನ್ನ ಗರ್ವ. ನೀನು ಲಜ್ಜಿತನಾಗಿ ತಲೆ ತಗ್ಗಿಸಿಕೊಂಡು ಬಾಗಿ ಕುಳಿತುಕೊಂಡೆ. ಆಗ ನಾನು ನಿನಗೆ ದಿವ್ಯ ಜ್ಞಾನದ ಉಪದೇಶವನ್ನು ನೀಡಿದೆ. ಆ ನನ್ನ ಉಪದೇಶದ ಶ್ರವಣದ ಪ್ರಭಾವದಿಂದಲೇ ನಿನಗೆ ಈಗ ರಾಜ್ಯೈಶ್ವರ್ಯ ಪ್ರಾಪ್ತಿ. ಆಗಲೇ ನಾನು ನಿನಗೆ ಆಶ್ವಾಸನೆಯನ್ನು ನೀಡಿದ್ದೆ. ''ವಜ್ರಾಂಗದ ರಾಜನಾಗಿ ನೀನು ಪೃಥ್ವಿಯಲ್ಲಿ ಜನ್ಮತಾಳಿದಾಗ ನಾನು ನಿನಗೆ ಅನುಗ್ರಹ ಮಾಡುವೆನೆಂದು.''

ಈಗ ಆ ಸಮಯವು ಸಂಪ್ರಾಪ್ತ. ಮೂರು ವರ್ಷಗಳವರೆಗೆ ಹಗಲಿರುಳು ಮಾಡಿದ ಸೇವೆಯಿಂದ ನಾನು ಸುಪ್ರೀತ. ನಿನ್ನ ನಿತ್ಯ ನಿರಂತರ ಸೇವೆಯಿಂದ ನಾನು ಪ್ರಸನ್ನ. ಆದುದ ರಿಂದ ಈಗ ದಿವ್ಯ ಜ್ಞಾನವನ್ನು ಉಪದೇಶಿಸುತ್ತೇನೆ. ಆಲಿಸು, ಚಿತ್ತವಿಟ್ಟು ನನ್ನ ಅಂತರ್ಯಾಮಿ ಯಾದ ಶ್ರೀಹರಿಯೇ ಶಿವಶಬ್ದವಾಚ್ಯ. ಅವನೇ ಮುಖ್ಯ ಶಿವರುದ್ರಾಂತರ್ಗತ ಸಂಕರ್ಷಣ.

ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ, ಚಂದ್ರ, ಹಾಗೂ ಪುರುಷ. ಇವು ಎಂಟು ನನ್ನ ಮೂರ್ತಿಗಳು. ಇವುಗಳಿಂದ ಚರಾಚರ ಪ್ರಪಂಚವೆಲ್ಲವೂ ವ್ಯಾಪ್ತ. ಈ ಅಷ್ಟತತ್ವಗಳ ಮೇಲಿನ ತತ್ವವೇ ಶಿವತತ್ವ. ಅದೇ ನಾನು. ನನ್ನ ಸ್ವರೂಪ ಭೂತವಾದ ಚಿದಾನಂದ

ಸ್ವರೂಪದ ಸುಖಸಾಗರದಿಂದ ಉತ್ಥಿತವಾದ ಕೆಲವೊಂದು ಲಹರಿಗಳು, ವರುಣ, ಯಮ, ಇಂದ್ರ, ರುದ್ರ ಮೊದಲಾದ ದೇವತೆಗಳನ್ನು ಆನಂದ ಪರಿಪೂರ್ಣರನ್ನಾಗಿ ಮಾಡಿರುತ್ತವೆ. ಈ ಸಮಸ್ತ ಸಂಸಾರಕ್ಕೆ ನಾನೇ ಸ್ವಾಮಿ. ಈ ಗೌರೀದೇವಿಯು ನನ್ನ ಮಹಾಶಕ್ತಿ. ಈ ಶಕ್ತಿಯ ದ್ವಾರದಿಂದ ಸೃಷ್ಟಿ, ಸ್ಥಿತಿ, ಸಂಹಾರ ರೂಪ ಲೀಲಾ ವಿಲಾಸಗಳಿಂದ ಭಿನ್ನ ಭಿನ್ನ ರೂಪಗಳಲ್ಲಿ ಅಭಿವ್ಯಕ್ತವಾದ ಈ ಜಗತ್ತನ್ನು ನಾನು ಕೂಟಸ್ಥನಾಗಿ ಸಾಕ್ಷೀ ಪುರುಷನಾಗಿ ನೋಡುತ್ತಿರುತ್ತೇನೆ. ನನ್ನನ್ನು ಈ ದೃಷ್ಟಿಯಿಂದ ನೋಡಿದಾಗ ಈ ಜಗದಂಡಮಂಡಲ ವೆಲ್ಲವೂ ನಿನಗೆ ಶಿವಸ್ವರೂಪವಾಗಿ ಕಂಡು ಬರುವುದು. ಈ ಪರಮ ತತ್ವವನ್ನು ಚೆನ್ನಾಗಿ ತಿಳಿದುಕೊಂಡು ನನ್ನನ್ನು ಆರಾಧಿಸು. ನನ್ನ ಕೃಪೆಯಿಂದ ನಿನಗೆ ಪುನಃ ಪ್ರಭುತ್ವವು ಪ್ರಾಪ್ತವಾಗುವದು. ಉತ್ತಮೋತ್ತಮವಾದ ಭೋಗೋಪಭೋಗಗಳೆಲ್ಲವು ಅಯಾಚಿತ ವಾಗಿಯೇ ನಿನಗೆ ಒದಗಿ ಬರುವವು. ಇದರ ನಂತರ ನಿನಗೆ ಮತ್ತೆ ಇಂದ್ರ ಪದಪ್ರಾಪ್ತಿ, ಅಲ್ಲಿ ಸಂತತ ಸುಖ. ನಿರಂತರ ಅಧಿಕಾರ. ನಿರಂಕುಶ ಪ್ರಭುತ್ವ. ಸರ್ವಸುಖರಾಶಿ ಸೂರೆ. ಹೀಗೆ ಪ್ರದೀರ್ಘ ಕಾಲದ ವರೆಗೆ ಚೇತನ ಪ್ರಾಪ್ತವಾದ ಸುಖ ಸೌಭಾಗ್ಯಗಳನ್ನೆಲ್ಲಾ ಅನುಭವಿಸಿ ಕೊನೆಗೆ ನನ್ನ ಹರಿಯ ಚಿನ್ಮಯ ರೂಪವನ್ನೂ ಹೊಂದುವೆ, ಅದೇ ಮೋಕ್ಷ ಸಾಯುಜ್ಯ.''

ಹೀಗೆ ಹೇಳಿ ಭಗವಾನ್ ಶಂಕರನು ಅಂತರ್ಧಾನ ಹೊಂದಿದನು. ಅವನ ಆಜ್ಞೆಯಂತೆ ಪುಣ್ಯಾತ್ಮನಾದ ವಜ್ರಾಂಗದನು ಸಕಲ ಭೋಗಭಾಗ್ಯಗಳನ್ನು ಪಡೆದನು. ಸಟಿಯಾಗಲಕ್ಕುಂಟೆ ದೇವವಚನ.

ನಂದಿಕೇಶ್ವರನು ಈ ರೀತಿಯಾಗಿ ಮಾರ್ಕಂಡೇಯ ಮಹಾಮುನಿಗಳನ್ನು ಕುರಿತು ಶಿವಭಕ್ತಿಯ ಮಹಿಮೆ, ಭಕ್ತರ ಉನ್ನತಿ, ಅರುಣಾಚಲ ಪ್ರದಕ್ಷಿಣೆಯ ಫಲ, ಮತ್ತು ಸದಾಚಾರಗಳ ಅಕ್ಷಯ ಪರಿಣಾಮವನ್ನು ಹೇಳಿದನು. ಅರುಣಾಚಲಕ್ಕಿಂತ ಮಿಗಿಲಾದ ಕ್ಷೇತ್ರವಿಲ್ಲ. ಅರುಣಾಚಲನಾಥನಿಗಿಂತ ಹೆಚ್ಚಿನ ದೇವರಿಲ್ಲ. ಈ ಅರುಣಗಿರಿಯ ಪ್ರದಕ್ಷಿಣೆಗಿಂತ ಹೆಚ್ಚಿನ ತಪಸ್ಸಿಲ್ಲ ಈ ಎಲ್ಲ ಮಾತುಗಳನ್ನು ಕೇಳಿ ಮಾರ್ಕಂಡೇಯ ಮಹರ್ಷಿಗಳು ರೋಮಾಂಚಪುಲಕಿಗಾತ್ರರು ಆದರು. ಅವರು ಆನಂದಾಶ್ರುಗದ್ಗಲಿತ ಕಂಠರಾಗಿ ಶಿವಧ್ಯಾನಲೀನರಾದರು.

*ಅರುಣಾಚಲ ಮಾಹಾತ್ಮ್ಯ ಖಂಡ ಸಂಪೂರ್ಣಂ*



# ವೈಷ್ಣವ ಖಂಡ

**ಅಧ್ಯಾಯ - ೪೨**

## ಭೂಮಿ ವರಾಹ ಖಂಡ ಅಥವಾ ವೆಂಕಟಾಚಲ ಮಹಾತ್ಮೆ

ಪೂರ್ವಕಾಲದಲ್ಲಿ ನೈಮಿಷಾರಣ್ಯದಲ್ಲಿ ಋಷಿಮುನಿಗಳೆಲ್ಲ ನೆರೆದಿದ್ದರು. ಶೌನಕರು ಆ ಮುನಿಮಂಡಳಕ್ಕೆ ಮುಂದಾಳು. ಕಲಿಕಾಲದಲ್ಲಿ ಅಧರ್ಮ ಬೆಳೆದು ಎಲ್ಲ ಕಡೆಗೂ ದುಷ್ಕರ್ಮ ಪಾಪಕೃತ್ಯಗಳ ವೃದ್ಧಿ ಆಗಿ ವಾತಾವರಣವೆಲ್ಲವೂ ಕಲುಷಿತವಾಗುವದೆಂದು ಹೆದರಿದ್ದರು ಆ ಪಾಪಭೀರು ಮಹರ್ಷಿಗಳು. ಅದಕ್ಕಾಗಿ ಕಲಿಯ ಪ್ರವೇಶಕ್ಕೇ ಅವಕಾಶ ವಾಗದಂತೆ ಒಂದು ಜ್ಞಾನಸತ್ರವನ್ನು ಪ್ರಾರಂಭಿಸಿದರು. ಅತೀ ದೀರ್ಘಕಾಲೀನವಾಗಿತ್ತು ಆ ಜ್ಞಾನಯಜ್ಞ. ಭಗವಂತನ ಹಾಗೂ ಭಗವದ್ಭಕ್ತರ ಸತ್ಕಥಾ ಪ್ರವಚನ ಹಾಗೂ ಶ್ರವಣಗಳೇ ಆ ಜ್ಞಾನಸತ್ರದ ಮುಖ್ಯ ಕಾರ್ಯ. ಇದಕ್ಕಾಗಿ ದೀಕ್ಷಾಬದ್ಧರಾಗಿ ಕುಳಿತಿದ್ದರು ಮುನಿಮಂಡಲದ ಮಹನೀಯರೆಲ್ಲರು. ಆಗ ಅಲ್ಲಿಗೆ ರೋಮಹರ್ಷಣರ ಪುತ್ರರಾದ ಸೂತ ಜಾತಿಯ 'ಉಗ್ರಶ್ರವ' ಎಂಬ ಮಹಾಮನೀಷಿಗಳು ಆಗಮಿಸಿದರು. ಭಗವಾನ್ ವೇದವ್ಯಾಸರ ನೆಚ್ಚಿನ ಶಿಷ್ಯ ಈ ಉಗ್ರಶ್ರವ. ಅಷ್ಟೇ ಬುದ್ಧಿವಂತ. ಪುರಾಣಗಳೆಲ್ಲವೂ ಅವನಿಗೆ ಕರತಲಾಮಲಕ. ಯದೃಚ್ಛೆಯಿಂದ ಜ್ಞಾನಮೇರುವಾದ ಉಗ್ರಶ್ರವನು ಅಲ್ಲಿಗೆ ಬಂದುದನ್ನು ನೋಡಿ ಸಂತಸದುಂಬಿದರು ಆ ಮುನಿಮಹಾನುಭಾವರೆಲ್ಲರು. ಪೌರಾಣಿಕರಲ್ಲಿ ಶ್ರೇಷ್ಠ. ಪ್ರವಚನಕಾರರಲ್ಲಿ ಜ್ಯೇಷ್ಠ. ಜ್ಞಾನಿಗಳಲ್ಲಿ ವರಿಷ್ಠನಾಗಿದ್ದ ಆ ವ್ಯಾಸಶಿಷ್ಯ.

ನೈಮಿಷಾರಣ್ಯದ ನಿವಾಸಿಗಳಾದ ಆ ಮುನಿಮಹರ್ಷಿಗಳು ಉಗ್ರಶ್ರವನ ಮುಖದಿಂದ ಮೊದಲು ಶ್ರವಣ ಮಾಡಿದ್ದು ಸ್ಕಂದಪುರಾಣದ ಪೂರ್ವಭಾಗ. ಅನೇಕಾನೇಕ ಕೌತುಕಮಯ ಕಥೆಗಳಿಂದಲೂ ಚಿತ್ರವಿಚಿತ್ರವಾದ ಘಟನಾನುಘಟನೆಗಳಿಂದಲೂ ಅತ್ಯಂತ ರೋಚಕವೂ ರಮಣೀಯವೂ ಆಗಿದ್ದಿತು ಆ ಸ್ಕಂದ ಪುರಾಣದ ಪ್ರಥಮಖಂಡ. ಅದರಲ್ಲಿ ಸೃಷ್ಟಿ, ಸಂಹಾರ, ವಂಶಪರಿಚಯ, ಬೇರೆ ಬೇರೆ ದೇಶಗಳಲ್ಲಿ ಹುಟ್ಟಿದ ಮಹಾಪುರುಷರ ಚರಿತ್ರೆ, ಮತ್ತು ಮನ್ವಂತರಗಳ ಕಥೆಗಳನ್ನು ವಿಸ್ತಾರಪೂರ್ವಕ ವರ್ಣಿಸಲಾಗಿತ್ತು. ಮತ್ತು ಅನೇಕ ತೀರ್ಥಗಳ ಮಾಹಾತ್ಮ್ಯದ ಕಥೆಗಳನ್ನು ಅದರಲ್ಲಿ ಅವರು ಆನಂದದಿಂದ ಆಲಿಸಿದರು. ಈಗ ಭೂಲೋಕದ ಮುಖ್ಯ ಮುಖ್ಯ ಪರ್ವತಗಳ ಮಹಾತ್ಮೆಯನ್ನು ಕೇಳಬೇಕೆಂಬ ತಮ್ಮ ಲವಲವಿಕೆಯನ್ನು ನಿವೇದಿಸಿಕೊಂಡರು ಸೂತಾಚಾರ್ಯರಿಗೆ. ಆಗ ಸೂತರು ಆ ಶೌನಕಾದಿ ಮುನಿಗಳನ್ನು ಕುರಿತು ಹೀಗೆ ಹೇಳಿದರು.

**ಸೂತ:-** ಮಹರ್ಷಿಗಳೇ! ಪೂರ್ವಕಾಲದಲ್ಲಿ ನಾನು ಗಂಗಾತೀರದಲ್ಲಿ ಕುಳಿತ ಭಗವಾನ್ ಶ್ರೀ ವೇದವ್ಯಾಸ ದೇವರನ್ನು ಕುರಿತು ಇದೇ ಪ್ರಶ್ನೆಯನ್ನು ಕೇಳಿದ್ದೆ. ಅದಕ್ಕೆ ಉತ್ತರ ರೂಪವಾಗಿ ನನಗೆ ಶ್ರೀ ವೇದವ್ಯಾಸರು ಹೇಳಿದ ಮಾತನ್ನೇ ನಿಮಗೆ ತಿಳಿಸುತ್ತೇನೆ.

**ವೇದವ್ಯಾಸ:-** ಸೂತನೆ! ನಾನು ಈಗ ನಿನಗೆ ಹೇಳುವದು ಬಹಳ ಹಿಂದಿನ ಕಾಲದ ಮಾತು. ಒಂದುದಿನ ಮುನಿಶ್ರೇಷ್ಠರಾದ ನಾರದರು ಪ್ರಯಾಣ ಮಾಡಿದರು ಸುಮೇರು ಪರ್ವತಕ್ಕೆ. ಬಗೆಬಗೆಯ ರತ್ನಗಳಿಂದ ಶೋಭಾಯಮಾನವಾಗಿದೆ. ಆ ಸುಮೇರುವಿನ ಶಿಖರ. ಆ ಸುಮೇರು ಶಿಖರದ ನಟ್ಟ ನಡುವೆ ದೇದೀಪ್ಯಮಾನವಾಗಿತ್ತು ಬ್ರಹ್ಮದೇವರ ದಿವ್ಯ ಭವನ. ಅದರ ಉತ್ತರಭಾಗದಲ್ಲಿ ಒಂದು ಅರಳೆಯ ಹೆಮ್ಮರ. ಅದರ ಎತ್ತರ ಒಂದು ಸಾವಿರ ಯೋಜನೆ. ಬಿತ್ತರ ಅದರ ಎರಡುಪಟ್ಟು. ಆ ಅಶ್ವತ್ಥ ಗಿಡದ ಮೂಲಭಾಗದ ಹತ್ತಿರವೇ ಬಗೆ ಬಗೆಯ ರತ್ನಗಳಿಂದ ಒಡಗೂಡಿದ ಒಂದು ದಿವ್ಯ ಮಂಟಪ. ಆ ಮಂಟಪದ ಮಧ್ಯದಲ್ಲಿ ವೈಡೂರ್ಯ, ಮುತ್ತು ಮತ್ತು ಮಣಿಮಾಣಿಕ್ಯಗಳಿಂದ ನಿರ್ಮಿತವಾದ ಒಂದು ಸ್ವಸ್ತಿಕಗೃಹ. ಮತ್ತು ಆ ದಿವ್ಯ ಮಂಟಪದ ಮುಖ್ಯ ದ್ವಾರವು ಪುಷ್ಯ ರಾಗಮಣಿಯಿಂದ ನಿರ್ಮಿತವಾಗಿತ್ತು. ಈ ರತ್ನಮಂಟಪಕ್ಕೆ ಏಳು ಉಪ್ಪರಿಗೆಯ ಗೋಪುರ. ಇಂದ್ರ ನೀಲಮಣಿಗಳಿಂದ ನಿರ್ಮಿತವಾದ ಎರಡು ಕಿಡಿಕೆಗಳು. ಈ ದಿವ್ಯವಾದ ಮಣಿಮಂಟಪದ ಮಧ್ಯದಲ್ಲಿ ಪ್ರವೇಶ ಮಾಡಿದ ನಾರದ ಮುನಿ.

ಅದರ ಒಳಭಾಗದಲ್ಲಿ ಮತ್ತೊಂದು ಮುತ್ತಿನ ಮಂಟಪ. ಅದರಲ್ಲಿ ಒಂದು ವೈಡೂರ್ಯ ಮಣಿಮಯ ವೇದಿಕೆ. ಆ ಮೌಕ್ತಿಕ ಮಂಟಪ ಮಧ್ಯಭಾಗದಲ್ಲಿ ಒಂದು ಎತ್ತರವಾದ ಸಿಂಹಾಸನ. ಆ ಸಿಂಹಾಸನದ ನಟ್ಟನಡುವೆ ಸಾವಿರ ದಳಗಳ ಒಂದು ದಿವ್ಯ ಕಮಲ. ಅದೊಂದು ಶುಭ್ರಬಣ್ಣದಿಂದ ಹೊಳೆಯುವ ದಿವ್ಯ ಪುಂಡರೀಕ. ಸಾವಿರ ಚಂದ್ರರ ಕಾಂತಿಗೆ ಸಮಾನವಾಗಿತ್ತು ಆ ಪುಂಡರೀಕದ ಪ್ರಭೆ, ಈ ಶ್ವೇತ ಕಮಲದ ಮಧ್ಯಭಾಗದಲ್ಲಿ ಹತ್ತುಸಾವಿರ ಪೂರ್ಣಚಂದ್ರರ ಸಮಾನ ಕಾಂತಿಯಿಂದ ಬೆಳಗುವ ಓರ್ವ ಪುರುಷ. ನೋಡಲು ಅವನೊಂದು ಬೆಳಕಿನ ಬೆಟ್ಟ. ನಾಲ್ಕು ತೋಳುಗಳು. ವರಾಹದ ಮುಖ, ಶಂಖ, ಚಕ್ರ, ಅಭಯ ಹಾಗೂ ವರದ ಚಿನ್ಹಗಳಿಂದ ಅಂಕಿತ ಅವನ ನಾಲ್ಕು ಬಾಹುಗಳು. ಸಾಮವೇದವು ಅವನ ಧ್ವನಿ. ಯಜ್ಞವೇ ವರಾಹರೂಪಿ ಆ ಭಗವಂತನ ಸ್ವರೂಪ. ಆ ಯಜ್ಞ ವರಾಹನ ವಕ್ಷಸ್ಥಳದಲ್ಲಿ ಎಸೆಯುತ್ತದೆ ಶ್ರೀವತ್ಸಲಾಂಛನ. ಅವನು ಧರಿಸಿದ ಶುಭ್ರ ಯಜ್ಞೋಪವೀತದಿಂದ ಅವನ ಅಂಗಾಂಗಗಳಿಗೆ ಮತ್ತಷ್ಟು ಶೋಭೆ, ಕಂಠಪ್ರದೇಶದಲ್ಲಿ ಕೌಸ್ತುಭಮಣಿ ಶೋಭಿಸುತ್ತದೆ. ಬ್ರಹ್ಮರ್ಷಿ ವಶಿಷ್ಠ, ಅತ್ರಿ, ಮಾರ್ಕಂಡೇಯ, ಭೃಗು ಮುಂತಾದ ಮುನಿಮಂಡಲದ ಮುಖಂಡರು ಆ ದೇವದೇವೋತ್ತಮನ ಸೇವಾತತ್ಪರರು. ಇಂದ್ರ, ಯಮ, ವರುಣ, ಕುಬೇರ, ಮುಂತಾದ ಎಂಟು ದಿಕ್ಪಾಲಕರು ಅವನ ಸೇವೆಗೆ ಕೈಕಟ್ಟಿಕೊಂಡು ನಿಂತಿದ್ದಾರೆ. ಇಂಥ ಭೂ ವರಾಹದೇವರ ಬಳಿಗೆ ನೇರವಾಗಿ ನಡೆದು ಬಂದರು ನಾರದರು. ಅವನ ಬಳಿಯಲ್ಲಿಯೇ ನಿಂತರು. ನಮ್ರತೆಯಿಂದ ನಮಿಸಿದರು. ಉಪನಿಷತ್ ಮಂತ್ರಗಳಿಂದ ಸ್ತುತಿಸಿದರು.

ಇಷ್ಟರಲ್ಲಿ ದಿವ್ಯ ದುಂದುಭಿ ಮೊಳಗಿತು. ಅನಂತರ ಅಲ್ಲಿಗೆ ಪೃಥ್ವೀದೇವಿಯ ಶುಭಾಗಮನ. ದಿವ್ಯವಸ್ತ್ರ ಹಾಗೂ ಅಮೂಲ್ಯ ರತ್ನಾಭರಣ ಧರಿಸಿದ ಆ ಭೂದೇವಿಯ ಇಬ್ಬದಿಗಳಲ್ಲಿ ಇಳಾ ಮತ್ತು ಪಿಂಗಳಾ ಎಂಬ ಇಬ್ಬರು ಸಖಿಯರು. ಆ ಇಬ್ಬರು ಸಖಿಯರ ಕೈಯಲ್ಲಿ ಹೂವಿನ ಕರಂಡಕ. ಭೂದೇವಿಯು ಸಖಿಯರ ಕೈಗಳಲ್ಲಿಯ ಪುಷ್ಪಕರಂಡಕಗಳಿಂದ ಹಲವಾರು ಹೂಗಳನ್ನು ತೆಗೆದುಕೊಂಡು ಭಗವಾನ್ ವರಾಹದೇವರ ಚರಣಕಮಲಗಳ ಮೇಲೆ ಚೆಲ್ಲಿದಳು. ಭಯಭಕ್ತಿಯಿಂದ ಮುಂಭಾಗದಲ್ಲಿ ನಿಂತುಕೊಂಡಳು.

ಆಗ ಭಗವಾನ್ ವರಾಹದೇವರು ವಾತ್ಸಲ್ಯ ಪೂರ್ಣವಾದ ದೃಷ್ಟಿಯಿಂದ ನೋಡಿ ಪ್ರೇಮದಿಂದ ನುಡಿದನು- "ಧರಣೀದೇವಿಯೇ! ನಾನು ನಿನ್ನನ್ನು ಆದಿಶೇಷನ ಫಣಾಮಂಡಲದ ಸುಖಾಸನದ ಮೇಲೆ ಕುಳ್ಳಿರಿಸಿದ್ದೇನೆ. ನಿನ್ನ ಮೇಲೆ ಸಂಪೂರ್ಣ ವಿಶ್ವವನ್ನೆ ಸ್ಥಾಪಿತಗೊಳಿಸಿದ್ದೇನೆ. ಈ ವಿಶ್ವದ ತೂಕವನ್ನು ಹಿಡಿಯುವದಕ್ಕಾಗಿ ಅನೇಕ ಕುಲ ಪರ್ವತ ಗಳನ್ನು ನಿನ್ನ ಮೇಲೆ ಅಲ್ಲಲ್ಲಿ ಪ್ರತಿಷ್ಠಿತಗೊಳಿಸಿದ್ದೇನೆ. ಈ ಎಲ್ಲ ನನ್ನ ಏರ್ಪಾಡಿನಿಂದ ನೀನು ಸುಖವಾಗಿ ಇರುವಿಯಷ್ಟೆ? ಆದರೂ ನೀನು ಇಲ್ಲಿಯವರೆಗೆ ಬರಲು ಕಾರಣವೇನು?

**ಪೃಥ್ವೀದೇವಿ:-** ಪೂಜ್ಯರಾದ ವರಾಹದೇವಾ! ಹಿಂದೆ ನೀನು ಪಾತಾಳಮೂಲಕ್ಕೆ ಇಳಿದುಹೋದ ನನ್ನನ್ನು ಉದ್ಧರಿಸಿದೆ. ಆದಿಶೇಷನ ಫಣಾಮಂಡಲದ ರತ್ನ ಸಿಂಹಾಸನದ ಮೇಲೆ ಕೂಡಿಸಿದೆ. ಶೇಷನಾಗನ ಸಾವಿರ ಹೆಡೆಗಳ ಆ ಮಣಿಮಯ ಪೀಠದ ಮೇಲೆ ನಾನು ಸುಖಾಸೀನಳಾಗಿದ್ದೇನೆ. ನನಗೊಂದು ಸ್ಥಿರತೆಯನ್ನು ತಂದು ಕೊಡುವದಕ್ಕಾಗಿ ನೀನು ನನ್ನ ಮೇಲೆ ಅನೇಕ ಪುಣ್ಯ ಪರ್ವತಗಳನ್ನು ಸ್ಥಾಪನ ಮಾಡಿದ್ದೀಯ. ಈ ಪುಣ್ಯ ಪರ್ವತಗಳೆಲ್ಲವೂ ನಿನ್ನ ವಿರಾಟರೂಪದ ಒಂದೊಂದು ಅಂಶ. ಪುರುಷೋತ್ತಮ! ನೀನು ಸ್ಥಾಪಿಸಿದ ನಿನ್ನ ಸ್ವರೂಪಿಯಾದ ಈ ಪುಣ್ಯಪರ್ವತಗಳೇ ನನಗೆ ಆಧಾರ. ಈ ಎಲ್ಲ ಮುಖ್ಯ ಮುಖ್ಯ ಪರ್ವತಗಳಲ್ಲಿ ಅತಿ ಮುಖ್ಯವಾದ ಪರ್ವತದ ಪರಿಚಯವನ್ನು ನನಗೆ ನೀನು ಮಾಡಿಕೊಡು.

**ವರಾಹ:-** ನನ್ನ ಪ್ರೀತಿಯ ವಸುಂಧರೇ! ಶ್ರೇಷ್ಠ ಶ್ರೇಷ್ಠ ಪರ್ವತಗಳ ಬಗೆಗೆ ನೀನು ಮಾಡಿದ ಪ್ರಶ್ನೆಗೆ ಉತ್ತರ ಕೊಡಲು ನನಗೆ ಅತ್ಯಂತ ಉತ್ಸಾಹ. ವಿಷಯವನ್ನು ವಿವರವಾಗಿ ನಿರೂಪಿಸುತ್ತೇನೆ ಕೇಳು. ಸುಮೇರು, ಹಿಮಾಚಲ, ವಿಂಧ್ಯಾಚಲ, ಮಂದರಪರ್ವತ, ಗಂಧಮಾದನಗಿರಿ, ಶಾಲಿಗ್ರಾಮಶೈಲ, ಚಿತ್ರಕೂಟಪರ್ವತ, ಮಾಲ್ಯವಂತ, ಪಾರಿಯಾತ್ರಕ, ಮಹೇಂದ್ರ, ಮಲಯ, ಸಹ್ಯ, ಸಿಂಹಾಚಲ, ರೈವತ, ಮೇರುಪುತ್ರ, ಅಂಜನ, ಇವೆಲ್ಲವೂ ಮಹಾಪರ್ವತಗಳು. ಈ ಎಲ್ಲ ಸುವರ್ಣಮಯ ಶಿಖರದ ಶ್ರೇಷ್ಠ ಶೈಲಗಳು ನಿನಗೆ ಆಧಾರ. ನಾನು ನನ್ನ ಭಕ್ತರಾದ ಅನೇಕ ಋಷಿ ಮುನಿಗಳ ಸಮೂಹದಿಂದಲೂ ದೇವ ವೃಂದಾರಕ ವೃಂದಗಳಿಂದಲೂ ಒಡಗೂಡಿಕೊಂಡು ಈ ಎಲ್ಲ ಪರ್ವತಗಳಲ್ಲಿ ನೆಲೆಸಿರುತ್ತೇನೆ.

ದೇವಿ! ಈ ಎಲ್ಲ ಬೃಹದಾಕಾರದ ಬೆಟ್ಟಗಳಲ್ಲಿ ಶಾಲಿಗ್ರಾಮ, ಸಿಂಹಾಚಲ, ಮತ್ತು ಗಂಧಮಾದನ ಈ ಮೂರು ಪರ್ವತಗಳು ಉತ್ತರ ದಿಕ್ಕಿನಲ್ಲಿ ಹಿಮಾಲಯದ ನಿಟ್ಟಿನಲ್ಲಿ ಇರುತ್ತವೆ. ದಕ್ಷಿಣದಲ್ಲಿ ಕ್ಷೀರನದಿಯ ಸಮೀಪದಲ್ಲಿ ಅರುಣಾಚಲ, ಹಸ್ತಿಗಿರಿ, ಗೃಧ್ರಾಚಲ, ಮತ್ತು ಘಟಕಾಚಲ ಎಂಬ ನಾಲ್ಕು ಶ್ರೇಷ್ಠ ಪರ್ವತಗಳು ಇರುತ್ತವೆ. ಹಸ್ತಿಪರ್ವತದಲ್ಲಿ ಉತ್ತರಕ್ಕೆ ಐದು ಯೋಜನದಲ್ಲಿ ಸುವರ್ಣಮುಖರೀ ಎಂಬ ನದಿಯು ಹರಿಯುತ್ತದೆ. ಆ ನದಿಯ ಉತ್ತರತೀರದಲ್ಲಿ ಪದ್ಮಸರೋವರವು ಇರುತ್ತದೆ. ಅದರ ದಂಡೆಯ ಮೇಲೆ ಶುಕಾಚಾರ್ಯರಿಗೆ ವರಪ್ರದಾನ ಮಾಡಿದ ಶ್ರೀಕೃಷ್ಣ ಪರಮಾತ್ಮನು ಅಣ್ಣ ಬಲರಾಮನೊಂದಿಗೆ ವಾಸ ಮಾಡಿದ್ದಾನೆ. ಈ ಪದ್ಮ ಸರೋವರದ ಉತ್ತರಕ್ಕೆ ಐದು ಮೈಲು ದೂರ ಅಂತರದಲ್ಲಿ ಶ್ರೀ ವೆಂಕಟಾಚಲ ಎಂಬ ಪ್ರಸಿದ್ಧ ಪರ್ವತವು ಇರುತ್ತದೆ. ಈ ವೆಂಕಟಗಿರಿಯು ಮಹಾವಿಷ್ಣುವಿಗೆ ಆಶ್ರಯ. ಈ ಶೈಲವು ಹತ್ತು ಮೈಲು ಎತ್ತರ, ಐವತ್ತೈದು ಮೈಲು ಉದ್ದ ಇರುತ್ತದೆ. ಇಂದ್ರಾದಿ ದೇವತೆಗಳೂ, ವಶಿಷ್ಠರೇ ಮೊದಲಾದ ಮಹರ್ಷಿಗಳೂ ಇನ್ನೂ ಅನೇಕ ಸಿದ್ಧಗಣಗಳೂ ಮರುದ್ಗಣಗಳೂ ಭಗವಂತನ ಸೇವೆಗಾಗಿ

ನೆಲೆಸಿವೆ ಈ ಬೆಟ್ಟದ ಬೇರೆ ಬೇರೆ ಭಾಗದಲ್ಲಿ. ಈ ಪರ್ವತದ ಮೇಲೆ ತುಂಬಿ ತುಳುಕುತ್ತಿವೆ. ತಿಳಿನೀರಿನ ಅಸಂಖ್ಯ ಹೊಕ್ಕರಣಿಗಳು. ಅಲ್ಲಲ್ಲಿ ಹೊಳೆಯುತ್ತಲಿವೆ ದೇವಾಲಯಗಳು.

ಇವುಗಳಲ್ಲಿ ಮುಖ್ಯಮುಖ್ಯವಾದ ಕೆಲವು ತೀರ್ಥಗಳನ್ನು ಮಾತ್ರ ಹೇಳುತ್ತೇವೆ ಕೇಳಿರಿ. ಈ ವೆಂಕಟಾಚಲ ಪರ್ವತದಲ್ಲಿ ಮುಖ್ಯವಾಗಿ ಸಪ್ತತೀರ್ಥಗಳೆಂದು ಪ್ರಸಿದ್ಧವಾಗಿವೆ ಏಳು ತೀರ್ಥಗಳು. ಚಕ್ರತೀರ್ಥ, ದೈವತೀರ್ಥ, ಆಕಾಶಗಂಗಾ, ಕುಮಾರಧಾರಾ, ಪಾಪನಾಶನಿ, ಪಾಂಡುತೀರ್ಥ ಮತ್ತು ಸ್ವಾಮಿ ಪುಷ್ಕರಣೀ ತೀರ್ಥ ಎಂದು. ಈ ಏಳು ತೀರ್ಥಗಳೂ ವೆಂಕಟಾದ್ರಿಯ ಶ್ರೇಷ್ಠ ತೀರ್ಥಗಳೆಂದು ಗಣಿಸಲ್ಪಟ್ಟಿವೆ. ಈ ಎಲ್ಲ ತೀರ್ಥಗಳಲ್ಲಿಯೂ ಸರ್ವಶ್ರೇಷ್ಠವೆಂದರೆ ಸ್ವಾಮಿ ಪುಷ್ಕರಣೀ ತೀರ್ಥ. ಈ ಸ್ವಾಮಿ ಪುಷ್ಕರಣಿಯ ಪಶ್ಚಿಮ ತೀರದಲ್ಲಿ ವರಾಹಸ್ವಾಮಿಯಾದ ನಾನು ನಿನ್ನ ಜೊತೆಗೆ ನೆಲೆಸಿದ್ದೇನೆ. ದಕ್ಷಿಣ ತೀರದಲ್ಲಿ ಜಗದೊಡೆಯನಾದ ಶ್ರೀ ವಿಷ್ಣುವು ವಿರಾಜಮಾನನಾಗಿದ್ದಾನೆ. ಈ ಸ್ವಾಮಿ ಪುಷ್ಕರಣೀ ತೀರ್ಥವು ಭೂಲೋಕದಲ್ಲಿಯ ಗಂಗಾ, ಗೋದಾವರಿ, ಯಮುನಾ ಮುಂತಾದ ಸರ್ವತೀರ್ಥಗಳಿಗೆ ಸಮಾನ. ಮೂರು ಲೋಕಗಳಲ್ಲಿ ಇರುವ ಎಲ್ಲ ತೀರ್ಥ ಸರೋವರ ನದಿಗಳ ಅಧಿಪತ್ಯ ಈ ಸ್ವಾಮಿ ಪುಷ್ಕರಣೀ ತೀರ್ಥಕ್ಕೆ ಇದೆ. ಈ ದಿವ್ಯ ತೀರ್ಥದ ಸೇವೆ ಮಾಡಲಿಕ್ಕೆಂದೇ ಈ ಎಲ್ಲ ತೀರ್ಥಗಳು ಒಂದೊಂದು ರೂಪದಿಂದ ಇಲ್ಲಿ ಬಂದು ಒಂದೊಂದು ಜಲಾಶಯವಾಗಿ ಮಡುಗಟ್ಟಿ ನಿಂತುಕೊಂಡಿವೆ.

ಇವುಗಳಲ್ಲಿ ಹಿಂದೆ ಹೇಳಿದ ಚಕ್ರತೀರ್ಥಾದಿ ಆರು ತೀರ್ಥಗಳು ಸ್ವಾಮಿ ಪುಷ್ಕರಣಿಯ ಸೇವೆಗಾಗಿ ಈ ಬೆಟ್ಟದ ಮೇಲೆ ಬಂದು ನಿಂತಿವೆ. ಇವು ಆರೂ ಉತ್ತಮ ತೀರ್ಥಗಳಾಗಿವೆ.

ಧರಾದೇವಿ! ಈ ವೆಂಕಟಾಚಲಕ್ಕೆ ಮೂಲ ಹೆಸರು ನಾರಾಯಣಗಿರಿ ಎಂದು. ಇದರ ಮಹಿಮೆ ಅಪಾರ. ಇದರ ಖ್ಯಾತಿ ದಿಗಂತವ್ಯಾಪಿ. ಈ ನಾರಾಯಣಗಿರಿಯನ್ನು ಸನಕಾದಿ ಮುನಿಗಳು ಹಾಗು ಇಂದ್ರಾದಿ ದೇವತೆಗಳು ಬೇರೆ ಬೇರೆ ಯುಗಗಳಲ್ಲಿ ಭಿನ್ನ ಭಿನ್ನ ನಾಮದಿಂದ ಕರೆಯುತ್ತ ಬಂದಿದ್ದಾರೆ. ಸತ್ಯ ಯುಗದಲ್ಲಿ ಈ ವೆಂಕಟಾದ್ರಿಗಿರಿಯನ್ನು ಅಂಜನಗಿರಿ ಎಂದು ಕರೆಯುತ್ತಿದ್ದರು. ತ್ರೇತಾಯುಗದಲ್ಲಿ ನಾರಾಯಣಗಿರಿ. ದ್ವಾಪರ ಯುಗದಲ್ಲಿ ಸಿಂಹಾಚಲ, ಕಲಿಯುಗದಲ್ಲಿ ವೆಂಕಟಾಚಲ ಎಂದು ಕರೆಯುತ್ತಿದ್ದಾರೆ. ಈ ವೆಂಕಟಾಚಲವು ಭಗವಾನ್ ವಿಷ್ಣು ಪರಮಾತ್ಮನ ನಿವಾಸಸ್ಥಾನ. ನೂರಾರು ಮೈಲು ದೂರದಲ್ಲಿ ಸಾವಿರಾರು ಮೈಲು ಅಂತರದಲ್ಲಿ ಇದ್ದರೂ ಅಲ್ಲಿಂದಲೆ ತಲೆಬಾಗಿ ವೆಂಕಟಾಚಲದತ್ತ ಮುಖಮಾಡಿ ಕೈ ಮುಗಿದು ನಮಸ್ಕರಿಸಿದರೆ ಅಂಥ ಭಕ್ತನು ಸರ್ವಪಾಪಗಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಹೊಂದುತ್ತಾನೆ. ಆ ಪರ್ವತದ ಮೇಲೆ ಇರುವ ಸ್ವಾಮಿ ಪುಷ್ಕರಣಿಯನ್ನು ಬಿಟ್ಟು ಉಳಿದ ಆರು ಶ್ರೇಷ್ಠ ತೀರ್ಥಗಳ ಮಹಿಮೆಯನ್ನು ಹೇಳುತ್ತೇನೆ ಕೇಳು.

ಮಾಘ ಮಾಸದಲ್ಲಿ ಸೂರ್ಯನು ಕುಂಭರಾಶಿಯಲ್ಲಿದ್ದಾಗ ಮಘಾನಕ್ಷತ್ರ ಯುಕ್ತವಾದ ಪೂರ್ಣಿಮೆಯ ದಿನಂದು ಇಲ್ಲಿರುವ ಕುಮಾರ ಧಾರಾ ತೀರ್ಥವು ಅತ್ಯಂತ ಪವಿತ್ರ. ಅಂದು ಅಲ್ಲಿ ಸ್ನಾನ ಮಾಡಿದವರನ್ನೆಲ್ಲ ಆ ತೀರ್ಥ ಉದ್ಧಾರ ಮಾಡುತ್ತದೆ. ಪಾರ್ವತೀನಂದನನಾದ ಸ್ಕಂದಸ್ವಾಮಿಯು ತನ್ನ ದೇವಸೇನೆಯೊಂದಿಗೆ ಭಗವಾನ್ ಶ್ರೀವಿಷ್ಣುವಿನ ಪೂಜೆ ಮಾಡಲಿಕ್ಕಾಗಿ ಈ ತೀರ್ಥದ ತಡಿಯಲ್ಲಿ ನೆಲೆಸಿದ್ದಾನೆ. ಈ ತೀರ್ಥದಲ್ಲಿ ಒಂದು ದಿನ ಸ್ನಾನ ಮಾಡಿದರೆ ಗಂಗಾದಿ ತೀರ್ಥಗಳಲ್ಲಿ ಹನ್ನೆರಡು ವರ್ಷ ಸ್ನಾನ ಮಾಡಿದ ಪುಣ್ಯ ಪ್ರಾಪ್ತಿ. ಹಾಗೂ ಇಲ್ಲಿ ಮಾಡಿದ ದಾನ ದಕ್ಷಿಣೆಗಳು ಅನಂತ ಪುಣ್ಯಪ್ರದ.

ಸೂರ್ಯನು ಮೀನರಾಶಿಯಲ್ಲಿದ್ದಾಗ ಉತ್ತರಾ ಫಲ್ಗುಣಿ ನಕ್ಷತ್ರದಿಂದ ಕೂಡಿದ ಪೂರ್ಣಮಾ ತಿಥಿಯಂದು ನಾಲ್ಕನೆಯ ಪ್ರಹರದಲ್ಲಿ ಈ ಬೆಟ್ಟದಲ್ಲಿರುವ ತುಂಬುರು ತೀರ್ಥದಲ್ಲಿ ಸ್ನಾನಮಾಡಿದರೆ ಪುನರ್ಜನ್ಮವಿಲ್ಲ. ಸೂರ್ಯನು ಮೇಷರಾಶಿಯಲ್ಲಿದ್ದಾಗ ಚೈತ್ರಪೌರ್ಣಮೆಯ ದಿನದಂದು ಆಕಾಶಗಂಗಾ ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಮೋಕ್ಷಫಲ ಸುಲಭಲಭ್ಯ. ಸೂರ್ಯನು ವೃಷಭರಾಶಿಯಲ್ಲಿ ವಿರಾಜಮಾನನಾದಾಗ ವೈಶಾಖ ಮಾಸದ ಶುಕ್ಲಪಕ್ಷ ಅಥವಾ ಕೃಷ್ಣಪಕ್ಷದ ದ್ವಾದಶಿ ದಿನಗಳಂದು ರವಿವಾರ ಅಥವಾ ಮಂಗಳವಾರ ಯೋಗವಿದ್ದರೆ, ಇಲ್ಲವೆ ವೈಶಾಖದ ಶುಕ್ಲ ಕೃಷ್ಣಪಕ್ಷಗಳ ರವಿವಾರ ದಿನದಂದು ಪುಷ್ಯ ಅಥವಾ ಹಸ್ತಾನಕ್ಷತ್ರ ಯೋಗವಿದ್ದಾಗ ಸಂಗಮ ಕಾಲದಲ್ಲಿ ಪಾಂಡು ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಈ ಲೋಕದಲಿ ದುಃಖವಿಲ್ಲ. ಸ್ವರ್ಗಲೋಕದಲ್ಲಿ ಎಂದೂ ಸುಖ ತಪ್ಪುವದಿಲ್ಲ.

ಶುಕ್ಲ ಅಥ ಕೃಷ್ಣಪಕ್ಷಗಳಲ್ಲಿ ರವಿವಾರ ಸಪ್ತಮಿ ತಿಥಿ ಬಂದು ಅದರೊಡನೆ ಪುಷ್ಯ ಅಥವಾ ಹಸ್ತಾ ನಕ್ಷತ್ರಯೋಗವಿದ್ದರೆ ಆ ಸುಮುಹೂರ್ತದಲ್ಲಿ ಪಾಪನಾಶನ ತೀರ್ಥದಲ್ಲಿ ಸ್ನಾನ ಮಾಡುವದರಿಂದ ಕೋಟಜನ್ಮಗಳ ಪಾಪಗಳೆಲ್ಲವೂ ಕಳೆದು ಹೋಗುತ್ತವೆ.

ಈ ಶೇಷಾಚಲದ ನನ್ನ ದೇವಸ್ಥಾನದ ವಾಯವ್ಯ ಕೋನದ ಶಿಖರದಲ್ಲಿದ್ದ ದೇವ ತೀರ್ಥದಲ್ಲಿ ಗುರು ಪುಷ್ಯ ಯೋಗವಿದ್ದ ದಿನ ಅಥವಾ ಸೋಮವಾರ ಶ್ರವಣಾ ನಕ್ಷತ್ರ ಯೋಗವಿದ್ದಾಗ ಸ್ನಾನ ಮಾಡಿದರೆ ಈ ಲೋಕದಲ್ಲಿ ತಿಳಿದಾಗಲಿ ತಿಳಿಯದಾಗಲಿ ಮಾಡಿದ ಪಾಪಗಳೆಲ್ಲವೂ ನಷ್ಟವಾಗಿ ಹೋಗುತ್ತವೆ. ಪುಣ್ಯವು ಅಭಿವೃದ್ಧಿಯಾಗುವದು. ಕೊನೆಗೆ ಚಂದ್ರಲೋಕದಲ್ಲಿ ಅವನಿಗೆ ಗೌರವದ ಸ್ಥಾನ ಪ್ರಾಪ್ತಿಯಾಗುವದು.

ಹೀಗೆ ವೆಂಕಟಗಿರಿಯಲ್ಲಿರುವ ತೀರ್ಥಗಳ ಮಹಿಮೆಯನ್ನು ಬಣ್ಣಿಸುವ ಭಗವಾನ್ ವರಾಹ ದೇವರಿಗೆ ಭೂದೇವಿಯು ಭಕ್ತಿಯಿಂದ ನಮಸ್ಕಾರ ಮಾಡಿದಳು "ದೇವಾಧಿ ದೇವತೆಗಳಿಗೆಲ್ಲ ಒಡೆಯನಾದ ವರಾಹಮುಖ ವಿಷ್ಣುವೇ! ನಿನಗೆ ನಮಸ್ಕಾರ. ನಿನ್ನ ಪರಿಶುಭ್ರವಾದ ಕಾಂತಿಯು ಹಾಲುಗಡಲಿನ ಧವಲದೀಪ್ತಿಯಂತೆ ಪರಿಶೋಭಿಸುತ್ತಿದೆ. ಕಲ್ಪದ ಆದಿಯಲ್ಲಿ ಏಕಾರ್ಣವವಾದ ಜಲರಾಶಿಯಿಂದ ಮಹಾಪ್ರಭುವಾದ ನೀನೇ ನನ್ನನ್ನು ಎತ್ತಿ ಉದ್ಧಾರ ಮಾಡಿದೆ. ನಿನ್ನ ಅನುಗ್ರಹದಿಂದಲೇ ಈ ಸ್ಥಾವರ ಜಂಗಮಾತ್ಮಕವಾದ ಈ ಜಗತ್ತನ್ನು ನಾನು ಎತ್ತಿ ಹಿಡಿದಿದ್ದೇನೆ. ಮಹಾಬಲಿಷ್ಠನಾದ ನೀನು ನಿನ್ನ ತೀಕ್ಷ್ಣವಾದ ಕೋರೆದಾಡೆಯ ತುದಿಯಿಂದ ಹಿರಣ್ಯಾಕ್ಷನೆಂಬ ರಾಕ್ಷಸನ ವಕ್ಷಸ್ಥಳವನ್ನು ಸೀಳಿ ಹಾಕಿದೆ. ನೀನು ನಿನ್ನ ವರಾಹಮುಖದಿಂದ ಸಾಮವೇದ ಮಂತ್ರಗಳನ್ನು ಗಾನ ಮಾಡುವದನ್ನು ಕೇಳಿದಾಗ ನನ್ನ ಮನಸ್ಸು ಮಂತ್ರ ಮುಗ್ಧವಾಗುತ್ತದೆ. ಬ್ರಹ್ಮ, ಶಂಕರ ಮುಂತಾದ ದೇವ ಧುರೀಣರು ನಿನ್ನ ಪಾದಾಭಿವಂದನೆಗಳನ್ನು ಮಾಡುತ್ತಾರೆ. ಮನೋವಾಚಾಂ ಅಗೋಚರವಾಗಿದೆ ನಿನ್ನ ಮಹಿಮೆ. ನಿನಗೆ ನನ್ನ ವಂದನೆ. ಮತ್ತೆ ಮತ್ತೆ ನಮಸ್ಕಾರ.

ಈ ರೀತಿಯಾಗಿ ಪೃಥ್ವೀದೇವಿ ಮಾಡಿದ ಸ್ತೋತ್ರವನ್ನು ಕೇಳಿ ಭಗವಾನ್ ವರಾಹಮೂರ್ತಿಯ ನೇತ್ರಕಮಲಗಳು ಆನಂದದಿಂದ ಅರಳಿದವು. ಕೂಡಲೇ ಆ ವರಾಹ ಸ್ವಾಮಿಯು ಪೃಥ್ವೀದೇವಿಯನ್ನು ಕರೆದುಕೊಂಡು ಗರುಡಾರೂಢನಾಗಿ ವೆಂಕಟಗಿರಿಗೆ ಪ್ರಯಾಣ ಮಾಡಿದನು. ಸ್ವಾಮಿಪುಷ್ಕರಣಿಯ ಪಶ್ಚಿಮ ತೀರದಲ್ಲಿ ಭೂದೇವಿಯರೊಂದಿಗೆ

ಆ ವರಾಹ ದೇವರು ನೆಲೆನಿಂತನು. ಅಲ್ಲಿ ಅನೇಕಾನೇಕ ಮುನೀಶ್ವರರು, ವೈಖಾನಸರು, ಮಹಾಪುರುಷರು ಈ ಭೂವರಾಹ ದೇವರನ್ನು ಸಂತತವೂ ಪೂಜೆಮಾಡುತ್ತ ಇರುತ್ತಾರೆ. ಈ ಭೂಮಿ ಹಾಗೂ ವರಾಹದೇವರ ಪುಣ್ಯಕಥೆಯನ್ನು ಶ್ರವಣ ಮಾಡಿದವರಿಗೆ ಅಭೀಷ್ಟ ವಸ್ತು ಲಭಿಸುವದು.

## ವರಾಹ ಮಂತ್ರ ಅದರ ಜಪವಿಧಿ, ಧ್ಯಾನ ವಿಧಾನ ಮತ್ತು ಅನುಷ್ಠಾನ ಫಲ

**ಋಷಿಗಳು:-** ಸೂತಮುನಿಯೇ! ಭಗವಾನ್ ವರಾಹದೇವನು ಪೃಥ್ವೀದೇವಿ ಯೊಂದಿಗೆ ಋಷಭಾಚಲಕ್ಕೆ ಆಗಮಿಸಿದನಷ್ಟೇ! ಅಲ್ಲಿಗೆ ಬಂದ ಬಳಿಕ ಆ ಭಗವಂತನು. ತನ್ನ ಮಡದಿಯಾದ ಧರಣೀದೇವಿಗೆ ಏನು ಹೇಳಿದನು? ಏನು ಕೇಳಿದನು? ಅವರೀರ್ವರ ನಡುವೆ ಯಾವ ಸಂಭಾಷಣೆ ನಡೆಯಿತು? ಆ ಪ್ರಸಂಗಗಳನ್ನು ನಮಗೆ ಕೇಳಿಸಿರಿ.

**ಸೂತ:-** ಮುನಿಗಳೇ! ನಿಮಗೆ ನಾನು ಈಗ ಯುಗಾಂತರದಲ್ಲಿ ನಡೆದ ಒಂದು ಪಾವನ ಪ್ರಸಂಗವನ್ನು ಹೇಳುತ್ತೇನೆ ಕೇಳಿ. ವೈವಸ್ವತ ಮನ್ವಂತರದ ಪ್ರಾರಂಭದ ಸತ್ಯಯುಗದಲ್ಲಿ ವರಾಹ ರೂಪಿಯಾದ ಭಗವಾನ್ ಶ್ರೀ ವಿಷ್ಣುವು ಈ ನಾರಾಯಣ ಗಿರಿಯಲ್ಲಿ ವಾಸಮಾಡುತ್ತಿದ್ದನು. ಆಗ ಪೃಥ್ವೀದೇವಿಯು ತನ್ನ ಗೆಳತಿಯರೊಂದಿಗೆ ಅವನ ಸೇವೆ ಮಾಡಬೇಕೆಂದು ಇಲ್ಲಿಗೆ ಬಂದಳು. ಅವನ ಪಾದಗಳಿಗೆ ಪ್ರಣಾಮಗೈದಳು. ಅವನ ಮುಂದೆ ಒಂದು ಪ್ರಶ್ನೆಯನ್ನು ಇಟ್ಟಳು.

**ಪೃಥ್ವಿ:-** ದೇವತಾ ಸಾರ್ವಭೌಮ! ಯಾವ ಮಂತ್ರದಿಂದ ಆರಾಧನೆ ಮಾಡಿದರೆ ನೀನು ಪ್ರಸನ್ನನಾಗುವಿ? ನಿನಗೆ ಅತ್ಯಂತ ಪ್ರೀತಿಯ ಮಂತ್ರವು ಯಾವುದು? ಯಾವ ಮಂತ್ರದ ವಿಧಿಬದ್ಧವಾದ ಜಪದಿಂದ ಮಾನವರಿಗೆ ನಿನ್ನ ಪರಮಧಾಮದ ಪ್ರಾಪ್ತಿ ಆಗುವದು? ಇದನ್ನು ನನಗೆ ಉಪದೇಶ ನೀಡು.

ಭೂದೇವಿಯು ಹೀಗೆ ಪ್ರಶ್ನೆ ಮಾಡಿದ ಬಳಿಕ ಪ್ರಸನ್ನ ಚಿತ್ತನಾದ ಆ ವರಾಹಸ್ವಾಮಿ ನಸುನಗುತ್ತ ಸಂತೋಷದಿಂದ ಹೇಳತೊಡಗಿದನು.

**ವರಾಹ:-** ದೇವಿ! ನಾನು ನಿನಗೆ ಅತ್ಯಂತ ರಹಸ್ಯವಾದ ಒಂದು ಮಂತ್ರವನ್ನು ಹೇಳುತ್ತೇನೆ ಕೇಳು. ಇದು ಪರಮ ಗೋಪನೀಯ. ಅನಧಿಕಾರಿಗಳಾದ ಧರ್ಮದ್ರೋಹಿ ಜನರಿಗೆ ಇದನ್ನು ಎಂದೂ ಪ್ರಕಾಶಪಡಿಸಬಾರದು. ಭಕ್ತಿಯಿಂದ ಸೇವೆ ಮಾಡುವ ಜಿತೇಂದ್ರಿಯರಾದ ಯೋಗ್ಯ ಜನರಿಗೆ ಮಾತ್ರ ಈ ಮಂತ್ರವನ್ನು ಉಪದೇಶ ಮಾಡಬೇಕು.

''ಓಂ ನಮಃ ಶ್ರೀ ವರಾಹಾಯ ಧರಣ್ಯುದ್ಧಾರಾಯ ಸ್ವಾಹಾ'' ಎಂಬುದೇ ಆ ಮಂತ್ರ. ವರಾಹಮಂತ್ರ ಎಂದು ಇದಕ್ಕೆ ಹೆಸರು. ಮುಮುಕ್ಷು ಪುರುಷರು ಯಾವಾಗಲೂ ಈ ಮಂತ್ರವನ್ನು ಜಪಿಸಬೇಕು. ಈ ಮಂತ್ರವು ಸರ್ವವಿಧವಾದ ಸಿದ್ಧಿಗಳನ್ನು ಒದಗಿಸಿ ಕೊಡುವದು ಜಾಪಕರಿಗೆ. ಈ ಮಂತ್ರಕ್ಕೆ ಸಂಕರ್ಷಣನೇ ಋಷಿ, ವರಾಹನೇ ದೇವತೆ. ಪಂಕ್ತಿ ಎಂಬುದು ಛಂದಸ್ಸು. ಶ್ರೀ ಎಂಬುದು ಬೀಜಾಕ್ಷರ, ದಿವ್ಯವಾದ ಈ ವಾರಾಹ ಮಂತ್ರವನ್ನು ಸದಾಚಾರ ಸಂಪನ್ನರೂ ಸದ್ಧರ್ಮನಿಷ್ಠರೂ ಆದ ಸದ್ಗುರುಗಳಿಂದಲೇ ಉಪದೇಶವನ್ನು ಪಡೆಯಬೇಕು. ಅನಂತರ ದೀಕ್ಷಾಬದ್ಧನಾಗಿ ನಾಕು ಲಕ್ಷ ಈ ವರಾಹಮಂತ್ರಗಳನ್ನು ಜಪಮಾಡಬೇಕು. ತುಪ್ಪ ಮತ್ತು ಜೇನುತುಪ್ಪಗಳನ್ನು ಹಾಲಿನಲ್ಲಿ ಕೂಡಿಸಿ ಪಾಯಸದಂತೆ ಮಾಡಿ ಇದರ ದಶಾಂಶ ಹೋಮವನ್ನು ಮಾಡಬೇಕು.

ಈ ವರಾಹ ಮಂತ್ರದ ದೇವತೆಯಾದ ವರಾಹ ದೇವನ ಧ್ಯಾನವಿಧಿಯನ್ನು ಹೇಳುತ್ತೇನೆ ಕೇಳು. ನಾನು ಹೇಳಿದ ರೀತಿಯಲ್ಲಿ ಭಕ್ತಿಯಿಂದ ಈ ಮಂತ್ರದೇವತೆಯಾದ ವರಾಹ ಮೂರ್ತಿಯ ಸ್ವರೂಪವನ್ನು ಈ ಪ್ರಕಾರ ಧ್ಯಾನ ಮಾಡಬೇಕು. ''ಸ್ಪಟಿಕ ಗಿರಿಯಂತೆ ಶುಭ್ರವಾದ ಅಂಗಕಾಂತಿ. ಅರಳಿದ ಕೆಂದಾವರೆಯಂತೆ ಸುಂದರವಾದ ನೇತ್ರಯುಗಲ. ವರಾಹದ ಮುಖ. ಶಾಂತ ಸ್ವರೂಪ. ಚತುರ್ಭುಜ, ಮಸ್ತಕದ ಮೇಲೆ ಕಿರೀಟ. ವಕ್ಷಸ್ಥಳದಲ್ಲಿ ಶ್ರೀವತ್ಸ ಚಿನ್ಹ, ಶಂಖ ಚಕ್ರ ಅಭಯ ಮುದ್ರೆ ಹಾಗು ಕಮಲ ನಾಲ್ಕು ಕೈಗಳಲ್ಲಿ, ಎಡತೊಡೆಯ ಮೇಲೆ ಧರಣೀದೇವಿ, ಪೀತಾಂಬರವನ್ನುಧರಿಸಿ ಹೊಂಬಣ್ಣದ ಅನೇಕ ಆಭರಣಗಳಿಂದ ಅಭೂಷಿತನಾಗಿದ್ದಾನೆ ಆ ವರಾಹ ಮೂರ್ತಿ. ಬ್ರಹ್ಮಾಂಡದ ಕೆಳಗೆ ಶ್ರೀಕೂರ್ಮದ ಪೃಷ್ಠಭಾಗದಲ್ಲಿ ಆದಿಶೇಷ. ಅವನ ಹೆಡೆಯೇ ಒಂದು ಸಾವಿರ ದಳದ ಪದ್ಮ, ಆ ಸಹಸ್ರ ದಳದ ಕಮಲವೇ ಈ ವರಾಹ ಸ್ವಾಮಿಯ ಆಸನ. ಅದರ ಮೇಲೆ ಮಂಡಿಸಿದ್ದಾನೆ ಚತುರ್ಭುಜದ ಆ ವರಾಹ ಸ್ವಾಮಿ'' ಹೀಗೆ ಧ್ಯಾನ ಮಾಡಿ ಪ್ರತಿನಿತ್ಯವೂ ಈ ವರಾಹ ಮಂತ್ರವನ್ನು ೧೦೮ ಬಾರಿ ಜಪಮಾಡಬೇಕು. ಇದರಿಂದ ಮಾನವರ ಕಾಮನೆಗಳೆಲ್ಲವೂ ಪೂರ್ಣ ಆಗುವವು. ಕೊನೆಗೆ ಮೋಕ್ಷವು ಈ ಮಂತ್ರದ ಸಂತತ ಪುನಶ್ಚರಣದಿಂದ ಸಂಪ್ರಾಪ್ಯ.

**ಭೂದೇವಿ:-** ಪ್ರಿಯದೇವ! ಈ ಮೊದಲು ಈ ಮಂತ್ರವನ್ನು ಯಾರು ಧ್ಯಾನ ಮಾಡಿದರು? ಅವರಿಗೆ ಎಂಥ ಫಲ ದೊರಕಿತು?

**ವರಾಹ:-** ದೇವಿ! ಕೃತಯುಗದಲ್ಲಿ ಧರ್ಮ ಎಂಬ ಮಹಾತ್ಮನಾದ ಮನು ಮಹಾರಾಜನು ಮೊಟ್ಟ ಮೊದಲು ಬ್ರಹ್ಮದೇವರಿಂದ ಈ ಮಂತ್ರದ ಉಪದೇಶವನ್ನು ಪಡೆದ. ಆ ಧರ್ಮ ಮನು ಇದೇ ಪರ್ವತದ ಮೇಲೆ ಕುಳಿತು ವರಾಹ ಮಂತ್ರವನ್ನು ಜಪಿಸಿದ. ಅದರಿಂದ ನಾನು ಪ್ರಸನ್ನನಾದೆ. ಪ್ರತ್ಯಕ್ಷ ದರ್ಶನವನ್ನು ನೀಡಿದೆ ಆ ಮನು ಮುನಿಗೆ. ಅವನು ನನ್ನಿಂದ ತನಗೆ ಅಭೀಷ್ಟವಾದ ವರಗಳನ್ನು ಪಡೆದುಕೊಂಡ. ಕೊನೆಗೆ ನನ್ನ ದಿವ್ಯ ಪದವನ್ನು ಹೊಂದಿದ.

ಪೂರ್ವಕಾಲದಲ್ಲಿ ದೇವೇಂದ್ರ ದುರ್ವಾಸರ ಶಾಪದಿಂದ ಸ್ವರ್ಗಭ್ರಷ್ಟನಾಗಿ ಹೋಗಿದ್ದ. ಯಾವ ದಾರಿಯೂ ಇರಲಿಲ್ಲ ಅವನ ಉದ್ಧಾರಕ್ಕೆ. ನಿರಾಶನಾದ ಆ ನಾಕ ಲೋಕಾಧಿಪತಿಯು ಅಂತಿಮ ಉಪಾಯವೆಂದು ಈ ವರಾಹ ಮಂತ್ರವನ್ನು ಸಂತತವಾಗಿ ಜಪಿಸಿದ. ಅದರಿಂದ ಅವನ ವಿಘ್ನ ವಿಡ್ಡೂರಗಳೆಲ್ಲವೂ ಕಳೆದುಹೋದವು. ಈ ಮಂತ್ರ ಜಪದ ಪ್ರಭಾವದಿಂದ ಅವನು ಕಳೆದುಕೊಂಡ ಸುರ ಸಾಮ್ರಾಜ್ಯವು ಅವನಿಗೆ ಮರಳಿ ದೊರಕಿತು. ಇನ್ನು ಬೇರೆ ಬೇರೆ ಮುನಿಗಳು ಈ ಮಂತ್ರವನ್ನು ಭಕ್ತಿಯಿಂದ ಜಪಿಸಿದ್ದಾರೆ. ಇಷ್ಟ ಸಿದ್ಧಿಯನ್ನು ಪಡೆದಿದ್ದಾರೆ. ಮೋಕ್ಷವನ್ನು ಹೊಂದಿದ್ದಾರೆ.

ಸರ್ಪಗಳ ಸಾರ್ವಭೌಮನಾದ ಅನಂತನಾಗನ ಹೆಸರನ್ನು ನೀನು ಕೇಳಿರುವಿಯಷ್ಟೇ! ಅಖಂಡ ಪೃಥ್ವೀಮಂಡಲವನ್ನೆಲ್ಲಾ ಹೊರಲಿಕ್ಕೆ ಅವನಿಗೆ ಶಕ್ತಿ ಸಾಲದಾಯಿತು. ಆಗ ಅವನು ಸಂಕರ್ಷಣನಾಮಕ ಪರಮಾತ್ಮನ ಆಜ್ಞೆಯಂತೆ ಕಶ್ಯಪರಿಂದ ಈ ವರಾಹಮಂತ್ರ ಉಪದೇಶ ಪಡೆದು ಶ್ವೇತದ್ವೀಪದಲ್ಲಿ ನಿಂತು ಈ ವರಾಹ ಮಂತ್ರದ ಸಂಖ್ಯೆಯಿಲ್ಲದಷ್ಟು ಸಲ ಆವೃತ್ತಿ ಮಾಡಿ ಜಪಮಾಡಿದ

ಅದರಿಂದ ಅವನಿಗೆ ಪ್ರಾಪ್ತವಾಯಿತು ಅತ್ಯದ್ಭುತ ಶಕ್ತಿ. ಆ ಶಕ್ತಿಯಿಂದಲೇ ಅವನು ಈಗ ಹದಿನಾಲ್ಕು ಲೋಕಗಳನ್ನೆಲ್ಲ ಲೀಲಾಜಾಲವಾಗಿ ಧರಿಸುತ್ತಾನೆ ತನ್ನ ಫಣಾ ಮಂಡಲದ ಮೇಲೆ. ಆದುದರಿಂದ ಪೃಥ್ವಿಯ ಅಧಿಪತ್ಯ, ಗ್ರಾಮ, ಧಾಮ, ಹೊಲ ಮುಂತಾದ ಭೂಮಿಯ ಯಾವದೇ ಒಂದು ಭಾಗದ ಒಡೆತನವನ್ನು ಬಯಸುವವರು ಭಕ್ತಿಯಿಂದ ಈ ವರಾಹ ಮಂತ್ರವನ್ನು ಜಪಿಸಬೇಕು. ಇದು ಸರ್ವಾರ್ಥ ಪ್ರದ, ಸರ್ವ ಸಿದ್ಧಿಕರ.

## ಶ್ರೀದೇವಿ ಭೂದೇವಿಯರೊಂದಿಗೆ ನಾರಾಯಣಗಿರಿಯಲ್ಲಿ ವಿಷ್ಣುವಿನ ನಿವಾಸ ಆಕಾಶ ರಾಜನ ಮನೆಯಲ್ಲಿ ಪದ್ಮಾವತಿ ವಸುದಾನರ ಜನ್ಮ

**ವರಾಹ:-** ದೇವಿ ವಸುಮತಿ! ನಾನು ನಿನಗೆ ಒಂದು ಪವಿತ್ರ ಇತಿಹಾಸವನ್ನು ಹೇಳುತ್ತೇನೆ. ಅವಧಾನವನ್ನು ನೀಡು. ವೈವಸ್ವತ ಮನ್ವಂತರದ ಮೊಟ್ಟ ಮೊದಲನೆಯ ಸತ್ಯಯುಗದಲ್ಲಿ ವಾಯುದೇವರು ಸ್ವಾಮಿ ಪುಷ್ಕರಣಿಯ ತೀರದಲ್ಲಿ ನಿಂತುಕೊಂಡು ಆಚರಿಸಿದರು ಅತ್ಯುಗ್ರ ತಪವನ್ನು. ಆದರಿಂದ ಪರಿತುಷ್ಟನಾದ ಭಗವಾನ್ ವಾಸುದೇವ ಆ ವಾಯುವಿನ ಮೇಲೆ ದಯೆತೋರುವದಕ್ಕಾಗಿ ತನ್ನ ಮೆಚ್ಚಿನ ಮಡದಿಯರಾದ ಶ್ರೀದೇವಿ ಭೂದೇವಿಯರೊಂದಿಗೆ ಇಲ್ಲಿಗೆ ಆಗಮಿಸಿದ. ಇದೇ ಸ್ವಾಮಿ ಪುಷ್ಕರಣಿಯ ತೀರ್ಥದ ತೀರದಲ್ಲಿ ಕಠೋರ ತಪಸ್ಸನ್ನು ಆಚರಿಸಿದ ಆ ಮಾರುತ ದೇವನಿಗೆ ಅಭೀಷ್ಟವಾದ ವರಪ್ರದಾನ ಮಾಡಿದ. ಅವನ ಅಪೇಕ್ಷೆಯಂತೆ ಈ ಸ್ವಾಮಿಪುಷ್ಕರಣಿಯ ತೀರ್ಥದ ದಕ್ಷಿಣ ತೀರದಲ್ಲಿ ಪರಮಪವಿತ್ರವಾದ ಆನಂದ ಎಂಬ ವಿಮಾನ ಸ್ಥಾನದಲ್ಲಿ ಆ ಲಕ್ಷ್ಮೀಕಾಂತನು ನೆಲೆಸಿ ನಿಂತ. ಅಂದಿನಿಂದ ಕುಮಾರ ಕಾರ್ತಿಕೇಯನು ಈ ವಿಮಾನ ಶ್ರೀನಿವಾಸನನ್ನು ಸೇವಿಸುತ್ತ ನಿರಂತರವೂ ವಾಸ ಮಾಡಿರುತ್ತಾನೆ ಅದೃಶ್ಯರೂಪದಿಂದ. ಹೀಗೆ ಮುಂದಾದರೂ ಎಂದೆಂದಿಗೂ ಅವೃಶ್ಯರೂಪದಿಂದ ಈ ಲಕ್ಷ್ಮೀವಲ್ಲಭನು ಆ ವಿಮಾನದಲ್ಲಿ ವಾಸಿಸುತ್ತಾನೆ. ಕೆಲವು ವಿಶಿಷ್ಟ ಮಹಾತ್ಮರಿಗೆ ಮಾತ್ರ ಅವರ ತಪಃ ಪ್ರಭಾವದಿಂದಲೂ ಭಕ್ತಿಯ ದಾರ್ಢ್ಯ ದಿಂದಲೂ ಇಲ್ಲಿ ಪ್ರತ್ಯಕ್ಷಗೋಚರನು ಆಗುತ್ತಾನೆ.

**ಪೃಥ್ವಿ:-** ಮಾನವರ ದೃಷ್ಟಿಯಲ್ಲಿ ಸಾಮಾನ್ಯವಾಗಿ ಎಂದೂ ಕಾಣದಿರುವ ಆ ಭಗವಂತನು ಮಹಾತ್ಮರಿಗೆ ಮಾತ್ರ ಈ ವಿಮಾನ ಸ್ಥಾನದಲ್ಲಿ ಪ್ರತ್ಯಕ್ಷದರ್ಶನವನ್ನು ಹೇಗೆ ಕರುಣಿಸುವನು.

**ವರಾಹ:-** ದೇವಿ! ಹಿಂದೆ ಒಮ್ಮೆ ಅಗಸ್ತ್ಯ ಮಹರ್ಷಿಯು ಈ ನಾರಾಯಣಗಿರಿಯ ಮೇಲೆ ನಿಂತು ತಪಸ್ಸನ್ನು ಮಾಡಿದನು. ಆಗ ಅವನ ಭಕ್ತಿಗೆ ಒಲಿದು ಪ್ರತ್ಯಕ್ಷ ಗೋಚರನಾದ ವೈಕುಂಠಪತಿ. ಹನ್ನೆರಡು ವರ್ಷಗಳ ಉಗ್ರ ತಪೋನಿಷ್ಠೆಗಳ ಫಲವಾಗಿತ್ತು ಅಗಸ್ತ್ಯಮುನಿಗೆ ಈ ಭಗವತ್ ಸಾಕ್ಷಾತ್ಕಾರ. ಪ್ರಸನ್ನನಾದ ಪರಮಾತ್ಮನಿಗೆ ಪ್ರಣಾಮ ಮಾಡಿ ಸೇವೆ ಸಲ್ಲಿಸಿ ಕೇಳಿಕೊಂಡ ಆ ಅಗಸ್ತ್ಯಮುನಿ- ''ಪ್ರಭು! ನೀನು ಇಲ್ಲಿ ನಿತ್ಯವೂ ನಿವಾಸ ಮಾಡಬೇಕು. ಭಕ್ತಾಗ್ರೇಸರಿಗೆಲ್ಲ ಪ್ರತ್ಯಕ್ಷ ದರ್ಶನ ನೀಡಬೇಕು.''

**ವಿಷ್ಣು:-** ದೇವಋಷಿಯೇ! ನಾನು ನಿನ್ನ ಸಂತೋಷಕ್ಕಾಗಿ ಈ ವಿಮಾನ ಸ್ಥಳದಲ್ಲಿ ನಿರಂತರ ನೆಲೆ ನಿಲ್ಲುತ್ತೇನೆ. ಯೋಗ್ಯ ಅಧಿಕಾರಿಗಳಿಗೆಲ್ಲ ನನ್ನ ಪ್ರತ್ಯಕ್ಷ ದರ್ಶನವಾಗುವದು. ಅನಧಿಕಾರಿಗಳಿಗೆ ಮಾತ್ರ ದರ್ಶನವಾಗದು. ನಾಸ್ತಿಕರಿಗೆ ಈ ವಿಮಾನ ದರ್ಶನವೂ ಆಗಲಾರದು. ಅದರಲ್ಲಿದ್ದ ವಿಷ್ಣುವಿನ ಪ್ರತ್ಯಕ್ಷ ದರ್ಶನವಂತೂ ಎಂದಿಗೂ ಆಗಲಾರದು.

ಪರಮಾತ್ಮನ ಈ ವಚನವನ್ನು ಕೇಳಿ ಅಗಸ್ತ್ಯಮುನಿಯು ಪ್ರಸನ್ನನಾಗಿ ತನ್ನ ಆಶ್ರಮಕ್ಕೆ ಹೊರಟು ಹೋದನು. ಅಂದಿನಿಂದ ಮಹಾವಿಷ್ಣುವು ಇಲ್ಲಿಯ ವಿಮಾನ ಸ್ಥಾನದಲ್ಲಿ ಸಂತತ ಸನ್ನಿಹಿತನಾಗಿ ಮುನಿ ಮಹರ್ಷಿಗಳಿಗೆಲ್ಲ ಪ್ರತ್ಯಕ್ಷ ದರ್ಶನವನ್ನೇ ಕರುಣಿಸುವನು. ಅತ್ಯುತ್ಕಟ ಭಕ್ತಿಯನ್ನು ಮಾಡುವ ಮಾನವರು ಕೂಡ ಈ ಸ್ಥಾನದಲ್ಲಿ ಭಗವಂತನ ದಿವ್ಯ ದರ್ಶನ ಪಡೆಯುವರು. ಆದರೆ ಪಾಪಿಗಳಿಗೆ ಮಾತ್ರ ಇಂಥ ಭಗವದ್ದರ್ಶನದ ಯೋಗವು ಇರುವದಿಲ್ಲ. ಈ ವಿಮಾನ ಶ್ರೀನಿವಾಸನನ್ನು ಸ್ಕಂದ ದೇವನೂ ವಾಯುದೇವನೂ ಸದಾ ಸರ್ವದಾ ಆರಾಧಿಸುತ್ತಾರೆ.

ಪೂರ್ವಕಾಲದಲ್ಲಿ ಮಿತ್ರವರ್ಮ ಮನೋರಮಾ ಎಂಬ ದಂಪತಿಗಳ ಹೊಟ್ಟೆಯಿಂದ ಆಕಾಶನೆಂಬ ಮಗನು ಜನಿಸಿದನು. ಮಿತ್ರವರ್ಮನ ಕುಲಕ್ಕೆ ಒಂದು ಅಭೂಷಣನಾಗಿದ್ದ ಈ ಆಕಾಶರಾಜ, ಅವನು ಶಕವಂಶದಲ್ಲಿ ಹುಟ್ಟಿದ ಧರಣೀ ಎಂಬ ರಾಜಕುಮಾರಿಯನ್ನು ವಿಧಿಪೂರ್ವಕವಾಗಿ ಲಗ್ನವಾದನು. ಮಹಾನುಭಾವನಾದ ಮಿತ್ರವರ್ಮರಾಜನು ತನ್ನ ಮುಪ್ಪಿನ ಕಾಲದಲ್ಲಿ ಆಕಾಶರಾಜನಿಗೆ ತನ್ನ ರಾಜ್ಯದ ಭಾರವನ್ನೆಲ್ಲ ಒಪ್ಪಿಸಿದ. ವೆಂಕಟಾಚಲ ಸಮೀಪದ ಪವಿತ್ರವಾದ ತಪೋವನಕ್ಕೆ ತೆರಳಿದ.

ಅಲ್ಲಿ ನಿಂತು ಅತ್ಯುಗ್ರವಾದ ತಪಶ್ಚರ್ಯೆಯನ್ನು ಕೈಕೊಂಡ ಆಕಾಶರಾಜನು ತಂದೆಯ ನಂತರ ಅಖಂಡ ಭೂಮಂಡಲಕ್ಕೆಲ್ಲ ಏಕರಾಟ್ ಸಾರ್ವಭೌಮ ಎನಿಸಿದನು. ಅವನಿಗೆ ಬೇಕುಬೇಕಾದ ಭೋಗಭಾಗ್ಯ ಸಾಮಗ್ರಿಗಳಿದ್ದರೂ ಅವನು ಮಾತ್ರ ಸಂಯಮಿ, ಸುಶೀಲ ಮತ್ತು ಧರ್ಮೈಕನಿಷ್ಠ. ಏಕಪತ್ನೀವ್ರತವು ಅವನ ಒಂದು ಆ ಜನ್ಮ ನಿಯಮ. ತನ್ನ ಧರ್ಮಪತ್ನಿಯಾದ ಧರಣೀದೇವಿಯಲ್ಲಿ ಮಾತ್ರ ಅವನ ಮನಸ್ಸಿನ ಆಸಕ್ತಿ ಮತ್ತು ಪ್ರೀತಿಯ ಅನುರಕ್ತಿ.

ಒಂದು ದಿನ ಧರ್ಮಧುರಂಧರನಾದ ರಾಜರ್ಷಿಯು ಯಜ್ಞವನ್ನು ಮಾಡಬೇಕೆಂದು ಸಂಕಲ್ಪಿಸಿದನು. ಸರಣೀನದಿಯ ತಟಾಕವು ಯಜ್ಞಕ್ಕೆ ಒಳ್ಳೇ ಭೂಮಿ ಎಂದು ಪುರೋಹಿತರ ಸಲಹೆ. ಆದರಿಂದ ಭೂಮಿಯ ಶೋಧಕಾರ್ಯ ನಡೆಸಿದ ಮಹಾರಾಜ. ಬಂಗಾರದ ನೇಗಿಲದಿಂದ ಸ್ವಯಂ ಆಕಾಶರಾಜನೇ ಹರಗತೊಡಗಿದ ಆ ಯಜ್ಞಭೂಮಿಯನ್ನು. ಹೀಗೆ ಮಹಾರಾಜನು ಆ ನದೀತೀರವನ್ನು ಯಜ್ಞಕಾರ್ಯಾರ್ಥವಾಗಿ ಹರಗುತ್ತ ನಡೆದಾಗ ಆ ಭೂಗರ್ಭದಲ್ಲಿ ಒಂದು ವಿಚಿತ್ರವಾದ ಕಮಲವು ಅರಳಿ ನಿಂತಿತ್ತು.

ಆ ಸ್ಥಳ ಕಮಲದ ಎಲೆಯ ಮೇಲೆ ಒಂದು ಕನ್ಯಾರತ್ನ. ಅತ್ಯಂತ ಸುಂದರ. ಸರ್ವ ಲಕ್ಷಣ ಸಂಪನ್ನ. ಬಂಗಾರದ ಗೊಂಬೆಯೋ? ಮಾನವೀಯ ಮಗುವಾಗಿ ಜನಿಸಿದ ರಂಭೆಯೋ? ಸಾಕ್ಷಾತ್ ಲಕ್ಷ್ಮೀದೇವಿಯ ಪ್ರತಿಬಿಂಬೆಯೋ? ಎಂದು ಅಲ್ಲಿ ನಿಂತ, ನೆರೆದ, ನೋಡುತ್ತಿರುವ ಜನರಿಗೆಲ್ಲ ಸಂದೇಹ. ಕಮಲದ ಮೇಲೆ ಮಲಗಿದ್ದ ಆ ಕೂಸನ್ನು ಕಂಡು ಆಕಾಶರಾಜನ ಕಣ್ಣುಗಳು ಆ ಕಮಲಕ್ಕಿಂತ ಅಗಲವಾದವು ಆಶ್ಚರ್ಯದಿಂದ. ಕೂಡಲೇ ಆ ಮುಗ್ಧಮಗುವನ್ನು ತನ್ನ ನೀಳದೋಳುಗಳನ್ನು ಚಾಚಿ ಎತ್ತಿಕೊಂಡ. ಅಕ್ಕರತೆಯಿಂದ ತೊಡೆಗಳ ಮೇಲೆ ಮಲಗಿಸಿಕೊಂಡ. ''ಮಗು! ನನ್ನ ಮಗು! ನೀನು ನನ್ನ ಮಗಳೇ ಅಹುದು'' ನನ್ನ ಮಗಳು! ನನ್ನ ಮಗಳು! ಎನ್ನುತ್ತ ತನ್ನ ಎದೆಗೆ ಒತ್ತಿಕೊಂಡ. ಅದೇ ವೇಳೆಯಲ್ಲಿ ಆಕಾಶವಾಣಿ ''ರಾಜನೇ! ನಿಜವಾಗಿಯೂ ಇವಳು ನಿನ್ನ ಮಗಳೇ. ತಾವರೆ ಗಣ್ಣಿನ ಈ ಶಿಶುವನ್ನು ನೀನೇ ತಂದೆಯಾಗಿ ಪಾಲನೆ ಪೋಷಣೆ ಮಾಡು.''

ಆಕಾಶವಾಣಿಯ ಈ ಆದೇಶವನ್ನು ಕೇಳಿ ಈ ಆಕಾಶರಾಜನಿಗೆ ಎಲ್ಲಿಲ್ಲದ ಆನಂದ. ಅವನು ಆ ಮಗುವನ್ನು ಎತ್ತಿಕೊಂಡು ತನ್ನ ನಗರ ಪ್ರವೇಶಿಸಿದನು. ಮನೆಗೆ ಬಂದನು. ಮಹಾರಾಣಿ ಧರಣೀದೇವಿಯನ್ನು ಕರೆದು ಹೇಳಿದನು.

**ಆಕಾಶರಾಜ:-** ಪ್ರಿಯೆ! ಮಕ್ಕಳಿಲ್ಲವೆಂದು ಕೊರಗುತ್ತಿದ್ದೆ. ಮನದಲ್ಲಿಯೇ ಮರುಗುತ್ತಿದ್ದೆ. ಭಗವಂತನಲ್ಲಿ ಮೊರೆ ಇಟ್ಟಿದ್ದೆ. ಆ ಸ್ವಾಮಿ ನಮ್ಮ ಮೊರೆ ಕೇಳಿದ. ಈ ಸುಂದರವಾದ ಮಗುವನ್ನು ಕರುಣಿಸಿದ. ಭೂಗರ್ಭದಿಂದ ಅವಿರ್ಭವಿಸಿದ ಈ ಕನ್ಯಾಮಣಿ ನಮಗೊಂದು ಪರಮಾತ್ಮನ ಕಾಣಿಕೆ. ಭಗವಂತನ ಕೊಟ್ಟ ಈ ಎಳೆ ಕಂದ ನನ್ನ ನಿನ್ನ ಮೆಚ್ಚಿನ ಮಗಳಾಗಿ ಮನೆಯಲ್ಲಿ ಬೆಳೆಯಲಿ'' ಹೀಗೆ ಹೇಳಿ ಆಕಾಶರಾಜನು ರಾಣಿಯ ಕೈಯಲ್ಲಿ ಆ ಮಗುವನ್ನು ಕೊಟ್ಟನು.

ಬಹಳ ಒಳ್ಳೆಯದಾಗಿತ್ತು ಆ ಕನ್ಯಾಮಣಿಯ ಕಾಲುಗುಣ, ಭೂಮಿ ಪುತ್ರಿಯಾದ ಆ ಕನ್ಯಾರತ್ನವು ಆಕಾಶರಾಜನ ಅಂತಃಪುರದಲ್ಲಿ ಕಾಲಿರಿಸಿದ ಕೆಲವೇ ದಿನಗಳಲ್ಲಿ ಧರಣೀ ದೇವಿಯು ನಿಜವಾಗಿ ಗರ್ಭ ಧರಿಸಿದಳು. ನವಮಾಸ ತುಂಬಿದ ಬಳಿಕ ಮುತ್ತಿನಂಥ ಒಂದು ಗಂಡು ಮಗುವಿಗೆ ಜನ್ಮವಿತ್ತಳು. ಆಗ ಮುಗಿಲಿನಿಂದ ಹೂಗಳ ಸುರಿಮಳೆ, ಅಂತರಿಕ್ಷದಲ್ಲಿ ದೇವದುಂದುಭಿಗಳ ಮಂದ್ರನಾದ. ಮಹಾರಾಜನು ಆಗ ಕೊಡದೇ ಇದ್ದುದು ಎರಡೇ. ತನ್ನ ಛತ್ರ ಚಾಮರ ಮಾತ್ರ. ಹನ್ನೆರಡನೆಯ ದಿನ ಮಗುವಿನ ನಾಮಕರಣ ಸಂಸ್ಕಾರವನ್ನು ನೆರವೇರಿಸಿದನು. ಆಕಾಶರಾಜ ಆ ಕಾಲದಲ್ಲಿ ಆ ಮಗುವಿಗೆ ಇಟ್ಟ ಹೆಸರು ವಸುದಾನ.

ಧರಣೀದೇವಿ! ಆಕಾಶರಾಜರ ಪುತ್ರನಾದ ವಸುದಾನನು ನೋಡಲು ಬಹು ಸುಂದರ. ಚಂದ್ರನಂತೆ ಮುಖ. ಮನ್ಮಥನಂತೆ ರೂಪ, ಗುರುಹಿರಿಯರು ಬಂದು ಅವನಿಗೆ ಉಪನಯನ ಸಂಸ್ಕಾರ ಮಾಡಿದರು. ತಂದೆ ಶಸ್ತ್ರವಿದ್ಯಾಭ್ಯಾಸ ಮಾಡಿಸಿದ. ಗುರುಗಳು ಶಾಸ್ತ್ರ ವಿದ್ಯಾಭ್ಯಾಸ ಮಾಡಿಸಿದರು. ಅವನು ಪ್ರೌಢವಯಸ್ಸಿಗೆ ಬಂದಾಗ ಶಸ್ತ್ರದಲ್ಲಿ ಪ್ರವೀಣ. ಶಾಸ್ತ್ರದಲ್ಲಿ ಪಂಡಿತ.

**ಪೃಥ್ವಿದೇವಿ :-** ಪೂಜ್ಯರೇ! ತಾವು ಆಕಾಶರಾಜನ ಮಗನ ಹೆಸರು ವಸುದಾನ ಎಂದು ಹೇಳಿದಿರಿ. ಆದರೆ ಭೂಗರ್ಭದಲ್ಲಿ ಜನಿಸಿದ ಆ ಕನ್ಯಾಮಣಿಯ ಹೆಸರನ್ನು ಏನೆಂದು ಇಟ್ಟಿದ್ದರು?

**ವರಾಹ:-** ದೇವಿ! ಆಕಾಶರಾಜ ಬಹಳ ಬುದ್ಧಿವಂತ. ಅವನಿಂದ ಜನಿಸಿದ ಮಗಳು ಅನಿಂದ್ಯ ಸೌಂದರ್ಯಶಾಲಿನಿ. ಅವಳ ಕಣ್ಣು ಪದ್ಮದಂತೆ, ಬಣ್ಣವು ಪದ್ಮದ ಬಣ್ಣ, ಮುಖವು ಪದ್ಮದಂತೆ, ಕೈಕಾಲುಗಳು ಪದ್ಮಕ್ಕೆ ಸಮಾನವಾಗಿಯೇ ಇದ್ದವು. ಇದರಿಂದ ಅಯೋನಿಜೆಯಾದ ತನ್ನ ಮಗಳಿಗೆ ಪದ್ಮಾವತಿ ಎಂದು ಹೆಸರನ್ನು ಇಟ್ಟನು. ಇದಲ್ಲದೆ ಅವಳನ್ನು ಪದ್ಮಿನಿ, ಪದ್ಮಾಲಯಾ, ಪದ್ಮಾ ಎಂದು ಬೇರೆ ಬೇರೆ ನಾಮಗಳಿಂದ ಕರೆಯುತ್ತಿದ್ದರು. ದಿನಗಳೆದಂತೆ ಪದ್ಮಾವತಿಯು ಪ್ರಬುದ್ಧಳಾಗತೊಡಗಿದಳು. ನವಯೌವ್ವನವು ಅವಳ ಅಂಗಾಂಗಳಲ್ಲಿ ಹರೆಯದ ಸಿರಿಯು ಹೊರಸೂಸುವಂತೆ ಮಾಡಿತ್ತು. ಪ್ರಾಯಪ್ರಬುದ್ಧವಾದ ಅವಳ ಕಾಯಕೈಲಾಸದಲ್ಲಿ ಸೌಂದರ್ಯದ ಸಹಸ್ರಾರವೇ ಅರಳಿ ನಿಂತಂತಾಗಿತ್ತು. ಒಂದು ದಿನ ಆ ಪದ್ಮಿನಿಯು ಗೆಳೆತಿಯರೊಂದಿಗೆ ಉಪವನದಲ್ಲಿ ಸಖಿಯರೊಂದಿಗೆ ವಿಹಾರಕ್ಕೆ ಹೊರಟಿದ್ದಳು. ಆ ವನ ಪ್ರಾಂತದ ಪರಿಸರದ ತುಂಬ ಹೂವಿನ

ಸುಗ್ಗಿ. ವಸಂತದ ವೈಭವ, ಚೈತ್ರ ಚುಂಬನದಿಂದ ಅಲ್ಲಿಯ ಮಣ್ಣಿನ ಕಣ ಕಣಗಳಲ್ಲಿಯೂ, ಹೂ, ಹಣ್ಣು ಕುಡಿ, ಮಿಡಿ, ಹಾಗೂ ಹಸಿರಿನ ಐಸಿರಿ ಕಣ್ಣು ತೆರೆದಿತ್ತು. ಎಂದಿನಿಂದಲೂ ಹೆಂಗಳೆಯರಿಗೆ ಹೂವಿನ ಹುಚ್ಚು. ದುಂಬಿಯಂತೆ ಹೂವಿನ ಹಿಂಡನ್ನು ಅರಿಸಿಕೊಂಡು ಆ ವನಾಂತರದಲ್ಲಿ ಮುನ್ನಡೆಯಿತು ಆ ಸಖಿಯರ ತಂಡ. ಅಕಸ್ಮಾತಾಗಿ ಅಲ್ಲಿಗೆ ದಯಮಾಡಿಸಿತು ನಾರದರ ಸವಾರಿ. ಸಖಿಯರ ಮಧ್ಯದಲ್ಲಿ ಪದ್ಮಾವತಿಯು ಸಾಕ್ಷಾತ್ ಲಕ್ಷ್ಮೀದೇವಿಯಂತೆ ತೋರಿದಳು ನಾರದರಿಗೆ. ಅವಳ ವಿಚಿತ್ರವಾದ ಕಳೆಕಾಂತಿಗಳನ್ನು ಕಂಡು ನಾರದರಿಗೆ ಅತ್ಯಾಶ್ಚರ್ಯವಾಯಿತು. ಅವರು ಕೌತುಕದಿಂದ ಕೇಳಿದರು.

**ನಾರದ:-** ಸುಂದರಿ! ನೀನು ಯಾರು? ನಿನ್ನ ತಂದೆಯ ಹೆಸರು ಏನು? ಸಾಮುದ್ರಿಕ ಶಾಸ್ತ್ರವನ್ನು ನಾನು ಚೆನ್ನಾಗಿ ಬಲ್ಲೆ. ನಿನ್ನ ಕೈಯನ್ನು ತೋರಿಸು.''

**ಪದ್ಮಾವತಿ:-** ಪೂಜ್ಯರೆ! ನಾನು ಆಕಾಶರಾಜನ ಮಗಳು. ಪದ್ಮಾವತಿ ಎಂದು ನನ್ನ ಹೆಸರು. ಕೈಯನ್ನು ನೋಡಿರಿ. ಅದರ ಲಕ್ಷಣವನ್ನು ತಿಳಿದು ಹೇಳಿರಿ'' ಎಂದು ನುಡಿದು ಪದ್ಮಾವತಿಯು ಕಮಲ-ಕೋಮಲವಾದ ತನ್ನ ಕೈಯನ್ನು ನಾರದರ ಮುಂದೆ ನೀಡಿದಳು. ಅದನ್ನು ನಾರದರು ಸೂಕ್ಷ್ಮವಾಗಿ ನೋಡಿದರು. ಅನಂತರ ನುಡಿದರು.

**ನಾರದ:-** ಕಲ್ಯಾಣಿ! ನಾನು ನಿನ್ನ ಕರಕಮಲವನ್ನು ನಿರುಕಿಸಿದೆ. ಮುಖ ಲಕ್ಷಣವನ್ನು ಪರೀಕ್ಷಿಸಿದೆ. ನಿನ್ನ ತಲೆ ಗೋಲಾಕಾರ. ಅದರ ಮೇಲೆ ಅತ್ಯಂತ ಮೃದುವಾದ ಉದ್ದವಾದ ಗುಂಗುರ ಗೂದಲು. ಚಂದ್ರನಿಗಿಂತ ಸುಂದರವಾದ ಮುಖ. ಹೊಂದಾವರೆಯಂತೆ ಅಗಲವಾದ ಅರಳುಗಣ್ಣು. ಹವಳದಂತೆ ತುಟಿ, ಸಂಪಿಗೆಯಂತೆ ಮೂಗು, ಪ್ರಮಾಣ ಬದ್ಧವಾದ ದೇಹದ ನಿಲುವು. ಅಡಿಯಿಂದ ಮುಡಿಯವರೆಗೆ ಚೈತನ್ಯದ ರಸವನ್ನೆ ಚಿಮ್ಮಿಸುವ ಚೆಲುವು. ಇದನ್ನೆಲ್ಲ ನೋಡಿದರೆ ನೀನು ಆ ಸಿರಿದೇವಿಯ ಹೊಸ ಅವತಾರ ಎಂದೇ ನನಗೆ ತೋರುವದು. ನಿನಗೆ ಯೋಗ್ಯನಾದ ವರನೆಂದರೆ ಸಾಕ್ಷಾತ್ ನಾರಾಯಣ ಒಬ್ಬನೇ. ಆ ಶ್ರೀಹರಿಯನ್ನೇ ನೀನು ಕೈ ಹಿಡಿಯುವೆ'' ಎಂದು ಭವಿಷ್ಯವನ್ನು ನುಡಿದು ನಾರದರು ಅಲ್ಲಿಂದ ತೆರಳಿದರು.

## ವೆಂಕಟೇಶ್ವರ ಮತ್ತು ಪದ್ಮಾವತಿಯ ವಿವಾಹ

ಪೂಜ್ಯರಾದ ಭಗವಾನ್ ನಾರದರನ್ನು ಸತ್ಕರಿಸಿ ಬೀಳ್ಕೊಟ್ಟ ಬಳಿಕ ಸಖಿಯರೆಲ್ಲರೂ ಪದ್ಮಾವತಿಗೆ ಹೇಳಿದರು ''ಪ್ರಿಯ ಸಖಿ! ನಡೆ! ಈ ಉಪವನದಲ್ಲಿ ಇನ್ನೂ ಬಣ್ಣ ಬಣ್ಣದ ಅಸಂಖ್ಯ ಸುಗಂಧ ಪುಷ್ಪಗಳು ಇಲ್ಲಿಯ ಬಳ್ಳಿವಾದಗಳ ಮೇಲೆ ಅರಳಿ ನಿಂತಿವೆ. ಆ ಹೂಗಳನ್ನು ಹರಿದುಕೊಂಡು ಬರೋಣ ಮುಂದೆ ನಡೆ'' ಎಂದು. ಪದ್ಮಾವತಿಯೂ ಸಖಿಯರೂ ಆ ವನವೀಥಿಯಲ್ಲಿ ಬಗೆ ಬಗೆಯ ಲತಾಕುಂಜ ನಿಕುಂಜಗಳ ಮೇಲೆ ಅರಳಿ ಮುಗುಳು ನಗೆ ಸೂಸುತ್ತಲಿರುವ ಹೂಗಳನ್ನು ಹರಿಯುತ್ತ ನಡೆದರು. ಅವರ ಹೂವಿನ ಬುಟ್ಟಿಗಳೆಲ್ಲ ತುಂಬಿದ ಬಳಿಕ ಆ ಎಲ್ಲ ಗೆಳತಿಯರು ಒಂದು ಹೆಮ್ಮರದ ಅಡಿಯಲ್ಲಿ ಬಂದು ಕುಳಿತರು.

ಅಷ್ಟರಲ್ಲಿ ಅಲ್ಲಿಗೆ ಅಚ್ಚ ಬಿಳಿಬಣ್ಣದ ಒಂದು ಕುದುರೆಯನ್ನು ಏರಿಕೊಂಡು ಓರ್ವ ಧೀರ ಪುರುಷನು ಆ ವನ್ಯಪ್ರದೇಶಕ್ಕೆ ಆಗಮಿಸಿದನು. ಅವನನ್ನು ಕಂಡು ಕಾಮ ಕೂಡ ನಾಚಿ ಹೋಗಬೇಕು. ಇಂಥ ಸೌಂದರ್ಯ ಆ ಧೀರಪುರುಷನದು. ಅವನ ಚಂಚಲ ಕಣ್ಣುಗಳಲ್ಲಿ

ಮಿಂಚಿನ ಮರಿಗಳೆ ಹೊಂಚು ಹಾಕಿ ಕುಳಿತಂತಿತ್ತು. ಅವನು ಒಂದು ಕೈಯಲ್ಲಿ ಶಾರಂಗ ಎಂಬ ಬಿಲ್ಲನ್ನು ಇನ್ನೊಂದು ಕೈಯಲ್ಲಿ ಬಂಗಾರದ ಬಣ್ಣದ ಬಾಣವನ್ನು ಹಿಡಿದಿದ್ದನು ಕಟಿ ಪ್ರದೇಶದಲ್ಲಿ ಪೀತಾಂಬರ, ಕೈಗಳಲ್ಲಿ ರತ್ನಕಂಕಣ. ತೋಳುಗಳಲ್ಲಿ ಭುಜ ಕಿರೀಟ, ಕೊರಳಲ್ಲಿ ಬಂಗಾರದೆಳೆಯ ಜನಿವಾರ, ಒಟ್ಟಾರೆ ಆ ಕುದುರೆ ಸವಾರನದು ಮೋಹಕರೂಪ. ಮಾದಕ ಮಂದಹಾಸ, ಆಕರ್ಷಕ ನಿಲುವು. ಅಚ್ಚುಕಟ್ಟಾದ ಮೈಕಟ್ಟು, ಅವನನ್ನು ಕಂಡಕೂಡಲೇ ಎಲ್ಲ ಆ ತರಳೆಯರು ಚಕಿತರಾದರು. ಆ ಅಶ್ವಾರೋಹಿ ಅಷ್ಟು ಸುಂದರ.

ಬೇಟೆ ಆಡುವ ಬಯಕೆಯಿಂದ ಆ ಶೈಲಶ್ರೇಣಿಯ ವನಾಂತರದ ವಕ್ಷಸ್ಥಳದಲ್ಲಿ ನುಗ್ಗಿ ಬಂದ ಆ ಬೇಟೆಗಾರನು ಕಾಡುಮಿಕವನ್ನು ಬೆನ್ನಟ್ಟಿ ಅಲ್ಲಿಗೆ ಬಂದಿದ್ದ. ಅಲ್ಲಿಯ ಒಂದು ವಿಶಾಲವಾದ ಹೆಮ್ಮರದ ದಟ್ಟವಾದ ನೆರಳಲ್ಲಿ ಕುಳಿತುಕೊಂಡ. ಚಂಚಲಾಕ್ಷಿಯರ ಗುಂಪಿನ ಸಮೀಪಕ್ಕೆ ಬಂದ, ಬಂದು ಕೇಳಿದ "ಇಲ್ಲಿ ಯಾವುದಾದರೂ ಕಾಡುಮಿಕವು ಬಂದಿದ್ದಿತೆ? ಆಗ ಆ ಚಿಗರೆಗಂಗಳ ಚೆಲುವೆಯರ ಗುಂಪಿನಲ್ಲಿಯ ಓರ್ವ ಚಪಲೆಯು ಎದ್ದುನಿಂತು ನುಡಿದಳು - "ಬಿಲ್ಲು ಬಾಣಗಳನ್ನು ಹಿಡಿದುಕೊಂಡು ಈ ಬನದಲ್ಲಿ ನೀನು ಹೇಗೆ ಬಂದೆ ಏಕೆ ಬಂದೆ? ಇದು ಬೇಟೆಯಾಡುವ ಸ್ಥಳವಲ್ಲ. ನಮ್ಮ ದೊರೆಯಾದ ಆಕಾಶರಾಜನು ನಿರ್ಮಿಸಿದ ಅಭಯಾರಣ್ಯ ಈ ಪ್ರದೇಶದಲ್ಲಿ ಯಾರೂ ಇಲ್ಲಿಯ ಪ್ರಾಣಿಗಳನ್ನು ಕೊಲ್ಲಕೂಡದು. ಇಲ್ಲಿರುವ ಎಲ್ಲ ಪಶು-ಪಕ್ಷಿಗಳು ಅವಧ್ಯ. ಆಕಾಶರಾಜನು ಸುರಕ್ಷಿತವಾಗಿ ಕಾಯ್ದಿಟ್ಟಿರುವ ಈ ವನದಿಂದ ನೀನು ಬೇಗನೆ ಹೊರಗೆ ಹೋಗು" ಚಪಲೆಯ ಈ ಚತುರೋಕ್ತಿಯನ್ನು ಅಲ್ಲಿದ್ದ ಉಳಿದ ಎಲ್ಲ ಹುಲ್ಲೆಗಣ್ಣಿನ ಹರೆಯದ ಹೆಣ್ಣುಗಳು ತಮ್ಮ ಕಲಕಲ ಸದ್ದಿನಿಂದ ಅನುಮೋದಿಸಿದರು.

ಆಗ ಆ ಕುದುರೆಯ ಸವಾರನು ಆ ಯುವತಿಯರ ಮಾತುಗಳನ್ನು ಕೇಳಿ ಕುದುರೆ ಬಿಟ್ಟು ಕೆಳಗಿಳಿದನು. ಮತ್ತು ಅವರಿಗೆ ಕೇಳಿದನು - ನೀವೆಲ್ಲರೂ ಕನ್ಯೆಯರು ಯಾರು? ಈ ನಿಮ್ಮ ಕನ್ಯೆಯರ ಬಳಗದಲ್ಲಿಯೇ ಕಮಲದಂತೆ ಕಾಂತಿಶಾಲಿನಿಯಾದ ಈ ಚೆಲುವೆ ಯಾರು?

**ಯುವತಿಯರು:-** ವೀರಪುರುಷ, ಇವಳು ನಮ್ಮೆಲ್ಲರ ಒಡತಿ. ಹೆಸರು ಪದ್ಮಾವತಿ! ಇವಳು ಆಕಾಶರಾಜನ ಮಗಳು. ವಾಸ್ತವಿಕವಾಗಿ ಇವಳು ಅಯೋನಿಜೆ. ಅರ್ಥಾತ್ ಪೃಥ್ವಿಯ ಒಡಲಿನಿಂದ ಪ್ರಾದುರ್ಭಾವ ಹೊಂದಿ ಬಂದಿದ್ದಾಳೆ ಈ ನಮ್ಮ ಸ್ವಾಮಿನಿ. ಸುಂದರಪುರುಷನೆ! ಇನ್ನು ನೀನು ನಿನ್ನ ಪರಿಚಯವನ್ನು ಮಾಡಿಕೊಡು. ನಿನ್ನ ಹೆಸರು ಏನು? ನಿನ್ನ ವಾಸಸ್ಥಾನ ಯಾವುದು? ನೀನು ಇಲ್ಲಿಗೆ ಬಂದ ಕಾರಣವೇನು?

ಹೀಗೆ ಮುಗುದೆಯರೆಲ್ಲ ತಮ್ಮ ಸುಂದರವಾದ ಮುಖಾರವಿಂದಗಳಲ್ಲಿ ಮಂದಹಾಸದ ಮುಗುಳನ್ನು ಅರಳಿಸಿ ಕೇಳಿದಾಗ ಆ ಧೀರ ಪುರುಷನು ತಾನು ನಸು ನಕ್ಕು ಅವರಿಗೆ ಹೀಗೆ ಉತ್ತರಿಸಿದನು "ಶುಭಾಂಗಿಯರೆ! ನನ್ನ ಹೆಸರು ಒಂದಲ್ಲ ಅನಂತ. ಅಪರಮಿತ. ಆದರೂ ತಪಸ್ವಿಗಳು ನನ್ನ ನಾಮರೂಪಗಳನ್ನು ನೋಡಿ ಎಲ್ಲ ದೃಷ್ಟಿಯಿಂದ ವಿಚಾರಿಸಿ 'ಕೃಷ್ಣ' ಎಂದು ನನ್ನನ್ನು ಕರೆಯುತ್ತಾರೆ. ನನ್ನ ಕೈಯಲ್ಲಿಯ ಈ ಬಿಲ್ಲುಬಾಣಗಳಿಗೆ ಸರಿದೊರೆಯಾಗಿ ನಿಲ್ಲಬಲ್ಲ ಧನುರ್ಬಾಣಗಳು ದೇವತೆಗಳಲ್ಲಿಯೂ ಇಲ್ಲ. ಇದೇ ವೆಂಕಟಾಚಲದ ನಿವಾಸಿಯಾದ ನನ್ನನ್ನು ಇಲ್ಲಿಯ ಜನ ವೀರಪತಿ ಎಂದು ಕರೆಯುತ್ತಾರೆ. ಬೇಟೆಯಾಡಲಿಕ್ಕೆಂದು ನಾನು ಈ ನಿಬಿಡತರವಾದ ಬನಗಳ ಬೀಡಿನಲ್ಲಿ ಹೊಕ್ಕುಬಂದೆ.

ಯಾವುದೋ ಒಂದು ಚಿಗರೆಯನ್ನು ಬೆನ್ನಟ್ಟಿ ನಾನು ಇಲ್ಲಿಗೆ ನೀವಿದ್ದಲ್ಲಿ ಬಂದೆ. ಚಿಗರೆ ಕಣ್ಮರೆಯಾಯಿತು. ಆದರೆ ಈ ಚಿಗರೆಗಂಗಳ ಚೆಲುವೆ ನನ್ನ ಕಣ್ಣಿಗೆ ಕಟ್ಟಿದಳು. ಆ ಹರಿಣವು ಎಲ್ಲಿಯಾದರೂ ಹೋಗಲಿ ಈ ಹರಿಣಾಕ್ಷಿಯಾದರೂ ನನಗೆ ದೊರಕಬಹುದೆ?''

ಆ ಕುದುರೆ ಸವಾರನ ನೇರ ನುಡಿಗಳನ್ನು ಕೇಳಿ ಕೆಂಡದಂತಹ ಕೋಪ ಬಂದಿತು ಆ ಹೆಂಗಳೆಯರ ಹಿಂಡಿಗೆ. ಅವರ ಬಿಗಿದಮುಖ, ಏರಿದ ಹುಬ್ಬು, ನಿರಿಗೆಗಟ್ಟಿದ ಹಣೆ, ಗಂಟುಮೋರೆಗಳನ್ನು ಕಂಡು ಆ ಕೃಷ್ಣನು ಕೂಡಲೇ ತಾನು ಕುದುರೆಯನ್ನು ಏರಿದನು. ಕಾಲಿನಿಂದ ಅಶ್ವವನ್ನು ನೂಕಿದನು. ವೆಂಕಟಾಚಲದ ಕಡೆಗೆ ಮುಖ ಮಾಡಿ ಹೊರಟು ಹೋದನು. ಬೆಟ್ಟದ ಮೇಲೆ ಲಗುಬಗೆಯಿಂದ ಏರಿಬಂದನು. ತಾನಿದ್ದ ಸ್ಥಳಕ್ಕೆ ಬಂದು ಕುದುರೆಯಿಂದ ಇಳಿದನು.

ಈ ಕೃಷ್ಣನು ಬೇರೆ ಯಾರೂ ಅಲ್ಲ. ವೈಕುಂಠಪತಿಯಾದ ಶ್ರೀಮನ್ ನಾರಾಯಣನೇ. ವೆಂಕಟಗಿರಿಯಲ್ಲಿ ಬಂದು ನೆಲೆಸಿದ್ದಾನೆ. ಅಶ್ವದಿಂದ ಅವರೋಹಣ ಮಾಡಿದ ಅವನು ಅಲ್ಲಿಯ ತನ್ನ ರತ್ನಮಂಟಪದಲ್ಲಿ ಪ್ರವೇಶ ಮಾಡಿದನು. ಆ ರತ್ನ ಮಂಟಪದ ಒಳಗಡೆ ಇರುವ ಮೌಕ್ತಿಕ ಮಂದಿರದೆಡೆಗೆ ನೇರವಾಗಿ ನಡೆದ. ಆ ಮುತ್ತಿನ ಮನೆಯ ಮಧ್ಯಭಾಗದಲ್ಲಿರುವ ರತ್ನಸಿಂಹಾಸನದಲ್ಲಿ ಹೋಗಿ ಕುಳಿತುಕೊಂಡ. ಈಗಲೂ ಅವನಿಗೆ ಇನ್ನೂ ಆ ಚಿಗರೆಗಂಗ ಚೆಲುವೆಯದೆ ನೆನಪು. ಇಷ್ಟು ದೂರ ಏರಿ ಬಂದರೂ ಅವನಿಗೆ ಆ ನೀರೆ ತನ್ನ ಇನ್ನೂ ಹತ್ತಿರ ನಿಂತಂತೆಯೇ ಭಾಸವಾಗುತ್ತಿತ್ತು.

ಪದ್ಮಾವತಿಯ ನೇತ್ರಪದ್ಮ, ಹಸ್ತಪದ್ಮ, ಪಾದಪದ್ಮ, ಮುಖಪದ್ಮ, ಪದ್ಮವರ್ಣ ಮುಂತಾದ ಅನೇಕ ಪದ್ಮ ಕುಂಜಗಳೇ ಅವನ ನೇತ್ರಪದ್ಮದ ಎದುರು ಸುಳಿದು ಅವನ ಹೃದಯ ಸರೋವರದ ತುಂಬ ದಳ ದಳವಾಗಿ ಅರಳಿ ನಿಂತುಕೊಂಡಿದ್ದವು. ಹೀಗೆ ಎಷ್ಟೋ ಹೊತ್ತು ನಡೆದಿತ್ತು ಆ ಶ್ರೀಕೃಷ್ಣನ ಪದ್ಮಾವತಿಯ ನಿಧಿಧ್ಯಾಸ.

ಮಧ್ಯಾಹ್ನ ಕಾಲವಾಯಿತು. ನಡುನೆತ್ತಿಯ ಮೇಲೆ ಸೂರ್ಯ, ತಿರೆಯ ಉಡಿಯಲ್ಲೆಲ್ಲ ಕಿಡಿ ಪುಡಿ ಉಗ್ಗಿದಂತಿರುವ ಬಿಸಿ ಬಿಸಿಯಾದ ಬಿಸಿಲು. ಆಗ ಭೋಜನದ ವೇಳೆಯಾಯಿತೆಂದು ಬಕುಲಮಾಲಿಕೆಯು ಅಡಿಗೆಯನ್ನು ಸಿದ್ಧಪಡಿಸಿಕೊಂಡು ಬಂದಳು. ಈ ಕೃಷ್ಣನ ಸಖಿಯಾದ ಬಕುಲ ಮಾಲಿಕೆಯು ಒಬ್ಬ ಅನ್ನಪೂರ್ಣೆ, ಅವಳ ಕೈ ರಸಗೈ. ಅವಳು ಬೇಯಿಸಿದ ಷಡ್ರಸಾನ್ನಗಳೆಲ್ಲ ಈ ಶ್ರೀಕೃಷ್ಣನಿಗೆ ಪಕ್ವಾನ್ನ. ಅವಳು ಅಟ್ಟ ಬರೀ ಅನ್ನವು ಇವನ ಪಾಲಿಗೆ ಮೃಷ್ಟಾನ್ನ. ಈಗ ಅವಳು ಹೊತ್ತಾಯಿತೆಂದು ಲಗು ಬಗೆಯಿಂದ ಒಳ್ಳೆ ಅಡಿಗೆಯನ್ನು ಮಾಡಿ ತೆಗೆದುಕೊಂಡು ಶ್ರೀಕೃಷ್ಣನ ಬಳಿಗೆ ಬಂದಳು.

ಅವಳು ತೆಗೆದುಕೊಂಡು ಬಂದ ಅಡಿಗೆಯ ಮಧುರಪಾಕದ ಸುಗಂಧವು ಘಮ ಘಮಿಸುತ್ತಲಿತ್ತು. ಅವಳು ಬಂದು ವಂದಿಸಿದಾಗ ಅವಳ ಸ್ವಾಮಿ ನಿಮೀಲಿತಲೋಚನ. ಕಣ್ಣುಮುಚ್ಚಿ ಏನನ್ನೋ ಧ್ಯಾನಿಸುತ್ತಿದ್ದಾನೆ. ಅವಳಿಗೆ ಗೊತ್ತಾಗದು. ಇವನ ಹೃದಯದಲ್ಲಿ ನಡೆದ ಹೆಣ್ಣಿನ ಚೆಲ್ಲಾಟ. ಅವಳು ಇನ್ನೂ ಹತ್ತಿರ ಬಂದಳು. ಮಿದುವಾಗಿ ಕೇಳಿದಳು. ''ಒಡೆಯ, ಏಳು ಊಟಕ್ಕೆ ಕೂಡು. ಪುರುಷೋತ್ತಮ, ನಿನಗಾಗಿ ನಾನು ಉತ್ತಮವಾದ ಅಡಿಗೆ ಯನ್ನು ತಯಾರು ಮಾಡಿದ್ದೇನೆ. ಮಾಧವ ತಡಮಾಡಬೇಡ. ಈಗ ಮೊದಲು ಊಟಕ್ಕೆ ಬಾ.

**ಶ್ರೀಕೃಷ್ಣ**:- ಸಖೀ! ನೀನು ಬಂದು ಬಹಳ ಹೊತ್ತಾಯಿತೆ? ನಾನು ಏನನ್ನೋ ಯೋಚಿಸುತ್ತಿದ್ದೆ. ಹಳೆಯ ಕಾಲದ ಹಲವಾರು ಘಟನೆಗಳು ಸ್ಮೃತಿ ಗರ್ಭದ ಆಳವನ್ನು

ಸೀಳಿಕೊಂಡು ಇಂದು ಮೇಲೆ ಬಂದು ಮನದಲ್ಲಿ ಗುದುಮುರಿಗೆ ಹಾಕುತ್ತಲಿವೆ. ಹಿಂದಿನ ಕಥೆಗಳೆಲ್ಲವೂ ಇಂದು ನನ್ನ ಮನಃಪಟಲದಲ್ಲಿ ಸುರುಳಿ ಬಿಚ್ಚತೊಡಗಿವೆ. ಪವಿತ್ರವಾದ ತ್ರೇತಾಯುಗದಲ್ಲಿ ನಾನು ರಾಮನಾಗಿ ಹುಟ್ಟಿದ್ದೆ. ಆಗ ವೇದವತಿ ಎಂಬ ಕನ್ಯಾಮಣಿಯು ನನ್ನ ಯುಗಾಂತರ ಪ್ರಾಣಸಖಿಯಾದ ಲಕ್ಷ್ಮೀದೇವಿಗೆ ಬಹಳ ಸಹಾಯ ಮಾಡಿದಳು. ಆ ಲಕ್ಷ್ಮಿಯು ಆ ಕಾಲದಲ್ಲಿ ಮಿಥಿಲಾ ಪಟ್ಟಣದಲ್ಲಿ ಜನಕನಂದಿನಿಯಾದ ಸೀತೆ ಎಂಬ ಹೆಸರಿನಿಂದ ಅವತರಿಸಿದ್ದಳು. ಶಿವ ಧನುಸ್ಸನ್ನು ಭಂಗ ಮಾಡಿ ನಾನು ವರಿಸಿದೆ ಆ ಜನಕಕುಮಾರಿಯನ್ನು, ನನ್ನೊಡನೆ ಆ ಪ್ರೇಯಸಿಯು ವನಕ್ಕೆ ಬಂದಳು.

ಗೋದಾವರಿಯ ನದಿತೀರದಲ್ಲಿ ಪಂಚವಟಿಯಲ್ಲಿ ಇದ್ದಾಗ ಮಾರೀಚ ಎಂಬ ರಾಕ್ಷಸನನ್ನು ಕೊಲ್ಲಲು ನಾನು ಆಶ್ರಮವನ್ನು ಬಿಟ್ಟು ಹೊರಗೆ ಹೋಗಿದ್ದೆ. ಆಗ ರಾವಣನು ಸೀತೆಯನ್ನು ಅಪಹರಿಸಬೇಕೆಂದು ಆಶ್ರಮದ ಬಳಿಗೆ ಬಂದ. ಅದನ್ನು ನೋಡಿ ಆಶ್ರಮದ ಅಗ್ನಿಶಾಲೆಯಲ್ಲಿ ನನ್ನ ಹೋಮಕುಂಡದಲ್ಲಿದ್ದ ಅಗ್ನಿದೇವನು ರಾವಣನ ಈ ದುಷ್ಟ ಹಂಚಿಕೆಯನ್ನು ತಿಳಿದು ನನ್ನ ಮಡದಿ ಸೀತೆಯನ್ನು ಪಾರುಮಾಡಬೇಕೆಂದು ಪಾತಾಳಕ್ಕೆ ಕರೆದೊಯ್ದು. ತನ್ನ ಮನೆಯಲ್ಲಿರುವ ಸ್ವಾಹಾ ಎಂಬ ತನ್ನ ಹೆಂಡತಿಗೆ ಸೀತೆಯ ರಕ್ಷಣೆಯ ಭಾರವನ್ನು ಹೊರಿಸಿ ಸೀತೆಯ ಸ್ಥಾನದಲ್ಲಿ ವೇದವತಿಯನ್ನು ತಂದಿರಿಸಿದ.

ಹಿಂದೊಮ್ಮೆ ಕಾಮಾಂಧನಾದ ರಾವಣನು ವೇದವತಿಯ ಸೌಂದರ್ಯವನ್ನು ಕಂಡು ಮುಗ್ಧನಾಗಿ ಅವಳನ್ನು ಬಲತ್ಕರಿಸಲು ಕೈ ಹಾಕಿದ. ಆ ಪಾಪಿಯ ಹಸ್ತ ಸ್ಪರ್ಶಮಾತ್ರ ದಿಂದಲೇ ನಾನು ಅಪವಿತ್ರಳಾದೆ ಎಂದು ಭಾವಿಸಿ ಬೆಂಕಿಯಲ್ಲಿ ಹಾರಿಕೊಂಡಳು ಆ ಸಾಧ್ವೀಮಣಿ. ತನ್ನನ್ನು ಮುಟ್ಟಿ ತನ್ನ ದೇಹವನ್ನು ನಾಯಿ ಮುಟ್ಟಿದ ಗಡಿಗೆಯಂತೆ ಅಪವಿತ್ರಮಾಡಿದ ರಾವಣನನ್ನು ಹೇಗಾದರೂ ಮಾಡಿ ಸಂಹರಿಸಬೇಕೆಂದು ಅವಳು ಸಾಯುವಕಾಲಕ್ಕೆ ಪಣತೊಟ್ಟಳು.

ಅಗ್ನಿ ಪ್ರವೇಶ ಮಾಡುವಾಗ ಇದೆಲ್ಲವೂ ಗೊತ್ತು ಈ ಅಗ್ನಿದೇವನಿಗೆ. ಆದುದರಿಂದ ಅವನು ಅದೇ ವೇದವತಿಗೆ ಸೀತೆಯ ಬಟ್ಟೆ ಆಭರಣಗಳನ್ನೆಲ್ಲ ಕೊಟ್ಟು ಉಡಿಸಿ ತೊಡಿಸಿ ಪಂಚವಟಿಯ ಪರ್ಣಶಾಲೆಯಲ್ಲಿ ತಂದು ಕೂಡಿಸಿದನು. ಸೀತೆಯಂತೆಯೇ ಕಾಣುತ್ತಿತ್ತು ಅವಳ ರೂಪ. ಅಗ್ನಿದೇವನು ಮಾಡಿದ ಈ ಎಲ್ಲ ಅವಾಂತರವನ್ನು ಅರಿಯದ ಮುಗ್ಧ ರಾವಣನು ಆ ವೇದವತಿಯನ್ನೇ ಸೀತೆ ಎಂದು ಬಗೆದು ಬಲತ್ಕಾರದಿಂದ ಕರೆದೊಯ್ದು ಲಂಕಾಪಟ್ಟಣದಲ್ಲಿ ಅಶೋಕ ಮರದ ಬುಡದಲ್ಲಿ ತಂದಿರಿಸಿದನು.

ಮುಂದೆ ರಾಮನು ರಾವಣನನ್ನು ಸಂಹರಿಸಿದ ಬಳಿಕ ರಾಮನ ಆಗ್ರಹದಂತೆ ಸೀತೆಯ ಅಗ್ನಿಪರೀಕ್ಷೆಯು ನಡೆಯಿತು. ಸೀತೆಯ ರೂಪದಲ್ಲಿ ಇದ್ದ ವೇದವತಿಯು ರಾಮನ ಸಂಶಯದ ನುಡಿಗಳಿಂದ ನೊಂದು ಬೆಂಕಿಯಲ್ಲಿ ಹಾರಿಕೊಂಡಳು. ಆಗ ಅಗ್ನಿದೇವನು ತನ್ನ ಮನೆಯಲ್ಲಿ ಸ್ವಾಹಾದೇವಿಯೊಂದಿಗೆ ತಮ್ಮ ಮನೆಯ ಜನರಿಂದ ಪರಿಪೂಜಿತಳಾಗಿ ವಾಸಮಾಡಿದ ನಿಜವಾದ ಸೀತಾದೇವಿಯನ್ನು ಅಗ್ನಿಯು ಚಿತೆಯಿಂದ ಮೇಲಕ್ಕೆ ತಂದು ರಾಮನಿಗೆ ಒಪ್ಪಿಸಿದನು. ಮತ್ತು ಹೇಳಿದನು.- ''ಪ್ರಭು ರಾಮಚಂದ್ರ! ಈ ಸೀತೆ ಜಗಜ್ಜನನಿಯಾದ ಸಾಕ್ಷಾತ್ ಲಕ್ಷ್ಮೀದೇವಿ. ಇವಳನ್ನು ರಾವಣನು ಮುಟ್ಟಿಲ್ಲ. ಲಂಕಾಪಟ್ಟಣಕ್ಕೆ ಇವಳು ಬರಲೇ ಇಲ್ಲ. ನನ್ನ ಪ್ರಾರ್ಥನೆಯನ್ನು ಮನ್ನಿಸಿ ಈ ತಾಯಿಯು ನನ್ನ

ಮನೆಯಲ್ಲಿ ಸ್ವಾಹಾದೇವಿಯ ಸೇವೆಯನ್ನು ಸ್ವೀಕರಿಸುತ್ತ ಇಷ್ಟು ದಿನ ನನ್ನ ಮೇಲೆ ದಯದೋರಿ ನಿನ್ನ ಅನುಗ್ರಹದ ದಾರಿ ನೋಡುತ್ತ ಕುಳಿತಿದ್ದಳು. ಈ ರಾವಣನಿಂದ ಸೆಳೆದು ತರಲ್ಪಟ್ಟು ಲಂಕೆಯಲ್ಲಿ ಅಶೋಕ ಮರದ ಕೆಳಗೆ ರಾಕ್ಷಸಿಯರ ಕಾಟಕೀಟಲೆಗಳನ್ನು ಅನುಭವಿಸಿದವಳು ಸೀತೆ ಅಲ್ಲ. ಸೀತೆಯ ರೂಪ ಧರಿಸಿದ ವೇದವತಿ. ಸೀತೆಗಾಗಿ ಇಷ್ಟು ದಿನ ಇಷ್ಟೆಲ್ಲ ಕಷ್ಟನಷ್ಟಗಳನ್ನು ಅನುಭವಿಸಿದ ಈ ವೇದವತಿಯನ್ನು ನೀನು ಮರೆಯಬೇಡ. ಇವಳಿಗೆ ವರದಾನ ಕೊಟ್ಟು ಸಂತೋಷಗೊಳಿಸು. ನಿನ್ನ ಮಡದಿಯಾದ ನಿಜವಾದ ಸೀತೆಯನ್ನು ಇದೀಗ ನನ್ನ ಮನೆಯಿಂದ ಕರೆತಂದಿದ್ದೇನೆ. ಈ ಜಗಜ್ಜನನಿಯನ್ನು ದಯವಿಟ್ಟು ಸ್ವೀಕರಿಸು'' ಎಂದು ಬಿನ್ನವಿಸಿ ನಿಜವಾದ ಜಾನಕೀದೇವಿಯನ್ನು ತಂದು ರಾಮನಿಗೆ ಒಪ್ಪಿಸಿದನು. ರಾಮನಿಗೂ ತನ್ನ ನಿತ್ಯ ಅವಿಯೋಗಿನಿ ಪ್ರೇಯಸಿಯಾದ ಸೀತಾರೂಪ ಲಕ್ಷ್ಮೀದೇವಿಯನ್ನು ಕಂಡು ಸಂತೋಷವಾಯಿತು. ಆನಂದದಿಂದ ಸ್ವೀಕರಿಸಿದನು.

ಆಗ ಆ ಸೀತಾದೇವಿಯು ವೇದವತಿಯ ಕೈ ಹಿಡಿದು ನನ್ನ (ರಾಮನ) ಬಳಿಗೆ ಕರೆತಂದು ಪ್ರಾರ್ಥಿಸಿದಳು - ''ಪ್ರಭು! ಈ ವೇದವತಿಯು ನನಗಾಗಿ ನನ್ನ ರೂಪತಾಳಿ ರಾವಣನಿಂದಲೂ, ರಕ್ಕಸಿಯರಿಂದಲೂ ಪಡಬಾರದ ಕಷ್ಟಗಳನ್ನು ಪಟ್ಟಿದ್ದಾಳೆ. ನನ್ನ ಪಾಲಿನ ದುಃಖವನ್ನೆಲ್ಲ ತಾನೇ ಉಂಡಿದ್ದಾಳೆ. ಇನ್ನು ನನ್ನ ಸುಖದಲ್ಲಿಯೂ ಸ್ವಲ್ಪ ಭಾಗವನ್ನಾದರೂ ನಾನು ಅವಳಿಗೆ ಕೊಡಬೇಡವೆ? ಆದುದರಿಂದ ನೀವು ಅವಳನ್ನು ಪತ್ನಿ ಎಂದು ಅಂಗೀಕರಿಸಬೇಕು.

**ರಾಮ:-** ಪ್ರಿಯ ಜಾನಕಿ! ನಿನಗೆ ಗೊತ್ತಿಲ್ಲವೆ? ಇದು ರಾಮಾವತಾರ, ಏಕ ಬಾಣ, ಏಕ ವಚನ, ಏಕಪತ್ನಿ, ಈಗ ನಾನು ಇವಳನ್ನು ಸ್ವೀಕರಿಸಲಾರೆ. ಆದರೂ ನನ್ನ ಪ್ರೀತಿಯ ಮನದನ್ನೆಯಾದ ನಿನ್ನ ಬಿನ್ನಹವನ್ನು ಧಿಕ್ಕರಿಸಲಾರೆ. ಆದುದರಿಂದ ಕಲಿಯುಗದಲ್ಲಿ ನಿನ್ನ ಮಾತನ್ನು ನಡೆಸುವೆನು. ಅಲ್ಲಿಯವರೆಗೆ ಇವಳು ದೇವತೆಗಳಿಂದ ಪೂಜಿತಳಾಗಿ ಬ್ರಹ್ಮಲೋಕದಲ್ಲಿ ನೆಲಿಸಲಿ, ಅನಂತರ ಪೃಥ್ವಿಯಲ್ಲಿ ಆಕಾಶರಾಜನ ಮಗಳಾಗಿ ಪ್ರಕಟವಾಗಲಿ. ಆಗ ಇವಳನ್ನು ನಾನು ನಿನ್ನ ಮಾತಿನಂತೆ ಪ್ರಾಣಿಗ್ರಹಣ ಮಾಡುವೆನು.'' ಎಂದು ಹೇಳಿ ಸೀತೆಯನ್ನು ಸಂತೈಸಿ ವೇದವತಿಯನ್ನು ಅನುಗ್ರಹಿಸಿದ್ದೆ. ಬಕುಲಾವಲಿಕೆ! ಈಗ ಆ ಕಾಲವು ಸನ್ನಿಹಿತವಾಗಿದೆ.

ಇದೀಗ ನಾನು ಬೇಟೆಗೆ ಹೋಗಿದ್ದೆನಷ್ಟೆ! ಅಲ್ಲಿ ಒಂದು ಉಪವನದಲ್ಲಿ ಆ ವೇದವತಿಯನ್ನು ನೋಡಿದೆ. ನಾರಾಯಣಪುರದ ಆ ಮಹಾರಾಜನಾದ ಆಕಾಶ ರಾಜನ ಮನೆಯಲ್ಲಿ ಭೂಗರ್ಭದಿಂದ ಪ್ರಕಟವಾಗಿ ನೆಲೆಸಿದ್ದಾಳೆ. ಅಂದಿನ ವೇದವತಿ ಇಂದಿನ ಪದ್ಮಾವತಿ. ಇವಳಿಗೆ ಲಕ್ಷ್ಮಿಯದೇ ರೂಪ. ಸೀತೆಯದೇ ಗುಣ, ರುಕ್ಮಿಣಿಯದೇ ಕಾಂತಿ, ಸತ್ಯಭಾಮೆಯದೇ ಧೈರ್ಯ. ಒಟ್ಟಾರೆ ಈಗ ಇವಳೊಬ್ಬಳು ನನಗಾಗಿ ನೆಲದ ಮೇಲೆ ನಡೆದು ಬಂದ ಸಿರಿದೇವಿ. ನಾನು ಹಿಂದೆ ಸೀತಾದೇವಿಗೆ ಕೊಟ್ಟ ವರವದ್ನು ಪೂರ್ತಿಗೊಳಿಸುವ ಕಾಲವು ಬಂದಿದೆ. ಬಕುಲಾವಲಿಯೇ! ನೀನು ಕೂಡ ಈಗ ನಾರಾಯಣಪುರಕ್ಕೆ ಹೋಗು. ಆ ಕನ್ಯೆಯನ್ನು ನೋಡು. ನಾನು ಹೇಳಿದ ಲಕ್ಷಣಗಳೆಲ್ಲವೂ ಉಂಟು ಎಂಬುದನ್ನು ನಿಶ್ಚಿತಪಡಿಸಿಕೊಂಡು ಬಾ.

ಆಗ ಬಕುಲಾಮಾಲಿಕೆಯು ಭಗವಾನ್ ಶ್ರೀಕೃಷ್ಣನಿಗೆ ನಮಿಸಿದಳು. ಹೊಂಬಣ್ಣದಿಂದ ಹೊಳೆಯುವ ಒಂದು ಕುದುರೆಯನ್ನು ಏರಿದಳು. ನಾರಾಯಣಪುರದ ಮಾರ್ಗವನ್ನು

ಕೇಳಿದಳು. ಕೃಷ್ಣ ತೋರಿದ ದಾರಿಯಿಂದ ವೆಂಕಟಗಿರಿಯಿಂದ ಇಳಿದು ಅಶ್ವಾರೂಢಳಾಗಿ ನಾರಾಯಣಪುರಿಗೆ ಹೊರಟಳು. ದಾರಿಯಲ್ಲಿ ಇಕ್ಕೆಲ್ಲದ ಮರ ಬಳ್ಳಿಗಳಲ್ಲಿ ಕುಲುಕುವ ಕೋಗಿಲೆಗಳ ಕಲಾಲಾಪವನ್ನೂ, ಲತಾಕುಂಜಗಳಲ್ಲಿ ಹೂಗಳ ಬಂಡನ್ನು ಉಂಡು ಝೇಂಕರಿಸುವ ಭ್ರಮರಗಳ ಗೀತ ಗುಂಜಾರವವನ್ನೂ ಕೇಳಿ, ಮತ್ತು ಎರಡೂ ಬದಿಗಳಲ್ಲಿ ಕಮಲ ಕಲ್ಹಾರಗಳ ಕಣ್ಣು ತೆರೆದು ಕುಲಕುಲಿಸುವ ಸರೋವರಗಳನ್ನೂ ಹಾಗು ಪಶುಪಕ್ಷಿ ಖಗಮೃಗಗಳನ್ನೂ ನೋಡಿ ಪ್ರಸನ್ನವಾಯಿತು ಬಕುಲಮಾಲಿಕೆಯ ಮನಸ್ಸು. ಅವಳು ಹಾಗೇ ನಡೆಯುತ್ತ ಅರಣಿ ನದಿಯ ಪಶ್ಚಿಮ ತೀರಕ್ಕೆ ಬಂದು ತಲುಪಿದಳು. ಅಲ್ಲಿ ಬಗೆಬಗೆಯ ಹೂಗಳ ಸುಂದರ ಹಂದರಗಳು ಎಲ್ಲೆಡೆಗು ಕಂಗೊಳಿಸುತ್ತಿದ್ದವು. ಅಲ್ಲಿಂದ ಅವಳು ಅಗಸ್ತ್ಯೇಶ್ವರನ ಸಮೀಪಕ್ಕೆ ಬಂದಳು. ಅಲ್ಲಿ ಕುದುರೆಯಿಂದ ಇಳಿದು ಸ್ನಾನಮಾಡಿ ಆ ನದೀ ತೀರದಲ್ಲಿ ಕೊಂಚಹೊತ್ತು ವಿಶ್ರಮಿಸಿದಳು. ಇಷ್ಟರಲ್ಲಿ ರಾಜಭವನದಿಂದ ಅನೇಕ ಸ್ತ್ರೀಯರು ಅಲ್ಲಿ ಹಾದು ಹೊರಟಿದ್ದರು. ಅವರೆಲ್ಲರೂ ಪದ್ಮಾವತಿಯ ಸಖಿಯರೇ, ಅವರನ್ನು ಕಂಡು ಬಕುಲಮಾಲಿಕೆಯು ಅವರ ಬಳಿಗೆ ಹೋದಳು. ಅವರಿಗೆ ಪ್ರಶ್ನೆ ಹಾಕಿದಳು. ''ಮೋಹನಾಂಗಿಯರೇ! ನೀವು ಯಾರು? ನೀವು ಉಟ್ಟ ಬಟ್ಟೆ ತೊಟ್ಟ ಆಭರಣಗಳು ವಿಚಿತ್ರವಾಗಿವೆ. ಎಲ್ಲಿಂದ ಬಂದಿರಿ ನೀವು? ಈ ಸ್ಥಾನದಲ್ಲಿ ನಿಮ್ಮ ಕಾರ್ಯವಾದರು ಯಾವುದು?

ಅವಳ ಪ್ರಶ್ನೆಯನ್ನು ಕೇಳಿ ಆ ಕೋಮಲಾಂಗಿಯರೆಲ್ಲರೂ ನಸುನಗುತ್ತ ನುಡಿದರು.

**ಸ್ತ್ರೀಯರು:-** ನಾವು ಆಕಾಶರಾಜನ ಅಂತಃಪುರದಲ್ಲಿ ಇರುವೆವು. ರಾಜಕುಮಾರಿಯಾದ ಪದ್ಮಾವತಿಯು ನಮ್ಮ ಜೀವದ ಗೆಳತಿ. ಒಂದು ದಿನ ಆ ಪದ್ಮಾವತಿಯನ್ನು ಮುಂದೆ ಮಾಡಿಕೊಂಡು ನಾವೆಲ್ಲರೂ ನಮ್ಮ ರಾಜಧಾನಿಯ ಉಪವನದ ಕಕ್ಷೆಯನ್ನು ದಾಟಿ ತುಸು ದೂರ ವನ ವಿಭಾಗದಲ್ಲಿ ಪುಷ್ಪಾವಚಯಕ್ಕೆಂದು ಪ್ರವೇಶಿಸಿದ್ದೆವು. ಅಲ್ಲಿ ಎಲ್ಲೆಡೆಗೂ ಬಳ್ಳಿವಾಡಗಳ ಮೇಲೆ ಬಗೆಬಗೆಯ ರಂಗ ರುಚಿ ಗಂಧಗಳಿಂದ ಕಂಗೊಳಿಸುವ ಹೂಗಳನ್ನು ನಮ್ಮ ನಮ್ಮ ಬುಟ್ಟಿಗಳ ತುಂಬ ಆಯ್ದು ಕೊಂಡು ಒಂದು ಮರದಡಿಯಲ್ಲಿ ಕುಳಿತುಕೊಂಡೆವು. ಆಗ ಅಲ್ಲಿಗೆ ಓರ್ವ ಅಶ್ವಾರೂಢನಾದ ಸುಂದರ ತರುಣನು ಆಗಮಿಸಿದನು. ಇಂದ್ರನೀಲಮಣಿಯಂತೆ ಶಾಮಸುಂದರ ದೇಹ, ವಕ್ಷಸ್ಥಳದಲ್ಲಿ ಲಕ್ಷ್ಮಿಯ ನಿವಾಸದ ಕುರುಹು ಆದ ಶ್ರೀವತ್ಸಲಾಂಛನ. ಚಂದ್ರನಿಗಿಂತ ಸುಂದರವಾದ ಮುಖ. ತುಟಿಯ ಪುಟದಲ್ಲಿ ಮಂದಹಾಸದ ರಜತರೇಖೆ, ಕಟಿ ಪ್ರದೇಶಗಳಲ್ಲಿ ಒಪ್ಪುವ ಪೀತಾಂಬರ. ಎರಡೂ ಕೈಗಳಲ್ಲಿ ಧನುರ್ಬಾಣ. ತಲೆಯ ಮೇಲೆ ಬಂಗಾರದ ಕಿರೀಟ, ಕೈಗಳಲ್ಲಿ ಕಂಕಣ, ತೋಳುಗಳಲ್ಲಿ ಅಂಗದ, ಕೊರಳಲ್ಲಿ ಮೌಕ್ತಿಕಮಾಲೆ, ಇಂಥ ಸುಂದರವಾದ ಆ ಯುವಕನನ್ನು ಕಂಡಕೂಡಲೇ ನಮ್ಮ ಗೆಳತಿಯಾದ ಪದ್ಮಾವತಿಯು ನಮ್ಮೆಲ್ಲರಿಗೂ- ''ಸಖಿಯರೇ! ಅಗೋ ಅತ್ತ ನೋಡಿರಿ. ಆ ತುರಗಾರೂಢನಾದ ತರುಣನು ಯಾರು? ಎಲ್ಲಿಂದ ಬಂದಿದ್ದಾನೆ? ಎಲ್ಲಿರುತ್ತಾನೆ? ವಿಚಾರಿಸಿರಿ'' ಎಂದಳು. ಪದ್ಮಾವತಿಯ ಸಲಹೆಯಂತೆ ನಾವು ಅವನ ಬಳಿ ಬಂದು ಅವನ ಕುಲಗೋತ್ರಗಳನ್ನು ವಿಚಾರಿಸಿ ಮಾತನಾಡುವಷ್ಟರಲ್ಲಿ ಶ್ಯಾಮಸುಂದರ ಶರೀರಿಯಾದ ಆ ಯುವಕನು ಅಲ್ಲಿಂದ ಒಮ್ಮೆಲೆ ಹೊರಟು ಹೋಗಿಬಿಟ್ಟನು. ಅವನು ಹೋದಕೂಡಲೆ ನಮ್ಮ ಪ್ರಾಣ ಸಖಿಯಾದ ಪದ್ಮಾವತಿಯು ಮೂರ್ಛೆ ಬಂದು ಬಿದ್ದುಕೊಂಡಳು. ನಾವು ಹಾಗೇ ಅವಳನ್ನು ಎತ್ತಿಕೊಂಡು ಮನೆಗೆ ಕರೆತಂದೆವು.

ಅರಮನೆಯಲ್ಲಿ ಆಕಾಶರಾಜ ದಂಪತಿಗಳು ರಾಜಕುಮಾರಿಯ ಈ ಅವಸ್ಥೆಯನ್ನು ಕಂಡು ಗಾಬರಿಯಾದರು. ಜ್ಯೋತಿಷಿಗಳನ್ನು ಬರಮಾಡಿದರು. ಪದ್ಮಾವತಿಯ ಬಗೆಗೆ ಕೇಳಿದರು. ಆಗ ಅಲ್ಲಿಗೆ ಬಂದ ಜ್ಯೋತಿಷಿಗಳಾದ ದೇವಲೋಕದ ಗುರು, ಬೃಹಸ್ಪತ್ಯಾಚಾರ್ಯರು ಪದ್ಮಾವತಿಯ ಮುಖ್ಯ ಲಕ್ಷಣವನ್ನು ನೋಡಿದರು. ಅವಳ ಭವಿಷ್ಯವನ್ನು ಆಗಲೇ ರಾಜದಂಪತಿಗಳಿಗೆ ಹೇಳಿದರು.-ರಾಜೋತ್ತಮ! ನಿನ್ನ ಮಗಳು ಓರ್ವ ವೀರಪುರುಷನನ್ನು ನೋಡಿದ್ದಾಳೆ. ಅಶ್ವಾರೂಢನಾಗಿ ವನಾಂತರದಲ್ಲಿ ಬೇಟೆಗಾಗಿ ಬಂದ ಸುಂದರ ತರುಣನನ್ನು ನೋಡಿ ನಿಮ್ಮ ಮಗಳ ಮನಸ್ಸು ಮುಗ್ಧವಾಗಿದೆ. ಇವಳನ್ನು ಅವನಿಗೆ ಕೊಟ್ಟು ವಿವಾಹ ಮಾಡು. ''ಇವರಿಬ್ಬರ ವಿವಾಹ ಒಂದು ದೈವೀ ಸಂಕಲ್ಪ.''

ಮಹಾರಾಜನನ್ನು ಕುರಿತು ಹೀಗೆ ಭವಿಷ್ಯ ನುಡಿದು ತಮ್ಮ ಸ್ಥಾನಕ್ಕೆ ತೆರಳಿದರು ಆ ಜ್ಯೋತಿ ಮಾರ್ತಂಡರು. ಅನಂತರ ಆಕಾಶರಾಜನು ತನ್ನ ಊರಲ್ಲಿಯ ವೈದಿಕ ಬ್ರಾಹ್ಮಣರನ್ನು ಕರೆಕಳುಹಿಸಿದನು. ಅವರಿಗೆ ಹೇಳಿದನು-ವಿಪ್ರೋತ್ತಮರೆ! ನೀವು ಇಲ್ಲಿಯ ಶಿವಮಂದರಿಕ್ಕೆ ಹೋಗಿ ವೇದಮಂತ್ರಗಳಿಂದ ಮಹಾದೇವಗೆ ರುದ್ರಾಭಿಷೇಕವನ್ನು ಮಾಡಿರಿ. ಅದರಿಂದ ನನ್ನ ಮಗಳ ಅನಿಷ್ಟವು ದೂರವಾಗಲಿ'' ಹೀಗೆ ಬ್ರಾಹ್ಮಣನಿಗೆ ಆಜ್ಞೆ ನೀಡಿ ಆಕಾಶರಾಜನು ನಮ್ಮನ್ನು ಕರೆದು ಮಹಾದೇವರ ಅಭಿಷೇಕ ಹಾಗೂ ಪೂಜೆಗಾಗಿ ಬೇಕಾಗುವ ಸಾಧನ ಸಲಕರಣೆಗಳನ್ನು ತೆಗೆದುಕೊಂಡು ಶಿವಮಂದಿರಕ್ಕೆ ಹೋಗಲು ಆಜ್ಞೆ ನೀಡಿದನು. ಮಹಾರಾಜರ ಆಜ್ಞೆಯಂತೆ ನಾವು ಈಗ ಇಲ್ಲಿಗೆ ಬಂದಿದ್ದೇವೆ. ಶುಭಾಂಗಿಯೇ! ನೀನು ಯಾರು? ಎಲ್ಲಿಂದ ಬಂದಿರುವೆ? ಏನು ಕಾರ್ಯ? ಇಲ್ಲಿಂದ ಮುಂದೆ ಎಲ್ಲಿಗೆ ಹೋಗುವ ವಿಚಾರ ಇದೆಲ್ಲವನ್ನು ತಿಳಿಸು. ನಿನ್ನ ಪರಿಚಯವನ್ನು ಮಾಡಿಕೊಡು. ನೀನು ಆರೋಹಣ ಮಾಡಿದ ಈ ಕುದುರೆಯು ದೇವಲೋಕದ ದಿವ್ಯಾಶ್ವದಂತೆ ತೋರುವದು. ನೀನು ಈಗ ದೇವಲೋಕದಿಂದ ಬಂದಿರುವೆಯಾ?

ತರುಣವಯದ ಆ ತರಳೆಯರ ಸರಳ ಮಾತು ಹಾಗು ನೇರ ಪ್ರಶ್ನೆಗಳನ್ನು ಕೇಳಿ ಬಹಳ ಸಂತೋಷವಾಯಿತು ಬಕುಲಮಾಲಿಕೆಗೆ. ಮಧುರಕಂಠದಲ್ಲಿ ಮೃದುವಾಗಿ ಮಾತನಾಡುತ್ತ ಅವಳು ಉತ್ತರ ನೀಡಿದಳು- ''ಸಖಿಯರೆ! ನಾನು ವೆಂಕಟಾಚಲದಿಂದ ಈ ಕುದುರೆ ಏರಿಕೊಂಡು ಇಲ್ಲಿಗೆ ಬಂದಿದ್ದೇನೆ. ಮಹಾರಾಣಿ ಧರಣೀದೇವಿಯವರನ್ನು ಕಾಣಬೇಕಾಗಿದೆ ನನಗೆ. ಅರಮನೆಯಲ್ಲಿ ನನಗೆ ಮಹಾರಾಣಿಯ ದರ್ಶನವು ಆಗಬಹುದೆ?''

ಅವಳ ಮಾತನ್ನು ಕೇಳಿ ಆ ಕನ್ಯೆಯರು ಉತ್ತರಿಸಿದರು. ''ಶುಭಾಂಗಿಯೇ! ನಾವು ಈಗ ಅರಮನೆಗೆ ಮರಳಿ ಹೊರಟಿದ್ದೇವೆ. ನಮ್ಮೊಡನೆ ಬಂದರೆ ನಿನಗೆ ಮಹಾರಾಣಿಯ ದರ್ಶನವಾಗುವದು.'' ಅನಂತರ ಬಕುಲಮಾಲಿಕೆಯು ಆ ಕನ್ಯಾಮಣಿಗಳೊಂದಿಗೆ ಅರಮನೆಗೆ ಬಂದಳು. ಅಂತಃಪುರದಲ್ಲಿ ಮಹಾರಾಣಿ ಧರಣೀದೇವಿಯನ್ನು ಕಾಣಬೇಕೆಂದು ಸಖಿಯರೊಂದಿಗೆ ಹೇಳಿಕಳುಹಿಸಿದಳು. ಬ್ರಾಹ್ಮಣರೂ ಕನ್ಯಾಮಣಿಗಳೂ ಮಹಾದೇವರ ಗುಡಿಗೆ ಹೋಗಿ ಅಭಿಷೇಕ ಹಾಗು ಪೂಜೆ ಮಾಡಿಸಿಕೊಂಡು ಮನೆಗೆ ಮರಳುವಷ್ಟರಲ್ಲಿ ಪದ್ಮಾವತಿಗೆ ತುಸುಗುಣವಾಗಿ ಕಣ್ಣುತೆರೆದು ಮಾತನಾಡತೊಡಗಿದ್ದಳು. ತಾಯಿ ಧರಣೀದೇವಿಗೆ ಬ್ರಾಹ್ಮಣರಿಂದ ತಾವು ಮಾಡಿಸಿದ ರುದ್ರಾಭಿಷೇಕ ಕೂಡಲೇ ಫಲ ಕೊಟ್ಟಿತು ಎಂದು ಸಮಾಧಾನವೆನಿಸಿತು. ಅವಳು ಮಗಳ ಬಳಿಯಲ್ಲಿಯೇ ಬಂದು ಕುಳಿತು

ಪ್ರೀತಿಯಿಂದ ಅವಳ ಬೆನ್ನನ್ನು ನೇವರಿಸುತ್ತ ನುಡಿದಳು- "ವತ್ಸೆ! ನಿನಗೆ ಏನು ಬೇಕು? ನಿನ್ನ ಮನಸ್ಸಿನಲ್ಲಿ ಏನಿದೆ ಹೇಳು? ನಿನಗೆ ಇಷ್ಟವಾದುದನ್ನು ನಾನು ಮಾಡುತ್ತೇನೆ. ಈ ಪ್ರಪಂಚದಲ್ಲಿ ನಿನಗೆ ಅತ್ಯಂತ ಪ್ರಿಯತಮವಾದ ವಸ್ತು ಯಾವುದು?

**ಪದ್ಮಾವತಿ:-** ತಾಯಿ! ಪ್ರಪಂಚದಲ್ಲಿ ಸರ್ವೋತ್ತಮನಾದ ಪರಬ್ರಹ್ಮನೇ ನನಗೆ ಪ್ರಿಯತಮ! ಆ ಜಗದೀಶ್ವರನೆ ನನಗೆ ಅತ್ಯಂತ ಇಷ್ಟತಮ, ಪೂಜ್ಯತಮ, ಪ್ರಿಯತಮ, ಬ್ರಹ್ಮಾದಿ ದೇವತೆಗಳು ಯಾವನ ದರ್ಶನಕ್ಕಾಗಿ ಕಾದಿರುವರೊ ಯಾರು ಈ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿರುವನೊ ಮತ್ತು ಈ ಚರಾಚರಾತ್ಮಕವಾದ ಪ್ರಪಂಚದಲ್ಲಿ ಹುಟ್ಟು, ಅಳಿವು, ಉಳಿವು, ನೋವು, ನಲಿವು, ಬಂಧ, ಬಿಡುಗಡೆಗೆ ಯಾವನು ಏಕಮಾತ್ರ ಕಾರಣನಾಗಿರುವನೋ ಅಂಥ ಪರಾತ್ಪರ ವಸ್ತುವನ್ನೆ ನಾನು ಪಡೆಯಬೇಕೆಂದು ಬಯಸಿದ್ದೇನೆ. ಅದನ್ನು ನೀನು ಗೊತ್ತು ಹಚ್ಚಿ ಅದಕ್ಕೆ ನನ್ನನ್ನು ಒಪ್ಪಿಸು.

**ಧರಣೀದೇವಿ:-** ಮಗಳೆ! ನೀನು ಹೇಳಿದ ಆ ಪರಾತ್ಪರ ವಸ್ತುವನ್ನು ನಾನು ಹೇಗೆ ಕಂಡುಹಿಡಿಯಲಿ? ಅವನ ಭಕ್ತರ ಲಕ್ಷಣಗಳನ್ನಾದರೂ ಹೇಳು.

**ಪದ್ಮಾವತಿ:-** ಅಮ್ಮ! ಆ ಭಗವಂತನ ಭಕ್ತರ ಲಕ್ಷಣಗಳನ್ನು ಹೇಳುತ್ತೇನೆ ಕೇಳು. ವೇದವೇದಾಂತಗಳ ಸ್ವಾಧ್ಯಾಯದಲ್ಲಿ ತತ್ಪರರಾಗಿ ವೇದೋಕ್ತ ಕರ್ಮಾನುಷ್ಠಾನಗಳನ್ನು ಮಾಡುತ್ತ ಸಂತತವೂ ಭಗವಂತನ ಚಿಂತನ ಮಾಡುವವರು ಏಕಾಂತ ಭಕ್ತರು ಎಂದು ಕರೆಯಲ್ಪಡುತ್ತಾರೆ. ಅವರು ನುಡಿಯುವದು ಸತ್ಯ, ನಡೆಯುವದು ಧರ್ಮ. ಇನ್ನೊಬ್ಬರ ದೋಷವನ್ನು ಅವರು ಎಂದೂ ಎತ್ತಿ ತೋರಿಸುವದಿಲ್ಲ, ಪರನಿಂದೆಯಿಂದ ದೂರ. ಪರದ್ರವ್ಯವನ್ನು ಎಂದಿಗೂ ಅವರು ಮುಟ್ಟರು. ಪರಸ್ತ್ರೀಯರು ಎಷ್ಟೇ ಸುಂದರಿಯರಾಗಿದ್ದರೂ ಆ ವಿಷಯದಲ್ಲಿ ಅವರು ಅಂಧರು, ಎಲ್ಲ ಪ್ರಾಣಿಗಳ ಮೇಲೆ ದಯಾಯುಕ್ತರು. ದೇವದೇವೋತ್ತಮನಾದ ವಿಷ್ಣುವೇ ಸರ್ವೋತ್ತಮ ಎಂದು ತಿಳಿದು ಸದಾ ಸರ್ವದಾ ಅವನ ಧ್ಯಾನಗಾನಗಳಲ್ಲಿ ಆಸಕ್ತರು, ಸದಾಚಾರಸಂಪನ್ನರಾಗಿ ಆ ಭಗವಂತನು ಸರ್ವಾಂತರ್ಯಾಮಿ ಎಂದು ಬಗೆದು ನಿರಂತರವೂ ಅವನ ಆರಾಧನೆ, ಉಪಾಸನೆ ಪೂಜನ, ಭಜನಗಳನ್ನು ಮಾಡುವ ಭಕ್ತರನ್ನೆ ವೈಷ್ಣವ ಭಕ್ತರೆಂದು ಗುರುತಿಸು. ಇಂಥ ವಿಷ್ಣುಭಕ್ತರು ಮಾತ್ರ ಆ ಪರಮಾತ್ಮನ ಪರಮ ಪ್ರಸಾದವನ್ನು ಪಡೆಯಲು ಅರ್ಹರಾಗಿರುವರು. ಇಂಥ ಭಕ್ತರಿಂದ ಮಾತ್ರ ಲಭ್ಯನಾದ ಆ ನಾರಾಯಣನ ಹೊರತು ಬೇರೆ ಯಾರನ್ನೂ ವರಿಸಲಾರೆ. ಶ್ಯಾಮಸುಂದರನಾದ ಆ ಭಗವಾನ್ ಶ್ರೀ ವಿಷ್ಣುವನ್ನು ಪಾಣಿಗ್ರಹಣ ಮಾಡಬೇಕೆಂದು ನಾನು ಮನಸ್ಸಿನಲ್ಲಿ ಸಂಕಲ್ಪವನ್ನು ಮಾಡಿಬಿಟ್ಟಿದ್ದೇನೆ.

ಅದಕ್ಕಾಗಿ ಹಗಲಿರುಳು ಅಚ್ಯುತ ಅನಂತ, ನಾರಾಯಣ, ಶ್ರೀಕೃಷ್ಣ, ವಾಸುದೇವ ಎಂದು ಮುಂತಾಗಿ ಅವನ ನಾಮಗಳನ್ನು ನೆನೆಯುತ್ತಲೇ ಇರುತ್ತೇನೆ. ಅವನನ್ನು ಹರಿ, ಕೃಷ್ಣ ಅಚ್ಯುತ ಮುಂತಾಗಿ ಅವನ ನಾಮಗಳನ್ನು ನೆನೆಯುತ್ತಲೇ ಇರುತ್ತೇನೆ. ಅವನನ್ನು ಹೊಂದುವ ಬಯಕೆಯಿಂದಲೇ ನಾನು ಜೀವಧಾರಣ ಮಾಡಿದ್ದೇನೆ. ಆ ಭಗವಂತನೊಡನೆ ನನಗೆ ವಿವಾಹ ಸಂಬಂಧವು ಒದಗಿ ಬರುವಂತೆ ನೀವೆಲ್ಲರೂ ಪ್ರಯತ್ನವನ್ನು ಮಾಡಿರಿ."

ಇಷ್ಟು ಹೇಳಿ ಪದ್ಮಾವತಿ ಮೊದಲಿನಂತೆ ಮೌನ ತಾಳಿದಳು. ಮಗಳ ಮಾತುಗಳನ್ನು ಕೇಳಿ ತಾಯಿ ಧರಣೀದೇವಿಗೆ ದೊಡ್ಡ ಚಿಂತೆಯಾಯಿತು. ನನ್ನ ಮಗಳಾದ ಪದ್ಮಾವತಿಯು

ಬಯಸುವದು ಜಗತ್ತಿಗೆಲ್ಲ ಸೃಷ್ಟಿ ಸ್ಥಿತಿ ಸಂಹಾರಾದಿಗಳನ್ನು ಮಾಡುವ ಪರಬ್ರಹ್ಮ ಸ್ವರೂಪಿಯಾದ ಸಾಕ್ಷಾತ್ ನಾರಾಯಣನನ್ನು. ನಾವು ಹುಲುಮಾನವರು. ಆ ಜಗದೀಶ್ವರನ ಸಂಬಂಧವು ನಮಗೆ ಒದಗಿ ಬರುವದು ಎಂತು? ಈ ಆಲೋಚನೆಯು ದುರಂತ ಚಿಂತಾರೂಪವನ್ನು ತಾಳಿ ಅವಳ ಅಂತರಂಗವನ್ನು ಕೊರೆಯತೊಡಗಿತು. ಇದಕ್ಕೆ ಏನು ಉಪಾಯ? ಎಂದು ಆಲೋಚಿಸುವಷ್ಟರಲ್ಲಿ ಕನ್ಯಾಮಣಿಗಳೊಂದಿಗೆ ಬಕುಲಾಮಾಲಿಕೆಯು ಅಂತಃಪುರಕ್ಕೆ ಆಗಮಿಸಿದಳು. ಮತ್ತು ಅಗಸ್ತ್ಯೇಶ್ವರನ ಅಭಿಷೇಕ ಪೂಜಾದಿಗಳನ್ನು ಮುಗಿಸಿಕೊಂಡು ಬ್ರಾಹ್ಮಣರೂ ಮರಳಿ ಬಂದರು. ಅವರೆಲ್ಲರಿಗೂ ರಾಣಿಯು ಸ್ವಾಗತ ಸತ್ಕಾರಾದಿಗಳನ್ನು ಮಾಡಿ ಸುಗ್ರಾಸ ಭೋಜನವನ್ನು ಹಾಕಿಸಿ ವಸ್ತ್ರದಾನ ದಕ್ಷಿಣಾದಿ ಗಳನ್ನಿತ್ತು ಸಂತೋಷಪಡಿಸಿ ಅವರನ್ನೆಲ್ಲ ಮನೆಗೆ ಕಳಿಸಿಕೊಟ್ಟಳು. ಅನಂತರ ಧರಣೀದೇವಿಯು ಬಕುಲ ಮಾಲಿಕೆಯ ಬಳಿಗೆ ಬಂದು ಅವಳನ್ನು ಸ್ವಾಗತಿಸಿ ಆಸನದ ಮೇಲೆ ಕುಳ್ಳಿರಿಸಿ ಅತಿಥಿ ಸತ್ಕಾರವನ್ನೆಲ್ಲ ಮಾಡಿದ ಬಳಿಕ ಕೇಳಿದಳು- ''ಕಲ್ಯಾಣಿ! ನೀನು ಯಾರು? ಎಲ್ಲಿಂದ ಬಂದೆ? ನನ್ನ ಕಡೆಗೆ ನಿನಗೆ ಏನು ಕೆಲಸ? ಎಲ್ಲವನ್ನು ನಿಜ ಹೇಳು.''

ಬಕುಲಮಾಲಿಕೆ:- ರಾಜ ಮಹಿಷಿ! ನಾನು ಇದೀಗ ವೆಂಕಟಾಚಲದಿಂದ ಬರುತ್ತಿದ್ದೇನೆ. ನನ್ನ ಹೆಸರು ಬಕುಲಮಾಲಿಕೆ. ನನ್ನ ಒಡೆಯನಾದ ಭಗವಾನ್ ನಾರಾಯಣನು ಯಾವಾಗಲೂ ಈ ವೆಂಕಟಾಚಲದಲ್ಲಿ ವಾಸಿಸುತ್ತಾನೆ. ನಾನು ಅವನ ಪರಿಚಾರಿಕೆ. ಅವನನ್ನು ನಾನು ಶ್ರೀಕೃಷ್ಣ ಎಂದು ಕರೆಯುತ್ತೇನೆ. ಈ ಶ್ರೀಕೃಷ್ಣನು ಒಂದು ದಿನ ಅಚ್ಚ ಬಿಳಿ ಬಣ್ಣದ ಉಚ್ಚೈಶ್ರವದಂಥ ಕುದುರೆಯನ್ನು ಏರಿ ವೆಂಕಟಗಿರಿಯ ಸಮೀಪದ ಕಾಡಿನಲ್ಲಿ ಬೇಟೆಯಾಡಲಿಕ್ಕೆ ಹೋಗಿದ್ದ. ಮೃಗಗಳನ್ನು ಬೆನ್ನಟ್ಟಿಕೊಂಡು ಆರಣಿ ನದಿಯ ತೀರಕ್ಕೆ ಬಂದು ಅಲ್ಲಿ ಆ ನದೀ ತೀರದ ಸುಂದರವಾದ ಹೂವಿನ ಹಂದರಗಳಲ್ಲಿ ಹೂ ಕೊಯ್ಯುತ್ತಿರುವ ಕೆಲವು ಕನ್ಯಾಮಣಿಗಳನ್ನು ನೋಡಿದ. ಆ ಚಂಚಲಾಕ್ಷಿಯರ ಗುಂಪಿನ ನಡುವೆ ಒಂದು ಮಿಂಚಿನ ಮೂರುತಿಯಂತಿದ್ದ ಬಂಗಾರ ಬಣ್ಣದ ಒಂದು ಹೆಣ್ಣು ಹುಡುಗಿ ಅವನ ಕಣ್ಣು ಕೋರೈಸಿತು. ಮನಸ್ಸು ಅವಳಿಗಾಗಿ ಹಾರೈಸಿತು. ಬನದೇವತೆಯಂತಿದ್ದ ಆ ಬಂಗಾರ ಬಣ್ಣದ ಬಾಲೆಯನ್ನು ಪಡೆಯಬೇಕೆಂಬ ಬಯಕೆಯಿಂದ ಅವನು ಆ ಕನ್ಯಾಮಣಿಗಳನ್ನು ಕುರಿತು- ''ಸುಕುಮಾರಿಯಾದ ಈ ಕುಮಾರಿ ಯಾರು?'' ಎಂದು ಕೇಳಿದ. ಅವನ ಈ ಪ್ರಶ್ನೆಗೆ ಕನ್ಯೆಯರು- ''ವೀರಪುರುಷ,! ಇವಳು ನಮ್ಮ ಒಡತಿ ಹಾಗು ನಮ್ಮ ಗೆಳತಿ, ಆಕಾಶರಾಜನ ಮಗಳು'' ಎಂದು ಉತ್ತರ ಹೇಳಿದರು.

ಇಷ್ಟು ಸಮಾಚಾರವನ್ನು ತಿಳಿದುಕೊಂಡು ಕೂಡಲೇ ಆ ಕೃಷ್ಣನು ತನ್ನ ಬಿಳಿ ಬಣ್ಣದ ಕುದುರೆಯನ್ನು ಏರಿಕೊಂಡು ವೆಂಕಟಾಚಲಕ್ಕೆ ಬಂದನು. ಸ್ವಾಮಿ ಪುಷ್ಕರಣಿಯ ದಂಡೆಯ ಮೇಲೆ ಇರುವ ತನ್ನ ಮನೆಗೆ ಬಂದು ನನ್ನನ್ನು ಕರೆದು ಹೇಳಿದನು- ''ಬಕುಲಮಾಲಿಕೆ! ನೀನು ಈಗ ಆಕಾಶರಾಜನ ನಗರಕ್ಕೆ ಹೋಗು. ಅಂತಃಪುರದಲ್ಲಿ ಪಟ್ಟರಾಣಿ ಧರಣೀದೇವಿಯನ್ನು ಕಾಣು. ಮೊದಲು ಕುಶಲ ಪ್ರಶ್ನೆ ಮಾಡಿ ಅನಂತರ ನನಗಾಗಿ ಪದ್ಮನಯನೆಯಾದ ಪದ್ಮಾವತಿಯನ್ನು ನನಗೆ ಮದುವೆ ಮಾಡಿ ಕೊಡಲಿಕ್ಕೆ ಬಿನ್ನವಿಸು. ರಾಜರಾಣಿಯರ ಅಭಿಪ್ರಾಯವನ್ನು ತಿಳಿದುಕೊಂಡು ಬಾ.'' ಎಂದು ಆದೇಶವಿತ್ತಿದ್ದಾನೆ. ಮಹಾರಾಣಿಯೇ! ಆ ಶ್ರೀಕೃಷ್ಣ ಪರಮಾತ್ಮನು ನನಗೆ ಹೀಗೆ ಆಜ್ಞೆಯನ್ನು ನೀಡಿದ ಬಳಿಕ

ನಾನು ಅವನ ಅಪ್ಪಣೆಯಂತೆ ಇಲ್ಲಿಗೆ ಬಂದಿದ್ದೇನೆ, ಅವನ ಸಂದೇಶವನ್ನು ನಿಮಗೆ ಮುಟ್ಟಿಸಿದ್ದೇನೆ. ನಿಮ್ಮ ಕನ್ಯಾರತ್ನದ ಸಲುವಾಗಿ ವರಪಕ್ಷದವರ ಕಡೆಯಿಂದ ನಮ್ಮ ಬೇಡಿಕೆಯನ್ನು ನಿಮ್ಮ ಮುಂದೆ ಮಂಡಿಸಿದ್ದೇನೆ. ನೀವು ಮಹಾರಾಜರು ಹಾಗು ಮಂತ್ರಿ ಪರಿವಾರದೊಂದಿಗೆ ವಿಚಾರಮಾಡಿ ನಿಮಗೆ ಸರಿದೋರಿದಂತೆ ಮಾಡಬಹುದು.''

ಬಕುಲಮಾಲಿಕೆಯ ಮಾತುಗಳನ್ನು ಕೇಳಿ ಪಟ್ಟರಾಣಿ ಧರಣೀದೇವಿಗೆ ಪರಮ ಪ್ರಮೋದವಾಯಿತು. ಅವಳು ಕೂಡಲೇ ಹೋಗಿ ತನ್ನ ಪತಿ ಆಕಾಶರಾಜನಿಗೆ ಸಮಾಚಾರಗಳನ್ನೆಲ್ಲ ಸಂತಸದಿಂದ ಅರುಹಿದಳು. ಆಗ ಮಹಾರಾಜನು ಮಂತ್ರಿ ಪುರೋಹಿತರನ್ನು ಬರಮಾಡಿಕೊಂಡನು. ಹಿಗ್ಗು ಗರಿಗೆದರಿ ನಸುನಗುತ್ತ ನುಡಿದನು. ''ನನ್ನ ಮಗಳಾದ ಪದ್ಮಾವತಿಯು ಅಯೋನಿಜೆ ಅರ್ಥಾತ್ ಭೂಗರ್ಭ ಸಂಭೂತೆ ಎಂಬುದನ್ನು ನಿಮಗೆಲ್ಲರಿಗೂ ಗೊತ್ತು. ಈ ನನ್ನ ಕನ್ಯಾಮಣಿಯನ್ನು ವೆಂಕಟಾಚಲ ನಿವಾಸಿಯಾದ ಭಗವಾನ್ ನಾರಾಯಣನು ತನಗೆ ಮದುವೆ ಮಾಡಿಕೊಡಬೇಕೆಂದು ಯಾಚಿಸಿದ್ದಾನೆ. ಇಂದು ನನ್ನ ಮನೋರಥವು ಪೂರ್ಣವಾಯಿತು. ನಾನು ಧನ್ಯ. ನಮ್ಮ ಕುಲವೇ ಮಾನ್ಯ ಎಂದು ನನ್ನ ಸ್ವಂತ ಅಭಿಪ್ರಾಯ. ನಿಮ್ಮೆಲ್ಲರ ವಿಚಾರವು ಏನಿದೆ ತಿಳಿಸಿರಿ.''

ಮಹಾರಾಜನ ಮಾತುಗಳನ್ನು ಕೇಳಿ ಮಂತ್ರಿ ಪುರೋಹಿತ ಎಲ್ಲರೂ ಆನಂದ ಭರಿತರಾದರು. ಮತ್ತು ರಾಜನಿಗೆ ಹೇಳಿದರು- ''ಭೂಪತಿಯೆ! ನೀನು ಹೇಳಿದ ಸಂಗತಿ ಸತ್ಯವಾದರೆ ನಾವೆಲ್ಲರೂ ಕೃತಾರ್ಥರು. ದೇವಾಧಿದೇವನಾದ ವಿಷ್ಣು ಭಗವಂತನು ಯಾಚಿಸ ಬೇಕಾದರೆ ನಿನ್ನ ಮಗಳು ಮಾನವೀ ಅಲ್ಲ. ಸಾಕ್ಷಾತ್ ಲಕ್ಷ್ಮೀದೇವಿಯ ಅವತಾರವೇ ಆಗಿರಬೇಕು. ಆದುದರಿಂದ ಈಗ ನೀನು ಯಾವ ವಿಚಾರವನ್ನು ಮಾಡದೆ ಆ ಶ್ರೀ ಕೃಷ್ಣನಿಗೆ ಸಮರ್ಪಿಸು. ಈ ವಿಷಯದಲ್ಲಿ ತಡಮಾಡಬೇಡ. ''ಶುಭಸ್ಯಶೀಘ್ರಂ'' ಕೂಡಲೇ ದೇವಗುರು ಬೃಹಸ್ಪತ್ಯಾಚಾರ್ಯರನ್ನು ಬರಮಾಡಿಸು. ವಿವಾಹ ನಿಶ್ಚಯ ಮಾಡು.''

ಅತ್ಯಂತ ಆನಂದದಿಂದ ಒಪ್ಪಿಕೊಂಡ ಮಹಾರಾಜ ಮಂತ್ರಿಪುರೋಹಿತರ ಈ ಸಲಹೆಗೆ. . ದೇವಲೋಕದಿಂದ ಕೂಡಲೇ ಕರೆಕಳುಹಿಸಿದ ಅಮರಗಣದ ಆಚಾರ್ಯರನ್ನು. ಆಹ್ವಾನ ತಲುಪಿದ ತಕ್ಷಣ ಭೂಲೋಕಕ್ಕೆ ಬಂದರು ಬೃಹಸ್ಪತ್ಯಾಚಾರ್ಯರು. ಅವರಿಗೆ ಆದರ ಸತ್ಕಾರಮಾಡಿ ಮಹಾರಾಜನು ಪ್ರಶ್ನಿಸಿದನು. ''ಗುರುವರ್ಯರೇ! ಮೃಗಶಿರಾ ಕನ್ಯೆಯ ಜನ್ಮ ನಕ್ಷತ್ರ, ಶ್ರವಣಾ ವರನ ನಕ್ಷತ್ರ. ಇವೆರಡೂ ವಧೂವರರ ಲಗ್ನಕುಂಡಲಿಗಳನ್ನು ಪರೀಕ್ಷಿಸಿ ಹೇಳಿರಿ.''

**ಬೃಹಸ್ಪತಿ:-** ಎರಡೂ ನಕ್ಷತ್ರಗಳಲ್ಲಿ ಸರ್ವರೀತಿಯಿಂದಲೂ ಹೊಂದಾಣಿಕೆ ಚೆನ್ನಾಗಿಯೇ ಇದೆ. ವರ ಹಾಗು ಕನ್ಯೆಯರ ಭಾವೀ ಜೀವನದಲ್ಲಿ ಸುಖ ಸೌಭಾಗ್ಯಗಳ ಅಭಿವೃದ್ಧಿಗಾಗಿ ಉತ್ತರಾ ಫಾಲ್ಗುಣೀ ನಕ್ಷತ್ರವು ಸರ್ವಶ್ರೇಷ್ಠವೆಂದು ಜ್ಯೋತಿಷಿಗಳ ಮತ. ಆದುದರಿಂದ ವೈಶಾಖ ಮಾಸದ ಉತ್ತರ ಫಲ್ಗುಣಿ ನಕ್ಷತ್ರದಂದು ಈ ವಧೂ ವರರ ವಿವಾಹ ಮಂಗಲಕಾರ್ಯವು ವಿಧಿಪೂರ್ವಕವಾಗಿ ನೆರವೇರಲಿ.''

ದೇವಗುರುಗಳ ಈ ವಚನವನ್ನು ಕೇಳಿ ರಾಜದಂಪತಿಗಳಿಬ್ಬರಿಗೂ ಪರಮ ಪ್ರಹರ್ಷ ವಾಯಿತು. ಅವರು ಭಗವಾನ್ ಶ್ರೀಕೃಷ್ಣನಿಂದ ಕನ್ಯೆಯ ಬೇಡಿಕೆಯನ್ನು ಹೊತ್ತು ತಂದ ಬಕುಲ ಮಾಲಿಕೆಯನ್ನು ರಾಜೋಚಿತ ರೀತಿಯಿಂದ ಗೌರವಿಸಿ ಹೇಳಿದರು-''ಶುಭಾಂಗಿಯೇ !

ನೀನು ಜಗದೊಡೆಯನಾದ ಕೃಷ್ಣರೂಪಿ ನಾರಾಯಣನಿಗೆ ತಿಳಿಸು. ವೈಶಾಖ ಮಾಸದಲ್ಲಿ ಉತ್ತರಾ ಫಾಲ್ಗುಣ ನಕ್ಷತ್ರದಂದು ನಾವು ನಮ್ಮ ಕುಮಾರಿಯಾದ ಪದ್ಮಾವತಿಯನ್ನು ನಿನಗೆ ವಿಧಿಪೂರ್ವಕವಾಗಿ ಧಾರೆ ಎರೆದು ಮದುವೆಮಾಡಿ ಕೊಡುತ್ತೇವೆ. ಅದಕ್ಕಾಗಿ ನೀನು ಎಲ್ಲ ವೈವಾಹಿಕ ಸಿದ್ಧತೆಗಳನ್ನು ಮಾಡಿಕೊಂಡು ಸಕಾಲಕ್ಕೆ ಇಲ್ಲಿಗೆ ಆಗಮಿಸಬೇಕು'' ಎಂದು.

ಕೃಷ್ಣನ ಸೇವಿಕೆಯೂ ಸಖಿಯೂ ಆದ ಬಕುಲ ಮಾಲಿಕೆಗೆ ವಿವಾಹ ಮಂಗಲ ಮುಹೂರ್ತವನ್ನು ತಿಳಿಸಿ ರಾಜನು ಅವಳೊಡನೆ ಶುಕಾಚಾರ್ಯರನ್ನು ಜತೆ ಮಾಡಿ ವೆಂಕಟಾಚಲಕ್ಕೆ ಕಳಿಸಿಕೊಟ್ಟನು. ಇತ್ತ ಇಂದ್ರ ವಾಯು ಮೊದಲಾದ ದೇವತೆಗಳನ್ನು ಕರೆದು ಕೊಂಡು ಬರಲು ತನ್ನ ಚಿರಂಜೀವಿಯಾದ ವಸುದಾನನನ್ನು ಕಳಿಸಿಕೊಟ್ಟನು. ವಿಶ್ವ ಕರ್ಮನನ್ನು ಕರೆಸಿ ತನ್ನ ರಾಜಧಾನಿಯನ್ನು ಬರಲಿರುವ ಅತಿಥಿ ಅಭ್ಯಾಗತರಿಗೆ ಇಳಿದುಕೊಳ್ಳಲಿಕ್ಕೂ ಉಳಿದುಕೊಳ್ಳಲಿಕ್ಕೂ ಅನುಕೂಲವಾಗುವಂತೆ ನಗರವನ್ನು ಶೃಂಗರಿಸಲು ಹೇಳಿದನು. ವಿಶ್ವಕರ್ಮನು ಕೆಲವೇ ಸಮಯದಲ್ಲಿ ಆ ನಾರಾಯಣ ಪುರವನ್ನು ವಿವಾಹ ಮಹೋತ್ಸವಕ್ಕೆ ತಕ್ಕುದಾದ ರೀತಿಯಲ್ಲಿ ಸರ್ವರೀತಿಯಿಂದಲೂ ಅಲಂಕರಿಸಿ ಸಜ್ಜುಗೊಳಿಸಿದನು.

ಇತ್ತ ಬಕುಲ ಮಾಲಿಕೆಯು ಅವಧೂತ ವರೇಣ್ಯರಾದ ಶುಕಾಚಾರ್ಯರ ಜೊತೆಗೆ ವೆಂಕಟಾಚಲಕ್ಕೆ ಬಂದಳು. ಅಲ್ಲಿ ಶ್ರೀಮಾನ್ ನಾರಾಯಣನು ಲಕ್ಷ್ಮೀದೇವಿಯೊಂದಿಗೆ ರತ್ನ ಸಿಂಹಾಸನದ ಮೇಲೆ ವಿರಾಜನಾಗಿದ್ದ. ಅವನನ್ನು ನೋಡಿ ಬಕುಲಮಾಲಿಕೆಯು ಪ್ರಸನ್ನವಾದ ಮನಸ್ಸಿನಿಂದ ನುಡಿದಳು. ''ಪ್ರಭು! ನಾನು ನಿನ್ನ ಕಾರ್ಯವನ್ನು ಪೂರ್ಣ ಮಾಡಿಕೊಂಡು ಬಂದಿದ್ದೇನೆ. ನೀನು ನನಗೆ ಒಪ್ಪಿಸಿದ ಕಾರ್ಯವು ಯಶಸ್ವಿಯಾಗಿದೆ. ಅದೆಲ್ಲವನ್ನು ನಿನಗೆ ನಿವೇದನೆ ಗೈಯಲು ಅವಧೂತ ಶಿರೋಮಣಿಗಳಾದ ಶುಕಮುನಿಗಳು ನಿನ್ನಲ್ಲಿಗೆ ಬಂದಿದ್ದಾರೆ.''

ಆಗ ಶುಕಾಚಾರ್ಯರು ಭಗವಂತನಿಗೆ ನಮಸ್ಕಾರ ಮಾಡಿ ಕೈ ಮುಗಿದು ಕೇಳಿದರು. ''ಲಕ್ಷ್ಮೀಪತಿಯೇ! ಭೂದೇವಿಯ ಮಗಳಾದ ಪದ್ಮಾವತಿಯು ನನ್ನ ಮುಖಾಂತರ ನಿನಗೆ ಒಂದು ಸಂದೇಶವನ್ನು ಹೇಳಿ ಕಳಿಸಿದ್ದಾಳೆ. ಅದನ್ನು ತಿಳಿಸಲಿಕ್ಕೆಂದೆ ನಾನು ಇಲ್ಲಿಗೆ ಬಂದದ್ದು. ''ಲಕ್ಷ್ಮೀಪತಿಯೇ! ನೀನು ನನ್ನನ್ನು ಅಂಗೀಕರಿಸು. ನನ್ನ ಪ್ರಾಣಿಗ್ರಹಣವನ್ನು ಮಾಡಿ ಅನುಗ್ರಹಿಸು. ನಾನು ಯಾವಾಗಲು ನಿನ್ನ ಭಕ್ತಳು, ಸೇವಕಿ, ಹಗಲಿರುಳು ನಿನ್ನ ನಾಮಸ್ಮರಣೆಯನ್ನು ಮಾಡುತ್ತಲೇ ಇರುತ್ತೇನೆ. ನನ್ನ ತಾಯಿ ತಂದೆಗಳು ನಿನಗೆ ನನ್ನನ್ನು ಧಾರೆ ಎರೆದು ಕೊಡಲು ಉತ್ಸುಕರಾಗಿದ್ದಾರೆ. ದಯಮಾಡಿ ನನ್ನನ್ನು ಸ್ವೀಕರಿಸು. ನನ್ನನ್ನು ನೀನು ಕೃತಾರ್ಥಳನ್ನಾಗಿ ಮಾಡಬೇಕು.''

ಶುಕ ಯೋಗಿಗಳ ಈ ಪ್ರಿಯವಚನವನ್ನು ಕೇಳಿ ಪರಮ ಸಂತುಷ್ಟನಾದ ಭಗವಂತನಾದ ಶ್ರೀಕೃಷ್ಣ. ಆನಂದದ ಮಂದಹಾಸವನ್ನು ಮಾಡುತ್ತ ಹೇಳಿದ. ''ಅವಧೂತನಾದ ಶುಕಮುನಿಯೆ! ಈಗ ಈ ವಿವಾಹದ ಒಸಗೆಯನ್ನು ಹೊತ್ತು ತಂದ ನೀನು ಸೀತೆಯ ಸಂದೇಶ ವನ್ನು ಹೊತ್ತು ತಂದ ಹನುಮಂತನಂತೆ ನನಗೆ ಅತ್ಯಂತ ಸಂತೋಷವನ್ನುಂಟು ಮಾಡಿರುವೆ. ಈಗ ನೀನು ನನ್ನ ಸಂದೇಶವನ್ನು ಮರಳಿ ಪದ್ಮಾವತಿಗೆ ಒಯ್ದು ಮುಟ್ಟಿಸು- ''ದೇವಿ! ಶ್ರೀನಾರಾಯಣನಾದ ನಾನು ದೇವತಾ ಪರಿವಾರದೊಂದಿಗೆ ಸಕಾಲದಲ್ಲಿ ಆಗಮಿಸಿ ನಿನ್ನನ್ನು ಮಂಗಲಕರವಾದ ವಿವಾಹ ವಿಧಿಪೂರ್ವಕವಾಗಿ ಪ್ರಾಣಿಗ್ರಹಣ ಮಾಡುವೆನು.

ನನ್ನ ಪ್ರೀತಿಯ ಕುರುಹು ಆಗಿ ನನ್ನ ಕೊರಳಲ್ಲಿಯ ಈ ವನಮಾಲೆಯನ್ನು ಶುಕಾಚಾರ್ಯರೊಡನೆ ನಿನಗಾಗಿ ಕಳಿಸಿಕೊಟ್ಟಿದ್ದೇನೆ'' ಎಂದು ಹೇಳಿ ಶ್ರೀಕೃಷ್ಣನು ತನ್ನ ಕೊರಳಲ್ಲಿಯ ವನಮಾಲೆಯನ್ನು ಪದ್ಮಾವತಿಗೆ ಕೊಡಲಿಕ್ಕೆಂದು ಶುಕಮುನಿಗಳ ಕೈಯಲ್ಲಿ ಇರಿಸಿದನು.

ತಮ್ಮ ಯೋಗಶಕ್ತಿಯಿಂದ ಮನೋವೇಗದಲ್ಲಿ ಚಲಿಸಬಲ್ಲ ಆ ಶುಕಾಚಾರ್ಯರು ವೆಂಕಟಾಚಲದಿಂದ ಹೊರಟು ಒಂದು ಕ್ಷಣದಲ್ಲಿ ಆಕಾಶರಾಜನ ಅಂತಃಪುರಕ್ಕೆ ಬಂದು ಇಳಿದರು. ಭಗವಂತನು ಕೊಟ್ಟ ತುಳಸೀಮಾಲಾ ರೂಪವಾದ ವನಮಾಲೆಯನ್ನು ರಾಜಕುಮಾರಿಯಾದ ಪದ್ಮಾವತಿಗೆ ಪ್ರಣಾಮಪೂರ್ವಕವಾಗಿ ಕೊಟ್ಟು ಆ ಪರಮಾತ್ಮನ ವೈವಾಹಿಕ ಆಶ್ವಾಸನೆಯನ್ನು ನಿಶ್ಚಿತ ಆಗಮನದ ವಾರ್ತೆನಯ್ನು ತಿಳಿಸಿದರು. ಪದ್ಮಾವತಿಯು ಅದನ್ನು ಕೇಳಿ ಸಂತಸದುಂಬಿದಳು. ಶ್ರೀಕೃಷ್ಣನ ಪ್ರೀತಿಯ ಕಾಣಿಕೆಯಾದ ವನಮಾಲೆಯನ್ನು ತೆಗೆದುಕೊಂಡು ಮುಡಿದು ಕೊಂಡಳು. ಭಗವಂತನ ಶುಭಾಗಮನವನ್ನು ಪ್ರತೀಕ್ಷಿಸತೊಡಗಿದಳು.

ಇತ್ತ ಆಕಾಶರಾಜನು ಕೂಡ ಆನಂದ ತುಂಬಿದ. ಮಹಾರಾಣಿಯು ಸಂತೋಷ ಸಾಗರದಲ್ಲಿ ಈಸಾಡುತ್ತಿದ್ದಳು. ದಂಪತಿಗಳಿಬ್ಬರು ಚಂದ್ರನನ್ನು ಕರೆಕಳಿಸಿ ಹೇಳಿದರು- ''ಸುಧಾಕರ! ಭಗವಾನ್ ಶ್ರೀವಿಷ್ಣುವಿಗೆ ಇಷ್ಟವಾದ ಮೃಷ್ಟಾನ್ನ ಯಾವುದು? ಪಕ್ವಾನ್ನ ಯಾವುದು? ಎನ್ನುವದು ನಿನಗೆ ಚೆನ್ನಾಗಿ ಗೊತ್ತು. ಆದುದರಿಂದ ಈಗ ನೀನು ಭಗವಂತನ ಭೋಗಕ್ಕಾಗಿ ಒಳ್ಳೊಳ್ಳೆ ರಸಪಾಕಗಳನ್ನು ಸಿದ್ಧಗೊಳಿಸು.'' ಹೀಗೆ ಆಕಾಶರಾಜನು ಎಲ್ಲ ವ್ಯವಸ್ಥೆನ್ನು ಚೆನ್ನಾಗಿ ಮಾಡಿ ತಾನು ವೆಂಕಟಾಚಲಪತಿಯ ಶುಭಾಗಮನದ ಮಾರ್ಗ ಪ್ರತೀಕ್ಷೆಯನ್ನು ಮಾಡುತ್ತ ಇದ್ದನು. ತನ್ನ ಎಲ್ಲ ಪುತ್ರ, ಪುತ್ರಿ, ಮಿತ್ರ ಕಲತ್ರ ಮಂತ್ರಿ ಸೇನಾಪತಿ ಬಂಧು ಬಾಂಧವರ ಪರಿವಾರದೊಂದಿಗೆ ಆ ಮುಕುಂದನ ಆಗಮನವನ್ನು ಎದುರು ನೋಡುತ್ತ ಪ್ರಸನ್ನ ಮನಸ್ಸಿನಿಂದ ಕುಳಿತುಕೊಂಡನು.

ಭಗವಂತನ ನಿರಂತರ ಸಂಗಾತಿಯಾದ ಲಕ್ಷ್ಮೀದೇವಿಯು ಪರಮಾತ್ಮನ ಆದೇಶದಂತೆ ತನ್ನ ಗೆಳತಿಯರನ್ನೆಲ್ಲ ಕರೆದು ವಿವಾಹದ ಸಿದ್ಧತೆಗಳನ್ನು ಮಾಡಲು ಆಜ್ಞೆ ಮಾಡಿದಳು. ಲಕ್ಷ್ಮಿಯ ಆಜ್ಞೆ ಆದ ಬಳಿಕ ಕೇಳುವದೇನು? ನಾನು ಮುಂದೆ ತಾ ಮುಂದೆ ಎಂದು ಸೇವೆಯ ಸೌಭಾಗ್ಯಕ್ಕಾಗಿ ನುಗ್ಗಿ ಬಂದರು ಎಲ್ಲ ಸುರೋತ್ತಮರ ಸುಂದರಿಯರು.

ಸರಸ್ವತಿಯು ಚಾಮರ ಹಿಡಿದಳು ಒಂದು ಬದಿಯಲ್ಲಿ. ಇನ್ನೊಂದು ಬದಿಯಲ್ಲಿ ಗೌರಿಯ ಚಾಮರ ಸೇವೆ, ಶಚೀದೇವಿಯು ಛತ್ರವನ್ನು ಎತ್ತಿ ಹಿಡಿದಳು. ಸಾಕ್ಷಾತ್ ಶ್ರುತಿದೇವಿಯು ರೇಶ್ಮೆಯ ಬಟ್ಟೆಯನ್ನು ಕೈಯಲ್ಲಿ ಹಿಡಿದುಕೊಂಡು ಭಗವಂತನ ಬಳಿಯಲ್ಲಿ ನಿಂತುಕೊಂಡಳು. ಸ್ಮೃತಿದೇವಿಯು ಅನೇಕ ವಸ್ತು ಒಡವೆ, ಅಲಂಕಾರಾಭರಣಗಳನ್ನು ತೆಗೆದುಕೊಂಡು ಬಂದಳು. ಪ್ರೀತಿದೇವಿಯು ಸುಗಂಧಿ ಎಣ್ಣೆಯನ್ನು ಹಿಡಿದು ನಿಂತಳು. ಧೃತಿದೇವಿಯು ಕನ್ನಡಿ ತೋರಿಸಿದಳು. ಶಾಂತಿದೇವಿಯು ಕೃಷ್ಣನ ಲಲಾಟಕ್ಕೆ ಕಸ್ತೂರಿಯ ತಿಲಕವನ್ನಿಟ್ಟಳು. ಜಯಾ-ವಿಜಯಾ ಎಂಬ ಲಕ್ಷ್ಮಿಯ ಸಖಿಯರು ಗಾಳಿ ಬೀಸತೊಡಗಿದರು.

ಹೀಗೆ ಎಲ್ಲ ದೇವಿಯರು ಅಲ್ಲಿ ಉಪಸ್ಥಿತರಾದುದನ್ನು ನೋಡಿ ಲಕ್ಷ್ಮೀದೇವಿಯು ತಾನೇ ಎದ್ದು ಎಣ್ಣೆಯ ಬಟ್ಟಲವನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಅಡಿಯಿಂದ ಮುಡಿಯವರೆಗೆ ಕೃಷ್ಣನಿಗೆ ಎಣ್ಣೆಯನ್ನು ಅಂಗಾಂಗಗಳಿಗೆಲ್ಲ ಪೂಸಿಸಿದಳು. ಆಕಾಶಗಂಗಾ ಮೊದಲಾದ ಪುಣ್ಯ ತೀರ್ಥಗಳಿಂದ ತುಂಬಿಕೊಂಡು ಬಂದ ಬಂಗಾರದ ಬಿಂದಿಗೆಗಳನ್ನು

ತನ್ನ ಕೈಯಲ್ಲಿ ತೆಗೆದುಕೊಂಡು ಒಂದೊಂದಾಗಿ ಆ ಶ್ರೀಕೃಷ್ಣನ ತಲೆಯ ಮೇಲೆ ಪವಿತ್ರ ಜಲವನ್ನು ಸರಿದು ಕುಂಭಾಭಿಷೇಕಗೈದು ಅಭ್ಯಂಗ ಸ್ನಾನವನ್ನು ಮಾಡಿಸಿದಳು.

ಅನಂತರ ಹಣೆಗೆ ಚಂದನ ತಿಲಕವಿಟ್ಟು ರೇಶ್ಮೆಯ ಪೀತಾಂಬರ ಉಡಿಸಿ, ಆಭರಣ ಗಳನ್ನೆಲ್ಲ ತೊಡಿಸಿ ತಲೆಯ ಮೇಲೆ ರತ್ನಖಚಿತವಾದ ಕಿರೀಟವನ್ನು ಇಡಿಸಿದಳು. ಹತ್ತೂ ಬೆರಳುಗಳಿಗೂ ಬಂಗಾರದ ಉಂಗುರಗಳನ್ನು ಏರಿಸಿದಳು. ಅಭ್ಯಂಗ ಹಾಗೂ ಅಲಂಕಾರದ ವಿಧಿ ಎಲ್ಲವು ಮುಗಿದ ಬಳಿಕ ಧೃತಿದೇವಿಯು ಭಗವಂತನಿಗೆ ಕನ್ನಡಿಯನ್ನು ತೋರಿಸಿದಳು.

ಅನಂತರ ವಿಷ್ಣುವು ಸ್ವಯಂ ಊರ್ಧ್ವ ಪುಂಡ್ರಧಾರಣ ಮಾಡಿ ಲಕ್ಷ್ಮಿಯೊಂದಿಗೆ ಗರುಡಾರೂಢನಾದನು. ಇದೇ ವೇಳೆಯಲ್ಲಿ ಬ್ರಹ್ಮದೇವ, ಮಹಾದೇವ, ಇಂದ್ರ, ವರುಣ, ಯಮ, ವಾಯು, ಕುಬೇರ ಮೊದಲಾದ ಎಲ್ಲ ದೇವತೆಗಳು ಅವನ ಸೇವೆಗೆ ಉಪಸ್ಥಿತರಾದರು. ಈ ಎಲ್ಲ ದೇವತೆಗಳಿಂದಲೂ, ವಶಿಷ್ಠ ಮೊದಲಾದ ಮುನಿಪುಂಗವರಿಂದಲೂ ಸನಕ ಸನಂದನಾದಿ ಯೋಗೀಶ್ವರರಿಂದಲೂ, ಅನ್ಯಾನ್ಯ ದೇವದಾನವ ಮಾನವ ಜಾತಿಯ ಭಗವದ್ಭಕ್ತ ರಿಂದಲೂ ಒಡಗೂಡಿಕೊಂಡು ಭಗವಾನ್ ನಾರಾಯಣನು ನಾರಾಯಣಪುರಕ್ಕೆ ಹೊರಟನು.

ಭಗವಂತನ ಈ ಮೆರವಣಿಗೆಯ ಮುಂಭಾಗದಲ್ಲಿ ದೇವ ದುಂದುಭಿಗಳ ಮೊಳಗು, ಹಿಂಬದಿಯಲ್ಲಿ ಮುನಿ ಮಹರ್ಷಿಗಳ ಸ್ವಸ್ತಿವಾಚನ, ವೇದಮಂತ್ರಗಳ ಮಂಜುಘೋಷ, ಅಕ್ಕಪಕ್ಕದಲ್ಲಿ ತುಂಬುರು ನಾರದ ಮೊದಲಾದ ಗಂಧರ್ವರ ಗುಣಗಾನ. ಎದುರು ಭಾಗದಲ್ಲಿ ಅಪ್ಸರೆಯರ ನರ್ತನ. ಇದರ ಹಿಂದೆ ಅಸಂಖ್ಯ ಭಗವನ್ನಾಮ ಜಪವನ್ನು ಮಾಡುವ ಭಗವದ್ಭಕ್ತರಾದ ನರನಾರಿಯರ ಗುಂಪು, ಕೊನೆಯಲ್ಲಿ ಬಕುಲಮಾಲಾ ಹಾಗೂ ಉಳಿದ ದೇವತಾ ಸ್ತ್ರೀಯರು,

ಹೀಗೆ ಪ್ರಚಂಡ ಸಾಗರದಂತೆ ವರಪಕ್ಷದ ಈ ದಿಬ್ಬಣವು ಆಕಾಶರಾಜನ ರಾಜಧಾನಿಯನ್ನು ಪ್ರವೇಶ ಮಾಡಿತು. ಇಷ್ಟರಲ್ಲಿ ಇತ್ತ ವಧೂಪಕ್ಷದವರು ಕೂಡ ಈ ಮೊದಲೇ ಐರಾವತದ ಮೇಲೆ ಬಂಗಾರದ ಅಂಬಾರಿಯ ಹಾಕಿ ಅದರಲ್ಲಿ ಪದ್ಮಾವತಿಯನ್ನು ಕೂಡಿಸಿಕೊಂಡು ಪುರ ಪ್ರದಕ್ಷಿಣೆ ಮಾಡಿ ಗೋಪುರ ದ್ವಾರದ ಬಳಿಬಂದು ನಿಂತುಕೊಂಡಿದ್ದರು. ಗರುಡಾರೂಢನಾಗಿ ಶ್ರೀಹರಿಯು ರಾಜಧಾನಿಯ ಅಗಸೆಯ ಬಾಗಿಲ ಬಳಿ ಬಂದಾಗ ಅಲ್ಲಿಯೇ ಐರಾವತದ ಮೇಲೆ ಕುಳಿತು ಕೊಂಡ ಪದ್ಮಾವತಿಯನ್ನು ಕಣ್ಣು ತುಂಬ ನೋಡಿದನು. ಪದ್ಮಾವತಿಯಾದರೂ ಕೂಡ ಭಗವಂತನ ದರ್ಶನದಿಂದ ಆನಂದ ಪುಲಕಿತಳಾಗಿ ದೃಷ್ಟಿಯನ್ನು ತಗ್ಗಿಸಿ ಅವನ ಚಾರು ಚರಣಗಳ ಮೇಲೆ ತನ್ನ ನೇತ್ರಕಾಂತಿಯ ಕಿರಣಗಳನ್ನು ಈಡಾಡಿದಳು. ಎರಡೂ ವಾಹನ ಗಳಾದ ಗರುಡ ಗಜೇಂದ್ರರೂ ಇನ್ನು ಹತ್ತಿರ ಹತ್ತಿರಕ್ಕೆ ಬಂದರು. ಆಗ ಶ್ರೀಕೃಷ್ಣನು ತನ್ನ ಕೊರಳಲ್ಲಿರುವ ಹೂವಿನ ಹಾರವನ್ನು ತೆಗೆದು ತನ್ನ ನೀಳದೋಳುಗಳನ್ನು ನೀಡಿ ಐರಾವತದ ಮೇಲೆ ಕುಳಿತ ಪದ್ಮಾವತಿಯ ಕೊರಳಲ್ಲಿ ಹಾಕಿದನು. ಆಗ ಪದ್ಮಾವತಿಯು ಕೂಡ ತನ್ನ ಕೈಯಲ್ಲಿ ಹಿಡಿದುಕೊಂಡು ಬಂದಿರುವ ಕುಸುಮ ಮಾಲೆಯನ್ನು ನಾರಾಯಣನ ಕಂಠದಲ್ಲಿ ಹಾಕಿದಳು. ಅನಂತರ ಇಬ್ಬರೂ ತಮ್ಮ ತಮ್ಮ ವಾಹಗಳನ್ನಿಳಿದು ವಿವಾಹ ಮಂಟಪದಲ್ಲಿ ಪ್ರವೇಶ ಮಾಡಿದರು.

ಆ ಬಳಿಕ ಬ್ರಹ್ಮದೇವರು ಮುಂದೆ ನಿಂತುಕೊಂಡು ಅಂಕುರಾರೋಪಣ ಮೊದಲು ಮಾಡಿಕೊಂಡು ಸೀಮಾಂತಪೂಜೆ, ವರಪೂಜೆ, ವಾಜನಿಶ್ಚಯ, ಅಕ್ಷತಾರೋಪಣ,

ವಿವಾಹಹೋಮ, ಲಾಜಾಹೋಮ, ಕಂಕಣಬಂಧನ, ವಧೂಪ್ರವೇಶ, ಮುಂತಾದಎಲ್ಲ ವೇದೋಕ್ತ ವಿವಾಹ ವಿಧಿಯನ್ನು ಯಥಾಸಾಂಗವಾಗಿ ನೆರವೇರಿಸಿದರು.

ಹೀಗೆ ನಾಕುದಿನ ಒಳ್ಳೆ ವೈಭವದಿಂದ ವಿವಾಹ ಮಹೋತ್ಸವವು ಸಾಂಗವಾಗಿ ಸಂಪನ್ನವಾಯಿತು. ಬಂದ ಎಲ್ಲ ಬೀಗರಿಗೂ ಭಕ್ತರಿಗೂ ಲೋಕ ಲೋಕಾಂತರಗಳಿಂದ ಆಗಮಿಸಿದ ಅತಿಥಿ, ಅಭ್ಯಾಗತರಿಗೂ, ಎಲ್ಲ ಬಡ ಬಗ್ಗರಿಗೂ, ಪಂಡಿತ ಪಾಮರರಿಗೂ, ಆವಿಪಾಲ, ಗೋಪಾಲರಾದಿಯಾಗಿ ಸಮಸ್ತ ಮಾನವರಿಗೂ ಪ್ರಾಣಿಗಳಿಗೂ ಪ್ರತಿದಿವಸವೂ ತಿಂದಷ್ಟು ಮೃಷ್ಟಾನ್ನ, ಉಂಡಷ್ಟು ಪಕ್ವಾನ್ನ, ಬಯಸಿದಂತೆ ಬಗೆಬಗೆಯ ತಿಂಡಿ, ತೀರ್ಥ, ಪಾನೀಯ ಪ್ರಸಾದಗಳು ಸಮೃದ್ಧವಾಗಿ ಯಥೇಚ್ಛವಾಗಿ ದೊರಕುತ್ತಿದ್ದವು. ಎಲ್ಲರೂ ಎಲ್ಲ ವಿಧವಾದ ಮೃಷ್ಟಾನ್ನ ಪಕ್ವಾನ್ನ ತಿಂದು ತೇಗಿ ತೃಪ್ತಿಯಿಂದ ತಣಿದು ಆಕಾಶರಾಜನ ಆತಿಥ್ಯವನ್ನು ಹೊಗಳಿ ಹಾಡಿದರು. ಇದಲ್ಲದೆ ರಾಜನು ಎಲ್ಲ ಬೀಗರ ವೃಂದದವರಿಗೂ ವಿದ್ವಾಂಸರಿಗೂ ಬ್ರಾಹ್ಮಣರಿಗೂ ಬಂಗಾರದ ನಾಣ್ಯಗಳ ದಾನ ದಕ್ಷಿಣೆಯನ್ನು ಪರ್ಯಾಪ್ತ ಪ್ರಮಾಣದಲ್ಲಿ ನೀಡಿ ಸಂತೋಷ ಪಡಿಸಿದನು. ಹೀಗೆ ನಾಕು ದಿನ ಅದ್ದೂರಿಯಿಂದ ಮದುವೆಯು ದೊಡ್ಡ ಹಬ್ಬದಂತೆ ವೈಭವದೊಡನೆ ನೆರವೇರಿದ ಬಳಿಕ ಬ್ರಹ್ಮದೇವರು ಆಕಾಶರಾಜನ ಅನುಮತಿಯನ್ನು ಪಡೆದು, ನಾರಾಯಣಪುರದಿಂದ ನಿಬ್ಬಣವನ್ನು ಹೊರಡಿಸಿದರು.

ಗರುಡನ ಮೇಲೆ ನಾರಾಯಣನು ಪದ್ಮಾವತಿ ಹಾಗು ಲಕ್ಷ್ಮಿದೇವಿಯರನ್ನು ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಇಂದ್ರ, ಚಂದ್ರ, ಬ್ರಹ್ಮ, ರುದ್ರ, ವಾಯು, ವರುಣ ಮುಂತಾದ ದೇವತೆಗಳೊಂದಿಗೆ ಅಲ್ಲಿಂದ ಹೊರಟನು. ಆಕಾಶರಾಜನು ಮಗಳು ಅಳಿಯಂದಿರಿಗಾಗಿ ಕೊಟ್ಟ ವರದಕ್ಷಿಣೆ ವರೋಪಚಾರ ಹಾಗು ಕಾಣಿಕೆಗಳಿಗೆ ಯಾರಿಗೂ ಲೆಕ್ಕವೇ ಸಿಗಲಿಲ್ಲ. ಬೆಳ್ಳಿ, ಬಂಗಾರ, ಮುತ್ತು, ರತ್ನ, ವಜ್ರ ವೈಡೂರ್ಯದ ಬಗೆ ಬಗೆಯ ಆಭರಣ ಅಲಂಕಾರಗಳಲ್ಲದೆ ಅಸಂಖ್ಯ ಪ್ರಮಾಣದಲ್ಲಿ ನಗದು ನಿಷ್ಕನಾಣ್ಯಗಳನ್ನು ನೀಡಿದನು. ಬಂಗಾರದ ಕಡಾವಿಗಳಲ್ಲಿ ಬೆಳ್ಳಿಯ ದೊಡ್ಡ ದೊಡ್ಡ ಪಾತ್ರೆಗಳಲ್ಲಿ ಅಕ್ಕಿ, ಬೇಳೆಕಾಳು, ತುಪ್ಪ, ಜೇನುತುಪ್ಪ, ಹಣ್ಣುಹಂಪಲು, ಸಕ್ಕರೆ ಮುಂತಾದ ಸಂಸಾರದ ಸಾಮಾನುಗಳನ್ನಲ್ಲದೆ, ಸಹಸ್ರಾರು ರೇಶ್ಮೆಯ ಬಟ್ಟೆ ಸಾವಿರಾರು ದಾಸ ದಾಸಿಯರು, ಲಕ್ಷಾವಧಿ ಹಸುಗಳು. ಅಚ್ಚ ಬಿಳಿಬಣ್ಣದ ಹತ್ತುಸಾವಿರ ಕುದುರೆಗಳು, ಒಂದು ನೂರು ಆನೆಗಳು, ಪ್ರೀತಿಯ ಕಾಣಿಕೆ ಎಂದು ಮಗಳು ಅಳಿಯಂದಿರಿಗೆ ಅರ್ಪಿಸಿದನು.

ಪದ್ಮಾವತಿ ಹಾಗು ಲಕ್ಷ್ಮೀದೇವಿಯೊಂದಿಗೆ ಗರುಡನ ಹೆಗಲಮೇಲೆ ಆಸೀನನಾದ ಆ ಶ್ರೀಕೃಷ್ಣನು ತನ್ನ ಮಾವನು ಕೊಟ್ಟ ಭಾರೀ ಪ್ರಮಾಣದ ಈ ಕಾಣಿಕೆಗಳ ಮೊತ್ತವನ್ನು ನೋಡಿ ಪರಮ ಪ್ರೀತನಾದನು, ಮತ್ತು ಪ್ರಸನ್ನ ಚಿತ್ತದಿಂದ ನುಡಿದನು- ''ಮಹಾರಾಜಾ ನೀನು ಈಗ ನನಗೆ ಗುರುಸ್ಥಾನದಲ್ಲಿರುವೆ. ನಿನಗೆ ಅಪೇಕ್ಷಿತವಾದ ವರವನ್ನು ಬೇಡಿಕೋ. ನೀನು ಬಯಸಿದ್ದೆಲ್ಲವನ್ನು ನಾನು ಕೊಡಲು ಸಿದ್ಧನಿದ್ದೇನೆ.'' ಭಗವಂತನ ಈ ಮಾತನ್ನು ಕೇಳಿ ಆನಂದ ಉಕ್ಕಿ, ಪ್ರೀತಿ ಮೇರೆವರೆದು ಸೂಸಿ ಆಕಾಶ ರಾಜನು ನುಡಿದ- ''ದೇವೋತ್ತಮ! ಈ ಪ್ರಪಂಚದಲ್ಲಿ ನನಗೆ ನಿನ್ನ ಸೇವೆಯ ಹೊರತು ಬೇರೆ ಏನೂ ಬೇಡ, ನಾನು ಬದುಕಿ ಇರುವವರೆಗೂ ನನ್ನ ಚಿತ್ತವು ನಿನ್ನ ಚರಣಾರವಿಂದಗಳಲ್ಲಿ ಲೀನವಾಗಿ ಇರಲಿ. ಮತ್ತು ನಿನ್ನಲ್ಲಿ ನನಗೆ ಭಕ್ತಿಯು ಅನುದಿನವು ವರ್ಧಮಾನವಾಗುತ್ತ ಇರಲಿ.''

**ನಾರಾಯಣ:-** ರಾಜ ಋಷಿಯೇ! ನೀನು ಕೇಳಿದ ಎಲ್ಲ ವರಗಳಿಗೂ ನನ್ನದು ಒಂದೇ ಉತ್ತರ ''ಅಸ್ತು'' ''ತಥಾಸ್ತು''. ಭಗವಂತನ ಬಾಯಿಂದ ಬಂದ ತಥಾಸ್ತು ಎಂಬ ಅನುಗ್ರಹ ವಚನದಿಂದ ಧನ್ಯತೆ ಎನಿಸಿತು ಆಕಾಶರಾಜನಿಗೆ. ಅನಂತರ ಬ್ರಹ್ಮಾದಿ ದೇವತೆಗಳೆಲ್ಲರೂ ಶುಕಾಚಾರ್ಯ ವಶಿಷ್ಠ ವಾಮದೇವಾದಿ ಬ್ರಹ್ಮ ಋಷಿಗಳೊಂದಿಗೆ ಆ ಪುರುಷೋತ್ತಮನ ಸ್ತೋತ್ರವನ್ನು ಮಾಡಿದರು. ಅನಂತರ ಶ್ರೀಹರಿಯು ಮದುವೆಗೆ ಬಂದ ಚತುರ್ಮುಖನೇ ಮೊದಲಾದ ದೇವತಾ ಗಣದವರಿಗೂ, ಮುನಿಮಹರ್ಷಿಗಳಿಗೂ, ದಾನವ ಮಾನವರಿಗೂ ಉಳಿದೆಲ್ಲ ಭಕ್ತ ಜನರಿಗೂ ಯಥಾಯೋಗ್ಯವಾಗಿ ಗೌರವ ಸಂಭಾವನೆಗಳನ್ನು ಇತ್ತು ಸತ್ಕಾರಮಾಡಿ ಸಂತೋಷಪಡಿಸಿ, ಪ್ರೀತಿಯಿಂದ ಎಲ್ಲರನ್ನು ತಮ್ಮ ತಮ್ಮ ಸ್ಥಾನಗಳಿಗೆ ಹೋಗಲು ಅಲ್ಲಿಂದ ಬೀಳ್ಕೊಟ್ಟನು. ಮದುವೆಗೆ ಬಂದ ಮಂದಿ ಎಲ್ಲರೂ ತಮ್ಮ ತಮ್ಮ ತಾಣಗಳಿಗೆ ತೆರಳಿದ ಬಳಿಕ ಭಗವಾನ್ ಶ್ರೀಹರಿಯು ತಾನು ಸ್ವಾಮಿ ಪುಷ್ಕರಣಿಯ ತಟಾಕದಲ್ಲಿ ಇದ್ದ ತನ್ನ ಸುಂದರವಾದ ಮಂದಿರದಲ್ಲಿ ಲಕ್ಷ್ಮೀದೇವಿ ಹಾಗೂ ಪದ್ಮಾವತಿ ಇಬ್ಬರು ಮೆಚ್ಚಿನ ಮಡದಿಯರೊಂದಿಗೆ ಆನಂದದಿಂದ ನೆಲೆಸಿದನು. ಚಕ್ಕಂದದಿಂದ ರಮಿಸಿದನು.

## ತೋಂಡಮಾನನಿಗೆ ಶ್ರೀನಿವಾಸ ದೇವರ ದರ್ಶನ

**ಪೃಥ್ವಿ:-** ನನ್ನನ್ನು ಧಾರಣೆ ಮಾಡಿದ ಪ್ರಿಯ ವರಾಹನೇ! ಈ ಕಲಿಯುಗದಲ್ಲಿ ನಿನ್ನ ದರ್ಶನವು ಯಾರಿಗೆ ಆಗುವದು? ಮತ್ತು ಅತ್ಯಂತ ಸುಂದರವಾದ ಶರೀರ ಉಳ್ಳ ಶ್ರೀನಿವಾಸ ದೇವರ ದರ್ಶನದ ಭಾಗ್ಯವು ಯಾವ ಮಾನವರಿಗೆ ಒದಗಿ ಬರುವುದು?

**ವರಾಹ:-** ಭೂದೇವಿ, ಮುಂದೆ ಆಗಲಿರುವ ವೃತ್ತಾಂತವನ್ನು ನಾನು ಭವಿಷ್ಯ ಭೇದಿನಿ ದೃಷ್ಟಿಯಿಂದ ಭೂತಕಾಲದ ಘಟನೆಯಂತೆ ತಿಳಿದು ನಿನ್ನ ಮುಂದೆ ಹೇಳುತ್ತೇನೆ ಕೇಳು. ಈ ವೆಂಕಟಗಿರಿ ಎಂಬ ಬೆಟ್ಟದ ಮೇಲೆ ವಸು ಎಂಬ ಹೆಸರಿನ ಬೇಡನು ನೆಲಿಸಿದ್ದ. ಅವನು ಶ್ಯಾಮಾಕಧಾನ್ಯದ (ಶಾವಕ್ಕಿ) ಒಂದು ದೊಡ್ಡ ಹೊಲವನ್ನೇ ಆ ವಿಶಾಲ ವನಪ್ರದೇಶದಲ್ಲಿ ಉತ್ತಿ, ಬಿತ್ತಿ, ಬೆಳೆ ಮಾಡಿ ಕಾಯುತ್ತಲಿದ್ದನು. ಆ ಶ್ಯಾಮಾಕ ಧಾನ್ಯವನ್ನು ಬೆಳೆಸುವ ಆ ಕಿರಾತನ ಉದ್ದೇಶ ಸ್ವಂತ ಲಾಭಕ್ಕಾಗಿ ಇರಲಿಲ್ಲ. ಆ ವಸುಬೇಡನು ಪರಮ ಭಗವದ್ಭಕ್ತ. ವೆಂಕಟಗಿರಿಯಲ್ಲಿನೆಲಿಸಿದ ಶ್ರೀನಿವಾಸದೇವರಿಗೆ ಪ್ರತಿನಿತ್ಯ ನೈವೇದ್ಯಕ್ಕೆ ಉಪಯೋಗ ವಾಗಲೆಂದು ಕಷ್ಟಪಟ್ಟು ಈ ಶ್ಯಾಮಾಕವನವನ್ನು ಅವನು ಬೆಳೆಸಿದ್ದ. ಪ್ರತಿದಿನವೂ ಆ ವಸು ಎಂಬ ಹೆಸರಿನ ನಿಷಾದನು ತನ್ನ ಹೊಲದಲ್ಲಿ ಬೆಳೆದ ಶಾವಕ್ಕಿಯ ಅನ್ನವನ್ನು ಮಾಡಿ ಅದರಲ್ಲಿ ವಿಪುಲವಾಗಿ ಜೇನುತುಪ್ಪವನ್ನು ಕೂಡಿಸಿ ಶ್ರೀದೇವಿ- ಭೂದೇವಿ ಸಹಿತನಾದ ಶ್ರೀನಿವಾಸ ದೇವರಿಗೆ ಭಕ್ತಿಯಿಂದ ನಿವೇದನ ಮಾಡುತ್ತಿದ್ದ.ಆ ಲಕ್ಷ್ಮೀನಾರಾಯಣ ಊಟಮಾಡಿದ ಬಳಿಕ ಉಳಿದಿದ್ದನ್ನು ಭಗವಂತನ ಪ್ರಸಾದವೆಂದು ತಾವು ಗಂಡ ಹೆಂಡತಿ ಭಕ್ತಿಯಿಂದ ಊಟ ಮಾಡುತ್ತಿದ್ದರು.

ಹೀಗೆ ಪರಮ ಭಗವದ್ಭಕ್ತನಾದ ಆ ವಸು ಬೇಡನಿಗೆ ಚಿತ್ತವತಿ ಎಂಬ ಹೆಸರಿನ ಓರ್ವ ಮಡದಿ ಇದ್ದಳು. ಅವಳು ಪತಿಯಂತೆ ಶ್ರೀನಿವಾಸ ದೇವರ ಪರಮ ಭಕ್ತಳು. ಮಹಾ ಸಾಧ್ವೀಮಣಿ. ಈ ಭಕ್ತದಂಪತಿಗಳಿಗೆ ವೀರ ಎಂಬ ಹೆಸರಿನ ಓರ್ವ ಗಂಡು ಮಗು. ಮೂವರೂ ಶ್ರೀನಿವಾಸ ಸೇವೆಯೇ ತಮ್ಮ ಜೀವನದ ಗುರಿ ಎಂದು ತಿಳಿದಿದ್ದರು.

ಒಂದಾನೊಂದು ದಿನ ವಸುಬೇಡನು ತನ್ನ ಮಗನಾದ ವೀರಕುಮಾರನನ್ನು ಆ ಶ್ಯಾಮಾಕ ಬೆಳೆಯ ಹೊಲವನ್ನು ರಕ್ಷಿಸಲಿಕ್ಕೆ ನಿಯಮಿಸಿ ಜೇನುತುಪ್ಪವನ್ನು ಹುಡುಕಿ ತೆಗೆದುಕೊಂಡು ಬರಬೇಕೆಂದು ಮಡದಿಯೊಡನೆ ತಾನು ವನಕ್ಕೆ ಹೊರಟು ಹೋದನು. ಶ್ರೀನಿವಾಸ ದೇವರಿಗೆ ಪ್ರತಿನಿತ್ಯವೂ ತಾಜಾ ಜೇನನ್ನು ತಂದು ಅನ್ನದಲ್ಲಿ ಬೆರಸಿ ನೈವೇದ್ಯವನ್ನು ನಿವೇದಿಸಲಿಕ್ಕಾಗಿ ಪ್ರತಿನಿತ್ಯವೂ ವನವನದಲ್ಲಿ ತಿರುಗಾಡಿ ಜೇನುತುಪ್ಪವನ್ನು ತರಬೇಕಾಗಿತ್ತು. ಆ ದಿನವಾದರೂ ಜೇನುಗೂಡುಗಳನ್ನು ಹುಡುಕುತ್ತ ವನದಿಂದ ವನಕ್ಕೆ ಅವರು ನಡೆದಿದ್ದರು.

ಇತ್ತ ಅವರ ಮಗನಾದ ವೀರಪುತ್ರನು ಶ್ಯಾವಕ್ಕಿಯ ಅನ್ನವನ್ನು ತಯಾರಮಾಡಿ ಅಲ್ಲಿಯೇ ಒಂದು ಮರದ ಅಡಿಯಲ್ಲಿ ಶ್ರೀನಿವಾಸ ದೇವರಿಗೆ ನಿವೇದನ ಮಾಡಿದ. ಭಗವಂತನು ಉಂಡು ಉಳಿದ ಉಚ್ಛಿಷ್ಟವನ್ನು ತಾನು ಭಕ್ಷಣ ಮಾಡಿ ಹೊಲವನ್ನು ಕಾಯುತ್ತ ಕುಳಿತುಕೊಂಡ. ಅಷ್ಟರಲ್ಲಿ ವಸುಬೇಡನು ವನ ವನ ತಿರುಗಾಡಿ ಜೇನುತುಪ್ಪ ಪಾತ್ರೆಯನ್ನು ತುಂಬಿಕೊಂಡು ಮನೆಗೆ ಬಂದ. ಅನ್ನದ ಪಾತ್ರೆಯು ಪೂರ್ಣಖಾಲಿ ಯಾಗಿದ್ದಿತು. ದೇವರ ನೈವೇದ್ಯಕ್ಕೆಂದು ಅನ್ನವನ್ನು ಮಾಡಿ ತನ್ನ ಮಗನಾದ ವೀರನು ತಾನೇ ತಿಂದಿದ್ದಾನೆಂದು ಭಾವಿಸಿ ಕೋಪೋದ್ರಿಕ್ತನಾದ. ಇಂದು ಭಗವಂತನಿಗೆ ನಿವೇದನೆ ಮಾಡದೇ ಉಪವಾಸ ಮಾಡಿಸಿ ಇದ್ದ ಅನ್ನವನ್ನೆಲ್ಲ ತಾನೆ ಊಟ ಮಾಡಿದ ತನ್ನ ಮಗ ವೀರನು ಭಗವದ್ದ್ರೋಹಿಯಾದ. ಇವನನ್ನು ಕೊಂದುಬಿಡಬೇಕು ಎಂದು ಖಡ್ಗವನ್ನು ಮೇಲೆ ಎತ್ತಿದ. ಆದರೆ ಆ ವೀರಕುಮಾರನು ನೀಡಿದ ಅನ್ನವನ್ನು ಊಟ ಮಾಡಿದ ಶ್ರೀನಿವಾಸದೇವರು ಅದೇ ಮರದ ಮೇಲೆ ವಿಶ್ರಮಿಸಿದ್ದ. ಅವನು ಧಾವಿಸಿ ಬಂದು ಹೊಡೆಯಲು ಎತ್ತಿದ ವಸುಬೇಡನ ಕೈಯನ್ನು ತಡೆದುಹಿಡಿದ. ಅವನು ತಿರುಗಿ ನೋಡಿದಾಗ ಶಂಖ, ಚಕ್ರ, ಗದಾ, ಪದ್ಮ ಧಾರಿಯಾದ ಶ್ರೀನಿವಾಸದೇವರು ಆ ಮರದಲ್ಲಿ ವಿರಾಜಮಾನನಾಗಿದ್ದ. ಅವನನ್ನು ಕಂಡಕೂಡಲೇ ವಸುಬೇಡನು ಕೈಯಲ್ಲಿಯ ಖಡ್ಗವನ್ನು ಕೆಳಗೆ ಒಗೆದ. ಪರಮಾತ್ಮನ ಪಾದಕಮಲಗಳಿಗೆ ಪ್ರಣಾಮಗೈದು ಕೇಳಿದ- ''ದೇವ ದೇವೇಶ! ತಾವು ಇಲ್ಲಿಗೆ ಹೇಗೆ ಬಂದಿರಿ? ತಾವು ಇಲ್ಲಿಗೆ ಆಗಮಿಸಲು ಕಾರಣವೇನು?''

**ಶ್ರೀನಿವಾಸ:-** ವಸುನಿಷಾದ! ನಿನ್ನಂತೆ ನಿನ್ನ ಮಗನೂ ಕೂಡ ನನ್ನ ಪರಮ ಭಕ್ತ. ಧ್ರುವ ಪ್ರಹ್ಲಾದರಂತೆ ನಿನ್ನ ಮಗನಾದ ಈ ಬಾಲಭಕ್ತನ ಮೇಲೆ ನನಗೆ ನಿನಗಿಂತ ಹೆಚ್ಚಿನ ಪ್ರೀತಿ. ಆದುದರಿಂದ ನಾನು ಇವನಿಗೆ ಇಲ್ಲಿಯೇ ದರ್ಶನ ನೀಡಿದೆ. ನಿನ್ನ ದೃಷ್ಟಿಯಲ್ಲಿ ನಾನು ಸ್ವಾಮಿ ಪುಷ್ಕರಣೀ ತೀರದ ದೇವಮಂದಿರದಲ್ಲಿ ಮಾತ್ರ ಇರುತ್ತೇನೆ. ಆದರೆ ಈ ಬಾಲಭಕ್ತನಿಗೆ ಬಯಸಿದಲ್ಲೆಲ್ಲ ನಾನು ಪ್ರತ್ಯಕ್ಷನಾಗಿ ದರ್ಶನ ಕೊಡುತ್ತೇನೆ. ಇಂದು ನಾನು ಇದೇ ಗಿಡದಡಿಯಲ್ಲಿ ನಿನ್ನ ಈ ವೀರಕುಮಾರನಿಗೆ ದರ್ಶನವಿತ್ತು ಅವನು ಕೊಟ್ಟ ನೈವೇದ್ಯವನ್ನು ಸ್ವೀಕರಿಸಿದೆ. ನನ್ನ ಪ್ರಸಾದ ಶೇಷವನ್ನು ಅವನು ತಾನು ಭಕ್ಷಣ ಮಾಡಿ ಇಲ್ಲಿಯೇ ಶ್ಯಾಮಾಕ ವನವನ್ನು ರಕ್ಷಿಸುತ್ತ ಕುಳಿತುಕೊಂಡಿದ್ದಾನೆ.'' ಪರಮಾತ್ಮನ ಈ ಮಾತನ್ನು ಕೇಳಿ ವಸುಬೇಡನಿಗೆ ಸಂತೋಷವಾಯಿತು.

ಪೂರ್ವಕಾಲದಲ್ಲಿ ಚಂದ್ರವಂಶದಲ್ಲಿ ತೋಂಡಮಾನ ಎಂಬ ಪ್ರಸಿದ್ಧ ರಾಜಪುತ್ರನಿದ್ದನು. ಅವನ ತಂದೆ ಸುವೀರ, ತಾಯಿ ನಂದಿನಿ, ಆ ದಂಪತಿಗಳ ಸತ್ಪುತ್ರನಾದ

ತೋಂಡಮಾನನಿಗೆ ಬಾಲ್ಯದಲ್ಲೇ ಭಗವಂತನಲ್ಲಿ ಉಚ್ಚ ಭಕ್ತಿ ಇದ್ದಿತು, ಶೌರ್ಯ, ಧೈರ್ಯ, ಸೌಜನ್ಯ, ಸದ್ಬುದ್ಧಿ, ಸೌಶೀಲ್ಯ ಮುಂತಾದ ಸದ್ಗುಣಗಳ ನಿಧಿಯಾಗಿದ್ದನು ಆ ತೋಂಡಮಾನ. ಅವನು ತರುಣನಾದ ಬಳಿಕ ಪಾಂಡ್ಯರಾಜನ ಮಗಳಾದ ಪದ್ಮಾವತಿಯನ್ನು ವಿವಾಹವಾದನು. ಅನಂತರ ಪ್ರಾಯಪ್ರಬುದ್ಧನಾದ ಆ ವೀರತೋಂಡಮಾನನು ಕ್ಷತ್ರಿಯರ ರಾಜಕುಮಾರಿಯರ ಸ್ವಯಂವರದ ಆಹ್ವಾನಪತ್ರ ಬಂದ ಕಡೆಗೆಲ್ಲ ಹೋಗಿ ತನ್ನ ಬಾಹುಬಲದಿಂದ ಅನೇಕ ಅರಸು ಕುವರಿಯನ್ನು ಗೆದ್ದುತಂದು ತನ್ನ ರಾಣೀವಾಸದಲ್ಲಿ ಇರಿಸಿದ್ದನು. ಯುವರಾಜನಾದ ಅವನು ನಾರಾಯಣಪುರದಲ್ಲಿ ನೆಲಿಸಿ ಈ ಧರಣೀ ತಳದಲ್ಲಿಯೇ ಸ್ವರ್ಗೀಯ ಸುಖ ಸಂಪದ ಸೌಭಾಗ್ಯಗಳನ್ನು ಅನುಭವಿಸುತ್ತ ಇದ್ದನು.

ಒಂದು ದಿನ ಸಿಂಹದಂತೆ ಪರಾಕ್ರಮಶಾಲಿಯಾದ ಆ ತೋಂಡಮಾನನು ತಂದೆಯ ಆಜ್ಞೆ ಪಡೆದು ವೆಂಕಟಾಚಲ ಸಮೀಪದ ಗೊಂಡಾರಣ್ಯದಲ್ಲಿ ಬೇಡೆಯಾಡಲಿಕ್ಕೆ ತೆರಳಿದನು. ತನ್ನ ಸೇವಕರೊಂದಿಗೆ ದುರ್ಗಮವಾದ ಗಹನವಾದ ಆ ಅರಣ್ಯಮಾರ್ಗದಲ್ಲಿ ಪಾದಚಾರಿಯಾಗಿ ಸಾಗಿದಾಗ ಒಂದು ಮದ್ದಾನೆಯು ಅವನ ಕಣ್ಣಿಗೆ ಕಂಡಿತು. ಅದನ್ನು ಬೆನ್ನಟ್ಟಿ ಸುವರ್ಣಮುಖರೀ ನದಿಯನ್ನು ದಾಟಿ ಮುಂದೆ ಹೋದಾಗ ಬ್ರಹ್ಮಋಷಿ ಶುಕಾಚಾರ್ಯರ ಆಶ್ರಮವು ಗೋಚರಿಸಿತು. ಆಶ್ರಮದಲ್ಲಿ ಇರುವ ಆ ಅವಧೂತ ಮುನಿಯನ್ನು ಕಂಡು ಮತ್ತೆ ವನಶ್ರೇಣಿಯ ಅಂತರ್ಭಾಗದಲ್ಲಿ ಮುಂದುವರೆದ ಆ ಯುವರಾಜ. ಅಲ್ಲಿ ಒಂದು ಸ್ಥಾನದಲ್ಲಿ ಒಂದು ಹುತ್ತಿನ ಆಕಾರದ ಬಿದಿರು ಮೆಳೆಗಳ ರೂಪದಲ್ಲಿ ರೇಣುಕಾದೇವಿಯು ನಿಂತದ್ದು ಕಾಣಿಸಿತು. ಅವಳಿಗೆ ನಮಸ್ಕರಿಸಿ ಮತ್ತೆ ಪಶ್ಚಿಮ ನಿಟ್ಟಿನ ಕಡೆಗೆ ಸಾಗಿದ ತೋಂಡಮಾನ. ಹಾಗೇ ಮುಂದುವರೆದಾಗ ಐದು ಬಣ್ಣದ ಒಂದು ಸುಂದರ ಗಿಳಿಯು ಅವನ ಕಣ್ಣಿಗೆ ಬಿದ್ದಿತು. ನೋಡಲು ಒಳ್ಳೇ ಆಕರ್ಷಕವಾಗಿದ್ದಿತು ಆ ಪಂಚರಂಗಿ ಅರಗಿಳಿ. ಅದನ್ನು ಹಿಡಿಯಬೇಕೆಂದು ಹಂಬಲ ಉಂಟಾಯಿತು ಆ ತೋಂಡಮಾನನಿಗೆ. ಅದು ಹಾರಿ ಹಾರಿ ಮುಂದೆ ಹೋದಂತೆ ತೋಂಡಮಾನನು ಅದರ ಹಿಂದೆ ಹಿಂದೆ ಓಡತೊಡಗಿದ. ಆ ಗಿಳಿಯು ಒಂದೇ ಸಮನೆ ಶ್ರೀನಿವಾಸನ ನಾಮವನ್ನು ಪಠಿಸುತ್ತಿತ್ತು. ಗಿಡದಿಂದ ಗಿಡಕ್ಕೆ ಹಾರುತ್ತಿತ್ತು ಹೀಗೆ ದೇವರ ನಾಮಸ್ಮರಣೆ ಗೈಯುತ್ತ ವನಾಂತರಗಳನ್ನೆಲ್ಲ ದಾಟಿ ಪಂಚವರ್ಣದ, ಶ್ರೀನಿವಾಸನ ಭಕ್ತ ಆ ಪಕ್ಷಿಯು ಒಂದು ಪರ್ವತದ ಶಿಖರದ ಮೇಲೆ ಹೋಗಿ ಕುಳಿತಿತು. ಅದನ್ನು ಬೆನ್ನಟ್ಟಿ ಬಂದ ತೋಂಡಮಾನನು ಆ ಗಿಳಿಯನ್ನು ಹುಡುಕುತ್ತ ಶ್ಯಾಮಾಕವನಕ್ಕೆ ಬಂದನು. ಆ ಶ್ಯಾವಕ್ಕಿಯ ಹೊಲವನ್ನು ವಸು ಎಂಬ ಹೆಸರಿನ ನಿಷಾದನು ಕಾಯುತ್ತಿದ್ದನು. ಗಿಳಿಯನ್ನು ಬೆನ್ನಟ್ಟಿ ಬಂದ ತೋಂಡ ಮಾನನನ್ನು ನೋಡಿ ಆ ವಸು ಬೇಡನು ಮುಂದೆ ಬಂದು ರಾಜನಿಗೆ ನಮಸ್ಕರಿಸಿದನು. ಸ್ವಾಗತ ಬಯಸಿದನು. ಕೈಜೋಡಿಸಿಕೊಂಡು ಅವನ ಮುಂದೆ ನಿಂತನು. ಆಗ ತೋಂಡಮಾನನು ಅಚ್ಚರಿಯಿಂದ ಕೇಳಿದನು- ''ವನಚಾರಿಯೆ! ಇಲ್ಲಿ ಯಾವದಾದರೂ ಪಂಚರಂಗಿ ಗಿಳಿ ಬಂದಿದ್ದಿತೆ? ಅದು ಬಾಯಿಂದ ಎಡೆಬಿಡದೆ ''ಶ್ರೀನಿವಾಸ ಶ್ರೀನಿವಾಸ'' ಎಂದು ದೇವರ ನಾಮಸ್ಮರಣೆ ಮಾಡುತ್ತಿತ್ತು. ಭಗವಂತನ ನಾಮಸಂಕೀರ್ತನೆಗೈಯುವ ಆ ವಿಚಿತ್ರ ಶುಕವನ್ನು ನೀನು ಕಂಡಿರುವಿಯಾ? ಅದು ಎತ್ತ ಹೋಯಿತು?'' ಹೇಳು.

**ವಸುಕಿರಾತ:-** ''ಯುವರಾಜರೇ! ಆ ಪಂಚವರ್ಣದ ಅರಗಿಳಿಯು ಇಲ್ಲಿಯ ವೆಂಕಟಾಚಲದ ಪತಿಯಾದ ಶ್ರೀನಿವಾಸ ದೇವರ ಅತ್ಯಂತ ಪ್ರೀತಿಯ ಪಕ್ಷಿ. ಆ ಪಂಚರಂಗಿ ಅರಗಿಣಿಯನ್ನು ಶ್ರೀದೇವಿ-ಭೂದೇವಿಯರು ಪ್ರೀತಿಯಿಂದ ಲಾಲಿಸುತ್ತಿದ್ದಾರೆ. ಆದರದಿಂದ ಪೋಷಿಸುತ್ತಿದ್ದಾರೆ. ಅದು ಯಾವಾಗಲೂ ಶ್ರೀಹರಿಯ ಸಮೀಪದಲ್ಲಿ ಇದ್ದು ಆಗಾಗ ಸಮೀಪದ ಅರಣ್ಯಪ್ರಾಂತದ ಗಿಡಗುಂಪುಗಳಲ್ಲಿ ಹಾರಾಡಿ ಬರುವದು. ಸುಂದರವಾದ ಶ್ರೀನಿವಾಸ ದೇವರ ಆ ಶುಕ ಶಕುಂತವನ್ನು ಯಾರೂ ಹಿಡಿಯಲಾರರು. ಆದರ ಆಸೆ ಬಿಡಿರಿ ಮಹಾರಾಜರೇ! ನಾನು ಈಗ ಸೇವೆಗೆ ಹೋಗಲಿರುವೆನು. ನಾನು ಇಲ್ಲಿಯ ಶ್ರೀನಿವಾಸನ ಸೇವೆಗೈದು ಬರುವವರೆಗೆ ತಾವು ಇಲ್ಲಿಯೇ ಈ ಹೆಮ್ಮರದ ದಟ್ಟನೆರಳಿನಲ್ಲಿ ಈ ಗಿಡದಡಿಯಲ್ಲಿ ವಿಶ್ರಮಿಸಬಹುದು.''

**ತೋಂಡಮಾನ:-** ''ವನೇಚರ! ನಾನೂ ನಿನ್ನ ಜೊತೆ ಶ್ರೀನಿವಾಸನ ದರ್ಶನಕ್ಕೆ ಬರುತ್ತೇನೆ. ನೀನು ನನಗೂ ವೆಂಕಟಗಿರಿಯಲ್ಲಿ ನೆಲಿಸಿದ ಆ ಜಗದೀಶ್ವರನ ದರ್ಶನವನ್ನು ಮಾಡಿಸು.''

ರಾಜನ ಮಾತಿಗೆ ಸಮ್ಮತಿಸಿದನು ಆ ವಸು ನಿಷಾದ. ಕೂಡಲೇ ಅವನು ತಾನು ಬೇಯಿಸಿ ಇಟ್ಟ ಶಾವಕ್ಕಿಯ ಅನ್ನಕ್ಕೆ ಜೇನುತುಪ್ಪವನ್ನು ಬೆರೆಸಿ ಬಾಳೆಎಲೆಯ ದೊನ್ನೆಯಲ್ಲಿ ಹಾಕಿಕೊಂಡು ತೋಂಡಮಾನನೊಂದಿಗೆ ಶ್ರೀನಿವಾಸದೇವರ ಸಮೀಪಕ್ಕೆ ನಡೆದ. ಸ್ವಾಮಿ ಪುಷ್ಕರಣೀತೀರ್ಥದಲ್ಲಿ ಆ ರಾಜ-ಬೇಡ ಇಬ್ಬರೂ ಸ್ನಾನ ಮಾಡಿದರು. ಪುಷ್ಕರಣಿಯ ತೀರದಲ್ಲಿರುವ ಬಿಲ್ವವೃಕ್ಷದ ಕೆಳಗೆ ಶ್ರೀನಿವಾಸ ದೇವರು ಮಂಡಿಸಿದ್ದ. ತೋಂಡಮಾನನಿಗೆ ಅಲ್ಲಿ ಭಗವಂತನ ದರ್ಶನವಾಯಿತು. ಅಗಸೆ ಹೂವಿನಂತೆ ನೀಲ ವರ್ಣ. ತುಂಬು ತಾವರೆಯಂತೆ ವಿಶಾಲ ನಯನ, ನಡುವಿನಲ್ಲಿ ಪೀತಾಂಬರ.

ಮಸ್ತಕದ ಮೇಲೆ ಮಣಿಮಯ ಮುಕುಟ. ಕೈಗಳಲ್ಲಿ ಕಂಕಣ. ಹೊಂದಾವರೆಯಂತೆ ಸುಂದರವಾದ ಮುಖ. ಅಂಗಾಂಗಗಳಲ್ಲಿ ದೇದೀಪ್ಯಮಾನವಾದ ದಿವ್ಯಕಾಂತಿ, ನಾಕು ಕೈಗಳಲ್ಲಿ ಶಂಖ ಚಕ್ರಾದಿ ಆಯುಧಗಳು. ಮುಖದಲ್ಲಿ ಸುಪ್ರಸನ್ನ ಭಾವ, ಹಸ್ತದಲ್ಲಿ ಅಭಯಮುದ್ರೆ. ಭಗವಂತನ ಇಂಥ ದಿವ್ಯ ಭವ್ಯವಾದ ಶ್ಯಾಮಸುಂದರ ವಿಗ್ರಹವನ್ನು ಕಂಡಕೂಡಲೇ ಭಕ್ತಿ ತುಂಬಿತು ತೋಂಡಮಾನನಿಗೆ. ದಂಡಪ್ರಣಾಮ ಹಾಕಿದ ತೋಂಡಮಾನ.

ವಸುಬೇಡನು ತನ್ನ ನಿತ್ಯದ ಕಾರ್ಯಕ್ರಮದಂತೆ ಜೇನುತುಪ್ಪ ಬೆರೆಸಿದ ಶ್ಯಾವಕ್ಕಿಯ ಅನ್ನವನ್ನು ಪರಮಾತ್ಮನಿಗೆ ಭಕ್ತಿಯಿಂದ ನಿವೇದನೆಗೈದ. ಅನಂತರ ಮಹಾರಾಜನೊಂದಿಗೆ ಶ್ಯಾಮಾಕವನದಲ್ಲಿ ಇದ್ದ ತನ್ನ ಎಲೆಮನೆಗೆ ಮರಳಿ ಬಂದನು. ತೋಂಡಮಾನನು ಅಂದು ರಾತ್ರಿ ಆ ಕಿರಾತನ ಪರ್ಣಕುಟೀರದಲ್ಲಿಯೇ ಮಲಗಿಕೊಂಡ. ಮುಂಜಾವಿನಲ್ಲಿ ಎದ್ದು ತನ್ನ ಎಲ್ಲ ಸೇವಕಪರಿವಾರದೊಂದಿಗೆ ನಾರಾಯಣಪುರದೆಡೆಗೆ ನಡೆದ. ದಾರಿಯಲ್ಲಿ ಬರುವಾಗ ಬಿದಿರುಮಳೆಗಳ ಆಕಾರದಲ್ಲಿ ನಿಂತುಕೊಂಡ ರೇಣುಕಾದೇವಿಯನ್ನು ವಂದಿಸಿದ.

ಅಂದು ಚೈತ್ರಶುದ್ಧ ನವಮಿ ತಿಥಿಯಾಗಿದ್ದಿತು. ರೇಣುಕಾದೇವಿಯ ಪೂಜೆಗೆ ಅದು ಒಳ್ಳೆ ಪ್ರಶಸ್ತವಾದ ದಿವಸ. ಆ ದಿನದಂದು ಮಹಾರಾಜನಿಗೆ ಆ ದೇವಿಯ ಪೂಜೆ ಲಭಿಸಿದ್ದು

ಒಂದು ವಿಶೇಷ. ಆಗ ಆ ದೊರೆಯು ಅತ್ಯಂತ ಭಕ್ತಿಯಿಂದ ವಿಧಿಪೂರ್ವಕವಾಗಿ ಆ ದೇವಿಗೆ ವಿಶೇಷ ಪೂಜೆ, ಪರ್ಯುಪಾಸನೆ ಹಾಗೂ ಸಮಾರಾಧನೆಗಳನ್ನು ಸಲ್ಲಿಸಿದ. ಅವನ ಈ ವಿಶಿಷ್ಟ ಅರ್ಚನೆಯಿಂದ ಅತ್ಯಂತ ಪರಿತುಷ್ಟಳಾದಳು ರೇಣುಕಾದೇವಿ. ಸುಪ್ರಸನ್ನ ಮನಸ್ಸಿನಿಂದ ವರ ನೀಡಿದಳು ಆ ತೋಂಡಮಾನರಾಜನಿಗೆ-''ರಾಜನೆ ! ಈ ನಿನ್ನ ತಂದೆಯ ರಾಜ್ಯವು ನಿಷ್ಕಂಟಕವಾಗಿ ನಿನ್ನ ವಿಘ್ನಗಳೆಲ್ಲ ದೂರವಾಗುವವು. ನೀನು ರಾಜನಾಗಿ ಧರ್ಮಶಾಸನವು ದೀರ್ಘಕಾಲ ನಡೆಯುವದು. ಈ ರಾಜಧಾನಿ ಮುಂದೆ ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗುವದು. ನಿನ್ನ ಮೇಲೆ ದೇವಾಧಿದೇವನಾದ ಶ್ರೀನಿವಾಸನ ಕೃಪಾ ಪ್ರಸಾದವು ನಿರಂತರವೂ ಇರುವದು.'' ರೇಣುಕಾದೇವಿಯಿಂದ ಹೀಗೆ ವರ ಪಡೆದ ತೋಂಡಮಾನನು ಶುಕಮುನಿಯ ಆಶ್ರಮಕ್ಕೆ ಬಂದನು. ಅವರ ಪಾದಾರವಿಂದಗಳಲ್ಲಿ ಪ್ರಣಾಮವನ್ನು ಸಲ್ಲಿಸಿದನು. ಕೈ ಮುಗಿದು ಅವರಿಗೆ ಕೇಳಿದನು-''ಅವಧೂತ ಯೋಗಿಗಳೇ! ತಾವು ಈ ಪದ್ಮಸರೋವರದ ಮಹಿಮೆಯನ್ನು ಹೇಳಿರಿ!''

**ಶುಕಾಚಾರ್ಯ:-** ''ರಾಜಪುತ್ರನೇ! ಸರ್ವ ಪಾಪ ಪ್ರಣಾಶಕ ಈ ಪದ್ಮಸರೋವರ. ಇಲ್ಲಿ ಸ್ನಾನ ಪುಣ್ಯದಾಯಕ. ಈ ಸರೋವರದ ಸ್ಮರಣೆಯು ದುರಿತ ನಾಶಕ್ಕೆ ಕಾರಣ. ಈ ಸರೋವರಕ್ಕೆ ಬಂದು ಇಲ್ಲಿಯ ಪವಿತ್ರ ಜಲದಲ್ಲಿ ಮಿಂದು ಲಕ್ಷ್ಮೀನಾರಾಯಣರನ್ನು ನೆನೆದವರಿಗೆ ಐಶ್ವರ್ಯ ಪ್ರಾಪ್ತಿ. ಆದುದರಿಂದ ನೀನು ಕೂಡ ಇದರಲ್ಲಿ ಸ್ನಾನ ಮಾಡಿ ಮನೆಗೆ ತೆರಳು.''

ಶುಕಮುನಿಗಳ ಈ ಆದೇಶವನ್ನು ತಲೆಯನ್ನು ಹೊತ್ತು ಆ ಸರೋವರದಲ್ಲಿ ಸ್ನಾನ ಮಾಡಿದ. ಅನಂತರ ಶುಕಾಚಾರ್ಯರಿಗೆ ನಮಸ್ಕರಿಸಿ ತನ್ನ ರಾಜಧಾನಿಗೆ ತೆರಳಿದ ಆ ರಾಜಕುಮಾರ. ಅರಮನೆಗೆ ಹೋಗಿ ತನ್ನ ತಂದೆಗೆ ಅರುಹಿದ ಈ ಎಲ್ಲ ಸಮಾಚಾರವನ್ನು. ಯುವರಾಜನ ಮುಖದಿಂದ ನಡೆದ ಸಂಗತಿಯನ್ನೆಲ್ಲ ತಿಳಿದು ಸಂತಸವಾಯಿತು ಮುದುಕ ಮಹಾರಾಜನಿಗೆ. ಗುರುಗಳಾದ ಶುಕಾಚಾರ್ಯರ ಆಶೀರ್ವಾದ, ರೇಣುಕಾದೇವಿಯ ಅನುಗ್ರಹ ಮತ್ತು ಶ್ರೀನಿವಾಸ ದೇವರ ಸಾಕ್ಷಾತ್ ಸಂದರ್ಶನ ಮೂರನ್ನೂ ಪಡೆದು ಬಂದ ತನ್ನ ಮಗನೇ ಧನ್ಯ ಎಂದುಕೊಂಡ ಮನದಲ್ಲಿ. ತನ್ನ ಮಗನಾದ ತೋಂಡಮಾನನ ಹರಿಭಕ್ತಿ, ಗುರುಭಕ್ತಿ, ಪೂಜಾಪ್ರೇಮ, ಕಾರ್ಯಧೈರ್ಯ, ಔದಾರ್ಯ ಮುಂತಾದ ಒಳ್ಳೇ ಗುಣಗಳನ್ನು ಮನಗಂಡು ಅವನಿಗೆ ಸಾಮ್ರಾಜ್ಯದ ಭಾರವನ್ನೆಲ್ಲ ಒಪ್ಪಿಸಿದ. ಸಿಂಹಾಸನದಲ್ಲಿ ಕೂಡಿಸಿ ಮಂತ್ರಿ ಪುರೋಹಿತರಿಂದ ಪಟ್ಟಾಭಿಷೇಕ ಮಹೋತ್ಸವವನ್ನು ನೆರವೇರಿಸಿದ. ಅನಂತರ ತಾನು ತಪೋನುಷ್ಠಾನ ಮಾಡುವ ಉದ್ದೇಶದಿಂದ ತಪೋವನಕ್ಕೆ ತೆರಳಿದ. ತೋಂಡ ಮಾನನು ಮಹಾರಾಜನಾಗಿ ವಿಶಾಲ ಸಾಮ್ರಾಜ್ಯವನ್ನು ಧರ್ಮನಿಷ್ಠನಾಗಿ ನ್ಯಾಯ ನೀತಿಗಳಿಂದ ಪರಿಪಾಲಿಸಿದನು.

## ವರಾಹ ದೇವರ ಮಹಿಮೆ

ಒಂದು ದಿನ ನಿಷಾದ ರಾಜನಾದ ಆ ವಸುಬೇಡನು ತೋಂಡಮಾನ ರಾಜನ ಅರಮನೆಗೆ ಬಂದನು. ಮಹಾರಾಜನು ರಾಜೋಚಿತವಾದ ರೀತಿಯಲ್ಲಿಯೇ ಅವನಿಗೆ ತನ್ನ ರಾಜಾಸ್ಥಾನದಲ್ಲಿ ಸ್ವಾಗತ ಸತ್ಕಾರ ನೀಡಿ, ಆದರೋಪಚಾರ ಮಾಡಿ ಕೇಳಿದ- ''ವನೇಚರ! ನೀನು ಇಲ್ಲಿಗೆ ಬರಲು ಕಾರಣವೇನು?

**ವಸುಕಿರಾತ:-** ಮಹಾರಾಜನೇ! ನಾನು ನನ್ನ ಆ ಶಾವಕ್ಕಿಯ ಹೊಲದಲ್ಲಿ ಒಂದು ಆಶ್ಚರ್ಯವನ್ನು ನೋಡಿದೆ. ಅದನ್ನು ತಮಗೆ ಹೇಳುತ್ತೇನೆ, ಕೇಳಿರಿ. ಇತ್ತೀಚೆ ರಾತ್ರಿ ಕಾಲದಲ್ಲಿ ಆ ನನ್ನ ಶ್ಯಾಮಾಕವನಕ್ಕೆ ಒಂದು ಅಚ್ಚ ಬಿಳಿ ಬಣ್ಣದ ವರಾಹವು ಪ್ರತಿದಿನವೂ ಬರತೊಡಗಿದೆ. ದಿನಾಲು ರಾತ್ರಿ ಬಂದು ಅದು ನನ್ನ ಹೊಲದಲ್ಲಿಯ ಶ್ಯಾಮಾಕ ಧಾನ್ಯವನ್ನು ತಿನ್ನುತ್ತಲಿದೆ. ಅದನ್ನು ಕಂಡು ನಾನು ಕೈಯಲ್ಲಿ ಬಿಲ್ಲುಬಾಣ ತೆಗೆದುಕೊಂಡು ಬೆನ್ನಟ್ಟಿದೆ ಆ ಬಿಳಿ ಹಂದಿಯನ್ನು. ಅದು ಗಾಳಿಯ ಗತಿಯಿಂದ ಓಡತೊಡಗಿತು. ನಾನು ಬೆಂಬತ್ತಿದೆ. ನಾನು ನೋಡು ನೋಡುತ್ತಿರುವಂತೆಯೇ ಆ ಶ್ವೇತ ವರಾಹವು ಸ್ವಾಮಿ ಪುಷ್ಕರಣೀ ತೀರಕ್ಕೆ ಬಂದಿತು. ಅಲ್ಲಿ ಹಾವಿನ ಹುತ್ತದಲ್ಲಿ ಹೊಕ್ಕು ಬಿಟ್ಟಿತು. ನಾನು ಬೆಳೆದ ಶಾಮಾಕ ಧಾನ್ಯವನ್ನೆಲ್ಲ ತಿಂದು ಬಂದ ಆ ಹಂದಿಯ ಮೇಲೆ ನನಗೆ ಬ್ರಹ್ಮಾಂಡ ಕೋಪ ಬಂದು ಬಿಟ್ಟಿತು. ಎಲ್ಲಿದ್ದರೂ ಹೊಡೆದು ಹಾಕಬೇಕೆಂದು ನಾನು ಆ ಹಾವಿನ ಹುತ್ತವನ್ನೆ ಅಗೆಯತೊಡಗಿದೆ. ಅದರಿಂದ ನಾನು ಮೂರ್ಛಿತನಾಗಿ ಬಿದ್ದು ಬಿಟ್ಟೆ. ಅದನ್ನು ಕಂಡು ನನ್ನ ಮಗನಾದ ವೀರಕುಮಾರನು ಅಲ್ಲಿಗೆ ಓಡಿಬಂದ. ಮರುವುಗೆಟ್ಟು ಅಲ್ಲಿಯ ಮಣ್ಣಿನ ಮೇಲೆ ನಾನು ಬಿದ್ದುಬಿಟ್ಟಿದ್ದೆ. ಎಂದಿನಿಂದಲೂ ಭಗವದ್ ಭಕ್ತನಾದ ಆ ನನ್ನ ಮಗನು ದೇವಾಧಿದೇವನಾದ ಮಧುಸೂದನನನ್ನು ಸ್ತೋತ್ರ ಮಾಡಿದ. ಆಗ ಆ ವರಾಹಸ್ವಾಮಿಯು ನನ್ನಲ್ಲಿ ಆವಿಷ್ಟನಾಗಿ ನನ್ನ ಮಗನಿಗೆ ನನಗೆ ತಿಳಿಸಲಿಕ್ಕೆಂದು ಹೀಗೆ ಹೇಳಿದ.

**ವರಾಹ:-** ನಿಷಾದನೆ! ನೀನು ಬೇಗನೇ ರಾಜನ ಬಳಿಗೆ ಹೋಗು. ನನ್ನ ಸಮಾಚಾರವನ್ನೆಲ್ಲ ಅವನಿಗೆ ತಿಳಿಸು. ಕಪಿಲಗೋವಿನ ಹಾಲಿನಿಂದ ಅಲ್ಲಿರುವ ಭಗವಂತನಿಗೆ ಅಭಿಷೇಕ ಮಾಡಲಿ. ಆ ಹಾಲಿನಿಂದ ಆ ವಲ್ಮೀಕ ಒಳಭಾಗವೆಲ್ಲವೂ ಸ್ವಚ್ಛವಾಗಿ ತೊಳೆಯಲ್ಪಟ್ಟ ಬಳಿಕ ಅಲ್ಲಿ ಒಂದು ಸುಂದರವಾದ ಶಿಲೆಯು ದೊರಕುವದು. ಅದನ್ನು ನಿಪುಣನಾದ ಓರ್ವ ಶಿಲ್ಪಿಯನ್ನು ನಿಯಮಿಸಿ ಒಂದು ದಿವ್ಯ ವರಾಹಮೂರ್ತಿಯನ್ನು ಮಾಡಿಸು. ಭೂದೇವಿಯನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡು ಎದ್ದು ನಿಂತ ವರಾಹದ ಮೂರ್ತಿಯನ್ನು ಜಾಣ್ಮೆಯಿಂದ ಕಟೆಯಲು ಶಿಲ್ಪಿಗೆ ಆಜ್ಞೆ ಮಾಡು. ವರಾಹಮೂರ್ತಿಯು ಸಿದ್ಧವಾದ ಬಳಿಕ ಮಹಾಮುನೀಶ್ವರರೂ ವೈಖಾನಸರೂ ಕೂಡಿ ಆ ಭೂವರಾಹ ಮೂರ್ತಿಯನ್ನು ಈ ಸ್ವಾಮಿ ಪುಷ್ಕರಣೀ ತೀರದಲ್ಲಿ ಈಗ ಈ ಹಾವಿನ ಹುತ್ತವು ಇರುವ ತಾಣದಲ್ಲಿಯೇ ಪ್ರತಿಷ್ಠೆಮಾಡಲಿ. ಸ್ವಯಂ ತೋಂಡಮಾನ ಮಹಾರಾಜನು ಕೂಡ ಪುರೋಹಿತರೊಂದಿಗೆ ಭೂವರಾಹದೇವರನ್ನು ಪೂಜೆ ಮಾಡಲಿ.''

ಹೀಗೆ ನನ್ನಲ್ಲಿ ಅವಿಷ್ಟನಾದ ವರಾಹ ದೇವನು ನನಗೆ ಹೇಳಿ ಆದೇಶ ನೀಡಿ ನನ್ನನ್ನು ಬಿಟ್ಟು ಹೊರಟು ಹೋದನು. ಆ ವರಾಹನ ಆವೇಶವು ನನ್ನನ್ನು ಬಿಟ್ಟು ಇಳಿದು ಹೋದ ಬಳಿಕ ಮತ್ತೆ ನಾನೇ ನಾನಾದೆನು. ಆ ವರಾಹ ದೇವರು ಆವೇಶ ಹೊಂದಿದ್ದು ನನ್ನಲ್ಲಿ. ಆದರೆ ಆಜ್ಞೆ ನೀಡಿದ್ದು ನಿನಗಾಗಿ. ಆದುದರಿಂದ ಆ ಮಹಾದೇವರ ಆಜ್ಞೆಯನ್ನು ನಿನಗೆ ತಿಳಿಸಬೇಕು ಎಂದು ನಾನು ಇಲ್ಲಿಗೆ ಬಂದಿರುತ್ತೇನೆ. ಭಗವಂತನ ಆ ಆಜ್ಞೆಯನ್ನು ಕಾರ್ಯಗತಗೊಳಿಸುವದು ನಿಮಗೆ ಸೇರಿದ ವಿಷಯ.''

ತೋಂಡಮಾನನಿಗೆ ಪರಮ ಸಂತೋಷವಾಯಿತು ಇದನ್ನೆಲ್ಲ ಕೇಳಿ. ಶ್ವೇತ ವರಾಹ ದೇವರು ವಸು ಎಂಬ ನಿಷಾದ ರಾಜನಲ್ಲಿ ಆವಿಷ್ಟನಾಗಿ ತನಗೆ ನೀಡಿದ ಆಜ್ಞೆಯನ್ನು

ಪಾಲಿಸಬೇಕು ಎಂದು ನಿರ್ಧರಿಸಿದನು. ಪುಷ್ಕರ ಮೊದಲಾದ ತನ್ನ ಮಂತ್ರಿಗಳನ್ನು ಸೇನಾಪತಿ ಪುರೋಹಿತರನ್ನು ಅರಮನೆಗೆ ಕರೆಸಿದನು.

ಆಸ್ಥಾನದಲ್ಲಿ ಮಂತ್ರಾಲೋಚನೆ ನಡೆಸಿದನು. ವರಾಹನ ಆಜ್ಞೆಯನ್ನು ಕಾರ್ಯಗತಗೊಳಿಸಲು ಎಲ್ಲರೂ ಒಮ್ಮನದಿಂದ ಹಾಗೂ ಒಮ್ಮುಖದಿಂದ ಸಮ್ಮತಿ ನೀಡಿದರು. ಆಗ ಮಹಾರಾಜನು ತನ್ನ ರಾಜಧಾನಿಯಲ್ಲಿರುವ ಗೌಳಿಗರನ್ನೆಲ್ಲ ಬರಮಾಡಿಕೊಂಡನು. ಅವರಿಗೆ ಹೇಳಿದನು- "ಗೋಪಾಲಕರೇ! ನಿಮ್ಮಲ್ಲಿ ಕಪಿಲೆ ಹಸುಗಳು ಎಷ್ಟು ಇವೆಯೋ ಅವೆಲ್ಲವುಗಳನ್ನು ಕರುಸಹಿತವಾಗಿ ವೆಂಕಟಾಚಲಕ್ಕೆ ಕರೆದುಕೊಂಡು ಬನ್ನಿರಿ. ನಾಳೆ ಎಲ್ಲ ಗವಳಿಗರೂ ತಮ್ಮ ತಮ್ಮ ಕಪಿಲಾಧೇನುಗಳೊಂದಿಗೆ ಬೆಳಗಾಗುವಷ್ಟರಲ್ಲಿ ವೆಂಕಟಗಿರಿಯ ಬೆಟ್ಟದಲ್ಲಿರುವ ಸ್ವಾಮಿ ಪುಷ್ಕರಣೀ ತೀರದ ಸಮೀಪದಲ್ಲಿ ಉಪಸ್ಥಿತರಿರಬೇಕು." ಅನಂತರ ಮಂತ್ರಿಗಳಿಗೂ ಹಾಗೂ ಸೇನಾಪತಿಗಳಿಗೂ "ನಾಳೆ ಉಷಃಕಾಲ ಪೂರ್ವದಲ್ಲಿಯೇ ನಮ್ಮ ಎಲ್ಲ ಪರಿವಾರ ವರ್ಗದವರು ವೆಂಕಟಗಿರಿಗೆ ಪ್ರಯಾಣ ಬೆಳೆಸಬೇಕು. ಆವಶ್ಯಕ ಸಾಹಿತ್ಯ ಸಲಕರಣೆಗಳೊಂದಿಗೆ ಸರ್ವರೂ ಸಿದ್ಧರಾಗಿರಲಿ" ಎಂದು ಅಪ್ಪಣೆ ನೀಡಿ ಮಹಾರಾಜನು ಅಂತಃಪುರಕ್ಕೆ ಆಗಮಿಸಿದನು.

ಪ್ರಜೆಗಳನ್ನೆಲ್ಲ ಬೀಳ್ಕೊಟ್ಟು ರಾಣೀವಾಸಕ್ಕೆ ಬಂದ ಮಹಾರಾಜನು ತನ್ನ ಪಟ್ಟರಾಣಿಗೂ ಹಾಗೂ ಇತರ ಪತ್ನಿಯರಿಗೂ ವರಾಹದೇವರ ಸಂದರ್ಶನದ ವೃತ್ತಾಂತವನ್ನು ತಿಳಿಸಿದನು. ಅವರೆಲ್ಲರೂ ಅದರಿಂದ ಆನಂದ ಪುಲಕಿತರಾದರು. ಮಹಾರಾಜನು ಅಂದು ರಾತ್ರಿ ಶ್ರೀನಿವಾಸದೇವರನ್ನು ಮನದಲ್ಲಿ ನೆನೆಯುತ್ತ ಮಲಗಿ ಕೊಂಡನು. ಅಂದು ಆ ತೋಂಡಮಾನನ ಕನಸಿಲ್ಲಿ ಕಾಣಿಸಿಕೊಂಡ ಆ ಶ್ರೀನಿವಾಸ ಪ್ರಭು. ಸ್ವಪ್ನದಲ್ಲಿ ಸಂದರ್ಶನವಿತ್ತ ಆ ಭಗವಂತನು ಆ ಕನಸಿನಲ್ಲಿಯೇ ಮಹಾರಾಜನಿಗೆ ಅರಮನೆಯಿಂದ ಆ ಬೆಟ್ಟದ ಮೇಲಿನ ಆ ಹಾವಿನಹುತ್ತದವರೆಗೆ ಗುಪ್ತ ದಾರಿಯನ್ನು ತೋರಿಸಿದನು. ಆ ಬಿಲಮಾರ್ಗವು ರಾಜಭವನದಿಂದ ಸ್ವಾಮಿಪುಷ್ಕರಣಿಯ ತಟಾಕದಲ್ಲಿ ಇದ್ದ ವಲ್ಮೀಕದವರೆಗೂ ಹೋಗಿದ್ದಿತು. ಸ್ವಪ್ನದಲ್ಲಿ ಶ್ರೀನಿವಾಸ ದೇವರು ತೋರಿದ ಆ ಸುರಂಗದ ದಾರಿಗುಂಟ ತಳಿರು ಚಿಗುರೆಲೆಗಳನ್ನು ಹಾಸಿದಂತೆ ಎರಚಲಾಗಿದ್ದಿತು. ಮಹಾರಾಜನಿಗೆ ಎಚ್ಚರವಾಯಿತು. ಕೂಡಲೇ ಅವನು ತನ್ನ ಮಂತ್ರಿಗಳನ್ನು ಬ್ರಾಹ್ಮಣರನ್ನು ಕರೆಸಿದ. ಅವರೆಲ್ಲರಿಗೂ ತಾನು ಸ್ವಪ್ನದಲ್ಲಿ ಕಂಡದ್ದನ್ನು ತಿಳಿಸಿದ. ಎಲ್ಲರಿಗೂ ಕೌತುಕ ವಾಯಿತು ಮಹಾರಾಜನ ಈ ಕನಸಿನ ಕಥೆಯನ್ನು ಕೇಳಿ. ಎಲ್ಲರೂ ಹೊರಗೆ ಎದ್ದು ಬಂದು ನೋಡಿದರು. ಅರಮನೆಯ ಮಹಾದ್ವಾರದಿಂದ ಮುಂದೆ ಉದ್ದಕ್ಕೂ ಎಳೆ ತಳಿರುಗಳನ್ನು ಹಾಸಿದಂತೆ ಒಂದು ಚಿಗುರೆಲೆಯ ಪ್ರದೀರ್ಘವಾದ ಬಿಲಮಾರ್ಗವೇ ನಿರ್ಮಾಣವಾಗಿತ್ತು. ಮಹಾರಾಜನು ಅಶ್ವಾರೂಢನಾದ.

ಪಲ್ಲವಗಳನ್ನು ಉದ್ದಕ್ಕು ಚಲ್ಲಿ ಗುರುತು ತೋರಿದ ರಂಧ್ರದ ದಾರಿಗುಂಟ ಮಂತ್ರಿ ಪ್ರಜಾಪರಿವಾರದೊಂದಿಗೆ ನಡೆದ. ಚಿಗುರೆಲೆಗಳನ್ನು ಹಾಸಿ ನಿರ್ಮಿಸಿದಂತಿದ್ದ ಆ ಪಲ್ಲವ ಪಥವು ನಾರಾಯಣಪುರದಿಂದ ವೆಂಕಟಬೆಟ್ಟದ ಎತ್ತರ, ಬಿತ್ತರ, ಬದಿ ಬದವುಗಳನ್ನು ಬಳಸಿಕೊಂಡು ನೇರವಾಗಿ ಸ್ವಾಮಿ ಪುಷ್ಕರಣಿಯ ತೀರದಲ್ಲಿರುವ ವರಾಹ ದೇವರು ವಾಸಿಸಿದ ವಲ್ಮೀಕದವರೆಗೂ ಹೋಗಿ ಮುಟ್ಟಿದ್ದಿತು. ಆ ಬಿಲಮಾರ್ಗದ ಗುಂಟ ರಾಜಪರಿವಾರವೆಲ್ಲವೂ ಪಾದಚಾರಿಗಳಾಗಿಯೇ ಸ್ವಾಮಿ ಪುಷ್ಕರಣಿಯ ಹತ್ತಿರದ ಹುತ್ತದ ಬಳಿಗೆ ಬಂದು ನಿಂತರು.

ಅಲ್ಲಿ ಭಗವಂತನ ಆದೇಶದಂತೆ ಕಪಿಲ ಗೋವುಗಳನ್ನು ಕರೆದು ಅವುಗಳ ಶುಭ್ರವಾದ ಮತ್ತು ಸ್ವಚ್ಛವಾದ ಧವಲ ದೀಧಿತಿಯ ದುಗ್ಧದಿಂದ ಆ ಹುತ್ತಿನ ಅಂಗಳವನ್ನೆಲ್ಲ ಅಭಿಷೇಕಿಸಿ ತೊಳೆದರು. ಆಗ ಅಲ್ಲಿ ಮಹಾರಾಜನಿಗೆ ಕನಸಿನಲ್ಲಿ ಸೂಚನೆಯಾದಂತೆ ಒಂದು ಮಸೃಣ ಶಿಲಾ ಫಲಕವು ಗೋಚರವಾಯಿತು. ಸ್ಥಾಪತ್ಯ ಕಲಾಭಿಜ್ಞ ಓರ್ವ ಶಿಲ್ಪಿ ಸಾರ್ವಭೌಮನಿಂದ ಭೂ ವರಾಹ ದೇವರ ಪ್ರತಿಮೆಯನ್ನು ಕೆತ್ತಿಸಲಾಯಿತು.

ಅನಂತರ ತೋಂಡಮಾನ ಮಹಾರಾಜನು ವೈಖಾನಸ ಆಗಮದಲ್ಲಿ ಹಾಗೂ ವೈಷ್ಣವ ತಂತ್ರಗಳಲ್ಲಿ ಪರಿಣತರಾದ ಪ್ರಾಜ್ಞ ಪುರೋಹಿತರನ್ನು ಕರೆಸಿ ಸ್ವಾಮಿಪುಷ್ಕರಣೀ ತಟಾಕದಲ್ಲಿ ಭೂ ವರಾಹ ದೇವರ ಸುಂದರವಾದ ಮೂರ್ತಿಯನ್ನು ಪ್ರತಿಷ್ಠೆಗೊಳಿಸಿದನು. ಮತ್ತು ಅಲ್ಲಿಯೇ ಸ್ವಾಮಿ ಪುಷ್ಕರಣೀ ದಂಡೆಯ ಮೇಲೆ ಭೂ ವರಾಹ ದೇವರು ಹಾಗೂ ಶ್ರೀನಿವಾಸ ದೇವರ ದೇವಸ್ಥಾನಗಳ ಸುತ್ತಮುತ್ತ ಒಂದು ದಿವ್ಯವಾದ ನವನಗರವನ್ನೇ ನಿರ್ಮಾಣ ಮಾಡಿದನು. ಆ ವೇಳೆಯಲ್ಲಿ ಸ್ವಯಂ ವರಾಹದೇವರು ಮತ್ತೊಮ್ಮೆ ತೋಂಡಮಾನ ರಾಜನ ಕನಸಿನಲ್ಲಿ ಕಾಣಿಸಿಕೊಂಡ. ''ನಾನು ನೆಲೆನಿಂತ ಸ್ವಾಮಿ ಪುಷ್ಕರಣಿಯ ಹೊಕ್ಕರಣಿಯ ತಡಿಯಲ್ಲಿ ಹುಣಸಿ, ಸಂಪಿಗೆ ಎರಡು ಮರಗಳನ್ನು ನೆಡು. ಈ ಎರಡೂ ಮರಗಳಲ್ಲಿ ನಿತ್ಯವೂ ಶ್ರೀದೇವಿಯ ಸನ್ನಿಧಾನ. ಆದುದರಿಂದಲೇ ಇವೆರಡೂ ಮರಗಳು ನನಗೆ ಪ್ರಿಯತರವಾದವುಗಳು.''

ವರಾಹದೇವರ ಸ್ವಪ್ನ ಸಂದೇಶದಂತೆ ತೋಂಡಮಾನ ಮಹಾರಾಜನು ಆ ನಿರ್ದಿಷ್ಟ ಸ್ಥಳದಲ್ಲಿ ಹುಣಸೆ, ಸಂಪಿಗೆ ಜೋಡು ಮರಗಳನ್ನು ನೆಟ್ಟನು. ಮತ್ತು ತನ್ನ ಕನಸಿನಲ್ಲಿ ಕಂಡು ಪ್ರತ್ಯಕ್ಷವಾಗಿ ನೋಡಿ ಹಾದು ಬಂದ ಆ ಚಿಗುರೆಲೆಯ ಸುರಂಗ ಮಾರ್ಗದ ಬೆಟ್ಟ ಬಯಲುಗಳನ್ನು ತುಂಬ ಪರಿಶ್ರಮದಿಂದ ಕಡಿಸಿ, ಕೊರಿಸಿ, ಅಲ್ಲಲ್ಲಿ ಮೆಟ್ಟಿಲುಗಳನ್ನು ನಿರ್ಮಿಸಿ ನೂರಾರು ಜನರು ಒಮ್ಮೆಲೆ ಸುಖವಾಗಿ ಹತ್ತಿ ಇಳಿಯುವಂತೆ ನಾರಾಯಣಪುರದಿಂದ ಪುಷ್ಕರಣಿಯ ವರೆಗೆ ನೇರ ಮಾರ್ಗವನ್ನು ನಿರ್ಮಿಸಿದನು. ಸ್ವಾಮಿಯ ಪೂಜೆಗಾಗಿ ವೈಖಾನಸ ಕುಲದ ಹಲವಾರು ಮುನಿಗಳನ್ನು ನಿಯಮಿಸಿದ. ಪ್ರತಿದಿನವೂ ಅವನು ಅದೇ ವನವೀಥಿಯಿಂದ ನಾರಾಯಣಪುರದಿಂದ ಆಗಮಿಸಿ ವರಾಹದೇವರ ಎದುರುಗಡೆ ಸ್ವಾಮಿ ಪುಷ್ಕರಣಿಯಲ್ಲಿ ಮಿಂದು ವರಾಹದೇವರ ಪೂಜೆಮಾಡಿಕೊಂಡು ಅನಂತರ ಶ್ರೀನಿವಾಸ ದೇವರ ದರ್ಶನ ತೆಗೆದುಕೊಂಡು ರಾಜಧಾನಿಗೆ ಮರಳುತ್ತಿದ್ದ. ಈ ವರಾಹಸ್ವಾಮಿಯ ನಿತ್ಯದರ್ಶನ ಪೂಜೆ ಹಾಗು ಸೇವೆಯ ಪುಣ್ಯದಿಂದ ಇಹಲೋಕದಲ್ಲಿ ಸಕಲವಿಧ ಸುಖ ಸಮೃದ್ಧಿಯ ಜೀವನವನ್ನು ಬಾಳಿ ಧರ್ಮಚಕ್ರವನ್ನು ನ್ಯಾಯನೀತಿಗಳ ಮಾರ್ಗದಿಂದ ಪ್ರವರ್ತಿಸುತ್ತಲಿದ್ದ.

ಒಂದಾನೊಂದು ದಿನ ದಕ್ಷಿಣದೇಶದ ಓರ್ವ ಸದಾಚಾರದ ಬ್ರಾಹ್ಮಣನು ಮಡದಿಯೊಂದಿಗೆ ಗಂಗಾಸ್ನಾನಕ್ಕೆ ಹೊರಟನು. ಬ್ರಾಹ್ಮಣ ಇದ್ದದ್ದು ದಕ್ಷಿಣದೇಶದ ಕೊನೆಯಲ್ಲಿ. ಗಂಗೆ ಇರುವದು ಭಾರತದ ಉತ್ತರದತುದಿಯಲ್ಲಿ. ಕಾಲುನಡಿಗೆಯಿಂದಲೇ ಪ್ರಯಾಣ. ಅನೇಕ ತಿಂಗಳುಗಳು ಹತ್ತಿದವು ಆ ಬ್ರಾಹ್ಮಣ ದಂಪತಿಗಳಿಗೆ ವೆಂಕಟಾಚಲವನ್ನು ಮುಟ್ಟಲು. ಮಾರ್ಗದಲ್ಲಿಯೇ ಅವನ ಹೆಂಡತಿಯು ಗರ್ಭವತಿಯಾದಳು. ಅವಳಿಗೆ ಮುಂದೆ ಗರ್ಭದ ಭಾರದಿಂದ ದುರ್ಗಮವಾದ ಮಾರ್ಗವನ್ನು ಕ್ರಮಿಸಲು ಅಶಕ್ಯವಾಯಿತು. ಆ ಬ್ರಾಹ್ಮಣ ದಂಪತಿಗಳು ಹೇಗೋ ನಾರಾಯಣಪುರಕ್ಕೆ ಬಂದು ತಲುಪಿದರು.

ಆ ಬ್ರಾಹ್ಮಣನು ತೋಂಡಮಾನ ಮಹಾರಾಜನ ಅರಮನೆಗೆ ಬಂದನು, ಅವನಿಗೆ ಆದರ ಸತ್ಕಾರಮಾಡಿ ಕುಶಲ ಪ್ರಶ್ನೆಗಳನ್ನು ಕೇಳಿ ವಿಚಾರಿಸಿದ ಮಹಾರಾಜ- "ಬ್ರಾಹ್ಮಣೋತ್ತಮರೇ! ತಮ್ಮ ಆಗಮನ ನನಗೆ ಪರಮ ಸಂತೋಷ. ದಕ್ಷಿಣ ಸಮುದ್ರದ ತೀರಪ್ರಾಂತದಲ್ಲಿರುವ ತಾವು ಇಲ್ಲಿಗೆ ಬಂದ ಕಾರಣವೇನು? ನನ್ನಿಂದ ತಮಗೆ ಏನು ಕಾರ್ಯವಾಗಬೇಕು? ನಿಮ್ಮ ಆಜ್ಞೆಯನ್ನು ಪಾಲಿಸಲು ನಾನು ಸಿದ್ಧನಾಗಿದ್ದೇನೆ.

**ಬ್ರಾಹ್ಮಣ:-** ರಾಜರ್ಷಿಯೆ! ನಾನು ವಶಿಷ್ಠ ಗೋತ್ರದಲ್ಲಿ ಹುಟ್ಟಿರುವೆ. ವೀರಶರ್ಮ ನನ್ನ ಹೆಸರು. ನಾನೊಬ್ಬ ಸಾಮವೇದಿ ಬ್ರಾಹ್ಮಣ. ವೇದ ವೇದಾಂತಗಳನ್ನು ಓದಿದ್ದೇನೆ. ಮನೆಯಿಂದ ಗಂಗಾಸ್ನಾನ ಮಾಡಿಬರಬೇಕೆಂದು ಉತ್ತರದೇಶದ ಪ್ರಯಾಣ ಹೊರಟಿದ್ದೆ ಮಡದಿಯೊಂದಿಗೆ. ಮಾರ್ಗದಲ್ಲಿಯೇ ನನ್ನ ಈ ಸೌಭಾಗ್ಯವತಿಯು ಗರ್ಭಿಣಿಯಾದಳು. ಗಂಗೆ ಇನ್ನೂ ಬಹುದೂರ. ಈ ಗರ್ಭಿಣಿ ಹೆಣ್ಣು ಮಗಳು ಕಾಲುನಡಿಗೆಯಿಂದ ಈ ಸಹಸ್ರಾರು ಮೈಲುಗಳ ಮಾರ್ಗವನ್ನು ನಡೆಯಲಾರಳು. ಒಮ್ಮೆ ಸಂಕಲ್ಪಿಸಿ ಹೊರಟ ಬಳಿಕ ನಾನು ತಿರುಗಿ ಮನೆಗೆ ಮರಳಲಾರೆ. ಆದುದರಿಂದ ನನಗೆ ಈಗ ಧರ್ಮಸಂಕಟ ಬಂದಿದೆ. ತಾವು ಈಗ ನನಗೆ ಉಪಕಾರ ಮಾಡಬೇಕು. ನಾನು ತಿರುಗಿ ಬರುವವರೆಗೆ ನನ್ನ ಪತ್ನಿಯನ್ನು ತಮ್ಮ ಅರಮನೆಯಲ್ಲಿ ಇರಿಸಿಕೊಳ್ಳಬೇಕು. ಈ ನನ್ನ ಹೆಂಡತಿಯು ಕೌಶಿಕ ಕುಲದಲ್ಲಿ ಹುಟ್ಟಿದವಳು. ಲಕ್ಷ್ಮಿ ಎಂದು ಇವಳ ಹೆಸರು, ನಿಜವಾಗಿಯೂ ಇವಳು ನನ್ನ ಗೃಹಲಕ್ಷ್ಮಿಯೇ ಸರಿ. ಒಳ್ಳೇ ಶೀಲ, ಸದ್ಗುಣ, ಸೌಜನ್ಯಗಳ ಸಾಕಾರ ಮೂರ್ತಿ, ಪಾತಿವ್ರತ್ಯದ ಪ್ರತೀಕ. ಇವಳನ್ನು ತಮ್ಮ ಮನೆಯಲ್ಲಿ ಇಟ್ಟು ನಾನು ನನ್ನ ಗಂಗಾಸ್ನಾನದ ಸಂಕಲ್ಪವನ್ನು ಪೂರೈಸಿಕೊಂಡು ಬರುವೆನು. ಅಲ್ಲಿಯವರೆಗೆ ಇವಳನ್ನು ತಮ್ಮ ಮನೆಯಲ್ಲಿ ಇಟ್ಟುಕೊಂಡು ನನಗೆ ಉಪಕಾರ ಮಾಡಬೇಕು."

ಬ್ರಾಹ್ಮಣನ ಈ ಬಿನ್ನಹವನ್ನು ಕೂಡಲೇ ಮನ್ನಿಸಿದ ಆ ಮಹಾರಾಜ. ತನ್ನ ಅಂತಃಪುರದ ಆವರಣದಲ್ಲಿಯೇ ಒಂದು ಪ್ರತ್ಯೇಕ ಮನೆಯನ್ನು ಇರಲು ಕೊಟ್ಟ. ಆರು ತಿಂಗಳು ಸಾಲಬಹುದಾದಷ್ಟು ಅಕ್ಕಿ, ಬೇಳೆ, ಕಾಳು ಕಡಿಗಳನ್ನು ಪರ್ಯಾಪ್ತವಾಗಿ ಅವಳ ಮನೆಯಲ್ಲಿ ಇರಿಸಿದ. ಮೇಲೆ ವೆಚ್ಚಕ್ಕಾಗಿ ಅವಳಿಗೆ ಹಣವನ್ನು ಕೊಡಲಿಕ್ಕೆ ಹೇಳಿದ. ಬ್ರಾಹ್ಮಣನು ಅಲ್ಲಿ ಇರುವಾಗಲೇ ಅವಳು ಸುರಕ್ಷಿತವಾಗಿ ಸುಖದಿಂದ ಅಲ್ಲಿ ಇರುವಂತೆ ಏರ್ಪಾಡುಗಳನ್ನು ಮಾಡಿದ.

ಹೀಗೆ ತನ್ನ ಪತ್ನಿಯು ತಾನು ಯಾತ್ರೆ ಮುಗಿಸಿಕೊಂಡು ಮರಳಿ ಬರುವ ಬರುವವರೆಗೆ ಸುರಕ್ಷಿತವಾಗಿ ಸುಖದಿಂದ ಇರುವಂತೆ ಮಹಾರಾಜನು ಏರ್ಪಾಡು ಮಾಡಿದ್ದನ್ನು ನೋಡಿ ಆ ಬ್ರಾಹ್ಮಣನಿಗೆ ಸಂತೋಷವೂ ಆಯಿತು. ಸಮಾಧಾನವೂ ಆಯಿತು. ಈಗ ಅವನು ನಿಶ್ಚಿಂತೆಯಿಂದ ಗಂಗಾ ಸ್ನಾನಕ್ಕಾಗಿ ಪ್ರಯಾಣ ಹೊರಟ. ಜೊತೆಗೆ ಹೆಂಡತಿ ಇಲ್ಲದಿರುವದರಿಂದ ಚುರುಕಾಯಿತು ಅವನ ನಡಿಗೆ. ತಿರುಗಿ ಬೇಗ ಬರಬೇಕೆಂಬ ಒತ್ತಾಸೆಯೂ ಸೇರಿದ್ದರಿಂದ ಅವನು ಬೇಗ ಬೇಗ ಪ್ರಯಾಣ ಮಾಡಿದ. ಗಂಗಾ ಯಮುನಾ ಸಂಗಮದ ಪವಿತ್ರ ಕ್ಷೇತ್ರವಾದ ಪ್ರಯಾಗ ತೀರ್ಥಕ್ಕೆ ಬಂದು ಮುಟ್ಟಿದ. ಎರಡು ಪುಣ್ಯ ನದಿಗಳು ಸಂಗಮಿಸಿದ ಆ ಹೃದಯಂಗಮವಾದ ಪವಿತ್ರ ತೀರ್ಥದಲ್ಲಿ ಸ್ನಾನಮಾಡಿ ಧನ್ಯನಾದ. ಬಹುದಿನದ ಬಯಕೆ ಅಂದು ಈಡೇರಿದ್ದರಿಂದ ಶಾಂತಿ ಸಂತಸಗಳು ಅವನ ಅಂತರಗದ ತುಂಬ ವ್ಯಾಪಿಸಿದವು.

ಪ್ರಯಾಗ ಕ್ಷೇತ್ರದಿಂದ ಅವನು ನೇರವಾಗಿ ಕಾಶಿಗೆ ಬಂದ. ಅಲ್ಲಿಯೂ ಮೂರುದಿನ ಗಂಗೆಯಲ್ಲಿ ಮಿಂದು ವಿಶ್ವನಾಥನ ಸಂದರ್ಶನದಿಂದ ಪುನೀತನಾದ. ಆ ನಂತರ ಗಯಾ ಕ್ಷೇತ್ರಕ್ಕೆ ಪ್ರಯಾಣಿಸಿದ. ಫಲ್ಗು ತೀರ್ಥದಲ್ಲಿ ಸ್ನಾನ ಮಾಡಿದ. ಗಯಾ ಗದಾಧರನ ಪಾದದ ಮೇಲೆ ಪಿತೃಗಳನ್ನು ಉದ್ದೇಶಿಸಿ ಪಿಂಡ ಪ್ರದಾನಮಾಡಿದ ಯಥಾಸಾಂಗವಾಗಿ. ಅನಂತರ ಅಯೋಧ್ಯಾಪುರಿಯ ಯಾತ್ರೆಯನ್ನು ಮಾಡಿಕೊಂಡು ಭೂ ವೈಕುಂಠದಂತಿರುವ ಬದರೀ ಕ್ಷೇತ್ರಕ್ಕೆ ಪ್ರಯಾಣಗೈದ. ಆ ವಿಶಾಲಾ ಕ್ಷೇತ್ರದ ಅಲಕನಂದಾ ತೀರ್ಥದಲ್ಲಿ ಮುಳುಗು ಹಾಕಿದ. ನರನಾರಾಯಣ ಸಂದರ್ಶನದಿಂದ ಕೃತಾರ್ಥನಾದ. ಉತ್ತರ ದೇಶದ ತನ್ನ ಯಾತ್ರೆ ಎಲ್ಲವೂ ನಿರ್ವಿಘ್ನವಾಗಿ ನಡೆದದ್ದರಿಂದ ಆ ನಾರಾಯಣನಿಗೆ ಸಹಸ್ರ ವಂದನೆಗಳನ್ನು ಸಲ್ಲಿಸಿದ. ಅನಂತರ ಸಾಲಿಗ್ರಾಮ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನ ದೇವತಾ ದರ್ಶನಾದಿಗಳನ್ನು ಮಾಡಿಕೊಂಡು ತನ್ನ ತೀರ್ಥಕ್ಷೇತ್ರ ಯಾತ್ರೆಯನ್ನು ಕೊನೆಗೊಳಿಸಿದ. ಅಲ್ಲಿಂದ ತನ್ನ ದೇಶಕ್ಕೆ ಮರು ಪ್ರಯಾಣ ಹೊರಟ. ಅವನು ಮರಳಿ ತನ್ನ ಹೆಂಡತಿಯನ್ನು ಇರಿಸಿದ ನಾರಾಯಣಪುರಕ್ಕೆ ಬರುವಷ್ಟರಲ್ಲಿ ಎರಡು ವರ್ಷಗಳೇ ಉರುಳಿದ್ದವು.

ವೈಶಾಖಮಾಸದ ಶುಕ್ಲಪಕ್ಷ ಏಕಾದಶಿ ದಿನದಂದು ಅವನು ತೋಂಡಮಾನ ರಾಜನ ಬಳಿಗೆ ಬಂದು ನಿಂತುಕೊಂಡ. ಮಹಾರಾಜನಿಗೆ ಕಾರ್ಯಗಳ ಬಾಹುಲ್ಯ. ರಾಜಕಾರಣ, ಗೃಹಕಾರಣ, ಭಗವತ್ ಸೇವೆ, ವರಾಹದೇವರ ಕಾರ್ಯ. ದೇವ ಬ್ರಾಹ್ಮಣರ ಆರಾಧನೆ, ಯಜ್ಞ, ಯಾಗ, ಅತಿಥಿಸತ್ಕಾರ, ಕೌಟುಂಬಿಕ ಕಾರ್ಯಕಲಾಪಗಳ ಅವಾಂತರದಲ್ಲಿ ಎರಡು ವರ್ಷಗಳ ಹಿಂದೆ ಎಂದೋ ಒಂದು ದಿನ ಹತ್ತುನಿಮಿಷ ಬಂದು ಭೆಟ್ಟಿಯಾಗಿ ಹೋದ ಈ ಬ್ರಾಹ್ಮಣನ ವಿಷಯವೇ ಪೂರ್ತಿ ಮರೆತುಹೋಗಿತ್ತು ಆ ರಾಜನಿಗೆ. ಆ ಬ್ರಾಹ್ಮಣ ಬಂದದ್ದೂ ನೆನಪಿಲ್ಲ. ಅವನ ಹೆಂಡತಿಯನ್ನು ತನ್ನಲ್ಲಿ ಇಟ್ಟಿದ್ದೊ ಸ್ಮರಣೆ ಇಲ್ಲ. ಅವನ ಗರ್ಭಿಣಿ ಸ್ತ್ರೀಗಾಗಿ ತಾನು ಮಾಡಿದ ವ್ಯವಸ್ಥೆ ಮರೆತು ಹೋಗಿತ್ತು ಆ ಮಹಾರಾಜನಿಗೆ. ಆ ಬ್ರಾಹ್ಮಣನ ಮಡದಿಯಾದ ಲಕ್ಷ್ಮೀದೇವಿಯು ಮಹಾಸ್ವಾಭಿಮಾನಿನಿ. ಮಹಾರಾಜನು ತನ್ನ ಗಂಡನು ಇದ್ದಾಗ ತನ್ನ ಮನೆಯಲ್ಲಿ ತಂದಿಟ್ಟ ಅಕ್ಕಿ ಬೇಳೆ ಮುಂತಾದ ಧಾನ್ಯ ಮತ್ತು ಹಣ ಎಲ್ಲವೂ ಆರು ತಿಂಗಳ ವರೆಗೆ ಸಾಕಾಗುವಷ್ಟು ಇದ್ದಿತು. ಆ ಹಣ ಧಾನ್ಯಗಳಿಂದ ಆರು ತಿಂಗಳು ಅವಳು ಸುಖವಾಗಿಯೇ ಇದ್ದಳು. ಅನಂತರ ಅವಳು ತಾನಾಗಿ ಅರಮನೆಯ ಯಾವ ಅಧಿಕಾರಿಯನ್ನಾಗಲಿ ಮಹಾರಾಜರನ್ನಾಗಲಿ ಧಾನ್ಯ ಹಣ ಬೇಕು ಎಂದು ಕೇಳಲಿಲ್ಲ. ಉಳಿದವರೆಲ್ಲರಿಗೂ ತಮ್ಮ ತಮ್ಮ ಕಾರ್ಯಭಾರದಲ್ಲಿ ಅಂತಃಪುರದ ದೊಡ್ಡ ಆವರಣದ ಒಂದು ಮೂಲೆಯ ಕೋಣೆಯಲ್ಲಿರುವ ಈ ಬ್ರಾಹ್ಮಣಿಯ ನೆನಪೇ ಆಗಲಿಲ್ಲ. ಮನೆಯಲ್ಲಿಯೆ ಅವಳು ಉಪವಾಸ ಮಾಡಿ ಮಾಡಿ ಕೊರಗಿದಳು. ಆಹಾರವಿಲ್ಲದ್ದರಿಂದ ಸೊರಗಿ ಸಣ್ಣಾದಳು. ಹೀಗೆ ಅನೇಕ ದಿನ ಹೊಟ್ಟೆಗೆ ಅನ್ನ ತಿನ್ನದೆ ಸವೆದು ಸವೆದು ಸವೆದು ಕ್ಷೀಣವಾಗಿ ಮನೆಯಲ್ಲಿಯೇ ಮರಣ ಹೊಂದಿದಳು. ಇದು ಯಾರಿಗೂ ಗೊತ್ತಾಗಿರಲಿಲ್ಲ.

ವೀರಶರ್ಮಾ ಬ್ರಾಹ್ಮಣನು ತನ್ನ ತೀರ್ಥಯಾತ್ರೆಯು ಯಥಾ ಸಾಂಗವಾಗಿ ನೆರವೇರಿದ್ದಕ್ಕಾಗಿ ಪರಮಾನಂದದಿಂದ ಹೆಂಡತಿಯನ್ನು ಕರೆದೊಯ್ಯಬೇಕೆಂದು ರಾಜನ ಬಳಿಗೆ ಬಂದನು. ಮಹಾರಾಜನಿಗಾಗಿ ತಾನು ಹೊತ್ತು ತಂದ ಗಂಗಾಜಲದ ಒಂದು ಕಲಶವನ್ನು ರಾಜನಿಗೆ ಆಶೀರ್ವಾದಪೂರ್ವಕ ಕೊಟ್ಟು ಕೇಳಿದನು-''ನನ್ನ ಧರ್ಮಪತ್ನಿಯು

ಕ್ಷೇಮದಿಂದಿರುವಳಷ್ಟೇ? ಅವಳನ್ನು ನನ್ನ ಜೊತೆಗೆ ಕರೆದುಕೊಂಡು ಹೋಗುತ್ತೇನೆ. ಅವಳು ಎಲ್ಲಿ? ಬೇಗ ಕರೆಯಿಸಿರಿ. ನನ್ನೊಡನೆ ಕಳಿಸಿರಿ.''

ವೀರಶರ್ಮ ಬ್ರಾಹ್ಮಣನ ಮುಖವನ್ನು ಕಂಡಕೂಡಲೇ ರಾಜನಿಗೆ ಒಮ್ಮೆಲೆ ನೆನಪಾಯಿತು ಎರಡು ವರ್ಷಗಳ ಹಿಂದಿನ ಘಟನೆ. ಆ ಬ್ರಾಹ್ಮಣನನ್ನು ಅಲ್ಲಿಯೇ ಕೂಡ ಹೇಳಿ ತಾನು ಅವನ ಮಡದಿಯನ್ನು ಇರಿಸಿದ ಕೋಣೆಗೆ ಧಾವಿಸಿದ. ಅವಳು ಅಲ್ಲಿ ಸತ್ತು ಬಿದ್ದಿದ್ದಳು. ಅವಳ ಶವವು ಕೂಡ ಒಣಗಿ ಹೋಗಿ ಬರೀ ಅಸ್ಥಿ ಚರ್ಮಗಳ ಪಂಜರ ಮಾತ್ರ ಉಳಿದಿತ್ತು. ಈ ಸಮಾಚಾರವನ್ನು ಆ ಬ್ರಾಹ್ಮಣನಿಗೆ ತಿಳಿಸಲು ಧೈರ್ಯವೇ ರಾಜನಿಗೆ ಆಗಲಿಲ್ಲ. ಆಗ ಅವನು ಏನೂ ತೋಚದೆ ಹಿಂದೆ ವೆಂಕಟಾಲದ ವರೆಗೆ ದೇವರಿಂದಲೇ ನಿರ್ಮಿತವಾದ ಸುರಂಗ ಮಾರ್ಗದಿಂದ ಶ್ರೀನಿವಾಸ ದೇವರ ಬಳಿ ಬಂದ. ರಾಜನು ಬರುವದನ್ನು ನೋಡಿದ ಕೂಡಲೇ ಅವನ ಅಕ್ಕಪಕ್ಕದಲ್ಲಿದ್ದ ಶ್ರೀದೇವಿ-ಭೂದೇವಿಯರು ಒಳಗೆ ಎದ್ದು ಹೋದರು. ತೋಂಡಮಾನನು ಶ್ರೀನಿವಾಸ ದೇವರಿಗೆ ಸಾಷ್ಟಾಂಗ ಪ್ರಣಾಮ ಮಾಡಿದ. ಆಗ ಭಗವಂತನು ರಾಜನಿಗೆ ಕೇಳಿದ. ''ರಾಜನೇ, ಈ ಕಾಲದಲ್ಲಿ ನೀನು ಹೀಗೇಕೆ ಧಾವಿಸಿ ಇಲ್ಲಿಗೆ ಬಂದಿರುವೆ?'' ಆಗ ತೋಂಡಮಾನನು ನಡೆದ ವೃತ್ತಾಂತವನ್ನೆಲ್ಲ ಭಗವಂತನಿಗೆ ನಿವೇದಿಸಿದ. ಬ್ರಹ್ಮಹತ್ಯೆ ಸ್ತ್ರೀಹತ್ಯೆ ಪಾಪಗಳು ತನ್ನಿಂದ ತಿಳಿಯದೇ ನಡೆದದ್ದಕ್ಕೆ ತನಗೆ ಏನು ಪ್ರಾಯಶ್ಚಿತ್ತ ಯಾವ ಶಿಕ್ಷೆ? ಏನು ದಂಡ? ಮುಂದೇನು ಗತಿ? ಎಂದು ಕೇಳಿದ ಭಯಭ್ರಾಂತನಾಗಿ, ಭಕ್ತವತ್ಸಲನಲ್ಲವೇ ಆ ನಮ್ಮ ಭಗವಂತ! ಭಯಕೃದ್ ಭಯ ನಾಶನಾದ ಶ್ರೀನಿವಾಸ ನಸುನಗುತ್ತ ನುಡಿದ.

**ಶ್ರೀನಿವಾಸ:-** ''ರಾಜನ್! ಭಯಭ್ರಾಂತನಾಗಬೇಡ. ಭಕ್ತರ ಸಂಕಟವನ್ನು ಪರಿಹರಿಸಲಿ ಕ್ಕಾಗಿಯೇ ಅಲ್ಲವೆ ನಾನು ಈ ವೆಂಕಟಗಿರಿಯಲ್ಲಿ ಬಂದು ನಿಂತದ್ದು! ನೀನು ಈಗ ಒಂದು ಕೆಲಸ ಮಾಡು. ಆ ಬ್ರಾಹ್ಮಣಿಯ ಶವವನ್ನು ಡೋಲಿಯಲ್ಲಿ ಕೂಡಿಸಿಕೊಂಡು ರಾಣಿಯೊಂದಿಗೆ ಇಲ್ಲಿಗೆ ಕರೆದುಕೊಂಡು ಬಾ, ಇಲ್ಲಿಂದ ಪೂರ್ವದಿಕ್ಕಿನಲ್ಲಿ ಅಸ್ಥಿಸರೋವರ ಎಂಬ ತೀರ್ಥವಿದೆ, ಅದರಲ್ಲಿ ನಾಳೆ ದ್ವಾದಶಿಯ ದಿನ ಅಸ್ಥಿ ಚರ್ಮ ಮಾತ್ರ ಅವಶಿಷ್ಟವಾದ ಅವಳ ದೇಹವನ್ನು ಎದ್ದಿ ತೆಗೆ. ಅವಳೊಡನೆ ನಿನ್ನ ರಾಣಿಯರಿಗೂ ದಾಸಿಯರಿಗೂ ಆ ತೀರ್ಥದಲ್ಲಿ ಸ್ನಾನ ಮಾಡಲಿಕ್ಕೆ ಹೇಳು. ಆ ತೀರ್ಥದಲ್ಲಿ ಮುಳುಗಿಸಿ ತೆಗೆದ ಆ ಬ್ರಾಹ್ಮಣಿಯ ಶರೀರವು ಆಗಲೇ ಪುನರುಜ್ಜೀವಿತ ವಾಗುವದು, ಅಲ್ಲಿ ಸ್ನಾನ ಮಾಡಿದ ನಿನ್ನ ರಾಣಿ ಹಾಗು ದಾಸಿಯರೊಂದಿಗೆ ಆ ಬ್ರಾಹ್ಮಣಿಯು ಬದುಕಿ ಮೇಲೆ ಎದ್ದು ಬರುವಳು. ಆ ಅಸ್ಥಿಸರೋವರವು ಅಪಮೃತ್ಯುವನ್ನು ನಿವಾರಿಸುವದು. ಅನಂತರ ಅವಳು ತನ್ನ ಗಂಡನೊಡನೆ ಕೂಡಿಕೊಂಡು ಸ್ವದೇಶಕ್ಕೆ ಪ್ರಯಾಣ ಮಾಡಲಿ.''

ಭಗವಾನ್ ಶ್ರೀನಿವಾಸನ ಈ ಮಾತನ್ನು ಕೇಳಿ ರಾಜನು ಅದೇ ಸುರಂಗ ಮಾರ್ಗದಿಂದ ಅರಮನೆಗೆ ಬಂದನು. ಸುಂದರವಾದ ಅಲಂಕೃತ ಮೇಣೆಗಳಲ್ಲಿ ತನ್ನ ರಾಣಿಯರನ್ನು ಮತ್ತು ಆ ಬ್ರಾಹ್ಮಣಿಯ ಶವವನ್ನು ಕೂಡಿಸಿಕೊಂಡು ಮತ್ತು ಆ ಬ್ರಾಹ್ಮಣನನ್ನು ಮುಂದೆ ಮಾಡಿಕೊಂಡು ಭಗವಂತನ ದರ್ಶನಕ್ಕಾಗಿ ಹೊರಟನು. ಎಲ್ಲರೂ ಅಸ್ಥಿಕೂಟ ಸರೋವರಕ್ಕೆ ಬಂದರು. ಸ್ತ್ರೀಯರೆಲ್ಲರೂ ಮೊದಲು ಸ್ನಾನಮಾಡಿ ಮುಗಿಸಿರಿ ಎಂದು

ಹೇಳಿ ಪುರುಷರೆಲ್ಲರೂ ತೀರ್ಥದ ದಂಡೆಯ ಮೇಲೆ ಮರದಡಿಯಲ್ಲಿ ಕುಳಿತರು. ಎಲ್ಲ ರಾಣಿಯರು ನೀರಿಗೆ ಇಳಿದರು, ದಾಸಿಯರು ಮೂಳೆ ತೊಗಲು ಮಾತ್ರ ಉಳಿದ ಬ್ರಾಹ್ಮಣಿಯ ಅಸ್ಥಿಪಂಜರವನ್ನು ಆ ತೀರ್ಥದಲ್ಲಿ ಹಾಕಿದರು. ಕೂಡಲೇ ಅವಳು ಬದುಕಿ ಆ ಎಲ್ಲ ಸ್ತ್ರೀಯರೊಡನೆ ತೀರ್ಥದಿಂದ ಮೇಲಕ್ಕೆ ಎದ್ದಳು. ಅವಳ ದೇಹವು ಮೊದಲಿನಂತೆಯೇ ಕಳೆ ಕಾಂತಿಗಳಿಂದ ಏಳು ತಿಂಗಳ ಗರ್ಭಿಣಿಯ ಸೊಬಗಿನಿಂದ ಕಂಗೊಳಿಸತೊಡಗಿತು. ಅನಂತರ ಆ ಬ್ರಾಹ್ಮಣಿಯು ರಾಣಿಯರೊಂದಿಗೆ ಆ ಸರೋವರದಲ್ಲಿ ವಿಧಿಪೂರ್ವಕ ಸ್ನಾನ ಮಾಡಿ ಮೇಲೆ ಬಂದಳು.

ಸ್ತ್ರೀಯರೆಲ್ಲ ಸ್ನಾನ ಮಾಡಿ ಬಂದಬಳಿಕ ಮಹಾರಾಜ ಹಾಗು ಆ ವೀರಶರ್ಮ ಬ್ರಾಹ್ಮಣ ಮುಂತಾದ ಪುರುಷರು ಸ್ನಾನಮಾಡಿ ಎಲ್ಲರೂ ಶ್ರೀನಿವಾಸನ ದರ್ಶನಕ್ಕೆ ಬಂದರು. ಅಲ್ಲಿ ಆ ದೇವ ಮಂದಿರದಲ್ಲಿ ದೇವರ ಸಂದರ್ಶನ, ವಂದನೆ, ಪೂಜೆ ಆದ ಬಳಿಕ ಮಹಾರಾಜನು ಆ ಬ್ರಾಹ್ಮಣಿಯನ್ನು ವೀರಶರ್ಮ ಬ್ರಾಹ್ಮಣನಿಗೆ ಒಪ್ಪಿಸಿದನು. ಆ ದಂಪತಿಗಳನ್ನು ದೇವಾಲಯದಲ್ಲಿ ಕೂಡಿಸಿ ಒಂದು ಸಾವಿರ ಬಂಗಾರದ ನಗದು ನಾಣ್ಯಗಣನ್ನು ದಕ್ಷಿಣೆಯಾಗಿ ನೀಡಿದನು. ಬಗೆಬಗೆಯ ವಸ್ತ್ರ ಆಭರಣಗಳನ್ನು ಆ ಮೊದಲಿನಂತೆಯೇ ಗರ್ಭಿಣಿಯಾಗಿಯೇ ಇದ್ದ ಆ ಬ್ರಾಹ್ಮಣಿಗೂ ನೀಡಿದನು. ''ಸುಖ ಪ್ರಸೂತಿ ಆಗುವವರೆಗೆ ನಾರಾಯಣಪುರದಲ್ಲಿ ಅರಮನೆಯ ಬಳಿಯಲ್ಲಿಯೇ ಇದ್ದು ನಂತರ ಮಗನೊಂದಿಗೆ ನಿಮ್ಮ ಸ್ವದೇಶಕ್ಕೆ ಹೋಗಬಹುದೆಂದು'' ವಿಜ್ಞಾಪಿಸಿದನು. ಅದರಂತೆ ಆ ಬ್ರಾಹ್ಮಣನು ರಾಜ ಗೌರವವನ್ನು ಹೊಂದಿ ಕೆಲವು ತಿಂಗಳು ಅಲ್ಲಿಯೇ ನಾರಾಯಣಪುರದಲ್ಲಿ ರಾಜನು ನೀಡಿದ ಒಂದು ಬೇರೆ ಮನೆಯಲ್ಲಿ ರಾಜಾಶ್ರಯದಲ್ಲಿ ಸುಖವಾಗಿ ಇದ್ದು, ಸುಖ ಪ್ರಸವವಾದ ಬಳಿಕ ಆರೋಗ್ಯದಿಂದಿರುವ ತನ್ನ ಹೆಂಡತಿ ಮಗನೊಂದಿಗೆ ಸ್ವದೇಶಕ್ಕೆ ಪ್ರಯಾಣ ಮಾಡಿದನು. ಅಂದಿನಿಂದ ಈ ಅಸ್ಥಿಸರೋವರವು ''ಮೃತ್ಯು ಪರಿಹಾರಕ ತೀರ್ಥ'' ಎಂದು ಹಿರಿಯರು ಹೇಳುತ್ತಲಿದ್ದ ಮಾತು ಜನರಿಗೆಲ್ಲ ಮನದಟ್ಟಾಯಿತು ಯಥಾರ್ಥವೆಂದು.

ತೋಂಡಮಾನ ಮಹಾರಾಜನು ಶ್ರೀನಿವಾಸದೇವರ ಆಜ್ಞೆಯಂತೆ ಪ್ರತಿದಿನವೂ ಬಂಗಾರದ ಕಮಲಗಳಿಂದ ಭಕ್ತಿಯಿಂದ ಪೂಜೆ ಮಾಡುತ್ತಿದ್ದನು ಆ ದೇವನನ್ನು. ಒಂದು ದಿನ ಪೂಜೆಗೆಂದು ಮಹಾರಾಜನು ಬಿಲದ್ವಾರದಿಂದ ಬಂದು ಬಾಗಿಲ ತೆರೆದು ದೇವಾಲಯದಲ್ಲಿ ಪ್ರವೇಶ ಮಾಡಿದನು. ಆಗ ಶ್ರೀನಿವಾಸದೇವರ ಮೈಮೇಲೆ ಮಣ್ಣಿನ ಕಮಲ ಹಾಗೂ ತುಳಸಿ ಏರಿಸಿ ಯಾರೋ ಪೂಜೆ ಮಾಡಿದಂತಿತ್ತು. ಅವನು ಆಶ್ಚರ್ಯದಿಂದ ಚಕಿತನಾಗಿ ಭಗವಂತನನ್ನು ಕೇಳಿದನು- ''ಭಗವಂತನೇ! ನಾನು ಅನುದಿನವೂ ಬಂಗಾರದ ಹೂಗಳಿಂದ ನಿನ್ನನ್ನು ಪೂಜಿಸುತ್ತೇನೆ. ಆದರೆ ಇಂದು ಇದೇನು ಆಶ್ಚರ್ಯ? ನನಗಿಂತ ಮೊದಲು ಯಾರೋ ಮಣ್ಣಿನ ಹೂ ಹಾಗೂ ತುಳಸೀ ಮಂಜರಿಗಳಿಂದ ನಿನ್ನನ್ನು ಪೂಜಿಸಿ ಬಿಟ್ಟಿದ್ದಾರೆ.''

ತೋಂಡಮಾನನ ಈ ಪ್ರಶ್ನೆಯನ್ನು ಕೇಳಿ ಶ್ರೀನಿವಾಸನು ಏನೋ ನೆನಸಿಕೊಂಡಂತೆ ಮಾಡಿ ಉತ್ತರಿಸಿದನು. ''ಕೂರ್ಮ ಗ್ರಾಮದಲ್ಲಿ ಓರ್ವ ನನ್ನ ಭಕ್ತನು ಇರುತ್ತಾನೆ. ಅವನು ಜಾತಿಯಿಂದ ಕುಂಬಾರ. ಆದುದರಿಂದ ಮಣ್ಣಿನ ಕಮಲಗಳಿಂದಲೇ ಇದೀಗ ತನ್ನ ಮನೆ ಯಲ್ಲಿಯೇ ಪುಷ್ಪಾರ್ಚನೆಯನ್ನೂ, ತುಳಸೀ ಪೂಜೆಯನ್ನೂ ನನಗೆ ಮಾಡಿದ್ದಾನೆ. ಆ ಭಕ್ತನ ಸೇವೆಯನ್ನು ನಾನು ಸ್ವೀಕರಿಸಿದ್ದೇನೆ.''

ಸ್ವಯಂ ಶ್ರೀನಿವಾಸನೇ ಹೇಳಿದ. ಈ ಮಾತನ್ನು ಕೇಳಿ ಇನ್ನೂ ಕೌತುಕವಾಯಿತು ರಾಜನಿಗೆ. ಕೂಡಲೇ ತೆರಳಿದ ಅವನು ಕೂರ್ಮಪುರಕ್ಕೆ. ಆ ಹಳ್ಳಿಯಲ್ಲಿ ಹುಡುಕಿಕೊಂಡು ಹೋದ ಕುಂಬಾರನ ಮನೆಗೆ. ರಾಜನೇ ಬಂದಿದ್ದನ್ನು ನೋಡಿ ಗಡಿಬಿಡಿಸಿ ಎದ್ದ ಭೀಮ ಎಂಬ ಹೆಸರಿನ ಆ ಕುಂಬಾರ. ರಾಜನಿಗೆ ನಮಸ್ಕಾರ ಮಾಡಿ ಕೈಜೋಡಿಸಿ ನಿಂತುಕೊಂಡ. ರಾಜನು ಅವನಿಗೆ ಕೇಳಿದ- "ಭೀಮ! ನೀನು ನಿನ್ನ ಕುಂಬಾರ ಕುಲಕ್ಕೆ ಕಿರೀಟದಂತೆ ಇರುವೆ. ಪರಮ ಭಗವದ್ಭಕ್ತ ನೀನು. ನೀನು ಆ ಶ್ರೀನಿವಾಸನ ಪೂಜೆಯನ್ನು ಮಾಡುತ್ತಿರುವಿಯಂತೆ, ಹೇಗೆ ಮಾಡುವೆ? ಹೇಳು." ರಾಜನ ಈ ಪ್ರಶ್ನೆಯನ್ನು ಕೇಳಿ ನಮ್ರತೆಯಿಂದ ಉತ್ತರಿಸಿದ ಆ ಭೀಮ- "ಮಹಾರಾಜರೇ! ದೇವರ ಪೂಜೆಯನ್ನು ಹೇಗೆ ಮಾಡಬೇಕು ಎಂಬ ವಿಧಿ-ವಿಧಾನ ಮಂತ್ರ-ತಂತ್ರ ಯಾವದೂ ನನಗೆ ತಿಳಿಯದು. ತಮಗೆ ಯಾರು ಹೇಳಿದರು ಈ ಕುಂಬಾರ ಶ್ರೀನಿವಾಸನ ಪೂಜೆ ಮಾಡುತ್ತಾನೆಂದು?

**ತೋಂಡಮಾನ:-** ಸ್ವಯಂ ಭಗವಾನ್ ಶ್ರೀನಿವಾಸನೇ ನೀನು ಅವನ ಪೂಜೆ ಮಾಡುವದನ್ನು ತಿಳಿಸಿದ್ದಾನೆ.

ರಾಜನ ಮಾತನ್ನು ಕೇಳಿ ಕುಂಬಾರನಿಗೆ ಭಗವಾನ್ ಶ್ರೀನಿವಾಸನು ತನಗೆ ಹಿಂದೆ ಕೊಟ್ಟ ವರದಾನದ ನೆನಪು ಬಂದಿತು. ಅವನು ಹೇಳಿದ- "ಮಹಾ ರಾಜರೇ! ಹಿಂದೆ ಒಂದು ದಿನ ಶ್ರೀ ವೆಂಕಟೇಶ್ವರ ಪ್ರಭುವು ನನಗೆ ಒಂದು ವರ ನೀಡಿದ್ದನು. ನೀನು ಮಾಡಿದ ಪೂಜೆಯು ಎಂದು ಬೆಳಕಿಗೆ ಬರುವುದೋ ಅಂದು ತೋಂಡಮಾನ ಮಹಾರಾಜನು ನಿನ್ನ ಮನೆಯ ಬಾಗಿಲಿಗೆ ಬರುವನು. ನಿನ್ನ ಹಾಗೂ ಅವನ ನಡುವೆ ಸಂಭಾಷಣೆ ನಡೆಯುವುದು. ಅಂದೇ ನಿನಗೆ ಮೋಕ್ಷವಾಗುವದು" ಎಂದು. ಹೇಳಿ ಗಡಿಗೆ ಮಾಡುವ ಆ ಕುಂಬಾರನು ಶ್ರೀನಿವಾಸ ದೇವರ ಆಜ್ಞೆಯಂತೆ ತನ್ನ ಮನೆ ಬಿಟ್ಟು ಹೊರಗೆ ಬಂದನು. ಅವನ ಮನೆ ಮುಂದುಗಡೆಯ ಮೈದಾನದಲ್ಲಿಯೇ ಬಂದು ಇಳಿದು ನಿಂತಿತು ವೈಕುಂಠಲೋಕದ ವಿಮಾನ. ಅದರಲ್ಲಿ ಸಾಕ್ಷಾತ್ ಶ್ರೀವಿಷ್ಣುವು ಕುಳಿತುಕೊಂಡಿದ್ದ. ಭಗವಂತನನ್ನು ಕಂಡಕೂಡಲೇ ಅವನ ಬಳಿಗೆ ಓಡಿಬಂದ ಆ ಭಕ್ತ ಕುಂಬಾರ. ಭಗವದ್ಭಕ್ತ ಭೀಮನಂತೆ ಅವನ ಭಾಮಿನಿಯೂ ಶ್ರೇಷ್ಠ ವಿಷ್ಣು ಭಕ್ತಳು. ಬಾಗಿಲ ಮುಂದೆ ಭಗವಂತ ಬಂದುದನ್ನು ನೋಡಿ ಅವಳೂ ಧಾವಿಸಿ ಬಂದಳು. ದಂಪತಿ ಗಳಿಬ್ಬರೂ ದಂಡ-ಪ್ರಣಾಮ ಹಾಕಿದರು. ಆ ಜಗದೀಶ್ವರನಿಗೆ. ಭಗವದ್ದರ್ಶನ ಆದ ಕೂಡಲೇ ಈ ಸಂಸಾರವೆಲ್ಲ ನಿಸ್ಸಾರ ಎನಿಸಿತು ಆ ದಂಪತಿಗಳಿಗೆ. ಜೀವನದಲ್ಲಿಯೇ ಜಿಗುಪ್ಸೆ ಹುಟ್ಟಿತು. ಕೂಡಲೇ ಅವರಿಬ್ಬರು ಈ ಪಾಂಚಭೌತಿಕ ದೇಹವನ್ನು ಪರಿತ್ಯಾಗ ಮಾಡಿದರು. ವಿಷ್ಣುವಿನ ಅನುಗ್ರಹದಿಂದ ಆಗಲೇ ದಿವ್ಯ ದೇಹವನ್ನು ಧರಿಸಿದರು. ಭೀಮಕುಂಬಾರನೂ ಅವನ ಭಗವದ್ಭಕ್ತಳಾದ ಭಾರ್ಯೆಯೂ ದಿವ್ಯ ದೇಹಧಾರಿಗಳಾಗಿ ಮಹಾವಿಷ್ಣುವನ್ನು ನಮಸ್ಕರಿಸಿ ಅವನ ಆಜ್ಞೆಯಂತೆ ಆ ವೈಕುಂಠ ಲೋಕದ ವಿಮಾನವನ್ನು ಆರೋಹಣ ಮಾಡಿದರು. ರಾಜಾಧಿರಾಜನಾದ ತೋಂಡ ಮಾನನು ನೋಡುತ್ತಲೇ ಇದ್ದ ತನ್ನ ಎರಡೂ ಕಣ್ಣುಗಳನ್ನು ಅಗಲಿಸಿ. ಕುಂಬಾರ ದಂಪತಿಗಳು ಹತ್ತಿ ಕುಳಿತ ಬಳಿಕ ಆ ವೈಕುಂಠಲೋಕದ ವಿಮಾನವು ಅಲ್ಲಿಂದ ಆಕಾಶ ಮಾರ್ಗವಾಗಿ ಪರಮಾತ್ಮನ ಪರಂಧಾಮದೆಡೆಗೆ ಹಾರಿಹೋಯಿತು.

ಈ ಅತ್ಯದ್ಭುತ ಘಟನೆಯನ್ನು ತನ್ನ ಕಣ್ಣುಗಳಿಂದಲೇ ಕಂಡ ಮಹಾರಾಜನಿಗೆ ಅತ್ಯಾನಂದವಾಯಿತು. ಅವನು ನೇರವಾಗಿ ತನ್ನ ನಗರಕ್ಕೆ ಬಂದ. ತನ್ನ ಪ್ರಬುದ್ಧ ಮಗನಾದ

ಶ್ರೀನಿವಾಸ ಎಂಬ ಯುವರಾಜನನ್ನು ಕರೆದ. ಅವನಿಗೆ ತನ್ನ ರಾಜ್ಯನ್ನೆಲ್ಲ ಒಪ್ಪಿಸಿದ. ಮಂತ್ರಿ, ಪುರೋಹಿತ, ಸೇನಾಪತಿ ಎಲ್ಲರನ್ನು ಕರೆಯಿಸಿ ವಿಧಿಪೂರ್ವಕವಾಗಿ ತನ್ನ ಶ್ರೀನಿವಾಸ ಕುಮಾರನಿಗೆ ಪಟ್ಟಾಭಿಷೇಕ ಮಾಡಿದ. ಅನಂತರ ತನ್ನ ಮಗನಿಗೆ- ''ವತ್ಸ! ನೀನು ಧರ್ಮದಿಂದ ನಡೆ. ನ್ಯಾಯದಿಂದ ರಾಜ್ಯವನ್ನು ಆಳು. ಎಲ್ಲ ಪ್ರಜೆಗಳನ್ನು ತಂದೆಯಂತೆ ಪರಿಪಾಲಿಸು. ಪ್ರಭು ಶ್ರೀನಿವಾಸ ದೇವರಲ್ಲಿ ನಿರಂತರ ಭಕ್ತಿಯನ್ನು ಮಾಡು.'' ಎಂದು ಸಂದೇಶ ನೀಡಿದ. ಅನಂತರ ಮನೆಮಾರು ತೊರೆದು, ಕಾಡಿಗೆ ತೆರಳಿದ. ಅಲ್ಲಿ ಕೈಕೊಂಡ ಅತ್ಯುಗ್ರ ತಪಸ್ಸನ್ನು. ಅನ್ನ, ನೀರು ತೊರೆದು ತಪಸ್ಸಮಾಧಿಯಲ್ಲಿಯೇ ನಿಶ್ಚಲನಾಗಿ ನಿಂತುಕೊಂಡ ಭಗವಂತನ ದರ್ಶನ ಆಗುವವರೆಗೆ. ಕೊನೆಗೂ ಒಲಿದು ಬಂದ ಭಕ್ತವತ್ಸಲನಾದ ಆ ಭಗವಂತ. ಆ ತೋಂಡಮಾನನ ಮಹಾರಾಜನಿಗೆ ಪ್ರತ್ಯಕ್ಷ ದರ್ಶನವಿತ್ತ. ಶ್ರೀದೇವಿ ಭೂದೇವಿ ಸಹಿತನಾದ ಸ್ವಾಮಿ ಶ್ರೀಹರಿಯು ಅವನಿಗೆ ತನ್ನ ಸಾಕ್ಷಾತ್ಕಾರವನ್ನಿತ್ತು ಅನುಗ್ರಹಿಸಿದ. ನಿನಗೆ ಬೇಕಾದ ವರ ಬೇಡು. ನಾನು ಈ ಭಕ್ತಿ ಯುಕ್ತವಾದ ನಿನ್ನ ತಪಶ್ಚರ್ಯೆಯಿಂದ ಪರಿತುಷ್ಟನಾಗಿದ್ದೇನೆ. ಬೇಡಿದ ವರ ನೀಡುವೆನು, ನಿನ್ನ ಕಾಮನೆಗಳನ್ನೆಲ್ಲ ಪೂರ್ಣ ಮಾಡುವೆನು.''

**ತೋಂಡಮಾನ:-** ಪ್ರಭು! ನನಗೆ ಬೇರೆ ಏನೂ ಬೇಡ. ಸಾಕಾಗಿದೆ ಈ ಸಂಸಾರ, ಈ ಜನನ ಮರಮ ಜಾಲದಿಂದ ಮುಕ್ತನನ್ನಾಗಿ ಮಾಡು ಈ ನಿನ್ನ ಭಕ್ತನನ್ನು. ನನಗೆ ನಿನ್ನನ್ನು ಬಿಟ್ಟು ಅಗಲಿ ಇರಲು ಇಚ್ಛೆಯಿಲ್ಲ. ನಿನ್ನ ಲೋಕದಲ್ಲಿಯೇ ನಿನ್ನ ಮನೆಯಲ್ಲಿಯೇ ನಿನ್ನ ಪಾದದಡಿಯ ಹುಡಿಯಾಗಿ ಅಡಿಗಡಿಗೂ ನಿನ್ನನ್ನು ನೆನೆಯುತ್ತ ನಿನ್ನ ಬಳಿಯಲ್ಲಿಯೇ ಇರುವಂತೆ ಮಾಡು'' ಎಂದು ವರವನ್ನು ಕೇಳಿಕೊಂಡನು. ಗರುಡಾರೂಢನಾಗಿ ಬಂದ ಆ ಜಗದೀಶ್ವರನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿದನು. ಪಾಂಚಭೌತಿಕವಾದ ತನ್ನ ದೇಹವನ್ನು ಅಲ್ಲಿಯೇ ಬಿಟ್ಟನು. ದಿವ್ಯರೂಪ ಧರಿಸಿ ವಿಮಾನಾರೂಢನಾಗಿ ವಿಷ್ಣುಲೋಕಕ್ಕೆ ತೆರಳಿದನು. ದೇವ ಗಂಧರ್ವರು ಅವನ ಗುಣಗಾನ ಮಾಡಿದರು. ಪರಮಾತ್ಮನ ಅನುಗ್ರಹದಿಂದ ತೋಂಡಮಾನ ಮಹಾರಾಜನು ಮುಪ್ಪು, ಸಾವು, ಹುಟ್ಟು. ಶೋಕ ಮೋಹ ಗಳಿಂದ ರಹಿತವಾದ ಎಂದೂ ಮರಳಿಬಾರದ ವೈಕುಂಠಲೋಕಕ್ಕೆ ಪ್ರಯಾಣ ಮಾಡಿದನು.

**ಸೂತ:-** ದೇವಾಧಿದೇವನಾದ ಭಗವಾನ್ ಭೂವರಾಹದೇವರು ಹೇಳಿದ ಈ ಭವಿಷ್ಯ ಪ್ರಸಂಗವನ್ನು ಹೇಳಿದವರು ಧನ್ಯರು, ಕೇಳಿದವರು ಪುಣ್ಯಭಾಗಿಗಳು, ಇವರೆಲ್ಲರೂ ಮುಂದೆ ಮುಕ್ತಿಮಾರ್ಗದಲ್ಲಿ ಮುನ್ನಡೆಯುವರು.

## ಪರೀಕ್ಷಿತ ರಾಜನಿಗೆ ಬ್ರಾಹ್ಮಣ ಶಾಪ

**ಸೂತ:-** ಮಹರ್ಷಿಗಳೇ! ಈಗ ನಾನು ಸ್ವಾಮಿ ಪುಷ್ಕರಣೀತೀರ್ಥದ ಮಹಿಮೆಯನ್ನು ಹೇಳುತ್ತೇನೆ, ಈ ವಿಷಯದಲ್ಲಿ ಹಿಂದಿನ ಒಂದು ಐತಿಹಾಸಿಕ ಘಟನೆಯನ್ನು ನಿಮಗೆ ನಿರೂಪಿಸುತ್ತೇನೆ. ಪೂರ್ವಕಾಲದಲ್ಲಿ ಕೃಷ್ಣಭಕ್ತರಾದ ಪಾಂಡವರು ತಾವು ಸ್ವರ್ಗಾರೋಹಣ ಮಾಡುವಾಗ ಅಭಿಮನ್ಯುವಿನ ಮಗನಾದ ಪರೀಕ್ಷಿತರಾಜನನ್ನು ಸಿಂಹಾಸನದ ಮೇಲೆ ಕೂಡಿಸಿ ಅವನಿಗೆ ರಾಜಭಾರವನ್ನು ಒಪ್ಪಿಸಿದರು. ಪರಮ ಧರ್ಮಿಷ್ಠ ಆ ಪರೀಕ್ಷಿತರಾಜ ಅಜ್ಜ ಧರ್ಮರಾಜನಂತೆ. ಪ್ರಚಂಡ ಪರಾಕ್ರಮಿ ಭೀಮನಂತೆ. ಜಗಜ್ಜೇತಾ ಅಜ್ಜ ಅರ್ಜುನ ನಂತೆ. ರಾಜಧಾನಿಯಾದ ಹಸ್ತಿನಾವತಿಯಲ್ಲಿದ್ದುಕೊಂಡು ಅಖಂಡ ಭೂಮಂಡಲವನ್ನೆಲ್ಲ ಧರ್ಮದಿಂದ ಪರಿಪಾಲಿಸುತ್ತಿದ್ದ ಈ ಪುಣ್ಯಾತ್ಮನಾದ ರಾಜರ್ಷಿ.

ಒಂದು ದಿನ ಅವನು ಬೇಟೆಯಾಡಲು ಕಾಡಿಗೆ ಹೋಗಿದ್ದ. ನಿಬಿಡವಾದ ಆ ವನ ಮಧ್ಯದಲ್ಲಿ ಬೇಟೆಯಾಡಿ ದಣಿದು ಬಾಯಾರಿಕೆಯಿಂದ ಬಳಲ ತೊಡಗಿದ. ಆಗಲೇ ಅವನಿಗೆ ವಯಸ್ಸು ಅರವತ್ತು ದಾಟಿತ್ತು. ಹಸಿವೆ, ನೀರಡಿಕೆಗಳನ್ನು ತಾಳಲಾರದೆ ಆ ನಿರ್ಜನ ಅರಣ್ಯಗಳಲ್ಲಿ ತೊಳಲಾಡತೊಡಗಿದ ಆ ಪೃಥ್ವೀಪತಿ. ಆಗ ಅವನಿಗೆ ಅಲ್ಲಿ ಒಂದು ಆಶ್ರಮವು ಕಂಡಿತು. ಅವನು ಒಳಗೆ ಪ್ರವೇಶಿಸಿದ. ತಪಸ್ಸಮಾಧಿಯಲ್ಲಿ ಲೀನರಾಗಿದ್ದರು ಮುನಿಗಳು. ಅವರನ್ನು ಕೇಳಿದ ಮಹಾರಾಜ- ''ಮುನಿಗಳೇ! ನಾನು ಇದೀಗ ಒಂದು ಚಿಗರೆಯನ್ನು ಬಾಣಬಿಟ್ಟು ಗಾಯಗೊಳಿಸಿದೆ. ಅದು ಓಡಿ ಹೋಯಿತು. ನನ್ನ ಬಾಣದಿಂದ ಗಾಯಗೊಂಡ ಹರಿಣವನ್ನು ತಾವು ಕಂಡಿದ್ದೀರಾ?''

ಸಮಾಧಿಸ್ಥರಾಗಿದ್ದರು ಆ ಋಷಿಗಳು, ಮೇಲೆ ಮೌನವ್ರತ. ಆದುದರಿಂದ ರಾಜನ ಮಾತಿಗೆ ಅವರಿಂದ ಉತ್ತರ ಬರಲಿಲ್ಲ. ಪರೀಕ್ಷಿತನಿಗೆ ಕೋಪ ಬಂದಿತು. ಆಗ ಅವನು ಅಲ್ಲಿಯೇ ಬಿದ್ದು ಸತ್ತಹಾವನ್ನು ತನ್ನ ಬಾಣದ ತುದಿಯಿಂದ ಎತ್ತಿ ಮುನಿಗಳ ಕೊರಳ ಮೇಲೆ ಇಟ್ಟು ತನ್ನ ನಗರಕ್ಕೆ ನಡೆದ. ಈ ಮುನಿಗಳ ಮಗನಾದ ಶೃಂಗಿಯು ಕೃಷ್ಣ ಎಂಬ ತನ್ನ ಮಿತ್ರನೊಡನೆ ಆಟವಾಡುತ್ತಿದ್ದ. ಆಟದ ಮಧ್ಯದಲ್ಲಿ ಅವರಿಬ್ಬರ ನಡುವೆ ವಾದ ವಿವಾಹದ ಸುರುವಾಯಿತು, ಆಗ ಕೃಷ್ಣನು ತನ್ನ ಗೆಳೆಯ ಶೃಂಗಿಗೆ ಉಪಹಾಸಗೈಯುತ್ತ ನುಡಿದನು- ''ನಿನ್ನ ಜಂಭವನ್ನು ನನ್ನ ಮುಂದೆ ಹೇಳಬೇಡ. ಅಲ್ಲಿ ನೋಡು, ಸತ್ತ ಹಾವನ್ನು ಕತ್ತನಲ್ಲಿ ಹೊತ್ತುಕೊಂಡು ನಿಂತಿದ್ದಾನೆ ನಿಮ್ಮ ಅಪ್ಪ. ನೀನು ಮಾತ್ರ ನನ್ನ ಮುಂದೆ ಇಲ್ಲದ ಪೌರುಷವನ್ನು ಪ್ರದರ್ಶಿಸುವೆ.''

ಇದನ್ನು ಕೇಳಿ ಶೃಂಗಿಯು ಧಾವಿಸಿ ತಂದೆಯ ಬಳಿ ಬಂದ. ಮೃತಸರ್ಪವು ಜೋತಾಡುತ್ತಿತ್ತು ಅವನ ಕೊರಳಲ್ಲಿ. ಕೂಡಲೇ ಸಿಡಿದೆದ್ದು ಶಾಪಕೊಟ್ಟ ಆ ಬಾಲಕ. ''ನಮ್ಮ ತಂದೆಯ ಕೊರಳಿನಲ್ಲಿ ಸತ್ತ ಹಾವನ್ನು ಹಾಕಿದ ದುಷ್ಟನು ಇಂದಿನಿಂದ ಏಳನೇಯ ದಿನದಲ್ಲಿ ತಕ್ಷಕ ಹಾವಿನಿಂದ ದಷ್ಟನಾಗಿ ಮರಣ ಹೊಂದಲಿ.''

ಕೆಲವು ಸಮಯದ ಬಳಿಕ ಆ ಬಾಲಕನ ತಂದೆ ಶಮೀಕ ಮುನಿಗಳು ಸಮಾಧಿಯಿಂದ ಎಚ್ಚತ್ತರು. ತಮ್ಮ ಮಗನು ಪರೀಕ್ಷಿತರಾಜನಿಗೆ ಕೊಟ್ಟ ಶಾಪವನ್ನು ಕೇಳಿ ಬಹಳ ಕೆಡಕು ಎನಿಸಿತು. ಅವರು ತಮ್ಮ ಮನದಲ್ಲಿ ನೊಂದು ಮಗನಿಗೆ ಹೇಳಿದರು. ''ಮಗು! ಈ ಪರೀಕ್ಷಿತರಾಜ ಪರಮ ಧಾರ್ಮಿಕ. ತಂದೆಯಂತೆ ರಕ್ಷಿಸುತ್ತಾನೆ ಚೆನ್ನಾಗಿ ಎಲ್ಲ ಪ್ರಜೆಗಳನ್ನು. ಇಂಥ ಧರ್ಮಿಷ್ಠರಾಜರು ಇಲ್ಲದಿದ್ದರೆ ನಾವು ನೆಮ್ಮದಿಯಿಂದ ಬಾಳುವವದೆಂತು? ನೀನು ಸಿಟ್ಟಿಗೆ ಎದ್ದದ್ದು ಮೊಟ್ಟಮೊದಲನೆಯ ತಪ್ಪು. ಕೋಪದಿಂದ ಪಾಪ. ದಯೆಯಿಂದ ಸುಖ. ಕ್ಷಮೆಯಿಂದ ಶಾಂತಿ ಈ ಮಾತಿನ ಮರ್ಮವನ್ನು ತಿಳಿದು ನಡೆಯುವದೇ ಬ್ರಾಹ್ಮಣನ ಕರ್ತವ್ಯ. ಮನಸ್ಸಿನಲ್ಲಿ ಮೂಡಿದ ಕೋಪವನ್ನು ಬಿಗಿಹಿಡಿದು ಅಪರಾಧಿಗಳನ್ನು ಶಾಂತ ಮನಸ್ಸಿನಿಂದ ಕ್ಷಮಿಸುವವನೇ ಶ್ರೇಯೋಭಾಗಿ ಆಗುವನು.'' ಹೀಗೆ ನುಡಿದು ಆ ಶಮೀಕ ಮುನಿಗಳು ದುರ್ಮುಖ ಎಂಬ ತಮ್ಮ ಶಿಷ್ಯನನ್ನು ಕರೆದು ಹೇಳಿದರು- ''ದುರ್ಮುಖ! ನೀನು ಈಗಲೇ ಹೋಗಿ ಪರೀಕ್ಷಿತ ರಾಜನಿಗೆ ನನ್ನ ಮಗ ಶೃಂಗಿಯು ಕೊಟ್ಟ ಶಾಪದ ವೃತ್ತಾಂತವನ್ನು ತಿಳಿಸು. ಇಂದಿನಿಂದ ಏಳನೇಯ ದಿನದಲ್ಲಿ ನಿಮ್ಮನ್ನು ತಕ್ಷಕನಾಗನು ಕಚ್ಚಿ ಕೊಲ್ಲುವನೆಂದು ತಿಳಿಸು.''

ಮಹಾಮುನಿಗಳ ಅಪ್ಪಣೆಯಂತೆ ಅವರ ಶಿಷ್ಯ ದುರ್ಮುಖನು ಪರೀಕ್ಷಿತರಾಜನ ಬಳಿಗೆ ಬಂದು ಮಹಾರಾಜನಿಗೆ ಶೃಂಗಿಯ ಶಾಪವೃತ್ತಾಂತವನ್ನು ನಿವೇದಿಸಿದನು- ''ರಾಜರೇ! ತಾವು ಮೃತಸರ್ಪವನ್ನು ಶಮೀಕಮುನಿಗಳ ಕೊರಳಿಗೆ ಸುತ್ತುಹಾಕಿದ್ದನ್ನು ಅವರ ಮಗ ಶೃಂಗಿಯು ನೋಡಿದ. ಕೂಡಲೇ ಕೋಪದಿಂದ ಕೆರಳಿ ಶಾಪ ಚೆಲ್ಲಿದ. ನಿಮಗೆ- ''ಇಂದಿನಿಂದ ಏಳನೆಯದಿನ ತಕ್ಷಕನು ಕಚ್ಚಿ ಪರೀಕ್ಷಿತರಾಜನು ಮೃತನಾಗಲಿ'' ಎಂದು. ಈ ಶಾಪ ವೃತ್ತಾಂತವನ್ನು ತಮಗೆ ತಿಳಿಸಬೇಕೆಂದು ನಾನು ಬಂದಿದ್ದೇನೆ.

ಇಷ್ಟು ವೃತ್ತಾಂತವನ್ನು ಮಹಾರಾಜನಿಗೆ ತಿಳಿಸಿ ಆಶ್ರಮಕ್ಕೆ ಮರಳಿದ ದುರ್ಮುಖ ಶಿಷ್ಯ. ಪರೀಕ್ಷಿತರಾಜನು ಈ ಶಾಪ ವೃತ್ತಾಂತವನ್ನು ಕೇಳಿದ ಕೂಡಲೇ ತನ್ನ ಸಿರಿ ಸಾಮ್ರಾಜ್ಯವನ್ನೆಲ್ಲ ತೊರೆದ. ಗಂಗಾ ತೀರಕ್ಕೆ ನಡೆದ. ಆ ದೇವನದಿಯ ಪ್ರವಾಹದ ನಟ್ಟ ನಡುವೆ ಒಂದು ಗಟ್ಟಿಮುಟ್ಟಾದ ಬೃಹದಾಕಾರದ ಸ್ತಂಭವನ್ನು ನೆಟ್ಟ. ಅದರ ಮೇಲೆ ಒಂದು ವಿಶಾಲವಾದ ಸಭಾಮಂಟಪವನ್ನು ಕಟ್ಟಿಸಿದ. ಅಲ್ಲಿ ಅನೇಕ ದೇವರ್ಷಿ ಬ್ರಹ್ಮರ್ಷಿಗಳ ಮಧ್ಯದಲ್ಲಿ ಭಗವತ್ ಕಥಾ ಶ್ರವಣ ಮಾಡುತ್ತ ವಾಸ ಮಾಡಿದ. ದಿನ ದಿನಕ್ಕೆ ಭಗವಂತನಲ್ಲಿ ಭಕ್ತಿ ಬೆಳೆಯುತ್ತಲೇ ಇತ್ತು ಆ ರಾಜರ್ಷಿಗೆ. ಹಗಲಿರುಳು ಅಲ್ಲಿ ಭಗವತ್ ಕಥಾ ಶ್ರವಣ, ಧ್ಯಾನ, ಭಜನ, ಭಗವತ್ ಪೂಜಾ, ಕೈಂಕರ್ಯಗಳು ಎಡಬಿಡದೆ ನಡೆದವು.

ಇದೇ ವೇಳೆಯಲ್ಲಿ ಹಾವಿನ ಮಂತ್ರವನ್ನು ಬಲ್ಲ ಕಶ್ಯಪ ಎಂಬ ಬ್ರಾಹ್ಮಣನು ತಕ್ಷಕನಿಂದ ಪರೀಕ್ಷಿತ ರಾಜನನ್ನು ರಕ್ಷಿಸಬೇಕೆಂದು ಅಲ್ಲಿಗೆ ಹೊರಟನು ಇದರಿಂದ ತನ್ನ ಮಂತ್ರ ಪ್ರಭಾವದಿಂದ ಬದುಕಿಬಂದ ಮಹಾರಾಜನು ತನಗೆ ಹೇರಳವಾಗಿ ರತ್ನಹೊನ್ನು ಹಣವನ್ನು ಕೊಡುವನು ಎಂಬ ಆಸೆಯಿಂದ ಆ ಕಶ್ಯಪನು ಆ ಗಂಗಾತೀರಕ್ಕೆ ನಡೆದಿದ್ದನು. ಇದೇ ವೇಳೆಯಲ್ಲಿ ಆ ತಕ್ಷಕನಾಗನೂ ಗಂಗಾ ತೀರಕ್ಕೆ ಬರುತ್ತಲಿದ್ದನು. ದಾರಿಯಲ್ಲಿ ಇಬ್ಬರಿಗೂ ಭೇಟಿಯಾಯಿತು. ತಕ್ಷಕನಾಗನು ಗಂಗಾ ತಟಾಕದ ಸಭಾಮಂಟಪದಲ್ಲಿ ಪ್ರವೇಶಕ್ಕೆ ಅನುಕೂಲವಾಗಲಿ ಎಂದು ಬ್ರಾಹ್ಮಣ ರೂಪವನ್ನೇ ಧರಿಸಿದನು. ದಾರಿಯಲ್ಲಿ ಕಶ್ಯಪನನ್ನು ಕಂಡು ತಕ್ಷಕನು ಕೇಳಿದನು ''ಮುನಿವರ್ಯನೆ! ನೀನು ಈಗ ಎಲ್ಲಿಗೆ ಹೊರಟಿರುವೆ?

**ಕಾಶ್ಯಪ:-** ಇಂದು ಏಳನೇಯ ದಿನ. ತಕ್ಷಕನಾಗ ಬಂದು ಪರೀಕ್ಷಿತ ರಾಜನನ್ನು ಕಚ್ಚುವನು. ಆ ತಕ್ಷಕ ಎಂದರೆ ಅತ್ಯಂತ ಉಲ್ಬಣ ನಾಗ. ಅವನು ಕಚ್ಚಿದರೆ ಅವನ ವಿಷಾಗ್ನಿಯಿಂದ ತಕ್ಷಣದಲ್ಲಿಯೇ ರಾಜನು ಸುಟ್ಟು ಹೋಗುವನು. ಮೃತನಾದ ಮಹಾರಾಜನನ್ನು ನನ್ನ ಮಂತ್ರ ಪ್ರಭಾವದಿಂದ ಮರಳಿ ಬದುಕಿಸಬೇಕು ಎಂದು ನಾನು ಅಲ್ಲಿಗೆ ಹೊರಟಿದ್ದೇನೆ.

**ತಕ್ಷಕ:-** ''ವಿಪ್ರೋತ್ತಮ! ನಾನೇ ಆ ತಕ್ಷಕ. ನಾನು ಕಚ್ಚಿದರೆ ತಕ್ಷಣವೇ ಮೃತ್ಯು ನಿಶ್ಚಿತ. ಅದಕ್ಕೆ ಚಿಕಿತ್ಸೆಯೇ ಇಲ್ಲ. ನೂರು ವರ್ಷಗಳ ವರೆಗೆ ಸಾವಿರ ಸರ್ಪ ಮಂತ್ರಗಳನ್ನು ಹಾಕಿದರೂ ಇಳಿಯಲಾರದು ನನ್ನ ವಿಷ. ನಾನೇನು ಸಾಮಾನ್ಯವಾದ ಕಪ್ಪೆ ನುಂಗುವ ಹಾವು ಎಂದು ತಿಳಿದಿದ್ದಿಯಾ? ನಾನು ಕಚ್ಚಿದ ಬಳಿಕ ನೀನು ಎಂದೂ ಆ ರಾಜನನ್ನು ಬದುಕಿಸಲಾರೆ. ಬೇಕಾದರೆ ನನ್ನ ನಿನ್ನ ಪರೀಕ್ಷೆ ಇಲ್ಲಿಯೇ ಆಗಿ ಹೋಗಲಿ. ಇಕೋ ನೋಡು ನಿನ್ನ ಎದುರಿಗೇ ಇದೆ ಇದೊಂದು ಹೆಮ್ಮರ. ಮುಗಿಲಿನಗಲ ತಲೆ ಎತ್ತಿ ನಿಂತಿದೆ. ಇದನ್ನು ಈಗ ನಾನು ಕಚ್ಚುವೆನು. ನನ್ನ ವಿಷದಿಂದ ಈಗಲೇ ಅದು ಉರಿದುಹೋಗುವದು. ಮರಳಿ ಅದನ್ನು ನೀನು ಜೀವಂತಮಾಡು ನೋಡುವಾ'' ಹೀಗೆ ಹೇಳಿ ಆ ತಕ್ಷಕನಾಗನು ಆ ಮರವನ್ನು ಕಚ್ಚಿದನು. ತಕ್ಷಕನು ಕಚ್ಚಿದ ಕೂಡಲೇ ಬಾನಿನೆತ್ತರಕ್ಕೆ ಬೆಳೆದುನಿಂತ

ಆ ಮಹಾ ವೃಕ್ಷವು ಅದರ ಉಲ್ಬಣ ವಿಷದಿಂದ ದಗದಗನೆ ಉರಿದು ಬೂದಿಯಾಗಿ ಬಿದ್ದಿತು. ಈ ಮೊದಲು ಒಬ್ಬ ಮನುಷ್ಯನು ಆ ಮರದ ತಳಿರು ಚಿಗುರುಗಳನ್ನು ಹರಿಯಲೆಂದು ಒಂದು ಶಾಖೆಯ ಮೇಲೆ ಏರಿ ಕುಳಿತಿದ್ದನು. ತಕ್ಷಕನ ವಿಷಜ್ವಾಲೆಗಳಿಂದ ಅವನು ದಗ್ಧನಾಗಿ ಹೋದ. ಆಗ ಅಲ್ಲಿಯೇ ಕುಳಿತ ಕಶ್ಯಪ ಬ್ರಾಹ್ಮಣನು ತನ್ನ ಮಂತ್ರಶಕ್ತಿಗಳಿಂದ ಸುಟ್ಟು ಹೋದ ಮರವನ್ನು ಕೂಡಲೇ ಜೀವಂತ ಮಾಡಿದನು. ಮತ್ತೆ ಮೊದಲಿನಂತೆ ಕಳಕಳಿಸುತ್ತ ಅಂತರಿಕ್ಷದ ವಕ್ಷಸ್ಥಳದಲ್ಲಿ ತಲೆಎತ್ತಿ ನಿಂತುಕೊಂಡಿತು. ಅದರಲ್ಲಿ ಮೊದಲು ಮರಣ ಹೊಂದಿದ ಮರ ಏರಿದ ಆ ಮನುಷ್ಯನೂ ಕೂಡ ಬದುಕಿ ಮೊದಲಿನಂತೆಯೇ ತಾನಿದ್ದ ಟೊಂಗಿಯಮೇಲೆ ಎದ್ದು ಕುಳಿತ.

ಇದನ್ನು ಕಂಡು ತಕ್ಷಕನಿಗೆ ಅತೀವ ಆಶ್ಚರ್ಯವಾಯಿತು. ಅಷ್ಟೇ ಅಪಮಾನವೂ ಆಯಿತು. ಆಗ ಅವನು ಮಂತ್ರಕುಶಲನಾದ ಆ ಬ್ರಾಹ್ಮಣನ ಬಳಿಗೆ ಬಂದ. ನಮ್ರತೆಯಿಂದ ಮಣಿದು ನುಡಿದ "ಬ್ರಾಹ್ಮಣಶ್ರೇಷ್ಠನೇ! ನಿನ್ನ ಮಂತ್ರಶಕ್ತಿಯು ಅತ್ಯದ್ಭುತ. ಅದನ್ನು ಕಂಡು ನಾನು ವಿಸ್ಮಿತನಾಧೆ. ಹಣದ ಆಸೆಗಾಗಿ ನೀನು ರಾಜನನ್ನು ಬದುಕಿಸಲು ಹೊರಟದ್ದಿಯಷ್ಟೇ? ರಾಜನು ನಿನಗೆ ಕೊಡುವ ಹಣಕ್ಕಿಂತ ಎರಡುಪಟ್ಟು ಮಿಗಿಲಾದ ದ್ರವ್ಯವನ್ನು ನಾನು ಈಗಲೇ ನಿನಗೆ ಕೊಡುತ್ತೇನೆ. ನೀನು ಇಲ್ಲಿಂದಲೇ ಮನೆಗೆ ಹೊರಟುಹೋಗು" ಎಂದು ಹೇಳಿ ಅತೀ ಅಮೂಲ್ಯವಾದ ರತ್ನಗಳನ್ನು ಕಶ್ಯಪನಿಗೆ ಕೊಟ್ಟನು ಆ ತಕ್ಷಕ. ಅನರ್ಘ್ಯವಾದ ಆ ಮಣಿಗಳನ್ನು ತೆಗೆದುಕೊಂಡು ಕಶ್ಯಪನು ತನ್ನ ಗ್ರಾಮಕ್ಕೆ ತೆರಳಿದ.

ಬ್ರಾಹ್ಮಣನು ಅತ್ತ ಹೋದಬಳಿಕ ತಕ್ಷಕನು ತನ್ನ ಸೇವಕನಾದ ಸರ್ಪಗಳಿಗೆಲ್ಲ ಅಪ್ಪಣೆ ಮಾಡಿದನು. "ನೀವೆಲ್ಲರೂ ಮುನಿಗಳ ವೇಷ ಧರಿಸಿ ರಾಜನ ಬಳಿಗೆ ಹೋಗಿರಿ. ಅವನಿಗೆ ಕಾಣಿಕೆಯಾಗಿ ಹಣ್ಣುಗಳನ್ನು ಅರ್ಪಿಸಿರಿ. "ಅವನ ಆಜ್ಞೆಯಂತೆ ಎಲ್ಲ ಸರ್ಪಗಳು ಋಷಿ ವೇಷದಿಂದ ಗಂಗಾ ಪ್ರವಾಹದ ಮಧ್ಯದ ಏಕಸ್ತಂಬದ ವಿರಾಟ ಸಭಾ ಭವನದಲ್ಲಿ ನೆರೆದ ಜ್ಞಾನಸತ್ರಕ್ಕೆ ಬಂದವು. ಅದೇ ವೇಳೆಯಲ್ಲಿ ತಕ್ಷಕನೂ ಕೂಡ ಒಂದು ಬೋರೆಹಣ್ಣಿನ ಒಳಗೆ ಹುಳದ ರೂಪವನ್ನು ಧರಿಸಿ ರಾಜನನ್ನು ಕಚ್ಚಬೇಕೆಂದು ಜಪ್ಪಿಸಿ ಕುಳಿತ.

ಬ್ರಾಹ್ಮಣರೂಪದ ಹಾವುಗಳು ಕೊಟ್ಟ ಹಣ್ಣುಗಳನ್ನೆಲ್ಲ ಪರೀಕ್ಷಿತ ರಾಜನು ತನ್ನ ಬಳಿಯಲ್ಲಿ ಕುಳಿತ ವೃದ್ಧ ಮಂತ್ರಿಗಳ ಕೈಯಿಂದ ತೆಗೆದುಕೊಂಡನು. ಆಗ ಸೂರ್ಯನು ಅಸ್ತನಾಗುವ ಸಮಯ, ಸಂಧ್ಯಾಕಾಲದ ಸೂರ್ಯ ರಶ್ಮಿಗಳಿಂದ ಆ ಸಭಾಭವನವೆಲ್ಲವೂ ರಕ್ತ ರಂಜಿತ ವಾಗಿತ್ತು. ರಾಜನು ಕೈಯಲ್ಲಿ ತೆಗೆದುಕೊಂಡ ಬೋರೆಹಣ್ಣಿನಲ್ಲಿ ಒಂದು ಕೆಂಪುಹುಳು ಕಾಣಿಸಿಕೊಂಡಿತು. ಅದನ್ನು ರಾಜನೂ ಅಲ್ಲಿ ಕುಳಿತ ಜನರೂ ನೋಡಿದರು ಅವನೇ ತಕ್ಷಕನಾಗಿದ್ದ. ಕೂಡಲೇ ಆ ತಕ್ಷಕ ಬೋರೆಹಣ್ಣಿನಿಂದ ಹೊರಬಿದ್ದು ಭಯಾನಕವಾದ ಹಾವಿನರೂಪವನ್ನು ಪಡೆದು ಮಹಾರಾಜನ ಶರೀರಕ್ಕೆ ಸುತ್ತಿಕೊಂಡ. ಅದನ್ನು ನೋಡಿ ಅಲ್ಲಿ ಸುತ್ತಮುತ್ತ ಕುಳಿತುಕೊಂಡ ಎಲ್ಲ ಮುನಿಗಳೂ ಮನುಜರೂ ಅಲ್ಲಿಂದ ಧಾವಿಸಿ ಹೊರಗೆ ಹೋದರು. ಎಲ್ಲ ಜನರು ಹೋದ ಬಳಿಕ ತಕ್ಷಕನು ತನ್ನ ಉಲ್ಬಣವಾದ ವಿಷದ ಹಲ್ಲುಗಳಿಂದ ಮಹಾರಾಜನನ್ನು ಕಚ್ಚಿದ. ವಿಷದ ಜ್ವಾಲೆಗಳು ರಾಜನನ್ನು ಆವರಿಸಿದವು. ತಕ್ಷಣದಲ್ಲಿಯೇ ಮಹಾರಾಜನು ಉರಿದು ಬೂದಿಯಾದನು. ಆ ಭೀಕರ ಸರ್ಪದ ವಿಷದ ಜ್ವಾಲೆಗಳಿಂದ ಗಂಗಾ ಪ್ರವಾಹದ ಮಧ್ಯದಲ್ಲಿ ಕಟ್ಟಿದ ಆ ವಿಶಾಲವಾದ ಮಂಟಪವು ಕೂಡ ಸುಟ್ಟು ಬೂದಿಯಾಯಿತು.

ಅನಂತರ ಪುರೋಹಿತ ಹಾಗು ಮಂತ್ರಿಗಳೆಲ್ಲರೂ ಕೂಡಿ ಪರೀಕ್ಷಿತನ ಊರ್ಧ್ವ ದೈಹಿಕ ಸಂಸ್ಕಾರವನ್ನು ಅವನ ಮಗ ಜನಮೇಜಯನಿಂದ ಮಾಡಿಸಿದರು. ಆ ಬಳಿಕ ಅವನ ಸತ್ಪುತ್ರನಾದ ಜನಮೇಜಯ ಮಹಾರಾಜನನ್ನು ಹಸ್ತಿನಾವತಿಯ ರಾಜ ಗದ್ದುಗೆಯ ಮೇಲೆ ಕೂಡಿಸಿ ಚಕ್ರವರ್ತಿ ಪದದಲ್ಲಿ ಪಟ್ಟಾಭಿಷೇಕ ಮಾಡಿದರು. ಮಹಾತ್ಮನಾದ ಪರೀಕ್ಷಿತ ರಾಜನನ್ನು ಬದುಕಿಸಬೇಕೆಂದು ಬಂದ ಕಶ್ಯಪ ಬ್ರಾಹ್ಮಣನು ತಕ್ಷಕನಿಂದ ಹಣ ಪಡೆದು ತಿರುಗಿ ಹೋದದ್ದನ್ನು ಕೇಳಿ ಎಲ್ಲರೂ ಅವನನ್ನು ನಿಂದಿಸತೊಡಗಿದರು. ''ಬ್ರಾಹ್ಮಣನಾಗಿ ತನ್ನ ಮಂತ್ರವಿದ್ಯೆಯನ್ನು ದ್ರವ್ಯದ ಆಸೆಯಿಂದ ಮಾರಾಟ ಮಾಡಿಕೊಂಡ. ರಾಜನ ಜೀವಕ್ಕಿಂತ ಈ ಕಶ್ಯಪನಿಗೆ ಸಂಪತ್ತೇ ಹೆಚ್ಚಿನದಾಯಿತು. ರಾಜನ ಮರಣಕ್ಕೆ ಇವನೇ ಪರೋಕ್ಷನಾಗಿ ಕಾರಣನಾದ'' ಎಂದು ಮುಂತಾಗಿ ಹೋದದಲ್ಲೆಲ್ಲ ಜನರು ಅವನನ್ನು ಹೀಗಳೆಯತೊಡಗಿದರು.

ಆ ಕಶ್ಯಪಮುನಿಗೂ ಮನಸ್ಸಿನಲ್ಲಿ ಪಶ್ಚಾತ್ತಾಪವಾಯಿತು. ಜನರ ನಿಂದೆಯ ನುಡಿಗಳನ್ನು ಕೇಳುವುದೂ ಅಶಕ್ಯವಾಯಿತು. ಕೊನೆಗೆ ಅವನು ಶಾಕಲ್ಯಮುನಿಗೆ ಶರಣುಹೋದ. ಅವರಿಗೆ ನಮಸ್ಕಾರ ಮಾಡಿ ಕೇಳಿದ. - ''ಪೂಜ್ಯರೇ! ತಾವು ಧರ್ಮ ಶಾಸ್ತ್ರವನ್ನು ಬಲ್ಲವರು. ಭಗವದ್ಭಕ್ತರು. ಈಗ ಈ ಲೋಕದಲ್ಲಿ ಎಲ್ಲ ಮುನಿಗಳು ಬ್ರಾಹ್ಮಣರು, ಮಿತ್ರರು, ಮನೆಯ ಜನರು ಕೂಡ ನನ್ನನ್ನು ನಿಂದಿಸಿ ನಿರ್ಭರ್ತ್ಸನೆ ಮಾಡುವರು. ಇದಕ್ಕೆ ಕಾರಣವೇನು? ತಮಗೆ ಗೊತ್ತಿದ್ದರೆ ತಿಳಿಸಿರಿ.''

**ಶಾಕಲ್ಯ:-** ಕಶ್ಯಪ! ನಿನ್ನಲ್ಲಿ ವಿಷಕಚ್ಚಿ ಮರಣ ಹೊಂದಿದವರನ್ನು ಮರಳಿ ಬದುಕಿಸುವ ವಿಲಕ್ಷಣವಾದ ಮಂತ್ರಶಕ್ತಿಯಿದೆ. ಆದರಿಂದ ಪರೀಕ್ಷಿತರಾಜನನ್ನು ಬದುಕಿಸ ಬೇಕೆಂದು ನೀನು ಹೊರಟಿದ್ದೆ. ಆದರೆ ದಾರಿಯಲ್ಲಿ ತಕ್ಷಕನಾಗನು ದುಪ್ಪಟ್ಟು ಹಣವನ್ನು ಕೊಟ್ಟಕೂಡಲೇ ರಾಜರಕ್ಷಣೆಯ ಪವಿತ್ರ ಕಾರ್ಯವನ್ನು ಮರೆತು ನೀನು ತಿರುಗಿ ಮನೆಗೆ ಹೋದೆ. ಇದು ಘೋರ ಅಪರಾಧ. ಯಾವ ಮನುಷ್ಯನಿಗೆ ವಿಷ, ರೋಗ ಮುಂತಾದವುಗಳಿಗೆ ತಕ್ಕ ಚಿಕಿತ್ಸೆ ನೀಡಿ ಗುಣಪಡಿಸುವ ಶಕ್ತಿ ಇದೆಯೋ ಅವನು ಕಾಮ, ಕ್ರೋಧ, ಲೋಭ, ಮಾತ್ಸರ್ಯ ಮುಂತಾದವುಗಳಿಗೆ ವಶನಾಗಿ ವಿಷ ಅಥವಾ ರೋಗಪೀಡಿತ ಮನುಷ್ಯನನ್ನು ರಕ್ಷಿಸದೆ ಹೋದರೆ ಅವನಿಗೆ ಬ್ರಹ್ಮಹತ್ಯಾ ದೋಷ, ಸುರಾಪಾನದ ಪಾಪ, ಬಂಗಾರ ಕದ್ದ ಪಾತಕ, ಗುರುಪತ್ನಿ ಸಹವಾಸ ಮಾಡಿದ ದೋಷ ಇವೆಲ್ಲ ಪಾಪಗಳು ಒಟ್ಟಿಗೆ ಬರುವವು. ಶಕ್ತಿ ಯಿದ್ದರೂ ಉಪಾಯ ಗೊತ್ತಿದ್ದರೂ ಮನುಷ್ಯನನ್ನು ಬದುಕಿಸದಿದ್ದರೆ ಅವನು ಮನುಷ್ಯನೆ! ನಿಜವಾಗಿಯೂ ಅವನು ಘೋರಪಾಪಿ, ಮಹಾಪಾಪಿ, ಈ ಪಾಪಕ್ಕೆ ಪ್ರಾಯಶ್ಚಿತ್ತವೆ ಇಲ್ಲ. ಪರೀಕ್ಷಿತ ರಾಜನು ಧರ್ಮನಿಷ್ಠ, ವಿಷ್ಣುಭಕ್ತ, ಮಹಾಯೋಗಿ, ಅತ್ಯಂತ ಭಕ್ತಿಯಿಂದ ವ್ಯಾಸಪುತ್ರ ಶುಕಾಚಾರ್ಯರಿಂದ ಭಾಗವತವನ್ನು ಶ್ರವಣ ಮಾಡುತ್ತಲಿದ್ದ. ಇಂಥ ಸಜ್ಜನ ಶಿಖಾಮಣಿಯಾದ ರಾಜರ್ಷಿಯನ್ನು ರಕ್ಷಿಸುವದನ್ನು ಬಿಟ್ಟು ಬೇಕಾದಷ್ಟು ಹಣ ಬಂದಿತೆಂದು ನೀನು ತಿರುಗಿ ಹೋದೆ, ಅದಕ್ಕಾಗಿ ನಿನ್ನನ್ನು ಎಲ್ಲರೂ ನಿಂದೆ ಮಾಡುತ್ತಿದ್ದಾರೆ.

**ಕಾಶ್ಯಪ:-** ಪೂಜ್ಯರೇ, ನನ್ನಿಂದ ದೊಡ್ಡ ತಪ್ಪು ಆಯಿತು. ನನಗೂ ಪಶ್ಚಾತ್ತಾಪವಾಗಿದೆ. ಇದಕ್ಕೆ ಪ್ರಾಯಶ್ಚಿತ್ತವೇನು? ಈಗ ನನ್ನ ಬಂಧು ಬಾಂಧವರೆಲ್ಲರೂ ನನ್ನನ್ನು ದೂರ ಮಾಡಿಬಿಟ್ಟಿದ್ದಾರೆ. ಅವರೆಲ್ಲರೂ ನನ್ನನ್ನು ಮತ್ತೆ ಮೊದಲಿನಂತೆ ಪರಿಗ್ರಹಿಸಲು ಏನು ಉಪಾಯ?

**ಶಾಕಲ್ಯ:-** ಬ್ರಾಹ್ಮಣನೇ! ಈ ನಿನ್ನ ಪಾಪ ಎಲ್ಲ ಪ್ರಾಯಶ್ಚಿತ್ತಗಳಿಗೆ ಮೀರಿನಿಂತಿದೆ. ಇದಕ್ಕೆ ಒಂದೇ ಒಂದು ಉಳಿದಿರುವ ಉಪಾಯವೆಂದರೆ ನೀನು ವೆಂಕಟಾಚಲದಲ್ಲಿರುವ ಸ್ವಾಮಿಪುಷ್ಕರಣೀ ತೀರ್ಥದಲ್ಲಿ ಸ್ನಾನ ಮಾಡಬೇಕು. ಸುವರ್ಣಮುಖರೀ ನದಿಯ ದಂಡೆಯ ಮೇಲೆ ವೆಂಕಟಾಚಲ ಎಂಬ ಲಕ್ಷ್ಮೀಪತಿನಿವಾಸ ಪರ್ವತವಿದೆ. ಅದಕ್ಕೆ ಶೇಷಾಚಲ ಎಂದೂ ಕರೆಯುತ್ತಾರೆ. ಆ ಬೆಟ್ಟದ ಮಣ್ಣು ಕಲ್ಲು ತೀರ್ಥ ಕ್ಷೇತ್ರಗಳನ್ನು ಮುಟ್ಟಿದ ಮಾತ್ರದಿಂದಲೇ ಪಂಚಮಹಾಪಾತಕಗಳು ಸುಟ್ಟು ನಾಶವಾಗುತ್ತವೆ. ಅದೇ ವೆಂಕಟಾ ಚಲದಲ್ಲಿ ಸ್ವಾಮಿ ಪುಷ್ಕರಣೀ ಎಂಬ ತೀರ್ಥವಿದೆ. ಅದರಲ್ಲಿ ಸ್ನಾನ ಮಾಡುವದರಿಂದ ಎಂಥ ಪಾಪವಿದ್ದರೂ ಪರಿಹಾರವಾಗುತ್ತದೆ. ಆದುದರಿಂದ ನೀನು ಈಗ ಆ ಶೇಷಾಚಲಕ್ಕೆ ಹೋಗು. ಅಲ್ಲಿಯ ಸ್ವಾಮಿ ಪುಷ್ಕರಣಿಯಲ್ಲಿ ಸ್ನಾನಮಾಡು. ಅಲ್ಲಿಯೇ ದಂಡೆಯ ಮೇಲಿರುವ ಭೂವರಾಹ ದೇವರ ಸೇವೆಮಾಡು. ಅನಂತರ ಅಲ್ಲಿಯೇ ಸಮೀಪದಲ್ಲಿ ಭಕ್ತರಿಗೆಲ್ಲ ಅಭಯ ಪ್ರದಾನ ಮಾಡುತ್ತ ನಿಂತುಕೊಂಡ ಶ್ರೀನಿವಾಸದೇವರ ದರ್ಶನ ಮಾಡಿಕೊ. ಭಕ್ತಿಯಿಂದ ಆರಾಧಿಸು ಆ ದೇವದೇವೋತ್ತಮನನ್ನು. ಭಕ್ತಿಯುಕ್ತವಾದ ಭಗವತ್ಸೇವೆ ಯಿಂದ ನಾಶವಾಗದ ಪಾಪಯಾವದಿದೆ ಈ ಭೂಮಂಡಲದಲ್ಲಿ? ನೀನು ಕೂಡ ಸ್ವಾಮಿ ಪುಷ್ಕರಣಿಯ ಸ್ನಾನ, ವರಾಹ ಶ್ರೀನಿವಾಸರ ಸಂತತ ಸೇವೆಯಿಂದ ಪಾಪ ಮುಕ್ತನಾಗುವೆ.''

ಶಾಕಲ್ಯರ ಆದೇಶದಂತೆ ಆ ಕಾಶ್ಯಪ ಬ್ರಾಹ್ಮನು ಶೇಷಾಚಲಕ್ಕೆ ಬಂದನು. ಸ್ವಾಮಿ ಪುಷ್ಕರಣಿಯಲ್ಲಿ ಸ್ನಾನ ಮಾಡಿದನು. ಭೂವರಾಹ ಹಾಗೂ ಶ್ರೀನಿವಾಸದೇವರ ನಿರಂತರ ಸೇವೆಗೈದನು. ಆ ಭಗವಂತನ ಸಂತತ ಚಿಂತನ, ಆರಾಧನೆ, ಉಪಾಸನೆಗಳಿಂದ ಪ್ರಣಷ್ಟವಾಯಿತು ಅವನ ಘೋರ ಪಾಪ. ಅಂತರಂಗ ಬಹಿರಂಗ ಶುದ್ಧಿ ಪ್ರಾಪ್ತವಾದವು ಆ ಕಶ್ಯಪನಿಗೆ. ಅವನ ಬಂಧು ಬಾಂಧವರು ಉಳಿದೆಲ್ಲ ಬ್ರಾಹ್ಮಣರು ಮತ್ತೆ ಮೊದಲಿನಂತೆ ಗೌರವ ಭಾವದಿಂದ ಕಾಣತೊಡಗಿದರು. ಪೂಜನೀಯ ಎಂಬ ದೃಷ್ಟಿಯಿಂದ ಸತ್ಕರಿಸಿದರು.

ಬ್ರಾಹ್ಮಣೋತ್ತಮರೇ! ನಾನು ಈಗ ನಿಮಗೆ ವೆಂಕಟಗಿರಿಯ ಮಹಿಮೆಯನ್ನೂ ಅಲ್ಲಿರುವ ಸ್ವಾಮಿ ಪುಷ್ಕರಣೀ ತೀರ್ಥದ ಮಹಿಮೆಯನ್ನು ಹೇಳಿದ್ದೇನೆ. ಇದನ್ನು ಭಕ್ತಿಯಿಂದ ಹೇಳಿದವರು ಶ್ರದ್ಧೆಯಿಂದ ಕೇಳಿದವರು ಉದ್ಧಾರ ಹೊಂದುವರು.

## ಸ್ವಾಮಿ ಪುಷ್ಕರಣಿಯ ಮಹಿಮೆ

**ಋಷಿಗಳು:-** ಸೂತರೇ! ಸ್ವಾಮಿ ಪುಷ್ಕರಣೀ ತೀರ್ಥದ ಮಹಿಮೆಯನ್ನು ಪುನಃ ವರ್ಣನ ಮಾಡಿರಿ.

**ಸೂತ:-** ಸ್ವಾಮಿ ಪುಷ್ಕರಣಿಯಲ್ಲಿ ಸ್ನಾನ ಮಾಡುವದರಿಂದ ಮನುಷ್ಯನ ಪಾಪಗಳೆಲ್ಲವೂ ಪರಿಹಾರವಾಗುವವು. ಮಾನವನಿಗೆ ನಲವತ್ತೆಂಟು ವಿಧವಾದ ನರಕ ಯಾತನೆಗಳನ್ನು ತಪ್ಪಿಸಲು ಭೂಲೋಕದಲ್ಲಿ ಇರುವ ಏಕಮಾತ್ರ ಉಪಾಯವೆಂದರೆ ಈ ಸ್ವಾಮಿ ಪುಷ್ಕರಣೀ ತೀರ್ಥದ ಸ್ನಾನ. ಈ ಹೊಕ್ಕರಣಿಯಲ್ಲಿ ಮಿಂದು, ವರಾಹ ದೇವರ ದರ್ಶನ ತೆಗೆದುಕೊಂಡು, ಶ್ರದ್ಧೆಯಿಂದ ಶ್ರೀನಿವಾಸದೇವರ ಸೇವೆ ಮಾಡಿದರೆ ತಾಮಿಸ್ರ, ಅಂಧತಾಮಿಸ್ರ, ಮಹಾರೌರವ, ಕುಂಭೀಪಾಕ, ಕಾಲಸೂತ್ರ, ಅಸಿಪತ್ರವನ, ಕೃಮಿಭಕ್ಷ, ಅಂಧಕೂಪ, ಸಂದಂಶ, ಶಾಲ್ಮಲಿ, ಲಾಲಾಭಕ್ಷ, ಅವೀಚಿ, ಸಾರಮೇಯಾದನ, ವಜ್ರಕರ್ಣಕ, ಕ್ಷಾರಕರ್ದಮಪಾತನ, ರಕ್ಷೋಗಣಾಶನ, ಶೂಲಪ್ರೋತ, ನಿರೋಧನ, ತಿರೋಧಾನ,

ಸೂಚೀಮುಖ, ಪೂಯಭಕ್ಷ, ಶೋಣಿತಭಕ್ಷ ಮತ್ತು ವಿಷಾಗ್ನಿಪರಿಪೀಡನ ಮುಂತಾದ ನರಕಗಳ ಬಾಧೆಯು ಮನುಷ್ಯ ಪ್ರಾಣಿಗೆ ಎಂದಿಗೂ ಉಂಟಾಗುವುದಿಲ್ಲ. ಸ್ವಾರ್ಥ, ಸುಖಲೋಭ ಮತ್ತು ದುರ್ಬುದ್ಧಿಯಿಂದ ಮಾನವನು ಮಾಡುವ ಅನೇಕ ದುರ್ವ್ಯಾಪಾರ ಗಳಿಂದಲೂ, ಮಹಾ ಮಹಾ ಪಾಪ ಕರ್ಮಗಳಿಂದಲೂ, ಮನುಷ್ಯರಿಗೆ ಮೇಲೆ ಹೇಳಿದ ನರಕಗಳಲ್ಲಿ ಯಮಯಾತನೆಯನ್ನು ಅನುಭವಿಸುವ ಪ್ರಸಂಗವು ಬರುವದು. ಯಾವ ಪಾಪದಿಂದ ಯಾವ ನರಕ ಪ್ರಾಪ್ತಿ ಅನ್ನುವದನ್ನು ಹೇಳುತ್ತೇನೆ ಕೇಳಿರಿ.

ಹೆರವರ ಹೆಣ್ಣು, ಧನ, ಸಂತಾನಗಳನ್ನು ಅಪಹರಿಸಿದವನು ಅನೇಕ ವರ್ಷಗಳ ವರೆಗೆ ತಾಮಿಸ್ರ ಎಂಬ ನರಕದಲ್ಲಿ ಬೀಳುತ್ತಾನೆ. ಯಾವ ಪಾಪಿಯು ತಾಯಿ ತಂದೆಗಳ ಮೇಲೆ ದ್ವೇಷವನ್ನು ಮಾಡುತ್ತಾನೋ ಅವನನ್ನು ಕಾಲಸೂತ್ರ ಎಂಬ ನರಕದಲ್ಲಿ ಹಾಕುತ್ತಾರೆ. ವೇದೋಕ್ತವಾದ ಪದ್ಧತಿಯನ್ನು ಬಿಟ್ಟು ದುರ್ಮಾರ್ಗದಲ್ಲಿ ನಡೆಯುವವನನ್ನು ಯಮದೂತರು ಅಸಿಪತ್ರವನದಲ್ಲಿ ಬೀಳಿಸುತ್ತಾರೆ. ಯಾವ ಮನುಷ್ಯನು ಊಟದಲ್ಲಿ ಪಕ್ವಾನ್ನಗಳನ್ನೂ ತರಕಾರಿ ಬೇಳೆಕಾಳುಗಳನ್ನೂ ಯಾರಿಗೂ ಬಡಿಸದೆ ತಾನೊಬ್ಬನೇ ಉಣ್ಣುವನೋ ಮತ್ತು ಮೋಹಾಂಧನಾಗಿ ನೈವೇದ್ಯ ವೈಶ್ವದೇವ ಮೊದಲಾದ ಪಂಚಯಜ್ಞಗಳನ್ನು ಮಾಡದೇ ಊಟ ಮಾಡುವನೋ ಅವನು ಕ್ರಿಮಿಭೋಜನ ಎಂಬ ನರಕದಲ್ಲಿ ದುಃಖ ಪಡಬೇಕಾಗುವದು. ಈ ನರಕದಲ್ಲಿ ನೂರಾರು ಕ್ರಿಮಿಗಳು ಬಂದು ಇವನನ್ನು ಕಚ್ಚಿ. ಕಡಿದು ವಿಲಕ್ಷಣ ವೇದನೆಯನ್ನು ಉಂಟು ಮಾಡುವವು. ಮತ್ತು ಇವನಾದರೂ ಅಲ್ಲಿ ಅನ್ನ ಮೊದಲಾದ ಯಾವ ಆಹಾರವು ಇಲ್ಲದೆ ಬರಿ ಅಲ್ಲಿ ಹರಿದಾಡುವ ಹುಳ ಹುಪ್ಪಡಿಗಳನ್ನು ತಿಂದು ಇರಬೇಕಾಗುವದು.

ಅಧ್ಯಯನ ಮಾಡಿದ ಸದಾಚಾರಿ ಬ್ರಾಹ್ಮಣನ ಅಥವಾ ಯೋಗ್ಯ ಮನುಷ್ಯನ ಹಾಗೂ ತನ್ನನ್ನು ನಂಬಿದವರ ದ್ರವ್ಯವನ್ನೂ ಸೊತ್ತನ್ನೂ ಅಪಹಾರ ಮಾಡಿದವನು 'ಸಂದಂಶ' ಎಂಬ ಘೋರ ನರಕದಲ್ಲಿ ಗೋಳಾಡುವರು. ನೀಚಳಾದ ಪರಸ್ತ್ರೀಯಳೊಂದಿಗೆ ವಿಹಾರ ಮಾಡಿದ ಪಾಪಿಯೂ ಹಾಗೂ ಪರಪುರುಷರೊಡನೆ ರತಿಕ್ರೀಡೆ ಮಾಡಿದ ನಾರಿಯೂ ನರಕದಲ್ಲಿ ಬೆಂಕಿಯಿಂದ ಕಾದು ಸುಡುತ್ತಲಿರುವ ಸ್ತ್ರೀ ಪುರುಷ ಮೂರ್ತಿಗಳನ್ನು ಅಪ್ಪಿಕೊಂಡು ಸರ್ವಾಂಗಗಳನ್ನು ಸುಟ್ಟು ಕೊಳ್ಳುವಂತೆ ಮಾಡಲಾಗುತ್ತದೆ. ಅನಂತರ ಇಲ್ಲಿ ವ್ಯಭಿಚಾರ ಮಾಡಿದ ಸ್ತ್ರೀ ಪುರುಷರನ್ನು 'ಸೂಚಿ' ಎಂಬ ಘೋರ ನರಕದಲ್ಲಿ ಒಗೆಯುತ್ತಾರೆ. ಪ್ರಾಣಿಗಳನ್ನು ಹೊಡೆದು ಬಡೆದು ಗೋಳಾಡಿಸುವ ಪಾಪಿಯೂ ಭಯಂಕರ ಮುಳ್ಳುಗಳಿಂದ ತುಂಬಿದ 'ಶಾಲ್ಮಲೀ' ಎಂಬ ಭೀಕರ ನರಕದಲ್ಲಿ ದುಃಖವನ್ನು ಅನುಭವಿಸಬೇಕಾಗುವದು. ವೇದ ವಿರುದ್ಧವಾದ ಪಾಖಂಡಮತವನ್ನು ಅನುಸರಿಸಿ ಸನಾತನ ಧರ್ಮದ ನಿಯಮ ನಿಬಂಧನೆಗಳನ್ನೆಲ್ಲ ಮುರಿದು, ಅಧರ್ಮ ರಾಜ್ಯವನ್ನು ನಡೆಸುವ ರಾಜರೂ ಅಥವಾ ಅಧಿಕಾರಿಗಳೂ 'ವೈತರಣೀ' ಎಂಬ ನರಕದಲ್ಲಿ ಗೋಳಾಡುವರು. ಹೊಲ ಮನೆಗಳಲ್ಲಿ ಕೆಲಸಮಾಡುವ ಹೆಣ್ಣಾಳುಗಳ ಮೇಲೆ ಬಲಾತ್ಕಾರ ಮಾಡಿದ ಪಾಪಿಯನ್ನೂ ವೇದಮಾರ್ಗವನ್ನು ಪರಿತ್ಯಜಿಸಿ ಉಚ್ಛೃಂಖಲನಾಗಿ ತಿರುಗುವ ಮತ್ತು ಮಡಿ ಮೈಲಿಗೆ ಮುಂತಾದ ಶೌಚಾಚಾರಗಳನ್ನೆಲ್ಲ ಧಿಕ್ಕರಿಸಿ ಶಾಸ್ತ್ರ ನಿಷಿದ್ಧವಾದ ಪಾಪಕರ್ಮಗಳನ್ನು ನಾಚಿಕೆಯಿಲ್ಲದೇ ಆಚರಿಸುವ ದುರುಳರನ್ನೂ ಯಮದೂತರು ಮಲ,

ಮೂತ್ರ, ರಕ್ತ, ಕೀವು, ಕಫ, ಪಿತ್ತ, ವಾಂತಿ ಮುಂತಾದವುಗಳು ತುಂಬಿದ 'ಬೀಭತ್ಸ' ನರಕಗಳಲ್ಲಿ ಅದ್ದಿ ಮುಳುಗಿಸಿ ಹೊಡೆದು ಪೀಡಿಸುತ್ತಾರೆ. ನಾಯಿ ಅಥವಾ ಬೇರೆ ಪಶು ಪಕ್ಷಿಗಳನ್ನು ಹೊಡೆದು ಬಡೆದು ವಿನಾಕಾರಣ ಹಿಂಸೆ ಪಡಿಸುವವರನ್ನು 'ಪ್ರಾಣಿರೋಧ' ಎಂಬ ನರಕದಲ್ಲಿ ಅಂತಕನ ದೂತರು ಬಗೆ ಬಗೆಯ ದುಃಖಗಳಿಗೆ ಈಡು ಮಾಡುತ್ತಾರೆ. ಯಜ್ಞದ ನೆವಮಾಡಿ ಯಾರು ಕುರಿ, ಕೋಳಿ, ಕುದುರೆ, ಎತ್ತು ಮುಂತಾದವುಗಳನ್ನು ಬಲಿ ಕೊಡುವರೋ ಅಂಥ ಪಾಖಂಡಿಯನ್ನು 'ವೈಶಸ' ಎಂಬ ನರಕದಲ್ಲಿ ಘೋರಯಾತನೆಯನ್ನು ಅನುಭವಿಸುವಂತೆ ಮಾಡುತ್ತಾರೆ. ಯಾವ ದುಷ್ಟರು ಕಳವು, ಕೊಲೆ, ಲೂಟಿ, ಮುಂತಾದ ದುರ್ಮಾರ್ಗಗಳಿಂದ ಧನ ಸಂಪಾದಿಸುವರೋ ಮತ್ತು ಇನ್ನೊಬ್ಬರಿಗೆ ವಿಷವನ್ನು ಇಕ್ಕುವರೋ, ಹಾಗೂ ಬೇರೊಬ್ಬರ ಮನೆ, ಬಣಿವೆ, ಗುಡಿಸಲುಗಳಿಗೆ ಬೆಂಕಿ ಹಚ್ಚುವರೋ ಅಂತ ಪಾಪಿಗಳನ್ನು 'ವಜ್ರದಂಷ್ಟ' ಎಂಬ ನರಕದಲ್ಲಿ ಬೀಳಿಸಿ ಬಗೆ ಬಗೆಯ ಯಮಯಾತನೆಗಳನ್ನು ಅನುಭವಿಸ ಹಚ್ಚುವರು.

ಹೀಗೆ ನರಕಗಳು ಅಸಂಖ್ಯವಾಗಿದ್ದು ಪಾಪ ಮಾಡಿದ ಮಾನವರು ತಮ್ಮ ದುಷ್ಕರ್ಮಗಳ ಫಲವಾಗಿ ಈ ನರಕಗಳಲ್ಲಿ ಕಡು ದುಃಖವನ್ನು ಅನುಭವಿಸಬೇಕಾಗುವದು. ಆದರೆ ಈ ವೆಂಕಟಾಚಲದಲ್ಲಿ ಇರುವ ಸ್ವಾಮಿಪುಷ್ಕರಣೀ ಸರೋವರದಲ್ಲಿ ಸ್ನಾನ ಮಾಡಿದರೆ ಈ ಯಾವ ನರಕದಲ್ಲಿಯೂ ಬೀಳುವ ಭಯ ಇರುವದಿಲ್ಲ.

ಪರಮ ಪವಿತ್ರವಾದ ಈ ಪುಣ್ಯತೀರ್ಥದಲ್ಲಿ ಒಂದು ಬಾರಿ ಮಿಂದರೆ ಮಾನವನು ಮಾಡಿದ ಮಹಾ ಪಾತಕಗಳೆಗೆಳೆಲ್ಲವೂ ದೂರಾಗುವವು. ಅಶ್ವಮೇಧ ಮೊದಲಾದ ಯಜ್ಞಗಳು ಮಾಡಿದ ಪುಣ್ಯವೂ ಪ್ರಾಪ್ತವಾಗುವದು. ಮುಕ್ತಿ ನಾಕು ವಿಧ. ಸಾಲೋಕ್ಯ, ಸಾರೂಪ್ಯ, ಸಾದೃಶ್ಯ, ಸಾಯುಜ್ಯ ಎಂದು. ಈ ಚತುರ್ವಿಧವಾದ ಮುಕ್ತಿಯನ್ನು ಹೊಂದಬೇಕಾದರೆ ಮನುಷ್ಯನಿಗೆ ಶಾಸ್ತ್ರಗಳ ಶ್ರವಣ, ಮನನ, ಶಾಸ್ತ್ರಾಧ್ಯಯನ, ಕೃಚ್ಛ್ರ, ಚಾಂದ್ರಾಯಣ, ಸಾಂತಪನ ಮುಂತಾದ ವ್ರತಗಳನ್ನೂ ನಿಷ್ಕಾಮ ಬುದ್ಧಿಯಿಂದ ಅನೇಕ ಯಜ್ಞ ಯಾಗಗಳನ್ನೂ, ಜಪ-ತಪ ಅನುಷ್ಠಾನಗಳನ್ನೂ ಹೇಳಿದ್ದಾರೆ. ಆದರೆ ಇವೆಲ್ಲವೂ ಬಹು ಕಷ್ಟಸಾಧ್ಯವಾದ ಪುಣ್ಯಕಾರ್ಯಗಳು. ಸ್ವಾಮಿಪುಷ್ಕರಣಿಯಲ್ಲಿ ಸ್ನಾನ ಮಾಡಿ ಭೂವರಾಹ ಹಾಗೂ ಶ್ರೀನಿವಾಸದೇವರ ಸೇವೆಯನ್ನು ಮಾಡಿದರೆ ಈ ಯಾವ ಮೇಲೆ ಹೇಳಿದ ಕಠಿಣವಾದ ಪರಿಶ್ರಮಗಳು ಇಲ್ಲದೆ ಈ ನಾಕೂ ವಿಧವಾದ ಮೋಕ್ಷಗಳು ಸುಲಭವಾಗಿ ಸಿದ್ಧಿಸುವವು. ಈ ಸ್ವಾಮಿ ಪುಷ್ಕರಣೀ ತೀರ್ಥದಲ್ಲಿ ಸ್ನಾನ ಮಾಡಿ ಶ್ರೀನಿವಾಸನ ದರ್ಶನ ತೆಗೆದುಕೊಂಡವರಿಗೆ ದಿವ್ಯಜ್ಞಾನ ಪ್ರಾಪ್ತಿ, ಐಶ್ವರ್ಯ ಲಾಭ, ಕೀರ್ತಿಯ ಅಭಿವೃದ್ಧಿ, ಮನಸ್ಸಿನ ಶುದ್ಧಿ, ಸದ್ಬುದ್ಧಿಯ ಉದಯ, ಧರ್ಮದಲ್ಲಿ ಶ್ರದ್ಧೆ, ವೈರಾಗ್ಯದ ಕಡೆಗೆ ಒಲವು, ಅಂತರಂಗದಲ್ಲಿ ಭಗವದ್ಭಕ್ತಿ ಮುಂತಾದವುಗಳು ತಾವಾಗಿಯೇ ಪ್ರಾಪ್ತವಾಗುವವು.

## ಧರ್ಮಗುಪ್ತನ ಶಾಪ ವೃತ್ತಾಂತ

ನೈಮಿಷಾರಣ್ಯದಲ್ಲಿ ನಿವಾಸಿಸಿದ ಮಹರ್ಷಿಗಳೇ! ಸ್ವಾಮಿತೀರ್ಥದ ಮಹಿಮೆಯ ವಿಷಯದಲ್ಲಿ ನಿಮಗೆ ಇನ್ನೂ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳಿರಿ. ಹಿಂದೆ ಚಂದ್ರವಂಶದಲ್ಲಿ ನಂದ ಎಂಬ ಪ್ರಸಿದ್ಧ ಮಹಾರಾಜನು ಆಗಿ ಹೋದ. ಅವನಿಗೆ ಧರ್ಮಗುಪ್ತ ಎಂಬ ಹೆಸರಿನ ಮಗನು ಇದ್ದನು. ಅವನು ಮಹಾವೀರ. ಮತ್ತು ಸರ್ವ

ಸಮರ್ಥ. ಧರ್ಮಗುಪ್ತನು ಪ್ರಬುದ್ಧನಾದ ಬಳಿಕ ನಂದ ಮಹಾರಾಜನು ಆ ತನ್ನ ಮಗನಿಗೆ ರಾಜ್ಯಾಧಿಕಾರವನ್ನು ವಹಿಸಿಕೊಟ್ಟ. ಸ್ವಯಂ ತಾನು ಇಂದ್ರಿಯಗಳನ್ನು ಅಂಕಿತದಲ್ಲಿ ಇಟ್ಟುಕೊಂಡು ಆಹಾರ ನಿಯಂತ್ರಣವನ್ನು ಸಾಧಿಸಿಕೊಂಡು ತಪೋನುಷ್ಠಾನಕ್ಕಾಗಿ ಅರಣ್ಯಕ್ಕೆ ತೆರಳಿದ. ತಂದೆಯ ನಂತರ ಧರ್ಮಗುಪ್ತ ಮಹಾರಾಜನು ಸಮುದ್ರವಲಯಾಂಕಿತವಾದ ಅಖಂಡ ಭೂಮಂಡಲವನ್ನು ಧರ್ಮಮಾರ್ಗದಿಂದ ಪರಿಪಾಲನ ಮಾಡತೊಡಗಿದ. ಅತ್ಯಂತ ಧರ್ಮನಿಷ್ಠ ಈ ಧರ್ಮಗುಪ್ತ. ಅನೇಕ ಯಜ್ಞಯಾಗಗಳನ್ನು ಮಾಡಿ ದೇವತೆಗಳನ್ನು ಪೂಜೆ ಮಾಡಿದ. ಅಸಂಖ್ಯ ಗೋದಾನ ಭೂದಾನ ಸುವರ್ಣದಾನ ಗ್ರಾಮ ದಾನಗಳನ್ನು ಸಂತೋಷ ದಿಂದ ನೀಡಿದ ಸತ್ಪಾತ್ರರಿಗೆಲ್ಲ. ಅವನ ರಾಜ್ಯದಲ್ಲಿ ಎಲ್ಲ ಜಾತಿಯ ಪ್ರಜೆಗಳು ಧರ್ಮ ಪರಾಯಣರಾಗಿದ್ದರು. ಆದರಿಂದ ಧರ್ಮಗುಪ್ತ ಎಂಬ ಅವನ ಹೆಸರು ಸಾರ್ಥಕವಾಯಿತು.

ಒಂದು ದಿನ ಈ ಧರ್ಮಗುಪ್ತ ರಾಜನು ಅಶ್ವಾರೂಢನಾಗಿ ಅರಣ್ಯಕ್ಕೆ ಹೋಗಿದ್ದ ಅಲ್ಲಿಯೇ ರಾತ್ರಿ ಆಯಿತು. ಧರ್ಮಿಷ್ಠನಾದ ಆ ಮಹಾರಾಜನು ಅಲ್ಲಿಯ ಸಮೀಪದಲ್ಲಿ ಇರುವ ಒಂದು ನಿರ್ಝರಿಣಿಯನೀರಿನಲ್ಲಿ ತನ್ನ ಸಾಯಂಕಾಲದ ಸಂಧ್ಯಾವಂದನೆ ಹಾಗೂ ಜಪಾನುಷ್ಠಾನ ಮಾಡಿದ. ಸುತ್ತಲೂ ಕತ್ತಲೆ. ತಂಗಲು ಎಲ್ಲಿಯೂ ಸುರಕ್ಷಿತ ತಾಣವಿಲ್ಲ. ಹುಲಿ ಸಿಂಹ ಮುಂತಾದ ಘೋರ ಪ್ರಾಣಿಗಳ ಘನ ಗರ್ಜನೆ, ಇದನ್ನೆಲ್ಲ ನೋಡಿ ರಾಜನು ಒಂದು ಮರವನ್ನು ಏರಿ ಅದರ ಮೇಲೆ ಕುಳಿತುಕೊಂಡ. ಆಗ ಆ ಮರದ ಕೆಳಗೆ ಒಂದು ಕಾಡುಹಂದಿಯು ಧಾವಿಸಿ ಬಂದಿತು. ಬೆನ್ನಟ್ಟಿ ಬರುವ ಒಂದು ಸಿಂಹದ ಭಯದಿಂದ ಆ ಹಂದಿಯು ತಲ್ಲಣಿಸಿತ್ತು. ಭಯ ಭ್ರಾಂತವಾದ ಆ ಕಾಡುಹಂದಿಯು ಸಿಂಹದಿಂದ ತಪ್ಪಿಸಿಕೊಳ್ಳಲಿಕ್ಕಾಗಿ ಆ ರಾಜನು ಕುಳಿತ ಗಿಡವನ್ನು ಏರಿತು.

ಆ ಮರದ ಕೊಂಬೆಯನ್ನು ಅವಲಂಬಿಸಿ ಮಹಾರಾಜನು ಮಂಡಿಸಿದ್ದನ್ನು ನೋಡಿ ಹಂದಿಯು ಹೇಳಿತು- "ರಾಜನೇ! ಹೆದರಬೇಡಿ. ನನ್ನಿಂದ ತಮಗೆ ಯಾವ ಅಪಾಯವೂ ಆಗುವದಿಲ್ಲ. ನಾವಿಬ್ಬರೂ ಬೆಳಗಾಗುವ ವರೆಗೆ ಈ ವೃಕ್ಷದ ಈ ಶಾಖಾಗ್ರದಲ್ಲಿಯೇ ರಾತ್ರಿ ಕಳೆಯೋಣ. ಯಾಕೆಂದರೆ ಈ ಗಿಡದ ಬುಡದಲ್ಲಿ ಭಯಂಕರವಾದ ಸಿಂಹವು ಬಂದು ನಿಂತಿದೆ. ಅದೋ ನೋಡಿ. ಈ ಅಡವಿಯೆಲ್ಲವೂ ನಡುಗುವಂತೆ ಗುಡುಗು ಹಾಕುತ್ತಿದೆ ಆ ಮೃಗರಾಜ. ಆದುದರಿಂದ ಬೆಳಗು ಆಗುವವರೆಗೆ ನಾವಿಬ್ಬರೂ ಈ ಮರದ ಟೊಂಗೆಯ ಮೇಲೆ ಕುಳಿತು ಬಿಡುವಾ. ಅರ್ಧರಾತ್ರಿಯವರೆಗೆ ನೀವು ಯಾವದೇ ಭಯ ಅಪಾಯದ ಶಂಕೆಯಿಲ್ಲದೆ ನಿಶ್ಚಿಂತೆಯಿಂದ ನಿದ್ದೆಮಾಡಿರಿ. ನಾನು ಎಚ್ಚರವಿದ್ದು ನಿಮ್ಮ ರಕ್ಷಣೆಯನ್ನು ಮಾಡುತ್ತೇನೆ. ಸರಿ ರಾತ್ರಿಯಾದ ಬಳಿಕ ನೀವು ಎಚ್ಚರವಾಗಿರಿ. ನಾನು ಮಲಗುತ್ತೇನೆ. ಆಗ ನೀವು ರಕ್ಷಿಸಿರಿ ನನ್ನನ್ನು ಬೆಳಗಾಗುವವರೆಗೆ. ಹೀಗೆ ಪರಸ್ಪರ ಸಹಕಾರದಿಂದ ಇಂದಿನ ಒಂದು ರಾತ್ರಿಯನ್ನು ಸುರಕ್ಷಿತವಾಗಿ ಕಳೆಯೋಣ." ಸರಿ ಎನಿಸಿತು ಆ ಕಾಡುಮಿಕನ ಮಾತು ಮಹಾರಾಜನಿಗೆ. ಕೂಡಲೇ ಸಮ್ಮತಿಸಿದ ಆ ಹಂದಿಯ ಸೂಚನೆಗೆ. ಅದರ ಮಾತಿನಂತೆ ಮೊದಲು ಧರ್ಮಗುಪ್ತ ಮಹಾರಾಜನು ಆ ಹೆಮ್ಮರದ ನಿಬಿಡವಾದ ಶಾಖಾಂತರದಲ್ಲಿಯೇ ಇದ್ದುದರಲ್ಲಿಯೇ ಸರಿಪಡಿಸಿಕೊಂಡು ಮಲಗಿಕೊಂಡ. ದಣಿದ ದೇಹಕ್ಕೆ ನಿದ್ದೆಯೂ ಬಂದಿತು. ಮರದ ಬುಡದಲ್ಲಿ ಬಂದು ನಿಂತ ಸಿಂಹವು ಅಲ್ಲಿಯೇ ಮಹಾರಾಜರು ಮಲಗಿದ್ದನ್ನು ನೋಡಿತು. ಹಂದಿಗೆ ಹೇಳಿತು. "ಎಲೋ ಕಾಡುಹಂದಿಯೇ, ಆ ಟೊಂಗೆಯಲ್ಲಿ ಪವಡಿಸಿದ ಮಹಾರಾಜನನ್ನು ಕೆಳಗೆ ಬೀಳಿಸಿಬಿಡು. ಆ ಮನುಷ್ಯನನ್ನು ನಾನು

ಹೊಡೆದುಕೊಂಡು ಹೋಗುತ್ತೇನೆ. ನಿನ್ನನ್ನು ಬಿಟ್ಟು ಬಿಡುತ್ತೇನೆ. ಇದರಿಂದ ನೀನು ಪ್ರಾಣಾಪಾಯದಿಂದ ಪಾರಾಗುತ್ತಿ.''

ಆ ವನವರಾಹವು ನೀತಿ ನಿಯತ್ತಿನ ಪ್ರಾಣಿ ಆಗಿತ್ತು. ಸಿಂಹದ ಮಾತಿಗೆ ಅದು ಸಮ್ಮತಿಸಲಿಲ್ಲ. ಅದು ಸ್ಪಷ್ಟವಾಗಿ ಹೇಳಿತು.-''ವನಚಾರಿಯಾದ ಮೃಗೇಂದ್ರ! ನೀನು ಧರ್ಮವನ್ನು ತಿಳಿದಿಲ್ಲ. ಆದುದರಿಂದಲೇ ನನಗೆ ವಿಶ್ವಾಸಘಾತವನ್ನು ಬೋಧಿಸುತ್ತೀಯ. ಅದು ಅಧರ್ಮ. ವಿಶ್ವಾಸಘಾತ ಮಾಡಿದ ಪ್ರಾಣಿಗಳು ಬಹಳ ಕಷ್ಟ ಅನುಭವಿಸ ಬೇಕಾಗುವದು. ಈ ಪ್ರಪಂಚದಲ್ಲಿ ಹತ್ತುಸಾವಿರ ಯಜ್ಞಮಾಡಿದರೂ ತೊಳೆದು ಹೋಗಲಾರದು ಮಿತ್ರದ್ರೋಹದ ಪಾತಕ, ಬ್ರಹ್ಮಹತ್ಯೆ ಮೊದಲಾದ ಪಾಪಗಳನ್ನು ಹೇಗಾದರೂ ಮಾಡಿ ಕಳೆದುಕೊಳ್ಳಬಹುದು, ಆದರೆ ವಿಶ್ವಾಸಘಾತದ ಪಾಪ ಮಾತ್ರ ಕೋಟಿಜನ್ಮ ಕಳೆದರೂ ನಾಶವಾಗುವದಿಲ್ಲವೆಂದು ಧರ್ಮಶಾಸ್ತ್ರಕಾರರು ಈ ಕೆಳಗಿನ ಪದ್ಯದಿಂದ ಹೇಳಿದ್ದಾರೆ. ಆದುದರಿಂದ ನನ್ನನ್ನು ನಂಬಿ ನಿದ್ರೆ ಮಾಡುತ್ತಲಿರುವ ಈ ರಾಜನಿಗೆ ಮೋಸ ಮಾಡಲಾರೆ. ಅವನು ಎದ್ದ ಬಳಿಕ ನಾನು ಮಲಗುವೆ. ಅವನು ನನ್ನನ್ನು ರಕ್ಷಿಸುವನು, ಅವನೂ ನನಗೆ ಮೋಸ ಮಾಡಲಾರ, ನೀನು ಇಲ್ಲಿಂದ ಹೋಗು.

''ಬ್ರಹ್ಮಹತ್ಯಾದಿ ಪಾಪಾನಾಂ ಕಥಂಚಿನ್ನಿಷ್ಕೃತಿರ್ಭವೇತ್ ।
ವಿಶ್ವಾಸಘಾತಿನಾಂ ಪಾಪಂ ನ ನಶ್ಯೇಜ್ಜನ್ಮ ಕೋಟಿಭಿಃ ॥

ಹಂದಿಯ ಈ ನೀತಿ-ಪರನುಡಿಯನ್ನು ಕೇಳಿ ಸುಮ್ಮನಾಯಿತು ಆಸಿಂಹ. ಅನಂತರ ಸರಿ ರಾತ್ರಿ ಕಳೆಯಿತು. ಮಹಾರಾಜನು ಎದ್ದು ಕುಳಿತ. ಹಂದಿಗೆ ಮಲಗಲು ಹೇಳಿದ ತಮ್ಮ ಕರಾರಿನಂತೆ. ರಾಜನ ಮಾತನ್ನು ನಂಬಿ ಮಲಗಿಕೊಂಡಿತು ಆ ವೃಕ್ಷದ ವೃಕ್ಷಸ್ಥಳದಲ್ಲಿ ಆ ವರಾಹ. ಆಗ ಈ ರಾಜ ವರಾಹರ ವ್ಯವಹಾರದ ವಿನಿಮಯವನ್ನು ಕಣ್ಣಿಟ್ಟು ನೋಡುತ್ತಲೇ ಇತ್ತು ಕೆಳಗೆ ನಿಂತ ಕಂಠೀರವ, ಆಗ ಸಿಂಹವು ರಾಜನಿಗೆ ಹೇಳಿತು- ''ರಾಜನ್! ಕೆಳಗೆ ತಳ್ಳಿಬಿಡು ಆ ಹಂದಿಯನ್ನು, ಅದನ್ನು ಹೊಡೆದು ತಿಂದು ನಾನು ಹೋಗಿಬಿಡುತ್ತೇನೆ. ನೀನು ಸುರಕ್ಷಿತವಾಗಿ ಪಾರಾಗುವೆ. ನಾನು ತೃಪ್ತನಾಗಿ ಹೋಗುತ್ತೇನೆ.''

ಸಿಂಹದ ಸೂಚನೆ ಸರಿ ಕಂಡಿತು ಆ ರಾಜನ ಸ್ವಾರ್ಥಿ ಮನಸ್ಸಿಗೆ. ಕೂಡಲೇ ಅವನು ಆ ವನ ವರಾಹನನ್ನು ಕೆಳಗೆ ತಳ್ಳಿದ. ಆದರೂ ಆ ಹಂದಿಯು ಜಾಣ್ಮೆಯುಳ್ಳದ್ದು. ಎತ್ತರದಲ್ಲಿಯ ತಾನು ಮಲಗಿದ ಟೊಂಗೆಯಿಂದ ರಾಜನು ಕೆಳಗೆ ಬೀಳಿಸಿದರೂ ಅದಕ್ಕಿಂತ ಕೆಳಗಿನ ಮತ್ತೊಂದು ಅದೇ ಮರದ ಟೊಂಗೆಯನ್ನು ಗಟ್ಟಿಯಾಗಿ ಹಿಡಿದುಕೊಂಡಿತು. ನೆಲಕ್ಕೆ ಬೀಳಲಿಲ್ಲ! ಆ ಮಹಾವೃಕ್ಷದ ಅರ್ಧಶಾಖೆಯನ್ನು ಹಿಡಿದು ನಿಂತುಕೊಂಡ ಆ ಹಂದಿಯು ಸಿಟ್ಟಿನಿಂದ ರಾಜನನ್ನು ಕುರಿತು ನುಡಿಯಿತು ''ರಾಜನೇ! ನಾನು ಯಾರೆಂದು ತಿಳಿದಿರುವೆ! ನಾನೊಬ್ಬ ಮುನಿ. 'ಧ್ಯಾನಕಾಷ್ಠ' ಎಂದು ನನ್ನ ಹೆಸರು. ನನ್ನ ಇಚ್ಛಾನುಸಾರ ಮನಬಂದ ರೂಪವನ್ನು ನಾನು ಧರಿಸಬಲ್ಲೆ. ನಾನು ಹುಟ್ಟಿದ್ದು ಭೃಗುವಂಶದಲ್ಲಿ. ಬೆಳೆದದ್ದು ಮುನಿವೃತ್ತಿಯಿಂದ. ನನ್ನ ಇಚ್ಛೆಯಿಂದಲೇ ನಾನು ಈ ವನ ವರಾಹ ವೇಷವನ್ನು ಧರಿಸಿದೆ. ನಿನ್ನ ಮಾತನ್ನು ನಂಬಿ ನಿನ್ನನ್ನು ಅರ್ಧರಾತ್ರಿಯವರೆಗೆ ರಕ್ಷಿಸಿ ನಿನ್ನ ಮೇಲೆ ವಿಶ್ವಾಸವಿಟ್ಟು ನಾನು ಮಲಗಿದ್ದೆ. ನೀನೇಕೆ ಹೀಗೆ ವಿಶ್ವಾಸಘಾತ ಮಾಡಿದೆ? ನಾನು ನಿನಗೆ ಏನು ತಪ್ಪು ಮಾಡಿದ್ದೆ! ನಿನ್ನ ಮಾತನ್ನು ನಂಬಿದ್ದು ನನ್ನ ತಪ್ಪೇ? ನನಗೆ ವಿಶ್ವಾಸದ್ರೋಹ

ಮಾಡಿದ್ದರಿಂದ ನೀನು ಪೃಥ್ವಿಯಲ್ಲಿ ತಲೆಕೆಟ್ಟು ಹುಚ್ಚನಾಗಿ ತಿರುಗಾಡು'' ಹೀಗೆ ಆ ರಾಜನಿಗೆ ಶಾಪಕೊಟ್ಟು ಆ ಧ್ಯಾನಕಾಷ್ಠ ಎಂಬ ಮುನಿ ಕೆಳಗೆ ನಿಂತ ಸಿಂಹಕ್ಕೆ ಹೇಳಿದ.

## ಯಕ್ಷನಿಗೆ ಗೌತಮನ ಶಾಪ

**ಹಂದಿರೂಪದ ಧ್ಯಾನಕಾಷ್ಠ:-** ಮೃಗೇಂದ್ರನೇ! ನೀನು ಯಾರು? ಎಂಬುದನ್ನು ನೀನು ಅರಿಯೆ. ವಾಸ್ತವಿಕವಾಗಿ ನೀನು ಸಿಂಹ ಅಲ್ಲ. ನೀನು ದೊಡ್ಡ ಯಕ್ಷ. ಮೊದಲು ಮಂತ್ರಿಯಾಗಿದ್ದೆ ನಿಮ್ಮ ಮಹಾರಾಜ ಕುಬೇರನ ದರ್ಬಾರದಲ್ಲಿ. ಒಂದು ದಿನ ನೀನು ಹಿಮಾಲಯದ ಶೃಂಗಾಂಗಣದಲ್ಲಿ ವನವಿಹಾರಕ್ಕೆ ಹೋಗಿದ್ದೆ ನಿನ್ನ ಪ್ರೇಯಸಿಯೊಂದಿಗೆ. ದುರ್ದೈವದಿಂದ ನೀವು ನಿಮ್ಮ ಮಧುಚಂದ್ರ ವಿಹಾರಕ್ಕಾಗಿ ಆರಿಸಿಕೊಂಡ ಆ ರಮ್ಯ ವನಾಂತರವು ಗೌತಮ ಮುನಿಯ ಪುಣ್ಯಾಶ್ರಮದ ಪರಿಸರ ಪ್ರಾಂತವಾಗಿತ್ತು. ಮಹರ್ಷಿ ಗೌತಮರು ತಮ್ಮ ಹೋಮಕ್ಕಾಗಿ ಅರಳೆಮರದ ಕಟ್ಟಿಗೆಗಳನ್ನು ಆಯ್ದು ಕೊಳ್ಳಲಿಕ್ಕಾಗಿಯೇ ಅಲ್ಲಿಗೆ ಬಂದರು. ನಗ್ನಾವಸ್ಥೆಯಲ್ಲಿ ವಿಹಾರ ಮಾಡುತ್ತಿದ್ದ ನೀನು ಅವರ ಕಣ್ಣಿಗೆ ಬಿದ್ದೆ. ಪುಣ್ಯಾಶ್ರಮದ ಪರಿಸರದಲ್ಲಿಯೇ ಕಾಮಕ್ರೀಡೆ ವಿಹಾರಕ್ಕೆ ಇಳಿದ ನಿನ್ನನ್ನು ಕಂಡು ಕೋಪ ಕೆರಳಿತು ಆ ಗೌತಮಮುನಿಗೆ. ಅವರು ಶಾಪವಿತ್ತರು. ''ನೀನು ಈ ನನ್ನ ಪವಿತ್ರವಾದ ಆಶ್ರಮದ ಅಂಗಳದಲ್ಲಿ ವಿವಸ್ತ್ರನಾಗಿ ವಿಹಾರಕ್ಕೆ ಉದ್ಯುಕ್ತನಾಗಿರುವೆ. ಆದುದರಿಂದ ಬಟ್ಟೆ ಬರೆಯ ಅಗತ್ಯವಿಲ್ಲದ ವನ್ಯಪ್ರಾಣಿಯಾಗಿ ಇದೇ ವನಾಂತರದಲ್ಲಿ ತಿರುಗಾಡು. ಅದರಲ್ಲಿ ವನರಾಜನಾಗು. ಸಿಂಹದ ರೂಪವೇ ನಿನಗೆ ಬರಲಿ'' ಎಂದು.

ಗೌತಮಮುನಿಯ ಆ ಶಾಪದಿಂದ ನಿನಗೆ ಕ್ರೂರವಾದ ಸಿಂಹದ ಜನ್ಮವು ಬರುವದಕ್ಕಿಂತ ಮೊದಲು ನೀನು ಆ ಮುನೀಶ್ವರರ ಪಾದದ ಮೇಲೆಬಿದ್ದು ಬೇಡಿಕೊಂಡೆ. 'ನನ್ನ ಮಹಾಪರಾಧವನ್ನು ಕ್ಷಮಿಸಬೇಕು' ಎಂದು ಕೇಳಿಕೊಂಡೆ. ಕರುಣದ ಕೈವಾರಿ ಆಗಿದ್ದ ಆ ಮಹಾಮುನಿ ಗೌತಮ. ಅವನು ನಿನಗೆ ಉಶ್ಶಾಪವಿತ್ತ. ''ನೀನು ಸಿಂಹಯೋನಿ ಯಲ್ಲಿದ್ದಾಗ ಒಂದು ದಿನ ವರಾಹರೂಪ ಧರಿಸಿದ ಧ್ಯಾನಕಾಷ್ಠ ಎಂಬ ಮುನೀಶ್ವರನ ಸಂಪರ್ಕ ಆಗುವದು. ಅಂದೇ ಆ ಕಾಡು ಕೇಸರಿಯ ಜನ್ಮದಿಂದ ನಿನಗೆ ಮುಕ್ತಿ.'' ಎಂದು. ವರಾಹ ರೂಪ ಧರಿಸಿದ ಧ್ಯಾನಕಾಷ್ಠ ಮುನಿಯ ಈ ಮಾತನ್ನು ಕೇಳಿದ ಕೂಡಲೇ ಆ ಸಿಂಹವು ತನ್ನ ಪಶುರೂಪವನ್ನು ಅಲ್ಲಿಯೇ ಪರಿತ್ಯಾಗ ಮಾಡಿತು. ತಾನು ಮೊದಲು ಕುಬೇರನ ಸಚಿವನಾಗಿದ್ದ ಯಕ್ಷನ ಶರೀರವನ್ನು ಧರಿಸಿತು. ಜನ್ಮಾಂತರದ ಸ್ಮರಣೆ ಎಲ್ಲವೂ ಅದಕ್ಕೆ ಈಗ ಉದ್ಬುದ್ಧವಾಯಿತು. ಆಗ ಆ ಯಕ್ಷರಾಜನು ಹಂದಿಯ ರೂಪದಲ್ಲಿದ್ದ ಧ್ಯಾನಕಾಷ್ಠ ಮುನಿಗೆ ಸಾಷ್ಟಾಂಗ ಪ್ರಣಾಮ ಗೈದಿತು. ತನ್ನನ್ನು ಪಶುಯೋನಿ (ಸಿಂಹಜನ್ಮ) ಯಿಂದ ಉದ್ಧರಿಸಿದ ಆ ಮುನಿಗೆ ಅಭಿನಂದನೆ ಸಲ್ಲಿಸಿತು. ಉತ್ತಮವಾದ ವಿಮಾನವನ್ನು ಆರೋಹಣ ಮಾಡಿ ತೆರಳಿತು ತಮ್ಮ ರಾಜಧಾನಿಯಾದ ಅಲಕಾಪಟ್ಟಣಕ್ಕೆ.

## ರಾಮಮುಕ್ತಿಗೆ ಜೈಮುನಿಗಳ ಉಪಾಯ

ಇತ್ತ ಹಂದಿಯ ರೂಪದಲ್ಲಿದ್ದ ಮುನಿಯ ಶಾಪದಿಂದ ಹುಚ್ಚನಾಗಿ ಬಿಟ್ಟ ಆ ಧರ್ಮ ಗುಪ್ತ ಮಹಾರಾಜ. ತಲೆಕೆಟ್ಟು ಕಂಡಕಂಡಲ್ಲಿ ಅಂಡಲೆಯತೊಡಗಿದ. ಅದನ್ನು ಕಂಡು ಗಾಬರಿಯಾದರು ಮಂತ್ರಿಗಳು. ಅವರೆಲ್ಲರೂ ಆ ಮಹಾರಾಜನನ್ನು ಹಿಡಿದುಕೊಂಡು ಹೋದರು ಅವರ ತಂದೆಯಬಳಿಗೆ. ಅವರ ತಂದೆ ನಂದ ಮಹಾರಾಜನು ತನ್ನ ಸಾಮ್ರಾಜ್ಯದ

ರಕ್ಷಣೆಯ ಭಾರವನ್ನೆಲ್ಲ ಮಗನಿಗೆ ಒಪ್ಪಿಸಿ ವಿರಕ್ತನಾಗಿ ನರ್ಮದಾ ತೀರದ ಒಂದು ಆಶ್ರಮದಲ್ಲಿ ತಪಸ್ಸು ಮಾಡುತ್ತಿದ್ದನು. ಅಲ್ಲಿಗೆ ಹೋದರು ಮಂತ್ರಿಗಳು ತಮ್ಮ ಈ ಹುಚ್ಚ ದೊರೆಯನ್ನು ಕರೆದುಕೊಂಡು. ಬಹಳ ದುಃಖವಾಯಿತು ನಂದರಾಜನಿಗೆ ಮಗನ ಈ ದುರವಸ್ಥೆ ಕಂಡು. ಕೂಡಲೇ ಅವನು ಅಲ್ಲಿಯೇ ನಿಲ್ಲಿಸಿದ ತನ್ನ ತಪೋನುಷ್ಠಾನವನ್ನು. ತನ್ನ ಮಗನೊಡನೆ ಧಾವಿಸಿದ ಜೈಮಿನಿ ಮುನಿಗಳ ಆಶ್ರಮಕ್ಕೆ.

ಅವರಿಗೆ ದೀರ್ಘದಂಡ ಪ್ರಣಾಮವನ್ನು ಮಾಡಿದ. ಕೈಜೋಡಿಸಿಕೊಂಡು ಕೇಳಿಕೊಂಡ ''ಪೂಜ್ಯರೇ! ಸಿಂಹಾಸನಾರೂಢನಾಗಿ ರಾಜ್ಯದ ಶಾಸನವನ್ನು ಸಮರ್ಥರೀತಿಯಿಂದ ಚೆನ್ನಾಗಿ ಮಾಡುತ್ತಿರುವ ನನ್ನ ಮಗ ಧರ್ಮಗುಪ್ತನಿಗೆ ತಲೆ ಕೆಟ್ಟು ಹೋಗಿದೆ. ಈ ಉನ್ಮಾದ ರೋಗದ ನಿವಾರಣೆಗೆ ಏನಾದರೂ ಉಪಾಯ ಉಂಟೆ?

ನಂದರಾಜನ ಈ ಪ್ರಶ್ನೆಯನ್ನು ಕೇಳಿ ಆ ಜೈಮುನಿ ಮಹರ್ಷಿಗಳು ಬಹಳ ಹೊತ್ತು ವಿಚಾರ ಮಾಡಿದರು ಧ್ಯಾನ ಮುದ್ರಿತಲೋಚನರಾಗಿ. ಅನಂತರ ಕಣ್ತೆರೆದು ಹೇಳಿದರು ನಂದರಾಜನಿಗೆ - ''ರಾಜನೇ! ನಿನ್ನ ಈ ಮಗನು ಧ್ಯಾನಕಾಷ್ಠ ಮುನಿಯ ಶಾಪದಿಂದ ಹೀಗೆ ವಿಕೃತಮಸ್ತಿಷ್ಕನು ಆಗಿದ್ದಾನೆ. ಇದಕ್ಕೆ ನಿನಗೆ ಒಂದು ಉಪಾಯವನ್ನು ಹೇಳುತ್ತೇನೆ. ಸುವರ್ಣಮುಖರೀನದಿಯ ದಂಡೆಯ ಮೇಲೆ ವೆಂಕಟಾಚಲವೆಂಬ ಪ್ರಸಿದ್ಧ ಕ್ಷೇತ್ರವಿದೆ. ಅದರ ಶಿಖರದಲ್ಲಿ ಸ್ವಾಮಿ ಪುಷ್ಕರಣೀ ಎಂಬ ಪವಿತ್ರ ತೀರ್ಥವಿದೆ. ಅಲ್ಲಿಗೆ ಕರೆದುಕೊಂಡು ಹೋಗು ಈ ನಿನ್ನ ಮಗನನ್ನು. ಸ್ನಾನ ಮಾಡಿಸು ಆ ಪುಣ್ಯ ಜಲದಲ್ಲಿ. ಅದರಿಂದ ತತ್ಕಾಲದಲ್ಲಿ ನಿನ್ನ ಮಗ ಧರ್ಮಗುಪ್ತನ ಈ ಉನ್ಮಾದರೋಗವು ಪರಿಹಾರವಾಗುವದು. ಮತ್ತೆ ಮೊದಲಿನಂತೆ ಬುದ್ಧಿವಂತನಾಗಿ ಸಾಮ್ರಾಜ್ಯ ಸೂತ್ರವನ್ನು ನಿರ್ವಹಿಸಲು ಸಮರ್ಥನಾಗುವ ಈ ನಿನ್ನ ಸತ್ಪುತ್ರ.

ಜೈಮಿನಿ ಮಹರ್ಷಿಗಳ ಆದೇಶದಂತೆ ನಂದರಾಜನು ತನ್ನ ಮಗನನ್ನು ಕರೆದುಕೊಂಡು ಸ್ವಾಮಿಪುಷ್ಕರಣೀ ತೀರ್ಥಕ್ಕೆ ಬಂದ. ಮಗನನ್ನು ಪುಷ್ಕರಣಿಯ ಆ ಪುಣ್ಯೋದಕದಲ್ಲಿ ವಿಧಿಪೂರ್ವಕ ಸ್ನಾನ ಮಾಡಿಸಿದ. ತಾನೂ ಸ್ನಾನ ಮಾಡಿದ. ಕೂಡಲೆ ದೂರವಾಯಿತು ಧರ್ಮಗುಪ್ತನ ಆ ಉನ್ಮಾದ ರೋಗ. ಪೂರ್ತಿ ಕಡಿಮೆ ಆಯಿತು ಹುಚ್ಚು. ಮತ್ತೆ ಮೊದಲಿನಂತೆ ಮಹಾಮೇಧಾವಿಯಾಗಿ ಕಂಗೊಳಿಸಿದ ಆ ಧರ್ಮಗುಪ್ತ ಪುಷ್ಕರಣಿಯ ಸ್ನಾನದಿಂದ. ಮೂರು ದಿನ ಪುಷ್ಕರಣಿಯ ತಟಾಕದಲ್ಲಿಯೇ ಇದ್ದರು. ಆ ಪಿತಾಪುತ್ರರು ಮತ್ತೆ ಮತ್ತೆ ಮುಳುಗುಹಾಕಿ ಮಿಂದು ಬಂದರು ಆ ಹೊಕ್ಕರಣಿಯ ಪವಿತ್ರ ಜಲದಲ್ಲಿ. ಭೂವರಾಹನನ್ನು ಆರಾಧಿಸಿದರು ಭಕ್ತಿಯಿಂದ. ಶ್ರೀನಿವಾಸದೇವರ ಸೇವೆಯನ್ನು ಮಾಡಿದರು ಶ್ರದ್ಧೆಯಿಂದ. ಅನಂತರ ನಂದರಾಜನು ಮಗನನ್ನು ಕರೆದುಕೊಂಡು ತನ್ನ ರಾಜಧಾನಿಗೆ ಬಂದನು. ಆರೋಗ್ಯವಂತನಾದ ಆ ಧರ್ಮಗುಪ್ತನಿಗೆ ಸಾಮ್ರಾಜ್ಯಶಾಸನದ ಭಾರವನ್ನು ಸ್ವೀಕರಿಸ ಹೇಳಿ ತಾನು ಮತ್ತೆ ತಪಸ್ಸಿಗೆ ತೆರಳಿದನು ನರ್ಮದಾ ತೀರಕ್ಕೆ. ತಂದೆಯು ಹೊರಟು ಹೋದ ಬಳಿಕ ಧರ್ಮಗುಪ್ತನು ಶ್ರೀನಿವಾಸದೇವರಲ್ಲಿ ವಿಶೇಷ ಭಕ್ತಿಯನ್ನು ಮಾಡತೊಡಗಿದನು, ಬ್ರಾಹ್ಮಣರಿಗೆ ವಿಪುಲವಾಗಿ ಧನಧಾನ್ಯ ದಕ್ಷಿಣೆಗಳನ್ನು ಕೊಟ್ಟು ಧರ್ಮಮಾರ್ಗವನ್ನು ಅನುಸರಿಸಿ ರಾಜ್ಯಪಾಲನವನ್ನು ಮಾಡತೊಡಗಿದನು.

ಮುನಿಗಳೇ! ನಾನು ನಿಮಗೆ ಧರ್ಮಗುಪ್ತನ ಕಲ್ಯಾಣ ಕಥೆಯ ಮುಖಾಂತರ ಈ ಸ್ವಾಮಿ ಪುಷ್ಕರಣಿಯ ಮಹಿಮೆಯನ್ನು ನಿರೂಪಿಸಿದ್ದೇನೆ. ಇದರ ಶ್ರವಣಮಾತ್ರದಿಂದಲೇ ದೂರಾಗುವವು ಬ್ರಹ್ಮಹತ್ಯಾ ಮೊದಲಾದ ದಾರುಣ ದುರಿತ ರಾಶಿಗಳು.

# ಕೃಷ್ಣತೀರ್ಥ ಮತ್ತು ಭಗವಾನ್ ವೆಂಕಟೇಶ್ವರನ ಮಹಾತ್ಮೆ

**ಸೂತ:-** ಮುನಿವರ್ಯರೇ! ಈ ವೆಂಕಟಾದ್ರಿಯಲ್ಲಿ ಕೃಷ್ಣತೀರ್ಥ ಎಂಬ ಹೆಸರಿನ ಒಂದು ತೀರ್ಥವಿದೆ. ಎಲ್ಲ ಪಾಪಗಳು ಅಳಿದು ಹೋಗುವವು ಅಲ್ಲಿ ಮುಳುಗು ಹಾಕುವದರಿಂದ, ಅದರ ಮಹಿಮೆಯನ್ನು ಬಿತ್ತರಿಸುತ್ತೇನೆ ಕೇಳಿರಿ. ಪೂರ್ವಕಾಲದಲ್ಲಿ ಓರ್ವ ಮಹಾಮುನಿ ಇದ್ದ. ಅವನ ಹೆಸರು ರಾಮಕೃಷ್ಣ. ಅವನು ಎಂದೂ ಹುಸಿ ನುಡಿಯುತ್ತಿದ್ದಿಲ್ಲ. ಅಧರ್ಮ ಮಾಡುತ್ತಿದ್ದಿಲ್ಲ. ಭಗವಂತನಲ್ಲಿ ಅಚ್ಛಿನ್ನ ಭಕ್ತಿ. ಪ್ರಾಣಿಗಳ ಮೇಲೆ ದಯೆ, ಶತ್ರು ಮಿತ್ರರಲ್ಲಿ ಸಮಭಾವನೆ. ಆ ತಪಸ್ವಿಯು ಬ್ರಹ್ಮವಿದ್ಯೆಯಲ್ಲಿಯೂ ನಿಷ್ಣಾತ. ಈ ತಾಪಸನು ಈ ಕೃಷ್ಣತೀರ್ಥದ ದಂಡೆಯ ಮೇಲೆ ನಿಂತು ಅತ್ಯುಗ್ರವಾದ ತಪಸ್ಸನ್ನು ಆಚರಿಸಿದನು. ನೂರಾರು ವರುಷಗಳು ಕಳೆದುಹೋದವು ಅವನು ತಪಃಸ್ಸಮಾಧಿಲೀನನಾದಾಗ, ಅವನ ಮೈಮೇಲೆಲ್ಲ ಹುತ್ತುಗಟ್ಟಿತು. ಸುತ್ತುಮುತ್ತು ಬೆಳೆದ ಹುತ್ತಿನಲ್ಲಿ ಹುಗಿದುಹೋಗಿದ್ದ ಆ ರಾಮಕೃಷ್ಣಮುನಿ. ಇಷ್ಟಾದರೂ ಅವನಿಗೆ ಎಚ್ಚರವಿಲ್ಲ. ಅವನು ನಿರಂತರ ಸಮಾಧಿಮಗ್ನ. ಇವನ ಈ ಉಗ್ರ ತಪಸ್ಸಿಗೆ ಹೆದರಿ ಹೋದರು ಸ್ವರ್ಗದ ಸುರರು. ವಿವಿಧ ವಿಘ್ನ ಒಡ್ಡಿದರು. ಸ್ವಯಂ ದೇವೇಂದ್ರನು ಮೋಡಗಳ ಪಡೆಗಳನ್ನೆ ಕಳಿಸಿದ ಇವನ ಆಶ್ರಮದೆಡೆಗೆ. ಒನಕೆಗೆಡುತರ ಮಳೆ ಸುರಿಯಿತು ಬಿಟ್ಟುಬಿಡದೇ ಏಳುದಿನಗಳವರೆಗೆ. ಈ ಘೋರ ವೃಷ್ಟಿಪಾತಕ್ಕಾಗಲಿ ಮೋಡಗಳ ಗುಡುಗಿನ ಅಬ್ಬರಕ್ಕಾಗಲಿ ಸಾವಿರಾರು ವಿದ್ಯುತ್‌ಪ್ರಕಾಶದ ಮಿಂಚಿನಬೆಳಕಿಗಾಗಲಿ ಆ ಮಹಾಮುನಿಯ ತಪೋಭಂಗ ಆಗಲಿಲ್ಲ. ಎಷ್ಟೇ ವಿಘ್ನಗಳನ್ನು ಸುರಾಸುರರೂ ಒಡ್ಡಿದರೂ, ನಿಸರ್ಗವ್ಯಾಕೋಪದಿಂದ ಎಷ್ಟೇ ಅಡ್ಡಿ ಅತಂಕ ಉಂಟಾದರೂ ತನ್ನ ತಪೋನುಷ್ಠಾನದಿಂದ ವಿಚಲಿತನಾಗಲಿಲ್ಲ ಆ ರಾಮಕೃಷ್ಣ ಮುನಿ. ಅವನ ಈ ಭಕ್ತಿ ಹಾಗೂ ತಪಃಶಕ್ತಿಗಳನ್ನು ನೋಡಿ ಪರಮ ಪರಿತುಷ್ಟನಾದ ಪರಮಾತ್ಮ. ಗರುಡಾರೂಢನಾಗಿ ಅಲ್ಲಿಗೆ ಆಗಮಿಸಿದ. ಶಂಖ ಚಕ್ರಗದಾಧಾರಿಯಾದ ಶ್ರೀವಿಷ್ಣು, ಕೊರಳಲ್ಲಿಯ ವನಮಾಲೆಯು ಸುತ್ತಲು ಚೆಲ್ಲಿತ್ತು ಕಾಂತಿಯ ಕಿರಣಗಳನ್ನು, ಕೌಸ್ತುಭ ಶೋಭೆಯಿಂದ ಪರಿಸರದ ಪ್ರದೇಶವೆಲ್ಲವೂ ಉದ್ಭಾಸಿತವಾಗಿತ್ತು. ಅವನ ತಪಶ್ಚರ್ಯೆಯಿಂದ ಪ್ರಸನ್ನನಾದ ಶ್ರೀವಿಷ್ಣುವು ಹೀಗೆ ನುಡಿದ.

**ವಿಷ್ಣು:-** ರಾಮಕೃಷ್ಣ! ನೀನು ವೇದ ವೇದಾಂತಗಳಲ್ಲಿ ಪಾರಂಗತನಾದ ವಿದ್ವಾಂಸ. ತಪಸ್ಸಿನ ತವನಿಧಿ. ನಿನ್ನ ಅತ್ಯುಗ್ರವಾದ ತಪಸ್ಸು ಎಂಬ ಭಕ್ತಿಯ ಪಾಶ ಎಳೆದು ತಂದು ನಿಲ್ಲಿಸಿದೆ ನನ್ನನ್ನು ಈ ತೀರ್ಥದ ತೀರದಲ್ಲಿ. ಸೂರ್ಯನು ಮಕರ ರಾಶಿಯಲ್ಲಿದ್ದಾಗ ಮತ್ತು ಹುಣ್ಣಿಮೆಯ ದಿನ ಪುಷ್ಯನಕ್ಷತ್ರವಿದ್ದಾಗ ಈ ತೀರ್ಥದಲ್ಲಿ ಸ್ನಾನ ಮಾಡಿದವರ ಮೇಲೆ ನಾನು ಪರಮಾನುಗ್ರಹವನ್ನು ಮಾಡುತ್ತೇನೆ. ಇಂದಿನಿಂದ ಈ ತೀರ್ಥವು ಇಲ್ಲಿ ನಿಂತು ತಪಸ್ಸು ಮಾಡಿದ ನಿನ್ನ ಹಾಗೂ ನಿನ್ನ ತಪಸ್ಸಿಗೆ ಪ್ರಸನ್ನನಾಗಿ ಒಲಿದು ಬಂದು ಈ ತೀರ್ಥದ ತಡಿಯಲ್ಲಿ ನಿಂದು ನಿನಗೆ ವರಪ್ರದಾನವನ್ನು ಮಾಡಿದ ನನ್ನ ಇಬ್ಬರ ಹೆಸರಿನಿಂದಲೂ ಕೃಷ್ಣತೀರ್ಥ ಎಂದು ಪ್ರಸಿದ್ಧಿ ಪಡೆಯಲಿ.'' ಹೀಗೆ ಹೇಳಿ ಆ ಮಹಾವಿಷ್ಣುವು ಅಲ್ಲಿಯೇ ಅಂತರ್ಧಾನ ಹೊಂದಿದನು. ಮಾನವರ ಬುದ್ಧಿ ಶುದ್ಧಿಯನ್ನು ಉಂಟುಮಾಡುವದು ಈ ತೀರ್ಥ. ಈ ಕೃಷ್ಣತೀರ್ಥದ ಮಹಿಮೆಯನ್ನು ನಾನು ನಿಮಗೆ ಹೇಳಿದೆ. ಈಗ ಈ ವೆಂಕಟಗಿರಿಯಲ್ಲಿ ನೆಲೆಸಿದ ಶ್ರೀ ವೆಂಕಟೇಶ್ವರನ ಮಹಾಮಹಿಮೆಯನ್ನು ವರ್ಣಿಸುತ್ತೇನೆ ಕೇಳಿರಿ.

ಯಾವುದೇ ಮನುಷ್ಯನು ಶ್ರೀವೆಂಕಟೇಶ್ವರ ಭಗವಂತನನ್ನು ಒಮ್ಮೆಯಾದರೂ ದರ್ಶನ ಮಾಡಿಕೊಂಡು ನಿರಂತರ ಧ್ಯಾನೋಪಾಸನೆಯನ್ನು ಮಾಡಿದರೆ ಸರ್ವಪಾಪಗಳಿಂದ ಮುಕ್ತನಾಗಿ ಮೋಕ್ಷವನ್ನು ಹೊಂದುತ್ತಾನೆ. ಕೃತಯುಗದಲ್ಲಿ ಹತ್ತು ವರುಷ ಮಾಡಿದ ಧರ್ಮ ಕರ್ಮಾನುಷ್ಠಾನಗಳಿಂದ ಬರುವ ಪುಣ್ಯವು ತ್ರೇತಾಯುಗದಲ್ಲಿ ಒಂದು ವರುಷದಲ್ಲಿ, ದ್ವಾಪರಯುಗದಲ್ಲಿ ಐದು ತಿಂಗಳಲ್ಲಿ, ಕಲಿಯುಗದಲ್ಲಿ ಒಂದು ದಿನದಲ್ಲಿ ಪ್ರಾಪ್ತವಾಗುವುದು ಎಂದು ಶಾಸ್ತ್ರಗಳಲ್ಲಿ ಹೇಳಿದ್ದಾರೆ. ಆದರೆ ಇಷ್ಟೆಲ್ಲ ಪುಣ್ಯವು ಈ ವೆಂಕಟಾಚಲದಲ್ಲಿ ನೆಲೆಸಿದ ಶ್ರೀನಿವಾಸದೇವರ ಒಂದು ಕ್ಷಣ ಸಂದರ್ಶನ ಮಾತ್ರದಿಂದಲೇ ಅದರ ಹತ್ತುಪಟ್ಟು, ನೂರುಪಟ್ಟು ಹೆಚ್ಚಾಗಿ ದೊರೆಯುವದು. ಆ ಶ್ರೀನಿವಾಸನು ನೆಲೆನಿಂತ ಈ ವೆಂಕಟಗಿರಿಯಲ್ಲಿ ಎಲ್ಲ ತೀರ್ಥಗಳೂ ಸನ್ನಿಹಿತ. ಎಲ್ಲ ದೇವತೆಗಳೂ ಒಂದೊಂದು ರೂಪದಿಂದ ವಿದ್ಯಮಾನ, ಎಲ್ಲ ಮುನಿಮಹರ್ಷಿಗಳು ಇಲ್ಲಿ ಉಪಸ್ಥಿತ ಅವನ ಕೈಂಕರ್ಯಕ್ಕೆ. ಭಗವಾನ್ ಶ್ರೀಮಹಾವಿಷ್ಣುವು ರಕ್ತಮಾಂಸಗಳಿಂದ ತುಂಬಿದ ಮಾನವ ದೇಹದಿಂದ ಇಲ್ಲಿ ನಿಂತಿಲ್ಲ. ತನ್ನ ಸ್ವರೂಪ ಭೂತವಾದ ಸಚ್ಚಿದಾನಂದ ಶರೀರದಿಂದಲೇ ಸರ್ವ ಮಾನವರ ದೃಷ್ಟಿ ಗೋಚರನಾಗಿ ನಿಂತುಕೊಂಡಿದ್ದಾನೆ ಈ ಸ್ವಾಮಿ. ಪುಷ್ಕರಣಿಯ ತೀರದಲ್ಲಿ. ಭಕ್ತರಿಗೆ ಅಭಯದಾನ ಮಾಡಲು ಈ ಶೇಷಾದ್ರಿ ಮಸ್ತಕದಲ್ಲಿ ಮಂಡಿಸಿದ ಈ ಮಹಾಸ್ವಾಮಿಯ ಭಕ್ತಿಯುಕ್ತವಾದ ದರ್ಶನ ಹಾಗೂ ಸಂತತ ಸೇವನೆಗಳಿಂದ ಸಾವಿರ ಬ್ರಹ್ಮಹತ್ಯೆಯ ಪಾಪಗಳು ನಷ್ಟವಾಗುವವು. ಹತ್ತುಸಾವಿರ ಬಾರಿ ಮದ್ಯಪಾನ ಮಾಡಿದ ಘನಪಾತಕವೂ ಪೂರ್ಣ ನಶಿಸುವದು.

ಶ್ರೀ ವೆಂಕಟೇಶ ದೇವರಲ್ಲಿ ಮಾಡುವ ಭಕ್ತಿಯು ಎಂಟು ವಿಧವಾಗಿದೆ. ೧) ಶ್ರೀದೇವಿ ಭೂದೇವಿ ಸಹಿತವಾದ ಶ್ರೀ ವೆಂಕಟೇಶ ದೇವರ ವಿಗ್ರಹವನ್ನು ಪೂಜೆ ಮಾಡುವದು. ೨) ಈ ಶ್ರೀನಿವಾಸರ ಭಕ್ತರಾದ ಮಹಾತ್ಮರ ಮೇಲೆ ಪ್ರೀತಿವಿಶ್ವಾಸ ಮಾಡುವದು ೩) ತಮ್ಮ ತಮ್ಮ ದೇಹದ ಸರ್ವ ವ್ಯಾಪಾರಗಳನ್ನು ಕ್ರಿಯೆಗಳನ್ನು ಭಗವಂತನ ಪ್ರೀತಿಯ ಉದ್ದೇಶದಿಂದಲೇ ಮಾಡುತ್ತಲಿರುವದು. ೪) ಭಗವಂತನ ಮಹಾಮಹಿಮೆಯನ್ನು ಬಣ್ಣಿಸುವ ಅವನ ಕಥೆ, ಚರಿತ್ರ, ಆಖ್ಯಾನ, ಪುರಾಣ ಮುಂತಾದ ಪವಿತ್ರ ಸಾಹಿತ್ಯವನ್ನು ಆದರದಿಂದ ಕೇಳಿ ಭಗವದ್ಭಕ್ತಿಯನ್ನು ಅಭಿವೃದ್ಧಿ ಗೊಳಿಸುವುದು. ೫) ನಿರಂತರವೂ ಶ್ರೀನಿವಾಸನ ನಾಮಸ್ಮರಣೆ ಮಾಡುವುದು. ೬) ಪರಮಾತ್ಮನ ಭಜನ, ಭಕ್ತಿ, ಪೂಜೆ, ಕಥಾಶ್ರವಣ, ಮುಂತಾದವುಗಳನ್ನು ಮಾಡುತ್ತ ಪ್ರೇಮೋದ್ರೇಕದಿಂದ ಭಗವತ್‌ಸೇವೆಯ ಆನಂದವನ್ನು ಅನುಭವಿಸುವುದು. ೭) ಭಗವದ್ಭಕ್ತರಾದ ಸಾಧು ಸಜ್ಜನರ ಪೂಜೆ ಮಾಡಿ ಅವರನ್ನು ಸಂತೋಷಗೊಳಿಸುವುದು. ೮) ವೆಂಕಟಗಿರಿಯಲ್ಲಿ ವಾಸಿಸಿದ ಶ್ರೀ ಶ್ರೀನಿವಾಸ ದೇವರಲ್ಲಿ ಸಂಪೂರ್ಣ ಶರಣಾಗತಿಯನ್ನು ಹೊಂದಿ ಪ್ರಪತ್ತಿಮಾರ್ಗದಿಂದ ಜೀವನ ಯಾತ್ರೆಯನ್ನು ನಡೆಸುವುದು.'' ಹೀಗೆ ಎಂಟು ವಿಧವಾದ ಭಕ್ತಿಯನ್ನು ದೃಢ ಮನಸ್ಸಿನಿಂದ ಆಚರಿಸುತ್ತ ಭಗವದುಪಾಸನೆಯನ್ನು ಮಾಡಿದರೆ ಎಂಥ ಅಸ್ಪೃಶ್ಯ, ಹೂಣ, ಬರ್ಬರ, ಮ್ಲೇಂಛ ಯಾರೇ ಇರಲಿ ಅವರಿಗೆ ಮೋಕ್ಷ ಪ್ರಾಪ್ತಿ ನಿಶ್ಚಿತ. ಸನ್ಯಾಸಿಗಳಿಗೂ ನೈಷ್ಠಿಕ ಬ್ರಹ್ಮಚಾರಿ ಗಳಿಗೂ ವೇದಾಂತ ಶಾಸ್ತ್ರದ ಶ್ರವಣ ಮನನ, ಧ್ಯಾನನಿಧಿಗಳಿಂದ ದೊರಕುವ ಮೋಕ್ಷವು ಉಳಿದ ಎಲ್ಲ ಜಾತಿಯ ಸಾಮಾನ್ಯ ಮನುಷ್ಯರಿಗೆ ಶ್ರೀವೆಂಕಟೇಶ್ವರನ ದರ್ಶನದಿಂದಲೆ ಬೇಗನೆ ದೊರೆಯುವದು. ನಾಕೂ ವೇದಗಳು ಪ್ರತಿಪಾದಿಸುವದು ಈ

ಶ್ರೀನಿವಾಸನನ್ನೆ. ಈ ಶ್ರೀನಿವಾಸನ ಧ್ಯಾನವನ್ನು ಮತ್ತು ನಾಮಸ್ಮರಣವನ್ನು ಎರಡು ಗಳಿಗೆಯಾದರೂ ಮಾಡಿದ ಮನುಷ್ಯನು ತನ್ನ ಹಿಂದು-ಮುಂದಿನ ಇಪ್ಪತ್ತೊಂದು ಪೀಳಿಗೆಯ ವಂಶಜರನ್ನೆಲ್ಲ ಉದ್ಧಾರ ಮಾಡುವನು. ಕುಲದಲ್ಲಿ ಒಬ್ಬನು ವೆಂಕಟಗಿರಿಯ ಯಾತ್ರೆ ಮಾಡಿ ಅವನ ದರ್ಶನ ಪಡೆದು ಅವನ ಪರಮಾನುಗ್ರಹವನ್ನು ಹೊಂದಿದರೆ ಅವನ ಪಿತೃ ಪಿತಾಮಹ, ಪ್ರಪಿತಾಮಹ, ಪುತ್ರ, ಪೌತ್ರ, ಪ್ರಪೌತ್ರ ಮುಂತಾದ ವಂಶ ಪರಂಪರೆಯವರೆಲ್ಲರೂ ವಿಷ್ಣು ಲೋಕದಲ್ಲಿ ವಾಸಿಸುವ ಸೌಭಾಗ್ಯವನ್ನು ಪಡೆಯುತ್ತಾರೆ.

## ಪಾಪನಾಶನ ತೀರ್ಥದ ಮಹಿಮೆ

**ಸೂತ:-** ಈ ವೆಂಕಟಾದ್ರಿ ಬೆಟ್ಟವನ್ನು ಮೆಟ್ಟಿಪಾದದಿಂದ ಹತ್ತುವದಕ್ಕಿಂತ ಮೊದಲು ಹೀಗೆ ಕೈಮುಗಿದು ಪ್ರಾರ್ಥನೆಯನ್ನು ಮಾಡಬೇಕು. ''ಗಿರಿಶ್ರೇಷ್ಠವಾದ ಪುಣ್ಯ ಪರ್ವತವೇ! ಬ್ರಹ್ಮಾದಿ ದೇವತೆಗಳೂ ಸರ್ವತೀರ್ಥಗಳೂ ಸ್ವಯಂ ಶ್ರೀ ಭೂ ಸಹಿತ ಮಹಾ ವಿಷ್ಣುವೂ ನಿನ್ನಲ್ಲಿ ನೆಲೆ ನಿಂತಿದ್ದಾರೆ. ಇಂಥ ಪರಮ ಪವಿತ್ರನಾದ ನಿನ್ನನ್ನು ನಾನು ನನ್ನ ಪಾದಗಳಿಂದ ತುಳಿಯುತ್ತ ನಿನ್ನ ಮೇಲೆ ಏರಿ ಬರುತ್ತಿದ್ದೇನೆ. ಈ ನನ್ನ ಪಾಪವನ್ನು ಕೃಪೆಯಿಂದ ಕ್ಷಮಿಸು. ನಿನ್ನ ಶಿಖರದಲ್ಲಿರುವ ಶ್ರೀನಿವಾಸದೇವರನ್ನು ನನಗೆ ದರ್ಶನ ಮಾಡಿಸು.'' ಹೀಗೆ ಪ್ರಾರ್ಥಿಸಿ ಮೆಲ್ಲಮೆಲ್ಲನೆ ಭಗವಂತನ ನಾಮಸ್ಮರಣೆ ಮಾಡುತ್ತ ವೇದ ಉಪನಿಷತ್ ಮಂತ್ರ-ಸ್ತೋತ್ರ ಗಳನ್ನು ಹೇಳುತ್ತ ಈ ಗಿರಿಯನ್ನು ನಿದಾನವಾಗಿ ಏರಬೇಕು. ಸ್ವಾಮಿ ಪುಷ್ಕರಣಿಯಲ್ಲಿ ಮೀಯಬೇಕು. ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಮಾಡಿ ಪಿಂಡಪ್ರದಾನ ಮಾಡಬೇಕು. ಇದರಿಂದ ಪಿತೃಗಳಿಗೆ ಪರಮ ಪ್ರೀತಿ. ಅನಂತರ ಶ್ರೀ ವರಾಹ ಹಾಗೂ ಶ್ರೀನಿವಾಸ ದೇವರ ದರ್ಶನ ಮಾಡಿಕೊಂಡು ಪ್ರದಕ್ಷಿಣೆ, ನಮಸ್ಕಾರ, ಧ್ಯಾನ, ಉಪಾಸನೆ ಮುಂತಾಗಿ ಸೇವೆಯನ್ನು ಸಲ್ಲಿಸಬೇಕು. ಅನಂತರ ಆ ವೆಂಕಟಗಿರಿಯಲ್ಲಿ ಸ್ವಾಮಿ ತೀರ್ಥದ ಉತ್ತರದಿಕ್ಕಿನಲ್ಲಿ ಇರುವ ಪಾಪ ವಿನಾಶನ ತೀರ್ಥದಲ್ಲಿ ಸ್ನಾನ ಮಾಡಬೇಕು. ಸರ್ವ ಪಾಪ ಪ್ರಣಾಶಕ ಈ ತೀರ್ಥಸ್ನಾನ.

ಪೂರ್ವಕಾಲದಲ್ಲಿ ಭದ್ರಾವತಿ ಎಂಬ ಓರ್ವ ವಿಪ್ರನು ಇರುತ್ತಿದ್ದ. ಅವನು ಮಹಾಪಂಡಿತ ಅತಿ ದರಿದ್ರ. ಅವನು ಆರು ಶಾಸ್ತ್ರಗಳನ್ನೂ ಓದಿದ್ದ. ಅದರಂತೆ ಆರು ಹೆಂಡದಿರನ್ನು ಮದುವೆಯಾಗಿದ್ದ. ಕೃತಾ, ಸಿಂಧು ಯಶೋವತಿ, ಕಾಮಿನಿ, ಮಾಲಿನಿ ಶೋಭಾ ಎಂದು ಅವನ ಆರು ಅಂಗನಾಮಣಿಗಳ ಹೆಸರು. ಈ ಆರು ಜನ ಮಡದಿಯರಿಂದ ಎರಡುನೂರು ಜನ ಮಕ್ಕಳು ಜನಿಸಿದರು ಆ ಬಡ ಬ್ರಾಹ್ಮಣನಿಗೆ. ಎಲ್ಲ ಮಕ್ಕಳ ಹಸಿವೆಯಿಂದ ಪೀಡಿತರಾದರು. ಮಡದಿಯರಿಗೂ ತಿನ್ನಲು ಅನ್ನವಿಲ್ಲ. ಉಡಲು ಬಟ್ಟೆಯಿಲ್ಲ. ಮಕ್ಕಳಿಗೆ ಕುಡಿಸಲು ಹಾಲು ಇಲ್ಲ, ಮಡದಿ ಮಕ್ಕಳ ಈ ದುಃಖ ವ್ಯಾಕುಲತೆಯನ್ನು ಕಂಡು ಆ ಬ್ರಾಹ್ಮಣನಿಗೆ ಉಕ್ಕಿ ಬಂದಿತು ಅಳು. ತನ್ನ ದಟ್ಟ ದಾರಿದ್ರ್ಯವನ್ನು ಕಂಡು, ಹಾಗೇ ಪತ್ನಿ ಪುತ್ರರ ಕಂಗಾಲ ಪರಿಸ್ಥಿತಿಯನ್ನು ನೋಡಿ ಕರಳು ಕರಗಿ ಕಣ್ಣೀರಾಗಿ ಹರಿಯ ತೊಡಗಿತು. ಅವನು ನಿರಾಶನಾಗಿ ರೋದಿಸತೊಡಗಿದ- ''ನನ್ನ ಈ ದರಿದ್ರ ಜನ್ಮಕ್ಕೆ ಧಿಕ್ಕಾರ. ಭಾಗ್ಯಹೀನನಾದ ಈ ಭದ್ರಮತಿಯ ಜೀವನವೇ ವ್ಯರ್ಥ. ನನ್ನ ಈ ಕಡುಬಡತನದಿಂದಾಗಿ ನಾನು ಯಾವ ಅತಿಥಿ ಅಭ್ಯಾಗತರನ್ನೂ ಸತ್ಕರಿಸಲಾರೆ. ದಾರಿದ್ರ್ಯದಿಂದ ಮನುಷ್ಯನನ್ನು ಬಂಧಬಾಂಧವರು ಶಿಷ್ಯ ಸ್ನೇಹಿತರು ಬಿಟ್ಟು ಬಿಡುತ್ತಾರೆ. ಈ ದಾರಿದ್ರ್ಯದಲ್ಲಿಯೂ ಮನುಷ್ಯರಿಗೆ ಆಶೆಯು ಬಿಟ್ಟಿರುವದಿಲ್ಲ. ಆಸೆಯ ವಶನಾದ ಮನುಷ್ಯ ಎಲ್ಲರಿಗೂ ದಾಸನಾಗಬೇಕಾಗುತ್ತದೆ.

"ಆಶಾಯಾ ಯೇ ದಾಸಾ ದಾಸಾಸ್ತೇ ಸರ್ವಲೋಕಸ್ಯ ।
ಆಶಾ ದಾಸೀ ಯೇಷಾಂ ತೇಷಾಂ ದಾಸಾಯತೇ ಲೋಕಃ

ಯಾರು ಆಸೆಯ ದಾಸರಾಗಿರುವರೋ ಅವರು ಎಲ್ಲ ಜನರಿಗೂ ಅಡಿಯ ಆಳು. ಆದರೆ ಆಸೆಯು ಯಾರ ಚರಣದಾಸಿಯಾಗಿರುವದೊ ಅವರು ಜಗತ್ತನ್ನೇ ಆಳುವರು. ಎಲ್ಲರೂ ಆಸೆಯ ದಾಸರೇ. ಇಂಥ ದಟ್ಟದಾರಿದ್ರ್ಯದಲ್ಲಿ ಹೆಚ್ಚಿನ ಹೆಂಡಂದಿರು ಲೆಕ್ಕಮೀರಿದ ಮಕ್ಕಳು ಕಾರಣರಾಗುವರು ದುಃಖೋದಧಿಯ ಉಕ್ಕಿ ಬರಲಿಕ್ಕೆ, ಆಕಟಕಟ! ಮುಂದೆ ನನಗೆ ಏನು ಗತಿ? ಇಷ್ಟು ಜನ ಭಾರ್ಯಾಪುತ್ರರನ್ನು ನಾನು ಹೇಗೆ ಭರಿಸಲಿ?

ಈ ಭದ್ರಮತಿ ಎಲ್ಲ ಶಾಸ್ತ್ರಗಳಲ್ಲಿಯೂ ಅರ್ಥಶಾಸ್ತ್ರದಲ್ಲಿಯೂ ಕೂಡ ಒಳ್ಳೆ ಪಾರಂಗತ. ನಿತ್ಯವೂ ಉನ್ನಿದ್ರವಾದ ತನ್ನ ದಾರಿದ್ರ್ಯದಿಂದ ನೊಂದು ಬೆಂದು ಹೋದ ಆ ಬಡಬ್ರಾಹ್ಮಣನು ರೋದಿಸುವದನ್ನು ನೋಡಿ ಅವನ ರಮಣೀಮಣಿಯಾದ ಕಾಮಿನೀ ಎಂಬ ಪತಿವ್ರತಾ ಪತ್ನಿಯು ಭಕ್ತಿಯಿಂದ ಕೈಮುಗಿದು ತನ್ನ ಗಂಡನಿಗೆ ನುಡಿದಳು- "ಸ್ವಾಮಿ, ತಮ್ಮ ದುಃಖ ದುರವಸ್ಥೆಗಳೆಲ್ಲವೂ ನಿಮ್ಮ ಕೈಹಿಡಿದು ನಡೆದು ಬಂದ ನನಗೆ ಚೆನ್ನಾಗಿ ಗೊತ್ತು. ಇದಕ್ಕೆ ನಾನು ಒಂದು ಉಪಾಯವನ್ನು ಹೇಳುತ್ತೇನೆ. ಬಾಲ್ಯದಲ್ಲಿ ನಮ್ಮ ತಂದೆಯ ಬಳಿಗೆ ಮಹಾತ್ಮರಾದ ನಾರದ ಮುನಿಗಳು ಬಂದು ನಮ್ಮ ತಂದೆಯ ಎದುರು ಹೇಳಿದ ಮಾತನ್ನು ನಾನು ಕೇಳಿದ್ದೇನೆ. ನನಗೆ ಚೆನ್ನಾಗಿ ನೆನಪಿದೆ. ಈಗಲೂ ಆ ನಾರದರ ನುಡಿ "ವೆಂಕಟಗಿರಿಯಲ್ಲಿರುವ ಪಾಪನಾಶನ ತೀರ್ಥದಲ್ಲಿ ಸ್ನಾನ ಮಾಡುವದರಿಂದ ದಾರಿದ್ರ್ಯ ದೂರಾಗುವದು. ಸಂಪತ್ತು ಪ್ರಾಪ್ತವಾಗುವದು. ಈ ತೀರ್ಥದಲ್ಲಿ ಸ್ನಾನ ಮಾಡಿ ಭೂಮಿದಾನ ಮಾಡಿದವರ ಮನೋರಥಗಳೆಲ್ಲವು ಸಿದ್ಧಿಸುವವು."

ನಮ್ಮ ತಂದೆ ನಾರದರ ನುಡಿಯನ್ನು ಕೇಳಿದಕೂಡಲೇ ಬೆಟ್ಟ ಏರಿದ. ಪಾಪ ನಾಶನಿಯಲ್ಲಿ ಅವಗಾಹನ ಸ್ನಾನ ಮಾಡಿದ, ವಿಧಿ ಪೂರ್ವಕವಾಗಿ ತನ್ನಲ್ಲಿ ಇದ್ದ ಅತ್ಯಲ್ಪ ಭೂಮಿಯನ್ನು ಓರ್ವ ವೇದಾಂತ ವಿದ್ವಾಂಸನಿಗೆ ದಾನ ನೀಡಿದ. ಆದರಿಂದ ನಮ್ಮ ತಂದೆಯ ಭಾಗ್ಯದ ಬಾಗಿಲ ತೆರೆಯಿತು. ಹಣದ ಹೊಳೆ ಹರಿಯಿತು. ಶುಕ್ರದಶೆ ತೆರೆಯಿತು. ಅದರಿಂದಾಗಿ ಅವನು ಅಸಂಖ್ಯ ದಾನ ದತ್ತಿ ನೀಡಿದ. ಯಜ್ಞ ಯಾಗಾದಿಗಳನ್ನು ಮಾಡಿದ. ಇರುವವರೆಗೂ ಸಂತಾನ, ಸಂಪದ, ಸತ್ಕಾರ್ಯಗಳಿಂದ ಸುಖವಾಗಿ ಇದ್ದು ಜನ್ಮವನ್ನು ಸಾರ್ಥಕ ಮಾಡಿಕೊಂಡು ಕೊನೆಗೆ ವಿಷ್ಣುಪಾದವನ್ನು ಸೇರಿದ. ಇದು ನಾನು ಪ್ರತ್ಯಕ್ಷವಾಗಿ ಕಟು ದಾರಿದ್ರ್ಯ ಹಾಗೂ ಸಿರಿವಂತಿಕೆಯ ಕಂಡು ಮಧುರ ಫಲವನ್ನು ಅನುಭವಿಸಿದ ಸತ್ಯಸಂಗತಿ. ನನ್ನ ತಂದೆಯ ಹಾಗೆ ತಾವೂ ಈ ಉಪಾಯವನ್ನು ಕೈಕೊಳ್ಳಬೇಕು.

ತನ್ನ ಮಡದಿಯಾದ ಕಾಮಿನಿಯ ಮಾತು ನಾಟಿತು ಆ ಭದ್ರಮತಿಯ ಹೃದಯದಲ್ಲಿ. ಕೂಡಲೇ ಅವನು ಅವಳ ಯೋಗ್ಯ ಸಲಹೆ ಸೂಚನೆಯಂತೆ ಪಾಪನಾಶಿನಿ ಸ್ನಾನ ಭೂದಾನ. ಈ ಎರಡು ಪುಣ್ಯ ಕಾರ್ಯಗಳನ್ನು ಮಾಡಬೇಕೆಂದು ಸಂಕಲ್ಪಿಸಿದ. ಆದರೆ ಅವನ ಬಳಿಯಲ್ಲಿ ಒಂದು ಅಂಗುಲ ಭೂಮಿಯೂ ಇರಲಿಲ್ಲ. ಆದರೂ ಅವನು ಹತಾಶನಾಗಲಿಲ್ಲ. ಅವನು ತನ್ನ ಪತ್ನಿಯೊಡನೆ ಸುಶಾಲಿ ಎಂಬ ಪಟ್ಟಣಕ್ಕೆ ಹೋದ. ಅಲ್ಲಿರುವ ಸುಘೋಷ ಎಂಬ ಶ್ರೀಮಂತ ಬ್ರಾಹ್ಮಣನ ಬಳಿಗೆ ಬಂದ. ಧರ್ಮಾತ್ಮ ಈ ಸುಘೋಷ ವಿಪ್ರ. ತನ್ನ ಮನೆಯವರೆಗೆ ಭೂಮಿ ಬೇಡಲು ಬಂದ ಈ ಬ್ರಾಹ್ಮಣ ದಂಪತಿಗಳನ್ನು ಕಂಡು ಪರಮಾನಂದವಾಯಿತು ಈ ಸುಘೋಷನಿಗೆ. ಪ್ರೀತಿಯಿಂದ ಆದರಿಸಿ ಆ ದಂಪತಿಗಳನ್ನು

ಭಕ್ತಿಯಿಂದ ಸತ್ಕರಿಸಿದ. ಇಂಥ ಸತ್ಪಾತ್ರ ದೊರೆತದ್ದು ನನ್ನ ಜನ್ಮಾಂತರದ ಪುಣ್ಯ ಎಂದು ಮನದಲ್ಲಿ ಅಂದುಕೊಂಡ. ಹಾಗೂ ಸಂಕಲ್ಪವನ್ನು ಮಾಡಿದ.

ಪೃಥಿವೀ ವೈಷ್ಣವೀ ಪುಣ್ಯಾ ಪೃಥವೀ ವಿಷ್ಣು ಪಾಲಿತಾ ।
ಪೃಥಿವ್ಯಾಸ್ತು ಪ್ರದಾನೇನ ಪ್ರೀಯತಾಂ ಮೇ ಜನಾರ್ದನಃ ॥

"ಈ ಪೃಥ್ವಿಯೆಲ್ಲವು ವಿಷ್ಣುವಿಗೆ ಸೇರಿದ್ದು. ಅವನೇ ಇದರ ರಕ್ಷಕ. ಎಲ್ಲವೂ ಈಶಾವಾಸ್ಯ. ಪೃಥ್ವಿಯ ದಾನದಿಂದ ಆ ಶ್ರೀಹರಿಯು ನನ್ನ ಮೇಲೆ ಪ್ರಸನ್ನನಾಗಲಿ." ಎಂಬ ಮಂತ್ರವನ್ನು ಉಚ್ಚಾರಮಾಡಿ ಭದ್ರಮತಿಗೆ ಪಂಚಹಸ್ತಪರಿಮಿತವಾದ ಪೃಥ್ವಿಯ ಭಾಗವನ್ನು ದಾನ ನೀಡಿದನು. ಈ ಭೂದಾನದ ಪುಣ್ಯದಿಂದ ಆ ಸುಘೋಷನೆಂಬ ಸಿರಿವಂತನು ವೈಕುಂಠ ಲೋಕಕ್ಕೆ ಪ್ರಸ್ಥಾನ ಬೆಳೆಸಿದನು.

## ಸ್ನಾನ ಭೂದಾನಗಳಿಂದ ಭಗವಂತನ ಸಾಕ್ಷಾತ್ಕಾರ

ಅನಂತರ ಭದ್ರಮತಿಯು ಐದು ಅಡಿ ಭೂಮಿಯನ್ನು ದಾನ ಪಡೆದು ತನ್ನ ಮನೆಗೆ ಮರಳಿ ಬಂದನು. ತನ್ನ ಆರೂ ಜನ ಭಾರ್ಯೆಯರನ್ನು ಎರಡುನೂರು ಜನ ಮಕ್ಕಳನ್ನೂ ಕರೆದುಕೊಂಡು ಆ ಶೇಷಾಚಲ ಬೆಟ್ಟವನ್ನು ಏರಿದ. ಸ್ವಾಮಿ ಪುಷ್ಕರಣಿಯಲ್ಲಿ ಎಲ್ಲರೂ ಸ್ನಾನ ಮಾಡಿದರು. ಅನಂತರ ಭೂವರಾಹ ಹಾಗೂ ಶ್ರೀನಿವಾಸದೇವರ ದರ್ಶನ ತೆಗೆದುಕೊಂಡು ಎಲ್ಲರೂ ಪಾಪನಾಶನ ತೀರ್ಥಕ್ಕೆ ಬಂದರು. ವಿಧಿಪೂರ್ವಕವಾಗಿ ಎಲ್ಲರೂ ಪವಿತ್ರವಾದ ಜಲದಲ್ಲಿ ಮಿಂದರು. ಓರ್ವ ಶ್ರೇಷ್ಠ ವಿಷ್ಣುಭಕ್ತನನ್ನು ಕರೆತಂದನು. ಅವನಲ್ಲಿ ಸಾಕ್ಷಾತ್ ವಿಷ್ಣು ಸನ್ನಿಹಿತನಾಗಿದ್ದಾನೆಂದು ತಿಳಿದುಕೊಂಡನು. ಅನುಸಂಧಾನ ಮಾಡಿದನು. ಭದ್ರ ಮತಿಯು ಸುಘೋಷನಿಂದ ದಾನ ಪಡೆದುಕೊಂಡು ಬಂದ ಐದುಮೊಳ ಭೂಮಿಯನ್ನು "ಶ್ರೀ ವಿಷ್ಣುಃ ಪ್ರೀಯತಾಂ" ಎಂದು ನುಡಿದು ಸಂಕಲ್ಪ ಪೂರ್ವಕವಾಗಿ ದಾನ ನೀಡಿದನು.

ಆ ಸ್ನಾನ ಈ ದಾನಗಳಿಂದ ಪರಮಪ್ರೀತನಾದ ಪರಮಾತ್ಮ ಶ್ರೀ ವಿಷ್ಣು ಶಂಖ ಚಕ್ರ ಗದಾ ಪದ್ಮಧಾರಿಯಾಗಿ ಗರುಡನ ಹೆಗಲ ಮೇಲೆ ಕುಳಿತುಕೊಂಡು ಇವನು ಇದ್ದಲ್ಲಿಗೆ ಹಾರಿಬಂದ. ಶ್ರೀಹರಿ ಪಾಪ ನಾಶನ ತೀರ್ಥದ ತಟಾಕದಲ್ಲಿ ದೃಷ್ಟಿಗೋಚರನಾದ. ಆ ಭದ್ರಮತಿಯ ಕುಟುಂಬಕ್ಕೆ ಪ್ರತ್ಯಕ್ಷನಾದ. ತನ್ನ ಕಣ್ಣೆದುರು ಬಂದುನಿಂತ ಮಹಾವಿಷ್ಣುವನ್ನು ನೋಡಿ ಗದ್ಗದ ಕಂಠನಾಗಿ ಮಾತನಾಡಲು ಬಾರದೆ ರೋಮಾಂಚಿತನಾಗಿ ನಿಂತುಕೊಂಡ ಭದ್ರಮತಿ. ಮರುಕ್ಷಣದಲ್ಲಿ ಹೇಗೋ ವಿಸ್ಖಲಿತವಾದ ವಾಣಿಯನ್ನು ಕಷ್ಟಪಟ್ಟು ಹೊಂದಿಸಿಕೊಂಡು ಭಕ್ತಿಯಿಂದ ಆ ಭಗವಂತನನ್ನು ಸ್ತೋತ್ರ ಮಾಡಿದ.

ಭದ್ರಮತಿಯ ಈ ಸ್ತೋತ್ರವನ್ನು ಕೇಳಿ ಅತ್ಯಂತ ಸಂತುಷ್ಟನಾದ ಆ ದಯಾಘನ ಶ್ರೀಹರಿಯು ವಾತ್ಸಲ್ಯದುಂಬಿ ಅವನನ್ನು ಅನುಗ್ರಹಿಸುತ್ತ ನುಡಿದ "ವತ್ಸ, ನಿನಗೆ ಕಲ್ಯಾಣವಾಗಲಿ. ನೀನು ಮಾಡಿದ ಈ ಮಹಾಸ್ತೋತ್ರದಿಂದ ನಾನು ಸಂತುಷ್ಟನಾಗಿದ್ದೇನೆ ನೀನು ಈ ಪ್ರಪಂಚದಲ್ಲಿ ಇರುವವರೆಗೂ ಮಡದಿ ಮಕ್ಕಳು ಮೊಮ್ಮಕ್ಕಳು ಬಂಧು ಬಾಂಧವರೊಂದಿಗೆ ಆನಂದದಿಂದ ಇದ್ದು ಸುಖೋಪಭೋಗ ಸೌಭಾಗ್ಯಗಳನ್ನು ಪಡೆದು ಸಂತೃಪ್ತವಾದ ಜೀವನವನ್ನು ನಡೆಸು. ಅನಂತರದಲ್ಲಿ ನೀನು ಮೋಕ್ಷವನ್ನು ಕೂಡ ಪಡೆಯುವೆ." ಹೀಗೆ ಹೇಳಿ ಪಾಪನಾಶನಿ ತೀರ್ಥದ ದಂಡೆಯ ಮೇಲೆ ದರ್ಶನವಿತ್ತು,

ಆ ಬ್ರಾಹ್ಮಣ ಕುಟುಂಬಕ್ಕೆ ಭೋಗಭಾಗ್ಯಗಳನ್ನು ಕರುಣಿಸಿ, ಅಂತರ್ಧಾನ ಹೊಂದಿದನು ವಿಷ್ಣು ಪರಮಾತ್ಮ. ಆ ವಿಷ್ಣುವಿನ ವಚನದಂತೆ ಭದ್ರಮತಿಯು ಇಲ್ಲಿ ಇರುವವರೆಗೆ ಇಹದಲ್ಲಿ ಸುಖವನ್ನು ಪರದಲ್ಲಿ ಕೈವಲ್ಯವನ್ನು ಪಡೆದು ಕೃತಾರ್ಥನಾದ.

## ಆಕಾಶ ಗಂಗಾ ತೀರ್ಥದ ಮಹಿಮೆ

**ಸೂತ:-** ತಪೋಧನರೇ! ಹಿಂದೆ ರಾಮಾನುಜ ಎಂಬ ಒಬ್ಬ ವಿಷ್ಣುಭಕ್ತನಿದ್ದ. ಆ ಧರ್ಮಾತ್ಮನು ವಾನಪ್ರಸ್ಥ ಆಶ್ರಮವನ್ನು ಸ್ವೀಕರಿಸಿದ. ಆಕಾಶ ಗಂಗಾ ತೀರ್ಥದ ತೀರಕ್ಕೆ ಬಂದ. ಅತ್ಯುಗ್ರ ತಪಸ್ಸನ್ನು ಮಾಡಿದ ಆ ತೀರ್ಥದ ದಂಡೆಯ ಮೇಲೆ. ಬೇಸಿಗೆಯಲ್ಲಿ ಪಂಚಾಗ್ನಿ ಮಧ್ಯದಲ್ಲಿ ನಿಂತುಕೊಂಡು, ಮಳೆಗಾಲದಲ್ಲಿ ಮುಗಿಲ ಮಾಳಿಗೆಯ ಕೆಳಗೆ ಕುಳಿತು ಕೊಂಡು, ಚಳಿಗಾಲದಲ್ಲಿ ಕುತ್ತಿಗೆಯವರೆಗೆ ನೀರಿನಲ್ಲಿ ಕುಳಿತುಕೊಂಡು ತಪಸ್ಸನ್ನು ಮಾಡುತ್ತಿದ್ದ. ಕೆಲವು ದಿನ ಬರೀ ನೀರು ಕುಡಿದು, ಮತ್ತೆ ಕೆಲವು ಕಾಲ ಬರೀ ಗಾಳಿ ಕುಡಿದು, ಮುಂದೆ ಎಷ್ಟೋ ಕಾಲ ಪೂರ್ಣನಿರಾಹಾರಿಯಾಗಿ ಏನನ್ನೂ ತಿನ್ನದೇ ಕುಡಿಯದೇ ಶ್ವಾಸ ನಿರೋಧ ಮಾಡಿ ಉಗ್ರಾದ್ ಉಗ್ರತರವಾದ ಕಠೋರ ತಪಶ್ಚರ್ಯೆವನ್ನು ಮಾಡಿದ. ಅವನ ಈ ದಾರುಣ ತಪಸ್ಸಿಗೆ ಮೆಚ್ಚಿ ಬಂದ ಶಂಖ ಚಕ್ರ ಗದಾಧಾರಿಯಾದ ಶ್ರೀನಿವಾಸ. ಅವನ ಗರುಡ ವಾಹನ ಮೂರ್ತಿಯನ್ನು ಮತ್ತು ಲಕ್ಷ್ಮೀಲಕ್ಷಿತವಾದ ವೃಕ್ಷಸ್ಥಲವನ್ನೂ ಶಾಮಸುಂದರ ವಾದ ಸಚ್ಚಿದಾನಂದ ಶರೀರವನ್ನೂ ಕಂಡು, ಪುಲಕಿತಗೊಂಡು ಆ ರಾಮಾನುಜ ಮುನಿಯು ದಂಡ ಪ್ರಣಾಮ ಉರುಳಿದ ಆ ಭಗವಂತನ ಪಾದಗಳಿಗೆ. ಆಗ ಭಗವಂತನು ತನ್ನ ಚತುರ್ಬಾಹುಗಳಿಂದ ಪ್ರಣತನಾದ ಆ ಮಹಾಮುನಿಯನ್ನು ಎತ್ತಿ ಹಿಡಿದು ಮೈದಡವಿ ಪ್ರೇಮದಿಂದ ನುಡಿದ- ''ಮಹಾಮನಿಯೇ ನಿನ್ನ ತಪಸ್ಸಿನಿಂದ ನಾನು ಸುಪ್ರಸನ್ನನಾಗಿದ್ದೇನೆ. ಬೇಕಾದ ವರ ಬೇಡು. ನಿನಗೆ ವಾಂಛಿತವಾದ ವರಗಳನ್ನು ಕೊಡಲಿಕ್ಕೆಂದೆ ನಾನು ನೀನಿದ್ದಲ್ಲಿಗೆ ಬಂದಿದ್ದೇನೆ.''

**ರಾಮಾನುಜ:-** ನಾರಾಯಣ ನಿನಗೆ ನಮಸ್ಕಾರ! ಶ್ರೀನಿವಾಸ ನಿನಗೆ ಸಾಷ್ಟಾಂಗ! ವೆಂಕಟೇಶ್ವರ ನಿನಗೆ ವಂದನೆ! ರಮಾನಾಥನೇ ನಿನ್ನ ದರ್ಶನದಿಂದ ನಾನು ಕೃತಾರ್ಥ. ''ಸ್ವಾಮಿ ನೀನು ಸರ್ವೋತ್ತಮ. ಜಗಜ್ಜನ್ಮಾದಿಕಾರಣ. ವೇದಾಂತ ಪ್ರತಿಪಾದ್ಯ, ಸರ್ವಸ್ವಾಮಿ, ಬ್ರಹ್ಮರುದ್ರಾದಿ ದೇವತೆಗಳೆಲ್ಲರೂ ನಿನ್ನ ದಾಸಾನುದಾಸರು, ನೀನೇ ನನ್ನ ಉದ್ಧಾರಕ ಮಹಾಪ್ರಭು.'' ಇಷ್ಟು ಜ್ಞಾನ ನನಗೆ ನಿನ್ನ ಅನುಗ್ರಹದಿಂದಲೇ ಬಂದಿದೆ. ಪರಮಾತ್ಮನ ವಿಷಯದಲ್ಲಿ ಇಷ್ಟು ಜ್ಞಾನವು ಧೃಡವಾಗಿ ಇದ್ದರೆ ಸಾಕು ಇದೇ ದೊಡ್ಡ ವರ. ನಾನು ನಿನ್ನಿಂದ ಬೇರೆ ವರ ಪಡೆದು ಇಂಥ ಭಗವದ್ ಜ್ಞಾನದ ಹೊರತಾಗಿ ಯಾವ ಫಲವನ್ನು ಪಡೆಯಬಲ್ಲೆ? ಆದುದರಿಂದ ನನಗೆ ನಿನ್ನಿಂದ ಯಾವ ವರವೂ ಬೇಡ. ಇದ್ದ ಜ್ಞಾನವನ್ನೇ ದೃಢಿಷ್ಠವನ್ನಾಗಿ ಮಾಡು. ನನ್ನ ಮನಸ್ಸನ್ನು ಭಗವನಿಷ್ಠವನ್ನಾಗಿ ಮಾಡು. ನನ್ನಲ್ಲಿರುವ ನಿನ್ನ ಭಕ್ತಿಯನ್ನೂ ಭೂಯಿಷ್ಠವನ್ನಾಗಿ ಮಾಡು.''

**ಶ್ರೀವಿಷ್ಣು:-** ಭಕ್ತಾಗ್ರೇಸರ! ನಿನ್ನ ಇಷ್ಟದಂತೆ ಆಗಲಿ. ನೀನು ಕೇಳಿದಂತೆ ನಿನಗೆ ನನ್ನಲ್ಲಿ ಭಕ್ತಿ ಭೂಯಿಷ್ಠವಾದಂತೆ ನಿನ್ನ ವಿಷಯದಲ್ಲಿ ನನಗೂ ಪ್ರೀತಿಯು ಅಧಿಕಾಧಿಕವಾಗಿ ಅಭಿವೃದ್ಧಿಗೊಂಡಿದೆ. ನೀನೊಬ್ಬನಲ್ಲದೆ ನಿನ್ನಂತೆ ಈ ಆಕಾಶಗಂಗಾ ತೀರ್ಥದಲ್ಲಿ ಸ್ನಾನ ಮಾಡುವ ಭಕ್ತರನ್ನೆಲ್ಲ ನಾನು ಉದ್ಧರಿಸುವೆನು. ಸೂರ್ಯನು ಮೇಷರಾಶಿಗೆ ಬಂದಾಗ. ಚಿತ್ತಾಪೂರ್ಣಿಮೆಯ ದಿನದಂದು ಈ ಆಕಾಶಗಂಗೆಯಲ್ಲಿ ಸ್ನಾನ ಮಾಡಿದವರು ಮರಳಿ

ಹುಟ್ಟುವದಿಲ್ಲ. ಪರಂಧಾಮವನ್ನೆ ಮುಟ್ಟಿಬಿಡುವರು. ರಾಮಾನುಜ, ನೀನು ಆಕಾಶಗಂಗೆಯ ಸಮೀಪದಲ್ಲಿಯೇ ವಾಸಮಾಡು. ನಿನ್ನ ಈ ಜನ್ಮದ ಪ್ರಾರಬ್ಧ ಎಲ್ಲವೂ ಕ್ಷಯಿಸಿದ ಬಳಿಕ ಈ ನಿನ್ನ ಪಾಂಚಭೌತಿಕ ಶರೀರವನ್ನು ತ್ಯಾಗಮಾಡು ಇದೇ ತೀರ್ಥದ ತಡಿಯಲ್ಲಿ. ಕೊನೆಗೆ ನಿನಗೆ ಸಾರೂಪ್ಯ ರೂಪವಾದ ಮೋಕ್ಷವನ್ನು ಕರುಣಿಸುವೆನು. ಆಕಾಶಗಂಗೆಯ ಪುಣ್ಯ ತೀರ್ಥದಲ್ಲಿ ಸ್ನಾನ ಮಾಡಿದವರೆಲ್ಲರೂ ಭಗವದ್ಭಕ್ತರಾಗುವರು. ಭಕ್ತರಾದವರಿಗೆಲ್ಲ ಭವಬಂಧನ ಬಿಡಿಸಿ ಮುಕ್ತಿಮಂದಿರಕ್ಕೆ ಕರೆದೊಯ್ಯುವದು ನನ್ನ ಹೊಣೆ.

## ಭಕ್ತರ ಲಕ್ಷಣ, ಲೋಕ ವಿಲಕ್ಷಣ

**ವೆಂಕಟೇಶ:-** ಮುನಿ ಶ್ರೇಷ್ಠನೇ, ಭಗವಂತನ ಭಕ್ತರ ಲಕ್ಷಣವನ್ನು ಹೇಳುತ್ತೇನೆ ಕೇಳು. ಸರ್ವಪ್ರಾಣಿಗಳ ಹಿತವನ್ನು ಬಯಸುವದು. ಇನ್ನೊಬ್ಬರ ದೋಷವನ್ನು ಎಣಿಸದಿರುವದು, ದೇವರು ಕೊಟ್ಟಷ್ಟರಲ್ಲಿ ತೃಪ್ತನಾಗಿ ಇರುವದು. ಹೆಚ್ಚಿನ ಹಣಕ್ಕಾಗಿ ಆಸ್ತಿ ಸ್ವಾಸ್ಥ್ಯಗಳಿಗೆ ಆಸೆ ಮಾಡದೇ ಇರುವದು. ಮನಸ್ಸಿನಿಂದಾಗಿ, ಮಾತಿನಿಂದಾಗಲಿ, ಮೈ ಕೈಗಳಿಂದಾಗಲಿ ಮತ್ತೊಬ್ಬರನ್ನು ಪೀಡಿಸದೆ ಇರುವದು. ವೇದ ವೇದಾಂತಗಳನ್ನು ಶ್ರವಣ ಮಾಡುವದು. ತಾಯಿ ತಂದೆಗಳನ್ನು ಸೇವಿಸುವದು, ಸ್ನಾನ ಸಂಧ್ಯೆ ದೇವಪೂಜೆ, ನೈವೇದ್ಯ, ವೈಶ್ವದೇವ, ಪಾಠ ಪ್ರವಚನ, ಮುಂತಾದ ವಿಹಿತ ಕರ್ಮಗಳನ್ನು ತಪ್ಪದೇ ಆಚರಿಸುವದು ಇವು ಭಗವದ್ಭಕ್ತರ ಮುಖ್ಯ ಲಕ್ಷಣಗಳು. ಇದರಂತೆ ಭಕ್ತರು ಹಾಗೂ ಸಾಧು ಸಜ್ಜನರು ಕೆಲವೊಂದು ನಿಯಮಗಳನ್ನು ಪರಿಪಾಲಿಸುತ್ತಿರುವರು. ಅವರ ನಡೆ ನುಡಿಗಳಿಂದಲೂ ನಾವು ಗುರುತಿಸಬಹುದು ಇವರು ಭಗವಂತನ ಭಕ್ತರು ಎಂದು.

ಬ್ರಹ್ಮಚಾರಿ ಹಾಗೂ ಸನ್ಯಾಸಿಯರನ್ನು ಎಂದೂ ನಿಂದಿಸಕೂಡದು. ಜನರಿಗೆ ಹಿತವನ್ನು ಉಂಟು ಮಾಡುವ ತಥ್ಯ ಪಥ್ಯವಾದ ವಚನಗಳನ್ನು ಮಾತ್ರ ನುಡಿಯಬೇಕು. ಎಲ್ಲ ಪ್ರಾಣಿಗಳನ್ನು ಸಮದೃಷ್ಟಿಯಿಂದ ನೋಡಬೇಕು. ಶತ್ರು ಮಿತ್ರರಲ್ಲಿ ಸಮಭಾವವಿರಬೇಕು. ಮತ್ತೊಬ್ಬರ ಉತ್ಕರ್ಷವನ್ನು ನೋಡಿ ಸಂತೋಷ ಪಡಬೇಕು.

ಯಾವಾಗಲೂ ಭಗವಂತನ ನಾಮ ಸಂಕೀರ್ತನೆಯನ್ನು ಮಾಡುತ್ತ ಇರಬೇಕು. ಭಗವಂತನ ಗುಣಗಳನ್ನು ನೆನೆದು ಹಾಡಿದಾಗ ಮೈ ರೋಮಾಂಚಿತವಾಗಬೇಕು. ಕಣ್ಣು ಗಳಿಂದ ಆನಂದಬಾಷ್ಪ ಉದರಬೇಕು. ಅತಿಥಿಪೂಜೆ, ಸ್ವಾಧ್ಯಾಯ, ವರ್ಣಾಶ್ರಮ ಉಚಿತ ಆಚಾರ ಪಾಲನ, ಏಕಾದಶಿ ವ್ರತ, ವಿಷ್ಣು ಪ್ರೀತ್ಯರ್ಥವಾಗಿಯೇ ಸರ್ವಕರ್ಮ ಅನುಷ್ಠಾನ. ಮಾಡಿದ ಕರ್ಮಗಳನ್ನೆಲ್ಲ ನಿಷ್ಕಾಮ ಬುದ್ಧಿಯಿಂದ ಭಗವಂತನಲ್ಲಿ ಸಮರ್ಪಣೆ ಇವೇ ಮೊದಲಾದವುಗಳನ್ನು ಭಗವದ್ಭಕ್ತರು ತಮ್ಮ ಜೀವನದ ವ್ರತ ಎಂದು ಪಾಲಿಸುತ್ತ ಇರುತ್ತಾರೆ. ಈ ಎಲ್ಲ ವ್ರತ ಆಚಾರ ಧರ್ಮ-ಕರ್ಮಾನುಷ್ಠಾನಗಳನ್ನೂ ತಪ್ಪದೇ ಯಾರು ಮಾಡುತ್ತಲಿರುವರೋ ಅವರೇ ನಿಜವಾದ ಭಗವದ್ಭಕ್ತರು ಎಂದು ಅರಿತುಕೊಳ್ಳಬೇಕು. ಮುನಿಯೇ! ನಿನ್ನ ಅಪೇಕ್ಷೆಯಂತೆ ನಾನು ಭಕ್ತರ ಲಕ್ಷಣವನ್ನು ಹೇಳಿದ್ದೇನೆ.

## ಸುದರ್ಶನ ಚಕ್ರದಿಂದ ಪದ್ಮನಾಭನ ರಕ್ಷಣೆ

**ಋಷಿಗಳು:-** ದಾನವನ್ನು ಯಾರಿಗೆ ಕೊಡಬೇಕು? ಯಾವ ಕಾಲದಲ್ಲಿ ಕೊಡಬೇಕು? ದಾನದ ಪಾತ್ರ ಅಪಾತ್ರಗಳ ವಿಚಾರವನ್ನು ತಿಳಿಸಬೇಕು.

**ಸೂತ:-** ವಿಪ್ರರೇ! ದುರಾಚಾರಿ ವೇದದ್ವೇಷಿ, ನಪುಂಸಕ, ಪಾಖಂಡಿ, ವ್ಯಭಿಚಾರಿ, ಪರರ ಹಣವನ್ನು ಎತ್ತಿ ಹಾಕಿದವ, ಕೃತಘ್ನ, ಕಪಟಿ, ಮುಂತಾದವರು ದಾನಕ್ಕೆ ಅಪಾತ್ರ ಎನಿಸುವರು. ಇಂಥವರಿಗೆ ಕೊಟ್ಟ ದಾನವು ವ್ಯರ್ಥವಾಗುವದು. ಸಂಬಳ ತೆಗೆದುಕೊಂಡು ವಿದ್ಯೆಯನ್ನು ಕಲಿಸುವ ವೇದದ ಮಾರಾಟಗಾರ, ದುಡ್ಡು ತೆಗೆದುಕೊಂಡು ಹೋಮಹವನ ಮಾಡಿಸುವ ಯಜ್ಞ ಮಾರಾಟಗಾರ. ದ್ರವ್ಯ ತೆಗೆದುಕೊಂಡು ಧರ್ಮವನ್ನು ಜ್ಯೋತಿಷ್ಯವನ್ನು, ಪುರಾಣವನ್ನು, ದೇವರ ಪೂಜೆಯನ್ನು, ಶಾಸ್ತ್ರವನ್ನು ಹೇಳುವವರು ಆ ವಿದ್ಯೆಗಳ ವ್ಯಾಪಾರಿಗಳು. ಇಂಥ ವೇದಶಾಸ್ತ್ರ ಧರ್ಮ ಸ್ಮೃತಿ ಪುರಾಣಾದಿ ವಿದ್ಯಾ ವಿಕ್ರಯ ಮಾಡುವ ಪಂಡಿತರು ದಾನಕ್ಕೆ ಅಪಾತ್ರರು. ಇಂಥವರಿಗೆ ದಾನವನ್ನು ಕೊಡಕೂಡದು. ಮತ್ತು ನಮಸ್ಕಾರವನ್ನು ಕೂಡ ಇವರಿಗೆ ಮಾಡಬಾರದು.

ಸದಾಚಾರ ಸಂಪನ್ನರೂ ಅಗ್ನಿಹೋತ್ರ ಇಟ್ಟವರು, ದರಿದ್ರರು, ದೊಡ್ಡ ಕುಟುಂಬ ಉಳ್ಳವರು, ದೇವರ ಪೂಜೆಯನ್ನು ನಿತ್ಯಕರ್ತವ್ಯವೆಂದು ತಪ್ಪದೆ ಮಾಡುವವರು ಮನೆಯಲ್ಲಿ ವಿದ್ಯಾರ್ಥಿಗಳನ್ನು ಇಟ್ಟುಕೊಂಡು ಪಾಠ ಪ್ರವಚನ ಮಾಡುವವರು, ಸ್ವಾಧ್ಯಾಯ, ಜಪ, ಯಜ್ಞ, ವ್ರತ, ಉಪವಾಸಾದಿಗಳನ್ನು ಶಾಸ್ತ್ರೋಕ್ತವಾಗಿ ಆಚರಿಸುವವರೂ ತಮ್ಮ ತಮ್ಮ ವರ್ಣ ಆಶ್ರಮಗಳಿಗೆ ವಿಹಿತವಾದ ಸತ್ಕರ್ಮಾನುಷ್ಠಾನ ಮಾಡುವವರೂ ಭಗವದ್ಭಕ್ತರೂ ದಾನಕ್ಕೆ ಸತ್ಪಾತ್ರ ಎನಿಸುವರು. ಇಂಥವರಿಗೆ ಕೊಟ್ಟ ದಾನವು ಅಕ್ಷಯ ಫಲಪ್ರದವೂ ಪುಣ್ಯದಾಯಕವೂ ಆಗುತ್ತದೆ.

ಮೇಲೆ ಹೇಳಿದ ದಾನಕ್ಕೆ ಯೋಗ್ಯ ಪಾತ್ರರಾದವರು ನಮಸ್ಕಾರಕ್ಕೆ ಯೋಗ್ಯ ರಾಗಿರುತ್ತಾರೆ. ಜ್ಞಾನವೃದ್ಧರು, ವಯೋವೃದ್ಧರು, ತಪೋವೃದ್ಧರೂ, ಸದಾಚಾರ ಸಂಪನ್ನರೂ, ದೇವರ ಪೂಜೆಯನ್ನು ಭಕ್ತಿಯಿಂದ ಮಾಡುವವರೂ, ಶಮದಮಾದಿ ಸಂಪನ್ನರೂ ಶಾಸ್ತ್ರಪುರಾಣ ಹೇಳುವವರೂ, ತನಗಿಂತ ವಯಸ್ಸಿನಲ್ಲಿ ಜೇಷ್ಠರಾದವರೂ, ಗುರು ಹಿರಿಯರು ಯತಿಗಳು ಮುಂತಾದವರನ್ನು ಕಂಡರೆ ನಮಸ್ಕಾರವನ್ನು ಮಾಡಬೇಕು.

ಪಾಖಂಡಿ, ಪತಿತ, ಸಂಸ್ಕಾರಭ್ರಷ್ಟ, ಕೃತಘ್ನ, ವಿದ್ಯಾವಿಕ್ರಯಿ, ಕಲಹಪ್ರಿಯ, ಕೋಪಿಷ್ಠ, ಬ್ರಹ್ಮದ್ವೇಷಿ ಮುಂತಾದವರಿಗೆ ಪ್ರಣಾಮವನ್ನು ಮಾಡಬಾರದು. ವಂದನಾರ್ಹ ವ್ಯಕ್ತಿ ಗಳಿಗೂ ಕೂಡ ಪೂಜೆ, ಶ್ರಾದ್ಧ, ಯಜ್ಞ, ತರ್ಪಣ, ಸ್ನಾನ ಮುಂತಾದ ಕಾರ್ಯ ಮಾಡುತ್ತಿರುವಾಗ ನಮಸ್ಕಾರ ಮಾಡಬಾರದು. ಇದರಂತೆ ಮುಟ್ಟಾದ ಹೆಣ್ಣುಮಕ್ಕಳಿಗೂ, ಕುಲಟೆಯರಿಗೂ ವ್ರತವನ್ನು ಕೆಡಿಸುವವರಿಗೂ, ಸಿಟ್ಟಿನ ಭರದಲ್ಲಿರುವವರಿಗೂ ಪ್ರಣಾಮವನ್ನು ಮಾಡಕೂಡದು.

ಶ್ರಾದ್ಧ ಮಾಡಲು ಮೇಲೆ ಹೇಳಿದ ದಾನಕ್ಕೆ ಪಾತ್ರರಾದ ಅರ್ಹರಾದ ವ್ಯಕ್ತಿಗಳನ್ನೇ ಕರೆದು ಪೂಜಿಸಿ ಭೋಜನಕ್ಕೆ ಹಾಕಬೇಕು. ಅಂಥ ಸತ್ಪಾತ್ರವು ದೊರೆಯದಿದ್ದರೆ ತನ್ನ ಸದಾಚಾರ ಸಂಪನ್ನರಾದ ಅಣ್ಣ ತಮ್ಮ ಅಥವಾ ಪುತ್ರರನ್ನು ಶ್ರಾದ್ಧಕ್ಕೆ ಕೂಡಿಸಬಹುದು.

## 'ಪದ್ಮನಾಭನ ತಪಸ್ಸಿನಿಂದ ಪ್ರಸನ್ನನಾದ ಪದ್ಮನಾಭ'

ಪೂರ್ವಕಾಲದಲ್ಲಿ ಶ್ರೀವತ್ಸ ಗೋತ್ರದಲ್ಲಿ ಪದ್ಮನಾಭ ಎಂಬ ಹೆಸರಿನ ಓರ್ವ ಬ್ರಾಹ್ಮಣನು ಇರುತ್ತಿದ್ದ. ಅವನು ಸದಾಚಾರ ಸಂಪನ್ನ. ಜಿತೇಂದ್ರಿಯ, ಸತ್ಯವಾದಿ. ಎಲ್ಲ ಜನರಿಗೂ ಕಲ್ಯಾಣವನ್ನು ಬಯಸುವವ. ಈ ಪದ್ಮನಾಭನು ಹನ್ನೆರಡುವರ್ಷ ತಪಸ್ಸನ್ನು

ಮಾಡಿದ. ಒಣಗಿದ ಎಲೆಗಳನ್ನು ತಿಂದು ಕೆಲವು ದಿನ, ಬರೀ ನೀರು ಕುಡಿದು ಹಲವು ದಿನ, ಬರೀ ಗಾಳಿಯನ್ನು ಸೇವಿಸಿ ಕೆಲವು ಕಾಲ, ಅವನ ತಪಸ್ಸು ನಡೆಯಿತು. ಹೀಗೆ ಹನ್ನೆರಡು ವರ್ಷ ಉಗ್ರ ತಪಸ್ಸನ್ನು ಆಚರಿಸಿದ.

ಆ ಪದ್ಮನಾಭನ ಘೋರ ತಪಸ್ಸಿಗೆ ಒಲಿದು ಪ್ರತ್ಯಕ್ಷ ದರ್ಶನವನ್ನು ಕರುಣಿಸಿದ ಅವನಿಗೆ ವೆಂಕಟೇಶ, ಶಂಖ, ಚಕ್ರ, ಗಧಾ, ಪದ್ಮವನ್ನು ಧರಿಸಿದ ಆ ಜಗದೀಶ್ವರನ ಸಾಕ್ಷಾತ್ ದರ್ಶನದಿಂದ ಸಂತುಷ್ಟನಾದ ಪದ್ಮನಾಭನು. ಬಗೆಬಗೆಯಿಂದ ಬಣ್ಣಿಸಿದನು ಆ ಭಗವಂತನನ್ನು. ಅವನ ಸ್ತೋತ್ರದಿಂದ ಸಂತುಷ್ಟನಾದನು ಶ್ರೀನಿವಾಸ. ದೇವನು ಪ್ರಸನ್ನ ಮುಖದಿಂದ ಹೇಳಿದ- "ಭಕ್ತಶ್ರೇಷ್ಠ! ನೀನು ಈ ಚಕ್ರತೀರ್ಥದ ದಂಡೆಯ ಮೇಲೆ ನಿಂತು ಹನ್ನೆರಡು ವರುಷ ಮಾಡಿದ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದೇನೆ. ನೀನು ಇದೇ ಚಕ್ರತೀರ್ಥದ ತೀರ್ಥದಲ್ಲಿ ನನ್ನ ಪೂಜೆಯನ್ನು ಮಾಡುತ್ತ ಒಂದು ಕಲ್ಪಕಾಲದವರೆಗೆ ಸುಖದಿಂದ ಇರು. ಕೊನೆಗೆ ನಿನಗೆ ಮೋಕ್ಷವನ್ನು ಕರುಣಿಸುವೆ" ಎಂದು ಹೇಳಿ ಅಂತರ್ಧಾನ ಹೊಂದಿದ ಶ್ರೀನಿವಾಸ. ಅವನ ಆದೇಶದಂತೆ ಆ ಪದ್ಮನಾಭ ತಪಸ್ವಿಯು ಚಕ್ರತೀರ್ಥದ ತಟಾಕದಲ್ಲಿ ಭಗವಂತನ ಪೂಜೆ ಮಾಡುತ್ತ ವಾಸ ಮಾಡಿದ.

## ಶರಣಾಗತರನ್ನು ಕಾಯುವ ಕರುಣಾಶಾಲಿ

ಒಂದು ದಿನ ಆ ಚಕ್ರತೀರ್ಥದ ತೀರಕ್ಕೆ ಓರ್ವ ರಾಕ್ಷಸ ಬಂದ. ಅವನು ಹಸಿದಿದ್ದ. ಅವನ ಕಣ್ಣಿಗೆ ಅಲ್ಲಿ ದೇವರ ಪೂಜೆ ಮಾಡುತ್ತಿದ್ದ ಪದ್ಮನಾಭನೆ ಮೊದಲು ಕಾಣಿಸಿದ. ಅವನನ್ನೇ ಹೊಡೆದು ಕೊಂದು ತಿಂದುಬಿಡಬೇಕೆಂದು ಧಾವಿಸಿಬಂದ ಆ ರಕ್ಕಸ. ಹಿಡಿದು ಬಿಟ್ಟ ತನ್ನ ಕೈಗಳಿಂದ ಆ ತಪಸ್ವಿಯನ್ನು. ರಾಕ್ಷಸನ ಹಿಡಿತದಲ್ಲಿ ಸಿಕ್ಕ ಪದ್ಮನಾಭನು ದಿಕ್ಕುಕಾಣದೆ, ಬುದ್ಧಿ ತೋಚದೆ, ಶ್ರೀನಿವಾಸದೇವರಿಗೆ ಮೊರೆಹೊಕ್ಕು- "ಶ್ರೀನಿವಾಸ, ದಯಾಸಿಂಧು, ಶರಣಾಗತ ರಕ್ಷಕ, ವೆಂಕಟೇಶಪ್ರಭು, ನನ್ನನ್ನು ರಕ್ಷಿಸು. ರಕ್ಷಿಸು. ಈ ರಾಕ್ಷಸನ ಕೈಯಲ್ಲಿ ಸಿಕ್ಕಿದ್ದೇನೆ. ಇವನು ನನ್ನನ್ನು ಕೊಲ್ಲುತ್ತಿದ್ದಾನೆ. ಹಿಂದೆ ನೀನು ಮೊಸಳೆಯ ಕೈಗೆ ಸಿಕ್ಕಿದ ಆನೆಯನ್ನು ಕಾಪಾಡಿದ್ದಿಯಷ್ಟೆ? ಹಿರಣ್ಯ ಕಶಪುವಿನಿಂದ ಪ್ರಲ್ಹಾದನನ್ನು ರಕ್ಷಿಸಿದಂತೆ ಈಗ ನನ್ನನ್ನು ರಕ್ಷಿಸು." ಭಕ್ತನ ಈ ಮೊರೆಯನ್ನು ಕೇಳಿ ಕರುಣಾಕರನಾದ ಶ್ರೀನಿವಾಸ ದೇವರು ತನ್ನ ಸುದರ್ಶನ ಚಕ್ರವನ್ನು ಕಳಿಸಿದ. ಬೆಂಕಿಯ ವಂಕಿಗಳನ್ನು ಹಬ್ಬಿಸುತ್ತ ಕೆಂಡದ ಉಂಡೆಗಳನ್ನು ಉಗುಳುತ್ತ ಬಂದಿತು ಆ ಸುದರ್ಶನ ಚಕ್ರ. ಅದನ್ನು ಕಂಡ ಕೂಡಲೇ ಓಡ ತೊಡಗಿದ ಆ ದೈತ್ಯ. ಓಡುವ ರಕ್ಕಸನನ್ನು ಬೆನ್ನಟ್ಟಿ ಅವನ ತಲೆಯನ್ನು ಕತ್ತರಿಸಿ ಹಾಕಿತು ಆ ಸುದರ್ಶನ ಚಕ್ರ. ರಾಕ್ಷಸಾಂತಕವಾದ ಆ ಶ್ರೀಹರಿಯ ಚಕ್ರವನ್ನು ಆ ಪದ್ಮನಾಭ ಯೋಗಿಯು ಭಕ್ತಿಯಿಂದ ಸ್ತೋತ್ರ ಮಾಡಿದ.

## ಸುದರ್ಶನ ಚಕ್ರಕ್ಕೆ ಪ್ರಾರ್ಥನೆ ಮತ್ತು ಅಭ್ಯರ್ಥನೆ

**ಪದ್ಮನಾಭ:**-ಸಂಪೂರ್ಣ ವಿಶ್ವವನ್ನು ಸಂರಕ್ಷಣೆ ಮಾಡಲು ದೀಕ್ಷೆ ಹೊತ್ತ ವಿಷ್ಣುವಿನ ಹಸ್ತಾಲಂಕಾರವಾದ ಸುದರ್ಶನ ಚಕ್ರವೇ ನಿನಗೆ ನಮಸ್ಕಾರ. ಲೋಕ ಕಂಟಕರಾದ ದೈತ್ಯರನ್ನು ಸಂಹರಿಸುವಲ್ಲಿ ನೀನು ಕುಶಲ. ಹರಿಭಕ್ತರನ್ನು ರಕ್ಷಿಸುವಲ್ಲಿ ದಕ್ಷ. ನಿನಗೆ ಮತ್ತೆ ಮತ್ತೆ ನನ್ನ ವಂದನೆ. ನನ್ನ ರಕ್ಷಣೆಗಾಗಿ ನೀನು ಇನ್ನು ಮುಂದೆ ಇದೇ ತೀರ್ಥದ ತೀರದಲ್ಲಿ ನೆಲಿಸು. ಚಕ್ರತೀರ್ಥ ಎಂದೇ ನಿನ್ನ ಹೆಸರಿನಿಂದ ಈ ತೀರ್ಥವು ಪ್ರಸಿದ್ಧಿಯಾಗಲಿ.

**ಸುದರ್ಶನ ಚಕ್ರ:-** "ಹರಿಭಕ್ತ! ನಿನ್ನ ಅಪೇಕ್ಷೆಯಂತೆ ಆಗಲಿ. ನಾನು ಈ ಚಕ್ರತೀರ್ಥದಲ್ಲಿಯೇ ನಿರಂತರವೂ ವಾಸ ಮಾಡುವೆನು. ನನ್ನ ಜಲಾಧಿವಾಸದಿಂದಲೂ, ನಿನ್ನ ತಪಸ್ಸಿನಿಂದಲೂ ಈ ತೀರ್ಥವು ಪರಮ ಪವಿತ್ರವೂ, ಪಾಪನಾಶಕವೂ, ಆಗುವದು. ಇದರಲ್ಲಿ ಸ್ನಾನ ಮಾಡಿದವರು ತಮ್ಮ ದುರಿತ ರಾಶಿಗಳನ್ನೆಲ್ಲ ಕಳೆದುಕೊಂಡು ಭಗವಂತನ ಅನುಗ್ರಹ ಪಡೆದು ದಿವ್ಯಗತಿಯನ್ನು ಹೊಂದುವರು" ಹೀಗೆ ಹೇಳಿ ಆ ಸುದರ್ಶನ ಚಕ್ರವು ಅಲ್ಲಿದ್ದ ಜನರೆಲ್ಲರೂ ನೋಡುತ್ತಿದ್ದಂತೆಯೇ ಆ ತೀರ್ಥದ ನೀರಿನಲ್ಲಿ ಪ್ರವೇಶ ಮಾಡಿಬಿಟ್ಟಿತು. ಮುನಿಗಳೇ, ನಾನು ನಿಮ್ಮ ಅಪೇಕ್ಷೆಯಂತೆ ಚಕ್ರತೀರ್ಥದ ಮಹಿಮೆಯನ್ನು ಹೇಳಿದ್ದೇನೆ. ಇದನ್ನು ಶ್ರವಣ ಮಾಡಿದವರಿಗೆ ಪುಣ್ಯಪ್ರಾಪ್ತಿ ಸದ್ಗತಿ.

## ವಶಿಷ್ಠರ ಶಾಪದಿಂದ ಸುಂದರ ಗಂಧರ್ವನಿಗೆ ರಾಕ್ಷಸ ಜನ್ಮ

**ಋಷಿಗಳು:-** ಸೂತ ಮುನಿಯೇ! ಚಕ್ರತೀರ್ಥದ ದಂಡೆಯ ಮೇಲೆ ತಪಸ್ಸನ್ನು ಮಾಡುತ್ತಿದ್ದ ಪದ್ಮನಾಭ ಎಂಬ ಬ್ರಾಹ್ಮಣನನ್ನು ತಿನ್ನಲಿಕ್ಕೆ ಬಂದ ಆ ರಾಕ್ಷಸನು ಯಾರು? ಆ ಪುಣ್ಯಾರಣ್ಯದ ಈ ಪವಿತ್ರ ತೀರ್ಥಕ್ಕೆ ಅಂಥ ದುಷ್ಟ ರಕ್ಕಸನು ಏಕೆ ಬಂದ?

**ಸೂತ:-** ವಿಪ್ರರೇ! ಇದೊಂದು ಬಹು ಪೂರ್ವಕಾಲದ ಘಟನೆ. ದಕ್ಷಿಣ ಭಾರತದಲ್ಲಿ ಶ್ರೀರಂಗ ಎಂಬ ಮಹಾಕ್ಷೇತ್ರವಿದೆ. ಭೂ ವೈಕುಂಠವೆಂದು ಅದರ ಪ್ರಸಿದ್ಧಿ. ಅಲ್ಲಿ ಶ್ರೀರಂಗ ನಾಥನ ಮಂದಿರವು ಅತ್ಯಂತ ಸುಂದರ. ಅಷ್ಟೇ ವಿಶಾಲ. ವಶಿಷ್ಠ, ಅತ್ರಿ ಮುಂತಾದ ಮಹಾ ಮಹಾ ಮುನೀಶ್ವರರು ಮೋಕ್ಷಪ್ರದನಾದ ಈ ರಂಗನಾಥಸ್ವಾಮಿಯನ್ನು ಉಪಾಸನೆ ಮಾಡುತ್ತಾರೆ ಸಂತತವೂ.

ಒಂದು ದಿನ ಸುಂದರ ಎಂಬ ಹೆಸರಿನ ಒಬ್ಬ ಗಂಧರ್ವನು ತನ್ನ ಪ್ರೇಯಸಿಯರೊಂದಿಗೆ ಅಲ್ಲಿಗೆ ಬಂದನು. ವೀರಬಾಹುವಿನ ಮಗನಾದ ಈ ಸುಂದರ ಗಂಧರ್ವನು ರಸಿಕರ ರಾಜ. ಸಗ್ಗದ ಬೆಲೆವೆಣ್ಣುಗಳನ್ನು ಬೆನ್ನು ಹಚ್ಚಿಕೊಂಡು ಭೂತಲದ ಸ್ವರ್ಗದಂತಿದ್ದ ಈ ಶ್ರೀರಂಗ ಕ್ಷೇತ್ರಕ್ಕೆ ವನಿತಾ ವಿಹಾರಕ್ಕೆಂದು ಬಂದಿದ್ದ. ಅತ್ಯಂತ ಮನೋಹರ ಈ ಶ್ರೀರಂಗದಲ್ಲಿಯ ಸರೋವರ. ತಿಳಿನೀರಿನ ಈ ಹೊಕ್ಕರಣಿಯಲ್ಲಿ ಹೊಕ್ಕಿತು ಗಂಧರ್ವರ ಈ ತರುಣ-ತರುಣಿಯರ ತಂಡ. ಒಬ್ಬರ ಮೈಮೇಲೆಯೂ ತುಂಡು ಬಟ್ಟೆಯಿಲ್ಲ. ಹುಟ್ಟಿದ ಮಹರ್ದಶೆಯಲ್ಲಿಯೇ ಈ ಗಂಧರ್ವ ಗುಂಪಿನ ಜಲಕೇಲೀ ವಿಹಾರ ನಡೆಯಿತು.

ಇದೇ ವೇಳೆಯಲ್ಲಿ ಮಧ್ಯಾಹ್ನ ಸಂಧ್ಯಾವಂದನೆ ಮಾಡಬೇಕೆಂದು ವಶಿಷ್ಠ ಮಹರ್ಷಿಗಳು ಪುಷ್ಕರಣಿಯ ತೀರಕ್ಕೆ ಬಂದರು. ಸಪ್ತಋಷಿ ಶ್ರೇಷ್ಠರಾದ ವಶಿಷ್ಠರ ಬೆನ್ನ ಹಿಂದೆಯೇ ಉಳಿದ ಆರು ಮಹರ್ಷಿಗಳು ಸಂಧ್ಯೆ ಜಪಾನುಷ್ಠಾನಗಳಿಗಾಗಿ ಆ ಜಲಾಶಯಕ್ಕೆ ಐತಂದರು. ಮುನಿಗಳು ನಡೆದು ಬರುವ ಅಡಿಯ ಸದ್ದನ್ನು ಕೇಳಿದ ಕೂಡಲೇ ಆ ತೀರ್ಥದಲ್ಲಿ ವಿಹರಿಸುತ್ತಿದ್ದ ತರಳೆಯರೆಲ್ಲರೂ ನಾಚಿ ನೀರಿನಿಂದ ಮೇಲೆದ್ದರು. ತೀರದಲ್ಲಿದ್ದ ತಮ್ಮ ತಮ್ಮ ಬಟ್ಟೆಗಳನ್ನು ತೊಟ್ಟುಕೊಂಡು ವಿನಯದಿಂದ ತಲೆ ತಗ್ಗಿಸಿ ಒಂದು ಮರದಡಿಯಲ್ಲಿ ಕುಳಿತುಕೊಂಡರು.

ಆದರೆ ಸುಂದರ ಎಂಬ ಹೆಸರಿನ ಆ ಗಂಧರ್ವ ತರುಣನು ಮಾತ್ರ ಬಯಲು ಬಟ್ಟೆಯಲ್ಲಿಯೇ ನಿಂತುಕೊಂಡನು. ಆ ಕಾಮಾಂಧನಿಗೆ ಸಪ್ತಋಷಿಗಳ ಪರಿವೆಯೂ

ಇರಲಿಲ್ಲ. ಈ ಗಂಧರ್ವ ಯುವಕನ ನಾಚಿಕೆಗೇಡುತನವನ್ನು ನೋಡಿ ಕೋಪ ಕೆರಳಿತು ವಶಿಷ್ಠರಿಗೆ. ಕೂಡಲೇ ಅವರು ಶಾಪವಿತ್ತರು. ''ಸುಂದರ, ನಿನ್ನಲ್ಲಿ ಮನುಷ್ಯತ್ವವೇ ಇಲ್ಲ. ದೇವತ್ವವಂತೂ ಮುಗಿಲಮಲ್ಲಿಗೆ ನಿನ್ನ ಪಾಲಿಗೆ. ನೀನು ನಿನ್ನ ರಮಣಿಯರೊಂದಿಗೆ ಈ ಪುಣ್ಯಕ್ಷೇತ್ರಕ್ಕೆ ಬಂದದ್ದೇ ತಪ್ಪು. ಈ ಪವಿತ್ರ ತೀರ್ಥದಲ್ಲಿ ರಮಣಿಯರೊಂದಿಗೆ ಜಲವಿಹಾರಕ್ಕೆ ಇಳಿದದ್ದು ಪರಮ ಅನ್ಯಾಯ. ನಾವು ಏಳು ಜನ ಋಷಿಗಳು ಬಂದರೂ ಮೇಲೆ ಏಳದೇ ಬಯಲಾಗಿ ನಿಂತದ್ದು ಅಕ್ಷಮ್ಯ ಅಪರಾಧ. ಆದುದರಿಂದ ನೀನು ದೇವತ್ವ, ಗಂಧರ್ವತ್ವ, ಮನುಷ್ಯತ್ವ, ಮೂರು ಯೋನಿಗಳ ಮರ್ಯಾದೆಯ ಮೇರೆಯನ್ನು ಮೀರಿ ನಡೆದಿರುವೆ. ಆದುದರಿಂದ ಇವೆಲ್ಲವುಗಳಿಗಿಂತ ಅಧಮಾಧಮವಾದ ರಾಕ್ಷಸ ಯೋನಿಯಲ್ಲಿ ಹುಟ್ಟು.''

ವಶಿಷ್ಠರ ಈ ಕೋಪ ಶಾಪಗಳನ್ನು ನೋಡಿದರು ಹುಲ್ಲೆಗಣ್ಣಿನ ಆ ಹೆಣ್ಣುಗಳು. ಅಂಜುತ್ತ ಅಳುಕುತ್ತ ಆ ಎಲ್ಲ ಮೈ ಬಳ್ಳಿ ಬಾಲೆಯರು ವಶಿಷ್ಠರ ಬಳಿಗೆಬಂದರು. ಅವರ ಅಡಿದಾವರೆಗಳಿಗೆ ಎರಗಿದರು. ನಮ್ರತೆಯಿಂದ ಕೈಜೋಡಿಸಿ ಹೇಳಿದರು- ''ಪೂಜ್ಯರೇ! ತಾವು ಧರ್ಮದ ಅಧಿದೇವತೆ. ಸಾಕ್ಷಾತ್ ಬ್ರಹ್ಮದೇವರ ಸತ್ಪುತ್ರರು. ನಮ್ಮ ಪತಿಯ ಅಪರಾಧಕ್ಕಾಗಿ ನಾವೆಲ್ಲ ಕ್ಷಮೆಯನ್ನು ಕೇಳಿಕೊಳ್ಳುತ್ತಿದ್ದೇವೆ. ತಮ್ಮಂಥ ಮಹಾಮುನಿಗಳಿಗೆ ಕ್ಷಮೆಯೇ ಅಲಂಕಾರ. ತತ್ವದರ್ಶಿಗಳಾದ ತಾವು ತಾರುಣ್ಯ ಸಹಜವಾದ ಈ ಒಂದು ಅಪರಾಧವನ್ನು ಕ್ಷಮಿಸಿರಿ. ನಮ್ಮ ಪ್ರಾರ್ಥನೆಯನ್ನು ಮನ್ನಿಸಿರಿ. ನಾರಿಯರಿಗೆ ಪತಿಯೇ ಸರ್ವಸ್ವ. ಪತಿಯಿಲ್ಲದ ಸತಿಯ ಜನ್ಮ ವ್ಯರ್ಥ. ಆದುದರಿಂದ ತಾವು ನಮ್ಮ ಪತಿಯ ಮೇಲೆ ಪ್ರಸನ್ನಚಿತ್ತರೂ ಆಗಬೇಕು.

**ವಶಿಷ್ಠ:-** ''ಸುಂದರಿಯರೇ! ಎಂದೂ ಸುಳ್ಳಾಗಲಾರದು ನಾನು ನುಡಿದ ವಚನ. ಆದರೆ ಅದರಿಂದ ಬೇಗ ಪಾರು ಆಗುವ ಉಪಾಯವನ್ನು ಹೇಳುತ್ತೇನೆ ಕೇಳಿರಿ. ಈ ಸುಂದರ ಗಂಧರ್ವನು ನಮ್ಮ ಶಾಪದಂತೆ ಇಂದೇ ರಾಕ್ಷಸನಾಗುವನು. ಇಂದಿನಿಂದ ಹದಿನಾರನೆಯ ವರ್ಷ ಅವನು ಸ್ವೇಚ್ಛಾನುಸಾರ ತಿರುಗುತ್ತ ವೆಂಕಟಾಚಲಕ್ಕೆ ಹೋಗುವನು. ಆ ಬೆಟ್ಟದ ಮೇಲಿರುವ ಚಕ್ರತೀರ್ಥದ ದಂಡೆಯ ಮೇಲೆ ಇವನು ತಿರುಗಾಡುವಾಗ ಅಲ್ಲಿಯೇ ಇದ್ದ ಪದ್ಮನಾಭಯೋಗಿಯು ಇವನ ದೃಷ್ಟಿಗೆ ಬೀಳುವನು. ಅವನನ್ನು ಕಂಡಕೂಡಲೇ ಈ ಸುಂದರ ಗಂಧರ್ವನು ತನ್ನ ರಾಕ್ಷಸ ವೃತ್ತಿಗೆ ಅನುಸಾರವಾಗಿ ಆ ಬ್ರಾಹ್ಮಣನನ್ನು ತಿಂದುಬಿಡಬೇಕೆಂದು ಕೊಲ್ಲಲು ಹೋಗುವನು. ಆಗ ಭಕ್ತರ ರಕ್ಷಣೆಗಾಗಿ ಭಗವಂತನು ಬಿಟ್ಟ ಸುದರ್ಶನ ಚಕ್ರವು ಅಲ್ಲಿಗೆ ಬಂದು ಕತ್ತರಿಸಿ ಹಾಕುವದು ಈ ಸುಂದರನ ಕುತ್ತಿಗೆಯನ್ನು. ಶ್ರೀನಿವಾಸನ ಹಸ್ತಾಲಂಕಾರವಾದ ಸುದರ್ಶನಚಕ್ರದ ಸ್ಪರ್ಶ ಮಾತ್ರದಿಂದ ಇವನಿಗೆ ಆ ರಾಕ್ಷಸ ಯೋನಿಯಿಂದ ಬಿಡುಗಡೆ ಆಗುವದು. ಅನಂತರ ತನ್ನ ಮೊದಲಿನ ಗಂಧರ್ವ ರೂಪವನ್ನು ಪಡೆಯುವನು. ಈ ನಿಮ್ಮ ಸುಂದರನು ತನ್ನ ಹೆಸರಿಗೆ ಅನುಗುಣವಾಗಿ ಅತ್ಯಂತ ಸುಂದರ ಯುವಕನಾಗಿ ನಿಮ್ಮೆಲ್ಲ ಸುಂದರಿಯರನ್ನು ಆನಂದ ಪಡಿಸುವನು.''

ಮಹರ್ಷಿ ವಶಿಷ್ಠರು ಹೀಗೆ ಹೇಳಿ ರಂಗನಾಥನ ಸೇವೆಗಾಗಿ ಮಂದಿರದೊಳಗೆ ಪ್ರವೇಶ ಮಾಡಿದರು. ಇತ್ತ ಸುಂದರ ಗಂಧರ್ವನು ಮುನಿಗಳ ಶಾಪದಂತೆ ರಕ್ಕಸನಾದ. ತನ್ನ ಜಾತಿ ಸ್ವಭಾವ ತಕ್ಕಂತೆ ಕ್ರೂರ ಕ್ರಮಗಳನ್ನು ಮಾಡುತ್ತ ಅತ್ತಿತ್ತ ಅಲೆದಾಡಿದ. ಹದಿನಾರು ವರುಷ

ಆಗುವ ಹೊತ್ತಿಗೆ ವೆಂಕಟಗಿರಿಗೆ ಚಕ್ರತೀರ್ಥದ ತೀರಕ್ಕೆ ನಡೆದು ಬಂದ. ಅಲ್ಲಿ ಪದ್ಮನಾಭ ತಪಸ್ವಿಯನ್ನು ಕಂಡ. ಅವನನ್ನು ತಿಂದುಬಿಡಬೇಕೆಂದು ಮುನಿಯ ಮೇಲೆ ಆಕ್ರಮಣ ಮಾಡಿದ. ಕೂಡಲೇ ಬಂದಿತು ಸುದರ್ಶನ ಚಕ್ರ. ರಾಕ್ಷಸನ ಕತ್ತನ್ನು ಕತ್ತರಿಸಿ ಹಾಕಿತು. ಶ್ರೀಹರಿಯ ಆಯುಧವಾದ ಚಕ್ರದ ಸ್ಪರ್ಶ ಮಾತ್ರದಿಂದ ಅವನಿಗೆ ಶಾಪದಿಂದ ಮುಕ್ತಿ ಆಯಿತು. ಕೂಡಲೇ ತನ್ನ ದಿವ್ಯ ಗಂಧರ್ವ ದೇಹವನ್ನು ಧರಿಸಿದ. ಅವನನ್ನು ಕರೆದೊಯ್ಯಲು ಬಂದ ವಿಮಾನದಲ್ಲಿ ಕುಳಿತುಕೊಂಡ. ಮುಗಿಲ ಮಂಟಪದ ಕಡೆಗೆ ಉಡ್ಡಾಣ ಗೈದಿತು ಆ ದೇವ ವಿಮಾನ. ಅವನ ಮೇಲೆ ಸ್ವರ್ಗದಿಂದ ಹೂವಿನ ಸುರಿಮಳೆ ಬಿದ್ದಿತು. ಸುದರ್ಶನಕ್ಕೆ ಸಾಷ್ಟಾಂಗ ಪ್ರಣಾಮ ಹಾಕಿದ ಆ ಸುಂದರ ಗಂಧರ್ವ. ತನ್ನ ಬಿಡುಗಡೆಗೆ ಕಾರಣನಾದ ಪದ್ಮನಾಭ ಯೋಗಿಗೂ ವಂದಿಸಿದ. ಅವರಿಬ್ಬರ ಅಪ್ಪಣೆಯನ್ನು ಪಡೆದುಕೊಂಡು ವಿಮಾನಾರೂಢನಾಗಿ ಗಂಧರ್ವಲೋಕಕ್ಕೆ ಪ್ರಯಾಣ ಬೆಳೆಸಿದ.

ಮುನಿಗಳೇ! ಮುಂದಿನ ಕಥೆಯನ್ನು ನಿಮಗೆ ಈ ಮೊದಲೆ ಹೇಳಿದ್ದೇನೆ. ಆ ರಕ್ಕಸನನ್ನು ಕೊಂದಬಳಿಕ ಆ ಸುದರ್ಶನ ಚಕ್ರವೂ ಒಂದು ರೂಪದಿಂದ ಆ ತೀರ್ಥದ ಸಲಿಲ ರಾಶಿಯಲ್ಲಿಯೇ ಸೇರಿಕೊಂಡು ಬಿಟ್ಟಿತು. ಅದರಿಂದಲೇ ಆ ಜಲಾಶಯಕ್ಕೆ ಹೆಸರು ಬಂದದ್ದು ಚಕ್ರತೀರ್ಥ ಎಂದು. ಇಂಥ ಪವಿತ್ರವಾದ ಚಕ್ರತೀರ್ಥದಲ್ಲಿ ಸ್ನಾನಮಾಡಿ ಪದ್ಮನಾಭನೇ ಮೊದಲಾದ ಅನೇಕ ಮಾನವರು, ದಾನವರು, ಸುರಗಂಧರ್ವರು ಯಕ್ಷ ರಾಕ್ಷಸರು ಉದ್ಧಾರವನ್ನು ಹೊಂದಿದ್ದಾರೆ.

## ಘೋಣ ತೀರ್ಥದ ಮಹಿಮೆ

**ಸೂತ:-** ದ್ವಿಜವರ್ಯರೇ! ಈಗ ಘೋಣ ತೀರ್ಥದ ಮಹಿಮೆಯನ್ನು ಹೇಳುತ್ತೇನೆ ಕೇಳಿರಿ. ಬ್ರಹ್ಮಹತ್ಯೆ, ಸುರಾಪಾನ, ವ್ಯಭಿಚಾರ, ಗುರುದ್ರೋಹ, ಪಿತೃವಧೆ ಮುಂತಾದ ದೊಡ್ಡ ದೊಡ್ಡ ದಾರುಣ ಪಾಪಗಳನ್ನು ಮಾಡಿದ ಪಾತಕಿಗಳೆಲ್ಲರೂ ಈ ಘೋಣ ತೀರ್ಥದಲ್ಲಿ ಸ್ನಾನ ಜಲಪಾನ ತರ್ಪಣಾದಿಗಳನ್ನು ಮಾಡಿದರೆ ಆ ಎಲ್ಲ ಪಾಪಗಳಿಂದ ಬಿಡುಗಡೆ ಹೊಂದುತ್ತಾರೆ. ಈ ವಿಷಯದಲ್ಲಿ ಹಿಂದಿನ ಕಾಲದ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳಿರಿ.

ಪೂರ್ವಕಾಲದಲ್ಲಿ ಮಹಾತೇಜಸ್ವಿಯಾದ ಗಾರ್ಗ್ಯ ಮುನಿಯು ಮಹಾತ್ಮಾ ದೇವಲರ ಬಳಿಗೆ ಬಂದು ನಮಸ್ಕರಿಸಿ ಕೇಳಿದನು- ''ಪೂಜ್ಯರೇ! ತಾವು ಶೇಷಾಚಲದಲ್ಲಿರುವ ಘೋಣ ತೀರ್ಥದ ಮಹಿಮೆಯನ್ನು ಹೇಳಿರಿ.''

**ದೇವಲ:-** ಹಿಂದೆ ಒಂದು ದಿನ ತುಂಬರು ಎಂಬ ದೇವಗಂಧರ್ವನು ತನ್ನ ಒಲವಿನ ಮಡದಿಗೆ ಹೇಳಿದನು- ''ಪ್ರಿಯೇ! ಮಾಘಮಾಸದಲ್ಲಿ ಸೂರ್ಯೋದಯ ಸಮಯದಲ್ಲಿ ಈ ತೀರ್ಥದ ತೀರದಲ್ಲಿ ಇರುವ ಭಗವಾನ್ ವಿಷ್ಣುವಿನ ಪೂಜೆಯನ್ನು ನಾನು ಉಷಃಕಾಲ ದಲ್ಲಿಯೇ ಇಲ್ಲಿ ಮಿಂದು ಮಾಡುತ್ತೇನೆ. ಅದಕ್ಕೆ ನೀನು ಎಲ್ಲ ಅನುಕೂಲ ಮಾಡಿಕೊಂಡು ಪೂಜೆಯ ಸಲಕರಣೆಗಳನ್ನು ಅಣಿಮಾಡು. ಗೋಮಯದಿಂದ ಆ ದೇವಾಲಯದ ಅಂಗಳವನ್ನು ಸಾರಿಸು. ಬತ್ತಿ ಮಾಡಿ ಭಗವಂತನೆದುರು ದೀಪ ಹಚ್ಚು. ಮಡಿಯಿಂದ ಸ್ನಾನಮಾಡಿ ಶ್ರೀನಿವಾಸನಿಗೆ ಸಮರ್ಪಿಸಲು ನೈವೇದ್ಯವನ್ನು ತಂದು ಇಡು. ಪೂಜೆಯ

ನಂತರ ನನ್ನೊಂದಿಗೆ ನೀನೂ ಪ್ರದಕ್ಷಿಣೆ ನಮಸ್ಕಾರವನ್ನು ಹಾಕು. ಭಗವಂತನ ಮಹಿಮೆಯನ್ನು ಬಣ್ಣಿಸುವ ಪುರಾಣ ಕಥೆಗಳನ್ನು ಕೇಳು. ಪ್ರತಿನಿತ್ಯವೂ ವಿಶೇಷತಃ ಈ ಮಾಘಮಾಸದಲ್ಲಿ ಪ್ರಾತಃ ಸ್ನಾನಮಾಡಿ ಭಗವಂತನ ಪಾದೋದಕವನ್ನು ಸ್ವೀಕರಿಸು. ಯಾವಾಗಲೂ ಆ ಜಗದೀಶ್ವರನ ನಾಮಸ್ಮರಣೆ ಮಾಡು. ವ್ರತ ನಿಯಮಗಳನ್ನು ಆಚರಿಸು. ಇದರಿಂದ ದೇವರ ಪ್ರೀತಿಯಾಗಿ ನಿನಗೆ ಸದ್ಗತಿ ದೊರೆಯುವದು.

ಪತಿಯ ಈ ಮಾತನ್ನು ಕೇಳಿ ವಿಪರೀತ ಕೋಪ ಬಂದಿತು ಆ ಗಂಧರ್ವ ರಮಣಿಗೆ. ಅವನ ಅಪ್ಪಣೆಗಳನ್ನು ಕೇಳಿ ಸಿಡಿದುಬಿದ್ದು ನುಡಿದಳು ಆ ಗಂಧರ್ವ ಕುಲದ ಹೆಣ್ಣು- ''ನನ್ನಿಂದ ಬೆಳಗಿನ ಚಳಿಯಲ್ಲಿ ಈ ತೀರ್ಥಗಳ ತಣ್ಣೀರಿನಲ್ಲಿ ಈ ನನ್ನ ಕೋಮಲ ಶರೀರವನ್ನು ಎದ್ದುವದೇ ಸಾಧ್ಯವಿಲ್ಲ. ಅದರಲ್ಲಿಯೂ ಚಳಿ ಹೆಪ್ಪುಗಟ್ಟಿದಂತಿರುವ ಈ ಮಾಘಮಾಸದಲ್ಲಿ ಪ್ರಾತಃಕಾಲದಲ್ಲಿ ಈ ತೀರ್ಥಸ್ನಾನ ನನ್ನಿಂದ ಅಶಕ್ಯ. ನಸುಕಿನಲ್ಲಿ ತಣ್ಣೀರಿನಲ್ಲಿ ಮೈತೊಳೆಯುವದರಿಂದ ಶೀತ ಬಾಧೆ ನನಗೆ ಆಗದೆ ಇರುತ್ತದೆಯೇ? ಚಳಿಯಿಂದ ನಾನು ನಡುಗಿ ಸತ್ತರೆ ನಿನಗೆ ನನ್ನನ್ನು ರಕ್ಷಿಸಲು ಸಾಧ್ಯ ಉಂಟೆ?

ಮಡದಿಯ ಈ ಮಾತುಗಳನ್ನು ಕೇಳಿ ಆ ತುಂಬರು ಗಂಧರ್ವನು ಮನಸ್ಸಿನಲ್ಲಿಯೇ ವಿಚಾರ ಮಾಡಿದ ''ಧರ್ಮ ವಿರುದ್ಧ ನಡೆಯುವ ಮಗ, ಗಂಡನಿಗೆ ಎದುರು ನಿಂತು ಕಟುವಾಗಿ ಮಾತನಾಡುವ ಹೆಂಡತಿ, ದೇವರನ್ನು ಮನ್ನಿಸದೇ ಇರುವ ರಾಜಾ ಈ ಮೂವರಿಗೂ ಶಾಪಕೊಟ್ಟು ದಂಡ ಹಾಕಬೇಕು'' ಎಂದು ನೀತಿ ವಚನವಿದೆ. ಅದರಂತೆ ಈಗ ಈ ನನ್ನ ಭಾರ್ಯೆಯನ್ನು ದಂಡಿಸುವದು ನನ್ನ ಕರ್ತವ್ಯ ಎಂದು ನಿರ್ಧರಿಸಿದನು ಮತ್ತು ತನ್ನ ಪತ್ನಿಗೆ ಶಾಪ ಕೊಟ್ಟನು.

''ಮೂರ್ಖಳೇ! ಸರ್ವ ಪಾಪವನ್ನು ಪರಿಹರಿಸುವ ಈ ಶೇಷಗಿರಿಯ ಶಿಖರದ ಮೇಲಿರುವ ಈ ಪವಿತ್ರ ತೀರ್ಥದಲ್ಲಿ ಸ್ನಾನವನ್ನು ಮಾಡುವದಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತಲಿರುವೆ. ಇದರಿಂದ ಧರ್ಮದ್ರೋಹ. ಮತ್ತು ಪತಿಯ ಆಜ್ಞಾ ಉಲ್ಲಂಘನೆ ಈ ಎರಡು ಮಹಾಪಾಪಗಳನ್ನು ನೀನು ಯಾವ ಸಂಕೋಚವೂ ಇಲ್ಲವೆ ಮಾಡುತ್ತಲಿರುವೆ. ಆದುದರಿಂದ ಈ ಘೋರ ಪಾಪಗಳ ಪ್ರಾಯಶ್ಚಿತ್ತ ರೂಪವಾಗಿ ನೀನು ಈ ಅರಳೀ ಗಿಡದ ಪದರಿನಲ್ಲಿ ಹುಳುವಾಗಿ ಬೀಳು'' ಎಂದು.

ತನ್ನ ಗಂಡ ಗಂಧರ್ವನು ಒಮ್ಮೆಲೆ ಕೋಪದಿಂದ ಕ್ಷುಭಿತನಾಗಿ ಶಾಪಾಕ್ಷರಗಳನ್ನು ಚಲ್ಲಿದ ಕೂಡಲೇ ತಲ್ಲಣಿಸಿ ಹೋದಳು ಆ ಗಂಧರ್ವ ಕುಲದ ಗೃಹಿಣಿ. ಶೋಕೋದ್ರೇಕದಿಂದ ಹೊರಳಿದಳು ಪತಿಯ ಪಾದ ಪಾಥೋಜಗಳ ಮೇಲೆ. ತನ್ನ ಸರ್ವಾಪರಾಧಗಳನ್ನು ಕ್ಷಮಿಸಬೇಕು ಎಂದು ಪರಿಪರಿಯಿಂದ ಬೇಡಿಕೊಂಡಳು. ಎಷ್ಟೆಂದರೂ ಮಡದಿ ಅಲ್ಲವೆ! ಕರುಣೆ ತುಂಬಿ ಬಂದಿತು ಆ ಗಂಡ ಗಂಧರ್ವನಿಗೆ. ಆಗಲೇ ಅವಳಿಗೆ ತಾನು ಇತ್ತ ಶಾಪದಿಂದ ಬಿಡುಗಡೆ ಆಗುವ ಅವಧಿಯನ್ನು ಹೇಳಿದ.

''ಇಂದ್ರಿಯಗಳನ್ನು ಗೆದ್ದ. ಮನಸ್ಸು ಅಂಕಿತದಲ್ಲಿ ಇದ್ದ ಅಗಸ್ತ್ಯಮುನಿ ಈ ಘೋಣ ತೀರ್ಥಕ್ಕೆ ಬರುವರು. ಅಂದು ಪೂರ್ಣಿಮಾ ತಿಥಿ. ಅರುಣೋದಯ ಸಮಯಕ್ಕೆ ಸ್ನಾನ ಮಾಡುವರು ಈ ಘೋಣ ತೀರ್ಥದಲ್ಲಿ. ತಮ್ಮ ಪ್ರಾತಃಕಾಲದ ಜಪ-ತಪ ಆಹ್ನೀಕಗಳನ್ನು ಮುಗಿಸಿ ಈ ತೀರ್ಥದ ತಡಿಯಲ್ಲಿ ಅಂಬರಚುಂಬಿಯಾಗಿ ನಿಂತುಕೊಂಡ ಈ ಅರಳೆ ಮರದ

ಅಡಿಯ ಹುಡಿಯ ಹಾಸಿನಲ್ಲಿ ಕುಳಿತು ಅಲ್ಲಿ ನೆರೆದ ತಮ್ಮ ಶಿಷ್ಯರಿಗೆ ಬಣ್ಣಿಸಿ ಹೇಳುವರು ಈ ಘೋಣ ತೀರ್ಥದ ಮಹಿಮೆಯನ್ನು.

ಆಗ ಅಲ್ಲಿಯೇ ಆ ಹೆಮ್ಮರದ ಹೊದರಿನಲ್ಲಿ ಹುಳುವಾಗಿ ಹೊರಳಾಡುತ್ತಿರುವ ನಿನ್ನ ಕಿವಿಗೆ ದೊಡ್ಡವರ ಬಾಯಿಂದ ಬಂದ ಈ ದಿವ್ಯ ತೀರ್ಥದ ಮಹಿಮೆಯು ಆಕಸ್ಮಿಕವಾಗಿ ಕೇಳಿ ಬರುವದು. ಆ ಪುಣ್ಯ ತೀರ್ಥದ ಮಹಾತ್ಮೆಯ ಶ್ರವಣದಿಂದ ನೀನು ಈಗ ಮಾಡಿದ ಪತಿಯ ವಿರೋಧ, ಧರ್ಮದ್ವೇಷದ ಪಾಪಗಳೆಲ್ಲವು ಆಗಲೇ ನಷ್ಟವಾಗಿ ಬಿಡುವವು. ಅನಂತರ ನೀನು ನಿನ್ನ ಮೊದಲಿನ ರೂಪದಿಂದ ನನ್ನ ಬಳಿಗೆ ಬರುವೆ'' ಎಂದು ಮಿದು ನುಡಿಗಳಿಂದ ಸಂತೈಸಿದನು.

ಪತಿಯ ಶಾಪದಂತೆ ಗರ್ವಿಷ್ಠಳಾದ ಆ ಗಂಧರ್ವ ಗೃಹಿಣಿಯು ಕ್ರಿಮಿರೂಪದಿಂದ ಆ ಅರಳಿಯ ಮರದ ಹೊದರಿನಲ್ಲಿ ಹೋಗಿಬಿದ್ದಳು. ಕೆಲವೊಂದು ಕಾಲದ ಬಳಿಕ ಮಹಾಮುನಿ ಅಗಸ್ತ್ಯರು ಶ್ರೀನಿವಾಸರ ದರ್ಶನಕ್ಕೆ ಆ ವೆಂಕಟಾಚಲಕ್ಕೆ ಬಂದರು. ಅಲ್ಲಿ ಸ್ವಾಮಿ ತೀರ್ಥಸ್ನಾನ, ವರಾಹ ದೇವರ ಪ್ರಣಾಮ. ಶ್ರೀನಿವಾಸದೇವರ ದರ್ಶನ ಪೂಜಾ ಪರಿವೇಷಣಾದಿಗಳನ್ನು ಮುಗಿಸಿಕೊಂಡು ಘೋಣತೀರ್ಥಕ್ಕೆ ಬಂದರು. ಶಿಷ್ಯ ಪರಿವಾರ ದೊಡನೆ ಘೋಣ ತೀರ್ಥದಲ್ಲಿ ಅವಗಾಹನ ಮಾಡಿ ಅರುಣೋದಯ ಸಮಯದಲ್ಲಿ ಸೂರ್ಯಾರ್ಘ್ಯವನ್ನು ಇತ್ತು ಸಹಸ್ರ ಗಾಯತ್ರಿ ಮಂತ್ರಗಳನ್ನು ಜಪಿಸಿ ತಮ್ಮ ಎಲ್ಲ ಪೂಜಾ ಆಹ್ನೀಕಗಳನ್ನು ಮುಗಿಸಿ ಆ ತೀರ್ಥದ ತೀರದಲ್ಲಿರುವ ಅಶ್ವತ್ಥ ವೃಕ್ಷದ ಬಳಿಗೆ ಬಂದರು.

ಅಷ್ಟರಲ್ಲಿ ಅವರ ಶಿಷ್ಯರೆಲ್ಲರು ಘೋಣ ತೀರ್ಥದಲ್ಲಿ ತಮ್ಮ ಸ್ನಾನ, ಸಂಧ್ಯೆ, ಪೂಜೆ ಆಹ್ನಿಕಗಳನ್ನೆಲ್ಲ ಮಾಡಿ ಮುಗಿಸಿ ಬಂದು ಕುಳಿತಿದ್ದರು. ತಮ್ಮ ಜಿಜ್ಞಾಸು ಶಿಷ್ಯ ಬಳಗಕ್ಕೆ ವೆಂಕಟಗಿರಿಯ ಹಾಗೂ ಘೋಣತೀರ್ಥದ ಮಹಾತ್ಮ್ಯೆಯನ್ನು ಅಗಸ್ತ್ಯರು ಗಂಭೀರ ವಾಣಿಯಲ್ಲಿ ನಿರೂಪಿಸಿದರು. ಆ ಅರಳೆ ಹೊದರಿನಲ್ಲಿ ಹುಳುವಾಗಿ ಹರಿದಾಡುವ ಆ ಗಂಧರ್ವಪತ್ನಿಯು ಅಗಸ್ತ್ಯರ ಬಾಯಿಂದ ಅದನ್ನು ವಿವರವಾಗಿ ಕೇಳಿದಳು. ಅದರಿಂದ ಆ ಗಂಧರ್ವಾಂಗನೆಗೆ ಆ ಕೀಳು ಕೀಟದ ಯೋನಿಯಿಂದ ಕೂಡಲೇ ಆಯಿತು ಬಿಡುಗಡೆ. ಅವಳ ಮೊದಲಿನ ಗಂಧರ್ವ ತರುಣಿಯ ರೂಪವು ಮರಳಿ ಬಂದಿತು ಆಗ ಅವಳು ಪಿಪ್ಪಲಗಿಡದ ಅಡಿಯಲ್ಲಿ ಕುಳಿತ ಮುನಿಮಹಾತ್ಮರ ಚರಣಾರವಿಂದಗಳಿಗೆ ವಂದಿಸಿದಳು ಭಕ್ತಿಯಿಂದ ಮತ್ತು ಬೇಡಿಕೊಂಡಳು-

''ಋಷಿಪುಂಗವರೆ! ನನ್ನನ್ನು ರಕ್ಷಿಸಿರಿ ರಕ್ಷಿಸಿರಿ. ಪತಿಯ ಮಾತನ್ನು ಮೀರಿದ ಪಾತಕಿ ನಾನು. ತೀರ್ಥಸ್ನಾನ ಮೊದಲಾದ ಧಾರ್ಮಿಕ ವಿಧಾನವನ್ನು ದೂಷಿಸಿದ ದುರುಳ ತರಳೆ ನಾನು. ಈ ಪಾಪಿನಿಯನ್ನು ತಾವು ಇಂದು ಉದ್ಧರಿಸಿದಿರಿ.''

**ಅಗಸ್ತ್ಯ:-** ''ಕಲ್ಯಾಣಿ! ನಿನ್ನ ಪತಿಯು ನಿಜವಾಗಿಯೂ ಧಾರ್ಮಿಕ. ಧರ್ಮಕಾರ್ಯವನ್ನು ವಿರೋಧಿಸಿದ ನಿನಗೆ ಅವನು ಹೀಗೆ ಶಾಪಕೊಟ್ಟಿದ್ದು ಉಚಿತವೇ ಸರಿ. ಪತಿಯನ್ನು ಧಿಕ್ಕರಿಸಿ ನಡೆಯುವ ಸತಿಯರು ಮುಗಿಲಿನಲ್ಲಿ ಚಿಕ್ಕೆ ಚಂದ್ರಾಮರು ಇರುವವರೆಗೆ ಘೋರ ನರಕದಲ್ಲಿ ಬೇಯಬೇಕಾಗುವದು. ಸ್ತ್ರೀಯರಿಗೆ ಸ್ವಾತಂತ್ರ್ಯವು ಸರ್ವಥಾ ಉಚಿತವಲ್ಲ. ಸ್ತ್ರೀಯರು ಪತಿಯ ಸೇವೆಯಿಂದ ಬರುವ ಪಾತಿವ್ರತ್ಯರೂಪ ಪುಣ್ಯದಿಂದಲೇ ವಿಷ್ಣುಲೋಕ ವನ್ನು ಹೊಂದುವರು. ಶ್ರೀಹರಿಯ ಮಂದಿರದಲ್ಲಿ ಪ್ರವೇಶ ಮಾಡಲು ಸ್ತ್ರೀಯರಿಗೆ ಬೇರೆ ಯಾವ ಧರ್ಮ ಕರ್ಮಾನುಷ್ಠಾನಗಳ ಆವಶ್ಯಕತೆಯು ಇರುವದಿಲ್ಲ.

**ಪತಿರ್ಮಾತಾ ಪತಿರ್ವಿಷ್ಣುಃ ಪತಿರ್ಬ್ರಹ್ಮಾ ಪತಿಶ್ಶಿವಃ ।**
**ಪತಿರ್ಗುರುಃ ಪತಿಸ್ತೀರ್ಥಮಿತಿಸ್ತ್ರೀಣಾಂ ವಿದುರ್ಬುಧಾಃ ॥**

"ಸ್ತ್ರೀಯರಿಗೆ ತಂದೆ ತಾಯಿ ಎಂದರೆ ಪತಿಯೇ. ಅವರ ಪಾಲಿಗೆ ಪತಿಯು ಸಾಕ್ಷಾತ್ ವಿಷ್ಣು ಸ್ವರೂಪ. ಪತಿಯೇ ಸ್ತ್ರೀಯರಿಗೆ ಬ್ರಹ್ಮ. ಪತಿಯೇ ಶಿವ. ಗಂಡನೇ ಗುರು. ಗಂಡನೇ ಎಲ್ಲ ತೀರ್ಥ ಎಂದು ಎಲ್ಲ ಸ್ತ್ರೀಯರು ತಿಳಿಯಬೇಕು. ಪತಿಯ ಸೇವೆಯನ್ನು ಬಿಟ್ಟು ಬೇರೆ ಬೇರೆ ಪುಣ್ಯಕಾರ್ಯಗಳಲ್ಲಿಯೂ ಧರ್ಮಕಾರ್ಯಗಳಲ್ಲಿಯೂ ಸ್ತ್ರೀಯು ಸದಾಸರ್ವದಾ ಆಸಕ್ತಳಾದರೆ ಅವಳಿಗೆ ಪುಣ್ಯವು ಇಲ್ಲ. ಯಾವ ಸ್ತ್ರೀಯು ತನ್ನ ಪತಿಯ ಪ್ರೇರಣೆಯನ್ನು ಅನುಸರಿಸಿ ನಡೆಯುವಳೋ, ಪತಿಯ ಬುದ್ಧಿಗೆ ಅಧೀನಳಾಗಿ ಇರುವಳೋ, ಪತಿಯ ಪಾದಜಲದಿಂದ ಅಭಿಷೇಕ ಮಾಡಿಕೊಳ್ಳುವಳೋ ಅವಳು ಪರಮಾತ್ಮನಿಗೆ ಅತ್ಯಂತ ಪ್ರಿಯಳಾಗುವಳು. ಆದುದರಿಂದ ನೀನು ಪತಿಯ ಆಜ್ಞೆಯನ್ನು ಉಲ್ಲಂಘಿಸಿದ ಮೂಲಕ ಇಷ್ಟು ದಿನ ಈ ಕೆಟ್ಟ ಕೀಳು ಕ್ರಿಮಿಕೀಟ ಕುಲದಲ್ಲಿ ಕೊಳೆಯಬೇಕಾಯಿತು. ಈ ಶಾಪದ ಅವಧಿಯಲ್ಲಿ ದುಃಖವನ್ನು ಅನುಭವಿಸಿದ ಬಳಿಕ ಈಗ ನಮ್ಮ ಬಾಯಿಂದ ಘೋಣತೀರ್ಥದ ಮಹಿಮೆಯನ್ನು ಪೂರ್ಣವಾಗಿ ಕೇಳಿದ ನಂತರ ನಿನಗೆ ಈ ಶಾಪದಿಂದ ವಿಮೋಚನವಾಯಿತು. ನಿನಗೆ ನಿನ್ನ ನಿಜರೂಪವು ಈಗ ಬಂದಿದೆ. ನೀನು ನಿನ್ನ ಪತಿಯ ಬಳಿಗೆ ಇನ್ನು ಹೋಗು. ಅವನ ಸೇವೆ ಮಾಡು. ಎಂದೂ ಪತಿಯ ಆಜ್ಞೆಯನ್ನು ಮೀರಬೇಡ." ಎಂದು ಹೇಳಿ ಆ ಗಂಧರ್ವ ಪತ್ನಿಯನ್ನು ಅಗಸ್ತ್ಯರು ಅನುಗ್ರಹಿಸಿ ಕಳಿಸಿಕೊಟ್ಟರು. ಈ ಘೋಣತೀರ್ಥದ ಮಹಿಮೆಯನ್ನು ಹೇಳಿ ಕೇಳಿದವರು ವಾಜಪೇಯ ಯಜ್ಞ ಮಾಡಿದ ಪುಣ್ಯವನ್ನು ಪಡೆಯುವರು.

## ವೆಂಕಟಗಿರಿಯಲ್ಲಿರುವ ಮುಖ್ಯ ತೀರ್ಥಗಳು

**ಋಷಿಗಳು:-** ಸೂತಾಚಾರ್ಯ! ಈ ವೆಂಕಟಾಚಲದಲ್ಲಿ ಇರುವ ಒಟ್ಟು ತೀರ್ಥಗಳು ಎಷ್ಟು? ಅವುಗಳಲ್ಲಿ ಮುಖ್ಯ ಮುಖ್ಯ ತೀರ್ಥಗಳು ಯಾವವು? ಆ ತೀರ್ಥಗಳಲ್ಲಿ ಜ್ಞಾನ ಕೊಡುವ ತೀರ್ಥಗಳು ಎಷ್ಟು? ಭಕ್ತಿ ವೈರಾಗ್ಯಗಳನ್ನು ಹುಟ್ಟಿಸುವ ತೀರ್ಥಗಳು ಎಷ್ಟು? ಮತ್ತು ಯಾವವು? ಅದರಲ್ಲಿಯೂ ಮೋಕ್ಷವನ್ನು ಕೊಡುವ ಶಕ್ತಿ ಯಾವುದಾದರು ತೀರ್ಥಕ್ಕೆ ಇದೆಯೇ?

**ಸೂತ ಪೌರಾಣಿಕ:-** ಶೌನಕಾದಿ ಮುನಿಗಳೇ! ಈ ಶ್ರೇಷ್ಠವಾದ ಶ್ರೀನಿವಾಸ ದೇವರ ಬೆಟ್ಟದಲ್ಲಿ ಒಟ್ಟು ಒಂದುನೂರಾ ಎಂಟು ಮುಖ್ಯ ತೀರ್ಥಗಳು ಇರುತ್ತವೆ. ಈ ಎಲ್ಲ ತೀರ್ಥಗಳು ಸ್ನಾನ ಪಾನ ಮಾಡುವವರಿಗೆ ಧರ್ಮಬುದ್ಧಿಯನ್ನು ಉಂಟುಮಾಡುತ್ತವೆ. ಈ ನೂರೆಂಟು ತೀರ್ಥಗಳಲ್ಲಿ ಅರವತ್ತು ತೀರ್ಥಗಳು ಭಕ್ತಿ ವೈರಾಗ್ಯವನ್ನು ಪ್ರದಾನ ಮಾಡುವವು. ಆದರೆ ಮೋಕ್ಷವನ್ನು ನೀಡುವ ತೀರ್ಥಗಳು ಮಾತ್ರ ಈ ವೆಂಕಟಾಚಲದಲ್ಲಿ ಆರು ತೀರ್ಥಗಳು ಉಂಟು. ಸ್ವಾಮಿ ಪುಷ್ಕರಣಿ, ಆಕಾಶಗಂಗಾ ಪಾಪನಾಶನ, ಪಾಂಡುತೀರ್ಥ, ಕುಮಾರಧಾರಾ, ಹಾಗೂ ತುಂಬರುತೀರ್ಥ, ಈ ಷಟ್‌ತೀರ್ಥಗಳು ಮೋಕ್ಷಪ್ರದವೆಂದು ಪ್ರಸಿದ್ಧವಾಗಿವೆ.

ಮಾನವರನ್ನು ಮೋಕ್ಷಕ್ಕೆ ಸಾಕ್ಷಾತ್ ಆಗಿ ಕರೆದೊಯ್ಯುವ ಇನ್ನೊಂದು ಬಗೆಯ ತೀರ್ಥಗಳು ಇರುತ್ತವೆ. ಅವುಗಳಿಗೆ ಜ್ಞಾನತೀರ್ಥ ಎನ್ನುವರು. ಮಹಾವಿಷ್ಣುವಿನ ವಿವಿಧ

ಲೀಲೆಗಳನ್ನು ಚಾರು ಚರಿತ್ರೆಗಳನ್ನು ರಂಜನೀಯವಾದ ರೀತಿಯಲ್ಲಿ ಬಗೆ ಬಗೆಯ ಬಗೆಗಳಲ್ಲಿ ಬಿತ್ತರಿಸುವ ಪುರಾಣ ಗ್ರಂಥಗಳು ಮೋಕ್ಷಪ್ರಾಪಕವಾದ ಜ್ಞಾನತೀರ್ಥಗಳು ಎನಿಸುತ್ತವೆ. ಲೋಕಪಾವನವಾದ ಶ್ರೀಹರಿಯ ಕಥೆಯನ್ನು ಸದಾಸರ್ವದಾ ಸ್ತ್ರೀ ಪುರುಷರು ಭಕ್ತಿಯಿಂದ ಶ್ರವಣ ಮಾಡಬೇಕು. ಅಷ್ಟು ಸಾಧ್ಯವಾಗದಿದ್ದರೆ ಪ್ರತಿದಿನವೂ ಒಂದೆರಡು ಗಳಿಗೆ ಅಥವಾ ಕೆಲವು ಕ್ಷಣಗಳಾದರೂ ಭಕ್ತಿಯಿಂದ ಶ್ರವಣ ಮಾಡಬೇಕು. ಇಂಥವರಿಗೆ ಎಂದೂ ಘೋರ ನರಕವಾಗಲಿ, ದುರ್ಗತಿಯಾಗಲಿ ಆಗುವದಿಲ್ಲ.

ಬಗೆಬಗೆಯ ಯಜ್ಞ ಹಾಗೂ ಬಹು ದ್ರವ್ಯವ್ಯಯ ಸಾಧ್ಯವಾದ ಕೆರೆ ಕಾಲುವೆ ಕಡಿಸುವದು, ಗ್ರಾಮದಾನ, ಭೂದಾನ, ಸುವರ್ಣದಾನ ಮೊದಲಾದವುಗಳಿಂದ ಬರುವಷ್ಟು ಪುಣ್ಯವನ್ನು ಕೇವಲ ಭಗವತ್‌ಕಥಾಪರವಾದ ಪುಣ್ಯ ಪುರಾಣಗಳ ಶ್ರವಣದಿಂದಲೇ ಪಡೆಯುವರು. ಪುರಾಣ ಶ್ರವಣ ಶ್ರೀಹರಿಯ ನಾಮ ಸಂಕೀರ್ತನ ಇವು ಎರಡು ಮಾನವನ ಪುಣ್ಯರೂಪ ವೃಕ್ಷಕ್ಕೆ ಬಿಟ್ಟ ಎರಡು ಅಮೃತ ಫಲಗಳು.

ಅಮೃತವನ್ನು ಪಾನ ಮಾಡಿದವನು ಒಬ್ಬನೇ ಅಜರನು, ಅಮರನೂ ಆಗುವನು. ಆದರೆ ವಿಷ್ಣುವಿನ ಕಥಾರೂಪವಾದ ಅಮೃತವನ್ನು ಪ್ರಾಶನ ಮಾಡಿದ ಪುಣ್ಯಾತ್ಮನು ತನ್ನ ಕುಟುಂಬವನ್ನು ಇಡೀ ಕುಲವನ್ನು ಅಜರಾಮರವಾಗಿ ಮಾಡುವನು. ಪುರಾಣವನ್ನು ಓದಿ ಅರ್ಥ ತಿಳಿದು ಚೆನ್ನಾಗಿ ಹೇಳಬಲ್ಲ ವಿದ್ವಾಂಸನು ಮುದುಕನಿರಲಿ, ತರುಣನಿರಲಿ, ಹುಡುಗನಿರಲಿ, ದಟ್ಟದರಿದ್ರನೇ ಇರಲಿ, ಅವನು ನಿಜವಾಗಿಯೂ ಪುಣ್ಯಾತ್ಮ. ಎಲ್ಲರಿಂದಲೂ ಪೂಜನೀಯ. ಸರ್ವರಿಂದಲೂ ವಂದನೀಯ.

ಪುರಾಣವನ್ನು ಪ್ರವಚನ ಮಾಡುವ ಪಂಡಿತನು ವ್ಯಾಸ ಪೀಠದ ಮೇಲೆ ಕುಳಿತು ಕೊಂಡು ಬಳಿಕ ಯಾರು ಬಂದರೂ ತನ್ನ ಆಸನ ಬಿಟ್ಟು ಏಳಬಾರದು. ಆ ವ್ಯಾಸಾಸನದ ಮೇಲೆ ಕುಳಿತು ದೇವರ ಹೊರತು ಬೇರೆ ಯಾರಿಗೂ ನಮಸ್ಕಾರ ಮಾಡಬಾರದು. ಪುರಾಣ ಹೇಳುವವರು ಪುರಾಣ ಪ್ರವಚನವನ್ನು ಕೆಟ್ಟ ಖೊಟ್ಟಿ ದುಷ್ಟ ಮನುಷ್ಯರ ಮನೆಯಲ್ಲಿ ಹೇಳಬಾರದು. ಹಿಂಸಕ ಜಂತುಗಳು ಸುತ್ತುವರೆದ ಮನೆಯಲ್ಲಿಯೂ ಪುರಾಣವನ್ನು ಹೇಳಬಾರದು. ಒಳ್ಳೆ ಊರು, ಸಾತ್ವಿಕ ಜನರು ಇರುವ ಸ್ಥಳ, ಉತ್ತಮಕ್ಷೇತ್ರ ನದೀತೀರ ಮುಂತಾದ ಪ್ರದೇಶಗಳಲ್ಲಿ ಪುರಾಣಗಳ ಪಾರಾಯಣ ಪ್ರವಚನ ಮುಂತಾದವುಗಳನ್ನು ನಡೆಸಬೇಕು.

## ಪುರಾಣಗಳನ್ನು ಕೇಳುವ ರೀತಿ

ಪುರಾಣ ಶ್ರವಣ ಮಾಡುವವರು ಭಕ್ತಿಯಿಂದ ಕೇಳಬೇಕು. ಪುರಾಣವಾಚನ ನಡೆದಾಗ ಮಾತನಾಡಬಾರದು. ಮೌನವಾಗಿ ಇರಬೇಕು. ಎಲೆ ಅಡಿಕೆಯನ್ನು ತಿನ್ನುತ್ತ ಪುರಾಣವನ್ನು ಕೇಳಿದರೆ ನರಕ ಪ್ರಾಪ್ತಿ. ಪುರಾಣ ಕೇಳುವವರಕ್ಕಿಂತ ಎತ್ತರ ಆಸನದಲ್ಲಿ ಕುಳಿತು ಪುರಾಣ ಕೇಳುವವರು ಮುಂದೆ ಕಾಗೆ, ಗೂಗೆಯಾಗಿ ಹುಟ್ಟುವರು. ವೀರಾಸನ ಹಾಕಿ ಅಥವಾ ಸಿಂಹಾಸನ ಮೇಲೆ ಕುಳಿತು ಭಗವತ್ ಕಥೆಯನ್ನು ಕೇಳುವವರು ಅಂಕುಡೊಂಕಾದ ಮರಗಳಾಗಿ ಹುಟ್ಟುವರು. ಪುರಾಣಿಕನಿಗೆ ನಮಸ್ಕಾರ ಮಾಡದೆ ಕೇಳುವವರು ವಿಷವೃಕ್ಷವಾಗಿ ಜನಿಸುವರು. ಆರೋಗ್ಯವು ಸರಿ ಇದ್ದರೂ ಮಲಗಿಕೇಳುವವರು ಅಜಗರ ಹಾವಾಗಿ ಹರಿದಾಡುವರು.

ಪುರಾಣ ಹೇಳುವ ಆಚಾರ್ಯರನ್ನು ಮತ್ತು ಸುಂದರವಾದ ಭಗವತ್ ಕತೆಯನ್ನು ನಿಂದೆ ಮಾಡುವವರು ನಾಯಿಯಾಗಿ ಹುಟ್ಟುವರು. ಪುರಾಣ ನಡೆದಾಗ ಪ್ರವಚನಕಾರನನ್ನು

ಕೆಣಕಿ ವಾದ-ವಿವಾದವನ್ನು ದುರ್ಬುದ್ಧಿಯಿಂದ ನಡೆಸಿದರೆ ಕತ್ತೆಯಾಗಿ ಜನಿಸುವರು. ಪುರಾಣ ಪ್ರವಚನ ಪಾರಾಯಣ, ಪಠಣಾದಿ ಪುಣ್ಯಕಾರ್ಯಗಳಿಗೆ ಅಡ್ಡಿ ಒಡ್ಡಿ ವಿಘ್ನವನ್ನು ಉಂಟುಮಾಡುವವರು ಬಹುವರುಷ ನರಕದಲ್ಲಿ ಕಷ್ಟಪಟ್ಟು ಕೊನೆಗೆ ಹಳ್ಳಿಗಾಡಿನಲ್ಲಿ ಹಂದಿಯಾಗಿ ಹುಟ್ಟುವರು.

ಪುರಾಣ ಪಂಡಿತನಿಗೆ ಕೂಡಲು ಕಂಬಳಿ, ಕೃಷ್ಣಾಜಿನ, ವಸ್ತ್ರ, ಸೀದಾಸಾಮಗ್ರಿ, ದಕ್ಷಿಣೆ ಮುಂತಾದವುಗಳನ್ನು ಕೊಡುವವರು ಮುಂದಿನ ಜನ್ಮದಲ್ಲಿ ಜ್ಞಾನ ಸಂಪನ್ನರಾಗಿ ಭೋಗ ಭಾಗ್ಯಗಳನ್ನು ಈ ಲೋಕದಲ್ಲಿ ಅನುಭವಿಸಿ ಮುಂದೆ ಮೋಕ್ಷಪದವನ್ನು ಹೊಂದುವರು.

ಈ ರೀತಿಯಾಗಿ ವೆಂಕಟಗಿರಿಯ ಮಹಿಮೆಯನ್ನು ಹಾಗೂ ಪುರಾಣ ಶ್ರವಣದ ಪುಣ್ಯ ಪದ್ಧತಿಗಳನ್ನು ಕೇಳಿ ಅಲ್ಲಿ ನೆರೆದ ಎಲ್ಲ ಋಷಿಮುನಿಗಳು ಪುರಾಣ ಪ್ರವಚನಕಾರರಲ್ಲಿಯೇ ಅತ್ಯಂತ ಶ್ರೇಷ್ಠತಮ ಎನಿಸಿದ ಸೂತ ಮುನಿಯನ್ನು ಯಥಾ ಯೋಗ್ಯವಾಗಿ ಸತ್ಕರಿಸಿ ಗೌರವಾದರಗಳನ್ನು ಸಮರ್ಪಿಸಿದರು. ಇದರಿಂದ ವಕ್ತಾರ ಶ್ರೋತಾರರಿಬ್ಬರು ಶಾಂತಿ ಸಂತೃಪ್ತಿಯನ್ನು ಹೊಂದಿದರು.

**ಋಷಿಗಳು:-** ಸೂತ ಮಹೋದಯರೇ! ನಾವು ಈಗ ಕಟಾಹ ತೀರ್ಥದ ಮಾಹಾತ್ಮ್ಯವನ್ನು ಕೇಳ ಬಯಸಿದ್ದೇವೆ.

**ಸೂತಾಚಾರ್ಯ:-** ಮುನೀಶ್ವರರೇ! ಈ ಕಟಾಹ ತೀರ್ಥವು ಜಗತ್ತಿನಲ್ಲಿ ಸಂಪತ್ತಿಯನ್ನು ನೀಡುವ ತೀರ್ಥ ಎಂದು ಪ್ರಸಿದ್ಧವಾಗಿದೆ. ಈ ತೀರ್ಥದಲ್ಲಿ ಸ್ನಾನ ಮಾಡುವದರಿಂದ ಸರ್ವ ಪಾಪಗಳು ವಿನಾಶವಾಗುವದಲ್ಲದೆ ಐಶ್ವರ್ಯವೂ ಲಭಿಸುವದು ಸ್ನಾನ ಮಾಡಿದವರಿಗೆ. ಇದರ ಸ್ನಾನದಿಂದ ಕೆಟ್ಟ ಕನಸುಗಳು ಎಂದೂ ಬೀಳಲಾರವು. ಹಾಗೂ ಮಾನವರು ಕೈಕೊಂಡ ಕಾರ್ಯಗಳೆಲ್ಲವು ತಾವಾಗಿ ಸಾಂಗವಾಗಿ ನೆರವೇರುವವು. ಮನಸ್ಸಿಗೆ ಪರಮ ಶಾಂತಿ ದೊರೆಯುವದು. ಈ ಕಟಾಹ ತೀರ್ಥದಲ್ಲಿ ಸ್ನಾನ ಮಾಡಿ "ಕೇಶವಾಯ ನಮಃ ನಾರಾಯಣಾಯ ನಮಃ ಮಾಧವಾಯ ನಮಃ" ಎಂದು ಮೂರು ಬಾರಿ ಈ ತೀರ್ಥಜಲವನ್ನು ಆಚಮನ ಮಾಡಿದರೆ ಭಗವಂತನು ಪರಮ ಪ್ರೀತನಾಗುವನು. ಹಾಗೂ "ಓಂ ನಮಃ ವೆಂಕಟೇಶಾಯ ಎಂಬ ವೆಂಕಟೇಶ್ವರನ ಅಷ್ಟಾಕ್ಷರ ಮಂತ್ರದಿಂದ ಅಭಿಮಂತ್ರಣ ಮಾಡಿ ಈ ತೀರ್ಥಜಲವನ್ನು ಪ್ರಾಶನ ಮಾಡಿದರೆ ಇಹದಲ್ಲಿ ಭೋಗ ಪರದಲ್ಲಿ ಮೋಕ್ಷ ಇವು ಎರಡು ಮಾನವನಿಗೆ ಕಟ್ಟಿಟ್ಟಂತೆ. ಸ್ವಾಮಿ ಪುಷ್ಕರಣಿಯ ಸ್ನಾನ. ವರಾಹ ವೆಂಕಟೇಶ್ವರ ದರ್ಶನ ಮತ್ತು ಕಟಾಹ ತೀರ್ಥದ ಜಲಪಾನ ಇವು ಮೂರು ಎಲ್ಲ ಲೋಕಗಳಲ್ಲಿಯೂ ದುರ್ಲಭ.

## ವೆಂಕಟಾಚಲದ ಮಹಿಮೆ. ಅರ್ಜುನನ ತೀರ್ಥಯಾತ್ರೆ

**ಸೂತ:-** ಶೌನಕರೇ! ನಾನು ಈಗ ನಿಮಗೆ ಪಾಪ ನಾಶಕವಾದ ಒಂದು ಇತಿಹಾಸವನ್ನು ಹೇಳುತ್ತೇನೆ ಕೇಳಿರಿ. ಇದು ದ್ವಾಪರಯುಗದಲ್ಲಿ ನಡೆದ ಘಟನೆ. ಕುಂತಿಯ ಪುತ್ರರಾದ ಐದು ಜನ ಪಾಂಡವರು ಸ್ವಯಂವರದಲ್ಲಿ ಮತ್ಸ್ಯಭೇದನ ಮಾಡಿ ದ್ರೌಪದಿಯನ್ನು ವಿವಾಹ ಮಾಡಿಕೊಂಡು ಹಸ್ತಿನಾವತಿಗೆ ಹೋದರು. ಅನಂತರ ಭೀಷ್ಮರ ಸಲಹೆಯಂತೆ ಧೃತರಾಷ್ಟ್ರನು ಅವರನ್ನು ಆದರದಿಂದ ಬರಮಾಡಿಕೊಂಡು ಪಾಂಡವರಿಗೆ ಅರ್ಧರಾಜ್ಯವನ್ನು ಕೊಟ್ಟನು. ಖಾಂಡವ ಪ್ರಸ್ಥ (ಈಗಿನ ದಿಲ್ಲಿ) ಎಂಬ ನಗರವನ್ನು ಕೊಡಮಾಡಿದನು. ಧೃತರಾಷ್ಟ್ರ ಭೀಷ್ಮ

ಮುಂತಾದವರ ಅನುಮತಿಯಿಂದ ಧರ್ಮ, ಭೀಮ, ಅರ್ಜುನ, ನಕುಲ, ಸಹದೇವ ಈ ಪಂಚಪಾಂಡವರು ತಾಯಿ ಕುಂತಿ, ಮಡದಿ ದ್ರೌಪದಿಯೊಂದಿಗೆ ಅಲ್ಲಿಗೆ ಹೋಗಿ ಇಂದ್ರಪ್ರಸ್ಥ ಎಂಬಲ್ಲಿ ತಮ್ಮ ರಾಜಧಾನಿಯನ್ನು ಮಂಡಿಸಿಕೊಂಡು ನ್ಯಾಯ, ನೀತಿ ನಿಷ್ಠರಾಗಿ ಧರ್ಮಶಾಸನ ಗೈಯುತ್ತ ವಾಸಿಸಿದರು.

ಅಲ್ಲಿದ್ದಾಗಲೇ ಶ್ರೀಕೃಷ್ಣನ ಬೆಂಬಲದಿಂದ ರಾಜಸೂಯಯಾಗವನ್ನು ಮಾಡಿ ಪ್ರಪಂಚದಲ್ಲಿ ರಾಜಾಧಿರಾಜರಿಂದ ಪರಿಪೂಜಿತರಾದರು. ಪಾಂಡವರು ಇಂದ್ರಪ್ರಸ್ಥ ದಲ್ಲಿದ್ದಾಗ ಒಂದು ದಿನ ನಾರದ ಮುನಿಯು ಆಕಸ್ಮಿಕವಾಗಿ ಆಗಮಿಸಿದರು.

''ಪಂಚಪಾಂಡವರ ಏಕಮಾತ್ರ ಪತ್ನಿಯಾದ ದ್ರೌಪದಿಯು ಒಂದೊಂದು ವರುಷ ಒಬ್ಬೊಬ್ಬರ ಮನೆಯಲ್ಲಿ ಪತ್ನಿಯಾಗಿ ಇರಬೇಕು. ಅವಳು ಒಬ್ಬರ ಮನೆಯಲ್ಲಿ ಆ ಪತಿಯೊಡನೆ ಏಕಾಂತದಲ್ಲಿದ್ದಾಗ ಇನ್ನೊಬ್ಬರು ಬಂದು ನೋಡಿದರೆ ಅವರು ಒಂದು ವರುಷ ತೀರ್ಥಯಾತ್ರೆಯನ್ನು ಮಾಡಬೇಕು.'' ಎಂದು ಆ ಐವರೂ ಪಾಂಡವರ ಕಡೆಯಿಂದ ನಾರದರು ಪ್ರತಿಜ್ಞೆಯನ್ನು ಮಾಡಿಸಿದರು. ಆ ತಮ್ಮ ಪ್ರತಿಜ್ಞೆಯನ್ನು ಪರಿಪಾಲಿಸುತ್ತ ಪ್ರಜೆಗಳನ್ನು ತಂದೆಯಂತೆ ರಕ್ಷಿಸುತ್ತ ಬಹುಕಾಲ ಸುಖದಿಂದ ಇಂದ್ರಪ್ರಸ್ಥದಲ್ಲಿ ವಾಸಿಸಿದರು ಪಾಂಡವರು.

ಒಂದು ದಿನ ಒಬ್ಬ ಬ್ರಾಹ್ಮಣನು ಅರಮನೆಯ ಅಂಗಳದಲ್ಲಿ ನಿಂತು ''ಅಯ್ಯೋ ನನ್ನ ಹಸುಗಳನ್ನೆಲ್ಲ ಕಳ್ಳರು ಕದ್ದೊಯ್ದರು. ನೀವು ರಾಜರಾಗಿ ಏನು ಮಾಡುತ್ತಿದ್ದೀರಿ? ನೀವು ಐದು ಜನ ಇದ್ದರೂ ನಮ್ಮ ಗೋಧನದ ಕಳವು ನಡೆಯುತ್ತಲೇ ಇದೆ. ನನಗೆ ಯಾರೂ ರಕ್ಷಕರಿಲ್ಲವೆ?'' ಎಂದು ಮುಂತಾಗಿ, ರೇಗಿ, ಕೂಗಿ ಕರೆಯತೊಡಗಿದನು. ಆಗ ಅದನ್ನು ಕೇಳಿ ಅರ್ಜುನನು ಅಲ್ಲಿಗೆ ಧಾವಿಸಿ ಬಂದನು. ಸಿಟ್ಟಿನ ಸಿಡಿಲುಗುದುರೆ ಏರಿಬಂದ ಆ ಬ್ರಾಹ್ಮಣನನ್ನು ಸಂತೈಸಿದನು. ಬಿಲ್ಲು ಬಾಣ ತರಬೇಕೆಂದು ಶಸ್ತ್ರಾಗಾರವನ್ನು ಪ್ರವೇಶಿಸಿದನು. ಆ ಶಸ್ತ್ರಾಗಾರಕ್ಕೆ ಧರ್ಮರಾಜನ ಅರಮನೆಯಲ್ಲಿಯೇ ಹಾದು ಹೋಗಬೇಕಾಗುತ್ತಿತ್ತು. ಅರ್ಜುನನು ಅದಕ್ಕಾಗಿ ಶಸ್ತ್ರಾಗಾರ ಪ್ರವೇಶಿಸಿದಾಗ ದ್ರೌಪದಿ ಧರ್ಮರಾಜನು ಮಾತನಾಡುತ್ತ ಕುಳಿತಿದ್ದರು. ಅರ್ಜುನನು ತನ್ನ ಬಿಲ್ಲು ಬಾಣ ತಂದು ಕಳ್ಳರನ್ನು ಬೆನ್ನಟ್ಟಿ ಹೊಡೆದು ಓಡಿಸಿ, ನಿಗ್ರಹಿಸಿ, ಆ ಬ್ರಾಹ್ಮಣನ ಹಸುಗಳನ್ನು ಮರಳಿ ತಂದು ಅವನ ಮನೆಗೆ ಒಯ್ದು ಮುಟ್ಟಿಸಿದನು.

ಅನಂತರ ಅರ್ಜುನನು ''ನಾರದರು ನಮ್ಮಿಂದ ಮಾಡಿಸಿದ ಪ್ರತಿಜ್ಞೆಯನ್ನು ಅನಿವಾರ್ಯವಾಗಿ ಆ ಬ್ರಾಹ್ಮಣನ ಸಲುವಾಗಿ ನಾನಾಗಿಯೇ ಭಂಗ ಮಾಡಬೇಕಾಯಿತು. ದ್ರೌಪದಿ ಧರ್ಮರಾಜರಿದ್ದಲ್ಲಿಗೆ ಬಂದು ನನ್ನ ಗಾಂಡೀವ ಧನುಸ್ಸನ್ನು ತೆಗೆದುಕೊಂಡು ಹಸುಗಳನ್ನು ಮರಳಿ ತಂದೆ. ಆದರೆ ಪ್ರತಿಜ್ಞಾ ಭಂಗದ ಪ್ರಾಯಶ್ಚಿತ್ತರೂಪವಾಗಿ ಒಂದು ವರುಷ ನಾನು ತೀರ್ಥಯಾತ್ರೆಗೆ ಹೊರಡುತ್ತೇನೆ'' ಎಂದು ನುಡಿದ.

ಅದಕ್ಕೆ ಧರ್ಮರಾಜನು ''ಪ್ರಜೆಯ ರಕ್ಷಣೆಗಾಗಿ ನೀನು ನಾವಿಬ್ಬರೂ ಇದ್ದಲ್ಲಿಗೆ ಪ್ರವೇಶ ಮಾಡಿದ್ದೀಯ. ಇದು ಪ್ರತಿಜ್ಞಾಭಂಗ ಆಗುವದಿಲ್ಲ. ನೀನು ಒಳಗೆ ಬಂದು ಬಿಲ್ಲು ಬಾಣ ತೆಗೆದುಕೊಂಡು ಆ ಹಸುಗಳನ್ನು ರಕ್ಷಿಸದಿದ್ದರೆ, ಉದಾಸೀನ ಮಾಡಿ ಹಾಗೆ

ಕಳ್ಳರನ್ನು ಬಿಟ್ಟಿದ್ದರೆ ನಿನಗೆ ಬ್ರಹ್ಮಹತ್ಯಾ ದೋಷವು ಬರುತ್ತಿತ್ತು. ಈಗ ನೀನು ಆ ಚೋರರಿಗೆ ತಕ್ಕ ಶಾಸನ ಮಾಡಿದ್ದರಿಂದ ಮತ್ತು ಆ ಬ್ರಾಹ್ಮಣನಿಗೆ ಹಸುವನ್ನು ಮರಳಿ ಕೊಡಿಸಿದ್ದರಿಂದ ಪುಣ್ಯಕಾರ್ಯವನ್ನೇ ಮಾಡಿದಂತಾಗಿದೆ. ಪ್ರಜಾಪಾಲನ, ಗೋರಕ್ಷಣ, ಬ್ರಾಹ್ಮಣ ರಕ್ಷಣ, ದುಷ್ಟ ಶಾಸನ ಮುಂತಾದ ರಾಜಧರ್ಮವನ್ನು ಪರಿಪಾಲಿಸಿ ಪ್ರಭೂತ ಪುಣ್ಯವನ್ನು ಸಂಪಾದಿಸಿದ ನಿನಗೆ ಪ್ರತಿಜ್ಞಾಭಂಗ ದೋಷವೇ ಇಲ್ಲ. ಆದುದರಿಂದ ನೀನು ತೀರ್ಥಯಾತ್ರೆಗೆ ಹೋಗುವ ಕಾರಣವಿಲ್ಲ'' ಎಂದು ಪರಿಪರಿಯಿಂದ ತಿಳಿಸಿ ಹೇಳಿದನು.

ಆದರೆ ಅರ್ಜುನನು ಮಾತ್ರ ''ಕ್ಷತ್ರಿಯನಾದ ನನಗೆ ಪ್ರತಿಜ್ಞಾ ಪಾಲನವು ಮುಖ್ಯ ಕರ್ತವ್ಯ. ದುಷ್ಟ, ಚೋರ ಶಿಕ್ಷಣ, ಗೋಬ್ರಾಹ್ಮಣ ರಕ್ಷಣ ರೂಪ ಕರ್ತವ್ಯವನ್ನು ಮಾಡಿದ ಮಾತ್ರಕ್ಕೆ ನನ್ನ ಪ್ರತಿಜ್ಞಾಭಂಗ ದೋಷವು ಪರಿಹಾರವಾಗುವದೆಂತು? ನನಗೆ ತೀರ್ಥಯಾತ್ರೆ ಮಾಡಲು ಎಲ್ಲ ಪುಣ್ಯ ಕ್ಷೇತ್ರಗಳನ್ನು ಸಂದರ್ಶಿಸಲು, ಎಲ್ಲ ಪಾವನ ತೀರ್ಥಗಳಲ್ಲಿ ಮೀಯಲು ಅತೀವ ಉತ್ಕಂಠೆ ಎಂದಿನಿಂದಲೂ, ಆದಕ್ಕಾಗಿ ತಾವು ದಯಮಾಡಿ ಅನುಮತಿಕೊಡಿ. ನನ್ನ ತೀರ್ಥಯಾತ್ರಾ ಪ್ರಯಾಣಕ್ಕೆ ಅಪ್ಪಣೆ ನೀಡಿರಿ'' ಎಂದು ಬಹು ವಿಧವಾಗಿ ಬಿನ್ನವಿಸಿಕೊಂಡು ಕುಂತಿ ದ್ರೌಪದಿಯರ ಅನುಮೋದನೆಯನ್ನು ಹೊಂದಿ ತೀರ್ಥಯಾತ್ರೆಗೆ ಹೊರಟರು.

ಮಧ್ಯಮ ಪಾಂಡುನಂದನನಾದ ಆ ಫಲ್ಗುಣನು ಮೊದಲು ಗಂಗಾ ತೀರಕ್ಕೆ ಬಂದನು. ಅಲ್ಲಿಂದ ಅದರ ದಂಡೆಗುಂಟ ಪ್ರಯಾಣಿಸುತ್ತ ಹರಿದ್ವಾರ, ಪ್ರಯಾಗ, ಕಾಶಿ ಮುಂತಾದ ತೀರ್ಥ ಕ್ಷೇತ್ರಗಳನ್ನು ಸಂದರ್ಶಿಸುತ್ತ ಉದ್ದುದ್ದ ಹೆದ್ದೆರೆಗಳಿಂದ ಘೂರ್ಮಿಸುವ ದಕ್ಷಿಣ ತೀರಕ್ಕೆ ಬಂದು ತಲುಪಿದನು. ಅಲ್ಲಿಂದ ಪುರುಷೋತ್ತಮ ತೀರ್ಥ, ಸಿಂಹಾಚಲ ಕ್ಷೇತ್ರ, ದರ್ಶನ ಮಾಡಿಕೊಂಡನು. ಅಲ್ಲಿಂದ ಹೊರಟು ಗೋದಾವರಿ ಸ್ನಾನಮಾಡಿ ಮಲಾಪಹಾ ನದಿಯನ್ನು ದಾಟಿ ಕೃಷ್ಣವೇಣೀ ನದಿ ತೀರಕ್ಕೆ ಬಂದನು. ಶ್ರೀಶೈಲ ಪರ್ವತಕ್ಕೆ ಹೋಗಿ ಪರಮೇಶ್ವರನ ದರ್ಶನ ಮಾಡಿಕೊಂಡು ಪಿನಾಕಿನೀ ನದಿಯನ್ನು ದಾಟಿ ವೆಂಕಟಾಚಲ ಪರ್ವತಕ್ಕೆ ಆಗಮಿಸಿದನು.

ಭಗವಾನ್ ನಾರಾಯಣನ ಪ್ರೀತಿಯ ನಿವಾಸ ಸ್ಥಳವಾದ ಆ ವೆಂಕಟಗಿರಿಯ ಪರ್ವತ ಶಿಖರದಲ್ಲಿ ಮಂಡಿಸಿದ ಶ್ರೀನಿವಾಸ ದೇವರನ್ನುಹಾಗೂ ವರಾಹದೇವರನ್ನು ಸ್ವಾಮಿ ಪುಷ್ಕರಣಿಯಲ್ಲಿ ಸ್ನಾನಮಾಡಿಕೊಂಡು ಪೂಜೆಗೈದು ಸೇವಿಸಿ ಕೃತಕೃತ್ಯನಾದನು. ಶ್ರೀನಿವಾಸ ದೇವರ ದರ್ಶನದಿಂದ ಅವನಿಗೆ ತನ್ನ ತೀರ್ಥಯಾತ್ರೆಯ ಶ್ರಮವೆಲ್ಲವೂ ಪರಿಹಾರವಾದಂತೆ ಎನಿಸಿತು. ಅವನು ಆ ವೆಂಕಟಗಿರಿಯಲ್ಲಿ ಕೆಲವು ಕಾಲ ಇದ್ದು ಅಲ್ಲಿಯ ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿ ಭಕ್ತಿಯಿಂದ ವರಾಹ ದೇವರ ಆರಾಧನೆ ಶ್ರೀನಿವಾಸ ದೇವರ ಉಪಾಸನೆ ಎರಡನ್ನು ಮಾಡಿದನು. ಅನಂತರ ಆ ವೆಂಕಟಾಚಲದ ಶಿಖರದಿಂದ ಕೆಳಗೆ ಇಳಿದು ಸುವರ್ಣಮುಖರಿ ಎಂಬ ನದಿಯನ್ನು ನೋಡಿದನು. ಮಹರ್ಷಿ ಅಗಸ್ತ್ಯ ಮುನಿಗಳು ಕರೆ ತಂದ ಆ ನದಿಯಲ್ಲಿ ಸ್ನಾನ ಮಾಡಿ ಪರಿಪೂತನಾದನು.

## ಭರದ್ವಾಜರ ಆಶ್ರಮಕ್ಕೆ ಅರ್ಜುನನ ಪ್ರಯಾಣ

**ಸೂತ:-** ಹೀಗೆ ಎಲ್ಲ ತೀರ್ಥಗಳ ದರ್ಶನ ಮಾಡಿಕೊಂಡು ಬಂದ ಅರ್ಜುನನಿಗೆ ಸುವರ್ಣಮುಖರೀ ನದಿಯನ್ನು ನೋಡಿದಾಗ ಅತ್ಯಧಿಕ ಆನಂದವಾಯಿತು. ಸುವರ್ಣ

ಮುಖರೀ ನದಿಯ ಪೂರ್ವ ತೀರದಲ್ಲಿ ಒಂದು ದೊಡ್ಡ ಗುಡ್ಡ. ಕಾಲಹಸ್ತಿ ಎಂದು ಅದಕ್ಕೆ ಹೆಸರು. ಸುವರ್ಣಮುಖರಿಯಲ್ಲಿ ಸ್ನಾನಮಾಡಿ ಆ ಬೆಟ್ಟವನ್ನು ಹತ್ತಿದ ಪಾರ್ಥ. ಆ ಶೈಲ ಶಿಖರದ ಸೀಮೆಯಲ್ಲಿ ಕಾಲ ಹಸ್ತೀಶ್ವರ ಎಂಬ ಮಹಾದೇವರ ನಿತ್ಯ ಸನ್ನಿಧಾನ, ಮಹಾಮಾತೆ ಪಾರ್ವತಿಯು ಪತಿಯೊಡನೆ ಅಲ್ಲಿಯೇ ನೆಲೆಸಿದ್ದಾಳೆ. ಆ ಜಗತ್ ಕಾರಣ ದಂಪತಿಗಳನ್ನು ಭಕ್ತಿಯಿಂದ ಪೂಜಿಸಿ ಕೃತಾರ್ಥನಾದ ಆ ಪಾರ್ಥ.

ನಂತರ ಕುತೂಹಲದಿಂದ ಅವನು ಬೆಟ್ಟದ ನೆತ್ತಿಯ ಮೇಲೆ ಆಚೆ ಈಚೆ ತಿರುಗಾಡಿದ. ಅಲ್ಲಿಯ ಶೈಲಶ್ರೇಣಿಯ ಏಕಾಂತ ವನಾಂತರಗಳಲ್ಲಿ ಅನೇಕ ಶಿವಯೋಗಿಗಳ ದರ್ಶನವು ಅರ್ಜುನನಿಗೆ ಆಯಿತು. ಅಲ್ಲಿಯ ನಿತಾಂತನೀರವ ವಿಜನ ವನಾಂತರಗಳಲ್ಲಿ ಅನೇಕ ಮುನಿಗಳು ಅಬ್ಭಕ್ಷ ವಾಯುಭಕ್ಷರಾಗಿ, ಕೆಲವರು ತಪಸ್ಸನ್ನು ಆಚರಿಸುತ್ತಿದ್ದರು. ಹಲವರು ತರಗೆಲೆಗಳನ್ನು ತಿಂದು ರವಿಯ ಕಿರಣಗಳನ್ನೇ ಕುಡಿದು ತಪವನ್ನು ತಪಿಸುತ್ತಿದ್ದರು. ಜಪವನ್ನು ಜಪಿಸುತ್ತಿದ್ದರು.

ಹೀಗೆ ಅವರನ್ನೆಲ್ಲ ನೋಡಿಕೊಂಡು ಅರ್ಜುನನು ಆ ಕಾಲಹಸ್ತಿ ಪರ್ವತದ ದಕ್ಷಿಣ ದಿಕ್ಕಿನಲ್ಲಿ ಸಂಚರಿಸುತ್ತ ಭರದ್ವಾಜ ಮುನಿಯ ಆಶ್ರಮವನ್ನು ನೋಡಿದನು. ವನಲಕ್ಷ್ಮಿಯು ತನ್ನ ಬಗೆಬಗೆಯ ರೂಪಗಳನ್ನು ಪ್ರಕಟಗೊಳಿಸಿ ಅಲ್ಲಿ ಸುಸ್ಥಿರಳಾಗಿದ್ದಳು.

ಅಲ್ಲಿ ಆ ಕಿರೀಟಿಯನ್ನು ಕೌತುಕದ ಕೊನೆಗೆ ಏರಿಸಿದ ಒಂದು ವಿಷಯವೆಂದರೆ ಕ್ರೂರ ಪ್ರಾಣಿಗಳ ಸೌಹಾರ್ದದ ಸಹಜೀವನ. ಸಿಂಹವು ಆನೆಯೊಡನೆ ಒಡನಾಟ ನಡೆಸಿದ್ದಿತು. ಹುಲಿ ಚಿರತೆಗಳು ಪ್ರೀತಿಯಿಂದ ವ್ಯವಹರಿಸುತ್ತಿದ್ದವು. ನವಿಲು ಹಾವು ಪರಸ್ಪರ ಪ್ರೇಮದಿಂದ ಒಂದೇಕಡೆ ಆಡುತ್ತಿದ್ದವು. ಅದನ್ನು ನೋಡಿ ಅರ್ಜುನನು ಅಲ್ಲಿಯ ಯೋಗೀಶ್ವರರ ತಪಃಪ್ರಭಾವದ ವರ್ಣನೆಯನ್ನು ಮಾಡಿದನು ತನ್ನ ಜೊತೆಗೆ ಬಂದ ಯಾತ್ರಿಕರ ಮುಂದೆ. ಅರ್ಜುನನ ಜೊತೆಗೆ ಅನೇಕ ಬ್ರಾಹ್ಮಣರು ತೀರ್ಥಯಾತ್ರೆಗೆ ಹೊರಟಿದ್ದರು. ಆ ಎಲ್ಲ ತಪಸ್ವಿಗಳನ್ನು ಕರೆದುಕೊಂಡೆ ಅರ್ಜುನನು ಭರದ್ವಾಜರ ಆಶ್ರಮದಲ್ಲಿ ಪ್ರವೇಶ ಮಾಡಿದನು. ಆಶ್ರಮದ ಅಗ್ನಿಶಾಲೆಯಲ್ಲಿ ಅನೇಕ ಮುನಿಗಳಿಂದ ಸುತ್ತುವರೆಯಲ್ಪಟ್ಟು ನಟ್ಟ ನಡುವೆ ಪ್ರತಿಅಗ್ನಿಯಂತೆ ತೇಜಸ್ವಿಗಳಾಗಿ ಕುಳಿತಿದ್ದರು ಭರದ್ವಾಜ ಮುನಿಗಳು.

## ದೇಹ ಧರಿಸಿದ ಜ್ಞಾನ ಭಂಡಾರ

ವೇದಶಾಸ್ತ್ರ ಪುರಾಣಗಳ ಅರ್ಥವೇ ಮುನಿರೂಪ ಧರಿಸಿ ಕುಳಿತುಕೊಂಡಂತೆ ಇತ್ತು. ಅಖಂಡ ಬ್ರಹ್ಮತೇಜದಿಂದ ದೇದೀಪ್ಯಮಾನರಾದ ಆ ಮುನಿಪುಂಗವರನ್ನು ಧೃತಿ, ಕ್ಷಾಂತಿ, ದಯಾ, ತುಷ್ಟಿ, ಶಾಂತಿ ಮೊದಲಾದ ಸದ್ಗುಣಗಳು ದಾಸಿಯಾಗಿ ಸೇವೆ ಗೈಯುತ್ತಿದ್ದವು. ಮೃಗ ಚರ್ಮ ಭೂಷಿತರಾದ ಆ ಜಟಾಧಾರಿ ತಾಪಸರಿಗೆ ಅರ್ಜುನನು ದಂಡಪ್ರಣಾಮವನ್ನು ಮಾಡಿದ. ಮಹರ್ಷಿ ಭರದ್ವಾಜರು ಸ್ವಾಗತ ಸತ್ಕಾರ ಮಾಡಿದರು. ಕುಶಲ ಪ್ರಶ್ನೆ ಕೇಳಿದರು. ಅರ್ಜುನನು ಅಂದು ಆ ತಪೋನಿಧಿಗಳ ಆತಿಥ್ಯ ಸ್ವೀಕರಿಸಿ ಧನ್ಯನಾದ. ಅರ್ಜುನನ ಜೊತೆಗೆ ಅವನನ್ನು ಹಿಂಬಾಲಿಸಿ ಬಂದ ಅನೇಕ ಸಾತ್ವಿಕರಿಗೂ ಆ ಋಷಿಗಳ ಆಶ್ರಮದಲ್ಲಿ ಆದರದ ಆತಿಥ್ಯವು ಪವಿತ್ರ ಭೋಜನವು ದೊರೆಯಿತು. ಅನಂತರ ಮುನಿಗಳು ತಮ್ಮ ಸಾಯಂ ಸಂಧ್ಯಾವಂದನೆ ಮುಗಿಸಿ, ಸಾಯಂಕಾಲ ಹೋಮವನ್ನು

ಮಾಡಿದ ಬಳಿಕ ಅರ್ಜುನನು ಯಾತ್ರಿಕರೊಂದಿಗೆ ಅವರ ಎದುರುಹೋಗಿ ಕುಳಿತ. ನಮಸ್ಕರಿಸಿ ವಿನಯದಿಂದ ಪ್ರಶ್ನೆಮಾಡಿದ.

**ಅರ್ಜುನ:-** ಮುನಿವರ್ಯರೇ! ಇಂದು ತಾವು ನನಗೂ ನನ್ನ ಈ ಎಲ್ಲ ಜೊತೆ ಯಾತ್ರಿಕರಿಗೂ, ನೀಡಿದ ಅತಿಥ್ಯದಿಂದ ನಾವೆಲ್ಲರೂ ಕೃತಾರ್ಥರಾದೆವು. ಈಗ ತಮ್ಮ ಬಾಯಿಂದ ಜ್ಞಾನಾಮೃತವನ್ನು ಭೋಜನ ಮಾಡಬೇಕೆಂದು ನಮ್ಮ ಹೆಬ್ಬಯಕೆ. ಈ ಸುವರ್ಣಮುಖರೀ ಮಹಾನದಿಯು ಯಾವ ಪರ್ವತದಿಂದ ಹುಟ್ಟಿದೆ? ಇದರಲ್ಲಿ ದಾನಗಳಿಂದ ಎಂಥ ಪುಣ್ಯ ಪ್ರಾಪ್ತಿ?

**ಭರದ್ವಾಜ:-** ಅರ್ಜುನ! ಪೂರ್ವ ಕಾಲದಲ್ಲಿ ದಕ್ಷಪ್ರಜಾಪತಿಯ ಮಗಳಾಗಿ ಹುಟ್ಟಿದ ಸತೀದೇವಿಯು ತಂದೆಯಿಂದ ಅವಮಾನಿತಳಾಗಿ ಆ ದೇಹವನ್ನು ಪರಿತ್ಯಜಿಸಿ ಹಿಮಾಲಯದ ಕುಮಾರಿಯಾಗಿ ಮರಳಿ ಹುಟ್ಟಿದಳು. ಪರ್ವತರಾಜನ ಪುತ್ರಿಯಾದುದರಿಂದ ಪಾರ್ವತೀ ಎಂದು ಅವಳಿಗೆ ಹೆಸರು ಬಂದಿತು. ಪಾರ್ವತಿಯ ತಪಸ್ಸಿಗೆ ಮೆಚ್ಚಿ ಮಹಾದೇವನು ಮತ್ತೆ ಅವಳನ್ನು ಮದುವೆಯಾದ. ಪಾರ್ವತೀ ಪರಮೇಶ್ವರರ ಲೋಕ ಮಂಗಳಕರವಾದ ಈ ವಿವಾಹ ಮಹೋತ್ಸವಕ್ಕೆ ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚದ ಸರ್ವ ಪ್ರಾಣಿಗಳೂ ಎಲ್ಲ ಸುರ ಅಸುರ-ನರ ಯಕ್ಷ, ರಕ್ಷ, ನಾಗ, ಸಿದ್ಧ, ಕಿನ್ನರ, ಕಿಂಪುರುಷ ಮುಂತಾದ ಎಲ್ಲ ಯೋನಿಯ ಜೀವರೂ ಆ ಶಿವ ಪಾರ್ವತಿಯರ ಆಶೀರ್ವಾದ ಪಡೆಯಲೆಂದು ಹಾಗೂ ಆ ಮಹೋತ್ಸವ ನೋಡಲೆಂದು ಆಗಮಿಸಿದರು ಉತ್ತರ ಹಿಮಾಲಯ ಪರ್ವತಕ್ಕೆ. ಇದರಿಂದ ಭೂಮಿಯ ಭಾರವೇ ತಪ್ಪಿದಂತಾಯಿತು. ಸಮಸ್ತ ಜೀವ ಜಂಗುಳಿಯ ಭಾರದಿಂದ ಭೂಲೋಕದ ಉತ್ತರ ಭಾಗವು ಕೆಳಗೆ ಇಳಿದು ಜನಶೂನ್ಯವಾದ ದಕ್ಷಿಣ ಭಾಗವು ಮೇಲಕ್ಕೆ ಎದ್ದಿತು. ಅದನ್ನು ನೋಡಿ ಎಲ್ಲರೂ ಭಯ ಭ್ರಾಂತರಾದರು. ಆಗ ಮಹಾದೇವರು ಅಗಸ್ತ್ಯ ಮುನಿಗೆ ಆದೇಶ ನೀಡಿದ.

''ಕುಂಭ ಸಂಭವ! ನನ್ನ ಮದುವೆಯ ಮಂಗಳ ಮಹೋತ್ಸವಕ್ಕೆ ಜೀವಂತವಿದ್ದ ಪ್ರಾಣಿಗಳೆಲ್ಲವೂ ಉತ್ತರದ ಹಿಮಾಲಯದಲ್ಲಿ ಒಟ್ಟೈಸಿದ್ದಾರೆ. ಅದರಿಂದ ಭೂಮಿಯ ಭಾರದ ತೂಕವು ತಪ್ಪುತ್ತಲಿದೆ. ಆದುದರಿಂದ ನೀನು ಈಗಲೇ ದಕ್ಷಿಣಕ್ಕೆ ಹೋಗು. ನಿನ್ನ ತೂಕ ದೊಡ್ಡದು. ನೀನು ನಿನ್ನೊಬ್ಬನ ಭಾರದಿಂದಲೇ ಈ ಭೂಮಿಯ ತೂಕವನ್ನು ಸರಿಪಡಿಸಿ ಈ ಧರಣೀ ಮಂಡಲಕ್ಕೆ ಸ್ಥಿರತೆಯನ್ನು ತಂದು ಕೊಡಬಲ್ಲೆ. ನನ್ನ ಆಜ್ಞೆಯಂತೆ ನೀನು ದಕ್ಷಿಣಕ್ಕೆ ಹೋಗು'' ಎಂದು.

ಪರಮೇಶ್ವರನ ಆದೇಶದಂತೆ ಅವನಿಗೆ ನಮಸ್ಕಾರ ಮಾಡಿ ದಕ್ಷಿಣಕ್ಕೆ ಹೊರಟ ಅಗಸ್ತ್ಯಮುನಿ. ವಿಂಧ್ಯಗಿರಿಯನ್ನು ಉಲ್ಲಂಘಿಸಿದ. ದಕ್ಷಿಣಕ್ಕೆ ಆಗಮಿಸಿದ. ಅವನ ಭಾರದಿಂದ ಮೊದಲು ಮೇಲಕ್ಕೆ ಎದ್ದ ದಕ್ಷಿಣ ಭೂಭಾಗವು ಮತ್ತೆ ಮೊದಲಿನಂತೆ ಕೆಳಗಿಳಿದು ಸಮಸ್ಥಿತಿಗೆ ಬಂದಿತು. ಇಂಥ ಮಹಾಮಹಿಮೋಪೇತ ಆ ಅಗಸ್ತ್ಯಮುನಿ. ಆ ಅಗಸ್ತ್ಯರು ದಕ್ಷಿಣದ ಅರಣ್ಯ ಪ್ರದೇಶದಲ್ಲಿ ಮುಂದುವರೆದು ಬಂದ ಬಳಿಕ ಒಂದು ದೊಡ್ಡ ಪರ್ವತವನ್ನು ನೋಡಿದರು. ಆ ಪರ್ವತದ ಶೈಲಶ್ರೇಣಿಗಳನ್ನು ಏರುತ್ತ ಶಿಖರ ಪ್ರಾಂತಕ್ಕೆ ಬಂದು ಮುಟ್ಟಿದರು. ಆ ಉತ್ತುಂಗ ಪರ್ವತದ ಶೃಂಗಾಂಗಣದಲ್ಲಿ ಒಂದು ಸುಂದರ ಸರೋವರ. ಸ್ಪಟಿಕದಂತೆ ಸ್ವಚ್ಛ ಅದರ ನೀರು. ಅಮೃತದಂತೆ ರುಚಿ. ಆ ಕೊಳದ

ತುಂಬ ಸುಂದರವಾದ ಹೊಂದಾವರೆಗಳು ಅರಳಿ ನಿಂತಿವೆ. ಸುತ್ತಲೂ ಉಪವನ. ಅಲ್ಲಿಯ ಬಳ್ಳಿವಾಡಗಳ ಮೇಲೆ ಬಗೆ ಬಗೆಯ ಹೂಗಳ ಮುಗುಳುನಗೆ. ನಾಕು ನಿಟ್ಟಿನಲ್ಲಿಯೂ ಮುಗಿಲಿಗೆ ಮುದ್ದಿಡುವ ಹೆಮ್ಮರಗಳ ಸಾಲು. ಪರಮ ರಮಣೀಯ ಎನಿಸಿತು ಅಗಸ್ತ್ಯಮುನಿಗಳಿಗೆ ಆ ಪರ್ವತದ ಪ್ರದೇಶ. ಅಲ್ಲಿಯೇ ಅವರು ತಮ್ಮ ಒಂದು ಎಲೆ ಮನೆಯನ್ನು ಕಟ್ಟಿ ವಾಸ್ತುಶಾಂತಿಯನ್ನು ಮಾಡಿದರು. ಆ ಅಗಸ್ತ್ಯಮುನಿಯನ್ನು ಬೆಂಬಲಿಸಿ ಉತ್ತರ ಅನೇಕ ಮುನಿಮಂಡಲದವರು ಆ ಮಹಾಮುನಿಯಲ್ಲಿ ಅಧ್ಯಯನ ಮಾಡಬೇಕೆಂದು ಆಗಮಿಸಿದರು. ಅವರೆಲ್ಲರು ಪುಣ್ಯಾಶ್ರಮದ ಪರಿಸರ ಪ್ರಾಂತಗಳಲ್ಲಿ ತಮ್ಮ ತಮ್ಮ ಪರ್ಣಕುಟೀರಗಳನ್ನು ಕಟ್ಟಿಕೊಂಡು ವಾಸ ಮಾಡಿದರು. ಅಂದಿನಿಂದ ಅಗಸ್ತ್ಯರು ನೆಲೆನಿಂತ ಆ ಬೆಟ್ಟ ಅಗಸ್ತ್ಯ ಪರ್ವತ ಎಂದು ಹೆಸರಾಯಿತು.

**ಭರದ್ವಾಜ:-** ಒಂದು ದಿನ ಅಗಸ್ತ್ಯಮುನಿಗಳು ತಮ್ಮ ಪೂರ್ವಾಹ್ನಿಕವನ್ನು ಮುಗಿಸಿದರು. ಸಮೀಪದಲ್ಲಿ ಇರುವ ದೇವಮಂದಿರಕ್ಕೆ ಹೋದರು ಶಿವನ ಪೂಜೆ ಮಾಡಬೇಕೆಂದು. ಅದೇ ಸಮಯದಲ್ಲಿ ಆಕಾಶವಾಣಿ-''ಮುನಿವರ್ಯ! ಈ ಪ್ರದೇಶದಲ್ಲಿ ಒಂದೂ ನದಿ ಹರಿಯುವದಿಲ್ಲ. ಜ್ಞಾನವಿಲ್ಲದ ಬ್ರಾಹ್ಮಣನಂತೆ, ಬೆಳದಿಂಗಳು ಇಲ್ಲದ ರಾತ್ರಿಯಂತೆ, ತೊರೆ ಇಲ್ಲದ ತಿರೆಯ ಈ ಭಾಗವು ಶೋಭಿಸುವದಿಲ್ಲ. ಆದುದರಿಂದ ನೀನು ಈ ಭೂಭಾಗದಲ್ಲಿ ಒಂದು ನದಿಯು ಹರಿಯುವಂತೆ ಮಾಡು. ನೀನು ದಕ್ಷಿಣ ದಿಕ್ಕಿಗೆ ಬಂದದ್ದು ಲೋಕ ಹಿತಕ್ಕಾಗಿ ಅಲ್ಲವೆ?''

ಆಕಾಶವಾಣಿಯ ಈ ಸಂದೇಶವನ್ನು ಕೇಳಿ ಬ್ರಹ್ಮರ್ಷಿಗಳು ಒಂದು ಕ್ಷಣ ವಿಚಾರ ಮಾಡಿದರು. ತಮ್ಮನ್ನು ಬೆಂಬಲಿಸಿ ಬಂದ ಮುನಿ ಮಂಡಲದ ಮಹಾನುಭಾವರಿಗೆಲ್ಲ ನಭೋವಾಣಿಯ ಸಂದೇಶವನ್ನು ತಿಳಿಸಿದರು. ಮುಂದೆ ಏನು ಮಾಡಬೇಕು? ಎಂದು ಕೇಳಿದರು. ಆಗ ಆ ಮುನಿ ಮಹರ್ಷಿಗಳೆಲ್ಲರೂ ಅಗಸ್ತ್ಯರಿಗೆ ಪ್ರಣಾಮ ಮಾಡಿ ಕೈ ಮುಗಿದು ಹೇಳಿದರು.

**ಮುನಿಗಳು:-** ಮಹರ್ಷಿಗಳೇ! ತಮ್ಮ ಶಕ್ತಿ ಅಪಾರ, ಮಹಿಮೆ ಅಗಾಧ. ತಾವು ಬಯಸಿದರೆ ಇಚ್ಛಾಮಾತ್ರದಿಂದ ಬೇಕು ಬೇಕಾದುದನ್ನು ಸಾಧಿಸಬಲ್ಲಿರಿ. ಹಿಂದೆ ತಮ್ಮ 'ಹುಂಕಾರ' ಮಾತ್ರದಿಂದ ಕಾಮಾಂಧನಾದ ನಹುಷರಾಜ ಸ್ವರ್ಗ ಸಿಂಹಾಸನದಿಂದ ಉರುಳಿಬಿದ್ದ. ಅಖಂಡ ಭೂಮಂಡಲವನ್ನೆಲ್ಲ ಸುತ್ತುವರೆದ ಮಹಾಸಾಗರವನ್ನು ತಾವು ಹಿಂದೆ ಏಕಾಪೋಶನ ಮಾಡಿದಿರಿ. ಸೂರ್ಯನ ಸಂಚಾರಕ್ಕೆ ಅಡ್ಡಿ ನಿಂತು ತಡೆಹಿಡಿದ ದೊಡ್ಡ ಗುಡ್ಡ ವಿಂಧ್ಯಗಿರಿಯ ಬೆಳವಣಿಗೆಯನ್ನು ನಿಲ್ಲಿಸಿದ ಮಹಾನುಭಾವರು ತಾವು.

ಇಂಥ ಪುಣ್ಯ ಪುರುಷರು ಈ ದಕ್ಷಿಣ ಭಾಗಕ್ಕೆ ಬಂದದ್ದು ಇಲ್ಲಿಯ ಜನರ ಭಾಗ್ಯ. ನಮ್ಮೆಲ್ಲರ ಸುಕೃತ ವಿಶೇಷ. ಈಗ ತಾವು ತಮ್ಮ ದಿವ್ಯ ಪ್ರಭಾವದಿಂದ ಆಕಾಶವಾಣಿಯ ಸಂದೇಶದಂತೆ ಒಂದು ಪುಣ್ಯನದಿಯನ್ನು ಈ ಭೂಭಾಗದಲ್ಲಿ ಹರಿಸಿರಿ. ಯಾವ ನದಿ ನದ ನಿರ್ಝರಣಗಳೂ ಇಲ್ಲದೆ ಈ ಭೂಭಾಗವೆಲ್ಲವು ಒಂದು ರುಕ್ಷ ಬೆಂಗಾಡು ಆಗಿದೆ. ಈ ಭಾಗದಲ್ಲಿ ಒಂದು ಪುಣ್ಯನದಿಯು ಪ್ರವಹಿಸುವಂತೆ ಮಾಡಬೇಕು. ನಾವೆಲ್ಲರೂ ಅದರಲ್ಲಿ ಸ್ನಾನ ಮಾಡಿ ಕೃತಾರ್ಥರಾಗುತ್ತೇವೆ.

ಆ ಎಲ್ಲ ಮಹನೀಯರ ಮಾತನ್ನು ಕೇಳಿಕೊಂಡು ಅಗಸ್ತ್ಯ ಮುನಿಗಳು ಕಠಿಣ ತಪಸ್ಸನ್ನು ಕೈಕೊಂಡರು. ಬೇಸಿಗೆಯಲ್ಲಿ ಐದು ಅಗ್ನಿಗಳ ನಡುವೆ ಅವರ ತಪಸ್ಸು. ಮಳೆಗಾಲದಲ್ಲಿ ಗಿರಿ

ಶಿಖರದ ತುದಿಯಲ್ಲಿ ಧಾರಾಕಾರ ಮಳೆಯಲ್ಲಿ ಕುಳಿತೇ ಅವರ ತಪೋನುಷ್ಠಾನ, ಚಳಿಗಾಲದಲ್ಲಿ ಮೈ ಹೆಪ್ಪುಗಟ್ಟಿಸುವ ತಣ್ಣೀರಿನಲ್ಲಿ ಕುಳಿತು ಧ್ಯಾನ ಸಮಾಧಿ, ಹೀಗೆ ನಿದ್ದೆ ಆಹಾರಗಳನ್ನು ತ್ಯಜಿಸಿ, ಮನಸ್ಸು ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಂಡು, ಅಸಂಪ್ರಜ್ಞಾತ ಸಮಾಧಿಯ ಅವಸ್ಥೆಯಲ್ಲಿ ಬಹುದಿನ ನಿಂತುಕೊಂಡರು ಆ ಕುಂಬ ಸಂಭವ ಮಹರ್ಷಿಗಳು. ಅವರ ತೀಕ್ಷ್ಣ ತಪಸ್ಸಿಗೆ ಪ್ರಸನ್ನನಾಗಿ ಒಲಿದು ಬಂದ ಚತುರ್ಮುಖ ಬ್ರಹ್ಮ. ಅವರನ್ನು ನೋಡಿ ಅಗಸ್ತ್ಯ ಮುನಿಗಳು ಸಾಷ್ಟಾಂಗ ವಂದನೆಗೈದರು. ಆಗ ಬ್ರಹ್ಮದೇವರು ಆ ಮುನಿಯನ್ನು ಆಶೀರ್ವದಿಸಿ ಸಂತಸದಿಂದ ಹೇಳಿದರು- ''ಅಗಸ್ತ್ಯ! ನಿನ್ನ ಈ ದುಷ್ಕರ ತಪಸ್ಸಿನಿಂದ ನಾನು ಸಂತುಷ್ಟ. ನಿನಗೆ ಅಭೀಷ್ಟ ಯಾವುದು? ಬೇಕಾದ ವರ ಬೇಡು.''

**ಅಗಸ್ತ್ಯ:-** ಪ್ರಭು! ಈ ಪ್ರದೇಶದಲ್ಲಿ ಒಂದೂ ನದಿ ಇಲ್ಲ. ಈ ರುಕ್ಷ ಭೂಮಿಯಲ್ಲಿ ಒಂದು ರಸವಾಹಿನಿ ಹರಿಯುವಂತೆ ಕೃಪೆ ಮಾಡು. ಈ ದೇಶದ ಜನರಿಗೆ ಕಲ್ಯಾಣವಾಗಲಿ. ಇದೇ ನನ್ನ ಅಭೀಷ್ಟ ವರ.

ಅಗಸ್ತ್ಯಮುನಿಯ ಈ ಬೇಡಿಕೆಗೆ ''ತಥಾಸ್ತು'' ಹಾಗೆ ಆಗಲಿ ಎಂದು ಹೇಳಿದರು ಬ್ರಹ್ಮದೇವರು. ಆಗಲೇ ಆಕಾಶಗಂಗೆಯನ್ನು ನೆನೆದರು ನಿಂತಲ್ಲಿಯೇ. ಆಗಸದಿಂದ ಇಳಿದು ಬಂದಳು ಆ ಗಂಗೆ. ಕೈ ಮುಗಿದು ಕೇಳಿದಳು- ''ಅಪ್ಪಣೆ ಏನು?'' ಬ್ರಹ್ಮದೇವರು ನಮ್ರಳಾಗಿ ನಿಂತ ನದೀ ದೇವಿಗೆ ನಯವಾಗಿ ನುಡಿದರು.

## ಇಳಿದು ಬಾ ತಾಯಿ ಇಳಿದು ಬಾ

ಗಂಗೆ! ಲೋಕ ಹಿತಕ್ಕಾಗಿ ತಪಸ್ಸು ಮಾಡುತ್ತಿದ್ದಾನೆ ಈ ಅಗಸ್ತ್ಯಮುನಿ. ಈ ಭಾಗದ ಭೂಖಂಡದಲ್ಲಿ ನದಿಗಳು ವಿರಳ. ಆದರಿಂದ ಇಲ್ಲಿ ನೆಲೆಸಿರುವ ಜನತೆಗೆಲ್ಲ ವಿಪರೀತ ತಾಪ, ತೊಂದರೆ, ತ್ರಾಸ. ಅದಕ್ಕಾಗಿಯೇ ಈ ಅಗಸ್ತ್ಯಮುನಿಯ ಘೋರವಾದ ತಪೋನುಷ್ಠಾನ. ಈಗ ಈ ಮುನಿ ಹಾಗೂ ಇಲ್ಲಿಯ ಜನರ ಸಲುವಾಗಿ ನೀನು ಒಂದು ಅಂಶದಿಂದ ಇಳಿದು ಬರಬೇಕು ಇಳಾತಳದ ಈ ಭೂಭಾಗಕ್ಕೆ. ಬೆಟ್ಟ ಬಯಲುಗಳಿಂದ ಒಡಗೂಡಿದ ಈ ಭೂಭಾಗದಲ್ಲಿ ಹೊಳೆಯಾಗಿ ಹರಿದು ಇಲ್ಲಿಯ ಜನರನ್ನೆಲ್ಲ ಪಾವನಗೊಳಿಸು. ಅಗಸ್ತ್ಯರು ತೋರಿದ ದಾರಿಯಿಂದ ಹರಿದುಹೋಗು. ಎಲ್ಲ ನದಿಗಳಲ್ಲಿ ನಿನ್ನ ಅಂಶಭೂತವಾದ ಈ ನದಿಗೆ ನಾನು ಹೆಚ್ಚಿನ ಗೌರವ ಸ್ಥಾನವನ್ನು ನೀಡಿದ್ದೇನೆ.

ಶಾರದಾ ಪತಿಯಾದ ಚತುರ್ಮುಖನು ಆಕಾಶಗಂಗೆಗೆ ಹೀಗೆ ಅಪ್ಪಣೆಯಿತ್ತು ಅಗಸ್ತ್ಯಮುನಿಯಿಂದ ಪೂಜಿತರಾಗಿ ಅಂತರ್ಧಾನ ಹೊಂದಿದರು. ಅನಂತರ ಆ ದೇವ ಗಂಗೆಯು ತನ್ನ ಅಂಶದಿಂದ ಒಂದು ತೇಜೋಮಯ ಮೂರ್ತಿಯನ್ನು ನಿರ್ಮಿಸಿ ಅಗಸ್ತ್ಯ ಮುನಿಗೆ ಹೇಳಿದಳು. ''ಮುನಿವರ್ಯ! ಈ ತೇಜೋಮಯ ಮೂರ್ತಿ ನನ್ನ ಒಂದು ಅಂಶ. ಇವಳು ನೀವು ತೋರಿದ ದಾರಿಯಲ್ಲಿ ನದಿ ರೂಪದಿಂದ ಪ್ರವಹಿಸಿ ನಿಮ್ಮ ಮನೋರಥವನ್ನು ಪೂರ್ಣಗೊಳಿಸುವಳು.''

## ದೇವಗಂಗೆಯ ಒಂದು ಕರುಣಾತರಂಗ

ಹೀಗೆ ಹೇಳಿ ಆಕಾಶಗಂಗೆಯು ಮೂಲರೂಪದಿಂದ ಅಲ್ಲಿಂದ ಹೊರಟು ಹೋದಳು. ಅನಂತರ ಅಗಸ್ತ್ಯ ಋಷಿಗಳು ಅಲ್ಲಿ ನಿಂತ ಆಕಾಶಗಂಗೆಯ ತೇಜೋಮೂರ್ತಿಗೆ ಹೇಳಿದರು- ''ಕಲ್ಯಾಣಿ! ನಾನು ಮುಂದೆ ಮುಂದೆ ನಡೆದು ಈ ಭೂಭಾಗದಲ್ಲಿ ದಾರಿ ತೋರುವೆನು. ನನ್ನ ಹಿಂದೆ ಹಿಂದೆ ನೀನು ಹೊಳೆಯಾಗಿ ಹರಿದು ಬಾ.''

## ದೇವಗಂಗೆ ದಕ್ಷಿಣ ಗಂಗೆಯಾಗಿ ಹರಿದು ಬಂದಳು

ಅದಕ್ಕೆ ದೇವಗಂಗೆಯು ಅಂಶಭೂತಳಾದ ಈ ಭೂತಳದ ಭಾಗೀರಥಿಯ ತೇಜೋಮೂರ್ತಿಯು ಸಮ್ಮತಿಸಿತು. ಮುನಿ ಮುಂದೆ ಮುಂದೆ ನಡೆದ ದಾರಿತೋರುತ್ತ. ಅವರ ಹಿಂದೆ ಹಿಂದೆ ಪ್ರವಾಹರೂಪವಾಗಿ ಹರಿದು ಬಂದಳು ದೇವಗಂಗೆ. ಸ್ವಚ್ಛ ಹಾಗು ಶುಭ್ರವಾದ ತಿಳಿನೀರಿನ ಆ ತರಂಗಿಣಿಯನ್ನು ಕಂಡು ಆ ಪ್ರಾಂತ ಪರಿಸರದ ಮಾನವರಿಗೆಲ್ಲ ಪರಮಾನಂದವಾಯಿತು. ''ಅಮೃತದ ಪ್ರವಾಹವೇ ನಮ್ಮ ಸೌಭಾಗ್ಯದಿಂದ ಇತ್ತ ಹರಿದು ಬರುತ್ತದೆ. ಇದರಿಂದ ಗಂಗಾಜಲವೇ ನಮ್ಮ ಸ್ನಾನ ಪಾನಗಳಿಗೆ ಒದಗಿ ಬಂದಂತಾಗಿದೆ'' ಎಂದು ವಂದಿಸಿದರು. ಅಗಸ್ತ್ಯಮುನಿಯ ಬೆನ್ನ ಹಿಂದಿನಿಂದ ಹರಿದು ಬರುವ ಈ ನದಿ ಪ್ರವಾಹವನ್ನು ನೋಡಿ ವಾಯುದೇವರು ಪ್ರಸನ್ನ ಮನಸ್ಸಿನಿಂದ ನುಡಿದರು- ''ಈ ನದಿಯು ಈ ಭೂಭಾಗದ ಜನಕ್ಕೆ ಒಂದು ಬಂಗಾರದ ನಿಧಿಯೇ ದೊರಕಿದಂತಾಗಿದೆ. ಇದರ ನೀರಿನ ಜುಳುಜುಳು ಮಂಜುಳ ಧ್ವನಿಯಿಂದ ಎಂಟು ದಿಕ್ಕುಗಳು ಮುಖರಿತವಾಗಿವೆ. ಆದುದರಿಂದ ಈ ನದಿಯು 'ಸುವರ್ಣ ಮುಖರಿ' ಎಂಬ ಹೆಸರಿನಿಂದ ಪ್ರಸಿದ್ಧವಾಗಲಿ.''

ಹೀಗೆ ಬ್ರಹ್ಮದೇವರ ಆಶೀರ್ವಾದ ಹಾಗೂ ಅಗಸ್ತ್ಯಮುನಿಯ ತಪೋಬಲ ಎರಡೂ ಕರಗಿ ನೀರಿನ ರೂಪದಿಂದ ಹರಿದಂತಿರುವ ಈ ಸುವರ್ಣಮುಖರೀ ನದಿಯು ಈ ಭಾಗದ ಜನರಿಗೆಲ್ಲ ವರದಾನವಾಗಿ ಬಂದು ಭೂಮಂಡಲದಲ್ಲಿ ಪ್ರತಿಷ್ಠಿತವಾಗಿದೆ. ಇದರಲ್ಲಿ ಸ್ನಾನಪಾನ ಮಾಡುವದರಿಂದ ಜನರ ಪಾಪಗಳು ದೂರಾಗುವಂತೆ ರೋಗಗಳೂ ಪರಿಹಾರವಾಗುವವು. ಇದರ ನೀರು ಶುದ್ಧ. ಸ್ಪಟಿಕದಂತೆ ನಿರ್ಮಲ. ಅಮೃತದಂತೆ ರುಚಿ. ಹಾಲಿನಂತೆ ಧವಲ. ಈ ಸುವರ್ಣಮುಖರಿಯು ಅಗಸ್ತ್ಯ ಪರ್ವತದಿಂದ ಹುಟ್ಟಿಹರಿದು ಅನೇಕ ತೀರ್ಥಗಳಿಂದ ಬೇರೆ ಬೇರೆ ಭೂಭಾಗದ ಜನರನ್ನೂ ಅನೇಕ ಪ್ರಾಣಿಗಳನ್ನೂ ತೃಪ್ತಿಪಡಿಸಿ ಆನಂದಗೊಳಿಸಿ ಪಾವನಗೈಯುತ್ತ ದಕ್ಷಿಣ ಸಮುದ್ರಕ್ಕೆ ಹೋಗಿ ಕೂಡುತ್ತದೆ. ಅಗಸ್ತ್ಯಮಹರ್ಷಿಗಳು ಈ ದೇವಗಂಗೆಯನ್ನು ದಕ್ಷಿಣ ಸಮುದ್ರಕ್ಕೆ ಸಂಗಮ ಮಾಡಿಸಿ ಅವಳನ್ನು ಸ್ತೋತ್ರ ಮಾಡಿ ಕೃತಾರ್ಥರಾಗಿ ತಮ್ಮ ಆಶ್ರಮಕ್ಕೆ ಮರಳಿದರು.

**ಅರ್ಜುನ:-** ಪೂಜ್ಯರೇ! ತಾವು ಈ ಮಹಾನದಿಯ ಹುಟ್ಟಿನ ಗುಟ್ಟನ್ನು ನನ್ನೆದುರು ಹೇಳಿದಿರಿ. ಕೇಳಿ ನಾನು ಕೃತಾರ್ಥನಾದೆ. ಇದರ ಪ್ರಭಾವವನ್ನು ತಮ್ಮ ಬಾಯಿಂದ ಹೇಳಬೇಕೆಂದು ನನ್ನ ಹೆಬ್ಬಯಕೆ.

## ಸುವರ್ಣಮುಖರಿಯ ಮಹಿಮಾ ವರ್ಣನೆ

**ಭರದ್ವಾಜ:-**ಪಾಂಡುಪುತ್ರ! ನೂರು ಯೋಜನ ದೂರದಲ್ಲಿ ಇದ್ದರೂ ಈ ಸುವರ್ಣ ಮುಖರಿಯ ಸ್ಮರಣ ಮಾಡಿದ ಮಾತ್ರಕ್ಕೆ ಮಾನವನು ಮುಕ್ತನಾಗುತ್ತಾನೆ ಎಲ್ಲ ಪಾಪಗಳಿಂದ. ಸುವರ್ಣಮುಖರಿಯ ನೀರಿನಲ್ಲಿ ಮೃತ ಮನುಷ್ಯನ ಮೂಳೆಗಳನ್ನು ಹಾಕಿದರೆ ಅವುಗಳೇ ಅವನ ಬ್ರಹ್ಮಲೋಕದ ಪ್ರಯಾಣಕ್ಕೆ ಮೆಟ್ಟಿಲುಗಳಾಗಿ ಮಾರ್ಪಡುವವು. ಬೇರೆ ಜಲದಲ್ಲಿ ಸ್ನಾನ ಮಾಡುವಾಗ ಈ ಸುವರ್ಣಮುಖರಿಯ ಸ್ಮರಣ ಮಾಡಿದರೂ ಪರಮಪದ ಪ್ರಾಪ್ತಿ ನಿಶ್ಚಿತ. ದೇವತೆಗಳಲ್ಲಿ ವಿಷ್ಣು, ಚಿಕ್ಕೆಗಳಲ್ಲಿ ಚಂದ್ರ, ಮಂತ್ರಗಳಲ್ಲಿ ಗಾಯತ್ರಿ, ಬೆಟ್ಟಗಳಲ್ಲಿ ಹಿಮಗಿರಿಯು ಶ್ರೇಷ್ಠವಾಗಿರುವಂತೆ ನದಿಗಳಲ್ಲಿ ಸುವರ್ಣಮುಖರಿಯು ಶ್ರೇಷ್ಠ. ಸುವರ್ಣ ಮುಖರಿ ನದಿಯಲ್ಲಿ ಈ ಕೆಳಗಿನ ಮಂತ್ರವನ್ನು ಹೇಳಬೇಕು ಸ್ನಾನ ಮಾಡುವಾಗ.

"ಅಗಸ್ತ್ಯಾಚಲಸಂಭೂತಾಂ ದಕ್ಷಿಣೋದಧಿಗಾಮಿನೀಮ್ ।
ಸಮಸ್ತ ಪಾಪಹಂತ್ರೀಂ ತ್ವಾಂ ಸುವರ್ಣಮುಖರೀಂ ಶ್ರಯೇ ॥
ಮಹಾಪಾತಕವಿಪ್ಲುಷ್ಟಂ ಗಾತ್ರಂ ಮಮ ತವೋದಕೈ:
ಕ್ಷಾಲಯಾಮಿ ಜಗದ್ಧಾತ್ರಿ ಶ್ರೇಯಸಾ ಯೋಜಯಸ್ವ ಮಾಮ್ ॥

"ಅಗಸ್ತ್ಯಗಿರಿಯಿಂದ ಹುಟ್ಟಿ ದಕ್ಷಿಣ ಸಮುದ್ರವನ್ನು ಕೂಡುವ ಸುವರ್ಣಮುಖರೀ ನದಿಯೇ! ನಾನು ನಿನ್ನನ್ನು ಆಶ್ರಯಿಸುವೆ. ನೀನು ಎಲ್ಲ ಪಾಪಗಳನ್ನು ಪರಿಹರಿಸುವೆ. ಅನೇಕ ಪಾಪಗಳನ್ನು ಮಾಡಿದ ನನ್ನ ಅಂಗಾಂಗಗಳನ್ನು ನಿನ್ನ ಪುಣ್ಯ ಜಲದಿಂದ ತೊಳೆಯುತ್ತೇನೆ. ನಿನಗೆ ಶರಣು ಬಂದಿದ್ದೇನೆ. ನೀನು ಜಗದಂಬೆ. ಮಹಾಪಾತಕಗಳಿಂದ ದಗ್ಧವಾದ ಈ ನನ್ನ ದೇಹವನ್ನು ಪಾವನಗೊಳಿಸು. ನನಗೆ ಶ್ರೇಯಸ್ಸನ್ನು ಉಂಟುಮಾಡು" ಎಂಬ ಅರ್ಥದ ಈ ಮಂತ್ರವನ್ನು ಉಚ್ಚರಿಸುತ್ತ ಸುವರ್ಣಮುಖರೀ ನದಿಯಲ್ಲಿ ಸ್ನಾನ ಮಾಡಬೇಕು. ಸಂಕ್ರಾಂತಿ, ಅಯನ, ವ್ಯತೀಪಾತ ಹಾಗೂ ಪರ್ವಕಾಲಗಳಲ್ಲಿ ಸುವರ್ಣಮುಖರೀ ಸ್ನಾನ ಮಾಡಿದ ಮಾನವನು ಉದ್ಧಾರ ಹೊಂದುವನು. ಈ ನದಿಯ ತೀರದಲ್ಲಿ ಮಾಡಿದ ಜಪ, ಹೋಮ, ತಪ ದಾನ, ಶ್ರಾದ್ಧ ಹಾಗೂ ದೇವರ ಪೂಜೆಗಳು ಇತರ ಸ್ಥಳಕ್ಕಿಂತ ಮೂರುಪಟ್ಟು ಮಿಗಿಲಾದ ಪುಣ್ಯ ಫಲಪ್ರದಾಯಕ ಆಗಿರುತ್ತವೆ.

## ಶ್ವೇತ ವರಾಹ ಪ್ರಾದುರ್ಭಾವ

**ಅರ್ಜುನ:-** ಭರದ್ವಾಜ ಮುನಿಗಳೇ! ಸುವರ್ಣಮುಖರೀ ನದಿಯಲ್ಲಿ ಬೇರೆ ಬೇರೆ ಯಾವ ಪವಿತ್ರ ನದಿಗಳ ಸಂಗಮವಾಗಿದೆ? ಈ ನದೀ ತೀರದ ಯಾವ ಕಡೆ ಸ್ನಾನ ಮಾಡಿದರೆ ಹೆಚ್ಚಿನ ಪುಣ್ಯ? ಈ ನದೀ ತೀರದಲ್ಲಿ ತೀರ್ಥಗಳಾದರು ಎಷ್ಟು ಇವೆ?

**ಭರದ್ವಾಜ:-** ಕುಂತೀಕುಮಾರ! ಈ ಸುವರ್ಣಮುಖರಿಯು ಅಗಸ್ತ್ಯ ಪರ್ವತದಿಂದ ಮೊಟ್ಟಮೊದಲು ಕೆಳಗೆ ಇಳಿದು ಮಹೀಮಂಡಲದಲ್ಲಿ ಮಡುವುಗಟ್ಟಿತು. ಅದೇ ಸುವರ್ಣ ಮುಖರಿಯ ಮಹೀಮಂಡಲದ ಮೊದಲನೆಯ ತೀರ್ಥ. ಅಗಸ್ತ್ಯ ತೀರ್ಥ ಎಂಬ ಹೆಸರಿನಿಂದಲೇ ಅದಕ್ಕೆ ಲೋಕ ಪ್ರಸಿದ್ಧಿ. ಅಗಸ್ತ್ಯರೇ ಆ ತೀರ್ಥದ ದಂಡೆಯ ಮೇಲೆಯೇ ಈಶ್ವರನನ್ನು ಸ್ಥಾಪನೆ ಮಾಡಿದ್ದಾರೆ. ಅಗಸ್ತ್ಯೇಶ್ವರನ ಪೂಜೆ ಮಾಡಿದರೆ ಹತ್ತು ಅಶ್ವಮೇಧ ಯಜ್ಞ ಮಾಡಿದ ಪುಣ್ಯಲಾಭ. ಈ ಅಗಸ್ತ್ಯ ತೀರ್ಥದ ಈಶಾನ್ಯ ದಿಕ್ಕಿನಲ್ಲಿ ಮೂರುಮೈಲು ದೂರದಲ್ಲಿ ದೇವತೀರ್ಥ, ಋಷಿತೀರ್ಥ, ಪಿತೃತೀರ್ಥ ಎಂದು ಮೂರು ತೀರ್ಥಗಳು ಇರುತ್ತವೆ. ಈ ಮೂರು ತೀರ್ಥಗಳಲ್ಲಿ ಸ್ನಾನ ಮಾಡಿ ಅಗಸ್ತ್ಯಮುನಿಯು ದೇವತೆಗಳನ್ನು, ಋಷಿಗಳನ್ನು, ಪಿತೃಗಳನ್ನು ಪೂಜೆ ಮಾಡಿ ಸಂತೃಪ್ತಗೊಳಿಸಿದ. ಅದರಿಂದಲೇ ಇವುಗಳಿಗೆ ಆ ಹೆಸರು ಬಂದಿದೆ. ಈ ಮೂರು ತೀರ್ಥಗಳಲ್ಲಿ ಸ್ನಾನಮಾಡಿ ತರ್ಪಣ ಮಾಡಿದರೆ ಮನುಷ್ಯನು ದೇವಋಣ, ಋಷಿಋಣ, ಪಿತೃಋಣ ಈ ಋಣತ್ರಯದಿಂದ ಮುಕ್ತನಾಗುವನು. ಸ್ವರ್ಗಸುಖವನ್ನು ಪಡೆಯುವನು.

ಅಲ್ಲಿಂದ ಅದೇ ಈಶಾನ್ಯ ದಿಕ್ಕಿನಲ್ಲಿ ಆರು ಮೈಲುಗಳ ದೂರದಲ್ಲಿ ವೇಣಾ ಎಂಬ ನದಿಯು ಸುವರ್ಣಮುಖರಿಗೆ ಬಂದು ಕೂಡುತ್ತದೆ. ಈ ಎರಡು ನದಿಗಳ ಸಂಗಮ ತೀರ್ಥದಲ್ಲಿ ಸ್ನಾನ ಮಾಡಿದವರಿಗೆ ಹತ್ತು ಅಶ್ವಮೇಧಯಾಗ ಮಾಡಿದ ಪುಣ್ಯ.

ಈ ವೇಣಾನದಿಯಿಂದ ಮಿಲಿತವಾದ ಬಳಿಕ ಸುವರ್ಣಮುಖರಿಯು ಪರ್ವತಗಳ ದುರ್ಗಮ ಮಾರ್ಗವನ್ನು ಕ್ರಮಿಸುತ್ತ ಮುಂದೆ ಉತ್ತರವಾಹಿನಿಯಾಗಿ ಹರಿದಿದೆ. ನಿಬಿಡವಾದ ಪರ್ವತ ಶ್ರೇಣಿಯಲ್ಲಿ ಮುಂದೆ ಒಮ್ಮೆಲೇ ಈ ನದಿಯು ಗುಪ್ತವಾಗಿ ಬಿಡುತ್ತದೆ. ಅಲ್ಲಿಂದ ಹನ್ನೆರಡು ಮೈಲುಗಳ ಮೇಲೆ ಒಮ್ಮೆಲೇ ಬೆಳಕಿಗೆ ಬಂದು ಪ್ರಕಟವಾಗಿಯೇ ಎಂಟು ಮೈಲು ಹರಿದು ಉದಕ್ಕಲ ಎಂಬ ಸ್ಥಾನದಲ್ಲಿ ಪೂರ್ವವಾಹಿನಿಯಾಗಿ ತಿರುಗುವಳು. ಅಲ್ಲಿಯೂ ಅಗಸ್ತ್ಯೇಶ್ವರ ಹೆಸರಿನ ಶಿವಲಿಂಗವಿದೆ. ಆ ಪೂರ್ವವಾಹಿನಿಯಾದ ಸುವರ್ಣಮುಖರಿಯಲ್ಲಿ ಸ್ನಾನಮಾಡಿ ಅಗಸ್ತ್ಯೇಶ್ವರನ ದರ್ಶನ ಸೇವಾದಿಗಳನ್ನು ಮಾಡಿದವರ ಪಾಪರಾಶಿಗಳೆಲ್ಲವೂ ಕರಗಿಹೋಗುವವು. ಅಲ್ಲಿಂದ ಎರಡು ಮೈಲು ಮತ್ತೆ ಉತ್ತರಕ್ಕೆ ತಿರುಗಿ ಹರಿದು ಅನೇಕ ತೀರ್ಥಗಳನ್ನು ನಿರ್ಮಾಣ ಮಾಡಿದೆ ಈ ಪುಣ್ಯನದಿ. ಮುಂದೆ ವ್ಯಾಘ್ರಪದಾ ಎಂಬ ನದಿಯು ಸುವರ್ಣಮುಖರಿಗೆ ಬಂದು ಕೂಡುವದು. ವ್ಯಾಘ್ರಪದಾ ನದಿಯ ದಂಡೆಯ ಮೇಲೆ ಇರುವ ಶಂಖೇಶ್ವರ, ಶಂಖತೀರ್ಥ ಹಾಗೂ ಈ ಎರಡೂ ನದಿಗಳ ಸಂಗಮಸ್ಥಾನವು. ಇವು ಸ್ನಾನಪಾನ ಸಮಾರಾಧನೆಗಳಿಂದ ಸರ್ವಪಾಪ ಪರಿಹಾರಕವಾಗಿರುತ್ತವೆ. ಈ ವ್ಯಾಘ್ರಪ್ರದಾ ನದಿಯೊಂದಿಗೆ ಸಂಗಮಿಸಿ ಮೂರು ಮೈಲು ಮುಂದೆ ಹರಿದು ಬಂದ ಬಳಿಕ ಈ ಸುವರ್ಣ ಮುಖರೀ ನದಿಯು ವೃಷಭಾಚಲವನ್ನು ಸಮೀಪಿಸುತ್ತದೆ.

ಅಲ್ಲಿ ವೃಷಭಾಚಲದಿಂದ ಹುಟ್ಟಿ ಹರಿಯುವ ಕಲ್ಯಾಣಿ ಎಂಬ ಮಂಗಳ ತರಂಗಿಣಿಯು ಸುವರ್ಣಮುಖರಿಗೆ ಬಂದು ಕೂಡುವದು. ಇವೆರಡೂ ನದಿಗಳು ಪ್ರತ್ಯೇಕವಾಗಿಯೇ ಪಾವನ ಪಯಸ್ವಿನಿಗಳು. ಎರಡು ಸಂಗಮವಾದ ಬಳಿಕ ಕೇಳುವದೇನು! ಈ ಎರಡು ಪವಿತ್ರ ನದಿಗಳ ಸಂಗಮ ತೀರ್ಥದಲ್ಲಿ ಸ್ನಾನ ಮಾಡಿದವರ ಪಾಪ ಒಂದೂ ಉಳಿಯದು. ಈ ಸಂಗಮದ ನಟ್ಟನಡುವೆ ಬ್ರಹ್ಮಶಿಲಾ ಎಂಬ ಹೆಸರಿನ ಹೆಬ್ಬಂಡೆ ಒಂದು ಪುಟ್ಟ ಬೆಟ್ಟದಂತೆ ತಲೆ ತೆಗೆದು ನಿಂತುಕೊಂಡಿದೆ. ಈ ಉಭಯ ನದಿಗಳ ಸಂಗಮದ ರಂಗದಲ್ಲಿ ಅಗಸ್ತ್ಯರ ತಪಃ ಪ್ರಭಾವದಿಂದ ಗಯಾತೀರ್ಥದ ಸನ್ನಿಧಾನವು ಬಂದಿದೆ. ಇಲ್ಲಿಂದ ಮುಂದೆ ಸುವರ್ಣಮುಖರಿಯ ಎರಡು ಮೈಲು ಅಂತರದಲ್ಲಿ ವೆಂಕಟಾಚಲ ಪರ್ವತವು ಭೂಮ್ಯಾಕಾಶಗಳನ್ನು ಪವಿತ್ರಗೊಳಿಸುತ್ತ ನಿಂತುಕೊಂಡಿದೆ. ಶ್ರೀ ಹರಿಯು ವರಾಹ ಅವತಾರ ಮಾಡಿದಾಗ ಈ ಪರ್ವತವನ್ನು ತನಗೆ ವಾಸಿಸಲಿಕ್ಕೆಂದು ಆಯ್ದು ಕೊಂಡಿದ್ದನು. ಆದುದರಿಂದ ಇದಕ್ಕೆ ವರಾಹ ಕ್ಷೇತ್ರವೆಂದು ಕರೆಯುತ್ತಾರೆ. ಪಾಪಗಳನ್ನು ಸುಟ್ಟು ಹಾಕುವದರಿಂದ ''ವೆಂಕಟ'' ಎಂಬ ಹೆಸರುಳ್ಳ ಶ್ರೀನಿವಾಸದೇವರು ಶ್ರೀ ಭೂದೇವಿಯ ರೊಂದಿಗೆ ಇಲ್ಲಿ ನಿವಾಸವನ್ನು ಮಾಡಿದ್ದರಿಂದ ವೆಂಕಟಾಚಲವೆಂದೂ ಹೆಸರು ಬಂದಿದೆ ಈ ಬೆಟ್ಟಕ್ಕೆ.

**ಅರ್ಜುನ:-** ಭಗವಾನ್ ಲಕ್ಷ್ಮೀಪತಿಯು ಈ ವರಾಹ ಕ್ಷೇತ್ರದಲ್ಲಿ ಏಕೆ ಪ್ರಕಟನಾದ? ಆ ಭಗವಂತನನ್ನು ಭಕ್ತಿಯಿಂದ ಭೂಲೋಕಕ್ಕೆ ಎಳೆದು ತಂದ ಪುಣ್ಯಾತ್ಮನು ಯಾರು?

**ಭರದ್ವಾಜ:-** ಕೌಂತೇಯ! ಪೂರ್ವಕಾಲದಲ್ಲಿ ಎಲ್ಲ ಋಷಿಮುನಿಗಳು ಭಾಗೀರಥಿ ತಟಾಕದಲ್ಲಿ ಒಂದು ಯಜ್ಞವನ್ನು ನಡೆಸಿದ್ದರು. ಅದರಲ್ಲಿ ಮುಖ್ಯ ಅಧ್ವರ್ಯು ಜನಕರಾಜ. ಅದೊಂದು ದಿವ್ಯವಾದ ಜ್ಞಾನಸತ್ರ. ಈ ಜ್ಞಾನಯಜ್ಞದಲ್ಲಿ ಭಗವಂತನ ದಿವ್ಯ ಕಥೆ ಹಾಗೂ ಮಹಿಮೆಗಳ ವರ್ಣನೆ, ಶ್ರವಣ ಭಜನೆಗಳೇ ಮುಖ್ಯ ಯಜ್ಞಕಾರ್ಯ. ಅಲ್ಲಿ ಭಗವತ್ ತತ್ತ್ವವನ್ನು ವೇದಾಂತ ವಿಷಯಗಳನ್ನು. ಪ್ರವಚನ ಮಾಡುವ ಪುಣ್ಯಾತ್ಮ ಮಹರ್ಷಿ

ವಾಮದೇವ. ಆ ವಾಮದೇವಮಹಾಮುನಿಯು ಜನಕರಾಜನಿಗೆ ಹೇಳಿದ ಭಗವಂತನ ಆ ಮಹಾಮಹಿಮೆಯನ್ನು ನಾನು ಈಗ ನಿನಗೆ ಹೇಳುತ್ತೇನೆ.

**ವಾಮದೇವ:-** ಜನಕರಾಜ! ಭಗವಾನ್ ನಾರಾಯಣನೇ ಈ ಸಂಪೂರ್ಣ ವಿಶ್ವಕ್ಕೆಲ್ಲ ಆದಿಕಾರಣ. ಮುಖ್ಯಪಾಲಕ. ಪ್ರಧಾನ ಸಂಹಾರಕ. ಈ ಅಖಂಡ ಬ್ರಹ್ಮಾಂಡವೆಲ್ಲವೂ ಅವನದೇ ಒಂದು ಸ್ಥೂಲರೂಪ. ಈ ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಾದಿ ಸರ್ವ ಕಾರ್ಯಗಳನ್ನು ಮಾಡುವ ಆ ಜಗದೀಶ್ವರನಿಗೆ ಸಾವಿರ ತಲೆ. ಸಾವಿರ ಕಣ್ಣು, ಸಾವಿರ ಕಾಲು, ಹರಿ, ಹರ, ಬ್ರಹ್ಮ, ಇಂದ್ರ, ವಾಯು, ವರುಣ, ಅಗ್ನಿ ಮುಂತಾದವುಗಳೆಲ್ಲ ಶ್ರೀಮನ್ನಾರಾಯಣನ ಪರ್ಯಾಯನಾಮಗಳು. ಅವನೇ ನಿಜವಾದ ಯಜ್ಞಪುರುಷ. ಯಜಮಾನನೂ ಅವನೆ. ಸ್ರುಕ್‌ಸ್ರುವಾ ಮುಂತಾದ ಯಜ್ಞ ಸಾಧನೆಗಳು ಅವನೇ. ಯಜ್ಞ ಮಾಡಿಸುವವನು, ಯಜ್ಞಕ್ಕೆ ಫಲಕೊಡುವವನೂ, ಯಜ್ಞಪುರುಷನಾದ ಶ್ರೀಹರಿಯೇ ಸರಿ. ಅವನು ಎಲ್ಲ ವಸ್ತುಗಳಿಗಿಂತಲೂ ಪರಮ ಪವಿತ್ರ.

**''ಪವಿತ್ರಾಣಾಂ ಪವಿತ್ರಂ ಯೋಽಹ್ಯಗತೀನಾಂ ಗತಿಪ್ರದಃ ।**
**ದೈವತಂ ದೇವತಾನಾಂ ಚ ಶ್ರೇಯಸಾಂ ಶ್ರೇಯ ಉತ್ತಮಮ್ ॥**

ಪವಿತ್ರವಾದ ವಸ್ತುಗಳಿಗೆಲ್ಲ ಪಾವಿತ್ರ್ಯವನ್ನು ತಂದುಕೊಡುವವನು ಅವನೇ. ಆದುದರಿಂದ ಅವನು ಪವಿತ್ರಾಣಾಂ ಪವಿತ್ರಂ ಎಂದರೆ ಪವಿತ್ರತಮ ಎನಿಸುವನು. ಗತಿ ಇಲ್ಲದವರಿಗೆ ಅವನೇ ಸದ್ಗತಿಯನ್ನು ನೀಡುವನು. ಎಲ್ಲದೇವತೆಗಳಿಗೂ ಕೂಡ ಅವನೇ ಪರದೇವತೆ. ಶ್ರೇಯಸ್ಸುಗಳಲ್ಲಿ ಶ್ರೇಷ್ಠವಾದ ಮೋಕ್ಷರೂಪ ಶ್ರೇಯಸ್ಸನ್ನು ಕರುಣಿಸುವವ ಮಹಾಪ್ರಭು ಶ್ರೀಹರಿಯೇ. ಅವನ ಮುಖದಿಂದ ಬ್ರಾಹ್ಮಣ. ಬಾಹುವಿನಿಂದ ಕ್ಷತ್ರಿಯ, ತೊಡೆಯಿಂದ ವೈಶ್ಯ. ಕಾಲಿನಿಂದ ಶೂದ್ರ, ಜನ್ಮ ತಳೆದಿದ್ದಾರೆ. ಸೂರ್ಯಚಂದ್ರರ ರೂಪವನ್ನು ಧರಿಸಿ ಅವನೇ ಕತ್ತಲೆಯನ್ನು ಕಳೆದು ಬ್ರಹ್ಮಾಂಡವನ್ನೆಲ್ಲ ಬೆಳಗುತ್ತಾನೆ. ಆ ದೇವಾಧಿದೇವನ ಸಂಕಲ್ಪ ಮಾತ್ರದಿಂದಲೇ ಈ ಸ್ಥಾವರ ಜಂಗಮಾತ್ಮಕವಾದ ಪ್ರಾಣಿಪ್ರಪಂಚವೂ ಭೂತ ಭವಿಷ್ಯವರ್ತಮಾನಾದಿ ಕಾಲಗಳೂ ಪ್ರಕಟವಾಗುತ್ತಿವೆ. ಕೊನೆಗೆ ಅದೇ ಶ್ರೀಹರಿಯೇ ವಡವಾಗ್ನಿ ರೂಪಧರಿಸಿ ಸಮುದ್ರದ ನೀರನ್ನೆಲ್ಲ ಕುಡಿದುಬಿಡುತ್ತಾನೆ. ಎಲ್ಲ ಪ್ರಾಣಿಗಳನ್ನು ಸಂಹರಿಸಿಬಿಡುತ್ತಾನೆ. ಸಮಗ್ರ ಬ್ರಹ್ಮಾಂಡವನ್ನೆಲ್ಲ ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡು ಒಂದು ಪುಟ್ಟ ಮಗುವಿನ ಆಕಾರ ಧರಿಸಿ ಏಕಾರ್ಣವ ಜಲ ಸಾಗರದಲ್ಲಿ ವಟಪತ್ರದ ಮೇಲೆ ಶಯನ ಮಾಡುತ್ತಾನೆ. ಇನ್ನೊಂದು ರೂಪದಿಂದ ಅದೇ ಪ್ರಳಯೋದಧಿಯಲ್ಲಿ ಆದಿಶೇಷನ ಹೆಡಯಡಿಯಲ್ಲಿ ಹಾವಿನ ಹಾಸಿಗೆಯ ಮೇಲೆ ಲಕ್ಷ್ಮೀದೇವಿಯೊಂದಿಗೆ ಯೋಗ ನಿದ್ರೆಯನ್ನು ಆಶ್ರಯಿಸುತ್ತಾನೆ. ತನ್ನ ಇಚ್ಛಾನುಸಾರವಾಗಿ ಯೋಗ ಶಕ್ತಿಯನ್ನು ಸಂಪೂರ್ಣ ನಿಯಮಿಸುವ ಅಧಿಕಾರವು ಅವನಿಗೆ ಇದೆ. ಹೀಗೆ ಪ್ರಳಯ ಕಾಲದಲ್ಲಿ ಯೋಗ ನಿದ್ರೆಯನ್ನು ಮಾಡಿದ ಬಳಿಕ ಆ ಅವಧಿಯಲ್ಲಿ ತನ್ನ ಉದರದಲ್ಲಿ ಗುಟ್ಟಾಗಿ ಇಟ್ಟುಕೊಂಡ ಪ್ರಪಂಚವನ್ನೆಲ್ಲ ಮತ್ತೆ ಕಲ್ಪಾದಿಕಾಲದಲ್ಲಿ ಹೊರ ತೆಗೆದು ಹೊಸ ಸೃಷ್ಟಿಯನ್ನು ಮಾಡಲು ಉಪಕ್ರಮಿಸುತ್ತಾನೆ. ಹೊಸ ಸೃಷ್ಟಿಯನ್ನು ಮಾಡುವ ಮೊದಲು ಈ ಸೃಷ್ಟಿಕಾರ್ಯಕ್ಕಾಗಿ ಆ ಭಗವಂತನ ಒಂದು ರಜೋಗುಣ ಯುಕ್ತವಾದ ತೇಜೋರೂಪವು ಪ್ರಕಟವಾಗುತ್ತದೆ. ಅದಕ್ಕೆ ಬ್ರಹ್ಮ ಎಂದು ಕರೆಯುತ್ತಾರೆ. ಅದೇ ಭಗವಂತನ ಮುಖದಿಂದ

ಇಂದ್ರ, ಅಗ್ನಿ, ಕರುಣಾ ಪೂರ್ಣವಾದ ಶೀತಲ ಹೃದಯದಿಂದ ಚಂದ್ರ ಕಣ್ಣಿನಿಂದ ಸೂರ್ಯ, ಪ್ರಾಣಗಳಿಂದ ವಾಯು, ನಾಭಿಯಿಂದ ಅಂತರಿಕ್ಷ, ಮಸ್ತಕದಿಂದ ಆಕಾಶ, ಪಾದದಿಂದ ಪೃಥ್ವಿ, ಚಿಂತನಮಾತ್ರದಿಂದ ಭೂ, ಭುವಃಸ್ವಃ ಜನೋ, ತಪೊಮಹ, ಸತ್ಯ, ಸ್ವರ್ಗ, ತಲ, ವಿತಲ, ಅತಲ, ಸುತ್ಯ, ತಲಾತಲ, ರಸಾತಲ, ಪಾತಾಲ ಮುಂತಾದ ಹದಿನಾಲ್ಕು ಲೋಕಗಳೂ ಪ್ರಪಂಚವೆಲ್ಲವೂ ಉತ್ಪನ್ನವಾದವು.

ಇದೇ ಪರಮಾತ್ಮನ ಬ್ರಹ್ಮರೂಪವು ರಜೋಮೂರ್ತಿಯಾದ ಚತುರ್ಮುಖ ಬ್ರಹ್ಮನಲ್ಲಿ ಇದ್ದು ದೇವ, ದಾನವ, ಯಕ್ಷ, ರಕ್ಷ, ಕಿನ್ನರಕಿಂಪುರುಷ, ನಾಗ, ಸಿದ್ಧ, ಗಂಧರ್ವ ಮೊದಲಾದ ಯೋನಿಗಳನ್ನೂ ವೇದ, ಯಜ್ಞ, ಹಸು, ಕುದುರೆ, ಮೇಕೆ, ಎತ್ತು, ಎಮ್ಮೆ, ಹದ್ದು, ಕಾಗೆ, ಹುಳ, ಹುಪ್ಪಡಿ, ಕ್ರಿಮಿಕೀಟ ಮುಂತಾದ ಜೀವ ಪ್ರಪಂಚವನ್ನೆಲ್ಲ ಸೃಷ್ಟಿಗೆ ತರುವನು. ತನ್ನಿಂದ ಸ್ಪಷ್ಟವಾದ ಈ ಜಗತ್ತಿನಲ್ಲಿ ಧರ್ಮಗ್ಲಾನಿಯಾಗಿ ಅಧರ್ಮವು ಬೆಳೆದು ಭೂತಾಕಾರವಾಗಿ ನಿಂತುಕೊಂಡಾಗ ಧರ್ಮರಕ್ಷಣೆಗಾಗಿ ಸಾಧು-ಸಂತರ ಹಾಗೂ ದೇವ ಮುನಿಗಳ ಮೊರೆಯನ್ನು ಕೇಳಿ ಶ್ರೀಹರಿಯು ಅನೇಕ ಅವತಾರಗಳನ್ನು ಎತ್ತುವನು. ಅಧರ್ಮವನ್ನು ನಾಶಮಾಡಿ ಧರ್ಮವನ್ನು ಊರ್ಜಿತಗೊಳಿಸುವನು. ಮಹಾವಿಷ್ಣುವಿನ ಎಲ್ಲ ಅವತಾರಗಳು ಲೋಕ ಕಲ್ಯಾಣಕ್ಕಾಗಿಯೇ ಆಗಿರುತ್ತವೆ. ರಜೋಗುಣವನ್ನು ಆಶ್ರಯಿಸಿ ಬ್ರಹ್ಮದೇವರಲ್ಲಿ ಇದ್ದು ಬ್ರಹ್ಮಾಂಡದ ಸೃಷ್ಟಿಕಾರ್ಯವನ್ನು ಮಾಡಿದಂತೆ ಸ್ವಯಂ ಸ್ರೀಹರಿಯು ತಾನೇ ತನ್ನ ಸತ್ವಾತ್ಮಕ ರೂಪದಿಂದ ಅನೇಕ ಅವತಾರಗಳನ್ನು ಮಾಡಿ ಜಗತ್ತಿನ ಪಾಲನ ಪೋಷಣ ರೂಪವಾದ ಸಂರಕ್ಷಣೆಯ ಕಾರ್ಯವನ್ನು ಮಾಡುವನು. ಕೊನೆಗೆ ತಮೋಗುಣದ ವೃತ್ತಿಯನ್ನು ಆಶ್ರಯಿಸಿ ರುದ್ರನಲ್ಲಿ ಹರ ಎಂಬ ಹೆಸರಿನಿಂದ ಇದ್ದು ಈ ಪ್ರಪಂಚದ ಸಂಹಾರ ಕಾರ್ಯವನ್ನು ತಾನೇ ಮಾಡಿಸುವನು. ಭಗವಂತನ ಸೃಷ್ಟಿ, ಸ್ಥಿತಿ, ಸಂಹಾರಾದಿ ರೂಪವಾದ ಕಾರ್ಯವನ್ನೂ ಬಗೆ ಬಗೆಯ ಅವತಾರಗಳ ಲೀಲೆಗಳನ್ನೂ ಸಂಪೂರ್ಣವಾಗಿ ಯಾರೂ ಅರಿಯಲು ಸಮರ್ಥರಾಗುವದಿಲ್ಲ.

ಈ ಸರ್ವಜ್ಞನಾದ ಭಗವಂತನಿಗೆ ಹುಟ್ಟು, ಸಾವು, ದುಃಖ, ಅಜ್ಞಾನ, ಯಾವುದೂ ಇರುವದಿಲ್ಲ. ಅವನಿಗೆ ಜನ್ಮವಿಲ್ಲದಿದ್ದರೂ ಅನೇಕ ಸಂದರ್ಭಗಳಲ್ಲಿ ಅವತಾರ ಮಾಡಿ ಬೇರೆ ಬೇರೆ ಯೋನಿ ಜಾತಿ ಜನಾಂಗಗಳಲ್ಲಿ ಹುಟ್ಟಿ ಬರುತ್ತಾನೆ. ಅವನು ಸರ್ವಾತ್ಮ ನಾದರೂ ವೈರಿಗಳನ್ನು ಸಂಹರಿಸುತ್ತಾನೆ. ಸ್ವತಂತ್ರನಾದರೂ ಭಕ್ತಪರಾಧೀನ ನಾಗಿದ್ದಾನೆ. ಈ ಗರುಡ ಧ್ವಜನಾದ ಶ್ರೀಹರಿಯೇ ಪ್ರಾಣಿಗಳ ಸರ್ವ ಕರ್ಮಗಳಿಗೆ ಸಾಕ್ಷಿಯಾಗಿದ್ದಾನೆ. ಮುನಿಗಳು ಏಕಾಗ್ರಚಿತ್ತದಿಂದ ಧ್ಯಾನಗೈದು ಅವನ ನಿಜಸ್ವರೂಪವನ್ನು ತಿಳಿಸಲು ಯತ್ನಿಸುತ್ತಾರೆ. ಈ ನಾರಾಯಣನು ಸಂಕರ್ಷಣ , ವಾಸುದೇವ, ಪ್ರದ್ಯುಮ್ನ, ಅನಿರುದ್ಧ ಎಂದು ತನ್ನ ನಾಲ್ಕು ಮೂರ್ತಿಗಳಿಂದ ಚತುರ್ವ್ಯೂಹಾತ್ಮಕನೆಂದು ಪ್ರಸಿದ್ಧನಾಗಿದ್ದಾನೆ. ಈ ಚತುರ್ವ್ಯೂಹಾತ್ಮಕವಾದ ಶ್ರೀಹರಿಯನ್ನು ಸಂತುಷ್ಟಗೊಳಿಸಲು ಮುನಿಗಳು ಒಂದು ಅಮೋಘವಾದ ಮಂತ್ರವನ್ನು ಕಂಡು ಹಿಡಿದ್ದಿದ್ದಾರೆ. ಪ್ರಾರಂಭದಲ್ಲಿ ಪ್ರಣವವನ್ನು ನಂತರ ನಮಶ್ಶಬ್ದವನ್ನು ಮಧ್ಯದಲ್ಲಿ ಭಗವಾನ್ ವಾಸುದೇವ ಪದಗಳನ್ನು ಇರಿಸಿ ''ಓಂ ನಮೋ ಭಗವತೇ ವಾಸುದೇವಾಯ'' ಎಂಬ ಮಂತ್ರ ವರ್ಣವನ್ನು ಕಂಡುಕೊಂಡಿದ್ದಾರೆ ಹಿಂದಿನ ಮಹರ್ಷಿಗಳು. ಈ ಮಂತ್ರವು ನಿಜವಾದ ಭಗವಂತನ ಸ್ವರೂಪದ ಪ್ರಕಾಶಕವಾಗಿರುತ್ತದೆ.

ಪ್ರತಿದಿನಿವೂ ಈ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಗುರುಗಳಿಂದ ಉಪದೇಶ ಪಡೆದು ಭಕ್ತಿಯಿಂದ ಶುಚಿರ್ಭೂತನಾಗಿ ವಿಧ್ಯುಕ್ತ ರೀತಿಯಿಂದ ಜಪ ಮಾಡುವವರಿಗೆ ಶ್ರೀಹರಿಯ ಅನುಗ್ರಹದಿಂದ ಸರ್ವಸಿದ್ಧಿಗಳು ಕರಗತವಾಗುವವು. ಈ ವಾಸುದೇವ ದ್ವಾದಶಾಕ್ಷರ ಮಂತ್ರವನ್ನು ಜಪಿಸಿ ಬಾಲಭಕ್ತ ಧ್ರುವರಾಜನೇ ಮೊದಲಾದ ಮಹನೀಯರು ಭಗವಂತನ ಸಾಕ್ಷಾತ್ಕಾರವನ್ನು ಪಡೆದಿದ್ದಾರೆ.

ಅರವತ್ತು ವಿನಾಡಿಕಾ ಎಂದರೆ ಒಂದು ನಾಡಿಕಾ, ಅಥವಾ ಘಟಿಕಾ. ಅರವತ್ತು ಘಟಿಕಾ ಅಂದರೆ ಒಂದು ದಿವಸ. ಮೂವತ್ತು ದಿನ ಅಂದರೆ ಒಂದು ತಿಂಗಳು. ಅದರಲ್ಲಿ ಹದಿನೈದು ದಿನ ಶುಕ್ಲಪಕ್ಷ ಹದಿನೈದು ದಿನ ಕೃಷ್ಣಪಕ್ಷ. ಎರಡು ತಿಂಗಳಿಗೆ ಒಂದು ಋತು. ಆರು ಋತು ಅತವಾ ಹನ್ನೆರಡು ತಿಂಗಳುಗಳು ಕೂಡಿದರೆ ಒಂದು ವರ್ಷ. ವರ್ಷದಲ್ಲಿ ದಕ್ಷಿಣಾಯಣ ಉತ್ತರಾಯಣ ಎಂದು ಎರಡು ಅಯನಗಳು, ಮಳೆಗಾಲ, ಚಳಿಗಾಲ, ಬೇಸಿಗೆಕಾಲ ಎಂದು ಮೂರು ಕಾಲಗಳು. ಉತ್ತರಾಯಣವು ದೇವತೆಗಳಿಗೆ ಹಗಲು, ದೈತ್ಯರಿಗೆ ರಾತ್ರಿ. ದಕ್ಷಿಣಾಯಣವು ದೇವತೆಗಳಿಗೆ ರಾತ್ರಿ. ದೈತ್ಯರಿಗೆ ಹಗಲು. ಅರ್ಜುನ! ನಲವತ್ತು ಮೂರು ಲಕ್ಷ ಇಪ್ಪತ್ತು ಸಾವಿರ ವರುಷಗಳಿಗೆ ಒಂದು ಮಹಾಯುಗ ಎನಿಸುವದು. ಇದರಲ್ಲಿ ಸತ್ಯಯುಗದಿಂದ ಕಲಿಯುಗದವರೆಗೆ ಎಲ್ಲ ಯುಗಗಳು ಕೂಡಿಕೊಂಡಿರುತ್ತವೆ.

ಎಪ್ಪತ್ತೊಂದು ಇಂಥ ಮಹಾಯುಗಗಳು ತಿರುಗಿದರೆ ಒಂದು ಮನ್ವಂತರವಾಗುವದು. ಬ್ರಹ್ಮದೇವರ ಒಂದು ದಿನದಲ್ಲಿ ಇಂಥ ಹದಿನಾಕು ಮನ್ವಂತರಗಳು ಆಗಿ ಹೋಗುವವು. ಈಗ ನಡೆಯುತ್ತಿರುವದು ವೈವಸ್ವತ ಮನ್ವಂತರ. ಇದಕ್ಕೂ ಮೊದಲು ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ ಮತ್ತು ಚಾಕ್ಷುಷ ಎಂದು ಆರು ಮನ್ವಂತರಗಳು ಕಳೆದು ಹೋಗಿವೆ. ಆ ಆ ಹೆಸರಿನ ಮನು ಮಹರ್ಷಿಗಳು ತಮ್ಮ ಮನ್ವಂತರದ ಅವಧಿ ಕ್ಲಪ್ತವಾದ ಇಂದ್ರ, ದೇವತಾ ಗಣ ಹಾಗೂ ಸಪ್ತಋಷಿಗಳಿಂದ ಕೂಡಿಕೊಂಡು ತಮ್ಮ ಶಾಸನದ ಅವಧಿಯಲ್ಲಿ ಧರ್ಮಚಕ್ರವನ್ನು ಪ್ರವರ್ತಿಸುವರು.

ಈಗ ನಡೆದ ಏಳನೇಯ ಮನ್ವಂತರದಲ್ಲಿ ಸೂರ್ಯಕುಮಾರನಾದ ವೈವಸ್ವತ ಮನು ಮಹಾರಾಜನಾಗಿ ಆಡಳಿತವನ್ನು ನಡೆಸುತ್ತಿದ್ದಾನೆ. ಈ ಕಾಲದಲ್ಲಿ ಹನ್ನೆರಡು ಆದಿತ್ಯರು, ಎಂಟು ವಸುಗಳು, ಹನ್ನೊಂದು ರುದ್ರರು, ನಲವತ್ತೊಂಬತ್ತು ಮರುದ್ಗಣಗಳು ದೇವತಾ ಧುರೀಣರಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ತೇಜಸ್ವಿ ಎಂಬುವವನು ನೂರು ಅಶ್ವಮೇಧ ಯಾಗಗಳನ್ನು ಮಾಡಿ ಇಂದ್ರಪದದಲ್ಲಿ ವಿರಾಜಿಸುತ್ತ ಇರುತ್ತಿದ್ದಾನೆ. ವಶಿಷ್ಠ, ವಿಶ್ವಾಮಿತ್ರ, ಅತ್ರಿ, ಜಮದಗ್ನಿ, ಕಶ್ಯಪ, ಗೌತಮ ಹಾಗು ನಾನು ಅರ್ಥಾತ್ ಭರದ್ವಾಜ ಈ ಏಳು ಜನರು ಈ ವೈವಸ್ವತ ಮನ್ವಂತರದ ಸಪ್ತಋಷಿಗಳಾಗಿ ಧರ್ಮ ದರ್ಶನವನ್ನೂ ಮಾಡಿಸುವವರು. ಈ ವೈವಸ್ವತ ಮನುವಿನ ಬಲಿಷ್ಠ ಮಕ್ಕಳಾದ ಇಕ್ಷ್ವಾಕು ಮೊದಲಾದ ಹತ್ತು ಜನ ಪುತ್ರರು ಮೊದಲು ಭೂತಲ ಸಾರ್ವಭೌಮರಾಗಿ ರಾಜ್ಯ ಆಳಿ ಹೋದರು. ಈ ಮನ್ವಂತರವನ್ನು ಹಿಡಿದು ಒಟ್ಟು ಏಳು ಮನ್ವಂತರಗಳು ಆಗಿರುತ್ತವೆ. ಇನ್ನು ಮುಂದೆ ಮತ್ತೆ ಸೂರ್ಯಸಾವರ್ಣಿ, ದಕ್ಷ ಸಾವರ್ಣಿ, ಬ್ರಹ್ಮ ಸಾವರ್ಣಿ, ಧರ್ಮಸಾವರ್ಣಿ, ರೌಚ್ಯ, ಭೌತ್ಯ, ಎಂದು ಏಳು ಮನುಗಳು ತಮ್ಮ ಹೆಸರಿನ ಏಳು ಮನ್ವಂತರಗಳನ್ನು ಶಾಸನಗೈಯುವವರು

ಮುಂದೆ. ಈ ಹದಿನಾಕು ಮನ್ವಂತರಗಳು ಗತಿಸಿದರೆ ಬ್ರಹ್ಮದೇವರ ಒಂದು ದಿನವು ಪೂರ್ತಿಗೊಳ್ಳುವದು. ಇದಕ್ಕೆ ಕಲ್ಪ ಎಂತಲೂ ಕರೆಯುವರು. ಹದಿನಾಕು ಮನ್ವಂತರಗಳ ಬ್ರಹ್ಮದೇವರ ಒಂದು ದಿನ ಕಳೆದ ಬಳಿಕ ಅಷ್ಟೇ ಅವಧಿಯ ರಾತ್ರಿಕಾಲವೂ ಇರುತ್ತದೆ.

ಬ್ರಹ್ಮದೇವರ ಒಂದು ದಿನವು ಸಮಾಪ್ತವಾದ ಕೂಡಲೇ ಭೂಲೋಕದಲ್ಲಿ ಒಂದು ನೂರು ವರುಷ ಭಯಂಕರ ಉತ್ಪಾತ ಹಾಗೂ ನೈಸರ್ಗಿಕ ವ್ಯಾಕೋಪ ಉಂಟಾಗುವವು. ಸೂರ್ಯನು ಒಂದು ದೊಡ್ಡ ಬೆಂಕಿಯ ಬೆಟ್ಟವಾಗಿ ಅಗ್ನಿ ಜ್ವಾಲೆಗಳನ್ನೇ ಕಿರಣ ರೂಪದಿಂದ ಜಗತ್ತಿನ ತುಂಬ ಚಲ್ಲುವನು. ಅದರಿಂದ ಹಳ್ಳಿ, ನಗರ, ಬೆಟ್ಟ, ಬಯಲು, ಮನೆ, ಮರ, ಎಲ್ಲವೂ ಸುಟ್ಟು ಬೂದಿಯಾಗುವವು. ಆಗ ಬ್ರಹ್ಮದೇವರ ದೇಹದಿಂದ ಮಹಾ ಮೋಡಗಳ ಪಡೆಗಳು ಹೊರಟು ಅದ್ಭುತವಾಗಿ ಮಳೆಗರೆಯುವವು. ಧಾರಾಕಾರವಾಗಿ ನೀರು ಸುರಿದು ದೊಡ್ಡ ಕೆಂಡದ ಹೊಂಡದಂತೆ ಅಥವಾ ಅಗ್ನಿಪಿಂಡದಂತೆ ಉರಿಯುತ್ತಿರುವ ಈ ಬ್ರಹ್ಮಾಂಡವನ್ನೆಲ್ಲ ತೋಯಿಸಿ ಆ ಉರಿಯನ್ನೆಲ್ಲ ಆರಿಸಿ ಬಿಡುವನು.

ಆದರೆ ಒಂದುನೂರು ವರುಷ ಬಿಟ್ಟೂಬಿಡದೆ ಅತಿವೃಷ್ಟಿ ಆಗಿ ಕೆರೆ, ಕಾಲುವೆ, ಬಾವಿ, ಸರೋವರ, ನದಿ ಮಹಾನದಿ, ಸಮುದ್ರ ಎಲ್ಲವೂ ನೀರು ತುಂಬಿ ತುಳಕಿ ಪೃಥ್ವಿಯನ್ನೆಲ್ಲ ಆಕ್ರಮಿಸಿ ಬಿಡುವವು. ಎಲ್ಲ ಸಮುದ್ರಗಳು ಉಕ್ಕೇರಿ ಏಕಾರ್ಣವವಾದ ಘೋರ ಸಾಗರವು ತನ್ನ ಅಪರಂಪಾರವಾರಿ ವಿಸ್ತಾರದಿಂದ ಭೋರ್ಗರೆಯ ತೊಡಗುವದು. ಅನಂತರ ಬ್ರಹ್ಮದೇವರ ನಿಶ್ವಾಸದಿಂದ ವಾಯು ಪ್ರಕಟವಾಗಿ ಒಂದೇ ಸವನೆ ಬೀಸತೊಡಗುವದು. ಅದರಿಂದ ಮುಗಿಲು ಮಾಳಿಗೆಯ ಮೇಲೆ ಬಿಗಿದು ನಿಂತು ಮಳೆ ಹೊಯ್ಯುವ ಮೋಡಪಡೆಗಳೆಲ್ಲವೂ ಒಡೆದು ಚದುರಿ ಹೋಗುವವು. ಆದರೆ ವಾಯುವಿನ ಘೋರವ್ಯಾಪಾರ ನಡೆಯುವದು ನೂರುವರುಷಗಳ ವರೆಗೆ.

ಅನಂತರ ಆ ಭೀಕರ ಬಿರುಗಾಳಿಯನ್ನು ಬ್ರಹ್ಮದೇವನು ವಟಪತ್ರಶಾಯಿಯಾದ ಪದ್ಮನಾಭರೂಪಿ ಶ್ರೀಹರಿಯ ನಾಭೀಕಮಲದ ಸುಳಿಯಲ್ಲಿ ಅಡಗಿಸಿ ಪರಮಾತ್ಮನಿಗೆ ನಮಸ್ಕರಿಸಿ ತಾನು ಮಲಗಿಸಿಕೊಳ್ಳುವನು. ಭಗವಂತನ ದಯೆಯಿಂದ ಬ್ರಹ್ಮದೇವನು ಹಗಲಿನಷ್ಟೆ ನಂತರದ ತನ್ನ ರಾತ್ರಿಕಾಲದಲ್ಲಿ ಯೋಗನಿದ್ರೆ ಪಡೆದು ವಿಶ್ರಾಂತಿ ತೆಗೆದುಕೊಳ್ಳುವನು. ಅಷ್ಟು ರಾತ್ರಿಯು ಸಂದಬಳಿಕ ಹೊಸಕಲ್ಪದ ಉದಯಕಾಲದಲ್ಲಿ ಬ್ರಹ್ಮದೇವರು ಎದ್ದು ವಿಷ್ಣುವಿನ ಆಜ್ಞೆಯಂತೆ ತನ್ನಲ್ಲಿರುವ ತನ್ನ ಹೆಸರಿನ ಶ್ರೀಹರಿಯ ಬೆಂಬಲದಿಂದ ಪುನಃ ಸೃಷ್ಟಿ ಕಾರ್ಯದಲ್ಲಿ ತೊಡಗುವನು. ಪ್ರತಿಯೊಂದು ಕಲ್ಪಕಾಲದಲ್ಲಿ ಆ ಮಹಾವಿಷ್ಣುವು ಅವರ ಪ್ರಾರ್ಥನೆಯಂತೆ ಒಂದೊಂದು ರೂಪವನ್ನು ಧರಿಸಿ ಜಗದ್ರಕ್ಷಣ ರೂಪವಾದ ತನ್ನ ಕಾರ್ಯವನ್ನು ನಿರ್ವಹಿಸುತ್ತಾನೆ.

ಅರ್ಜುನ! ಈಗ ನಡೆದಿರುವದು ಶ್ವೇತವರಾಹ ಕಲ್ಪ. ಈ ಕಲ್ಪದ ಪ್ರಾರಂಭದಲ್ಲಿ ಬ್ರಹ್ಮದೇವರು ಭಗವಂತನಿಗೆ ಶ್ವೇತವರಾಹ ರೂಪದಿಂದ ಬಂದು ಜಗತ್ತನ್ನು ಕಾಪಾಡಬೇಕು. ಎಂದು ಮೊರೆ ಇಟ್ಟಿದ್ದಾರೆ. ಅವರ ಬಿನ್ನಹವನ್ನು ಮನ್ನಿಸಿ ಭಗವಂತನು ವರಾಹರೂಪದಿಂದ ವಿಶ್ವರಕ್ಷಣೆಯ ಕಾರ್ಯವನ್ನು ಕೈಕೊಂಡಿದ್ದಾನೆ. ಆ ವರಾಹ ಶರೀರದಿಂದ ಭೂಲೋಕದಲ್ಲಿ ವಿಹಾರ ಮಾಡುತ್ತ ತನ್ನ ಪೂರ್ವಕಲ್ಪದ ನಿಶ್ಚಿತ ನಿವಾಸ ಸ್ಥಾನವಾದ ಈ ವೆಂಕಟಾಚಲ ಪವರ್ತದ ಮೇಲೆ ಪಾದಾರ್ಪಣವನ್ನು ಮಾಡಿದ್ದಾನೆ. ಇಲ್ಲಿರುವ ಸ್ವಾಮಿಪುಷ್ಕರಣಿಯ ದಂಡೆಯ ಮೇಲೆ ಬಹುಕಾಲ ಸಂಚರಿಸುತ್ತಿದ್ದಾಗ

ಬ್ರಹ್ಮದೇವರು ಬಂದು ಆ ಭಗವಂತನಲ್ಲಿ ಮತ್ತೊಮ್ಮೆ ಪ್ರಾರ್ಥನೆಯನ್ನು ಸಲ್ಲಿಸಿದರು.- ''ಸ್ವಾಮಿ, ಈ ನಿನ್ನ ನಿಜರೂಪದಿಂದ ಎಲ್ಲಿ ಹೋದರು ಒಂದು ರೂಪದಿಂದ ಮಾತ್ರ ಈ ಸ್ವಾಮಿಪುಷ್ಕರಣಿಯ ತಟಾಕದಲ್ಲಿ ಸನ್ನಿಹಿತನಾಗಿ ಇರು.'' ಬ್ರಹ್ಮದೇವರ ಈ ಪ್ರಾರ್ಥನೆಯನ್ನು ಮನ್ನಿಸಿ ಈ ಕಲ್ಪದ ಸಂರಕ್ಷಣೆಯ ಭಾರವನ್ನು ಹೊತ್ತ ಭಗವಾನ್ ಶ್ರೀ ಶ್ವೇತವರಾಹನು ಸ್ವಾಮಿಪುಷ್ಕರಣಿಯ ತೀರದಲ್ಲಿ ಇರುವ ಶಿಲಾಮಯ ವರಾಹ ಮೂರ್ತಿಯಲ್ಲಿ ನಿತ್ಯವು ಸನ್ನಿಹಿತನಾಗಿದ್ದಾನೆ.

## ಪರಮಾತ್ಮನ ಪ್ರತ್ಯಕ್ಷ ದರ್ಶನ

**ಅರ್ಜುನ:-** ಪೂಜನೀಯರೇ, ಭಗವಾನ್ ಶ್ರೀಹರಿಯು ಮಾನವರ ಈ ಚರ್ಮ ಚಕ್ಷುಸ್ಸಿಗೆ ಗೋಚರವಾಗುವವನು ಅಲ್ಲ. ಯೋಗಿಗಳಿಗೆ ಮಾತ್ರ ಧ್ಯಾನಗಮ್ಯ. ಅಂಥ ಪರಬ್ರಹ್ಮ ಪರಮಾತ್ಮನು ಈ ವೆಂಕಟಾಚಲ ಎಂಬ ಬೆಟ್ಟದಲ್ಲಿ ಮಾನವರಿಗೆ ದೃಷ್ಟಿ ಗೋಚರನಾಗಿ ಮುನಿ ಮಹರ್ಷಿಗಳಿಗೆ ಚಾಕ್ಷುಷ ವಿಷಯನು ಆದುದು ಎಂತು?

**ಭರದ್ವಾಜ:-** ಅರ್ಜುನ, ಹೈಹಯ ವಂಶದಲ್ಲಿ ಶ್ರುತ ಎಂಬ ಒಬ್ಬ ಪ್ರಸಿದ್ಧ ರಾಜ ಹಿಂದೆ ಆಗಿ ಹೋದ. ಅವನು ಈ ಪೃಥ್ವಿಯನ್ನು ತನ್ನ ಪುತ್ರಿಯಂತೆ, ಪ್ರಜೆಗಳನ್ನು ಪುತ್ರರಂತೆ ಪ್ರೀತಿಯಿಂದ ಪರಿಪಾಲಿಸುತ್ತಿದ್ದ, ಅವನಿಗೊಬ್ಬ ಸತ್ಪುತ್ರ. ಶಂಖ ಎಂದು ಅವನ ಹೆಸರು. ಆ ಶಂಖನಲ್ಲಿ ಇರುವ ಗುಣಗಳು ಅಸಂಖ್ಯ, ಸದ್ಗುಣಗಳ ತವನಿಧಿ. ಶಾಸ್ತ್ರಗಳಲ್ಲಿ ಕುಶಲ. ತಂದೆಯಂತೆ ಅವನು ಈ ಭೂಮಂಡಲವನ್ನು ನ್ಯಾಯಪೂರ್ವಕವಾಗಿ ಆಳಿದ. ಜಗದೊಡೆಯನಾದ ಮಹಾವಿಷ್ಣುವಿನಲ್ಲಿ ಆ ಶಂಖರಾಜನಿಗೆ ಅವಿಚಲ ವಿಶ್ವಾಸ, ಅನನ್ಯಭಕ್ತಿ, ದೇವಾಧಿದೇವನಾದ ಆ ಪುರುಷೋತ್ತಮನನ್ನು ಉದ್ದೇಶಿಸಿ ಆ ಶಂಖಮಹಾರಾಜನು ಅನೇಕ ವ್ರತಗಳನ್ನು ಮಾಡಿದ. ದಾನಗಳನ್ನು ನೀಡಿದ. ಹರಿಪ್ರೀತಿಗಾಗಿ ಅಶ್ವಮೇಧಾದಿ ಯಜ್ಞಗಳನ್ನು ನೆರವೇರಿಸಿದ. ಪ್ರತಿದಿನವೂ ತಪ್ಪದೆ ಕಮಲನಯನನಾದ ಆ ಲಕ್ಷ್ಮೀಪತಿಯ ಶಾಸ್ತ್ರೋಕ್ತ ಪೂಜೆಯನ್ನು ಮಾಡಿ ಬಹಳ ಹೊತ್ತಿನವರೆಗೆ ಅವನ ನಾಮ ಕೀರ್ತನೆಯನ್ನು ಮಾಡುತ್ತಿದ್ದ. ಪಂಡಿತರ ಕಡೆಯಿಂದ ಪುರಾಣಶ್ರವಣವನ್ನು ಮಾಡುತ್ತಲಿದ್ದ. ಹೀಗೆ ಎಡೆಬಿಡದೆ ಹಗಲಿರುಳು ಕಾಯಾ ವಾಚಾ, ಮನಸಾ, ತ್ರಿಕರಣ ಶುದ್ಧಿಪೂರ್ವಕವಾಗಿ ಶಂಖರಾಜನು ಶ್ರೀಹರಿಯ ಆರಾಧನೆಯನ್ನು ಸಂತತವೂ ಮಾಡುತ್ತಲಿದ್ದನು. ಒಮ್ಮೆಯೂ ಅವನಿಗೆ ಭಗವಂತನ ದರ್ಶನ ಆಗಲಿಲ್ಲ. ಪರಮಭಗವದ್ಭಕ್ತ ಆ ಶಂಖದೊರೆ. ಶ್ರೀಹರಿಯನ್ನು ಕಾಣಬೇಕೆಂದು ಹಾತೊರೆಯುತ್ತಿತ್ತು ಅವನ ಮನ. ಇದೊಂದು ಅವನಿಗೆ ದೊಡ್ಡ ಚಿಂತೆಯಾಯಿತು. ಅವನು ತನ್ನ ಮನಸ್ಸಿನಲ್ಲಿಯೇ ಯೋಚಿಸಿದ- ''ನನ್ನ ಹಿಂದಿನ ಅನೇಕ ಜನ್ಮಗಳಲ್ಲಿ ಬಹಳ ಪಾಪ ಮಾಡಿರಬೇಕು. ಅದಕ್ಕಾಗಿಯೇ ನನಗೆ ಈ ಜನ್ಮದಲ್ಲಿ ಎಷ್ಟು ಹರಿಸೇವೆಯನ್ನು ಮಾಡಿದರೂ ಆ ಪರಮಾತ್ಮನ ಸಾಕ್ಷಾತ್ಕಾರವು ದೊರೆಯಲೊಲ್ಲದು. ಜನ್ಮ ಜನ್ಮಾಂತರದಲ್ಲಿ ಮನುಷ್ಯನು ಮಾಡಿದ ಅಖಂಡ ತಪಸ್ಸಿನ ಫಲವೇ ಶ್ರೀಹರಿಯ ಸಾಕ್ಷಾತ್ ಸಂದರ್ಶನ. ಅಂಥ ದರ್ಶನವು ನನಗೆ ಈ ಜನ್ಮದಲ್ಲಿ ಏನು ಮಾಡಿದರೆ ಆದೀತು? ಈ ಕಿವಿಗಳಿಂದ ಆ ಪರಮಾತ್ಮನ ಸ್ವಂತವಾಣಿಯನ್ನು ಕೇಳುವ ಸೌಭಾಗ್ಯವು ಹೇಗೆ ಲಭಿಸೀತು.'' ಹೀಗೆ ಅನಂತ ಚಿಂತೆಯಿಂದ ತುಡಿಯ ತೊಡಗಿತ್ತು ಅವನ ಅಂತರಂಗ. ದೇವರ ದರ್ಶನವಿಲ್ಲದೆ ಅವನಿಗೆ ಬದುಕಿ ಇರುವದು ಕೂಡ ಬೇಡ ಎನಿಸಿತು.

ಭಕ್ತ ಶಂಖ ಮಹಾರಾಜನ ಮನಸ್ಸಿನ ಈ ವ್ಯಾಕುಲತೆಯನ್ನು ಕಂಡು ಭಗವಂತ ಅವನಿಗೆ ಅವ್ಯಕ್ತರೂಪದಿಂದ ಹೇಳಿದನು- "ರಾಜನ್! ನೀನು ಶೋಕಿಸಬೇಡ. ನನಗೆ ಶರಣು ಬಂದ ನೀನು ನನ್ನ ಅನನ್ಯಭಕ್ತ. ನಿನ್ನನ್ನು ನಾನು ಹೇಗೆ ಕೈಬಿಡುವೆನು? ಭಾರತದ ದಕ್ಷಿಣ ದೇಶದಲ್ಲಿರುವ ವೆಂಕಟಗಿರಿ ಎಂಬ ಪರ್ವತವು ವಿಶ್ವವಿಶ್ರುತ. ಆ ವೆಂಕಟಾಚಲದಲ್ಲಿ ವಾಸ ಮಾಡುವದು ನನಗೆ ವೈಕುಂಠವಾಸಕ್ಕಿಂತ ಪ್ರಿಯಕರವಾಗಿದೆ. ನೀನು ವೆಂಕಟಾದ್ರಿಗೆ ಹೋಗು. ಆ ಪುಣ್ಯಕ್ಷೇತ್ರದಲ್ಲಿ ನಿಂತು ತಪಸ್ಸನ್ನು ಮಾಡು. ನಾನು ನಿನ್ನ ಭಕ್ತಿಯುತವಾದ ತೀವ್ರ ತಪಶ್ಚರಣೆಯಿಂದ ಪ್ರಸನ್ನನಾಗಿ ಪ್ರತ್ಯಕ್ಷ ದರ್ಶನವನ್ನು ನೀಡುವೆನು ನಿನಗೆ. ನಿನ್ನಂತೆ ಮಹರ್ಷಿ ಅಗಸ್ತ್ಯನು ಕೂಡ ಬ್ರಹ್ಮದೇವರ ಅಪ್ಪಣೆಯಂತೆ ಇದೇ ವೆಂಕಟಾಚಲಕ್ಕೆ ಬಂದು ತಪಸ್ಸನ್ನು ಆಚರಿಸುವನು. ನೀನು ಕೂಡ ಆ ವೆಂಕಟಾಚಲ, ವೃಷಭಾಚಲ, ಅಂಜನಾಚಲ, ಶೇಷಾಚಲ ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುವ ದೊಡ್ಡ ಗುಡ್ಡದ ಮೇಲೆ ನಿಂತು ತಪಸ್ಸನ್ನು ಮಾಡು. ಅದರಿಂದ ನಿನಗೆ ನನ್ನ ದುರ್ಲಭವಾದ ಸಾಕ್ಷಾತ್ಕಾರವು ಪ್ರಾಪ್ತವಾಗುವದು."

ಪರಮಾತ್ಮನು ಅವ್ಯಕ್ತ ರೂಪದಿಂದ ನೀಡಿದ ಈ ಆದೇಶದಿಂದ ಅತ್ಯಧಿಕ ಆನಂದ ವಾಯಿತು ಆ ಶಂಖ ಮಹಾರಾಜನಿಗೆ. ಅವನು ತನ್ನ ಮಗನಾದ ವಜ್ರಕುಮಾರನಿಗೆ ಪ್ರಜಾಪಾಲನದ ಕಾರ್ಯವನ್ನು ಒಪ್ಪಿಸಿದ. ಭಗವಂತನನ್ನು ಕಣ್ಣಾರೆ ಕಾಣಬೇಕೆಂಬ ತವಕದಿಂದ ನಾರಾಯಣಗಿರಿಗೆ ನಡೆದ. ಆ ಶೈಲಶ್ರೇಣಿಯನ್ನು ಏರಿದ. ಅದರ ಶಿಖರದ ಅಂಗಳಕ್ಕೆ ಬಂದು ತಲುಪಿದ. ಅಮೃತದಂತೆ ಸ್ವಚ್ಛ ಸ್ವಾದು, ಶೀತಲ ಸಲಿಲವು ಮಡುಗಟ್ಟಿ ಥಳಥಳಿಸುತ್ತಿದ್ದ ಸ್ವಾಮಿ ಪುಷ್ಕರಣಿಯನ್ನು ನೋಡಿದ. ಆ ದಂಡೆಯ ಮೇಲೆ ಒಂದು ಗುಡಿಸಲು ಹಾಕಿದ. ಜಗದೀಶನಾದ ಜನಾರ್ದನನಿಗೆ ಸರ್ವ ಕರ್ಮಗಳನ್ನು ಸಮರ್ಪಿಸಿ ಶಂಖರಾಜನು ಭಗವಂತನ ಜಪ, ಧ್ಯಾನ, ಭಜನ, ಕೀರ್ತನೆಗಳಲ್ಲಿ ತಲ್ಲೀನನಾದ. ಕೆಲವು ದಿನಗಳ ಬಳಿಕ ಅದೇ ಸ್ವಾಮಿ ಪುಷ್ಕರಣಿಯ ದಂಡೆಯಲ್ಲಿ ನಿಂತು ಅಖಂಡ ತಪಸ್ಸನ್ನು ಮಾಡತೊಡಗಿದ. ಭಾರತದ ದಕ್ಷಿಣ ತುದಿಯಲ್ಲಿ ನೂರಾರು ಜನ ಮುನಿಶಿಷ್ಯರೊಡನೆ ತೀರ್ಥಯಾತ್ರೆ ಮಾಡುತ್ತ ಅಗಸ್ತ್ಯಋಷಿಗಳು ಈ ವೆಂಕಟಾಚಲ ಪರ್ವತಕ್ಕೆ ಬಂದರು. ಆ ಮಹಾ ಪರ್ವತದ ತಲೆಯ ಭಾಗದಲ್ಲಿ ತುಂಬಿರುವ ಎಲ್ಲ ತೀರ್ಥಗಳನ್ನು ಸಂದರ್ಶಿಸಿದರು. ಸ್ಕಂದಧಾರಾ ಮುಂತಾದ ತೀರ್ಥಗಳಲ್ಲಿ ಸ್ನಾನಮಾಡಿ ಬಹಳ ಸಮಯದ ವರೆಗೆ ಭಗವಂತನನ್ನು ಆರಾಧಿಸಿದರು. ಅತ್ಯುಗ್ರ ತಪಸ್ಸನ್ನು ಮಾಡಿದರು ಶ್ರೀಹರಿಯನ್ನು ಕುರಿತು. ಇಷ್ಟಾದರೂ ವಿಷ್ಣು ಬರಲಿಲ್ಲ ಅವರಿಗೆ ದರ್ಶನ ನೀಡಲಿಲ್ಲ. ಪರಮಾತ್ಮನ ದರ್ಶನವಿಲ್ಲದೆ ಅಗಸ್ತ್ಯ ಮಹರ್ಷಿಗಳು ಚಿಂತಾಗ್ರಸ್ತರಾದರು. ಹೀಗೆ ಚಿಂತೆಯಿಂದ ವ್ಯಾಕುಲರಾದ ಅಗಸ್ತ್ಯಋಷಿಗಳ ಬಳಿಗೆ ದೇವಗುರು ಬೃಹಸ್ಪತಿ, ದೈತ್ಯಗುರು ಶುಕ್ರ, ಉಪರಿಚರರಾಜ ಮುಂತಾದ ಮಹಾನುಭಾವರು ಬಂದರು. ಮತ್ತು ಹೇಳಿದರು. "ಋಷಿ ಪುಂಗವರೇ! ಲೋಕಪಿತಾಮಹನಾದ ಬ್ರಹ್ಮದೇವರ ಒಂದು ಸಂದೇಶವನ್ನು ನಿಮಗೆ ತಲುಪಿಸಲು ನಾವು ಇಲ್ಲಿಗೆ ಬಂದಿದ್ದೇವೆ. ಅವರು ನಿಮಗೆ ಹೀಗೆ ಸಂದೇಶ ಕೊಟ್ಟಿದ್ದಾರೆ "ದಕ್ಷಿಣ ಭಾರತದಲ್ಲಿ ವೆಂಕಟಾಚಲ ಎಂಬ ಒಂದು ಪುಣ್ಯ ಪರ್ವತವಿದೆ. ಅದು ಶ್ವೇತ ದ್ವೀಪಕ್ಕಿಂತ ಪರಮ ಪ್ರೀತ್ಯಾಸ್ಪದ ತಾಣ ಲಕ್ಷ್ಮೀಪತಿಗೆ. ಜಗದೇಕ ಗುರುವಾದ

ಆ ಗೋವಿಂದನು ತನ್ನ ವಿಶಿಷ್ಟ ಸ್ಥಾನವಾದ ಆ ವೆಂಕಟಗಿರಿಯಲ್ಲಿ ಅಗಸ್ತ್ಯಮಹರ್ಷಿಗೂ ಶಂಖ ಮಹಾರಾಜನಿಗೂ ಪ್ರತ್ಯಕ್ಷ ದರ್ಶನವನ್ನು ಕರುಣಿಸಲಿರುವ. ಆಗ ಅವರಿಬ್ಬರೊಡನೆ ಆ ವೆಂಕಟಾದ್ರಿಯ ನಡುನೆತ್ತಿಯ ಮೇಲೆ ನಿಂತುಕೊಂಡು ಎಲ್ಲ ಮುನಿ ಮನುಜ ದೇವತಾದಿಗಳಿಗೂ ಸಂದರ್ಶನವನ್ನು ನೀಡುವನು'' ಬ್ರಹ್ಮದೇವರು ನಿನಗೆ ಹೇಳಿ ಕಳಿಸಿದ ಈ ಸಂದೇಶವನ್ನು ನಿನಗೆ ತಿಳಿಸಿ ನಿಮ್ಮೊಡನೆ ನಾವು ಕೂಡ ಆ ಭಗವಂತನ ಪ್ರತ್ಯಕ್ಷ ದರ್ಶನವನ್ನು ಪಡೆಯಬೇಕೆಂದು ಇಲ್ಲಿಗೆ ಬಂದಿದ್ದೇವೆ. ನಮಗೆ ಈ ಸ್ವಾಮಿ ಪುಷ್ಕರಣಿಯ ದಂಡೆಯ ಮೇಲೆ ತಮ್ಮಂಥ ಶ್ರೇಷ್ಠ ತಪಸ್ಸನ್ನು ಮಾಡುತ್ತಲಿರುವ ಶಂಖ ಮಹಾರಾಜನ ದರ್ಶನಕ್ಕೆ ಹೋಗುತ್ತೇವೆ.'' ಹೀಗೆ ಹೇಳಿ ಶುಕ್ರ ಬೃಹಸ್ಪತಿ ಉಪರಿಚರರಾಜ ಮುಂತಾದವರು ವೆಂಕಟಾದ್ರಿಯ ಕಡೆಗೆ ಹೊರಟರು.

ಬ್ರಹ್ಮದೇವರ ಈ ಸಂದೇಶವನ್ನು ಕೇಳಿ ಅಗಸ್ತ್ಯ ಮುನಿಗಳು ತಮ್ಮ ಎಲ್ಲ ಪರಿವಾರದೊಂದಿಗೆ ವೆಂಕಟಗಿರಿಗೆ ಹೊರಟರು. ಶಿಷ್ಯರೊಂದಿಗೆ ಭಗವಂತನ ನಾಮಗರ್ಜನೆಯನ್ನು ಮಾಡುತ್ತ ಗಿರಿಯನ್ನೇ ಏರಿದರು. ದಾರಿಗುಂಟ ಶಿಲೆಯ ಮೇಲೆ ಕುಳಿತು ಸಮಾಧಿಸ್ಥರಾದ ಅನೇಕ ಯೋಗಿಗಳು, ಭಗವಂತನ ಗುಣಗಾನವನ್ನು ಮಾಡುತ್ತ ಅಲ್ಲಲ್ಲಿ ಕುಳಿತ ಸಿದ್ಧಪುರುಷರು ಅವರ ಕಣ್ಣಿಗೆ ಬಿದ್ದರು. ಅವರು ಆ ಪುಣ್ಯಪರ್ವತವನ್ನು ಆರೋಹಣ ಮಾಡಿ ಸ್ವಾಮಿ ಪುಷ್ಕರಣಿಯ ತಟಾಕಕ್ಕೆ ಬಂದರು. ಅಲ್ಲಿಯೇ ತಪಸ್ಸನ್ನು ಮಾಡುತ್ತಿದ್ದ ರಾಜರ್ಷಿ ಶಂಖ, ಅವನ ಮನಸ್ಸು, ಮೈ ಮಾತು ಮೂರು ಭಗವಂತನಿಗೆ ಅರ್ಪಿತವಾಗಿದ್ದವು. ಶಿಷ್ಯ ಪರಿವಾರ ಸಮೇತರಾಗಿ ಅಲ್ಲಿಗೆ ಆಗಮಿಸಿದ ಅಗಸ್ತ್ಯ ಮಹರ್ಷಿಗಳನ್ನು ಕಂಡು ಶಂಖರಾಜನು ಸಂತೋಷ ಭರಿತನಾದ. ಆನಂದದಿಂದ ಸತ್ಕಾರ ಮಾಡಿದ. ಆಗ ಅವರೆಲ್ಲರೂ ಒಮ್ಮನದಿಂದ ಗೋವಿಂದನ ಧ್ಯಾನ, ಭಜನೆ ಹಾಗೂ ನಾಮ ಸಂಕೀರ್ತನೆಯನ್ನು ಮಾಡಿ ಹಾಡತೊಡಗಿದರು.

ಸಂಪೂರ್ಣ ಜಗತ್ತನ್ನೆಲ್ಲ ಮರೆತು ಕುಳಿತು, ಸ್ಥಳಬಿಟ್ಟು ಏಳದೆ ಆ ಎಲ್ಲ ರಾಜರು ಋಷಿಗಳು ಕೂಡಿ ತನ್ಮಯತೆಯಿಂದ ಭಗವಂತನ ನಾಮ ಸಂಕೀರ್ತನೆಯನ್ನು ಮಾಡುತ್ತಲಿದ್ದಾಗ ಮೂರು ಹಗಲು ಮೂರು ರಾತ್ರಿ ಸರಿದವು. ಯಾರಿಗೂ ಊಟದ ಹಸಿವೆಯಿಲ್ಲ. ನಿದ್ದೆಯ ನೆನಪು ಇಲ್ಲ. ಹಗಲೂ ಹರಿಯ ಧ್ಯಾನ. ರಾತ್ರಿ ರಮೇಶನ ಗಾನ. ಹೀಗೆ ಅಖಂಡ, ಧ್ಯಾನ ಭಜನೆಗಳು ಮೂರು ದಿನ ನಡೆದ ಬಳಿಕ. ನಾಲ್ಕನೆಯ ದಿನ ಅರುಣೋದಯದ ಕಾಲದಲ್ಲಿ ಅವರೆಲ್ಲರ ಕಣ್ಣು ತಾವಾಗಿಯೇ ಮುಚ್ಚಿದವು. ಎಲ್ಲರಿಗೂ ನಿದ್ದೆ ಬಂದಿತು. ಎಲ್ಲರಿಗೂ ಸುಂದರವಾದ ಸ್ವಪ್ನ. ಸ್ವಪ್ನದಲ್ಲಿ ಭಗವಾನ್ ಪುರುಷೋತ್ತಮನು ತನ್ನ ನಾಕು ಕೈಗಳಲ್ಲಿ ಶಂಖ, ಚಕ್ರ, ಗಧಾ, ಪದ್ಮಗಳನ್ನು ಧರಿಸಿ ಪ್ರಸನ್ನ ಮುಖದಿಂದ ನಿಂತುಕೊಂಡಿದ್ದಾನೆ. ವರ ಕೊಡುವ ಒಲವು ಅವನ ಶ್ರೀಮುಖದಲ್ಲಿ, ಕರುಣಿಸುವ ತವಕ ಅವನ ನೇತ್ರಗಳಲ್ಲಿ. ಪರಮಾತ್ಮನ ಈ ಪ್ರಸನ್ನ ಮುಖಮುದ್ರೆಯನ್ನು ನೋಡಿ ಅವರೆಲ್ಲರಿಗೂ ಎಚ್ಚರವಾಯಿತು. ಪ್ರತಿಯೊಬ್ಬರಿಗೂ ಸ್ವಪ್ನದಲ್ಲಿ ಕಂಡ ಭಗವಂತನ ನೆನಪು ಇನ್ನು ಹಚ್ಚ ಹಸಿರು. ಮೈತುಂಬ ಇನ್ನೂ ಅದೇ ಹಿಗ್ಗಿನ ಮುಳ್ಳುಗಳು. ಕೂಡಲೇ ಅವರೆಲ್ಲರೂ ಎದ್ದು ಸ್ವಾಮಿಪುಷ್ಕರಣಿಯಲ್ಲಿ ಸ್ನಾನ ಮಾಡಿ ವಿಧಿಪೂರ್ವಕವಾಗಿ. ತಮ್ಮ ಪ್ರಾತರಾಹ್ನಿಕವೆಲ್ಲ ಮುಗಿಸಿದರು.

ಶಂಖರಾಜನ ಆಶ್ರಮಕ್ಕೆ ಬಂದರು. ದಾರಿಯಲ್ಲಿಯೇ ಅವರಿಗೆ ಶುಭ ಶಕುನಗಳು ಕಾಣಿಸಿಕೊಂಡವು. ಅಲ್ಲಿ ಬಂದ ಬಳಿಕ ಅವರೆಲ್ಲರೂ ಶ್ರೀಹರಿಯ ಪೂಜೆ ಮಾಡಿ

ವೇದಮಂತ್ರಗಳಿಂದ ಭಗವಂತನನ್ನು ಸ್ತೋತ್ರ ಮಾಡಿದರು. ಕೊನೆಗೆ ಆಗಸ್ತ್ಯಮುನಿ ಹಾಗೂ ಶಂಖರಾಜ ಇಬ್ಬರೂ ನಾರಾಯಣ ಅಷ್ಟಾಕ್ಷರ ಜಪವನ್ನು ಮಾಡತೊಡಗಿದರು. ಜಪಾಸಕ್ತರಾದ ಅವರಿಬ್ಬರ ಮನಸ್ಸು ಭಕ್ತಿಯ ಉತ್ಕಟತೆಯಿಂದ ಭಗವದೇಕ ನಿಷ್ಠವಾಗಿ ಅವನ ಸಚ್ಚಿದಾನಂದ ವಿಗ್ರಹವನ್ನು ಚಿಂತಿಸುತ್ತಿತ್ತು.

ಹೀಗೆ ಆ ಮಹಾತ್ಮರಿಬ್ಬರು ಚಿತ್ತವನ್ನು ಮೂಲಮಂತ್ರದ ಜಪದಲ್ಲಿ ಕೇಂದ್ರೀಕರಿಸಿದಾಗ ಒಮ್ಮೆಲೆ ಕೋಟಿ ಸೂರ್ಯಚಂದ್ರರು ಏಕಕಾಲಕ್ಕೆ ಉದಯವಾದಂತೆ ಆ ಮಹಾತ್ಮರೆದುರು ಅದ್ಭುತ ತೇಜಸ್ಸು ಪ್ರಕಟವಾಯಿತು. ಆ ತೇಜೋರೂಪವನ್ನು ಕಂಡಕೂಡಲೇ ಎಲ್ಲರಿಗೂ ಪರಮಾಶ್ಚರ್ಯವಾಯಿತು. ಅಲ್ಲಿ ನೆರೆದ ಮುನಿ ಮನುಜ ಮಹರ್ಷಿಗಳು ಎಲ್ಲರೂ ಶ್ರೀಮನ್ನಾರಾಯಣನ ಜ್ಞಾನಾನಂದಮಯವಾದ ದಿವ್ಯರೂಪದ ದರ್ಶನವನ್ನು ಮಾಡಿಕೊಂಡರು. ವಕ್ಷಸ್ಥಳದಲ್ಲಿ ಲಕ್ಷ್ಮೀದೇವಿಯು, ಕೊರಳಲ್ಲಿ ಕೌಸ್ತುಭಮಣಿ, ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮ, ಬಂಗಾರದ ಕಾಂತಿ, ಸಾವಿರಕಣ್ಣು, ಸಾವಿರತೋಳು, ಸಹಸ್ರಪಾದಗಳು. ಭಗವಂತನ ಆ ವಿರಾಟ ರೂಪವನ್ನು ಕಂಡು ಶಂಖರಾಜ ಅಗಸ್ತ್ಯಮುನಿ ಹಾಗೂ ದೇವಲೋಕದಿಂದ ಬಂದ ಗುರು, ಶುಕ್ರ, ಉಪರಿಚರರು ಸಾಷ್ಟಾಂಗ ಪ್ರಣಾಮಗೈದರು. ಭಗವಂತನು ತನ್ನ ಕೈಯಲ್ಲಿ ಇರುವ ಪಾಂಚಜನ್ಯವನ್ನು ಊದಿದನು. ಅದರ ಗಂಭೀರನಾದವು ಬ್ರಹ್ಮಾಂಡವನ್ನೇ ವ್ಯಾಪಿಸಿತು. ಆ ಶಂಖನಾದವನ್ನು ಕೇಳಿ ವಶಿಷ್ಠ ವಾಮದೇವಾದಿ ಮುನಿಗಳು ವಿಷ್ವಕ್‌ಸೇನ, ಗರುಡ, ಜಯ, ವಿಜಯ, ಮೊದಲಾದ ಶ್ವೇತದೀಪದಲ್ಲಿರುವ ಭಗವಂತನ ಪಾರ್ಷದರು ಅಲ್ಲಿಗೆ ಬಂದರು. ದೇವಲೋಕದ ನಂದನವನದಿಂದ ಪಾರಿಜಾತ ಪುಷ್ಪಗಳ ಅದ್ಭುತವೃಷ್ಟಿ ಸ್ವಾಮಿಪುಷ್ಕರಣಿ ತೀರದಲ್ಲಿ ಬಂದು ನಿಂತ ಭಗವಂತನ ವಿಭೂತಿ ರೂಪದ ಮೇಲೆ ಆಯಿತು ಆದರ ಘನೀಭೂತವಾದ ಸುಗಂಧದಿಂದ ದಿಂಗತರಾಳವೆಲ್ಲವು ಆಮೋದ ಪ್ರಮೋದ ಭರಿತವಾಯಿತು. ಆ ಪುಂಡರೀಕಾಕ್ಷನು ಪ್ರಸನ್ನನಾದುದನ್ನು ಕಂಡು ಎಲ್ಲ ದೇವತೆಗಳು ಋಷಿ ಮುನಿಗಳು ಅವನನ್ನು ಸ್ತೋತ್ರ ಮಾಡಿದರು.

**ಬ್ರಹ್ಮಾದಿ ದೇವತೆಗಳು:-** ಮಹಾವಿಷ್ಣುವಿಗೆ ಜಯವಾಗಲಿ, ಪುಂಡರೀಕಾಕ್ಷನಿಗೆ ಜಯವಾಗಲಿ, ವೇದ ವೇದಾಂತಗಳಲ್ಲಿ ಪ್ರತಿಪಾದಿತವಾಗಿರುವ ತತ್ವವು ನೀನೇ ಆಗಿರುವಿ. ಸಹಸ್ರ ಶೀರ್ಷ ಸಹಸ್ರಾಕ್ಷ, ಸಹಸ್ರಪಾದವಾದ ಈ ನಿನ್ನ ವಿರಾಟ ರೂಪವನ್ನು ನೋಡಿ ನಾವೆಲ್ಲರು ಉದ್ವಿಗ್ನರಾಗಿದ್ದೇವೆ. ಈ ನಿನ್ನ ಉಗ್ರರೂಪವನ್ನು ನೋಡುವ ಶಕ್ತಿ ಈ ನಮ್ಮ ಕಣ್ಣುಗಳಿಗೆ ಇರುವದಿಲ್ಲ. ಆದುದರಿಂದ ಈ ಎಲ್ಲ ದೇವ ದಾನವ-ಮಾನವರ ದೃಷ್ಟಿಗೆ ಓಡಿಸುವಂಥ, ಕಾಣಲು ಶಕ್ಯವಾಗುವಂಥ ಸೌಮ್ಯವಾದ ಶಾಂತ ರೂಪವನ್ನು ಧರಿಸು'' ದೇವತೆಗಳ ಈ ಪ್ರಾರ್ಥನೆಯನ್ನು ಕೇಳಿ ಕೂಡಲೇ ಸೌಮ್ಯರೂಪವನ್ನು ಧರಿಸಿದ ಆ ಶ್ರೀನಾಥ. ಮೊದಲಿನ ಕೋಟಿಸೂರ್ಯರಿಗೆ ಸಮಾನನಾದ ಕಣ್ಣು ಕುಕ್ಕುವ ತೇಜೋ ರಾಶಿಯು ಅಡಗಿತು. ಪ್ರಶಾಂತ ಸುಂದರವಾದ ಭಗವದ್ರೂಪವು ಅಲ್ಲಿ ನಿಂತ ಎಲ್ಲರ ದೃಷ್ಟಿಗೂ ಆಪ್ಯಾಯನವಾಗಿ ಬೆಳಗತೊಡಗಿತು. ಚಂದ್ರನಂತೆ ಆಲ್ಹಾದಕರವಾದ ಮುಖ, ತುಂಬು ತಾವರೆಯಂತೆ ಅಗಲವಾದ ಬೊಗಸೆಗಣ್ಣು. ಇಂದ್ರಕಾಂತಮಣಿಯಂತೆ ಶ್ಯಾಮಲ ಕೋಮಲವಾದ ಕಾಯಕಾಂತಿ. ನಡುವಿನಲ್ಲಿ ಪೀತಾಂಬರ. ನಾಕು ಕೈಗಳಲ್ಲಿ ಶಂಖ ಚಕ್ರಾದಿ

ಆಯುಧಗಳು, ಮುಖದಲ್ಲಿ ಮಧುರ ಮಂದಹಾಸ. ಇಂಥ ಪ್ರಸನ್ನ ಸುಂದರವಾದ ಆಕಾರವುಳ್ಳ ಭಗವಂತನನ್ನು ಅಲ್ಲಿ ಕುಳಿತವರೆಲ್ಲರೂ ಎವೆಪಿಳುಪಿಸದೆ ತೆರೆದ ಕಣ್ಣುಗಳಿಂದ ನೋಡಿ ಹೃದಯದಲ್ಲಿ ಮೂಡಿಸಿಕೊಂಡರು. ಆಗ ಆ ಲಕ್ಷ್ಮೀಪತಿಯು ಪ್ರಸನ್ನವಾದ ಮುಖಮುದ್ರೆಯಿಂದ ಅಗಸ್ತ್ಯಮುನಿಯನ್ನು ಸಂಬೋಧಿಸಿ ಹೇಳಿದನು- ''ಮುನೀಂದ್ರ ನೀನು ನನಗಾಗಿ ಬಹಳ ಕಷ್ಟಪಟ್ಟು ವ್ರತಾಚರಣೆ ತಪೋನುಷ್ಠಾನಗಳನ್ನು ಮಾಡಿದ್ದೀಯ. ಅದರಿಂದ ನಾನು ಸಂತುಷ್ಟ. ಅದಕ್ಕಾಗಿ ನಿನಗೆ ಅಭೀಷ್ಟ ವರವನ್ನು ಕೊಡುತ್ತೇನೆ. ನಿನಗೆ ಏನು ಬೇಕು ಹೇಳು.''

ನಾರಾಯಣನ ಈ ಪ್ರಸಾದದ ವಚನವನ್ನು ಕೇಳಿ ಮೈಯೆಲ್ಲಾ ರೋಮಾಂಚಿತವಾಯಿತು ಆ ಅಗಸ್ತ್ಯ ಮುನಿಗಳಿಗೆ. ಅವರು ಮತ್ತೆ ಮತ್ತೆ ಪ್ರಣಮಿಸಿ ನುಡಿದರು- ''ಪ್ರಭು. ಇಂದು ನನ್ನ ಜಪ, ತಪ, ಹೋಮ, ಹವನ ಸ್ವಾಧ್ಯಾಯ, ಶ್ರವಣ, ಎಲ್ಲವೂ ಸಾರ್ಥಕ ಮತ್ತು ಸಫಲ. ಇಷ್ಟು ದಿನಗಳ ವರೆಗೆ ನಾನು ಹುಡುಕುವ ವಸ್ತು ನನಗೆ ಸಿಕ್ಕಿತು. ನಾನು ಬಯಸಿದ್ದನ್ನೆಲ್ಲ ಇಂದು ಹೊಂದಿದ್ದೇನೆ. ಇನ್ನು ನಾನು ಪಡೆಯಬೇಕಾದದ್ದು ಯಾವದೂ ಇಲ್ಲ. ನಾನು ನಿನ್ನಲ್ಲಿ ಒಂದೇ ಮಾತನ್ನು ಕೇಳಿ ಕೊಳ್ಳುತ್ತೇನೆ. ನಿನ್ನ ಪಾದಾರವಿಂದಗಳಲ್ಲಿ ನನಗೆ ಭಕ್ತಿಯು ಅವಿಚ್ಛಿನ್ನವಾಗಿ ಬೆಳೆಯುತ್ತಲೇ ಇರಲಿ. ಸುವರ್ಣಮುಖರಿ ನದಿಯಲ್ಲಿ ಸ್ನಾನಮಾಡಿ ವೆಂಕಟಾಚಲದಲ್ಲಿ ವಿರಾಜಿಸುತ್ತಿರುವ ನಿನ್ನ ದರ್ಶನವನ್ನು ಕೊಂಡವರಿಗೆ ಇಹದಲ್ಲಿ ಭೋಗ, ಪರದಲ್ಲಿ ಮೋಕ್ಷ, ಎರಡೂ ದೊರೆಯಲಿ. ಸಾಮಾನ್ಯರಾದ ಅಜ್ಞ ಮಾನವರಿಗೆ ವ್ರತ, ಸ್ವಾಧ್ಯಾಯ, ಜಪ ತಪಗಳಿಂದ ನಿನ್ನ ದರ್ಶನವನ್ನು ಮಾಡಿಕೊಳ್ಳಲು ಆಗುವದಿಲ್ಲ. ಅಂಥವರ ಸಲುವಾಗಿ ನೀನು ಈ ವೆಂಕಟಾದ್ರಿಯ ಶಿಖರ ಸೀಮೆಯಲ್ಲಿ ಸದಾ ಸರ್ವದಾ ವಾಸಮಾಡು. ಎಲ್ಲರ ಮನೋರಥಗಳನ್ನು ಪೂರ್ಣ ಮಾಡು.''

**ಶ್ರೀವಿಷ್ಣು:-** ಮುನೀಶ್ವರ! ನಿನ್ನ ಇಚ್ಛೆಯಂತೆ ಆಗಲಿ. ಇಂದಿನಿಂದ ನಾನು ಈ ವೆಂಕಟಾಚಲ ಪರ್ವತದಲ್ಲಿ ಸದಾ ವಾಸಮಾಡುತ್ತೇನೆ. ನನ್ನ ನಿತ್ಯ ನಿವಾಸದಿಂದ ಈ ಕ್ಷೇತ್ರವು ಭೂವೈಕುಂಠ ಎನಿಸುವದು. ಸುವರ್ಣಮುಖರಿ ನದಿಯಲ್ಲಿ ಸ್ನಾನಮಾಡಿ ಭಕ್ತಿಯಿಂದ ಈ ವೈಕುಂಠ ಶೈಲದಲ್ಲಿ ನೆಲೆಸಿರುವ ನನ್ನ ದಿವ್ಯ ವಿಗ್ರಹವನ್ನು ದರ್ಶನ ಮಾಡಿದವರಿಗೆ ಎಂದೂ ಮರಳಿ ಬಾರದ ನನ್ನ ಮುಕ್ತಿ ಮಂದಿರವು ಲಭಿಸುವದು. ಮತ್ತು ಯಾವ ಮಾನವರು ಯಾವ ಯಾವ ಅಪೇಕ್ಷೆಯಿಂದ ನನ್ನಲ್ಲಿ ಬಂದು ನನ್ನ ದರ್ಶನ ತೆಗೆದುಕೊಳ್ಳುವರೋ ಅವರವರ ಆ ಎಲ್ಲ ಮನಸ್ಸಿನ ಕಾಮನೆಗಳನ್ನು ನಾನು ಪೂರ್ಣಗೊಳಿಸುತ್ತೇನೆ. ಇದರಲ್ಲಿ ಸಂದೇಹವೇ ಇಲ್ಲ.

ಅಗಸ್ತ್ಯಮುನಿಗೆ ಹೀಗೆಹೇಳಿ ಆ ಜಗದೀಶ್ವರನು ಶಂಖ ಮಹಾರಾಜನ ಕಡೆಗೆ ನೋಡಿದನು. ಮತ್ತು ಕೇಳಿದನು ''ರಾಜನೇ, ನಿನ್ನ ಭಕ್ತಿಯಿಂದ ನಾನು ಪರಿತುಷ್ಟನಾಗಿದ್ದೇನೆ. ನಿನ್ನ ಮನೋವಾಂಛಿತವು ಏನಾದರೂ ಇದ್ದರೆ ಕೇಳಿಕೋ.''

**ಶಂಖ:-** ಭಗವನ್ ನಿನ್ನ ಪಾದ ಸೇವೆಯ ಹೊರತು ಬೇರೆ ಯಾವದೂ ಬೇಡ. ನಿನ್ನ ನಿಜವಾದ ಭಕ್ತರಿಗೆ ಅರ್ಥಾತ್ ಏಕಾಂತ ಭಕ್ತರಿಗೆ ದೊರಕುವ ಗತಿ, ಮತಿ, ಸ್ಥಿತಿಗಳು ನನಗೂ ದೊರಕಿದರೆ ಸಾಕು.

**ಶ್ರೀಹರಿ:-** ಶಂಖನೇ! ನೀನು ಬಯಸಿದಂತೆ ಆಗಲಿ. ನಿನ್ನ ಆಪೇಕ್ಷೆಯನ್ನು ಈಡೇರಿಸುವ ಭಾರ ನನ್ನದು. ನನ್ನನ್ನು ನಂಬಿಬಂದ ಭಕ್ತರಿಗೆ ಈ ಪ್ರಪಂಚದಲ್ಲಿ ದೊರೆಯದಿರುವದು ಯಾವದು ಇದೆ?

ಅನಂತರ ಬ್ರಹ್ಮಾದಿ ದೇವತೆಗಳನ್ನೆಲ್ಲ ಎಲ್ಲರನ್ನು ಆಶೀರ್ವದಿಸಿ ಆ ಪುಂಡರೀ ಕಾಕ್ಷನಾದ ಪರಮಾತ್ಮನು ಅಲ್ಲಿಂದ ಅಂತರ್ಧಾನನಾದನು. ಅರ್ಜುನ! ಈ ವೆಂಕಟಾಚಲದ ಪ್ರಭಾವವನ್ನು ಮಹಿಮೆಯನ್ನು ನಾನು ನಿನಗಾಗಿ ಹೇಳಿದ್ದೇನೆ. ಭಗವಂತನು ಇಲ್ಲಿಗೆ ಏಕೆ ಬಂದ? ಯಾರ ಭಕ್ತಿ ಪಾಶವು ಅವನನ್ನು ಇಲ್ಲಿಗೆ ಕರೆತಂದಿತು. ಎಂಬ ನಿನ್ನ ಪ್ರಶ್ನೆಗೆ ಉತ್ತರ ರೂಪವಾಗಿ ನಾನು ಶಂಖ ಹಾಗು ಅಗಸ್ತ್ಯ ಮಹರ್ಷಿಗಳ ಚರಿತ್ರೆಯನ್ನು, ಸ್ವಾಮಿಪುಷ್ಕರಣಿಯ ಮಹಿಮೆಯನ್ನು ನಿರೂಪಿಸಿದ್ದೇನೆ. ಈ ಪೂರ್ಣಕಥೆಯ ಶ್ರವಣದಿಂದ ಪಾಪಗಳೆಲ್ಲವು ಪರಿಹೃತವಾಗುವವು. ಈ ಬ್ರಹ್ಮಾಂಡದಲ್ಲಿ ವೆಂಕಟೇಶ್ವರನಿಗೆ ಸಮಾನವಾದ ಬೇರೆ ದೇವರಿಲ್ಲ. ಈ ವೆಂಕಟಾಚಲಕ್ಕೆ ಸಮಾನವಾದ ಕ್ಷೇತ್ರವಿಲ್ಲ. ಸ್ವಾಮಿ ಪುಷ್ಕರಣಿಗೆ ಸಮಾನವಾದ ತೀರ್ಥವಿಲ್ಲ. ಪ್ರತಿದಿನವೂ ಮುಂಜಾವಿನಲ್ಲಿ ಎದ್ದು ಭಗವಾನ್ ಶ್ರೀವೆಂಕಟೇಶ್ವರನ ಸ್ಮರಣೆ ಮಾಡುವವರಿಗೆ ಕೈಯಲ್ಲಿಯೇ ಮೋಕ್ಷ. ಕಾಲಲ್ಲಿಯೇ ಸ್ವರ್ಗ, ಈ ವೆಂಕಟಾಚಲದ ಮಹಾತ್ಮೆಯನ್ನು ಸ್ಮರಣ ಮಾಡಿದವರಿಗೆ ಇಹಪರ ಲೋಕಗಳಲ್ಲಿ ಭೋಗಮೋಕ್ಷಗಳ ಪ್ರಾಪ್ತಿ ಆಗುವದು.

## ಆಕಾಶಗಂಗಾ ತೀರ್ಥದಲ್ಲಿ ಅಂಜನಾದೇವಿಯ ತಪಸ್ಸು

**ಸೂತ:-** ಪೂರ್ವಕಾಲದಲ್ಲಿವಾಯುದೇವರ ಪತ್ನಿಯಾದ ಅಂಜನಾದೇವಿಗೆ ಮಕ್ಕಳು ಆಗಿರಲಿಲ್ಲ. ಅದರಿಂದ ಬಹಳ ನೊಂದುಕೊಂಡಿತು ಅವಳ ಬಂಜೆ ಹೃದಯ. ಸಂತಾನಕ್ಕಾಗಿ ಅವಳು ಪತಿಯ ಆಜ್ಞೆಯನ್ನು ಪಡೆದು ತಪಸ್ಸಿಗೆ ತೊಡಗಿದಳು. ಅವಳ ಉಗ್ರವಾದ ತಪಸ್ಸನ್ನು ಕಂಡು ಹೃದಯವು ಕರುಣೆ ತುಂಬಿತು ವಿಷ್ಣುಭಕ್ತರಾದ ಮತಂಗ ಮುನಿಗಳಿಗೆ. ಭೂತ ದಯಾಶೀಲರಾದ ಆ ಮಹರ್ಷಿಗಳು ಕೋಮಲ ಶರೀರದ ಆ ಬಾಲೆಯು ತಪಃಸ್ಥಿತಿಯಲ್ಲಿ ಕುಳಿತ ತಾಣಕ್ಕೆ ಬಂದರು. ದಯೆದುಂಬಿ ಮಾತನಾಡಿದರು- "ಅಂಜನಾದೇವಿ! ಹೇಳು, ನೀನು ಇಷ್ಟೊಂದು ಕಠೋರ ತಪಸ್ಸನ್ನು ಕೈಕೊಂಡದ್ದು ಏಕೆ?

**ಅಂಜನಾದೇವಿ :-** ಮುನಿಶ್ರೇಷ್ಠರೆ, ಕೇಸರ ಎಂಬ ವಾನರ ಶ್ರೇಷ್ಠನು ನನ್ನ ತಂದೆಯ ಬಳಿಗೆ ಬಂದು ನನ್ನ ಸಲುವಾಗಿ ಯಾಚನೆ ಮಾಡಿದನು. ನನ್ನ ತಂದೆಯು ಆ ವಾನರೋತ್ತಮನ ಬಿನ್ನಹವನ್ನು ಮನ್ನಿಸಿ ನನ್ನನ್ನು ಆ ಕೇಸರಿ ಎಂಬ ಕಪಿಗೆ ಮದುವೆ ಮಾಡಿಕೊಟ್ಟನು. ನಾನು ನನ್ನ ಪ್ರೀತಿಯ ಪತಿದೇವನೊಂದಿಗೆ ಚಕ್ಕಂದದಿಂದ ಬಹು ವರುಷಗಳ ವರೆಗೆ ವಿಹಾರ ಮಾಡಿದೆ. ಸ್ವಚ್ಛಂದ ಜೀವನದ ಅನಿಷಿದ್ಧವಾದ ಆನಂದವನ್ನು ಅನುಭವಿಸಿದೆ. ಆದರೆ ಈವರೆಗೂ ಒಂದೂ ಸಂತಾನವಾಗಲಿಲ್ಲ. ನಾನು ನಮ್ಮ ಕಿಷ್ಕಿಂಧಾ ಪಟ್ಟಣದಲ್ಲಿ ಇದ್ದು ಬಗೆ ಬಗೆಯ ವ್ರತಗಳನ್ನು ಆಚರಿಸಿದೆ. ಸೇವಾ ಸೂತ್ರಗಳನ್ನು ಮಾಡಿದೆ. ಯಾವುದರಿಂದಲೂ ನನಗೆ ಮಕ್ಕಳು ಆಗಲಿಲ್ಲ. ಆದುದರಿಂದ ನಾನು ಈಗ ಈ ಘೋರವಾದ ತಪಸ್ಸನ್ನು ಕೈಕೊಂಡಿದ್ದೇನೆ. ಪೂಜ್ಯರೆ! ನನಗೆ ಏನು ಮಾಡಿದರೆ ಪುತ್ರ ಸಂತಾನವಾಗುವದು ಹೇಳಿ. ನನಗೆ ಸಾಮಾನ್ಯ ಪುತ್ರನು ಆಗುವದು ಬೇಡ. ಮೂರು

ಲೋಕಗಳಲ್ಲಿಯೇ ಅಸಾಧಾರಣ ಶಕ್ತಿ ಸಂಪನ್ನನಾದ ಸರ್ವ ಸದ್ಗುಣಗಳ ಸಾಕಾರ ಮೂರ್ತಿಯಂತಿರುವ ಓರ್ವ ಸಿದ್ಧಪ್ರಸಿದ್ಧನಾದ ಪುತ್ರನು ತಮ್ಮ ಅನುಗ್ರಹದಿಂದ ಆಗಲಿ ಎಂದು ತಮ್ಮಲ್ಲಿ ಸೆರೆಗೊಡ್ಡಿ ಬೇಡಿಕೊಳ್ಳುತ್ತೇನೆ.

**ಮತಂಗಮುನಿ:-** ಕೇಸರಿ ಕಾಮಿನಿಯೇ, ಕೇಳು. ಇಲ್ಲಿಂದ ದಕ್ಷಿಣಕ್ಕೆ ಮೂವತ್ತು ಮೈಲುಗಳ ಮೇಲೆ ಘನಾಚಲ ಎಂಬ ಪ್ರಸಿದ್ಧ ಪರ್ವತವಿದೆ. ಅಲ್ಲಿ ನರಸಿಂಹದೇವರು ವಾಸಮಾಡಿದ್ದಾರೆ. ಅದೇ ಪರ್ವತದ ಮೇಲ್ಭಾಗದಲ್ಲಿ ಬ್ರಹ್ಮತೀರ್ಥ ಇರುತ್ತದೆ. ಅಲ್ಲಿಂದ ಪೂರ್ವದಿಕ್ಕಿನಲ್ಲಿ ಐವತ್ತುಮೈಲು ಹೋದರೆ ಸುವರ್ಣಮುಖರಿ ಎಂಬ ಶ್ರೇಷ್ಠ ನದಿಯು ಹರಿಯುತ್ತಿದೆ. ಆ ನದಿಯ ಉತ್ತರ ಭಾಗದಲ್ಲಿ ವೃಷಭಾಚಲ ಎಂಬ ಒಂದು ಬೆಟ್ಟ ಇದೆ. ಆ ಪರ್ವತದ ಶಿಖರದಲ್ಲಿ ಸ್ವಾಮಿಪುಷ್ಕರಣಿ ಎಂಬ ತೀರ್ಥವಿದೆ. ನೀನು ಅಲ್ಲಿಗೆ ಹೋಗು. ಆ ಪುಷ್ಕರಣಿಯ ದರ್ಶನದಿಂದಲೇ ನಿನ್ನ ಮನಸ್ಸು ಪವಿತ್ರವಾಗುವದು. ಅದರಲ್ಲಿ ವಿಧಿ ಪೂರ್ವಕವಾಗಿ ಸ್ನಾನಮಾಡು. ವರಾಹ ಸ್ವಾಮಿಗೆ ನಮಸ್ಕಾರ ಹಾಕು. ಅನಂತರ ಭಗವಾನ್ ಶ್ರೀವೆಂಕಟೇಶ್ವರನಿಗೆ ವಂದನೆಯನ್ನೂ ಸಲ್ಲಿಸು. ನಂತರ ಸ್ವಾಮಿ ತೀರ್ಥದ ಉತ್ತರಕ್ಕೆ ಇರುವ ಆಕಾಶಗಂಗಾ ಎಂಬ ಪವಿತ್ರ ತೀರ್ಥಕ್ಕೆ ನೀನು ಹೋಗು. ಅಲ್ಲಿ ಸಂಕಲ್ಪ ಮಾಡಿ ವಿಧ್ಯುಕ್ತ ರೀತಿಯಿಂದ ಸ್ನಾನ ಮಾಡು. ಯಥೇಚ್ಛವಾಗಿ ಅಲ್ಲಿಯ ಜಲಪಾನ ಮಾಡು. ಆ ಬಳಿಕ ಆ ಆಕಾಶಗಂಗಾ ತೀರ್ಥದ ಎದುರಿಗೆ ಇರುವ ವಾಯುದೇವರನ್ನು ಉದ್ದೇಶಿಸಿ ತಪಸ್ಸು ಮಾಡು. ಆ ವಾಯುದೇವರ ಅನುಗ್ರಹದಿಂದ ನಿನಗೆ ದೇವ ದೈತ್ಯ ಮಾನವರಿಂದ ಅವಧ್ಯನಾದ ಸದ್ಗುಣಗಳ ಖಣಿಯೂ ಆದ ಶ್ರೇಷ್ಠ ಪುತ್ರನು ಹುಟ್ಟುವನು."

ಮತಂಗಮುನಿಗಳ ಈ ಆಶೀರ್ವಚನವನ್ನು ಕೇಳಿ ಈಗಲೇ ಮಗ ಹುಟ್ಟಿದಷ್ಟು ಆನಂದ ವಾಯಿತು ಆ ಅಂಜನಾದೇವಿಗೆ. ಹತ್ತು ಸಲ ಹಣೆಹಚ್ಚಿದಳು ಆ ಮುನಿಪಾದಕ್ಕೆ. ಅವರ ಅನುಗ್ರಹವನ್ನು ಪಡೆದು ಪತಿಯ ಬಳಿಗೆ ಧಾವಿಸಿದಳು. ಕೇಸರೀ ಕಪಿಗೆ ಮತಂಗ ಮುನಿಗಳ ವರರೂಪವಾದ ಆಶೀರ್ವಚನವನ್ನು ತಿಳಿಸಿದಳು. ಆ ತನ್ನ ಪತಿಯೊಂದಿಗೆ ತಾನು ಮುನಿಗಳು ಹೇಳಿದ ಮಾರ್ಗದಿಂದ ವೆಂಕಟಾಚಲಕ್ಕೆ ಬಂದಳು. ಸ್ವಾಮಿಪುಷ್ಕರಣಿಯಲ್ಲಿ ಮಿಂದಳು. ವರಾಹಸ್ವಾಮಿಯನ್ನು ವಂದಿಸಿದಳು. ವೆಂಕಟೇಶ್ವರನ ಅಡಿಯಲ್ಲಿ ಹೊರಳಾಡಿದಳು ಗಂಡನೊಂದಿಗೆ. ಆ ನಂತರ ಆ ಕಪಿದಂಪತಿಗಳು ಆಕಾಶಗಂಗಾ ತೀರ್ಥಕ್ಕೆ ಬಂದರು. ಇಬ್ಬರೂ ಪವಿತ್ರ ತೀರ್ಥದಲ್ಲಿ ಸ್ನಾನ ಮಾಡಿದರು. ಅನಂತರ ಅಂಜನಾದೇವಿಯು ತನ್ನ ಪತಿಯ ಪಾದಸ್ಪರ್ಶವನ್ನು ಮಾಡಿ ಅವನ ಅಪ್ಪಣೆ ಪಡೆದು ವಾಯುದೇವರನ್ನು ಕುರಿತು ಉಗ್ರವಾದ ತಪಸ್ಸನ್ನು ಕೈಕೊಂಡಳು. ಅವಳ ಈ ದಾರುಣವಾದ ತಪೋನುಷ್ಠಾನದ ಪರಿಯನ್ನು ಕಂಡು ಮಹಾ ಮಹಾಮುನಿಗಳು ಬೆರಳುಕಚ್ಚಿದರು. ದೇವಾಧಿದೇವತೆಗಳು ಮೆಚ್ಚಿದರು. ಆ ತರುಣ ವಯಸ್ಸಿನ ತರಳೆಯ ಈ ತೀಕ್ಷ್ಣ ತಪಶ್ಚರ್ಯೆಯ ತೀವ್ರತೆಯನ್ನು ಗಮನಿಸಿ ವಾಯುದೇವರು ಕೂಡ ಸುಪ್ರಸನ್ನರಾದರು. ಸೂರ್ಯನು ಮೇಷರಾಶಿಗೆ ಬಂದಾಗ ಚಿತ್ರಾ ನಕ್ಷತ್ರದಿಂದ ಒಡಗೂಡಿದ ಹುಣ್ಣಿಮೆಯ ತಿಥಿಯಂದು ಬುದ್ಧಿಬಲಗಳ ಅಧಿದೇವತೆಯಾದ ವಾಯುದೇವರು ತಪಸ್ಸಿಗೆ ನಿಂತ ಆ ಅಂಜನಾದೇವಿ ಎದುರು ಪ್ರಕಟವಾದರು. ವಾತ್ಸಲ್ಯ ತುಂಬಿದ ದನಿಯಲ್ಲಿ ನುಡಿದರು- "ದೇವಿ, ಇಷ್ಟು ದಿನ ನೀನು

ಪತಿವ್ರತೆಯಾಗಿದ್ದೆ. ಈಗ ತಪೋವ್ರತೆಯೂ ಆಗಿರುವೆ. ನಿನ್ನ ದೇಹ ಕೋಮಲವಾದರೂ ನೀನು ಕೈಕೊಂಡ ತಪಸ್ಸು ಮಾತ್ರ ಕಠೋರ. ನಿನ್ನ ತಪಸ್ಸಿನಿಂದ ನಾನು ಅತ್ಯಂತ ಸಂತುಷ್ಟನಾಗಿದ್ದೇನೆ. ನಿನಗೆ ಬೇಕಾದ ವರವನ್ನು ಬೇಡು. ನಿನ್ನ ಮನೋರಥವನ್ನೆಲ್ಲ ನಾನು ಪೂರ್ಣ ಮಾಡುತ್ತೇನೆ.

**ಅಂಜನಾ:-** ಪೂಜ್ಯರೇ! ನನಗೆ ಅಪ್ರತಿಮ ವೀರನು ಸರ್ವ ಸದ್ಗುಣನಿಧಿಯು ಆದ ಶ್ರೇಷ್ಠ ಪುತ್ರನನನ್ನು ಕರುಣಿಸಿರಿ.

**ವಾಯುದೇವ:-** ಸುಮುಖಿ! ನಾನೇ ನಿನ್ನ ಮಗನಾಗಿ ಹುಟ್ಟಿಬರುತ್ತೇನೆ. ನಿನ್ನ ಹೆಸರನ್ನು ವಿಶ್ವವಿಖ್ಯಾತವನ್ನಾಗಿ ಮಾಡುತ್ತೇನೆ.

ಅಂಜನಾದೇವಿಗೆ ಹೀಗೆ ವರಪ್ರದಾನವನ್ನು ಮಾಡಿ ವಾಯುದೇವರು ಅದೇ ಆಕಾಶಗಂಗಾ ತೀರದಲ್ಲಿ ವಾಸ ಮಾಡಿದರು. ಅಂಜನಾದೇವಿಯು ಆ ವಾಯುದೇವರಿಂದ ತನಗೆ ಬೇಕಾದ ವರವನ್ನು ಪಡೆದು ಪತಿಯೊಂದಿಗೆ ಪ್ರಸನ್ನ ಮನಸ್ಸಿನಿಂದ ವಾಯುದೇವರ ಸೇವೆಯನ್ನು ಮಾಡುತ್ತಲಿದ್ದಳು.

*ವೆಂಕಟಾಚಲ ಮಹಾತ್ಮೆ ಅಥವಾ ಭೂಮಿ ವರಾಹಖಂಡ ಸಂಪೂರ್ಣ*

## ಬದರಿಕಾಶ್ರಮ ಮಹಾತ್ಮೆ

**ಅಧ್ಯಾಯ - ೪೩**

ಎಲ್ಲ ತೀರ್ಥಗಳ ಸಂಕ್ಷಿಪ್ತ ಮಹಿಮೆ, ಬದರೀಕ್ಷೇತ್ರದ ವಿಸ್ತೃತ ಮಹಿಮೆಯ ಪ್ರಾರಂಭ.

**ಶೌನಕ:-** ಸೂತಾಚಾರ್ಯರೇ, ನೀವು ಸರ್ವಧರ್ಮಗಳನ್ನು ಅರಿತವರು. ಶಾಸ್ತ್ರಗಳ ತತ್ವವನ್ನು ಬಲ್ಲವರು. ಪುರಾಣಗಳಲ್ಲಿ ಪರಿನಿಷ್ಠಿತ ಪಂಡಿತರು. ಇಂಥ ತಾವು ನಮಗೆ ಪಾಮರರಾದ ಮಾನವರ ಉದ್ಧಾರವಾಗುವ ಸುಲಭ ಉಪಾಯವನ್ನು ಹೇಳಿರಿ. ಈಗ ಭಯಂಕರ ಕಲಿಯುಗವು ಪ್ರಾಪ್ತವಾಗಿದೆ. ಈ ಕಾಲ ಧರ್ಮಾತೀತ. ಮಾನವರೆಲ್ಲರಿಗೂ ಈಗ ದುಷ್ಕರ್ಮಗಳಲ್ಲಿ ಪ್ರವೃತ್ತಿ. ದುರಾಚಾರಗಳಲ್ಲಿ ಅಭಿನಿವೇಶ. ಈ ಕಲಿಕಾಲದಲ್ಲಿ ಆಯುಷ್ಯವೇ ಅಲ್ಪ. ಬಲ ಪರಾಕ್ರಮಗಳು ಪರಿಕ್ಷೀಣ, ಜಪ ತಪ ಪುಣ್ಯ ಕರ್ಮಾನುಷ್ಠಾನಗಳಿಗಂತೂ ಎಲ್ಲ ಕಡೆಗೂ ಪ್ರಾಯಃಲೋಪ . ಈಗ ಮನುಜರೆಲ್ಲರೂ ಅಧರ್ಮ ಪರಾಯಣರು. ವೇದ ನಿಂದಕರು. ಧರ್ಮಬಾಹಿರರು. ತೀರ್ಥಯಾತ್ರೆ, ತಪಸ್ಸೆ, ದಾನ, ವಿಷ್ಣು ಭಕ್ತಿ, ಇವುಗಳ ಅಭಾವ ಎಲ್ಲ ಕಡೆಗೂ. ಇಂಥ ಸಂದರ್ಭಗಳಲ್ಲಿ ಈ ಕ್ಷುದ್ರ ಮಾನವರ ಉದ್ಧಾರವಾಗುವ ಬಗೆ ಯಾವುದು?

**ಸೂತ:-** ಮಹಾನುಭಾವರಾದ ಶೌನಕರೇ, ನಿಮಗೆ ಧನ್ಯವಾದ. ನೀವು ಯಾವಾಗಲೂ ಹೆರವರ ಹಿತವನ್ನೇ ಬಯಸುವವರು. ವಿಷ್ಣುಭಕ್ತಿಯಲ್ಲಿಯೇ ನೀವು ಸದಾ ಆಸಕ್ತರು. ಸತ್ಕಥಾ ಪ್ರವಚನದಲ್ಲಿಯೇ ಅನುರಕ್ತರು. ನಿಮ್ಮಂಥ ಸಜ್ಜನರ ಸಂಗ ದುರ್ಲಭ. ಇಂಥ ಸಜ್ಜನರ ಸಹವಾಸವು.

**''ಹರತಿ ಹೃದಯಬಂಧಂ ಕರ್ಮಪಾಶಾರ್ದಿತಾನಾಮ್ ।**
**ವಿತರತಿ ಪದಮುಚ್ಚೈರಲ್ಪಜಲ್ಪೈಕ ಭಾಜಾಂ ॥**
**ಜನನ ಮರಣ ಕರ್ಮ ಶ್ರಾಂತ ವಿಶ್ರಾಂತಿ ಹೇತುಃ ।**
**ತ್ರಿಜಗತಿ ಮನುಜಾನಾಂ ದುರ್ಲಭಃ ಸತ್ಪ್ರಸಂಗಃ ॥**

ಕರ್ಮಪಾಶದಿಂದ ಪೀಡಿತರಾದ ಮಾನವರ ಹೃದಯವನ್ನು ವಿಷಯ ಬಂಧನದಿಂದ ಬಿಡುಗಡೆ ಮಾಡುವುದು. ಈ ಸತ್ಸಂಗ ಮತ್ತು ಈ ಸಜ್ಜನ ಸಹವಾಸವು ಹೆಚ್ಚಿನ ಮಾತನಾಡದೇ ಕೇವಲ ಭಗವಂತನ ಮೌನ ಧ್ಯಾನ, ಭಜನ, ನಾಮ ಸಂಕೀರ್ತನಗಳಲ್ಲಿ ಮಾತ್ರ ಆಸಕ್ತರಾದ ಭಕ್ತರಿಗೆ ದಿವ್ಯವಾದ ಸದ್ಗತಿಯನ್ನು ತಂದು ಕೊಡುತ್ತದೆ. ಜನನ ಮರಣದ ಚಕ್ರದಲ್ಲಿ ಸಿಕ್ಕು ಅನಾದಿ ಕರ್ಮ ಪಾಶದಿಂದ ದಣಿದುಕೊಂಡ ಮಾನವರಿಗೆ ವಿಶ್ರಾಂತಿಗೂ ಹಾಗೂ ಸುಖಕ್ಕೂ ಈ ಸಜ್ಜನ ಸಹವಾಸವು ಮುಖ್ಯವಾಗಿ ಕಾರಣವಾಗುತ್ತದೆ. ಮನುಷ್ಯರಿಗೆ ಇಂಥ ಸತ್ಸಂಗವು ಮೂರು ಲೋಕದಲ್ಲಿಯೇ ಸಿಗುವುದು ದುರ್ಲಭ. ಶೌನಕರೇ! ಪೂರ್ವ ಕಾಲದಲ್ಲಿ. ಕೈಲಾಸ ಪರ್ವತದ ಶಿಖರ ಭಾಗದಲ್ಲಿ ಕಾರ್ತಿಕೇಯ ಸ್ವಾಮಿಯು ಎಲ್ಲ ಮುನಿಮಂಡಲದ ಮಧ್ಯದಲ್ಲಿ ಕುಳಿತುಕೊಂಡ ಭಗವಾನ್ ಶಂಕರನ ಮುಂದೆ ಇದೇ ಪ್ರಶ್ನೆಯನ್ನೇ ಇಟ್ಟಿದ್ದನು. ನಿಮ್ಮ ಈ ಪ್ರಶ್ನೆಗೆ ಉತ್ತರ ರೂಪವಾಗಿ ಆ ಮಹಾದೇವ ಹಾಗೂ ಸ್ಕಂದ ಸ್ವಾಮಿಯ ಸಂಭಾಷಣೆಯನ್ನೇ ನಾನು ನಿಮಗೆ ಹೇಳುತ್ತೇನೆ. ಆಗ ಮಹಾದೇವರು ತಮ್ಮ ಪುತ್ರನಾದ ಷಣ್ಮುಖನಿಗೆ ಈ ಹೀಗೆ ಉತ್ತರ ಕೊಟ್ಟರು.

**ಮಹಾದೇವ:-** ವತ್ಸ! ಪರಮಾರ್ಥಪಥದಲ್ಲಿ ನಡೆಯುವ ಪುರುಷರಿಗೆ ವೈಕುಂಠ ಲೋಕದಲ್ಲಿ ವಾಸಮಾಡುವ ಸೌಭಾಗ್ಯವನ್ನು ಪ್ರದಾನಮಾಡುವ ಅನೇಕ ತೀರ್ಥಗಳು ಉಂಟು. ಇಂಥ ಕ್ಷೇತ್ರಗಳೂ ಬಹಳಷ್ಟು ಇರುತ್ತವೆ ಈ ಭರತಖಂಡದಲ್ಲಿ. ಇವುಗಳಲ್ಲಿಯೇ ಕೆಲವು ತೀರ್ಥಕ್ಷೇತ್ರಗಳು ಮನೋಭೀಷ್ಟಗಳನ್ನೆಲ್ಲ ಪ್ರದಾನ ಮಾಡುವವು. ಸಾಕ್ಷಾತ್ ಮೋಕ್ಷವನ್ನೇ ಕೊಡುವ ತೀರ್ಥಕ್ಷೇತ್ರಗಳು ಕೂಡ ಕೆಲವು ಇರುತ್ತವೆ. ಗಂಗಾ, ಗೋದಾವರಿ, ನರ್ಮದಾ, ತಪತೀ, ಯಮುನಾ, ಕ್ಷಿಪ್ರಾ, ಗೌತಮೀ ಕೌಶಿಕೀ, ಕಾವೇರೀ, ತಾಮ್ರಪರ್ಣೀ, ಚಂದ್ರಭಾಗಾ, ಮಹೇಂದ್ರಜಾ, ಚಿತ್ರೋತ್ಪಲಾ, ನೇತ್ರಾವತೀ, ಸರಯೂ. ಈ ಎಲ್ಲ ಪವಿತ್ರ ನದಿಗಳು ಮೇಲಿಂದ ಮೇಲೆ ಸ್ನಾನ ಪಾನಾದಿ ರೂಪ ಸೇವನೆಯಿಂದ ಭೋಗ ಮತ್ತು ಮೋಕ್ಷ ಎರಡನ್ನೂ ತಂದುಕೊಡುತ್ತವೆ. ಅಯೋಧ್ಯಾ, ದ್ವಾರಕಾ, ಕಾಶೀ, ಮಥುರಾ, ಅವಂತಿ, ಪುಷ್ಕರ, ಕುರುಕ್ಷೇತ್ರ, ರಾಮತೀರ್ಥ ಪುರುಷೋತ್ತಮ ಕ್ಷೇತ್ರ, ದರ್ದುರ ಕ್ಷೇತ್ರ, ವಾರಾಹ ಕ್ಷೇತ್ರ ಹಾಗೂ ಬದರೀಕ್ಷೇತ್ರ ಇವು ಸರ್ವ ಮನೋರಥವನ್ನು ಪೂರ್ಣ ಮಾಡುವ ಕ್ಷೇತ್ರಗಳು. ಅಯೋಧ್ಯಾ ಪುರಿಯೂ ಮುಕ್ತಿಸಾಧನವಾಗಿದೆ. ದ್ವಾರಕಾ ಕ್ಷೇತ್ರದಲ್ಲಿ ಸಾಕ್ಷಾತ್ ಶ್ರೀಹರಿಯೇ ವಿರಾಜಮಾನನಾಗಿದ್ದಾನೆ. ಅವನು ತನ್ನ ಅವತಾರ ಕಾರ್ಯದಲ್ಲಿ ತಾನಿದ್ದ ಮನೆಯನ್ನು ಎಂದೂ ಬಿಟ್ಟು ಹೋಗುವುದಿಲ್ಲ. ಗೋಮತೀ ನದಿಯಲ್ಲಿ ಸ್ನಾನಮಾಡಿ ಶ್ರೀಕೃಷ್ಣನ ಮುಖಾರವಿಂದವನ್ನು ದರ್ಶನ ಮಾಡಿಕೊಂಡರೆ, ಹೆಚ್ಚಿನ ಜ್ಞಾನವಿಲ್ಲದೇ ಮನುಷ್ಯನು ಮುಕ್ತಿಯನ್ನು ಹೊಂದುತ್ತಾನೆ.

ಅಸೀ ಮತ್ತು ವರುಣಾ ನದಿಗಳ ಮಧ್ಯ ಭಾಗದಲ್ಲಿ ಹದಿನೈದು ಮೈಲಿನಷ್ಟು ಪ್ರದೇಶವೆಲ್ಲವೂ ವಾರಾಣಶೀ ಕ್ಷೇತ್ರವೆನಿಸುತ್ತದೆ. ಅಲ್ಲಿ ಮಣಿಕರಣಿಕಾ, ಜ್ಞಾನವಾಪೀ, ವಿಷ್ಣು

ಪಾದೋದಕ, ಪಂಚನದ ಕುಂಡ ಮುಂತಾದ ತೀರ್ಥಗಳಲ್ಲಿ ಸ್ನಾನಮಾಡುವದರಿಂದ ಮನುಷ್ಯನು ಮತ್ತೆ ಹುಟ್ಟಿ ಬರುವದಿಲ್ಲ. ಯಾವುದಾದರೂ ಪ್ರಸಂಗದಲ್ಲಿ ಕಾಶಿಯಲ್ಲಿ ವಿಶ್ವನಾಥನ ದರ್ಶನವನ್ನು ಮಾಡಿಕೊಂಡ ಮಾನವನು ಜನನ ಮರಣ ರಹಿತವಾದ ಮುಕ್ತಿಯನ್ನು ಹೊಂದುತ್ತಾನೆ. ಮಥುರಾಪುರದಲ್ಲಿಯ ಶ್ರೀಕೃಷ್ಣನ ಜನ್ಮಸ್ಥಾನದಯಾತ್ರೆ ಮಾಡಿ ಜಪತಪ ಉಪವಾಸಗಳನ್ನು ಆಚರಿಸುವ ಮಾನವನು ಮುಕ್ತನಾಗುವನು ಎಲ್ಲ ಪಾಪಗಳಿಂದ. ವಿಶ್ರಾಮ ತೀರ್ಥದಲ್ಲಿ ವಿಧಿಪೂರ್ವಕ ಸ್ನಾನಮಾಡಿ ತಿಲತರ್ಪಣ ನೀಡಿದರೆ, ಮಾನವನು ತನ್ನ ಪಿತೃಗಳನ್ನು ನರಕದಿಂದ ಉದ್ಧಾರ ಮಾಡಿ ತಾನು ವಿಷ್ಣುಲೋಕಕ್ಕೆ ಹೋಗುವನು.

ಅವಂತೀಪುರದಲ್ಲಿ ವೈಶಾಖ ಮಾಸದಲ್ಲಿ ಕ್ಷಿಪ್ರಾ ನದಿಯಲ್ಲಿ ಸ್ನಾನಮಾಡಿ ಕೋಟಿತೀರ್ಥದಲ್ಲಿ ಮುಳುಗು ಹಾಕಿ ವಿದ್ವಾಂಸರಿಗೆ ಭೋಜನ ಮಾಡಿಸಿ ಮಹಾ ಕಾಲೇಶ್ವರನ ದರ್ಶನ ಮಾಡಿಕೊಂಡ ಮಾನವರು ಮುಕ್ತರಾಗುವರು. ಕುರುಕ್ಷೇತ್ರ ಹಾಗೂ ರಾಮತೀರ್ಥಗಳಲ್ಲಿ ಸೂರ್ಯಗ್ರಹಣ ಸಮಯದಲ್ಲಿ ಯಥಾಶಕ್ತಿ ಸುವರ್ಣದಾನ ಮಾಡುವದರಿಂದ ಮಾನವನು ಮೋಕ್ಷಭಾಗೀ ಆಗುವನು. ಹರಿಕ್ಷೇತ್ರದಲ್ಲಿ ಪಾದೋದಕ ಪಾನಮಾಡಿ ತೀರ್ಥದ ಜಲದಲ್ಲಿ ಸ್ನಾನ ಮಾಡಿ ಶ್ರೀಹರಿಯ ದರ್ಶನ ಮಾಡುವದರಿಂದ ವಿಷ್ಣುಮಂದಿರದಲ್ಲಿ ಸಾನಂದ ನಿವಾಸ ಲಭ್ಯ.

ವಿಷ್ಣು ಕಾಂಚಿಯಲ್ಲಿ ಸಾಕ್ಷಾತ್ ಶ್ರೀಹರಿಯೂ ಶಿವಕಾಂಚಿಯಲ್ಲಿ ಸಾಕ್ಷಾತ್ ವಿರೂಪಾಕ್ಷನೂ ವಾಸಮಾಡುತ್ತಾರೆ. ಇವೆರಡರಲ್ಲಿ ಭೇದ ಬುದ್ಧಿ ಮಾಡಿದ ಮನುಷ್ಯನು ದುರ್ಗತಿ ಹೊಂದುವನು. ಈ ಎರಡೂ ಕ್ಷೇತ್ರಗಳಲ್ಲಿ ಭಕ್ತಿಯಿಂದ ಶಿವಕೇಶವರ ಆರಾಧನೆ ಮಾಡಿದರೆ, ಮುಕ್ತಿ ಕೈಯಲ್ಲಿಯೇ ಇದ್ದಂತೆ. ಪುರುಷೋತ್ತಮ ಕ್ಷೇತ್ರದಲ್ಲಿ ಮಾರ್ಕಂಡೇಯ ತೀರ್ಥದಲ್ಲಿ ಸ್ನಾನಮಾಡಿ ಒಂದು ಸಲ ಜಗನ್ನಾಥ ಸ್ವಾಮಿಯ ದರ್ಶನ ಪಡೆದುಕೊಂಡರೆ ಜ್ಞಾನ ಅಥವಾ ಯೋಗ, ಹೆಚ್ಚಿನ ಸಾಧನಾನುಷ್ಠಾನ ಇಲ್ಲದಿದ್ದರೂ ಜನನ ಮರಣ ಜಾಲದಿಂದ ಮುಕ್ತಿಯಾಗಿ ನಿಜವಾದ ಮುಕ್ತಿಯು ದೊರೆಯುವುದು. ರೋಹಿಣೀ ಕ್ಷೇತ್ರದಲ್ಲಿ ಅಂತರ್ಗತವಾದ ಸಮುದ್ರದಲ್ಲಿ ಹಾಗೂ ಇಂದ್ರದ್ಯುಮ್ನ ಸರೋವರದಲ್ಲಿ ಸ್ನಾನಮಾಡಿ, ಜಗನ್ನಾಥ ಸ್ವಾಮಿಯ ಪ್ರಸಾದವನ್ನು ಭಕ್ಷಣ ಮಾಡಿದ ಮನುಷ್ಯನು ವೈಕುಂಠ ಧಾಮದಲ್ಲಿ ಸ್ಥಾನವನ್ನು ಪಡೆಯುತ್ತಾನೆ. ಕಾರ್ತೀಕ ಹುಣ್ಣಿಮೆಯ ದಿನ ಪುಷ್ಕರ ತೀರ್ಥದಲ್ಲಿ ಸ್ನಾನ, ದಕ್ಷಿಣಾದಾನ, ಶ್ರಾದ್ಧ, ಭೂರಿ ಭೋಜನಾದಿಗಳನ್ನು ಮಾಡುವದರಿಂದ ಬ್ರಹ್ಮಲೋಕಪ್ರಾಪ್ತಿ. ಮಾಘಮಾಸದಲ್ಲಿ ಭಕ್ತಿಯಿಂದ ತ್ರಿವೇಣೀ ಸಂಗಮದಲ್ಲಿ ಸ್ನಾನ ಮಾಡುವದರಿಂದ ಬದರೀಕ್ಷೇತ್ರದ ಯಾತ್ರೆ ಮಾಡಿದ ಪುಣ್ಯವು ಪ್ರಾಪ್ತವಾಗುವುದು.

ಭಗವಾನ್ ಶ್ರೀವಿಷ್ಣುವಿನ ನಿತ್ಯನಿರಂತರ ವಾಸಭೂಮಿಯಾದ ಬದರೀಕ್ಷೇತ್ರವು ಮೂರು ಲೋಕದಲ್ಲಿಯೇ ದುರ್ಲಭ. ಇದರ ಸ್ಮರಣ ಮಾತ್ರದಿಂದಲೇ ಮಾನವರ ಮಹಾಪಾತಕಗಳ ನಾಶವಾಗಿ ಮರಣಾನಂತರ ಮೋಕ್ಷವು ಲಭ್ಯ. ಸ್ವರ್ಗ, ಭೂಲೋಕ ಹಾಗೂ ರಸಾತಲದಲ್ಲಿ ಇರುವ ತೀರ್ಥಗಳು ಅಸಂಖ್ಯ. ಕ್ಷೇತ್ರಗಳು ಅಗಣಿತ, ಆದರೆ ಅವುಗಳಲ್ಲಿ ಬದರೀಕ್ಷೇತ್ರಕ್ಕೆ ಹೊಯ್, ಕೈಯ್ ಆಗಿ ನಿಲ್ಲಬಲ್ಲ ಒಂದು ತೀರ್ಥವೂ ಹಿಂದೆ ಆಗಿಲ್ಲ. ಮುಂದೆ ಆಗುವದಿಲ್ಲ. ಕಾರ್ತಿಕೇಯನೇ! ತಪಸ್ಸು ಯೋಗ ಹಾಗೂ ಸಮಾಧಿಗಳಿಂದ ಬರುವ ಎಲ್ಲ ಪುಣ್ಯವೂ ಹಾಗೂ ಸರ್ವತೀರ್ಥಗಳಲ್ಲಿ ಸ್ನಾನ ಮಾಡುವದರಿಂದ ದೊರೆಯುವ ಫಲವೂ ಬದರೀಕ್ಷೇತ್ರದ ದರ್ಶನ ಮಾತ್ರದಿಂದಲೇ ಲಭಿಸುವುದು.

## ಅಗ್ನಿಯ ಸರ್ವಭಕ್ಷಣ ಎಂಬ ದೋಷದ ನಿವಾರಣ

**ಸ್ಕಂದ:-** ಈ ಬದರೀಕ್ಷೇತ್ರವು ನಿರ್ಮಾಣಗೊಂಡದ್ದಾದರೂ ಹೇಗೆ? ಹಿಂದೆ ಇದನ್ನು ಯಾರು ಯಾರು ಸೇವೆಗೈದರು? ಈ ಕ್ಷೇತ್ರಕ್ಕೆ ಅಧಿಪತಿ ಯಾರು? ಈ ಎಲ್ಲ ಮಾತುಗಳನ್ನು ನನಗೆ ವಿಸ್ತಾರವಾಗಿ ಹೇಳಿರಿ.

**ಶಂಕರ:-** ಅನಾದಿಸಿದ್ಧವಾಗಿದೆ ಈ ಬದರೀಕ್ಷೇತ್ರವು. ವೇದಗಳು ಶ್ರೀ ವಿಷ್ಣುವಿನ ಶರೀರ ಎಂದು ಜ್ಞಾನಿಗಳು ಹೇಳುತ್ತಾರೆ. ಅದರಂತೆ ಈ ಬದರೀಕ್ಷೇತ್ರವಾದರೂ ಆ ಭಗವಂತನದೇ ಒಂದು ಪ್ರತೀಕ. ಈ ಕ್ಷೇತ್ರಕ್ಕೆ ಅಧಿಪತಿ ಸಾಕ್ಷಾತ್ ನಾರಾಯಣ. ನಾರದನೇ ಮೊದಲಾದ ಬ್ರಹ್ಮರ್ಷಿಗಳು ಈ ತೀರ್ಥಸೇವನದಿಂದ ಪಾವನಗೊಂಡ ಪುಣ್ಯಾತ್ಮರು. ಕಾಶಿ, ಶ್ರೀಪರ್ವತ ಹಾಗೂ ಕೈಲಾಸಗಳಲ್ಲಿ ನನಗೆ ಪ್ರೀತಿ ಇದ್ದಂತೆ ಈ ಬದರೀಕ್ಷೇತ್ರದಲ್ಲಿಯೂ ಅವೆಲ್ಲವುಗಳ ಅನಂತಪಟ್ಟು ಹೆಚ್ಚಿನ ಪ್ರೀತಿ. ಉಳಿದ ತೀರ್ಥಗಳಲ್ಲಿ ವಿಹಿತ ವೃತ್ತಿಯಿಂದ ಇದ್ದು ಧರ್ಮಕರ್ಮಾನುಷ್ಠಾನ ತತ್ಪರನಾಗಿ ಭಗವಂತನ ಧ್ಯಾನ ಮಾಡುತ್ತ ಇದ್ದಾಗ ಮಾತ್ರ ಮೃತ್ಯು ಬಂದರೆ ಮುಕ್ತಿ ದೊರೆಯುವದು. ಆದರೆ, ಬದರೀಕ್ಷೇತ್ರದ ದರ್ಶನ ಮಾತ್ರದಿಂದಲೇ ಮಾನವನಿಗೆ ಮುಕ್ತಿಯು ದೊರೆಯುವುದು. ಭಗವಾನ್ ಶ್ರೀಮನ್ನಾರಾಯಣನ ಸಾನ್ನಿಧ್ಯ, ಸಾಕ್ಷಾತ್ ಅಗ್ನಿದೇವನ ನಿವಾಸ, ಹಾಗೂ ಕೇದಾರಲಿಂಗ, ಇವು ಮೂರು ಮಹಾಕ್ಷೇತ್ರಗಳು, ವಿಶಾಲ ಬದರೀಕ್ಷೇತ್ರದ ಒಂದೊಂದು ಭಾಗ ಎಂದು ಪರಿಗಣಿಸಲ್ಪಡುತ್ತಿವೆ. ಕೇದಾರೇಶ್ವರನ ದರ್ಶನ, ಸ್ಪರ್ಶನ ಹಾಗೂ ಭಕ್ತಿಯುತವಾದ ಪೂಜೆಗಳಿಂದ ಕೋಟಿಜನ್ಮದ ಪಾಪಗಳೆಲ್ಲವೂ ಸುಟ್ಟು ಹೋಗುವವು. ಈ ಕೇದಾರಕ್ಷೇತ್ರದಲ್ಲಿ ಸ್ವಯಂ ನಾನು ನನ್ನ ಎಲ್ಲ ಕಲೆಗಳಿಂದ ಪೂರ್ಣನಾಗಿ ನಿಂತು ಕೊಂಡಿದ್ದೇನೆ. ಅಲ್ಲಿಯ ನನ್ನ ಶ್ರೀವಿಗ್ರಹದಲ್ಲಿ ಹದಿನೈದು ಕಲೆಗಳು ಶೋಭಿಸುತ್ತವೆ. ಕಾಶಿಯಲ್ಲಿ ಮರಣಹೊಂದಿದ ಪುರುಷನಿಗೆ ನಾನು ತಾರಕ ಮಂತ್ರವನ್ನು ಉಪದೇಶಿಸಿ ಮುಕ್ತಿಯನ್ನು ನೀಡುವೆನು. ಆದರೆ ಕೇದಾರಕ್ಷೇತ್ರದಲ್ಲಿ ನನ್ನ ಲಿಂಗಪೂಜೆ ಯಿಂದಲೇ ಮನುಷ್ಯರಿಗೆ ಮುಕ್ತಿಯು ದೊರಕುವದು. ಆದರೆ ಸಾಕ್ಷಾತ್ ನಾರಾಯಣನ ದಿವ್ಯ ಸಾನ್ನಿಧ್ಯದಿಂದ ಒಡಗೂಡಿದ ಈ ಬದರೀಕ್ಷೇತ್ರದ ದರ್ಶನ ಹಾಗೂ ಭಕ್ತಿಯಿಂದ ಇಲ್ಲಿಯ ತೀರ್ಥಸ್ನಾನ, ಶ್ರೀಹರಿಯ ಸಂದರ್ಶನ ಮಾತ್ರದಿಂದಲೇ ಮೋಕ್ಷವು ಲಭಿಸುವದು.

ಪೂರ್ವಕಾಲದಲ್ಲಿ ಊರ್ಧ್ವರೇತಸ್ಕರಾದ ಮಹಾಮಹಾ ಮುನಿಮಹರ್ಷಿಗಳೆಲ್ಲರೂ ಗಂಗಾ-ಯಮುನಾ ಸಂಗಮದ ಪವಿತ್ರ ರಂಗಸ್ಥಲವಾದ ಪ್ರಯಾಗದಲ್ಲಿ ಮಿಲಿತರಾಗಿದ್ದರು. ಅಲ್ಲಿಯ ದಶಾಶ್ವಮೇಧ ಎಂಬ ತೀರ್ಥದಲ್ಲಿ ಅಗ್ನಿದೇವನು ಋಷಿಮುನಿಗಳ ಎದುರು ಉಪಸ್ಥಿತನಾಗಿ ನಮ್ರತೆಯಿಂದ ನುಡಿದನು-

''ಮಹರ್ಷಿಗಳೇ! ನೀವೆಲ್ಲರೂ ಪರಬ್ರಹ್ಮತತ್ತ್ವವನ್ನು ಅರಿತವರು. ಪರೋಪಕಾರವೇ ನಿಮ್ಮ ವ್ರತ. ದೀನದುಃಖಿತರ ವಿಷಯದಲ್ಲಿ ನೀವು ಯಾವಾಗಲೂ ದಯಾರ್ದ್ರದೃಷ್ಟಿಯುಳ್ಳವರು. ನೀವೆಲ್ಲರೂ ಈ ಪುಣ್ಯಕ್ಷೇತ್ರದಲ್ಲಿ ಮಿಲಿತರಾಗಿದ್ದನ್ನು ತಿಳಿದು ನಾನು ಈಗ ಇಲ್ಲಿಗೆ ಬಂದಿದ್ದೇನೆ. ನಿಮ್ಮನ್ನು ಒಂದು ಪ್ರಶ್ನೆ ಕೇಳುತ್ತೇನೆ.-

''ನಾನು ಅಗ್ನಿ. ಜನರು ಹಾಕಿದ್ದನ್ನೆಲ್ಲ ಭಕ್ಷಿಸುತ್ತೇನೆ. ಹೋಮದ ಆಹುತಿಗಳನ್ನು ನಿಮ್ಮಂತಹ ಮಹನೀಯರು ನನ್ನಲ್ಲಿ ಹಾಕಿದಾಗ ನನಗೆ ಆ ಪವಿತ್ರವಾದ ಹವಿಷ್ಯವನ್ನು ಭಕ್ಷಿಸಿ ಅದನ್ನು ತೆಗೆದುಕೊಂಡು ಹೋಗಿ ದೇವತೆಗಳಿಗೆ ತಲುಪಿಸಲು ನನಗೆ ಪರಮಾನಂದವಾಗುತ್ತದೆ. 'ಹುತವಹ' ಎಂಬ ನನ್ನ ಹೆಸರೂ ಸಾರ್ಥಕವಾಗುತ್ತದೆ. ಆದರೆ ಒಮ್ಮೊಮ್ಮೆ ಶವ, ವಿಷ್ಠಾ ಮೊದಲಾದ ಅಪವಿತ್ರ ಪದಾರ್ಥಗಳನ್ನು ನಾನು ಅನಿವಾರ್ಯವಾಗಿ ಭಕ್ಷಣ ಮಾಡಬೇಕಾಗುವದು. ಇಂತಹ ದೂಷಿತ ವಸ್ತುಗಳ ದಹನ ರೂಪ ಭಕ್ಷಣದಿಂದ ನನಗೆ ಭೀಕರ ಪಾಪಲೇಪವು ಆಗಿ ಬಿಡುವುದು. ಬ್ರಹ್ಮವನ್ನು ಬಲ್ಲ ಮುನಿಗಳೇ ! ಈ ಪಾಪದಿಂದ ಉದ್ಧಾರ ಆಗುವ ಬಗೆ ಹೇಗೆ?''

ಇಷ್ಟರಲ್ಲಿ ಮುನಿಮಹರ್ಷಿಗಳ ವೃಂದಕ್ಕೆಲ್ಲ ಮಾರ್ಗದರ್ಶಕರಾದ ಭಗವಾನ್ ಶ್ರೀವೇದವ್ಯಾಸರು ಅಲ್ಲಿಗೆ ಆಗಮಿಸಿದರು. ಅವರು ತಮ್ಮ ದಿವ್ಯ ದೃಷ್ಟಿಯಿಂದಲೇ ಅಲ್ಲಿಯ ಸಂದರ್ಭವನ್ನೆಲ್ಲ ಅರಿತು ನುಡಿದರು-

''ಹುತಾಶನ! ನಿನ್ನ ಸರ್ವಭಕ್ಷಣರೂಪಪಾತಕದ ಪರಿಹಾರಕ್ಕೆ ಒಂದು ಶ್ರೇಷ್ಠ ಉಪಾಯವಿದೆ. ನಿನಗೆ ಅದನ್ನು ನಾನು ತಿಳಿಸುತ್ತೇನೆ ಕೇಳು. ನೀನು ದಿವ್ಯವಾದ ಬದರೀಕ್ಷೇತ್ರಕ್ಕೆ ಹೋಗು. ದೇವತಾಸಾರ್ವಭೌಮನಾದ ಶ್ರೀಮನ್ ನಾರಾಯಣನು ಈ ಭೂಲೋಕದಲ್ಲಿ ನೆಲೆಸಿರುವದು ಅದೇ ಬದರೀಕ್ಷೇತ್ರದಲ್ಲಿ. ಆ ಭಗವಂತನ ದಿವ್ಯದರ್ಶನದಿಂದ ಸರ್ವ ಪಾಪ ಕರ್ಶನ ಆಗುವದು. ನೀನು ಅಲ್ಲಿಗೆ ಪ್ರಯಾಣ ಬೆಳಿಸು. ಅಲ್ಲಿರುವ ಅಲಕನಂದಾ ನದಿಯಲ್ಲಿ ಸ್ನಾನ ಮಾಡು. ಭಗವಾನ್ ಶ್ರೀಮನ್ ನಾರಾಯಣನ ದರ್ಶನವನ್ನು ಪಡೆದುಕೊ. ಅದರಿಂದ ನಿನ್ನ ಸರ್ವ ಪಾಪಗಳೂ ಪರಿಹಾರವಾಗುವವು.''

ಶ್ರೀ ವೇದವ್ಯಾಸದೇವರ ಈ ಹಿತನುಡಿಗಳು ತನಗೆ ಕಲ್ಯಾಣ ಮಾರ್ಗವನ್ನೇ ತೋರಿದವು ಎಂದುಕೊಂಡ ಆ ಧನಂಜಯದೇವ. ಅಲ್ಲಿಂದ ಅವನು ಉತ್ತರಾಭಿಮುಖವಾಗಿ ಹೊರಟ. ಗಂಧಮಾದನ ಗಿರಿಗೆ ಬಂದು ಅಲ್ಲಿಂದ ನೇರವಾಗಿ ಬದರೀಕ್ಷೇತ್ರಕ್ಕೆ ಆಗಮಿಸಿದ. ಅಲ್ಲಿ ನಾರಾಯಣನ ಕರುಣಾ ರಸವಾಹಿನಿಯಾಗಿ ಹರಿಯುತ್ತಿದ್ದಳು ದೇವಗಂಗೆ. ಅವಳ ಸ್ವಚ್ಛಾಚ್ಛ ನೀರಿನಲ್ಲಿ ಭಕ್ತಿಯಿಂದ ಮಿಂದ. ದೇವಸ್ಥಾನಕ್ಕೆ ಬಂದ. ಬದರೀವಾಸಿ ನಾರಾಯಣನನ್ನು ವಂದಿಸಿದ ಶ್ರದ್ಧೆಯಿಂದ. ಹೃದಯತುಂಬಿ ಸ್ತೋತ್ರ ಮಾಡಿದ-

''ವಿಜ್ಞಾನಘನನಾದ ಪುರಾಣಪುರುಷನಾದ ನಾರಾಯಣನಿಗೆ ನಮಸ್ಕಾರ. ಸಂಪೂರ್ಣ ಜಗತ್ತಿಗೆ ಏಕಮಾತ್ರ ಸ್ವಾಮಿಯಾದ ನೀನು ಗುರುಗಳಿಗೆಲ್ಲ ಗುರು. ಪ್ರಜಾಪತಿಗಳಿಗೆಲ್ಲ ಪತಿ. ನೀನು ನಿನ್ನ ಮಾಯಾಮಯವಾದ ಶಕ್ತಿಯನ್ನು ಆಶ್ರಯಿಸಿ ಸಂಸಾರದ ಸೃಷ್ಟಿ ಮಾಡುವದಕ್ಕಾಗಿ ರಜೋಗುಣಯುಕ್ತವಾದ ಬ್ರಹ್ಮದೇವರ ರೂಪವನ್ನು ಧಾರಣ ಮಾಡುವೆ. ಸತ್ವಗುಣದಿಂದಯುಕ್ತನಾಗಿ ಜಗತ್ತಿನ ರಕ್ಷಣೆಯ ಕಾರ್ಯವನ್ನು ನೆರವೇರಿಸುವೆ. ತಮೋಗುಣವನ್ನು ಪರಿಗ್ರಹಿಸಿ ವಿಶ್ವಸಂಹಾರಕಾರಿಯಾದ ರುದ್ರರೂಪ ನಾಗುವೆ. ಇಂತಹ ತ್ರಿವಿಧ ರೂಪಧರಿಸಿ ವಿಶ್ವವ್ಯಾಪಾರಗಳಿಗೆಲ್ಲ ಕಾರಣನಾದ ಭಗವಾನ್ ಲಕ್ಷ್ಮೀಪತಿಗೆ ವಂದನೆ.''

ಈ ರೀತಿಯಾಗಿ ವಹ್ನಿದೇವನು ಭಕ್ತಿ ತುಂಬಿ ಸ್ತೋತ್ರ ಮಾಡಿದುದನ್ನು ಕೇಳಿ ಪ್ರಸನ್ನನಾದ ಆ ಪರಮಾತ್ಮ, ತನ್ನ ವರ್ಣನೆಯನ್ನು ಮಾಡುತ್ತಿದ್ದ ವೈಶ್ವಾನರನನ್ನು ಕುರಿತು

ಮಧುರ ಸ್ವರದಿಂದ ನುಡಿದ- "ಜಾತವೇದ! ನಿನಗೆ ಕಲ್ಯಾಣವಾಗಲಿ. ನೀನು ಬೇಕಾದ ವರ ಬೇಡು. ಅದಕ್ಕಾಗಿಯೆ ನಾನು ಇಲ್ಲಿಗೆ ಬಂದದ್ದು."

**ಅಗ್ನಿ:-** ಪ್ರಭು ! ನೀನು ಸರ್ವಜ್ಞ. ನಾನು ಇಲ್ಲಿಗೆ ಬಂದಕಾರಣ ಉದ್ದೇಶ ಎಲ್ಲವೂ ನಿನಗೆ ಸುವಿದಿತ. ಆದರೂ ಹೇಳುತ್ತೇನೆ ನಿನ್ನ ಅಪ್ಪಣೆಯಾದುದರಿಂದ. ನಾನು ಸರ್ವಭಕ್ಷಿಯಾಗಿದ್ದೇನೆ. ನನ್ನಲ್ಲಿ ಹಾಕಿದ್ದೆಲ್ಲವನ್ನು ತಿನ್ನುತ್ತೇನೆ. ಇದು ನೀನೇ ನನ್ನ ಮೇಲೆ ಹೊರಿಸಿದ ಹೊಣೆ. ನನ್ನಲ್ಲಿ ಇಟ್ಟದ್ದು ಶುದ್ಧವೋ ಅಶುದ್ಧವೋ, ಪವಿತ್ರವೋ, ಅಪವಿತ್ರವೋ!, ಶವವೋ! ಜೀವವೋ! ಆಹುತಿಯೋ! ತುಪ್ಪವೋ! ರಕ್ತವೋ! ಮಜ್ಜೆಯೋ! ಮಾಂಸವೋ! ಯಾವದನ್ನೂ ನಾನು ನೋಡುವದಿಲ್ಲ. ಹಾಕಿದ್ದೆಲ್ಲವನ್ನು ಭಕ್ಷಿಸಿ ಭಸ್ಮ ಮಾಡುವದೊಂದೇ ನನ್ನ ಕೆಲಸ. ಇದರಿಂದ ನಾನು ಸರ್ವಭಕ್ಷಣಪಾಪದಿಂದ ದೂಷಿತನಾಗಿದ್ದೇನೆ. ಇದರಿಂದ ನನಗೆ ಬಹಳ ಹೆದರಿಕೆ ಆಗಿದೆ. ಈ ಪಾಪ ಪರಿಹಾರಕ್ಕೆ ಏನು ಉಪಾಯ ?

**ನಾರಾಯಣ:-** "ಅಗ್ನಿಯೇ ! ಈ ಬದರೀಕ್ಷೇತ್ರವು ನನ್ನ ದಿವ್ಯ ಧಾಮ. ಇಲ್ಲಿ ಬಂದು ಅಲಕನಂದೆಯಲ್ಲಿ ಮಿಂದು ನಾರಾಯಣನ ಸಂದರ್ಶನವನ್ನು ಪಡೆದುಕೊಂಡ ಮಾನವರ ಯಾವ ಪಾಪಗಳೂ ಉಳಿಯಲಾರವು. ಮತ್ತು ಮುಂದೆ ಬೆಳೆಯಲಾರವು. ನಿನಗೂ ಕೂಡ ಯಾವ ಪಾಪಲೇಪವೂ ಇನ್ನು ಮುಂದೆ ಆಗುವದಿಲ್ಲ. ನೀನು ನಿಶ್ಚಿಂತನಾಗಿ ಇಲ್ಲಿ ಇರು."

ಭಗವಂತನ ಈ ಸಾಂತ್ವನಪರ ನುಡಿಯಿಂದ ಸಂತೋಷವಾಯಿತು ಆ ಅನಲದೇವನಿಗೆ. ನಾರಾಯಣ ದೇವರಿಗೆ ಪ್ರಣಾಮ ಸಲ್ಲಿಸಿ ಅಗ್ನಿದೇವನು ತನ್ನ ಒಂದು ಅಂಶದಿಂದ ಭಗವಂತನನ್ನು ಸೇವಿಸುತ್ತ ಬದರೀಕ್ಷೇತ್ರದಲ್ಲಿಯೇ ವಾಸ ಮಾಡಿದನು.

## ಬದರೀಕ್ಷೇತ್ರದ ಐದು ಶಿಲೆಗಳ ಮಹಿಮೆ — ಅಧ್ಯಾಯ - ೪೫

### ನಾರದ ಶಿಲಾ-ಮಾರ್ಕಂಡೇಯ ಶಿಲಾ

**ಮಹಾದೇವ:-** ಸ್ಕಂದ! ಮಹಾಪಾತಕಿಯೂ, ಅತಿಪಾತಕಿಯೂ ಯಾರೇ ಇರಲಿ ಈ ಅಗ್ನಿತೀರ್ಥದಲ್ಲಿ ಸ್ನಾನಮಾಡುವದರಿಂದ ಪವಿತ್ರರಾಗಿ ಬಿಡುವರು. ಖೋಟ್ಟಿ ಬಂಗಾರವು ಬೆಂಕಿಯಲ್ಲಿ ಹಾಕಿ ಸುಟ್ಟಾಗ ಶುದ್ಧ ಆಗುವಂತೆ, ಮಾನವ ಎಂಬ ಪ್ರಾಣಿಯು ಅಗ್ನಿತೀರ್ಥಕ್ಕೆ ಬಂದು ಸ್ನಾನಮಾಡಿ ಭಗವಂತನ ದರ್ಶನ ತೆಗೆದುಕೊಂಡರೆ ಮುಕ್ತನಾಗಿ ಹೋಗುತ್ತಾನೆ. ಪಂಚಮಹಾ ಪಾತಕಗಳನ್ನು ಮಾಡಿದ ಮಹಾಪಾಪಿಷ್ಠರೂ ಪರಿಶುದ್ಧರಾಗುತ್ತಾರೆ ಈ ಅಗ್ನಿತೀರ್ಥದ ಸ್ನಾನದಿಂದ. ಇಲ್ಲಿರುವ ಐದು ಶಿಲೆಗಳಲ್ಲಿ ಯಾವಾಗಲೂ ಭಗವಂತನ ಪೂರ್ಣಸನ್ನಿಧಾನ ಇರುತ್ತದೆ. ಆ ಪಂಚಶಿಲೆಗಳ ಸಮೀಪವೇ ಈ ಅಗ್ನಿತೀರ್ಥವು ಇರುತ್ತದೆ.

**ಸ್ಕಂದ:-** ತಂದೆಯೇ! ಈ ಐದು ಶಿಲೆಗಳು ಹೇಗೆ ಇವೆ? ಇವುಗಳನ್ನು ನಿರ್ಮಿಸಿದವರು ಯಾರು? ಇದೆಲ್ಲವನ್ನೂ ನನಗಾಗಿ ನಿರೂಪಿಸು.

**ಮಹಾದೇವ:-** ಮಗು! ಈ ಐದು ಶಿಲೆಗಳು ವಿಶ್ವವಿಖ್ಯಾತವಾಗಿವೆ. ನಾರದೀ, ನಾರಸಿಂಹೀ, ವಾರಾಹೀ, ಗಾರುಡೀ, ಮಾರ್ಕಂಡೇಯೀ ಎಂದು ಈ ಪಂಚಶಿಲೆಗಳ ಹೆಸರು. ಈ ಐದು ಶಿಲೆಗಳೂ ಮಾನವರ ಮನೋರಥಗಳನ್ನೆಲ್ಲ ಪೂರ್ಣಮಾಡುವ ಸಾಮರ್ಥ್ಯವನ್ನು ಪಡೆದಿವೆ. ಈ ಐದೂ ಶಿಲೆಗಳ ಹುಟ್ಟಿನ ಹಿನ್ನೆಲೆಯನ್ನು ವಿವರಿಸುತ್ತೇನೆ ಕೇಳು.

ಹಿಂದೆ ಒಮ್ಮೆ ಬ್ರಹ್ಮರ್ಷಿಯಾದ ನಾರದನಿಗೆ ನಾರಾಯಣನನ್ನು ಕುರಿತು ಘೋರ ತಪಸ್ಸನ್ನು ಮಾಡಬೇಕೆಂದು ಹೆಬ್ಬಯಕೆ ಹುಟ್ಟಿತು. ಹಿಮಗಿರಿಯ ಶಿಖರ ಸೀಮೆಯಲ್ಲಿ ಒಂದು ಹರವಾದ ಕಲ್ಲಿನ ಮೇಲೆ ಕುಳಿತು ಘೋರ ತಪಸ್ಸು ಆರಂಭಿಸಿದ ಆ ಮಹಾಮುನಿ. ಗಾಳಿಯೇ ಅವನ ಆಹಾರ. ಅಸಂಪ್ರಜ್ಞಾತ ಸಮಾಧಿಯೇ ಅವನ ಅವಸ್ಥೆ. ಜಪತಪಗಳೇ ಅವನ ಉಸಿರು. ಸಂತತ ನಾಮ ಚಿಂತನವೇ ಅವನ ಗುರಿ. ಹೀಗೆ ಒಂದು ಸಾವಿರ ವರ್ಷ ಆ ಕಲ್ಲಿನ ಮೇಲೆ ತಾನೊಂದು ಕಲ್ಲಾಗಿಯೇ ಕೂತು ಕಠೋರ ತಪಸ್ಸನ್ನು ಆಚರಿಸಿದ ಆ ತಂಬೂರಿಯ ಮುನಿ. ಅವನ ಕಠಿಣವಾದ ತಪಸ್ಸಿನಿಂದ ಮಿದುವಾಯಿತು ಮಧುಸೂದನನ ಹೃದಯ. ಅವನ ತಪಸ್ಸಿನ ಜ್ವಾಲೆಗಳಿಂದ ಭಗವಂತನ ಹೃದಯವು ಕರಗಿತು. ಓರ್ವ ಬ್ರಾಹ್ಮಣ ವೇಷದಿಂದ ನಾರದನ ಬಳಿ ಬಂದ ನಾರಾಯಣ. ಅವನನ್ನು ಕೇಳಿದ- "ಮುನಿಯೇ, ನಿನಗೆ ಬೇಕಾದದ್ದಾದರೂ ಏನು! ಏತಕ್ಕಾಗಿ ಇಂಥ ಘೋರ ತಪಸ್ಸು?"

**ನಾರದ:-** "ನೀನು ಯಾರು? ಮೊದಲು ಹೇಳು. ನಿರ್ಮಾನುಷವಾದ ಈ ಅರಣ್ಯದಲ್ಲಿ ನಿನ್ನನ್ನು ನೋಡಿ ನನ್ನ ಮನಸ್ಸಿಗೆ ಏಕೋ ಒಂದು ತರಹದ ಪ್ರಸನ್ನತೆ, ನನ್ನ ಚಿತ್ತಕ್ಕೆ ಶಾಂತಿ. ಆತ್ಮಕ್ಕೆ ಧನ್ಯತೆ. ನೀನು ಯಾರೋ ಓರ್ವ ಮಹಾನುಭಾವನೇ ಇರಬೇಕು.

ನಾರದರ ಈ ನುಡಿಯನ್ನು ಕೇಳಿ ಭಗವಾನ್ ನಾರಾಯಣನು ತನ್ನ ದಿವ್ಯಸ್ವರೂಪದ ದರ್ಶನ ಮಾಡಿಸಿದ ಭಕ್ತಾಗ್ರೇಸರನಾದ ಆ ನಾರದಮುನಿಗೆ. ಶಂಖಚಕ್ರಾದಿ ಆಯುಧ ಗಳಿಂದಲೂ ವಕ್ಷಸ್ಥಳದಲ್ಲಿಯ ಲಕ್ಷ್ಮೀಲಾಂಛನದಿಂದಲೂ ಕೌಸ್ತುಭ ವೈಜಯಂತಿಗಳ ಮಣಿಪ್ರಭೆಯಿಂದಲೂ ಶೋಭಿಸುವ ಭಗವನ್ ಮೂರ್ತಿಯನ್ನು ಕಂಡು ನಾರದನಿಗೆ ಹರ್ಷೋದ್ರೇಕವಾಯಿತು. ಕ್ಷೀಣತ್ರಾಣನಾದ ಅವನ ದೇಹದಲ್ಲಿ ಭಗವಂತನ ದರ್ಶನದಿಂದ ಪುನಃ ಪ್ರಾಣ ಸಂಚಾರವಾದಂತಾಗಿ, ಉತ್ಸಾಹದಿಂದ ಎದ್ದು ನಿಂತು, ಕೈಜೋಡಿಸಿ ಪ್ರಾರ್ಥನೆ ಮಾಡತೊಡಗಿದನು.

**ನಾರದ:-** ಸರ್ವಜಗದಾಧಾರನೂ, ವಿಶ್ವಾಧೀಶ್ವರನೂ ಆದ ನಾರಾಯಣನಿಗೆ ನನ್ನ ನಮಸ್ಕಾರ. ಸರ್ವ ಸಾಕ್ಷಿಯಾದ ನೀನು ಭಕ್ತರ ಅಪೇಕ್ಷೆಯಂತೆ ದಿವ್ಯ ದೇಹಧಾರಣ ಮಾಡಿ, ಅನೇಕ ಲೀಲೆಗಳನ್ನು ಮಾಡುವೆ. ಶರಣಾಗತ ರಕ್ಷಣೆಗಾಗಿ ನಾನಾ ಅವತಾರಗಳನ್ನು ಮಾಡಿದ ಶ್ರೀಹರಿಯೇ! ನನ್ನ ಮೇಲೆ ಪ್ರಸನ್ನನಾಗು. ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಎಂದು ಚತುರ್ಮೂರ್ತಿ ಸ್ವರೂಪನಾದ ನಿನಗೆ ಮತ್ತೆ ಮತ್ತೆ ನನ್ನ ವಂದನೆ. ಜನಾರ್ದನಾ! ಇಂದು ನಿನ್ನ ದರ್ಶನದಿಂದ ನನ್ನ ತಪಸ್ಸು ಸಫಲವಾಯಿತು. ನನ್ನ ಜನ್ಮ ಧನ್ಯವಾಯಿತು.

**ನಾರಾಯಣ:-** ನಾರದ, ಪರಮ ಸಂತುಷ್ಟನಾಗಿದ್ದೇನೆ ನಾನು ನಿನ್ನ ಈ ಅತ್ಯುಗ್ರ ತಪೋನುಷ್ಠಾನದಿಂದ. ನಿನಗೆ ಬೇಕಾದ ವರ ಬೇಡು ನೀಡುತ್ತೇನೆ.

**ನಾರದ:-** ದೇವಾಧಿದೇವ, ನೀನು ನನ್ನ ಮೇಲೆ ಪ್ರಸನ್ನನಾದದ್ದೇ ನಿಜವಿದ್ದರೆ ಒಂದು ವರವನ್ನು ಕೊಡು. ನಿನ್ನ ಪಾದಾರವಿಂದಗಳಲ್ಲಿ ಅವಿಚ್ಛಿನ್ನವಾದ ಭಕ್ತಿಯು ನನಗೆ ಬೆಳೆಯುತ್ತಲೇ ಇರಲಿ. ಇನ್ನೊಂದು ವರವನ್ನು ನೀನು ದಯಪಾಲಿಸು. ನಾನು ಸಾವಿರ ವರ್ಷ ಈ ಕಲ್ಲಿನ ಮೇಲೆ ಕುಳಿತು ನಿನ್ನನ್ನು ಕುರಿತು ಕಠೋರ ತಪಸ್ಸನ್ನು ಮಾಡಿದ್ದೇನೆ. ಅದರ ಗುರುತಾಗಿ ನೀನು ನನ್ನ ಈ ಶಿಲಾಸನದ ಸಮೀಪದಲ್ಲಿಯೇ ವಾಸಮಾಡು. ಮತ್ತು

ಇಲ್ಲಿಯ ತೀರ್ಥದಲ್ಲಿ ಸನ್ನಿಹಿತನಾಗು. ಈ ತೀರ್ಥದ ದರ್ಶನ, ಸ್ಪರ್ಶ, ಸ್ನಾನ, ಆಚಮನ, ಮುಂತಾದವುಗಳನ್ನು ಮಾಡಿದ ಮಾನವನು ಪುನಃ ಸಂಸಾರಕ್ಕೆ ಮರಳಿಬಾರದಂತೆ ಮುಕ್ತಿ ಮಂದಿರದಲ್ಲಿ ಅವರಿಗೆ ಸ್ಥಾನವನ್ನು ಕೊಡು. ಇದು ನಾನು ಬೇಡುವ ಮೂರನೇಯ ವರ. ಹೀಗೆ ಮೂರು ವರಗಳನ್ನು ಕೊಟ್ಟು ನನ್ನನ್ನು ಅನುಗ್ರಹಿಸು.

**ನಾರಾಯಣ:-** ''ನಾರದ, ನಿನ್ನ ಅಪೇಕ್ಷೆಯಂತೇ ಆಗಲಿ. ಭಕ್ತನಾದ ನಿನ್ನ ಕೋರಿಕೆ ಯಂತೆ ನಾನು ಈ ನಾರದಶಿಲೆಯ ಹತ್ತಿರದ ತೀರ್ಥದಲ್ಲಿ ನಿರಂತರ ವಾಸಿಸುತ್ತೇನೆ.''

ಹೀಗೆ ನಾರದನಿಗೆ ವರವಿತ್ತು ಅದೃಶ್ಯನಾದ ನಾರಾಯಣ. ನಾರದ ಮುನಿಯು ಕೆಲವು ಕಾಲದವರೆಗೆ ಅದೇ ಬದರೀಕ್ಷೇತ್ರದಲ್ಲಿ ಇದ್ದು ನಾರಾಯಣನ ಸೇವೆಗೈದು ಅನಂತರ ಮಥುರಾಪುರಕ್ಕೆ ಹೊರಟು ಹೋದನು.

**ಸ್ಕಂದ:-** ಪೂಜ್ಯರಾದ ತಂದೆಯೇ, ಮಾರ್ಕಂಡೇಯ ಶಿಲೆಯ ಮಹಿಮೆಯನ್ನು ನನಗಾಗಿ ನಿರೂಪಿಸಿರಿ.

**ಮಹಾದೇವ:-** ತ್ರೇತಾಯುಗದ ಕೊನೆಯ ಭಾಗದಲ್ಲಿ ಮಾರ್ಕಂಡೇಯ ಮಹಾಮುನಿಯು ತೀರ್ಥಯಾತ್ರೆ ಮಾಡುತ್ತ ಮಥುರಾಕ್ಷೇತ್ರಕ್ಕೆ ಆಗಮಿಸಿದ. ಅಲ್ಲಿ ನಾರದರ ದರ್ಶನವಾಯಿತು ಆ ಮಾರ್ಕಂಡೇಯನಿಗೆ. ಮಾರ್ಕಂಡೇಯನು ನಾರದ ಮಹರ್ಷಿಗಳ ಪೂಜೆ ಮಾಡಿ ನಮಸ್ಕರಿಸಿ ಕುಶಲ ಪ್ರಶ್ನೆ ಮಾಡಿದ. ಮತ್ತು ಏನಾದರೂ ವಿಶೇಷವಿದ್ದರೆ ದಯವಿಟ್ಟು ಹೇಳಬೇಕು ಎಂದು ಕೇಳಿಕೊಂಡ. ಆಗ ನಾರದ ಮಹರ್ಷಿಯು ಬದರೀಕ್ಷೇತ್ರದ ನೆನಪಿನಿಂದ ಮೈರೋಮಾಂಚಿತವಾಗಿ ಹರ್ಷದಿಂದ ನುಡಿದ.

**ನಾರದ:-** ''ಮುನಿಶ್ರೇಷ್ಠನಾದ ಮಾರ್ಕಂಡೇಯ, ಈ ಪ್ರಪಂಚದಲ್ಲಿ ಹುಟ್ಟಿದ ಮಾನವನು ಬದರೀಕ್ಷೇತ್ರದ ಯಾತ್ರೆ ಮಾಡದಿದ್ದರೆ ವ್ಯರ್ಥ ಅವನ ಜನ್ಮ. ಸ್ವಯಂ ನಾರಾಯಣನು ಅಲ್ಲಿ ನಿರಂತರವಾಗಿಯೂ ನೆಲೆಸಿದ್ದಾನೆ, ಅದೊಂದು ಭೂವೈಕುಂಠ ಮಹಾಕ್ಷೇತ್ರ. ನೀನು ಅಲ್ಲಿಗೆ ಹೋಗು. ನಿನಗೆ ಅಲ್ಲಿ ಮಹಾವಿಷ್ಣುವಿನ ಸಾಕ್ಷಾತ್ ದರ್ಶನವೇ ಆಗುವದು.''

ನಾರದರ ಈ ಹಿತೋಪದೇಶವನ್ನು ಕೇಳಿ ನಿಜವಾಗಿಯೂ ಆನಂದವಾಯಿತು ಮಾರ್ಕಂಡೇಯ ಮುನಿಗೆ. ''ಅಲ್ಲಿ ಯಾವುದೇ ಜಪ, ತಪ, ಯಜ್ಞ ಯಾಗಗಳ ಜಂಜಾಟವಿಲ್ಲದೆ ಶ್ರೀ ಹರಿಯ ಸಾಕ್ಷಾತ್ ದರ್ಶನ ಆಗುವದು'' ಎಂಬ ನಾರದರ ಉಕ್ತಿ ಅವನ ಹೃದಯದಲ್ಲಿ ಭಗವತ್ ದರ್ಶನದ ಹಸಿವನ್ನು ಹುಟ್ಟಿಸಿತು. ಭಗವಂತನ ಸಾಕ್ಷಾತ್ ದರ್ಶನಕ್ಕಾಗಿ ಹಾತೊರೆಯತೊಡಗಿತು ಅವನ ಅಂತಃಕರಣ. ಕೂಡಲೇ ನೇರವಾಗಿ ನಡೆದು ಬಂದ ಹೈಮಾಚಲದ ಉತ್ತುಂಗಶೃಂಗಕ್ಕೆ ಮಾರ್ಕಂಡೇಯ ಮುನಿ. ಹಿಮಗಿರಿಯ ನಡು ನೆತ್ತಿಯ ಮೇಲೆ ಇರುವ ಆ ಪುಣ್ಯಧಾಮವನ್ನು ಕಂಡೇ ಸುಪ್ರಸನ್ನವಾಯಿತು ಮಾರ್ಕಂಡೇಯನ ಮನಸ್ಸು. ಅಲ್ಲಿಯ ಅಲಕನಂದಾ ತೀರ್ಥದಲ್ಲಿ ಸ್ನಾನಮಾಡಿದ. ನದಿಯ ದಂಡೆಯ ಮೇಲಿರುವ ವಿಶಾಲವಾದ ಶಿಲಾಫಲಕದ ಮೇಲೆ ಕುಳಿತುಕೊಂಡ.

''ಓಂ ನಮೋ ನಾರಾಯಣಾಯ'' ಎಂಬ ಎಂಟು ಅಕ್ಷರದ ಮಹಾಮಂತ್ರವನ್ನು ಜಪಿಸತೊಡಗಿದ. ತಪಸ್ಸಿನಲ್ಲಿಯೇ ಜನ್ಮ ಸವೆಯಿಸಿದ ಆ ಮಾರ್ಕಂಡೇಯ ಕೂಡಲೇ ಧ್ಯಾನ

ಸಮಾಧಿಯಲ್ಲಿ ಲೀನನಾದ. ಹಸಿವು, ಬಾಯಾರಿಕೆಗಳ ಪರಿವೆಯಿಲ್ಲ. ಹಗಲು ಇರುಳುಗಳ ಎಚ್ಚರವಿಲ್ಲ. ಚಳಿ, ಗಾಳಿಗಳ ಲಕ್ಷವಿಲ್ಲ. ಹೀಗೆ ಮೂರು ದಿನ ಅಖಂಡ ಅಷ್ಟಾಕ್ಷರ ಮಂತ್ರದ ಜಪವನ್ನು ಮಾಡಿದ ಬಳಿಕ ಮೂರನೇಯ ದಿನ ರಾತ್ರಿ ನಾರಾಯಣನ ದಿವ್ಯ ದರ್ಶನವಾಯಿತು ಆ ಮಹಾಮುನಿಗೆ. ಅಡಿಯಿಂದ ಮುಡಿಯವರೆಗೆ ವೇದಪುರಾಣಗಳಲ್ಲಿ ಉಕ್ತವಾದ ಸರ್ವಲಕ್ಷಣಗಳಿಂದಲೂ ಲಕ್ಷಿತನಾದ ಆ ಪರಬ್ರಹ್ಮನ ಪ್ರತ್ಯಕ್ಷದರ್ಶನದಿಂದ ಪುಲಕಿತನಾದ ಮಾರ್ಕಂಡೇಯ. ಎದ್ದುನಿಂತು ಪ್ರಣಾಮವನ್ನು ಮಾಡಿದ. ಗದ್ಗದ ಕಂಠದಿಂದ ಸ್ತೋತ್ರ ಮಾಡುತ್ತ ನುಡಿದ.

**ಮಾರ್ಕಂಡೇಯ:-** ಪ್ರಭು, ಪರಮೇಶ್ವರ! ಈ ಸಂಸಾರವೆಲ್ಲವೂ ಅಪಾರ. ಇದರಲ್ಲಿ ಸಾರವೆಂದರೆ ನಿನ್ನ ಪಾದಾರವಿಂದದ ದರ್ಶನ ಹಾಗೂ ಧ್ಯಾನ. ಸ್ವಾಮಿ! ಈ ಪ್ರಪಂಚದಲ್ಲಿ ಕರ್ಮಪಾಶಬದ್ಧನಾಗಿ, ಗೋಳಾಡುವ ಮಾನವ ಪ್ರಾಣಿಯ ಈ ಸಾವು, ನೋವುಗಳಿಗೆ ಕೊನೆಯೆಲ್ಲಿ? ಅವನ ಉದ್ಧಾರದ ಬಗೆ ಏನು ? ನಾನಂತೂ ತಾಪತ್ರಯದಿಂದ ಪೀಡಿತನಾಗಿ ಅನೇಕ ಜನ್ಮಗಳಲ್ಲಿ ತಿರು ತಿರುಗಿ ನೊಂದಿದ್ದೇನೆ. ಅನೇಕ ಜನ್ಮಗಳ ಗರ್ಭವಾಸ ದುಃಖದಿಂದ ಬೆಂದಿದ್ದೇನೆ. ಈ ಸಂಸಾರದ ದುಃಖ ಪರಂಪರೆಯಿಂದ ಸಂತಪ್ತನಾಗಿದ್ದೇನೆ. ಹೇಗಾದರೂ ಮಾಡಿ ಇದರಿಂದ ನನ್ನನ್ನು ಉದ್ಧರಿಸು. ನಾನು ಈಗ ಅನಾಥ. ನೀನೇ ನನಗೆ ನಾಥ. ನಿನ್ನ ಚರಣಗಳಿಗೆ ಶರಣು ಬಂದಿದ್ದೇನೆ. ನಾನು ನಿನ್ನ ಸೇವಕ. ನನ್ನ ಉದ್ಧಾರದ ಮಾರ್ಗವನ್ನು ತೋರು.

**ಶ್ರೀವಿಷ್ಣು:-** ಬ್ರಹ್ಮರ್ಷಿಯೇ? ನಿನ್ನ ತಪಸ್ಸಿನಿಂದ ನನಗೆ ಸಂತಸ ಆಗಿದೆ. ನಿನಗೆ ಬೇಕಾದ ವರವನ್ನು ಕೇಳು. ಪ್ರದಾನ ಮಾಡುತ್ತೇನೆ.

**ಮಾರ್ಕಂಡೇಯ:-** ಭಗವನ್, ದೀನ ವತ್ಸಲ! ನೀನು ನಿಜವಾಗಿಯೂ ನನ್ನ ಮೇಲೆ ಸಂತುಷ್ಟನಾಗಿದ್ದರೆ ನನಗೆ ನಿನ್ನಲ್ಲಿ ಅವಿಚಲವಾದ ಭಕ್ತಿಯನ್ನು ಕೊಡು. ನಿನ್ನ ಪೂಜೆ ಹಾಗೂ ದರ್ಶನಗಳಲ್ಲಿ ನನಗೆ ಆಸಕ್ತಿಯು ಎಂದೂ ಕಡಿಮೆಯಾಗದಿರಲಿ. ಮತ್ತು ನಾನು ನಿನ್ನನ್ನು ಕುರಿತು ತಪಸ್ಸು ಮಾಡಿದ ಈ ಶಿಲೆಯ ಹತ್ತಿರ ನೀನು ಯಾವಾಗಲೂ ವಾಸಮಾಡು. ಇದಿಷ್ಟೇ ನಾನು ನಿನಗೆ ಕೇಳುವ ವರ.''

ಮಾರ್ಕಂಡೇಯ ಮುನಿಯ ಈ ಅಪೇಕ್ಷೆಗೆ 'ತಥಾಸ್ತು' ಎಂದು ಹೇಳಿದ ನಾರಾಯಣ. ಆ ಮುನಿಯನ್ನು ಅನುಗ್ರಹಿಸಿ ಅಲ್ಲಿಯೇ ಅಂತರ್ಧಾನ ಹೊಂದಿದ. ಅನಂತರ ಮಾರ್ಕಂಡೇಯ ಮುನಿಯು ಕೃತಾರ್ಥನಾಗಿ ಬದರೀ ನಾರಾಯಣನ ಸೇವೆಯನ್ನು ಮಾಡಿ ತನ್ನ ತಂದೆಯಾದ ಮೃಕಂಡು ಋಷಿಯ ಆಶ್ರಮಕ್ಕೆ ತೆರಳಿದ.

## ಅಧ್ಯಾಯ - ೪೬

## ಗರುಡ ಶಿಲಾ, ವಾರಾಹೀ ಶಿಲಾ, ನಾರಸಿಂಹೀ ಶಿಲೆಗಳ ಉತ್ಪತ್ತಿ ಮತ್ತು ಮಾಹಾತ್ಮ್ಯ

**ಮಹಾದೇವ:-** ಕಶ್ಯಪಋಷಿಗಳಿಗೆ ವಿನತಾ ಎಂಬ ಮಡದಿಯಲ್ಲಿ ಇಬ್ಬರು ಗಂಡು ಮಕ್ಕಳು ಜನಿಸಿದರು. ಇಬ್ಬರೂ ಮಹಾ ಬಲಿಷ್ಠರು. ಪರಾಕ್ರಮೀ ಪುರುಷರು. ಹಿರಿಯವನ ಹೆಸರು ಗರುಡ. ಕಿರಿಯವನ ಹೆಸರು ಅರುಣ. ಕಿರಿಯನಾದ ಅರುಣ ಸೂರ್ಯನ ಸಾರಥಿಯಾದ. ಜ್ಯೇಷ್ಠನಾದ ಗರುಡನಿಗೆ ದೇವತಾಶ್ರೇಷ್ಠನಾದ ವಿಷ್ಣುವಿನ

ವಾಹನವಾಗಬೇಕೆಂದು ಹೆಬ್ಬಯಕೆ. ಅದಕ್ಕಾಗಿ ಅವನು ಬದರೀಕ್ಷೇತ್ರಕ್ಕೆ ಬಂದನು. ಬದರೀ ಕ್ಷೇತ್ರದ ದಕ್ಷಿಣಭಾಗದಲ್ಲಿ ಇರುವ ಗಂಧಮಾದನ ಪರ್ವತದ ಶಿಖರಸೀಮೆಯಲ್ಲಿ ಆರಂಭವಾಯಿತು ಗರುಡನ ಘೋರ ತಪಸ್ಸು. ಗಡ್ಡೆ ಗೆಣಸುಗಳನ್ನು ತಿಂದು, ಮಳೆಯ ನೀರನ್ನು ಕುಡಿದು, ಶೀತೋಷ್ಣಗಳನ್ನು ಸಹಿಸಿ, ಚಳಿ, ಮಳೆ, ಬಿಸಿಲು, ಗಾಳಿಗಳಿಗೆ ಎದೆಗೆಡದೆ ಒಂಟಿಗಾಲಿನ ಮೇಲೆ ನಿಂತು ಅಖಂಡ ಮಂತ್ರ ಜಪಮಾಡುತ್ತಿದ್ದ ಆ ವಿನತಾನಂದನ. ಭಗವಂತನ ದರ್ಶನದ ಹಂಬಲದಿಂದ ಗರುಡನು ಆ ಘೋರ ತಪಸ್ಸನ್ನು ಎಷ್ಟು ವರ್ಷ ಮಾಡಿದನೋ! ಅದು ಅವನಿಗೇ ಗೊತ್ತಿಲ್ಲ. ಅಂತೂ ಕೊನೆಗೊಮ್ಮೆ ಸಿದ್ಧಿಸಿತು. ಅವನ ತಪಸ್ಸು ಸಾರ್ಥಕವಾಯಿತು ಗರುಡನ ಶ್ರಮ. ಪೀತಾಂಬರಧಾರಿಯಾದ ಪರಬ್ರಹ್ಮ ಪರಮಾತ್ಮನು ತನ್ನ ಎಲ್ಲ ಲಕ್ಷಣಗಳಿಂದ ಒಡಗೂಡಿ ಉದಯೋನ್ಮುಖ ಚಂದ್ರನಂತೆ ಗರುಡನ ಎದುರಿಗೆ ಪ್ರಕಟವಾಗಿ ಬಂದು ನಿಂತ. 'ಗರುಡ ಏಳು' ಎಂದು ನುಡಿದ.

ಆದರೆ ಭಗವಂತನ ಈ ವರದ ವಾಣಿಯನ್ನು ಕೇಳಲು ಗರುಡ ಎಚ್ಚರದಲ್ಲಿ ಇರಲಿಲ್ಲ. ಅಸಂಪ್ರಜ್ಞಾತ ಸಮಾಧಿಯಲ್ಲಿ ಲೀನನಾಗಿದ್ದ. ಅದನ್ನು ಕಂಡು ಭಗವಂತನು ತನ್ನ ಪಾಂಚಜನ್ಯ ಶಂಖವನ್ನು ಊದಿದ. ಆ ದಿವ್ಯವಾದ ಪರಮಾತ್ಮನ ಶಂಖಧ್ವನಿ ಯಿಂದಲೂ ಭಗ್ನವಾಗಲಿಲ್ಲ ಗರುಡನ ಧ್ಯಾನ ಸಮಾಧಿ. ಅವನು ತನ್ನ ಚಿತ್ತಪಟಲದಲ್ಲಿ ವಾಸನಾಮಯವಾದ ಭಗವಂತನ ದಿವ್ಯಮೂರ್ತಿಯನ್ನು ಕಂಡು ಅದರ ದರ್ಶನಾ ನಂದದಲ್ಲಿಯೇ ಸಂಪೂರ್ಣ ಮಗ್ನನಾಗಿ ಹೋಗಿದ್ದ. ಅವನ ಬಹಿರ್ಮುಖವಾದ ಇಂದ್ರಿಯಗಳ ಬಾಹ್ಯ ವೃತ್ತಿಗಳೆಲ್ಲವೂ ಉಪಕ್ಷೀಣವಾಗಿದ್ದವು. ಆದರಿಂದ ಬ್ರಹ್ಮಾಂಡ ಬಿರಿಯುವಂತಹ ಆ ಶಂಖನಾದದಿಂದಲೂ ಅವನಿಗೆ ಎಚ್ಚರ ಆಗಲಿಲ್ಲ. ಆಗ ಜಗದೀಶ್ವರನು ಅವನ ಶ್ವಾಸಕೋಶದ ಮುಖಾಂತರ ಹೃದಯಕೋಶದಲ್ಲಿ ಪ್ರವೇಶಮಾಡಿ ಅವನ ಇಂದ್ರಿಯಗಳಲ್ಲಿ ಬಹಿರ್ಮುಖ ವೃತ್ತಿಯನ್ನು ಉಂಟು ಮಾಡಿದನು. ಆಗ ಒಮ್ಮೆಲೆ ಕಣ್ಣುತೆರೆದ ಆ ಕಶ್ಯಪಕುವರ. ಎದುರಿಗೆ ಶಂಖಚಕ್ರ ಗದಾಧಾರಿಯಾದ ಶ್ರೀಹರಿಯನ್ನು ಕಂಡಕೂಡಲೆ ಮೈ ತುಂಬ ಹಿಗ್ಗಿನ ಮುಳ್ಳು. ಕಣ್ತುಂಬ ಆನಂದ ಬಾಷ್ಪ. ಕಂಠದಲ್ಲಿ ಗದ್ಗದದ ಗುದುಮುರಿಗೆ. ಹೇಗೊ ವಿಸ್ಖಲಿತವಾದ ವಾಣಿಯನ್ನು ಸರಿಯಾಗಿ ಹೊಂದಿಸಿಕೊಂಡು ಕೈ ಮುಗಿದು ನುಡಿದ-

''ಭಗವನ್! ಎಲ್ಲ ಪ್ರಾಣಿಗಳ ಹೃದಯ ಗುಹೆಯಲ್ಲಿ ವಾಸಿಸಿದ ನಿನಗೆ ನನ್ನ ನಮಸ್ಕಾರ. ಸಕಲ ದೇವ ವೃಂದದಿಂದ ವಂದನೀಯವಾದ ನಿನ್ನ ಚರಣಾರವಿಂದಗಳನ್ನು ನಾನು ಮತ್ತೆ ಮತ್ತೆ ಅಭಿವಂದಿಸುತ್ತೇನೆ. ಪ್ರೇಮ ಮತ್ತು ಭಕ್ತಿಯಿಂದ ಮಾತ್ರ ನೀನು ಸಾಧಕನಿಗೆ ಲಭ್ಯವಾಗುತ್ತಿ. ಎಲ್ಲ ಸದ್ಗುಣಗಳಿಗೂ ನೀನೆ ಒಂದು ಖಣಿ. ಬ್ರಹ್ಮಾದಿ ದೇವತೆಗಳೂ ನಿನ್ನ ಅಗಣಿತ ಗುಣಗಳನ್ನು ಎಣಿಕೆ ಮಾಡಲಾರರು. ಸ್ವಾಮಿ, ನೀನು ಭಕ್ತನಾದ ನನ್ನನ್ನು ಉದ್ಧಾರ ಮಾಡು.''

ಮಹಾತ್ಮನಾದ ಗರುಡನ ಈ ಸ್ತೋತ್ರವನ್ನು ಕೇಳಿ ಜಗದೀಶ್ವರನು ತ್ರಿಪಥಗಾಮಿನಿ ಯಾದ ಗಂಗೆಯನ್ನು ಕರೆದನು. ಆಗ ಅದೇ ಪರ್ವತದಮೇಲೆ ಪಂಚಮುಖಿ ಗಂಗೆಯು ಪ್ರಕಟಳಾದಳು. ಆ ನೀರಿನಿಂದಲೇ ಗರುಡನು ಪರಮಾತ್ಮನಿಗೆ ಅರ್ಘ್ಯ, ಪಾದ್ಯಗಳನ್ನು ನೀಡಿದನು. 'ಗರುಡ, ವರ ಬೇಡು' ಎಂದು ಶ್ರೀಹರಿಯಿಂದ ಪ್ರೇರಿತನಾಗಿ ಗರುಡನು ಕೇಳಿಕೊಂಡನು.

"ಭಗವನ್, ನಾನು ಒಬ್ಬನೇ ನಿನ್ನ ವಾಹನ ಆಗಬೇಕು. ನಿನ್ನ ಪ್ರಸಾದದಿಂದ ದೇವತೆಗಳೂ ಮತ್ತು ದೈತ್ಯರಲ್ಲಿ ಯಾರೂ ನನ್ನನ್ನು ಬಲ ವೀರ್ಯ ಪರಾಕ್ರಮದಿಂದ ಗೆಲ್ಲಬಾರದು. ನಾನು ಕುಳಿತು ತಪಸ್ಸು ಮಾಡಿದ ಈ ಶಿಲೆಯು ಗರುಡ ಶಿಲೆ ಎಂದು ಪ್ರಖ್ಯಾತವಾಗಬೇಕು. ಇದರ ಸ್ಮರಣದಿಂದ ಮಾನವನ ವಿಷಬಾಧೆಯು ಪರಿಹಾರವಾಗಬೇಕು."

ಗರುಡನ ಈ ಎಲ್ಲ ಬೇಡಿಕೆಗಳಿಗೂ 'ಅಸ್ತು' ಹೇಳಿದ ಸುಪ್ರಸನ್ನನಾದ ಶ್ರೀಹರಿ. ಅವನನ್ನು ಅನುಗ್ರಹಿಸಿ ಅಂತರ್ಧಾನ ಹೊಂದಿದ.

**ಸ್ಕಂದ:-** ತಾತ, ಇನ್ನು ಮೇಲೆ ವಾರಾಹೀ ಶಿಲೆಯ ಮಹಿಮೆಯನ್ನು ಹೇಳಿರಿ.

**ಶಂಕರ:-** ಹಿಂದೆ ಶ್ರೀಹರಿಯು ಸಮುದ್ರದಲ್ಲಿ ಮುಳುಗಿ ವರಾಹರೂಪದಿಂದ ಪಾತಾಳದಿಂದ ಪೃಥ್ವಿಯನ್ನು ಎತ್ತಿಕೊಂಡು ಬಂದ, ಅದಕ್ಕೆ ಅಡ್ಡಿ ಒಡ್ಡಿದ ಹಿರಣ್ಯಾಕ್ಷ ಎಂಬ ದೈತ್ಯನನ್ನು ಸಂಹರಿಸಿದ. ಭೂಮಿಯನ್ನು ಸರಿಯಾಗಿ ಪ್ರಸ್ಥಾಪಿಸಿ ಈ ಬದರೀಕ್ಷೇತ್ರಕ್ಕೆ ಆಗಮಿಸಿದ. ಪ್ರಳಯಕಾಲ ಮುಗಿಯುವವರೆಗೂ ಇಲ್ಲಿಯೇ ನೆಲೆಸಬೇಕೆಂದು ನಿರ್ಧರಿಸಿ ಇಲ್ಲಿ ನೆಲೆ ನಿಂತಿದ್ದಾನೆ. ಇಲ್ಲಿಯೇ ಶಿಲೆಯ ರೂಪದಿಂದ ಶಾಶ್ವತ ವಾಸ್ತವ್ಯವನ್ನು ಈ ಕ್ಷೇತ್ರದಲ್ಲಿಯೇ ಕೈಕೊಂಡಿದ್ದಾನೆ. ಅದೇ ಈ ವಾರಾಹೀ ಶಿಲೆ.

**ಸ್ಕಂದ:-** ಪೂಜ್ಯ ಪರಮೇಶ್ವರ! ನಾರಸಿಂಹೀ ಶಿಲೆಯ ಮಹಿಮೆಯನ್ನು ಹೇಳಿರಿ.

**ಮಹಾದೇವ:-** ಭಗವಾನ್ ನೃಸಿಂಹನು ತನ್ನ ಚೂಪಾದ ಉಗುರುಗಳ ತುದಿಯಿಂದ ಹಿರಣ್ಯಕಶ್ಯಪುವನ್ನು ಸಂಹಾರ ಮಾಡಿ ತನ್ನ ಪ್ರಳಯಾಂತಕವಾದ ಉಗ್ರರೂಪದಿಂದ ಕ್ರುದ್ಧ ಮುಖ ಮುದ್ರೆಯಲ್ಲಿಯೇ ಭೀಷಣಾಕಾರನಾಗಿ ನಿಂತುಕೊಂಡಿದ್ದ. ಆಗ ಇಂದ್ರಾದಿ ದೇವತೆಗಳೆಲ್ಲರೂ ಹೆದರಿ ಹೌಹಾರಿ ದೂರ ದೂರ ನಿಂತುಕೊಂಡೇ ಭಕ್ತಿಯಿಂದ ಬಗೆ ಬಗೆಯ ರೀತಿಯಲ್ಲಿ ಸ್ತೋತ್ರ ಮಾಡಿದರು. ದೇವತೆಗಳ ಅರ್ಥಗರ್ಭಿತವಾದ ಆ ಸ್ತೋತ್ರದಿಂದ ಪ್ರಸನ್ನನಾದ ನೃಸಿಂಹಸ್ವಾಮಿಯು ಸೌಮ್ಯ ಸ್ವರದಿಂದ ದೇವತೆಗಳನ್ನು ಕುರಿತು ಹೇಳಿದ "ದೇವತೆಗಳೇ, ನೀವು ನನ್ನಿಂದ ಏನಾದರೂ ವರವನ್ನು ಕೇಳಿಕೊಳ್ಳಿರಿ." ಆಗ ಬ್ರಹ್ಮಾದಿ ದೇವತೆಗಳು ಕೈಮುಗಿದು ಹೇಳಿದರು- ಭಗವನ್, ನರಹರಿಯೇ! ನಿನ್ನ ಈ ದೈತ್ಯ ಭಯಂಕರವಾದ ರೂಪವನ್ನು ಕಂಡು ಎಲ್ಲ ದೇವ ಮಾನವರೂ ಭಯ ಭ್ರಾಂತರಾಗಿದ್ದಾರೆ. ಆದ್ದರಿಂದ ಉಪಸಂಹರಿಸು ಈ ನಿನ್ನ ಉಗ್ರ ರೂಪವನ್ನು. ಶಾಂತಸುಂದರವಾದ ನಿನ್ನ ಸುಸ್ವರೂಪವನ್ನು ನಮಗೆ ದರ್ಶನ ಮಾಡಿಸು."

ದೇವತೆಗಳ ಈ ಬೇಡಿಕೆಯನ್ನು ಮನ್ನಿಸಿ ನೃಸಿಂಹದೇವರು ಅವರಿಗೆ "ನಿಮ್ಮ ಅಪೇಕ್ಷೆಯಂತೆ ನಾನು ಶಾಂತ ಸೌಮ್ಯರೂಪದಿಂದ ಬದರೀಕ್ಷೇತ್ರದಲ್ಲಿ ಶಿಲಾಮಯನಾಗಿ ಕಾಣಿಸಿಕೊಳ್ಳುವೆನು." ಎಂದು ಹೇಳಿ ಬದರಿಕಾಶ್ರಮಕ್ಕೆ ತೆರಳಿದನು.

'ವಿಶಾಲಾಪುರಿ' ಎಂದು ಪ್ರಸಿದ್ಧವಾದ ಆ ಬದರಿಕಾಶ್ರಮದಲ್ಲಿ ಋಷಿಗಳೂ, ತಪಸ್ವಿಗಳೂ, ಮುನಿಗಳೂ ಶ್ರೀನರಸಿಂಹ ದೇವರನ್ನು ನೋಡಿ ಪರಮ ಸಂತೋಷಭರಿತರಾದರು. ಅವರೆಲ್ಲರೂ ಒಂದುಗೂಡಿ ಒಂದು ದಿನ ನರಸಿಂಹ ದೇವರನ್ನು ವಂದಿಸಿ ಕೈಮುಗಿದು ಕೇಳಿಕೊಂಡರು "ಜಗದೀಶ್ವರ, ನೀನು ಇಲ್ಲಿ ಆಗಮಿಸಿದ್ದು ಈ ಹಿಮಾಲಯ ವಾಸಿಗಳಾದ ನಮ್ಮೆಲ್ಲ ಮುನಿಮಂಡಲದವರ ಸೌಭಾಗ್ಯ. ನೀನು ಇನ್ನು

ಮೇಲೆ ಈ ಸ್ಥಾನವನ್ನು ಬಿಟ್ಟು ಎಲ್ಲಿಯೂ ಹೋಗಬಾರದು. ಇಲ್ಲಿಯೇ ಸಂತತವೂ ನೆಲಿಸು. ನಮ್ಮನ್ನು ಅನುಗ್ರಹಿಸು.'' ಋಷಿಮಂಡಲದ ಈ ಬಿನ್ನಹವನ್ನು ಮನ್ನಿಸಿದ ಆ ಪ್ರಲ್ಹಾದವರದ. ಅದೇ ಬದರಿಕ್ಷೇತ್ರದಲ್ಲಿ ನರಸಿಂಹದೇವರು ಭಕ್ತರ ಕೋರಿಕೆಯಂತೆ ಹಾಗೂ ದೇವತೆಗಳ ಅಪೇಕ್ಷೆಯಂತೆ ಶಿಲಾರೂಪವನ್ನು ಧರಿಸಿ ಆ ವಿಶಾಲಾಕ್ಷೇತ್ರದಲ್ಲಿ ಸಂತತ ವಾಸ್ತವ್ಯವನ್ನು ಮಾಡಿದ್ದಾನೆ. ಈ ಶಿಲಾರೂಪ ನರಸಿಂಹ ದೇವರ ಜಪ, ಧ್ಯಾನೋಪಾಸಗೈದವರು ಅವನ ಸಾಕ್ಷಾತ್ ದರ್ಶನವನ್ನು ಪಡೆಯುವರು.

## ಶ್ರೀ ಬದರೀಕ್ಷೇತ್ರ; ನಾರಾಯಣನ ಪ್ರಸಾದದ ವಿಶೇಷ ಮಹಿಮೆ

**ಅಧ್ಯಾಯ - ೪೭**

**ಸ್ಕಂದ:-** ಪ್ರಭು ಭಗವಾನ್ ವಿಷ್ಣುವು ಈ ಬದರೀಕ್ಷೇತ್ರದಲ್ಲಿ ಏತಕ್ಕಾಗಿ ವಾಸ ಮಾಡಿದ್ದಾನೆ. ಅವನ ದರ್ಶನ ಸ್ಪರ್ಶ ಮೊದಲಾದವುಗಳಿಂದ ಯಾವ ಪುಣ್ಯ? ಎಂಥ ಫಲ?

**ಮಹಾದೇವ:-** ಸತ್ಯಯುಗದ ಪ್ರಾರಂಭದ ಕಾಲದಲ್ಲಿ ಭಗವಾನ್ ಶ್ರೀ ವಿಷ್ಣುವು ಎಲ್ಲ ಪ್ರಾಣಿಗಳಿಗೂ ಹಿತವನ್ನು ಮಾಡಲಿಕ್ಕಾಗಿ ಪ್ರತ್ಯಕ್ಷ ಮೂರ್ತಿಮಂತನಾಗಿಯೇ ತನ್ನ ದಿವ್ಯರೂಪದಿಂದ ಎಲ್ಲರಿಗೂ ಕಾಣಿಸಿಕೊಳ್ಳುತ್ತಿದ್ದ. ತ್ರೇತಾಯುಗದಲ್ಲಿ ಋಷಿ ಮುನಿಗಳಿಗೆ ಮಾತ್ರ ಧ್ಯಾನ ದೃಷ್ಟಿಗೆ ಗೋಚರನಾಗುತ್ತಿದ್ದ. ದ್ವಾಪರಯುಗದಲ್ಲಿಯಂತೂ ದುರ್ಲಭವೇ ಆಯಿತು ಎಲ್ಲರಿಗೂ ಅವನ ದರ್ಶನ. ಆಗ ಎಲ್ಲ ದೇವತೆಗಳೂ ತಮ್ಮ ಕುಲಗುರು ಬೃಹಸ್ಪತ್ಯಾಚಾರ್ಯರನ್ನು ಮುಂದೆ ಮಾಡಿಕೊಂಡು ಬ್ರಹ್ಮಲೋಕಕ್ಕೆ ಹೋದರು. ಚತುರ್ಮುಖನಿಗೆ ನಮಸ್ಕರಿಸಿ ಕೈಜೋಡಿಸಿ ಬಿನ್ನವಿಸಿದರು. ''ಪಿತಾಮಹ! ನಿನಗೆ ನಮ್ಮ ಅನಂತ ನಮನಗಳು. ಶರಣಾಗತರ ದುಃಖವನ್ನು ದೂರ ಮಾಡುವದೇ ನಿನ್ನ ವ್ರತ. ನೀನು ಪರಮ ದಯಾಳು. ನಾವು ನಿನಗೆ ಶರಣು ಬಂದಿದ್ದೇವೆ. ದ್ವಾಪರ ಯುಗವು ಬಂದಂದಿನಿಂದ ಭಗವಾನ್ ಶ್ರೀವಿಷ್ಣುವು ಯಾರಿಗೂ ದೃಷ್ಟಿಗೋಚರ ಆಗುತ್ತ ಇಲ್ಲ. ಬದರೀಕ್ಷೇತ್ರದಲ್ಲಿ ಈ ಮೊದಲು ನಾವು ಪ್ರತ್ಯಕ್ಷವಾಗಿ ಅವನನ್ನು ಬೇಕಾದಾಗ ಕಾಣುತ್ತಿದ್ದೆವು. ಈಗ ಅಲ್ಲಿಂದಲೂ ಅವನು ಅದೃಶ್ಯನಾಗಿಬಿಟ್ಟಿದ್ದಾನೆ. ಭಗವಂತನ ದರ್ಶನವಿಲ್ಲದೇ ನಾವೆಲ್ಲರೂ ಸೌಭಾಗ್ಯದಿಂದ ವಂಚಿತರಾಗಿದ್ದೇವೆ. ಭಗವಂತನು ಹೀಗೆ ಆಕಸ್ಮಿಕವಾಗಿ ಅದೃಶ್ಯನಾಗುವದಕ್ಕೆ ಏನು ಕಾರಣ?

**ಬ್ರಹ್ಮ:-** ದೇವತೆಗಳೇ! ಈ ವಿಷಯ ನನಗೆ ಗೊತ್ತಿಲ್ಲ. ನಿಮ್ಮ ಮುಖದಿಂದಲೇ ಇದೀಗ ಶ್ರೀಹರಿಯು ಅದೃಶ್ಯನಾದ ಸಮಾಚಾರವನ್ನು ಕೇಳುತ್ತಿದ್ದೇನೆ. ಬನ್ನಿರಿ. ನಾವೆಲ್ಲರೂ ಹಾಲುಗಡಲಿನ ಹತ್ತಿರವೇ ಹೋಗಿ ಹರಿಗೆ ಮೊರೆಯಿಡೋಣ.

ಬ್ರಹ್ಮದೇವರ ಈ ನುಡಿಯನ್ನು ಕೇಳಿ ಎಲ್ಲ ದೇವತೆಗಳೂ, ಸಿದ್ಧಮುನಿಗಳೂ ಬ್ರಹ್ಮದೇವರನ್ನು ಮುಂದೆ ಮಾಡಿಕೊಂಡು ಕ್ಷೀರಸಾಗರದ ತೀರಕ್ಕೆ ಸಾಗಿದರು. ಅಲ್ಲಿ ಅರ್ಥಗರ್ಭಿತವಾದ ಸ್ತೋತ್ರದಿಂದ ಆ ಕರುಣಾನಿಧಿಯನ್ನು ಕೊಂಡಾಡತೊಡಗಿದರು.

**ದೇವತೆಗಳು:-** ಜಗದೀಶ್ವರನಾದ ವಿಷ್ಣುವಿಗೆ ನಾವೆಲ್ಲರೂ ನಮಸ್ಕಾರ ಮಾಡುತ್ತೇವೆ. ನೀನು ಸರ್ವತ್ರವ್ಯಾಪ್ತನಾಗಿದ್ದರೂ ಭಕ್ತರ ಹೃದಯ ಕಮಲದಲ್ಲಿ ಭ್ರಮರದಂತೆ ಸದಾ ವಾಸಮಾಡುವೆ. ನಿನ್ನ ನಾಮಸ್ಮರಣೆಯ ಸುಧಾರಸವನ್ನು ಪಾನಮಾಡಿದ ಮನುಷ್ಯನು ಮುಕ್ತಿಯ ಆನಂದವನ್ನು ಕೂಡ ಕಡೆಗಣಿಸಿ ಬಿಡುತ್ತಾನೆ. ಇಂಥ ಪರಾತ್ಪರ ಪರಂಜ್ಯೋತಿ ರೂಪನಾದ ಪರಮಾತ್ಮನಿಗೆ ನಮ್ಮ ಅನಂತಾನಂತ ವಂದನೆಗಳು.''

ಹೀಗೆ ಬ್ರಹ್ಮಾದಿ ದೇವತೆಗಳ ಭಕ್ತಿರಸ ಪರಿಪೂರಿತವಾದ ಈ ಸ್ತೋತ್ರಗಳನ್ನು ಕೇಳಿ ಮಹಾವಿಷ್ಣುವು ಹಾಲುಗಡಲಿನಲ್ಲಿಯ ತನ್ನ ಹಾವಿನ ಹಾಸಿಗೆಯಿಂದ ಮೇಲಕ್ಕೆ ಎದ್ದ. ಕೇವಲ ಚತುರ್ಮುಖ ಬ್ರಹ್ಮದೇವನಿಗೆ ಮಾತ್ರ ದೃಷ್ಟಿಗೋಚರನಾದ ಆ ಪದ್ಮನಾಭ, ಭಗವಂತನು ಬ್ರಹ್ಮದೇವರಿಗೆ ಕೇಳಿಸುವಂತೆ ಕೆಲವು ಮಾತುಗಳನ್ನು ಹೇಳಿದ. ಉಳಿದವರಿಗೆ ಏನೂ ಕಾಣಲಿಲ್ಲ. ಕೇಳಲಿಲ್ಲ, ತಿಳಿಯಲೂ ಇಲ್ಲ. ಆಗ ಬ್ರಹ್ಮದೇವರು ಖಿನ್ನ ವಿಷಣ್ಣರಾಗಿ ನಿಂತುಕೊಂಡ ದೇವತೆಗಳಿಗೆ ಬಂದು ಹೇಳಿದರು. ''ಈ ಕಾಲದಲ್ಲಿ ಜನರ ಬುದ್ಧಿ ಕೆಟ್ಟಿದೆ. ದೇವ ಹಾಗೂ ಧರ್ಮದ ವಿಷಯದಲ್ಲಿ ಇರುವ ಶ್ರದ್ಧೆ ಶಿಥಿಲವಾಗಿದೆ. ಆದರಿಂದ ಭಗವಂತನು ಒಮ್ಮೆಲೆ ಎಲ್ಲರ ದೃಷ್ಟಿಪಥದಿಂದ ದೂರವಾಗಿದ್ದಾನೆ.''

ಬ್ರಹ್ಮದೇವರ ಈ ಮಾತನ್ನು ಕೇಳಿ ದೇವತೆಗಳೆಲ್ಲರೂ ನಿರುಪಾಯರಾಗಿ ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಆಗ ನಾನು (ಮಹಾದೇವರು) ಓರ್ವ ಸನ್ಯಾಸಿಯ ರೂಪವನ್ನು ಧಾರಣಮಾಡಿ ನಾರದ ತೀರ್ಥದಲ್ಲಿ ಇದ್ದ ನಾರಾಯಣನ ದಿವ್ಯಮೂರ್ತಿಯನ್ನು ಎತ್ತಿ ತಂದು ಸಮಸ್ತ ಲೋಕ ಕಲ್ಯಾಣಕ್ಕಾಗಿ ಈ ವಿಶಾಲಾಪುರಿ ಅಥವಾ ಬದರೀಕ್ಷೇತ್ರದಲ್ಲಿ ಸ್ಥಾಪನ ಮಾಡಿದೆನು. ನಾನು ನನ್ನ ಹಸ್ತದಿಂದ ಸ್ಥಾಪನ ಮಾಡಿದ ಶ್ರೀನಾರಾಯಣದೇವರ ಈ ದಿವ್ಯವಿಗ್ರಹ ದರ್ಶನ ಮಾತ್ರದಿಂದಲೇ ಮಾನವರ ಎಲ್ಲ ಪಾಪಗಳೂ ಪರಿಹಾರವಾಗುವವು. ಷಣ್ಮುಖ! ಈ ಬದರೀ ತೀರ್ಥದಲ್ಲಿ ಸಾಕ್ಷಾತ್ ಶಂಕರನಿಂದ ಸುಪ್ರತಿಷ್ಠಿತನಾದ ಶ್ರೀಹರಿಯ ದರ್ಶನ ಮಾತ್ರದಿಂದ ಮಾನವರಿಗೆ ಭವ ಬಂಧನದಿಂದ ಬಿಡುಗಡೆ ಆಗುವದು. ಕಲಿ ಕಾಲದಲ್ಲಿ ಮೋಕ್ಷವನ್ನು ಪಡೆಯಬೇಕು ಎಂದು ಇಚ್ಛಿಸುವವರು ಒಮ್ಮೆ ಅವಶ್ಯವಾಗಿ ಬದರೀಯಾತ್ರೆಯನ್ನು ಮಾಡಬೇಕು. ಬದರಿಗೆ ಹೋಗಿ ಬಂದವರಿಗೆ ಬ್ರಹ್ಮಜ್ಞಾನ, ಯೋಗಸಾಧನ, ಜಪತಪೋನುಷ್ಠಾನ ಧ್ಯಾನೋಪಾಸನೆ ಮುಂತಾದ ಯಾವ ಶ್ರಮವೂ ಇಲ್ಲದೇ ಒಂದೇ ಜನ್ಮದಲ್ಲಿ ಮನುಷ್ಯರಿಗೆ ಮೋಕ್ಷವು ದೊರೆಯುವದು. ದೀಪವನ್ನು ನೋಡಿದ ಕೂಡಲೇ ಕತ್ತಲೆಯ ಬಾಧೆಯು ದೂರಾಗುವದಿಲ್ಲವೇ? ಅದೇ ರೀತಿಯಾಗಿ ಬದರೀಕ್ಷೇತ್ರ ದರ್ಶನ ಮಾತ್ರದಿಂದ ಮಾನವರಿಗೆ ಜನ್ಮ ಮೃತ್ಯು ಭೀತಿಯು ದೂರವಾಗುವದು. ಬದರೀಕ್ಷೇತ್ರದಲ್ಲಿ ಹೆಜ್ಜೆ ಹೆಜ್ಜೆಗೂ ವಿಷ್ಣುವಿನ ಪ್ರದಕ್ಷಿಣೆಯಾಗುವದು.

ದೇವ ಸೇನಾನಿಯೇ! ಬದರೀಕ್ಷೇತ್ರದಲ್ಲಿ ಶ್ರೀನಾರಾಯಣ ದೇವರ ಪ್ರಸಾದದ ಒಂದು ಅಗಳು ಅಥವಾ ಒಂದು ಕಣ ಸಿಕ್ಕರೂ ಮನುಷ್ಯನು ಭಾಗ್ಯವಂತ. ಶ್ರೀಹರಿಯ ಅತ್ಯಲ್ಪ ಪ್ರಸಾದ ಭಕ್ಷಣದಿಂದಲೂ ಮಾನವನು ಎಲ್ಲ ಪಾಪಗಳನ್ನು ಕಳೆದುಕೊಂಡು ಪರಿಶುದ್ಧನಾಗುವನು. ಭಗವಾನ್ ವಿಷ್ಣುವು ನಾರದಾದಿ ಮಹರ್ಷಿಗಳೊಂದಿಗೆ ಯಾವ ಅನ್ನವನ್ನು ಸ್ವೀಕರಿಸುವನೋ ಆ ಭಗವಂತನಿಂದ ಭುಕ್ತ ವಿಶೇಷವಾದ ಪ್ರಸಾದವನ್ನು ಯಾವ ಶುದ್ಧಾಶುದ್ಧತೆಯ ವಿಚಾರ ಮಾಡದೇ ತನ್ನ ಅಂತಃಕರಣಶುದ್ಧಿಗಾಗಿ ಎಲ್ಲರೂ ಅವಶ್ಯ ಭಕ್ಷಿಸಬೇಕು. ಬದರೀ ನಾರಾಯಣನ ಪ್ರಸಾದವನ್ನು ಸ್ವೀಕರಿಸಲಿಕ್ಕಾಗಿ ದೇವಾಧಿ ದೇವತೆಗಳೂ ಕೂಡ ಬದರೀ ಕ್ಷೇತ್ರಕ್ಕೆ ಬಂದು ಭಗವಂತನ ಉಚ್ಛಿಷ್ಟಭೋಜನವನ್ನು ಮಾಡಿ ಅವನ ಪ್ರಸಾದವನ್ನು ಪಡೆದುಕೊಂಡು ತಮ್ಮ ತಮ್ಮ ಲೋಕಗಳಿಗೆ ಮರಳಿ ಹೋಗುತ್ತಾರೆ.

ಇದರಂತೆ ಪ್ರಲ್ಹಾದನೇ ಮೊದಲಾದ ಭಕ್ತರು ಭಗವಂತನ ಪ್ರಸಾದವನ್ನು ಸ್ವೀಕರಿಸಲಿಕ್ಕಾಗಿ ಈ ಮುಕ್ತಿಕ್ಷೇತ್ರಕ್ಕೆ ಧಾವಿಸಿ ಬರುತ್ತಾರೆ. ಬಾಲ್ಯ ತಾರುಣ್ಯ ವೃದ್ಧಾಪ್ಯಗಳಲ್ಲಿ ತಿಳಿದೋ ತಿಳಿಯದೆಯೋ ಮಾಡಿದ ಪಾಪಗಳೆಲ್ಲವೂ ಬದರೀಕ್ಷೇತ್ರಕ್ಕೆ ಹೋಗಿ ವಿಷ್ಣುವಿನ ಪ್ರಸಾದ ಭಕ್ಷಣ ಮಾಡುವದರಿಂದ ನಷ್ಟವಾಗಿ ಹೋಗುವವು. ಯಾವ ಪಾಪಗಳಿಗೆ ಪ್ರಾಣತ್ಯಾಗವೇ ಪ್ರಾಯಶ್ಚಿತ್ತವೆಂದು ಹೇಳಿರುವರೋ ಅಂಥ ಘೋರ ಪಾತಕಗಳೂ ಕೂಡ ಶ್ರೀಬದರೀನಾರಾಯಣನ ಪ್ರಸಾದಭಕ್ಷಣದಿಂದ ಸಂಪೂರ್ಣ ನಾಶವಾಗಿ ಹೋಗುವವು. ಸಾಲೋಕ್ಯ, ಸಾರೂಪ್ಯ ಮುಂತಾದ ಮೋಕ್ಷವನ್ನು ಪಡೆಯಲು ಇಚ್ಛಿಸುವವರು ಇಲ್ಲಿ ಬಂದು ವಿಷ್ಣುವಿನ ಪ್ರಸಾದವನ್ನು ಅವಶ್ಯವಾಗಿ ಸ್ವೀಕರಿಸಲೇಬೇಕು. ತಲೆಯ ಮೇಲೆ ನಾರಾಯಣನ ನಿರ್ಮಾಲ್ಯವಾದ ತುಳಸಿ, ಹೊಟ್ಟೆಯಲ್ಲಿ ಶ್ರೀಹರಿಯ ಪ್ರಸಾದ, ನಾಲಿಗೆಯ ಮೇಲೆ ನಾರಾಯಣನ ನಾಮ, ಬಾಯಲ್ಲಿ ಭಗವಂತನ ತೀರ್ಥ, ಹೃದಯದಲ್ಲಿ ಭಗವಂತನ ದಿವ್ಯರೂಪ ಮೊದಲಾದವು ಯಾರ ಭಾಗ್ಯಕ್ಕೆ ಒದಗಿಬಂದಿರುವವೋ ಅವನು ಬೇಗನೇ ವಿಷ್ಣು ಸ್ವರೂಪವನ್ನೇ ಹೊಂದುವನು. (ಸಾರೂಪ್ಯ ಮೋಕ್ಷವನ್ನೇ ಪಡೆಯುವನು).

ಬ್ರಹ್ಮಹತ್ಯೆ, ಸುರಾಪಾನ. ಬಂಗಾರದ ಕಳವು, ಗುರುಪತ್ನೀ ಸಹವಾಸ ಮುಂತಾದ ಮಹಾಪಾಪಗಳು ಈ ಪುಣ್ಯಕ್ಷೇತ್ರದಲ್ಲಿ ವಿಷ್ಣುವಿನ ಪ್ರಸಾದ ಭಕ್ಷಣದಿಂದ ವಿನಷ್ಟವಾಗುವವು. ಬದರೀಕ್ಷೇತ್ರದಲ್ಲಿ ಒಂದು ಹನಿ ನಾರಾಯಣ ದೇವರ ಚರಣಾಮೃತದ ಜಲವು ದೊರೆತರೂ ಸಾಕು. ಎಲ್ಲ ಪಾಪಗಳ ಪ್ರಾಯಶ್ಚಿತ್ತ ಮಾಡಿಕೊಂಡಂತೆ ಆಗುವದು. ಬದರೀಕ್ಷೇತ್ರದಲ್ಲಿ ಸನ್ಯಾಸಿಗಳಿಗೆ ಭೋಜನವನ್ನು ಮಾಡಿಸುವದರಿಂದ ನಾರಾಯಣ ದೇವರಿಗೆ ಪರಮ ಪ್ರೀತಿ ಉಂಟಾಗುವದು.

**''ನ ವಿಷ್ಣು ಸದೃಶೋ ದೇವೋ ನ ವಿಶಾಲಾ ಸಮಾ ಪುರೀ**
**ನ ವಿಷ್ಣು ಸದೃಶಂ ಪಾತ್ರಂ ಋಷಿ ತೀರ್ಥ ಸಮಂ ನ ವೈ ॥**

ವಿಷ್ಣುವಿಗೆ ಸಮಾನರಾದ ದೇವರು ಈ ಜಗತ್ತಿನಲ್ಲಿ ಬೇರೆ ಯಾರೂ ಇಲ್ಲ. ಈ ವಿಶಾಲಾಪುರಿ ಎಂದರೆ ಈ ಬದರೀಕ್ಷೇತ್ರಕ್ಕೆ ಸಮಾನವಾದ ಕ್ಷೇತ್ರವು ಬೇರೆ ಯಾವುದೂ ಇಲ್ಲ. ಸನ್ಯಾಸಿಯಂಥ ಸತ್ಪಾತ್ರವು ಬೇರೆ ಇಲ್ಲ. ಋಷಿಗಳು ಸೇವಿಸುವ ಇಲ್ಲಿಯ ಅಲಕನಂದಾ ನದಿಗೆ ಸಮಾನವಾದ ತೀರ್ಥವು ಬೇರೆ ಇಲ್ಲ. ಜ್ಞಾನಿ ಅಜ್ಞಾನಿ ಸಂಸಾರಿ ಸಂನ್ಯಾಸಿ, ಯೋಗಿ, ಭೋಗಿ, ಧನಿಕ ದರಿದ್ರ, ಪಂಡಿತ, ಪಾಮರ ಯಾರೇ ಇರಲಿ, ಜನ್ಮದಲ್ಲಿ ಒಮ್ಮೆ ಯಾದರೂ ಬದರೀ ಕ್ಷೇತ್ರ ಯಾತ್ರೆಯನ್ನು ಅವಶ್ಯವಾಗಿ ಮಾಡಬೇಕು. ಅಲ್ಲಿಯ ಋಷಿತೀರ್ಥದಲ್ಲಿ ಸ್ನಾನ ಮಾಡಬೇಕು. ಶ್ರೀಮನ್ ನಾರಾಯಣನ ದರ್ಶನ ತೆಗೆದುಕೊಂಡು ಉದ್ಧೃತರಾಗಬೇಕು.

## ತೀರ್ಥಗಳ ಮಹಿಮೆ

## ಅಧ್ಯಾಯ - ೪೮

**ಸ್ಕಂದ:-** ಪೂಜ್ಯ ಪಿತೃಪಾದರೆ! ನಿಮ್ಮ ಕೈಯಿಂದ ಕಪಾಲವು ಕೆಳಗೆ ಬಿದ್ದು ಈ ಬದರೀ ಕ್ಷೇತ್ರದಲ್ಲಿ ಕಪಾಲಕ್ಷೇತ್ರವಾಗಿದೆಯಷ್ಟೇ ! ಆ ಕಪಾಲ ತೀರ್ಥದ ಮಹಿಮೆಯನ್ನು ನನಗೋಸ್ಕರ ನಿರೂಪಣ ಮಾಡಿರಿ.

**ಮಹಾದೇವ:-** ವತ್ಸ! ಇದು ಅತ್ಯಂತ ಗೌಪ್ಯ ತೀರ್ಥ, ದೇವತೆಗಳು ದಾನವರು ಇಲ್ಲಿಗೆ ಬಂದು ಈ ತೀರ್ಥಜಲದಲ್ಲಿ ಮಿಂದು ಪುಣ್ಯಾತ್ಮರಾಗಿ ಹೋಗುತ್ತಾರೆ. ಇಲ್ಲಿ

ಮಾಡಿದ ಸ್ನಾನ, ದಾನ, ತಪಸ್ಸು, ಪಿತೃಕಾರ್ಯ ಮುಂತಾದ ಪುಣ್ಯ ಕರ್ಮಗಳೆಲ್ಲವೂ ಅಕ್ಷಯ ಫಲವನ್ನು ನೀಡುವವು. ಇಲ್ಲಿ ಬಂದು ಪಿತೃಗಳನ್ನು ಉದ್ದೇಶಿಸಿ ಪಿಂಡಪ್ರದಾನ ಮಾಡಿದರ ಎಲ್ಲ ಪಿತೃಗಳೂ ನರಕದಿಂದ ಉದ್ಧೃತರಾಗುವರು. ಆದುದರಿಂದ ಅದಕ್ಕೆ ಪಿತೃ ತೀರ್ಥ ಎಂದು ಕರೆಯುವರು.

**ಸ್ಕಂದ:-** ಬ್ರಹ್ಮತೀರ್ಥ ಎಂದರೆ ಯಾವುದು? ಎಲ್ಲಿ ಇರುತ್ತದೆ? ಅದರಲ್ಲಿ ಸ್ನಾನ ದಾನದಿಂದ ಯಾವ ಪುಣ್ಯಫಲವು ಪ್ರಾಪ್ತವಾಗುವುದು?

**ಮಹಾದೇವ:-** ಹಿಂದೆ ಬಹು ಪೂರ್ವಕಾಲದಲ್ಲಿ ಶ್ರೀಹರಿಯ ಹೊಕ್ಕಳದ ಹೊಂದಾವರೆಯಲ್ಲಿ ಹುಟ್ಟಿದ ಚತುರ್ಮುಖ ಬ್ರಹ್ಮನು ಕುಳಿತುಕೊಂಡಿದ್ದ ತನ್ನ ಕಮಲ ಪೀಠದಲ್ಲಿ. ನಾಲ್ಕೂ ಮುಖಗಳಿಂದ ಯಥಾವಿಧಿಯಾಗಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದ ಎಂಬ ನಾಲ್ಕು ವೇದಗಳನ್ನು ಸಂತತ ಪಾರಾಯಣವನ್ನು ಮಾಡುತ್ತಲಿದ್ದ ಆ ಪಿತಾಮಹ. ಆಗ ಮಧು ಕೈಟಭ ಎಂಬ ಹೆಸರಿನ ಇಬ್ಬರು ದುಷ್ಟದೈತ್ಯರು ಬ್ರಹ್ಮದೇವರ ಮುಖದಿಂದ ನಿರ್ಗಲಿತವಾದ ವೇದವಾಣಿಯನ್ನು ಕದ್ದು ಸೆಳೆದೊಯ್ದರು. ಆಗ ಕಮಲ ಸಂಭವನು ವಿಷಣ್ಣನಾಗಿ ಬದರೀಕ್ಷೇತ್ರಕ್ಕೆ ಬಂದನು. ನಾರಾಯಣ ದೇವನ ಪಾದ ಕಮಲಗಳಿಗೆ ನಮಸ್ಕರಿಸಿದನು. ಈ ವೇದಾಪಹಾರದ ವಿಷಯವನ್ನು ತಿಳಿಸಿ ಕದ್ದುಕೊಂಡುಹೋದ ಆ ವೇದವನ್ನು ಮರಳಿ ತನಗೆ ತಂದು ಕೊಡಬೇಕೆಂದು ಶ್ರೀಹರಿಗೆ ಪ್ರಾರ್ಥಿಸಿಕೊಂಡನು.

ಆಗ ಆ ಶಾರದಾಪತಿಯ ಬಿನ್ನಹವನ್ನು ಮನ್ನಿಸಿ ಶ್ರೀಹರಿಯು ಹಯಗ್ರೀವ ರೂಪದಿಂದ ಈ ಬದರೀಕ್ಷೇತ್ರದ ಒಂದು ಜಲಕುಂಡದಿಂದ ಪ್ರಕಟನಾದನು. ಅವನ ಕೈಗಳಲ್ಲಿ ಶಂಖ ಚಕ್ರ, ಕಟಿಯಲ್ಲಿ ಪೀತಾಂಬರ, ಅಂಗಾಂಗಗಳಲ್ಲಿ ಶುಭ್ರಕಾಂತಿ. ಈ ಹಯಗ್ರೀವ ದೇವರ ಕೊರಳಿನ ಕೇಶ ಪಾಶಗಳಿಂದ ಮೇಘಗಳೆಲ್ಲವೂ ಛಿನ್ನ ಭಿನ್ನ ವಾಗುತ್ತಿದ್ದವು. ಅವನ ದಿವ್ಯ ತೇಜಸ್ಸಿನಿಂದ ಗಗನಾಂಗಣದ ಜ್ಯೋತಿರ್ಗಣಗಳೆಲ್ಲವೂ ನಿಸ್ತೇಜವಾದವು. ಇಂತಹ ಅತ್ಯದ್ಭುತ ರೂಪದಿಂದ ಶ್ರೀಹರಿಯು ಬ್ರಹ್ಮದೇವರ ಎದುರು ಬಂದು ನಿಂತುಕೊಂಡನು. ಕುದುರೆಯ ಮುಖದ ಅತ್ಯಾಶ್ಚರ್ಯಕರವಾದ ಈ ಹಯಗ್ರೀವ ರೂಪವನ್ನು ಕಂಡು ಪರಮಾಶ್ಚರ್ಯವಾಯಿತು ಪರಮೇಷ್ಠಿಗೆ. ಕುತೂಹಲಭರಿತನಾದ ಕಮಲಸಂಭವನು ಕೈಜೋಡಿಸಿ ಸ್ತೋತ್ರ ಮಾಡತೊಡಗಿದನು.

**ಬ್ರಹ್ಮ:-** ''ಯಾರ ನಾಭಿಕಮಲದಿಂದ ನಾನು ಕುಳಿತ ಈ ಕಮಲವೂ ಹುಟ್ಟಿದೆಯೋ ಅಂತಹ ಪದ್ಮನಾಭ ಸ್ವಾಮಿಯೇ! ನಿನಗೆ ನನ್ನ ನಮಸ್ಕಾರಗಳು. ಸರ್ವಪ್ರಾಣಿಗಳ ಹೃದಯಗುಹಾವಾಸಿಯಾದ ಮಹಾವಿಷ್ಣುವೆ! ನಿನಗೆ ವಂದನೆ. ಎಲ್ಲ ಇಂದ್ರಿಯಗಳ (ಇಂದ್ರಿಯಾಭಿಮಾನಿ ದೇವತೆಗಳ) ನಿಯಾಮಕನಾದ ಹೃಷೀಕೇಶನೆ! ನಿನಗೆ ಪ್ರಣಾಮ.''

ಬ್ರಹ್ಮದೇವರ ಈ ಸ್ತೋತ್ರದಿಂದ ಸಂತುಷ್ಟನಾದ ಶ್ರೀ ಹಯಗ್ರೀವ ಸ್ವಾಮಿ. ಕೂಡಲೇ ಅವನು ಆ ವೇದಗಳ್ಳರು ಇದ್ದಲ್ಲಿಗೆ ಹುಡುಕಿಕೊಂಡು ಹೋದನು. ಮಧು ಕೈಟಭ ಇಬ್ಬರೂ ದುಷ್ಟ ದಾನವರನ್ನು ಹಿಡಿದು ತಂದು ಲೀಲೆಯಿಂದಲೇ ಹೊಡೆದು ಸಂಹರಿಸಿ ಹಾಕಿದನು. ಅವರು ಕದ್ದು ಒಯ್ದ, ವೇದರಾಶಿಯನ್ನೆಲ್ಲ ಮರಳಿ ತಂದು ಬ್ರಹ್ಮದೇವರಿಗೆ ಕೊಡಮಾಡಿದನು. ಅಂದಿನಿಂದ ಬ್ರಹ್ಮದೇವರ ಪ್ರಾರ್ಥನೆಯಂತೆ ಭಗವಂತನು ಹಯಗ್ರೀವ ರೂಪದಿಂದ ಪ್ರಕಟವಾದ ಆ ಜಲಕುಂಡವು ಬ್ರಹ್ಮಕುಂಡ ಎಂದು

ಪ್ರಸಿದ್ಧವಾಗಿದೆ. ಈ ಬ್ರಹ್ಮಕುಂಡ ಎಂಬ ಪುಣ್ಯತೀರ್ಥದ ದರ್ಶನಮಾತ್ರದಿಂದ ಮಹಾಪಾತಕಗಳು ತತ್ಕಾಲದಲ್ಲಿ ನಾಶವಾಗುತ್ತವೆ. ಸ್ನಾನ ಮಾಡಿದವರು ಬ್ರಹ್ಮಲೋಕಕ್ಕೆ ಪ್ರಯಾಣ ಬೆಳೆಸುತ್ತಾರೆ. ಈ ಬ್ರಹ್ಮಕುಂಡ ತೀರ್ಥದಲ್ಲಿ ಸ್ನಾನ, ಪಾನ, ಭಗವತ್ಪೂಜೆ ಮಾಡುವವರು ಬ್ರಹ್ಮಲೋಕವನ್ನು ದಾಟಿ ವಿಷ್ಣುಲೋಕಕ್ಕೆ ಹೋಗುವರು.

**ಸ್ಕಂದ:-** ಹಯಗ್ರೀವ ದೇವರಿಂದ ವೇದಗಳನ್ನು ಪಡೆದ ಬಳಿಕ ಬ್ರಹ್ಮದೇವರು ಏನು ಮಾಡಿದರು?

**ಮಹಾದೇವ:-** ಆ ನಾಲ್ಕು ವೇದಗಳು ಬದರೀಕ್ಷೇತ್ರವನ್ನು ನೋಡಿದ ಬಳಿಕ ಅದನ್ನು ಬಿಟ್ಟು ಬ್ರಹ್ಮದೇವರ ಬಳಿಗೆ ಹೋಗಲು ನಿರಾಕರಿಸಿದವು. ಶ್ರೀನಾರಾಯಣನ ದಿವ್ಯ ಧಾಮವಾದ ಈ ಬದರೀಕ್ಷೇತ್ರದಲ್ಲಿಯೇ ಈ ಭಗವಂತನ ಸೇವೆಯನ್ನು ಸಲ್ಲಿಸುತ್ತ ನಿರಂತರವಾಗಿ ನೆಲಿಸಬೇಕೆಂದು ಅವುಗಳ ಅಪೇಕ್ಷೆಯಾಗಿತ್ತು. ಆಗ ಅಲ್ಲಿ ಇರುವ ಋಷಿಮುನಿಗಳು ಬಹುಪರಿಯಿಂದ ತಿಳಿಸಿ ಹೇಳಿದರು. ಚತುರ್ವೇದಗಳು ಚತುರ್ಮುಖನ ನಾಲ್ಕು ಮುಖಗಳಲ್ಲಿ ಇರಲೇಬೇಕು ಎಂದು ಭಗವಂತನ ಆದೇಶ. ಇದನ್ನು ನೀವು ಉಲ್ಲಂಘಿಸಬಾರದು ಎಂದು.

ಆಗ ನಾಲ್ಕೂ ವೇದಗಳು ಏನಾದರೂ ತಾವು ಈ ದಿವ್ಯ ಕ್ಷೇತ್ರವನ್ನು ಪೂರ್ಣವಾಗಿ ಬಿಟ್ಟು ಹೋಗಲಾರೆವು ಎಂದು ನಿರ್ಧರಿಸಿದವು. ಆಗ ಆ ವೇದಗಳು ಎರಡು ರೂಪಗಳನ್ನು ಧರಿಸಿದವು. ಒಂದನೇಯದು ದ್ರವೀರೂಪವಾಗಿ ಬದರೀಕ್ಷೇತ್ರದಲ್ಲಿ ನೆಲೆಸಿದವು. ಎರಡನೇಯದು ಜ್ಞಾನರೂಪವಾಗಿ ಬ್ರಹ್ಮಲೋಕಕ್ಕೆ ಹೋಯಿತು. ಬ್ರಹ್ಮದೇವರೊಂದಿಗೆ. ನಾಲ್ಕೂ ವೇದಗಳು ದ್ರವರೂಪದಿಂದ ಹಯಗ್ರೀವ ದೇವರು ಹುಟ್ಟಿದ (ಪ್ರಾದುರ್ಭವಿಸಿದ) ಈ ಬ್ರಹ್ಮ ಕುಂಡದಲ್ಲಿ ಕರಗಿ ನೀರಾಗಿ ನಿರಂತರವಾಗಿ ನೆಲೆಸಿದವು.

ಬ್ರಹ್ಮ ಎಂದರೆ ವೇದರಾಶಿ, ವೇದಗಳೆಲ್ಲ ಕರಗಿ ಜಲರೂಪದಿಂದ ಮಡುವು ಗಟ್ಟಿಕೊಂಡು ತೀರ್ಥವಾಗಿ ನಿಂತಿದ್ದರಿಂದ ಇದಕ್ಕೆ ಬ್ರಹ್ಮಕುಂಡ ಎಂದು ಹೆಸರು ಸಾರ್ಥಕವಾಗಿದೆ. ಇಲ್ಲಿ ಮಾಡಿದ ಸ್ನಾನ ದಾನ ತಪಸ್ಸು ಜಪ ಮುಂತಾದ ಪುಣ್ಯ ಕರ್ಮಗಳು ಅಕ್ಷಯ ಫಲದಾಯಕ ಆಗಿರುತ್ತವೆ. ನಾಲ್ಕು ವೇದಗಳ ಗೂಡಾರ್ಥ ಜ್ಞಾನವು ಸರಿಯಾಗಿ ಆಗಬೇಕು ಎಂದು ಬಯಸುವವರು ಈ ಬ್ರಹ್ಮಕುಂಡದಲ್ಲಿ ಸ್ನಾನಮಾಡಿ ಮೂರು ದಿವಸ ಉಪವಾಸವಿದ್ದು ಭಗವಾನ್ ನಾರಾಯಣನ ಧ್ಯಾನವನ್ನು ಮಾಡಬೇಕು. ಅವರಿಗೆ ಇಲ್ಲಿಯ ಸ್ನಾನ ಧ್ಯಾನಗಳ ಪ್ರಭಾವದಿಂದ ವೇದಗಳ ದಿವ್ಯಜ್ಞಾನವು ತಾನಾಗಿಯೇ ಉದಿಸಿ ಬರುವದು.

ಈ ಬ್ರಹ್ಮಕುಂಡದಲ್ಲಿ ಜಲರೂಪದಿಂದ ವೇದಗಳೆಲ್ಲವೂ ಇದ್ದುದರಿಂದ ವೇದತೀರ್ಥ ಎಂದೂ ಇದಕ್ಕೆ ಹೆಸರಾಯಿತು. ಈ ವೇದ ತೀರ್ಥದ ಉತ್ತರ ದಿಕ್ಕಿನಲ್ಲಿ ಸರಸ್ವತೀ ತೀರ್ಥವಿದೆ. ಈ ತೀರ್ಥದಲ್ಲಿ ಸ್ನಾನ ಮಾಡಿ, ಇದರ ತೀರದಲ್ಲಿ ಜಪ ತಪ ಅನುಷ್ಠಾನ ಮಾಡುವವರ ಬುದ್ಧಿಯ ಜಾಡ್ಯವೆಲ್ಲವೂ ತೊಳೆದು ಬುದ್ಧಿಯಲ್ಲಿ ತೀಕ್ಷ್ಣತೆ ಬರುತ್ತದೆ. ಜಗದೀಶ್ವರನಾದ ಮಹಾವಿಷ್ಣುವು ಮೂರುಲೋಕದ ಹಿತಕ್ಕಾಗಿ ಈ ತೀರ್ಥದಲ್ಲಿ ಸರಸ್ವತೀ ನದಿಯನ್ನು ಪ್ರತಿಷ್ಠೆಗೊಳಿಸಿದ್ದಾನೆ. ಅವನ ದಯೆಯಿಂದ ಇಲ್ಲಿ ಸ್ನಾನಮಾಡುವವರಿಗೆಲ್ಲ ಆ ಶಾರದಾ ದೇವಿಯು ವಾಗ್ವೈಭವವನ್ನು ಕರುಣಿಸುತ್ತಾಳೆ.

ಈ ಸರಸ್ವತೀ ತೀರ್ಥದ ದಕ್ಷಿಣಕ್ಕೆ ದ್ರವಧಾರಾ ಎಂಬ ಒಂದು ತೀರ್ಥವಿರುತ್ತದೆ. ಹಿಂದೆ ಇಂದ್ರದೇವರು ಇಲ್ಲಿ ನಿಂತು ತಪಸ್ಸನ್ನು ಮಾಡಿದ್ದರಿಂದ ಇದಕ್ಕೆ ಇಂದ್ರಪದತೀರ್ಥ ಎಂದೂ ಹೆಸರೂ ಬಂದಿದೆ. ಪ್ರತಿ ತಿಂಗಳ ಶುಕ್ಲ ಪಕ್ಷ ತ್ರಯೋದಶೀ ದಿನದಂದು

ಮಾಡಿದ ಸ್ನಾನ, ದಾನ, ತಪಸ್ಸು, ಪಿತೃಕಾರ್ಯ ಮುಂತಾದ ಪುಣ್ಯ ಕರ್ಮಗಳೆಲ್ಲವೂ ಅಕ್ಷಯ ಫಲವನ್ನು ನೀಡುವವು. ಇಲ್ಲಿ ಬಂದು ಪಿತೃಗಳನ್ನು ಉದ್ದೇಶಿಸಿ ಪಿಂಡಪ್ರದಾನ ಮಾಡಿದರೆ ಎಲ್ಲ ಪಿತೃಗಳೂ ನರಕದಿಂದ ಉದ್ಧೃತರಾಗುವರು. ಆದುದರಿಂದ ಅದಕ್ಕೆ ಪಿತೃ ತೀರ್ಥ ಎಂದು ಕರೆಯುವರು.

**ಸ್ಕಂದ:-** ಬ್ರಹ್ಮತೀರ್ಥ ಎಂದರೆ ಯಾವುದು? ಎಲ್ಲಿ ಇರುತ್ತದೆ? ಅದರಲ್ಲಿ ಸ್ನಾನ ದಾನದಿಂದ ಯಾವ ಪುಣ್ಯಫಲವು ಪ್ರಾಪ್ತವಾಗುವುದು?

**ಮಹಾದೇವ:-** ಹಿಂದೆ ಬಹು ಪೂರ್ವಕಾಲದಲ್ಲಿ ಶ್ರೀಹರಿಯ ಹೊಕ್ಕಳದ ಹೊಂದಾವರೆಯಲ್ಲಿ ಹುಟ್ಟಿದ ಚತುರ್ಮುಖ ಬ್ರಹ್ಮನು ಕುಳಿತುಕೊಂಡಿದ್ದ ತನ್ನ ಕಮಲ ಪೀಠದಲ್ಲಿ. ನಾಲ್ಕೂ ಮುಖಗಳಿಂದ ಯಥಾವಿಧಿಯಾಗಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣ ವೇದ ಎಂಬ ನಾಲ್ಕು ವೇದಗಳನ್ನು ಸಂತತ ಪಾರಾಯಣವನ್ನು ಮಾಡುತ್ತಲಿದ್ದ ಆ ಪಿತಾಮಹ. ಆಗ ಮಧು ಕೈಟಭ ಎಂಬ ಹೆಸರಿನ ಇಬ್ಬರು ದುಷ್ಟದೈತ್ಯರು ಬ್ರಹ್ಮದೇವರ ಮುಖದಿಂದ ನಿರ್ಗಲಿತವಾದ ವೇದವಾಣಿಯನ್ನು ಕದ್ದು ಸೆಳೆದೊಯ್ದರು. ಆಗ ಕಮಲ ಸಂಭವನು ವಿಷಣ್ಣನಾಗಿ ಬದರೀಕ್ಷೇತ್ರಕ್ಕೆ ಬಂದನು. ನಾರಾಯಣ ದೇವನ ಪಾದ ಕಮಲಗಳಿಗೆ ನಮಸ್ಕರಿಸಿದನು. ಈ ವೇದಾಪಹಾರದ ವಿಷಯವನ್ನು ತಿಳಿಸಿ ಕದ್ದುಕೊಂಡುಹೋದ ಆ ವೇದವನ್ನು ಮರಳಿ ತನಗೆ ತಂದು ಕೊಡಬೇಕೆಂದು ಶ್ರೀಹರಿಗೆ ಪ್ರಾರ್ಥಿಸಿಕೊಂಡನು.

ಆಗ ಆ ಶಾರದಾಪತಿಯ ಬಿನ್ನಹವನ್ನು ಮನ್ನಿಸಿ ಶ್ರೀಹರಿಯು ಹಯಗ್ರೀವ ರೂಪದಿಂದ ಈ ಬದರೀಕ್ಷೇತ್ರದ ಒಂದು ಜಲಕುಂಡದಿಂದ ಪ್ರಕಟನಾದನು. ಅವನ ಕೈಗಳಲ್ಲಿ ಶಂಖ ಚಕ್ರ, ಕಟಿಯಲ್ಲಿ ಪೀತಾಂಬರ, ಅಂಗಾಂಗಗಳಲ್ಲಿ ಶುಭ್ರಕಾಂತಿ. ಈ ಹಯಗ್ರೀವ ದೇವರ ಕೊರಳಿನ ಕೇಶ ಪಾಶಗಳಿಂದ ಮೇಘಗಳೆಲ್ಲವೂ ಛಿನ್ನ ಭಿನ್ನ ವಾಗುತ್ತಿದ್ದವು. ಅವನ ದಿವ್ಯ ತೇಜಸ್ಸಿನಿಂದ ಗಗನಾಂಗಣದ ಜ್ಯೋತಿರ್ಗಣಗಳೆಲ್ಲವೂ ನಿಸ್ತೇಜವಾದವು. ಇಂತಹ ಅತ್ಯದ್ಭುತ ರೂಪದಿಂದ ಶ್ರೀಹರಿಯು ಬ್ರಹ್ಮದೇವರ ಎದುರು ಬಂದು ನಿಂತುಕೊಂಡನು. ಕುದುರೆಯ ಮುಖದ ಅತ್ಯಾಶ್ಚರ್ಯಕರವಾದ ಈ ಹಯಗ್ರೀವ ರೂಪವನ್ನು ಕಂಡು ಪರಮಾಶ್ಚರ್ಯವಾಯಿತು ಪರಮೇಷ್ಠಿಗೆ. ಕುತೂಹಲಭರಿತನಾದ ಕಮಲಸಂಭವನು ಕೈಜೋಡಿಸಿ ಸ್ತೋತ್ರ ಮಾಡತೊಡಗಿದನು.

**ಬ್ರಹ್ಮ:-** "ಯಾರ ನಾಭಿಕಮಲದಿಂದ ನಾನು ಕುಳಿತ ಈ ಕಮಲವೂ ಹುಟ್ಟಿದೆಯೋ ಅಂತಹ ಪದ್ಮನಾಭ ಸ್ವಾಮಿಯೇ! ನಿನಗೆ ನನ್ನ ನಮಸ್ಕಾರಗಳು. ಸರ್ವಪ್ರಾಣಿಗಳ ಹೃದಯಗುಹಾವಾಸಿಯಾದ ಮಹಾವಿಷ್ಣುವೆ! ನಿನಗೆ ವಂದನೆ. ಎಲ್ಲ ಇಂದ್ರಿಯಗಳ (ಇಂದ್ರಿಯಾಭಿಮಾನಿ ದೇವತೆಗಳ) ನಿಯಾಮಕನಾದ ಹೃಷೀಕೇಶನೆ! ನಿನಗೆ ಪ್ರಣಾಮ."

ಬ್ರಹ್ಮದೇವರ ಈ ಸ್ತೋತ್ರದಿಂದ ಸಂತುಷ್ಟನಾದ ಶ್ರೀ ಹಯಗ್ರೀವ ಸ್ವಾಮಿ. ಕೂಡಲೇ ಅವನು ಆ ವೇದಗಳ್ಳರು ಇದ್ದಲ್ಲಿಗೆ ಹುಡುಕಿಕೊಂಡು ಹೋದನು. ಮಧು ಕೈಟಭ ಇಬ್ಬರೂ ದುಷ್ಟ ದಾನವರನ್ನು ಹಿಡಿದು ತಂದು ಲೀಲೆಯಿಂದಲೇ ಹೊಡೆದು ಸಂಹರಿಸಿ ಹಾಕಿದನು. ಅವರು ಕದ್ದು ಒಯ್ದ, ವೇದರಾಶಿಯನ್ನೆಲ್ಲ ಮರಳಿ ತಂದು ಬ್ರಹ್ಮದೇವರಿಗೆ ಕೊಡಮಾಡಿದನು. ಅಂದಿನಿಂದ ಬ್ರಹ್ಮದೇವರ ಪ್ರಾರ್ಥನೆಯಂತೆ ಭಗವಂತನು ಹಯಗ್ರೀವ ರೂಪದಿಂದ ಪ್ರಕಟವಾದ ಆ ಜಲಕುಂಡವು ಬ್ರಹ್ಮಕುಂಡ ಎಂದು

ಪ್ರಸಿದ್ಧವಾಗಿದೆ. ಈ ಬ್ರಹ್ಮಕುಂಡ ಎಂಬ ಪುಣ್ಯತೀರ್ಥದ ದರ್ಶನಮಾತ್ರದಿಂದ ಮಹಾಪಾತಕಗಳು ತತ್ಕಾಲದಲ್ಲಿ ನಾಶವಾಗುತ್ತವೆ. ಸ್ನಾನ ಮಾಡಿದವರು ಬ್ರಹ್ಮಲೋಕಕ್ಕೆ ಪ್ರಯಾಣ ಬೆಳೆಸುತ್ತಾರೆ. ಈ ಬ್ರಹ್ಮಕುಂಡ ತೀರ್ಥದಲ್ಲಿ ಸ್ನಾನ, ಪಾನ, ಭಗವತ್ಪೂಜೆ ಮಾಡುವವರು ಬ್ರಹ್ಮಲೋಕವನ್ನು ದಾಟಿ ವಿಷ್ಣುಲೋಕಕ್ಕೆ ಹೋಗುವರು.

**ಸ್ಕಂದ:-** ಹಯಗ್ರೀವ ದೇವರಿಂದ ವೇದಗಳನ್ನು ಪಡೆದ ಬಳಿಕ ಬ್ರಹ್ಮದೇವರು ಏನು ಮಾಡಿದರು?

**ಮಹಾದೇವ:-** ಆ ನಾಲ್ಕು ವೇದಗಳು ಬದರೀಕ್ಷೇತ್ರವನ್ನು ನೋಡಿದ ಬಳಿಕ ಅದನ್ನು ಬಿಟ್ಟು ಬ್ರಹ್ಮದೇವರ ಬಳಿಗೆ ಹೋಗಲು ನಿರಾಕರಿಸಿದವು. ಶ್ರೀನಾರಾಯಣನ ದಿವ್ಯ ಧಾಮವಾದ ಈ ಬದರೀಕ್ಷೇತ್ರದಲ್ಲಿಯೇ ಈ ಭಗವಂತನ ಸೇವೆಯನ್ನು ಸಲ್ಲಿಸುತ್ತ ನಿರಂತರವಾಗಿ ನೆಲಿಸಬೇಕೆಂದು ಅವುಗಳ ಅಪೇಕ್ಷೆಯಾಗಿತ್ತು. ಆಗ ಅಲ್ಲಿ ಇರುವ ಋಷಿಮುನಿಗಳು ಬಹುಪರಿಯಿಂದ ತಿಳಿಸಿ ಹೇಳಿದರು. ಚತುರ್ವೇದಗಳು ಚತುರ್ಮುಖನ ನಾಲ್ಕು ಮುಖಗಳಲ್ಲಿ ಇರಲೇಬೇಕು ಎಂದು ಭಗವಂತನ ಆದೇಶ. ಇದನ್ನು ನೀವು ಉಲ್ಲಂಘಿಸಬಾರದು ಎಂದು.

ಆಗ ನಾಲ್ಕೂ ವೇದಗಳು ಏನಾದರೂ ತಾವು ಈ ದಿವ್ಯ ಕ್ಷೇತ್ರವನ್ನು ಪೂರ್ಣವಾಗಿ ಬಿಟ್ಟು ಹೋಗಲಾರೆವು ಎಂದು ನಿರ್ಧರಿಸಿದವು. ಆಗ ಆ ವೇದಗಳು ಎರಡು ರೂಪಗಳನ್ನು ಧರಿಸಿದವು. ಒಂದನೇಯದು ದ್ರವೀರೂಪವಾಗಿ ಬದರೀಕ್ಷೇತ್ರದಲ್ಲಿ ನೆಲೆಸಿದವು. ಎರಡನೇಯದು ಜ್ಞಾನರೂಪವಾಗಿ ಬ್ರಹ್ಮಲೋಕಕ್ಕೆ ಹೋಯಿತು. ಬ್ರಹ್ಮದೇವರೊಂದಿಗೆ. ನಾಲ್ಕೂ ವೇದಗಳು ದ್ರವರೂಪದಿಂದ ಹಯಗ್ರೀವ ದೇವರು ಹುಟ್ಟಿದ (ಪ್ರಾದುರ್ಭವಿಸಿದ) ಈ ಬ್ರಹ್ಮ ಕುಂಡದಲ್ಲಿ ಕರಗಿ ನೀರಾಗಿ ನಿರಂತರವಾಗಿ ನೆಲೆಸಿದವು.

ಬ್ರಹ್ಮ ಎಂದರೆ ವೇದರಾಶಿ, ವೇದಗಳೆಲ್ಲ ಕರಗಿ ಜಲರೂಪದಿಂದ ಮಡುವು ಗಟ್ಟಿ ಕೊಂಡು ತೀರ್ಥವಾಗಿ ನಿಂತಿದ್ದರಿಂದ ಇದಕ್ಕೆ ಬ್ರಹ್ಮಕುಂಡ ಎಂದು ಹೆಸರು ಸಾರ್ಥಕವಾಗಿದೆ. ಇಲ್ಲಿ ಮಾಡಿದ ಸ್ನಾನ ದಾನ ತಪಸ್ಸು ಜಪ ಮುಂತಾದ ಪುಣ್ಯ ಕರ್ಮಗಳು ಅಕ್ಷಯ ಫಲದಾಯಕ ಆಗಿರುತ್ತವೆ. ನಾಲ್ಕು ವೇದಗಳ ಗೂಡಾರ್ಥ ಜ್ಞಾನವು ಸರಿಯಾಗಿ ಆಗಬೇಕು ಎಂದು ಬಯಸುವವರು ಈ ಬ್ರಹ್ಮಕುಂಡದಲ್ಲಿ ಸ್ನಾನಮಾಡಿ ಮೂರು ದಿವಸ ಉಪವಾಸವಿದ್ದು ಭಗವಾನ್ ನಾರಾಯಣನ ಧ್ಯಾನವನ್ನು ಮಾಡಬೇಕು. ಅವರಿಗೆ ಇಲ್ಲಿಯ ಸ್ನಾನ ಧ್ಯಾನಗಳ ಪ್ರಭಾವದಿಂದ ವೇದಗಳ ದಿವ್ಯಜ್ಞಾನವು ತಾನಾಗಿಯೇ ಉದಿಸಿ ಬರುವದು.

ಈ ಬ್ರಹ್ಮಕುಂಡದಲ್ಲಿ ಜಲರೂಪದಿಂದ ವೇದಗಳೆಲ್ಲವೂ ಇದ್ದುದರಿಂದ ವೇದತೀರ್ಥ ಎಂದೂ ಇದಕ್ಕೆ ಹೆಸರಾಯಿತು. ಈ ವೇದ ತೀರ್ಥದ ಉತ್ತರ ದಿಕ್ಕಿನಲ್ಲಿ ಸರಸ್ವತೀ ತೀರ್ಥವಿದೆ. ಈ ತೀರ್ಥದಲ್ಲಿ ಸ್ನಾನ ಮಾಡಿ, ಇದರ ತೀರದಲ್ಲಿ ಜಪ ತಪ ಅನುಷ್ಠಾನ ಮಾಡುವವರ ಬುದ್ಧಿಯ ಜಾಡ್ಯವೆಲ್ಲವೂ ತೊಳೆದು ಬುದ್ಧಿಯಲ್ಲಿ ತೀಕ್ಷ್ಣತೆ ಬರುತ್ತದೆ. ಜಗದೀಶ್ವರನಾದ ಮಹಾವಿಷ್ಣುವು ಮೂರುಲೋಕದ ಹಿತಕ್ಕಾಗಿ ಈ ತೀರ್ಥದಲ್ಲಿ ಸರಸ್ವತೀ ನದಿಯನ್ನು ಪ್ರತಿಷ್ಠೆಗೊಳಿಸಿದ್ದಾನೆ. ಅವನ ದಯೆಯಿಂದ ಇಲ್ಲಿ ಸ್ನಾನಮಾಡುವವರಿಗೆಲ್ಲ ಆ ಶಾರದಾ ದೇವಿಯು ವಾಗ್ವೈಭವವನ್ನು ಕರುಣಿಸುತ್ತಾಳೆ.

ಈ ಸರಸ್ವತೀ ತೀರ್ಥದ ದಕ್ಷಿಣಕ್ಕೆ ದ್ರವಧಾರಾ ಎಂಬ ಒಂದು ತೀರ್ಥವಿರುತ್ತದೆ. ಹಿಂದೆ ಇಂದ್ರದೇವರು ಇಲ್ಲಿ ನಿಂತು ತಪಸ್ಸನ್ನು ಮಾಡಿದ್ದರಿಂದ ಇದಕ್ಕೆ ಇಂದ್ರಪದತೀರ್ಥ ಎಂದೂ ಹೆಸರೂ ಬಂದಿದೆ. ಪ್ರತಿ ತಿಂಗಳ ಶುಕ್ಲ ಪಕ್ಷ ತ್ರಯೋದಶೀ ದಿನದಂದು

ಈ ತೀರ್ಥದಲ್ಲಿ ಸ್ನಾನಮಾಡಿ ಎರಡು ಹೊತ್ತು ಉಪವಾಸ ಮಾಡಿ. ವಿಷ್ಣುವಿನ ಪೂಜೆ ಮಾಡುವದರಿಂದ ಮಾನವನಿಗೆ ಇಂದ್ರಲೋಕದಲ್ಲಿ ಗೌರವದ ಸ್ಥಾನ ದೊರೆಯುವದು.

ಇಲ್ಲಿಯೇ 'ಮಾನಸೋದ್ಭೇದ' ಎಂಬ ಮತ್ತೊಂದು ತೀರ್ಥವಿದೆ. ಇದರಲ್ಲಿ ಸ್ನಾನಮಾಡುವದರಿಂದ ಹೃದಯ ಗ್ರಂಥಿ ಭೇದನವಾಗಿ, ಕರ್ಮ ಬಂಧನವು ಕ್ಷೀಣಿಸುವದರಿಂದ ಇದಕ್ಕೆ ಮಾನಸೋದ್ಭೇದ ಎಂದು ಹೆಸರು ಬಂದಿದೆ.

ಈ ಮಾನಸೋದ್ಭೇದ ತೀರ್ಥದಿಂದ ಪಶ್ಚಿಮಕ್ಕೆ ವಸುಧಾರಾ ಎಂದು ಪ್ರಸಿದ್ಧವಾದ ಒಂದು ಸುಂದರವಾದ ತೀರ್ಥವಿದೆ. ನಾರದರು ಸ್ವರ್ಗಲೋಕದ ಸುರರ ಸಭೆಯಲ್ಲಿ ಬದರಿಕಾಶ್ರಮ ಕ್ಷೇತ್ರದ ಮಹಿಮೆಯನ್ನು ಹಿಂದೊಮ್ಮೆ ಬಿತ್ತರಿಸಿದರು. ಮೂರು ಲೋಕದಲ್ಲಿಯೇ ಬದರೀಕ್ಷೇತ್ರವು ಸರ್ವಶ್ರೇಷ್ಠ ಎಂದೂ ಘೋಷಿಸಿದರು. ಇದನ್ನು ಕೇಳಿ ಸ್ವರ್ಗದಲ್ಲಿ ಅಷ್ಟವಸುಗಳು ಈ ದಿವ್ಯಕ್ಷೇತ್ರಕ್ಕೆ ಆಗಮಿಸಿದರು. ಆ ಎಂಟು ಜನ ವಸುಗಳು ಈ ನಾರಾಯಣನ ನಿವಾಸದಲ್ಲಿ ನಿಂತು, ಎಲೆ ತಿಂದು, ಗಾಳಿಕುಡಿದು, ಮಳೆ ಬಿಸಿಲು ಗಾಳಿಗಳಿಗೆ ಮೈ ತೆರೆದು ಇಲ್ಲಿಯ ತೀರ್ಥದ ತಡಿಯಲ್ಲಿ ನಿಂತು ಉಗ್ರ ತಪಸ್ಸನ್ನು ಮಾಡಿದರು. ಅವರಿಗೆ ನಾರಾಯಣ ದೇವರ ದಿವ್ಯ ದರ್ಶನವು ಈ ತೀರ್ಥದ ತೀರದಲ್ಲಿ ಆಯಿತು. ಅದುದರಿಂದ ಇದಕ್ಕೆ ವಸುಧಾರಾ ತೀರ್ಥ ಎಂದು ಹೆಸರು ಬಂದಿತು. ಈ ವಸು ತೀರ್ಥದಲ್ಲಿ ಸ್ನಾನ ಆಚಮನ ಮಾಡಿ ಶ್ರೀಮನ್ನಾರಾಯಣನ ಪೂಜೆ ಮಾಡುವವರಿಗೆ ಇಹಲೋಕದಲ್ಲಿ ಭಕ್ತಿ ಪರತ್ರ ಮುಕ್ತಿ ಎರಡೂ ಪ್ರಾಪ್ತವಾಗುವವು. ಯಾವ ಪುಣ್ಯ ಪುರುಷನಿಗೆ ಈ ತೀರ್ಥದ ಜಲಮಧ್ಯಭಾಗದಿಂದ ಜ್ಯೋತಿಷ್ಪುಂಜವು ಎದ್ದು ಕಂಡುಬರುವದೋ ಅವನಿಗೆ ಪುನಃ ಗರ್ಭವಾಸ ದುಃಖವು ಬರುವದಿಲ್ಲ. ಈ ಪುಣ್ಯ ತೀರ್ಥದಲ್ಲಿ ಮೂರುದಿನ ಇದ್ದು ಉಪವಾಸಮಾಡಿ ಶ್ರೀಮನ್ನಾರಾಯಣ ದೇವರ ಆರಾಧನೆ ಮಾಡುವ ಮನುಷ್ಯನು ಸಿದ್ಧಪುರುಷ ಎನಿಸುವನು. ಲೋಭ, ಚಂಚಲತೆ, ಪರದ್ರವ್ಯವನ್ನು ಅಪಹರಿಸುವ ದುರ್ಬುದ್ಧಿ, ಪರಸ್ತ್ರೀ ಮೋಹ, ಅಸತ್ಯ ವಚನ ಮುಂತಾದ ದುಷ್ಕರ್ಮಗಳನ್ನು ಆಚರಿಸುವ ದುರಾಚಾರಿ ಮಾನವನಿಗೆ ಈ ಪುಣ್ಯ ತೀರ್ಥದ ಸ್ನಾನದಿಂದ ಯಾವ ಫಲವೂ ಲಭಿಸಲಾರದು.

ವೇದಶಾಸ್ತ್ರಗಳಲ್ಲಿ ಹೇಳಿದ ಧರ್ಮ ಕರ್ಮಾನುಷ್ಠಾನವನ್ನು ಯಥಾಶಕ್ತಿ ಮಾಡುತ್ತ ಭಕ್ತಿಯಿಂದ ಭಗವಂತನ ನಿರಂತರ ಆರಾಧನೆ, ಹಾಗೂ ಉಪಾಸನೆಗೈಯ್ಯುವವರು ಇಲ್ಲಿ ಬಂದು ಜಪ ತಪ ಹೋಮ ವ್ರತ ಧ್ಯಾನ ಭಜನೆಗಳನ್ನು ಮಾಡಿದರೆ ಶ್ರೀ ನಾರಾಯಣ ದೇವರ ಅನುಗ್ರಹದಿಂದ ಮುಕ್ತಿ ಮಂದಿರಕ್ಕೆ ಪ್ರಯಾಣ ಬೆಳೆಸುವರು.

## ನರನಾರಾಯಣ ಆಶ್ರಮಗಳ ಮಹಿಮೆ

## ಅಧ್ಯಾಯ - ೪೯

**ಮಹಾದೇವ:-** ಈ ಬದರೀ ಕ್ಷೇತ್ರದಲ್ಲಿ ನೈಋತ್ಯ ದಿಕ್ಕಿನ ನಿಟ್ಟಿನಲ್ಲಿ ಐದು ನೀರಿನ ಧಾರೆಗಳು ಸುರಿಯುತ್ತವೆ. ಈ ಪಂಚ ತೀರ್ಥಗಳಿಗೆ ಪ್ರಭಾತ, ಪುಷ್ಕರ, ಗಯಾ, ನಿಮಷ, ಕುರುಕ್ಷೇತ್ರ ಎಂದು ಹೆಸರು. ಪರಮ ಪವಿತ್ರವಾದ ಈ ಪಂಚತೀರ್ಥಗಳಲ್ಲಿ ಸ್ನಾನ ದಾನ ಜಪತಪಗಳನ್ನು ಮಾಡಿದವರಿಗೆ ಮತ್ತು ಈ ತೀರ್ಥಗಳ ದಂಡೆಯಲ್ಲಿ ದೇವರ ಪೂಜೆಯನ್ನು ಮಾಡಿದವರಿಗೆ, ವಿಷ್ಣುಲೋಕದಲ್ಲಿ ಸಾಲೋಕ್ಯ ಎಂಬ ಮುಕ್ತಿಯು ಕರಗತವಾಗುವುದು. ಇರುವವರೆಗೆ ಈ ಲೋಕದಲ್ಲಿ ಭೋಗ ಭಾಗ್ಯ ಐಶ್ವರ್ಯಗಳು

ಸಮೃದ್ಧವಾಗಿ ಲಭಿಸುವವು. ಈ ಪಂಚತೀರ್ಥಗಳನ್ನು ದಾಟಿ ಮುಂದೆ ಹೋದರೆ ಸೋಮಕುಂಡ ಎಂಬ ಒಂದು ತೀರ್ಥವಿದೆ, ಹಿಂದೆ ಚಂದ್ರನು ಇಲ್ಲಿ ನಿಂತು ತಪಸ್ಸನ್ನು ಮಾಡಿದ್ದರಿಂದ ಇದಕ್ಕೆ ಸೋಮತೀರ್ಥ ಎಂಬ ಹೆಸರು ಬಂದಿದೆ. ಈ ವಿಷಯದಲ್ಲಿ ಒಂದು ಪ್ರಾಚೀನ ಇತಿಹಾಸವಿದೆ. ಅದನ್ನು ನಿನಗೆ ಹೇಳುತ್ತೇನೆ. ಕೇಳು.

ಪೂರ್ವಕಾಲದಲ್ಲಿ ಅತ್ರಿಋಷಿಯ ಮಗನಾದ ಚಂದ್ರನು ಪ್ರಬುದ್ಧನಾದ ಬಳಿಕ ಗಂಧರ್ವರ ಮುಖದಿಂದ ಸ್ವರ್ಗಲೋಕದ ಬಣ್ಣನೆಯನ್ನು ಕೇಳಿದನು. ಅದರಿಂದ ಆ ತರುಣ ಋಷಿ ಕುಮಾರನಿಗೆ ಕುತೂಹಲ ಉಂಟಾಗಿ ಅವನು ತನ್ನ ತಂದೆ ಅತ್ರಿಋಷಿಗಳ ಹತ್ತಿರ ಬಂದು ಪ್ರಶ್ನೆ ಕೇಳಿದನು :-

''ಪೂಜ್ಯರೇ ಸ್ವರ್ಗ ಸುಖವು ಮಾನವರಿಗೆ ಹೇಗೆ ದೊರಕುವುದು?'' ಆಗ ಅತ್ರಿಋಷಿಗಳು ತಮ್ಮ ಮಗನನ್ನು ಪ್ರೀತಿಸ್ನಿಗ್ಧವಾದ ದೃಷ್ಟಿಯಿಂದ ನೋಡಿ ಹೇಳಿದರು.

''ವತ್ಸ, ತಪಸ್ಸು, ಯಮ, ನಿಯಮ, ಸಂತತ ಆರಾಧನೆಗಳಿಂದ ಶ್ರೀಹರಿಯನ್ನು ಒಲಿಸಿ ಕೊಂಡವರಿಗೆ ಯಾವುದು ತಾನೇ ದುರ್ಲಭ? ಶ್ರೀಮನ್ ನಾರಾಯಣನ ಅನುಗ್ರಹದಿಂದ ಮೋಕ್ಷವೇ ಕರಗತವಾಗುವಾಗ ಮಿಕ್ಕ ಸ್ವರ್ಗಾದಿಗಳು ದೊರಕುವುದು ಏನು ಆಶ್ಚರ್ಯ?

ಪೂಜ್ಯ ತಂದೆಯವರಾದ ಅತ್ರಿ ಋಷಿಗಳ ಈ ಮಾತನ್ನು ಕೇಳಿ ಚಂದ್ರನ ಹೃದಯದಲ್ಲಿ ಬದರೀಕ್ಷೇತ್ರದ ವಿಷವಾಗಿ ಕುತೂಹಲ ಉಂಟಾಯಿತು. ಅಷ್ಟರಲ್ಲಿ ಅಲ್ಲಿಗೆ ನಾರದ ಮಹರ್ಷಿಗಳು ಆಗಮಿಸಿದರು. ಲೋಕಾಭಿರಾಮವಾಗಿ ಮಾತನಾಡುತ್ತ ಕುಳಿತಾಗ ನಾರದರು ಈ ಮೂರು ಲೋಕಗಳಲ್ಲಿ ಬದರಿಗೆ ಸಮಾನವಾದ ಕ್ಷೇತ್ರವಿಲ್ಲ, ಶ್ರೀನಾರಾಯಣನಿಗೆ ಸಮಾನವಾದ ದೇವರಿಲ್ಲ, ಗಂಗೆಗೆ ಸಮಾನವಾದ ತೀರ್ಥವಿಲ್ಲ ಎಂಬ ಮೂರು ಮಾತುಗಳನ್ನು ಒತ್ತಿ ಹೇಳಿದರು.

ಇದನ್ನು ಕೇಳಿ ತರುಣ ವಯಸ್ಸಿನ ಚಂದ್ರಾಮನಿಗೆ ಬದರೀಕ್ಷೇತ್ರದ ಯಾತ್ರೆಯನ್ನು ಈಗಲೇ ಮಾಡಬೇಕೆಂಬ ಹಂಬಲ ಹುಟ್ಟಿತು. ಕೂಡಲೇ ಅವನು ತಂದೆಯ ಅಪ್ಪಣೆ ಪಡೆದು ನಾರದರಿಗೆ ನಮಸ್ಕರಿಸಿ ಉತ್ತರ ದಿಕ್ಕಿನೆಡೆ ಪ್ರಯಾಣ ಬೆಳೆಸಿದನು. ಗಂಧಮಾದನ ಗಿರಿಯನ್ನು ದಾಟಿ ಬದರೀತೀರ್ಥಕ್ಕೆ ಬಂದನು. ಅಲ್ಲಿಯ ಅಲಕನಂದಾ ನದಿಯಲ್ಲಿ ಸ್ನಾನಮಾಡಿ ನಾರಾಯಣ ದೇವರನ್ನು ಪೂಜಿಸಿ ''ಓಂ ನಮೋ ನಾರಾಯಣಾಯ'' ಎಂಬ ಅಷ್ಟಾಕ್ಷರ ಮಂತ್ರವನ್ನು ಜಪಿಸಲು ಪ್ರಾರಂಭ ಮಾಡಿದನು. ಅನ್ನ ಪಾನಗಳನ್ನು ವರ್ಜಿಸಿದನು. ನಿದ್ದೆ ವಿಶ್ರಾಂತಿಗಳನ್ನು ತೊರೆದನು. ಹಗಲು ರಾತ್ರಿ ಎನ್ನದೇ ಸಂತತವು ಅಂತರಂಗದಲ್ಲಿ ಭಗವಂತನ ಚಿಂತನೆಗೈಯುತ್ತ ಈ ನಾರಾಯಣನ ಅಷ್ಟಾಕ್ಷರ ಮಂತ್ರದ ನಿರಂತರ ಜಪ ರೂಪವಾದ ದೀರ್ಘಕಾಲದ ತಪಸ್ಸನ್ನು ಆಚರಿಸಿದನು. ಅದರಿಂದ ಪರಿತುಷ್ಟನಾದ ಪರಮಾತ್ಮನು ಪ್ರಸನ್ನನಾಗಿ ತನ್ನ ಪ್ರತ್ಯಕ್ಷ ದರ್ಶನವನ್ನೇ ನೀಡಿದನು ಆ ಅತ್ರಿಪುತ್ರನಾದ ಚಂದ್ರನಿಗೆ. ಮತ್ತು ಪ್ರೀತಿಯಿಂದ ಅವನ ಮೈದಡವಿ ನುಡಿದನು. 'ವತ್ಸ ನಿನ್ನ ಈ ತೀವ್ರತರವಾದ ತಪಸ್ಸಿನಿಂದ ನಾನು ಸಂತುಷ್ಟನಾಗಿದ್ದಾನೆ, ನಿನಗೆ ಬೇಕಾದ ವರವನ್ನು ಕೇಳಿಕೊ.' ಆಗ ಚಂದ್ರನು ಎದ್ದು ಪುನಃ ಪುನಃ ಪ್ರಣಾಮಗೈದು ಭಗವಂತನಿಗೆ ಭಕ್ತಿಯಿಂದ ಕೈ ಜೋಡಿಸಿ ನಮ್ರತೆಯಿಂದ ನುಡಿದನು. ''ಭಗವನ್ ಅಂತರಿಕ್ಷ ಲೋಕದಲ್ಲಿಯ ಎಲ್ಲ ಗ್ರಹ, ನಕ್ಷತ್ರ, ತಾರಿಕೆ, ನೀಹಾರಿಕೆಗಳಿಗೆಲ್ಲ ನಾನು ಅಧಿರಾಜನಾಗಬೇಕು. ಮತ್ತು ಔಷಧಿ ವರ್ಗಕ್ಕೂ, ಬ್ರಾಹ್ಮಣರಿಗೂ ನಾನೇ ಅಧಿ ದೇವತೆಯಾಗಬೇಕು ನಿನ್ನ ಅನುಗ್ರಹದಿಂದ.

**ಶ್ರೀನಾರಾಯಣ:-** "ವತ್ಸ! ನೀನು ಬಹಳ ದುರ್ಲಭವಾದ ವರಗಳನ್ನು ಕೇಳಿಕೊಂಡಿರುವೆ. ಆದರೂ ನಾನು ನಿನಗೆ ಆ ಎಲ್ಲ ವರಗಳನ್ನು ಕರುಣಿಸುತ್ತೇನೆ."

ಹೀಗೆ ಹೇಳಿ ಶ್ರೀಹರಿಯು ಚಂದ್ರನಿಗೆ ಅಪೇಕ್ಷಿತವಾದ ವರಗಳನ್ನೆಲ್ಲ ಕರುಣಿಸಿದನು. ಭಗವಂತನ ಆಜ್ಞೆಯಂತೆ ಎಲ್ಲ ದೇವಾಧಿದೇವತೆಗಳು ಬಂದು ಚಂದ್ರನನ್ನು ಗ್ರಹ ನಕ್ಷತ್ರ ತಾರಾಮಂಡಲಗಳ ಆಧಿಪತ್ಯ ಪೀಠದಲ್ಲಿ ಪಟ್ಟಾಭಿಷೇಕ ಮಾಡಿದರು- ಅಂದಿನಿಂದ ಔಷಧಿ ವರ್ಗಕ್ಕೂ, ಬ್ರಾಹ್ಮಣರಿಗೂ ಮತ್ತು ಗಗನಮಂಡಲದ ನಕ್ಷತ್ರಗಣಗಳಿಗೂ ಚಂದ್ರ ಸಾರ್ವಭೌಮನಾದ ಸರ್ವಾಧಿಕಾರಿ ಅಧಿದೇವತೆಯಾದ. ಅನಂತರ ಚಂದ್ರನು ಇದೇ ಬದರೀಕ್ಷೇತ್ರದಲ್ಲಿ ತಾನು ತಪಸ್ಸನ್ನು ಮಾಡುತ್ತಿದ್ದ ತೀರ್ಥದ ದಂಡೆಯಿಂದ ಎದ್ದು ದೇವತಾನುಗ್ರಹದಿಂದ ಲಭ್ಯವಾದ ದಿವ್ಯ ರಥವನ್ನು ಆರೋಹಣ ಮಾಡಿಕೊಂಡು ಸ್ವರ್ಗಕ್ಕೆ ತೆರಳಿದ.

ಅಂದಿನಿಂದ ಅವನು ತಪಂಗೈದ ಈ ತೀರ್ಥವು ಚಂದ್ರನ ಆ 'ಸೋಮ' ಎಂಬ ಹೆಸರಿನಿಂದ ಸೋಮಕುಂಡ ಎಂದು ಪ್ರಸಿದ್ಧವಾಯಿತು. ಈ ಸೋಮಕುಂಡದಲ್ಲಿಯ ನೀರನ್ನು ಆಚಮನ ಮಾಡುವದರಿಂದ ಚಂದ್ರಲೋಕಕ್ಕೆ ಹೋಗುವರು. ಮಾನವನು ಇಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿ ದೇವತೆಗಳಿಗೂ ಪಿತೃಗಳಿಗೂ ತರ್ಪಣವನ್ನು ನೀಡಿದವನು ಚಂದ್ರಲೋಕವನ್ನು ಭೇದಿಸಿಕೊಂಡು ವಿಷ್ಣುಲೋಕಕ್ಕೆ ಹೋಗುತ್ತಾನೆ.

ಈ ಸೋಮಕುಂಡದಿಂದ ಮುಂದೆ ದ್ವಾದಶಾದಿತ್ಯ ಎಂಬ ಹೆಸರಿನ ಒಂದು ತೀರ್ಥವಿದೆ. ಅಲ್ಲಿ ತಪಸ್ಸನ್ನು ಮಾಡಿ ಕಶ್ಯಪಕುಮಾರನು ಸೂರ್ಯ, ಪದವಿಯನ್ನು ಹೊಂದಿದನು. ರವಿವಾರ ಸಪ್ತಮಿಯ ದಿನ ಮತ್ತು ಸಂಕ್ರಾಂತಿಯ ಪುಣ್ಯಕಾಲದಲ್ಲಿ ಈ ದ್ವಾದಶಾದಿತ್ಯ ಪುಣ್ಯ ತೀರ್ಥದಲ್ಲಿ ಸ್ನಾನ ಮಾಡುವದರಿಂದ ಏಳು ಜನ್ಮಗಳಲ್ಲಿ ಮಾಡಿದ ಪಾಪದಿಂದ ಬಿಡುಗಡೆ ಆಗುವದು. ಈ ಜಲದ ಸ್ನಾನ ಪಾನಗಳಿಂದ ಮಹಾರೋಗದಂಥ ಉಲ್ಬಣ ರೋಗವು ಕೂಡ ವಾಸಿಯಾಗುವುದು. ಇದರ ಮುಂದುಗಡೆ ಚತುಸ್ರೋತ ಎಂಬ ಮತ್ತೊಂದು ತೀರ್ಥವಿದೆ. ಭಗವಂತನ ಆಜ್ಞೆಯಂತೆ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳು ದ್ರವರೂಪ ಹೊಂದಿ ಮಾನವರ ಮುಕ್ತಿಗಾಗಿ ಇಲ್ಲಿ ಮಡುಗಟ್ಟಿ ನಿಂತುಕೊಂಡಿದೆ. ಪೂರ್ವದಿಕ್ಕಿನಲ್ಲಿ ಧರ್ಮವು ಕರಗಿ ತೀರ್ಥವಾಗಿ ನಿಂತಿದೆ. ದಕ್ಷಿಣದಲ್ಲಿ ಅರ್ಥ, ಪಶ್ಚಿಮದಲ್ಲಿ ಕಾಮ, ಉತ್ತರದಲ್ಲಿ ಮೋಕ್ಷ ಹೀಗೆ ನಾಲ್ಕು ಪುರುಷಾರ್ಥಗಳು ದ್ರವೀಭವಿಸಿ ತೀರ್ಥವಾಗಿ ನಿಂತುಕೊಂಡಿವೆ. ಈ ಚತುಸ್ರೋತ ತೀರ್ಥದಲ್ಲಿ ಕ್ರಮದಿಂದ ಈ ನಾಲ್ಕೂ ತೀರ್ಥಗಳಲ್ಲಿ ಸ್ನಾನಮಾಡಿದ ಮಾನವನು ಚತುರ್ವಿಧ ಪುರುಷಾರ್ಥವನ್ನು ಹೊಂದುವನು.

ಇದರ ಮುಂದೆ ತ್ರಿಕೋಣಾಕಾರದ ಸತ್ಯಪದ ಎಂಬ ಹೆಸರಿನ ಒಂದು ತೀರ್ಥ ಕುಂಡವಿದೆ. ಇಲ್ಲಿ ಪ್ರತಿ ತಿಂಗಳ ಶುಕ್ಲಪಕ್ಷ ಏಕಾದಶಿ ದಿನದಂದು ಭಗವಾನ್ ಶ್ರೀಕೃಷ್ಣನು ಆಗಮಿಸುತ್ತಾನೆ. ಅನಂತರ ಎಲ್ಲ ಋಷಿ ಮುನಿ ತಪಸ್ವಿಗಳು ಬಂದು ಈ ಕುಂಡದಲ್ಲಿ ಸ್ನಾನ ಮಾಡಿ ಹೋಗುವರು. ಈ ತೀರ್ಥದಲ್ಲಿ ಜಪ ತಪ ಹರಿಸ್ತೋತ್ರ ಪೂಜೆ ಪಾರಾಯಣ ಮುಂತಾದ ಧರ್ಮಕಾರ್ಯ ಮಾಡುವವನು ವೈಕುಂಠಧಾಮವನ್ನು ಕುರಿತು ಪ್ರಯಾಣ ಮಾಡುವರು.

ಇದಾದ ನಂತರ ಭಗವಂತನ ದಿವ್ಯವಾದ ನಾರಾಯಣಾಶ್ರಮವು ಶೋಭಿಸುತ್ತಿದೆ. ಇಲ್ಲಿ ಸ್ವಚ್ಛ ಶುಭ್ರವಾದ ಅಮೃತದಂತಹ ನೀರು ಎರಡು ಧಾರೆಗಳಾಗಿ ಪ್ರವಹಿಸುತ್ತದೆ. ಈ ಎರಡು ಜಲಧಾರೆಗಳ ಸೇವನೆಯಿಂದ ನರನಾರಾಯಣರ ಪ್ರೀತಿ ಉಂಟಾಗುತ್ತದೆ.

ಧರ್ಮ ಮತ್ತು ಮೂರ್ತಿ ದಂಪತಿಗಳಿಂದ ಇದೇ ಕ್ಷೇತ್ರದಲ್ಲಿ ಭಗವಾನ್ ಶ್ರೀ ಮಹಾವಿಷ್ಣುವಿನ ನರನಾರಾಯಣ ರೂಪವಾದ ಅವತಾರವು ಆಯಿತು. ಆ ನರ-ನಾರಾಯಣರೂ ತಮ್ಮ ತಾಯಿ ತಂದೆಗಳ ಅಪ್ಪಣೆ ಪಡೆದು ತಪಸ್ಸಿಗೆ ನಡೆದರು. ನರನಾರಾಯಣ ಹೆಸರಿನ ಎರಡು ಪರ್ವತಗಳ ಮಧ್ಯದಲ್ಲಿ ಮೂರ್ತಿಮಂತ ತಪಸ್ಸಿನಂತೆ ಸಮಾಧಿಸ್ಥರಾಗಿ ಇಬ್ಬರೂ ನಿಂತುಕೊಂಡರು. ಪ್ರಾಣಿಗಳ ಕಲ್ಯಾಣಕ್ಕಾಗಿ ಸಾಕ್ಷಾತ್ ಶ್ರೀ ಭಗವಾನ್ ನಾರಾಯಣನು ಸ್ವಯಂ ತಪೋಮೂರ್ತಿಯಾಗಿ ನಿಂತುಕೊಂಡಿದ್ದಾನೆ. ಶ್ರೀ ಲಕ್ಷ್ಮೀಪತಿಯ ಚರಣಾರವಿಂದದ ಸುಗಂಧವನ್ನು ಹೊತ್ತು ತೀಡುವ ತಂಗಾಳಿಯೂ ಕೂಡ ಪರಮ ಪಾವನವಾಗಿದೆ.

ಈ ದಿವ್ಯ ಕ್ಷೇತ್ರದ ಯಾತ್ರೆ ಮಾಡುವವರ ಪಾಪಗಳೆಲ್ಲವೂ ನಾಶವಾಗುತ್ತವೆ ಇಲ್ಲಿ ನೆಲೆನಿಂತಿದ್ದಾನೆ ಬದರೀ ನಾರಾಯಣ. ಈ ನಾರಾಯಣ ಗಿರಿಯಲ್ಲಿ ಅನೇಕ ತೀರ್ಥಗಳು ಇರುತ್ತವೆ.

ಅದರ ದಕ್ಷಿಣ ಭಾಗದಲ್ಲಿ ವಿಷ್ಣುವಿನ ಆಶ್ರಮವು ಶೋಭಿಸುತ್ತದೆ. ಈ ನಾರಾಯಣನ ಆಶ್ರಮದ ಪುಣ್ಯ ಪರಿಸರದಲ್ಲಿರುವ ತೀರ್ಥದಲ್ಲಿರುವ ಮಹಿಮೆಯನ್ನು ಹಾಗೂ ಮುಖ್ಯ ಕ್ಷೇತ್ರವಾದ ಈ ಬದರೀಕ್ಷೇತ್ರ ಹಾಗೂ ಕ್ಷೇತ್ರಪಾಲನಾದ ಶ್ರೀಮನ್ನಾರಾಯಣನ ಮಹಾ ಮಹಿಮೆಯನ್ನು ಬ್ರಹ್ಮದೇವರಿಗೂ ಬಣ್ಣಿಸಲು ಬಾರದು.

## ತೀರ್ಥಕ್ಷೇತ್ರಗಳ ಮಾಹಾತ್ಮ್ಯೆ

**ಅಧ್ಯಾಯ - ೫೦**

**ಶಿವ:-** ಬ್ರಹ್ಮಕುಂಡದಿಂದ ದಕ್ಷಿಣಕ್ಕೆ ನರನ ನಿವಾಸವಾದ ಒಂದು ದೊಡ್ಡ ಪರ್ವತವಿದೆ. ಭಗವಾನ್ ಶ್ರೀಹರಿಯು ಮೇರು ಪರ್ವತದ ಒಂದು ಶಿಖರವನ್ನು ತಂದು ಇಲ್ಲಿ ಸ್ಥಾಪನೆಮಾಡಿದ್ದಾನೆ. ಇದೇ ಈಗ ನರಪರ್ವತವೆಂದು ಪ್ರಖ್ಯಾತವಾಗಿದೆ. ಭಗವಂತನು ಈ ಬದರೀಕ್ಷೇತ್ರದಲ್ಲಿ ಬಂದು ನೆಲೆಸಿದ ಬಳಿಕ ಎಲ್ಲ ದೇವಾಧಿದೇವತೆಗಳೂ ಮಹರ್ಷಿಗಳೂ ಸಿದ್ಧರೂ ಈ ಜಗದೀಶ್ವರನ ದರ್ಶನಕ್ಕಾಗಿ ತಮ್ಮ ವಾಸಸ್ಥಳವಾದ ಮೇರು ಪರ್ವತವನ್ನು ಬಿಟ್ಟು ಈ ನಾರಾಯಣಗಿರಿಗೆ ಆಗಮಿಸಿದರು.

ಈ ನಾರಾಯಣ ಪರ್ವತದಲ್ಲಿ ಶ್ರೀಮಾನ್ ನಾರಾಯಣನ ಸನ್ನಿಧಾನವನ್ನು ಬಿಟ್ಟು ತಮ್ಮ ದೇವಲೋಕಕ್ಕೆ ಹೋಗಲಿಕ್ಕೂ ಅವರು ಬಯಸಲಿಲ್ಲ. ಹೀಗೆ ಎಲ್ಲ ದೇವಮುನಿಗಳು ತಾನಿದ್ದ ವಿಶಾಲಾಪುರಿಯಲ್ಲಿಯೇ ಬಂದು ನಿಂತುದನ್ನು ನೋಡಿ ಮಹಾವಿಷ್ಣುವು ತನ್ನ ಒಂದು ಕೈಯಿಂದ ಮೇರು ಪವರ್ತದ ಶಿಖರವನ್ನು ಕಿತ್ತಿ ಎತ್ತಿ ತಂದು ಈ ಬದರೀಕ್ಷೇತ್ರದ ಸಮೀಪದಲ್ಲಿಯೇ ಇರಿಸಿದನು. ಆ ಸುವರ್ಣಗಿರಿಯ ಶಿಖರವು ಸಮೀಪದಲ್ಲಿಯೇ ಸುಪ್ರತಿಷ್ಠಿತವಾದುದನ್ನು ನೋಡಿ ಸಂತುಷ್ಟರಾದ ಎಲ್ಲ ದೇವತೆಗಳು ಭಗವಂತನನ್ನು ಪ್ರಾರ್ಥಿಸಿದರು.

**ದೇವತೆಗಳು:-** 'ವಂದನೀಯನಾದ ಭಗವಾನ್ ನಾರಾಯಣನೇ, ನಮ್ಮೆಲ್ಲರ ಹಿತಕ್ಕಾಗಿ ಸುವರ್ಣಗಿರಿಯಾದ ಮೇರು ಪರ್ವತದ ಒಂದು ಶಿಖರವನ್ನು ಇಲ್ಲಿಗೆ ನೀನು ಎತ್ತಿ ತಂದು ಇರಿಸಿರುವೆ. ನಮ್ಮ ಪಕ್ಷವನ್ನು ಹಿಡಿದು ಅನೇಕ ದೈತ್ಯಾಧಮರನ್ನು ದಮನ ಮಾಡಿರುವೆ. ಲೋಕ ಕಲ್ಯಾಣಕ್ಕಾಗಿ ಹಾಗೂ ಸಜ್ಜನರಿಗೆ ಮಾರ್ಗದರ್ಶನಕ್ಕಾಗಿ ಸ್ವಯಂ ನೀನು ಪರಿಪೂರ್ಣನಾಗಿದ್ದರೂ ತಪೋಮೂರ್ತಿಯಾಗಿ ನರನಾರಾಯಣ ಆಶ್ರಮದಲ್ಲಿ ನೆಲೆ

ನಿಂತಿರುವೆ. ಮೂರುಲೋಕಗಳ ಸಂರಕ್ಷಣೆಯಲ್ಲಿ ಸಮರ್ಥನಾದ ನಿನ್ನ ದೃಷ್ಟಿಪಾತದಿಂದ ಸುಧಾರಸದ ಪ್ರವಾಹವನ್ನೇ ಎಲ್ಲರ ಮೇಲೆ ಹರಿಸುತ್ತಿರುವೆ. ಅಂಥ ನಾರಾಯಣರೂಪಿ ಭಗವಂತನಿಗೆ ನಮ್ಮ ನಮಸ್ಕಾರ.'

ಹೀಗೆ ದೇವತೆಗಳು ಭಗವಂತನನ್ನು ಸ್ತೋತ್ರಮಾಡಿದ ಬಳಿಕ ಮಹರ್ಷಿಗಳು, ಸಿದ್ಧರು, ವಿದ್ಯಾಧರರು ಕ್ರಮವಾಗಿ ಆ ನಾರಾಯಣ ಸ್ವಾಮಿಯನ್ನು ಪರಿಪರಿಯಾಗಿ ಕೊಂಡಾಡಿ ಅವನ ಅದ್ಭುತವಾದ ಲೋಕೋತ್ತರ ಗುಣಗಳನ್ನು ಬಣ್ಣಿಸಿ ಸ್ತೋತ್ರಮಾಡಿದರು.

ಇವರೆಲ್ಲರ ಸ್ತುತಿ ಸ್ತೋತ್ರವನ್ನು ಕೇಳಿ ಶ್ರೀಮಾನ್ ಭಗವಾನ್ ನಾರಾಯಣನು ಸುಪ್ರಸನ್ನನಾಗಿ ಅವರಿಗೆ ಹೇಳಿದನು. 'ನಿಮಗೆ ಅಭೀಷ್ಟವಾದ ವರಗಳನ್ನು ಕೇಳಿಕೊಳ್ಳಿರಿ.' ಆಗ ಎಲ್ಲ ದೇವತೆಗಳೂ ಕೈ ಜೋಡಿಸಿ ಆ ನಾರಾಯಣದೇವರನ್ನು ಬೇಡಿಕೊಂಡರು.

''ದೇವಶ್ರೇಷ್ಠರಿಗೆಲ್ಲ ಅಧಿದೇವತೆಯಾದ ಪ್ರಭು ನಾರಾಯಣನೇ! ನೀನು ನಿಜವಾಗಿಯೂ ನಮ್ಮ ಮೇಲೆ ಸುಪ್ರಸನ್ನನಾಗಿದ್ದರೆ ನಾವು ನಿನ್ನಲ್ಲಿ ಒಂದು ವರವನ್ನು ಕೇಳಿಕೊಳ್ಳುತ್ತೇವೆ. ''ನೀನು ಈ ಬದರೀಕ್ಷೇತ್ರವನ್ನು ಎಂದೂ ಬಿಡದೇ ನೀನು ನಿರಂತರವಾಗಿ ಇಲ್ಲಿಯೇ ನೆಲಿಸಬೇಕು. ಈ ನರನಾರಾಯಣ ಪರ್ವತದರ್ಶನ ಮಾಡಿಕೊಂಡು 'ಈ ಬದರೀಕ್ಷೇತ್ರದಲ್ಲಿ ನೆಲಿಸಿದ ನರನಾರಾಯಣರ ದಿವ್ಯವಿಗ್ರಹಗಳನ್ನು ಕಣ್ಣಿನಿಂದ ನೋಡಿ ಸೇವೆ ಮಾಡಿದ ಪುಣ್ಯವಂತರಿಗೆ ವೈಕುಂಠಲೋಕದಲ್ಲಿ ಸ್ಥಾನವನ್ನು ನೀಡು.'' ದೇವತೆಗಳ ಈ ಪ್ರಾರ್ಥನೆಯನ್ನು ಮನ್ನಿಸಿ ಭಗವಾನ್ ನಾರಾಯಣನು 'ತಥಾಸ್ತು' ಎಂದು ನುಡಿದು ಅಂತರ್ಧಾನ ಹೊಂದಿದನು.

ಇದರ ಅನಂತರ ಲೋಕಪಾಲ ತೀರ್ಥವು ಇರುತ್ತದೆ. ಇಲ್ಲಿ ಶ್ರೀಹರಿಯು ಎಲ್ಲ ಲೋಕಪಾಲಕರನ್ನು ಸ್ಥಾಪನೆ ಮಾಡಿದ್ದಾನೆ. ಹಿಂದೆ ಒಂದಾನೊಂದು ಕಾಲದಲ್ಲಿ ಶ್ರೀಹರಿಯು ಮೇರು ಪರ್ವತಕ್ಕೆ ಹೋಗಿದ್ದನು. ಅಲ್ಲಿ ಎಲ್ಲ ದೇವತೆಗಳೂ ಮುಖ್ಯ ಋಷಿಗಳೂ ವಾಸವಾಗಿದ್ದರು. ಅವರೆಲ್ಲರೂ ಆ ಮಧುಸೂದನನಿಗೆ ನಮಸ್ಕಾರ ಮಾಡಿ ಸ್ವಾಗತ ಸತ್ಕಾರ ನೀಡಿದರು. 'ಪ್ರಸನ್ನನಾಗು' ಎಂದು ಬೇಡಿದರು. ಅಲ್ಲಿ ತುಸು ಹೊತ್ತು ತಂಗಿದ ಬಳಿಕ ಭಗವಂತನು ದೇವತೆಗಳ ಹಾಗೂ ಋಷಿಗಳ ದಟ್ಟಣೆಯಿಂದ ತುಂಬಿದ ಆ ವಿರಳ ಭೂ ಭಾಗವನ್ನು ಕಂಡು ನಕ್ಕು ನುಡಿದನು.

''ಲೋಕಪಾಲರೇ! ನೀವು ಎಲ್ಲರೂ ಈ ಮೇರು ಶಿಖರದ ಒಂದೇ ಭಾಗದಲ್ಲಿ ಕೂಡಿ ಇದ್ದರೆ, ಯಾರಿಗೂ ಸುಖವಾಗುವದಿಲ್ಲ. ನಿಮಗಾಗಿ ಬೇರೊಂದು ಸ್ಥಾನದ ಏರ್ಪಾಡನ್ನು ನಾನು ಮಾಡಿದ್ದೇನೆ. ನೀವೆಲ್ಲರೂ ಅಲ್ಲಿಗೇ ನಡೆಯಿರಿ.' ಹೀಗೆ ಹೇಳಿ ಶ್ರೀಹರಿಯು ಲೋಕಪಾಲಕರಾದ ದೇವತೆಗಳನ್ನೆಲ್ಲ ಕರೆದುಕೊಂಡು ಬಂದು ಬದರೀಕ್ಷೇತ್ರದ ಸುಂದರವಾದ ಈ ಗಿರಿಶಿಖರದ ಮೇಲೆ ಸ್ಥಾಪಿಸಿದನು. ಅಲ್ಲಿ ನೆಲಿಸಿದ ಲೋಕಪಾಲಕರಿಗೆ ನೀರಿನ ಸೌಕರ್ಯವನ್ನು ಮಾಡಲಿಕ್ಕಾಗಿ ಶೈಲ ದಂಡಕದಿಂದ ಒಂದು ಬೆಟ್ಟವನ್ನು ಒಡೆದು ಒಂದು ದೊಡ್ಡ ಸರೋರವನ್ನು ನಿರ್ಮಾಣ ಮಾಡಿದನು. ಅದಕ್ಕೆ ದಂಡ ಪುಷ್ಕರಣೀ ಎಂದು ಕರೆಯುತ್ತಾರೆ.

ಪ್ರತಿಯೊಂದು ದ್ವಾದಶೀ ಹಾಗೂ ಹುಣ್ಣಿಮೆಯ ದಿನ ಈ ದಂಡ ತೀರ್ಥದಲ್ಲಿ ಸ್ನಾನ ಮಾಡುವದಕ್ಕಾಗಿ ಶ್ರೀವಾಸುದೇವನು ಬರುತ್ತಾನೆ. ಅವನ ಅನಂತರ ಉಳಿದ ಎಲ್ಲ

ದೇವತೆಗಳೂ ತಪಸ್ವಿಗಳೂ ಈ ದಂಡ ಪುಷ್ಕರಣಿಯಲ್ಲಿ ಸ್ನಾನ ಮಾಡಿ ಭಗವಂತನ ದರ್ಶನ ಪಡೆದು ಧನ್ಯರಾಗುತ್ತಾರೆ.

ಪ್ರಪಂಚದಲ್ಲಿ ಇರುವ ಎಲ್ಲ ತೀರ್ಥಗಳಲ್ಲಿ ಅವಗಾಹನ ಮಾಡುವದರಿಂದ ಬರುವ ಪುಣ್ಯವು ಈ ಒಂದು ತೀರ್ಥ ಸ್ನಾನದಿಂದಲೇ ಲಭ್ಯವಾಗುವುದು. ಜ್ಯೇಷ್ಠಮಾಸದ ಶುಕ್ಲ ಪಕ್ಷದ ದ್ವಾದಶೀ ದಿನದಂದು ಈ ದಂಡತೀರ್ಥದಲ್ಲಿ ವಿಧಿಪೂರ್ವಕವಾಗಿ ಸ್ನಾನ ಮಾಡಿದ ಮನುಷ್ಯನು ಕೃತಾರ್ಥನಾಗುತ್ತಾನೆ. ಯಾರು 'ಸದಾ ಸರ್ವದಾ ಭಗವಂತನ ಸಮೀಪದಲ್ಲಿಯೇ ಇರಬೇಕು. ಅವನನ್ನು ಬಿಟ್ಟು ಎಂದೂ ಎಲ್ಲಿಗೂ ಹೋಗಬಾರದು' ಎಂದು ಬಯಸುವರೋ ಅಂಥವರು ಪ್ರಯತ್ನ ಪೂರ್ವಕವಾಗಿ ಬದರೀತೀರ್ಥದ ಸ್ನಾನವನ್ನು ಬದರೀನಾಥನ ದರ್ಶನವನ್ನು ಅವಶ್ಯವಾಗಿ ಪಡೆಯಬೇಕು. 'ಮಾನಸೋದ್ಭೇದ' ತೀರ್ಥದ ಸಮೀಪದಲ್ಲಿ ಗಂಗಾ ಸಂಗಮ ತೀರ್ಥವು ಇರುತ್ತದೆ. ಪ್ರಯಾಗಕ್ಕಿಂತಲೂ ಮಹತ್ವ ಪೂರ್ಣವಾಗಿದೆ ಈ ಗಂಗಾ ಸಂಗಮ ತೀರ್ಥ, ಮೂವತ್ತು ಸಾವಿರ ವರ್ಷ ಗಾಳಿ ಕುಡಿದು ತಪಸ್ಸು ಮಾಡುವದರಿಂದ ಬರುವ ಫಲವು ಈ ಗಂಗಾಸಂಗಮ ತೀರ್ಥದ ಸ್ನಾನಮಾತ್ರದಿಂದ ಲಭ್ಯವಾಗುತ್ತದೆ.

ಈ ಗಂಗಾ ಸಂಗಮ ತೀರ್ಥದ ದಕ್ಷಿಣ ದಿಕ್ಕಿನಲ್ಲಿ ಧರ್ಮಕ್ಷೇತ್ರವು ಇರುತ್ತದೆ. ಧರ್ಮ ಮೂರ್ತಿ ದಂಪತಿಗಳಿಂದ ನರನಾರಾಯಣ ರೂಪವಾದ ಅವತಾರವನ್ನು ಶ್ರೀಹರಿಯು ತಾಳಿದ ಪುಣ್ಯಕ್ಷೇತ್ರವು ಈ ಧರ್ಮಕ್ಷೇತ್ರವೇ. ಮರ್ತ್ಯಲೋಕದಲ್ಲಿ ಪಾವನ ಕ್ಷೇತ್ರಗಳಲ್ಲಿ ಅತ್ಯಂತ ಶ್ರೇಷ್ಠವಾದ ಕ್ಷೇತ್ರವೆಂದರೆ ಈ ಧರ್ಮಕ್ಷೇತ್ರವೇ. ಇಲ್ಲಿ ಸನಾತನ ಧರ್ಮವು ಕಲಿಯುಗ ಬಂದರೂ ತನ್ನ ನಾಲ್ಕು ಚರಣಗಳಿಂದ ಸುಸ್ಥಿರವಾಗಿ ನೆಲೆಸಿರುವದು. ಇಲ್ಲಿ ಮಾಡಿದ ಧರ್ಮ, ಯಜ್ಞ, ದಾನ, ತಪ ಮುಂತಾದ ಸತ್ಕರ್ಮಗಳ ಫಲವು ಅಕ್ಷಯವಾಗಿ ಅನಂತಕಾಲದವರೆಗೆ ಉಳಿಯುತ್ತದೆ. ಈ ಧರ್ಮಕ್ಷೇತ್ರದಿಂದ ಮುಂದೆ ದಕ್ಷಿಣ ದಿಕ್ಕಿನಲ್ಲಿ 'ಊರ್ವಶೀ ಸಂಗಮ' ಎಂದು ಒಂದು ತೀರ್ಥವಿರುತ್ತದೆ. ಅದರ ಅನಂತರ 'ಕೂರ್ಮೋದ್ಧಾರ' ತೀರ್ಥವಿರುತ್ತದೆ. ಈ ಎರಡು ತೀರ್ಥಗಳಲ್ಲಿ ಸ್ನಾನ ಮಾಡುವದರಿಂದ ಮಾನವರ ಪಾಪಗಳು ನಷ್ಟವಾಗುವುದಲ್ಲದೇ ಅಂತಃಕರಣ ಶುದ್ಧಿಯಾಗಿ, ವಿಷ್ಣು ಭಕ್ತಿಯ ವಿಕಾಸವಾಗುವುದು. ಇದರ ನಂತರ 'ಬ್ರಹ್ಮವೃತ್ತ' ತೀರ್ಥ ಇರುತ್ತದೆ.

ಬ್ರಹ್ಮಲೋಕಪ್ರಾಪ್ತಿಗೆ ಕಾರಣವಾಗಿದೆ ಈ ತೀರ್ಥ. ಇದರ ನಂತರ ಇನ್ನೂ ಅನೇಕ ತೀರ್ಥಗಳು ಇರುತ್ತವೆ ಈ ಪುಣ್ಯಾರಣ್ಯದಲ್ಲಿ. ಆದರೆ ಅವು ಮಾನವರಿಗೆ ದುರ್ಗಮ ವಾಗಿರುತ್ತವೆ. ಭೂಲೋಕದಲ್ಲಿ ಪರಮಪಾವನತಮವಾದ ಈ ನರನಾರಾಯಣರ ಪುಣ್ಯಕ್ಷೇತ್ರದ ವರ್ಣನೆಯನ್ನು ನಿಮಗೆ ನಾನು ಸಂಕ್ಷಿಪ್ತವಾಗಿ ಮಾಡಿದ್ದೇನೆ. ಇದನ್ನು ಒಂದು ತಿಂಗಳವರೆಗೆ ಏಕಾಗ್ರಚಿತ್ತದಿಂದ ಪಠಣ, ಪಾಠಣ, ಪಾರಾಯಣ, ಶ್ರವಣ ಮಾಡಿದವರ ಆಧಿ, ವ್ಯಾಧಿ, ಭಯ, ಕಲಹ, ದಾರಿದ್ರ್ಯ, ದುಃಖ ದೈನ್ಯ, ದುರವಸ್ಥೆಗಳು ದೂರವಾಗಿ ಅಭೀಷ್ಟಗಳೆಲ್ಲವೂ ಸಿದ್ಧಿಸುವವು. ಭಗವಂತನಲ್ಲಿ ಭಕ್ತಿಯು ಉತ್ಪನ್ನವಾಗಿ ಮುಂದೆ ಪರಮ ಪದರೂಪವಾದ ಸದ್ಗತಿಯು ದೊರಕುವುದು.

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥**

ಶ್ರೀ ನಾರಾಯಣ ದೇವರನ್ನು ನಮಸ್ಕರಿಸಿ, ಜೀವೋತ್ತಮರಾದ ವಾಯುದೇವರನ್ನು, ಶೇಷದೇವರನ್ನು ವಂದಿಸಿ ಶ್ರೀ ಲಕ್ಷ್ಮೀದೇವಿಯನ್ನು, ಸರಸ್ವತಿಯನ್ನು ನಮಿಸಿ ಇತಿಹಾಸ ಪುರಾಣಗಳನ್ನು ಹೇಳಬೇಕು.

**ಋಷಿಗಳು:-** ಪೌರಾಣಿಕರೆ, ನಾವು ನಿಮ್ಮ ಮುಖದಿಂದ ಕಾರ್ತೀಕಮಾಸದ ಮಾಹಾತ್ಮ್ಯವನ್ನು ಕೇಳಲು ಅಪೇಕ್ಷಿಸುತ್ತೇವೆ.

**ಸೂತ:-** ಋಷಿಗಳೇ. ನೀವು ಈಗ ನನಗೆ ಕೇಳಿದ ಪ್ರಶ್ನೆಯನ್ನೇ ಹಿಂದೆ ಪೂಜ್ಯ ನಾರದ ಮಹರ್ಷಿಗಳು ತಮ್ಮ ತಂದೆಯಾದ ಬ್ರಹ್ಮದೇವರಿಗೆ ಕೇಳಿದ್ದರು. ಆ ತಂದೆ ಮಕ್ಕಳ ಸಂವಾದವನ್ನೇ ನಾನು ನಿಮಗೆ ಹೇಳುತ್ತೇನೆ ಕೇಳಿರಿ.

**ನಾರದ:-** ಪಿತಾಮಹ, ಮಾಸಗಳಲ್ಲಿ ಉಳಿದೆಲ್ಲ ಮಾಸಗಳಿಗಿಂತ ಶ್ರೇಷ್ಠವಾದ ತಿಂಗಳು ಯಾವದು? ದೇವತೆಗಳಲ್ಲಿ ಸರ್ವಶ್ರೇಷ್ಠವಾದ ದೇವತೆ ಯಾರು? ತೀರ್ಥಗಳಲ್ಲಿ ಎಲ್ಲ ತೀರ್ಥಗಳಿಗಿಂತಲೂ ಶ್ರೇಷ್ಠವಾದ ವಿಶಿಷ್ಟ ತೀರ್ಥವು ಯಾವುದು?

**ಬ್ರಹ್ಮ:-** ನಾರದ, ನಿನಗೆ ಸೂತ್ರ ರೂಪವಾಗಿ ಒಂದು ರಹಸ್ಯವಾದ ತತ್ವವನ್ನು ಹೇಳುತ್ತೇನೆ. ಮೂವತ್ಮೂರು ಕೋಟಿ ದೇವತೆಗಳಲ್ಲಿ ಸರ್ವಶ್ರೇಷ್ಠನಾದ ಉತ್ತಮೋತ್ತನಾದ ದೇವರು ಎಂದರೆ ಭಗವಾನ್ ಶ್ರೀನಾರಾಯಣ. ತೀರ್ಥಕ್ಷೇತ್ರಗಳಲ್ಲಿ ಅತೀ ಉತ್ಕೃಷ್ಟ ಶ್ರೇಷ್ಠವಾದ ತೀರ್ಥಕ್ಷೇತ್ರ ಎಂದರೆ ಅದೇ ಮಹಾವಿಷ್ಣುವು ನರನಾರಾಯಣ ರೂಪದಿಂದ ನೆಲೆನಿಂತ ಈ ಬದರೀಕಾಶ್ರಮ ಕ್ಷೇತ್ರವು. ಇದಕ್ಕೆ ಸಮಾನವಾದ ತೀರ್ಥವಾಗಲೀ, ಕ್ಷೇತ್ರವಾಗಲೀ, ಮೂರು ಲೋಕದಲ್ಲಿಯೇ ಇರುವದಿಲ್ಲ. ಇದರಂತೆ ವರ್ಷದ ಹನ್ನೆರಡು ತಿಂಗಳಲ್ಲಿ ಕಾರ್ತೀಕ ಮಾಸವು ಶ್ರೇಷ್ಠವಾದ ಮಾಸ.''

ಇಷ್ಟು ಹೇಳಿ ಬ್ರಹ್ಮದೇವರು ಕಣ್ಣು ಮುಚ್ಚಿದರು. ಧ್ಯಾನಾರೂಢರಾದರು. ಕುಳಿತಲ್ಲಿಯೇ ಕೈ ಮುಗಿದು ರಾಧಾಕೃಷ್ಣರ ಸ್ಮರಣೆಯನ್ನು ಮಾಡಿದರು. ಮನಸ್ಸಿನಲ್ಲಿಯೇ ಭಕ್ತಿಯಿಂದ ವಂದಿಸಿದರು ತಮ್ಮ ಉಪಾಸ್ಯ ದೇವತೆಯಾದ ಶ್ರೀಹರಿಯನ್ನು. ಅನಂತರ ನಾರದನನ್ನು ಕುರಿತು ಹೇಳಲು ಉಪಕ್ರಮಿಸಿದರು- ''ವತ್ಸ! ನೀನು ಈಗ ಬಹಳ ಒಳ್ಳೇ ಪ್ರಶ್ನೆ ಮಾಡಿದೆ. ಎಲ್ಲ ಜನರನ್ನೂ ಉದ್ಧಾರ ಮಾಡಲು ಕಾರಣವಾಗಿದೆ ಈ ನಿನ್ನ ಪ್ರಶ್ನೆ. ಇದಕ್ಕೆ ಉತ್ತರ ರೂಪವಾಗಿ ಕಾರ್ತೀಕ ಮಾಸದ ಮಹಾತ್ಮೆಯನ್ನು ನಾನು ಹೇಳುತ್ತೇನೆ. ಭಕ್ತಿಯಿಂದ ಆಲಿಸು. ಮತ್ತು ಲೋಕದಲ್ಲಿ ಇದನ್ನು ಪ್ರಚಾರಗೊಳಿಸು ಪ್ರಚುರ ಪ್ರಮಾಣದಲ್ಲಿ.

ಕಾರ್ತಿಕ ಮಾಸವು ಭಗವಾನ್ ಶ್ರೀ ಮಹಾವಿಷ್ಣುವಿಗೆ ಅತ್ಯಂತ ಪ್ರಿಯವಾದ ಮಾಸ. ಈ ಮಾಸದಲ್ಲಿ ಶ್ರೀಹರಿಯ ಪ್ರೀತಿಯ ಉದ್ದೇಶಕ್ಕಾಗಿ ಮಾಡಿದ ಪುಣ್ಯಕ್ಕೆ ಹ್ರಾಸವೇ ಇರುವದಿಲ್ಲ. ಈ ಕಾರ್ತಿಕಮಾಸಲ್ಲಿ ಮಾಡಿದ ಸ್ನಾನ, ದಾನ, ಭೋಜನ, ವ್ರತ, ಎಳ್ಳು, ಹಸು, ಬಂಗಾರ, ಬೆಳ್ಳಿ, ಭೂಮಿ, ವಸ್ತ್ರ ಮುಂತಾದ ದಾನಗಳನ್ನು ಸಾಕ್ಷಾತ್ ದೇವತೆಗಳೇ ಸ್ವೀಕರಿಸುತ್ತಾರೆ. ಹಾಗೂ ನೀಡಿದ ಮನುಷ್ಯನಿಗೆ ಅಕ್ಷಯ ಫಲವನ್ನು ಕೊಡುತ್ತಾರೆ.

ಇದರಂತೆ ಈ ಮಾಸದಲ್ಲಿ ಮಾಡಿದ ಅಲ್ಪ ಸ್ವಲ್ಪ ತಪಸ್ಸಿಗೆ ಶ್ರೀಹರಿಯು ಪ್ರೀತನಾಗಿ ಅದಕ್ಕೆ ಅನಂತ ಫಲವನ್ನು ಪ್ರದಾನ ಮಾಡುತ್ತಾನೆ. ಕಾರ್ತೀಕಮಾಸದಲ್ಲಿ ಅನ್ನದಾನಕ್ಕೆ ವಿಶೇಷ ಮಹತ್ವವು ಇರುತ್ತದೆ. ಈ ಮಾಸದಲ್ಲಿ ಪರಾನ್ನವನ್ನೂ, ಸಂಪೂರ್ಣವಾಗಿ ವರ್ಜ್ಯ ಮಾಡಿದವರು ಅತಿಕೃಚ್ಛ್ರ ಎಂಬ ವ್ರತವನ್ನು ಮಾಡಿದ ಪುಣ್ಯ ವಿಶೇಷವನ್ನು ಪಡೆಯುತ್ತಾರೆ.

**"ನ ಕಾರ್ತಿಕ ಸಮೋ ಮಾಸೋ ನ ಕೃತೇನ ಸಮಂ ಯುಗಂ ।
ನ ವೇದ ಸದೃಶಂ ಶಾಸ್ತ್ರಂ ನ ತೀರ್ಥಂ ಗಂಗಯಾ ಸಮಂ ॥"**

ಕಾರ್ತಿಮಾಸಕ್ಕೆ ಸಮಾನವಾದ ಮಾಸವಿಲ್ಲ. ಕೃತಯುಗಕ್ಕೆ ಸಮಾನವಾದ ಯುಗವಿಲ್ಲ. ವೇದಗಳಿಗೆ ಸಮಾನವಾದ ಶಾಸ್ತ್ರವಿಲ್ಲ. ಗಂಗಾನದಿಗೆ ಸಮಾನವಾದ ತೀರ್ಥವಿಲ್ಲ. ಎಂದು ಶಾಸ್ತ್ರಗಳಲ್ಲಿ ಹೇಳಲಾಗಿದೆ. ಇದರಂತೆ ಅನ್ನದಾನಕ್ಕೆ ಸಮಾನವಾದ ದಾನ ಇರುವದಿಲ್ಲ. ಈ ಕಾರ್ತಿಕಮಾಸದಲ್ಲಿ ಅನ್ನದಾನ ಹಾಗೂ ದ್ರವ್ಯದಾನಗಳಿಗೆ ನಿರತಿಶಯವಾದ ಪುಣ್ಯವು ಪ್ರಾಪ್ತವಾಗುತ್ತದೆ. ಆದರೆ ದಾನ ನೀಡುವ ಧನವು ನ್ಯಾಯದಿಂದ ಉಪಾರ್ಜಿತ ಎಂದರೆ ಸಂಪಾದಿಸಲ್ಪಟ್ಟಿರಬೇಕು.

ಇನ್ನೊಬ್ಬರನ್ನು ಮೋಸ ಮಾಡಿ ಅಥವಾ ಕಳವು ಮಾಡಿ ಕೊಲೆ ಸುಲಿಗೆಗಳಿಂದ ಸಂಪಾದಿಸಿದ ದ್ರವ್ಯವನ್ನು ದಾನ ಮಾಡಿದರೆ ವಿಶೇಷ ಪುಣ್ಯ ಪ್ರಾಪ್ತಿ ಇರುವದಿಲ್ಲ. ನ್ಯಾಯ ಮಾರ್ಗದಿಂದ ಹಣವನ್ನು ಸಂಪಾದಿಸಿ ಅದನ್ನು ಸತ್ಪಾತ್ರದಲ್ಲಿ ಈ ಕಾರ್ತೀಕಮಾಸದಲ್ಲಿ ದಾನ ನೀಡಿದರೆ ಅಕ್ಷಯವಾದ ಪುಣ್ಯ ಫಲವು ಪ್ರಾಪ್ತವಾಗುತ್ತದೆ. ದಾನ ಮಾಡಲು ಶಕ್ತಿ ಇಲ್ಲದಿದ್ದರೆ (ಶಕ್ತಿ ಇದ್ದವರೂ ಕೂಡ) ಈ ಕಾರ್ತೀಕಮಾಸದಲ್ಲಿ ಸಾಲಿಗ್ರಾಮ ಪೂಜೆಯನ್ನೂ, ಭಗವಾನ್ ಶ್ರೀವಾಸುದೇವನ ನಾಮಸ್ಮರಣೆಯನ್ನೂ ಅವಶ್ಯವಾಗಿ ಮಾಡಲೇಬೇಕು. ಕಾರ್ತೀಕ ಮಾಸದಲ್ಲಿ ವಿಷ್ಣು ಮಂದಿರ ಅಥವಾ ಶಿವಾಲಯಗಳಲ್ಲಿ ಅಥವಾ ಯಾವುದಾದರೂ ಗಿಡದ ಬುಡದಲ್ಲಿ ಶ್ರೀಹರಿಯ ಪೂಜೆಯನ್ನು ಮಾಡಿ ರಾತ್ರಿ ಜಾಗರಣವನ್ನು ಆಚರಿಸಬೇಕು. ಈ ಜಾಗರ ಸೇವೆಯಲ್ಲಿ ಉಳಿದ ಲೌಕಿಕ ವಿಷಯಗಳನ್ನು ಮಾತನಾಡದೇ ಕೇವಲ ಪುರಾಣ, ಪ್ರವಚನ, ಹರಿ ಕೀರ್ತನೆ, ಭಜನೆ, ನಾಮಸ್ಮರಣೆ, ಹಾಡು, ಗೀತೆ, ಗಾಥೆ ಮುಂತಾದವುಗಳ ಮುಖಾಂತರ ಬೆಳಗಾಗುವವರೆಗೂ ಭಗವಂತನ ಸೇವೆಯನ್ನು ಮಾಡುತ್ತಲೇ ಇರಬೇಕು. ಯಾವುದಾದರೂ ರೂಪದಿಂದ ಶ್ರೀಹರಿಯ ಲೀಲಾ ಕಥೆಗಳ ಶ್ರವಣ ಗಾಯನ ಮಾಡುವದೇ, ಜಾಗರಣ ಮಹೋತ್ಸವಗಳ ಮುಖ್ಯ ಕಾರ್ಯಕ್ರಮವಾಗಿರುತ್ತದೆ. ಕಾರ್ತೀಕ ಮಾಸದಲ್ಲಿ ಏಕಾದಶಿ ದಿನಗಳಂದು ತಪ್ಪದೇ ಜಾಗರಣವನ್ನು ಮಾಡಿ ಜಗದೀಶ್ವರನ ವಿಶೇಷ ಆರಾಧನೆಯನ್ನು ಮಾಡಬೇಕು.

ಈ ಕಾರ್ತೀಕ ಮಾಸದಲ್ಲಿ ಉಷಃಕಾಲದಲ್ಲಿಯೇ ಎಲ್ಲರೂ ಸ್ನಾನ ಮಾಡಿ ದೇವರ ಪೂಜೆ ಪಾರಾಯಣಾದಿಗಳನ್ನು ಮಾಡಬೇಕು. ರೋಗ, ವಾರ್ಧಕ್ಯ ಅಥವಾ ನೀರಿನ ಸೌಕರ್ಯ ಇಲ್ಲದಿದ್ದರೆ ಅರುಣೋದಯದಲ್ಲಿಯೇ ಎದ್ದು ಅಖಂಡ ಭಗವಂತನ ನಾಮಸ್ಮರಣೆಯನ್ನು ಮಾಡಿ ಆ ನಾಮ ಜಪದಿಂದಲೇ ನೀರನ್ನು ಪ್ರೋಕ್ಷಣ ಮಾಡಿಕೊಳ್ಳಬೇಕು.

ಯಾವುದಾದರೂ ಒಂದು ವ್ರತವನ್ನು ಕಾರ್ತೀಕ ಮಾಸದಲ್ಲಿ ಮಾಡಿ ಉದ್ಯಾಪನೆಯನ್ನು ಮಾಡಬೇಕು. ಧನದ ಕೊರತೆಯಿಂದ ಉದ್ಯಾಪನೆ ಮಾಡುವ ಶಕ್ತಿ ಇಲ್ಲದಿದ್ದರೆ ವ್ರತದ ಕೊನೆಯಲ್ಲಿ ಯಥಾಶಕ್ತಿ ಸದಾಚಾರಿಗಳಾದ ವಿದ್ವಾಂಸರ

ಭೋಜನವನ್ನಾದರೂ ಮಾಡಿಸಬೇಕು. ಈ ಕಾರ್ತೀಕ ಮಾಸದಲ್ಲಿ ದೀಪದಾನಕ್ಕೆ ವಿಶೇಷ ಪುಣ್ಯ ಉಂಟು. ಸ್ವಯಂ ದೀಪದಾನ ಮಾಡುವ ಶಕ್ತಿ ಇಲ್ಲದವರು ಬೇರೊಬ್ಬರು ದೇವಸ್ಥಾನದಲ್ಲಿ ದೀಪೋತ್ಸವ ಮಾಡಿಸಿದಾಗ ಕೆಲವು ಬತ್ತಿಗಳನ್ನು ತಾನು ಹಚ್ಚಬೇಕು. ಅಥವಾ ಬೇರೊಬ್ಬರು ಹಚ್ಚಿಟ್ಟ ದೀಪಕ್ಕೆ ಎಣ್ಣೆ ಹಾಕಿ ಆ ದೀಪವು ಆರದಂತೆ ರಕ್ಷಿಸಬೇಕು.

ಅಶಕ್ತತೆ, ರೋಗ ಅಥವಾ ಬೇರೆ ಅನಾನುಕೂಲತೆಯಿಂದ ವಿಷ್ಣುವಿನ ಪೂಜೆಯನ್ನು ಮಾಡಲು ಸಾಧ್ಯವಿಲ್ಲದವರು ಭಕ್ತಿಯಿಂದ ಭಗವಂತನ ನಾಮಸ್ಮರಣೆಯನ್ನು ಮಾಡುತ್ತ ದೇವರಿಗೆ ಒಂದು ತುಳಸಿ ದಳವನ್ನಾದರೂ ಸಮರ್ಪಿಸಬೇಕು. ಮತ್ತು ಕಾರ್ತೀಕ ಮಾಸದಲ್ಲಿ ಮನಸ್ಸಿನಲ್ಲಿ ನಿರಂತರವೂ ಶ್ರೀಹರಿಯ ನಾಮಸ್ಮರಣೆಯನ್ನು ಮಾಡುತ್ತಲೇ ಇರಬೇಕು.

ಗುರುಗಳ ಆದೇಶವನ್ನು ಯಾರೂ ಎಂದೂ, ಉಲ್ಲಂಘನ ಮಾಡಬಾರದು. ಪೂರ್ವಕಾಲದಲ್ಲಿ ಕಪಿಲ ಹಾಗೂ ಸುಮತಿ ಎಂಬ ಇಬ್ಬರು ತಪಸ್ವಿಗಳು ಕಾರ್ತೀಕ ಮಾಸದಲ್ಲಿ ಗುರುಗಳ ಆರಾಧನೆಯನ್ನು ಮಾಡಿ ಅಮರತ್ವವನ್ನು ಹೊಂದಿದರು. ಆದ್ದರಿಂದ ಕಾರ್ತೀಕ ಮಾಸದಲ್ಲಿ ತಮ್ಮ ತಮ್ಮ ಗುರುಗಳ ಅಥವಾ ವಿದ್ಯಾಗುರಗಳ ವಿಶೇಷ ಸೇವೆಯನ್ನು ಮಾಡಬೇಕು. ಕಾರ್ತೀಕ ಮಾಸದಲ್ಲಿ ನಾಲ್ಕು ದಾನಗಳಿಗೆ ವಿಶೇಷ ಪುಣ್ಯವನ್ನು ಹೇಳಿದ್ದಾರೆ. ವಿದ್ಯಾದಾನ, ಗೋದಾನ, ಕನ್ಯಾದಾನ, ಅನ್ನದಾನ ಈ ನಾಲ್ಕು ದಾನಗಳನ್ನು ಕಾರ್ತೀಕ ಮಾಸದಲ್ಲಿ ಮಾಡಲು ಉಪಕ್ರಮವನ್ನು ಕೈಕೊಳ್ಳಬೇಕು. ಕಾರ್ತೀಕದಲ್ಲಿ ವಿದ್ವಾಂಸರಾದ ಪತಿಪತ್ನಿ ದಂಪತಿಗಳನ್ನು ಮನೆಗೆ ಕರೆದು ಗಂಧ ಹಾಗೂ ಹೂವಿನ ಮಾಲೆಗಳನ್ನು ಇತ್ತು ಉಪಚರಿಸಿ ಸುಗ್ರಾಸ ಭೋಜನವನ್ನು ಮಾಡಿಸಬೇಕು. ಅವರಿಗೆ ವಸ್ತ್ರ, ಬಂಗಾರ, ರತ್ನ, ಪಾದರಕ್ಷೆ, ಕೊಡೆ, ಹಾಸಿಗೆ ಮುಂತಾದವುಗಳನ್ನು ದಾನ ಕೊಡಬೇಕು. ಇದರಿಂದ ಮಾನವರಿಗೆ ಮುಂದೆ ವಿಷ್ಣು ಮಂದಿರದಲ್ಲಿ ಸುಲಭವಾಗಿ ಪ್ರವೇಶವು ದೊರಕುವದು. ಕಾರ್ತೀಕ ಮಾಸದಲ್ಲಿ ಪ್ರಾತಃಕಾಲದಲ್ಲಿ ನದೀ ಅಥವಾ ಹೊಂಡ ಬಾವಿ ಕೊನೆಗೆ ಮನೆಯಲ್ಲಾದರೂ ಸ್ನಾನಮಾಡಿ, ಸಾಲಿಗ್ರಾಮ ಪೂಜೆಗೈದು ವಿಷ್ಣುವಿನ ಕಥಾರೂಪವಾದ ಪುರಾಣವನ್ನು ಶ್ರವಣ ಮಾಡಿದವರಿಗೆ ನರಕದ ಭಯವೇ ತಪ್ಪಿಹೋಗುವದು. ಈ ಕಾರ್ತೀಕ ಮಾಸದಲ್ಲಿ ಭಗವಾನ್ ಶ್ರೀ ವಿಷ್ಣುವಿನ ದಿವ್ಯ ವಿಗ್ರಹಕ್ಕೆ ಲಕ್ಷ ತುಳಸಿ, ಲಕ್ಷ ಹೂಗಳನ್ನು ಏರಿಸಿದವರಿಗೆ ಲಕ್ಷ ಮುತ್ತುಗಳನ್ನು ಭಗವಂತನಿಗೆ ಸಮರ್ಪಣ ಮಾಡಿದಕ್ಕಿಂತ ಹೆಚ್ಚಿನ ಪುಣ್ಯವು ಪ್ರಾಪ್ತವಾಗುವದು. ದೇವರಿಗೆ ಏರಿಸಿದ ನಿರ್ಮಾಲ್ಯ ತುಳಸಿಯನ್ನು ತಲೆಯ ಮೇಲೆ ಇಟ್ಟುಕೊಂಡು ಬಾಯಲ್ಲಿ ಹಾಕಿಕೊಂಡವರಿಗೆ ರೋಗಗಳಿಂದ ಮುಕ್ತಿ ಹಾಗೂ ಪಾಪಗಳಿಂದ ಮುಕ್ತಿ ಆಗಿ ಕೊನೆಗೆ ಅವರು ಮುಕ್ತರೇ ಆಗಿಬಿಡುತ್ತಾರೆ. ನಾರದನೆ! ಈ ಕಾರ್ತಿಕ ಮಾಸದಲ್ಲಿ ಪ್ರಾತಃ ಸ್ನಾನ, ಅನ್ನದಾನ ಇವು ಎರಡು ಅತ್ಯಂತ ಪುಣ್ಯದಾಯಕ ಆಗಿರುತ್ತವೆ. ಪೂರ್ವಕಾಲದಲ್ಲಿ ಸತ್ಯಕೇತು ಎಂಬ ಹೆಸರಿನ ಒಬ್ಬ ಬ್ರಾಹ್ಮಣನು ಕೇವಲ ಅನ್ನದಾನದಿಂದ ಎಲ್ಲ ಪುಣ್ಯಫಲವನ್ನು ಪಡೆದು ದುರ್ಲಭವಾದ ಮೋಕ್ಷವನ್ನು ಹೊಂದಿದನು. ಈ ತಿಂಗಳಲ್ಲಿ ಅನೇಕ ಬಗೆಯಾದ ದಾನ ಧರ್ಮಗಳನ್ನು ಮಾಡಿದರೂ ಭಗವಂತನ ನಾಮಸ್ಮರಣೆಯನ್ನು ಮಾಡದಿದ್ದರೆ ಎಲ್ಲವೂ ವ್ಯರ್ಥ.

**ಗೋವಿಂದ ಗೋವಿಂದ ಹರೇ ಮುರಾರೇ**
**ಗೋವಿಂದ ಗೋವಿಂದ ಮುಕುಂದ ಕೃಷ್ಣ।**
**ಗೋವಿಂದ ಗೋವಿಂದ ರಥಾಂಗಪಾಣೇ**
**ಗೋವಿಂದ ದಾಮೋದರ ಮಾಧವೇತಿ ॥**



ಹೀಗೆ ಪ್ರತಿ ದಿನವೂ ಶ್ರೀಹರಿಯ ನಾಮಸಂಕೀರ್ತನೆಯನ್ನು ಮಾಡಬೇಕು. ತಮಗೆ ತಿಳಿದ ಬೇರ ಬೇರೆ ಮಂತ್ರ, ಸ್ತೋತ್ರ, ಹಾಡು, ಸಂಕೀರ್ತನಾ ಪದ್ಯ, ಗದ್ಯ, ಸ್ತುತಿ ಸ್ತೋತ್ರಗಳನ್ನು ಹೇಳಿ, ಶ್ರೀಹರಿಯ ದಿವ್ಯ ನಾಮಗಳನ್ನು ಹಾಡಿ ಪಾಡಿ ಕೊಂಡಾಡಬೇಕು. ಕಾರ್ತೀಕ ಮಾಸದಲ್ಲಿ ಭಾಗವತ ಪುರಾಣವನ್ನು ಸ್ವಲ್ಪ ಹೊತ್ತಾದರೂ ಕೊನೆಗೆ ಒಂದು ಶ್ಲೋಕವನ್ನಾದರೂ ಪಠಿಸಬೇಕು ಅಥವಾ ಶ್ರವಣ ಮಾಡಬೇಕು. ಯಾವ ಮನುಷ್ಯನು ಕಾರ್ತೀಕದಲ್ಲಿ ಭಾಗವತ ಶ್ರವಣ, ಭಗವಂತನ ಪೂಜೆ, ವಿದ್ವಾಂಸರ ಭೋಜನ ಈ ಮೂರನ್ನು ಮಾಡಲಿಲ್ಲವೋ ಅವನ ಜನ್ಮವೇ ವ್ಯರ್ಥ. ಈ ಕಾರ್ತೀಕದಲ್ಲಿ ಭಗವದ್ಗೀತೆಯ ಶ್ರವಣ ಪಠಣಗಳಿಗೆ ವಿಶೇಷ ಪುಣ್ಯ ಉಂಟು.

**"ಕಾರ್ತಿಕೇ ಮಾಸಿ ವಿಪ್ರೇಂದ್ರ ಯಸ್ತು ಗೀತಾಂ ಪಠೇನ್ನರಃ**
**ತಸ್ಯ ಪುಣ್ಯಫಲಂ ವಕ್ತುಂ ಮಮ ಶಕ್ತಿಃ ನ ವಿದ್ಯತೇ**
**ಗೀತಾಯಾಸ್ತು ಸಮಂ ಶಾಸ್ತ್ರಂ ನ ಭೂತಂ ನ ಭವಿಷ್ಯತಿ**
**ಸರ್ವಪಾಪ ಹರಾ ನಿತ್ಯಂ ಗೀತೈಕಾ ಮೋಕ್ಷದಾಯಿನೀ ॥**



ದೇವರ್ಷಿಯೇ! ಕಾರ್ತೀಕ ಮಾಸದಲ್ಲಿ ಪ್ರತಿದಿನ ಗೀತಾ ಪಾಠದಿಂದ ಬರುವ ಪುಣ್ಯವು ಇಷ್ಟು ಎಂದು ವರ್ಣಿಸುವ ಶಕ್ತಿಯು ನನ್ನಲ್ಲಿಲ್ಲ. ಗೀತೆಗೆ ಸಮಾನವಾದ ಶಾಸ್ತ್ರವು ಹಿಂದೆ ಆಗಲಿಲ್ಲ. ಮುಂದೆ ಆಗುವದಿಲ್ಲ. ಮಾನವರ ಎಲ್ಲ ಪಾಪಗಳನ್ನು ಪರಿಹರಿಸಿ ಮೋಕ್ಷವನ್ನು ನೀಡುವ ಒಂದೇ ಒಂದು ಮಹಾ ಗ್ರಂಥವೆಂದರೆ ಈ ಜಗತ್ತಿನಲ್ಲಿ ಭಗವದ್ಗೀತೆ ಮಾತ್ರ. ಸಮುದ್ರದವರೆಗೆ ಚಾಚಿರುವ ಸಮಗ್ರ ಪೃಥ್ವಿಯನ್ನು ದಾನ ಮಾಡಿದ ಪುಣ್ಯ ಕಾರ್ತೀಕ ಮಾಸದಲ್ಲಿ ಕೇವಲ ಒಂದು ಸಾಲಿಗ್ರಾಮ ದಾನದಿಂದ ಪ್ರಾಪ್ತವಾಗುವದು. ಆದ್ದರಿಂದ ಮಾನವರು ಕಾರ್ತೀಕ ಮಾಸದಲ್ಲಿ ಪ್ರಾತಃಸ್ನಾನ ಹಾಗೂ ಸಾಲಿಗ್ರಾಮ ದಾನ ಹಾಗೂ ಅನ್ನದಾನಗಳನ್ನು ಅವಶ್ಯವಾಗಿ ಮಾಡಬೇಕು.

## ಕಾರ್ತೀಕ ಸ್ನಾನದ ವಿಧಿ ಮತ್ತು ತೀರ್ಥಗಳ ವರ್ಣನೆ — ಅಧ್ಯಾಯ - ೫೨

**ಬ್ರಹ್ಮದೇವ:-** ಕಾರ್ತೀಕ ವ್ರತವನ್ನು ಆಶ್ವೀನಮಾಸದ ಶುಕ್ಲಪಕ್ಷದ ದಶಮಿ ಯಿಂದಲೇ ಪ್ರಾರಂಭ ಮಾಡಬೇಕು. ಕಾರ್ತೀಕ ಶುಕ್ಲ ದಶಮಿಯ ದಿನ ಮುಕ್ತಾಯ ಮಾಡಬೇಕು. ಅಥವಾ ಅಶ್ವೀನ ಮಾಸದ ಹುಣ್ಣಿಮೆಯಿಂದ ಆರಂಭಿಸಿ ಕಾರ್ತೀಕ ಪೌರ್ಣಿಮೆಗೆ ಈ ವ್ರತವನ್ನು ಮುಗಿಸಬೇಕು.

ಶ್ರದ್ಧಾಳುವಾದ ಪುರುಷನು ಆಶ್ವೀನ ಶುಕ್ಲಪಕ್ಷ ಏಕಾದಶೀ ದಿನದಂದು ಭಗವಾನ್ ಶ್ರೀಮನ್ನಾರಾಯಣನಿಗೆ ನಮಸ್ಕಾರವನ್ನು ಮಾಡಿ, ಕಾರ್ತೀಕ ವ್ರತವನ್ನು ಮಾಡಲು ಅಪ್ಪಣೆಯನ್ನು ನೀಡು ಎಂದು ಪ್ರಾರ್ಥಿಸಬೇಕು. ಅಂದಿನಿಂದಲೇ ಕಾರ್ತೀಕವ್ರತದ ವಿಧಾನವನ್ನು ವಿಧಿಪೂರ್ವಕವಾಗಿ ಮಾಡಲು ಪ್ರಾರಂಭಿಸಬೇಕು. ವರ್ಷದ ಹನ್ನೆರಡು

ತಿಂಗಳುಗಳಲ್ಲಿ ಮಾರ್ಗಶಿರ ಮಾಸವು ಅತ್ಯಂತ ಪುಣ್ಯಪ್ರದ ಆಗಿರುತ್ತದೆ. ಅದಕ್ಕಿಂತಲೂ ನರ್ಮದಾತೀರದಲ್ಲಿ ವೈಶಾಖಮಾಸದಲ್ಲಿ ಇದ್ದು ನರ್ಮದಾಸ್ನಾನ ಮಾಡಿದರೆ ಅತ್ಯಧಿಕ ಪುಣ್ಯವು ಲಭಿಸುವದು. ಅದಕ್ಕಿಂತಲೂ ಲಕ್ಷಪಟ್ಟು ಹೆಚ್ಚಿನ ಪುಣ್ಯವು ಪ್ರಯಾಗ ಕ್ಷೇತ್ರದಲ್ಲಿ ಮಾಘಸ್ನಾನವನ್ನು ಮಾಡುವದರಿಂದ ಬರುವದು. ಇವೆಲ್ಲವುಗಳಿಗಿಂತ ಕಾರ್ತೀಕಮಾಸವು ಅತ್ಯಧಿಕ ಪುಣ್ಯಪ್ರದವಾಗಿರುತ್ತದೆ.

ಉಳಿದ ಮಾಸಗಳು ಒಂದೊಂದು ವಿಶಿಷ್ಟ ತೀರ್ಥದಲ್ಲಿ ಮಾತ್ರ ಅಧಿಕ ಪುಣ್ಯದಾಯಕ ವಾಗಿರುತ್ತದೆ. ಆದರೆ ಕಾರ್ತೀಕ ಮಾಸವು ಎಲ್ಲ ಜಲಗಳಲ್ಲಿಯೂ ಎಲ್ಲ ತೀರ್ಥಗಳಲ್ಲಿಯೂ ಎಲ್ಲ ಊರಿನ ಜಲಾಶಯಗಳಲ್ಲಿಯೂ ಸ್ನಾನಮಾಡುವದರಿಂದ ಅಧಿಕಾಧಿಕ ಪುಣ್ಯವನ್ನು ಪ್ರದಾನ ಮಾಡುವ ಮಾಸವು ಆಗಿರುತ್ತದೆ. ಹಿಂದೆ ಒಮ್ಮೆ ಬ್ರಹ್ಮದೇವರು ಎಲ್ಲ ದಾನ ಸರ್ವವ್ರತ, ಸಕಲ ಯಮನಿಯಮಗಳು ಹಾಗೂ ಸಮಗ್ರ ವ್ರತಗಳು ಇವುಗಳನ್ನೆಲ್ಲ ತಕ್ಕಡಿಯ ಒಂದು ಪರಡಿಯಲ್ಲಿ ಇಟ್ಟು ಇನ್ನೊಂದರಲ್ಲಿ ಕಾರ್ತೀಕ ಸ್ನಾನವನ್ನು ಇರಿಸಿ ತೂಕ ಮಾಡಿದರು. ಕಾರ್ತೀಕದ ಪರಡಿಯು ಭಾರಭೂತವಾಗಿ ಕೆಳಗೆ ಕುಳಿತಿತು. ಇದರಿಂದ ಎಲ್ಲ ಜನರು ಕಾರ್ತೀಕ ಸ್ನಾನವೇ ಸಕಲ ದಾನ, ಧರ್ಮ, ನಿಯಮ, ವ್ರತಗಳಿಗಿಂತ ಅತ್ಯಧಿಕವಾದ ಪುಣ್ಯವನ್ನು ನೀಡುವ ಮಹಾಧರ್ಮಕಾರ್ಯ ಎಂದು ನಿರ್ಣಯಿಸಿದರು. ಈ ಕಾರ್ತೀಕ ಮಾಸದಲ್ಲಿ ಯಾವುದೇ ಪುಣ್ಯಕಾರ್ಯವನ್ನು ಮಾಡಿದರೂ ಹೆಚ್ಚಿನ ಫಲವು ಲಭಿಸುವುದು. ಅದರಲ್ಲಿಯೂ ಪ್ರಾತಃಸ್ನಾನ, ದೀಪದಾನ, ತುಲಸೀಗಿಡವನ್ನು ಹಚ್ಚುವದು, ಬೆಳೆಸುವದು, ನೀರು ಹಾಕುವದು, ನೆಲದ ಮೇಲೆ ಮಲಗುವದು, ಬ್ರಹ್ಮಚರ್ಯವನ್ನು ಪಾಲಿಸುವದು, ವಿಷ್ಣುವಿನ ನಾಮಸಂಕೀರ್ತನೆಯನ್ನು ಗೈಯುವುದು ಮತ್ತು ಪುರಾಣ ಕೇಳುವುದು, ಇಷ್ಟು ಕಾರ್ಯಗಳನ್ನೇ ನಿಷ್ಕಾಮ ಬುದ್ಧಿಯಿಂದ ಭಗವಂತನ ಪ್ರೀತಿಯ ಉದ್ದೇಶದಿಂದ ಮಾಡಿದರೆ ಮನುಷ್ಯನ ಜೀವನ್ಮುಕ್ತನೇ ಆದಂತೆ. ಸೂರ್ಯನು ತುಲಾ ರಾಶಿಯಲ್ಲಿ ಇರುವವರೆಗೆ ಈ ಎಲ್ಲ ನಿಯಮಗಳನ್ನು ಪಾಲಿಸಬೇಕು.

ಆಶ್ವೀನ ಹುಣ್ಣಿಮೆಯಿಂದ ಕಾರ್ತೀಕ ಹುಣ್ಣಿಮೆಯವರೆಗೆ ಪ್ರಾತಃಸ್ನಾನ ಮಾಡಿದರೆ ಮಹಾದೇವರಿಗೆ ಪ್ರೀತಿ. ಆಶ್ವೀನ ಶುಕ್ಲ ಪಕ್ಷ ಪ್ರತಿಪದೆಯಿಂದ ಕಾರ್ತೀಕ ಕೃಷ್ಣ ಚತುರ್ದಶಿ ಯವರೆಗೆ ನಸುಕಿನಲ್ಲಿ ಎದ್ದು ಸ್ನಾನ ಮಾಡಿದರೆ ದುರ್ಗಾದೇವಿಯರಿಗೆ ಪ್ರೀತಿ. ಆಶ್ವೀನ ಕೃಷ್ಣ ಚತುರ್ಥಿಯಿಂದ ಕಾರ್ತೀಕ ಶುದ್ಧ ಚತುರ್ದಶಿಯವರೆಗೆ ನಿಯಮ ಪೂರ್ವಕವಾಗಿ ಪ್ರಾತಃಕಾಲದಲ್ಲಿ ಕಾರ್ತೀಕ ಸ್ನಾನವನ್ನು ಮಾಡಬೇಕು. ಆಶ್ವೀನ ಶುಕ್ಲ ಏಕಾದಶಿಯಿಂದ ಕಾರ್ತೀಕ ಶುಕ್ಲ ಏಕಾದಶಿಯವರೆಗೆ ನಿಯಮದಿಂದ ಪ್ರಾತಃಸ್ನಾನ, ದೇವಪೂಜೆ, ಭಗವದ್ಧ್ಯಾನ, ವ್ರತ, ಉಪವಾಸಾದಿಗಳನ್ನು ಮಾಡುವವರಿಗೆ ಶ್ರೀಹರಿಯ ಸುಪ್ರಸಾದವು ಲಭಿಸುವದು.

ಕಾರ್ತೀಕ ಮಾಸದಲ್ಲಿ ವಿಶೇಷವಾಗಿ ತುಳಸೀ ವೃಕ್ಷದ ಕೆಳಗೆ ಶ್ರೀರಾಧಾ ಹಾಗೂ ಶ್ರೀಕೃಷ್ಣರ ಪೂಜೆಯನ್ನು ನಿಷ್ಕಾಮ ಭಕ್ತಿಯಿಂದ ಮಾಡಿದರೆ ಮನುಷ್ಯನು ಜೀವನ್ಮುಕ್ತನಾದಂತೆ, ಕಾರ್ತೀಕಮಾಸದಲ್ಲಿ ಧಾತ್ರೀ ಅರ್ಥಾತ್ ನೆಲ್ಲಿಗಿಡದ ಅಡಿಯಲ್ಲಿ ದೇವರ ಪೂಜೆಯನ್ನು ಮಾಡಿ ಸೂರ್ಯ ಮಂಡಲದ ಕಡೆ ನೋಡಿ ಸೂರ್ಯಾಂತರ್ಗತ ನಾರಾಯಣನನ್ನು ಧಾತ್ರೀ ಗಿಡದ ಕೆಳಗೆ ಪೂಜೆ ಮಾಡಬೇಕು.

'ಸವಿತೃ ಮಂಡಲ ಮಧ್ಯವರ್ತೀ ನಾರಾಯಣಃ ಪ್ರೀಯತಾಂ'' ಎಂದು ಸಂಕಲ್ಪ ಮಾಡಿ ದಟ್ಟ ದರಿದ್ರನಿಗೆ ದಾನ ಕೊಡಬೇಕು. ಅವನಿಗಿಂತಲೂ ವೇದಶಾಸ್ತ್ರ ಪಂಡಿತನು ದಾನಕ್ಕೆ ಉತ್ತಮ ಪಾತ್ರ ಎನಿಸುವನು. ಸದಾಚಾರ ಸಂಪನ್ನನಾನ ವಿದ್ವಾಂಸನು ಶ್ರೀವಿಷ್ಣುವಿನ ಚಲಪ್ರತಿಮೆಯೆಂದು ಭಾವಿಸಬೇಕು. ಧಾತ್ರೀ ಗಿಡ ಅಥವಾ ತುಳಸೀಬನಗಳಲ್ಲಿ ಸದಾಚಾರಿಗಳಾದ ದೀನ ದರಿದ್ರರಿಗೂ ವೇದ ಶಾಸ್ತ್ರಜ್ಞರಿಗೂ ಭೋಜನ ಮಾಡಿಸಿ ಯಥಾಶಕ್ತಿ ದಾನ ದಕ್ಷಿಣೆಗಳನ್ನು ಕೊಡಬೇಕು. ವಿಷ್ಣುವಿನ ಮೂರ್ತಿಯು ಇಲ್ಲದಿದ್ದರೆ, ಅಥವಾ ಮೂರ್ತಿಪೂಜೆಯ ಅಧಿಕಾರವು ಇಲ್ಲದಿದ್ದರೆ, ಅರಳೀ ಮರ ಮತ್ತು ಆಲದಮರಗಳನ್ನು ಪೂಜಿಸಬೇಕು.

ಅರಳೀ ಮರದಲ್ಲಿ ಭಗವಾನ್ ಶ್ರೀವಿಷ್ಣುವೂ ಆಲದಮರದಲ್ಲಿ ಭಗವಾನ್ ಶಂಕರನೂ ಸದಾಸನ್ನಿಹಿತರಾಗಿರುತ್ತಾರೆ. ಸಾಲಿಗ್ರಾಮ ಶಿಲೆಯ ಚಕ್ರದಲ್ಲಿ ಮಹಾವಿಷ್ಣುವು ಸಂತತವೂ ವಾಸಮಾಡುತ್ತಾನೆ. ಆದುದರಿಂದ ಸಾಲಿಗ್ರಾಮ ಶಿಲೆಯನ್ನು ಕಾರ್ತೀಕಮಾಸದಲ್ಲಿ ತಪ್ಪದೇ ಪೂಜಿಸಬೇಕು. ಮುತ್ತುಗದ ಮರವು ಬ್ರಹ್ಮದೇವರ ಅಂಶದಿಂದ ಉತ್ಪನ್ನವಾಗಿರುತ್ತದೆ. ಕಾರ್ತೀಕಮಾಸದಲ್ಲಿ, ಪಲಾಶ, ಕಿಂಶುಕ, ಮುತ್ತುಗ ಎಂದು ಕರೆಯಲ್ಪಡುವ ಈ ಮರದ ಎಲೆಯಲ್ಲಿ ಊಟವನ್ನು ಮಾಡಬೇಕು. ಕಾರ್ತೀಕ ಮಾಸದಲ್ಲಿ ಪ್ರಾತಃಸ್ನಾನ, ಜಾಗರಣ, ದೀಪದಾನ, ತುಳಸೀಪೂಜೆ ಮತ್ತು ಹರಿಹರ ಬ್ರಹ್ಮದೇವರ ಸ್ವರೂಪದಿಂದ ಉತ್ಪನ್ನವಾದ ಅಶ್ವತ್ಥ, ವಟ ಹಾಗೂ ಪಲಾಶ, ವೃಕ್ಷಗಳ ಪೂಜೆ ಹಾಗೂ ಹರಿಮಂದಿರದ ಅಂಗಣ, ಗರ್ಭಾಗಾರ, ಸಭಾಮಂಟಪ, ಪ್ರದಕ್ಷಿಣ ನಮಸ್ಕಾರ ಹಾಕುವ ಸ್ಥಳಗಳನ್ನು ಉಡುಗಿ, ಗುಡಿಸಿ ಸಾರಿಸಿ, ಸಾರಣೆ, ಕಾರಣೆ, ರಂಗವಲ್ಲಿ, ತಳಿರು ತೋರಣ, ಮುಂತಾದವುಗಳಿಂದ ಶೃಂಗರಿಸುವವರು ಮತ್ತು ಭಕ್ತಿಯಿಂದ ಪೂಜೆ ಧ್ಯಾನ, ಗಾನ, ಭಜನೆ, ಮಾಡುವವರು ವೈಕುಂಠ ಲೋಕಕ್ಕೆ ಹೋಗುವರು.

ಕಾರ್ತೀಕ ಮಾಸದಲ್ಲಿ ಪ್ರಾತಃಸ್ನಾನ ಮಾಡಬಯಸುವವರು ಉಷಃಕಾಲದಲ್ಲಿಯೇ ಏಳಬೇಕು. ಭಗವಾನ್ ಶ್ರೀನಾರಾಯಣನನ್ನು ಲಕ್ಷ್ಮೀದೇವಿಯನ್ನು ಭೂದೇವಿಯನ್ನು ಸ್ತೋತ್ರ ಮಾಡಬೇಕು. ಅನಂತರ ಹಸುವಿಗೆ ಸೇವೆಸಲ್ಲಿಸಿ ವಂದನೆ ಮಾಡಿ ತುಳಸೀ ವೃಂದಾವನಕ್ಕೆ ಪ್ರದಕ್ಷಿಣೆಯನ್ನು ಹಾಕಿ ಅನಂತರ ತುಳಸೀ ಮೃತ್ತಿಕೆ, ವಸ್ತ್ರ, ಕಲಶಗಳನ್ನು ತೆಗೆದುಕೊಂಡು ತಮ್ಮ ಊರ ಹತ್ತಿರದ ಹಳ್ಳ, ನದೀ, ಸರೋವರ, ಬಾವಿಗಳ ಹತ್ತಿರ ಹೋಗಬೇಕು. ಅಲ್ಲಿ ಮೊದಲು ಬಿಂದಿಗೆ ಅಥವಾ ಕೊಡ ಇಲ್ಲವೆ ತಂಬಿಗೆಗಳನ್ನು ಎತ್ತಿಕೊಂಡು ದಂಡೆಯ ಮೇಲೆ ತೀರ್ಥದಿಂದ ತುಸು ದೂರ ಕೈಕಾಲು ಮುಖಮಾರ್ಜನ, ಬಾಯಿ ಮುಕ್ಕಳಿಸುವದು, ಬಟ್ಟೆಗಳನ್ನು ಒಗೆಯುವುದು ಇವುಗಳನ್ನು ಮೇಲೆಯೇ ಮಾಡಿಕೊಂಡು ಜಲಾಶಯಗಳಲ್ಲಿ ಇಳಿಯಬೇಕು. ಅನಂತರ ತೀರ್ಥಾಭಿಮಾನಿ ದೇವತೆಗಳನ್ನು, ಗಂಗಾ ಯಮುನಾ, ಕಾವೇರಿ, ಗೋದಾವರೀ ಕೃಷ್ಣಾ ಮುಂತಾದ ಪುಣ್ಯ ನದಿಗಳನ್ನು ಸ್ಮರಿಸಿ ವಿಷ್ಣು ಮತ್ತು ಶಿವ ಮುಂತಾದ ದೇವತೆಗಳನ್ನು ಮತ್ತೆ ಮತ್ತೆ ನೆನೆದು ನಮಿಸಿ ನಾಭಿಯವರೆಗೆ ನೀರಿನಲ್ಲಿ ನಿಂತುಕೊಳ್ಳಬೇಕು. ಕೈಮುಗಿದು ದೇವರಿಗೆ ಈ ಮಂತ್ರದಿಂದ ಪ್ರಾರ್ಥನೆಯನ್ನು ಮಾಡಬೇಕು.

**ಕಾರ್ತಿಕೇऽಹಂ ಕರಿಷ್ಯಾಮಿ ಪ್ರಾತಃಸ್ನಾನಂ ಜನಾರ್ದನ ।**
**ಪ್ರೀತ್ಯರ್ಥಂ ತವ ದೇವೇಶ ದಾಮೋದರ ಮಯಾ ಸಹ ॥**

ಜನರ ದುಃಖಗಳನ್ನೆಲ್ಲ ದೂರ ಮಾಡುವ ದೇವದೇವೋತ್ತಮನಾದ ದಾಮೋದರನೇ! ಲಕ್ಷ್ಮೀದೇವಿಯಿಂದ ಸಹಿತನಾದ ನಿನ್ನ ಪ್ರೀತಿಯಾಗಲಿ ಎಂಬ ಉದ್ದೇಶದಿಂದ ಈ ಕಾರ್ತಿಕಮಾಸದಲ್ಲಿ ನಾನು ಪ್ರಾತಃಸ್ನಾನವನ್ನು ಮಾಡುತ್ತೇನೆ. ನೀನು ಅಪ್ಪಣೆಕೊಡು. ಎಂದು ಪ್ರಾರ್ಥನೆ ಮಾಡಿ ನೀರಿನಲ್ಲಿ ಮೂರು ಸಲ ಮುಳುಗು ಹಾಕಬೇಕು. ನಂತರ ದೇವರಿಗೆ ಕೆಳಗೆ ಹೇಳಿದ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು.

**ಗೃಹಾಣಾರ್ಘ್ಯಂ ಮಯಾದತ್ತಂ ರಾಧಯಾ ಸಹಿತೋ ಹರೇ**
**ನಮಃ ಕಮಲನಾಭಾಯ ನಮಸ್ತೆ ಜಲಶಾಯಿನೇ**
**ನಮಸ್ತೇऽಸ್ತು ಹೃಷಿಕೇಶ ಗೃಹಾಣಾರ್ಘ್ಯಂ ನಮೋऽಸ್ತುತೇ ॥**

ರಾಧೆಯಿಂದ ಸಹಿತನಾದ ಶ್ರೀಹರಿಯೇ ನಾನು ನಿನಗೆ ಅರ್ಘ್ಯವನ್ನು ನೀಡುತ್ತೇನೆ, ದಯಯಿಟ್ಟು ಸ್ವೀಕರಿಸು. ನೀನು ನೀರಿನಲ್ಲಿ ಮಲಗಿರುವದರಿಂದ ಜಲಶಾಯಿ ಎಂದು ಪ್ರಸಿದ್ಧನಾಗಿರುವೆ. ನಿನ್ನ ಹೊಕ್ಕಳಿನ ಹೊಂದಾವರೆಯಲ್ಲಿ ಬ್ರಹ್ಮನು ಹುಟ್ಟಿದ್ದರಿಂದ ನಿನಗೆ ಕಮಲನಾಭ ಎಂದು ಹೆಸರಿದೆ, ಎಲ್ಲ ಇಂದ್ರಿಯಗಳಿಗೂ ಇಂದ್ರಿಯಾಭಿಮಾನಿ ದೇವತೆಗಳಿಗೂ ನೀನು ಒಡೆಯನಾದುದರಿಂದ ನಿನಗೆ 'ಹೃಷೀಕೇಶ' ಎಂದು ಅನ್ವರ್ಥಕ ಹೆಸರು. ಇಂತಹ ಶ್ರೀಹರಿಯೇ! ನಿನಗೆ ನಮಸ್ಕಾರ. ನಾನು ನೀಡುವ ಅರ್ಘ್ಯವನ್ನು ಸ್ವೀಕರಿಸು. ನಿನಗೆ ಮತ್ತೆ ಮತ್ತೆ ವಂದನೆ.

ಹೀಗೆ ಹೇಳಿ ಭಗವಾನ್ ನಾರಾಯಣನಿಗೂ ಅನಂತರ ಸೂರ್ಯದೇವರಿಗೂ ಬಳಿಕ ಗಂಗಾದಿ ತೀರ್ಥಗಳಿಗೂ ತಾನು ಸ್ನಾನ ಮಾಡುವ ನೀರಿನ ಜಲಾಶಯದಿಂದ ತನ್ನ ಅಂಜಲಿಯಲ್ಲಿ ನೀರನ್ನು ಎತ್ತಿ ಅರ್ಘ್ಯವನ್ನು ನೀಡಬೇಕು. ಮನುಷ್ಯನು ಯಾವ ತೀರ್ಥ ದಲ್ಲಿಯೇ ಸ್ನಾನಮಾಡಲಿ, ಗಂಗಾನದಿಯ ಸ್ಮರಣೆಯನ್ನು ಅವಶ್ಯವಾಗಿ ಮಾಡಲೇಬೇಕು.

ಮೊದಲು ಮೃತ್ತಿಕಾ ಸ್ನಾನವನ್ನು ಮಾಡಿ ಅನಂತರ ಪವಮಾನ ಮಂತ್ರಗಳಿಂದ ತನ್ನ ತಲೆಯ ಮೇಲೆ ಅಭಿಷೇಕವನ್ನು ಮಾಡಿಕೊಳ್ಳಬೇಕು. ನೀರಿನಲ್ಲಿ ಮುಳುಗಿ ಅಘಮರ್ಷಣ ಮಂತ್ರವನ್ನು ಜಪಿಸಿ ಅನಂತರ ಮೇಲೆದ್ದು ಸ್ನಾನಾಂಗ ತರ್ಪಣವನ್ನು ಕೊಟ್ಟು ಪುರುಷಸೂಕ್ತದಿಂದ ತನ್ನ ತಲೆಯಮೇಲೆ ತೀರ್ಥಜಲವನ್ನು ಸಿಂಪಡಿಸಿಕೊಳ್ಳಬೇಕು. ಆ ಬಳಿಕ ಜಲಾಶಯದಿಂದ ಮೇಲೆ ಎದ್ದು ಬಂದು ದಂಡೆಯಲ್ಲಿ ನಿಂತು ಮತ್ತೊಮ್ಮೆ ಆ ತೀರ್ಥದ ನೀರನ್ನು ಪ್ರೋಕ್ಷಣೆಮಾಡಿ ಕೈಯಲ್ಲಿ ತುಳಸೀದಳ ಹಿಡಿದು ಮೂರು ಸಲ ಕೇಶವ, ನಾರಾಯಣ, ಮಾಧವಾದಿ ದೇವರನಾಮವನ್ನು ಪಠಿಸುತ್ತ ಆಚಮನ ಮಾಡಬೇಕು. ಮೇಲೆ ಬಂದು ಒದ್ದೆಯ ವಸ್ತ್ರವನ್ನು ಹಿಂಡಿ ಮೈಯನ್ನು ಒರೆಸಿಕೊಳ್ಳಬೇಕು. ಅನಂತರ ಊರ್ಧ್ವಪುಂಡ್ರ ತಿಲಕ, ತುಳಸೀಮಾಲೆ ಮುಂತಾದವುಗಳನ್ನು ಧರಿಸಿ, ಸಂಧ್ಯೆ, ದೇವರಪೂಜೆ, ಜಪ, ತಪ, ಅನುಷ್ಠಾನ ಮುಂತಾದವುಗಳನ್ನು ಮಾಡಬೇಕು.

ಕಾರ್ತಿಕಮಾಸದಲ್ಲಿ ಸಮೀಪದಲ್ಲಿ ನದೀ ಸರೋವರಗಳು ಇಲ್ಲದಿದ್ದರೆ ಮಾತ್ರ ಮನೆಯಲ್ಲಿ ಸ್ನಾನ ಮಾಡಬೇಕು. ಮನೆಯಲ್ಲಿಯಾದರೂ ಬಿಸಿನೀರು ಸ್ನಾನಕ್ಕಿಂತ ತಣ್ಣೀರುಸ್ನಾನ ಹತ್ತುಪಟ್ಟು ಪುಣ್ಯ ಹೆಚ್ಚುಬರುವದು. ಅದಕ್ಕಿಂತ ಬಾವಿಯಲ್ಲಿ ಸ್ನಾನ ಮಾಡುವದರಿಂದ ನೂರು ಪಟ್ಟು ಪುಣ್ಯ ಹೆಚ್ಚು. ಅದಕ್ಕಿಂತ ಹೊಂಡ, ಹೊಕ್ಕರಣೆ,

ಸರೋವರ, ಕೆರೆ, ಕಾಲುವೆ, ಹಳ್ಳ, ಝರಿಣಿ, ನದೀ, ತೀರ್ಥ, ಎರಡು ನದಿಗಳ ಸಂಗಮ, ಸಮುದ್ರ ಹೀಗೆ ಒಂದಕ್ಕಿಂತ ಒಂದು ಹೆಚ್ಚಿನ ಜಲಾಶಯ, ತೀರ್ಥಗಳಲ್ಲಿ ಸ್ನಾನಮಾಡುವದರಿಂದ ನೂರುಮಡಿ ಅಧಿಕಪುಣ್ಯವು ಪ್ರಾಪ್ತವಾಗುವದು. ಈ ನದಿಗಳಲ್ಲಿ ಕೂಡ ಗಂಗಾ, ಸಿಂಧು, ಯಮುನಾ, ಸರಸ್ವತಿ, ಗೋದಾವರೀ, ನರ್ಮದಾ, ಕಾವೇರಿ, ಕೃಷ್ಣಾ, ಸರಯೂ, ಕ್ಷಿಪ್ರಾ, ಚರ್ಮಣ್ವತಿ, ವೇತ್ರವತೀ, ಬ್ರಹ್ಮಪುತ್ರ, ಗಂಡಕೀ, ಗೋಮತಿ, ಶೋಣಭದ್ರಾ, ಪೂರ್ಣಾ, ಮಾನಸ ಸರೋವರ, ವಾಙ್ಮತೀ, ಶತದ್ರು ಮೊದಲಾದ ನದಿಗಳು ಕಾರ್ತಿಕಸ್ನಾನದಿಂದ ಅತ್ಯಧಿಕ ಪುಣ್ಯಪ್ರದವಾದ ಪಾವನ ಪಯಸ್ವಿನಿಗಳು ಎನಿಸಿದೆ.

ಅಖಂಡ ಭೂಮಂಡಲದಲ್ಲಿ ವಿಂಧ್ಯಾಚಲ ಹಿಮಾಚಲಗಳ ನಟ್ಟನಡುವಿನ ಆರ್ಯಾವರ್ತ ಎಂಬ ಭೂಮಿಯು ಪರಮಪಾವನವಾಗಿರುತ್ತದೆ. ಇದಕ್ಕಿಂತಲೂ ಲಕ್ಷ್ಮೀದೇವಿಯು ನೆಲೆನಿಂತಿರುವ ಕೊಲ್ಹಾಪುರ ಕ್ಷೇತ್ರವು ಶ್ರೇಷ್ಠತರವಾದುದು. ಅದಕ್ಕಿಂತಲೂ ವಿಷ್ಣುಕಾಂಚಿ, ಶಿವಕಾಂಚಿಗಳು ಪವಿತ್ರತಮ ಕ್ಷೇತ್ರವೆನಿಸುತ್ತವೆ. ಇವುಗಳಿಗಿಂತ ಸ್ವಾಮಿಪುಷ್ಕರಣಿಯ ತೀರದಲ್ಲಿ ಇರುವ ಅರ್ಥಾತ್ ವೆಂಕಟಗಿರಿಯು ಪರಮ ಪುಣ್ಯತಮವಾಗಿದೆ. ಈ ವೆಂಕಟಗಿರಿಗಿಂತ ಅತ್ಯಂತ ಪವಿತ್ರಾತಿಪವಿತ್ರತಮವಾದ ಒಂದೇ ಒಂದು ಭೂಲೋಕದ ಪುಣ್ಯಕ್ಷೇತ್ರವೆಂದರೆ, ಶ್ರೀಮನ್ನಾರಾಯಣನ ನಿತ್ಯನಿವಾಸನಿಲಯ ಎನಿಸಿದ ಬದರಿಕಾಶ್ರಮ ಕ್ಷೇತ್ರ, ಈ ಬದರಿಕಾಶ್ರಮ ಕ್ಷೇತ್ರದಂತೆ ಅತ್ಯಂತ ಪವಿತ್ರವಾದ ಅನ್ಯಕ್ಷೇತ್ರಗಳೆಂದರೆ ಅಯೋಧ್ಯಾ, ಗಂಗಾದ್ವಾರ, ಅವಂತಿಪುರೀ, ಕನಖಲ, ಮಥುರಾ, ದ್ವಾರಕಾ ಮೊದಲಾವುಗಳು ಪಾವನತಮ ಕ್ಷೇತ್ರವಾಗಿರುತ್ತವೆ.

ಮಥುರಾ ಪಟ್ಟಣದಲ್ಲಿ ಸ್ವಯಂ ಶ್ರೀಕೃಷ್ಣನೇ ಹಿಂದೆ ವಾಸಮಾಡಿ ಅಲ್ಲಿಯ ಯಮುನಾ ನದಿಯ ತೀರ್ಥದಲ್ಲಿ ಸ್ವಯಂ ಮೇಲಿಂದ ಮೇಲೆ ಸ್ನಾನಮಾಡುತ್ತಿದ್ದ. ಅದರಂತೆ ದ್ವಾರಕಾಕ್ಷೇತ್ರದಲ್ಲಿಯೂ ಪರಮಾತ್ಮನು ತನ್ನ ಎಂಟು ಪಟ್ಟದರಾಣಿಯರೊಂದಿಗೆ ನಲಿಸಿ, ನಕ್ಕು, ನಲಿದು, ಉಲಿದು, ಒಲಿದು, ನಡೆದಾಡಿದ, ಓಡಾಡಿದ ಪಾವನ ನೆಲವಾದುದರಿಂದ ದ್ವಾರಕಾ ಕ್ಷೇತ್ರವು ಪರಮ ಪವಿತ್ರ ಕ್ಷೇತ್ರವೆನಿಸಿದೆ. ಆ ದ್ವಾರಕಾ ಕ್ಷೇತ್ರಕ್ಕಿಂತ ಸಾಕ್ಷಾತ್ ವಿಷ್ಣುವಿನ ಪಾದದಿಂದಲೇ ಹುಟ್ಟಿ ಹರಿದ ಭಾಗೀರಥಿಯು ಪವಿತ್ರಗಳಲ್ಲಿಯೇ ಅತೀ ಪವಿತ್ರನದೀ ಎನಿಸಿದೆ.

ಅದಕ್ಕಿಂತಲೂ ಆ ಗಂಗೆಯು ಯಮುನೆಯೊಡನೆ ಸಂಗಮಿಸಿದ ತೀರ್ಥರಾಜ ಪ್ರಯಾಗ ಕ್ಷೇತ್ರವು ಅತ್ಯಂತ ಪವಿತ್ರ. ಅದಕ್ಕಿಂತಲೂ ಪರಮೇಶ್ವರನ ಸಂತತ ಸನ್ನಿಧಾನದಿಂದ ಅತ್ಯಂತ ಪವಿತ್ರಕ್ಷೇತ್ರ ಎನಿಸಿದ ಕಾಶಿಯು ಎಲ್ಲ ತೀರ್ಥಕ್ಷೇತ್ರಗಳಿಗಿಂತ ಅಧಿಕಾಧಿಕ ಪುಣ್ಯ ಫಲಪ್ರದ. ಆ ಕಾಶಿಯಲ್ಲಿಯೂ-ಪಂಚಗಂಗಾ ಎಂಬ ತೀರ್ಥವು ಕಾರ್ತಿಕ ಮಾಸದಲ್ಲಿ ಸ್ನಾನಮಾಡುವವರ ಕುಲಕೋಟಿಯನ್ನೇ ಉದ್ಧಾರಮಾಡುವದು. ಪಿತೃಗಳು ''ನಮ್ಮ ವಂಶದಲ್ಲಿ ಹುಟ್ಟಿದ ಯಾವನಾದರೂ ಪುಣ್ಯಾತ್ಮನು ಕಾಶಿಗೆ ಬಂದು ಇಲ್ಲಿಯ ಪಂಚಗಂಗಾ ತೀರ್ಥದಲ್ಲಿ ಸ್ನಾನಮಾಡಿ ಶ್ರಾದ್ಧಗೈದು ತಿಲತರ್ಪಣಾದಿಗಳನ್ನು ಹಾಗೂ ಜಲಾಂಜಲಿಯನ್ನು ನೀಡಿ ನಮ್ಮನ್ನು ಉದ್ಧರಿಸುವನೇ'' ಎಂದು ಕೂಗುತ್ತ ಕಾಯುತ್ತ ಕುಳಿತಿರುತ್ತಾರೆ. ಪಂಚಗಂಗಾ ತೀರ್ಥದಲ್ಲಿ ಸ್ನಾನಮಾಡಿ ಬಿಂದು ಮಾಧವನ ದರ್ಶನವನ್ನು ತೆಗೆದುಕೊಳ್ಳುವವರ ಲಕ್ಷ ಲಕ್ಷ ಪಾಪಗಳು ಕೂಡ ಅದೇ ಕ್ಷಣದಲ್ಲಿ ಪ್ರಧ್ವಸ್ತವಾಗಿ ಹೋಗುವವು.

ಅರುಣೋದಯ ಕಾಲದಲ್ಲಿ ನಕ್ಷತ್ರಗಳು ಇರುವಾಗಲೇ ಕಾರ್ತೀಕ ಮಾಸದಲ್ಲಿ ಸ್ನಾನಮಾಡುವದು ಉತ್ತಮ ಕಲ್ಪ. ಕೃತ್ತಿಕಾ ನಕ್ಷತ್ರವು ಅಸ್ತವಾಗುವದಕ್ಕಿಂತ ಮುನ್ನ ಜಲಾಶಯಗಳಲ್ಲಿ ಶ್ರೀಹರಿಯನ್ನು ತೀರ್ಥಾಭಿಮಾನಿ ದೇವತೆಗಳನ್ನು ನೆನೆದು ಸ್ನಾನ ಮಾಡುವವನು ಮೋಕ್ಷಾರ್ಹ ಎನಿಸುವನು. ಸೂರ್ಯೋದಯ ಕಾಲದಲ್ಲಿ ಸ್ನಾನ ಮಾಡುವದು ಮಧ್ಯಮ ಕಲ್ಪ. ಅನಂತರ ಸ್ನಾನಮಾಡುವದು ಅಧಮಕಲ್ಪ. ಸ್ತ್ರೀಯರಾದವರು ಪತಿಯ ಅಪ್ಪಣೆಯನ್ನು ಪಡೆದ ಕಾರ್ತೀಕ ಸ್ನಾನ, ದಾನ ಧರ್ಮಾದಿ ಗಳನ್ನು ಮಾಡಬೇಕು. ಇಲ್ಲದಿದ್ದರೆ ಅವರಿಗೆ ಯಾವ ಪುಣ್ಯ ಫಲವೂ ಬರಲಾರದು.

**ಅಪೃಷ್ಟ್ವಾ ಯತ್ಕೃತಂ ಧರ್ಮ್ಯಂ ಭರ್ತಾರಂ ತತ್ಕ್ಷಯಂ ನಯೇತ್ ।**
**ಸ್ತ್ರೀಣಾಂ ನಾಸ್ತ್ಯಪರೋ ಧರ್ಮೋ ಭರ್ತಾರಂ ಪ್ರೋಜ್ಝ್ಯ ಕಶ್ಚನ ॥**

ಗಂಡನನ್ನು ಕೇಳದೇ ಅವನ ಅಪ್ಪಣೆಯನ್ನು ಪಡೆಯದೇ ಸ್ತ್ರೀಯರು ಮಾಡಿದ ಯಾವುದೇ ಧರ್ಮಕಾರ್ಯವು ಪುಣ್ಯಕಾರಕ ಆಗುವದಿಲ್ಲ. ಇಷ್ಟೇ ಅಲ್ಲ ಸ್ತ್ರೀಯರ ಆಯುಷ್ಯವೂ ಕ್ಷೀಣವಾಗುವುದು. ಸ್ತ್ರೀಯರಿಗೆ ಪತಿಯ ಸೇವೆಯ ಹೊರತು ಅಥವಾ ಅವನ ಅಪ್ಪಣೆಯನ್ನು ಪಾಲಿಸುವದರ ಹೊರತು ಯಾವುದೇ ಧರ್ಮವಾಗಲೀ ಪುಣ್ಯ ಕರ್ಮವಾಗಲೀ ಇರುವದಿಲ್ಲ. ಗಂಡನ ಆಜ್ಞೆಯಿಲ್ಲದೇ ಮಾಡಿದ ಸ್ತ್ರೀಯರ ಎಲ್ಲ ಸತ್ಕಾರ್ಯ ಪುಣ್ಯ ಕಾರ್ಯಗಳು ವ್ಯರ್ಥ. ಮೇಲೆ ಅನರ್ಥಕ್ಕೂ ಕಾರಣ.

ಪತಿಯ ಆಜ್ಞೆಯನ್ನು ಪಾಲಿಸುವ ಸತೀಮಣಿಯು ಈ ಪ್ರಪಂಚದಲ್ಲಿ 'ಧರ್ಮವತಿ' ಎಂದು ಹೇಳಲ್ಪಡುತ್ತಾಳೆ. ಕೇವಲ ವ್ರತ ಉಪವಾಸ ನಿಯಮ ಸ್ನಾನ ತೀರ್ಥಕ್ಷೇತ್ರಯಾತ್ರೆ. ದೇವರ ಸೇವೆಗಳನ್ನು ಮಾಡುವದರಿಂದ ಯಾವ ನಾರಿಯೂ ಧರ್ಮವತಿಯು ಆಗುವದಿಲ್ಲ.

**'ದರಿದ್ರಃ ಪತಿತೋ ಮೂರ್ಖೋ ದೀನೋಽಪಿ ಯದಿ ಚೇತ್ ಪತಿಃ**
**ತಾದೃಶಃ ಶರಣಂ ಸ್ತ್ರೀಣಾಂ ತತ್ತ್ಯಾಗಾತ್ ನಿರಯಂ ವ್ರಜೇತ್ ॥**

ಪತಿಯು ದಟ್ಟ ದರಿದ್ರನೇ ಇರಲೀ, ಪತಿತನೇ ಇರಲಿ, ಮೂರ್ಖನೇ ಇರಲಿ. ದೀನನಾಗಿರಲೀ, ಏನೇ ಆದರೂ ನಾರಿಯರಿಗೆ ಅವನೇ ಆಧಾರ. ಆಶ್ರಯ, ಹೇಗಿದ್ದರೂ ಅವನನ್ನೇ ಸೇವಿಸಿ ತಮ್ಮ ಉದ್ಧಾರ ಮಾರ್ಗವನ್ನು ಮಡದಿಯಾದವಳು ಕಂಡುಕೊಳ್ಳಬೇಕು. ಯಾವುದೇ ಕಾರಣದಿಂದ ಇಂಥ ದೀನ, ದರಿದ್ರ, ಪತಿತ, ಮೂರ್ಖ ಊನ, ಹೀನ ಪತಿಯನ್ನು ತ್ಯಾಗ ಮಾಡಿದರೆ, ಸ್ತ್ರೀಯರು ನರಕದಲ್ಲಿ ಬೀಳುವರು.

ಪುಣ್ಯಕರವಾದ ತೀರ್ಥಗಳಲ್ಲಿ ಸ್ನಾನ ಮಾಡಿದವರಿಗೆಲ್ಲರಿಗೂ ಉದ್ಧಾರವು ಆಗುವದಿಲ್ಲ.

**ಯಸ್ಯ ಹಸ್ತೌ ಚ ಪಾದೌ ಚ ವಾಙ್ಮನಶ್ಚ ಸುಸಂಯತಮ್ ।**
**ವಿದ್ಯಾತಪಶ್ಚ ಕೀರ್ತಿಶ್ಚ ಸ ತೀರ್ಥ ಫಲಭಾಕ್ ನರಃ ॥**

ಯಾವ ಮನುಷ್ಯನ ಕೈ ಕಾಲು ಮಾತು ಮನಸ್ಸು ಜ್ಞಾನ ತಪಸ್ಸು ಕೀರ್ತಿ ಇವೆಲ್ಲವೂ ನಿರ್ದುಷ್ಟವಾಗಿ ಭಗವತ್ ಸೇವಾ ಪರಾಯಣವಾಗಿ ಪರೋಪದ್ರವಗೈಯದೆ, ಪರದ್ರೋಹ ಮಾಡದೆ, ಪರೋಪಕಾರ ಹಾಗೂ ಪರಮಾತ್ಮ ಸೇವೆಯಲ್ಲಿಯೇ ಸವೆದು ಸಾರ್ಥಕ ವಾಗಿರುವವೋ ಅಂಥವರಿಗೆ ಮಾತ್ರ ತೀರ್ಥಸ್ನಾನದ ಪೂರ್ಣ ಫಲವು ಪ್ರಾಪ್ತವಾಗುವದು.

ಹೀಗಲ್ಲದೇ, ಕೇವಲ ಪರಪೀಡೆಯನ್ನುಂಟು ಮಾಡುವ, ಶಾಸ್ತ್ರೋಕ್ತ ಆಚಾರ ವಿಚಾರಗಳನ್ನೆಲ್ಲ ಧಿಕ್ಕರಿಸಿ ಸ್ವೇಚ್ಛಾಚಾರದಿಂದ ನಡೆಯುವ ಪಾಪಿಷ್ಠರಿಗೆ ಎಷ್ಟು ಸಲ ಎಷ್ಟು ತೀರ್ಥಯಾತ್ರೆ ಮಾಡಿದರೂ ಇನಿತೂ ಪುಣ್ಯವು ಬರಲಾರದು.

**ಅಶ್ರದ್ಧಧಾನಃ ಪಾಪಾತ್ಮಾ ನಾಸ್ತಿಕಃ ಛಿನ್ನಮಾನಸಃ ।**
**ಹೇತುವಾದೀ ಚ ಪಂಚೈತೇ ನ ತೀರ್ಥಫಲಭಾಗಿನಃ ॥**

ದೇವರು ಧರ್ಮ ತೀರ್ಥಕ್ಷೇತ್ರಗಳಲ್ಲಿ ವಿಶ್ವಾಸವಿಲ್ಲದ ಮನುಷ್ಯನು, ಸದಾ ಪಾಪಕೃತ್ಯವನ್ನು ಮಾಡುವವನು, ವೇದಶಾಸ್ತ್ರವನ್ನು ನಂಬದ ನಾಸ್ತಿಕನು, ದುರುದ್ದೇಶ, ಹಾಗೂ ದುರ್ವಿಚಾರದಿಂದ ಕಲುಷಿತ ಮನಸ್ಕನು, ಕುಯುಕ್ತಿಗಳಿಂದ ದೇವ, ಧರ್ಮಗಳಲ್ಲಿಯ ಭಕ್ತಿಭಾವನೆಯನ್ನೇ ಖಂಡಿಸಿ ವಾದ ಮಾಡುವವನು ಈ ಐವರೂ ಮಹಾಪಾಪಿಗಳು. ಇವರಿಗೆ ಯಾವ ತೀರ್ಥಕ್ಷೇತ್ರ ಯಾತ್ರೆಯ ಫಲವೂ ದೊರಕಲಾರದು.

ಸ್ನಾನ ಶಾಸ್ತ್ರದ ರಹಸ್ಯವನ್ನು ಅರಿತವರು ನಾಲ್ಕುಬಗೆಯ ಸ್ನಾನಗಳನ್ನು ಹೇಳಿದ್ದಾರೆ. ವಾಯವ್ಯ, ವಾರುಣ, ಬ್ರಾಹ್ಮ ಮತ್ತು ದಿವ್ಯ ಎಂದು ಚತುರ್ವಿಧ ಸ್ನಾನಗಳು ಶಾಸ್ತ್ರಗಳಲ್ಲಿ ವಿಹಿತವಾಗಿರುತ್ತವೆ. ಆಕಳಹಿಂಡು ಬೀದಿಯಲ್ಲಿ ಅಥವಾ ಹೊಲದಲ್ಲಿ ನಡೆದಾಡಿದಾಗ ಎದ್ದ ಅವುಗಳ ಕಾಲಿನ ಧೂಳಿಯಲ್ಲಿ ನಿಂತುಕೊಂಡು ಬಿಡುವದು ವಾಯವ್ಯ ಸ್ನಾನ ಎನಿಸುತ್ತದೆ. ಅನಾರೋಗ್ಯ ಅಥವಾ ವೃದ್ಧಾಪ್ಯ, ಎಳೆತನ ಮುಂತಾದ ಅವಸ್ಥೆಯಲ್ಲಿ ಜಲಾಶಯಗಳಿಗೆ ಹೋಗುವದು ಅಶಕ್ಯವಾದಾಗ ದೇವರ ಹಾಗೂ ಗಂಗಾದಿ ತೀರ್ಥಗಳ ಸ್ಮರಣೆ ಮಾಡಿ ಹಸುಗಳ ಅಡೆಯಡಿಯ ಹುಡಿಯಲ್ಲಿ ಹೊರಳಾಡಿ ಎದ್ದರೆ, ಅದು ವಾಯವ್ಯ ಸ್ನಾನವೆನಿಸುತ್ತದೆ. ಸಮುದ್ರ ನದೀ ಅಥವಾ ಬೇರೆ ಮನೆಯಲ್ಲಿ ತಂದಿತ್ತ ನೀರಿನಿಂದ ಸ್ನಾನ ಮಾಡಿದರೆ ಅದು ವಾರುಣ ಸ್ನಾನ ಎನಿಸುತ್ತದೆ.

ಶಾಸ್ತ್ರೋಕ್ತವಾದ ವಿಧಿಯಿಂದ ಸಂಕಲ್ಪಪೂರ್ವಕವಾಗಿ ಗುರು-ಹಿರಿಯರ ಅಪ್ಪಣೆ ಪಡೆದು ತೀರ್ಥ ಹಾಗೂ ತೀರ್ಥಾಭಿಮಾನಿ ದೇವತೆಗಳ ಸ್ಮರಣೆಪೂರ್ವಕವಾಗಿ ಸ್ನಾನಕಾಲದಲ್ಲಿ ಹೇಳಬೇಕಾದ ಮಂತ್ರಗಳನ್ನೆಲ್ಲ ಸರಿಯಾಗಿ ಉಚ್ಚಾರಮಾಡುತ್ತ ವಿಧಿಪೂರ್ವಕವಾಗಿ ಮಾಡುವ ಸ್ನಾನವು ಬ್ರಾಹ್ಮ ಸ್ನಾನ ಎಂದು ಕರೆಯಲ್ಪಡುತ್ತದೆ. ಮೋಡಗಳಿಂದ ಧಾರಾಕಾರವಾಗಿ ನೀರು ಸುರಿಯುತ್ತಿರುವಾಗ ಬಟ್ಟಬಯಲು ಜಾಗದಲ್ಲಿ ಕುಳಿತುಕೊಂಡು ಗಂಗಾದಿ ತೀರ್ಥಗಳನ್ನು ಹಾಗೂ ಶ್ರೀಮನ್ನಾರಾಯಣನನ್ನು ನೆನೆಯುತ್ತ ಮಳೆ ನೀರಿನಲ್ಲಿ ಪೂರ್ತಿಯಾಗಿ ಮೈಯನ್ನು ನೆನಿಸಿಕೊಂಡು ಸ್ನಾನ ಮಾಡಿದರೆ ಅದು ದಿವ್ಯ ಸ್ನಾನ ಎನಿಸುತ್ತದೆ.

ಈ ನಾಲ್ಕೂ ವಿಧ ಸ್ನಾನಗಳಲ್ಲಿ ಎರಡನೇಯದಾದ ವೇದಶಾಸ್ತ್ರೋಕ್ತ ಮಂತ್ರಗಳನ್ನು ಉಚ್ಚರಿಸುತ್ತ ವಿಧಿಪೂರ್ವಕವಾಗಿ ಜಲಾಶಯಗಳಲ್ಲಿ ಮಾಡುವ ವಾರುಣಸ್ನಾನವು ಅತ್ಯುತ್ತಮವಾಗಿರುತ್ತದೆ. ಸ್ತ್ರೀಯರು ಮತ್ತು ಶೂದ್ರರು ಯಾವ ಮಂತ್ರವನ್ನು ಜಪಿಸದೆ ಕೇವಲ ಗಂಗಾದಿ ತೀರ್ಥಗಳ ಹಾಗೂ ಭಗವದ್ರೂಪಗಳ ನಾನಾ ಬಗೆಯಾದ ನಾಮಸ್ಮರಣೆಯನ್ನು ಮಾಡುತ್ತ ಸ್ನಾನವನ್ನು ಮಾಡಬೇಕು. ಅದರಿಂದಲೇ ಅವರಿಗೆ ಈ ಎಲ್ಲ ಸ್ನಾನಗಳ ಪುಣ್ಯವು ಬರುವದು.

ಪ್ರಾಚೀನಕಾಲದಲ್ಲಿ ತೀರ್ಥರಾಜ ಎನಿಸಿದ ಪುಷ್ಕರದಲ್ಲಿ, ನಂದಾಸಂಗಮ ತೀರ್ಥದಲ್ಲಿ ನಂದಾಹಸುವಿನ ಹೇಳಿಕೆಯಂತೆ ಪ್ರಭಂಜನ ರಾಜನು ಕಾರ್ತೀಕಮಾಸದಲ್ಲಿ ಪುಷ್ಕರ ಸ್ನಾನಮಾಡಿ ಹುಲಿಯ ಜನ್ಮದಿಂದ ಮುಕ್ತನಾದನು. ಆ ನಂದಾ ಎಂಬ ಆಕಳೂ ಕೂಡ ಕಾರ್ತೀಕಮಾಸದಲ್ಲಿ ಪುಷ್ಕರ ತೀರ್ಥದ ತೀರದಲ್ಲಿ ನಿಂತು, ನೀರಿನಲ್ಲಿ ಮಿಂದು, ದಿವ್ಯಗತಿಯನ್ನು ಹೊಂದಿತು.

## ಕಾರ್ತಿಕ ವ್ರತ

## ಅಧ್ಯಾಯ - ೫೩

**ಬ್ರಹ್ಮದೇವ:-** ಕಾರ್ತೀಕ ವ್ರತವನ್ನು ಮಾಡಲು ಸಂಕಲ್ಪ ಮಾಡಿದ ಮನುಷ್ಯನು ರಾತ್ರಿಯ ಕೊನೆಯ ಜಾವದಲ್ಲಿ ಏಳಬೇಕು. ಮುಖಪಾಣಿಪಾದ ಪ್ರಕ್ಷಾಲನ ಮಾಡಿ ಬಗೆ ಬಗೆಯ ಭಗವಂತನ ಸ್ತುತಿ ಸ್ತೋತ್ರಗಳನ್ನು ಹೇಳಿ 'ಈ ದಿನ ಇಂಥಿಂಥ ಸತ್ಕಾರ್ಯಗಳನ್ನು ನಾನು ಮಾಡುವೆನು' ಎಂದು ಸದಿಚ್ಛೆ ಹಾಗೂ ಸತ್‌ಸಂಕಲ್ಪಗಳನ್ನು ಮಾಡಬೇಕು. ಅನಂತರ ಪ್ರಾತರ್ವಿಧಿಯನ್ನು ಮುಗಿಸಲು ಊರ ಹೊರಗೆ ನೈರುತ್ಯ ಕೋಣೆಯಲ್ಲಿ ಸ್ವಲ್ಪ ದೂರ ಹೋಗಿ ಮಲಮೂತ್ರ ವಿಸರ್ಜನೆ ಮಾಡಬೇಕು.

ಈ ಕಾಲದಲ್ಲಿ ಜನಿವಾರವನ್ನು ಬಲಗಿವಿಗೆ ಸುತ್ತು ಹಾಕಿ ಉತ್ತರಕ್ಕೆ ಮುಖ ಮಾಡಿ ಮಲವಿಸರ್ಜನೆ ಮಾಡಬೇಕು. ನೆಲದ ಮೇಲೆ ಹುಲ್ಲು ಹಾಕಿ ಅದರ ಮೇಲೆ ಮಲವಿಸರ್ಜನೆ ಮಾಡಿ ಮಣ್ಣಿನಿಂದ ಮುಚ್ಚಬೇಕು. ರಾತ್ರಿಕಾಲದಲ್ಲಿ ದಕ್ಷಿಣಕ್ಕೆ ಮುಖಮಾಡಿ ಮಲತ್ಯಾಗ ಮಾಡಬೇಕು. ಮಲವಿಸರ್ಜನೆಯ ನಂತರ ಗುದದ್ವಾರಕ್ಕೆ ಐದು ಅಥವಾ ಏಳು ಸಲ ಮಣ್ಣು ಹಚ್ಚಿ ತೊಳೆಯಬೇಕು. ಅನಂತರ ನೀರು ಇದ್ದಲ್ಲಿ ಎದ್ದು ಬಂದು, ಎಡಗೈಗೆ ಹತ್ತು ಸಲ, ಮಣ್ಣು ಹಚ್ಚಿ ತೊಳೆದುಕೊಳ್ಳಬೇಕು. ಅನಂತರ ಎರಡು ಕೈಗಳನ್ನು ಏಳು ಸಲ ಮಣ್ಣು ಹಚ್ಚಿ ತೊಳೆಯಬೇಕು. ಎರಡೂ ಕಾಲುಗಳಿಗೆ ಮೂರು ಬಾರಿ ಮಣ್ಣು ಹಚ್ಚಿ ತೊಳೆಯಬೇಕು. ಇದು ಗೃಹಸ್ಥರಿಗೆ ವಿಹಿತವಾದ ಶೌಚದ ನಿಯಮ.

ಬ್ರಹ್ಮಚಾರಿಗಳಿಗೆ ಇದರ ಎರಡು ಪಟ್ಟು. ವಾನಪ್ರಸ್ಥರಿಗೆ ಮೂರು ಪಟ್ಟು. ಸನ್ಯಾಸಿಗಳಿಗೆ ನಾಲ್ಕು ಪಟ್ಟು, ಮೃತ್ತಿಕಾಶೌಚ ನಿಯಮವನ್ನು ಶುದ್ಧೀಕರಣಕ್ಕಾಗಿ ಹೇಳಿದ್ದಾರೆ. ಇದೆಲ್ಲವೂ ಹಗಲಿನ ಶೌಚದ ನಿಯಮ. ರಾತ್ರಿಕಾಲದಲ್ಲಿ ಇದರ ಅರ್ಧದಷ್ಟು ಸಲ ಮಣ್ಣು ನೀರಿನಿಂದ ಕೈ ಕಾಲುಗಳನ್ನು ತೊಳೆದುಕೊಂಡರೂ ಸಾಕು. ಯಾತ್ರೆಗೆ ಹೋದಾಗ ಈ ರಾತ್ರಿಯ ಶೌಚವಿಧಾನದ ಅರ್ಧದಷ್ಟು ಮಾತ್ರ ಶೌಚಾಚಾರದ ನಿಯಮಗಳನ್ನು ಪಾಲಿಸಬೇಕು. ಸ್ತ್ರೀಯರು ಹಾಗೂ ಶೂದ್ರರು ಈ ಯಾತ್ರೆಯ ಶೌಚ ವಿಧಾನದ ಅರ್ಧ ಶುದ್ಧೀಕರಣ ನಿಯಮವನ್ನು ಆಚರಿಸಬೇಕು.

ಕೈ ಕಾಲು ಮುಖ ತೊಳೆದುಕೊಂಡು ಬಳಿಕ ಹಲ್ಲು ಮತ್ತು ನಾಲಿಗೆಯ ಶುದ್ಧಿಗಾಗಿ ಹಲ್ಲು ಉಜ್ಜುವ ಕಡ್ಡಿಯನ್ನು ತೆಗೆಯಲು ವನಸ್ಪತಿಯ ಬಳಿಗೆ ಹೋಗಿ ಈ ಮಂತ್ರವನ್ನು ಹೇಳಬೇಕು.

**ಆಯುರ್ಬಲಂ ಯಶೋ ವರ್ಚಃ ಪ್ರಜಾಃ ಪಶು ವಸೂನಿ ಚ**
**ಬ್ರಹ್ಮಪ್ರಜ್ಞಾಂ ಚ ಮೇಧಾಂ ಚ ತ್ವಂ ನಮೋ ದೇಹಿ ವನಸ್ಪತೇ ॥**

''ಎಲೈ ವನಸ್ಪತಿಯೆ! ನೀನು ನನಗೆ ಆಯುಷ್ಯ, ಶಕ್ತಿ, ಕೀರ್ತಿ, ತೇಜಸ್ಸು, ಸಂತಾನ, ಪಶು, ದ್ರವ್ಯ, ಬ್ರಹ್ಮಜ್ಞಾನ, ಬುದ್ಧಿ, ಪ್ರತಿಭೆಗಳನ್ನು ನೀಡು'' ಎಂದು ಪ್ರಾರ್ಥನೆಯನ್ನು ಮಾಡಿ ಹನ್ನೆರಡು ಬೆರಳು ಉದ್ದವಾದ ಆ ವನಸ್ಪತಿಯ ಕಡ್ಡಿಯನ್ನು ತೆಗೆದುಕೊಳ್ಳಬೇಕು. ಹಾಲು ಸೋರುವ ಗಿಡದ ಕಡ್ಡಿಯನ್ನಾಗಲೀ, ಮುಳ್ಳು ತುಂಬಿದ ಮರದ ಕಡ್ಡಿಯನ್ನಾಗಲೀ, ಹತ್ತಿ ಗಿಡದ ಕಡ್ಡಿಯನ್ನಾಗಲೀ ತೆಗೆದುಕೊಳ್ಳಬಾರದು. ಒಳ್ಳೆ ವಾಸನೆಯುಳ್ಳ, ಎಳೆಯ ಮಿದುವಾದ ಗಿಡದ ಕಡ್ಡಿಯಿಂದ ಹಲ್ಲನ್ನು ಉಜ್ಜಬೇಕು.

**ಉಪವಾಸೇ ನವಮ್ಯಾಂ ಚ ಷಷ್ಠ್ಯಾಂ ಶ್ರಾದ್ಧದಿನೇ ರವೌ**
**ಗೃಹಣೇ ಪ್ರತಿಪದ್ದರ್ಶೇ ನ ಕುರ್ಯಾತ್ ದಂತಧಾವನಂ ॥**

ಏಕಾದಶಿ ಮೊದಲಾದ ಉಪವಾಸ ದಿನಗಳಲ್ಲಿ ನವಮಿ, ಷಷ್ಠಿ, ತಿಥಿ, ಶ್ರಾದ್ಧ ದಿನ, ಭಾನುವಾರ, ಗ್ರಹಣ ದಿನ, ಪ್ರತಿಪದೆ ಹಾಗೂ ಅಮಾವಾಸ್ಯಾ ದಿನಗಳಲ್ಲಿ ದಂತ ಕಾಷ್ಠದಿಂದ ಹಲ್ಲನ್ನು ತಿಕ್ಕಬಾರದು. ಇಂಥ ದಿನಗಳಲ್ಲಿ ಬರೀ ಬೆರಳುಗಳಿಂದ ಹಲ್ಲುಗಳನ್ನು ತಿಕ್ಕಿ ಹನ್ನೆರಡು ಸಲ ನೀರಿನಿಂದ ತೊಳೆದು ಮತ್ತೆ ಮತ್ತೆ ಬಾಯಿ ಮುಕ್ಕುಳಿಸಬೇಕು. ಹೀಗೆ ವಿಧಿಪೂರ್ವಕವಾಗಿ ಹಲ್ಲು ನಾಲಿಗೆ, ಮುಖಗಳನ್ನು ನೀರಿನಿಂದ ಸ್ವಚ್ಛವಾಗಿ ಮತ್ತೆ ಮತ್ತೆ ತಿಕ್ಕಿ ತೊಳೆದು ವಾಸನೆಯು ಉಳಿಯದಂತೆ ಶುದ್ಧ ಮಾಡಿ ಬಳಿಕ ನೀರಿನಿಂದ ಮುಖವನ್ನು ನಿರ್ಮಲ ಆಗುವಂತೆ ತೊಳೆಯಬೇಕು. ಅನಂತರ ವಿಷ್ಣುವಿನ ನಾಮಸ್ಮರಣೆ ಮಾಡುತ್ತ ನಸುಕಿನಲ್ಲಿಯೇ ಸ್ನಾನಕ್ಕಾಗಿ ಜಲಾಶಯಗಳು ಇದ್ದಲ್ಲಿಗೆ ಹೋಗಬೇಕು. ಅಲ್ಲಿ ಸ್ನಾನ ಮಂತ್ರಗಳನ್ನು ಹೇಳಿ ವಿಧಿಪೂರ್ವಕವಾಗಿ ಸ್ನಾನವನ್ನು ಮಾಡಬೇಕು. ನಿರ್ಮಲವಾದ ಮಡಿ ಬಟ್ಟೆಯನ್ನು ಉಟ್ಟುಕೊಂಡು ನಾಮಧಾರಣ ಮಾಡಬೇಕು.

ಬಳಿಕ ತನ್ನ ಶಾಖೆಯ ಅಹ್ನಿಕ ಸೂತ್ರದಲ್ಲಿ ಹೇಳಿದ ಪದ್ಧತಿಯಿಂದ ಸಂಧ್ಯಾವಂದನೆಯನ್ನು ಮಾಡಬೇಕು. ನಕ್ಷತ್ರಗಳು ಇರುವಾಗಲೇ ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು ಸೂರ್ಯೋದಯವಾಗುವವರೆಗೆ ಗಾಯಿತ್ರಿ ಮಂತ್ರವನ್ನು ಜಪ ಮಾಡಬೇಕು. ಸೂರ್ಯೋಪಸ್ಥಾನ, ದೇವತಾ ವಂದನೆಗಳ ನಂತರ ಸಂಧ್ಯೋಪಾಸನೆಯ ವಿಧಿಯನ್ನು ಮುಗಿಸಿ ವಿಷ್ಣು ಸಹಸ್ರನಾಮವನ್ನು ಪಾರಾಯಣ ಮಾಡಬೇಕು. ಅನಂತರ ದೇವಾಲಯ ಅಥವಾ ದೇವರ ಕೋಣೆಯಲ್ಲಿ ಬಂದು ವಿಧಿಪೂರ್ವಕವಾಗಿ ಶ್ರೀಹರಿಯ ಪೂಜೆಯನ್ನು ಮಾಡಬೇಕು.

ಪೂಜೆಯ ಕಾಲದಲ್ಲಿಯೂ ಪೂಜೆಯ ನಂತರವೂ ದೇವರ ಗುಣಾನುವಾದ, ಧ್ಯಾನ, ಗಾನ, ನಾಮಸಂಕೀರ್ತನ, ನೃತ್ಯ ಮುಂತಾದ ಬಗೆಬಗೆಯ ಕೈಂಕರ್ಯಗಳಿಂದ ಭಗವಂತನ ಸೇವೆ ಮಾಡುತ್ತ ದಿನದ ಮೊದಲನೆಯ ಪ್ರಹರವನ್ನು ಕಳೆಯಬೇಕು. ಅನಂತರ ಅರ್ಧ ಪ್ರಹರ ಎಂದರೆ ಒಂದೂವರೆ ಗಂಟೆ ಕಾಲ ಪುರಾಣ ಕಥಾಶ್ರವಣವನ್ನು ಮಾಡಬೇಕು. ಬಳಿಕ ಪುರಾಣ ಹೇಳುವ ವಿದ್ವಾಂಸನನ್ನು ಪೂಜೆ ಮಾಡಿ, ಅನಂತರ ತುಳಸೀ ಪೂಜೆ ಮಾಡಿ, ಮತ್ತೆ ಸ್ನಾನ ಮಾಡಿ, ದೇವರ ಪೂಜೆ ನೈವೇದ್ಯ ವೈಶ್ವದೇವ, ಅಗ್ನಿಹೋತ್ರ ಮುಂತಾದ ಮಧ್ಯಾಹ್ನ ಕರ್ಮಕಲಾಪಗಳನ್ನೆಲ್ಲ ಮಾಡಬೇಕು. ಅನಂತರ ವೈಶ್ವದೇವ, ಬಲಿಹರಣಗಳನ್ನು ಮಾಡಿದ ಬಳಿಕ ಬಂದ ಅತಿಥಿಗಳಿಗೆ ಭೋಜನ ಮಾಡಿಸಿ ತಾನು ಕೂಡ ಬೇಳೆಯನ್ನು ಬಿಟ್ಟು ಉಳಿದ ಅನ್ನವನ್ನು ಊಟ ಮಾಡಬೇಕು. ನೈವೇದ್ಯ, ವೈಶ್ವದೇವ, ಬಲಿಹರಣ, ಅತಿಥಿ ಭೋಜನ ಈ

ನಾಲ್ಕನ್ನು ಮಾಡಿದ ಅನಂತರ ಉಂಡ ಊಟವು ಅಮೃತ. ಪರಮ ಪವಿತ್ರ. ಊಟದ ಅನಂತರ ಪರಮಾತ್ಮನ ಚರಣಾಮೃತ ರೂಪವಾದ ತೀರ್ಥದ ನೀರನ್ನು ಕುಡಿಯಬೇಕು. ಮೇಲೆ ತುಳಸೀದಳವನ್ನು ತಿನ್ನಬೇಕು. ಇಷ್ಟು ಮಾಡಿ ಉಳಿದ ಹಗಲನ್ನೆಲ್ಲ ತನ್ನ ಸಂಸಾರದ ವ್ಯವಹಾರ, ಉದ್ಯೋಗ, ವ್ಯವಸಾಯಗಳಲ್ಲಿ ಕಳೆಯಬೇಕು.

ಸಾಯಂಕಾಲದಲ್ಲಿ ಮತ್ತೆ ದೇವರ ಗುಡಿ ಅಥವಾ ತನ್ನ ಮನೆಯ ದೇವರ ಕೋಣೆಯನ್ನುಪ್ರವೇಶಿಸಿ, ಸಾಯಂಕಾಲ ಸಂಧ್ಯಾವಂದನೆಗೈದು ತನ್ನ ಶಕ್ತಿಗೆ ಅನುಸಾರವಾಗಿ ದೇವರ ಮುಂದೆ ದೀಪವನ್ನು ಹಚ್ಚಿ ಇಡಬೇಕು. ಭಗವಂತನಿಗೆ ಪ್ರಣಾಮ ಮಾಡಿ ಮಂಗಳಾರತಿಯನ್ನು ಬೆಳಗಿ, ಮಂತ್ರ, ಸ್ತೋತ್ರ ಭಜನೆ ಮೊದಲಾದವುಗಳನ್ನು ಮಾಡುತ್ತ ಒಂದು ಪ್ರಹರ ಕಾಲದವರೆಗೆ ನಿತ್ಯಜಾಗರವನ್ನು ಮಾಡಬೇಕು. ಬ್ರಹ್ಮಚರ್ಯ ವ್ರತವನ್ನು ಪಾಲಿಸಬೇಕು. ಹೀಗೆ ಒಂದು ತಿಂಗಳವರೆಗೆ ಶಾಸ್ತ್ರೋಕ್ತವಾದ ಕಾರ್ತೀಕ ವ್ರತವಿಧಾನವನ್ನು ಪಾಲನಮಾಡಬೇಕು. ಇದರಿಂದ ಮಾನವನು ಸರ್ವಪಾಪಗಳಿಂದ ಮುಕ್ತವಾಗಿ ವಿಷ್ಣುವಿನ ಸಾಲೋಕ್ಯರೂಪದ ಮೋಕ್ಷವನ್ನು ಹೊಂದುವನು.

ಕಾರ್ತೀಕಮಾಸ ಬಂದಬಳಿಕ ನಿಶುದ್ಧ ವಸ್ತುಗಳನ್ನು ತ್ಯಾಗಮಾಡಬೇಕು. ಅಭ್ಯಂಗ ಸ್ನಾನ, ಪರಾನ್ನ ಭೋಜನ, ಬಹುಬೀಜಗಳುಳ್ಳ ಹಣ್ಣುಗಳ ಭಕ್ಷಣ ಹಾಗೂ ಬೇಳೆಕಾಳುಗಳು ಕಾರ್ತೀಕಮಾಸದಲ್ಲಿ ನಿಷಿದ್ಧವಾಗಿರುತ್ತವೆ. ಗಜ್ಜರೆ, ಬದನೆಕಾಯಿ, ಮೆಣಸಿನಕಾಯಿ, ಎರಡನೆಯ ಹೊತ್ತು ಊಟ, ಮದ್ಯ, ಪರಾನ್ನ, ಕಂಚಿನ ಪಾತ್ರೆಯಲ್ಲಿ ಊಟ, ದುರ್ಗಂಧವುಳ್ಳ ಪದಾರ್ಥಗುಂಪಿನಲ್ಲಿ ಊಟ, ವೇಶ್ಯೆಯ ಅನ್ನ ಶೂದ್ರಾನ್ನ, ಸೂತಕಾನ್ನ, ಶ್ರಾದ್ಧದ ಅನ್ನ, ರಜಸ್ವಲೆಯು ಹಣ ಕೊಟ್ಟು ಮಾಡಿದ ಅನ್ನ, ಜನನಾಶೌಚ ಬಂದವರ ಮನೆಯಲ್ಲಿ ಅನ್ನ, ಮುಂತಾದವುಗಳನ್ನೆಲ್ಲ ಕಾರ್ತೀಕಮಾಸದಲ್ಲಿ ತ್ಯಾಗ ಮಾಡಬೇಕು. ಕಾರ್ತೀಕಮಾಸದಲ್ಲಿ ಬಾಳೆ ಎಲೆಯಲ್ಲಿ ಊಟ ಮಾಡಬೇಕು. ಕಮಲದ ಎಲೆಯಲ್ಲಿ ಎಂದೂ ಊಟ ಮಾಡಬಾರದು. ಕಾರ್ತೀಕದಲ್ಲಿ ಪ್ರಾತಃ ಸ್ನಾನ. ಶ್ರೀಹರಿಯ ಪೂಜೆ, ಭಗವತ್ಕಥಾ ಶ್ರವಣ ಇವು ಮೂರು ಅತ್ಯವಶ್ಯ ಕರ್ತವ್ಯವಾಗಿವೆ. ಬಾಳೆಯ ಹಣ್ಣು ಹಾಗೂ ನೆಲ್ಲಿಯ ಕಾಯಿ, ಇವುಗಳನ್ನು ಹಾಗೂ ವಸ್ತ್ರವನ್ನು ದಾನ ಕೊಡಬೇಕು. ಕಾರ್ತೀಕದಲ್ಲಿ ತುಳಸೀ ದಳಗಳಿಂದ ಪೂಜೆಯು ವಿಷ್ಣುವಿಗೆ ಪರಮ ಪ್ರೀತ್ಯಾಸ್ಪದ. ಈ ಕಾರ್ತೀಕ ಮಾಸದಲ್ಲಿ ಭಗವದ್ಗೀತೆ ಹಾಗೂ ಭಾಗವತ ಗ್ರಂಥಗಳ ಪಠಣ, ಪಾಠಣ, ಶ್ರವಣ, ಪಾರಾಯಣ ಮಾಡುವುದರಿಂದ ಬರುವ ಪುಣ್ಯವು ಇಷ್ಟು ಎಂದು ಹೇಳಲು ಸಾಧ್ಯವಿಲ್ಲ.

**ಗೀತಾಪಾಠಂ ತು ಯಃ ಕುರ್ಯಾತ್ ಕಾರ್ತಿಕೇ ವಿಷ್ಣುವಲ್ಲಭೇ ।**
**ತಸ್ಯ ಪುಣ್ಯಫಲಂ ವಕ್ತುಂ ನಾಲಂ ವರ್ಷಶತೈರಪಿ ॥**

**ಶ್ರೀ ಮದ್ಭಾಗವತಸ್ಯಾಪಿ ಶ್ರವಣಂ ಯಃ ಸಮಾಚರೇತ್ ।**
**ಸರ್ವಪಾಪವಿನಿರ್ಮುಕ್ತಃ ಪರಂ ನಿರ್ವಾಣಮೃಚ್ಛತಿ ॥**

ವಿಷ್ಣುವಿಗೆ ಪ್ರೀತ್ಯಾಸ್ಪದವಾದ ಈ ಕಾರ್ತೀಕದಲ್ಲಿ ಗೀತಾಪಾಠದಿಂದ ಬರುವ ಪುಣ್ಯವನ್ನು ನೂರು ವರ್ಷ ಹೇಳಿದರೂ ಮುಗಿಯಲಾರದು. ಈ ಕಾಲದಲ್ಲಿ ಭಾಗವತ ಶ್ರವಣ ಮಾಡಿದರಂತೂ ಸರ್ವ ಪಾಪಗಳಿಂದ ಮುಕ್ತನಾಗಿ ಮಾನವನು ಮೋಕ್ಷವನ್ನು ಹೊಂದುತ್ತಾನೆ. ಕಾರ್ತೀಕ ಏಕಾದಶಿಯ ದಿನ ಸಂಪೂರ್ಣ ಉಪವಾಸವಿದ್ದು ಜಾಗರಣೆ ಮಾಡಿ ಶ್ರೀಹರಿಯ ಸ್ತೋತ್ರ ಮಾಡುವವನು ಸರ್ವಪಾಪಗಳಿಂದ ಮುಕ್ತನಾಗುತ್ತಾನೆ.

ಪರಾನ್ನ ತ್ಯಾಗ, ಅತಿಥಿ ಭೋಜನ ವಿಷ್ಣು ಮಂದಿರದಲ್ಲಿ ಪ್ರದಕ್ಷಿಣೆ ನಮಸ್ಕಾರ. ತುಳಸೀ ಪೂಜೆ, ಪ್ರಾತಃಸ್ನಾನ ಹಾಗೂ ದ್ವಿದಳ ವ್ರತ, ಭಗವಂತನ, ನಾಮಸ್ಮರಣ ಇವು ಇಷ್ಟು ಕಾರ್ತೀಕ ಮಾಸದ ಮುಖ್ಯ ಕರ್ತವ್ಯಗಳು. ಇದರಿಂದ ನಿಜವಾಗಿಯೂ ಹರಿಯ ಪ್ರೀತಿಯು ಉಂಟಾಗುವುದು.

ಇದರಂತೆ ಕಾರ್ತಿಕ ತಿಂಗಳಲ್ಲಿ ವೈಷ್ಣವರ ನಿಂದೆ, ಅಥವಾ ನಿಂದಾಶ್ರವಣ, ಪರಸ್ತ್ರೀ ಸಹವಾಸ, ವೈಷ್ಣವ ದ್ರೋಹ ಮುಂತಾದವುಗಳನ್ನು ಮಾಡಿದವರು ಮಹಾ ರೌರವ ಎಂಬ ನರಕದಲ್ಲಿ ಬೀಳುವರು. ಈ ಕಾಲದಲ್ಲಿ ಹಣೆಯ ಮೇಲೆ ತುಳಸೀ ವೃಂದಾವನದ ಮೃತ್ತಿಕೆಯನ್ನು ತಿಲಕದಂತೆ ಧರಿಸಬೇಕು. ಹಣೆಯ ಮೇಲೆ ತುಳಸೀ ಮೃತ್ತಿಕೆಯ ತಿಲಕವಿದ್ದರೆ ಅತ್ತ ನೋಡಲೂ ಹೆದರುತ್ತಾನೆ ಯಮಧರ್ಮ. ಕಾರ್ತಿಕ ಮಾಸದಲ್ಲಿ ವಿಷ್ಣು ಮಂದಿರಕ್ಕೆ ಸುಣ್ಣ ಹಚ್ಚುವದು. ಗೋಡೆಗಳ ಮೇಲೆ ಚಿತ್ರ ಬರೆಸುವದು. ವಿದ್ವಾಂಸರ ಭೋಜನ ಮಾಡಿಸುವದು ಇವು ಮೂರು ವಿಷ್ಣುವಿನ ಸಾರೂಪ್ಯ ರೂಪ ಮೋಕ್ಷಕ್ಕೆ ಕಾರಣವಾಗುತ್ತವೆ. ಕಾರ್ತೀಕ ಮಾಸದಲ್ಲಿ ಗಭಸ್ತೀಶ್ವರನಿಗೆ, ಶತರುದ್ರಿಮಂತ್ರವನ್ನು ಜಪ ಮಾಡಿದವರಿಗೆ ಆ ಮಂತ್ರದ ಸಿದ್ಧಿಯು ಆಗುತ್ತದೆ. ಮೂರು ವರ್ಷ ಕಾಶಿಯಲ್ಲಿದ್ದು ಕಾರ್ತಿಕ ವ್ರತವನ್ನು ಸರಿಯಾಗಿ ಅನುಷ್ಠಾನ ಮಾಡಿದರೆ ಅವರಿಗೆ ಸಂತಾನ, ಸಂಪತ್ತು, ಕೀರ್ತಿ, ಧರ್ಮಬುದ್ಧಿ ಎಲ್ಲವೂ ತಾವಾಗಿಯೇ ಪ್ರಾಪ್ತವಾಗುವವು.ಕಾರ್ತಿಕ ಮಾಸದಲ್ಲಿ ನಿಷಿದ್ಧ ಪದಾರ್ಥ, ಮಾದಕವಸ್ತು, ಮುಂತಾದ ವಸ್ತುಗಳನ್ನು ಉಪಯೋಗಿಸಬಾರದು. ಹಾಗೂ ಈ ತಿಂಗಳಲ್ಲಿ ವೇದ, ಬ್ರಾಹ್ಮಣ, ಗುರು, ಹಸು, ಸಜ್ಜನರು, ವ್ರತಾನುಷ್ಠಾನ ಮಾಡುವವರು, ಮಹಾತ್ಮರೇ ಮುಂತಾದವರ ನಿಂದೆಯನ್ನು ಮಾಡಕೂಡದು. ಈ ಮಾಸದ ನರಕ ಚತುರ್ದಶಿಯಂದು ಎಲ್ಲರೂ ಮೈಗೆ ಎಣ್ಣೆಯನ್ನು ಹಚ್ಚಿಕೊಳ್ಳಬೇಕು. ಅದನ್ನು ಬಿಟ್ಟು ಬೇರೆ ದಿನಗಳಲ್ಲಿ ಎಣ್ಣೆಯನ್ನು ಹಚ್ಚಿಕೊಳ್ಳಬಾರದು.

ರಜಸ್ವಲೆ, ಚಂಡಾಲ, ಮ್ಲೇಂಛ, ಪತಿತ, ವ್ರತಹೀನ, ವೇದಬಹಿಷ್ಕೃತ, ಬ್ರಹ್ಮದ್ವೇಷಿ, ಮುಂತಾದ ಜನರ ಜೊತೆ ಕಾರ್ತೀಕವ್ರತವನ್ನು ಹಿಡಿದವರು ಮಾತುಕತೆಗಳನ್ನು ಆಡಬಾರದು. ಅಂಥ ಪಾಪಿಗಳ ಸಂಪರ್ಕವನ್ನು ಮಾಡಬಾರದು.

## ಕಾರ್ತಿಕ ವ್ರತದಿಂದ ಪತಿತ ಬ್ರಾಹ್ಮಣಿಯ ಉದ್ಧಾರ — ಅಧ್ಯಾಯ -೫೪

**ಬ್ರಹ್ಮದೇವ:-** ಸ್ತ್ರೀ ಮತ್ತು ಪುರುಷರು ಹುಟ್ಟಿದಂದಿನಿಂದ ಮಾಡಿದ ಪಾಪಗಳೆಲ್ಲವೂ ಕಾರ್ತಿಕಮಾಸದಲ್ಲಿ ದೀಪದಾನದಿಂದ ನಷ್ಟವಾಗಿ ಹೋಗುತ್ತವೆ. ಈ ವಿಷಯದಲ್ಲಿ ನಾನು ನಿಮಗೆ ಒಂದು ಪ್ರಾಚೀನ ಕಾಲದ ಇತಿಹಾಸ ಹೇಳುತ್ತೇನೆ.

ಪೂರ್ವಕಾಲದಲ್ಲಿ ಒಬ್ಬ ಬ್ರಾಹ್ಮಣನು ಇದ್ದ ದ್ರವಿಡ ದೇಶದಲ್ಲಿ. ಬುದ್ಧ ಎಂದು ಅವನ ಹೆಸರು. ಬುದ್ಧ ಬ್ರಾಹ್ಮಣ ಜ್ಞಾನಿ. ಸದಾಚಾರ ಸಂಪನ್ನ. ಆದರೆ ಅವನ ಹೆಂಡತಿ ಅಷ್ಟೇ ದುಷ್ಟೆ, ಕಲಹ ಕರ್ಕಶೆ, ಮತ್ತು ಪತಿನಿಂದಕಿ, ಸ್ವಾರ್ಥಪರಾಯಣೆ. ಇಂಥ ಪಾಪಿಷ್ಠಳಾದ ಮಡದಿಯ ಸಹವಾಸದಿಂದ ಕ್ಷೀಣಿಸಿ ಹೋಯಿತು ಆ ಬುದ್ಧ ಬ್ರಾಹ್ಮಣನ ಆಯುಷ್ಯ. ಅಕಾಲ ಮೃತ್ಯುವಿಗೆ ತುತ್ತಾದ. ಆ ಬಡಪಾಯಿ ಬ್ರಾಹ್ಮಣ ಪತಿಯ ಮರಣದ ನಂತರ ಆ ದುಷ್ಟ ನಾರಿಯ ಸ್ವಚ್ಛಂದ ಆಚರಣೆಯು ನಿರಂಕುಶವಾಗಿ ನಡೆಯಿತು. ವ್ಯಭಿಚಾರ, ಪಾಪಾಚಾರಗಳಿಗೆ ಇಳಿದಳು.

ಆ ದುರಾಚಾರಿ ನಾರಿಗೆ ಲೋಕಾಪವಾದದ ಭಯವಾಗಲೀ, ನಾಚಿಕೆಯಾಗಲಿ ಸ್ತ್ರೀ ಸಹಜವಾದ ವಿನಯ, ಧರ್ಮ ಬುದ್ಧಿಗಳಾಗಲೀ ಅವಳಲ್ಲಿ ತಿಲಮಾತ್ರವೂ ಇರಲಿಲ್ಲ. ಅವಳಿಗೆ ಮಕ್ಕಳಾಗಲೀ, ಅಣ್ಣ ತಮ್ಮಂದಿರಾಗಲೀ, ಯಾರೂ ಇರಲಿಲ್ಲ. ತನ್ನ ಕೈಯಿಂದ ಅಡಿಗೆ ಮಾಡಿಕೊಂಡು ಉಣ್ಣುವುದೆಂದರೆ ಬಹುಬೇಸರ ಆ ಬ್ರಾಹ್ಮಣ ವಿಧವೆಗೆ. ಪತಿಯ ಮರಣವು ಅವಳಿಗೆ ಅನುಕೂಲವೇ ಆಯಿತು. 'ನಾನೊಬ್ಬ ಅನಾಥ ವಿಧವೆ' ಎಂದು ಹೇಳಿಕೊಂಡು ಮನೆ ಮನೆಗೆ ಹೋಗಿ ಭಿಕ್ಷೆ ಬೇಡಿ ವಿಪುಲವಾಗಿ ಅನ್ನ, ಅಡಿಗೆ ತರುತ್ತಿದ್ದಳು ಹೆಚ್ಚು ಮನೆಗಳಲ್ಲಿ ಮಧುಕರೀ ಬೇಡಿ ಸಾಕಷ್ಟು ಭಕ್ಷ, ಭೋಜ್ಯ ಖಾದ್ಯ ಪದಾರ್ಥಗಳನ್ನು ಸಿರಿವಂತರ ಮನೆಯಿಂದ ಬೇಡಿ ತಂದು ಶ್ರಮವಿಲ್ಲದೆ ಯಥೇಚ್ಛವಾಗಿ ಮೂರು ಹೊತ್ತು ಊಟ ಮಾಡಿ ಹೊಟ್ಟೆ ತುಂಬ ತಿಂದು ತೇಗುತ್ತಿದ್ದಳು. ಒಮ್ಮೊಮ್ಮೆ ಬೇರೆ ಸಿರವಂತರ ಮನೆಯಲ್ಲಿ ಅಡಿಗೆ ನೀರು ಮಾಡಿ ಹಣವನ್ನು ಸಂಪಾದಿಸುತ್ತಿದ್ದಳು. ಅವಳು ಎಂದೂ ಕ್ಷೇತ್ರಯಾತ್ರೆಗೆ ಹೊರಡಲಿಲ್ಲ. ದೇವಾಲಯಗಳಿಗೆ ಹೋಗಲಿಲ್ಲ. ತೀರ್ಥಸ್ನಾನ ಮಾಡಲಿಲ್ಲ. ದೇವರಿಗೆ ಒಮ್ಮೆಯೂ ಕೈ ಮುಗಿಯಲಿಲ್ಲ. ಒಂದು ದಿನವೂ ಪುರಾಣ ಪುಣ್ಯಕಥೆಗಳನ್ನು ಕೇಳಲಿಲ್ಲ.

ಒಂದು ದಿನ ಅವಳ ಮನೆಗೆ ಓರ್ವ ಬ್ರಾಹ್ಮಣನು ಯದೃಚ್ಛೆಯಿಂದ ಆಗಮಿಸಿದ. ಮಹಾ ವಿದ್ವಾಂಸ, ಅಂದು ಅಲ್ಲಿ ಅತಿಥಿಯಾಗಿ ಬಂದ ಬ್ರಾಹ್ಮಣ. ಅವನ ಹೆಸರು ಕುತ್ಸ. ಇವಳ ಮನೆಗೆ ಬಂದ ಬಳಿಕ ಗೊತ್ತಾಯಿತು ಆ ಕುತ್ಸನಿಗೆ ಇವಳೊಬ್ಬ ಹಾದಿ ಬಿಟ್ಟ ನಾರಿ ಎಂದು. ಅವನು ಮನೆಯಲ್ಲಿರುವಾಗಲೇ ಅನೇಕ ವಿಟಪುರುಷರು ಅಲ್ಲಿಗೆ ಬಂದು ಹೋದರು. ಅದನ್ನು ನೋಡಿ ಬ್ರಹ್ಮರ್ಷಿ ಶ್ರೇಷ್ಠನಾದ ಆ ಕುತ್ಸ ಮುನಿಗೆ ಬಹಳ ಕೆಡಕು ಎನಿಸಿತು. ಅವನು ಆ ಬ್ರಾಹ್ಮಣ ವಿಧವೆಯನ್ನು ಅಧಿಕ್ಷೇಪಿಸುತ್ತ ನುಡಿದನು.

**ಬ್ರಾಹ್ಮಣ:-** "ಮೂರ್ಖ ಮಹಿಳೆಯೇ ! ನನ್ನ ಮಾತನ್ನು ಗಮನವಿಟ್ಟು ಕೇಳು. ಈ ಮಾನವ ಶರೀರವು ಪಂಚ ಮಹಾಭೂತಗಳ ಅಂಶದಿಂದ ನಿರ್ಮಿತವಾಗಿದೆ. ಇದರ ಒಳಗೆ ರಕ್ತ, ಮಾಂಸ, ಮಲಮೂತ್ರ, ಕೀವು, ಮಜ್ಜೆ, ಮೂಳೆ ಮುಂತಾದ ಹೇಯ ಪದಾರ್ಥಗಳು ಹೊಲಸು ವಸ್ತುಗಳು, ದುರ್ಗಂದ ದ್ರವ್ಯಗಳು ತುಂಬಿರುತ್ತವೆ. ಇವೆಲ್ಲದಕ್ಕೂ ದೇವರು ಕರಿ ಅಥವಾ ಕೆಂಪು ತೊಗಲನ್ನು ಮೇಲೆ ಬಿಗಿದು ಜೀವಕಳೆ ತುಂಬಿ ಭೂಮಿಗೆ ಕಳಿಸಿರುತ್ತಾನೆ. ಇದೆಲ್ಲವೂ ನೀರಿನ ಮೇಲಿನ ಗುಳ್ಳೆ. ಕೆಲವೇ ದಿನಗಳಲ್ಲಿ ಇದರ ನಾಶ ನಿಶ್ಚಿತ. ಎಂಥ ಸುಂದರ ಶರೀರಕ್ಕೂ ಸಾವು ನೋವು ಕಟ್ಟಿ ಇಟ್ಟಿದ್ದು. ಮುಪ್ಪು ಮರಣಗಳನ್ನು ತಪ್ಪಿಸಿದವರು ಇಂದಿನವರೆಗೆ ಯಾರೂ ಪ್ರಪಂಚದಲ್ಲಿ ಹುಟ್ಟಿಲ್ಲ. ಇಂಥ ಅನಿಷ್ಟವೂ, ಅಶಾಶ್ವತವೂ, ಕೊಳೆ, ಕಶ್ಮಲಗಳಿಂದ ತುಂಬಿ ತುಳುಕಾಡುತ್ತಿರುವದೂ ಆದ ಈ ದುರ್ಗಂಧ ಯುಕ್ತ ದೇಹವನ್ನು ನೀನು ಮೋಹದಿಂದ ಪೋಷಿಸುತ್ತಿರುವಿ. ಒಂದಿಲ್ಲ ಒಂದು ದಿನ ಬೆಂಕಿಯಲ್ಲಿ ಬಿದ್ದು ಬೂದಿಯಾಗಿ ಹೋಗುವ ಆ ಭೌತಿಕ ದೇಹದ ಅಲ್ಪ ಅಸ್ಥಿರ ಸುಖಕ್ಕಾಗಿ ಎಂಥ ಘೋರ ಪಾಪಗಳನ್ನು ನೀನು ಮಾಡುತ್ತಲಿರುವಿ! ಇದರಿಂದ ನೀನು ಕೆಲವು ದಿನ ಮಾತ್ರ ಅಲ್ಪ ಸ್ವಲ್ಪ ಸುಖವನ್ನು ಅನುಭವಿಸಿದರೂ ಕೊನೆಗೆ ನಿತ್ಯ ನಿರಂತರವೂ ಕೊಳೆಯಬೇಕಾಗುವುದು ಘೋರ ನರಕಗಳಲ್ಲಿ. ಆದ್ದರಿಂದ ಬಿಟ್ಟುಬಿಡು ಈ ದೇಹವು ಶಾಶ್ವತ ಎಂಬ ಭ್ರಮೆಯನ್ನು.

ದೇವಶ್ರೇಷ್ಠನಾದ ಮಹಾವಿಷ್ಣುವನ್ನು ಧ್ಯಾನಿಸು. ಅವನ ಚಾರುಚರಿತ್ರಗಳನ್ನೂ ಮಹಾಮಹಿಮೆಯ ಲೀಲಾಕಥಾ ವಿಸ್ತಾರವನ್ನೂ ಆದರದಿಂದ ಶ್ರವಣಮಾಡು. ಕಾರ್ತೀಕ

ಮಾಸವು ಬಂದಾಗ ದಾಮೋದರನ ಪ್ರೀತಿಗಾಗಿ ನಸುಕಿನಲ್ಲಿಯೇ ಎದ್ದು ಮೈತೊಳೆದುಕೊ. ದೇವರ ಮುಂದೆ ತುಳಸಿಯ ಎದುರು ಹಸುಗಳ ಕೊಟ್ಟಿಗೆಯಲ್ಲಿ ಹಾಗೂ ಮೇಲುಮಾಳಿಗೆಯ ಮೇಲೆ ದೀಪವನ್ನು ಹಚ್ಚಿ ಇಡು. ವಿಷ್ಣುವಿನ ಪ್ರದಕ್ಷಿಣೆ ನಮಸ್ಕಾರಗಳನ್ನು ನಿನ್ನ ಶಕ್ತಿಗೆ ಅನುಸಾರವಾಗಿ ಹಾಕು. ಸೌಭಾಗ್ಯವತಿಯರಾದ ಮುತ್ತೈದೆಯರೂ ವಿಧವಾ ಸ್ತ್ರೀಯರೂ ಪುರುಷರೂ, ಸನ್ಯಾಸಿಗಳೂ, ಬ್ರಹ್ಮಚಾರಿಗಳೂ, ಬ್ರಾಹ್ಮಣ, ಶೂದ್ರ, ಎಲ್ಲ ಜಾತಿ ಜನಾಂಗದ ಜನರೂ ಕಾರ್ತೀಕ ಮಾಸದಲ್ಲಿ ಸ್ನಾನ, ದೇವರಪೂಜೆ, ಭಗವಂತನ ಧ್ಯಾನ, ಹಾಗೂ ದೀಪ ದಾನ ಈ ನಾಲ್ಕು ಪುಣ್ಯಕಾರ್ಯಗಳನ್ನು ಅವಶ್ಯವಾಗಿ ತಪ್ಪದೇ ಮಾಡಬೇಕು. ಕಾರ್ತೀಕ ಮಾಸದಲ್ಲಿ ದೀಪ ದಾನದಿಂದ ಭಗವಾನ್ ಶ್ರೀಹರಿಯು ಸುಪ್ರಸನ್ನನಾಗುವನು.

ಬ್ರಹ್ಮರ್ಷಿ ಶ್ರೇಷ್ಠನಾದ ಕುತ್ಸ ವಿಪ್ರನು ಆ ಬ್ರಾಹ್ಮಣ ವಿಧವೆಗೆ ಇಷ್ಟು ಉಪದೇಶವನ್ನು ಕರುಣೆಯಿಂದ ಅವಳಿಗೆ ಮನಸ್ಸಿಗೆ ತಟ್ಟುವಂತೆ ಮಾಡಿದನು. ಅವಳ ಆಚಾರ, ವಿಚಾರವು ಸರಿ ಇಲ್ಲದ್ದನ್ನು ಕಂಡು ಅವಳ ಮನೆಯಲ್ಲಿ ಊಟವನ್ನೂ ಮಾಡಲಿಲ್ಲ, ನೀರು ಕುಡಿಯಲಿಲ್ಲ. ಅವಳ ಮನೆಯಲ್ಲಿ ಬಹಳ ಹೊತ್ತು ಉಳಿದುಕೊಳ್ಳಲಿಲ್ಲ. ಕೆಲವು ನಿಮಿಷಗಳಲ್ಲಿ ಹಲವು ಹಿತನುಡಿಗಳನ್ನು ಹಾದಿ ಬಿಟ್ಟ ಆ ಹೆಣ್ಣು ಮಗಳಿಗೆ ಹೇಳಿ ಹೊರಟು ಹೋದನು ಆ ಕುತ್ಸಮುನಿ. ಅವಳ ಮನೆಯ ಮುಂದಿನ ಸಾಲಿನಲ್ಲಿ ಸದಾಚಾರ ಸಂಪನ್ನರಾದ ಒಂದು ಗ್ರಹಸ್ಥ ಕುಟುಂಬವು ಮನೆ ಮಾಡಿಕೊಂಡು ವಾಸವಾಗಿದ್ದಿತು. ಆ ಕುಟುಂಬದ ಗಂಡು, ಹೆಣ್ಣು ಮಕ್ಕಳು ಸಹಿತ ಎಲ್ಲರೂ ಸದಾಚಾರ ನಿಷ್ಠರು. ಭಗವದ್ಭಕ್ತರು. ಕುತ್ಸ ವಿಪ್ರನು ಅವರ ಮನೆಗೆ ಅತಿಥಿಯಾಗಿ ಹೋಗಿ ಅವರ ಆದರ ಪೂರ್ಣವಾದ ಆತಿಥ್ಯವನ್ನು ಸ್ವೀಕರಿಸಿ ಆ ಬಡಕುಟುಂಬದ ಮೇಲೆ ಅನುಗ್ರಹ ವೃಷ್ಟಿಯನ್ನು ಕರೆದು ತಪೋನುಷ್ಠಾನಕ್ಕಾಗಿ ತೆರಳಿದನು ತನ್ನ ಕಾಡಿನ ಗೂಡಿಗೆ.

ಕುತ್ಸನು ತನ್ನ ಜೀವನ ವೃತ್ತಿಯನ್ನು ಚೆನ್ನಾಗಿ ನಿರ್ಭತ್ಸನೆ ಮಾಡಿ ಹಿತೋಪದೇಶವನ್ನು ಮಾಡಿದ್ದು ಬ್ರಾಹ್ಮಣಿಯ ಮನಸ್ಸಿನ ಮೇಲೆ ಒಳ್ಳೇ ಪರಿಣಾಮಮಾಡಿತು. ಪಶ್ಚಾತ್ತಾಪವು ಅವಳ ಮನಸ್ಸಿನ ಮೂಲೆ ಮೂಲೆಗಳನ್ನೆಲ್ಲ ಕೊರೆಯಿತು. ತಾನು ಮಾಡಿದ ದುಷ್ಕರ್ಮಗಳೆಲ್ಲವೂ ನೆನಪಾಗಿ ಪಶ್ಚಾತ್ತಾಪದ ಉರಿಯಲ್ಲಿ ಮನದಲ್ಲಿಯೇ ನೊಂದು ಬೆಂದು ಹೋದಳು ಆ ಸ್ವಚ್ಛಂದ ಸುಂದರಿ. ಕುತ್ಸ ಬ್ರಾಹ್ಮಣನು ತನ್ನನ್ನು ತುಚ್ಛೀಕರಿಸಿದರೂ ಹೋಗುವಾಗ ಬಿಚ್ಚು ಮಾತಿನಲ್ಲಿ ತನಗೆ ಹೇಳಿದ ಕೆಲವು ಹಿತನುಡಿಗಳನ್ನು ಮತ್ತೆ ಮತ್ತೆ ಅವಳು ತನ್ನ ಮನದಲ್ಲಿ ವಿಚಾರಿಸಿದಳು.

''ಕಾರ್ತೀಕ ಮಾಸದಲ್ಲಿ ಕುತ್ಸ ಮುನಿಗಳು ಹೇಳಿದಂತೆ ನಾನು ತಪ್ಪದೇ ಪ್ರಾತಃಸ್ನಾನ, ಹರಿಯ ಧ್ಯಾನ, ಏಕಾದಶಿಯಂದು ಉಪೋಷಣ, ದೀಪದಾನ, ದ್ವಿದಳ ಧಾನ್ಯ ವರ್ಜನ, ಮುಂತಾದ ಕಾರ್ತೀಕ ವ್ರತವನ್ನೆಲ್ಲ ಅನುಷ್ಠಾನ ಮಾಡುವೆನು'' ಹೀಗೆ ನಿಶ್ಚಯಿಸಿ ಅವಳು ಕಾರ್ತೀಕ ವ್ರತವನ್ನು ಸಂಕಲ್ಪ ಮಾಡಿದಳು. ಆದರಂತೆ ಕಾರ್ತೀಕ ಮಾಸವು ಬಂದಕೂಡಲೇ ಪ್ರತಿದಿನವೂ ಅಂತರಿಕ್ಷದ ವಕ್ಷಸ್ಥಳದಲ್ಲಿ ನಕ್ಷತ್ರಗಳು ಮಿನುಗುತ್ತಿರುವಾಗಲೇ ಜಲಾಶಯದಲ್ಲಿ ಸ್ನಾನ ಮಾಡಿ ಭಗವಂತನ ಪೂಜೆ, ಧ್ಯಾನ, ಗೋ, ಗೌರೀ, ತುಳಸೀ ಪೂಜೆಗಳನ್ನು ಮಾಡಿ ವಿಶೇಷವಾಗಿ ಬೆಳಗು ಮುಂಜಾವು ಹಾಗೂ ಸಾಯಂಕಾಲ, ಹಾಗೂ ರಾತ್ರಿ ಕಾಲಗಳಲ್ಲಿ ಎಲ್ಲ ಕಡೆಗಳಲ್ಲಿ ದೀಪವನ್ನು ಹಚ್ಚಿಟ್ಟು ಭಕ್ತಿಯಿಂದ ದೀಪದಾನ

ಮಾಡುತ್ತಿದ್ದಳು. ಹೀಗೆ ಅನೇಕ ವರ್ಷಗಳ ಕಾಲ ಕಾರ್ತೀಕಸ್ನಾನ, ದೀಪದಾನ, ಹರಿಧ್ಯಾನ, ಈ ಮೂರನ್ನೂ ತಪ್ಪದೇ ಮಾಡುತ್ತಲಿದ್ದಳು. ಕೆಲವು ವರ್ಷಗಳ ನಂತರ ವೃದ್ಧಾಪ್ಯದ ಮೂಲಕ ಅವಳಿಗೆ ಮರಣವು ಒದಗಿತು. ಅವಳು ಇಲ್ಲಿಂದ ನೇರವಾಗಿ ಸ್ವರ್ಗಲೋಕಕ್ಕೆ ಹೋಗಿ ಸಾವಿರಾರು ವರ್ಷಗಳವರೆಗೆ ಅಲ್ಲಿಯ ಅಸಂಖ್ಯ ಸುಖಸಮೃದ್ಧಿ, ಸೌಭಾಗ್ಯ, ವೈಭವಗಳನ್ನು ಅನುಭವಿಸಿ ಕೊನೆಗೆ ಹರಿಮಂದಿರವನ್ನು ಸಾರಿದಳು.

ಕಾರ್ತೀಕ ಮಾಸದಲ್ಲಿ ಹೀಗೆ ಪ್ರಾತಃಸ್ನಾನ ದೀಪದಾನ ಹರಿಧ್ಯಾನ ಮತ್ತು ನಿಷಿದ್ಧ ಪದಾರ್ಥ ತ್ಯಾಗ ಹಾಗೂ ಹರಿಕಥಾ ಶ್ರವಣ ಈ ಐದು ನಿಯಮಗಳನ್ನು ಪಾಲಿಸುವದಕ್ಕೆ 'ಕಾರ್ತಿಕ ವ್ರತ' ಎಂದು ಹೇಳುವರು. ಇಂಥ ಅತ್ಯುತ್ತಮವಾದ ಕಾರ್ತೀಕ ವ್ರತವನ್ನು ಸರಿಯಾಗಿ ಆಚರಣ ಮಾಡುವವರು ಎಂಥ ಪಾಪಿಷ್ಠರಾದರೂ ಉದ್ಧಾರ ಹೊಂದುವರು. ಇದಕ್ಕೆ ಪತಿತಳೂ ದುಷ್ಟಭ್ರಷ್ಟಳೂ ಮಹಾಪಾಪಿಷ್ಠಳೂ ಆದ ಈ ಬ್ರಾಹ್ಮಣ ವಿಧವೆಯ ಇತಿಹಾಸವೇ ಸಾಕ್ಷಿ. ಪಾಪಿಗಳಿಗೆಲ್ಲ ಉದ್ಧಾರದ ಹಾಗೂ ಮೋಕ್ಷ ಪ್ರಾಪ್ತಿಯ ಒಂದೇ ಒಂದಾದ ನಿರಪಾಯ ಉಪಾಯ ಎಂದರೆ, ಈ ಕಾರ್ತೀಕ ವ್ರತದ ಅನುಷ್ಠಾನ.

## ದೀಪ ದಾನದ ಮಹಿಮೆ

**ಅಧ್ಯಾಯ - ೫೫**

**ಬ್ರಹ್ಮದೇವ:-** ನಾರದ, ಕಾರ್ತೀಕ ಮಾಸದಲ್ಲಿ ಉಷಃಕಾಲದಲ್ಲಿ ಸ್ನಾನ ಮಾಡಿ ಆಕಾಶದೀಪವನ್ನು ಹಚ್ಚಿದರೆ, ಸರ್ವಪಾಪಗಳ ಪರಿಹಾರವಾಗಿ ಸಂಪತ್ತು ಹಾಗೂ ಸೌಭಾಗ್ಯಗಳ ಸಮೃದ್ಧಿ ಉಂಟಾಗುವದು. ಆದುದರಿಂದ ಈ ಕಾರ್ತೀಕ ಮಾಸದಲ್ಲಿ ಸ್ನಾನ, ದಾನ, ಧ್ಯಾನಗಳ ಜೊತೆಗೆ ಆಕಾಶದೀಪದಾನವನ್ನು ಕೂಡ ತಪ್ಪದೇ ಮಾಡಬೇಕು.

ತಮ್ಮ ಮನೆ ಮೇಲೆ ಮತ್ತು ಶ್ರೀವಿಷ್ಣುವಿನ ದೇವಾಲಯಗಳ ಮೇಲು ಮಾಳಿಗೆ ಪ್ರಾಕಾರ, ಗೋಪುರ, ಶಿಖರ, ಕೋಟೆಯ ಗೋಡೆ, ದ್ವಾರ, ದ್ವಾರದ ಎಡ ಬಲ ಕಟ್ಟೆ ಹಾಗೂ ಸುತ್ತುಮುತ್ತು ದೀಪಗಳನ್ನು ಒಂದು ತಿಂಗಳವರೆಗೆ ರಾತ್ರಿ ಕಾಲದಲ್ಲಿ ಹಚ್ಚಿ ಇಟ್ಟು ಎಣ್ಣೆ ಹಾಕಿ ಬೆಳಗುವಂತೆ ಮಾಡಬೇಕು. ಹಾಗೂ ನಸುಕಿನಲ್ಲಿ ಎದ್ದ ಕೂಡಲೇ ಸ್ನಾನ ಮಾಡಿ ಮಡಿಯಿಂದ ಆಕಾಶದೀಪವನ್ನು ಎತ್ತರ ಸ್ಥಳದಲ್ಲಿ ಹಚ್ಚಿ ಇಡಬೇಕು. ದೇವಸ್ಥಾನದ ಮಾಳಿಗೆ ಅಥವಾ ತಾವಿದ್ದ ಮನೆಯ ಮಾಳಿಗೆಯ ಮೇಲೆ ಪ್ರಣತಿ ನೀಲಾಂಜನ ಅಥವಾ ಆಕಾಶ ಬುಟ್ಟಿಗಳಲ್ಲಿ ದೀಪವನ್ನು ಹಚ್ಚಿ ಇಡುವಾಗ ಈ ಕೆಳಗಿನ ಮಂತ್ರವನ್ನು ಹೇಳಬೇಕು.

**''ದಾಮೋದರಾಯ ವಿಶ್ವಾಯ ವಿಶ್ವರೂಪ ಧರಾಯ ಚ ।**
**ನಮಸ್ಕೃತ್ವಾ ಪ್ರದಾಸ್ಯಾಮಿ ವ್ಯೋಮದೀಪಂ ಹರಿಪ್ರಿಯಂ ॥**

ಈ ಮಂತ್ರದಿಂದ ದೀಪವನ್ನು ಹಚ್ಚಿಟ್ಟು ವಿಶ್ವರೂಪಿಯಾದ ವಿಶ್ವ ನಿಯಾಮಕನಾದ ದಾಮೋದರನೇ! ನಿನಗೆ ನಮಸ್ಕಾರವನ್ನು ಮಾಡಿ ನಿನಗೆ ಆಕಾಶದೀಪವನ್ನು ದಾನ ಮಾಡುತ್ತೇನೆ'' ಹೀಗೆ ಹೇಳಿ, ಆಕಾಶದೀಪ ದಾನವನ್ನು ಮಾಡಿದರೆ ಸುಪ್ರೀತನಾಗುವನು ಆ ಮಾಸದ ಅಭಿಮಾನಿಯಾದ ಕಾರ್ತೀಕ ರಾಧಾ ದಾಮೋದರನು.

ಪೂರ್ವಕಾಲದಲ್ಲಿ ಸುನಂದನ ಎಂಬ ಓರ್ವ ಮಹಾರಾಜನು ಇದ್ದನು. ಮಹಾ ಧರ್ಮಿಷ್ಠ ಆ ದೊರೆ. ಪರಮ ಭಗವದ್ಭಕ್ತನೂ ಕೂಡ. ಅವನು ಬ್ರಾಹ್ಮ ಮುಹೂರ್ತದಲ್ಲಿ ಪ್ರತಿದಿನವೂ ಎದ್ದು ಪ್ರಾತಃಸ್ನಾನವನ್ನು ಮಾಡಿ ಮೇಲೆ ಹೇಳಿದ ಮಂತ್ರವನ್ನು ಉಚ್ಚರಿಸಿ ಆಕಾಶದೀಪ ದಾನವನ್ನು ಮಾಡುತ್ತಿದ್ದನು.

ಅನಂತರ ಧ್ಯಾನ, ಭಜನ, ಗಾಯನ, ನಾಮಸ್ಮರಣಗಳನ್ನು ಒಂದು ಕ್ಷಣವೂ ಬಿಡದಂತೆ ಮಾಡುತ್ತಿದ್ದನು. ಮಧ್ಯಾಹ್ನದಲ್ಲಿ ಮತ್ತೆ ಸ್ನಾನಮಾಡಿ ವಿಧಿಪೂರ್ವಕವಾಗಿ ವಿಷ್ಣುವಿನ ಪೂಜೆ ಮಾಡಿ ಸಹಸ್ರನಾಮಗಳಿಂದ ತುಳಸೀ ದಳಗಳನ್ನು ಶ್ರೀಹರಿಯ ಮೂರ್ತಿಗೆ ಏರಿಸಿ ಭಕ್ತಿಯಿಂದ ದೀಪಾರಾಧನೆಯನ್ನು ಮಾಡುತ್ತಿದ್ದನು. ಹೀಗೆ ಒಂದು ತಿಂಗಳವರೆಗೆ ಮಾಡಿ ಕಾರ್ತೀಕ ಮಾಸವು ಮುಗಿದ ಬಳಿಕ ತಾನು ಒಂದು ತಿಂಗಳವರೆಗೆ ಮಾಡಿದ ಕಾರ್ತೀಕ ವ್ರತದ ಉದ್ಯಾಪನೆಯನ್ನು ಮಾಡಿ ಸದಾಚಾರಿಗಳಾದ ಅನೇಕ ಜ್ಞಾನಿಗಳನ್ನು ಕರೆದು ಭೋಜನ ಮಾಡಿಸಿ ಈ ವಿಷ್ಣು ವ್ರತವನ್ನು ಪೂರ್ತಿಗೊಳಿಸಿದನು.

ಈ ಕಾರ್ತೀಕ ವ್ರತದ ಅನುಷ್ಠಾನದ ಪುಣ್ಯ ಪ್ರಭಾವದಿಂದ ಆ ಸುನಂದನ ಮಹಾರಾಜನು ಈ ಲೋಕದಲ್ಲಿ ಇರುವವರೆಗೆ ಮಡದಿ ಮಕ್ಕಳು ಮೊಮ್ಮಕ್ಕಳು, ಹಾಗೂ ಬಂಧು ಬಾಂಧವ ಪರಿವಾರದೊಂದಿಗೆ ಅನೇಕ ವರ್ಷ ಐಹಿಕ ಸುಖೋಪಭೋಗ ಸೌಭಾಗ್ಯವನ್ನೆಲ್ಲ ಪಡೆದನು. ಕೊನೆಗಾಲದಲ್ಲಿ ವಿಷ್ಣುವಿನ ಧ್ಯಾನ ಮಾಡುತ್ತ ಪಾಂಚಭೌತಿಕ ಶರೀರವನ್ನು ತ್ಯಾಗ ಮಾಡಿದನು. ಆಗಲೇ ಅವನನ್ನು ಕರೆಯಲು ಬಂದು ನಿಂತಿತ್ತು ವೈಕುಂಠ ಲೋಕದಿಂದ ವಿಷ್ಣುವಿಮಾನ. ತನ್ನ ಮಹಾರಾಣಿಯೊಂದಿಗೆ ಶಂಖ ಚಕ್ರ ಗದಾ ಪದ್ಮ ಧಾರಿಯಾದ ದಿವ್ಯ ರೂಪವನ್ನು ಪಡೆದು ವೈಕುಂಠಕ್ಕೆ ಹೋಗಿ ವಿಷ್ಣುವಿನ ಸಾರೂಪ್ಯ ಮೋಕ್ಷವನ್ನು ಹೊಂದಿ ಧನ್ಯನಾದ ಆ ಮಹಾರಾಜ. ಆದುದರಿಂದ ಕಾರ್ತೀಕ ಮಾಸದಲ್ಲಿ ಮನುಷ್ಯ ಜನ್ಮವನ್ನು ಹೊಂದಿದ ಮಾನವರು ಸ್ನಾನ ಹಾಗೂ ದೀಪ ದಾನಗಳನ್ನು ಶ್ರೀಹರಿಯ ಪ್ರೀತಿಯ ಉದ್ದೇಶದಿಂದ ಮಾಡಿದರೆ ಅವರಿಗೆ ಯಮರಾಜನ ಅಥವಾ ಯಮದೂತರ ದರ್ಶನವು ಎಂದೆಂದಿಗೂ ಆಗುವದಿಲ್ಲ. ವಿಷ್ಣುಲೋಕಪ್ರಾಪ್ತಿ ಆಗದೇ ಇರುವದಿಲ್ಲ.

## ಆಕಾಶ ದೀಪದಿಂದ ಶ್ರೀಕಾಂತನಿಗೆ ಪ್ರೀತಿ

ಈ ಕಾರ್ತೀಕ ಮಾಸದಲ್ಲಿ ಶ್ರೀಹರಿಯ ಉದ್ದೇಶದಿಂದ ಆಕಾಶದೀಪ ದಾನಮಾಡಿದಂತೆ ಪಿತೃಗಳಿಗಾಗಿ ಒಂದು ಆಕಾಶದೀಪ ದಾನವನ್ನು ಮಾಡಬೇಕು. ಪಿತೃಗಳಿಗಾಗಿ ದೀಪವನ್ನು ಬೆಳಗಿಸುವದಕ್ಕಿಂತ ಮೊದಲು ಈ ಮಂತ್ರವನ್ನು ಹೇಳಬೇಕು.

**''ನಮಃಪಿತೃಭ್ಯಃ ಪ್ರೇತೇಭ್ಯೋ ನಮೋ ಧರ್ಮಾಯ ವಿಷ್ಣವೇ ।**
**ನಮೋ ಯಮಾಯ ರುದ್ರಾಯ ಕಾಂತಾರಪತಯೇ ನಮಃ ॥**

ಈ ಮಂತ್ರವನ್ನು ಹೇಳಿ ಪಿತೃಗಳ ಉದ್ದೇಶದಿಂದ ಆಕಾಶದೀಪ ದಾನವನ್ನು ಮಾಡಿದರೆ ನರಕದಲ್ಲಿ ತಮ್ಮ ದುಷ್ಕರ್ಮದಿಂದ ನರಳುತ್ತಿರುವ ಪಿತೃಗಳು ಕೂಡ ಪುನೀತರಾಗಿ ಸ್ವರ್ಗಲೋಕಕ್ಕೆ ಪ್ರಯಾಣ ಮಾಡುವರು. ಈ ಕಾರ್ತೀಕ ಮಾಸದಲ್ಲಿ ದೇವಾಲಯ ನದೀ ದಂಡೆ, ಬೀದಿಯ ಎಡ ಬದಿಗಳಲ್ಲಿ. ಮತ್ತು ಮಲಗುವ ಸ್ಥಾನದಲ್ಲಿ, ದೇವರ ಎದುರು ತುಳಸೀ ಕಟ್ಟೆ, ಗೋಶಾಲೆ, ಮುಂತಾದ ಸ್ಥಳಗಳಲ್ಲಿ ದೀಪವನ್ನು ಹಚ್ಚಿ ಉರಿಸಿ ಬೆಳಗುವಂತೆ ಮಾಡಿದರೆ, ಅವನಿಗೆ ಎಲ್ಲ ವಿಧವಾದ ಐಶ್ವರ್ಯವು ಸಕಲವಿಧ ಸೌಭಾಗ್ಯವು ಈ ಲೋಕದಲ್ಲಿ ಬದುಕಿ ಇರುವವರೆಗೆ ತಾನಾಗಿಯೇ ಲಭಿಸುವದು. ಅನಂತರ ವಿಷ್ಣುಲೋಕ ಪ್ರಾಪ್ತಿಯೂ ಆಗುವದು. ಮುಳ್ಳು, ಕಲ್ಲು, ಹೆಂಟೆ, ಕಂಟಿ, ಕುಂಟೆ, ಕೂಪ, ಸರೋವರ, ನದೀತೀರ, ಬೆಟ್ಟ, ತೆಗ್ಗು, ತೆವರು, ದಾರಿಕೂಟ, ಕೂಡುದಾರಿ, ಮುಂತಾದ ಕಡೆಗಳಲ್ಲಿ ದೀಪಗಳನ್ನು ಹಚ್ಚಿ ಯಾರು ಇಡುವರೋ ಅವರು ಎಂದೂ ನರಕದದರುಶನವನ್ನೇ ಮಾಡುವದಿಲ್ಲ.

ಹಿಂದೆ ಧರ್ಮನಂದನ ಎಂಬ ಮಹಾರಾಜನು ಆಕಾಶದೀಪ ದಾನದ ಪ್ರಭಾವದಿಂದ ಶ್ರೇಷ್ಠವಾದ ವೈಕುಂಠ ವಿಮಾನದಲ್ಲಿ ಕುಳಿತುಕೊಂಡು ವಿಷ್ಣುಲೋಕಕ್ಕೆ ಪ್ರಸ್ಥಾನ ಬೆಳೆಸಿದನು. ಕಾರ್ತೀಕ ಮಾಸದಲ್ಲಿ ಭಗವಾನ್ ವಿಷ್ಣುವಿನ ಎದುರು ಕರ್ಪೂರದ ದೀಪವನ್ನಾಗಲೀ ಬತ್ತಿಯ ಆರತಿಯನ್ನಾಗಲೀ ಬೆಳಗಿದರೆ. ಅವರ ವಂಶದಲ್ಲಿ ಹುಟ್ಟಿದವರೆಲ್ಲರೂ ಪರಮಭಗವದ್ಭಕ್ತರು ಆಗಿ ಕೊನೆಗೆ ಮೋಕ್ಷವನ್ನು ಪಡೆಯುವರು.

ಪೂರ್ವಕಾಲದಲ್ಲಿ ಓರ್ವ ದನ ಕಾಯುವ ಹುಡುಗನು ಅಮಾವಾಸ್ಯಾ ದಿನದಂದು ವಿಷ್ಣುಮಂದಿರದಲ್ಲಿ ವಿಪುಲವಾಗಿ ದೀಪಾರಾಧನೆಯನ್ನು ನಡೆಸಿದನು. ಆದರಿಂದ ಅವನು ಇಹಲೋಕದಲ್ಲಿಯೇ ಚಕ್ರವರ್ತಿ ಮಹಾರಾಜನಾಗಿ ಮೆರೆದು ಮುಂದೆ ಮೋಕ್ಷ ಮಂದಿರದಲ್ಲಿ ಆನಂದದಿಂದ ಪ್ರವೇಶಗೈದನು.

## ಕಾರ್ತಿಕಮಾಸದಲ್ಲಿ ತುಳಸೀ ವೃಕ್ಷವನ್ನು ಬೆಳೆಸುವ ಮತ್ತು ಪೂಜಿಸುವ ಫಲ

**ಅಧ್ಯಾಯ - ೩೬**

**ಬ್ರಹ್ಮದೇವ:-** ಕಾರ್ತಿಕ ಮಾಸದಲ್ಲಿ ನಿಜವಾದ ವಿಷ್ಣುಭಕ್ತನಾದವನು ಪ್ರಾತಃಕಾಲದಲ್ಲಿಯೇ ಎದ್ದು ವಿಧಿಪೂರ್ವಕವಾಗಿ ಸ್ನಾನಮಾಡಿ ಪವಿತ್ರವಾದ ತುಳಸೀ ದಳಗಳಿಂದ ಶ್ರೀಹರಿಯ ಪೂಜೆಯನ್ನು ಮಾಡಬೇಕು ಪರಮ ಭಕ್ತಿಯಿಂದ. ಭಕ್ತಿಯಿಲ್ಲದೇ ಬಂಗಾರದ ಹೂಗಳಿಂದ ಭಗವಂತನ ಪೂಜೆ ಮಾಡಿದರೂ ಶ್ರೀಹರಿ ಸ್ವೀಕರಿಸಲಾರ ಅಂಥ ಪೂಜೆಯನ್ನು. ಭಗವಂತನ ಈ ಭಕ್ತಿ ಪ್ರಧಾನವಾದ ಈ ಪೂಜೆಗೆ ಯಾವುದೇ ಜಾತಿ ಮತ ಪಂಥಗಳ ನಿರ್ಬಂಧವಿಲ್ಲ. ಎಲ್ಲ ಜಾತಿ ಜನಾಂಗದ ಜನರೂ ಕೂಡ ಕಾರ್ತೀಕ ಮಾಸದಲ್ಲಿ ಪ್ರಾತಃಸ್ನಾನ, ಹರಿಯಧ್ಯಾನ, ಆಕಾಶದೀಪ ದಾನ ಮತ್ತು ತಮ್ಮ ತಮ್ಮ ಜಾತಿಗೆ ಉಚಿತವಾದ ಹರಿಯ ಪೂಜೆಗಳನ್ನು ಮಾಡಿದರೆ ಶ್ರೀಹರಿಯ ಅತ್ಯಂತ ಸಂತುಷ್ಟನಾಗುವನು. ಭಕ್ತಿಯಿಲ್ಲದ ಯಾವ ಧರ್ಮಕರ್ಮವೂ ಕಾರಣವಾಗಲಾರದು ಹರಿ ಪ್ರೀತಿಗೆ.

ಪ್ರತಿದಿನವೂ ಸಮೃದ್ಧವಾಗಿ ತುಳಸೀ ದಳಗಳನ್ನು ಆಯ್ದು ತಂದು ಭಗವಂತನ ಸಹಸ್ರನಾಮಗಳಿಂದ ಒಂದೊಂದು ದಳವನ್ನು ಏರಿಸುತ್ತಾ ಪೂಜೆ ಮಾಡಿದರೆ ಪರಮ ಪ್ರೀತನಾಗುತ್ತಾನೆ ತುಳಸೀ ದಳ ಪ್ರಿಯನಾದ ಆ ಪರಮಾತ್ಮ. ಸಾಕಷ್ಟು ತುಳಸೀ ದಳಗಳು ಸಿಕ್ಕದಿದ್ದರೆ ಒಂದು ಎರಡು ಅಥವಾ ಅರ್ಧ ತುಳಸಿಯ ಎಲೆಗಳನ್ನಾದರೂ ಏರಿಸಿ ಭಕ್ತಿಯಿಂದ ಪರಮಾತ್ಮನ ಪೂಜೆಯನ್ನು ಮಾಡಿದರೆ ಪರಮಾತ್ಮನು ತಾನಾಗಿಯೇ ಬಂದು ದರ್ಶನವನ್ನು ನೀಡುವನು.

ಪೂರ್ವಕಾಲದಲ್ಲಿ ವಿಷ್ಣುದಾಸ ಎಂಬ ಭಗವದ್ಭಕ್ತನು ಕೇವಲ ತುಳಸೀ ದಳಗಳಿಂದ ವಿಷ್ಣುಮೂರ್ತಿಯ ಪೂಜೆಯನ್ನು ಮಾಡಿ ವೈಕುಂಠಕ್ಕೆ ವೈಷ್ಣವ ವಿಮಾನದಲ್ಲಿ ಕುಳಿತುಕೊಂಡು ಹೋದನು. ಅವನು ಭಕ್ತಿಯಿಂದ ಮಾಡಿದ ತುಳಸಿಯ ಪೂಜೆಯ ಮುಂದೆ ಆ ದೇಶದ ಮಹಾರಾಜನಾದ ಚೋಳರಾಜನು ಬಂಗಾರದ ಹೂಗಳಿಂದ ಮಾಡಿದ ಶ್ರೀಹರಿಯ ಪೂಜೆಯು ಕೂಡ, ನಿಷ್ಫಲವೂ ಅಮುಖ್ಯವೂ ಆಯಿತು.

## ತುಳಸಿಯ ಮಾಹಾತ್ಮ್ಯ

ತುಳಸಿಯು ಪಾಪಗಳನ್ನೆಲ್ಲ ನಾಶಮಾಡುವಳು. ಪುಣ್ಯಗಳನ್ನು ಅಭಿವೃದ್ಧಿಗೊಳಿಸುವಳು. ತುಳಸಿಯ ಗಿಡವನ್ನು ಮನುಷ್ಯನು ಹಚ್ಚಿದ ಬಳಿಕ ಅದು ಬೆಳೆದು ಅದರ ಎಷ್ಟು ಬೇರುಗಳು ಹಾಗೂ ಟೊಂಗೆಗಳು ಭೂಮಿ ಆಕಾಶಗಳಲ್ಲಿ ಪಸರಿಸುವವೋ ಅಷ್ಟು ಸಾವಿರ ವರ್ಷ ಮಾನವನು ಬ್ರಹ್ಮಲೋಕದಲ್ಲಿ ಸುಪ್ರತಿಷ್ಠಿತನಾಗುವನು. ತುಳಸಿಯ ದಳವನ್ನು ನೀರಿನಲ್ಲಿ ಹಾಕಿ ಸ್ನಾನಮಾಡಿದರೆ ಗಂಗಾಸ್ನಾನದ ಫಲವೂ ವಿಷ್ಣು ಲೋಕಪ್ರಾಪ್ತಿಯೂ ಅನಾಯಾಸವಾಗಿ ಲಭಿಸುವವು. ತುಳಸಿಯ ವೃಂದಾವನವು ಮನೆಯ ಮುಂದೆ ಇದ್ದರೆ ಅದೊಂದು ತೀರ್ಥ. ಪರಮ ಪವಿತ್ರಕ್ಷೇತ್ರ. ಯಮದೂತರು ಅತ್ತ ಸುಳಿಯಲಾರರು. ತುಳಸಿಯ (ಕಟ್ಟಿಗೆ) ಕಾಷ್ಠವನ್ನು ತೆಯ್ದು ಗಂಧದಲ್ಲಿ ಬೆರಿಸಿ ದೇವರಿಗೆ ಏರಿಸಿ ಮೈಗೆ ಹಚ್ಚಿಕೊಂಡರೆ ಯಾವ ಪಾಪಗಳೂ ದೇಹಕ್ಕೆ ಸ್ಪರ್ಶ ಮಾಡಲಾರವು. ತುಳಸೀ ಬನದ ನೆರಳಿನಲ್ಲಿ ದೇವರ ಪೂಜೆ, ಬ್ರಾಹ್ಮಣರ ಸಮಾರಾಧನೆ, ಶ್ರಾದ್ಧ, ದಾನ ಧರ್ಮ ಮೊದಲಾದವುಗಳನ್ನು ಮಾಡಿದರೆ ವಿಷ್ಣು ಪ್ರೀತಿ ಅತ್ಯಧಿಕ. ಬಾಯಿ, ಕಿವಿ, ತಲೆಗಳ ಮೇಲೆ ತುಲಸಿಯ ಎಲೆಯನ್ನು ಇರಿಸಿಕೊಂಡವರ ಸಮೀಪ ಕೂಡ ಸುಳಿಯಲಾರರು ಯಮ ಅಥವಾ ಯಮದೂತರು. ತುಳಸಿಯ ಮಹಿಮೆಯನ್ನು ಪ್ರತಿದಿನವೂ ಕೇಳುವವರು ಪಾಪದಿಂದ ಮುಕ್ತರಾಗಿ ಬ್ರಹ್ಮಲೋಕಕ್ಕೆ ಹೋಗುವರು.

ಪೂರ್ವಕಾಲದಲ್ಲಿ ಕಾಶ್ಮೀರದಲ್ಲಿ ಹರಿಮೇಧ ಸುಮೇಧ ಎಂಬ ಹೆಸರಿನ ಇಬ್ಬರು ಬ್ರಾಹ್ಮಣರು ಇದ್ದರು. ಇಬ್ಬರೂ ಭಗವದ್ ಭಕ್ತರು. ವಿಷಯ ವಾಸನೆಯಿಂದ ವಿರಕ್ತರು. ಪುಣ್ಯಕರ್ಮಗಳಲ್ಲಿಯೇ ಆಸಕ್ತರು. ಅವರಿಬ್ಬರೂ ಕೂಡಿ ಒಮ್ಮೆ ತೀರ್ಥಯಾತ್ರೆಗೆ ಹೊರಟರು. ದಾರಿಯಲ್ಲಿ ಅವರು ಒಂದು ದುರ್ಗಮವಾದ ಅರಣ್ಯ ಪ್ರಾಂತದಲ್ಲಿ ಸಂಚರಿಸುವಾಗ ಮಾರ್ಗಾಯಾಸದಿಂದ ದಣಿದರು. ಹಸಿವೆಯ ಕಸಿವಿಸಿ, ಬಾಯಾರಿಕೆಯ ಸಂಕಟ, ಮಾರ್ಗದ ಆಯಾಸ ಮೂರೂ ಕೂಡಿ ಅವರೀರ್ವರೂ ಆ ಘೋರ ವನಪ್ರಾಂತದಲ್ಲಿ ವ್ಯಾಕುಲರಾಗಿ ನಿಂತುಕೊಂಡರು.

ಅಷ್ಟರಲ್ಲೇ ಅವರಿಗೆ ಆ ನಿರ್ಮಾನುಷವಾದ ಆ ನಿಬಿಡಾರಣ್ಯದಲ್ಲಿ ಒಂದು ವಿಶಾಲವಾದ ತುಳಸೀ ವನವು ಗೋಚರಿಸಿತು. ಅದನ್ನು ಕಂಡು ಸುಮೇಧನು ಹಸಿವೆ ಬಾಯಾರಿಕೆಗಳಿಂದ ಬಹಳಷ್ಟು ಬಳಲಿದ್ದರೂ ಎದ್ದು ಆ ತುಳಸೀ ವನಕ್ಕೆ ಪ್ರದಕ್ಷಿಣೆ ಹಾಕಿ ನಮಸ್ಕಾರವನ್ನು ಮಾಡಿದನು. ಅದನ್ನು ಕಂಡು ಅವನ ಮಿತ್ರನಾದ ಹರಿಮೇಧನು ನಗುತ್ತಾ ಪ್ರಶ್ನೆ ಮಾಡಿದನು. ''ಮಿತ್ರ, ನೀನು ತುಳಸೀ ವನವನ್ನು ಕಂಡ ಕೂಡಲೇ ಭಕ್ತಿಯಿಂದ ಅದಕ್ಕೆ ಏಕೆ ಪ್ರದಕ್ಷಿಣೆ ಹಾಕಿದೆ? ನಮಸ್ಕಾರವನ್ನು ಏಕೆ ಮಾಡಿದೆ?

ಸುಮೇಧ:- ಮಹನೀಯ! ಇಲ್ಲಿ ಬಿಸಿಲಿನ ಝಳವು ಸುಡುತ್ತಲಿದೆ. ಆದುದರಿಂದ ಇಲ್ಲಿಯೇ ಸಮೀಪವಿರುವ ಆಲದ ಮರದ ನೆರಳಿನಲ್ಲಿ ಹೋಗಿ ಕೂಡೋಣ. ಅಲ್ಲಿ ನಾನು ನಿನಗೆ ತುಳಸಿಯ ಮಹಿಮೆಯನ್ನು ಬಿತ್ತರಿಸುವೆನು.''

## ತುಳಸಿಯ ಉತ್ಪತ್ತಿಯ ಕೌತುಕದ ಕತೆ

ಹೀಗೆ ಸುಮೇಧನು ನುಡಿದ ಬಳಿಕ ಅವರಿಬ್ಬರೂ ಎದ್ದು ಆ ವಟ ವೃಕ್ಷದ ನೆರಳಿನಲ್ಲಿ ಬಂದು ಕುಳಿತರು. ಆ ಹೆಮ್ಮರದ ತಣ್ಣೆಳಲಿನಲ್ಲಿ ಕುಳಿತ ಹರಿಮೇಧನನ್ನು ಕುರಿತು

ಸುಮೇಧನು ಹೇಳಲು ಮೊದಲು ಮಾಡಿದನು. "ವಿಪ್ರೋತ್ತಮ, ಪುರಾತನ ಕಾಲದಲ್ಲಿ ಮಹರ್ಷಿ ದುರ್ವಾಸರು ಶಾಪ ಕೊಟ್ಟರು ಸುರರಾಜನಿಗೆ. ಆದರಿಂದ ಇಂದ್ರನ ಐಶ್ವರ್ಯವೆಲ್ಲವೂ ತೊಳೆದುಹೋಯಿತು. ಸ್ವರ್ಗ ಅಧಿಕಾರ ಕಳೆದು ಹೋಯಿತು. ಆಗ ಎಲ್ಲ ದೇವತೆಗಳು ಶ್ರೀಹರಿಗೆ ಶರಣು ಹೋದರು. ಅವನ ಆದೇಶದಂತೆ ಸುರಾಸುರರು ಕೂಡಿದರು. ಹಾಲಿನ ಹೆಗ್ಗಡಲನ್ನು ಕಡೆದರು. ಅದರಿಂದ ಐರಾವತ ಎಂಬ ಆನೆ, ಉಚ್ಚೈಶ್ರವ ಎಂಬ ಕುದುರೆ, ಕೌಸ್ತುಭ ಎಂಬ ರತ್ನ, ಕಲ್ಪವೃಕ್ಷ ಎಂಬ ಬಯಸಿದ್ದನ್ನು ನೀಡುವ ಮರ, ಲಕ್ಷ್ಮೀ ಎಂಬ ಸಂಪತ್ತಿನ ಅಧಿದೇವತೆ, ಧನ್ವಂತರಿ ಎಂಬ ಶ್ರೀಹರಿಯ ಅವತಾರ, ಮತ್ತು ಬೇರೆ ಬೇರೆ ಔಷಧಗಳು ಒಂದೊಂದಾಗಿ ಪ್ರಕಟವಾದವು.

ವಿಷ್ಣುವಿನ ಅವತಾರ ಭೂತನಾದ ಧನ್ವಂತರಿ ದೇವನು ಅಮೃತ ಕಲಶವನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಹೊರ ಬಂದನು. ಅವನ ಕೈಗಳಲ್ಲಿ ಪ್ರಾಣಿಗಳಿಗೆಲ್ಲ ಅಜರತೆಯನ್ನೂ ಅಮರತೆಯನ್ನೂ ಪ್ರದಾನ ಮಾಡುವ ಆ ಸೊದೆಯ ಹೊಂಗಿಂಡಿಗಳನ್ನು ಕಂಡು ಭಗವಂತನ ಕಂಗಳಿಂದ ಆನಂದ ಬಾಷ್ಪಗಳು ಉದುರಿ ಅವನು ಕೈಯಲ್ಲಿ ಹಿಡಿದಿರುವ ಅಮೃತ ಕಲಶದೊಳಗೆ ಬಿದ್ದವು. ಅದರಿಂದ ತತ್ಕಾಲದಲ್ಲಿ ಆ ಅಮೃತದ ಬಂಗಾರದ ಗಿಂಡಿಗಳಿಂದಲೇ ತುಳಸೀ ಗಿಡಗಳು ಉತ್ಪನ್ನವಾದವು. ಹಾಲು ಗಡಲಿನಲ್ಲಿ ಇದಕ್ಕೂ ಮೊದಲು ಹುಟ್ಟಿದ ಲಕ್ಷ್ಮೀದೇವಿಯನ್ನೂ ಅನಂತರ ಅಮೃತ ಕಲಶದಿಂದ ಉದ್ಭವಿಸಿದ ಈ ತುಳಸಿಯನ್ನೂ ಬ್ರಹ್ಮಾದಿದೇವತೆಗಳು ಶ್ರೀಹರಿಯ ಸೇವೆಗೆಂದು ಸಮರ್ಪಣಗೈದರು. ಅಂದಿನಿಂದ ತುಳಸಿಯು ಶ್ರೀದೇವಿಯಂತೆ ವಿಷ್ಣುವಿಗೆ ಪರಮ ಪ್ರೀತ್ಯಾಸ್ಪದವಾಯಿತು. ಆದುದರಿಂದಲೇ ನಾನು ಈಗ ಈ ತುಳಸೀ ವನವನ್ನು ನೋಡಿ ಅದಕ್ಕೆ ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕಿದೆನು."

ಸುಮೇಧನು ಈ ರೀತಿಯಾಗಿ ತುಳಸಿಯ ಮಹಿಮೆಯನ್ನು ಬಣ್ಣಿಸುತ್ತಿರುವಾಗಲೇ ಸೂರ್ಯನಂತೆ ಹೊಳೆಯುವ ಒಂದು ವಿಮಾನವು ಅವರ ಹತ್ತಿರ ಬಂದಿತು. ಅವರಿಬ್ಬರೂ ನೋಡುತ್ತಿರುವಂತೆಯೇ ಆ ವಟವೃಕ್ಷವು ಉರುಳಿ ಬಿದ್ದಿತು. ಅದರ ಒಳಗಿನಿಂದ ಇಬ್ಬರು ತೇಜಸ್ವೀ ಪುರುಷರು ಹೊರಬಿದ್ದು ಬಂದರು. ಹರಿಮೇಧ ಸುಮೇಧ ಇಬ್ಬರಿಗೂ ಅವರು ಬಂದು ವಂದನೆಗೈದರು. ಈ ಆಕಸ್ಮಿಕ ಘಟನೆಯಿಂದ ಚಕಿತರಾದ ಹರಿಮೇಧ ಸುಮೇಧರು ಹೊರಳಿ ಬಿದ್ದ ಆ ಹೆಮ್ಮರದಿಂದ ಹೊರಟು ಎದ್ದು ಬಂದ ಆ ಇಬ್ಬರು ದಿವ್ಯ ಪುರುಷರನ್ನು ಕೇಳಿದರು. "ಪುಣ್ಯಾತ್ಮರೇ! ನೀವು ಯಾರು? ನೋಡಲು ದೇವತೆಗಳಂತೆ ಕಾಣುವಿರಿ. ನಿಮ್ಮ ಕೊರಳಿನಲ್ಲಿ ಇರುವ ಮಂದಾರ ಮಾಲೆಯು ನಿಮ್ಮ ದೈವೀ ಭಾವಕ್ಕೆ ಸಾಕ್ಷಿಯಾಗಿದೆ."

**ತೇಜಸ್ವಿ ಪುರುಷರು:-** "ವಿಪ್ರಶ್ರೇಷ್ಠರೇ! ನೀವೇ ನಮ್ಮ ಉದ್ಧಾರಕರು. ನೀವಿಬ್ಬರೂ ನಮಗೆ ತಂದೆ ತಾಯಿ ಹಾಗೂ ಗುರು ಬಂಧುಗಳು"

ಹೀಗೆ ನುಡಿದು ಅವರಿಬ್ಬರಲ್ಲಿ ಹಿರಿಯನಾದ ಒಬ್ಬನು ತನ್ನ ಕಥೆಯನ್ನು ಹೇಳಿದನು. "ನನ್ನ ಹೆಸರು ಆಸ್ತಿಕ. ನಾನು ಇರುವದು ಸ್ವರ್ಗಲೋಕ. ಹಿಂದೆ ಒಂದು ದಿನ ನಾನು ನಂದನವನದಲ್ಲಿ ಕ್ರೀಡಾ ವಿನೋದಕ್ಕಾಗಿ ನನ್ನ ಪ್ರೇಯಸಿಯರೊಂದಿಗೆ ಹೋಗಿದ್ದೆ. ನಾನು ಅಲ್ಲಿ ನನ್ನ ಮನದನ್ನೆಯರೊಂದಿಗೆ ಚಕ್ಕಂದದಿಂದ ಸ್ವಚ್ಛಂದ ವಿಹಾರವನ್ನು ಮಾಡಿದೆ.

ನಂದನವನದ ಅಂಚಿನಲ್ಲಿ ಇರುವ ಒಂದು ಕ್ರೀಡಾಶೈಲದ ಮೂಲದಲ್ಲಿ ಲೋಮಶಮುನಿಯು ತಪಸ್ಸನ್ನು ಮಾಡುತ್ತ ಕುಳಿತಿದ್ದ. ಕ್ರೀಡಾಂಧರಾದ ನನ್ನ ಪ್ರೇಯಸಿಯರ ವಿಹಾರ ಭರದಲ್ಲಿ ಅವರ ಕೊರಳ ಹಾರವು ಮುನಿಯ ಮೈಮೇಲೆ ಹೋಗಿ ಬಿದ್ದಿತು. ಆದರಿಂದ ತಪೋನುಷ್ಠಾನ ನಿರತನಾದ ಲೋಮಶ ಮುನಿಗೆ ತಡೆದು ಕೊಳ್ಳಲಾರದಷ್ಟು ಸಿಟ್ಟು ಬಂದಿತು. ಆದರೂ ಮಹಾ ಸಂಯಮಿ ಆ ಮುನೀಶ್ವರ. ಕಾಮ ಕ್ರೋಧಗಳು ಅವನ ವಶದಲ್ಲಿ. ಇಂದ್ರಿಯಗಳೆಲ್ಲವೂ ಅವನ ಅಂಕಿತದಲ್ಲಿ. ಆದರಿಂದ ಸಾರಾಸಾರ ವಿಚಾರ ಮಾಡಿ ನೋಡಿದ ಆ ಮಹಾಮುನಿ. ಎಷ್ಟೆಂದರೂ ಸ್ತ್ರೀಯರು ಪರಾಧೀನರು. ಗಂಡನು ಹೇಳಿದಂತೆ ಇಚ್ಛೆ ಇರಲಿ ಇಲ್ಲದಿರಲಿ ಅವರು ಕುಣಿಯಬೇಕಾಗುತ್ತದೆ. ವಿಹಾರದ ಭರದಲ್ಲಿ ಈ ರಮಣಿಯರ ಕತ್ತಿನಲ್ಲಿಯ ಮುತ್ತಿನ ಮಾಲೆಯು ನನ್ನ ಮೇಲೆ ಬಿದ್ದಿದ್ದರೂ ಇದರ ತಪ್ಪು ಆ ಕಾಮೀ ಪುರುಷನದೇ. ಸ್ತ್ರೀಯರದಲ್ಲ. ನಾನು ತಪಸ್ಸು ಮಾಡುವ ಈ ಪುಣ್ಯಕ್ಷೇತ್ರದಲ್ಲಿ ಈ ಎಲ್ಲ ನಲ್ಲೆಯರೊಂದಿಗೆ ಇಲ್ಲಿ ಬಂದು ಕಾಮಕೇಲೀ ವಿಲಾಸದಲ್ಲಿ ತೊಡಗಿದ ಈ ಆಸ್ತಿಕನೇ ಇದರಲ್ಲಿ ಮಹಾ ಅಪರಾಧಿ. ಆದುದರಿಂದ ಇವನಿಗೆ ನಾನು ಶಾಪ ಕೊಡುವದು ಈಗ ಯೋಗ್ಯ'' ಹೀಗೆ ವಿಚಾರ ಮಾಡಿ ಆ ಲೋಮಶ ಮಹರ್ಷಿಯು ''ಮೂರ್ಖ, ನೀನು ಬ್ರಹ್ಮರಾಕ್ಷಸನು ಆಗಿ ಆಲದ ಮರದಲ್ಲಿ ನೆಲಿಸು'' ಎಂದು ಶಾಪ ಕೊಟ್ಟನು.

ಇದನ್ನು ಕೇಳಿ ದುಃಖತಪ್ತನಾದ ನಾನು ಆ ಮುನಿ ಪುಂಗವನ ಪದಪಂಕಜಗಳಿಗೆ ಪ್ರಣಾಮಗೈದು ''ಅಪರಾಧವನ್ನು ಕ್ಷಮಿಸಬೇಕು'' ಎಂದು ಪ್ರಾರ್ಥಿಸಿಕೊಂಡೆ. ಆಗ ಕರುಣಾಶಾಲಿಗಳಾದ ಆ ಮಹರ್ಷಿಗಳು ಪ್ರಸನ್ನರಾಗಿ ''ನೀನು ಸದಾಚಾರಿ ಆದ ಓರ್ವ ಹರಿಭಕ್ತನ ಮುಖದಿಂದ ತುಳಸಿಯ ಮಹಿಮೆಯನ್ನು ಶ್ರವಣ ಮಾಡಿದ ದಿನವೇ ಈ ಶಾಪದಿಂದ ಮುಕ್ತಿಯಾಗುವದು. ಮತ್ತು ತುಳಸಿಯ ಮಹಿಮೆ ಹಾಗೂ ಶ್ರೀಹರಿಯ ದಿವ್ಯನಾಮ ಮಹಿಮೆಗಳ ಶ್ರವಣ ಬಲದಿಂದ ನೀನು ಶಾಪಮುಕ್ತನೂ ಪಾಪ ಮುಕ್ತನೂ ಆಗಿ ಮುಕ್ತಿಯನ್ನು ಹೊಂದುವೆ'' ಎಂದು ಉಶ್ಶಾಪವನ್ನು ನೀಡಿದರು. ಮಹನೀಯರೇ ! ಹೀಗೆ ಲೋಮಶ ಮುನಿಗಳ ಶಾಪದಿಂದ ನಾನು ಬಹುಕಾಲದಿಂದ ಬ್ರಹ್ಮರಾಕ್ಷಸನಾಗಿ ಬಿದ್ದುಕೊಂಡಿದ್ದೆ ಈ ಆಲದ ಮರದಲ್ಲಿ. ಇಂದು ಸುದೈವದಿಂದ ನಿಮ್ಮ ಮುಖದಿಂದ ಶ್ರೀಹರಿಯ ಹಾಗೂ ತುಳಸಿಯ ಮಹಿಮೆಯನ್ನು ಕೇಳಿ ನನಗೆ ಆ ಶಾಪದಿಂದಲೂ ಈ ಬ್ರಹ್ಮರಾಕ್ಷಸ ಜನ್ಮದಿಂದಲೂ ವಿಮೋಚನೆಯಾಯಿತು. ನನ್ನನ್ನು ಉದ್ಧರಿಸಿದ ನಿಮಗೆ ನನ್ನ ಅನಂತ ವಂದನೆಗಳು.

## ಗುರುವಿನ ಧಿಕ್ಕಾರದಿಂದ ರಕ್ಕಸಜನ್ಮ

ವಟ ವೃಕ್ಷದಿಂದ ಒಮ್ಮೆಲೇ ಪ್ರಕಟರಾದ ಆ ದಿವ್ಯ ಪುರುಷರಲ್ಲಿ ಹಿರಿಯನು ಹೀಗೆ ತನ್ನ ಹಿಂದಿನ ಇತಿಹಾಸವನ್ನು ಹೇಳಿದ ಬಳಿಕ ಕಿರಿಯನೂ ಕೂಡ ಕೈಜೋಡಿಸಿ ತನ್ನ ಕತೆಯನ್ನು ಬಿತ್ತರಿಸಲು ಸುರುಮಾಡಿದನು. ''ಪೂಜ್ಯರೇ! ನಾನೂ ಮೊದಲು ಓರ್ವ ಜ್ಞಾನಿ, ಮೌನಿ, ಧ್ಯಾನಿ, ದಾನಿ, ಮುನಿ ಆಗಿದ್ದೆ. ಒಂದು ದಿನ ದುರ್ದೈವದಿಂದ ಜ್ಞಾನದ ಗರ್ವತುಂಬಿ ಉನ್ಮಾದದಿಂದ ಗುರುಗಳನ್ನು ಧಿಕ್ಕರಿಸಿ, ಅವರ ಆಜ್ಞೆಯನ್ನು ಉಲ್ಲಂಘಿಸಿದೆ. ಆದರಿಂದ ನನಗೂ ಕೂಡ ಈ ನನ್ನ ಮಿತ್ರನಂತೆ ಬ್ರಹ್ಮರಾಕ್ಷಸ ಜನ್ಮವು ಬಂದಿತು. ನಾನೂ ಕೂಡ ಇದೇ ಆಲದ ಮರದಲ್ಲಿ ವಾಸವಾಗಿದ್ದೆ. ನಿಮ್ಮಿಬ್ಬರ ಸಂಭಾಷಣೆಯಲ್ಲಿ ತುಳಸಿ ಹಾಗೂ ಶ್ರೀಹರಿಯ

ನಾಮಮಹಿಮೆ ಹಾಗೂ ಕಥಾ ಶ್ರವಣ ಮಾಡಿ ನನಗೆ ಕೂಡ ಆ ಬ್ರಹ್ಮರಾಕ್ಷಸ ಯೋನಿಯಿಂದ ಬಿಡುಗಡೆ ಆಯಿತು. ನಮ್ಮಿಬ್ಬರನ್ನು ಈ ದುರ್ಯೋನಿಯಿಂದ ಉದ್ಧಾರ ಮಾಡಿದ್ದರಿಂದ ನೀವು ಇನ್ನು ಮುಂದೆ ಮಾಡಲಿರುವ ಸರ್ವ ತೀರ್ಥ ಕ್ಷೇತ್ರ ಯಾತ್ರೆಗಳ ಎಲ್ಲ ಪುಣ್ಯ ಫಲವು ನಿಮಗೆ ಇಲ್ಲಿಯೇ ದೊರೆತಂತೆ ಆಗಿದೆ. ನಮ್ಮನ್ನು ಉದ್ಧರಿಸಿದ ನಿಮಗೆ ನಮೋನಮಃ''.

ಹೀಗೆ ಹೇಳಿ ಆ ಇಬ್ಬರೂ ದಿವ್ಯಪುರುಷರು ತಮ್ಮ ದುರ್ಯೋನಿಯಿಂದ ಮುಕ್ತರಾದರು ಮತ್ತು ತಮ್ಮ ಉದ್ಧಾರಕ್ಕೆ ಕಾರಣರಾದ ಇಬ್ಬರೂ ದ್ವಿಜಪುಂಗವರಿಗೆ ಭಕ್ತಿಯಿಂದ ನಮಸ್ಕಾರ ಮಾಡಿ ಶ್ರೀಹರಿಯ ದಿವ್ಯ ಧಾಮಕ್ಕೆ ತೆರಳಿದರು. ಅನಂತರ ಮುನಿಮಿತ್ರರಾದ ಹರಿಮೇಧ ಸುಮೇಧ ಇಬ್ಬರೂ ಮಹನೀಯರು ತುಳಸಿಯ ಈ ಮಹಾಮಹಿಮೆಯನ್ನು ತಮ್ಮ ಕಣ್ಣಿನಿಂದಲೇ ನೋಡಿ ಧನ್ಯರಾಗಿ ಅದನ್ನೇ ಮತ್ತೆ ಮತ್ತೆ ಪ್ರಶಂಸೆ ಮಾಡುತ್ತ ತಮ್ಮ ತೀರ್ಥಯಾತ್ರೆಗೆ ತೆರಳಿದರು. ಆದುದರಿಂದ ಈ ಕಾರ್ತೀಕ ಮಾಸದಲ್ಲಿ ಭಗವಾನ್ ಶ್ರೀಮಹಾವಿಷ್ಣುವನ್ನು ಪ್ರಸನ್ನಗೊಳಿಸಲಿಕ್ಕಾಗಿ ತುಳಸಿಯ ಪೂಜೆಯನ್ನು ಎಲ್ಲರೂ ಅವಶ್ಯವಾಗಿ ಮಾಡಬೇಕು.

## ತ್ರಯೋದಶಿಯಿಂದ ದೀಪಾವಳಿಯವರೆಗೆ ನಡೆಯುವ ಉತ್ಸವಗಳ ವರ್ಣನೆ

**ಅಧ್ಯಾಯ - ೫೭**

**ಬ್ರಹ್ಮ:-** ಆಶ್ವೀನ ಕೃಷ್ಣ ತ್ರಯೋದಶೀ ದಿನದಂದು ಪ್ರಾತಃಕಾಲದಲ್ಲಿ ದಂತಧಾವನ ಮಾಡಿಕೊಂಡು ನಸುಕಿನಲ್ಲಿಯೇ ಸ್ನಾನಮಾಡಬೇಕು. ಅನಂತರ ದೇವರ ಪೂಜೆಮಾಡಿ ತ್ರಿರಾತ್ರಿವ್ರತದ ಸಂಕಲ್ಪವನ್ನು ಮಾಡಿ ಗೋವರ್ಧನ ಉತ್ಸವವನ್ನು ಆಚರಿಸಬೇಕು. ತ್ರಯೋದಶಿಯದಿನ ಪ್ರದೋಷದಲ್ಲಿ ಯಮಧರ್ಮನನ್ನು ಉದ್ದೇಶಿಸಿ ದೀಪಹಚ್ಚಿ ಇಟ್ಟು ನೈವೇದ್ಯವನ್ನು ಸಮರ್ಪಿಸಬೇಕು. ಇದರಿಂದ ಅಪಮೃತ್ಯು ಪರಿಹಾರವಾಗುವದು.

ಹಿಂದೆ ಒಂದು ದಿನ ಯಮದೂತರು ಯಮರಾಜನನ್ನು ಕೇಳಿದರು. ''ಪ್ರಭು! ದೀಪಾವಳಿಯ ಈ ಮಹೋತ್ಸವಕಾಲದಲ್ಲಿ ಮತ್ತು ಬೇರೆ ಸಮಯ ಸಂದರ್ಭಗಳಲ್ಲಿ ಅಪಮೃತ್ಯು ಬಾರದಂತೆ ಇರಲು ಏನು ಉಪಾಯ?

**ಯಮಧರ್ಮ:-** ಆಶ್ವೀನ ಕೃಷ್ಣ ತ್ರಯೋದಶಿ ತಿಥಿಯಂದು ಪ್ರದೋಷಕಾಲದಲ್ಲಿ ಯಾರು ಕೆಳಗೆ ಹೇಳಿದ ಈ ಮಂತ್ರವನ್ನು ಉಚ್ಚರಿಸಿ ಮನೆಯ ಬಾಗಿಲ ಬಳಿ ದೀಪವನ್ನು ಹಚ್ಚಿ ಇಡುವರೋ ಅವರಿಗೆ ಭಯವೇ ಇರುವದಿಲ್ಲ.

**ಮೃತ್ಯುನಾ ಪಾಶದಂಡಾಭ್ಯಾಂ ಕಾಲೇನ ಚ ಮಯಾ ಸಹ**
**ತ್ರಯೋದಶ್ಯಾಂ ದೀಪದಾನಾತ್ ಸೂರ್ಯಜಃ ಪ್ರೀಯತಾಮಿತಿ ॥**

ತ್ರಯೋದಶಿಯ ದಿನದಂದು ನಾನು ಮಾಡಿದ ಈ ದೀಪದಾನದಿಂದ ಪಾಶದಂಡ ಕಾಲಮೃತ್ಯು ಸಹಿತವಾಗಿ ಯಮಧರ್ಮನು ಪ್ರಸನ್ನನಾಗಲಿ. ಅವುಗಳ ಭಯವನ್ನು ತಪ್ಪಿಸಿ ನನ್ನ ಮನೆಯಲ್ಲಿ ಸೌಭಾಗ್ಯಲಕ್ಷ್ಮಿಯು ನೆಲೆಸುವಂತೆ ಮಾಡಲಿ.

ಈ ಮಂತ್ರವನ್ನು ಹೇಳಿ ತಮ್ಮ ಮನೆಯ ಬಾಗಿಲ ಹೊಸ್ತಿಲಮೇಲೆ ಮತ್ತು ಬಾಗಿಲ ಗೋಡೆಯಮೇಲೆ ದೀಪಹಚ್ಚಿ ಇಟ್ಟವರಿಗೆ ಅಪಮೃತ್ಯುವು ಎಂದೂ ಬರುವದಿಲ್ಲ.

ದೀಪಾವಳಿಯ ಹಬ್ಬದ ಮೊದಲಿನ ಚತುರ್ದಶಿ ದಿನದಂದು ಎಣ್ಣೆಯಲ್ಲಿ ಮಹಾಲಕ್ಷ್ಮೀದೇವಿಯು ಸನ್ನಿಹಿತಳಾಗಿರುತ್ತಾಳೆ. ನೀರಿನಲ್ಲಿ ಗಂಗೆಯ ನಿವಾಸ ಇರುತ್ತದೆ.

ಚತುರ್ದಶಿ ದಿನ ಪ್ರಾತಃಕಾಲದಲ್ಲಿ ಎಣ್ಣೆಯನ್ನು ಹಚ್ಚಿಕೊಂಡು ಅಭ್ಯಂಗ ಸ್ನಾನ ಮಾಡಿದವರಿಗೆ ನರಕದ ಭಯವು ಇರುವದಿಲ್ಲ. ನರಕದ ಭಯವನ್ನು ನಾಶಮಾಡುವದರಿಂದಲೇ ಅದಕ್ಕೆ ನರಕ ಚತುರ್ದಶಿ ಎಂದು ಕರೆಯುವರು. ಅಂದು ಸ್ನಾನ ಮಾಡುವಾಗ ಉತ್ತರಾಣಿ ಕಡ್ಡಿಯನ್ನು ತಲೆಯ ಮೇಲೆ ಇಟ್ಟುಕೊಂಡು ಕೆಳಗೆ ಹೇಳಿದ ಮಂತ್ರವನ್ನು ಹೇಳಿ ತಲೆ ತುಂಬ ಮೂರು ಬಾರಿ ಆಡಿಸಿಕೊಳ್ಳಬೇಕು.

**''ಸೀತಾಲೋಷ್ಠ ಸಮಾಯುಕ್ತ ಸಕಂಟಕದಲಾನ್ವಿತ**
**ಪರಿಮಾರ್ಜಯ ಮಹಾಪಾಪಂ ಭ್ರಾಮ್ಯಮಾಣಃ ಪುನಃ ಪುನಃ ॥''**

ಈ ಮಂತ್ರ ಹೇಳಿ ಉತ್ತರಾಣಿ ಗಿಡದ ಕಡ್ಡಿ, ಎಲೆಗಳನ್ನು ಮೂರು ಬಾರಿ ತಲೆಯ ಮೇಲೆ ಆಡಿಸಿಕೊಳ್ಳಬೇಕು. ಅನಂತರ ಸ್ನಾನಮಾಡಿ ಒದ್ದೆ ಬಟ್ಟೆಯಲ್ಲಿಯೇ ಮೃತ್ಯು ದೇವತೆಯ ಮಕ್ಕಳಂತಿದ್ದ ಎರಡು ನಾಯಿಗಳ ಹೆಸರಿನಿಂದ ದೀಪ ದಾನವನ್ನು ಮಾಡಬೇಕು.

### ನಾಯಿಗಳಿಗೂ ದೀಪದಾನ

**''ಶುನಕೌ ಶ್ಯಾಮಶಬಲೌ ಭ್ರಾತರೌ ಯಮಸೇವಕೌ ।**
**ತುಷ್ಟೌ ಸ್ಯಾತಾಂ ಚುತುರ್ದಶ್ಯಾಂ ದೀಪ ದಾನೇನ ಮೃತ್ಯುಸ್ಯಾ ॥''**

ಈ ಮಂತ್ರದಿಂದ ಮೃತ್ಯುವಿನ ಮಕ್ಕಳಾದ ಹಾಗೂ ಯಮನ ಸೇವಕರಾದ ಕರಿ ಮತ್ತು ಹಂಡ ಬಂಡ ಬಣ್ಣದ ಎರಡು ಜೋಡಿ ನಾಯಿಗಳು ಈ ಚತುರ್ದಶಿಯ ದಿನದ ದೀಪ ದಾನದಿಂದ ಸಂತುಷ್ಟವಾಗಲಿ. ಹೀಗೆ ದೀಪದಾನ ಮಾಡಿದ ಬಳಿಕ ಸ್ನಾನಾಂಗ ತರ್ಪಣ ಮಾಡಿ ಯಮ ಧರ್ಮನ ಹೆಸರಿನಿಂದ ಹದಿನಾಲ್ಕು ಸಲ ನೀರಿನಿಂದ ತರ್ಪಣವನ್ನು ಕೊಡಬೇಕು.

**ಯಮಾಯ ನಮಃ ಯಮಂ ತರ್ಪಯಾಮಿ**
**ಧರ್ಮರಾಜಾಯ ನಮಃ ಧರ್ಮರಾಜಂ ತರ್ಪಯಾಮಿ**
**ಮೃತ್ಯವೇ ನಮಃ ಮೃತ್ಯುಂ ತರ್ಪಯಾಮಿ**

**ಅಂತಕಾಯ ನಮಃ ಅಂತಕಂ, ವೈವಸ್ವತಾಯ ನಮಃ ಕಾಲಾಯ ನಮಃ ಸರ್ವಭೂತ ಕ್ಷಯಾಯ ನಮಃ ಔದುಂಬರಾಯ ನಮಃ ತಥ್ನಾಯ ನಮಃ ನೀಲಾಯ ನಮಃ ಪರಮೇಷ್ಠಿನೇ ನಮಃ ವೃಕೋದರಾಯ ನಮಃ ಚಿತ್ರಾಯ ನಮಃ ಚಿತ್ರಂತರ್ಪಯಾಮಿ ಚಿತ್ರಗುಪ್ತಾಯ ನಮಃ ಚಿತ್ರಗುಪ್ತಂ ತರ್ಪಯಾಮಿ**

ಎಂದು ಯಮಧರ್ಮನ ಹದಿನಾಲ್ಕು ನಾಮುಗಳ ಮುಂದೆ ಯಮಾಯ ಧರ್ಮ ರಾಜಾಯ ಎಂದು ಮುಂತಾಗಿ ಚತುರ್ಥಿವಿಭಕ್ತಿ ಏಕವಚನ ಪದಗಳನ್ನು ಉಚ್ಚರಿಸಿ ಅವುಗಳ ಮುಂದೆ 'ನಮಃ' ಎಂಬ ಶಬ್ದವನ್ನು ಜೋಡಿಸಿ ಮೂರು ಮೂರು ಸಲ ತರ್ಪಣ ಕೊಡಬೇಕು. ನಮಃ ಎಂಬ ಶಬ್ದದಿಂದ ಮೊದಲು ನಮಸ್ಕರಿಸಿ, ಅನಂತರ ಯಮಂ ತರ್ಪಯಾಮಿ ತರ್ಪಯಾಮಿ ಎಂದು ಮೂರು ಬಾರಿ ಹೇಳಿ ನೀರಿನಲ್ಲಿ ಎಳ್ಳನ್ನು ಸೇರಿಸಿ ಎಳ್ಳು ನೀರಿನಿಂದ ಮೂರು ಮೂರು ಅಂಜಲಿ ತರ್ಪಣವನ್ನು ಕೊಡಬೇಕು. ಈ ಯಮತರ್ಪಣವನ್ನು ಮಾಡುವಾಗ

ಯಜ್ಞೋಪವೀತವನ್ನು ಅರ್ಥಾತ್ ಜನಿವಾರವನ್ನು ಎಡ ಅಥವಾ ಬಲ ಹೆಗಲುಗಳ ಮೇಲೆ ಹೇಗೆ ಬೇಕಾದರೂ ಹಾಕಿಕೊಂಡು ಮಾಡಬಹುದು. ಯಾಕಂದರೆ ಯಮಧರ್ಮನು ದೇವತಾಕೋಟಿಯಲ್ಲಿ ಪ್ರವಿಷ್ಟನಾಗಿದ್ದು ಪಿತೃಗಳಿಗೂ ಅಧಿದೇವತೆಯಾದುದರಿಂದ ಉಪವೀತೀ ಅಥವಾ ಪ್ರಾಚೀನಾವೀತೀ ಎಂದರೆ. ಯಾವ ಬದಿಯಲ್ಲಿಯಾದರೂ ಯಜ್ಞೋಪವೀತವನ್ನು ಹಾಕಿಕೊಂಡು ತರ್ಪಣವನ್ನು ನೀಡಬಹುದು.

ತಾಯಿ ತಂದೆಗಳು ಬದುಕಿ ಇದ್ದವರು ಕೂಡ ಯಮತರ್ಪಣವನ್ನೂ ಭೀಷ್ಮ ತರ್ಪಣವನ್ನೂ ಮಾಡಬೇಕು. ಅಶ್ವೀನ ಕೃಷ್ಣ ಚತುರ್ದಶಿಯಂದು ಅಮಾವಾಸ್ಯೆ ಇದ್ದು ಅಂದು ಸ್ವಾತೀ ನಕ್ಷತ್ರ ಯೋಗವಿದ್ದರೆ, ಅಂದೇ ದೀಪಾವಳೀ ಆಗುವುದು. ಅಂದಿನಿಂದ ಆರಂಭಿಸಿ ಮೂರು ದಿನಗಳವರೆಗೆ ದೀಪೋತ್ಸವವನ್ನು ಮಾಡಬೇಕು.

ಇದಕ್ಕೆ ಒಂದು ಕಾರಣವೂ ಉಂಟು. ಪೂರ್ವಕಾಲದಲ್ಲಿ ಶ್ರೀಹರಿಯು ವಾಮನ ರೂಪದಿಂದ ಬಲಿಚಕ್ರವರ್ತಿಯ ಬಳಿ ಮೂರು ಪಾದ ಭೂಮಿಯನ್ನು ಯಾಚನೆ ಮಾಡಿದನು. ಆಗ ಶ್ರೀಹರಿಗೆ ತನ್ನ ಅಧೀನದಲ್ಲಿರುವ ಮೂರು ಲೋಕಗಳನ್ನು ದಾನ ನೀಡಿದ ಬಲಿರಾಜನು ಹೀಗೆ ವರವನ್ನು ಬೇಡಿಕೊಂಡನು.

## ಮೂರು ದಿನಗಳ ದೀಪೋತ್ಸವ

**ಬಲಿರಾಜ:-** ವಟು ರೂಪಿ ವಾಮನ! ನಾನು ನೀಡಿದ ಈ ಮೂರು ಲೋಕಗಳನ್ನು ನೀನು ತ್ರಿವಿಕ್ರಮ ರೂಪದ ಪಾದಗಳಿಂದ ಮೂರು ದಿನಗಳಲ್ಲಿ ಅಳೆದು ಸ್ವೀಕರಿಸಿರುವೆ. ಆದುದರಿಂದ ಇದರ ನೆನಪಿಗಾಗಿ ಇಂದಿನಿಂದ ಮೂರು ದಿನ ಎಲ್ಲ ಜನರು ಭೂಮಂಡಲದಲ್ಲಿ ದೀಪ ದಾನವನ್ನು ಮಾಡಲಿ. ಹೀಗೆ ಚತುರ್ದಶಿಯಿಂದ ಮೂರು ದಿನ ದೀಪೋತ್ಸವ ಮಾಡುವವರ ಮನೆಯಲ್ಲಿ ನಿನ್ನ ಭಾರ್ಯೆಯಾದ ಲಕ್ಷ್ಮೀದೇವಿಯು ಸ್ಥಿರವಾಗಿ ನೆಲೆ ನಿಲ್ಲಲಿ. ಈ ಮೂರು ದಿನ ಪೃಥ್ವೀ ತಳದಲ್ಲಿ ಪ್ರತಿ ವರ್ಷವೂ ನನ್ನ ರಾಜ್ಯದ ಅಧಿಪತ್ಯದ ನೆನಪು ಎಲ್ಲರಿಗೂ ಇರಲಿ.'' ಎಂದು ಬಲಿರಾಜನು ಬೇಡಿಕೊಂಡನು.

ಬಲಿಚಕ್ರವರ್ತಿಯ ಈ ಬೇಡಿಕೆಯನ್ನು ಮನ್ನಿಸಿ ವಾಮನದೇವರು ''ಚತುರ್ದಶಿ ಯಿಂದ ಮೂರು ದಿನ ಬಲಿಚಕ್ರವರ್ತಿಯ ಅಧಿಪತ್ಯದ ಸವಿ ನೆನಪಿಗಾಗಿ ಮೂರು ದಿನ ದೀಪೋತ್ಸವವನ್ನು ಆಚರಿಸಬೇಕು'' ಎಂದು ಅಪ್ಪಣೆ ನೀಡಿದ್ದಾನೆ. ಚತುರ್ದಶಿಯ ದಿನ ರಾತ್ರಿಯಲ್ಲಿ ಮಹಾರಾತ್ರಿ ದೇವಿಯ ಪ್ರಾದುರ್ಭಾವವು ಆಗಿರುತ್ತದೆ. ಆದುದರಿಂದ ಈ ಮೂರು ದಿನಗಳಲ್ಲಿ, ಅದರಲ್ಲಿಯೂ ಶಕ್ತಿ ಪೂಜಾ ವಿಧಿಯನ್ನು ಆಚರಿಸ ಬಯಸುವ ಭಕ್ತರು ಚತುರ್ದಶಿ ರಾತ್ರಿಯಂದು ವಿಶೇಷ ಉತ್ಸವವನ್ನು ಆಚರಿಸಬೇಕು. ಅನಂತರ ಅಮಾವಾಸ್ಯಾ ದಿನ ಪ್ರಾತಃಕಾಲದಲ್ಲಿ ಸ್ನಾನ ಮಾಡಿ ಭಕ್ತಿಯಿಂದ ದೇವತೆಗಳಿಗೂ ಪಿತೃಗಳಿಗೂ ಪೂಜೆಯನ್ನು ಮಾಡಬೇಕು. ಅನಂತರ ಹಾಲು, ಮೊಸರು, ತುಪ್ಪ ಮುಂತಾದವುಗಳಿಂದ ಪಾರ್ವಣ ಶ್ರಾದ್ಧವನ್ನು ಮಾಡಬೇಕು. ಮಕ್ಕಳು ಹಾಗೂ ರೋಗಿಗಳ ಹೊರತು ಅಂದು ಯಾರೂ ಹಗಲು ಹೊತ್ತು ಊಟ ಮಾಡಬಾರದು. ಪ್ರದೋಷ ಸಮಯದಲ್ಲಿ ಲಕ್ಷ್ಮೀದೇವಿಯ ಪೂಜೆಯನ್ನು ವೈಭವದಿಂದ ಮಾಡಬೇಕು. ಅಂದು ಆ ಶ್ರೀದೇವಿಗೆ ವಿಶ್ರಾಂತಿಗಾಗಿ ಪುಷ್ಪಗಳ ಶಯ್ಯೆಯನ್ನು ರಚಿಸಬೇಕು.

ಯಾಲಕ್ಕಿ, ಕೇಶರ, ಜಾಜಿಕಾಯಿ ಮುಂತಾದ ಮಸಾಲೆ ದ್ರವ್ಯಗಳನ್ನು ಹಾಕಿ ಹಸುವಿನ ಹಾಲನ್ನು ಚೆನ್ನಾಗಿ ಕಾಸಿ ಗಟ್ಟಿಯಾಗುವವರೆಗೆ ಕುದಿಸಿ ಸಕ್ಕರೆ ಹಾಕಿ ಪೇಢಾ, ಉಂಡೆ, ಬರ್ಫಿ ಅಥವಾ ಬಾಸುಂದೆ, ಯಾವುದಾದರೂ ಹಾಲು ಸಕ್ಕರೆಯಿಂದ ಸಿಹಿ ಪದಾರ್ಥಗಳ ಭಕ್ಷ್ಯ ಭೋಜ್ಯವನ್ನು ಮಾಡಿ ಮಹಾಲಕ್ಷ್ಮಿಗೆ ಅರ್ಪಣವನ್ನು ಮಾಡಬೇಕು. ವಿಧಿಪೂರ್ವಕವಾಗಿ ಲಕ್ಷ್ಮೀದೇವಿಯ ಪೂಜೆಯನ್ನು ಮಾಡಿ ಕೈ ಮುಗಿದು ಹೀಗೆ ಪ್ರಾರ್ಥನೆಯನ್ನು ಸಲ್ಲಿಸಬೇಕು. ''ದೀಪಜ್ಯೋತಿಯಲ್ಲಿ ವಿರಾಜಮಾನಳಾದ ಮಹಾಲಕ್ಷ್ಮೀ ದೇವಿಯೇ, ನಿನಗೆ ನಮಸ್ಕಾರ. ಕಾರ್ತೀಕ ದೀಪಾವಳಿಯ ಈ ಪವಿತ್ರ ದಿನದಲ್ಲಿ ನೀನು ನನ್ನ ಮನೆಯಲ್ಲಿ ನೆಲಿಸಿ ನನಗೆ ಯಾವಾಗಲೂ ವರದಾಯಿನಿಯು ಆಗು.''

## ಶಕ್ಯವಿದ್ದಲ್ಲೆಲ್ಲ ದೀಪ, ಮಾನವನ ಪಾಪಲೋಪ

ಹೀಗೆ ಮಹಾಲಕ್ಷ್ಮಿಯನ್ನು ಪ್ರಾರ್ಥಿಸಿ ನಂತರ ಪ್ರದೋಷಕಾಲದಲ್ಲಿ ದೀಪದಾನ, ದೀಪೋತ್ಸವ, ದೀಪಾರತಿ ಮಂಗಳಾರತಿ ಮುಂತಾದವುಗಳನ್ನು ಮಾಡಬೇಕು. ತಮ್ಮ ತಮ್ಮ ಶಕ್ತಿಗೆ ಅನುಸರಿಸಿ ದೇವಮಂದಿರ ಅಥವಾ ತಮ್ಮ ಮನೆಯ ಕೋಣೆಯಲ್ಲಿ ಬಗೆಬಗೆಯ ದೀಪದ ಆಕಾರಗಳನ್ನು ಮಾಡಿ ದೀಪೋತ್ಸವವನ್ನು ಆಚರಿಸಬೇಕು.

ನಗರದ ಅಥವಾ ಗ್ರಾಮದ ಹಾದಿ ಬೀದಿ, ಕೋಟೆ, ಗೋಡೆ, ನದೀ, ಬಾವೀ, ತೀರ, ಪರ್ವತ, ಮನೆಯ ಮೇಲುಪ್ಪರಿಗೆ, ವೃಕ್ಷಗಳ ಟೊಂಗೆ, ಬೇರು, ಗೋಶಾಲೆ, ಮೇಲು ಮಾಳಿಗೆ, ಶಿಖರ, ಗೋಪುರ, ಮನೆಯ ಅಂಗಳ, ಹಿತ್ತಲು, ದ್ವಾರದ ಎಡಬಲ, ಮೇಲುಪ್ಪರಿಗೆ, ಕೂಡುರಸ್ತೆ, ಕವಲು ರಸ್ತೆ, ಅಂಗಡಿಯ ಸಾಲು, ಸಾರ್ವಜನಿಕ ಕಟ್ಟಡ ಮುಂತಾದ ಕಡೆಗಳಲ್ಲೆಲ್ಲ ಈ ದೀಪಾವಳಿ ಉತ್ಸವದ ಮೂರು ದಿನಗಳಲ್ಲಿ ದೀಪಗಳನ್ನು ಸಾಧ್ಯವಾದಷ್ಟು ಹಚ್ಚಬೇಕು. ಹೀಗೆಲ್ಲ ದೀಪೋತ್ಸವವನ್ನು ಮಾಡಿ ವಿದ್ವಾಂಸರಿಗೂ, ಅತಿಥಿಗಳಿಗೂ, ಹಸಿದು ಬಂದ ದೀನ ದರಿದ್ರರಿಗೂ ಊಟ ಮಾಡಿಸಿ ಅನಂತರ ಮನೆಯ ಯಜಮಾನನು, ಹೊಸ ವಸ್ತ್ರ ಆಭರಣಗಳಿಂದ ಅಲಂಕೃತನಾಗಿ ಅನಂತರ ತಾನು ಊಟ ಮಾಡಬೇಕು.

ಪ್ರಾಣ ಹಿಂಸೆ, ಮದ್ಯಪಾನ, ಅಗಮ್ಯಾಗಮನ, ಚೌರ್ಯ ಹಾಗೂ ವಿಶ್ವಾಸ ಘಾತಗಳು ನರಕದ ಬಾಗಿಲುಗಳು ಎಂದು ಹಿರಿಯರು ಹೇಳಿದ್ದಾರೆ. ಇವುಗಳನ್ನು ಯಾವಾಗಲೂ ತ್ಯಜಿಸಬೇಕು. ಹೀಗೆ ಉತ್ಸವಗಳನ್ನು ಮನೆ ಮತ್ತು ದೇವಾಲಯಗಳಲ್ಲಿ ಆಚರಿಸಿ ರಾತ್ರಿಯಾದ ಬಳಿಕ ತನ್ನ ಮನೆಯಲ್ಲಿಯ ಪೂಜೆ ದೀಪೋತ್ಸವಾದಿಗಳನ್ನೆಲ್ಲ ಮುಗಿಸಿಕೊಂಡು ತನ್ನ ಗ್ರಾಮ ನಗರಗಳಲ್ಲಿ ಮಾಡಿದ ದೀಪೋತ್ಸವ ಸಮಾರಂಭಗಳನ್ನು ನೋಡಿ ಬರಲು ಪಾದಚಾರಿಯಾಗಿ ನಡೆದು ಹೋಗಿ ಕಣ್ಣಿಂದ ಬಗೆ ಬಗೆಯ ದೀಪಾರಾಧನೆಯನ್ನು ನೋಡಿ ಆನಂದ ಪಡಬೇಕು. ಇದರಿಂದ ಶ್ರೀಹರಿಯ ಪ್ರೀತಿ ಉಂಟಾಗುವದು. ಪಾಪಗಳೆಲ್ಲ ನಷ್ಟವಾಗುವವು.

—○—

**ಬ್ರಹ್ಮದೇವ:-** ಅನಂತರ ಪ್ರತಿಪದೆಯ ದಿನ ಬೆಳಗಿನ ಜಾವದಲ್ಲಿ ದೇವರಿಗೆ ಭಕ್ತಿಯಿಂದ ವಂದನೆ ಮಾಡಿ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಬೇಕು. ಸ್ನಾನಮಾಡಿ ಸುಂದರವಾದ ವಸ್ತ್ರಾಭರಣಾದಿಗಳನ್ನು ಧರಿಸಿ ದೇವರ ಪೂಜೆಮಾಡಬೇಕು. ಭಗವಂತನಿಗೆ ಮಂಗಳಕರವಾದ ಆರತಿಯನ್ನು ಬೆಳಗಬೇಕು. ಅಂದು ಮನೆಯ ಜನರೆಲ್ಲರೂ ಸಾಧ್ಯವಾದಷ್ಟು ಹೊಸ ಹೊಸ ಸುಂದರವಾದ ಬಟ್ಟೆ ಅಲಂಕಾರಗಳನ್ನು ಧರಿಸಬೇಕು. ಆ ಇಡೀ ದಿನದಂದು ಪರಮಾತ್ಮನ ಗುಣ ಗಾಯನವನ್ನು, ಕಥಾಶ್ರವಣವನ್ನು, ನಾಮಸಂಕೀರ್ತನವನ್ನು, ಮತ್ತು ಬಗೆ ಬಗೆಯ ದಾನಧರ್ಮಗಳನ್ನು ಮಾಡಬೇಕು.

ಈ ಬಲಿಪ್ರತಿಪದೆಯ ದಿನದಂದು ಎಲ್ಲ ಸ್ತ್ರೀಯರೂ, ಪುರುಷರೂ ಎಣ್ಣೆ ಹಚ್ಚಿಕೊಂಡು ಅಭ್ಯಂಗಸ್ನಾನವನ್ನು ಮಾಡಬೇಕು. ಈ ದಿನದಂದು ವಿಧಿಪೂರ್ವಕವಾಗಿ ಸ್ನಾನ, ಪೂಜೆ, ಭಗವಂತನ ಧ್ಯಾನ ಮಾಡಿದರೆ ಅಕ್ಷಯ ಪುಣ್ಯ ಫಲಪ್ರಾಪ್ತಿ ಆಗುವದು. ಪ್ರತಿಪದ್ ತಿಥಿಯು ಪೂರ್ವವಿದ್ಧ ಆಗಿದ್ದರೆ, ಅಂದು ತೈಲಾಭ್ಯಂಗ ಮೊದಲಾದವುಗಳನ್ನು ಮಾಡಬಾರದು. ಮರುದಿನ ಅಮಾವಾಸ್ಯಾ ವೇಧವಿಲ್ಲದ ಒಂದು ಗಳಿಗೆ ಮಾತ್ರ ಪ್ರತಿಪದೆ ತಿಥಿ ಇದ್ದರೂ ಸಾಕು. ಅಂದೇ ಕಾರ್ತೀಕ ಉತ್ಸವವನ್ನು ವೈಭವದಿಂದ ಆಚರಿಸಬೇಕು. ಎರಡನೇಯ ದಿನ ಒಂದು ಘಳಿಗೆಯೂ ಕೂಡ ಪ್ರತಿಪತ್ ತಿಥಿಯು ಇಲ್ಲದಿದ್ದರೆ ಹಿಂದಿನ ದಿನವೇ ಅಮಾವಾಸ್ಯಾವಿದ್ಧವಾದ ಪ್ರತಿಪದ ತಿಥಿಯನ್ನು ಗ್ರಹಣ ಮಾಡಬೇಕು.

ಈ ಪ್ರತಿಪದ ತಿಥಿಯಂದು ಮನುಷ್ಯನು ಮನೆಯ ಮತ್ತು ಹೊರಗಿನ ಕಲಹ ಕಲಾಪ, ವ್ಯಾಜ್ಯ, ವೈಮನಸ್ಯ, ವೈರಸ್ಯ, ಔದಾಸ್ಯ, ತೊರೆದು ಆನಂದದಿಂದ ಉಲ್ಹಾಸ ಪೂರ್ಣನಾಗಿ ಇರಬೇಕು. ಬಲಿಪ್ರತಿಪದೆಯ ದಿನ ಮನುಷ್ಯನು ಹೇಗೆ ಇರುತ್ತಾನೊ ಪ್ರಾಯ: ಒಂದು ವರ್ಷದ ವರೆಗೆ ಹಾಗೆಯೇ ಇರುವ ಸಂಭವವು ಹೆಚ್ಚು. ಆದುದರಿಂದ ಅಂದು ಒಳ್ಳೆ ಬಟ್ಟೆಗಳನ್ನು ಉಡಬೇಕು. ಒಳ್ಳೆ ಆಭರಣಗಳನ್ನು ತೊಡಬೇಕು. ತನಗೆ ರುಚಿ ಎನಿಸಿದ ಬಗೆ ಬಗೆಯ ಭಕ್ಷ್ಯ ಭೋಜ್ಯಗಳನ್ನು ಊಟಮಾಡಬೇಕು. ಅಂದು ಇಡೀ ದಿನ ಅಧ್ಯಾತ್ಮ ಚಿಂತನವನ್ನು ಮಾಡುತ್ತ ಯಥಾಶಕ್ತಿ ತಮ್ಮ ಇಷ್ಟದೇವತೆಯ ಮಂಗಲೋತ್ಸವವನ್ನು ಆಚರಿಸಬೇಕು. ಅಂದು ಪ್ರಾತಃಕಾಲದಲ್ಲಿ ಗೋವರ್ಧನ ಗಿರಿಯ ಪೂಜೆಯನ್ನು ಮಾಡಬೇಕು. ಅಂದು ಹಸು, ಕರು, ಎತ್ತು ಮೊದಲಾದ ಜಾನುವಾರುಗಳನ್ನು ಸ್ನಾನ ಮಾಡಿಸಿ ಅಲಂಕರಿಸಬೇಕು. ಅಂದು ಎತ್ತುಗಳನ್ನು ಹೂಡಬಾರದು. ಹಸುಗಳನ್ನು ಹಿಂಡಬಾರದು. ಗೋವರ್ಧನ ಗಿರಿಯ ಪೂಜೆ ಕಾಲದಲ್ಲಿ ಭಗವಂತನನ್ನು ಈ ರೀತಿಯಿಂದ ಪ್ರಾರ್ಥಿಸಬೇಕು.

**ಗೋವರ್ಧನಧರಾಧಾರ ಗೋಕುಲತ್ರಾಣಕಾರಕ**
**ವಿಷ್ಣೋ, ಬಾಹುಕೃತೋಚ್ಛ್ರಾಯ ಗವಾಂ ಕೋಟಿಪ್ರದೋ ಭವ ॥**

**ಯಾ ಲಕ್ಷ್ಮೀರ್ಲೋಕಪಾಲಾನಾಂ ಧೇನುರೂಪೇಣ ಸಂಸ್ಥಿತಾ**
**ಗವ್ಯಂ ವಹತಿ ಯಜ್ಞಾರ್ಥಂ ಮಮ ಪಾಪಂ ವ್ಯಪೋಹತು ॥**

**ಅಗ್ರತಃ ಸಂತು ಮೇ ಗಾವೋ ಗಾವೋ ಮೇ ಸಂತು ಪೃಷ್ಠತಃ**
**ಗಾವೋ ಮೇ ಹೃದಯೇ ಸಂತು ಗವಾಂ ಮಧ್ಯೇ ವಸಾಮ್ಯಹಂ ॥**

ಭೂಮಿಯನ್ನು ಧರಿಸಿದ ಗೋವರ್ಧನ ಪರ್ವತವೇ, ಶ್ರೀಕೃಷ್ಣನು ನಿನ್ನನ್ನು ಎತ್ತಿ ಹಿಡಿದು ಪೂರ್ವಕಾಲದಲ್ಲಿ ಗೋಕುಲವನ್ನೆಲ್ಲ ರಕ್ಷಣ ಮಾಡಿದನು. ನೀನು ನನಗೆ ಕೋಟಿ ಗೋದಾನವನ್ನು ನೀಡುವ ಪೂರ್ಣ ಶಕ್ತಿಯನ್ನು ಕೊಡು. ಇಂದ್ರಾದಿ ಲೋಕಪಾಲಕರ ಸೌಭಾಗ್ಯವೇ ಹಸುವಿನ ರೂಪದಿಂದ ಭೂಮಂಡಲದಲ್ಲಿ ಇರುತ್ತದೆ. ಯಜ್ಞಕ್ಕಾಗಿ ಹಾಲು ತುಪ್ಪ ಮುಂತಾದವುಗಳನ್ನು ಒದಗಿಸುತ್ತದೆ. ಇಂತಹ ಆಕಳು ನನ್ನ ಪಾಪಗಳನ್ನೆಲ್ಲ ಕಳೆಯಲಿ. ನನ್ನ ಮುಂದೆ ಆಕಳುಗಳು ಇರಲಿ. ಹಿಂದೆ ಹಸುಗಳು ಇರಲಿ. ಹೃದಯದಲ್ಲಿಯೂ ಹಸುಗಳ ಹೆಸರೇ ಹಸಿರಾಗಿ ಇರಲಿ. ನಾನು ಯಾವಾಗಲೂ ಹಸುಗಳ ಮಧ್ಯದಲ್ಲಿಯೇ ಇರುತ್ತೇನೆ.''

ಹೀಗೆ ಪ್ರಾರ್ಥನೆ ಮಾಡುತ್ತ ಬೆಟ್ಟದ ಪೂಜೆಯನ್ನು ಅಂದು ಮಾಡಬೇಕು. ಅನಂತರ ದೇವತಾಪೂಜೆಯನ್ನು ವಿಧಿಪೂರ್ವಕವಾಗಿ ಮಾಡಿ ಮುಗಿಸಿ ದೀನ ದಲಿತರನ್ನು ದರಿದ್ರ ದುಃಖಿತರನ್ನು, ಕರೆದು ವಿಶೇಷತಃ ಸ್ವಾಧ್ಯಾಯ ಅಧ್ಯಯನ ಹಾಗೂ ಸದಾಚಾರಗಳಲ್ಲಿ ನಿರತರಾದ ವಿದ್ವಾಂಸರನ್ನು ಕರೆದು, ಅವರಿಗೆ ಅಭೀಷ್ಟವಾದ ಭಕ್ಷ್ಯಭೋಜ್ಯ ಪಕ್ವಾನ್ನಗಳನ್ನು ಮಾಡಿಸಿ, ಊಟಕ್ಕೆ ಬಡಿಸಿ, ವಸ್ತ್ರ ತಾಂಬೂಲ, ದಕ್ಷಿಣೆ ಮೊದಲಾದವುಗಳನ್ನು ಸಮರ್ಪಿಸಿ, ಅವರನ್ನು ಸಂತೋಷ ಪಡಿಸಬೇಕು. ಕಾರ್ತೀಕ ಶುಕ್ಲಪಕ್ಷ ಪ್ರತಿಪದೆಯ ತಿಥಿಯು ವೈಷ್ಣವೀ ತಿಥಿ ಎಂದರೆ ವಿಷ್ಣುವಿನ ತಿಥಿ ಎಂದು ಕರೆಯಲ್ಪಡುತ್ತವೆ. ಪ್ರತಿಪದಾ ಮತ್ತು ಅಮಾವಾಸ್ಯಾ ಯೋಗವಿದ್ದ ದಿನ ಹಸುಗಳಿಗೆ ಒಳ್ಳೆ ಆಹಾರವನ್ನು ಕೊಟ್ಟು ಪೂಜೆ ಮಾಡಿ ಅಲಂಕಾರ ಇಡಿಸಿ ಮತ್ತೆ ಪೂಜೆ ಮಾಡಬೇಕು. ಅನಂತರ ಊದಿಸುತ್ತ ಬಾರಿಸುತ್ತ ಊರಲ್ಲಿ ಮೆರವಣಿಗೆಯಿಂದ ಎಲ್ಲ ಕಡೆಗೂ ಹಸುಗಳನ್ನು ತಿರುಗಾಡಿಸಿ ಗ್ರಾಮ ಪ್ರದಕ್ಷಿಣೆಯನ್ನು ಮಾಡಿಸಬೇಕು. ಪ್ರತಿಯೊಬ್ಬರು ಈ ಗೋವುಗಳ ಮೆರವಣಿಗೆ ಬೀದಿಯಲ್ಲಿ ಬಂದಾಗ ತಮ್ಮ ತಮ್ಮ ಮನೆಯ ಮುಂದೆ ಅವುಗಳಿಗೆ ಗೋಗ್ರಾಸ ಎಂದು ಏನಾದರೂ ತಿನ್ನಲಿಕ್ಕೆ ಕೊಟ್ಟು ಆರತಿಯನ್ನು ಬೆಳಗಬೇಕು. ಹೀಗೆ ಗೋಪೂಜೆ ಮಾಡುವದರಿಂದ ಮಾನವನು ಎಲ್ಲ ಪಾಪಗಳಿಂದ ಮುಕ್ತನಾಗುತ್ತಾನೆ.

## ಬಾವಬಿದಗೆಯ ಮಹತ್ವ ಯಮ ದ್ವಿತೀಯಾ ಪದ್ಧತಿ | ಅಧ್ಯಾಯ - ೩೯

ಹಿಂದೆ ಹೇಳಿದಂತೆ ಬಲಿಪ್ರತಿಪದೆಯ ಉತ್ಸವವನ್ನು ಆಚರಿಸಿದ ಬಳಿಕ ದ್ವಿತೀಯಾ ದಿನದ ಉತ್ಸವವನ್ನು ಆಚರಿಸಬೇಕು. ಕಾರ್ತಿಕ ಶುಕ್ಲಪಕ್ಷ ದ್ವಿತೀಯಾ ದಿನವು ಮೃತ್ಯುನಾಶಕವಾದುದರಿಂದ ಅದನ್ನು 'ಯಮದ್ವಿತೀಯಾ' ಎಂದು ಕರೆಯುತ್ತಾರೆ. ಈ ದ್ವಿತೀಯಾ ದಿನದಂದು ಬ್ರಾಹ್ಮ ಮೂಹೂರ್ತದಲ್ಲಿಯೇ ಎದ್ದು ಪ್ರಾತಃಸ್ನಾನ ಮಾಡಿ ಬೆಳ್ಳಗಿನ ಬಟ್ಟೆ, ಬಿಳಿ ಹೂಗಳ ಮಾಲೆ, ಬೆಳ್ಳಗಿನ ಚಂದನ ಇವುಗಳನ್ನು ಧರಿಸಬೇಕು. ಅನಂತರ ನಿತ್ಯ ಕರ್ಮ ಪೂಜೆಗಳನ್ನೆಲ್ಲ ಮುಗಿಸಿಕೊಂಡು ಔದುಂಬರ ಮರದ ಕೆಳಗೆ ಹೋಗಬೇಕು. ಪ್ರಸನ್ನ ಮನಸ್ಸಿನಿಂದ ಅಲ್ಲಿ ಒಂದು ಮಂಡಲವನ್ನು ಮಾಡಿ ಅದರಲ್ಲಿ ಅಷ್ಟ ದಳಗಳುಳ್ಳ ಒಂದು ಕಮಲವನ್ನು ಬರೆಯಬೇಕು. ಅನಂತರ ಆ ಔದುಂಬರ ಮಂಡಲದಲ್ಲಿ ಬ್ರಹ್ಮ, ವಿಷ್ಣು, ಶಿವ, ಸರಸ್ವತೀ ದೇವಿಯರ ಆವಾಹನ ಹಾಗೂ ಪೂಜಾದಿಗಳನ್ನು ಮಾಡಬೇಕು. ವೀಣಾ ಮತ್ತು ಪುಸ್ತಕಗಳನ್ನು ಧರಿಸಿದ ಸರಸ್ವತೀ ದೇವಿಯ ಆವಾಹನವನ್ನು

ವಿಶೇಷ ರೀತಿಯಿಂದ ಮಾಡಿ ವಿಧಿಪೂರ್ವಕವಾಗಿ ಪೂಜೆಯನ್ನು ಮಾಡಬೇಕು. ಚಂದನ ಕಸ್ತೂರಿ, ಅಗರು, ಕುಂಕುಮ, ಹೂವು, ಧೂಪ, ನೈವೇದ್ಯ, ತೆಂಗಿನಕಾಯಿ ಬಗೆಬಗೆಯ ಹೂವು ತುಳಸಿ ಮುಂತಾದವುಗಳಿಂದ ದೇವರ ಪೂಜೆಯನ್ನು ಮಾಡಿದರೆ ಅಪಮೃತ್ಯುವಿನ ಭಯವು ಜನ್ಮದಲ್ಲಿ ಎಂದೂ ಉಂಟಾಗುವದಿಲ್ಲ. ಇದೇ ವೇಳೆಯಲ್ಲಿ ವೇದ ವಿದ್ವಾಂಸನಿಗೆ ಅಲಂಕಾರ ಸಹಿತವಾದ ಕರುವಿನಿಂದ ಒಡಗೂಡಿದ ಆಕಳವನ್ನು ದಾನ ಕೊಡಬೇಕು. ಅಷ್ಟು ಯೋಗ್ಯತೆ ಇಲ್ಲದಿದ್ದರೆ ಬ್ರಾಹ್ಮಣರಿಗೆ ಭಕ್ತಿಯಿಂದ ಒಂದು ಜತೆ ಪಾದರಕ್ಷೆಯನ್ನಾದರೂ ಕೊಡಬೇಕು.

ಮನೆಯ ಹಿರಿಯರಿಗೆಲ್ಲ ವಂದಿಸಬೇಕು. ಹಣ್ಣು, ಹಂಪಲ, ಊಟ, ಉಪಹಾರ ಗಳಿಂದ ತನ್ನ ಅತಿಥಿ ಅಭ್ಯಾಗತರನ್ನೂ ಸ್ವಜನ ಬಾಂಧವರನ್ನೂ ಸುಗ್ರಾಸ ಭೋಜನ ದಿಂದ ಸಂತೋಷಗೊಳಿಸಬೇಕು. ತಾನು ತನ್ನ ಮನೆಯಲ್ಲಿ ಊಟ ಮಾಡದೇ ಅಂದು ತನ್ನ ಅಕ್ಕ ತಂಗಿಯರ ಮನೆಗೆ ಹೋಗಬೇಕು. ಅಕ್ಕನ ಮನೆಗೆ ಹೋದಾಗ ಭಕ್ತಿಯಿಂದ ಅವಳ ಪಾದಕ್ಕೆ ನಮಸ್ಕಾರ ಮಾಡಬೇಕು. ಆಗ ಸೋದರಿಯು ತನ್ನ ಬಂಧುವನ್ನು ಅತ್ಯಂತ ಪ್ರೀತಿ ವಿಶ್ವಾಸಗಳಿಂದ ಸ್ವಾಗತಮಾಡಿ ಬಗೆ ಬಗೆಯ ಭಕ್ಷ್ಯ ಭೋಜ್ಯಗಳನ್ನು ತಯಾರಿಸಿ ಊಟವನ್ನು ಮಾಡಿಸಬೇಕು.

ಹಿಂದೆ ಪೂರ್ವಕಾಲದಲ್ಲಿ ಇದೇ ಕಾರ್ತಿಕ ಶುದ್ಧ ದ್ವಿತೀಯಾ ದಿನದಂದು ಯಮುನೆಯು ತನ್ನ ಅಣ್ಣನಾದ ಯಮಧರ್ಮನನ್ನು ಅತ್ಯಂತ ಆದರದಿಂದ ತನ್ನ ಮನೆಗೆ ಕರೆದು ಭೋಜನ ಮಾಡಿಸಿ ಸತ್ಕರಿಸಿ ಕೊಟ್ಟು ಕಳುಹಿಸಿದಳು. ಆ ದಿನದಂದು ಯಮರಾಜನು ಪ್ರಾಣಿಗಳನ್ನು ಕರ್ಮಪಾಶದಿಂದ ಬದ್ಧರಾದ ನರಕಲೋಕದ ಪಾಪಿಗಳನ್ನೂ ಕೂಡ ಬಿಟ್ಟು ಬಿಡುತ್ತಾನೆ. ಅದರಿಂದ ಅವರು ತಮ್ಮ ಇಚ್ಛಾನುಸಾರವಾಗಿ ಭೂಲೋಕದಲ್ಲಿ ಸಂಚರಿಸುತ್ತಾರೆ. ಈ ಯಮ ದ್ವಿತೀಯಾ ತಿಥಿಯಂದು ಎಂಥ ವಿದ್ವಾಂಸನಾದರೂ ಮನೆಯಲ್ಲಿ ಊಟ ಮಾಡದೇ ಸೋದರಿಯರು ಇದ್ದಲ್ಲಿಯೇ ಅವರ ಮನೆಗೆ ಹೋಗಿ ಊಟ ಮಾಡಿ ಬರಬೇಕು. ಮತ್ತು ತನ್ನ ಸೋದರಿಗೆ ಆನಂದದಿಂದ ವಸ್ತ್ರ ಆಭರಣ ಕೊಟ್ಟು ಅವಳ ಪೂಜೆ ಮಾಡಿ ಅವಳಿಗೆ ನಮಸ್ಕಾರ ಮಾಡಿ ಆಶೀರ್ವಾದ ಪಡೆಯಬೇಕು. ತನ್ನ ಚಿಕ್ಕ ಸೋದರಿಯರಿಗೆಲ್ಲರಿಗೂ ವಸ್ತ್ರ ಅಲಂಕಾರ ಕೊಟ್ಟು ಸಂತೋಷಪಡಿಸಬೇಕು. ತನಗೆ ಖಾಸ ಅಕ್ಕ ತಂಗಿಯರು ಇಲ್ಲದಿದ್ದರೆ ತನ್ನ ಅಕ್ಕನ ಹೆಣ್ಣು ಮಕ್ಕಳು ಅಥವಾ ತನ್ನ ತಂದೆಯ ಅಕ್ಕ ತಂಗಿಯರ ಮನೆಗೆ ಹೋಗಿ ಊಟ ಮಾಡಿ ಕಾಣಿಕೆ ಕೊಟ್ಟು ಬರಬೇಕು.

ನಾರದಾ, ಹೀಗೆ ಈ ಯಮದ್ವಿತೀಯಾ, ಅಥವಾ ಭಾವಬಿದಿಗೆಯ ತಿಥಿಯ ಆಚರಣವನ್ನು ವಿಧಿಪೂರ್ವಕವಾಗಿ ಮಾಡಿದವನ ಅಪಮೃತ್ಯುವಿನ ಕುತ್ತುವಿಪತ್ತು ದೂರವಾಗಿ ಇಲ್ಲಿ ಇರುವವರೆಗೆ ಸಂತಾನ ಸಂಪತ್ತು ಸೌಭಾಗ್ಯಗಳಿಂದ ಸಂಪನ್ನನಾಗಿ ಬಾಳಿ ಬದುಕಿ ಕೊನೆಗೆ ಮೋಕ್ಷವನ್ನು ಕೂಡ ಹೊಂದುತ್ತಾನೆ. ಕಾರ್ತಿಕ ಶುಕ್ಲ ಪಕ್ಷ ದ್ವಿತೀಯಾ ದಿನದಂದು ಯಮುನಾ ನದಿಯಲ್ಲಿ ಸ್ನಾನ ಮಾಡಿದ ಪುರುಷನು ಎಂದೂ ಯಮಲೋಕಕ್ಕೆ ಹೋಗುವದಿಲ್ಲ. ಅಂದು ಸೋದರಿಯರಿಗೆ ವಸ್ತ್ರಾಭರಣ ಕೊಟ್ಟು ಸಂತೋಷ ಪಡಿಸಿದವನು ಒಂದು ವರ್ಷದ ವರೆಗೆ ವರ್ಗ ಕಲಹ ಅಥವಾ ಶತ್ರುಭಯವನ್ನು ಎದುರಿಸುವ ಪ್ರಸಂಗವು ಬರುವುದಿಲ್ಲ.

ಈ ದ್ವಿತೀಯಾ ದಿನದಲ್ಲಿ ಯಮುನೆಯು ಪ್ರೀತಿಯಿಂದ ತನ್ನ ಅಣ್ಣನಾದ ಯಮಧರ್ಮನಿಗೆ ಆ ದಿನ ಊಟ ಮಾಡಿಸಿದ್ದರಿಂದ ಪ್ರತಿಯೊಬ್ಬ ಮಾನವನೂ ತನ್ನ ಭಗಿನಿಯ ಹಸ್ತದಿಂದ ಭೋಜನವನ್ನು ಮಾಡಬೇಕು. ಜೇಲಿನಲ್ಲಿ ಇದ್ದ ಕೈದಿಗಳನ್ನು ಕೂಡ ಅಂದು ಅಕ್ಕ ತಂಗಿಯರ ಮನೆಯ ಊಟಕ್ಕಾಗಿ ರಾಜರಾದವರು ಕೊಟ್ಟು ಕಳುಹಿಸಬೇಕು. ತನ್ನ ಖಾಸ ಅಕ್ಕತಂಗಿಯರು ಇಲ್ಲದಿದ್ದರೆ ತನ್ನ ತಾಯಿಯ ಅಕ್ಕತಂಗಿ ಅಥವಾ ಸೋದರಮಾವನ ಮಗಳನ್ನು, ತನ್ನ ಗೋತ್ರದ ಅಥವಾ ಕುಟುಂಬದ ಸಂಬಂಧಿ ಹೆಣ್ಣುಮಗಳನ್ನು ತನ್ನ ಸೋದರಿ ಎಂದು ಭಾವಿಸಿ ಅವರನ್ನು ಮನೆಗೆ ಕರೆದು ಊಟಕ್ಕೆ ಹಾಕಿ ಹೊಸ ವಸ್ತ್ರವನ್ನು ನೀಡಬೇಕು. ಯಾರೂ ಸಿಕ್ಕದಿದ್ದರೆ ಕೊನೆಗೆ ಯಾವುದಾದರೂ ಒಂದು ಹಸು ಅಥವಾ ನದಿ ಕೊನೆಗೆ ಮರವನ್ನಾದರೂ ತಂಗಿಯೆಂದು ಮನ್ನಿಸಿ, ಬಡಬಗ್ಗರನ್ನು ಕರೆದು ಅಂತಹ ನದೀತೀರ ಅಥವಾ ಗಿಡದಡಿಯಲ್ಲಿ ಊಟಕ್ಕೆ ಹಾಕಬೇಕು, ದೀನ ದರಿದ್ರ ಸ್ತ್ರೀಯರಿಗೆ.

## ನೆಲ್ಲಿಗಿಡದ ಉತ್ಪತ್ತಿ ಮತ್ತು ಆದರ ಮಹಿಮೆ | ಅಧ್ಯಾಯ - ೬೦

**ಸೂತ:-** ಕಾರ್ತೀಕ ಶುಕ್ಲಪಕ್ಷ ಚತುರ್ದಶೀ ದಿನದಂದು ಧಾತ್ರೀವೃಕ್ಷ ಅರ್ಥಾತ್ ನೆಲ್ಲೀಗಿಡವನ್ನು ಪೂಜೆ ಮಾಡಬೇಕು. ಧಾತ್ರೀ, ಆಮಲಕೀ, ಅಮೃತಾ, ತಿಕ್ತಫಲಾ ಎಂದು ಮುಂತಾಗಿ ಕರೆಯಲ್ಪಡುವ ಈ ನೆಲ್ಲೀ ಗಿಡವು ಮಾನವರ ಸರ್ವಪಾಪಗಳನ್ನು ಪರಿಹರಿಸುವ ಪುಣ್ಯ ವೃಕ್ಷವು ಆಗಿರುತ್ತದೆ. ಕಾರ್ತೀಕ ಶುಕ್ಲಪಕ್ಷದ ಚತುರ್ದಶಿ ತಿಥಿಗೆ ವೈಕುಂಠ ಚತುರ್ದಶಿ ಎಂದು ಕರೆಯುತ್ತಾರೆ. ಆ ದಿನ ನೆಲ್ಲೀಗಿಡದ ನೆರಳಿನಲ್ಲಿ ಹೋಗಿ ರಾಧಾ ದೇವಿಯಿಂದ ಸಹಿತನಾದ ದಾಮೋದರದೇವರನ್ನು ಪೂಜೆಮಾಡಬೇಕು. ಆ ಗಿಡದಡಿಯಲ್ಲಿಯೇ ರಾಧಾಕೃಷ್ಣರ ಜೋಡಿಯನ್ನು ಕೂಡಿಸಿ ಪೂಜೆಗೈಯಬೇಕು. ಮತ್ತು ರಾಧಾ-ದಾಮೋದರ ಸಹಿತವಾಗಿ ಆ ನೆಲ್ಲೀಮರಕ್ಕೆ ಒಂದುನೂರಾಎಂಟು (೧೦೮) ಪ್ರದಕ್ಷಿಣೆಗಳನ್ನು ಹಾಕಬೇಕು.

ಅನಂತರ ಆ ಮರಕ್ಕೂ ಹಾಗೂ ರಾಧಾ-ಕೃಷ್ಣರಿಗೂ ಯಥಾಶಕ್ತಿ ಸಾಷ್ಟಾಂಗ ವಂದನೆಗಳನ್ನು ಅರ್ಪಿಸಿ ಆ ಧಾತ್ರೀ ವೃಕ್ಷದ ನೆರಳಿನಲ್ಲಿಯೇ ಕುಳಿತು ಭಗವಂತನ ಮಹಿಮೆ ಕಥೆಗಳನ್ನು ಶ್ರವಣ ಮಾಡಬೇಕು. ಧಾತ್ರೀ ವೃಕ್ಷದ ಛಾಯೆಯಲ್ಲಿಯೇ ಅಡಿಗೆ ಮಾಡಬೇಕು. ದೇವರ ಪೂಜೆ ವಿದ್ವಾಂಸರ ಭೋಜನ ಮೊದಲಾದವುಗಳನ್ನು ಮಾಡಿಸಿ ಇಷ್ಟಮಿತ್ರ ಪರಿವಾರದೊಂದಿಗೆ ತಾನೂ ಕೂಡ ಅದೇ ನೆರಳಿನಲ್ಲಿ ಊಟಮಾಡಬೇಕು. ಯಥಾಶಕ್ತಿ ದಾನ ದಕ್ಷಿಣೆ ಕೂಡಬೇಕು.

### ನೆಲ್ಲಿಗಿಡ ಎಲ್ಲಿ ಹುಟ್ಟಿತು ?

ಹಿಂದೆ ಪ್ರಳಯ ಕಾಲದಲ್ಲಿ ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ಏಕಾರ್ಣವ ಸಮುದ್ರದಲ್ಲಿ ಮುಳುಗಿ ಹೋಗಿದ್ದಿತು. ಆ ಕಾಲದಲ್ಲಿ ಭಗವಂತನ ಹೊಕ್ಕಳದ ಹೊಂದಾವರೆಯಲ್ಲಿ ಹುಟ್ಟಿದ ಚತುರ್ಮುಖ ಬ್ರಹ್ಮದೇವನು ಏಕಾಕಿಯಾಗಿ ತಾನು ಹುಟ್ಟಿ ಬಂದ ಪದ್ಮಪೀಠದಲ್ಲಿಯೇ ಕುಳಿತುಕೊಂಡು ಶ್ರೀಹರಿಯನ್ನು ಕುರಿತು ತಪಸ್ಸನ್ನು ಮಾಡತೊಡಗಿದನು. ಆ ಏಕಾರ್ಣವ ಸಾಗರದ ಏಕಾಂತ ಸಲಿಲಾಂತರಂಗದಲ್ಲಿ ಏಕಾಂಗಿಯಾಗಿ ಬ್ರಹ್ಮದೇವರು ಏಕಾಗ್ರ ಮನಸ್ಸಿನಿಂದ ಭಗವದೇಕ ನಿಷ್ಠನಾಗಿ ಅಖಂಡ

ಜಪವನ್ನು ಮಾಡತೊಡಗಿದಾಗ ಜಗದೀಶ್ವರನು ಆ ಪಿತಾಮಹನ ತಪೋನುಷ್ಠಾನದಿಂದ ಪ್ರೀತ ಪ್ರಸನ್ನ ನಾಗಿ ಪ್ರತ್ಯಕ್ಷ ದರ್ಶನ ನೀಡಿದ. ಭಗವಾನ್ ನಾರಾಯಣನ ದೇದೀಪ್ಯಮಾನವಾದ ಆ ದಿವ್ಯ ಸುಂದರ ಶರೀರವನ್ನು ಕಂಡು ಬ್ರಹ್ಮದೇವನಿಗೆ ಪರಮಾನಂದವಾಯಿತು. ಆನಂದ ಬಾಷ್ಪಗಳು ಅವರ ಕಣ್ಣಿನಿಂದ ಉರುಳಿ ನೆಲದ ಮೇಲೆ ಬಿದ್ದವು. ಬ್ರಹ್ಮದೇವರ ಕಣ್ಣಿನಿಂದ ನೀರು ಬಿದ್ದ ನೆಲದಲ್ಲಿಯೇ ಈ ಧಾತ್ರೀ ಗಿಡವು ಉತ್ಪನ್ನ ವಾಯಿತು. ಬ್ರಹ್ಮದೇವರ ಆನಂದ ಬಾಷ್ಪದಿಂದ ಮೊಟ್ಟಮೊದಲು ನೆಲದ ಮೇಲೆ ಹುಟ್ಟಿದ ಮರವಾದುದರಿಂದ ಈ ನೆಲ್ಲಿಗಿಡಕ್ಕೆ **'ಆದಿರೋಹ'** ಎಂಬ ಹೆಸರು ಬಂದಿತು.

ಭಗವಂತನ ಅಪ್ಪಣೆಯ ಪ್ರಕಾರ ಬ್ರಹ್ಮದೇವನು ಮೊಟ್ಟ ಮೊದಲು ಈ ಧರಿತ್ರೀತಳದಲ್ಲಿ ಧಾತ್ರೀ ವೃಕ್ಷವನ್ನು ನಿರ್ಮಾಣ ಮಾಡಿ ಅನಂತರ ಉಳಿದೆಲ್ಲ ಪ್ರಜೆಗಳನ್ನೂ, ವನಸ್ಪತಿಗಳನ್ನೂ ಪ್ರಪಂಚವನ್ನೂ ನಿರ್ಮಾಣ ಮಾಡಿದನು. ಅನಂತರ ಎಲ್ಲ ದೇವತೆಗಳ ಸೃಷ್ಟಿ ಆಯಿತು. ದೇವತೆಗಳೆಲ್ಲರೂ ಉತ್ಪನ್ನರಾದ ಬಳಿಕ ಅವರೆಲ್ಲರೂ ಶ್ರೀಹರಿಗೆ ಪರಮ ಪ್ರೀತ್ಯಾಸ್ಪದವಾದ ಈ ಧಾತ್ರೀ ವೃಕ್ಷವಿದ್ದಲ್ಲಿಗೆ ಬಂದರು. ಬ್ರಹ್ಮದೇವರ ಆನಂದದ ಅಶ್ರುವಿನಿಂದ ಉತ್ಪನ್ನವಾದ ಆ ನೆಲ್ಲೀ ಮರವನ್ನು ಕಂಡು ಸುರರಿಗೆಲ್ಲರಿಗೂ ಅತ್ಯಾಶ್ಚರ್ಯವಾಯಿತು. ಆಗಲೇ ಆಕಾಶವಾಣಿ ಆಯಿತು-

"ಈ ಧಾತ್ರೀ ವೃಕ್ಷವು ಎಲ್ಲ ವೃಕ್ಷ ವನಸ್ಪತಿಗಳಿಗಿಂತ ಸರ್ವಶ್ರೇಷ್ಠವಾಗಿರುತ್ತದೆ. ವಿಷ್ಣುವಿಗೆ ಪರಮ ಪ್ರೀತ್ಯಾಸ್ಪದವಾದ ಗಿಡವೆಂದರೆ ಈ ನೆಲ್ಲೀ ಮರವೇ. ಧಾತ್ರೀ ವೃಕ್ಷದ ಸ್ಮರಣ ಮಾತ್ರದಿಂದಲೇ ಗೋದಾನವನ್ನು ನೀಡಿದ ಪುಣ್ಯ ಬರುವುದು. ಇದರ ಎರಡು ಪಟ್ಟು ಪುಣ್ಯ ಧಾತ್ರೀ ವೃಕ್ಷದ ದರ್ಶನದಿಂದ. ನೆಲ್ಲೀಕಾಯಿ ಅಥವಾ ಹಣ್ಣುಗಳನ್ನು ತಿನ್ನುವುದರಿಂದ ಮೂರುಪಟ್ಟು ಪುಣ್ಯವು ಪ್ರಾಪ್ತವಾಗುವದು. ಆದ್ದರಿಂದ ಕಾರ್ತೀಕ ಮಾಸದಲ್ಲಿ ಸರ್ವಪ್ರಯತ್ನದಿಂದಲೂ ಧಾತ್ರೀ ವೃಕ್ಷದ ಸೇವನೆಯನ್ನು ಮಾಡಬೇಕು."

## ಶ್ರೇಷ್ಠ ತಂದೆ, ಭ್ರಷ್ಟ ಮಗ

ಪೂರ್ವಕಾಲದಲ್ಲಿ ಕಾವೇರಿ ನದಿಯ ಉತ್ತರ ತೀರದಲ್ಲಿ ದೇವಶರ್ಮ ಎಂಬ ಹೆಸರಿನ ಓರ್ವ ಸದಾಚಾರಿ ಬ್ರಾಹ್ಮಣನು ವಾಸವಾಗಿದ್ದನು. ವೇದಗಳಲ್ಲಿ ಕೋವಿದ. ವೇದಾಂಗಗಳಲ್ಲಿ ಮಹಾಪಂಡಿತ. ಶಾಸ್ತ್ರಗಳಲ್ಲಿ ಪಾರಂಗತ ಆ ದೇವಶರ್ಮ. ಮೇಲೆ ಸದಾಚಾರ ಸಂಪನ್ನ. ಹರಿಗುರು ಭಕ್ತ. ಯಾವಾಗಲೂ ಜಪತಪ ಹರಿಧ್ಯಾನ ರೂಪವಾದ ಸತ್ಕರ್ಮಗಳ ಅನುಷ್ಠಾನದಲ್ಲಿಯೇ ನಿರತ. ಸಾಧುಶ್ರೇಷ್ಠ. ಆದರೆ ಅವನ ಮಗನು ಅಷ್ಟೇ ದುಷ್ಟ. ಮಹಾ ಭ್ರಷ್ಟ. ಅತ್ಯಂತ ಪಾಪಿಷ್ಠ. ಒಂದು ದಿನ ದೇವಶರ್ಮನು ತನ್ನ ಮಗನನ್ನು ಕುರಿತು ಹೇಳಿದನು.

**ದೇವಶರ್ಮ:-** 'ವತ್ಸ! ಇದು ಕಾರ್ತಿಕ ಮಾಸ. ಒಳ್ಳೆ ಪುಣ್ಯ ಸಮಯ. ವಿಷ್ಣುವಿಗೆ ಪರಮಪ್ರಿಯ ಈ ಕಾರ್ತಿಕ ಮಾಸ. ಈಗ ನೀನು ಒಂದು ತಿಂಗಳವರೆಗೆ ಪ್ರಾತಃಸ್ನಾನ ಮಾಡು. ಯಥಾಶಕ್ತಿ ದಾನ ನೀಡು. ಈಗ ವಿಹಿತವಾದ ದ್ವಿದಳ ವ್ರತವನ್ನು ಆಚರಿಸು. ತುಳಸಿಯಿಂದ ಶ್ರೀಹರಿಯ ಪೂಜೆಯನ್ನು ಮಾಡು. ಭಗವಂತನ ಎದುರು ದೀಪವನ್ನು ಹಚ್ಚಿಡು. ಪರಮಾತ್ಮನ ವಿಗ್ರಹಕ್ಕೆ ಪ್ರದಕ್ಷಿಣೆ ನಮಸ್ಕಾರ ಹಾಕು.'

ತಂದೆಯ ಈ ಸದುಪದೇಶವು ಬಹಳ ಕಹಿ ಎನಿಸಿತು ಆ ದುಷ್ಟ ಪುತ್ರನಿಗೆ. ತಂದೆಯ ಈ ಹಿತವಚನಗಳನ್ನು ಕೇಳಿ ಕೋಪದಿಂದ ಸಿಡಿಮಿಡಿಗೊಂಡ ಆ ದುಷ್ಟಪುತ್ರನು ತಂದೆಯನ್ನು ಧಿಕ್ಕರಿಸಿ ನುಡಿಕಿಡಿಗಳನ್ನು ಉದುರಿಸಿದ:- ''ಅಪ್ಪ ! ನಾನು ಈ ಕಾರ್ತೀಕ ಮಾಸದಲ್ಲಿ ನೀನು ಹೇಳಿದ ಯಾವ ಸ್ನಾನ, ದಾನ, ದೇವತಾ ಧ್ಯಾನ ಮುಂತಾದವುಗಳನ್ನು ಮಾಡುವದಿಲ್ಲ. ನನಗೆ ನಿಮ್ಮ ಆ ಪುಣ್ಯವೂ ಬೇಡ ಯಾವ ಪಾರತ್ರಿಕ ಫಲವೂ ಬೇಡ.'' ಎಂದು ನಿಷ್ಠುರವಾಗಿ ನುಡಿದ.

ಮಗನ ಈ ಉನ್ಮತ್ತ ವಚನವನ್ನು ಕೇಳಿ ತಂದೆಯಾದ ದೇವಶರ್ಮನಿಗೆ ಬಹಳ ಸಿಟ್ಟು ಬಂದಿತು. ಅವನು ಗರ್ವಾಂಧನಾದ ಆ ಮಗನನ್ನು ಹಳಿದು ಸಿಟ್ಟಿನಿಂದ ನುಡಿದನು:- 'ದುರ್ಬುದ್ಧಿಯೇ! ನೀನು ನನ್ನ ಹಿತವಚನವನ್ನು ಕೇಳಲಿಲ್ಲ. ಈ ಕಾರ್ತಿಕ ಮಾಸವನ್ನು, ಮಾಸಾಭಿಮಾನಿ ದೇವತೆಯನ್ನು ಧಿಕ್ಕರಿಸಿ ನಿಂದಿಸಿ ಗರ್ವದ ಮಾತುಗಳನ್ನು ಆಡಿದೆ. ಆದುದರಿಂದ ನೀನು ಇಲಿಯಾಗಿ ಒಂದು ಮರದ ಹೊದರಿನಲ್ಲಿ ಜನಿಸು' ಎಂದು ಶಾಪವಿತ್ತ. ಕೋಪದಿಂದ ಕುದಿಯುವ ತಂದೆಯ ಈ ದಾರುಣವಾದ ಶಾಪಾಕ್ಷರವನ್ನು ಕೇಳಿದ ಕೂಡಲೇ ಗಾಬರಿಯಾಯಿತು ಆ ದುಷ್ಟಪುತ್ರನಿಗೆ. ಕೂಡಲೇ ನಡುಗುತ್ತ ಹಡೆದ ತಂದೆಯ ಅಡಿದಾವರೆಗಳ ಮೇಲೆ ಬಂದು ಬಿದ್ದ. ''ಅಪರಾಧವಾಯಿತು. ಕ್ಷಮಿಸಿರಿ. ಮತ್ತು ನನಗೆ ಕ್ಷುದ್ರವಾದ ಆ ಇಲಿಯ ಜನ್ಮದಿಂದ ಉದ್ಧಾರ ಎಂದು?'' ಎಂದು ಕೇಳಿಕೊಂಡ.

**ದೇವಶರ್ಮ:-** ಭಗವಂತನಿಗೆ ಅತ್ಯಂತ ಪ್ರೀತ್ಯಾಸ್ಪದವಾದ ಕಾರ್ತೀಕ ವ್ರತದ ಪರಮ ಪವಿತ್ರವಾದ ಮಾಹಾತ್ಮ್ಯವನ್ನು ನೀನು ಎಂದು ಕೇಳುವೆಯೋ ಅಂದು ಕಥಾಶ್ರವಣ ಪ್ರಭಾವದಿಂದ ನಿನಗೆ ಮುಕ್ತಿಯಾಗುತ್ತದೆ ಆ ಮೂಷಕ ಯೋನಿಯಿಂದ.

ತಂದೆಯು ಈ ರೀತಿ ಹೇಳಿದ ಬಳಿಕ ಆ ಕ್ಷಣದಲ್ಲಿಯೇ ಇಲಿಯಾಗಿ ಬಿಟ್ಟ ಆ ದುಷ್ಟಪುತ್ರ. ಎಷ್ಟೋ ವರ್ಷಗಳವರೆಗೆ ನಿಬಿಡವಾದ ಮರಬಳ್ಳಿಗಳುಳ್ಳ ಒಂದು ವನದಲ್ಲಿ ಒಂದು ಮರದ ಹೊದರಿನಲ್ಲಿ ಇಲಿಯಾಗಿ ವಾಸಮಾಡಿದ. ಒಂದಾನೊಂದು ದಿನ ಕಾರ್ತಿಕ ಮಾಸವು ಬಂದಿತು. ಬ್ರಹ್ಮರ್ಷಿ ವಿಶ್ವಾಮಿತ್ರರು ನದೀಸ್ನಾನಕ್ಕೆ ಬಂದರು. ಅವರನ್ನು ಬೆಂಬಲಿಸಿ ನೂರಾರು ಜನ ಶಿಷ್ಯರು ಕಾರ್ತಿಕ ಸ್ನಾನಕ್ಕಾಗಿ ಅಲ್ಲಿಗೆ ಆಗಮಿಸಿದ್ದರು. ಎಲ್ಲರೂ ಅರುಣನ ಅರುಣವರ್ಣದ ಕಿರಣಗಳು ಧರಣೀತಳದಲ್ಲಿ ಹರಡಿದಾಗಲೇ ಎದ್ದು ನದಿಯ ಪವಿತ್ರವಾದ ಶೀತಲ ಉದಕದಲ್ಲಿ ಸ್ನಾನ ಮಾಡಿದರು. ತಮ್ಮ ತಮ್ಮ ದೇವರ ಪೆಟ್ಟಿಗೆಗಳನ್ನು ತೆಗೆದುಕೊಂಡು ನದಿಯ ದಂಡೆಯ ಮೇಲೆ ಇರುವ ಒಂದು ನೆಲ್ಲೀ ಗಿಡದ ಬುಡದಡಿಯಲ್ಲಿ ಕುಳಿತು ದೇವರ ಪೂಜೆ ಮಾಡಿದರು. ಸಹಸ್ರ ನಾಮಗಳನ್ನು ಉಚ್ಚರಿಸಿ ತುಳಸೀ ದಳಗಳಿಂದ ಕಾರ್ತೀಕ ರಾಧಾ ದಾಮೋದರರನ್ನು ಭಕ್ತಿಯಿಂದ ಪೂಜಿಸಿದರು. ಹೀಗೆ ಜಪ, ಪೂಜೆ, ಧ್ಯಾನ, ಮುಂತಾದ ತಮ್ಮ ತಮ್ಮ ಪ್ರಾತರಾಹ್ನಿಕವನ್ನು ಮುಗಿಸಿಕೊಂಡು ಎಲ್ಲರೂ ಧಾತ್ರೀ ವೃಕ್ಷದ ನೆರಳಿನಲ್ಲಿ ಬದ್ಧ ಪದ್ಮಾಸನದಲ್ಲಿ ಆಸೀನರಾದ ತಮ್ಮ ಗುರು ವಿಶ್ವಾಮಿತ್ರರಿದ್ದಲ್ಲಿಗೆ ಬಂದರು.

ಬ್ರಹ್ಮರ್ಷಿ ವಿಶ್ವಾಮಿತ್ರರು ಆ ಧಾತ್ರೀ ವೃಕ್ಷದ ನೆರಳಿನಲ್ಲಿ ಕುಳಿತು ಆ ಎಲ್ಲ ತಮ್ಮ ಶಿಷ್ಯರಿಗೆ ಕಾರ್ತೀಕ ಮಾಸದ ಮಾಹಾತ್ಮ್ಯವನ್ನು ಹೇಳತೊಡಗಿದರು. ಆಗ ಅದೇ ವೇಳೆಯಲ್ಲಿ ದುರಾಚಾರಿಯೂ ಹಿಂಸಾಚಾರಿಯೂ ಆದ ಒಬ್ಬ ಬೇಡನು ಬೇಟೆಯನ್ನಾಡುತ್ತ ಅಲ್ಲಿ ಬಂದನು. ಯಾವಾಗಲೂ ಹಿಂಸೆಯದೇ ಹಂಬಲ ಆ ಹಂತಕಾರಿ ಕಿರಾತನಿಗೆ. ಕಂಡದ್ದನ್ನೆಲ್ಲ ಕೊಲ್ಲುವುದೇ ಅವನ ಕುಲಕಸುಬು. ಅವನ ಕಣ್ಣಿಗೆ ಬಿದ್ದವರೆಲ್ಲ ಮೃತ್ಯುವಿನ ಕೈಗೆ ಬಿದ್ದಂತೆ.

ಇಂಥ ದುಷ್ಟನಾದ ಆ ದುರಾಚಾರಿ ವ್ಯಾಧನು ನದೀ ತಟಾಕದಲ್ಲಿ ಕುಳಿತ ಅನೇಕ ಋಷಿ ಮುನಿಗಳನ್ನು ಕಂಡು ಇವರೆಲ್ಲರನ್ನು ಅಲ್ಲಿಯೇ ಕೊಂದು ಹಾಕಬೇಕೆಂದು ಧಾವಿಸಿ ಬಂದ. ಬಿಲ್ಲು ಬಾಣಗಳನ್ನು ಕೈಯಲ್ಲಿ ಹಿಡಿದುಕೊಂಡು ಒಂದು ಕ್ಷಣ ನಿಂತುಕೊಂಡ. ಏಕಾಗ್ರಚಿತ್ತದಿಂದ ಕಾರ್ತೀಕ ಮಹಿಮೆಯನ್ನು ಹೇಳುವ ಮತ್ತು ಅಷ್ಟೇ ಆಸ್ಥೆಯಿಂದ ಕೇಳುವ ಆ ಭಕ್ತವೃಂದವನ್ನು ಕಣ್ಣಿಟ್ಟು ನೋಡಿದ. ಬ್ರಹ್ಮವರ್ಚಸ್ವಿಗಳಾದ ಆ ಗುರು ಶಿಷ್ಯರೆಲ್ಲರ ಅಧ್ಯಾತ್ಮ ತೇಜಸ್ಸಿನಿಂದ ತಳ ತಳ ಹೊಳೆಯುವ ತೇಜೋಭಾಸುರವಾದ ದೀಪ್ತ ಮುಖಮಂಡಲವನ್ನು ಕಂಡು ಒಮ್ಮೆಲೇ ಅವನ ಮನಸ್ಸು ಪರಿವರ್ತನವಾಯಿತು. ದುರ್ಬುದ್ಧಿ ದೂರವಾಯಿತು. ಅವರೆಲ್ಲರನ್ನೂ ಕೊಲ್ಲಬೇಕೆಂಬ ದುರ್ವಿಚಾರ ಮಾಯವಾಯಿತು.

ಕಥಾ ಪ್ರವಚನವನ್ನು ಮಾಡುವ ಆ ಮಹರ್ಷಿಗಳ ಬಗ್ಗೆ ಅವನ ಮನಸ್ಸಿನಲ್ಲಿ ಕೌತುಕ ಉದಿಸಿತು. ಆದರ ಹುಟ್ಟಿತು. ಭಕ್ತಿ ಉತ್ಪನ್ನವಾಯಿತು. ಮನಸ್ಸಿನಲ್ಲಿ ಒಳ್ಳೆ ಸದ್ಬುದ್ಧಿಯ ಉದಯವಾಯಿತು. ಕೂಡಲೇ ಅವನು ತನ್ನ ಕೈಯಲ್ಲಿಯ ಬಿಲ್ಲು ಬಾಣಗಳನ್ನು ಅಲ್ಲಿಯೇ ಚೆಲ್ಲಿ ಆ ಬ್ರಹ್ಮವೃಂದಕ್ಕೆ ದೀರ್ಘದಂಡ ನಮಸ್ಕಾರ ಹಾಕಿದ. ಮತ್ತು ಕೇಳಿದ-

''ಸ್ವಾಮಿ! ತಾವು ಎಲ್ಲರೂ ಈ ಧಾತ್ರೀ ಗಿಡದ ನೆರಳಿನಲ್ಲಿ ಏನು ಮಾಡುತ್ತಿರುವಿರಿ?'' ಆ ದುಷ್ಟಕಿರಾತನ ಈ ಪ್ರಶ್ನೆಗೆ ಸ್ವಯಂ ವಿಶ್ವಾಮಿತ್ರರೇ ಉತ್ತರ ಕೊಟ್ಟರು.

## ವಿಶ್ವಾಮಿತ್ರರ ಬಾಯಿಂದ ಕಾರ್ತೀಕ ವ್ರತದ ಬಣ್ಣನೆ

**ವಿಶ್ವಾಮಿತ್ರ:-** ''ವರ್ಷದ ಹನ್ನೆರಡು ತಿಂಗಳುಗಳಲ್ಲಿ ಕಾರ್ತಿಕ ಮಾಸವು ಪರಮ ಶ್ರೇಷ್ಠವಾಗಿದೆ. ಆದುದರಿಂದಲೇ ಅದು ಮಹಾವಿಷ್ಣುವಿಗೆ ಪರಮ ಪ್ರೀತ್ಯಾಸ್ಪದವಾದ ಮಾಸವಾಗಿದೆ. ಈ ಮಾಸದಲ್ಲಿ ಮಾಡಿದ ಧರ್ಮ, ಪುಣ್ಯ ಕರ್ಮಗಳಿಗೆ ಅನಂತ ಫಲ. ಕಾರ್ತೀಕ ಮಾಸದಲ್ಲಿ ಸ್ನಾನ, ಧ್ಯಾನ, ದಾನ, ದೇವರ ಪೂಜನ ಮುಂತಾದ ಭಗವಂತನ ಬಗೆ ಬಗೆಯ ಸೇವನವನ್ನು ಮಾಡಿದ ಮಾನವನು ಅಕ್ಷಯ ಪುಣ್ಯವನ್ನೂ ಮೋಕ್ಷಾದಿ ಪುರುಷಾರ್ಥಗಳನ್ನೂ ನಿಶ್ಚಿತವಾಗಿ ಪಡೆಯುತ್ತಾನೆ''

ಕಿರಾತನ ಈ ಪ್ರಶ್ನೆಗೆ ಉತ್ತರ ರೂಪವಾಗಿ ವಿಶ್ವಾಮಿತ್ರರು ಕಾರ್ತೀಕ ಮಾಸದ ಮಾಹಾತ್ಮ್ಯವನ್ನು ಹೇಳತೊಡಗಿದರು. ಅದೇ ಗಿಡದ ಒಂದು ಕೋಟರದ ಹೊದರಿನಲ್ಲಿ ಇಲಿಯಾಗಿ ಶಾಪ ಭ್ರಷ್ಟನಾಗಿ ಓಡಾಡುತ್ತಿರುವ ಆ ದೇವಶರ್ಮನ ದುಷ್ಟಪುತ್ರನು ಕಾರ್ತೀಕ ಮಾಸದ ಮಹಿಮಾಶ್ರವಣದಿಂದ ತಕ್ಷಣವೇ ಶಾಪಮುಕ್ತನಾದನು. ತತ್ಕಾಲದಲ್ಲಿ ಅವನಿಗೆ ಆ ಇಲಿಯ ಜನ್ಮದಿಂದ ಬಿಡುಗಡೆಯಾಯಿತು. ದಿವ್ಯದೀಪ್ತಿಯಿಂದ ಕಂಗೊಳಿಸುವ ಅವನ ಮೊದಲಿನ ದೇವತಾ ಶರೀರವು ಅವನಿಗೆ ಪ್ರಾಪ್ತವಾಯಿತು. ತನಗೆ ಕಾರ್ತೀಕ ಮಹಿಮೆಯನ್ನು ಹೇಳಿ ತನ್ನ ಆತ್ಮೋದ್ಧಾರಕ್ಕೆ ಕಾರಣೀಭೂತರಾದ ಮಹರ್ಷಿ ವಿಶ್ವಾಮಿತ್ರರನ್ನು ಭಕ್ತಿಯಿಂದ ನಮಸ್ಕಾರ ಮಾಡಿ ತನ್ನ ವೃತ್ತಾಂತವನ್ನೆಲ್ಲ ನಿವೇದಿಸಿದ. ಅವನನ್ನು ಕರೆಯಲು ಸ್ವರ್ಗಲೋಕದಿಂದಲೇ ಬಂದಿತ್ತು ಒಂದು ದಿವ್ಯ ವಿಮಾನ. ಅವನು ಮೊದಲು ಋಷಿಗಳ ಬಳಿಗೆ ಬಂದು ಅವರ ಅಡಿದಾವರೆಗಳಲ್ಲಿ ಹಣೆಚಾಚಿ ವಂದಿಸಿ ನಂತರ ತನ್ನ ಇತ್ಥಂಭೂತವಾದ ಚರಿತ್ರೆಯನ್ನೆಲ್ಲ ತಿಳಿಸಿದ. ಮಹರ್ಷಿಗಳ ಅಪ್ಪಣೆಯನ್ನು ಪಡೆದು ದಿವ್ಯವಿಮಾನವನ್ನು ಆರೋಹಣ ಮಾಡಿದ. ತನ್ನ ಸೌಭಾಗ್ಯದಿಂದ ಸ್ವರ್ಗಲೋಕವನ್ನು ಕುರಿತು ತೆರಳಿದ.

"ಧಾತ್ರೀ ವಿಧಾತ್ರೀ ಮುದಾಮ್"

ಇದನ್ನು ಕಂಡು ಆ ವ್ಯಾಧನಿಗೂ ಹಾಗೂ ವಿಶ್ವಾಮಿತ್ರರಿಗೂ ಪರಮ ಆಶ್ಚರ್ಯವಾಯಿತು. ಆ ಬೇಡನು ಮುನಿಗಳ ಪಾದದಡಿಯಲ್ಲಿ ಬಿದ್ದು ಬೇಡಿಕೊಂಡು ಕಾರ್ತೀಕ ವ್ರತದ ಪಾಲನದ ಬಗೆಯನ್ನು ಅರಿತುಕೊಂಡ. ಅದರಂತೆ ತಾನೂ ಕೂಡ ಕಾರ್ತೀಕ ಮಾಸದಲ್ಲಿ ಪ್ರಾತಃ ಸ್ನಾನ ಹರಿಯ ಧ್ಯಾನ ಮತ್ತು ನೆಲ್ಲೀ ಮರದ ನೆರಳಿನಲ್ಲಿ ಕಾರ್ತಿಕ ಮಾಸ ಮಹಿಮೆಯ ಶ್ರವಣ, ನಿಷಿದ್ಧ ಪದಾರ್ಥ ವರ್ಜನ, ಸಂತತವೂ ಭಗವಂತನ ಚಿಂತನ ಮುಂತಾದ ಕಾರ್ತೀಕ ಮಾಸದ ವ್ರತದ ಅನುಷ್ಠಾನವನ್ನು ಅನೂಚಾನವಾಗಿ ಯಾವುದಕ್ಕೂ ಕೊರತೆಯಿಲ್ಲದೇ ಮಾಡಿದ. ಅದರಿಂದ ಅವನು ನೇರವಾಗಿ ವೈಕುಂಠಲೋಕಕ್ಕೆ ಪ್ರಯಾಣ ಮಾಡಿದ. ಆದುದರಿಂದ ಕಾರ್ತೀಕ ಮಾಸದಲ್ಲಿ ಶಕ್ಯವಿದ್ದಷ್ಟು ಪ್ರಯತ್ನಮಾಡಿ ನೆಲ್ಲಿಗಿಡದ ಕೆಳಗೆ ಕುಳಿತು ದೇವರ ಪೂಜೆ ಮಾಡಿ ಕಾರ್ತೀಕ ಮಾಸ ಮಹಿಮೆಯನ್ನು ಶ್ರವಣ ಮಾಡಬೇಕು.

ಯಾರು ಕಾರ್ತೀಕ ಮಾಸದಲ್ಲಿ ಧಾತ್ರೀ ಮತ್ತು ತುಳಸೀ ಮಾಲೆಗಳನ್ನು ಧರಿಸುವರೋ ಅವರಿಗೆ ಪುಣ್ಯ ಅನಂತ. ಭಗವತ್ಪ್ರೀತಿ ಅತ್ಯಧಿಕ. ಧಾತ್ರೀ ವೃಕ್ಷದ ನೆರಳಿನಲ್ಲಿ ಕುಳಿತು ದೀಪಾರ್ಚನೆಯ ವಿಧಿಯಿಂದ ಭಗವಂತನಿಗೆ ದೀಪ ಮಾಲೆಗಳನ್ನು ಹಚ್ಚಿಟ್ಟು ಕಾರ್ತೀಕ ರಾಧಾ ದಾಮೋದರನ ಪೂಜೆಯನ್ನು ಮಾಡಿದವರಿಗೆ ಅನಂತ ಪುಣ್ಯ ಫಲ ಪ್ರಾಪ್ತಿಯಾಗುವದು. ವಿಶೇಷವಾಗಿ ತುಳಸೀ ವೃಕ್ಷದ ಕೆಳಗೆ ರಾಧಾಕೃಷ್ಣನ ಪೂಜೆಯನ್ನು ಮಾಡಬೇಕು. ತುಳಸಿ ಇಲ್ಲದಿದ್ದರೆ, ನೆಲ್ಲಿಮರದ ನೆರಳಿನಲ್ಲಿ ದೇವರ ಪೂಜೆಯನ್ನು ಆಚರಿಸಬೇಕು.

ಈ ನೆಲ್ಲೀಗಿಡದ ನೆರಳಿನಲ್ಲಿ ಕಾರ್ತೀಕ ಮಾಸದಲ್ಲಿ ಯೋಗ್ಯರಾದ ಶ್ರೋತ್ರಿಯ ದಂಪತಿಗಳನ್ನು ಆದರದಿಂದ ಕರೆದು ಯಥೇಚ್ಛವಾಗಿ ಭೋಜನವನ್ನು ಮಾಡಿಸಿ ತಾನೂ ಕೂಡ ಇಷ್ಟ ಮಿತ್ರರೊಂದಿಗೆ ಆ ಧಾತ್ರೀ ಛಾಯೆಯಲ್ಲಿಯೇ ಭೋಜನ ಮಾಡಬೇಕು. ಇದರಿಂದ ಮಾನವನು ಅನ್ನ ದೋಷದಿಂದ ಮುಕ್ತನಾಗುವನು. ಐಶ್ವರ್ಯ ಪ್ರಾಪ್ತಿ ಆಗಬೇಕು ಎಂದು ಇಚ್ಛಿಸುವ ಮನುಷ್ಯನು ನೆಲ್ಲಿಯ ಕಾಯಿಯನ್ನು ನೀರಿನಲ್ಲಿ ಹಾಕಿ ಸ್ನಾನವನ್ನು ಮಾಡಬೇಕು. ವಿಶೇಷವಾಗಿ ಏಕಾದಶೀ ದಿನದಂದು ನೆಲ್ಲೀ ಕಾಯಿಯ ಬೀಜವನ್ನು ಹಚ್ಚಿಕೊಂಡು ಸ್ನಾನಮಾಡಿದರೆ, ಶ್ರೀವಿಷ್ಣುವು ಪರಿ ತುಷ್ಟನಾಗುತ್ತಾನೆ. ನವಮೀ ಅಮಾವಾಸ್ಯಾ, ಸಪ್ತಮೀ, ಸಂಕ್ರಾಂತಿ, ರವಿವಾರ, ಚಂದ್ರಗ್ರಹಣ, ಹಾಗೂ ಸೂರ್ಯಗ್ರಹಣದ ದಿನಗಳಂದು ನೆಲ್ಲೀಕಾಯಿ ಬೆರಸಿದ ನೀರಿನಿಂದ ಸ್ನಾನ ಮಾಡಬಾರದು.

**"ನವಮ್ಯಾಂ ದರ್ಶೇ ಸಪ್ತಮ್ಯಾಂ ಸಂಕ್ರಾಂತೌ ರವಿವಾಸರೇ ।**
**ಚಂದ್ರಸೂರ್ಯೋಽಪ ರಾಗೇ ಚ ಸ್ನಾನಮಾಮಲಕೈಃ ತ್ಯಜೇತ್ ॥**

ಎಂದು ಈ ವಿಷಯದಲ್ಲಿ ಪ್ರಮಾಣ ಇದ್ದುದರಿಂದ ಈ ದಿನಗಳಲ್ಲಿ ನೆಲ್ಲಿ ಬೀಜವನ್ನು ನೀರಿನಲ್ಲಿ ಹಾಕಿ ಅಥವಾ ಅದನ್ನು ತಿಕ್ಕಿ ಮೈಗೆ ಹಚ್ಚಿಕೊಂಡು ಸ್ನಾನವನ್ನು ಮಾಡಬಾರದು. ಈ ಧಾತ್ರೀ ಗಿಡದ ನೆರಳಿನಲ್ಲಿ ಕುಳಿತು ಪಿತೃಗಳನ್ನು ಉದ್ದೇಶಿಸಿ ಪಿಂಡಪ್ರದಾನ ಮಾಡಿದರೆ ಪಿತೃಗಳೆಲ್ಲರೂ ಮೋಕ್ಷಭಾಗಿಗಳೇ ಆಗುವರು.

ಇಂಥ ದುಷ್ಟನಾದ ಆ ದುರಾಚಾರಿ ವ್ಯಾಧನು ನದೀ ತಟಾಕದಲ್ಲಿ ಕುಳಿತ ಅನೇಕ ಋಷಿ ಮುನಿಗಳನ್ನು ಕಂಡು ಇವರೆಲ್ಲರನ್ನು ಅಲ್ಲಿಯೇ ಕೊಂದು ಹಾಕಬೇಕೆಂದು ಧಾವಿಸಿ ಬಂದ. ಬಿಲ್ಲು ಬಾಣಗಳನ್ನು ಕೈಯಲ್ಲಿ ಹಿಡಿದುಕೊಂಡು ಒಂದು ಕ್ಷಣ ನಿಂತುಕೊಂಡ. ಏಕಾಗ್ರಚಿತ್ತದಿಂದ ಕಾರ್ತೀಕ ಮಹಿಮೆಯನ್ನು ಹೇಳುವ ಮತ್ತು ಅಷ್ಟೇ ಆಸ್ಥೆಯಿಂದ ಕೇಳುವ ಆ ಭಕ್ತವೃಂದವನ್ನು ಕಣ್ಣಿಟ್ಟು ನೋಡಿದ. ಬ್ರಹ್ಮವರ್ಚಸ್ವಿಗಳಾದ ಆ ಗುರು ಶಿಷ್ಯರೆಲ್ಲರ ಅಧ್ಯಾತ್ಮ ತೇಜಸ್ಸಿನಿಂದ ತಳ ತಳ ಹೊಳೆಯುವ ತೇಜೋಭಾಸುರವಾದ ದೀಪ್ತ ಮುಖಮಂಡಲವನ್ನು ಕಂಡು ಒಮ್ಮೆಲೇ ಅವನ ಮನಸ್ಸು ಪರಿವರ್ತನವಾಯಿತು. ದುರ್ಬುದ್ಧಿ ದೂರವಾಯಿತು. ಅವರೆಲ್ಲರನ್ನೂ ಕೊಲ್ಲಬೇಕೆಂಬ ದುರ್ವಿಚಾರ ಮಾಯವಾಯಿತು.

ಕಥಾ ಪ್ರವಚನವನ್ನು ಮಾಡುವ ಆ ಮಹರ್ಷಿಗಳ ಬಗ್ಗೆ ಅವನ ಮನಸ್ಸಿನಲ್ಲಿ ಕೌತುಕ ಉದಿಸಿತು. ಆದರ ಹುಟ್ಟಿತು. ಭಕ್ತಿ ಉತ್ಪನ್ನವಾಯಿತು. ಮನಸ್ಸಿನಲ್ಲಿ ಒಳ್ಳೆ ಸದ್ಬುದ್ಧಿಯ ಉದಯವಾಯಿತು. ಕೂಡಲೇ ಅವನು ತನ್ನ ಕೈಯಲ್ಲಿಯ ಬಿಲ್ಲು ಬಾಣಗಳನ್ನು ಅಲ್ಲಿಯೇ ಚೆಲ್ಲಿ ಆ ಬ್ರಹ್ಮವೃಂದಕ್ಕೆ ದೀರ್ಘದಂಡ ನಮಸ್ಕಾರ ಹಾಕಿದ. ಮತ್ತು ಕೇಳಿದ-

''ಸ್ವಾಮಿ! ತಾವು ಎಲ್ಲರೂ ಈ ಧಾತ್ರೀ ಗಿಡದ ನೆರಳಿನಲ್ಲಿ ಏನು ಮಾಡುತ್ತಿರುವಿರಿ?'' ಆ ದುಷ್ಟಕಿರಾತನ ಈ ಪ್ರಶ್ನೆಗೆ ಸ್ವಯಂ ವಿಶ್ವಾಮಿತ್ರರೇ ಉತ್ತರ ಕೊಟ್ಟರು.

## ವಿಶ್ವಾಮಿತ್ರರ ಬಾಯಿಂದ ಕಾರ್ತೀಕ ವ್ರತದ ಬಣ್ಣನೆ

**ವಿಶ್ವಾಮಿತ್ರ:-** ''ವರ್ಷದ ಹನ್ನೆರಡು ತಿಂಗಳುಗಳಲ್ಲಿ ಕಾರ್ತಿಕ ಮಾಸವು ಪರಮ ಶ್ರೇಷ್ಠವಾಗಿದೆ. ಆದುದರಿಂದಲೇ ಅದು ಮಹಾವಿಷ್ಣುವಿಗೆ ಪರಮ ಪ್ರೀತ್ಯಾಸ್ಪದವಾದ ಮಾಸವಾಗಿದೆ. ಈ ಮಾಸದಲ್ಲಿ ಮಾಡಿದ ಧರ್ಮ, ಪುಣ್ಯ ಕರ್ಮಗಳಿಗೆ ಅನಂತ ಫಲ. ಕಾರ್ತೀಕ ಮಾಸದಲ್ಲಿ ಸ್ನಾನ, ಧ್ಯಾನ, ದಾನ, ದೇವರ ಪೂಜನ ಮುಂತಾದ ಭಗವಂತನ ಬಗೆ ಬಗೆಯ ಸೇವನವನ್ನು ಮಾಡಿದ ಮಾನವನು ಅಕ್ಷಯ ಪುಣ್ಯವನ್ನೂ ಮೋಕ್ಷಾದಿ ಪುರುಷಾರ್ಥಗಳನ್ನೂ ನಿಶ್ಚಿತವಾಗಿ ಪಡೆಯುತ್ತಾನೆ''

ಕಿರಾತನ ಈ ಪ್ರಶ್ನೆಗೆ ಉತ್ತರ ರೂಪವಾಗಿ ವಿಶ್ವಾಮಿತ್ರರು ಕಾರ್ತೀಕ ಮಾಸದ ಮಾಹಾತ್ಮ್ಯವನ್ನು ಹೇಳತೊಡಗಿದರು. ಅದೇ ಗಿಡದ ಒಂದು ಕೋಟರದ ಹೊದರಿನಲ್ಲಿ ಇಲಿಯಾಗಿ ಶಾಪ ಭ್ರಷ್ಟನಾಗಿ ಓಡಾಡುತ್ತಿರುವ ಆ ದೇವಶರ್ಮನ ದುಷ್ಟಪುತ್ರನು ಕಾರ್ತೀಕ ಮಾಸದ ಮಹಿಮಾಶ್ರವಣದಿಂದ ತಕ್ಷಣವೇ ಶಾಪಮುಕ್ತನಾದನು. ತತ್ಕಾಲದಲ್ಲಿ ಅವನಿಗೆ ಆ ಇಲಿಯ ಜನ್ಮದಿಂದ ಬಿಡುಗಡೆಯಾಯಿತು. ದಿವ್ಯದೀಪ್ತಿಯಿಂದ ಕಂಗೊಳಿಸುವ ಅವನ ಮೊದಲಿನ ದೇವತಾ ಶರೀರವು ಅವನಿಗೆ ಪ್ರಾಪ್ತವಾಯಿತು. ತನಗೆ ಕಾರ್ತೀಕ ಮಹಿಮೆಯನ್ನು ಹೇಳಿ ತನ್ನ ಆತ್ಮೋದ್ಧಾರಕ್ಕೆ ಕಾರಣೀಭೂತರಾದ ಮಹರ್ಷಿ ವಿಶ್ವಾಮಿತ್ರರನ್ನು ಭಕ್ತಿಯಿಂದ ನಮಸ್ಕಾರ ಮಾಡಿ ತನ್ನ ವೃತ್ತಾಂತವನ್ನೆಲ್ಲ ನಿವೇದಿಸಿದ. ಅವನನ್ನು ಕರೆಯಲು ಸ್ವರ್ಗಲೋಕದಿಂದಲೇ ಬಂದಿತ್ತು ಒಂದು ದಿವ್ಯ ವಿಮಾನ. ಅವನು ಮೊದಲು ಋಷಿಗಳ ಬಳಿಗೆ ಬಂದು ಅವರ ಅಡಿದಾವರೆಗಳಲ್ಲಿ ಹಣೆಚಾಚಿ ವಂದಿಸಿ ನಂತರ ತನ್ನ ಇತ್ಥಂಭೂತವಾದ ಚರಿತ್ರೆಯನ್ನೆಲ್ಲ ತಿಳಿಸಿದ. ಮಹರ್ಷಿಗಳ ಅಪ್ಪಣೆಯನ್ನು ಪಡೆದು ದಿವ್ಯವಿಮಾನವನ್ನು ಆರೋಹಣೆ ಮಾಡಿದ. ತನ್ನ ಸೌಭಾಗ್ಯದಿಂದ ಸ್ವರ್ಗಲೋಕವನ್ನು ಕುರಿತು ತೆರಳಿದ.

"ಧಾತ್ರೀ ವಿಧಾತ್ರೀ ಮುದಾಮ್"

ಇದನ್ನು ಕಂಡು ಆ ವ್ಯಾಧನಿಗೂ ಹಾಗೂ ವಿಶ್ವಾಮಿತ್ರರಿಗೂ ಪರಮ ಆಶ್ಚರ್ಯವಾಯಿತು. ಆ ಬೇಡನು ಮುನಿಗಳ ಪಾದದಡಿಯಲ್ಲಿ ಬಿದ್ದು ಬೇಡಿಕೊಂಡು ಕಾರ್ತೀಕ ವ್ರತದ ಪಾಲನದ ಬಗೆಯನ್ನು ಅರಿತುಕೊಂಡ. ಅದರಂತೆ ತಾನೂ ಕೂಡ ಕಾರ್ತೀಕ ಮಾಸದಲ್ಲಿ ಪ್ರಾತಃ ಸ್ನಾನ ಹರಿಯ ಧ್ಯಾನ ಮತ್ತು ನೆಲ್ಲೀ ಮರದ ನೆರಳಿನಲ್ಲಿ ಕಾರ್ತಿಕ ಮಾಸ ಮಹಿಮೆಯ ಶ್ರವಣ, ನಿಷಿದ್ಧ ಪದಾರ್ಥ ವರ್ಜನ, ಸಂತತವೂ ಭಗವಂತನ ಚಿಂತನ ಮುಂತಾದ ಕಾರ್ತೀಕ ಮಾಸದ ವ್ರತದ ಅನುಷ್ಠಾನವನ್ನು ಅನೂಚಾನವಾಗಿ ಯಾವುದಕ್ಕೂ ಕೊರತೆಯಿಲ್ಲದೇ ಮಾಡಿದ. ಅದರಿಂದ ಅವನು ನೇರವಾಗಿ ವೈಕುಂಠಲೋಕಕ್ಕೆ ಪ್ರಯಾಣ ಮಾಡಿದ. ಆದುದರಿಂದ ಕಾರ್ತೀಕ ಮಾಸದಲ್ಲಿ ಶಕ್ಯವಿದ್ದಷ್ಟು ಪ್ರಯತ್ನಮಾಡಿ ನೆಲ್ಲಿಗಿಡದ ಕೆಳಗೆ ಕುಳಿತು ದೇವರ ಪೂಜೆ ಮಾಡಿ ಕಾರ್ತೀಕ ಮಾಸ ಮಹಿಮೆಯನ್ನು ಶ್ರವಣ ಮಾಡಬೇಕು.

ಯಾರು ಕಾರ್ತೀಕ ಮಾಸದಲ್ಲಿ ಧಾತ್ರೀ ಮತ್ತು ತುಳಸೀ ಮಾಲೆಗಳನ್ನು ಧರಿಸುವರೋ ಅವರಿಗೆ ಪುಣ್ಯ ಅನಂತ. ಭಗವತ್ಪ್ರೀತಿ ಅತ್ಯಧಿಕ. ಧಾತ್ರೀ ವೃಕ್ಷದ ನೆರಳಿನಲ್ಲಿ ಕುಳಿತು ದೀಪಾರ್ಚನೆಯ ವಿಧಿಯಿಂದ ಭಗವಂತನಿಗೆ ದೀಪ ಮಾಲೆಗಳನ್ನು ಹಚ್ಚಿಟ್ಟು ಕಾರ್ತೀಕ ರಾಧಾ ದಾಮೋದರನ ಪೂಜೆಯನ್ನು ಮಾಡಿದವರಿಗೆ ಅನಂತ ಪುಣ್ಯ ಫಲ ಪ್ರಾಪ್ತಿಯಾಗುವದು. ವಿಶೇಷವಾಗಿ ತುಳಸೀ ವೃಕ್ಷದ ಕೆಳಗೆ ರಾಧಾಕೃಷ್ಣನ ಪೂಜೆಯನ್ನು ಮಾಡಬೇಕು. ತುಳಸಿ ಇಲ್ಲದಿದ್ದರೆ, ನೆಲ್ಲಿಮರದ ನೆರಳಿನಲ್ಲಿ ದೇವರ ಪೂಜೆಯನ್ನು ಆಚರಿಸಬೇಕು.

ಈ ನೆಲ್ಲೀಗಿಡದ ನೆರಳಿನಲ್ಲಿ ಕಾರ್ತೀಕ ಮಾಸದಲ್ಲಿ ಯೋಗ್ಯರಾದ ಶ್ರೋತ್ರಿಯ ದಂಪತಿಗಳನ್ನು ಆದರದಿಂದ ಕರೆದು ಯಥೇಚ್ಛವಾಗಿ ಭೋಜನವನ್ನು ಮಾಡಿಸಿ ತಾನೂ ಕೂಡ ಇಷ್ಟ ಮಿತ್ರರೊಂದಿಗೆ ಆ ಧಾತ್ರೀ ಛಾಯೆಯಲ್ಲಿಯೇ ಭೋಜನ ಮಾಡಬೇಕು. ಇದರಿಂದ ಮಾನವನು ಅನ್ನ ದೋಷದಿಂದ ಮುಕ್ತನಾಗುವನು. ಐಶ್ವರ್ಯ ಪ್ರಾಪ್ತಿ ಆಗಬೇಕು ಎಂದು ಇಚ್ಛಿಸುವ ಮನುಷ್ಯನು ನೆಲ್ಲಿಯ ಕಾಯಿಯನ್ನು ನೀರಿನಲ್ಲಿ ಹಾಕಿ ಸ್ನಾನವನ್ನು ಮಾಡಬೇಕು. ವಿಶೇಷವಾಗಿ ಏಕಾದಶೀ ದಿನದಂದು ನೆಲ್ಲೀ ಕಾಯಿಯ ಬೀಜವನ್ನು ಹಚ್ಚಿಕೊಂಡು ಸ್ನಾನಮಾಡಿದರೆ, ಶ್ರೀವಿಷ್ಣುವು ಪರಿ ತುಷ್ಟನಾಗುತ್ತಾನೆ. ನವಮೀ ಅಮಾವಾಸ್ಯಾ, ಸಪ್ತಮೀ, ಸಂಕ್ರಾಂತಿ, ರವಿವಾರ, ಚಂದ್ರಗ್ರಹಣ, ಹಾಗೂ ಸೂರ್ಯಗ್ರಹಣದ ದಿನಗಳಂದು ನೆಲ್ಲೀಕಾಯಿ ಬೆರಸಿದ ನೀರಿನಿಂದ ಸ್ನಾನ ಮಾಡಬಾರದು.

**"ನವಮ್ಯಾಂ ದರ್ಶೇ ಸಪ್ತಮ್ಯಾಂ ಸಂಕ್ರಾಂತೌ ರವಿವಾಸರೇ ।**
**ಚಂದ್ರಸೂರ್ಯೋಪ ರಾಗೇ ಚ ಸ್ನಾನಮಾಮಲಕೈಃ ತ್ಯಜೇತ್ ॥**

ಎಂದು ಈ ವಿಷಯದಲ್ಲಿ ಪ್ರಮಾಣ ಇದ್ದುದರಿಂದ ಈ ದಿನಗಳಲ್ಲಿ ನೆಲ್ಲಿ ಬೀಜವನ್ನು ನೀರಿನಲ್ಲಿ ಹಾಕಿ ಅಥವಾ ಅದನ್ನು ತಿಕ್ಕಿ ಮೈಗೆ ಹಚ್ಚಿಕೊಂಡು ಸ್ನಾನವನ್ನು ಮಾಡಬಾರದು. ಈ ಧಾತ್ರೀ ಗಿಡದ ನೆರಳಿನಲ್ಲಿ ಕುಳಿತು ಪಿತೃಗಳನ್ನು ಉದ್ದೇಶಿಸಿ ಪಿಂಡಪ್ರದಾನ ಮಾಡಿದರೆ ಪಿತೃಗಳೆಲ್ಲರೂ ಮೋಕ್ಷಭಾಗಿಗಳೇ ಆಗುವರು.

ತೀರ್ಥದಲ್ಲಿ ಅಥವಾ ಮನೆಯಲ್ಲಿ ಕಾರ್ತೀಕಮಾಸದಲ್ಲಿ ವಿಹಿತದಿನಗಳಲ್ಲಿ ನೆಲ್ಲಿಯ ಕಾಯಿಗಳನ್ನು ಒಡೆದು ತಿಕ್ಕಿ ಮೈಗೆಲ್ಲ ಲೇಪಿಸಿಕೊಂಡು ತಲೆಗೂ ಹಚ್ಚಿಕೊಂಡು ನೀರಿನಲ್ಲಿ ಧಾತ್ರೀಫಲಗಳನ್ನು ಹಾಕಿ ಸ್ನಾನಮಾಡುವದರಿಂದ ಭಗವಂತನಿಗೆ ಪರಮ ಪ್ರೀತಿಯಾಗುವದು. ಈ ನೆಲ್ಲೀಕಾಯಿ ಹಣ್ಣು ಕಾಯಿ ಬೀಜಗಳನ್ನು ಯಾವಾಗಲೂ ಮನೆಯಲ್ಲಿ ಇಟ್ಟಿದ್ದರೆ ಭೂತ, ಪ್ರೇತ, ಪಿಶಾಚಿಗಳು ಮನೆಯ ಸಮೀಪ ಬರುವದಿಲ್ಲ. ಕಾರ್ತೀಕಮಾಸದಲ್ಲಿ ನೆಲ್ಲಿಯ ಮರದ ನೆರಳಿನಲ್ಲಿ ಕುಳಿತು ಒಮ್ಮೆ ಭೋಜನ ಮಾಡಿದರೆ ಒಂದು ವರ್ಷದ ವರೆಗೆ ಅನ್ನದ ಸಂಸರ್ಗದಿಂದ ಉತ್ಪನ್ನವಾದ ಪಾಪಗಳೆಲ್ಲವೂ ನಾಶವಾಗುತ್ತವೆ.

## ಸತ್ಯಭಾಮೆಯ ಜನ್ಮಾಂತರದ ಕಥೆ, ಶಂಖಾಸುರನ ವಧೆ

## ಅಧ್ಯಾಯ - ೬೧

**ಸೂತ:-** ದ್ವಾರಕೆಯಲ್ಲಿ ಶ್ರೀಕೃಷ್ಣನ ಪಟ್ಟದರಾಣಿಯಾದ ಸತ್ಯಭಾಮೆಯ ಅಂತಃಪುರ, ಶ್ರೀ ಕೃಷ್ಣ ಭಗವಾನನು ಸುಪ್ರಸನ್ನ ಮುಖದಿಂದ ಪ್ರಾಣಪ್ರಿಯ ಪ್ರೇಯಸಿಯಾದ ಭಾಮಯೊಂದಿಗೆ ಸರಸಾಲಾಪಗೈಯುತ್ತಿದ್ದಾನೆ. ಕೃಷ್ಣಪ್ರಭುವಿನ ಪರಮಪ್ರೇಮಲಾಭವು ತನ್ನದೊಂದು ಮಹಾಸೌಭಾಗ್ಯವೆಂದು ಬಗೆದಿದ್ದಳು ಸತ್ಯಭಾಮೆ, ಪರಮಾತ್ಮನ ಈ ಪರಿಯ ಪ್ರೀತಿ ವಿಶ್ವಾಸಗಳನ್ನು ಪಡೆದು ತಾನೆ ಧನ್ಯಳು ಎನ್ನುತ್ತಿತ್ತು ಅವಳ ಜೀವ.

ಹೀಗೆ ತನ್ನ ಮೇಲೆ ನಿರಂತರವೂ ಪ್ರೇಮಾಮೃತವರ್ಷವನ್ನು ಸುರಿಸುತ್ತಿರುವ ದೇವಕೀ ನಂದನನ್ನು ಕುರಿತು ಸತ್ಯಭಾಮೆಯು ಮಂದಹಾಸ ಸುಂದರವದನದಿಂದ ನಕ್ಕು ನುಡಿದಳು-

''ಪೂಜ್ಯ ಪ್ರೀಯತಮಾ, ನಿಜವಾಗಿಯೂ ನಾನು ಧನ್ಯಳು. ನನ್ನ ಜೀವನವು ಸಫಲ. ನಾನು ನಿನ್ನ ಪ್ರಿಯತಮ ಪತ್ನಿಯಾದುದರಿಂದ ನಾನು ಕೃತಕೃತ್ಯಳು. ಈ ಜನ್ಮದಲ್ಲಿ ನಿನ್ನ ಅಷ್ಟಮಮಹಿಷಿಯರಲ್ಲಿಯೂ ಇಷ್ಟು ಪ್ರೀತಿಯ ಪತ್ನಿಯು ನಾನು ಆಗಬೇಕಾದರೆ ಹಿಂದಿನ ಜನ್ಮದಲ್ಲಿ ನಾನು ಯಾವ ದಾನ ಮಾಡಿದ್ದೆನು? ಯಾವ ವ್ರತವನ್ನು ಆಚರಿಸಿದ್ದೆನು? ಅಥವಾ ಎಂತಹ ತಪಸ್ಸನ್ನು ಅನುಷ್ಠಾನ ಮಾಡಿದ್ದೆ? ಜನ್ಮಾಂತರದಲ್ಲಿ ನಾನು ಯಾರು? ನನ್ನ ಸ್ವಭಾವವೇನಿತ್ತು? ಯಾರ ಮಗಳಾಗಿ ಹುಟ್ಟಿದ್ದೆ ಇದೆಲ್ಲವೂ ಸರ್ವಜ್ಞರಾದ ತಮಗೆ ಚೆನ್ನಾಗಿ ವಿದಿತವೇ ಇರುತ್ತದೆ. ದಯವಿಟ್ಟು ನನಗೆ ತಿಳಿಸಬೇಕು.

**ಶ್ರೀಕೃಷ್ಣ:-** ಪ್ರಿಯೇ, ಸತ್ಯಯುಗದ ಕೊನೆಯಲ್ಲಿ ಹರಿದ್ವಾರದಲ್ಲಿ ದೇವಶರ್ಮ ಎಂಬ ಒಬ್ಬ ಸದಾಚಾರಿ ಬ್ರಾಹ್ಮಣನು ಇದ್ದ. ಅತ್ರಿ ಕುಲದಲ್ಲಿ ಅವನ ಉತ್ಪತ್ತಿ. ವೇದವೇದಾಂಗಗಳಲ್ಲಿ ಅವನಿಗೆ ವ್ಯುತ್ಪತ್ತಿ. ಶ್ರೀಹರಿಯಲ್ಲಿ ಪರಮಭಕ್ತಿ. ಆದರೆ ಅವನಿಗೆ ಗಂಡು ಮಕ್ಕಳು ಇರಲಿಲ್ಲ. ಒಂದೇ ಒಂದು ಕನ್ಯಾ ರತ್ನ ಅವನಿಗೆ ಹುಟ್ಟಿದ್ದು, ಗುಣವತಿ ಎಂದು ಅವಳಿಗೆ ಹೆಸರು. ರೂಪವತಿಯೂ ಆಗಿದ್ದಳು ಆ ಕನ್ಯಾಮಣಿ. ಹೀಗೆ ರೂಪವತಿಯೂ ಗುಣವತಿಯೂ ಆದ ಆ ಗುಣವತಿ ಆದ ಆ ಕನ್ಯೆಯನ್ನು ದೇವಶರ್ಮನು 'ಚಂದ್ರ' ಎಂಬ ತನ್ನ ಶಿಷ್ಯನಿಗೆ ಮದುವೆಮಾಡಿ ಕೊಟ್ಟನು. ಮತ್ತು ಆ ಅಳಿಯನನ್ನು ತನ್ನ ಮಗನಂತೆ ಪ್ರೀತಿಯಿಂದ ರಕ್ಷಣೆಮಾಡಿದನು. ಅವನಲ್ಲಿಯೇ ಓದಿ ಪಂಡಿತನಾದ ಈ ಶಿಷ್ಯ ಚಂದ್ರನು ಜಿತೇಂದ್ರಿಯನೂ ಗುರುವಿನ ಆಜ್ಞಾಧಾರಕನೂ ಆಗಿದ್ದನು. ತನ್ನ ಗುರುವಾದ ಹಾಗೂ ಮಾವನಾದ ದೇವಶರ್ಮನನ್ನು ಅವನು ತನ್ನ ತಂದೆಯೆಂದೇ ತಿಳಿದುಕೊಂಡು ಸೇವೆಮಾಡುತ್ತಿದ್ದನು.

ಒಂದು ದಿನ ಅವರಿಬ್ಬರೂ ಅಳಿಯಮಾವಂದಿರು ಹೂವು, ತುಳಸಿ, ದರ್ಭೆಗಳನ್ನು ತರಲು ವನಾಂತರದಲ್ಲಿ ಹೋಗಿದ್ದರು. ಅಲ್ಲಿ ಓರ್ವ ಭೀಕರಾಕಾರದ ದುಷ್ಟರಾಕ್ಷಸನು ಅವರಿಬ್ಬರ ಮೇಲೆ ಎರಗಿ ಅಳಿಯ, ಮಾವ ಇಬ್ಬರನ್ನೂ ಕೊಂದುಹಾಕಿದನು. ಆದರೆ ಅವರಿಬ್ಬರೂ ಮಹಾ ಕರ್ಮಠರೂ ಭಗವನ್ನಿಷ್ಠರೂ, ತಪೋನುಷ್ಠಾನ ಪರಿನಿಷ್ಠಿತರೂ ಆದುದರಿಂದ ಅವರು ತಮ್ಮ ಪುಣ್ಯಪ್ರಭಾವದಿಂದ ಮರಣಾನಂತರ ವಿಷ್ಣುಲೋಕವನ್ನು ಕುರಿತು ಪ್ರಯಾಣ ಮಾಡಿದರು.

## ವಿಧವೆಯನ್ನು ಉದ್ಧರಿಸಿದ ಎರಡು ವ್ರತ

ಇತ್ತ ಮನೆಯಲ್ಲಿ ಗುಣವತಿಯು ತನ್ನ ಗಂಡ ಹಾಗೂ ತಂದೆ ಇಬ್ಬರೂ ಏಕಕಾಲಕ್ಕೆ ರಾಕ್ಷಸನಿಂದ ಹತರಾದುದನ್ನು ಕೇಳಿ ದುಃಖಸಂಕಪ್ತಳಾದಳು. ಪತಿ ಹಾಗು ಪಿತ ಇಬ್ಬರ ವಿಯೋಗದ ದುಃಖವನ್ನು ತಾಳಲಾರದೇ ದೀನ ದೂನಳಾಗಿ ಅವಳು ಶೋಕಿಸತೊಡಗಿದಳು. ಮನೆಯಲ್ಲಿ ಇದ್ದು ಬಿದ್ದ ಪದಾರ್ಥಗಳನ್ನೆಲ್ಲ ಮಾರಿ ತನ್ನ ಶಕ್ತಿಗೆ ಅನುಸಾರವಾಗಿ ತನ್ನ ಪತಿ ಹಾಗೂ ಪಿತರ ಉತ್ತರಕ್ರಿಯೆಯನ್ನೆಲ್ಲ ಸಾಂಗವಾಗಿ ಮಾಡಿಸಿದಳು. ಅನಂತರ ಅವಳು ತನ್ನ ಪತಿ ಇದ್ದ ಅದೇ ಊರಿನಲ್ಲಿಯೇ ತನ್ನ ಮನೆಯಲ್ಲಿಯೇ ಇದ್ದು ಅವರಿಬ್ಬರನ್ನೂ ನೆನೆಯುತ್ತ ಸಂಸಾರದ ಮೋಹವನ್ನೆಲ್ಲ ತ್ಯಜಿಸಿ ಪಾರಮಾರ್ಥಿಕ ಪ್ರವಣಳಾಗಿ ಸತ್ಕರ್ಮಾನುಷ್ಠಾನವನ್ನು ಸದಾ ಸರ್ವದಾ ಮಾಡುತ್ತ ವಾಸಮಾಡಿದಳು. ಅವಳು ಆ ಜನ್ಮದಲ್ಲಿ ಸಾಯುವವರೆಗೆ ಎರಡು ವ್ರತಗಳನ್ನು ವಿಧಿಪೂರ್ವಕವಾಗಿ ಪಾಲನ ಮಾಡಿದಳು. ಏಕಾದಶಿ ಉಪವಾಸ ವ್ರತ ಹಾಗೂ ಕಾರ್ತೀಕ ಮಾಸದಲ್ಲಿ ಸ್ನಾನ ಧ್ಯಾನ ಭಗವತ್ಪೂಜಾದಿ ಕಾರ್ತೀಕ ವ್ರತ. ಈ ಎರಡೂ ವ್ರತಗಳನ್ನು ತಪ್ಪದೇ ಪಾಲಿಸುತ್ತಿದ್ದಳು.

ಹೀಗೆ ಅವಳು ಅನೇಕ ವರ್ಷಗಳವರೆಗೆ ಈ ಏಕಾದಶೀ ವ್ರತ ಹಾಗೂ ಕಾರ್ತೀಕ ವ್ರತಗಳನ್ನು ಎಂತಹ ಪ್ರಸಂಗಗಳಲ್ಲಿಯೂ ಬಿಡದೆ ಭಕ್ತಿಯಿಂದ ಆಚರಿಸುತ್ತಿದ್ದಳು. ಅನೇಕ ವರ್ಷಗಳು ಕಳೆದ ನಂತರ ಅವಳಿಗೆ ವಾರ್ಧಕ್ಯದೆಶೆ ಬಂದಿತು. ಮುಪ್ಪು, ಅವಳ ಸರ್ವಾಂಗವನ್ನು ಅಪ್ಪಿ ಹಿಡಿದಿತ್ತು. ದೇಹದಲ್ಲಿ ದೌರ್ಬಲ್ಯವು ಮನೆ ಮಾಡಿತು. ಮೈಯಲ್ಲಿ ಜೋರಾಗಿ ಜ್ವರ ಬಂದಿದ್ದರಿಂದ ದೇಹವೆಲ್ಲವು ನಡಗುತ್ತಿತ್ತು. ಆದರೂ ಅವಳಿಗೆ ಕಾರ್ತಿಕ ಮಾಸದಲ್ಲಿ ಪ್ರಾತಃಕಾಲದಲ್ಲಿ ಗಂಗಾ ಸ್ನಾನವನ್ನು ಮಾಡಬೇಕೆಂದು ಬಲವತ್ತರವಾದ ಬಯಕೆ ಇದ್ದಿತು. ಆದ್ದರಿಂದ ಅವಳು ದೇಹದಲ್ಲಿ ಭಯಂಕರ ಜ್ವರವು ಸುಡುತ್ತಿದ್ದರೂ ಮೆಲ್ಲಮೆಲ್ಲನೇ ನಡೆದು ಗಂಗಾ ಸ್ನಾನಮಾಡಬೇಕೆಂದು ನದಿಗೆ ಹೋದಳು. ಕುಂಟುತ್ತ ಸರಿಯುತ್ತ ತೆವಳುತ್ತ ನಡೆಯುತ್ತ ನದೀ ದಂಡೆಗೆ ಹೇಗೋ ಬಂದು ನೀರಿನಲ್ಲಿ ತನ್ನ ನಡುಗುವ ಶರೀರವನ್ನು ಎದ್ದಿದಳು. ಜ್ವರದಿಂದ ಪೀಡಿತಳಾದ ಅವಳು ಒಮ್ಮೆಲೇ ನೀರಿನಲ್ಲಿ ಪ್ರವೇಶ ಮಾಡಿದಳು. ಶೈತ್ಯದ ವೈಪರೀತ್ಯದಿಂದ ಅವಳು ನಡುಗುತ್ತ ಗತಪ್ರಾಣಳಾಗಿ ನೆಲದ ಮೇಲೆ ಬಿದ್ದಳು. ಅದೇ ವೇಳೆಯಲ್ಲಿ ವೈಕುಂಠ ಲೋಕದಿಂದ ವಿಮಾನ ಬಂದಿತು. ಮರಣದ ಅನಂತರದಲ್ಲಿ ಅವಳು ದಿವ್ಯ ದೇಹ ಧರಿಸಿ ವಿಮಾನದಲ್ಲಿ ಕುಳಿತು ವೈಕುಂಠಕ್ಕೆ ಹೋದಳು. ಕಾರ್ತೀಕ ವ್ರತದ ಪುಣ್ಯದಿಂದ ಅವಳು ನನ್ನ ಸಮೀಪವೇ ಇರುತ್ತಿದ್ದಳು.

ಅನಂತರ ದೇವತೆಗಳ ಪ್ರಾರ್ಥನೆಯಂತೆ ನಾನು ಅವತಾರ ಮಾಡಿ ಈ ಭೂಲೋಕಕ್ಕೆ ಬಂದ ಬಳಿಕ ನನ್ನೊಡನೆ ಎಲ್ಲ ಪಾರ್ಷದರೂ ಇಲ್ಲಿಗೆ ಬಂದರು. ಈ ಯದುವಂಶದಲ್ಲಿ ಹುಟ್ಟಿದ ಯಾದವರೆಲ್ಲರೂ ನನ್ನ ಪಾರ್ಷದರೇ.

ಪೂರ್ವಜನ್ಮದಲ್ಲಿ ದೇವಶರ್ಮ ಎಂಬ ನಿನ್ನ ತಂದೆಯು ಈ ಸತ್ರಾಜಿತ ಎಂಬ ಯಾದವನಾಗಿ ಜನಿಸಿದ್ದಾನೆ. ಆ ಚಂದ್ರ ಎಂಬ ಬ್ರಾಹ್ಮಣನು ಈಗ ಪರಮ ಭಗದ್ಭಕ್ತನಾದ ಅಕ್ರೂರನಾಗಿ ಹುಟ್ಟಿದ್ದಾನೆ. ನೀನೇ ಕಲ್ಯಾಣಿಯಾದ ಆ ಗುಣವತಿ.

## ಕಾರ್ತೀಕ ವ್ರತದ ಪ್ರಭಾವದಿಂದ ಸತ್ಯಭಾಮೆ ಕೃಷ್ಣನಿಗೆ ಪ್ರಿಯತಮೆ

ಕಾರ್ತೀಕ ವ್ರತದ ಪುಣ್ಯದಿಂದ ನೀನು ಈ ಜನ್ಮದಲ್ಲಿ ನನಗೆ ರುಕ್ಮಿಣಿಯಂತೆ ಅಷ್ಟ ಮಹಿಷಿಯರಲ್ಲಿಯೇ ಅತ್ಯಂತ ಪ್ರೀತ್ಯಾಸ್ಪದಳಾಗಿರುವೆ. ಪೂರ್ವದಲ್ಲಿ ನೀನು ನನ್ನ ದೇವಸ್ಥಾನ ಬಾಗಿಲ ಬಳಿಯಲ್ಲಿ ಒಂದು ತುಳಸಿಯ ತೋಟವನ್ನೇ ಮಾಡಿದ್ದಿ. ಅದರ ಫಲವಾಗಿ ಈಗ ನಿನ್ನ ಅಂಗಳದಲ್ಲಿ ಕಲ್ಪವೃಕ್ಷವು ಶೋಭಾಯಮಾನವಾಗಿದೆ. ಕಳೆದ ಜನ್ಮದಲ್ಲಿ ನೀನು ಸಾವು ಬರುವವರೆಗೂ ಕಾರ್ತೀಕ ವ್ರತದ ಅನುಷ್ಠಾನವನ್ನು ಮಾಡಿದ್ದಿ. ಅದರ ಪ್ರಭಾವದಿಂದ ನನಗೂ ನಿನಗೂ ಎಂದೂ ವಿಯೋಗವೇ ಇಲ್ಲ.

ಸತ್ಯಭಾಮೆ, ಪೂರ್ವಕಾಲದಲ್ಲಿ ಪೃಥುರಾಜ ಹಾಗೂ ನಾರದ ಮಹರ್ಷಿಗಳ ನಡುವೆ ಈ ವಿಷಯದಲ್ಲಿ ಒಂದು ಸಂವಾದ ಆಯಿತು. ಅದನ್ನು ಹೇಳುತ್ತೇನೆ. ಪೃಥುಮಹಾರಾಜನು ಪ್ರಶ್ನೆ ಕೇಳಿದ ಬಳಿಕ ನಾರದರು ಒಂದು ಪ್ರಾಚೀನ ಇತಿಹಾಸ ಹೇಳಿದರು.

ಪೂರ್ವಕಾಲದಲ್ಲಿ ಶಂಖ ಎಂಬ ಅಸುರನು ಲೋಕಕಂಟಕನಾಗಿದ್ದನು. ಸಮುದ್ರ ದಿಂದ ಜನಿಸಿದ ಆ ಶಂಖಾಸುರನು ತನ್ನ ಬಾಹುಬಲದಿಂದ ಇಂದ್ರಾದಿ ಸರ್ವಲೋಕಪಾಲರ ಅಧಿಕಾರ ಐಶ್ವರ್ಯ ಅಧಿಪತ್ಯಗಳನ್ನೆಲ್ಲ ಕಸಿದುಕೊಂಡನು. ಅವನ ಭಯದಿಂದ ಸಂತಪ್ತರಾಗಿ ಸುರಪುರದ ನಾಗರಿಕರೆಲ್ಲರೂ ತಲೆಮರೆಸಿಕೊಂಡರು. ಮೇರು ಗಿರಿಯ ದುರ್ಗಮ ಕಂದರಗಳಲ್ಲಿ ಅಡಗಿ ಕುಳಿತುಕೊಂಡರು. ಆಗ ಆ ದೈತ್ಯನು-

''ದೇವತೆಗಳಿಗೆಲ್ಲ ವೇದಮಂತ್ರಗಳೇ ಬಲಪ್ರದವಾಗಿರುತ್ತವೆ. ಆ ವೇದಗಳನ್ನೆ ನಾನು ಅಪಹರಿಸಿ ಬಿಟ್ಟರೆ ಈ ಎಲ್ಲ ದೇವತೆಗಳೂ ತಾವಾಗಿಯೇ ದುರ್ಬಲರಾಗಿ ಹೋಗುವರು. ಇಲ್ಲದಿದ್ದರೆ ಈಗ ಆ ದೇವತೆಗಳು ರಾಜ್ಯಭ್ರಷ್ಟರಾಗಿ ಎಲ್ಲಿಯೇ ಓಡಿ ಹೋಗಿದ್ದರೂ ಆ ವೇದಮಂತ್ರ ಪ್ರಭಾವದಿಂದ ಹಾಗೂ ವೇದೋಕ್ತವಾದ ಯಜ್ಞಯಾಗ ಪ್ರಭಾವದಿಂದ ಬಲಿಷ್ಠರಾಗಿ ಬಂದು ನನ್ನನ್ನು ಮತ್ತೆ ಸ್ವರ್ಗದಿಂದ ಓಡಿಸುವರು. ಆದ್ದರಿಂದ ಆ ಸುರಸಮೂಹದ ಶಕ್ತಿ ಸರ್ವಸ್ವದ ಮೂಲಸೂತ್ರವಾದ ವೇದವನ್ನೇ ಕದ್ದು ಬಿಡುವೆನು.''

ಎಂದು ನಿರ್ಧರಿಸಿ ಆ ದುಷ್ಟ ದೈತ್ಯನು ಸತ್ಯಲೋಕಕ್ಕೆ ಹೋಗಿ ಅಲ್ಲಿಂದ ನಾಲ್ಕು ವೇದಗಳನ್ನು ಅಪಹರಿಸಿಬಿಟ್ಟನು. ಆ ದುರಳ ದಾನವನು ಸೆಳೆದುಕೊಂಡು ವೈಯ್ಯುವಾಗ ವೇದಗಳು ಭಯಭ್ರಾಂತವಾಗಿ ಅವನ ಮುಷ್ಟಿಯಿಂದ ಹೇಗೋ ಜಾರಿ ಯಜ್ಞ, ಮಂತ್ರ ಮತ್ತು ಬೀಜಗಳೊಂದಿಗೆ ಸಮುದ್ರ ನೀರಿನಲ್ಲಿ ಬಿದ್ದುಬಿಟ್ಟವು. ಆಗ ಶಂಖಾಸುರನು ಆ ವೇದವನ್ನು ಹುಡುಕಲು ಸಮುದ್ರದ ತುಂಬ ಸುತ್ತಾಡಿದನು. ಎಲ್ಲ ಕಡೆಗೂ ತಡಕಾಡಿದನು. ಆದರೆ ಅವನಿಗೆ ಎಲ್ಲಿಯೂ ವೇದಮಂತ್ರಗಳು ಕಂಡು ಬರಲಿಲ್ಲ. ಇತ್ತ ದೇವತೆಗಳೆಲ್ಲರೂ ಶ್ರೀವಿಷ್ಣುವಿನ ಬಳಿಗೆ ಹೋಗಿ ಅವನ ಸ್ತೋತ್ರ ಮಾಡಿದರು. ಅವರ ಸ್ತೋತ್ರ ಕೇಳಿ ಎಚ್ಚತ್ತು ಶ್ರೀಹರಿ ಈ ರೀತಿ ಹೇಳಿದನು.

**ವಿಷ್ಣು:-** ದೇವತಗಳೇ, ನಾನು ನಿಮ್ಮ ಸ್ತೋತ್ರ ಪಾಠ, ಹಾಗೂ ಗೀತ ವಾದ್ಯ ಹಾಗೂ ನಿಮ್ಮ ಪ್ರಾರ್ಥನೆಯ ಮಂಗಲ ಮಂಜುಳ ಸ್ವರದಿಂದ ಪ್ರಬುದ್ಧನಾಗಿದ್ದೇನೆ. ನಿಮಗೆ ವರ ಕೊಡಲು ಈಗ ಎದ್ದು ಕುಳಿತಿದ್ದೇನೆ. ಕಾರ್ತೀಕ ಶುಕ್ಲ ಏಕಾದಶಿ ದಿನದಂದು ನೀವು ನನ್ನನ್ನು ನನ್ನ ಯೋಗನಿದ್ರೆಯಿಂದ ಎಚ್ಚರಿಸಿರುವಿರಿ. ಆದ್ದರಿಂದ ಈ ತಿಥಿಯು ನನಗೆ ಅತ್ಯಂತ ಪ್ರೀತಿದಾಯಕವೂ ಮಾನನೀಯವೂ ಆಗಿದೆ. ಶಂಖಾಸುರನು ಕಳವು ಮಾಡಿಕೊಂಡು ಒಯ್ದ ಸಂಪೂರ್ಣ ವೇದವೆಲ್ಲವೂ ಸಾಗರದ ಸಲಿಲ ಗರ್ಭದಲ್ಲಿಯೇ ಇರುತ್ತವೆ. ಶರಧಿಯ ಪುತ್ರನಾದ ಆ ಶಂಖ ದೈತ್ಯನನ್ನು ನಾನು ಸಂಹರಿಸಿ ಬೇಗನೆ ಆ ವೇದಗಳನ್ನೆಲ್ಲ ಮರಳಿ ತೆಗೆದುಕೊಂಡು ಬರುತ್ತೇನೆ ಎಂದು ಹೇಳಿದನು.''

ಕಾರ್ತೀಕ ಮಾಸದ ಪ್ರಾತಃಕಾಲದಲ್ಲಿ ಸ್ನಾನ ಮಾಡಿದ ಮನುಷ್ಯನು ಎಲ್ಲ ಯಜ್ಞಗಳ ಅವಭೃಥ ಸ್ನಾನವನ್ನು ಮಾಡಿದ ಪುಣ್ಯವನ್ನು ಪಡೆಯುತ್ತಾನೆ. ಇಂದಿನಿಂದ ನಾನು ಕಾರ್ತೀಕ ಮಾಸದಲ್ಲಿ ನೀರಿನಲ್ಲಿ ವಾಸ ಮಾಡುತ್ತೇನೆ. ನೀವು ಎಲ್ಲ ದೇವತೆಗಳು ಮುನಿಮಹರ್ಷಿಗಳೊಂದಿಗೆ ನನ್ನೊಡನೆ ಸಲಿಲದಲ್ಲಿ ಸನ್ನಿಹಿತರೇ ಆಗಿರಿ.

ಹೀಗೆ ಹೇಳಿ ಶ್ರೀ ಹರಿಯು ಮೀನ ರೂಪ ತೆಗೆದುಕೊಂಡು ಆಕಾಶದಿಂದ ಸಮುದ್ರವನ್ನು ಪ್ರವೇಶಿಸಿದನು ಮತ್ತು ಸಾಗರದ ಅಪಾರ ಸಲಿಲ ಗರ್ಭದಲ್ಲಿ ಅಡಗಿದ ಆ ಶಂಖಾಸುರನನ್ನು ಸಂಹಾರ ಮಾಡಿ ಶ್ರೀಹರಿಯು ಬದರೀಕ್ಷೇತ್ರಕ್ಕೆ ಆಗಮಿಸಿದನು. ಮತ್ತು ಎಲ್ಲ ಋಷಿಮುನಿಗಳನ್ನು ಕರೆದು ಅವರಿಗೆ ಆದೇಶ ನೀಡಿದನು.

ಮುನೀಶ್ವರರೇ, ನೀವು ನೀರಿನಲ್ಲಿ ಆಚೀಚೆ ವಿಕೀರ್ಣವಾದ ವೇದಮಂತ್ರಗಳನ್ನು ಹುಡುಕಿ ತೆಗೆಯಿರಿ. ಅಲ್ಲಿಯವರೆಗೆ ನಾನು ಎಲ್ಲ ದೇವತೆಗಳೊಂದಿಗೆ ಪ್ರಯಾಗ ಕ್ಷೇತ್ರದಲ್ಲಿ ಇರುತ್ತೇನೆ.

## ಬ್ರಹ್ಮ ಕ್ಷೇತ್ರ

ಆಗ ಆ ಪರಮಾತ್ಮನ ಆದೇಶದಂತೆ ತಪೋಬಲ ಸಂಪನ್ನರಾದ ಮಹಾಮುನಿ ಮಹರ್ಷಿಗಳೆಲ್ಲರೂ ಸಮುದ್ರದಿಂದ ಯಜ್ಞ ಬೀಜಸಹಿತವಾದ ವೇದಮಂತ್ರಗಳನ್ನು ಉದ್ಧಾರಮಾಡಿ ಮೇಲಕ್ಕೆ ಎತ್ತಿ ತಂದರು. ಈ ಸಂದರ್ಭದಲ್ಲಿ ಯಾವ ಋಷಿಯ ಕೈಗೆ ಎಷ್ಟು ಮಂತ್ರಗಳು ದೊರಕಿದವೋ, ಅಷ್ಟು ಆ ಮಂತ್ರಗಳಿಗೆ ಆ ಮುನಿಯೇ ಋಷಿ ಎಂದು ಮನ್ನಿಸಲ್ಪಡುತ್ತಾನೆ.

ವೇದಗಳನ್ನು ಯಾವ ಋಷಿಯೂ ರಚಿಸಿಲ್ಲ. ಮೊದಲೇ ಇದ್ದ, ಆಚೀಚೆ ಬಿದ್ದ ಮಂತ್ರಗಳನ್ನು ಹುಡುಕಿ ತಂದವರೇ ವೇದಗಳ ದ್ರಷ್ಟಾರರಾದ ಋಷಿಗಳೆಂದು ಪ್ರಸಿದ್ಧರಾದರು. ಅನಂತರ ಆ ಎಲ್ಲ ಋಷಿಗಳು ಕೂಡಿಕೊಂಡು ಪ್ರಯಾಗ ಕ್ಷೇತ್ರಕ್ಕೆ ಹೋದರು. ಅಲ್ಲಿ ಅವರೆಲ್ಲರೂ ಕೂಡಿ ತಮಗೆ ತಮ್ಮ ಸಂಶೋಧನೆಯಲ್ಲಿ ದೊರೆತ ವೇದಮಂತ್ರಗಳನ್ನು ಬ್ರಹ್ಮದೇವನಿಗೆ ಸಮರ್ಪಣೆಗೈದರು. ಕಳೆದು ಹೋದ ಮಂತ್ರಗಳೆಲ್ಲವೂ ಮರಳಿ ದೊರಕಿದ್ದನ್ನು ಕಂಡು ಬ್ರಹ್ಮದೇವರಿಗೆ ಬಹಳ ಸಂತೋಷ ಎನಿಸಿತು. ಆಗ ಬ್ರಹ್ಮದೇವರು ಎಲ್ಲ ಋಷಿ ಹಾಗೂ ದೇವತೆಗಳಿಂದ ಕೂಡಿಕೊಂಡು ಪ್ರಯಾಗ ಕ್ಷೇತ್ರದಲ್ಲಿ ಒಂದು ಅಪೂರ್ವವಾದ ಅಶ್ವಮೇಧಯಾಗವನ್ನು ಮಾಡಿದರು. ಯಜ್ಞವು ಮುಗಿದ ಬಳಿಕ ದೇವತೆಗಳು ಭಗವಂತನಲ್ಲಿ ಪ್ರಾರ್ಥನೆ ಮಾಡಿಕೊಂಡರು.

**ದೇವತೆಗಳು:-** ದೇವಾಧಿದೇವನಾದ ಜಗನ್ನಾಥ, ಈ ಸ್ಥಾನದಲ್ಲಿ ಬ್ರಹ್ಮದೇವರು ಕಳೆದು ಹೋದ ವೇದಗಳನ್ನೆಲ್ಲ ಮರಳಿ ಪಡೆದಿದ್ದಾರೆ. ಆದ್ದರಿಂದ ಈ ಪ್ರಯಾಗ ಕ್ಷೇತ್ರವು

ಪೃಥ್ವೀಮಂಡಲದಲ್ಲಿ ಸರ್ವಶ್ರೇಷ್ಠವಾಗಲಿ. ಹಾಗೂ ಭೋಗ ಮತ್ತು ಮೋಕ್ಷವನ್ನು ಕೊಟ್ಟು ಪುಣ್ಯವೃದ್ಧಿ ಸಂಪತ್ತು ಹಾಗೂ ಕೊನೆಗೆ ಹರಿಪದವನ್ನು ಪ್ರದಾನ ಮಾಡುವಂತಹದು ಆಗಲಿ. ಮತ್ತು ಬ್ರಹ್ಮ ಹತ್ಯಾದಿ ಮಹಾ ಪಾತಕಿಗಳು ದಗ್ಧರಾಗಿ ಬಂದರೆ ಅವರ ಪಾಪಗಳೆಲ್ಲವೂ ಪರಿಹಾರವಾಗಲಿ. ಮತ್ತು ಈ ಸ್ಥಳದಲ್ಲಿ ನೀಡಿದ ದಾನ, ಮಾಡಿದ ಪುಣ್ಯಕರ್ಮಗಳೆಲ್ಲವೂ ಅಕ್ಷಯ ಫಲವನ್ನು ನೀಡುವಂತಹದಾಗಲಿ.

**ವಿಷ್ಣು**:- ದೇವತೆಗಳೇ, ನೀವು ಕೇಳಿದ ವರಗಳೆಲ್ಲವನ್ನೂ ನಾನು ನಿಮಗೆ ಆನಂದ ದಿಂದ ನೀಡುತ್ತೇನೆ. ನಿಮ್ಮ ಇಚ್ಛೆಯು ಪೂರ್ಣವಾಗಲಿ. ಇಂದಿನಿಂದ ಈ ಸ್ಥಾನವು ವೇದಕ್ಷೇತ್ರ ಅಥವಾ ಬ್ರಹ್ಮಕ್ಷೇತ್ರ ಎಂದು ಪ್ರಸಿದ್ಧವಾಗಲಿ. ಸೂರ್ಯವಂಶದಲ್ಲಿ ಹುಟ್ಟಿದ ಭಗೀರಥರಾಜನು ಇಲ್ಲಿ ಗಂಗೆಯನ್ನು ತೆಗೆದುಕೊಂಡು ಬರುವನು. ಆ ದೇವಗಂಗೆಯು ಇಲ್ಲಿ ಇರುವ ಸೂರ್ಯಕನ್ಯೆಯಾದ ಯಮುನೆಯೊಡನೆ ಸಂಗಮವನ್ನು ಹೊಂದುವಳು. ನಾನು ಇಲ್ಲಿಯೇ ನೆಲೆ ನಿಲ್ಲುತ್ತೇನೆ.

ಬ್ರಹ್ಮದೇವರು ಹಾಗೂ ನೀವೆಲ್ಲ ದೇವತೆಗಳೂ ನನ್ನೊಡನೆ ಇಲ್ಲಿಯೇ ನಿವಾಸ ಮಾಡಿರಿ. ಇಂದಿನಿಂದ ಈ ತೀರ್ಥವು ತೀರ್ಥರಾಜ ಎಂಬ ಹೆಸರಿನಿಂದ ಪ್ರಸಿದ್ಧವಾಗುವುದು. ಇದರ ದರ್ಶನದಿಂದಲೇ ಜನರ ಪಾಪಗಳೆಲ್ಲವೂ ನಾಶವಾಗುವವು. ಸೂರ್ಯನು ಮಕರ ರಾಶಿಯಲ್ಲಿದ್ದಾಗ ಇಲ್ಲಿ ಸ್ನಾನ ಮಾಡುವವನು ನನ್ನ ಸ್ಥಾನವನ್ನು ಹೊಂದುವನು.

ದೇವಾಧಿದೇವನಾದ ಭಗವಾನ್ ಶ್ರೀಹರಿಯು ದೇವತೆಗಳಿಗೆಲ್ಲ ಹೀಗೆ ಹೇಳಿ ಬ್ರಹ್ಮದೇವರೊಂದಿಗೆ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. ಅನಂತರ ಇಂದ್ರಾದಿ ದೇವತೆಗಳೂ ಕೂಡ ತಮ್ಮ ಒಂದು ಅಂಶದಿಂದ ಆ ಪ್ರಯಾಗ ಕ್ಷೇತ್ರದಲ್ಲಿ ವಾಸಮಾಡಿದರು.

ಕಾರ್ತೀಕ ಮಾಸದಲ್ಲಿ ತುಳಸೀ ಹಾಗೂ ಧಾತ್ರೀ ವೃಕ್ಷದ ನೆರಳಿನಲ್ಲಿ ಶ್ರೀಹರಿಯ ಪೂಜೆ ಮಾಡುವ ಮಾನವರು ಈ ಪ್ರಯಾಗ ಕ್ಷೇತ್ರದ ಯಾತ್ರೆಯ ಫಲವನ್ನು ಪಡೆಯುತ್ತಾರೆ. ಇಹಲೋಕದಲ್ಲಿ ಎಲ್ಲ ಭೋಗಗಳನ್ನು ಅನುಭವಿಸಿ ಕೊನೆಗೆ ವೈಕುಂಠ ಲೋಕವನ್ನು ಕುರಿತು ಪ್ರಯಾಣ ಮಾಡುತ್ತಾರೆ.

## ಕಾರ್ತಿಕ ವ್ರತದ ಪುಣ್ಯದಾನದಿಂದ ರಾಕ್ಷಸಿಯ ಉದ್ಧಾರ

## ಅಧ್ಯಾಯ - ೬೨

**ನಾರದ**:- ಕಾರ್ತೀಕ ವ್ರತದ ಉದ್ಯಾಪನೆಯನ್ನು ತುಲಸೀಗಿಡದ ಬುಡದ ಆಡಿಯಲ್ಲಿ ಭಗವಾನ್ ವಿಷ್ಣುವಿನ ಪೂಜೆಯನ್ನು ಮಾಡಿ ವಿಧಿಪೂರ್ವಕವಾಗಿ ಆಚರಿಸಬೇಕು. ತುಲಸಿಯು ವಿಷ್ಣುವಿಗೆ ಪ್ರೇಷ್ಠ. ಎಲ್ಲ ದೇವತೆಗಳಿಗೂ ಅತ್ಯಂತ ಇಷ್ಟ. ತುಲಸಿಯ ಬೃಂದಾವನ ಇದ್ದ ಮನೆ ಒಂದು ತೀರ್ಥ. ನರ್ಮದೆಯ ಸ್ನಾನ ಗಂಗಾ ಪಾನ, ತುಲಸಿವನದ ಸೇವನ ಇವು ಮೂರು ಪರಮ ಪುಣ್ಯಪ್ರದವಾಗಿವೆ. ಮರಣ ಕಾಲದಲ್ಲಿ ತುಳಸಿಯ ದಳವನ್ನು ತಲೆ, ಎದೆ, ಹಾಗೂ ಹಣೆ, ಕಿವಿಗಳಲ್ಲಿ ಇಟ್ಟುಕೊಂಡು ಪ್ರಾಣ ಪರಿತ್ಯಾಗ ಮಾಡಿದರೆ ಜನ್ಮಾವಧಿ ಮಾಡಿದ ಅವನ ಎಲ್ಲ ಪಾಪಗಳೂ ನಷ್ಟವಾಗಿ ಹೋಗುತ್ತವೆ. ಯಮದೂತರು ಈ ತುಳಸೀ ದಳವನ್ನು ಧರಿಸಿದ ದೇಹಗಳು ಇದ್ದ ಕಡೆ ಎಂದೂ ಸುಳಿಯಲಾರರು. ತುಳಸಿಯ ದಳ ನೆಲ್ಲಿಯಕಾಯಿ ಎರಡನ್ನೂ ನೀರಿನಲ್ಲಿ ಹಾಕಿ ಸ್ನಾನ ಮಾಡಿದರೆ ಆದರಿಂದ ಗಂಗಾ ಸ್ನಾನ ಮಾಡಿದ ಪುಣ್ಯವು ಬರುತ್ತದೆ.

ಪೂರ್ವಕಾಲದಲ್ಲಿ ಸಹ್ಯ ಪರ್ವತದ ತಪ್ಪಲು ಪ್ರದೇಶದಲ್ಲಿ ಕರವೀರ ಎಂಬ ಕ್ಷೇತ್ರದಲ್ಲಿ ಒಬ್ಬ ಬ್ರಾಹ್ಮಣನು ಇದ್ದನು. ಅವನ ಹೆಸರು ಧರ್ಮದತ್ತ. ಅವನು ಹೆಸರಿಗೆ ಅನುಗುಣವಾಗಿ ಧರ್ಮಶಾಸ್ತ್ರದಲ್ಲಿ ಮಹಾಪಂಡಿತನಾಗಿದ್ದ ಆ ಧರ್ಮದತ್ತ. ಕಾರ್ತೀಕ ಮಾಸದಲ್ಲಿ ಅವಶ್ಯವಾಗಿ ಮಾಡಬೇಕಾದ ಸ್ನಾನ, ಹರಿಧ್ಯಾನ, ವ್ರತ, ಉಪವಾಸ, ತುಳಸಿ ಪೂಜೆ ಎಲ್ಲವನ್ನೂ ಅವನು ತಪ್ಪದೇ ಮಾಡುತ್ತಿದ್ದ. ಒಂದು ದಿನ ಅವನು ಕಾರ್ತಿಕ ಮಾಸದಲ್ಲಿ ಏಕಾದಶಿಯ ದಿನ ವಿಷ್ಣುದೇವಾಲಯದಲ್ಲಿ ಜಾಗರಣವನ್ನು ಮಾಡಬೇಕು ಎಂದು ಮಂದಿರದ ಕಡೆಗೆ ನಡೆದಿದ್ದ. ಆಗ ರಾತ್ರಿಯ ಕೊನೆಯ ಪ್ರಹರ. ಮೊದಲಿನ ಮೂರು ಪ್ರಹರಗಳ ಕಾಲ ತನ್ನ ಮನೆಯಲ್ಲಿ ಮನೆಯ ಜನರೊಂದಿಗೆ ಪುರಾಣ, ಧ್ಯಾನ, ಭಜನೆಗಳೊಂದಿಗೆ ಜಾಗರದ ಕಾರ್ಯಕ್ರಮವನ್ನು ಮುಗಿಸಿ ಸ್ನಾನ ಮಾಡಿ ಕೊನೆಯ ಪ್ರಹರದಲ್ಲಿ ಶ್ರೀಹರಿ ಮಂದಿರದಲ್ಲಿಯೂ ಜಾಗರವನ್ನು ಮಾಡಿ ಹರಿವಾಣ ಸೇವೆಯನ್ನು ದೇವಸ್ಥಾನದಲ್ಲಿ ಮಾಡಬೇಕು. ಎಂಬ ಸಂಕಲ್ಪದಿಂದ ಅವನು ದೇವಾಲಯಕ್ಕೆ ಹೊರಟಿದ್ದ.

ಜಾಗರ ಸೇವೆಯನ್ನು ಮಾಡಿ ಕೊನೆಗೆ ಅಲ್ಲಿಯೇ ಶ್ರೀ ಹರಿಯ ದಿವ್ಯ ಮೂರ್ತಿಯ ಧ್ಯಾನ, ಆವಾಹನ, ನೈವೇದ್ಯ, ತುಲಸಿ, ಅರ್ಚನ, ಪುಷ್ಪಾರ್ಚನೆಗಳನ್ನು ಮಾಡಿಕೊಂಡು ಬರಬೇಕು ಎಂದು ನಿರ್ಧರಿಸಿ ಮಡಿಯಿಂದ ಪೂಜೆಯ ಸಾಮಗ್ರಿಗಳನ್ನೆಲ್ಲ ಕೈಯಲ್ಲಿ ಹಿಡಿದುಕೊಂಡೇ ಹೊರಟಿದ್ದ ಆ ದೇವದತ್ತ. ದೇವಸ್ಥಾನವು ಧರ್ಮದತ್ತನ ಮನೆಯಿಂದ ತುಸುದೂರ ಅಡವಿಯಲ್ಲಿ ಇತ್ತು. ದಾರಿಗುಂಟ ನಿಬಿಡ ಕಾಡು. ಆ ಘೋರಾರಣ್ಯದಲ್ಲಿ ಅಪರರಾತ್ರಿಯ ಕೊನೆಗಾಲದಲ್ಲಿ ಧರ್ಮದತ್ತನು ಏಕಾಕಿಯಾಗಿ ನಡೆದಾಗ ಅವನ ಎದುರಿಗೆ ಒಂದು ಬ್ರಹ್ಮ ರಾಕ್ಷಸಿಯು ಬಂದು ನಿಂತಿತು.

### ತುಳಸೀ ನೀರಿನ ಪ್ರಹಾರ, ಬ್ರಹ್ಮ ರಾಕ್ಷಸನ ಸಂಹಾರ

ಅಕರಾಳ ವಿಕರಾಳ ಆಕಾರವನ್ನು ಕಂಡು ಥರಗುಟ್ಟಿ ನಡುಗತೊಡಗಿದ ಆ ಧರ್ಮದತ್ತ. ಅವನಿಗೆ ಏನು ಮಾಡಬೇಕೊ ತಿಳಿಯದಂತಾಯಿತು. ಹೆದರಿಕೆಯಿಂದ ಹೌಹಾರಿ ಅವನು ದೊಡ್ಡ ದನಿಯಿಂದ ದೇವರ ನಾಮಗರ್ಜನೆ ಮಾಡುತ್ತ ತನ್ನ ಕೈಯಲ್ಲಿರುವ ದೇವರ ಪೂಜೆಯ ತುಳಸೀದಳ ಮಿಶ್ರಿತವಾದ ನೀರಿನ ಕಲಶವನ್ನು ಆ ರಾಕ್ಷಸಿಯ ಮೈಮೇಲೆ ಸಿಟ್ಟಿನಿಂದ ಒಗೆದ. ತುಳಸಿದಳದಿಂದ ಒಡಗೂಡಿದ ದೇವರ ಅಭಿಷೇಕಕ್ಕಾಗಿ ಒಯ್ಯುತ್ತಿದ್ದ ನೀರು ಆ ರಾಕ್ಷಸಿಯ ಮೈಮೇಲೆ ಬಿದ್ದಕೂಡಲೆ ಆ ರಾಕ್ಷಸಿಯ ಪಾಪಗಳೆಲ್ಲವೂ ನಷ್ಟವಾದವು. ಆ ದುಷ್ಟ ರಾಕ್ಷಸಯೋನಿಯಿಂದ ಮಾತ್ರ ಕೂಡಲೆ ಅದಕ್ಕೆ ಬಿಡುಗಡೆ ಆಗಲಿಲ್ಲ. ಆದರೆ ಅದಕ್ಕೆ ಹಿಂದೆ ಮಾಡಿದ ದುಷ್ಕರ್ಮಗಳ ನೆನಪು ಆಯಿತು. ಕೂಡಲೆ ಅವಳು ಧರ್ಮದತ್ತನಿಗೆ ದೀರ್ಘದಂಡ ನಮಸ್ಕಾರ ಮಾಡಿ ಹೇಳಿದಳು-

"ವಿಪ್ರೋತ್ತಮ, ನಾನು ಹಿಂದಿನ ಜನ್ಮದಲ್ಲಿ ಮಾಡಿದ ಅನೇಕ ದುಷ್ಕೃತ್ಯಗಳ ದುಷ್ಪರಿಣಾಮವಾಗಿ ಇಂತಹ ದುರ್ದಸೆಗೆ ಇಳಿದಿದ್ದೇನೆ. ಇನ್ನು ನನಗೆ ಸದ್ಗತಿ ದೊರೆಯುವದೆಂತು? ಸನ್ಮತಿ ದೊರೆಯುವದೆಂತು? ನಾನು ಪೂರ್ವ ಜನ್ಮದಲ್ಲಿ ಬ್ರಾಹ್ಮಣ ಕುಲದಲ್ಲಿ ಜನಿಸಿದ್ದೆನು. ಸೌರಾಷ್ಟ್ರ ನಗರದಲ್ಲಿ ಭಿಕ್ಷು ಎಂಬ ಒಬ್ಬ ಬ್ರಾಹ್ಮಣನು ನನ್ನನ್ನು ಮದುವೆಯಾಗಿದ್ದ.

ಆಗ ನನ್ನ ಹೆಸರು ಕಲಹಾ, ನನ್ನ ಕ್ರೂರ ಸ್ವಭಾವಕ್ಕೆ ಅನುಗುಣವಾಗಿ ಮೇಲಿಂದ ಮೇಲೆ ನಾನು ಪತಿಯೊಡನೆ ಕೋಪಿಸಿಕೊಂಡು ಕಲಹಕ್ಕೆ ನಿಲ್ಲುತ್ತಿದ್ದೆ. ಆದರಿಂದಲೇ ನನಗೆ ಕಲಹಾ ಎಂಬ ಹೆಸರು ಬಂದಿತ್ತು.

ಒಂದು ದಿನವೂ ನಾನು ನನ್ನ ಗಂಡನನ್ನು ಪ್ರೀತಿಯಿಂದ ಮಾತನಾಡಿಸಲಿಲ್ಲ. ಆದರದಿಂದ ಉಪಚರಿಸಲಿಲ್ಲ. ಒಮ್ಮೆಯೂ ರುಚಿಕರವಾದ ಅಡಿಗೆಯನ್ನು ಮಾಡಿ ಅವನಿಗೆ ಬಡಿಸಲಿಲ್ಲ. ಮಾತು ಮಾತಿಗೆ ಅವನೊಡನೆ ವಾದಿಸಿ ಮೊಂಡು ಹಠ ಹಿಡಿದು, ಚಂಡಿಯಂತೆ ಹಗಲಿರುಳು ಪತಿಯೊಡನೆ ಬಡೆದಾಡುತ್ತಿದ್ದೆ. ಅವನ ಮುಖದ ಎದುರು ಹಾಗೂ ಮಂದಿಯ ಮುಂದೆಯೂ ಗಂಡನನ್ನು ನಿಂದಿಸುವುದರಲ್ಲಿ ನನಗೆ ವಿಲಕ್ಷಣ ಆನಂದ ಉಂಟಾಗುತ್ತಿತ್ತು. ನಾನು ನನ್ನ ಮಾತು ಹಾಗೂ ಕೃತಿಗಳಿಂದ ನಿತ್ಯವೂ ನನ್ನ ಪತಿಗೆ ಹಿಂಸೆಕೊಟ್ಟು ಗೋಳಾಡಿಸುತ್ತಿದ್ದೆ.

ಹೀಗೆ ನನ್ನ ಲೆಕ್ಕವಿಲ್ಲದ ದುಷ್ಕೃತ್ಯಗಳಿಂದ ನೊಂದು ಬೆಂದು ಬೇಸತ್ತು ಹೋದ ನನ್ನ ಪತಿಯು ಬೇರೆ ಮದುವೆಯನ್ನು ಮಾಡಿಕೊಳ್ಳಬೇಕೆಂದು ನಿರ್ಧರಿಸಿದನು. ನನ್ನ ಮೇಲೆ ಬೇರೊಬ್ಬ ಸವತಿ ಬರುವಳು ಎಂಬ ಸುದ್ದಿಯನ್ನು ತಿಳಿದ ಕೂಡಲೇ ನನ್ನ ಹೊಟ್ಟೆಯಲ್ಲಿ ಬೆಂಕಿ ಬಿದ್ದಿತು. ಬದುಕು ಬೇಸರವಾಯಿತು. ಕೂಡಲೇ ನಾನು ಭಯಂಕರ ವಿಷವನ್ನು ನುಂಗಿಬಿಟ್ಟೆ. ಅದರಿಂದ ಬೇಗನೇ ನನ್ನ ಪ್ರಾಣ ಉತ್ಕ್ರಮಣ ಹೊಂದಿದವು.

ಆಗ ಯಮದೂತರು ಬಂದು ನನ್ನನ್ನು ಹೊಡೆಯುತ್ತ ಬಡೆಯುತ್ತ ಯಮಲೋಕಕ್ಕೆ ಕರೆದೊಯ್ದರು. ಅಲ್ಲಿ ಆ ಸಂಯಮನೀ ಪುರದಲ್ಲಿ ಯಮಧರ್ಮನು ನನ್ನನ್ನು ನೋಡಿ ಚಿತ್ರಗುಪ್ತರನ್ನು ಕೇಳಿದನು. ''ಚಿತ್ರಗುಪ್ತ ಇವಳ ಪಾಪ ಪುಣ್ಯದ ಪಟ್ಟಿಯನ್ನು ನೋಡಿರಿ. ಇವಳ ಶುಭಾಶುಭ ಕರ್ಮಗಳಿಗೆ ಅನುಸಾರವಾಗಿ ಇವಳಿಗೆ ಶಿಕ್ಷೆಯನ್ನು ನೀಡಿರಿ.''

**ಚಿತ್ರಗುಪ್ತ**:- ಪ್ರಭು! ಇವಳು ಬದುಕಿ ಇರುವವರೆಗೂ ಯಾವ ಪುಣ್ಯ ಕರ್ಮವನ್ನೂ ಮಾಡಿಲ್ಲ. ಆದರೆ ಇವಳು ಮಾಡಿದ ಪಾಪ ಕರ್ಮಗಳಿಗೆ ಮಾತ್ರ ಎಣಿಕೆಯೂ ಇಲ್ಲ, ಎಲ್ಲೆಯೂ ಇಲ್ಲ. ಇವಳು ಮಾಡಿದ ಘೋರತರವಾದ ಪಾಪ ಕೃತ್ಯಗಳಿಗೆ ಬಹುಕಾಲ ನರಕದಲ್ಲಿ ದುಃಖಪಟ್ಟು ಮುಂದೆ ನಾನಾ ವಿಧ ದುರ್ಯೋನಿಗಳಲ್ಲಿ ಹುಟ್ಟಿ ಇವಳು ದುಃಖವನ್ನು ಅನುಭವಿಸಬೇಕಾಗುವದು.

ಇವಳು ಗಂಡನು ಮನೆಯಲ್ಲಿ ತಂದಿಟ್ಟ ಹಿಟ್ಟು ತುಪ್ಪ ಸಕ್ಕರೆ ಮೊದಲಾದವುಗಳಿಂದ ಬಗೆ ಬಗೆಯ ಭಕ್ಷ್ಯ ಭೋಜ್ಯಗಳನ್ನು ನಿರ್ಮಿಸಿ ತಾನೊಬ್ಬಳೇ ತಿನ್ನುತ್ತಿದ್ದಳು. ತನ್ನ ಕೈ ಹಿಡಿದ ಕಾಂತನೊಂದಿಗೆ ಕಲಹ ಕೇಳಿಯಲ್ಲಿ ಕ್ರೂರಳಾಗಿ ಕಿಡಿ ಕಾರುತ್ತಿದ್ದಳು. ಆದುದರಿಂದ ಇವಳು ಹೊಲಸನ್ನು ತಿನ್ನುವ ಹಂದಿಯಾಗಿ ಹುಟ್ಟಲಿ. ಅಡಿಗೆ ಮಾಡಿದ ಪಾತ್ರೆಯಲ್ಲಿಯೇ ಯಾರಿಗೂ ಕೊಡದೇ ಒಬ್ಬಳೇ ಊಟ ಮಾಡುತ್ತಿದ್ದಳು. ಆದ್ದರಿಂದ ಇವಳು ತನ್ನ ಮರಿಯನ್ನೇ ತಿನ್ನುವ ಬೆಕ್ಕು ಆಗಿ ಜನಿಸಲಿ. ಇವಳು ತಾನು ವಿಷವನ್ನು ತಿಂದು ಆತ್ಮಹತ್ಯೆ ಮಾಡಿಕೊಂಡು ಅದರ ತಪ್ಪನ್ನು ಪತಿಯ ತಲೆಗೆ ಕಟ್ಟಿದ್ದಾಳೆ. ಆದುದರಿಂದ ಇವಳು ಹೀಗೆ ಅಂತರ್‌ಪಿಶಾಚಿಯಾಗಿ ಪ್ರೇತವನದಲ್ಲಿ ಅಲೆದಾಡಲಿ. ಯಮದೂತರು ಇವಳನ್ನು ನೀರು ಇಲ್ಲದ ಮರುಭೂಮಿಗೆ ಕಳಿಸಿಕೊಡಲಿ. ಇವಳು ಅಲ್ಲಿ ಬಹುಕಾಲದ ವರೆಗೆ ಪ್ರೇತ ಶರೀರದಲ್ಲಿ ವಾಸಮಾಡಲಿ. ಅನಂತರ ಈ ಪಾಪಿನಿಯು ಉಳಿದ ದುರ್ಯೋನಿಗಳಲ್ಲಿ ಜನಿಸಿ ದುಃಖ ಪರಂಪರೆಯನ್ನು ಅನುಭವಿಸಲಿ.''

''ವಿಪ್ರೋತ್ತಮ. ನನ್ನ ಹಿಂದಿನ ಕಥೆಯನ್ನು ಕೇಳಿದೆಯಷ್ಟೇ? ಮಹಾ ಪಾಪಿಯಾದ ನಾನೇ ಆ ದುಷ್ಟ ಕಲಹಾ ಎಂಬ ರಕ್ಕಸ ನಾರಿಯು. ಚಿತ್ರಗುಪ್ತನ ಅನುಶಾಸನದಂತೆ

ಈ ಪ್ರೇತಶರೀರದಲ್ಲಿ ಬಂದು ಈಗ ಐದು ನೂರು ವರ್ಷಗಳು ಗತಿಸಿದವು. ಈ ಪ್ರೇತಯೋನಿಯಲ್ಲಿ ನನಗೆ ಯಾವಾಗಲೂ ಹಸಿವೆ, ಹಸಿವೆ, ಹಸಿವೆ, ತಿಂದಷ್ಟೂ ಹಸಿವೆ, ಉಂಡಷ್ಟೂ ಕಸಿವಿಸಿ, ಕುಡಿದಷ್ಟೂ ಬಾಯಾರಿಕೆ. ನಾನು ಯಾವಾಗಲೂ ದಾರುಣವಾದ ದುಃಖಾಗ್ನಿಯಲ್ಲಿ ಬೇಯುತ್ತಲೇ ಇರುತ್ತೇನೆ. ಈಗ ಒಬ್ಬ ವ್ಯಾಪಾರಿಯ ಶರೀರದಲ್ಲಿ ನಾನು ಹೊಕ್ಕು ಈ ದಕ್ಷಿಣ ದೇಶಕ್ಕೆ ತಿರುಗುತ್ತ ಬಂದಿದ್ದೇನೆ. ಇಲ್ಲಿ ಕೃಷ್ಣಾ ಮತ್ತು ವೇಣೀ ಎರಡೂ ನದಿಗಳ ಸಂಗಮದ ಪುಣ್ಯ ಸ್ಥಳಕ್ಕೆ ಆಕಸ್ಮಾತ್ ಆಗಿ ಆಗಮಿಸಿದೆ. ಈ ಪುಣ್ಯಕ್ಷೇತ್ರದ ದರ್ಶನದ ಪ್ರಭಾವದಿಂದ ವಿಷ್ಣು ಪಾರ್ಷದರು ನನ್ನ ಮೇಲೆ ಅನುಗ್ರಹ ಮಾಡಿದರು. ಆ ಪ್ರೇತ ಶರೀರದಲ್ಲಿ ನನ್ನ ದುಃಖ ಎಷ್ಟೋ ಕಡಿಮೆಯಾಯಿತು. ಆ ಪ್ರೇತ ಶರೀರ ಬಿಟ್ಟು ಈಗ ಬ್ರಹ್ಮರಾಕ್ಷಸಿ ಆಗಿದ್ದೇನೆ. ಆದರೆ ಇನ್ನೂ ನನಗೆ ಹಸಿವೆಯ ಕಸಿವಿಸಿ ತಪ್ಪಿಲ್ಲ. ಬಾಯಾರಿಕೆಯ ಬೇಗುದಿ ಇಂಗಿಲ್ಲ. ಈ ಕ್ಷುಧೆ ಹಾಗೂ ತೃಷ್ಣೆಗಳ ಬಾಧೆಯನ್ನು ತಾಳಲಾರದೆ ನಾನು ಅತ್ತಿತ್ತ ಅಂಡಲೆಯುತ್ತಿದ್ದೆ. ಅಷ್ಟರಲ್ಲಿ ನೀವು ನನ್ನ ಕಣ್ಣಿಗೆ ಬಿದ್ದಿರಿ. ನನ್ನ ಭೀಕರ ಆಕಾರವನ್ನು ಕಂಡು ಹೆದರಿ ತುಳಸಿ ನೀರು ತುಂಬಿದ ಕಲಶದಿಂದ ನನ್ನನ್ನು ಹೊಡೆದಿರಿ. ತುಳಸೀದಳ ಮಿಶ್ರಿತವಾದ ನೀರು ನನ್ನ ಮೈಮೇಲೆ ಬಿದ್ದ ಕೂಡಲೇ ನನ್ನ ಪಾಪಗಳೆಲ್ಲವೂ ನಷ್ಟವಾಗಿ ಹೋದವು. ವಿಪ್ರೋತ್ತಮ! ಈಗ ನೀವೇ ನನಗೆ ಏನಾದರೂ ಉಪಾಯ ಹೇಳಿರಿ. ಈ ಬ್ರಹ್ಮರಾಕ್ಷಸ ಜನ್ಮದಿಂದ ಮುಕ್ತಿ ಹೇಗೆ? ಇನ್ನೂ ಮುಂದೆ ಬರಲಿರುವ ಹಂದಿ, ಬೆಕ್ಕು, ಸಮಗಾರ ಸ್ತ್ರೀ ಮುಂತಾದ ದುರ್ಯೋನಿಗಳಿಂದ ಪಾರಾಗುವ ಬಗೆ ಯಾವುದು. ಇದನ್ನು ದಯವಿಟ್ಟು ನನಗೆ ತಿಳಿಸಿರಿ.''

ಕಲಹಾ ರಕ್ಕಸಿಯ ಈ ಮಾತುಗಳನ್ನು ಕೇಳಿ ಧರ್ಮದತ್ತನು ಬಹಳ ಹೊತ್ತು ಆಲೋಚಿಸಿದನು. ಅನಂತರ ಹೇಳಿದನು. ತೀರ್ಥಗಳಲ್ಲಿ ಸ್ನಾನ, ದಾನ ಮಾಡಿ ಕ್ಷೇತ್ರಗಳಲ್ಲಿ ಶ್ರೀಹರಿಯ ಧ್ಯಾನ ಜಪ ತಪಾನುಷ್ಠಾನಗಳನ್ನು ಮಾಡಿದರೆ ಮನುಷ್ಯನ ಪಾಪಗಳೆಲ್ಲವೂ ಪರಿಹೃತವಾಗುವವು. ಆದರೆ ನೀನು ಈಗ ಬ್ರಹ್ಮರಾಕ್ಷಸ ಯೋನಿಯಲ್ಲಿ ಇರುವಿ. ನಿನಗೆ ಈಗ ಯಾವ ಧರ್ಮ ಕರ್ಮಾನುಷ್ಠಾನವನ್ನು ಮಾಡಲಿಕ್ಕೆ ಅಧಿಕಾರವು ಇರುವುದಿಲ್ಲ. ಆದುದರಿಂದ ಈಗ ನಾನು ನಿನ್ನ ಉದ್ಧಾರಕ್ಕಾಗಿ ಉಪಾಯವನ್ನು ಮಾಡುತ್ತೇನೆ. ನಾನು ಹುಟ್ಟಿದಂದಿನಿಂದ ಈವರೆಗೂ ಪ್ರತಿ ವರ್ಷವೂ ಕಾರ್ತಿಕ ವ್ರತವನ್ನು ತಪ್ಪದೇ ಮಾಡುತ್ತ ಬಂದಿದ್ದೇನೆ. ಇಷ್ಟು ವರ್ಷಗಳ ನನ್ನ ವ್ರತಗಳ ಅನುಷ್ಠಾನದಿಂದ ಬಂದ ಪುಣ್ಯದಲ್ಲಿ ಅರ್ಧ ಭಾಗವನ್ನು ನಿನಗೆ ಕೊಡುತ್ತೇನೆ.

ಅದರಿಂದ ನಿನಗೆ ಈ ಪ್ರೇತಶರೀರದಿಂದ ಬಿಡುಗಡೆಯಾಗಿ ಸದ್ಗತಿಯು ಉಂಟಾಗಲಿ ಎಂದು ಶ್ರೀಹರಿಯನ್ನು ಪ್ರಾರ್ಥಿಸುತ್ತೇನೆ.

### ತುಳಸೀ ಜಲ ಪ್ರೋಕ್ಷಣ, ಪರಿಣಾಮ ಲೋಕ ವಿಲಕ್ಷಣ

ಹೀಗೆ ಹೇಳಿ ಧರ್ಮದತ್ತನು ''ಓಂ ನಮೋ ಭಗವತೇ ವಾಸುದೇವಾಯ'' ಎಂಬ ದ್ವಾದಶಾಕ್ಷರ ಮಂತ್ರವನ್ನು ಅನೇಕ ಸಲ ಜಪಿಸಿ ಅಭಿಮಂತ್ರಣವನ್ನು ಮಾಡಿ ತುಳಸೀ ದಳದಿಂದ ಮಿಶ್ರಿತವಾದ ಮತ್ತೊಂದು ಕಲಶದಲ್ಲಿಯ ನೀರನ್ನು ಆ ಬ್ರಹ್ಮರಾಕ್ಷಸಿಯ ಮೈ ತುಂಬ ಸುರುವಿದನು. ಆ ತುಳಸೀ ಮಿಶ್ರಿತ ಜಲದ ಪ್ರಭಾವದಿಂದ ಕೂಡಲೇ ಆ ಕಲಹಾ ಎಂಬ ಬ್ರಹ್ಮರಾಕ್ಷಸಿಗೆ ಪ್ರೇತಯೋನಿಯಿಂದ ಕೂಡಲೇ ಮುಕ್ತಿಯಾಯಿತು.

ಒಳ್ಳೆ ಸುಂದರವಾದ ತೇಜಸ್ವಿ ದೇಹವನ್ನು ಅವಳು ಧರಿಸಿ ಸಾಕ್ಷಾತ್ ಲಕ್ಷ್ಮೀದೇವಿಯಂತೆ ಕಾಂತಿಯಿಂದ ಕಂಗೊಳಿಸತೊಡಗಿದಳು. ದೀಪದ ಕುಡಿಯಂತೆ ದೇದೀಪ್ಯಮಾನವಾದ ತನ್ನ ದೇಹದ ದಿವ್ಯಕಾಂತಿಯಿಂದ ಕಳಕಳಿಸುತ್ತಿರುವ ಆ ಕಲಹಾ ಕಾಮಿನಿಯು ಆ ಧರ್ಮದತ್ತನಿಗೆ ದೀರ್ಘದಂಡ ಪ್ರಣಾಮವನ್ನು ಮಾಡಿ ಕೈ ಮುಗಿದು ಬೇಡಿಕೊಂಡಳು.

''ಬ್ರಾಹ್ಮಣೋತ್ತಮರೇ'', ನಿಮ್ಮ ಅನುಗ್ರಹದಿಂದ ನಾನು ಈ ನೀಚ ಜನ್ಮದ ನರಕದಿಂದ ಬಿಡುಗಡೆಯನ್ನು ಹೊಂದಿದ್ದೇನೆ. ಪಾಪದ ಸಮುದ್ರದಲ್ಲಿ ಮುಳುಗಿದ ನನ್ನನ್ನು ನೀವು ದಯೆಯಿಂದ ಎತ್ತಿ ಹಿಡಿದಿರುವಿರಿ. ನಿಮ್ಮ ಅನುಗ್ರಹದ ನೌಕೆಯಲ್ಲಿ ಕುಳ್ಳಿರಿಸಿ, ಈ ದುಃಖಸಮುದ್ರದಿಂದ ನನ್ನನ್ನು ಪಾರು ಮಾಡಿದಿರಿ. ನಿಮಗೆ ನನ್ನ ಅನಂತ ವಂದನೆಗಳು.

## ಕಲಹೆಗೆ ಕಾರ್ತಿಕ ವ್ರತದ ಪುಣ್ಯದಿಂದ ಕೈವಲ್ಯ

ದಿವ್ಯ ದೇಹ ಧಾರಿಣಿಯಾದ ಆ ಕಲಹೆಯು ಇಷ್ಟು ಹೇಳಿ ಆ ಧರ್ಮದತ್ತನಿಗೆ ಪ್ರದಕ್ಷಿಣೆ ನಮಸ್ಕಾರ ಹಾಕುವಷ್ಟರಲ್ಲಿ ವೈಕುಂಠ ಲೋಕದಿಂದ ಒಂದು ವಿಮಾನವು ಅಲ್ಲಿ ಬಂದಿತು. ಅದರಲ್ಲಿ ಅಮಾನುಷ ಕಾಂತಿ ಪುಂಜದಿಂದ ಪ್ರಕಾಶಮಾನರಾಗಿ ಬೆಳಗುವ ವಿಷ್ಣು ಪಾರ್ಷದರು ಆದರದಿಂದ ಬಂದು ಆ ಕಲಹೆಯನ್ನು ಕೈ ಹಿಡಿದು ಕರೆದೊಯ್ದು ವಿಮಾನದಲ್ಲಿ ಕೂಡಿಸಿದರು.

ಪುಣ್ಯಶೀಲ ಮತ್ತು ಸುಶೀಲ ಎಂಬ ಇಬ್ಬರು ವಿಷ್ಣುವಿನ ಎಡಬಲ ಸೇವೆಗೈಯುವ ಪಾರ್ಷದರು ಕಲಹಾ ಕಾಮಿನಿಯನ್ನು ವಿಮಾನದಲ್ಲಿ ಆದರದಿಂದ ಕೂಡಿಸಿಕೊಂಡ ಬಳಿಕ ಧರ್ಮದತ್ತನ ಕಡೆಗೆ ಕೃಪಾದೃಷ್ಟಿಯನ್ನು ಬೀರಿದರು. ಆಗ ಧರ್ಮದತ್ತನು ಆ ಇಬ್ಬರು ವಿಷ್ಣು ಪಾರ್ಷದವರಿಗೆ ಸಾಷ್ಟಾಂಗ ನಮಸ್ಕರಿಸಿ ಕೈಜೋಡಿಸಿ ನಿಂತುಕೊಂಡನು. ಆಗ ಅವರಿಬ್ಬರೂ ವಿಷ್ಣುದೂತರು ಧರ್ಮದತ್ತನನ್ನು ಕುರಿತು ಸ್ನೇಹ ಶೀತಲವಾದ ಸವಿನುಡಿಯ ಸೊದೆಯ ಸೋನೆಯನ್ನು ಸುರಿಸುತ್ತ ನುಡಿದರು- ''ದ್ವಿಜ ಶ್ರೇಷ್ಠನಾದ ಧರ್ಮದತ್ತ ! ನಿನಗೆ ಧನ್ಯವಾದಗಳು. ನೀನು ಸದಾ ಸರ್ವದಾ ವಿಷ್ಣುವಿನ ಧ್ಯಾನ, ಗಾನ, ಉಪಾಸನೆ, ಆರಾಧನೆ, ಭಜನ ಪೂಜನಗಳಲ್ಲಿಯೇ ನಿನ್ನ ದೇಹವನ್ನು ಸವೆಯಿಸಿರುವೆ. ನೀನು ಬಾಲ್ಯದಿಂದ ಈ ವರೆಗೆ ಮಾಡುತ್ತ ಬಂದ ಕಾರ್ತೀಕ ವ್ರತದ ಪುಣ್ಯದಲ್ಲಿ ಅರ್ಧ ಭಾಗವನ್ನು ಈ ಬ್ರಹ್ಮರಾಕ್ಷಸಿಗೆ ಕೊಟ್ಟು ಅವಳನ್ನು ಉದ್ಧಾರ ಮಾಡಿರುವೆ. ಇದರಿಂದ ನಿನ್ನ ಪುಣ್ಯರಾಶಿಯು ಸಮೃದ್ಧಿಯನ್ನೂ ಅಭಿವೃದ್ಧಿಯನ್ನೂ ಹೊಂದಿದೆ.

ನೀನು ಇನ್ನು ಈ ಲೋಕದಲ್ಲಿ ಇರುವವರೆಗೂ ಸಕಲ ಸುಖ ಸಂಪದ ಸೌಭಾಗ್ಯಗಳನ್ನು ಅನುಭವಿಸಿ ಕೊನೆಗೆ ನಿನ್ನ ಇಬ್ಬರೂ ಮಡದಿಯರೊಂದಿಗೆ ವೈಕುಂಠ ಲೋಕಕ್ಕೆ ಪ್ರಯಾಣ ಮಾಡುವಿ. ನಿನ್ನಂತೆ ಕಷ್ಟದಿಂದ ಮಾಡಿದ ಪುಣ್ಯರಾಶಿಯನ್ನು ದಾನ ಮಾಡಿ ಪಾಪಿಗಳನ್ನು ಉದ್ಧರಿಸುವ ಪುಣ್ಯಾತ್ಮರು ಈ ಜಗತ್ತಿನಲ್ಲಿ ಬೆರಳ ಮೇಲೆ ಎಣಿಸುವಷ್ಟು ವಿರಳ. ನೀನು ಕೊಟ್ಟ ಕಾರ್ತೀಕ ವ್ರತ ಪುಣ್ಯ ಫಲದಿಂದ ಈ ದುಷ್ಟನಾರಿಯು ಈಗ ವೈಕುಂಠ ಲೋಕಕ್ಕೆ ಹೊರಟ್ಟಿದ್ದಾಳೆ, ನಿನಗೆ ಕಲ್ಯಾಣವಾಗಲಿ.

# ಭಕ್ತಿಯ ಪ್ರಭಾವದಿಂದ ವಿಷ್ಣುದಾಸ ಚೋಳರಾಜರು ಶ್ರೀಹರಿಯ ಪಾರ್ಷದರು ಆದದ್ದು

ಅಧ್ಯಾಯ - ೬೩

**ನಾರದ:-** ವಿಷ್ಣು ಪಾರ್ಷದರಾದ ಸುಶೀಲ ಹಾಗೂ ಪುಣ್ಯಶೀಲರ ಮಾತುಗಳನ್ನು ಕೇಳಿ ಧರ್ಮದತ್ತನು ಕೇಳಿದನು-

ಪೂಜ್ಯರೇ, ಬಹುಶಃ ಎಲ್ಲ ಸಜ್ಜನರು ಯಜ್ಞ, ಯಾಗ, ವ್ರತ, ತೀರ್ಥಕ್ಷೇತ್ರಯಾತ್ರೆ, ಜಪ, ತಪಸ್ಸು, ಮುಂತಾದವುಗಳಿಂದ ಶ್ರೀಹರಿಯ ಆರಾಧನೆಯನ್ನು ಮಾಡುತ್ತ ಇರುತ್ತಾರೆ. ಈ ಎಲ್ಲ ಸಾಧನೆಗಳಲ್ಲಿ ಶ್ರೀವಿಷ್ಣುವಿನ ಪೂರ್ಣ ಪ್ರಸಾದವನ್ನು ಪಡೆಯಲು ಮತ್ತು ಅವನ ಸಾಮೀಪ್ಯವನ್ನು ಹೊಂದಲು ಅತ್ಯುತ್ಕೃಷ್ಟವಾದ ಉಪಾಯವು ಯಾವುದು?

ಧರ್ಮದತ್ತನ ಈ ಪ್ರಶ್ನೆಯನ್ನು ಕೇಳಿ ಅವರು ಇಬ್ಬರೂ ವಿಷ್ಣು ಪಾರ್ಷದರು ಈ ಪ್ರಶ್ನೆಗೆ ಉತ್ತರ ರೂಪವಾಗಿ ತಮ್ಮ ಪೂರ್ವ ಜನ್ಮದ ಕತೆಯನ್ನು ಹೇಳಲು ಉಪಕ್ರಮಿಸಿದರು.

ವಿಪ್ರವರ್ಯ, ಹಿಂದೆ ಕಾಂಚೀ ಪಟ್ಟಣದಲ್ಲಿ ಚೋಳ ಎಂಬ ಚಕ್ರವರ್ತಿಯಾದ ರಾಜನು ಆಗಿ ಹೋದನು. ಅವನು ಆಳುವ ಆ ದೇಶಕ್ಕೆಲ್ಲ ಅವನದೇ ಹೆಸರು ಬಂದು ಚೋಳ ದೇಶ ಎಂದು ಪ್ರಸಿದ್ಧವಾಯಿತು. ಮಹಾಭಗವದ್ಭಕ್ತ ಆ ಚೋಳರಾಜ. ಮೂರ್ತಿಮಂತ ಸನಾತನ ಧರ್ಮದಂತೆಯೇ ಇದ್ದ ಆ ಚೋಳ ಚಕ್ರವರ್ತಿ. ಈ ಧರಣೀ ಮಂಡಲದಲ್ಲಿ ಆ ಚೋಳ ನೃಪಾಲನ ಧರ್ಮ ಶಾಸನ ನಡೆಯುತ್ತಿದ್ದಾಗ ಅಖಂಡ ಭೂಮಂಡಲದಲ್ಲಿ ಒಬ್ಬರೂ ದೀನನಾಗಲಿ, ದರಿದ್ರನಾಗಲಿ, ದುಃಖಿ, ಪಾಪಿರೋಗಿ, ಚಿಂತಾತುರ, ವ್ಯಸನಿ ಲೋಭಿ ದುರ್ಗುಣಿಯಾದ ಮನುಷ್ಯನು ಒಬ್ಬನೂ ಹುಡುಕಿದರೂ ಸಿಗುತ್ತಿರಲಿಲ್ಲ.

## ಭೂಪತಿಯ ಬಂಗಾರದ ಪೂಜೆ, ಬಡವನ ತುಳಸೀ ಪೂಜೆ

ಒಂದು ದಿನ ಚೋಳರಾಜನು ಅನಂತಶಯನ ಎಂಬ ಕ್ಷೇತ್ರಕ್ಕೆ ಹೋದನು. ಅಲ್ಲಿ ಭಗವಾನ್ ಜಗದೀಶ್ವರನು ಯೋಗನಿದ್ರೆಯನ್ನು ಆಶ್ರಯಿಸಿ ಶಯನ ಮುದ್ರೆಯಲ್ಲಿ ಒರಗಿದ್ದನು. ಮಹಾರಾಜನು ಭಕ್ತಿಯಿಂದ ಆ ಅನಂತಶಯನ ಸ್ವಾಮಿಯನ್ನು ಬಂಗಾರದ ಹೂವುಗಳಿಂದಲೂ ಮುತ್ತು, ರತ್ನ, ವಜ್ರ, ವೈಢೂರ್ಯ ಹಾರಗಳಿಂದಲೂ ಅಲಂಕರಿಸಿ ಪೂಜೆಮಾಡಿದನು. ಅನಂತರ ದೇವರಿಗೆ ಸಾಷ್ಟಾಂಗ ನಮಸ್ಕಾರ ಹಾಕಿ ದೇವರ ಎದುರು ಕೈಮುಗಿದುಕೊಂಡು ಕುಳಿತುಕೊಂಡಿದ್ದನು. ಅದೇ ವೇಳೆಯಲ್ಲಿ ವಿಷ್ಣುದಾಸ ಎಂಬ ಹೆಸರಿನ ಒಬ್ಬ ಬಡಬ್ರಾಹ್ಮಣನು ತಾನೂ ಶ್ರೀಹರಿಯ ಪೂಜೆಯನ್ನು ಮಾಡಬೇಕೆಂದು ತನ್ನ ಕೈಯಲ್ಲಿ ತುಳಸೀದಳ ಹಾಗೂ ನೀರನ್ನು ತೆಗೆದುಕೊಂಡು ಬಂದನು. ಭಕ್ತಿಯಿಂದ ಪುರುಷಸೂಕ್ತ ವಿಷ್ಣುಸೂಕ್ತ ಮುಂತಾದ ವೇದಮಂತ್ರಗಳನ್ನು ಹೇಳಿ ಅಭಿಷೇಕ ಮಾಡಿ ವಿಷ್ಣು ಸಹಸ್ರನಾಮ ದಿಂದ ತುಳಸೀಅರ್ಚನೆಯನ್ನು ಮಾಡಿ ವಿಧಿಪೂರ್ವಕವಾಗಿ ಷೋಡಷೋಪಚಾರ ಪೂಜೆಯನ್ನು ಸಲ್ಲಿಸಿದನು.

ತುಳಸೀದಳಗಳು ರಾಶಿ ರಾಶಿಯಾಗಿ ಬಿದ್ದವು. ಇದರಿಂದ ಈ ಮೊದಲು ಚೋಳರಾಜನು ಅನಂತಶಯನ ಸ್ವಾಮಿಗೆ ಇಡಿಸಿದ ಮುತ್ತು ರತ್ನ ಬಂಗಾರದ ಆಭರಣಗಳು ತುಳಸಿಯರಾಶಿಯಲ್ಲಿ ಮುಚ್ಚಿ ಹೋದವು. ರಾಜನು ಭಗವಂತನ ವಿಗ್ರಹಕ್ಕೆ ತೊಡಿಸಿದ ರತ್ನಾಭರಣಗಳೆಲ್ಲವೂ ಒಂದೂ ಕಾಣದಂತೆ ಆದವು. ಅದನ್ನು ನೋಡಿ ಅಲ್ಲಿಯೇ ಕುಳಿತ ಚೋಳರಾಜನಿಗೆ ಕೋಪ ಬಂದಿತು. ಅವನು ಸಿಟ್ಟಿನಿಂದ ಸಿಡಿದೆದ್ದು ನುಡಿದನು.

**ಚೋಳರಾಜ:-** ವಿಷ್ಣುದಾಸ! ನಾನು ನಿನಗಿಂತ ಮೊದಲು ಸುವರ್ಣಪುಷ್ಪಗಳಿಂದಲೂ ಮುತ್ತಿನ ಹಾರಗಳಿಂದಲೂ ರತ್ನದ ಆಭರಣಗಳಿಂದಲೂ ಭಗವಂತನ ಪೂಜೆ ಮಾಡಿದ್ದೆ. ಅಡಿಯಿಂದ ಮುಡಿಯವರೆಗೆ ಅನಂತಶಯನನ ಮೂರ್ತಿಯು ಬಂಗಾರ ಮಣಿ ಮುತ್ತುಗಳಿಂದ ಶೃಂಗಾರಿತವಾಗುವಂತೆ ಮಾಡಿದ್ದೆ. ಅದರ ಮೇಲೆ ನೀನು ಬರಿ ತುಳಸೀ ದಳಗಳಿಂದ ನಾನು ಏರಿಸಿದ ಸ್ವಾಮಿಯ ಮೈಮೇಲಿನ ಒಂದೂ ಆಭರಣ ಕಾಣದಂತೆ ಮಾಡಿರುವೆ. ನೀನು ಹೀಗೇಕೆ ಮಾಡಿದೇ? ನೀನು ಮಹಾ ದರಿದ್ರ. ನಿನ್ನಲ್ಲಿ ವಿಷ್ಣುಭಕ್ತಿ ಲವಲೇಶವೂ ಇಲ್ಲ.

ರಾಜನ ಈ ಬಿರು ನುಡಿಗಳನ್ನು ಕೇಳಿ ವಿಷ್ಣುದಾಸನಿಗೆ ಬಹಳ ಕೆಡುಕೆನಿಸಿತು. ಅವನು ಸುಸ್ಪಷ್ಟವಾಗಿ ನುಡಿದ.

**ವಿಷ್ಣುದಾಸ:-** ರಾಜನ್! ನಿನಗೆ ರಾಜಕಾರಣ ಚೆನ್ನಾಗಿ ತಿಳಿದಿರಬಹುದು. ಆದರೆ ವಿಷ್ಣುಭಕ್ತಿಯ ನಿಜವಾದ ಜ್ಞಾನವು ನಿನಗೆ ಇರುವುದಿಲ್ಲ. ನಿನಗೆ ರಾಜ್ಯದ ಅಧಿಕಾರ ಐಶ್ವರ್ಯದ ಮದ ತುಂಬಿದೆ. ಆದುದರಿಂದಲೇ ಹೀಗೆ ಮಾತನಾಡುತ್ತಿರುವೆ. ಶ್ರೀವಿಷ್ಣು ಭಗವಂತನಿಗೆ ಮುತ್ತು ರತ್ನ ಬಂಗಾರಗಳಿಗಿಂತ ಭಕ್ತಿಯಿಂದ ಏರಿಸಿದ ತುಳಸೀ ದಳಗಳೇ ಪರಮ ಪ್ರಿಯವಾಗಿವೆ. ನೀನು ಭಕ್ತಿಯಿಂದ ಈ ವರೆಗೆ ಯಾವ ಯಾವ ವಿಷ್ಣು ಪ್ರೀತಿಕರವಾದ ವ್ರತಗಳನ್ನು ಮಾಡಿರುವೆ?

ವಿಷ್ಣುದಾಸನ ಈ ಸ್ಪಷ್ಟೋಕ್ತಿಯನ್ನು ಕೇಳಿ ಮಹಾರಾಜನಿಗೆ ನಗೆ ಬಂದಿತು. ಅವನು ಆ ಬ್ರಾಹ್ಮಣನನ್ನು ಉಪಹಾಸಗೈಯುತ್ತ ನುಡಿದನು.

**ಚೋಲರಾಜ:-** "ವಿಷ್ಣುದಾಸ! ನೀನು ದಟ್ಟ ದರಿದ್ರ. ದರಿದ್ರರಲ್ಲಿ ಭಕ್ತಿ ಎಷ್ಟಿದ್ದೀತು! ಶ್ರೀಹರಿಯನ್ನು ಒಲಿಸಲು ಮುಖ್ಯ ಸಾಧನಗಳೆಂದರೆ ಯಜ್ಞ, ದಾನ, ಧರ್ಮ, ದೇವಮಂದಿರ ನಿರ್ಮಾಣ, ಕೆರೆ ಕಾಲುವೆ ಕಟ್ಟಿಸುವದು. ಪರೋಪಕಾರ, ದಕ್ಷಿಣೆ ನೀಡುವದು, ಭೂರಿ ಭೋಜನ ಮಾಡಿಸುವದು, ಸಂಕಟದಲ್ಲಿದ್ದವರಿಗೆ ಅರ್ಥಿಕ ಸಹಾಯ ಸಲ್ಲಿಸುವದು, ಬಡವರ ಕುಟುಂಬ ಪೋಷಣ ಮುಂತಾದ ಪುಣ್ಯ ಕರ್ಮಗಳೇ ಸರಿಯಷ್ಟೇ! ಇವುಗಳಲ್ಲಿ ಒಂದನ್ನಾದರೂ ನಿನ್ನಂಥ ದಟ್ಟ ದರಿದ್ರರು ಮಾಡಲಿಕ್ಕೆ ಶಕ್ಯವಿದೆಯೇ! ನೀನೇ ಹೇಳು. ಈ ವರೆಗೆ ನೀನು ಎಷ್ಟು ದೇವಾಲಯಗಳನ್ನು ಕಟ್ಟಿಸಿರುವೆ? ಎಷ್ಟು ಕೆರೆ ಕಾಲುವೆಗಳನ್ನು ತೋಡಿಸಿರುವೆ! ಅನ್ನ ಛತ್ರ ಅರವಟ್ಟಿಗೆಗಳನ್ನು ಎಷ್ಟು ಇಟ್ಟಿರುವೆ? ಎಷ್ಟು ಯಜ್ಞ ಯಾಗಗಳನ್ನು ಮಾಡಿರುವೆ? ಏನೂ ಮಾಡದಿದ್ದರೂ ನಿನಗೆ "ನಾನೇ ಮಹಾಭಗವದ್ ಭಕ್ತ" ಎಂಬ ಅಹಂಕಾರ ಬಂದದ್ದು ಅತ್ಯಾಶ್ಚರ್ಯ. ಆಗಲಿ. ಇಲ್ಲಿ ಎಲ್ಲ ಭಕ್ತರೂ ಬ್ರಾಹ್ಮಣರೂ ನನ್ನ ಮಾತನ್ನು ಕೇಳಲಿ.

"ಶ್ರೀಹರಿಯನ್ನು ನಾನೂ ಆರಾಧಿಸುತ್ತಿದ್ದೇನೆ. ಈ ವಿಷ್ಣುದಾಸನೂ ಪೂಜಿಸುತ್ತಿದ್ದಾನೆ. ನಮ್ಮಿಬ್ಬರಲ್ಲಿ ಸಾಕ್ಷಾತ್ ಹರಿಯ ಪ್ರತ್ಯಕ್ಷ ದರ್ಶನವನ್ನು ಮೊದಲು ಯಾರು ಮಾಡುತ್ತಾರೆ ಎಂಬುದನ್ನು ನೀವೇ ಪರೀಕ್ಷೆ ಮಾಡಿರಿ. ನಮ್ಮಿಬ್ಬರಲ್ಲಿ ಯಾರ ವಿಷ್ಣು ಭಕ್ತಿಯು ಅತ್ಯಧಿಕ ಎಂಬುದನ್ನು ನೀವೇ ನಿರ್ಣಯಿಸಿರಿ."

ಹೀಗೆ ಹೇಳಿ ತನ್ನ ಅರಮನೆಗೆ ತೆರಳಿದನು ಚೋಲರಾಜ. ಮನೆಗೆ ಹೋಗಿ ಅವನು ಮಹರ್ಷಿ ಕುಲಮಂಡನ ಮಣಿಗಳಾದ ಮುದ್ಗಲ ಮುನಿಗಳನ್ನು ಪ್ರಾರ್ಥಿಸಿ ತನ್ನ ರಾಜಧಾನಿಗೆ ಕರೆದುಕೊಂಡು ಬಂದನು. ಅವರ ನೇತೃತ್ವದಲ್ಲಿ ದೊಡ್ಡ ಪ್ರಮಾಣದಲ್ಲಿ ಒಂದು ವಿಷ್ಣು ಯಾಗವನ್ನು ಆರಂಭಿಸಿದನು. ದೇಶದಲ್ಲಿರುವ ಪಂಡಿತ ಪ್ರಕಾಂಡರಾದ ವೇದಶಾಸ್ತ್ರ ಪರಿನಿಷ್ಠಿತ ಪಂಡಿತೋತ್ತಮ ಋತ್ವಿಜರು ಅಲ್ಲಿಗೆ ಆಗಮಿಸಿದರು.

ಅವರಿಗೆಲ್ಲ ಯಥೇಚ್ಛವಾಗಿ ದಾನ ದಕ್ಷಿಣೆಗಳನ್ನು ಕೊಡುವ ಭರವಸೆ ಕೊಟ್ಟು ಮಹಾರಾಜನು ಆ ವಿಷ್ಣು ಯಜ್ಞವನ್ನು ಒಳ್ಳೇ ವಿಜೃಂಭಣೆಯಿಂದ ನಡೆಸಿದನು. ಆದರೆ ಕಡು ಬಡವನಾದ ವಿಷ್ಣುದಾಸನು ಮಾತ್ರ ಯಾವದೇ ಹೇವ, ಹುರುಡು, ಹವ್ಯಾಸಗಳು ಇಲ್ಲದೇ ಶ್ರೀಹರಿಯನ್ನು ಒಲಿಸಿಕೊಳ್ಳಲು ಶಾಸ್ತ್ರೋಕ್ತವಾದ ವ್ರತ ನಿಯಮ, ಜಪ, ತಪ, ಯಮ ನಿಯಮಾದಿಗಳನ್ನು ಆಚರಿಸುತ್ತ ಹಗಲಿರುಳು ವಿಷ್ಣು ಸೇವಾ ಪರಾಯಣನಾಗಿ ಆ ಅನಂತಶಯನ ಮಂದಿರದಲ್ಲಿಯೇ ವಾಸಿಸಿದನು.

ಅವನು ಕಾರ್ತಿಕ ವ್ರತವನ್ನು ಉತ್ತಮ ಕಲ್ಪದಲ್ಲಿ ಯಾವ ಒಂದು ವಿಧಿಗೂ ಲೋಪ ಬಾರದಂತೆ ಆಚರಿಸುತ್ತಿದ್ದನು. ತುಳಸೀ ಬನದಲ್ಲಿ ಬೆಳೆಸಿ ದೇವರಿಗೆ ನಿತ್ಯವೂ ತುಳಸಿಯ ಅರ್ಚನೆಯನ್ನು ಮಾಡುತ್ತಿದ್ದನು. ಶಾಸ್ತ್ರೋಕ್ತವಾಗಿ ದೇವರಿಗೆ ಮೂರು ಹೊತ್ತು ಷೋಡಶೋಪಚಾರ. ಪಂಚೋಪಚಾರ ಪೂಜೆಗಳನ್ನು ವಿಧಿಪೂರ್ವಕವಾಗಿ ತಪ್ಪದೇ ಭಕ್ತಯಿಂದ ಸಲ್ಲಿಸುತ್ತಿದ್ದನು. ಅನಂತರ ಹಗಲು ರಾತ್ರಿ ಉಳಿದ ವೇಳೆಯಲ್ಲೆಲ್ಲ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ಮಂತ್ರವನ್ನು ಅಖಂಡವಾಗಿ ಜಪಿಸುತ್ತಿದ್ದನು. ಮತ್ತು ತಾನು ಕುಳಿತಾಗ ನಿಂತಾಗ ಓಡಾಡುವಾಗ, ಉಣ್ಣುವಾಗ, ಮಲಗಿದಾಗ ಎಚ್ಚರವಿದ್ದಾಗ ಕನಸಿನಲ್ಲಿಯೂ ಕೂಡ ಅತ್ಯಂತ ಭಕ್ತಿಯುಕ್ತವಾದ ಮನಸ್ಸಿನಿಂದ ಭಗವಂತನ ಸಂತತ ನಾಮಸ್ಮರಣೆಯನ್ನು ಮಾಡುತ್ತಲೇ ಇರುತ್ತಿದ್ದನು. ಇತ್ತ ಚೋಳರಾಜನಾದರೂ ಯಜ್ಞ, ಯಾಗ, ದಕ್ಷಿಣೆ, ದಾನ ಧರ್ಮ ಭೂರಿ ಭೋಜನ ಮುಂತಾದವುಗಳನ್ನು ಮಾಡುತ್ತ ಭಗವಂತನ ಆರಾಧನೆಯನ್ನು ಮಾಡುತ್ತಲೇ ಇದ್ದನು.

ಹೀಗೆ ಆ ಮಹಾರಾಜ ಈ ದರಿದ್ರ ಬ್ರಾಹ್ಮಣ ಇಬ್ಬರೂ ತಮ್ಮ ತಮ್ಮ ರೀತಿಯಲ್ಲಿ, ಭಗವಂತನ ನಿರಂತರ ಆರಾಧನೆಯಲ್ಲಿ ತಲ್ಲೀನರಾಗಿದ್ದರು. ಹೀಗೆ ಇವರಿಬ್ಬರ ವಿಷ್ಣು ಭಕ್ತಿಯ ಸಮಾರಾಧನೆಯು ಬಹುಕಾಲ ಪರ್ಯಂತ ನಡೆಯಿತು.

ಒಂದು ದಿನ ವಿಷ್ಣುದಾಸನು ಬೆಳಗಿನ ಬ್ರಾಹ್ಮ ಮೂಹೂರ್ತದಲ್ಲಿಯೇ ಎದ್ದು ತನ್ನ ಪ್ರಾತಃ ಸ್ನಾನ, ಸಂಧ್ಯಾ, ಜಪ, ದೇವಪೂಜೆ, ಆಹ್ನಿಕಗಳೆಲ್ಲವನ್ನು ಮಾಡಿ ಮುಗಿಸಿದನು. ಅನಂತರ ಭಗವಂತನಿಗೆ ನೈವೇದ್ಯ ಸಮರ್ಪಣ ಮಾಡಲಿಕ್ಕಾಗಿ ಬಗೆ ಬಗೆಯ ಅಡಿಗೆಯನ್ನು ಮಾಡಿ ಇಟ್ಟು ಅದರಲ್ಲಿಯ ಸ್ವಲ್ಪ ಭಾಗವನ್ನು ಬಡಿಸಿಕೊಂಡು ಶ್ರೀ ಅನಂತಶಯನ ಸ್ವಾಮಿಗೆ ನೈವೇದ್ಯ ಮಾಡಿಕೊಂಡು ಬರಲು ದೇವಸ್ಥಾನಕ್ಕೆ ಹೋದನು. ಅಲ್ಲಿ ಹೋಗಿ ಶಾಸ್ತ್ರೋಕ್ತ ಪದ್ದತಿಯಿಂದ ದೇವರಿಗೆ ಸ್ನಾನ ಪೂಜೆ ಷೋಡಶೋಪಚಾರ ಸೇವೆ ಸಲ್ಲಿಸಿ ತುಳಸೀ ಅರ್ಚನೆಯನ್ನು ಮಾಡಿ ನೈವೇದ್ಯ ಸಮರ್ಪಿಸಿ ಧ್ಯಾನ, ಗಾನ, ಭಜನೆ, ನೃತ್ಯ ಸೇವಾದಿಗಳನ್ನೆಲ್ಲ ಮಾಡಿಕೊಂಡು ಮನೆಗೆ ಬಂದನು. ಆದರೆ ಅವನು ಮನೆಗೆ ಬರುವಷ್ಟರಲ್ಲಿ ಮನೆಯಲ್ಲಿ

ತನಗಾಗಿ ಮಾಡಿಟ್ಟುಕೊಂಡ ಅಡಿಗೆಯನ್ನು ಯಾರೋ ಕದ್ದು ಒಯ್ದಿದ್ದರು. ಅವನು ಮತ್ತೆ ಅಡಿಗೆಯನ್ನು ಹೂಡಲಿಲ್ಲ. ಆಗಲೇ ಸಾಕಷ್ಟು ಸಮಯವಾಗಿತ್ತು. ಅವನು ತನ್ನ ಮನೆ ಹಾಗೂ ದೇವಸ್ಥಾನಗಳಲ್ಲಿ ಶಾಸ್ತ್ರೋಕ್ತ ಪದ್ಧತಿಯಿಂದ ಪೂಜೆ ಮಾಡಿ ಎಲ್ಲ ವಿಧದ ಸೇವೆ ಸಲ್ಲಿಸುವಲ್ಲಿ ಹೊತ್ತು ಕಂತಿತ್ತು.

ಮನೆಗೆ ಬಂದು ದೇವರಿಗೆ ನಿವೇದನ ಮಾಡಿ ತಂದ ಅನ್ನವನ್ನು ಮನೆಯಲ್ಲಿಯ ಅಡಿಗೆಯಲ್ಲಿ ಕೂಡಿಸಿ ತಾನು ಊಟ ಮಾಡಿ ಅವನು ಮತ್ತೆ ಸಂಜೆಯ ಪೂಜೆಯ ದೇವಸ್ಥಾನಕ್ಕೆ ಪ್ರತಿದಿನವೂ ಧಾವಿಸಿ ಹೋಗುತ್ತಿದ್ದನು. ಆದರೆ ಇಂದು ಮಾತ್ರ ಮನೆಯಲ್ಲಿಯ ಅಡಿಗೆಯೆಲ್ಲವೂ ಒಮ್ಮೆಲೇ ಮಾಯವಾಗಿತ್ತು. ಇನ್ನು ಮೇಲೆ ತನಗಾಗಿ ಅಡಿಗೆ ಮಾಡುವುದು ಅವನಿಗೆ ಇಷ್ಟವಾಗಲಿಲ್ಲ. ಹಾಗೂ ಅಡಿಗೆ ಮಾಡುತ್ತ ಕುಳಿತರೆ ಸಂಜೆಯ ದೇವರ ಪೂಜೆಯು ತಪ್ಪಿ ಹೋಗುತ್ತಿತ್ತು. ಆದ್ದರಿಂದ ಅಂದು ಅವನು ಉಪವಾಸವಿದ್ದೇ ದೇವರ ಧ್ಯಾನ ಭಜನೆ ಸೇವೆಗಳನ್ನು ಮಾಡಿದ. ಮರುದಿನವೂ ಅವನು ಎಂದಿನಂತೆ ಮನೆಯಲ್ಲಿ ಅಡಿಗೆ ಮಾಡಿಟ್ಟು ಗುಡಿಗೆ ಪೂಜೆಗೆ ಹೋದ. ಪೂಜೆ ಮುಗಿಸಿಕೊಂಡು ಬರುವಷ್ಟರಲ್ಲಿ ಮಾಡಿದ ಅಡಿಗೆಯೆಲ್ಲವೂ ಮತ್ತೆ ಮಟಾಮಾಯ, ಹೀಗೆ ಏಳು ದಿನಗಳ ವರೆಗೆ ಅವನು ಮಾಡಿದ ಅಡಿಗೆಯನ್ನೆಲ್ಲ ಯಾರೋ ಕದ್ದು ಬಿಡುತ್ತಿದ್ದರು. ಏಳೂ ದಿನವೂ ಪೂರ್ಣ ಉಪವಾಸವೇ ಆಯಿತು ಆ ವಿಷ್ಣುದಾಸನಿಗೆ. ಇದರಿಂದ ಅವನಿಗೆ ಒಂದು ದೊಡ್ಡ ಚಿಂತೆ ಆಯಿತು. ಅಡಿಗೆಯನ್ನೇ ಮಾಡದಿದ್ದರೆ ದೇವರಿಗೆ ನೈವೇದ್ಯಕ್ಕೆ ಇಲ್ಲದಂತಾಗುವದು. ಮಾಡಿಟ್ಟರೆ ಯಾರೋ ಅಪಹರಿಸಿಬಿಡುವರು. ಪೂಜೆ ಮುಗಿಸಿಯೇ ಅಡಿಗೆ ಮಾಡಿದರೆ ದೇವರಿಗೆ ನೈವೇದ್ಯವಿಲ್ಲದೇ ತನ್ನ ಹೊಟ್ಟೆಗೆ ಮಾತ್ರ ಊಟವಾದಂತಾಗುವುದು.

ಹೀಗೆ ಪೂರ್ಣ ಉಪೋಷಣೆಯಾದರ ತನಗೆ ಮುಂದೆ ದೇವರ ಗುಡಿಗೆ ಹೋಗಲೂ ಕೂಡ ಶಕ್ತಿ ಇಲ್ಲದಂತಾಗುವದು. ತನ್ನ ಎಲ್ಲ ಜಪ ತಪ ಅನುಷ್ಠಾನಗಳೆಲ್ಲವೂ ನಿಂತು ಹೋಗುವವು. ಅದಕ್ಕಾಗಿ ಈ ಅಡಿಗೆ ಕಳ್ಳನನ್ನು ಕಂಡು ಹಿಡಿಯಬೇಕೆಂದು ನಿರ್ಧರಿಸಿದನು.

ಎಂಟನೇಯ ದಿನ ಅವನು ಎಲ್ಲ ಅಡಿಗೆಯನ್ನು ಮಾಡಿಟ್ಟು ದೇವರ ಪೂಜೆಗೆಂದು ಹೊರಟ. ಆದರೆ ಗುಡಿಗೆ ಹೋಗದೇ ಅಲ್ಲಿಯೇ ಒಂದು ಮರೆಯಲ್ಲಿ ಕುಳಿತನು. ಅಷ್ಟರಲ್ಲಿ ಒಬ್ಬ ಚಂಡಾಲನು ಅವನ ಮನೆಯಲ್ಲಿ ಹೊಕ್ಕು ಅಡಿಗೆಯನ್ನು ಕದಿಯಲು ಕೈ ಹಾಕಿದನು. ಉಪವಾಸದಿಂದ ಆ ಚಂಡಾಲನ ದೇಹವು ಸೊರಗಿ ಒಣಗಿ ಕೃಶವಾಗಿತ್ತು. ಮೂಳೆ ತೊಗಲು ಮಾತ್ರ ಅಸ್ಥಿಪಂಜರದಂತಿದ್ದ ಅವನ ದೇಹದಲ್ಲಿ ಉಳಿದಿದ್ದವು. ಮುಖದಲ್ಲಿ ದೈನ್ಯ, ಕಣ್ಣಿನಲ್ಲಿ ಕಾತರ, ಹೊಟ್ಟೆಯಲ್ಲಿ ಹಸಿವೆಯ ಕಸಿವಿಸಿ ಹೃದಯದಲ್ಲಿ ಹೆದರಿಕೆ ತುಂಬಿದ ಆ ಹೊಲೆಯನನ್ನು ಕಂಡು ಕರುಣೆ ಉಕ್ಕಿ ಬಂದಿತು ವಿಷ್ಣುದಾಸನಿಗೆ. ಅವನಿಗೆ ಆ ಚಂಡಾಲನನ್ನು ಕುರಿತು ಪ್ರೀತಿಯಿಂದ ನುಡಿದನು-

"ತಮ್ಮಾ, ಸ್ವಲ್ಪ ನಿಲ್ಲು ಆ ಒಣ ರೊಟ್ಟಿಯನ್ನು ಏಕೆ ತಿನ್ನುವಿ? ಆ ಉಳಿದೆಲ್ಲ ಒಣ ಆಹಾರವನ್ನು ಹಾಗೇ ಹೇಗೆ ತಿನ್ನುವಿ? ಈ ತುಪ್ಪ ಹಾಲು, ಮೊಸರುಗಳನ್ನು ಕೂಡ ನೀನು ತೆಗೆದುಕೊಂಡು ಹೋಗು ಎಂದು ಅವನ ಬಳಿಗೆ ಹೋದನು." ವಿಷ್ಣುದಾಸನು ಬಂದುದನ್ನು ನೋಡಿ ಆ ಚಂಡಾಲನು ಗಾಬರಿಯಿಂದ ಓಡತೊಡಗಿದನು. ತುಪ್ಪದ ಪಾತ್ರೆಯನ್ನು

ಹಿಡಿದುಕೊಂಡು "ನಿಲ್ಲು, ನಿಲ್ಲು. ನಿನ್ನ ಆ ಒಣ ಅನ್ನಕ್ಕೆ ತುಪ್ಪ ಹಾಕುತ್ತೇನೆ. ತುಪ್ಪ ಹಾಕಿಸಿಕೋ" ಎಂದು ನುಡಿಯುತ್ತ ಓಡಿಬರುತ್ತಿರುವ ವಿಷ್ಣುದಾಸನನ್ನು ನೋಡಿ ಆ ಕಳ್ಳ ಹೊಲೆಯನು ಮತ್ತಿಷ್ಟು ಕಂಗಾಲಾಗಿ ಓಡತೊಡಗಿದನು. ಓಡಲೂ ಕೂಡ ಅವನಲ್ಲಿ ಹೆಚ್ಚಿನ ಶಕ್ತಿ ಇಲ್ಲದ್ದರಿಂದ ಬಿದ್ದುಬಿಟ್ಟನು. ಬಿದ್ದಪೆಟ್ಟಿನಿಂದ ಅವನಿಗೆ ಮೂರ್ಛೆ ಬಂದು ಎಚ್ಚರ ತಪ್ಪಿತು.

ಆಗ ವಿಷ್ಣುದಾಸನು ಆ ಚಂಡಾಲನ ಹಿಂದೆ ಓಡುತ್ತ ಬಂದು ಅವನು ಎಚ್ಚರ ತಪ್ಪಿ ಬಿದ್ದದ್ದನ್ನು ನೋಡಿ ಧಾವಿಸಿ ಅವನ ಹತ್ತಿರ ಬಂದನು. ಮೈಮೇಲಿನ ಬಟ್ಟೆಯಿಂದ ಅವನಿಗೆ ಗಾಳಿ ಹಾಕಿ ಶೈತ್ಯೋಪಚಾರ ಮಾಡಿ ಎಬ್ಬಿಸಿ ಕೂಡಿಸಿದನು.

ವಿಷ್ಣುದಾಸನ ಶೀತಲ ಉಪಚಾರದಿಂದ ಆ ಚಂಡಾಲನು ಎದ್ದು ಕುಳಿತನು. ಮೂರ್ಛೆ ತಿಳಿದು ಎದ್ದು ಕುಳಿತವನನ್ನು ನೋಡಿ ವಿಷ್ಣುದಾಸನಿಗೆ ಅತ್ಯಾಶ್ಚರ್ಯವಾಯಿತು. ಅವನು ಮೊದಲಿನ ಹೊಲೆಯನಾಗದೇ ಸಾಕ್ಷಾತ್ ಹರಿಯೇ ಆಗಿದ್ದನು. ಶಂಖ, ಚಕ್ರ ಗದಾಪದ್ಮಧಾರಿಯಾದ ಶ್ರೀಮಾನ್ ನಾರಾಯಣನು ಪ್ರತ್ಯಕ್ಷವಾಗಿ ವಿಷ್ಣುದಾಸನ ಮುಂದೆ ನಗುತ್ತ ನಿಂತಿದ್ದನು.

ಇಷ್ಟು ದಿನ ತಾನು ಅನನ್ಯ ಭಕ್ತಿಯಿಂದ ಆರಾಧನ ಮಾಡುತ್ತಿದ್ದ ಪ್ರಭು ಇಂದು ತನ್ನ ಚರ್ಮಚಕ್ಷುಸ್ಸಿಗೆ ಗೋಚರವಾಗಿ ಪ್ರತ್ಯಕ್ಷವಾಗಿ ಬಂದು ನಿಂತುದನ್ನು ನೋಡಿ ಅವನು ಭಕ್ತಿ ವಿಹ್ವಲನಾಗಿ ನಿಂತನು. ಭಕ್ತಿಯ ಉದ್ರೇಕದಿಂದ ಅವನ ಬಾಯಿಂದ ಶಬ್ದಗಳೇ ಹೊರಡದಂತಾದವು. ಕಣ್ಣಿನ ಎವೆಗಳನ್ನು ಕೂಡ ಪಿಳುಕಿಸದೇ ಬಿಡುಗಣ್ಣಿನಿಂದ ಆ ಭಗವಂತನನ್ನು ನೋಡುತ್ತ ಏನು ಮಾತನಾಡಲೂ ತೋಚದೆ ಕಣ್ಣಿನಿಂದ ಆನಂದಬಾಷ್ಪಗಳನ್ನು ಉದುರಿಸುತ್ತ ಅವನು ನಿಂತುಬಿಟ್ಟನು.

ಭಗವಂತನಿಗೆ ಅರ್ಥವಾಯಿತು ಆ ಮೌನದೀನ ಭಕ್ತಿಯ ಭಾಷೆ. ಅವನು ತಾನಾಗಿಯೇ ವಿಷ್ಣುದಾಸನ ಹತ್ತಿರ ಬಂದು ಅವನ ತಲೆಯ ಮೇಲೆ ತನ್ನ ವರದಹಸ್ತವನ್ನು ಇಟ್ಟು ಪ್ರೀತಿಯಿಂದ ಅವನ ಕೈ ಹಿಡಿದು ತನ್ನ ವಿಮಾನದಲ್ಲಿ ಒಯ್ದು ಕೂಡಿಸಿಕೊಂಡ. ತನ್ನ ಜೊತೆಗೇ ವೈಕುಂಠ ಲೋಕಕ್ಕೆ ತನ್ನ ದಿವ್ಯ ವಿಮಾನದಲ್ಲಿ ಕೂಡಿಸಿಕೊಂಡು ಪ್ರಯಾಣ ಬೆಳೆಸಿದ.

ಇತ್ತ ಚೋಳ ಚಕ್ರವರ್ತಿಯ ವಿಷ್ಣುಯಾಗವು ಒಳ್ಳೇ ವಿಜೃಂಭಣೆಯಿಂದ ನಡೆದಿತ್ತು. ಯಜ್ಞವೇದಿಕೆಯ ಮೇಲೆ ದೀಕ್ಷಾಬದ್ಧನಾಗಿ ಕುಳಿತ ಮಹಾರಾಜನು ವಿಮಾನದ ಸಪ್ಪಳವನ್ನು ಕೇಳಿ ಮುಖ ಮೇಲೆಮಾಡಿ ಮುಗಿಲಿನೆಡೆಗೆ ನೋಡಿದ. ತನ್ನ ಪ್ರತಿಸ್ಪರ್ಧಿಯಾದ ವಿಷ್ಣುದಾಸನು ವಿಮಾನದಲ್ಲಿ ಕುಳಿತು ವೈಕುಂಠ ಲೋಕಕ್ಕೆ ಹೊರಟದ್ದು ಅವನಿಗೆ ಅರ್ಥವಾಯಿತು.

ಕೂಡಲೇ ಅವನು ತನ್ನ ಯಜ್ಞದಲ್ಲಿ ಬ್ರಹ್ಮ ಆಗಿ ಕುಳಿತ ಪುರೋಹಿತರನ್ನು ಕುರಿತು, ಸರ್ವಯಜ್ಞ ಕಾರ್ಯಗಳನ್ನು ನಿರ್ದೇಶನ ಮಾಡುತ್ತಿದ್ದ ಮುದ್ಗಲ ಋಷಿಗಳನ್ನು ಕುರಿತು ಉದ್ವೇಗದಿಂದ ನುಡಿದ.

**ಚೋಳರಾಜ:-** ಮಹರ್ಷಿಗಳೇ ನಾನು ಯಾರ ಜೊತೆಗೆ ಸ್ಪರ್ಧೆ ಹೂಡಿ ಈ ಯಜ್ಞ ಯಾಗ ದಾನ ದಕ್ಷಿಣಾದಿ ಬಹು ದ್ರವ್ಯ ಸಾಧ್ಯವಾದ ಪುಣ್ಯಕಾರ್ಯಗಳನ್ನು ಕೈಕೊಂಡಿರುವೆನೋ, ಆ ವಿಷ್ಣುದಾಸನು ಈಗಾಗಲೇ ಶ್ರೀಹರಿಯ ಪ್ರತ್ಯಕ್ಷ ದರ್ಶನವನ್ನು ಹೊಂದಿ ವಿಷ್ಣುವಿನ ಸಮಾನವಾದ ರೂಪವನ್ನೇ ಪಡೆದು ವೈಕುಂಠ ಲೋಕಕ್ಕೆ ದಿವ್ಯ

ವಿಮಾನದಲ್ಲಿ ಕುಳಿತು ಹೋದನು. ನಾನು ಅಸಂಖ್ಯ ದ್ರವ್ಯ ರಾಶಿಯನ್ನು ವೆಚ್ಚಮಾಡಿ ಇಷ್ಟೆಲ್ಲ ಬ್ರಹ್ಮರ್ಷಿಗಳನ್ನು ಮಹರ್ಷಿಗಳನ್ನು ಕರೆತಂದು ಲಕ್ಷಾವಧಿ ಜನರಿಗೆ ಅನ್ನದಾನ ಸುವರ್ಣ ದಾನ, ವಿಪುಲ ದಕ್ಷಿಣಾ ದಾನಾದಿಗಳನ್ನು ಮಾಡಿ ಆದ್ದೂರಿಯಿಂದ ಯಜ್ಞವನ್ನು ಮಾಡಿದರೂ ಭಗವಂತನು ನನಗೆ ಒಲಿಯಲಿಲ್ಲ, ಪ್ರತ್ಯಕ್ಷ ದರ್ಶನವನ್ನು ನೀಡಲಿಲ್ಲ. ಆದರೆ ವಿಷ್ಣುದಾಸನಿಗೆ ಮಾತ್ರ ಯಾವ ಯಜ್ಞ, ಯಾಗ, ದಾನ, ದಕ್ಷಿಣೆ ಒಂದೂ ಇಲ್ಲದೇ, ಕೇವಲ ಭಕ್ತಿಯಿಂದ ಮಾತ್ರ ಭಗವಂತನು ಒಲಿದು ದರ್ಶನವಿತ್ತು ಮೋಕ್ಷಕ್ಕೆ ಕರೆದು ಒಯ್ಯುತ್ತಿದ್ದಾನೆ. ಇದರಿಂದ ಶ್ರೀಹರಿಯು ಕೇವಲ ಯಜ್ಞದಾನಗಳಿಂದ ಪ್ರಸನ್ನನಾಗುವದಿಲ್ಲ. ಕೇವಲ ಭಕ್ತಿಯಿಂದ ಮಾತ್ರ ಭಗವಂತನನ್ನು ಒಲಿಸಲು ಸಾಧ್ಯ ಎಂಬುವ ಮಾತು ನನಗೆ ಮನದಟ್ಟಾಯಿತು.''

ಹೀಗೆ ವಿಚಾರಮಾಡಿ, ಹೇಳಿ ಚೋಳರಾಜನು ತನ್ನ ಉತ್ತರಾಧಿಕಾರಿಯನ್ನು ರಾಜ್ಯಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡಿದನು. ಚೋಳರಾಜನು ತನ್ನ ಚಿಕ್ಕಂದಿನಿಂದಲೂ ಯಜ್ಞದೀಕ್ಷೆಯನ್ನು ಸ್ವೀಕರಿಸಿ ವರ್ಷದಲ್ಲಿ ಹನ್ನೆರಡು ತಿಂಗಳು ಯಜ್ಞ ಯಾಗಗಳನ್ನು ಮಾಡುತ್ತಲೇ ಇದ್ದನು. ಯಾವಾಗಲೂ ಜಿತೇಂದ್ರಿಯನಾಗಿಯೇ ಇರಬೇಕಾಗುತ್ತಿತ್ತು ಯಜ್ಞದೀಕ್ಷಿತನಾದ ಆ ಮಹಾರಾಜನು. ಅವನ ಜನ್ಮವೆಲ್ಲವೂ ಹೀಗೆ ದೀಕ್ಷಾಬದ್ಧವಾಗಿ ಕಳೆದು ಹೋದದ್ದರಿಂದ ಅವನಿಗೆ ಮಕ್ಕಳೇ ಆಗಲಿಲ್ಲ. ಆದ್ದರಿಂದ ಅವನು ಸೋದರನ ಮಗನನ್ನು ರಾಜ್ಯಕ್ಕೆ ಉತ್ತರಾಧಿಕಾರಿಯನ್ನಾಗಿ ನೇಮಿಸಿದನು. ಇಂದಿಗೂ ಆ ಚೋಳ ರಾಜ್ಯದಲ್ಲಿ ಅಣ್ಣನ ಮಕ್ಕಳೇ ಉತ್ತರಾಧಿಕಾರಿಗಳಾಗಿ ಪಟ್ಟಾಭಿಷೇಕವಾಗುವ ಸಂಪ್ರದಾಯವು ಬೆಳೆದು ಬಂದಿದೆ.

ಹೀಗೆ ಚೋಳರಾಜನು ಮನೆ, ಮಾರು, ಮಡದಿ, ರಾಜ್ಯ, ಅಧಿಕಾರ. ಐಶ್ವರ್ಯ. ಅರಮನೆ ಸಿರಿಮನೆಗಳನ್ನೆಲ್ಲ ತೊರೆದು ನೇರವಾಗಿ ಯಜ್ಞಶಾಲೆಗೆ ಬಂದನು. ಯಜ್ಞಕುಂಡದಲ್ಲಿ ಹೋಮಾಗ್ನಿಯು ಅಜ್ಯಾಹುತಿಯಿಂದ ಉದ್ದೀಪಿತವಾಗಿ ಜ್ವಾಲಾಮಾಲೆಗಳನ್ನು ಹೊರಸೂಸುತ್ತ ದೇದೀಪ್ಯಮಾನವಾಗಿ ಉರಿಯುತ್ತಿತ್ತು. ಚೋಲರಾಜನು ಅಲ್ಲಿಗೆ ಬಂದು ಯಜ್ಞ ಕುಂಡದ ಎದುರು ಕೈ ಜೋಡಿಸಿ ನಿಂತುಕೊಂಡನು.

ಭಗವಾನ್ ಶ್ರೀ ಹರಿಯನ್ನು ಸಂಬೋಧಿಸಿ ಮೂರು ಬಾರಿ ಗಟ್ಟಿಯಾಗಿ ಒದರಿ ಹೇಳಿದನು. ''ಭಗವಾನ್ ನಾರಾಯಣನೇ, ನೀನು ನನಗೆ ಕಾಯಾ ವಾಚಾ ಮನಸಾ ತ್ರಿಕರ್ಣ ಶುದ್ಧಿಪೂರ್ವಕವಾಗಿ ಅಚ್ಛಿನ್ನ ಭಕ್ತಿಯನ್ನು ನಿನ್ನ ಪಾದಾರವಿಂದಗಳಲ್ಲಿ ನಿರಂತರವೂ ನೀಡು.'' ಎಂದು ಉಚ್ಚರಿಸಿ ಆ ಅಗ್ನಿಕುಂಡದಲ್ಲಿ ಹಾರಿಕೊಂಡನು.

ಹೀಗೆ ಎಲ್ಲ ಋತ್ವಿಜರೂ ಪುರೋಹಿತರೂ ಮುದ್ಗಲ ಮಹರ್ಷಿಗಳೂ ನೋಡುತ್ತಿದ್ದಂತೆಯೇ ಅಗ್ನಿನಾರಾಯಣನಿಗೆ ಆತ್ಮಾಹುತಿಯನ್ನು ಅರ್ಪಣೆ ಮಾಡಿದ ಆ ಚೋಳರಾಜ. ಅವನ ಭಕ್ತಿಗೆ ಮೆಚ್ಚಿ ಭಗವಾನ್ ಮಹಾವಿಷ್ಣು ಅಗ್ನಿಕುಂಡದಿಂದಲೇ ಪ್ರಾದುರ್ಭೂತನಾದನು. ಹೋಮಕುಂಡದಲ್ಲಿ ಹಾರಿಕೊಂಡ ಆ ಚೋಲರಾಜನನ್ನು ಎತ್ತಿ ಮೇಲಕ್ಕೆ ತಂದು ತಲೆಯಮೇಲೆ ವರದ ಹಸ್ತವನ್ನು ಇಟ್ಟು ಅವನಿಗೂ ಮೋಕ್ಷವನ್ನು ಕರುಣಿಸಿದನು. ತನ್ನ ಜೊತೆ ದಿವ್ಯ ವಿಮಾನದಲ್ಲಿ ಕೂಡಿಸಿ ಕೊಂಡು ವೈಕುಂಠಕ್ಕೆ ಕರೆದುಕೊಂಡು ಹೋದನು.

**ನಾರದ:-** ಕೇವಲ ತುಳಸೀದಳದಿಂದ ಭಕ್ತಿಯುಕ್ತನಾಗಿ ಭಗವಂತನ ನಿರಂತರ ಆರಾಧನೆಯನ್ನು ಮಾಡಿದ ವಿಷ್ಣುದಾಸನ ಭಕ್ತಿಗೆ ಮೆಚ್ಚಿ ಭಗವಂತನು ಅವನನ್ನು ವೈಕುಂಠಲೋಕಕ್ಕೆ ತಾನಾಗಿಯೇ ಕರೆದುಕೊಂಡು ಹೋಗಿದ್ದನಷ್ಟೇ. ವೈಕುಂಠಕ್ಕೆ ಕರೆದೊಯ್ದು ದಾಸನನ್ನು ತನ್ನ ಪ್ರೀತಿಯ ಪಾರ್ಷದನನ್ನಾಗಿ ಮಾಡಿಕೊಂಡನು. ಅವನಿಗೆ ವೈಕುಂಠದಲ್ಲಿ ಪುಣ್ಯಶೀಲ ಎಂಬ ಹೆಸರು ಉಂಟಾಯಿತು. ಮುಂದೆ ಅಚ್ಛಿನ್ನ ಭಕ್ತಿಯನ್ನೇ ಭಗವಂತನಲ್ಲಿ ಬೇಡಿ ಅಗ್ನಿಕುಂಡದಲ್ಲಿ ಆತ್ಮದೇಹವನ್ನೇ ಈಡಾಡಿದ ಚೋಳರಾಜನನ್ನು ಕೂಡ ಶ್ರೀಮನ್ನಾರಾಯಣನು ವೈಕುಂಠ ಲೋಕಕ್ಕೆ ಕರೆದುಕೊಂಡು ಹೋಗಿ ಸುಶೀಲ ಎಂಬ ತನ್ನ ಪಾರ್ಷದನನ್ನಾಗಿ ಮಾಡಿಕೊಂಡನು. (ಪಾರ್ಷದ ಅಂಗರಕ್ಷಕ ಸೇವಕ)

## ಜಯವಿಜಯರ ಚರಿತ್ರೆ

**ಅಧ್ಯಾಯ - ೬೪**

**ಧರ್ಮದತ್ತ:-** ಜಯವಿಜಯರು ವೈಕುಂಠಲೋಕದಲ್ಲಿ ವಿಷ್ಣುವಿನ ದ್ವಾರಪಾಲಕರಾಗಿ ಇರುತ್ತಾರೆ ಎಂದು ನಾನು ಕೇಳಿದ್ದೇನೆ ಇಂತಹ ಭಗವಂತನ ಸಂತತ ಸೇವೆಯ ಸೌಭಾಗ್ಯವು ಅವರಿಗೆ ದೊರಕಲು ಏನು ಕಾರಣ? ಜನ್ಮಾಂತರದಲ್ಲಿ ಅವರು ಯಾವ ಮಹತ್ತರವಾದ ಪುಣ್ಯವನ್ನು ಮಾಡಿದ್ದರು.

ಧರ್ಮದತ್ತನ ಈ ಪ್ರಶ್ನೆಯನ್ನು ಕೇಳಿ ಆ ಪುಣ್ಯಶೀಲ ಮತ್ತು ಸುಶೀಲ ಎಂಬ ಶ್ರೀಹರಿಯ ಪಾರ್ಷದರು ಸಂತೋಷದಿಂದ ನುಡಿದರು-

ಪೂರ್ವಕಾಲದಲ್ಲಿ ಸ್ವಾಯಂಭುವ ಮನುವಿನ ಮಗಳಾದ ದೇವಹೂತಿಯನ್ನು ಕರ್ದಮ ಮಹರ್ಷಿಗೆ ಮದುವೆ ಮಾಡಿಕೊಡಲಾಗಿತ್ತು. ಕರ್ದಮ ಮಹರ್ಷಿಗಳ ದೃಷ್ಟಿಪಾತ ಮಾತ್ರದಿಂದಲೇ ಜಯ ವಿಜಯ ಎಂಬ ಇಬ್ಬರು ಗಂಡುಮಕ್ಕಳು ಜನಿಸಿದರು. ಅನಂತರ ಹಲವು ಕಾಲ ಕಳೆದ ಬಳಿಕ ದಾಂಪತ್ಯ ಧರ್ಮದಿಂದ ಕೆಲವು ಕನ್ಯೆಯರೂ ಕಪಿಲನಾಮಕನಾದ ಭಗವಾನ್ ಶ್ರೀಹರಿಯೂ ದೇವಹೂತಿಯಿಂದ ಜನ್ಮ ತಳೆದರು. ಸಾಕ್ಷಾತ್ ಭಗವಂತನ ಅವತಾರಭೂತನಾದ ಕಪಿಲಮುನಿಯು ಸಾಂಖ್ಯಶಾಸ್ತ್ರದ ಪ್ರಧಾನಪ್ರವರ್ತಕನಾಗಿ ಅನೇಕ ಶಿಷ್ಯರಿಗೆ ತತ್ತ್ವೋಪದೇಶ ಮಾಡಿದನು. ಅವನಿಂದ ಮುಂದೆ ಶಿಷ್ಯಪ್ರತಿಷ್ಯ ಪರಂಪರೆಯಿಂದ ಈ ಕಾಪಿಲ ಸಾಂಖ್ಯ ಶಾಸ್ತ್ರವು ಜಗತ್ತಿನಲ್ಲಿ ಪ್ರಚುರವಾಗಿ ಪ್ರಚಾರವಾಯಿತು. ಈ ಕಪಿಲ ಭಗವಂತನ ಹಿರಿಯ ಅಣ್ಣಂದಿರಾದ ಜಯವಿಜಯರೂ ಪರಮ ವಿಷ್ಣುವಿನ ಭಕ್ತರು. ಅವರು ಯಾವಾಗಲೂ ''ಓಂ ನಮೋ ನಾರಾಯಣಾಯ'' ಎಂಬ ನಾರಾಯಣ ಅಷ್ಟಾಕ್ಷರ ಮಂತ್ರವನ್ನು ಒಂದು ಕ್ಷಣವೂ ಬಿಡದೇ ಅತ್ಯುತ್ಕಟ ಭಕ್ತಿಯುಕ್ತರಾಗಿ ಸಂತತವೂ ಜಪಿಸುತ್ತಲೇ ಇದ್ದರು. ಮತ್ತು ವಿಷ್ಣುಪ್ರೀತಿಕರವಾದ ಒಂದೂ ವ್ರತವನ್ನು ಅವರು ಮಾಡದೇ ಬಿಡುತ್ತಿರಲಿಲ್ಲ.

### ಮರುತ್ತನ ಯಾಗ, ಜಯವಿಜಯರ ಸಹಯೋಗ

ಒಂದು ಸಂದರ್ಭಲ್ಲಿ ಆ ಕಾಲದ ಸಾರ್ವಭೌಮ ಮಹಾರಾಜನಾದ ಮರುತ್ತ ಚಕ್ರವರ್ತಿಯು ದೊಡ್ಡ ಯಜ್ಞವನ್ನು ಹೂಡಿದನು. ಆ ಯಜ್ಞಕ್ಕಾಗಿ ಆ ಕಾಲದ ಯಜ್ಞ ಯಾಗ ವಿಭಾಗದಲ್ಲಿ ಪರಿಣತ ಪ್ರಜ್ಞರಾದ ಪಂಡಿತ ಪ್ರಕಾಂಡರೆಂದು ಪ್ರಸಿದ್ಧಿ ಪಡೆದ

ಈ ಜಯ ವಿಜಯ ಸೋದರ ಮಹರ್ಷಿಗಳನ್ನು ಮರುತ್ತ ಮಹಾರಾಜನು ಆಮಂತ್ರಿಸಿದನು. ಬಹುಶ್ರುತ ವಿಶ್ರುತನಾದ ಆಚಾರ್ಯ ಪುರುಷನು ಎಂದು ಅಲ್ಲಿ ನೆರೆದ ಋತ್ವಿಜರೆಲ್ಲರೂ ಹೇಳಿದ್ದರಿಂದ ಶ್ರೌತ ವಿಭಾಗದಲ್ಲಿ ಜಯನನ್ನೇ ಮರುತ್ತ ಮಹಾರಾಜನು ತನ್ನ ಯಜ್ಞಕ್ಕೆ ಬ್ರಹ್ಮನನ್ನಾಗಿ ಮಾಡಿದನು. ವಿಜಯನನ್ನು ಆಚಾರ್ಯ ಪೀಠದಲ್ಲಿ ಪ್ರತಿಷ್ಠಾಪಿಸಿದನು. ಯಾಜ್ಞಿಕ ಪ್ರಕ್ರಿಯೆಯಲ್ಲಿ ವೈದುಷ್ಯದ ವಿಕ್ರಮವನ್ನೇ ಸ್ಥಾಪಿಸಿದ ಆ ಇಬ್ಬರೂ ಸುಧೀಮಾನ್ ಸಹೋದರರ ಸಮರ್ಥ ನೇತೃತ್ವದಲ್ಲಿ ಮರುತ್ತ ಮಹಾರಾಜನ ಮಹತ್ತರವಾದ ಆ ಯಜ್ಞವು ಉತ್ತಮ ರೀತಿಯಿಂದ ನೆರವೇರಿತು.

ಇದರಿಂದ ಪರಮ ಪರಿತುಷ್ಟನಾದ ಆ ಮರುತ್ತ ಮಹಾರಾಜ, ಯಜ್ಞವಿಧಿಯು ಪೂರ್ಣ ಮುಗಿದ ಬಳಿಕ ಅವಭೃಥ ಸ್ನಾನದ ಅನಂತರ ಮರುತ್ತ ಮಹಾರಾಜನು ಆ ಎಲ್ಲ ಯಜ್ಞಕಾರ್ಯದ ಯಶಸ್ಸಿಗೆ ಹಾಗೂ ಶ್ರೇಯಸ್ಸಿಗೆ ಮುಖ್ಯ ಕಾರಣೀಭೂತರಾದ ಜಯ ವಿಜಯರಿಗೆ ದಕ್ಷಿಣಾರೂಪವಾಗಿ ಅಪರಿಮಿತ ದ್ರವ್ಯವನ್ನು ನೀಡಿದನು. ಆ ಅಪಾರ ಸಂಪತ್ತನ್ನು ಆ ಇಬ್ಬರೂ ಸಹೋದರರು ಹೊರಲಾರದೇ ಹೊತ್ತುಕೊಂಡು ತಮ್ಮ ಆಶ್ರಮಕ್ಕೆ ತಂದರು. ಅಲ್ಲಿ ಆಶ್ರಮದಲ್ಲಿ ಅವರಿಬ್ಬರೂ ಸಹೋದರರೂ ಮಹಾರಾಜನು ಕೊಟ್ಟ ಅಗಣ್ಯ ನಗ, ನಾಣ್ಯ, ನಿಷ್ಕಮಣಿ, ಸುವರ್ಣ, ಮುಕ್ತಾದಿ ಪುಷ್ಕಳ ಸಂಪದವನ್ನು ಹಂಚಿಕೊಳ್ಳತೊಡಗಿದರು.

ಅವರಲ್ಲಿ ಹಿರಿಯನಾದ ಜಯನು ರಾಜನು ಕೊಟ್ಟ ದ್ರವ್ಯವನ್ನು ಇಬ್ಬರೂ ಸರಿಯಾಗಿ ಹಂಚಿಕೊಳ್ಳೋಣ ಎಂದು ಹೇಳಿದನು. ಆದರೆ ತಮ್ಮನಾದ ವಿಜಯನಿಗೆ ಇದು ಸಮ್ಮತವಾಗಲಿಲ್ಲ. 'ನೀನು ಹೊತ್ತು ತಂದದ್ದು ನಿನಗೆ, ನಾನು ಹೊತ್ತು ತಂದದ್ದು ನನಗೆ' ಎಂದು ವಾದಿಸಿದನು. ಆದರೆ ಇದು ಹಿರಿಯನಾದ ಜಯನಿಗೆ ಸಮ್ಮತವಾಗಲಿಲ್ಲ. ಅವನು ಸಿಟ್ಟಿಗೆದ್ದು ಲೋಭಿಯಾದ ವಿಜಯನಿಗೆ ಶಾಪವಿತ್ತನು. ನೀನು ಇಬ್ಬರ ಹಣವನ್ನೂ ಹೊತ್ತು ತೆಗೆದುಕೊಂಡು ಬಂದೆ. ನಾನು ಅಶಕ್ತ, ಸ್ವಲ್ಪೇ ಹೊತ್ತು ತಂದೆ. ಇಬ್ಬರಿಗೂ ಸಮನಾಗಿ ಹಂಚುವದನ್ನು ಬಿಟ್ಟು ಒಬ್ಬನೇ ತೆಗೆದುಕೊಂಡೆ. ಆದುದರಿಂದ ನೀರಿನಲ್ಲಿ ನೀನು ಮೊಸಳೆಯಾಗಿ ಬೀಳು.''

ಜಯನ ಈ ಶಾಪವನ್ನು ಕೇಳಿ ವಿಜಯನೂ ಕೂಡ ಪ್ರತಿಯಾಗಿ ಶಾಪ ಕೊಟ್ಟನು. ''ನೀನು ಮದದಿಂದ ಉನ್ಮತ್ತನಾಗಿ ನನಗೆ ಈ ಶಾಪವನ್ನು ನೀಡಿರುವೆ. ಆದುದರಿಂದ ನೀನು ಮದಸುರಿಯುವ ಆನೆಯಾಗಿ ಹುಟ್ಟು.'' ಹೀಗೆ ಪರಮ ಕೋಪದಿಂದ ಶಾಪವನ್ನು ಪರಸ್ಪರ ಎಸೆದಾಡಿದ ಬಳಿಕ ಅವರಿಬ್ಬರಿಗೂ ಪಶ್ಚಾತ್ತಾಪವಾಯಿತು. ಇಬ್ಬರೂ ಭಗವಂತನ ಬಳಿ ಮೊರೆ ಇಟ್ಟರು. ಭಕ್ತ ಶ್ರೇಷ್ಠರಾದ ಆ ಇಬ್ಬರೂ ಸಹೋದರರ ದೀನ ಮೊರೆಯನ್ನೂ, ಕರುಳಿನ ಕರೆಯನ್ನೂ ಕೇಳಿ ಕರುಣಾರ್ದ್ರ ಹೃದಯಿಯಾದ ಶ್ರೀಕಾಂತನು ಅಲ್ಲಿ ಆಗಮಿಸಿದನು ಮತ್ತು ಅವರಿಬ್ಬರನ್ನೂ ಸಂತೈಸುತ್ತ ನುಡಿದನು.

''ನೀವಿಬ್ಬರೂ ನನ್ನ ಏಕನಿಷ್ಠ ಭಕ್ತರು. ಶಾಪಾನುಗ್ರಹ ಶಕ್ತರು. ನಿಮ್ಮಿಬ್ಬರ ಮಾತು ಎಂದೂ ಸಟೆ ಆಗುವದಿಲ್ಲ. ನೀವಿಬ್ಬರೂ ಪರಸ್ಪರ ಶಾಪದಂತೆ ಮೊಸಳೆ, ಆನೆಯಾಗಿ ಜನಿಸುವಿರಿ. ಶಾಪವನ್ನು ಭೋಗಿಸಿ ಕೊನೆಗೆ ನನ್ನ ವೈಕುಂಠ ಧಾಮಕ್ಕೆ ಮರಳಿ ಬರುವಿರಿ'' ಹೀಗೆ ಹೇಳಿ ಅಂತರ್ಧಾನ ಹೊಂದಿದನು ಭಗವಾನ್ ಶ್ರೀಹರಿ.

ಅನಂತರ ಪರಸ್ಪರ ಶಾಪದಂತೆ ವಿಜಯನು ಗಂಡಕೀ ನದಿಯಲ್ಲಿ ಭಯಂಕರ ಮೊಸಳೆಯಾಗಿ ಜನಿಸಿದನು. ಹಿರಿಯನಾದ ಜಯನು ತಮ್ಮ ವಿಜಯನ ಶಾಪದಂತೆ ಅದೇ ಗಂಡಕೀ ನದಿಯ ದಂಡೆಯ ಮೇಲೆ ಮೈಚಾಚಿದ ಗಹನ ಗೊಂಡಾರಣ್ಯದಲ್ಲಿ ಮದೋನ್ಮತ್ತ ಆನೆಯಾಗಿ ಜನಿಸಿದನು. ಈ ಜನ್ಮದಲ್ಲಿಯೂ ಕೂಡ ಅವರಿಗೆ ವಿಷ್ಣು ಭಕ್ತಿಯ ಪ್ರಭಾವದಿಂದ ಪೂರ್ವ ಜನ್ಮದ ನೆನಪು ಜಾಗರೂಕವಾಗಿ ಇದ್ದಿತು.

ಒಂದಾನೊಂದು ಸಮಯದಲ್ಲಿ ಗಂಧ ಗಜವಾಗಿ ಹುಟ್ಟಿದ ಆ ಜಯನು ಕಾರ್ತೀಕ ಮಾಸದಲ್ಲಿ ಗಂಡಕೀ ನದಿಯ ಉದಕದಲ್ಲಿ ಪ್ರಾತಃ ಸ್ನಾನ ಮಾಡಬೇಕೆಂಬ ಸದಿಚ್ಛೆಯಿಂದ ನದೀ ತೀರಕ್ಕೆ ಬಂದಿತು. ಗಂಡಕೀ ನದಿಯ ಆಳವಾದ ನೀರಿನಲ್ಲಿ ಸ್ನಾನ ಮಾಡಲಿಕ್ಕಾಗಿ ನದಿಯಲ್ಲಿ ಪ್ರವೇಶ ಮಾಡಿತು ಈ ಆನೆಯು. ಸ್ನಾನಕ್ಕೆ ಇಳಿದ ತಾಣದಲ್ಲಿಯೇ ಒಂದು ಮೊಸಳೆಯು ಅದರ ಕಾಲನ್ನು ಗಟ್ಟಿಯಾಗಿ ಹಿಡಿಯಿತು. ಮೊಸಳೆಯಾದ ವಿಜಯನಿಗೆ ಜಯನ ಮೇಲಿನ ಜನ್ಮಾಂತರದ ದ್ವೇಷವು ಜಾಗೃತವಾಯಿತು. ಈಗ ಈ ಗಂಡಕೀ ನದಿಯಲ್ಲಿ ಸ್ನಾನಕ್ಕೆ ಬಂಧ ಆನೆಯು ತನ್ನ ಅಣ್ಣನಾದ ಜಯನೇ ಎಂದೂ ಅದಕ್ಕೆ ನಿಶ್ಚಯವಾಯಿತು. ಆ ಜನ್ಮಾಂತರದ ದ್ವೇಷವನ್ನು ಸಾಧಿಸಲಿಕ್ಕಾಗಿಯೇ ಮೊಸಳೆಯಾದ ವಿಜಯನು ಸಿಟ್ಟಿನಿಂದ ಜನ್ಮಾಂತರದ ಸೇಡು ತೀರಿಸಿಕೊಳ್ಳುವ ದುರುದ್ದೇಶದಿಂದ ಆ ಆನೆಯ ಕಾಲನ್ನು ಕಚ್ಚಿ ಹಿಡಿಯಿತು. ಆನೆಯು ತನ್ನ ಪ್ರಚಂಡ ಶಕ್ತಿಯಿಂದ ಆ ಮೊಸಳೆಯ ಬಾಯಿಂದ ತನ್ನನ್ನು ಬಿಡಿಸಿಕೊಳ್ಳಬೇಕೆಂದು ಶತಪ್ರಯತ್ನ ಮಾಡಿತು. ಎಷ್ಟು ಗುದ್ದಾಡಿ ಕೂಸರಾಡಿದರೂ ಆ ಗಜರಾಜನಿಗೆ ಮೊಸಳೆಯಿಂದ ಬಿಡಿಸಿಕೊಳ್ಳಲು ಆಗಲಿಲ್ಲ.

ಕೊನೆಗೆ ನಿರುಪಾಯವಾಗಿ ಆ ಗಜರಾಜನು ''ಭಗವನ್, ನಾರಾಯಣ, ನೀನೆ ನನ್ನನ್ನು ರಕ್ಷಿಸು'' ಎಂದು ನೆನೆಯಿತು. ತನ್ನ ಸೊಂಡೆಯಿಂದ ಒಂದು ಹೂವನ್ನು ಎತ್ತಿ ತೂರಿ 'ನಾರಾಯಣಾ ಅಖಿಲ ಗುರೋ ಭಗವನ್ ನಮಸ್ತೇ' ಎಂದು ಕೂಗಿ ಭಗವಂತನಿಗೆ ಶರಣು ಹೋಯಿತು. ಮತ್ತು ಆ ರಮಾನಾಥನ ಸ್ಮರಣವನ್ನು ಮಾಡಿ ಆ ಗಜರಾಜವು ''ಈ ಗ್ರಾಹಸಂಕಟದಿಂದ ನನ್ನನ್ನು ಮುಕ್ತನನ್ನಾಗಿ ಮಾಡು.'' ಎಂದು ಬೇಡಿಕೊಂಡಿತು, ಶ್ರೀಕೃಷ್ಣನನ್ನು. ಆಗ ವಿಷ್ಣುವು ಶಂಖ, ಚಕ್ರ, ಗಧಾ, ಪದ್ಮವನ್ನು ಧಾರಣಮಾಡಿ ಗರುಡಾರೂಢನಾಗಿ ಅಲ್ಲಿ ಪ್ರಕಟನಾದನು. ತನ್ನ ಚಕ್ರದಿಂದ ಆ ಆನೆ ಮೊಸಳ ಎರಡನ್ನೂ ಉದ್ಧಾರ ಮಾಡಿ ತನ್ನಂತೆಯೇ ರೂಪವನ್ನು ಎರಡಕ್ಕೂ ಕರುಣಿಸಿ ಅವರಿಬ್ಬರನ್ನೂ ವೈಕುಂಠಲೋಕಕ್ಕೆ ಕರೆದೊಯ್ದನು. ಈ ಲೋಕದಲ್ಲಿ ಜಯವಿಜಯರಾಗಿ ಜನಿಸಿದ ಸೋದರರೇ ಮುಂದೆ ವೈಕುಂಠ ಲೋಕದಲ್ಲಿ ಜಯವಿಜಯರೆಂಬ ಹೆಸರಿನಿಂದ ಭಗವಂತನ ಆಜ್ಞೆಯಂತೆ ಶ್ರೀಹರಿಯ ದ್ವಾರಪಾಲಕರಾಗಿ ನೆಲೆ ನಿಂತರು.

ಆದುದರಿಂದ ಧರ್ಮದತ್ತನೇ! ನೀನೂ ಕೂಡ ಮಾತ್ಸರ್ಯವನ್ನು ಬಿಡು. ದಂಭವನ್ನು ತ್ಯಜಿಸು. ಯಾವಾಗಲೂ ಶ್ರೀವಿಷ್ಣುವಿಗೆ ಪ್ರೀತಿಕರವಾದ ವ್ರತವನ್ನು ಆಚರಣೆ ಮಾಡು. ಕಾರ್ತಿಕ ಮಾಘ ಹಾಗೂ ವೈಶಾಖ ಮಾಸಗಳಲ್ಲಿ ಎಲ್ಲರೂ ಪ್ರಾತಃ ಸ್ನಾನವನ್ನು ಮಾಡಬೇಕು, ಏಕಾದಶೀ ವ್ರತವನ್ನು ತಪ್ಪದೆ ಆಚರಿಸಬೇಕು. ಮನೆಯ ಮುಂದೆ ಮತ್ತು ಸುತ್ತು ಮುತ್ತಲು ತುಳಸಿಯ ಕೈತೋಟ ಮಾಡಿ ಅದನ್ನು ನೀರು ಹಾಕಿ ಬೆಳೆಸಬೇಕು. ಹೀಗೆ ಮಾಡುವದರಿಂದ ಭಗವಾನ್ ಶ್ರೀ ಹರಿಯು ಪರಮ ಸಂತುಷ್ಟನಾಗುವನು. ಸಾಕ್ಷಾತ್

ಶ್ರೀಹರಿಯನ್ನು ಸಂತೋಷಗೊಳಿಸಲು ಈ ಕಾರ್ತಿಕ ವ್ರತದ ಹೊರತು ಇದಕ್ಕೆ ಮಿಗಿಲಾದ ಬೇರೆ ವ್ರತವು ಇಲ್ಲ. ಇದಕ್ಕೆ ಸಮವಾದ ದಾನವಿಲ್ಲ. ಇದಕ್ಕೆ ಸರಿತೂಗುವ ತೀರ್ಥಕ್ಷೇತ್ರವೂ ಇಲ್ಲ. ಧರ್ಮದತ್ತನೇ, ನೀನು ನಿಜವಾಗಿಯೂ ಧನ್ಯ ಧನ್ಯ. ನೀನು ಮಾಡಿದ ಕಾರ್ತಿಕ ವ್ರತದ ಅರ್ಧಪುಣ್ಯವನ್ನು ಬ್ರಹ್ಮರಾಕ್ಷಸಿಗೆ ಕೊಟ್ಟು ಅವಳನ್ನು ವೈಕುಂಠ ಲೋಕಕ್ಕೆ ಹೋಗುವಂತೆ ಕರುಣಿಸಿದೆ.

**ನಾರದ:-** ರಾಜನ್, ಧರ್ಮದತ್ತಮುನಿಗೆ ಈ ರೀತಿಯಾಗಿ ಹಿಂದಿನ ಇತಿಹಾಸವನ್ನೆಲ್ಲ ತಿಳಿಸಿ ಆ ಪುಣ್ಯಶೀಲ ಹಾಗೂ ಸುಶೀಲ ಎಂಬ ವಿಷ್ಣು ಪಾರ್ಷದರು ಆ ಕಲಹಾ ಕಾಮಿನಿಯೊಡನೆ ವಿಮಾನರೂಢರಾಗಿ ವೈಕುಂಠ ಲೋಕಕ್ಕೆ ತೆರಳಿದರು. ಧರ್ಮದತ್ತನು ಬದುಕಿ ಉಳಿಯುವವರೆಗೆ ಶ್ರೀಹರಿಯ ಪ್ರೀತಿಕಾರಕವಾದ ವ್ರತ ನಿಯಮ ಸ್ನಾನ ದಾನಾದಿಗಳನ್ನು ಆಚರಿಸಿದನು. ಕೊನೆಗೆ ಮರಣಕಾಲದಲ್ಲಿ ಭಗವಂತನನ್ನೇ ಧ್ಯಾನಗೈಯುತ್ತ ತನ್ನ ಇಬ್ಬರೂ ಮಡದಿಯರೊಂದಿಗೆ ವಿಮಾನಾರೂಢನಾಗಿ ವೈಕುಂಠ ಲೋಕಕ್ಕೆ ಹೊರಟು ಹೋದನು. ಈ ಪ್ರಾಚೀನವಾದ ಇತಿಹಾಸವನ್ನು ಹೇಳಿದವರು ಕೇಳಿದವರು ಭಗವಂತನ ಕೃಪೆಯಿಂದ ಅವನ ಸಾನ್ನಿಧ್ಯವನ್ನೂ ಸಾಮೀಪ್ಯವನ್ನೂ ಸಾರೂಪ್ಯವನ್ನೂ ಕೂಡ ಪಡೆದು ಧನ್ಯರಾಗುವರು.

## ಧನೇಶ್ವರನ ಉದ್ಧಾರ, ಮಾಸೋಪವಾಸ ವ್ರತದ ಸಂಕ್ಷಿಪ್ತ ವಿಧಿ ವಿಧಾನ — ಅಧ್ಯಾಯ - 65

**ಶ್ರೀಕೃಷ್ಣ:-** ಪ್ರಿಯೇ, ಸತ್ಯಭಾಮೆ! ನಾರದರ ಮುಖದಿಂದ ಈ ಪುಣ್ಯಕಥೆಯನ್ನು ಕೇಳಿ ಪರಮಾಶ್ಚರ್ಯವಾಯಿತು ಪೃಥುರಾಜನಿಗೆ. ಅವನು ನಾರದರನ್ನು ಯಥೋಚಿತವಾಗಿ ಪೂಜಿಸಿ ಸತ್ಕರಿಸಿ ಅತ್ಯಾದರದಿಂದ ಬೀಳ್ಕೊಟ್ಟನು.

ಪೂರ್ವಕಾಲದಲ್ಲಿ ಅವಂತೀಪುರಿಯಲ್ಲಿ ಒಬ್ಬ ಬ್ರಾಹ್ಮಣನು ವಾಸವಾಗಿದ್ದನು. ಧನೇಶ್ವರ ಎಂದು ಅವನ ಹೆಸರು. ವ್ಯಾಪಾರವು ಅವನ ಮುಖ್ಯ ಉದ್ಯೋಗ. ಊರೂರಿಗೆ ತಿರುಗಾಡಿ ಅಗ್ಗವಿದ್ದಲ್ಲಿ ಕಾಳು ಕಡಿ ಹಾಗೂ ಬೇರೆ ವಸ್ತುಗಳನ್ನು ಕೊಂಡು ದೂರದ ನಗರಗಳಿಗೆ ಹೋಗಿ ಅಧಿಕ ಬೆಲೆಗೆ ಮಾರಾಟ ಮಾಡುತ್ತಿದ್ದ. ಹೀಗೆ ಕ್ರಯವಿಕ್ರಯ ವ್ಯವಹಾರವನ್ನು ಮಾಡುತ್ತ ಅವನು ಒಂದು ಸಲ ಮಾಹಿಷ್ಮತೀ ನಗರಕ್ಕೆ ತಲುಪಿದ. ನಗರದ ಪ್ರಾಂಗಣದಲ್ಲಿಯೇ ಹರಿಯುತ್ತಿದೆ ಪುಣ್ಯನದಿಯಾದ ನರ್ಮದೆ. ಆ ಕಾಲದಲ್ಲಿ ಕಾರ್ತಿಕ ಮಾಸ. ಪುಣ್ಯಕಾರಕವಾದ ಆ ಮಾಸದಲ್ಲಿ ನರ್ಮದಾ ಸ್ನಾನ ಹಾಗೂ ಕಾರ್ತೀಕ ವ್ರತಗಳನ್ನು ಮಾಡಬೇಕು ಎಂಬ ಸಂಕಲ್ಪದಿಂದ ಅನೇಕ ಭಾವುಕರು ಅಲ್ಲಿಗೆ ಬಂದಿದ್ದರು. ಹೀಗೆ ದೊಡ್ಡದಾದ ಜನಸಮ್ಮರ್ದವು ಅಲ್ಲಿ ನರೆದಿದ್ದರಿಂದ ವ್ಯಾಪಾರಕ್ಕೆ ಅನುಕೂಲವಾಯಿತು ಧನೇಶ್ವರನಿಗೆ. ಅವನು ಕೂಡ ಒಂದು ತಿಂಗಳವರೆಗೆ ಆ ನರ್ಮದಾ ತಟಾಕದಲ್ಲಿರುವ ಮಾಹಿಷ್ಮತೀ ನಗರದಲ್ಲಿಯೇ ವಾಸಮಾಡಿದನು. ಪ್ರತಿದಿನವೂ ಅವನು ನರ್ಮದಾ ನದಿಯ ದಂಡೆಗುಂಟ ತನ್ನ ವಸ್ತುಗಳನ್ನು ಕೈಯಲ್ಲಿ ಹಿಡಿದುಕೊಂಡು ಮಾರಾಟಕ್ಕಾಗಿ ತಿರುಗುತ್ತಿದ್ದನು. ನದಿಯ ದಂಡೆಗುಂಟ ಕಾರ್ತೀಕ ಸ್ನಾನ ಮಾಡುತ್ತ, ಜಪ ಮಾಡುತ್ತ ಹಾಗೂ ದೇವರ ಪೂಜೆಗೈಯುತ್ತ, ತಮ್ಮ ಉಚ್ಚಕಂಠದಿಂದ ಭಗವಂತನ ನಾಮಸಂಕೀರ್ತನೆ ಧ್ಯಾನ ಭಜನೆಗಳನ್ನು ಮಾಡುತ್ತ ಕುಳಿತಿರುವ ಭಕ್ತ ಭಾವುಕರನ್ನು ಕಣ್ಣಿನಿಂದ ನೋಡುತ್ತಿದ್ದನು. ತನ್ನ ವಸ್ತುಗಳ ಮಾರಾಟಕ್ಕಾಗಿ ಅವನು ನದಿಯ ತೀರದಲ್ಲಿಯೇ ಒಂದು ತಿಂಗಳವರೆಗೆ ವಾಸಮಾಡಿದ್ದನು.

ಒಂದು ದಿನ ಆ ನದೀತಟಾಕದ ಮರದ ಪೊದೆಯಲ್ಲಿ ಇದ್ದ ಒಂದು ಹಾವು ಹೊರಬಿದ್ದು ಬಂದು ಅಲ್ಲಿಯೇ ನದೀ ತಟಾಕದಲ್ಲಿ ನೆಲೆಸಿದ ಧನೇಶ್ವರನನ್ನು ಕಚ್ಚಿಬಿಟ್ಟಿತು. ಆ ಭಯಂಕರ ಕೃಷ್ಣಸರ್ಪದ ಉಲ್ಬಣ ವಿಷವು ಕ್ಷಣಾರ್ಧದಲ್ಲಿ ಮೈಯಲ್ಲಿ ಭೇದಿಸಿ ಮರಣಹೊಂದಿದನು, ಆ ಬ್ರಾಹ್ಮಣ. ಯಮದೂತರು ಬಂದು ಮೃತ್ಯುಪಾಶದಿಂದ ಅವನನ್ನು ಎಳೆದು ಯಮಪುರಿಗೆ ಸೆಳೆದೊಯ್ದರು. ಅವನು ಮಾಡಿದ ಘೋರ ಪಾಪಗಳನ್ನು ನೋಡಿ ಕುಂಭೀಪಾಕ ಎಂಬ ನರಕದಲ್ಲಿ ಅವನನ್ನು ಒಗೆದರು. ಕುದಿಯುತ್ತಿರುವ ಆ ಕುಂಭೀಪಾಕ ನರಕವು ಈ ಧನೇಶ್ವರನು ಬಿದ್ದಕೂಡಲೇ ಆರಿ ತಣ್ಣಗಾಯಿತು. ಹಿಂದೆ ಹಿರಣ್ಯಕಶಿಪು ಭಕ್ತಪ್ರಲ್ಹಾದನನ್ನು ನಿಗಿ ನಿಗಿ ಉರಿಯುವ ಕೆಂಡದ ಹೊಂಡದಲ್ಲಿ ಒಗೆದಾಗಲೂ ಹೀಗೆಯೇ ಉರಿ ಶಾಂತವಾಗಿದ್ದಿತಂತೆ ಆ ಅಗ್ನಿ ಕುಂಡ. ಈಗಲೂ ಅದರಂತೆ ಲಾವಾರಸದ ತೆರೆ ಕುದಿಯುತ್ತಿರುವ ಕುಂಭೀಪಾಕ ನರಕವು ಒಮ್ಮೆಲೇ ತಂಪಿಡಿದು ತಣ್ಣಗಿನ ತೀರ್ಥದಂತಾಯಿತು. ಆಶ್ಚರ್ಯಚಕಿತನಾಗಿ ಅಲ್ಲಿಗೆ ಆಗಮಿಸಿದ ಅಂತಕ. ಇದು ಹೀಗೆ ಏಕೆ ಆಯಿತು? ಎಂದು ಅವನು ಕೇಳಿದ ತನ್ನ ಸೇವಕರಿಗೆ. ಅವರ ಸಂಭಾಷಣೆ ನಡೆದಾಗಲೇ ಅಲ್ಲಿಗೆ ಆಗಮಿಸಿದರು ಮಹರ್ಷಿ ನಾರದರು. ಅವರು ಆ ಯಮ ಹಾಗೂ ಯಮದೂತರ ನಡುವೆ ನಡೆದ ಚರ್ಚೆಯನ್ನು ಕೇಳಿ ನುಡಿದರು.

**ನಾರದ:-** ಸೂರ್ಯಪುತ್ರನಾದ ಯಮಧರ್ಮ! ಈ ಧನೇಶ್ವರ ಎಂಬ ಬ್ರಾಹ್ಮಣನು ನರಕಯಾತನೆಗಳನ್ನು ಅನುಭವಿಸುವಷ್ಟು ಪಾಪಿಯಾಗಿ ಉಳಿದಿಲ್ಲ. ಇವನು ತಾನು ಬದುಕಿದ್ದಾಗ ಅಸಂಖ್ಯ ಪಾಪಗಳನ್ನು ಮಾಡಿದ್ದೇನೋ ನಿಜ. ಮತ್ತು ಒಂದು ತಿಂಗಳವರೆಗೆ ನರ್ಮದಾ ನದೀ ತೀರದಲ್ಲಿದ್ದರೂ ಒಮ್ಮೆಯೂ ನರ್ಮದಾಸ್ನಾನವನ್ನು ಮಾಡಲಿಲ್ಲ. ವ್ರತವನ್ನೂ ಆಚರಿಸಲಿಲ್ಲ. ದೇವರ ಪೂಜೆ ಮಾಡಲಿಲ್ಲ. ಆದರೆ ಪ್ರತಿನಿತ್ಯವೂ ಕಾರ್ತಿಕ ಮಾಸದಲ್ಲಿ ನಸುಕಿನಲ್ಲಿ ಎದ್ದು ನರ್ಮದಾನದಿಯ ದರ್ಶನವನ್ನು ಪಡೆಯುತ್ತಿದ್ದ, ಮತ್ತು ನದೀತೀರದಲ್ಲಿ ಕುಳಿತು ದೇವರ ಪೂಜೆಯನ್ನು ಭಕ್ತಿಯಿಂದ ಮಾಡುವ ಎಲ್ಲ ಭಗವದ್ಭಕ್ತರನ್ನೂ ಅವರು ಮಾಡುವ ದೇವರ ಪೂಜೆಯನ್ನೂ ನೋಡುತ್ತಿದ್ದ. ಅಲ್ಲಿ ನೆರೆದ ಹರಿಭಕ್ತರು ಉಚ್ಚಕಂಠದಿಂದ ಸಾಮೂಹಿಕವಾಗಿ ಮಾಡುವ ನಾಮ ಸಂಕೀರ್ತನ, ಧ್ಯಾನ, ಭಜನ, ಜಯಘೋಷ ಹಾಗೂ ನಾಮಗರ್ಜನೆಗಳನ್ನು ಕಿವಿಯಿಂದ ಕೇಳುತ್ತಿದ್ದ. ಸಮಯಸಂದರ್ಭ ದೊರಕಿದಾಗ ಅವರ ಜೊತೆ ಮಾತಾಡುತ್ತಿದ್ದ. ಕಾರ್ತೀಕಮಾಸದಲ್ಲಿ ಸ್ನಾನ, ದಾನ, ವ್ರತ, ಜಪಾನುಷ್ಠಾನ ಮುಂತಾದವುಗಳನ್ನು ಮಾಡುವ ಭಗವದ್ಭಕ್ತರ ದರ್ಶನ, ಸ್ಪರ್ಶನ, ವಾರ್ತಾಲಾಪ ಗಳಿಂದಲೂ ಕೂಡ ಅವರ ಸಂಪರ್ಕದಲ್ಲಿ ಬರುವವನಿಗೆ ಅವರ ಪುಣ್ಯದ ಆರನೆಯ ಅಂಶವು ಬರುವದು; ಆದ್ದರಿಂದ ಕಾರ್ತಿಕ ಮಾಸದಲ್ಲಿ ಆ ಅಷ್ಟು ಜನ ಭಗವದ್ಭಕ್ತರ ಒಂದು ತಿಂಗಳು ನಿಕಟ ಸಂಪರ್ಕ ಹೊಂದಿದ ಈ ಧನೇಶ್ವರ ವ್ಯಾಪಾರಿಯು ಅವರೆಲ್ಲರ ಪುಣ್ಯಾಂಶಕ್ಕೆ ಭಾಗಿಯಾಗಿದ್ದಾನೆ. ಆದ್ದರಿಂದ ಇವನನ್ನು ಯಕ್ಷಯೋನಿಯಲ್ಲಿ ಇರಿಸಿರಿ. ಅವನು ನದೀ ತೀರದಲ್ಲಿದ್ದು ಸ್ವಯಂ ಸ್ನಾನ ದಾನ ವ್ರತ ದೇವಪೂಜಾದಿಗಳನ್ನು ಮಾಡದಿರುವದರಿಂದ ಅವನಿಗೆ ಪ್ರಾಯಶ್ಚಿತ್ತ ರೂಪವಾಗಿ ಈ ನಿನ್ನ ಲೋಕದಲ್ಲಿರುವ ಎಲ್ಲ ನರಕಗಳನ್ನು ತೋರಿಸಿರಿ. ಈ ನರಕಗಳ ದರ್ಶನ ಮಾತ್ರದಿಂದ ಅವನು ಈಗ ಭೋಗಿಸಬೇಕಾದ ಯಮಯಾತನೆಯಿಂದ ಮುಕ್ತನಾಗಲಿ.''

ಸತ್ಯಭಾಮೆ! ಹೀಗೆ ಹೇಳಿ ನಾರದರು ಆ ಯಮಪಟ್ಟಣದಿಂದ ಹೊರಟು ಹೋದರು. ಅವರ ಸೂಚನೆಯಂತೆ ಯಮರಾಜನು ಆ ಧನೇಶ್ವರನನ್ನು ತನ್ನ ಲೋಕದಲ್ಲಿರುವ ನಾನಾ ವಿಧವಾದ ನರಕಗಳ ಹತ್ತಿರ ಕರೆದುಕೊಂಡು ಹೋದನು. ಅಲ್ಲಿಯ ದಾರುಣನಾದ ದುಃಖಾನುಭವದ ಪರಿಪರಿಯ ಪ್ರಕಾರಗಳನ್ನು ಪ್ರತ್ಯಕ್ಷವಾಗಿ ತೋರಿಸಿದನು ಮತ್ತು ಅವನನ್ನು ಕುರಿತು ನುಡಿದನು- ''ಧನೇಶ್ವರ! ಮಹಾಭೀಕರವಾದ ಈ ನರಕಗಳ ಕಡೆಗೆ ನೋಡು. ಭೂಲೋಕದಲ್ಲಿ ದೇವರನ್ನು ಧಿಕ್ಕರಿಸಿ, ಧರ್ಮವನ್ನು ದ್ವೇಷಿಸಿ, ಸ್ವಚ್ಛಂದವಾಗಿ ಇಂದ್ರಿಯ ಸುಖಗಳ ಬೆನ್ನು ಹತ್ತಿ ಪಾಪಗಳನ್ನು ಮಾಡಿದ ದುಷ್ಟ ಪಾಪಿಷ್ಠರು ಇಲ್ಲಿಯ ಬಗೆಬಗೆಯ ನರಕಗಳಲ್ಲಿ ನೋಯುತ್ತ ನವೆಯುತ್ತ ನರಳುತ್ತಿದ್ದಾರೆ. ನೋಡು, ಇಲ್ಲಿ ಎಂಬತ್ತುನಾಕು (೮೪) ಬಗೆಯಾದ ನರಕಗಳು ಇರುತ್ತವೆ. ನೀನು ಮಾಡಿದ ಪಾಪಗಳಿಂದ ನೀನು ಕೂಡ ಈ ನರಕಗಳಲ್ಲಿ ಘೋರ ಯಾತನೆಗಳನ್ನು ಅನುಭವಿಸಬೇಕಾಗಿತ್ತು. ಆದರೆ ಒಂದು ತಿಂಗಳವರೆಗೆ ಕಾರ್ತೀಕ ವ್ರತ ಮಾಡುವ ಸಾಧು-ಸಜ್ಜನರ ಸಂದರ್ಶನ, ಸಂಭಾಷಣ, ಸಹವಾಸ ಮುಂತಾದ ಸಂಪರ್ಕವು ನಿನಗೆ ಸುದೈವದಿಂದ ಲಭಿಸಿದ್ದರಿಂದ ನಿನ್ನ ಪಾಪಗಳೆಲ್ಲವೂ ನಷ್ಟವಾಗಿ ಹೋಗಿವೆ. ನಿತ್ಯವೂ ನರ್ಮದಾ ನದೀ ತೀರದಲ್ಲಿ ಭಗವದ್ಭಕ್ತರು ಮತ್ತು ಅವರುಗಳು ಮಾಡುವ ದೇವರ ಪೂಜೆ ಧ್ಯಾನಗಳ ದರ್ಶನದಿಂದ, ನಾಮಸ್ಮರಣದ ಶ್ರವಣದಿಂದ ನಿನ್ನ ಪುಣ್ಯರಾಶಿಯು ಪರಿಪುಷ್ಟವಾಗಿದೆ. ಇನ್ನು ಮೇಲೆ ನೀನು ಯಕ್ಷಲೋಕಕ್ಕೆ ಹೋಗಬೇಕು.'' ಎಂದು ಹೇಳಿ ಆ ಯಮನು ಧನೇಶ್ವರನನ್ನು ಯಕ್ಷರ ಲೋಕಕ್ಕೆ ತಲುಪಿಸಿದನು. ಈ ಧನೇಶ್ವರ ವ್ಯಾಪಾರಿಯು ಆ ಯಕ್ಷ ಲೋಕದಲ್ಲಿ ಕುಬೇರನ ಅನುಚರನಾಗಿ ಧನಯಕ್ಷ ಎಂಬ ಹೆಸರಿನಿಂದ ಪ್ರಸಿದ್ಧನಾದನು.

**ಸೂತ:-** ಶ್ರೀಕೃಷ್ಣ ಪರಮಾತ್ಮನು ತನ್ನ ಪ್ರಾಣಪ್ರಿಯ ಪತ್ನಿಯಾದ ಸತ್ಯಭಾಮಾ ದೇವಿಗೆ ಈ ಎಲ್ಲ ಪುಣ್ಯ ಕಥೆಗಳನ್ನು ವಿವರಿಸಿ ಹೇಳಿ ಸಂಧ್ಯೋಪಾಸನೆಯನ್ನು ಮಾಡಲಿಕ್ಕಾಗಿ ತನ್ನ ತಾಯಿಯಾದ ದೇವಕಿಯ ಮನೆಗೆ ಹೋದನು.

**ಬ್ರಹ್ಮದೇವ:-** ಅತ್ಯಂತ ಪುಣ್ಯ ಪ್ರದವಾದ ಕಾರ್ತೀಕ ವ್ರತವನ್ನು ಮಾಡಲು ಮನುಷ್ಯನಲ್ಲಿ ಸಾಮರ್ಥ್ಯವು ಇಲ್ಲದಿದ್ದರೂ ಬೇರೆ ಉಪಾಯದಿಂದಲೂ ಕಾರ್ತೀಕ ವ್ರತದ ಪುಣ್ಯ ಫಲವನ್ನು ಪಡೆಯಬಹುದು. ತನಗೆ ಕಾರ್ತೀಕ ವ್ರತವನ್ನು ಅನುಷ್ಠಾನ ಮಾಡುವ ಸೌಕರ್ಯ, ಆರೋಗ್ಯ, ಅನುಕೂಲತೆ ಇಲ್ಲದಿದ್ದರೆ ತನ್ನ ಶಿಷ್ಯ ಅಥವಾ ಭೃತ್ಯ, ಮಡದಿ ಮಕ್ಕಳು ಅಥವಾ ಯಾರಾದರೂ ವಿಶ್ವಾಸಪಾತ್ರ ಮನುಷ್ಯರಿಂದ ಈ ವ್ರತವನ್ನು ಖರ್ಚುಕೊಟ್ಟು ಮಾಡಿಸಿ, ಇಲ್ಲವೇ ಸ್ವಯಂ ಪ್ರೇರಣೆಯಿಂದ ಈ ಕಾರ್ತೀಕ ವ್ರತವನ್ನು ಮಾಡುವವರಿಗೆ ಎಲ್ಲ ಬಗೆಯ ಸೌವಿಧ್ಯಗಳನ್ನು ಕಲ್ಪಿಸಿಕೊಟ್ಟು ಅನುಕೂಲತೆಗಳನ್ನು ಒದಗಿಸಿದರೆ ಈ ವ್ರತದ ಪುಣ್ಯವು ಪ್ರಾಪ್ತವಾಗುವದು.

**ನಾರದ:-** ಪಿತಾಮಹ, ಈ ಕಾರ್ತಿಕ ವ್ರತವನ್ನು ಮಾಡಲು ಹೆಚ್ಚಿನ ಪರಿಶ್ರಮ ಬೇಕಾಗಿಲ್ಲ. ಅತ್ಯಧಿಕವಾದ ವೆಚ್ಚವೂ ಬರುವದಿಲ್ಲ. ಸ್ವಲ್ಪ ಪ್ರಯತ್ನ ಮಾಡಿದರೂ ಸಾಕು. ಸುಲಭವಾಗಿ ಈ ಕಾರ್ತಿಕ ಸ್ನಾನ, ದಾನ, ಪೂಜಾ, ವ್ರತ ಮೊದಲಾದವುಗಳನ್ನು (ಮನಸ್ಸು ಮಾಡಿದರೆ) ಯಾರಾದರೂ ಮಾಡಬಹುದು. ಇಷ್ಟು ಸುಲಭೋಪಾಯದಿಂದ ಅಷ್ಟು ದುರ್ಲಭ ಪುಣ್ಯವು ದೊರಕುತ್ತಿದ್ದರೆ ಎಲ್ಲ ಮಾನವರೂ ಈ ಕಾರ್ತಿಕ ವ್ರತವನ್ನು ಏಕೆ ಮಾಡುವುದಿಲ್ಲ?

**ಬ್ರಹ್ಮದೇವ:-** ಕಾಮಕ್ರೋಧ ಮತ್ತು ಲೋಭ ಹಾಗೂ ದುರ್ವಿಚಾರಗಳಿಗೆ ವಶನಾಗಿ ಮಾನವನು ಈ ಕಾರ್ತಿಕ ವ್ರತ ಮೊದಲಾದ ಧರ್ಮಕೃತ್ಯಗಳನ್ನು ಮಾಡುವದಿಲ್ಲ. ಈ ದೋಷ ಇರದೇ ಇದ್ದವರು ಅರ್ಥಾತ್ ಧರ್ಮದಲ್ಲಿ ಶ್ರದ್ಧಾಳುಗಳು ಇಂಥ ಪೂಜಾ ಕಾರ್ಯಗಳನ್ನು ಮಾಡುತ್ತಾರೆ.

ಈ ಜಗತ್ತಿನಲ್ಲಿ ದೇವಶ್ರದ್ಧೆ, ಹಾಗೂ ಧರ್ಮಬುದ್ಧಿ ಎಂಬ ಎರಡು ವಸ್ತುಗಳು ಇರುತ್ತವೆ. ಮಾನವನ ಮನ ಎಂಬ ಮನೆಯಲ್ಲಿ ತುಂಬಿದ ಕಾಮಕ್ರೋಧಾದಿ ಕೊಳೆ ಕಳೆಗಳನ್ನು ಈ ಮೇಧಾಶ್ರದ್ಧೆಗಳು ನಾಶಮಾಡುತ್ತವೆ. ಮತ್ತು ಭಗವಂತನ ಸತ್ಕಥಾ ಶ್ರವಣ ಹಾಗೂ ಕೀರ್ತನೆಗಳಲ್ಲಿ ಆಸಕ್ತಿಯನ್ನು ಕುದುರಿಸುತ್ತವೆ. ಮನದಲ್ಲಿ ದೇವ ಧರ್ಮದ್ವೇಷಿಯಾದ ದುರ್ಬುದ್ಧಿಯುಳ್ಳ ಮಾನವನು ಈ ಯಾವ ಕಾರ್ಯಗಳನ್ನೂ ಮಾಡುವದಿಲ್ಲ. ಆದರಿಂದ ಅಂಧಕಾರ ಪೂರ್ಣವಾದ ಘೋರ ನರಕಗಳಲ್ಲಿ ಬಿದ್ದು ಬವಣೆ ಪಡುತ್ತಾನೆ ಆ ಭಗದ್ವೇಷಿ ಮನುಷ್ಯ. ಪಾಠ ಉಪದೇಶಗಳನ್ನು ಹೇಳುವದರಿಂದ ಯಜ್ಞ ಮಾಡಿಸುವದರಿಂದ ಒಂದೇ ಪಂಕ್ತಿಯಲ್ಲಿ ಕುಳಿತು ಊಟ ಮಾಡುವುದರಿಂದ ಮಾನವನಿಗೆ ಇನ್ನೊಬ್ಬರು ಮಾಡಿದ ಪುಣ್ಯ ಪಾಪಗಳ ನಾಕನೇಯ ಒಂದು ಭಾಗವು ಪ್ರಾಪ್ತವಾಗುತ್ತದೆ. ಒಂದೇ ಆಸನದಲ್ಲಿ ಕೂಡುವುದು, ಒಂದೇ ವಾಹನದಲ್ಲಿ ಪ್ರಯಾಣ, ಶ್ವಾಸೋಚ್ಛಾಸದಿಂದ ಶರೀರ ಸ್ಪರ್ಶ ಆದರೆ ಆ ಮನುಷ್ಯನ ಆರನೇಯ ಒಂದು ಅಂಶದಷ್ಟು ಪುಣ್ಯ ಪಾಪಗಳು ಸಂಪರ್ಕಭಾಗಿಗೆ ಬರುತ್ತವೆ. ಅತ್ಯಂತ ಸಮೀಪದ ಸ್ಪರ್ಶ ಭಾಷಣಗಳಿಂದಲೂ ಮತ್ತು ಅವರ ಪ್ರಶಂಸೆಗಳಿಂದಲೂ ಆ ಪ್ರಶಂಸಿತ ಮನುಷ್ಯನ ಪುಣ್ಯ ಪಾಪಗಳಲ್ಲಿ ಹತ್ತನೇಯ ಅಂಶವು ಪ್ರಶಂಸಕನಿಗೆ ಬರುತ್ತದೆ. ದರ್ಶನ, ಶ್ರವಣ ಹಾಗೂ ಮನನಗಳಿಂದ ಇನ್ನೊಬ್ಬರ ಪುಣ್ಯ ಹಾಗೂ ನೂರನೇಯ ಅಂಶ ಪಾಪಗಳು ತಗಲುತ್ತವೆ. ವ್ರತ ಉಪವಾಸ ನಿಯಮ ಜಪತಪಾದಿಗಳನ್ನು ಮಾಡುವವನ ಸೇವೆಯನ್ನು ಮಾಡುವುದರಿಂದ ಆ ಸೇವೆಗೆ ಅನುಗುಣವಾಗಿ ಸಂಬಳವನ್ನು ತೆಗೆದುಕೊಳ್ಳದಿದ್ದರೆ ಅವನು ತನ್ನ ಸೇವೆಗೆ ತಕ್ಕಷ್ಟು ಪುಣ್ಯಫಲಕ್ಕೆ ಭಾಗೀದಾರನು ಆಗುತ್ತಾನೆ.

ಒಂದೇ ಪಂಕ್ತಿಯಲ್ಲಿ ಕುಳಿತ ಮಾನವರಿಗೆ ಬಡಿಸುವಾಗ ನಡುವೆ ಒಬ್ಬರನ್ನು ಬಿಟ್ಟು ಮುಂದೆ ಬಡಿಸುತ್ತ ಹೋದರೆ ಆ ಬಡಿಸುವ ಮನುಷ್ಯನ ಪುಣ್ಯದ ಆರನೇಯ ಅಂಶವು ಬಡಿಸದೇ ಇದ್ದ ಮಾನವನಿಗೆ ಪ್ರಾಪ್ತವಾಗುವುದು. ಸ್ನಾನ, ಸಂಧ್ಯೆ, ದೇವರ ಪೂಜೆ, ಮಾಡುವಾಗ ಎರಡನೇಯವರ ಸ್ಪರ್ಶ ಸಂಭಾಷಣಾದಿಗಳನ್ನು ಮಾಡಿದರೆ ಅವನು ತನ್ನ ಕರ್ಮದಿಂದ ಬಂದ ಪುಣ್ಯದ ಆರನೇಯ ಅಂಶವನ್ನು ಅವರಿಗೆ ಕೊಟ್ಟು ಬಿಡುತ್ತಾನೆ. ಯಾರು ಧರ್ಮ ಕಾರ್ಯದ ಉದ್ದೇಶಕ್ಕಾಗಿ ಎರಡನೇಯವರಿಂದ ದ್ರವ್ಯವನ್ನು ಯಾಚನೆ ಮಾಡುತ್ತಾರೋ, ಅವರು ಆ ಯಜಮಾನನ ಪುಣ್ಯ ಕರ್ಮ ಜನಿತವಾದ ಫಲಕ್ಕೆ ಭಾಗೀದಾರರು ಆಗಿರುತ್ತಾರೆ. ಯಾರು ಹೆರವರ ಹಣವನ್ನು ಕಳವು ಮಾಡಿ ಪುಣ್ಯ ಕರ್ಮವನ್ನು ಮಾಡುತ್ತಾರೋ ಅವರಿಗೆ ಅಂಥ ಕರ್ಮದಿಂದ ತಿಲಮಾತ್ರವೂ ಪುಣ್ಯ ಬರುವದಿಲ್ಲ. ಮತ್ತು ಯಾರ ಹಣವನ್ನು ಕದ್ದಿರುವರೋ ಆ ಹಣದ ಮಾಲಕನಿಗೆ ಕದ್ದ ಹಣದಿಂದ ಪುಣ್ಯ ಫಲವು ಪ್ರಾಪ್ತವಾಗಿರುತ್ತದೆ. ಸಾಲ ಮಾಡಿ ಆ ಋಣವನ್ನು ಮುಟ್ಟಿಸದೇ ಹಾಗೇ ಸತ್ತು ಹೋದರೆ ಸಾಲ ಕೊಟ್ಟವನು ಸಾಲಗಾರನ ಪುಣ್ಯದಿಂದ ತನಗೆ ನ್ಯಾಯವಾಗಿ ಬರಬೇಕಾದಷ್ಟು ಪುಣ್ಯವನ್ನು ಪಡೆದುಕೊಳ್ಳುತ್ತಾನೆ.

ಸತ್ಕಾರ್ಯಕ್ಕಾಗಿ ಸೂಕ್ತ ಸಲಹೆ ಅನುಮೋದನ ಮತ್ತು ಸಾಧನ ಸಾಮಗ್ರಿ ಸಲಕರಣೆಗಳನ್ನು ಕೊಟ್ಟು ಅನುಕೂಲ ಮಾಡಿಕೊಡುವವರು ಆ ಪುಣ್ಯದಲ್ಲಿ ಆರನೇ ಅಂಶವನ್ನೂ, ಪಾಪ ಕಾರ್ಯಗಳಿಗೆ ಸಲಹೆ ನೀಡಿದ್ದರ ಅದರಲ್ಲಿಯೂ ಆರನೇ ಅಂಶವನ್ನು ಪಡೆಯುತ್ತಾರೆ. ಪ್ರಜೆಗಳು ಮಾಡಿದ ಪಾಪ ಪುಣ್ಯಗಳಲ್ಲಿ ರಾಜರಿಗೆ ಆರನೇಯ ಅಂಶವು ಸಲ್ಲುತ್ತದೆ. ಇದರಂತೆ ಶಿಷ್ಯನಿಂದ ಮಾಡಲ್ಪಟ್ಟ ಪಾಪ ಪುಣ್ಯಗಳಿಂದ ಗುರು, ಹೆಂಡತಿಯಿಂದ ಗಂಡ, ಮಕ್ಕಳಿಂದ ತಂದೆ, ಪಾಪ ಪುಣ್ಯಗಳ ಆರನೇ ಭಾಗಕ್ಕೆ ಅಧಿಕಾರಿಗಳಾಗುತ್ತಾರೆ. ಸ್ತ್ರೀಯು ಪತಿಯ ಮನಸ್ಸಿಗೆ ಅನುಕೂಲವಾಗಿ ನಡೆದು ಅವನನ್ನು ಸದಾ ಸಂತುಷ್ಟನನ್ನಾಗಿ ಇರಿಸಿದರೆ ಅವನು ಮಾಡಿದ ಪುಣ್ಯದಲ್ಲಿ ಅರ್ಧಭಾಗವನ್ನು ಪಡೆಯುತ್ತಾಳೆ. ಎರಡನೇಯವರ ಕೈಯಿಂದ ದಾನ ಧರ್ಮ, ಅಥವಾ ಪುಣ್ಯ ಕರ್ಮಗಳನ್ನು ಮಾಡಿಸಿದರೆ ಮಾಡಿಸಿದವನ ಪುಣ್ಯದ ಆರನೇ ಭಾಗವು ಮಾಡಿದವನಿಗೆ ಕರ್ತನಿಗೆ ಹೋಗುತ್ತದೆ. ಆದರೆ ಮಗನಿಂದ ಮಾಡಿಸಿದರೆ ಮಾತ್ರ ಮಾಡಿಸಿದ ತಂದೆಯೇ ಪುರ್ಣ ಫಲಕ್ಕೆ ಭಾಗೀದಾರನಾಗುತ್ತಾನೆ. ಹೊಲ, ಮನೆ ಅಥವಾ ಬೇರೆ ಉಪಜೀವನಕ್ಕೆ ವ್ಯವಸ್ಥೆ ಮಾಡಿಕೊಟ್ಟ ಮನುಷ್ಯನು ತೆಗೆದುಕೊಂಡವನ ಪುಣ್ಯದ ಆರನೇಯ ಅಂಶವನ್ನು ಕುಳಿತಲ್ಲಿಯೇ ಪಡೆಯುತ್ತಾನೆ. ಹೀಗೆ ಬೇರೆಯವರು ಮಾಡಿದ ಅಥವಾ ಮಾಡಿಸಿದ ಪುಣ್ಯ ಪಾಪಗಳು ಕೆಲವೊಂದು ಸಂದರ್ಭಗಳಲ್ಲಿ ಇನ್ನೊಬ್ಬರಿಗೆ ದೊರಕುತ್ತವೆ.

## ಒಳ್ಳೆ ಹೆಂಡತಿಯಿಂದ ಕೆಟ್ಟ ಗಂಡನಿಗೂ ಸದ್ಗತಿ

ಪೂರ್ವಕಾಲದಲ್ಲಿ ಓರ್ವ ಡಂಭಾಚಾರಿಯಾದ ತಪಸ್ವಿ ಇದ್ದನು. ಅವನಿಗೆ ಪೂಜೆ, ಸದಾಚಾರಗಳಲ್ಲಿ ನಿಜವಾದ ವಿಶ್ವಾಸವೇ ಇರಲಿಲ್ಲ. ಆದರೂ ಅವನು ಜನರ ಎದುರು ತಾನೊಬ್ಬ ಸದಾಚಾರಿ ತಪಸ್ವಿ ಎಂದು ತೋರಿಸಲು ಜಪ, ತಪ, ವ್ರತ, ಉಪವಾಸ ಪೂಜೆ ಮುಂತಾದವುಗಳನ್ನು ಮಾಡುತ್ತಿದ್ದ. ಆದರೆ ಅವನ ಹೆಂಡತಿಯು ನಿಜವಾಗಿಯೂ ಶ್ರದ್ಧಾಳು. ಧರ್ಮಪ್ರಾಣಳು. ಪರಮ ಪತಿವ್ರತೆ ಗಂಡನ ಡಂಭಾಚಾರವನ್ನೆಲ್ಲ ನಿಜವೆಂದೇ ನಂಬಿ ಅದಕ್ಕೆ ಎಲ್ಲ ಅನುಕೂಲತೆಯನ್ನು ಮಾಡಿಕೊಡುತ್ತಿದ್ದಳು.

ಆ ಪತಿವ್ರತೆಯು ಮಾಡಿದ ಪುಣ್ಯ ಪ್ರಭಾವದಿಂದ ಅವಳ ಪತಿ ಆ ಢಂಬಾಚಾರಿಯು ಕೂಡ ಉದ್ಧಾರ ಹೊಂದಿದನು. ತಾಯಿ ತಂದೆಗಳ ಸೇವೆಯನ್ನು ಮಾಡಿದರೂ, ಮತ್ತೊಬ್ಬರು ಮಾಡಿದ್ದನ್ನು ನೋಡಿದರೂ ಅಥವಾ ಮಾಡುವವರಿಗೆ ಅನುಕೂಲತೆ ಒದಗಿಸಿದರೂ ಹೇರಳವಾದ ಪುಣ್ಯ ಲಾಭ. ಇದರಂತೆ ಕಾರ್ತೀಕ ವ್ರತದ ಮುಖ್ಯ ಅಂಗಗಳಾದ ಪ್ರಾತಃಸ್ನಾನ, ವ್ರತ, ವಿಷ್ಣುಪೂಜೆ, ತುಲಸೀ ಅರ್ಚನೆ, ಧಾತ್ರೀ ಪೂಜೆ, ಸತ್ಕಥಾ ಶ್ರವಣ, ಅನ್ನ ದಾನ ಮುಂತಾದವುಗಳನ್ನು ಮಾಡಿದವರಿಗೂ ಪುಣ್ಯ, ನೋಡಿದವರಿಗೂ ಫಲ. ಒಂದಿಲ್ಲ ಒಂದು ರೀತಿಯಿಂದ ಇದಕ್ಕೆ ಸಹಾಯ ಸಲ್ಲಿಸಿದವರಿಗೂ ಕೂಡ ಪುಣ್ಯ ಫಲ ಪ್ರಾಪ್ತಿ.

## ಮಾಸ ಉಪವಾಸದ ವ್ರತ.

**ನಾರದ:-** ಪೂಜ್ಯರೇ! ನಾನು ಮಾಸ ಉಪವಾಸದ ವಿಧಿಯನ್ನು ಕೇಳಬೇಕೆಂದು ಬಯಸಿದ್ದೇನೆ. ಅದರ ವಿಧಾನ ಯಾವುದು? ಅದರ ಫಲ ಪ್ರಯೋಜನವೇನು? ಇದೆಲ್ಲವನ್ನೂ ನನಗೆ ನಿರೂಪಿಸಿರಿ.

**ಬ್ರಹ್ಮದೇವ:-** ನಾರದ, ದೇವತೆಗಳಲ್ಲಿ ವಿಷ್ಣು ಶ್ರೇಷ್ಠ. ಅದರಂತೆ ವ್ರತಗಳಲ್ಲಿ ಈ ಮಾಸ, ವ್ರತಗಳಲ್ಲಿ ಉಪವಾಸ ವ್ರತವು ಸರ್ವಶ್ರೇಷ್ಠ. ತನ್ನ ಶರೀರದ ಬಲಾಬಲಗಳನ್ನು ತಿಳಿದುಕೊಂಡು ಈ ಮಾಸ ಉಪವಾಸದ ವ್ರತವನ್ನು ಮಾಡಬೇಕು. ಆಶ್ವೀನ ಶುಕ್ಲ ಪಕ್ಷ ಏಕಾದಶಿಯಿಂದ ಆರಂಭಿಸಿ ಮೂವತ್ತು ದಿನಗಳವರೆಗೆ ಈ ಮಾಸೋಪವಾಸ ವ್ರತವನ್ನು ಆಚರಿಸಬೇಕು. ಆಶ್ವೀನ ಶುಕ್ಲ ಏಕಾದಶಿ ದಿನದಂದು ಉಪವಾಸ ಮಾಡಿ ಈ ವ್ರತವನ್ನು ಹಿಡಿಯಬೇಕು. ಅಂದಿನಿಂದ ಮುಂದೆ ಮೂವತ್ತು ದಿನಗಳ ವರೆಗೆ ವಿಷ್ಣು ಮಂದಿರಕ್ಕೆ ಮೂರು ಹೊತ್ತೂ ಹೋಗಿ ದೇವರಿಗೆ ಅಭಿಷೇಕ. ಅಲಂಕಾರ, ನೈವೇದ್ಯ, ತುಲಸೀ ಅರ್ಚನೆ, ಧೂಪ, ದೀಪ, ಪುಷ್ಪಾರ್ಚನೆ, ಸ್ತೋತ್ರ ಭಜನ, ಧ್ಯಾನ ಮುಂತಾಗಿ ಹಲವಾರು ಬಗೆಗಳಿಂದ ಭಗವಂತನಿಗೆ ಪೂಜೆಯನ್ನು ಮೂವತ್ತು ದಿನ ಒಂದು ದಿನವೂ ತಪ್ಪದಂತೆ ಮಾಡಬೇಕು.

ಯಾವದೇ ಜಾತಿಯ ಗಂಡಸರು, ಮುತ್ತೈದೆಯರು, ವಿಧವಾ ಸ್ತ್ರೀಯರು ಈ ವ್ರತವನ್ನು ಕೈಕೊಂಡು ಭಗವಾನ್ ಶ್ರೀ ವಾಸುದೇವನ ಆರಾಧನೆಯನ್ನು ಮಾಡಬಹುದು. ಈ ವ್ರತವನ್ನು ಹಿಡಿದ ಬಳಿಕ ಮತ್ತೊಬ್ಬರ ಮನೆಯ ಅನ್ನ ತಿನ್ನಬಾರದು. ತಾನೇ ಬೇರೆಯವರಿಗೆ ತನ್ನ ಶಕ್ತ್ಯಾನುಸಾರ ಅನ್ನದಾನ ಮಾಡಬೇಕು. ವ್ರತವನ್ನು ಗ್ರಹಣ ಮಾಡಿದ ಮಾನವನು ಮೈಗೆಲ್ಲ ಎಣ್ಣೆ ಹಚ್ಚುವದು ಎಲೆ ಅಡಿಕೆ ಜಗಿಯುವದು, ಚಂದನ ಮೊದಲಾದ ಸುಗಂಧಿ ಲೇಪನಗಳಿಂದ ಸಿಂಗರಿಸಿಕೊಳ್ಳುವುದು, ಹಾಗೂ ನಿಷಿದ್ಧ ಪದಾರ್ಥಗಳನ್ನು ಭಕ್ಷಿಸುವುದು ಮುಂತಾದವುಗಳನ್ನು ಪರಿತ್ಯಾಗ ಮಾಡಬೇಕು. ಈ ವ್ರತವನ್ನು ಹಿಡಿದವರು ಪತಿತರ, ಪಾಪಿಗಳ ಹಾಗೂ ನಾಸ್ತಿಕರ ಸ್ಪರ್ಶ ಹಾಗೂ ಸಂಭಾಷಣೆಗಳನ್ನು ವರ್ಜಿಸಬೇಕು. ಈ ವ್ರತವನ್ನು ಹಿಡಿದವರು ಈ ವ್ರತಾಚರಣವನ್ನು ಊರಲ್ಲಿಯ ಯಾವುದಾದರೂ ಒಂದು ದೇವಮಂದಿರದಲ್ಲಿ ಅಥವಾ ತನ್ನ ಮನೆಯ ದೇವರ ಕೋಣೆಯಲ್ಲಿ ಕುಳಿತು ಮಾಡಬೇಕು. ಮೂವತ್ತು ದಿನ ದೇವರ ಸನ್ನಿಧಿಯಲ್ಲಿ ಸ್ನಾನ, ಪೂಜೆ, ಧ್ಯಾನ, ಭಜನೆ, ಸತ್ಕಥಾ ಪ್ರವಚನ ಶ್ರವಣ, ಪುರಸ್ಕಾರ ಮುಂತಾದ ಧರ್ಮ ಕಾರ್ಯಗಳಲ್ಲಿಯೇ ಹಗಲಿರುಳೂ ಆಸಕ್ತನಾಗಿರಬೇಕು. ಬೇರೆ ಎಲ್ಲಿಯೂ ಹೊರಗೆ ಹೋಗಬಾರದು.

ಹೀಗೆ ಒಂದು ತಿಂಗಳವರೆಗೆ ವಿಧಿಪೂರ್ವಕವಾಗಿ ಈ ಮಾಸ ಉಪವಾಸ ವ್ರತವನ್ನು ಮಾಡಿ ಕಾರ್ತಿಕ ಶುದ್ಧ ಏಕಾದಶಿಯಂದು ಈ ವ್ರತದ ಸಮಾಪ್ತಿಯನ್ನು ಮಾಡಬೇಕು. ಪ್ರತಿನಿತ್ಯವೂ ದೇವರಿಗೆ ನಿವೇದಿತವಾದ ಕಂದಮೂಲ ಹಣ್ಣುಹಂಪಲಗಳನ್ನು ಮಿತವಾಗಿ ಒಂದು ಹೊತ್ತು ಮಾತ್ರ ಭಕ್ಷಣ ಮಾಡಬೇಕು. ಕೊನೆಯ ದಿನ ಹದಿಮೂರು ಜನ ಬ್ರಾಹ್ಮಣರನ್ನು ಋತ್ವಿಜರನ್ನಾಗಿ ವರಣ ಮಾಡಿ ಅವರಿಂದ ವೈಷ್ಣವ ಯಜ್ಞವನ್ನು ಮಾಡಿಸಬೇಕು. ಅನಂತರ ಬ್ರಾಹ್ಮಣ ಭೋಜನವನ್ನು ಮಾಡಿಸಿ ಅವರಿಗೆಲ್ಲ ತಾಂಬೂಲ, ಜೋಡುವಸ್ತ್ರ, ಪರ್ಯಾಪ್ತ ದಕ್ಷಿಣೆಗಳನ್ನು ನೀಡಿ ಪೂಜೆಮಾಡಿ ಯಥೇಚ್ಛ ಮೃಷ್ಟಾನ್ನ ಭೋಜನ ಮಾಡಿಸಿ ಸಂತೋಷಪಡಿಸಿ ಅವರ ಆಶೀರ್ವಾದವನ್ನು ಪಡೆಯಬೇಕು.

—o—

## ತುಳಸಿಯ ವಿವಾಹ

## ಅಧ್ಯಾಯ -೬೬

**ಬ್ರಹ್ಮದೇವ:-** ಕಾರ್ತೀಕ ಶುಕ್ಲ ನವಮಿ ತಿಥಿಯಿಂದ ದ್ವಾಪರ ಯುಗದ ಪ್ರಾರಂಭ ಆಯಿತು. ಆ ನವಮೀ ತಿಥಿಯಿಂದ ಕಾರ್ತೀಕ ಶುದ್ಧ ದ್ವಾದಶಿಯವರೆಗೆ ಶಾಸ್ತ್ರೋಕ್ತ ವಿಧಿಯಿಂದ ತುಳಸೀ ವಿವಾಹವನ್ನು ಒಂದು ದೊಡ್ಡ ಉತ್ಸವದಂತೆ ಉತ್ಸಾಹಪೂರ್ವಕವಾಗಿ ಆಚರಿಸಬೇಕು. ಇದರಿಂದ ಕನ್ಯಾದಾನವನ್ನು ಮಾಡಿ ಕೊಟ್ಟಷ್ಟು ಪುಣ್ಯವು ಬರುವದು. ಪೂರ್ವಕಾಲದಲ್ಲಿ 'ಕನಕ' ಎಂಬ ಗ್ರಹಸ್ಥನ ಮಗಳಾದ ಕಿಶೋರಿಯು ಏಕಾದಶಿಯ ದಿನ ಉಪವಾಸ ಮಾಡಿ ದ್ವಾದಶೀ ದಿನದಂದು ಸಂಧ್ಯಾಕಾಲದಲ್ಲಿ ತುಳಸೀ ಮದುವೆಯನ್ನು ಸದಾಚಾರ ನಿಷ್ಠರಾದ ಜ್ಞಾನಿಗಳಿಂದ ಮಾಡಿಸಿದಳು. ಆದರಿಂದ ಅವಳಿಗೆ ಒದಗಿ ಬಂದಿರುವ ವೈಧವ್ಯ ಯೋಗವು ತಪ್ಪಿಹೋಯಿತು. ಈಗ ನಾನು ಆ ತುಲಸೀ ವಿವಾಹದ ವಿಧಿಯನ್ನುಹೇಳುತ್ತೇನೆ ಕೇಳು.

ಒಂದು ತೊಲೆ ಬಂಗಾರದಿಂದ ಭಗವಾನ್ ಶ್ರೀವಿಷ್ಣುವಿನ ಒಂದು ಸುಂದರವಾದ ಪ್ರತಿಮೆಯನ್ನು ಮಾಡಿಸಬೇಕು. ಅಷ್ಟು ಯೋಗ್ಯತೆ ಇಲ್ಲದಿದ್ದರೆ ಅರ್ಧ ಅಥವಾ ಕಾಲು ತೊಲೆ ಬಂಗಾರದ ಪ್ರತಿಮೆಯನ್ನು ಮಾಡಿಸಬೇಕು. ಆ ಪ್ರತಿಮೆಯನ್ನು ದೇವರ ಕೋಣೆಯಲ್ಲಿ ಇಟ್ಟು ಅದರಲ್ಲಿ ಆಗಮ ಶಾಸ್ತ್ರೋಕ್ತ ವಿಧಿಯಿಂದ ಆವಾಹನ ಪ್ರತಿಷ್ಠೆ ಮುಂತಾದವುಗಳನ್ನು ಮಾಡಬೇಕು. ಅನಂತರ ದಿವ್ಯ ಸ್ತೋತ್ರಗಳಿಂದ ಭಗವಂತನ ಪ್ರಬೋಧನವನ್ನು ಮಾಡಬೇಕು. ಅನಂತರ ಪುರುಷಸೂಕ್ತದಿಂದ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಮೊದಲು ಸಂಕಲ್ಪ ಮಾಡಿ ಗಣಪತಿ ಪೂಜೆ ಮಾಡಬೇಕು. ಬಳಿಕ ಮಂಗಲ ವಾದ್ಯ ಹಾಗೂ ವೇದ ಮಂತ್ರ ಜಯಘೋಷಗಳೊಂದಿಗೆ ಆ ವಿಷ್ಣುವಿನ ಪ್ರತಿಮೆಯನ್ನು ತುಲಸೀ ಗಿಡದ ಹತ್ತಿರ ತಂದು ಇಡಬೇಕು. ಆ ಪ್ರತಿಮೆಯನ್ನು ವಸ್ತ್ರಗಳಿಂದ ಮುಚ್ಚಬೇಕು. ಆ ಕಾಲದಲ್ಲಿ ಈ ಕೆಳಗಿನ ಮಂತ್ರದಿಂದ ಭಗವಂತನ ಆವಾಹನವನ್ನು ಮಾಡಬೇಕು.

**ಆಗಚ್ಛ ಭಗವನ್ ದೇವ ಅರ್ಚಯಿಷ್ಯಾಮಿ ಕೇಶವ**
**ತುಭ್ಯಂ ದಾಸ್ಯಾಮಿ ತುಲಸೀಂ ಸರ್ವಕಾಮಪ್ರದೋ ಭವ.**

ಪೂಜ್ಯನಾದ ಕೇಶವ ಪ್ರಭುವೇ! ಇಲ್ಲಿಗೆ ದಯಮಾಡಿಸು, ನಾನು ನಿನ್ನೆ ಪೂಜೆಯನ್ನು ಮಾಡುವೆನು. ನಿನ್ನ ಸೇವೆಗಾಗಿ ತುಳಸಿಯನ್ನು ಸಮರ್ಪಿಸುವೆನು. ನೀನು ನನ್ನ ಎಲ್ಲ ಮನೋರಥವನ್ನು ಪೂರ್ಣಮಾಡು. ಹೀಗೆ ದೇವರನ್ನು ಆವಾಹನ ಮಾಡಿ ಪ್ರತಿಷ್ಠೆಗೊಳಿಸಿ ಶ್ರೀಕೇಶವಾಯ ನಮಃ ಅರ್ಘ್ಯಂ ಸಮರ್ಪಯಾಮಿ. ಸಮರ್ಪಯಾಮಿ, ಸಮರ್ಪಯಾಮಿ ಶ್ರೀ ಕೇಶವಾಯನಮಃ ಪಾದ್ಯಂ ಸಮರ್ಪಯಾಮಿ, ಸಮರ್ಪಯಾಮಿ, ಸಮರ್ಪಯಾಮಿ, ಶ್ರೀಕೇಶವಾಯನಮಃ ಆಚಮನೀಯಂ ಸಮರ್ಪಯಾಮಿ, ಸಮರ್ಪಯಾಮಿ ಸಮರ್ಪಯಾಮಿ ಎಂದು ಮೂರು ಮೂರು ಬಾರಿ ಉಚ್ಚರಿಸಿ ಅರ್ಘ್ಯಪಾದ್ಯಾದಿಗಳನ್ನು ಸಮರ್ಪಿಸಬೇಕು. ಅನಂತರ ಕಂಚಿನ ಪಾತ್ರೆಯಲ್ಲಿ ಮೊಸರು ತುಪ್ಪ, ಹಾಲು ಜೇನುತುಪ್ಪಗಳನ್ನಿಟ್ಟು ಅದರ ಮೇಲೆ ಮತ್ತೊಂದು ಕಂಚಿನ ಪಾತ್ರೆಯಿಂದಲೇ ಮುಚ್ಚಿ

ಅರ್ಪಣೆ ಮಾಡಿ ಪರಮಾತ್ಮನಿಗೆ ಈ ರೀತಿಯಿಂದ ಪ್ರಾರ್ಥನೆ ಮಾಡಿಕೊಳ್ಳಬೇಕು:- "ವಾಸುದೇವನೇ, ನಿನಗೆ ನಮಸ್ಕಾರ. ನೀನು ಈ ಮಧುಪರ್ಕವನ್ನು ಸ್ವೀಕರಿಸು." ಅನಂತರ ಆ ವಿಷ್ಣುಮೂರ್ತಿ ಹಾಗೂ ತುಳಸೀ ಬಳ್ಳಿಗಳಿಗೆ ಅರಿಷಿಣ ಕುಂಕುಮ ಏರಿಸಿ ವಿಷ್ಣು ಪ್ರತಿಮೆಗೆ ಅಭ್ಯಂಗ ಸ್ನಾನವನ್ನು ಮಾಡಿಸಬೇಕು. ನಂತರ ವಿವಿಧ ಆಭರಣ, ಅಲಂಕಾರಗಳಿಂದ ಆ ಪ್ರತಿಮೆ ಹಾಗೂ ತುಳಸೀ ವೃಕ್ಷಗಳನ್ನು ಶೃಂಗರಿಸಿ ಬೇರೆ ಬೇರೆ ಇರಿಸಿ ಪೂಜೆ ಮಾಡಿ ಸಾಯಂಕಾಲದ ಗೋಧೂಳಿ ಮುಹೂರ್ತದಲ್ಲಿ ವಿವಾಹಕಾರ್ಯವನ್ನು ನೆರವೇರಿಸಬೇಕು. ವಿಷ್ಣುವಿನ ಮೂರ್ತಿಯನ್ನು ತುಳಸಿಯ ಸಮ್ಮುಖದಲ್ಲಿ ಇಟ್ಟು ಮಂಗಳಾಷ್ಟಕವನ್ನು ಹೇಳಬೇಕು. ಸೂರ್ಯನು ಅಸ್ತವಾಗುವದರೊಳಗಾಗಿ ಕನ್ಯಾದಾನ ಸಂಕಲ್ಪವನ್ನು ಮಾಡಬೇಕು. ಅನಂತರ ಭಗವಂತನಿಗೆ ಸಮರ್ಪಿಸಬೇಕು.

**ಅನಾದಿಮಧ್ಯನಿಧನ ತ್ರೈಲೋಕ್ಯ ಪ್ರತಿಪಾಲಕ ।**
**ಇಮಾಂ ಗ್ರಹಾಣ ತುಲಸೀಂ ವಿವಾಹವಿಧಿನೇಶ್ವರ ॥**

**ಪಾರ್ವತೀಬೀಜ ಸಂಭೂತಾಂ ವೃಂದಾಂ ಭಸ್ಮನಿ ಸಂಸ್ಥಿತಾಮ್ ।**
**ಅನಾದಿ ಮಧ್ಯ ನಿಧನಾಂ ವಲ್ಲಭಾಂ ತೇ ದದಾಮ್ಯಹಮ್ ॥**

**ಪಯೋಘಟೈಶ್ಚ ಸೇವಾಭಿಃ ಕನ್ಯಾವದ್ವರ್ಧಿತಾ ಮಯಾ ।**
**ತ್ವತ್ ಪ್ರಿಯಾಂ ತುಲಸೀಂ ತುಭ್ಯಂ ದದಾಮಿ ತ್ವಂ ಗೃಹಾಣ ಭೋಃ ॥**

ತುದಿ ಮೊದಲು ಮಧ್ಯಗಳು ಇಲ್ಲದಿರುವ ಶ್ರೀಹರಿಯೇ! ನೀನು ಮೂರು ಲೋಕಗಳನ್ನು ಸಂರಕ್ಷಣೆ ಮಾಡುವೆ. ಪರ್ವತದ ಬೀಜದಿಂದ ಹುಟ್ಟಿ ವೃಂದಾವನದ ಮಣ್ಣಿನಿಂದ ಬೆಳೆದ ಈ ತುಳಸೀ ಕಟ್ಟೆಯಲ್ಲಿ ಇರುವ, ನಿನ್ನಂತೆ ಆದಿ ಮಧ್ಯ ಅಂತ ರಹಿತಳಾದ ಈ ತುಳಸಿಯನ್ನು ನಿನಗೆ ಮದುವೆ ಮಾಡಿ ಕೊಡುತ್ತೇನೆ. ನೀನು ದಯವಿಟ್ಟು ಸ್ವೀಕರಿಸು. ಇವಳು ನಿನಗೆ ಪರಮ ಪ್ರೀತ್ಯಾಸ್ಪದಳು. ಕೊಡಗಳಿಂದ ನೀರನ್ನು ಸೇದಿ ಕಸಿ ಮಾಡಿ ಕಟ್ಟೆ ಕಟ್ಟಿ ಈ ತುಳಸಿಯನ್ನು ನಾನು ನನ್ನ ಮಗಳಂತೆ ರಕ್ಷಿಸಿದ್ದೇನೆ. ನಿನ್ನ ಪ್ರೀತಿಯ ನನ್ನ ಮೆಚ್ಚಿನ ಈ ತುಳಸಿಯನ್ನು ಕನ್ಯೆಯಂತೆ ನಾನು ಮದುವೆಮಾಡಿ ನಿನಗೆ ಕೊಡುತ್ತೇನೆ. ದಯವಿಟ್ಟು ಸ್ವೀಕರಿಸು."

ಈ ಮಂತ್ರದಿಂದ ತುಳಸಿಯನ್ನು ಶ್ರೀವಿಷ್ಣುವಿಗೆ ದಾನ ಮಾಡಿ ಕೊಟ್ಟು ಅನಂತರ ಆ ದಂಪತಿಗಳನ್ನು ಪೂಜಿಸಬೇಕು. ತುಳಸಿ ಹಾಗೂ ಶ್ರೀಕೃಷ್ಣರ ಮದುವೆಯನ್ನು ತಮ್ಮ ಹೆಣ್ಣು ಮಕ್ಕಳ ಮದುವೆಯಂತೆ ವೈಭವದಿಂದ ಉತ್ಸಾಹದಿಂದ ಮಾಡಬೇಕು. ಮರುದಿನವೂ ಬೆಳಗಾದ ಬಳಿಕ ಮತ್ತೆ ತುಳಸೀ ವಿಷ್ಣುಗಳ ಪೂಜೆಯನ್ನು ಮಾಡಬೇಕು. ಅಗ್ನಿ ಸ್ಥಾಪನೆಯನ್ನು ಮಾಡಿ ದ್ವಾದಶಾಕ್ಷರ ಮಂತ್ರದಿಂದ ಪಾಯಸ, ತುಪ್ಪ, ಜೇನುತುಪ್ಪ ಎಳ್ಳುಗಳಿಂದ ಕೂಡಿದ ಹೋಮದ್ರವ್ಯವನ್ನು ಸಿದ್ಧಪಡಿಸಿಕೊಂಡು ತುಳಸೀ ದಾಮೋದರರಿಗೆ ೧೦೮ ಆಹುತಿಗಳನ್ನು ನೀಡಬೇಕು. ಅನಂತರ ಸ್ವಿಷ್ಟಕೃತ ಹೋಮವನ್ನು ಮಾಡಿ, ಪೂರ್ಣಾಹುತಿಯನ್ನು ಕೊಟ್ಟು ಹೋಮ ಮಾಡಿಸಿದ ಆಚಾರ್ಯರನ್ನು ದಾನ ದಕ್ಷಿಣಾದಿಗಳಿಂದ ಸತ್ಕರಿಸಿ ಹೋಮದ ವಿಧಿಯನ್ನು ಮುಗಿಸಬೇಕು. ಅನಂತರ

ಸದಾಚಾರಿಗಳಾದ ಜ್ಞಾನಿಗಳನ್ನು ಕರೆದು ಊಟಮಾಡಿಸಿ ತಾನೂ ಕೂಡ ಭೋಜನ ಮಾಡಬೇಕು. ಭೋಜನದ ಅನಂತರ ತಾನಾಗಿಯೇ ಉದುರಿಬಿದ್ದ ತುಳಸಿಯ ಎಲೆಗಳನ್ನು ಭಕ್ಷಣ ಮಾಡಬೇಕು. ಭೋಜನದ ಅನಂತರ ತುಳಸಿ, ನೆಲ್ಲಿಗಳ, ಭಕ್ಷಣದಿಂದ ಭೋಜನದಲ್ಲಿ ಉಚ್ಛಿಷ್ಟ ದೋಷವು ಒದಗಿದ್ದರೂ ಪರಿಹಾರವಾಗುವದು.

ಅನಂತರ ''ಭಗವನ್! ನೀನು ಈ ತುಳಸೀದೇವಿಯೊಂದಿಗೆ ವೈಕುಂಠ ಲೋಕಕ್ಕೆ ಪ್ರಯಾಣಮಾಡು. ನಾನು ಮಾಡಿದ ಈ ಪೂಜೆಯಿಂದ ನೀನು ಸಂತುಷ್ಟನಾಗಿ ನನ್ನ ಮೇಲೆ ಅನುಗ್ರಹ ಮಾಡು'' ಎಂದು ಪ್ರಾರ್ಥಿಸಿ ವಿಷ್ಣುವನ್ನು ವಿಸರ್ಜನೆ ಮಾಡಬೇಕು. ಅನಂತರ ಆ ಬಂಗಾರದ ಮೂರ್ತಿ ಹಾಗೂ ದೇವರಿಗೆ ಅರ್ಪಿಸಿದ ಎಲ್ಲ ವಸ್ತುಗಳನ್ನು ಆಚಾರ್ಯರಿಗೆ ದಾನ ಕೊಟ್ಟು ಬಿಡಬೇಕು.

## ಬೀಷ್ಮ ಪಂಚಕ ವ್ರತ, ಅದರ ವಿಧಾನ

## ಅಧ್ಯಾಯ - ೬೭

ಕಾರ್ತೀಕ ಶುಕ್ಲಪಕ್ಷ ಏಕಾದಶಿ ದಿನದಂದು ಪ್ರಾತಃಕಾಲದಲ್ಲಿ ವಿಧಿ ಪೂರ್ವಕವಾಗಿ ಸ್ನಾನಮಾಡಿ ಐದು ದಿನಗಳ ಭೀಷ್ಮ ಪಂಚಕ ವ್ರತದ ಗ್ರಹಣವನ್ನು ಮಾಡಬೇಕು. ದ್ವಾಪರ ಯುಗದ ಅಂತಿಮ ಭಾಗದಲ್ಲಿ ಕುರುಕ್ಷೇತ್ರದಲ್ಲಿ ಅರ್ಜುನನ ಬಾಣದಿಂದ ಹತರಾಗಿ ಭೀಷ್ಮರು ಶರಪಂಜರದ ಮೇಲೆ ಮಲಗಿಕೊಂಡರು. ಆ ಬಾಣಗಳ ಚುಚ್ಚುವ ಮೊಳೆಗಳ ಹಾಸಿಗೆಯ ಮೇಲೆಯೇ ಮಲಗಿಕೊಂಡು ಮಹಾತ್ಮರಾದ ಭೀಷ್ಮರು ಪಂಚಪಾಂಡವರಿಗೆ ಶ್ರೀಕೃಷ್ಣನ ಸಮ್ಮುಖದಲ್ಲಿಯೇ ತತ್ವೋಪದೇಶ ಮಾಡಿದರು. ರಾಜ ಧರ್ಮವನ್ನು ಬಣ್ಣಿಸಿದರು. ದಾನ ಧರ್ಮವನ್ನು ನಿರೂಪಿಸಿದರು. ಮೋಕ್ಷ ಧರ್ಮವನ್ನು ಬಿತ್ತರಿಸಿದರು. ಅದರಿಂದ ತೃಪ್ತರಾದರು ಪಾಂಡವರು. ತುಷ್ಟನಾದ ಶ್ರೀಕೃಷ್ಣ. ಸುಪ್ರಸನ್ನನಾದ ಶ್ರೀಕೃಷ್ಣನು ಆಗ ಭೀಷ್ಮರಿಗೆ ಹೇಳಿದ:-

''ಭೀಷ್ಮ! ನೀನು ಧನ್ಯ ಧನ್ಯ. ಇಷ್ಟು ಹೊತ್ತಿನವರೆಗೆ ನೀನು ಪಾಂಡವರಿಗೆಲ್ಲ ಧರ್ಮದ ಸ್ವರೂಪವನ್ನು ಚೆನ್ನಾಗಿ ನಿರೂಪಣ ಮಾಡಿದೆ. ನೀನು ಹತ್ತು ದಿನದ ಯುದ್ಧದಿಂದ ಪರಿಶ್ರಾಂತನಾಗಿ ಬಾಯಾರಿಕೆಯಿಂದ ಬಳಲಿ ಕುಡಿಯಲು ನೀರನ್ನು ಕೇಳಿದೆ. ಆಗ ಅರ್ಜುನನು ತನ್ನ ಭಯಂಕರವಾದ ಬಾಣ ಪ್ರಹಾರದಿಂದ ಪಾತಾಳ ಗಂಗೆಯ ಜಲವು ಮೇಲೆ ಪುಟಿದು ಬರುವಂತೆ ಮಾಡಿ ನಿನಗೆ ಗಂಗಾ ಜಲಪಾನವನ್ನು ಮಾಡಿಸಿದ. ಅದರಿಂದ ನಿನ್ನ ದೇಹ ಮನಸ್ಸು ಪ್ರಾಣ ಎಲ್ಲವೂ ಪರಮ ಸಂತೃಪ್ತವಾದವು.

ಆದುದರಿಂದ ಇಂದಿನಿಂದ ಐದು ದಿನಗಳವರೆಗೆ ಎಲ್ಲ ಜಾತಿ ವರ್ಣದ ಜನರು ನಿನಗೆ ಅರ್ಘ್ಯವನ್ನು ನೀಡಿ ಸಂತೋಷಪಡಿಸಲಿ. ಮತ್ತು ನನಗೆ ಪರಮ ಸಂತೋಷಪ್ರದವಾದ ಈ ಭೀಷ್ಮ ಪಂಚಕ ವ್ರತವನ್ನು ಪಾಲನ ಮಾಡಬೇಕು. ಜನಿವಾರವನ್ನು ಬಲಬದಿಗೆ ಹಾಕಿಕೊಂಡು ಭೀಷ್ಮರಿಗೆ ಈ ಕೆಳಗೆ ಹೇಳಿದ ಮಂತ್ರವನ್ನು ಉಚ್ಚರಿಸಿ ಭೀಷ್ಮ ತರ್ಪಣವನ್ನು ಕೊಡಬೇಕು.

**ಸತ್ಯವ್ರತಾಯ ಶುಚಯೇ ಗಾಂಗೇಯಾಯ ಮಹಾತ್ಮನೇ ।**
**ಭೀಷ್ಮಾಯೈತದ್ ದದಾಮ್ಯರ್ಘ್ಯಮಾಜನ್ಮ ಬ್ರಹ್ಮಚಾರಿಣೇ ॥**

**ವೈಯಾಘ್ರ ಪದಗೋತ್ರಾಯ ಸಾಂಕೃತ್ಯ ಪ್ರವರಾಯ ಚ ।**
**ಅಪುತ್ರಾಯ ದದಾಮ್ಯೇತದುದಕಂ ಭೀಷ್ಮಶರ್ಮಣೇ ॥**

**ವಸೂನಾಮವತಾರಾಯ ಶಂತನೋರಾತ್ಮಜಾಯ ಚ ।**
**ಅರ್ಘ್ಯಂ ದದಾಮಿ ಭೀಷ್ಮಾಯ ಆಜನ್ಮಬ್ರಹ್ಮಚಾರಿಣೇ ॥**

ಆ ಜನ್ಮ ಬ್ರಹ್ಮಚಾರಿಯಾಗಿ ನೈಷ್ಠಿಕ ಬ್ರಹ್ಮಚರ್ಯವನ್ನು ಪಾಲನ ಮಾಡುವ, ಸತ್ಯಸಂಧನಾದ, ಗಂಗಾದೇವಿಯ ಪುತ್ರನಾದ, ಪರಮ ಪವಿತ್ರನಾದ, ಮಹಾತ್ಮನಾದ ಭೀಷ್ಮನಿಗೆ ನಾನು ಈ ಅರ್ಘ್ಯವನ್ನು ಕೊಡುತ್ತೇನೆ. ವ್ಯಾಘ್ರಪದಗೋತ್ರದಲ್ಲಿ ಜನಿಸಿದ ಸಂಕೃತಿ ಪ್ರವರದ ಸಂತಾನವಿಲ್ಲದ ಭೀಷ್ಮರಿಗೆ ನಾನು ಈ ಜಲಾಂಜಲಿಯನ್ನು ನೀಡುತ್ತೇನೆ. ವಸುವಿನ ಅವತಾರ ಭೂತನಾದ. ಶಂತನು ರಾಜನ ಮಗನಾದ, ಆಜನ್ಮ ಬ್ರಹ್ಮಚಾರಿಯಾದ ಭೀಷ್ಮನಿಗೆ ಈ ಅರ್ಘ್ಯವನ್ನು ನೀಡುತ್ತೇನೆ.''

ಈ ಮಂತ್ರಗಳನ್ನು ಹೇಳಿ ಭೀಷ್ಮಪಂಚಕ ವ್ರತವನ್ನು ಮಾಡುವವರು ಭೀಷ್ಮಾಚಾರ್ಯರಿಗೆ ಮೂರು ಅರ್ಘ್ಯಗಳನ್ನು ನೀಡಬೇಕು. ವ್ರತ ಮಾಡದಿದ್ದವರೂ ಕೂಡ ಭೀಷ್ಮರು ನಿರ್ಯಾಣ ಹೊಂದಿದ ಮಾಘ ಶುದ್ಧ ಅಷ್ಟಮಿಯಂದು ಈ ಮಂತ್ರವನ್ನು ಹೇಳಿ ಅರ್ಘ್ಯವನ್ನು ಕೊಡಬೇಕು. ಈ ಭೀಷ್ಮಪಂಚಕ ವ್ರತವನ್ನು ವಿಧಿ ಪೂರ್ವಕವಾಗಿ ಆಚರಣ ಮಾಡಿದರೆ ಅಪುತ್ರರಿಗೆ ಒಂದು ವರ್ಷದಲ್ಲಿ ಪುತ್ರ ಪ್ರಾಪ್ತಿಯಾಗುತ್ತದೆ. ಈ ವ್ರತವು ಅತ್ಯಂತ ಪುಣ್ಯಪ್ರದವಾದ ವ್ರತವಾಗಿದ್ದು ಎಲ್ಲ ಪಾಪಗಳನ್ನು ನಾಶಮಾಡುತ್ತದೆ. ಭೀಷ್ಮ ಪಂಚಕ ವ್ರತವನ್ನು ಮಾಡುವವರು ಮೊದಲು ಪಂಚಗವ್ಯವನ್ನು ಪ್ರಾಶನಮಾಡಬೇಕು. ಸುಗಂಧಿತವಾದ ಚಂದನದಿಂದ ದೇವರಿಗೆ ಅಭಿಷೇಕ ಮಾಡಿ ಭಗವಂತನ ಮೂರ್ತಿಗೆ ಗಂಧ, ಪುಷ್ಪ, ಅಕ್ಷತೆ, ಕುಂಕುಮ ಮುಂತಾದವುಗಳನ್ನು ಏರಿಸಬೇಕು ಧೂಪ, ದೀಪ, ನೈವೇದ್ಯಗಳಿಂದ ಪೂಜೆಯನ್ನು ಮಾಡಬೇಕು. ಐದು ದಿನಗಳಲ್ಲಿ ಹಗಲೂ ರಾತ್ರಿ ದೇವರ ಮುಂದೆ ದೀಪವು ಆರದಂತೆ ರಕ್ಷಿಸಿ ಇಡಬೇಕು. ವಿವಿಧ ಭಕ್ಷ್ಯ ಭೋಜ್ಯಗಳನ್ನು ಮಾಡಿ ಪರಮಾತ್ಮನಿಗೆ ನೈವೇದ್ಯ ಮಾಡಬೇಕು.

ಹೀಗೆ ವಿಧಿ ಪೂರ್ವಕವಾಗಿ ಧ್ಯಾನ, ಆವಾಹನ, ಅರ್ಚನ, ಪ್ರದಕ್ಷಿಣ, ನಮಸ್ಕಾರಾದಿ ಪೂಜೆಗಳನ್ನೆಲ್ಲ ಮಾಡಿ 'ಓಂ ನಮೋ ಭಗವತೇ ವಾಸುದೇವಾಯ' ಎಂಬ ಮಂತ್ರವನ್ನು ಒಂದು ನೂರಾಎಂಟು ಬಾರಿ ಜಪಿಸಬೇಕು. ಅನಂತರ ತುಪ್ಪದಲ್ಲಿ ಮಿಶ್ರಮಾಡಿ ಎಳ್ಳು ಅಕ್ಕಿ, ಅರಳು ಗಳಿಂದ ಓಂ ಶ್ರೀರಾಮಾಯ ನಮಃ ಸ್ವಾಹಾ ಓಂ ಶ್ರೀ ರಾಮಾಯ ನಮಃ ಇದಂ ನಮಮ. ಎಂಬ ಮಂತ್ರದಿಂದ ಆಹುತಿಗಳನ್ನು ನೀಡಬೇಕು. ಅನಂತರ ಸಾಯಂಕಾಲದಲ್ಲಿ ಸಂಧ್ಯಾವಂದನೆ ದೇವರ ಪೂಜೆ ಹಾಗೂ ಭಗವಂತನಿಗೆ ಪ್ರದಕ್ಷಿಣೆ ನಮಸ್ಕಾರ ಧ್ಯಾನ, ಭಜನ, ನಾಮಸಂಕೀರ್ತನಗಳನ್ನು ಮಾಡಿ ಮತ್ತೆ ಮೊದಲಿನಂತೆ ವಾಸುದೇವ ದ್ವಾದಶಾಕ್ಷರ ಮಂತ್ರಗಳನ್ನು ಜಪಮಾಡಿ ನೆಲದ ಮೇಲೆಯೇ ಮಲಗಿಕೊಳ್ಳಬೇಕು. ಭಕ್ತಿಪೂರ್ವಕವಾಗಿ ಭಗವಂತನಲ್ಲಿಯೇ ಮನಸ್ಸನ್ನು ಇಟ್ಟಿರಬೇಕು. ವ್ರತಗ್ರಹಣವನ್ನು ಮಾಡಿದಾಗ ಬ್ರಹ್ಮಚರ್ಯ ಪಾಲನವನ್ನು ಮಾಡುತ್ತ ದುರ್ವಿಚಾರಗಳನ್ನು ಮನಸ್ಸಿನಿಂದ ತೆಗೆದು ಹಾಕಬೇಕು. ಮುನಿಗಳಿಗೆ ಉಚಿತವಾದ ದೇವರಿಗೆ ನೈವೇದ್ಯ ವೈಶ್ವದೇವ ಮಾಡಿ ಉಳಿದ ಹವಿಷ್ಯಾನ್ನವನ್ನು ಮಾತ್ರ ಭಕ್ಷಣ ಮಾಡಬೇಕು. ಐದು ದಿನಗಳಲ್ಲಿ ಒಂದು ನಿಮಿಷವೂ ವ್ಯರ್ಥ ವೇಳೆ ಕಳೆಯದೇ ಬಗೆಬಗೆಯಿಂದ ಶ್ರೀಹರಿಯ ಪೂಜೆಯನ್ನೇ ಮಾಡುತ್ತ ಇರಬೇಕು.

ರಾತ್ರಿಯಲ್ಲಿ ಪಂಚಗವ್ಯವನ್ನು ತೆಗೆದುಕೊಂಡು ಎಲ್ಲರ ಊಟವಾದ ಬಳಿಕ ತಾನು ಊಟ ಮಾಡಬೇಕು. ಹೀಗೆ ಐದು ದಿನ ನಿಯಮದಿಂದ ಈ ವ್ರತವನ್ನು ಪರಿಪಾಲನ ಮಾಡಬೇಕು. ಸ್ತ್ರೀಯರು ತಮ್ಮ ಪತಿಯ ಆಜ್ಞೆಯನ್ನು ತೆಗೆದುಕೊಂಡು ಈ ವ್ರತವನ್ನು ಮಾಡಬೇಕು.

ಏಕಾದಶಿಯಿಂದ ಹುಣ್ಣಿಮೆಯವರೆಗೆ ಐದು ದಿನ ಉಪವಾಸವಿದ್ದು ಈ ವ್ರತವನ್ನು ಪಾಲನ ಮಾಡಿ ಕೊನೆಯ ದಿನ ಇದರ ಸಮಾಪ್ತಿಯನ್ನು ಬ್ರಾಹ್ಮಣ ಭೋಜನ ಪೂರ್ವಕವಾಗಿ ಮಾಡಿ ಕೊನೆಗೆ ಎಲ್ಲರ ಊಟವಾದ ಬಳಿಕ ತಾನು ಮೇಲೆ ಹೇಳಿದಂತೆ ಹವಿಷ್ಯಾನ್ನವನ್ನು ಉಣ್ಣಬೇಕು. ಪೂರ್ವಕಾಲದಲ್ಲಿ ಅಯೋಧ್ಯಾ ಪಟ್ಟಣದಲ್ಲಿ ವಶಿಷ್ಠ ಋಷಿಗಳ ಆದೇಶದಂತೆ ಅತಿಥಿ ಎಂಬ ರಾಜನು ಭೀಷ್ಮ ಪಂಚಕ ವ್ರತವನ್ನು ಮಾಡಿ ಮೋಕ್ಷವನ್ನು ಹೊಂದಿದನು.

ಪೂರ್ಣ ಉಪವಾಸವನ್ನು ಮಾಡಲು ಅಶಕ್ತರಾದವರು ಪಂಚಗವ್ಯ, ಹಾಲು ಹಣ್ಣು, ಗಡ್ಡೆ, ಗೆಣಸು ಮುಂತಾದವುಗಳನ್ನು ಹೋಮ ಶೇಷವಾದವುಗಳನ್ನು ಅತ್ಯಲ್ಪ ಪ್ರಮಾಣ ದಲ್ಲಿ ಜೀವಧಾರಣೆಗಾಗಿ ಸ್ವೀಕರಿಸಿ ಈ ಭೀಷ್ಮ ಪಂಚಕ ವ್ರತವನ್ನು ಪಾಲನೆ ಮಾಡಬೇಕು. ಹುಣ್ಣಿಮೆಯ ದಿನ ಭೂರಿ ಭೋಜನ ಮಾಡಿಸಿ ಕರು ಸಹಿತವಾಗಿ ಗೋದಾನವನ್ನು ಮಾಡಬೇಕು. ಏಕಾದಶಿಯಿಂದ ಆರಂಭ ಮಾಡಿಕೊಂಡು ಪೂರ್ಣಿಮೆಯವರೆಗೆ ಈ ಭೀಷ್ಮ ಪಂಚಕ ವ್ರತವನ್ನು ಮಾಡುವವರು, ಅನ್ನವನ್ನು ಸರ್ವಥಾ ಉಣ್ಣಬಾರದು. ಪೂರ್ಣ ಉಪವಾಸವನ್ನು ಮಾಡಿ ಐದನೇಯ ದಿನವೇ ಬ್ರಾಹ್ಮಣ ಹಾಗೂ ಬಂಧು-ಮಿತ್ರರ ಭೋಜನವಾದ ನಂತರ ವಿಹಿತ ಅನ್ನವನ್ನು ಮಾತ್ರ ಸೇವಿಸಬೇಕು. ಈ ವ್ರತದ ಪಾಲನ ಮಾಡುವದರಿಂದ ಭಗವಾನ್ ಶ್ರೀಹರಿಯು ಪರಮ ಸಂತುಷ್ಟನಾಗಿ ಕಾಮಿತ ಫಲವನ್ನು ಕೊಡುವನು.

## ಶ್ರೀಹರಿಯ ಪ್ರಬೋಧೋತ್ಸವ. ಕಾರ್ತಿಕ ವ್ರತದ ಉದ್ಯಾಪನೆ ಕೊನೆಯ ಮೂರು ಅಂತ್ಯ ಪುಷ್ಕರಣಿ ದಿನಗಳ ಮಹಿಮೆ

**ಅಧ್ಯಾಯ - ೬೮**

**ಬ್ರಹ್ಮ:**-ಕಾರ್ತೀಕ ಮಾಸದಲ್ಲಿ ಪ್ರತಿ ದಿನವೂ ವಿಷ್ಣುವಿನ ಪೂಜೆಯನ್ನು ಮಾಡಬೇಕು. ಪುರುಷಸೂಕ್ತ ಮಂತ್ರದಿಂದ ಅಥವಾ ಪಾಂಚರಾತ್ರ ಆಗಮದಲ್ಲಿ ಹೇಳಿದ ವಿಧಿಯನ್ನು ಅನುಸರಿಸಿ ನೆರವೇರಿಸಬೇಕು ಈ ವಿಷ್ಣುಪೂಜೆಯನ್ನು. ''ಓಂ ನಮೋ ನಾರಾಯಣಾಯ'' ಈ ಅಷ್ಟಾಕ್ಷರ ಮಂತ್ರದಿಂದ ಶ್ರೀಹರಿಯ ಜಪ, ತಪ, ಅನುಷ್ಠಾನ, ಪೂಜೆ, ಪುರಶ್ಚರಣ ಮಾಡಿದವರಿಗೆ ಶ್ರೀಹರಿಯು ತುಷ್ಟನಾಗುವನು. ಇಷ್ಟಾರ್ಥಗಳನ್ನು ನೀಡುವನು. ಕಾರ್ತಿಕ ಮಾಸದಲ್ಲಿ ವಿಷ್ಣು ಸಹಸ್ರನಾಮ ಮತ್ತು ಗಜೇಂದ್ರ ಮೋಕ್ಷ, ಭಗವದ್ಗೀತೆ ಮತ್ತು ಬೇರೆ ಬೇರೆ ವೇದ ಶಾಸ್ತ್ರೋಕ್ತ ಭಗವಂತನ ಸ್ತುತಿ ಸ್ತೋತ್ರಗಳನ್ನು ಪಠನ ಪಾಠನ ಪ್ರವಚನ ಪಾರಾಯಣಗಳನ್ನು ಮಾಡಿದವರು ಹಾಗೂ ಶ್ರೀಹರಿಯ ಗುಣಗಾನ ಗೈದವರು ತಮ್ಮ ಪಿತೃಗಳೊಂದಿಗೆ ಶ್ವೇತ ದ್ವೀಪದಲ್ಲಿ ವಾಸಮಾಡುವರು. ಆಷಾಢ ಶುಕ್ಲ ಪಕ್ಷ ಏಕಾದಶೀ ದಿನದಂದು ಶ್ರೀಹರಿಯು ಶಂಖಾಸುರರನ್ನು ಸಂಹರಿಸಿದನು. ಅಂದಿನಿಂದ ಆರಂಭಿಸಿ ಆ ಲಕ್ಷ್ಮೀಪತಿಯು ನಾಕು ತಿಂಗಳವರೆಗೆ ಕ್ಷೀರಸಮುದ್ರದಲ್ಲಿ ಶಯನ ಮಾಡುತ್ತಾನೆ.

ಕಾರ್ತೀಕ ಶುಕ್ಲ ಏಕಾದಶಿಯಂದು ಯೋಗನಿದ್ರೆಯಿಂದ ಏಳುತ್ತಾನೆ. ಆದುದರಿಂದ ವಿಷ್ಣು ಭಕ್ತರು ಏಕಾದಶೀ ದಿನದಂದು ಈ ಕೆಳಗಿನ ಮಂತ್ರವನ್ನು ಹೇಳಿ ಶ್ರೀಹರಿಯನ್ನು ಎಚ್ಚರಿಸುವ ಪ್ರಬೋಧೋತ್ಸವವನ್ನು ಮಾಡಬೇಕು.

**''ಉತ್ತಿಷ್ಠೋತ್ತಿಷ್ಟ ಗೋವಿಂದ ಉತ್ತಿಷ್ಠ ಗರುಡಧ್ವಜ।**
**ಉತ್ತಿಷ್ಠ ಕಮಲಾಕಾಂತ ತ್ರೈಲೋಕ್ಯಂ ಮಂಗಲಂ ಕುರು ॥**

ಗೋವಿಂದನೇ ಏಳು ಏಳು. ಗರುಡಧ್ವಜನೇ ಎಚ್ಚರಾಗು. ಕಮಲೆಯ ಪತಿಯಾದ ಶ್ರೀಹರಿಯೇ! ನೀನು ನಿದ್ರೆಯನ್ನು ಮುಗಿಸಿ ಎದ್ದು ನಿಲ್ಲು. ಮೂರು ಲೋಕಗಳಿಗೂ ಮಂಗಳವನ್ನುಂಟುಮಾಡು'' ಹೀಗೆ ಹೇಳಿ ಪ್ರಾತಃಕಾಲದಲ್ಲಿ ಶಂಖವನ್ನು ಊದಬೇಕು. ಜಾಗಟೆಯನ್ನು ಬಾರಿಸಬೇಕು. ನಗಾರಿಯನ್ನು ಹೊಡೆಯಬೇಕು. ಕೊಳಲನ್ನು ಊದಬೇಕು. ವೀಣೆಯನ್ನು ಮಿಡಿಸಬೇಕು. ತಬಲವನ್ನು ನುಡಿಸಬೇಕು. ಸಾರಂಗಿಯನ್ನು ನುಡಿಸಬೇಕು. ಈ ಮಧುರಧ್ವನಿಗಳ ಮೇಳದೊಂದಿಗೆ ದೇವರ ಮಹಿಮೆಯನ್ನು ಗಾನರೂಪದಿಂದ ಹಾಡಿ ಪಾಡಬೇಕು. ನಾಮ ಸಂಕೀರ್ತನೆಗೈಯುತ್ತ ಕುಣಿದು ಕೊಂಡಾಡಬೇಕು. ಈ ಎಲ್ಲ ಉತ್ಸವಗಳಿಂದ ದೇವರನ್ನು ಎಬ್ಬಿಸಿ ಅವನ ಪೂಜೆಯನ್ನು ಮಾಡಬೇಕು. ಸಾಯಂಕಾಲದಲ್ಲಿ ವಿಧಿಪೂರ್ವಕವಾಗಿ ಶ್ರೀವಿಷ್ಣುವಿನ ಜೊತೆಗೆ ತುಳಸೀ ವಿವಾಹವನ್ನು ಮಾಡಬೇಕು ಮರುದಿನ ದ್ವಾದಶೀ ದಿನದಂದು. ಕಾರ್ತೀಕ ಏಕಾದಶಿಯೂ ದ್ವಾದಶಿಯೂ ಪರಮ ಪವಿತ್ರ ಹರಿದಿನ ಎಂದು ಕರೆಯಲ್ಪಡುವವು.

ಈ ದ್ವಾದಶೀ ದಿನದಂದು ವೃದ್ಧರಾದ ತಾಯಿ ತಂದೆಗಳ ಪೂಜೆ ಮಾಡಿ ಮಡದಿಯೊಂದಿಗೆ ಶ್ರೀಹರಿಯ ಪ್ರಸಾದವನ್ನು ಭಕ್ಷಣ ಮಾಡಬೇಕು. ಹೀಗೆ ಕಾರ್ತೀಕ ಮಾಸದಲ್ಲಿ ದಶಮೀ ಏಕಾದಶೀ, ದ್ವಾದಶೀ ಈ ಮೂರು ದಿನ ಶ್ರೀಹರಿಯ ವಿಶೇಷ ಪೂಜೆಯನ್ನು ಮಾಡಿ ಏಕಾದಶೀ ಉಪೋಷಣ 'ಶ್ರೀವಿಷ್ಣುವಿನ ಪ್ರಬೋಧೋತ್ಸವ ಜಾಗರಣೋತ್ಸವ, ದ್ವಾದಶೀ ಪ್ರಾತಃಕಾಲ ಶ್ರೀ ತುಳಸೀ ದಾಮೋದರ ಪೂಜೆ ಮತ್ತು ಅಂದೇ ಪಾರಣೆ, ಸಂಜೆ ಪ್ರದೋಷ ಕಾಲದಲ್ಲಿ ತುಳಸೀ ವಿವಾಹ, ಪ್ರಸಾದ ಭಕ್ಷಣ ಮುಂತಾದ ಈ ದಿನತ್ರಯದ ಕಾರ್ಯಕ್ರಮಗಳನ್ನು ಆಚರಿಸಿದವರು ನೇರವಾಗಿ ವೈಕುಂಠ ಲೋಕಕ್ಕೆ ಪ್ರಯಾಣ ಮಾಡುವರು.

ಈಗ ಕಾರ್ತೀಕ ವ್ರತದ ಉದ್ಯಾಪನೆಯ ವಿಧಾನವನ್ನು ಹೇಳುತ್ತೇನೆ. ಕಾರ್ತೀಕ ವ್ರತವನ್ನು ಪಾಲನಮಾಡುವ ಮನುಷ್ಯನು ಕಾರ್ತೀಕ ಶುದ್ಧ ಚತುರ್ದಶೀ ದಿನದಂದು ಈ ವ್ರತದ ಸಮಾಪ್ತಿಯ ಉದ್ಯಾಪನೆಯನ್ನು ಮಾಡಬೇಕು. ಇದರಿಂದ ಶ್ರೀಕೃಷ್ಣನ ಪ್ರೀತಿಯು ಉಂಟಾಗುತ್ತದೆ. ಉದ್ಯಾಪನೆಯ ದಿನದಂದು ತುಳಸೀ ಗಿಡದ ಮೇಲೆ ಒಂದು ಸುಂದರವಾದ ಮಂಟಪವನ್ನು ರಚಿಸಬೇಕು. ಬಾಳೆಯ ಕಂಬಗಳನ್ನು ನಾಕು ಕಡೆಯೂ ನಿಲ್ಲಿಸಿ ಬಗೆ ಬಗೆಯ ಧಾತು ಹಾಗೂ ಬಣ್ಣದ ಧ್ವಜ, ಕೇತು, ಪತಾಕೆ, ಚಿತ್ರ, ತಳಿರು, ತೋರಣ, ಗುಡಿ, ಮಿಡಿ, ಕುಡಿ, ಗೊಂಚಲು ಮುಂತಾದವುಗಳಿಂದ ನಾಲ್ಕೂ ಮಂಟಪದ ನಾಕೂ ಭಾಗಗಳ ಕೋನ ಕಮಾನು ಧ್ವಜ ಸ್ತಂಬಗಳನ್ನು ಶಿಂಗರಿಸಬೇಕು.

ಎಂಟೂ ದಿಕ್ಕುಗಳಲ್ಲಿ ಬಗೆ ಬಗೆಯ ರೀತಿಗಳಿಂದ ದೀಪ ಮಾಲೆಯನ್ನು ಇಳಿಬಿಡಬೇಕು. ಆ ಮಂಟಪದಲ್ಲಿ ಸುಂದರವಾದ ತೋರಣಗಳಿಂದ ನಾಕೂ ಕಡೆಗಳಲ್ಲಿ ನಾಲ್ಕು

ಬಾಗಿಲುಗಳನ್ನು ಚೆನ್ನಾಗಿ ಆಕರ್ಷಕವಾಗುವಂತೆ ಹೂವಿನ ಮಾಲೆಗಳನ್ನು ಜೋತಾಡಿಸಿ ಶೃಂಗಾರಿತವನ್ನಾಗಿ ಮಾಡಿಸಬೇಕು. ಎಲ್ಲ ಬಾಗಿಲುಗಳ ಎಡಬಲಗಳಲ್ಲಿ ಉದ್ದುದ್ದ ಚಾಮರಗಳನ್ನು ತೂಗುಬಿಡಬೇಕು. ಬಾಗಿಲುಗಳ ಎಡಬದಿಗಳನ್ನು ಮಣ್ಣಿನಿಂದ ಬೇರೆ ಬೇರೆ ದ್ವಾರಪಾಲಕರನ್ನು ಮಾಡಿ ಅವರ ಪೂಜೆಯನ್ನು ಮಾಡಬೇಕು.

ಜಯ, ವಿಜಯ, ಚಂಡ, ಪ್ರಚಂಡ, ನಂದ, ಸುನಂದ, ಕುಮುದ, ಕುಮುದಾಕ್ಷ ಎಂಬ ಎಂಟು ದ್ವಾರಪಾಲಕರನ್ನು ನಾಕೂ ದ್ವಾರಗಳಲ್ಲಿ ಪ್ರತಿಷ್ಠೆಗೊಳಿಸಿ ಒಂದೊಂದು ಬಾಗಿಲ ಎಡಬದಿಯಲ್ಲಿ ಇಬ್ಬರು ದ್ವಾರಪಾಲಕರನ್ನು ಪ್ರತಿಷ್ಠೆಗೊಳಿಸಿ ಪೂಜಿಸಬೇಕು. ತುಳಸಿಯ ಬೇರಿನ ಸಮೀಪದಲ್ಲಿ ನಾಕೂ ಬಣ್ಣಗಳಿಂದ ಸರ್ವತೋ ಭದ್ರ ಮಂಡಲವನ್ನು ಸುಂದರವಾಗಿ ಬರೆಯಬೇಕು. ಅದರ ಮೇಲೆ ಪೂರ್ಣ ಪಾತ್ರ ಮತ್ತು ಪಂಚರತ್ನಗಳಿಂದ ಒಡಗೂಡಿದ ಕಲಶವನ್ನು ಸ್ಥಾಪನೆ ಮಾಡಬೇಕು. ಕಲಶದ ಮೇಲೆ ಶಂಖ ಚಕ್ರ ಗದಾಧಾರಿಯಾದ ವಿಷ್ಣುವಿನ ಮೂರ್ತಿಯನ್ನು ಇಟ್ಟು ವಿಷ್ಣುವನ್ನು ಪೂಜಿಸಬೇಕು. ಕಾರ್ತೀಕ ಶುದ್ಧ ಚತುರ್ದಶೀ ದಿನದಂದು ಉಪವಾಸ ಮಾಡಿ ಗೀತ ವಾದ್ಯ ಮಂತ್ರ ಸ್ತೋತ್ರ ಪುರಾಣ ಪ್ರವಚನ ನರ್ತನ ಕೀರ್ತನ ಮೊದಲಾದವುಗಳಿಂದ ಜಾಗರಣವನ್ನು ಮಾಡಬೇಕು. ಈ ಜಾಗರಣ ಕಾಲದಲ್ಲಿ ಭಗವಂತನ ಸದ್ಗುಣಗಳ ಬಣ್ಣನೆಯನ್ನು ಮಾಡುವ ಹಾಡುಗಳನ್ನು ಹಾಡಬೇಕು.

ಭಗವಂತನ ಗುಣಗಾನ ಮಾಡುವದರಿಂದ ನೂರಾರು ಜನ್ಮಗಳ ಪಾಪಗಳೆಲ್ಲವೂ ಪರಿಹೃತವಾಗುವವು. ಅನಂತರ ಹುಣ್ಣಿಮೆಯ ದಿನದಂದು ಬ್ರಾಹ್ಮಣ ದಂಪತಿಗಳನ್ನು ಆಮಂತ್ರಿಸಬೇಕು. ಪ್ರಾತಃಕಾಲದಲ್ಲಿ ಸ್ನಾನ ಹಾಗೂ ದೇವರ ಪೂಜೆಗಳನ್ನು ಮುಗಿಸಬೇಕು. ಅನಂತರ ವೇದಿಯಲ್ಲಿ ಅಗ್ನಿಯನ್ನು ಸ್ಥಾಪನೆ ಮಾಡಿ 'ಅತೋದೇವಾ' ಇತ್ಯಾದಿ ಮಂತ್ರಗಳಿಂದ ಪರಮಾತ್ಮನ ಪ್ರೀತಿಗಾಗಿ ಎಳ್ಳು ಮತ್ತು ಪಾಯಸಗಳಿಂದ ಆಹುತಿಯನ್ನು ನೀಡಬೇಕು. ಅನಂತರ ಹೋಮದ ವಿಧಿ ವಿಧಾನಗಳನ್ನೆಲ್ಲ ವಿಧಿಪೂರ್ವಕವಾಗಿ ಮಾಡಿ ಬ್ರಾಹ್ಮಣರ ಪೂಜೆಯನ್ನು ಮಾಡಬೇಕು. ಯಥಾಶಕ್ತಿ ದಕ್ಷಿಣೆಯನ್ನು ಕೊಡಬೇಕು. ಹಿಂದೆ ಶ್ರೀಮನ್ನಾರಾಯಣನು ಕಾರ್ತಿಕ ಶುಕ್ಲ ದ್ವಾದಶೀ ದಿನದಂದು ಯೋಗನಿದ್ರೆಯಿಂದ ಎದ್ದನು. ತ್ರಯೋದಶೀ ದಿನ ತನ್ನ ದರ್ಶನಕ್ಕಾಗಿ ಬಂದ ದೇವತೆಗಳಿಗೆ ಭೇಟಿ ನೀಡಿದನು. ಚತುರ್ದಶೀ ದಿನ ಎಲ್ಲ ದೇವತೆಗಳೂ ಋಷಿಗಳೂ ಭಗವಂತನ ದರ್ಶನ ಮಾಡಿಕೊಂಡು ಪೂಜೆಯನ್ನು ಮಾಡಿದರು. ಆದುದರಿಂದ ಚತುರ್ದಶೀ ತಿಥಿಯಲ್ಲಿ ಎಲ್ಲರೂ ಭಕ್ತಿಯಿಂದ ಶ್ರೀ ಹರಿಯ ಪೂಜೆಯನ್ನು ಮಾಡಬೇಕು. ಬಂಗಾರದ ಹರಿ ಪ್ರತಿಮೆಯನ್ನು ಮಾಡಿಸಿ ಅದನ್ನು ಪೂಜಿಸಬೇಕು. ಈ ರೀತಿಯಾಗಿ ಕಾರ್ತೀಕ ವ್ರತವನ್ನು ಅನೂಚಾನವಾಗಿ ಆಚರಿಸಿದರೆ, ಆ ಮನುಷ್ಯನು ಇಡೀ ಪ್ರಪಂಚದಲ್ಲಿ ಎಲ್ಲರಿಗೂ ವಂದನೀಯನೂ ಪೂಜನೀಯನೂ ಆಗುವನು.

ಭಗವಾನ್ ಶ್ರೀ ವಿಷ್ಣುವಿನ ಪೂಜೆಯನ್ನು ರಾತ್ರಿಕಾಲ ವ್ಯಾಪಿನಿಯಾದ ಚತುರ್ದಶಿಯಂದು ಮಾಡಬೇಕು. ಅರುಣೋದಯಕಾಲದಲ್ಲಿ ಕಾಶಿಯ ಪಂಚಗಂಗಾ ತೀರ್ಥದಲ್ಲಿ ಸ್ನಾನ ಮಾಡಿ ಅಲ್ಲಿಯೇ ಇದ್ದು ಬಿಂದುಮಾಧವನ ಪೂಜೆಯನ್ನು ಮಾಡಬೇಕು. ಮೊದಲು ವಿಷ್ಣು ಕಾಂಚಿಯಲ್ಲಿ ಸ್ನಾನ ಮಾಡಿ ಭಗವಾನ್ ಅನಂತ ಶಯನನನ್ನು ಪೂಜಿಸಬೇಕು. ಮತ್ತೆ ರುದ್ರಕಾಶಿಯಲ್ಲಿ ಓಂಕಾರೇಶ್ವರನ, ಅಗ್ನಿ ತೀರ್ಥದಲ್ಲಿ ಸ್ನಾನಮಾಡಿ, ನಾರಾಯಣನ,

ಶೀತೋದಕದಲ್ಲಿ ಸ್ನಾನಮಾಡಿ ಕೇದಾರೇಶ್ವರನ ಹಾಗೂ ಪ್ರಯಾಗದ ಯಮುನಾ ನದಿಯಲ್ಲಿ ಸ್ನಾನಮಾಡಿ ಭಗವಾನ್ ಶ್ರೀ ವೇಣೀ ಮಾಧವನ, ಮತ್ತು ಸಂಗಮೇಶ್ವರನ ಪೂಜೆ ಮಾಡಿ ಮತ್ತೊಮ್ಮೆ ಗಂಗಾ ನದಿಯಲ್ಲಿ ಸ್ನಾನ ಮಾಡಿ, ಸಂಗಮೇಶ್ವರನ ಪೂಜೆಯನ್ನು ಮಾಡಬೇಕು. ಇದರಿಂದ ಸಕಲವಿಧವಾದ ಪುಣ್ಯವು ಪ್ರಾಪ್ತವಾಗುವದು.

## ಅಂತ್ಯ ಪುಷ್ಕರಣಿ

ಕಾರ್ತೀಕ ಶುಕ್ಲಪಕ್ಷದ ಕೊನೆಯ ಮೂರು ತಿಥಿಗಳು ಅರ್ಥಾತ್ ತ್ರಯೋದಶೀ ಚತುರ್ದಶೀ ಹುಣ್ಣಿಮೆ ಇವು ಮೂರು ಲೋಕಕ್ಕೆಲ್ಲ ಕಲ್ಯಾಣ ಕಾರಕ ಆಗಿರುತ್ತವೆ. ಆದುದರಿಂದ ಇವುಗಳಿಗೆ ಅಂತ್ಯ ಪುಷ್ಕರಣಿ ಎಂದು ಹೆಸರು. ಕಾರ್ತೀಕ ಮಾಸದಲ್ಲಿ ಪೂರ್ಣ ಒಂದು ತಿಂಗಳು ಸ್ನಾನ ಮಾಡದವರು ಈ ಮೂರು ದಿನ ಮಾಡಿದರೆ ಪೂರ್ಣ ಕಾರ್ತೀಕ ವ್ರತದ ಪುಣ್ಯಕ್ಕೆ ಭಾಗಿ ಆಗುವರು. ತ್ರಯೋದಶೀ ದಿನ ಎಲ್ಲ ವೇದಗಳು ಪ್ರಾಣಿಗಳು ಇದ್ದಲ್ಲಿಯೇ ಹೋಗಿ ಸರ್ವ ಜೀವಿಗಳನ್ನು ಉದ್ಧಾರ ಮಾಡುತ್ತವೆ.

ಚತುರ್ದಶೀ ದಿನದಂದು ಯಜ್ಞ ಮತ್ತು ದೇವತೆಗಳು ಎಲ್ಲ ಪ್ರಾಣಿಗಳನ್ನು ಪವಿತ್ರರನ್ನಾಗಿ ಮಾಡುತ್ತಾರೆ. ಮತ್ತು ಪೂರ್ಣಿಮಾ ದಿನದಂದು ವಿಷ್ಣುವಿನಿಂದ ಅಧಿಷ್ಠಿತವಾದ ಎಲ್ಲ ಶ್ರೇಷ್ಠ ತೀರ್ಥಗಳೂ, ಬ್ರಹ್ಮಹತ್ಯೆ ಸುರಾಪಾನ ಮುಂತಾದ ಘೋರ ಪಾಪಗಳನ್ನೆಲ್ಲ ನಾಶಮಾಡಿ ಮಾನವರನ್ನು ಪಾವನಗೊಳಿಸುತ್ತವೆ. ಮೇಲೆ ಹೇಳಿದ ಈ ಮೂರೂ ಅಂತ್ಯ ಪುಷ್ಕರಣಿಯ ದಿನಗಳಲ್ಲಿ ಪಂಡಿತರಿಗೆ ಕುಟುಂಬ ಭೋಜನವನ್ನು ಮಾಡಿಸಬೇಕು. ಅದರಿಂದ ಅವನ ಎಲ್ಲ ಪಿತೃಗಳೂ ಉದ್ಧೃತರಾಗಿ ಪರಮಪದವನ್ನು ಹೊಂದುವರು. ಕಾರ್ತೀಕದ ಕೊನೆಯ ಮೂರು ದಿನಗಳಲ್ಲಿ ಗೀತಾಪಾಠ ಮಾಡುವವರಿಗೆ ಪ್ರತಿದಿನವೂ ಒಂದೊಂದು ಅಶ್ವಮೇಧ ಯಜ್ಞ ಮಾಡಿದಷ್ಟು ಪುಣ್ಯ ಬರುವದು. ಈ ಕೊನೆಯ ಮೂರು ದಿನಗಳಲ್ಲಿ ವಿಷ್ಣು ಸಹಸ್ರನಾಮ ಸ್ತೋತ್ರವನ್ನು ಪಾರಾಯಣ ಮಾಡಿದವರಿಗೆ ಪಾಪಗಳು ಎಂದೂ ಲೇಪಿಸುವುದಿಲ್ಲ.

**ಸೂತ:-** ಬ್ರಹ್ಮದೇವರ ಮುಖದಿಂದ ಕಾರ್ತೀಕ ಮಹಿಮೆ ಕೇಳಿ ನಾರದರು ಸಂತುಷ್ಟರಾಗಿ ಅಲ್ಲಿಂದ ತೆರಳಿದರು.

*॥ ಸ್ಕಂದ ಪುರಾಣ ಕಾರ್ತಿಕ ಮಾಸ ಮಹಾತ್ಮ್ಯೆ ಸಮಾಪ್ತಿ ॥*

## ಮಾರ್ಗಶೀರ್ಷ ಮಾಸ ಮಾಹಾತ್ಮ್ಯ

ಅಧ್ಯಾಯ - ೬೯

**ಸೂತ:- ದೇವಕೀ ನಂದನಂ ಕೃಷ್ಣಂ ಜಗದಾನಂದ ಕಾರಣಂ ॥**
**ಭುಕ್ತಿ ಮುಕ್ತಿ ಪ್ರದಂ ವಂದೇ ಮಾಧವಂ ಭಕ್ತ ವತ್ಸಲಂ ॥**

ಜಗತ್ತಿಗೆಲ್ಲ ಆನಂದವನ್ನು ಕೊಡುವ ಮತ್ತು ಇಹದಲ್ಲಿ ಭೋಗವನ್ನು ಪರದಲ್ಲಿ ಮೋಕ್ಷವನ್ನೂ ಕರುಣಿಸುವ, ಲಕ್ಷ್ಮೀದೇವಿಯ ಒಡೆಯನಾದ, ಭಕ್ತವತ್ಸಲನಾದ. ದೇವಕಿಯ ಪುತ್ರ ಶ್ರೀಕೃಷ್ಣನನ್ನು ವಂದಿಸುತ್ತೇನೆ.

ಶ್ರೀಹರಿಯ ದಿವ್ಯಧಾಮವಾದ ಶ್ವೇತದ್ವೀಪ. ಅದರಲ್ಲಿ ಹೊಂಬಣ್ಣದ ಕಾಂತಿಯಿಂದ ಬೆಳಗುವ ರತ್ನಸಿಂಹಾಸನದಲ್ಲಿ ವಿರಾಜಮಾನನಾಗಿದ್ದಾನೆ ಲಕ್ಷ್ಮೀಕಾಂತ, ಆಗ ಅಲ್ಲಿಗೆ ಬಂದವರು ನಾಲ್ಕು ಮೊಗದ ಬ್ರಹ್ಮ. ಭಗವಂತನಿಗೆ ವಂದಿಸಿದರು. ಪ್ರಶ್ನೆ ಮಾಡಿದರು-

''ಹೃಷೀಕೇಶ! ನೀನು ಹದಿನಾಕು ಲೋಕಗಳನ್ನೆಲ್ಲ ಧಾರಣ ಮಾಡುತ್ತೀಯ. ನಿನ್ನ ನಾಮಗಳ ಶ್ರವಣ ಹಾಗೂ ಕೀರ್ತನ ಪರಮಪವಿತ್ರ. ''ಮಾಸಾನಾಂ ಮಾರ್ಗಶೀರ್ಷೋಹಂ'' ಎಂದು ಹೇಳಿಕೊಂಡಿರುವೆ. ನಾನೇ ಮಾರ್ಗಶೀರ್ಷ ಎಂದು ನೀನು ಹೇಳಿಕೊಳ್ಳುವಷ್ಟು ಆ ಮಾಸದಲ್ಲಿ ಏನು ಮಹಿಮೆ ಇವೆ? ಅದೆಲ್ಲವನ್ನು ತಿಳಿದುಕೊಳ್ಳಬೇಕೆಂಬ ಆಸೆ ನನಗೆ ನಿನ್ನಿಂದ.

**ಮಹಾವಿಷ್ಣು:-** ಪುಣ್ಯವನ್ನು ಸಂಪಾದಿಸಬೇಕು ಎಂಬ ಹೆಬ್ಬಯಕೆಯಿಂದ ಅದಕ್ಕಾಗಿ ಹವಣಿಸುವ ಹರಿಭಕ್ತರು ಅವಶ್ಯವಾಗಿ ಅನುಷ್ಠಾನ ಮಾಡಲೇಬೇಕು ಮಾರ್ಗಶೀರ್ಷ ಮಾಸದ ವ್ರತವನ್ನು. ನನಗೆ ಅತ್ಯಂತ ಪ್ರಿಯ ಈ ಮಾರ್ಗಶೀರ್ಷ ಮಾಸ. ಮತ್ತು ಯಾವಾಗಲೂ ನನಗೆ ಇಷ್ಟತಮ ಈ ತಿಂಗಳು. ಮಾನವನು ಪ್ರತಿದಿನವೂ ರಾತ್ರಿಯ ಕೊನೆಯ ಜಾವದಲ್ಲಿ ತಪ್ಪದೇ ಏಳಬೇಕು. ಅದರಲ್ಲಿಯೂ ಮಾರ್ಗಶೀರ್ಷ ಮಾಸದಲ್ಲಿ ಬ್ರಾಹ್ಮ ಮುಹೂರ್ತದಲ್ಲಿ ಎದ್ದು ವಿಧಿಪೂರ್ವಕವಾಗಿ ಸ್ನಾನವನ್ನು ಮಾಡಬೇಕು. ಇದರಿಂದ ನನಗೆ ಪರಮಸಂತೋಷವಾಗುವದು. ಈ ತಿಂಗಳಲ್ಲಿ ಪ್ರಾತಃಸ್ನಾನ ಮಾಡುವವರಿಗೆ ನಾನು ನನ್ನನ್ನೇ ಅರ್ಪಿಸಿ ಕೊಳ್ಳುತ್ತೇನೆ. ಈ ವಿಷಯದಲ್ಲಿ ನಿನಗೆ ಸ್ವಲ್ಪ ಹಿಂದಿನ ಇತಿಹಾಸವನ್ನು ಹೇಳುತ್ತೇನೆ ಕೇಳು.

ಪೂರ್ವಕಾಲದಲ್ಲಿ ಈ ಭರತಖಂಡದಲ್ಲಿ ನಂದಗೋಪ ಎಂಬ ಮಹಾತ್ಮನು ಇದ್ದ. ಅವನು ಇರುವ ಸ್ಥಳವೇ ಗೋಕುಲ. ಅಲ್ಲಿ ಸಾವಿರಾರು ಜನ ಗೋಪಕನ್ಯೆಯರು. ಅವರೆಲ್ಲರೂ ವಿಷ್ಣುವಿನ ಪರಮಭಕ್ತರು. ನನ್ನಲ್ಲಿಯೇ ಯಾವಾಗಲೂ ಅನುರಕ್ತರು. ನಾನು ಆ ಎಲ್ಲ ಗೋಪ ಕುಮಾರಿಯರಿಗೆ ಮಾರ್ಗಶೀರ್ಷ ಮಾಸದಲ್ಲಿ ಅರುಣೋದಯ ಕಾಲದಲ್ಲಿ ಯಮುನಾ ಸ್ನಾನವನ್ನು ಮಾಡಬೇಕು ಎಂದು ಉಪದೇಶ ಮಾಡಿದೆ. ಮತ್ತು ಶ್ರೀಹರಿಯ ಧ್ಯಾನ, ಭಜನ, ಪೂಜನ, ಹಾಗೂ ಹವಿಷ್ಯ ಅನ್ನದ ಭೋಜನ, ಮುಂತಾದವುಗಳನ್ನು ಮಾಡಲು ಬೋಧಿಸಿದೆ. ಅವರೆಲ್ಲರೂ ವಿಶ್ವಾಸವನ್ನು ಇರಿಸಿದರು ನನ್ನ ಮಾತಿನಲ್ಲಿ. ನಾನು ಹೇಳಿದಂತೆ ಪ್ರಾತಃಸ್ನಾನ, ಇಷ್ಟ ದೇವತೆಯ ಪೂಜೆ ಪ್ರದಕ್ಷಿಣೆ, ನಮಸ್ಕಾರ ಮುಂತಾದ ಬಗೆ ಬಗೆಯ ಸೇವೆಯನ್ನು ಮಾಡಿದರು. ವಿಧಿಪೂರ್ವಕವಾಗಿ ಅವರು ಮಾಡಿದ ಈ ಮಾರ್ಗಶೀರ್ಷ ವ್ರತದ ಪಾಲನೆಯಿಂದ ನಾನು ಪರಮ ಪ್ರೀತನಾದೆ ಆ ಗೋಪಕನ್ಯೆಯರ ಮೇಲೆ. ಪ್ರಸನ್ನನಾದ ನಾನು ಆ ಗೌಳಿಗ ಹೆಣ್ಣುಗಳಿಗೆ ಮಾರ್ಗಶೀರ್ಷ ವ್ರತದ ಫಲರೂಪವಾಗಿ ನನ್ನನ್ನೇ ಅವರಿಗೆ ಅರ್ಪಿಸಿಬಿಟ್ಟೆ. ಆದುದರಿಂದ ಎಲ್ಲ ಜನರೂ ಮಾರ್ಗಶೀರ್ಷ ವ್ರತದ ವಿಧಿಯನ್ನು ಅವಶ್ಯವಾಗಿ ಪಾಲನ ಮಾಡಬೇಕು.

ರಾತ್ರಿಯ ಕೊನೆಯಲ್ಲಿ ಉಷಃಕಾಲದಲ್ಲಿ ಎದ್ದು ಕೈ ಕಾಲು ಮುಖಗಳನ್ನು ತೊಳೆದುಕೊಂಡು ಆಚಮನ ಮಾಡಿ ಹರಿಗುರುಗಳಿಗೆ ನಮಸ್ಕಾರ ಮಾಡಬೇಕು. ಕೆಲವು ನಿಮಿಷ ಮೌನವಾಗಿ ಕುಳಿತು ಭಗವಂತನ ಧ್ಯಾನವನ್ನು ಮಾಡಬೇಕು. ಭಕ್ತಿಯಿಂದ ವಿಷ್ಣು ಸಹಸ್ರನಾಮಗಳನ್ನು ಪಠಿಸಬೇಕು. ಅನಂತರ ಮೌನಿಯಾಗಿ ಊರ ಹೊರಗೆ ಹೋಗಬೇಕು. ವಿಧಿಪೂರ್ವಕವಾಗಿ ಮಲಮೂತ್ರ ವಿಸರ್ಜನೆ ಮಾಡಿ ಮೃತ್ತಿಕಾ ಶೌಚದಿಂದ ಕೈಕಾಲು ಮುಖಗಳನ್ನು ತೊಳೆದುಕೊಳ್ಳಬೇಕು. ಶಾಸ್ತ್ರಗಳಲ್ಲಿ ಹೇಳಿದಂತೆ ದಂತಕಾಷ್ಠದಿಂದ ಹಲ್ಲುಜ್ಜಿಕೊಂಡು ಸ್ನಾನ ಮಾಡಬೇಕು. ಸ್ನಾನವನ್ನು ಮಾಡುವಾಗ ತುಲಸಿಯ ದಳ ಹಾಗೂ

ತುಳಸಿಯ ಬೇರಿಗೆ ಹತ್ತಿದ ಮಣ್ಣು ಎರಡನ್ನು ತೆಗೆದುಕೊಂಡು 'ಓಂ ನಾರಾಯಣಾಯ ನಮಃ' ಎಂಬ ಮಂತ್ರದಿಂದಲೂ ಗಾಯಿತ್ರಿ ಮಂತ್ರದಿಂದಲೂ ನೀರನ್ನು ಅಭಿಮಂತ್ರಿಸಿ ಸ್ನಾನ ಮಾಡಬೇಕು. ತೀರ್ಥದಲ್ಲಿರುವ ಮೃತ್ತಿಕೆಯಿಂದ ಮತ್ತು ತುಳಸೀ ಮೃತ್ತಿಕೆಯಿಂದ ಅಂಗಾಂಗಗಳಿಗೆ ಲೇಪನ ಮಾಡಿಕೊಂಡು ನೀರಿನಲ್ಲಿ ಮುಳುಗು ಹಾಕಿ ಅಘಮರ್ಷಣ ಮಂತ್ರಜಪಿಸಿ ಸ್ನಾನವನ್ನು ಮಾಡಬೇಕು. ಸ್ನಾನ ಮಾಡುವಾಗ ಗಂಗಾದೇವಿಯನ್ನು ಈ ಕೆಳಗಿನ ಮಂತ್ರದಿಂದ ಪ್ರಾರ್ಥಿಸಬೇಕು.

"ವಿಷ್ಣು ಪಾದ ಪ್ರಸೂತಾಸಿ ವೈಷ್ಣವೀ ವಿಷ್ಣು ದೇವತಾ ।
ತ್ರಾಹಿ ನ ಸ್ತ್ವಮಘಾದಸ್ಮಾದಾಜನ್ಮ ಮರಣಾಂತಿಕಾತ್ ॥

ವಿಷ್ಣುವಿನ ಪಾದದಿಂದ ಹುಟ್ಟಿದ್ದರಿಂದ ವೈಷ್ಣವೀ ನದಿ ಎಂದು ಪ್ರಸಿದ್ಧಳಾದ ವಿಷ್ಣು ರೂಪಳಾದ ಗಂಗೆಯೇ, ನೀನು ನನ್ನ ಜನನದಿಂದ ಮರಣದವರೆಗೆ ಮಾಡಿದ ಎಲ್ಲ ಪಾಪಗಳಿಂದ ನನ್ನನ್ನು ರಕ್ಷಿಸು.

ಈ ಮಂತ್ರವನ್ನು ಏಳು ಸಲ ಉಚ್ಚರಿಸಿ ಆ ತೀರ್ಥಜಲಕ್ಕೆ ನಮಸ್ಕರಿಸಿ ನೀರಿನಲ್ಲಿ ಮುಳುಗು ಹಾಕಬೇಕು. ಮೂರು ನಾಲ್ಕು ಐದು ಅಥವಾ ಏಳು ಸಲ ನೀರಿನಲ್ಲಿ ಮುಳುಗಿ ಸ್ನಾನ ಮಾಡಬೇಕು. ಅನಂತರ ಅಷ್ಟಾಕ್ಷರ ಮತ್ತು ಗಾಯತ್ರಿ ಮಂತ್ರಗಳಿಂದ ಮೃತ್ತಿಕೆಯನ್ನು ಅಭಿಮಂತ್ರಿಸಿ ಮುಂದೆ ಹೇಳುವ ಮಂತ್ರದಿಂದ ಆ ಮೃತ್ತಿಕೆಯನ್ನು ಅಂಗಾಂಗಳಿಗೆಲ್ಲ ಬಳಿದುಕೊಂಡು ಸ್ನಾನ ಮಾಡಬೇಕು.

ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ
ನಮಸ್ತೇ ಸರ್ವಭೂತಾನಾಂ ಪ್ರಭವಾರಣಿ ಸುವ್ರತೆ ॥

ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೆ
ಮೃತ್ತಿಕೆ ಹರ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ॥

ಭೂದೇವಿಯೇ, ನೀನು ಹಿಂದೆ ಪ್ರಳಯಸಾಗರದಲ್ಲಿ ಮುಳುಗಿದಾಗ ವರಾಹರೂಪಿ ಯಾದ ಕೃಷ್ಣನು ತನ್ನ ನೂರಾರು ಕೈಗಳಿಂದ ನಿನ್ನನ್ನು ಎತ್ತಿ ಮೇಲಕ್ಕೆ ತಂದನು. ನೀನು ಎಲ್ಲ ಪ್ರಾಣಿಗಳಿಗೂ ಉತ್ಪತ್ತಿಕಾರಣಳೂ ಅಧಿಷ್ಠಾನ ಭೂತಳೂ ಆಗಿರುವೆ. ಆ ಭಗವಂತನಲ್ಲಿ ಭಕ್ತಿರೂಪವಾದ ಉತ್ತಮ ವ್ರತವನ್ನು ಮಾಡಿದ ಭೂದೇವಿಯೇ ನಿನಗೆ ನಮಸ್ಕಾರ. ನಿನ್ನ ಮೇಲೆ ಕುದುರೆ, ರಥ ಮೊದಲಾದ ಪ್ರಾಣಿಗಳು ತಿರುಗಾಡುತ್ತವೆ. ನಿನ್ನ ಗರ್ಭದಲ್ಲಿ ಮುತ್ತು ಮಣಿ ಮಾಣಿಕ್ಯ, ಬಂಗಾರ ಹಾಗೂ ಧಾನ್ಯಗಳು ಇದ್ದುದರಿಂದ ನಿನಗೆ ವಸುಂಧರಾ ಎಂದು ಹೆಸರು ಬಂದಿದೆ. ಆದ್ದರಿಂದಲೇ ಶ್ರೀ ವಿಷ್ಣುವೂ ಹಿಂದೆ ಬಲಿಚಕ್ರವರ್ತಿಯಿಂದ ಬೇಡಿ ಅಳೆದು ನಿನ್ನನ್ನು ಆಕ್ರಮಿಸಿಕೊಂಡನು. ಇಂಥ ನೀನು ನಾನು ಮಾಡಿದ ಎಲ್ಲ ದುಷ್ಕರ್ಮಗಳನ್ನು ಪರಿಹರಿಸು. ಪಾಪಗಳನ್ನು ನಾಶಪಡಿಸು. ನಿನಗೆ ನನ್ನ ನಮಸ್ಕಾರ.' ಈ ಮಂತ್ರವನ್ನು ಪಠಿಸಿ ಮೈಗೆಲ್ಲ ತೀರ್ಥದ ಮೃತ್ತಿಕೆಯನ್ನು ಬಳಿದುಕೊಂಡು ಅವಗಾಹನ ಸ್ನಾನ ಮಾಡಬೇಕು.

ಹೀಗೆ ಸ್ನಾನ ಮಾಡಿ ವಿಧಿಪೂರ್ವಕ ಆಚಮನ ಮಾಡಬೇಕು. ಅನಂತರ ನದೀ, ಕೆರೆ, ಹೊಂಡ, ಹೊಕ್ಕರಣಿ, ಸರೋವರ ಮುಂತಾದ ಜಲಾಶಯಗಳ ದಂಡೆಗೆ ಬಂದು ಎರಡು

ಶುದ್ಧ ವಸ್ತ್ರಗಳನ್ನು ಧರಿಸಬೇಕು. ಅನಂತರ ಆಚಮನ ಮಾಡಿ ದೇವತೆಗಳಿಗೂ ಪಿತೃಗಳಿಗೂ ಋಷಿಗಳಿಗೂ ತರ್ಪಣವನ್ನು ಕೊಡಬೇಕು. ಬಳಿಕ ಆಚಮನ ಮಾಡಿ ಆ ತೀರ್ಥದ ಮೃತ್ತಿಕೆಯನ್ನು ಕೈಯಲ್ಲಿ ತೆಗೆದುಕೊಂಡು ನೀರು ಹಾಕಿ ಕಲಿಸಿ ಹಿಂದೆ ಹೇಳಿದ ಅಷ್ಟಾಕ್ಷರ, ಗಾಯಿತ್ರಿ ಮುಂತಾದ ಮಂತ್ರಗಳಿಂದ ಅಭಿಮಂತ್ರಣಗೊಳಿಸಿ ಹಣೆ ಹಾಗೂ ಉಳಿದ ಅವಯವಗಳಲ್ಲಿ ಊರ್ಧ್ವ ಪುಂಡ್ರವನ್ನು ಧಾರಣ ಮಾಡಬೇಕು. ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಹಚ್ಚುವಾಗ ಕೇಶವಾಯ ನಮಃ ಎಂದು ಹೇಳಿ ಕೇಶವ ದೇವರನ್ನು ನೆನೆಯಬೇಕು. ಹೊಟ್ಟೆಯಲ್ಲಿ ನಾರಾಯಣಾಯ ನಮಃ, ಎದೆಯ ಮೇಲೆ ಮಾಧವಾಯ ನಮಃ, ಕೊರಳಿನ ಮುಂಭಾಗದಲ್ಲಿ ಗೋವಿಂದಾಯ ನಮಃ, ಹೊಟ್ಟೆಯ ಬಲಭಾಗದಲ್ಲಿ ವಿಷ್ಣವೇ ನಮಃ, ಬಲಭುಜದ ಮೇಲೆ ಮಧುಸೂಧನಾಯ ನಮಃ, ಬಲಗಿವಿಯ ಕೆಳಗೆ ತ್ರಿವಿಕ್ರಮಾಯ ನಮಃ, ಹೊಟ್ಟೆಯ ಎಡಬದಿಯಲ್ಲಿ ವಾಮನಾಯ ನಮಃ ಎಡತೋಳಿನ ಮೇಲೆ ಶ್ರೀಧರಾಯ ನಮಃ ಎಡಗಿವಿಯ ಕೆಳಗೆ ಹೃಷೀಕೇಶಾಯ ನಮಃ, ಬೆನ್ನಿನ ಮೇಲೆ ಪದ್ಮನಾಭಾಯ ನಮಃ, ಕೊರಳಿನ ಹಿಂಬದಿಯಲ್ಲಿ ದಾಮೋದರಾಯ ನಮಃ, ನೆತ್ತಿಯ ಮೇಲೆ ಶ್ರೀವಾಸುದೇವಾಯ ನಮಃ ಎಂದು ಭಗವಂತನ ನಮನ ಹಾಗೂ ನಾಮೋಚ್ಚಾರಣ ಗಳನ್ನು ಮಾಡಿ ಊರ್ಧ್ವಪುಂಡ್ರ ವಿಧಿಯಿಂದ ಈ ಎಲ್ಲ ನಾಮಗಳನ್ನು ಧರಿಸಬೇಕು.

ಈ ಊರ್ಧ್ವಪುಂಡ್ರ ನಾಮಗಳನ್ನು ದ್ವಾರಕಾದ ಮಣ್ಣು ಅಥವಾ ಗೋಪೀಚಂದನ ದಿಂದ ಧರಿಸಬೇಕು. ಹಣೆಯ ಮೇಲೆ ಗೋಪೀಚಂದನದ ತಿಲಕವನ್ನು ಧರಿಸುವುದರಿಂದ ಮಾನವರು ಮಾಡಿದ ದುಷ್ಕರ್ಮಗಳೆಲ್ಲವೂ ಸವೆದು ಹೋಗುವವು. ಹಣೆಯ ಮೇಲೆ ಗೋಪೀಚಂದನ ನಾಮವನ್ನು ಧರಿಸಿದವರು, ನೇರವಾಗಿ ನನ್ನ ದಿವ್ಯಧಾಮಕ್ಕೆ ಬರುವರು ಮರಣಾನಂತರ. ಊರ್ಧ್ವ ಪುಂಡ್ರವನ್ನು ವಿಧಿಪೂರ್ವಕವಾಗಿ ಧರಿಸಿದವರ ಹತ್ತಿರ ಭೂತ, ಪ್ರೇತ, ಪಿಶಾಚಿ, ರಾಕ್ಷಸ, ಯಕ್ಷ, ನಾಗ ಮುಂತಾದ ಯಾವ ಪ್ರಾಣಿಗಳೂ ಬಂದು ಪೀಡೆಯನ್ನು ಕೊಡುವದಿಲ್ಲ. ಆದ್ದರಿಂದ ನನ್ನ ಭಕ್ತರಾದವರು ನನ್ನ ಪ್ರೀತಿಗಾಗಿ ಮತ್ತು ತಮ್ಮ ರಕ್ಷಣೆಗಾಗಿ ಪ್ರತಿದಿನವೂ ಪ್ರಾತಃಕಾಲದಲ್ಲಿ ಸ್ನಾನವನ್ನು ಮಾಡಿದ ಕೂಡಲೇ ಊರ್ಧ್ವ ಪುಂಡ್ರವನ್ನು ಧರಿಸಿಕೊಂಡೇ, ಯಜ್ಞ ಅಥವಾ ಮತ್ತೆ ಬೇರೆ ಪುಣ್ಯಕಾರ್ಯದಲ್ಲಿ ಪ್ರವರ್ತಿಸಬೇಕು. ತುಳಸೀ ಮಣಿಯ ಮಾಲೆಯನ್ನು ಹೊಸತಾಗಿ ಮಾಡಿಸಿ ನನಗೆ ಇಡಿಸಿ ನನ್ನ ಕೊರಳಲ್ಲಿ ಹಾಕಿ ಅನಂತರ ನನ್ನ ಪ್ರಸಾದ ರೂಪವಾಗಿ ತಾನು ಕೊರಳಲ್ಲಿ ಧಾರಣ ಮಾಡತಕ್ಕದ್ದು. ಇದರಿಂದ ನಾನು ಪರಮ ಪ್ರೀತನಾಗುತ್ತೇನೆ. ಇದರಂತೆ ಕಮಲಾಕ್ಷಮಾಲೆಯನ್ನೂ ಧಾತ್ರೀ ಬೀಜದ ಮಾಲೆಯನ್ನೂ ಕೊರಳಲ್ಲಿ ಧರಿಸಬೇಕು.

## ಮಾನಸ ಪೂಜೆ

ರತ್ನಮಯ ಸಿಂಹಾಸವನ್ನು ಮನಸ್ಸಿನಲ್ಲಿ ಭಾವಿಸಿ ಅದರ ಮೇಲೆ ಎಂಟು ದಳದ ಕಮಲವನ್ನು ಭಾವಿಸಬೇಕು. ಆ ಕಮಲದ ಪ್ರತಿಯೊಂದು ದಳದ ಮೇಲೆ ಓಂ ನಮೋ ನಾರಾಯಣಾಯ ಎಂಬ ಅಷ್ಟಾಕ್ಷರ ಮಂತ್ರದ ಒಂದೊಂದು ಅಕ್ಷರಗಳು ಇದ್ದು ಆ ಅಷ್ಟದಳ ಪದ್ಮವು ನಾರಾಯಣಾಷ್ಟಾಕ್ಷರ ಮಂತ್ರದ ಮೂರ್ತಿ ಮಂತ್ರ ಅಧಿಷ್ಠಾನ ಎಂದು ಚಿಂತಿಸಬೇಕು. ಈ ಅಷ್ಟದಳ ಪದ್ಮದ ಮಧ್ಯದಲ್ಲಿ ಕೋಟಿ ಚಂದ್ರರಿಗೆ ಸಮಾನವಾದ ಕಾಂತಿಯುಳ್ಳ ಚತುರ್ಭುಜನಾದ ಶ್ರೀವಿಷ್ಣು ಕುಳಿತಿದ್ದಾನೆ ಎಂದು ಭಾವಿಸಿ ಅವನ (ನನ್ನ)

ಧ್ಯಾನವನ್ನು ಮಾಡಬೇಕು. ಶ್ರೀಹರಿಯ ಅರ್ಥಾತ್ ನನ್ನ ನಾಲ್ಕು ಕೈಗಳಲ್ಲಿ ಶಂಖ ಚಕ್ರ ಗದಾ ಪದ್ಮಗಳು ಇರುತ್ತವೆ. ನೇತ್ರವು ತುಂಬು ತಾವರೆಯ ದಳದಂತೆ ವಿಶಾಲವಾಗಿದೆ. ವಕ್ಷಃಸ್ಥಳದಲ್ಲಿ ಶ್ರೀವತ್ಸ ಚಿನ್ಹ ಹಾಗೂ ಕೌಸ್ತುಭ ಮಣಿಗಳು, ಕಟಿಪ್ರದೇಶದಲ್ಲಿ ಪೀತಾಂಬರ, ತೋಳುಗಳಲ್ಲಿ ಕಂಕಣ, ಮೈಗೆಲ್ಲ ದಿವ್ಯ ಚಂದನ ಲೇಪನ, ಕಂಠದಲ್ಲಿ ಹೂವಿನ ಮಾಲೆ, ತುಳಸೀ ಮಾಲೆ ಹಾಗೂ ವನಮಾಲೆ ಹೀಗೆ ಮಾಲಾತ್ರಯಗಳು ಒಪ್ಪುತ್ತಲಿವೆ. ಸಾವಿರ ಸೂರ್ಯರಿಗಿಂತ ಮಿಗಿಲಾಗಿದೆ ಭಗವಂತನ ಅಂಗಕಾಂತಿ. ಅಲ್ಲಿಯೇ ಸರ್ವಲಕ್ಷಣ ಸಂಪನ್ನಳಾದ ಮಹಾಲಕ್ಷ್ಮೀದೇವಿಯು ಮಂಡಿಸಿದ್ದಾಳೆ. ಹೀಗೆ ನನ್ನನ್ನು ಧ್ಯಾನ ಮಾಡುತ್ತ ಏಕಾಗ್ರಚಿತ್ತನಾಗಿ ಆ ಅಷ್ಟಾಕ್ಷರ ಮಂತ್ರವನ್ನು ಒಂದು ಸಾವಿರದಾ ಎಂಟು ಅಥವಾ ನೂರಾ ಎಂಟು ಸಲ ಜಪ ಮಾಡಬೇಕು. ಮೊದಲು ಮಾನಸ ಪೂಜೆಯನ್ನು ಮಾಡಿ ಅನಂತರ ಎಲ್ಲ ಪೂಜಾ ಸಾಮಗ್ರಿಗಳನ್ನು ಸಜ್ಜುಗೊಳಿಸಿ ತಂದಿಟ್ಟುಕೊಂಡು ವಿಧಿಪೂರ್ವಕವಾಗಿ ಬಾಹ್ಯ ಪೂಜೆಯನ್ನು ಮಾಡಬೇಕು. ಪೂಜೆಯ ಪ್ರಾರಂಭದಲ್ಲಿ ನನ್ನ ಸ್ಮರಣೆಯನ್ನು ಮಾಡಿ ಮಂಗಲ ಸ್ತೋತ್ರವನ್ನು ಪಠಿಸಬೇಕು. ಅನಂತರ ಕೆಳಗೆ ಹೇಳಿದ ಮಂತ್ರಗಳಿಂದ ಶಂಖ ಪೂಜೆಯನ್ನು ಮಾಡಬೇಕು.

**ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ**
**ನಿರ್ಮಿತಃ ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತು ತೇ ॥**

**ತವ ನಾದೇನ ಜೀಮೂತಾ ವಿತ್ರಸಂತಿ ಸುರಾಽ ಸುರಾಃ**
**ಶಶಾಂಕಾಯುತ ದೀಪ್ತಾಭ ಪಾಂಚಜನ್ಯ ನಮೋಽಸ್ತು ತೇ ॥**

ಪಾಂಚಜನ್ಯ ಶಂಖವೇ, ನೀನು ಹಿಂದೆ ಸಮುದ್ರದಿಂದ ಜನಿಸಿದೆ. ಭಗವಾನ್ ಶ್ರೀಹರಿಯು ನಿನ್ನನ್ನು ತನ್ನ ಕೈಯಲ್ಲಿ ಧರಿಸಿದ್ದಾನೆ. ಆದ್ದರಿಂದಲೇ ಎಲ್ಲದೇವತೆಗಳೂ ನಿನ್ನನ್ನು ನಮಿಸುತ್ತಾರೆ. ಮತ್ತು ನಿನ್ನಲ್ಲಿ ನೆಲೆಸಿದ್ದಾರೆ. ನಿನ್ನ ಧ್ವನಿಯಿಂದಲೇ ದೇವದಾನವರೆಲ್ಲರೂ ನಡುಗಿ ಹೋಗುವರು. ಮೋಡಗಳು ಚದುರಿ ಹೋಗುವವು. ಸಾವಿರಾರು ಚಂದ್ರರ ಸೌಮ್ಯಕಾಂತಿಯಿಂದ ನೀನು ಕಂಗೊಳಿಸುವಿ. ಪಾಂಚಜನ್ಯ ಎಂಬ ಹೆಸರಿನ ವಿಷ್ಣುವಿನ ಹಸ್ತಾಲಂಕಾರ ಭೂತ ಶಂಖವೇ ನಿನಗೆ ನನ್ನ ನಮಸ್ಕಾರವಿರಲಿ.

ಅನಂತರ ಸುಗಂಧ ಎಣ್ಣೆಯನ್ನು ಹಚ್ಚಿ ವಿಷ್ಣುವಿನ ಅರ್ಥಾತ್ ನನ್ನ ಪ್ರತಿಮೆಗಳಿಗೆ ಅಭ್ಯಂಗ ಸ್ನಾನ ಮಾಡಿಸಬೇಕು. ಕಸ್ತೂರಿ, ಚಂದನ, ಮೊದಲಾದವುಗಳನ್ನು ಹಚ್ಚಿ ತಿಕ್ಕಿ ಸುವಾಸಿತವಾದ ನೀರಿನಿಂದ ಪುರುಷಸೂಕ್ತವನ್ನು ಉಚ್ಚಾರ ಮಾಡುತ್ತ ಶಂಖದಿಂದ ಹಾಗೂ ಪೂರ್ಣಕುಂಭದಿಂದ ದೇವರ ಮೂರ್ತಿಗೆ ಅಭಿಷೇಕ ಮಾಡಬೇಕು. ಅನಂತರ ವಸ್ತ್ರದಿಂದ ಒರೆಸಿ ಅರ್ಘ್ಯ ಪಾದ್ಯ ಆಚಮನೀಯಗಳನ್ನು ಅರ್ಪಿಸಬೇಕು. ಈಶ ಪೂಜೆಯನ್ನು ಮಾಡಿ ಅಲಂಕೃತವಾದ ಪೀಠದ ಮೇಲೆ ದೇವರ ಮೂರ್ತಿಯನ್ನು ಕೂಡಿಸಿ, ವಸ್ತ್ರ, ಅಲಂಕಾರ, ಹೂವು ತುಳಸಿ ಗಂಧ ಮಾಲೆ ಮುಂತಾದವುಗಳನ್ನು ಏರಿಸಿ ಸರ್ವ ಉಪಚಾರಗಳನ್ನು ಸಲ್ಲಿಸಬೇಕು. ಅನಂತರ ಪಾಯಸವೇ ಮೊದಲಾದ ಬಗೆಬಗೆಯ ಭಕ್ಷ್ಯ, ಭೋಜ್ಯ, ಶಾಕ, ಪಾಕ, ಲೇಹ್ಯ, ಚೋಷ್ಯ, ಪಾನೀಯ, ಮುಂತಾದವುಗಳನ್ನು ದೇವರ ಮುಂದೆ ಇಟ್ಟು ನೈವೇದ್ಯವನ್ನು ತೋರಿಸಬೇಕು. ಅನಂತರ ಹಸ್ತ ಪ್ರಕ್ಷಾಲನ, ಮುಖ ಪ್ರಕ್ಷಾಲನದ ನೀರನ್ನು

ನೀಡಿ ಪರಿಮಳ ದ್ರವ್ಯದಿಂದ ಒಡಗೂಡಿದ ತಾಂಬೂಲವನ್ನು ಸಮರ್ಪಿಸಬೇಕು. ಬಳಿಕ ದಶಾಂಗ ಹಾಕಿ ಧೂಪಾರತಿ, ಮಂಗಳಾರತಿ, ದೀಪಾರತಿ ಮುಂತಾದವುಗಳನ್ನು ಸಮರ್ಪಿಸಬೇಕು. ಕೊನೆಗೆ ಸ್ತುತಿ ಸ್ತೋತ್ರಗಳನ್ನು ಹೇಳಿ ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕಿ, ಡೋಲೋತ್ಸವವನ್ನು ಮಾಡಿ, ಮಂಗಳ ಅರ್ಘ್ಯವನ್ನು ನಿವೇದಿಸಬೇಕು.

ದ್ವಾದಶಿ ಅಥವಾ ಹುಣ್ಣಿಮೆಯ ದಿನ ಹಸುವಿನ ಹಾಲಿನಿಂದ ದೇವರಿಗೆ ಕ್ಷೀರಾಭಿಷೇಕವನ್ನು ಮಾಡಿದರೆ ಅಥವಾ ಮಾಡಿಸಿದರೆ ಸರ್ವಪಾಪ ಕ್ಷಯ. ಮಾರ್ಗಶೀರ್ಷಮಾಸದಲ್ಲಿ ದೇವರಿಗೆ ಜೇನುತುಪ್ಪ, ಸಕ್ಕರೆ, ಗೋಕ್ಷೀರ, ಶುದ್ಧೋದಕ, ಶಂಖೋದಕ, ಪಂಚಾಮೃತ, ಗಂಧೋದಕ, ಮುಂತಾದವುಗಳಿಂದ ಸ್ನಾನ ಮಾಡಿಸಬೇಕು. ಕೊನೆಗೆ ತೀರ್ಥೋದಕದಿಂದ ನಾರಾಯಣಾಷ್ಟಾಕ್ಷರವನ್ನು ಉಚ್ಚರಿಸಿ ಶಂಖದ ದ್ವಾರಾ ಅಭಿಷೇಕ ಮಾಡಿ ವಿಧಿಪೂರ್ವಕ ಪೂಜೆ ಮಾಡುವವರು ಸರ್ವಪಾಪಗಳಿಂದ ಮುಕ್ತರಾಗಿ ಮುಕ್ತಿ ಮಾರ್ಗದಲ್ಲಿ ಮುನ್ನಡೆಯುವರು. ನದಿ, ಬಾವಿ, ಹೊಂಡ, ಸರೋವರ ಮುಂತಾದವುಗಳ ನೀರನ್ನು ಶಂಖದಲ್ಲಿ ಹಾಕಿ ದೇವರಿಗೆ ಅಭಿಷೇಕ ಮಾಡಿದರೆ ಗಂಗಾ ಜಲದಿಂದ ಅಭಿಷೇಕ ಮಾಡಿದ ಪುಣ್ಯವು ಬರುವದು. ಭಗವಂತನ ಚರಣೋದಕವನ್ನು ಶಂಖದಲ್ಲಿ ಹಾಕಿ ತಲೆಯಮೇಲೆ ಪ್ರೋಕ್ಷಣೆ ಮಾಡಿಕೊಂಡವನು ಮುನಿಗಳ ಶ್ರೇಣಿಯಲ್ಲಿ ಸೇರ್ಪಡೆ ಯಾಗಲು ಯೋಗ್ಯನೆನಿಸುವನು. ಮೂರು ಲೋಕಗಳಲ್ಲಿರುವ ಎಲ್ಲ ತೀರ್ಥಗಳೂ ನನ್ನ ಆಜ್ಞೆಯಿಂದ ಶಂಖದಲ್ಲಿ ಇರುತ್ತವೆ. ಶಂಖದಲ್ಲಿ ಹೂ, ಅಕ್ಷತೆ, ನೀರುಗಳನ್ನು ಹಾಕಿ ನನಗೆ ಅರ್ಘ್ಯವನ್ನು ನೀಡಿದರೆ ಅನಂತ ಪುಣ್ಯಪ್ರಾಪ್ತಿ. ವಿಷ್ಣುಭಕ್ತನು ದೇವರ ತಲೆಯ ಮೇಲೆ ಹಾಗೂ ಮೈಮೇಲೆ ಶಂಖ ಭ್ರಮಣವನ್ನು ಮಾಡಿ ಆ ನೀರನ್ನು ತನ್ನ ತಲೆಯಮೇಲೆ ಹಾಗೂ ಮನೆಯಲ್ಲಿ ಎಲ್ಲ ಕಡೆಗೂ ಸಿಂಪಡಿಸಿದರೆ ಯಾವ ಅಶುಭವೂ ಉಂಟಾಗಲಾರದು. ಅಂಥ ಗೃಹದಲ್ಲಿ ದೇವರಿಗೆ ಅಭಿಷೇಕವನ್ನು ಮಾಡುವಾಗ ಹಾಡು, ನಾಮ ಸಂಕೀರ್ತನೆ, ಮಂತ್ರ, ಸ್ತೋತ್ರ ಮಂಗಲವಾದ್ಯ, ಘಂಟಾನಾದ ಮುಂತಾದ ಶುಭಕರವಾದ ಶಬ್ದವನ್ನು ಮಾಡುತ್ತಲಿದ್ದರೆ ಅಧಿಕ ಪುಣ್ಯವು ಲಭಿಸುವದು. ದೀಪಗಳ ಮಹಿಮೆ .

**ಶ್ರೀ ಭಗವಾನ್:-** ಗಂಟೆಯು ಸರ್ವವಾದ್ಯಮಯವಾಗಿದೆ. ಆದುದರಿಂದಲೇ ಶ್ರೀಹರಿಗೆ ಅರ್ಥಾತ್ ನನಗೆ ಅತ್ಯಂತ ಪ್ರಿಯವಾಗಿದೆ. ದೇವರಪೂಜೆಯ ವೇಳೆಯಲ್ಲಿ ಗಂಟೆಬಾರಿಸುವದರಿಂದ ಯಜ್ಞ ಮಾಡಿದಷ್ಟು ಪುಣ್ಯ ಬರುವದು. ದೇವರಿಗೆ ಆರತಿಯನ್ನು ಬೆಳಗುವಾಗ ಗಂಟೆ, ಮೃದಂಗ, ಶಂಖ, ನಗಾರಿ ಮುಂತಾದ ಮಂಗಳ ವಾದ್ಯಗಳನ್ನು ಪ್ರಣವಮಂತ್ರವನ್ನು ಉಚ್ಚರಿಸುತ್ತ ಮೊಳಗಿಸಬೇಕು.

ನನ್ನ ಪೂಜೆಯ ವೇಳೆಯಲ್ಲಿ ಗಂಟೆ ಬಾರಿಸಿದರೆ ನೂರು ಜನ್ಮಗಳ ಪಾಪವೆಲ್ಲವೂ ದೂರವಾಗಿ ಹೋಗುವವು. ಮೇಲೆ ಗರುಡ ಚಿನ್ಹದಿಂದ ಯುಕ್ತವಾದ ಒಂದು ಗಂಟೆಯನ್ನು ಕೈಯಲ್ಲಿ ತೆಗೆದುಕೊಂಡು ಇನ್ನೊಂದು ಕೈಯಿಂದ ನನಗೆ ಧೂಪಾರತಿ, ದೀಪಾರತಿ, ಅಭಿಷೇಕ, ಪೂಜೆ, ವಿಲೇಪನ, ಪುಷ್ಪಾರ್ಚನ ಮುಂತಾದ ಎಲ್ಲ ಉಪಚಾರಗಳನ್ನು ಮಾಡುವದರಿಂದ ಶ್ರೀಹರಿಯು ಪ್ರೀತನಾಗುತ್ತಾನೆ. ಬೇರೆಯವರು ಪೂಜೆ ಮಾಡುವಾಗ ಶಂಖ, ಗಂಟೆ, ಜಾಗಟೆ, ತಾಳ ಮುಂತಾದ ವಾದ್ಯಗಳನ್ನು ಬಾರಿಸಿದವರಿಗೆ ಚಾಂದ್ರಾಯಣ

ವ್ರತವನ್ನು ಮಾಡಿದ ಪುಣ್ಯವು ಲಭಿಸುವದು. ತುಳಸೀ ಕಾಷ್ಠದಿಂದ ತಿಕ್ಕಿ ತೈಯ್ದ ಚಂದನವನ್ನು ನನಗೆ ಅರ್ಪಣ ಮಾಡುವದರಿಂದ ವಿಶೇಷವಾಗಿ ಮಾರ್ಗಶೀರ್ಷ ಮಾಸದಲ್ಲಿ ತುಳಸೀಕಾಷ್ಠದ ಗಂಧದಲ್ಲಿ ಬೆರಸಿದ ಚಂದನವನ್ನು ಶಂಖದ ಮೇಲೆ ಇಟ್ಟು ದೇವರ ಅಂಗಗಳಿಗೆ ಲೇಪನ ಮಾಡುವದರಿಂದ ಅನಂತ ಪುಣ್ಯವು ಪ್ರಾಪ್ತವಾಗುವದು.

ಮಾರ್ಗಶೀರ್ಷ ಮಾಸದಲ್ಲಿ ಮಲ್ಲಿಗೆ, ಜಾಜಿ, ಮಾಧವಿ, ಕಣಗಿಲೆ, ಸಂಪಿಗೆ, ಅಶೋಕ, ಸೇವಂತಿಗೆ, ಪಾರಿಜಾತ, ಗುಲಾಬಿ, ಬಕುಲ, ಕೇದಿಗೆ, ಬೃಂಗರಾಜ ತುಳಸಿ ಮುಂತಾದ ಹೂಗಳಿಂದ ನನ್ನ ಪೂಜೆ ಮಾಡಿದರೆ ನಾನು ಶೀಘ್ರದಲ್ಲಿಯೇ ಪ್ರಸನ್ನನಾಗುತ್ತೇನೆ. ಕೆಂಪು ನೀಲಿ ಹಾಗು ಬೆಳ್ಳಗಿನ ಕಮಲಗಳು ಈ ಮಾರ್ಗಶೀರ್ಷಮಾಸದಲ್ಲಿ ನನಗೆ ಅತ್ಯಂತ ಪ್ರಿಯವಾಗಿವೆ. ಗಂಧವಿಲ್ಲದ ಬಣ್ಣವಿಲ್ಲದ ನಿರ್ಗಂಧ ಕುಸುಮಗಳನ್ನು ನನಗೆ ಅರ್ಪಿಸಬಾರದು. ಸುಗಂಧಿ ವೃಕ್ಷದ ಸುವಾಸನೆ ಹೂಗಳ ಜೊತೆಗೆ ಆ ಗಿಡಗಳ ಎಲೆಗಳನ್ನು ಮಂಜರಿಗಳನ್ನು ಮೊಗ್ಗೆಗಳನ್ನು ನನಗೆ ಅರ್ಪಿಸಬಹುದು. ಬಿಲ್ವಪತ್ರ, ಭೃಂಗರಾಜ ಪತ್ರ, ಶಮೀಪತ್ರ, ಅರ್ಥಾತ್ ಬನ್ನಿ ಎಲೆ ಮತ್ತು ನೆಲ್ಲಿಯ ಎಲೆ ಮುಂತಾದ ಎಲೆ ಹೂವು ಮೊಗ್ಗೆಗಳನ್ನು ಅಂದೇ ತಾಜಾ ಹರಿದು ತಂದು ನೀರಿನಲ್ಲಿ ತೊಳೆದು ದೇವರಿಗೆ ಸಮರ್ಪಿಸಿದರೆ ನನ್ನ ಪ್ರೀತಿ ಆಗುವದು. ಹೂ ಎಲೆಗಳು ಇಲ್ಲದಿದ್ದರೆ ಹಣ್ಣು ಕಾಯಿಗಳನ್ನು ಕೂಡ ನನಗೆ ಏರಿಸಬಹುದು. ತುಳಸೀ ಮಂಜರಿಯಿಂದ ನನ್ನ ಪೂಜೆ ಮಾಡುವವನು ಮೋಕ್ಷಕ್ಕೆ ಅಧಿಕಾರಿ ಯಾಗುತ್ತಾನೆ. ವಿಶೇಷವಾಗಿ ತಾನೇ ತುಳಸಿಯ ಬೀಜಗಳನ್ನು ಹಾಕಿ ಕಟ್ಟೆಕಟ್ಟಿ, ನೀರು ಹನಿಸಿ, ತುಳಸಿಯ ಗಿಡವನ್ನು ಚೆನ್ನಾಗಿ ಬೆಳೆಸಬೇಕು. ಅದರ ಮಂಜರಿ, ದಳ, ಎಲೆಗಳನ್ನು ನನಗೆ ನಾಮೋಚ್ಚಾರಣ ಪೂರ್ವಕವಾಗಿ ಭಕ್ತಿಯಿಂದ ಏರಿಸುವವನು ಮುಂದೆ ಶ್ವೇತದ್ವೀಪ ಎಂಬ ಹೆಸರಿನ ನನ್ನ ದಿವ್ಯ ಸ್ಥಾನಕ್ಕೆ ಬರುವನು. ಹೂಗಳು ಒಣಗಿದ್ದರೆ ಹಳತಾಗಿದ್ದರೆ ಬಾಡಿದ್ದರೆ ದೇವರಿಗೆ ಏರಿಸಬಾರದು. ತಂಗಳ ನೀರಿನಿಂದ ನನ್ನ ಅಭಿಷೇಕವನ್ನು ಮಾಡಬಾರದು. ಆದರೆ ತುಳಸಿಯು ಬಾಡಿದ್ದರೂ ಒಣಗಿದ್ದರೂ ಹಳತಾಗಿದ್ದರೂ, ವರ್ಜ್ಯವಲ್ಲ. ಇದರಂತೆ ಗಂಗೆಯ ನೀರು ಎಷ್ಟು ದಿನದ್ದಾಗಿದ್ದರೂ ನಿಷಿದ್ಧವಲ್ಲ ಎಂದು ಈ ಕೆಳಗಿನ ಪ್ರಮಾಣ ವಚನದಲ್ಲಿ ಹೇಳಲಾಗಿದೆ.

**ವರ್ಜ್ಯಂ ಪರ್ಯುಷಿತಂ ಪುಷ್ಪಂ, ವರ್ಜ್ಯಂ ಪರ್ಯುಷಿತಂ ಜಲಂ।**
**ನ ವರ್ಜ್ಯಂ ತುಳಸೀ ಪತ್ರಂ ನ ವರ್ಜ್ಯಂ ಜಾನ್ಹವೀ ಜಲಂ॥**

ಮಲ್ಲಿಗೆ, ಗುಲಾಬಿ, ಕಮಲ, ಮುಂತಾದ ಎಲ್ಲ ಹೂಗಳಿಗಿಂತಲೂ ತುಳಸೀ ದಳವು ನನಗೆ ಹೆಚ್ಚಿನ ಪ್ರೀತಿಯದಾಗಿದೆ. ಹೆಚ್ಚೇನು ಕೌಸ್ತುಭ ರತ್ನಕ್ಕಿಂತಲೂ ತುಳಸಿಯು ನನಗೆ ಅಧಿಕ ಪ್ರಿಯತರ. ಎಲೆ ಕತ್ತರಿಸದಿರುವ ಗೊನೆ ಸಹಿತವಾದ ದಳಗಳಿಂದ ಯುಕ್ತವಾದ ತುಳಸಿಯು ನನಗೆ ಸಾಕ್ಷಾತ್ ಲಕ್ಷ್ಮೀದೇವಿಯಷ್ಟೇ ಪ್ರೀತ್ಯಾಸ್ಪದವಾಗಿದೆ. ಶುಕ್ಲಪಕ್ಷ ಕೃಷ್ಣಪಕ್ಷಗಳಲ್ಲಿಯ ಮಾಸದ ಎರಡೂ ಏಕಾದಶಿಗಳು ನನಗೆ ಪ್ರಿಯವಾಗಿದ್ದಂತೆ ನನಗೆ ಕರಿ ತುಳಸಿ ಬಿಳಿ ತುಳಸಿ ಎರಡೂ ತುಳಸಿಗಳು ನನಗೆ ಪ್ರೀತ್ಯಾಸ್ಪದವಾಗಿವೆ. ದೇವರ ಪೂಜೆಗಾಗಿ ತುಳಸಿಯನ್ನು ಬೇಡುವವರಿಗೆ ತುಳಸಿ ಹಾಗೂ ಹೂಗಳನ್ನು ಕೊಡುವವರು ನನ್ನ ವೈಕುಂಠ ಲೋಕಕ್ಕೆ ಬರುವರು. ದೇವರ ಮನೆಯ ಮತ್ತು ದೇವಾಲಯಗಳಲ್ಲಿ ಅಗರು, ಚಂದನ, ಗುಗ್ಗುಳ ಮುಂತಾದವುಗಳನ್ನು ಧೂಪ ಅಥವಾ ಕೆಂಡದ ಮೇಲೆ ಹಾಕಿ ಇಡೀ ಮಂದಿರವನ್ನು

ಸುವಾಸಿತಗೊಳಿಸುವವರು ನರಕದಿಂದ ಮುಕ್ತರಾಗುವರು. ಗುಗ್ಗುಳದಲ್ಲಿ ಎಮ್ಮೆಯ ತುಪ್ಪ ಸಕ್ಕರೆಗಳನ್ನು ಕೂಡಿಸಿ ದೇವರಿಗೆ ಧೂಪಾರತಿ ಮಾಡಬೇಕು. ಕೆಂಡದ ಮೇಲೆ ದಶಾಂಗವನ್ನು ಹಾಕಿ ಮಾರ್ಗಶೀರ್ಷಮಾಸದಲ್ಲಿ ದೇವರಿಗೆ ಧೂಪಾರತಿಯನ್ನು ತೋರಿಸುವವರ ದುರ್ಲಭವಾದ ಮನೋರಥಗಳನ್ನೆಲ್ಲ ನಾನು ಪೂರ್ಣ ಮಾಡುತ್ತೇನೆ. ದಶಾಂಗದಲ್ಲಿ ಕೆಳಗಿನ ಹತ್ತು ಬಗೆಯ ಪರಿಮಳ ವಸ್ತುಗಳನ್ನು ಕೂಡಿಸಿ ತಯಾರು ಮಾಡಬೇಕು.

**ಜಾಜೀ ಪುಷ್ಪಮಥೈಲಾ ಚ ಗುಗ್ಗುಲಶ್ಚ ಹರೀತರೇ**
**ಕೂಟಃ ಸರ್ಜರಸಶ್ಚೈವ ಗುಡಃ ಶೈಲಾಚ್ಛಡಸ್ತಥಾ**

ಮಲ್ಲಿಗೆ ಹೂವು, ಯಾಲಕ್ಕಿ, ಗುಗ್ಗುಳ, ಅಳಲೇಕಾಯಿ, ಕೂಟ ಎಂದರೆ ಮುರೆ ಎಂಬ ಸುಗಂಧಿವಸ್ತು, ರಾಳ, ಬೆಲ್ಲ ಚ್ಛಡಚರಿ ಮತ್ತು ವಜ್ರನಖೀ ಎಂಬ ಸುಗಂಧಿ ದ್ರವ್ಯ ಈ ಒಂಬತ್ತು ಪದಾರ್ಥಗಳನ್ನು ಒಣಗಿಸಿ ಕುಟ್ಟಿ ಪುಡಿ ಮಾಡಿ ಧೂಪದೊಂದಿಗೆ ಕೂಡಿಸಿದರೆ ದಶಾಂಗವಾಗುವುದು. ಈ ದಶಾಂಗವನ್ನು ಕೆಂಡದ ಮೇಲೆ ಹಾಕಿ ಧೂಪಾರತಿಯನ್ನು ಬೆಳಗಿದವರಿಗೆ ನಾನು ಬಲ ಪುಷ್ಟಿ ಸ್ತ್ರೀ ಪುತ್ರರನ್ನು ಕೊಡುತ್ತೇನೆ. ಒಂದೇ ಬತ್ತಿಯಿಂದ ದೇವರಿಗೆ ಆರತಿಯನ್ನು ಬೆಳಗಬಾರದು. ತುಪ್ಪದಲ್ಲಿ ತೋಯಿಸಿದ ಅನೇಕ ಬತ್ತಿಗಳಿಂದ ಕೂಡಿದ ದೀಪವನ್ನು ದೇವರ ಮುಂದೆ ಹಚ್ಚಿ ಇಡಬೇಕು. ಮತ್ತು ಐದು ಇಪ್ಪತ್ತು ಐವತ್ತು ನೂರು ತುಪ್ಪದಲ್ಲಿ ತೋಯಿಸಿದ ಬತ್ತಿಗಳಿಂದ ದೇವರಿಗೆ ದೀಪಾರತಿಯನ್ನು ಬೆಳಗುವವರು, ಅಂಥ ಮಂಗಳಾರತಿಯನ್ನು ಭಕ್ತಿಯಿಂದ ನೋಡುವವರು ಕೋಟಿ ವರ್ಷಗಳವರೆಗೆ ಸ್ವರ್ಗದಲ್ಲಿ ವಾಸಮಾಡುತ್ತಾರೆ. ನನ್ನ ಎದುರು ಕರ್ಪೂರದ ಆರತಿಯನ್ನು ಬೆಳಗಿದವರು ಮಾಡಿದ ಪೂಜೆಯು ಮಂತ್ರಹೀನ ಕ್ರಿಯಾಹೀನವಾಗಿದ್ದರೂ ಕೂಡ ನಾನು ಅದನ್ನು ಪ್ರೀತಿಯಿಂದ ಸ್ವೀಕರಿಸಿ ಅವರಿಗೆ ಪೂಜೆಯ ಪೂರ್ಣಫಲವನ್ನು ಕೊಡುತ್ತೇನೆ. ಮಾರ್ಗಶೀರ್ಷಮಾಸದಲ್ಲಿ ಕರ್ಪುರದ ದೀಪವನ್ನು ದೇವರ ಮುಂದೆ ಹಚ್ಚಿ ಇಡುವವರು ಅಶ್ವಮೇಧ ಯಾಗದ ಫಲವನ್ನು ಹೊಂದುತ್ತಾರೆ.

ದೇವರಿಗೆ ಅಂದರೆ ನನಗೆ ವಿವಿಧ ವ್ಯಂಜನ ಪಕ್ವಾನ್ನ, ನೈವೇದ್ಯವನ್ನು ಸಮರ್ಪಿಸಿದ ಬಳಿಕ ಪಚ್ಚಕರ್ಪೂರ ಯಾಲಕ್ಕಿ ಕೇಶರ ಹಾಕಿದ ನೀರಿನಿಂದ ಆಚಮನವನ್ನು ನೀಡಬೇಕು. ಕೈ ತೊಳೆಯಲಿಕ್ಕಾಗಿ ಚಂದನವನ್ನು ಜಲವನ್ನು ಕೊಡಬೇಕು. ಮತ್ತೆ ದೇವರಿಗೆ ಬೊಗಸೆ ತುಂಬ ಹೂಗಳನ್ನು ಏರಿಸಿ ಕರ್ಪೂರದ ಆರತಿಯನ್ನು ಬೆಳಗಬೇಕು. ಕಿರೀಟ ಆಭರಣಗಳನ್ನು ಇರಿಸಿ, ಛತ್ರವನ್ನು ಹಿಡಿದು, ಚಾಮರವನ್ನು ಬೀಸಿ, ಸ್ತೋತ್ರವನ್ನು ಮಾಡಬೇಕು ಮತ್ತು ಮನಸ್ಸಿನಲ್ಲಿ ಪ್ರಸನ್ನ ಮುಖನಾದ ಶ್ರೀಹರಿಯು ನನಗೆ ಸಮ್ಮುಖನಾಗಿ ನಿಂತು ನನ್ನ ಮೇಲೆ ಅನುಗ್ರಹ ದೃಷ್ಟಿಯನ್ನು ಬೀರುತ್ತಿದ್ದಾನೆ ಎಂದು ಭಾವಿಸಿ ಧ್ಯಾನವನ್ನು ಮಾಡಬೇಕು. ಹೀಗೆ ಧ್ಯಾನ ಮಾಡುತ್ತಲೇ ನೂರಾ ಎಂಟು ಸಲ ಅಷ್ಟಾಕ್ಷರ ಮಂತ್ರ ಜಪವನ್ನು ಮಾಡಿ ವೇದ ಪುರಾಣಗಳಲ್ಲಿಯ ಮಂತ್ರಗಳಿಂದ ಭಗವಂತನ ಸ್ತವನವನ್ನು ಪಠಿಸಬೇಕು. ದೇವರ ಸ್ತೋತ್ರ ಮಂತ್ರಗಳನ್ನು ಹೇಳುವಾಗ ಎಂಥ ಪಂಡಿತನಾದರೂ ಕೂಡ ಓಡಾಡುತ್ತ ಅಥವಾ ನಗುತ್ತ ಆಚೀಚೆ ನೋಡುತ್ತ ಕಾಲಿನಿಂದ ಕಾಲನ್ನು ತುಳಿಯುತ್ತ ಅಥವಾ ಕೈಯನ್ನು ತಲೆಯ ಮೇಲೆ ಇಟ್ಟುಕೊಂಡು ಅಥವಾ ನಿಂತುಕೊಂಡು ಮತ್ತು ಚಂಚಲ ಮನಸ್ಸಿನಿಂದ ಮಂತ್ರಸ್ತೋತ್ರಗಳನ್ನು ಹೇಳಬಾರದು. ಜಪಮಾಡುವಾಗಲೂ ವ್ರತ, ಹೋಮ, ಪೂಜೆ ಮಾಡುವಾಗಲೂ ಬೇರೊಬ್ಬರ ಕೂಡ ಮಾತನಾಡಬಾರದು.

ಮಾರ್ಗಶೀರ್ಷ ಮಾಸದಲ್ಲಿ ವಿಷ್ಣುಸಹಸ್ರನಾಮವನ್ನು ಪಠಿಸುತ್ತ ಅಥವಾ ರಾಮಕೃಷ್ಣ ಗೋವಿಂದ ಮುಂತಾದ ಶ್ರೀಹರಿಯ ಯಾವುದಾದರೂ ಒಂದು ನಾಮವನ್ನು ಬಾಯಿಯಿಂದ ಉಚ್ಚರಿಸುತ್ತ ದೇವರಿಗೆ ೧೦೮ ಪ್ರದಕ್ಷಿಣೆ ಹಾಕಿದವರು ಸಂಪೂರ್ಣ ಯಜ್ಞದ ಅನುಷ್ಠಾನ ಮಾಡಿದ ಪುಣ್ಯವನ್ನು ಪಡೆಯುತ್ತಾರೆ.

ನನ್ನ ಪ್ರೀತಿಯ ಪುತ್ರನಾದ ಬ್ರಹ್ಮನೇ, ನಿನಗೆ ಇನ್ನೊಂದು ರಹಸ್ಯವಾದ ವಿಷಯವನ್ನು ಹೇಳುತ್ತೇನೆ ಕೇಳು. ನಾನು ನಂದಗೋಕುಲದಲ್ಲಿ ಇದ್ದಾಗ ಮನೆಯಲ್ಲಿಯ ಹಾಲಿನ ಗಡಿಗೆ ಮೊಸರಿನ ಮಡಿಕೆಗಳನ್ನು ಒಡೆದು ಹಾಕಿದ್ದೆ. ಆಗ ನನ್ನ ತಾಯಿಯಾದ ಯಶೋದಾ ದೇವಿಯು ನನ್ನ ಹೊಟ್ಟೆಗೆ ಹಗ್ಗವನ್ನು ಬಿಗಿದು ನನ್ನನ್ನು ಎಳೆದುಕೊಂಡು ಹೋಗಿ ಒಂದು ಒರಳಿಗೆ ಕಟ್ಟಿದ್ದಳು. ಆ ಒರಳನ್ನು ನಾನು ಹಾಗೆಯೇ ಎಳೆಯುತ್ತ ತೆಗೆದುಕೊಂಡು ಹೋಗಿ ಮರವಾಗಿ ನಿಂತುಕೊಂಡ ನಳಕೂಬರರನ್ನು ಉದ್ಧರಿಸಿದ್ದೆ. ಹೊಟ್ಟೆಗೆ ಕಟ್ಟಿದ ಹಗ್ಗದಿಂದ ಒರಳನ್ನು ಜಗುತ್ತ ಹೋದದ್ದರಿಂದ ನನ್ನ ಉದರದ ಮೇಲೆ ಆ ಹಗ್ಗದ ಗೆರೆ ಅಥವಾ ಕಡಿಗಳು ಬಿದ್ದವು. ಅಂದಿನಿಂದ ನನಗೆ ದಾಮೋದರ ಎಂಬ ಹೆಸರು ಬಂದಿತು. ಈ ದಾಮೋದರ ಎಂಬ ಹೆಸರು ನನಗೆ ನನ್ನ ತಾಯಿಯು ನನಗೆ ಶಿಕ್ಷೆ ವಿಧಿಸಿದ ಪ್ರೀತಿಯ ಪ್ರಸಂಗವನ್ನು ನೆನಪಿಗೆ ತರುವದರಿಂದ ಅತ್ಯಂತ ಪ್ರೀತ್ಯಾಸ್ಪದವಾಗಿದೆ. ಪ್ರತಿದಿನವೂ ಸೂರ್ಯೋದಯ ಕಾಲದಲ್ಲಿ ಏಕಾಗ್ರಚಿತ್ತದಿಂದ ''ಓಂ ನಮೋ ದಾಮೋದರಾಯ'' ಎಂಬ ಮಂತ್ರವನ್ನು ಮಡಿಯಿಂದ ಶುಚಿರ್ಭೂತನಾಗಿ ಮೂರು ಸಾವಿರ ಬಾರಿ ಜಪವನ್ನು ಮಾಡಬೇಕು. ಹೀಗೆ ಪ್ರತಿದಿನವೂ ತಪ್ಪದೇ ಜಪಮಾಡುತ್ತಾ ಈ ದಾಮೋದರ ಮಂತ್ರದ ಮೂರು ಲಕ್ಷ ಐವತ್ತು ಸಾವಿರ ಜಪಗಳು ಆದ ಬಳಿಕ ಇದರ ಉದ್ಯಾಪನೆಯನ್ನು ಮಾಡಬೇಕು. ಮತ್ತು ದಶಾಂಶ ಹೋಮ, ತರ್ಪಣ, ಬ್ರಾಹ್ಮಣ ಭೋಜನ ಮುಂತಾದವುಗಳನ್ನು ಭಕ್ತಿಯಿಂದ ಅನುಷ್ಠಾನ ಮಾಡುವವರು ನನ್ನ ವಿಶೇಷ ಅನುಗ್ರಹಕ್ಕೆ ಪಾತ್ರರಾಗುವರು. ''ಓಂ ದಾಮೋದರಾಯ ನಮಃ'' ಈ ಮಂತ್ರವನ್ನು ಜಪಿಸುತ್ತಾ, ದೇವರಿಗೆ ಪ್ರದಕ್ಷಿಣೆ ಹಾಗೂ ದಂಡಪ್ರಣಾಮಗಳನ್ನು ಅಥವಾ ಸಾಷ್ಟಾಂಗ ನಮಸ್ಕಾರಗಳನ್ನು ದೇವರಿಗೆ ಸಮರ್ಪಿಸಬೇಕು.

**ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ**
**ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಉಚ್ಯತೇ**

ಎರಡೂ ಕೈ ಕಾಲು ಮಂಡೆಗಳನ್ನು ಉದ್ದಕ್ಕೆ ನೀಡಿ ನೆಲಕ್ಕೆ ಊರಿದ ಎದೆ, ತಲೆ, ಮನಸ್ಸು ಮತ್ತು ಮುಂತಾದ ಎಂಟು ಅಂಗಗಳನ್ನು ನೆಲಕ್ಕೆ ಹಚ್ಚಿ ನಮಸ್ಕಾರ ಮಾಡುವದಕ್ಕೆ ಅಷ್ಟಾಂಗ ನಮಸ್ಕಾರ ಎಂದು ಹೇಳುತ್ತಾರೆ. ತನ್ನ ತಲೆಯನ್ನು ನನ್ನ ಚರಣಗಳ ಮೇಲೆ ಇಟ್ಟು ಮಾನವನು ಹೀಗೆ ಪ್ರಾರ್ಥನೆಯನ್ನು ಮಾಡಬೇಕು.

**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।**
**ಯತ್ ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥**

ಜನಾರ್ದನನೇ, ನನಗೆ ಮಂತ್ರ ಬರುವದಿಲ್ಲ, ತಂತ್ರ ಗೊತ್ತಿಲ್ಲ, ನಿನ್ನಲ್ಲಿ ಇರಬೇಕಾದಷ್ಟು ಭಕ್ತಿಯೂ ಇರುವದಿಲ್ಲ. ಆದರೂ ನಾನು ಯಥಾಶಕ್ತಿ ನಿನ್ನ ಪೂಜೆಯನ್ನು ಮಾಡಿದ್ದೇನೆ. ಇದೆಲ್ಲವೂ ನಿನ್ನ ಆಶೀರ್ವಾದದಿಂದ ಪರಿಪೂರ್ಣವಾಗಲಿ. ನನ್ನ ಪೂಜೆಯು ಪೂರ್ಣವಾಗಿ ನಿನಗೇ ಸಲ್ಲಲಿ ಎಂದು ಪ್ರಾರ್ಥನೆಯನ್ನು ಮಾಡಿಕೊಳ್ಳಬೇಕು.

ನನಗೆ ಪ್ರೀತ್ಯಾಸ್ಪದವಾದ ಸ್ತೋತ್ರಗಳು ಐದು. ಭಗವದ್ಗೀತಾ, ವಿಷ್ಣು ಸಹಸ್ರನಾಮ. ಭೀಷ್ಮಸ್ತವರಾಜ, ಗಜೇಂದ್ರಮೋಕ್ಷ, ಮನುಸ್ಮೃತಿ, ಈ ಐದು ಸ್ತೋತ್ರಗಳನ್ನು ಕೊನೆಗೆ ಇವುಗಳಲ್ಲಿ ಮುಖ್ಯವಾಗಿ ಗೀತಾ, ವಿಷ್ಣು ಸಹಸ್ರನಾಮಗಳನ್ನು ಪಠಿಸಿ ಪಾರಾಯಣ ಮಾಡಿದವರ ಮೇಲೆ ನಾನು ಪ್ರಸನ್ನನಾಗುತ್ತೇನೆ. ಒಂದು ಹನಿ ಸಾಲಿಗ್ರಾಮ ಶಿಲೆಯ ನೀರನ್ನು ಕುಡಿದರೂ ಕೂಡ ಆ ಮನುಷ್ಯನು ಮೋಕ್ಷಕ್ಕೆ ಹೋಗುತ್ತಾನೆ. ಸಾಲಿಗ್ರಾಮ ಶಿಲೆಯ ಪಾದೋದಕವನ್ನು ತಲೆಯ ಮೇಲೆ ಧರಿಸಿದವನೂ ಬಾಯಿಂದ ಕುಡಿದವನೂ ಯಾವಾಗಲೂ ಪರಮ ಪವಿತ್ರ. ಇಂಥ ಮನುಷ್ಯನಿಗ ಸೂತಕವು ಕೂಡ ಆಗುವದಿಲ್ಲ. ಮರಣ ಕಾಲದಲ್ಲಿ ಭಗವಂತನ ಈ ಪಾದೋದಕವನ್ನು ಕುಡಿದವರು ಅಥವಾ ಬಂಧು ಬಾಂಧವರಿಂದ ಒತ್ತಾಯದಿಂದ ಕುಡಿಸಲ್ಪಟ್ಟವರು ಅತ್ಯುತ್ತಮವಾದ ಸದ್ಗತಿಯನ್ನು ಹೊಂದುತ್ತಾರೆ.

## ವೀರಬಾಹು ಮಹಾರಾಜನ ಪೂರ್ವ ಜನ್ಮದ ವೃತ್ತಾಂತ

**ಭಗವಂತ:-** ಶಾರದಾಪತಿಯೇ! ಪೂರ್ವಕಾಲದಲ್ಲಿ ಕಾಂಪಿಲ್ಯ ನಗರದಲ್ಲಿ ವೀರಬಾಹು ಎಂಬ ಹೆಸರಿನ ಒಬ್ಬ ರಾಜನು ಆಗಿಹೋದನು. ಅವನು ತನ್ನ ಹೆಸರಿಗೆ ತಕ್ಕಂತೆ ಹೊರಗಿನ ವೈರಿಗಳನ್ನೆಲ್ಲ ಗೆದ್ದಿದ್ದ. ಅಂತರಂಗದ ವೈರಿಗಳಾದ ಕಾಮ ಕ್ರೋಧಗಳ ಮೇಲೂ ಗೆಲುವನ್ನು ಸಾಧಿಸಿದ್ದ. ಸತ್ಯಅವನ ನಿತ್ಯ ವ್ರತ. ಬ್ರಹ್ಮಜ್ಞಾನ ಅವನ ಸಾಧನೆ. ಭಕ್ತಿ ಅವನ ಸಿದ್ಧಿ. ಅವನ ಸ್ವಭಾವ ಭೂತದಯೆ, ಹರಿಕಥಾಶ್ರವಣ ಅವನ ಹವ್ಯಾಸ. ಸುಂದರಿಯಾದ ಮಡದಿಯು ಆ ರಾಜರ್ಷಿಗೆ ತಕ್ಕವಳಾದ ಧರ್ಮಪತ್ನಿ. ಆ ರಾಜದಂಪತಿಗಳಿಬ್ಬರೂ ನನ್ನಲ್ಲಿಯೇ ನಿಷ್ಠರು. ಭಕ್ತಶ್ರೇಷ್ಠರು. ವಿಷ್ಣುವಿನ ಹೊರತು ಬೇರೆ ದೇವರ ಹೆಸರೇ ಗೊತ್ತಿರಲಿಲ್ಲ ಆ ರಾಜರ್ಷಿಗೆ.

ಒಂದು ದಿನ ಅಧ್ಯಾತ್ಮನಿಷ್ಠನಾದ ಆ ಅರಸನ ಮನೆಗೆ ಮಹಾತ್ಮರಾದ ಭಾರದ್ವಾಜ ಮಹರ್ಷಿಗಳು ಆಗಮಿಸಿದರು. ಅವರನ್ನು ಕಂಡ ಕೂಡಲೇ ಸಾಷ್ಟಾಂಗ ಪ್ರಣಾಮ ಮಾಡಿದ ವೀರಬಾಹು. ಭಕ್ತಿಯಿಂದ ಆಸನವನ್ನು ತಾನೇ ಎದ್ದು ಬಂದು ನೀಡಿದ. ಕೈಜೋಡಿಸಿ ವಿನಯದಿಂದ ನುಡಿದ- ''ಬ್ರಹ್ಮರ್ಷಿಗಳೇ! ನಾನು ಇಂದು ಧನ್ಯನಾದೆ ತಮ್ಮ ದರ್ಶನದಿಂದ. ಸಫಲವಾಯಿತು ನನ್ನ ಜನ್ಮ. ನಿಮ್ಮಂಥ ಯೋಗಿರಾಜರ ಆಗಮನ ನನ್ನ ಮೇಲಿರುವ ಶ್ರೀಹರಿಯ ಪರಮಾನುಗ್ರಹದ ದ್ಯೋತಕ. ನಿಮ್ಮ ಪಾದಸ್ಪರ್ಶದಿಂದ ನನ್ನ ಮನೆ ಪವಿತ್ರ. ಮನ ಪ್ರಸನ್ನ. ತಮ್ಮ ಕರುಣಾ ದೃಷ್ಟಿಪಾತ ಮಾತ್ರದಿಂದಲೇ ನನ್ನ ಜನ್ಮಾಂತರದ ಹಾಗೂ ಈ ಜನ್ಮದ ಪಾಪಗಳೆಲ್ಲವೂ ಕರಗಿ ಹೋದವು. ಇಂದು ನಾನು ನಿಜವಾಗಿಯೂ ಪಾಪ ಮುಕ್ತ ಪುಣ್ಯಯುಕ್ತ.

**ಭಾರದ್ವಾಜ:-** ರಾಜನ್! ನೀನು ಭಗವಂತನ ಏಕಾಂತ ಭಕ್ತ. ನಿನ್ನಂಥ ಪುಣ್ಯಪುರುಷನಿಂದ ಈ ಭೂಮಿಯು ಪವಿತ್ರಿತ. ಯಾವ ರಾಜ್ಯದಲ್ಲಿ ವಿಷ್ಣು ಭಕ್ತರು ಇರುವದಿಲ್ಲವೋ ಅಂಥ ರಾಜ್ಯದಲ್ಲಿ ಯಾರೂ ವಾಸಮಾಡಕೂಡದು. ಅದಕ್ಕಿಂತಲೂ ಕಾಡಿನಲ್ಲಿ ಯಾವುದಾದರೂ ತೀರ್ಥದ ದಂಡೆಯ ಮೇಲೆ ವಾಸಿಸುವದೇ ಮೇಲು. ವಿಷ್ಣುಭಕ್ತರಾದ ರಾಜರು ಪೃಥ್ವಿಯನ್ನು ಆಳುತ್ತಿದ್ದರೆ ಆ ರಾಜ್ಯವು ವೈಕುಂಠಕ್ಕೆ ಸಮಾನ ಎಂದು ಎನಿಸುತ್ತದೆ. ಮಂತ್ರವಿಲ್ಲದೆ ಆಹುತಿ, ಕರು ಸತ್ತ ಹಸುವಿನ ಹಾಲು, ದಶಮಿ ತಿಥಿಯಿಂದ ವಿದ್ಧವಾದ ಏಕಾದಶಿ, ಉದ್ದ ಕೂದಲುಗಳನ್ನು ಬೆಳೆಸಿದ ವಿಧವೆ, ಸ್ನಾನವಿಲ್ಲದೆ ಆಚರಿಸಿದ ವ್ರತ ಇವೆಲ್ಲವೂ ನಿಂದನೀಯ ಮತ್ತು ತ್ಯಾಜ್ಯ. ಅದರಂತೆ ವಿಷ್ಣುಭಕ್ತರು ಇಲ್ಲದ

ಸಾಮ್ರಾಜ್ಯವು ನಿಂದ್ಯವೂ, ವರ್ಜ್ಯವೂ, ಹೇಯವೂ ಆಗಿರುತ್ತದೆ. ನಿನ್ನಂಥ ವೈಷ್ಣವೋತ್ತಮನಾದ ರಾಜನ ರಾಜ್ಯದಲ್ಲಿ ನಾವು ವಾಸಿಸುವದೂ ಒಂದು ಹೆಮ್ಮೆಯ ಸಂಗತಿ. ಹರ್ಷದ ವಿಷಯ. ಇಂದು ನಿನ್ನನ್ನು ನೋಡಿದ ನನ್ನ ಕಣ್ಣು, ನಿನ್ನೊಡನೆ ಮಾತನಾಡಿದ ನನ್ನ ನಾಲಿಗೆ, ನಿನ್ನ ಸಂಪರ್ಕ ಹೊಂದಿದ ಈ ನನ್ನ ದೇಹ ಎಲ್ಲವೂ ಪವಿತ್ರವಾಗಿವೆ. ನಿನಗೆ ಕಲ್ಯಾಣವಾಗಲಿ'' ಎಂದು ನುಡಿದರು.

ಇದೇ ಸಮಯದಲ್ಲಿ ವೀರಬಾಹು ಮಹಾರಾಜನ ಪ್ರೇಯಸಿಯೂ ಪಟ್ಟದ ಅರಸಿಯೂ ಆದ ಕಾಂತಿಮತೀ ಮಹಾರಾಣಿಯು ಅಲ್ಲಿಗೆ ಬಂದಳು. ಭಕ್ತಿಯಿಂದ ವಂದಿಸಿದಳು ಭಾರದ್ವಾಜರ ಚರಣಕಮಲಗಳಿಗೆ. ಅನಂತರ ವೀರಬಾಹು ಮಹಾರಾಜನು ಮುನಿಗಳನ್ನು ಕುರಿತು ಪ್ರಶ್ನೆಮಾಡಿದ- ''ಮುನಿ ಮಹೋದಯರೇ, ನನಗೆ ಈ ಜನ್ಮದಲ್ಲಿ ವಿಶಾಲವಾದ ಸಾಮ್ರಾಜ್ಯ ದೊರಕಿದೆ. ಅದಕ್ಕೆ ಎಲ್ಲಿಯೂ ಎಲ್ಲೆ ಇಲ್ಲ. ಒಂದು ಕಡೆಯೂ ಮುಳ್ಳು ಇಲ್ಲ. ನಮಗೆ ಒಬ್ಬ ಮಗನು ಇರುತ್ತಾನೆ. ಅವನಿಗೆ, ತಂದೆಗೆ ಎದುರು ಮಾತನಾಡಿ ಗೊತ್ತೇ ಇಲ್ಲ. ನನಗೆ ಒಬ್ಬ ಮಡದಿ ಇರುತ್ತಾಳೆ. ಈ ಕಾಂತಿಮತಿಗೆ ಪತಿಯ ಹೊರತು ಬೇರೆ ದೇವರೇ ಇಲ್ಲ. ಪತಿಸೇವೆಯ ಹೊರತು ಬೇರೆ ಧರ್ಮವೇ ಇಲ್ಲ. ಬಯಸಿದ ಭಾಗ್ಯವೆಲ್ಲವೂ ನನ್ನ ಅಡಿಯಲ್ಲಿ. ನೆನೆದ ಇಷ್ಟಾರ್ಥಗಳೆಲ್ಲವೂ ನನ್ನ ಉಡಿಯಲ್ಲಿ. ಇಂಥ ಅಪರೂಪದ ಸೌಭಾಗ್ಯ ನನ್ನ ಸ್ವತ್ತಾಗಬೇಕಾದರೆ ಪೂರ್ವಜನ್ಮದಲ್ಲಿ ನಾನು ಏನು ಇದ್ದೆ? ಈ ನನ್ನ ಸೌಭಾಗ್ಯವತಿಯೂ ಜನ್ಮಾಂತರದಲ್ಲಿ ಏನು ಆಗಿದ್ದಳು? ನಾವಿಬ್ಬರು ಯಾವ ಪುಣ್ಯ ಮಾಡಿದ್ದೆವು?

**ಭಾರದ್ವಾಜ:-** ರಾಜನೇ, ನೀನು ಕಳೆದ ಜನ್ಮದಲ್ಲಿ ಅತ್ಯಂತ ಕ್ಷುದ್ರ. ದಟ್ಟದರಿದ್ರ, ದುರಾಚಾರಿ ಶೂದ್ರ. ಆಗ ನೀನು ಮಾಡಿದ ಹಿಂಸೆಗಳಿಗೆ ಲೆಕ್ಕವಿಲ್ಲ. ಆಗ ದುರಾಚಾರವೇ ನಿನ್ನ ಛಲ. ಉಚ್ಛೃಂಖಲ ಪ್ರವೃತ್ತಿಯೇ ನಿನ್ನ ಬಲ. ವ್ಯಭಿಚಾರ ನಿನ್ನ ಸ್ವಭಾವ. ಕೃತಘ್ನತೆ ನಿನ್ನ ಸ್ವರೂಪ. ನಾಸ್ತಿಕ್ಯ ನಿನ್ನ ಹೆಮ್ಮೆ. ಆಗ ನೀನು ಸರ್ವ ದುರ್ಗುಣ ಸಂಪನ್ನ. ಆದರೆ ಇಂಥ ದುಷ್ಟ ಜನ್ಮದಲ್ಲಿಯೂ ಈ ಕಾಂತಿಮತಿಯು ನಿನಗೆ ಪತ್ನಿಯಾಗಿದ್ದುದು ನಿನ್ನ ಸೌಭಾಗ್ಯ. ನೀನು ಪರಮ ಪಾಪಿಷ್ಠನಾಗಿದ್ದರೂ ಆಗ ನಿನ್ನ ಸೇವೆಯನ್ನು ಈ ಪತಿವ್ರತೆಯು ಅತ್ಯಂತ ನಿಷ್ಠೆಯಿಂದ ಮಾಡುತ್ತಿದ್ದಳು. ಆಗ ನೀನು ಮಾಡದ ಪಾಪವಿಲ್ಲ. ಆಚರಿಸದ ದುಷ್ಕಾರ್ಯವಿಲ್ಲ.

ಅದರಿಂದ ನಿನ್ನ ಮಿತ್ರರು ತ್ಯಜಿಸಿದರು ನಿನ್ನನ್ನು. ದೂರ ಸರಿದರು ಬಂಧು ಬಳಗದವರು. ಹಿರಿಯರು ಮಾಡಿಟ್ಟ ಹಣವೆಲ್ಲವೂ ಕರಗಿ ಹೋಯಿತು ನಿನ್ನ ಅವ್ಯಾಪಾರ ದುರ್ವ್ಯಾಪಾರಗಳಿಂದ. ಎಲ್ಲರೂ ನಿನ್ನನ್ನು ಬಿಟ್ಟರೂ ಈ ನಿನ್ನ ಸಾಧ್ವೀಮಣಿ ಮಾತ್ರ ನಿನ್ನನ್ನು ತೊರೆಯಲಿಲ್ಲ. ಕಡುಬಡತನದಲ್ಲಿ ಕೊರಗಿ ಸೊರಗಿ ಕ್ಷೀಣಳಾದರೂ ನಿನ್ನ ಸೇವೆಯನ್ನು ಮಾತ್ರ ಅವಳು ಬಿಡಲಿಲ್ಲ. ಆದರೆ ಎಲ್ಲ ಕಡೆಯಿಂದಲೂ ಧಿಕ್ಕಾರ, ಅಪಮಾನ, ಸೋಲುಗಳನ್ನು ಉಂಡ ನೀನು ಮಾತ್ರ ಮನೆಮಾರು ಎಲ್ಲವನ್ನೂ ಬಿಟ್ಟು ಕಾಡನ್ನು ಈ ಮಡದಿಯೊಡನೆ ಸೇರಿದೆ. ಅಲ್ಲಿರುವ ಅನೇಕ ಪ್ರಾಣಿಗಳನ್ನು ಕೊಂದು ಅದರಿಂದ ಬದುಕಿದೆ. ಹೀಗೆ ಅನೇಕ ವರ್ಷಗಳು ಕಳೆದವು. ಒಂದು ದಿನ ಓರ್ವ ಮುನಿಯು ದಾರಿತಪ್ಪಿ ಆ ಬೆಂಗಾಡಿಗೆ ಬಂದನು. ಅವನ ಹೆಸರು ದೇವಶರ್ಮ. ಕಾಡುಮೇಡುಗಳಲ್ಲಿ ತಿರುತಿರುಗಿ, ವನ ವನ ಅಂಡಲೆದು ಬಳಲಿ ಬೆಂಡಾದ ಆ ಬ್ರಾಹ್ಮಣನು ಹಸಿವೆಯಿಂದ ಕೆಳಗೆ ಕುಸಿದುಬಿದ್ದ

ಕಾಡಿನಲ್ಲಿ. ಮಧ್ಯಾಹ್ನದ ಬಿಸಿಲು. ಸೂರ್ಯನು ಕೆಂಗಡಿಗಳನ್ನೆ ಕಿರಣರೂಪದಿಂದ ತಿರೆಯ ಕಡೆ ತೂರುತ್ತಲಿದ್ದ. ಆ ಉರಿಬಿಸಿಲಿನಲ್ಲಿ ನೆಲಕ್ಕೆ ಉರುಳಿಬಿದ್ದ ದೇವಶರ್ಮ. ಅವನನ್ನು ನೋಡಿ ನಿನಗೆ ಕರುಣೆ ಬಂದಿತು. ನೀನು ಅವನನ್ನು ಕೈಹಿಡಿದು ನಡೆಸಿದೆ. ನಿನ್ನ ಮನೆಗೆ ಕರೆದುಕೊಂಡು ಬಂದೆ. ನಿನ್ನ ಮನೆಯ ಎದುರು ಒಂದು ತಿಳಿನೀರಿನ ಹೊಕ್ಕರಣೆ. ಅದರ ತುಂಬ ತಾವರೆಗಳು. ಸರೋವರದ ದಂಡೆಯ ಮೇಲೆ ಸುಗಂಧಿ ಹೂಗಳನ್ನು ಹೊದಿಸಿದಂತಿರುವ ಅನೇಕ ಲತಾಕುಂಜ ನಿಕುಂಜಗಳು.

ನೀನು ಆ ಬ್ರಾಹ್ಮಣನನ್ನು ಕೈಹಿಡಿದು ಆ ಸರೋವರದ ಬಳಿಗೆ ಕರೆತಂದೆ. ಸರೋವರದ ತೀರದ ಮರದಡಿಯ ತಂಪಿಡಿದ ತಾಣದಲ್ಲಿ ನೀನು ಅವರನ್ನು ಕೂಡಿಸಿದೆ. ಅಲ್ಲಿಯ ತಣ್ಣೆಳಲಿನಲ್ಲಿ ಕುಳಿತು ಅಲ್ಲಿ ತೀಡುವ ತಂಬೆಲರಿನಿಂದ ಚೇತರಿಸಿಕೊಂಡ ಆ ಬ್ರಾಹ್ಮಣ. ಎದ್ದು ಆ ಹೊಕ್ಕರಣೆಯಲ್ಲಿ ಸ್ನಾನಮಾಡಿದ. ದೇವರ ಪೂಜೆಗೈದ, ಪಿತೃಗಳಿಗೆ ತರ್ಪಣ ನೀಡಿ ಅನಂತರ ತಾನು ಆ ಕೊಳದ ತಿಳಿನೀರನ್ನು ಕುಡಿದ. ಆಗ ಶೂದ್ರನಾದ ನೀನು ಈ ನಿನ್ನ ಹೆಂಡತಿಯೊಡನೆ ಬಂದು ಆ ಮುನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದೆ ಮತ್ತು ಭಕ್ತಿಯಿಂದ ಬೇಡಿಕೊಂಡೆ- ''ಪೂಜ್ಯರೇ, ಇಂದು ನೀವು ನನ್ನ ಅತಿಥಿಗಳು. ನಮ್ಮ ಉದ್ಧಾರಕ್ಕಾಗಿಯೇ ಇಂದು ನಿಮ್ಮ ಆಗಮನ ಆಗಿದೆ. ತಮ್ಮ ದರ್ಶನ ಮಾತ್ರದಿಂದಲೇ ನಮ್ಮ ಎಲ್ಲ ಪಾಪಗಳು ನಷ್ಟವಾಗಿ ಹೋದವು.'' ಅವರಿಗೆ ಹೀಗೆ ಹೇಳಿ ನೀನು ನಿನ್ನ ಮಡದಿಗೆ ಆಜ್ಞೆ ಮಾಡಿದೆ.- ''ಪ್ರಿಯೆ, ಇಂದು ನಮ್ಮ ಮನೆಗೆ ಬಂದವನು ಕೇವಲ ಅತಿಥಿಯಲ್ಲ, ಸಾಕ್ಷಾತ್ ದೇವರು. ಇವರಿಗಾಗಿ ನೀನು ಈಗ ರುಚಿಕರವಾದ ಮಾಗಿ ಹಣ್ಣಾದ ಒಳ್ಳೆಯ ಫಲಗಳನ್ನು ತಂದು ಕೊಡು.''

**ದೇವಶರ್ಮ ಬ್ರಾಹ್ಮಣ:-** ವತ್ಸ, ನಾನು ಹಾಗೆ ಬೇಕುಬೇಕಾದಲ್ಲಿ ಉಪಹಾರವನ್ನು ಸ್ವೀಕರಿಸುವುದಿಲ್ಲ. ನಿನ್ನ ಜಾತಿ ಯಾವುದು? ಕುಲ ಯಾವುದು? ಎಂಬುದನ್ನು ಮೊದಲು ಹೇಳು. ಕುಲ, ಜಾತಿ ಶೀಲಸ್ವಭಾವಗಳು ತಿಳಿಯದೇ ನಾನು ಏನನ್ನೂ ತೆಗೆದುಕೊಳ್ಳುವದಿಲ್ಲ.

**ಶೂದ್ರ:-** ಪೂಜ್ಯರೆ, ನಾನೊಬ್ಬ ಶೂದ್ರ, ನಿಮ್ಮ ಭಕ್ತ. ಇವಳು ನನ್ನ ಕೈ ಹಿಡಿದ ಮಡದಿ. ದೇವಭಕ್ತಳು. ಧರ್ಮನಿಷ್ಠಳು ಗುರುಹಿರಿಯರ ಸೇವಕಳು.''

ನೀನು ಇಷ್ಟು ಹೇಳುವಷ್ಟರಲ್ಲಿ ಈ ನಿನ್ನ ಹೆಂಡತಿಯು ಬಗೆ ಬಗೆಯ ಹಣ್ಣು ಹಂಪಲಗಳನ್ನು ನೀಡಿದಳು. ಆ ಶೂದ್ರ ಸ್ತ್ರೀಯ ಪಾತಿವ್ರತ್ಯ ಹಾಗು ಅತಿಥಿ ಸೇವಾಭಾವವನ್ನು ಕಂಡು ಪರಿತುಷ್ಟನಾಗಿದ್ದ ಆ ಬ್ರಾಹ್ಮಣ ಅವಳು ನೀಡಿದ ಫಲಾಹಾರಗಳನ್ನು ಸ್ವೀಕರಿಸಿದ. ಸರೋವರದಲ್ಲಿಯ ತಣ್ಣೀರನ್ನು ಕುಡಿದು ಅವನ ಮನಸ್ಸು ಪ್ರಸನ್ನವಾಯಿತು. ಅನಂತರ ಆ ಬ್ರಾಹ್ಮಣನು ಒಂದು ಮರದಡಿಯಯಲ್ಲಿ ವಿಶ್ರಾಂತಿ ತೆಗೆದುಕೊಂಡ. ಆ ಬಳಿಕ ಶೂದ್ರನಾದ ನೀನು ಮಡದಿಯೊಡನೆ ಮನೆಗೆ ಹೋಗಿ ಭೋಜನ ಮಾಡಿದೆ. ಅನಂತರ ಮತ್ತೆ ಆ ಬ್ರಾಹ್ಮಣನ ಬಳಿಗೆ ಬಂದು ಕೇಳಿದೆ- ''ಮುನಿ ಶ್ರೇಷ್ಠರೇ! ತಾವು ಇಂಥ ಈ ನಿರ್ಮಾನುಷವಾದ ಭೀಕರ ವನಾಂತರಕ್ಕೆ ಏಕೆ ಬಂದಿರಿ? ಎಲ್ಲಿಂದ ಬಂದಿರಿ?

**ಬ್ರಾಹ್ಮಣ:-** ''ಮಹನೀಯ! ನಾನು ಪ್ರಯಾಗಕ್ಕೆ ಹೊರಟಿದ್ದೇನೆ. ಈ ಮಾರ್ಗವು ನನಗೆ ತೀರ ಅಪರಿಚಿತ. ದಾರಿ ತಪ್ಪಿ ಈ ಘೋರ ಕಾಡಿಗೆ ಬಂದು ಬಿದ್ದೆ. ಹಸಿವೆ

ಬಾಯಾರಿಕೆಗಳಿಂದ ಸೇದುತ್ತಲಿದ್ದವು ನನ್ನ ಪಂಚಪ್ರಾಣಗಳು. ನೀನು ಬಂದು ನನ್ನನ್ನು ಬದುಕಿಸಿದೆ. ನೀನು ಇಂದು ನನಗೆ ನಿನ್ನ ಈ ಮಡದಿಯೊಡನೆ ಪುನರ್ಜನ್ಮವನ್ನೇ ನೀಡಿದಂತಾಗಿದೆ. ನಿನಗೆ ನಾನು ಪ್ರತಿಯಾಗಿ ಏನು ಉಪಕಾರ ಮಾಡಲಿ ಹೇಳು.''

**ಶೂದ್ರ:-** ಪೂಜ್ಯರೇ, ಭೀಮರಾಜನು ಆಳುತ್ತಿರುವ ವಿದರ್ಭ ನಗರವು ನನ್ನ ವಾಸಸ್ಥಳ. ನಾನು ಮಹಾರಾಷ್ಟ್ರ ಪ್ರಾಂತದ ಪ್ರಜೆ. ಜಾತಿ ಶೂದ್ರ, ನನ್ನ ಸ್ವಭಾವ ಕ್ಷುದ್ರ. ನಾನೊಂದು ಪಾಪದ ಸಮುದ್ರ. ನಾನು ಜಾತಿ ಧರ್ಮ ವರ್ಣಧರ್ಮಗಳೆಲ್ಲನ್ನು ತೊರೆದು ಬಿಟ್ಟೆ. ಆದರಿಂದ ನನ್ನ ಬಂಧುಗಳೆಲ್ಲರೂ ನನ್ನನ್ನೇ ತೊರೆದು ಬಿಟ್ಟರು. ಆಗ ನಾನು ಈ ಮಡದಿಯೊಡನೆ ಕಾಡಿಗೆ ಓಡಿದೆ. ಬದುಕಲಿಕ್ಕಾಗಿ ಬೇಟೆಯಾಡಿದೆ. ಪ್ರತಿನಿತ್ಯವು ಜೀವಹಿಂಸೆ ಮಾಡಿದೆ. ಹೇಗೋ ಇವಗಳೊಡನೆ ಬದುಕಿ ಉಳಿದೆ. ಆದರೆ ಈಗ ನನಗೆ ಬಹಳೇ ಪಶ್ಚಾತ್ತಾಪ ಆಗಿದೆ. ಈ ನನ್ನ ಘೋರ ಜೀವನದ ಬಗ್ಗೆ ಜಿಗುಪ್ಸೆ ಮೂಡಿದೆ. ಪಶ್ಚಾತ್ತಾಪ ದಗ್ಧವಾದ ನನ್ನ ಮನಸ್ಸಿನಲ್ಲಿ ಈಗ ವೈರಾಗ್ಯ ಉದಿಸಿದೆ. ಶ್ರೀವಿಷ್ಣುವಿನಲ್ಲಿ ಉತ್ಕಟವಾದ ಭಕ್ತಿಯು ನನ್ನ ಅಂತಃಕರಣದಲ್ಲಿ ಈಗ ಉತ್ಪನ್ನವಾಗಿದೆ. ನಾವಿಬ್ಬರೂ ಈಗ ಮನೆಯಲ್ಲಿ ನಿತ್ಯವೂ ಹಗಲಿರುಳು ಹರಿನಾಮ ಸ್ಮರಣೆಯನ್ನು ಮಾಡುತ್ತಲಿದ್ದೇವೆ. ನನ್ನ ಜನ್ಮಾಂತರದ ಪುಣ್ಯದ ಪ್ರಭಾವದಿಂದಲೇ ತಾವು ಈಗ ಇಲ್ಲಿ ಆಗಮಿಸಿದ್ದೀರಿ. ತಾವು ದಯವಿಟ್ಟು ಈಗ ನನಗೂ ಈ ನನ್ನ ಹೆಂಡತಿಗೂ ಸನ್ಮಾರ್ಗವನ್ನು ತೋರಿಸಿರಿ. ಭಗವಾನ್ ಶ್ರೀವಿಷ್ಣುವಿನ ಮಹಿಮೆಯನ್ನು ಹೇಳಿರಿ. ನಮ್ಮ ಉದ್ಧಾರದ ದಾರಿಯನ್ನು ತೋರಿರಿ. ವಿಷ್ಣುಭಕ್ತಿಯ ಹೊರತು ನಮಗೆ ಏನೂ ಬೇಕಾಗಿಲ್ಲ. ತಮ್ಮಂಥ ವಿಷ್ಣುಭಕ್ತರ ಸಂಗ ಸಹವಾಸ ಮಾತ್ರ ಮೇಲಿಂದ ಮೇಲೆ ಆಗಲಿ.

**ದೇವಶರ್ಮ:-** ಶುದ್ಧ ಬುದ್ಧಿಯ ಶೂದ್ರ, ನೀನು ಹಿಂದೆ ಎಷ್ಟೋ ಪಾಪಕೃತ್ಯಗಳನ್ನು ಮಾಡಿರಬಹುದು.ಅವೆಲ್ಲವೂ ಈಗ ನಿನ್ನ ಮನಸ್ಸಿನಲ್ಲಿ ಉತ್ಪನ್ನವಾದ ಪಶ್ಚಾತ್ತಾಪದ ಅಗ್ನಿಯಿಂದ ದಗ್ಧವಾಗಿವೆ. ಆ ದುರಿತರಾಶಿ ಈಗ ಉಳಿದಿಲ್ಲ. ವಿಷ್ಣುವಿನಲ್ಲಿ ಶ್ರದ್ಧಾಬುದ್ಧಿ ಹುಟ್ಟಿದ್ದರಿಂದ ನೀನು ತೀರ್ಥಸ್ನಾನವಿಲ್ಲದೇ ನಿರ್ಮಲನಾಗಿರುವೆ. ಧರ್ಮಾನುಷ್ಠಾನ ವಿಲ್ಲದೇ ಪುಣ್ಯ ಪಡೆದಿರುವೆ. ಕೃಚ್ಛ್ರ, ಚಾಂದ್ರಾಯಣ ಮುಂತಾದ ಕಠಿಣ ವ್ರತಗಳನ್ನು ಆಚರಿಸದೇ ಪಾಪಮುಕ್ತನಾಗಿರುವೆ. ಇದೆಲ್ಲವೂ ಈಗ ನಿನ್ನ ಮನದಲ್ಲಿ ಹುಟ್ಟಿದ ಪಶ್ಚಾತ್ತಾಪ ಹಾಗೂ ವಿಷ್ಣುಭಕ್ತಿಯ ಪ್ರಭಾವ. ಹಸಿದು ಬಂದ ನನಗೆ ನೀವಿಬ್ಬರೂ ಒಳ್ಳೆಯ ಆತಿಥ್ಯವನ್ನು ನೀಡಿದಿರಿ. ಕಾಡಿನಲ್ಲಿ ಬಸವಳಿದು ಬಿದ್ದ ನನಗೆ ಪರಮ ಉಪಕಾರ ಮಾಡಿದಿರಿ. ಇದರಿಂದ ಮುಂದೆ ನಿಮಗೆ ಉತ್ತರೋತ್ತರ ಉತ್ಕರ್ಷ ಹಾಗೂ ಭೋಗ ಭಾಗ್ಯಗಳೂ, ಕೊನೆಗೆ ದಿವ್ಯ ಸದ್ಗತಿಯೂ ತಾನಾಗಿಯೇ ಪ್ರಾಪ್ತವಾಗುವವು'' ಎಂದು ಹೇಳಿ ಆ ದೇವಶರ್ಮ ಬ್ರಾಹ್ಮಣನು ತನ್ನ ಪ್ರಯಾಣದ ಯಾತ್ರೆಯನ್ನು ಮುಂದುವರೆಸಿದನು.

ರಾಜನೇ! ನೀನು ಜನ್ಮಾಂತರದಲ್ಲಿ ದುಷ್ಟ ಶೂದ್ರನಾದರೂ ದುರಾಚಾರಿಯಾದರೂ ಈ ಸಾಧ್ವೀಮಣಿಯ ಸಹವಾಸದಿಂದ ವಿಷ್ಣುಭಕ್ತನಾದೆ. ಅತಿಥಿ ಸೇವೆಗೈದೆ. ಪಶ್ಚಾತ್ತಾಪದಲ್ಲಿ ಬೆಂದೆ. ಆ ಜನ್ಮಾಂತರದ ನಿನ್ನ ಈ ಸತಿಯ ಪಾತಿವ್ರತ್ಯ ಪ್ರಭಾವ, ಪಶ್ಚಾತ್ತಾಪ, ಅತಿಥಿ ಸತ್ಕಾರ, ಹಾಗೂ ವಿಷ್ಣುಭಕ್ತಿ ಈ ಸಾಧನ ಚತುಷ್ಟಯದಿಂದ ನೀನು ಈಗ ಮಹಾರಾಜ ನಾಗಿಯೂ, ಈ ಕಾಂತಿಮತಿಯು ಮಹಾರಾಣಿಯಾಗಿಯೂ ಜನಿಸಿರುವಿರಿ. ನಿಮ್ಮಬ್ಬರ ಜನ್ಮಾಂತರ ವಿಷಯಕವಾದ ಪ್ರಶ್ನೆಗೆ ನಾನು ಈಗ ಉತ್ತರವನ್ನು ಕೊಟ್ಟು ಆಯಿತು.

**ರಾಜ:-** ಮುನಿಶ್ರೇಷ್ಠರೇ, ಸಂಪೂರ್ಣ ಏಕಾದಶಿಯ ಉತ್ತಮ ವಿಧಿ ಯಾವುದು? ಅದನ್ನು ನನಗೆ ಉಪದೇಶ ಮಾಡಿರಿ?

**ಭರದ್ವಾಜ:-** ರಾಜೋತ್ತಮ! ಮಾರ್ಗಶೀರ್ಷವೇ ಮೊದಲಾದ ಹನ್ನೆರಡು ತಿಂಗಳು ಗಳಲ್ಲಿಯೂ ಶುಕ್ಲಪಕ್ಷ ಕೃಷ್ಣಪಕ್ಷ ಎರಡೂ ಪಕ್ಷಗಳಲ್ಲಿಯೂ ಮಾನವರು ತಪ್ಪದೇ ಅಖಂಡ ಏಕಾದಶಿಯ ವ್ರತದ ಪಾಲನವನ್ನು ಮಾಡಬೇಕು. ದಶಮೀ ಏಕಾದಶೀ ಹಾಗೂ ದ್ವಾದಶಿ ಮೂರು ದಿನಗಳಲ್ಲಿ ಪಾಲಿಸಲ್ಪಡುವ ವ್ರತಕ್ಕೆ ಅಖಂಡ ಏಕಾದಶಿ ವ್ರತ ಎಂದು ಕರೆಯುತ್ತಾರೆ.

**''ದಶಮ್ಯಾಂ ಚೈವ ನಕ್ತಂ ಚ ಏಕಾದಶ್ಯಾಂ ಉಪೋಷಣಂ।**
**ದ್ವಾದಶ್ಯಾಮೇಕಭುಕ್ತಂ ಚ ಅಖಂಡಾ ಇತಿ ಕಥ್ಯತೇ ॥**

ದಶಮೀ ರಾತ್ರಿ ಉಪವಾಸ ಮಾಡಿ ಬ್ರಹ್ಮಚರ್ಯದಿಂದ ಇರಬೇಕು. ಏಕಾದಶಿ ಹಗಲು ರಾತ್ರಿ ಪೂರ್ಣ ಉಪವಾಸ ಇರಬೇಕು. ದ್ವಾದಶಿಯ ದಿನ ಬೆಳಿಗ್ಗೆ ಒಂದು ಹೊತ್ತು ಮಾತ್ರ ಪಾರಣೆಯ ಊಟ ಮಾಡಿ ಮತ್ತೆ ಅಂದು ರಾತ್ರಿ ಏನನ್ನೂ ತಿನ್ನಕೂಡದು. ಹೀಗೆ ಮೂರುದಿನ ಕೂಡಿ ಅಖಂಡ ಏಕಾದಶಿ ಎಂದು ಹೇಳುತ್ತಾರೆ. ದಶಮಿಯ ದಿನ ಕಂಚಿನ ಪಾತ್ರೆಯಲ್ಲಿ ಭೋಜನವೇ ಮೊದಲಾದ ಹತ್ತು ನಿಷಿದ್ಧವಾದವುಗಳನ್ನು ತ್ಯಜಿಸಬೇಕು.

**''ಕಾಂಸ್ಯಂ ಮಾಷಂ ಮಸೂರಾಂಶ್ಚ ಚಣಕಾನ್ ಕೋದ್ರವಾನ್ ತಥಾ**
**ಶಾಕಂ ಪರಾನ್ನಂ ಚ ಪುನರ್ಭೋಜನ ಮೈಥುನೇ ॥**
**ವಿಷ್ಣುಭಕ್ತೋ ನರೋ ಯಸ್ತು ದಶಮ್ಯಾಂ ದಶ ವರ್ಜಯೇತ್**

ಕಂಚಿನ ಪಾತ್ರೆಯಲ್ಲಿ ಭೋಜನ, ಉದ್ದು, ಚನ್ನಂಗಿ ಬೇಳೆ, ಕಡಲೆ, ಕೋದ್ರವ ಎಂಬ ಧಾನ್ಯ, ನಿಷಿದ್ಧ ತರಕಾರಿ, ಜೇನುತುಪ್ಪ, ಪರಾನ್ನ, ಎರಡನೇ ಹೊತ್ತು ಊಟ, ಸ್ತ್ರೀ ಸಹವಾಸ ಈ ಹತ್ತನ್ನೂ ವಿಷ್ಣುಭಕ್ತನಾದ ಮನುಷ್ಯನು ದಶಮಿ ದಿನದಂದು ವರ್ಜಿಸಬೇಕು. ಮತ್ತು ಏಕಾದಶಿ ದಿನದಂದು ಅನ್ನ ಭಕ್ಷಣ, ಜಲಪಾನ, ಹಿಂಸೆ, ಮೈಲಿಗೆ, ಸುಳ್ಳು ಮಾತನಾಡುವದು, ಎಲೆ ಅಡಿಕೆ ಜಗಿಯುವದು. ಹಲ್ಲು ಉಜ್ಜುವದು, ಹಗಲು ನಿದ್ದೆ, ಮೈಥುನ ವಿಹಾರ, ಜೂಜಾಟ, ರಾತ್ರಿ ನಿದ್ದೆ, ಈ ಹನ್ನೊಂದು ಕಾರ್ಯಗಳನ್ನು ಏಕಾದಶಿಯ ದಿನ ವರ್ಜಿಸಬೇಕು.

ಏಕಾದಶಿಯ ದಿನ ಮುಖ್ಯವಾಗಿ ಉಪವಾಸವನ್ನು ಮಾಡಬೇಕು. ಉಪವಾಸ ಎಂದರೆ ಬರೀ ಅನ್ನ ತಿನ್ನದೇ ಇರುವದು ಎಂದು ಮಾತ್ರ ಅರ್ಥವಲ್ಲ. ''ಉಪಾವೃತ್ತಸ್ತು ಪಾಪೇಭ್ಯೋ ಯಸ್ತು ವಾಸೋ ಗುಣೈಸ್ಸಹ ॥ ಉಪವಾಸಃ ಸ ವಿಜ್ಞೇಯಃ ನ ಶರೀರಸ್ಯ ಶೋಷಣಮ್ ॥ ಪಾಪಕರ್ಮಗಳಿಂದ ದೂರ ಇದ್ದು ಪರಮಾತ್ಮನ ಗುಣಗಳನ್ನು ಚಿಂತನೆ ಮಾಡುತ್ತ ಭಗವಂತನ ಸಮೀಪಕ್ಕೆ ಇರುವದಕ್ಕೆ ಉಪವಾಸ ಎನ್ನುವರು. ಬರೀ ಅನ್ನ ನೀರು ತೊರೆದು ದೇಹವನ್ನು ಒಣಗಿಸಿದರೆ ಉಪವಾಸ ಆಗುವುದಿಲ್ಲ. ಹೀಗೆ ಏಕಾದಶಿಯ ದಿನ ಭಗವಂತನ ಗುಣಗಾನ ಮಾಡುತ್ತ ರಾತ್ರಿಕಾಲದಲ್ಲಿ ಜಾಗರಣೆ ಮಾಡಬೇಕು. ಇದರಂತೆ ದ್ವಾದಶಿಯ ದಿನವೂ ಬೆಳಗಿನ ಜಾವದಲ್ಲಿ ಎದ್ದು ದೇವರ ಪೂಜೆ ಮುಂತಾದ ನಿತ್ಯಾಹ್ನಿಕವನ್ನು ಮುಗಿಸಿ ಸೂರ್ಯೋದಯ ಸಮಯಕ್ಕೆ ಸರಿಯಾಗಿ ಬ್ರಾಹ್ಮಣ ಭೋಜನ ಮಾಡಿಸಿ ತಾನೂ ಭೋಜನವನ್ನು ಮಾಡಬೇಕು. ಈ ವಿಧಿಯಿಂದ ದಶಮೀ, ಏಕಾದಶೀ,

ದ್ವಾದಶೀ ಈ ಮೂರು ದಿನಗಳಲ್ಲಿ ಒಂದು ವರ್ಷದವರೆಗೆ ಈ ಅಖಂಡ ಏಕಾದಶಿ ವ್ರತವನ್ನು ಅನುಷ್ಠಾನ ಮಾಡಬೇಕು. ಯಾವಜ್ಜನ್ಮವೂ ಈ ಅಖಂಡ ಏಕಾದಶಿ ವ್ರತವು ಅವಶ್ಯವಾಗಿ ಅನುಷ್ಠೇಯವೇ ಆಗಿರುತ್ತದೆ. ಅಶಕ್ತಿ, ರೋಗ, ವಾರ್ಧಕ್ಯ, ಬಾಲ್ಯ ಮುಂತಾದ ಕಾರಣಗಳಿಂದ ಒಂದು ವೇಳೆ ಈ ಅಖಂಡ ಏಕಾದಶಿ ವ್ರತವನ್ನು ಯಾವಾಗಲೂ ಪಾಲನ ಮಾಡಲು ಆಗದಿದ್ದರೆ ಒಂದು ವರ್ಷವಾದರೂ ಇಪ್ಪತ್ತನಾಲ್ಕು ಅಖಂಡ ಏಕಾದಶೀ ವ್ರತಗಳನ್ನು ಪಾಲನೆ ಮಾಡಬೇಕು. ಒಂದು ವರ್ಷ ಈ ವ್ರತವನ್ನು ಪೂರ್ಣ ಮಾಡಿದ ಬಳಿಕ ಇದರ ಉದ್ಯಾಪನೆಯನ್ನು ಮಾಡಬೇಕು.

ಮಾರ್ಗಶೀರ್ಷ ಶುಕ್ಲಪಕ್ಷದ ಏಕಾದಶಿಯಂದು ಈ ಉದ್ಯಾಪನ ವಿಧಿಯನ್ನು ಆರಂಭಿಸಬೇಕು. ಉದ್ಯಾಪನೆಯ ವಿಧಿಯ ಮಂತ್ರ ತಂತ್ರವನ್ನು ಬಲ್ಲ ಹನ್ನೆರಡು ಜನ ವಿದ್ವಾಂಸರನ್ನು ಆಮಂತ್ರಿಸಬೇಕು. ಇವರೆಲ್ಲರಿಗಿಂತ ಹೆಚ್ಚಿನ ಯಾಜ್ಞಿಕ ಪ್ರಕ್ರಿಯೆಯಲ್ಲಿ ಪರಿಣಿತನಾದ ಆಚಾರ್ಯನನ್ನು ಪತ್ನೀಸಹಿತವಾಗಿ ಆಮಂತ್ರಿಸಬೇಕು. ಯಜಮಾನನು ಸ್ನಾನಮಾಡಿ ಶುಚಿರ್ಭೂತನಾಗಿ ಶ್ರದ್ಧೆಯಿಂದ ಆಚಾರ್ಯ ದಂಪತಿಗಳನ್ನು ಹಾಗೂ ಉಳಿದ ಹನ್ನೆರಡು ಪಂಡಿತರನ್ನು ಅರ್ಘ್ಯ, ಪಾದ್ಯ, ವಸ್ತ್ರ ಮುಂತಾದವುಗಳನ್ನು ಕೊಟ್ಟು ಪೂಜೆ ಮಾಡಬೇಕು. ಅನಂತರ ಆಚಾರ್ಯರು ಉತ್ತಮ ರಂಗುರಂಗೀತ ಬಣ್ಣಗಳಿಂದ, ಚಕ್ರ ಕಮಲಗಳಿಂದ ಒಡಗೂಡಿದ ಸರ್ವತೋಭದ್ರ ಮಂಡಲವನ್ನು ರಚಿಸಬೇಕು. ಅದಕ್ಕೆ ಬಿಳೀ ಬಟ್ಟೆಯನ್ನು ಹೊದಿಸಬೇಕು. ಕರ್ಪೂರ ಮತ್ತು ಅಗರು ಚಂದನದಿಂದ ಸುಗಂಧ ವಾಸನೆಯುಳ್ಳ ನೀರನ್ನು ತುಂಬಿ, ಕಲಶವನ್ನು ಕೆಂಪು ಬಟ್ಟೆಯಿಂದ ಸುತ್ತಿ ಅಲ್ಲಿ ಸ್ಥಾಪಿಸಬೇಕು. ಆ ಕಲಶದೊಳಗೆ ಐದು ಚಿಗುರೆಲೆಗಳನ್ನು ಐದು ರತ್ನಗಳನ್ನು ಹಾಕಬೇಕು. ಆ ಕಲಶದ ಮೇಲೆ ತಾಮ್ರದ ಪೂರ್ಣಪಾತ್ರವನ್ನು ಇರಿಸಬೇಕು.

ಆ ಕಲಶವನ್ನು ಹೂವಿನ ಮಾಲೆಗಳಿಂದ ಪೂರ್ಣ ಸುತ್ತಿ ಸರ್ವತೋಭದ್ರ ಮಂಡಲದ ಆ ಮೇಲ್ಭಾಗದಲ್ಲಿ ಸ್ಥಾಪಿಸಬೇಕು. ಕಲಶದ ಮೇಲೆ ಶ್ರೀ ಲಕ್ಷ್ಮೀನಾರಾಯಣರ ಸ್ಥಾಪನೆಯನ್ನು ಮಾಡಬೇಕು. ಅನಂತರ ಸರ್ವತೋಭದ್ರ ಮಂಡಲದಲ್ಲಿ ಹನ್ನೆರಡು ಮಾಸಾದಿ ದೇವತೆಗಳನ್ನು ಸ್ಥಾಪನೆ ಮಾಡಿ ಈ ಅಖಂಡ ಏಕಾದಶಿ ವ್ರತದ ಪೂರ್ತಿಗಾಗಿ ಅವರ ಪೂಜೆಯನ್ನು ಮಾಡಬೇಕು. ಮಂಡಲದ ಪೂರ್ವಭಾಗದಲ್ಲಿ ಶಂಖವನ್ನು ಇಟ್ಟು ಅದನ್ನು ಸ್ತೋತ್ರ ಮಾಡಬೇಕು.

**ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ ।**
**ನಮಿತಃ ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತು ತೇ ॥**

ಎಂಬ ಮಂತ್ರದಿಂದ ಶಂಖವನ್ನು ಪ್ರಾರ್ಥಿಸಬೇಕು. ಸರ್ವತೋಭದ್ರ ಮಂಡಲದಿಂದ ಉತ್ತರ ದಿಕ್ಕಿನಲ್ಲಿ ಯಜ್ಞವೇದಿ ಎಂಬ ಹೆಸರಿನ ಕಟ್ಟೆಯನ್ನು ರಚಿಸಬೇಕು. ಅನಂತರ ಸಂಕಲ್ಪವನ್ನು ಮಾಡಿ ವೇದೋಕ್ತವಾದ ವಿಷ್ಣು ಸಂಬಂಧಿ, ಪುರುಷಸೂಕ್ತ, ವಿಷ್ಣುಸೂಕ್ತ ಮುಂತಾದ ಮಂತ್ರಗಳಿಂದ ಹೋಮವನ್ನು ಮಾಡಬೇಕು.

ಅನಂತರ ವಿಷ್ಣುವಿನ ಪ್ರತಿಮೆಯನ್ನು ಸ್ಥಾಪನೆಮಾಡಿ ಪುರುಷಸೂಕ್ತದಿಂದಲೂ ಪೌರಾಣಿಕ ಮಂತ್ರದಿಂದಲೂ ಶ್ರೀಹರಿಯ ಪೂಜೆಯನ್ನು ಮಾಡಬೇಕು. ನೈವೇದ್ಯವನ್ನು ತೋರಿಸಬೇಕು. ಧೂಪವನ್ನು ಉರಿಸಬೇಕು. ದೀಪವನ್ನು ಹಚ್ಚಬೇಕು. ಮಂಗಳಾರತಿಯನ್ನು ಬೆಳಗಬೇಕು. ಮಂತ್ರಪುಷ್ಪವನ್ನು ಸಮರ್ಪಿಸಬೇಕು. ಛತ್ರಚಾಮರ,

ಗೀತ, ನೃತ್ಯ, ಸ್ತೋತ್ರ ಮುಂತಾದ ಎಲ್ಲ ಸೇವೆಗಳನ್ನು ಸಲ್ಲಿಸಬೇಕು. ಬ್ರಾಹ್ಮಣರಿಂದ ಸ್ವಸ್ತಿವಾಚನವನ್ನು ಹೇಳಿಸಿ ಪ್ರದಕ್ಷಿಣೆ ನಮಸ್ಕಾರಾದಿಗಳನ್ನು ಮಾಡಬೇಕು. ಅನಂತರ ಅಲ್ಲಿ ಬಂದ ವಿದ್ವಾಂಸರು ಆಚಾರ್ಯರು ವೇದೋಕ್ತವಾದ ಪವಮಾನ ಸೂಕ್ತ, ಮಂಡಲ ಬ್ರಾಹ್ಮಣ, ಮಧುವಾತಾ ಋತಾಯತೇ, ಈ ಮೂರು ಮಂತ್ರಗಳನ್ನು ಜಪಮಾಡಬೇಕು. ಉಳಿದ, ವೇದ ಪಾರಾಯಣ ಪಂಡಿತರು 'ತೇಜೋ' 'ಶುಕ್ರಜಂ' 'ವಾಚಂ ಬ್ರಹ್ಮ' ಪವಿತ್ರವಂತಂ, ಸೂರ್ಯಸ್ಯ, ವಿಷ್ಣೋರ್ಮ ಹಸಿ'' ಮುಂತಾದ ವೇದ ಸಂಹಿತೆಯಲ್ಲಿ ಹೇಳಿದ ಮಂತ್ರಗಳನ್ನು ಜಪಿಸಿ ಪಾರಾಯಣ ಮಾಡಬೇಕು. ಜಪದ ಕೊನೆಯಲ್ಲಿ ಶ್ರೀವಿಷ್ಣುವಿನ ಮೂರ್ತಿಯನ್ನು ಕಲಶದ ಮೇಲೆ ಸ್ಥಾಪನೆ ಮಾಡಬೇಕು. ಮರುದಿನ ಸೂರ್ಯೋದಯದ ವೇಳೆಗೆ ಹೋಮವನ್ನು ಪ್ರಾರಂಭಿಸಬೇಕು.

ಯಜ್ಞವಿಭಾಗದಲ್ಲಿ ಪಳಗಿದ ಪಂಡಿತ ಪುರೋಹಿತರು ಮೊದಲು ಪಾತ್ರ ಸ್ಥಾಪನೆ ಮಾಡಿಕೊಂಡು ವಿಧಿಪೂರ್ವಕವಾಗಿ ಪೂಜೆ ಮಾಡಿದ ಬಳಿಕ ಸ್ತೋತ್ರವನ್ನು ಮಾಡಬೇಕು. ಅನಂತರ ತನ್ನ ಶಾಖೆಯ ಗೃಹ್ಯ ಸೂತ್ರದಲ್ಲಿ ಹೇಳಿದ ವಿಧಿಯನ್ನು ಅನುಸರಿಸಿ ಚರು ಹೋಮವನ್ನು ಮಾಡಬೇಕು. ಎರಡು ಪಾತ್ರೆಗಳಲ್ಲಿ ಚರುವನ್ನು ತಯಾರು ಮಾಡಿಟ್ಟುಕೊಂಡು ಪುರುಷಸೂಕ್ತ ಮಂತ್ರದಿಂದ ಹದಿನಾರು ಆಹುತಿಯನ್ನು ಯಜ್ಞಾಗ್ನಿಯಲ್ಲಿ ಹೋಮಿಸಬೇಕು. ಮತ್ತು ತುಪ್ಪ ಹಾಕಿದ ಪಾಯಸದಿಂದ ನಾಕು ಮುಖ್ಯ ಆಹುತಿಗಳನ್ನು ನೀಡಬೇಕು. ಅನಂತರ ಹೆಬ್ಬೆರಳಿನಿಂದ ತೋರುಬೆರಳಿನವರೆಗೆ ಉದ್ದವಾದ ಪ್ರಾದೇಶ ಮಾತ್ರ ಪ್ರಮಾಣವಾದ ಒಂದು ನೂರು ಅರಳೀಮರದ ಸಮಿಧೆಗಳನ್ನು ತೆಗೆದುಕೊಂಡು ತುಪ್ಪದಲ್ಲಿ ಎದ್ದಿ ''ಇದಂ ವಿಷ್ಣುರ್ ವಿಚಕ್ರಮೆ'' ಇತ್ಯಾದಿ ಮಂತ್ರಗಳಿಂದ ಹೋಮಗಳನ್ನು ಮಾಡಬೇಕು ಹೀಗೆ ಒಂದು ನೂರು ಸಮಿಧಾಕಾಷ್ಠಗಳ ಆಹುತಿಯನ್ನು ಕೊಟ್ಟ ಬಳಿಕ ಎರಡುನೂರು ಎಳ್ಳಿನಿಂದ ಆಹುತಿಗಳನ್ನು ಅಗ್ನಿಯಲ್ಲಿ ನೀಡಬೇಕು.

ಹೀಗೆ ವೈಷ್ಣವ ಹೋಮವನ್ನು ಮಾಡಿ ಗೃಹಯಜ್ಞವನ್ನು ಪ್ರಾರಂಭಿಸಬೇಕು. ಅದರಲ್ಲಿಯೂ ಕ್ರಮವಾಗಿ ಸಮಿಧಾ ಹೋಮ ಚರುಹೋಮ ಅನಂತರ ತಿಲಹೋಮ ಗಳನ್ನು ಮಾಡಬೇಕು. ಆ ಬಳಿಕ ಸ್ವಸ್ತಿ ವಾಚನ ಮಾಡಿಸಿ ಶ್ರೀಹರಿಯ ಪೂಜೆಯನ್ನು ಮಾಡಿಸಬೇಕು. ಋತ್ವಿಜರಿಗೆ ದಕ್ಷಿಣೆಯನ್ನು, ಕುಟುಂಬಿಯಾದ ಶ್ರೋತ್ರಿಯನಿಗೆ ಹಿಂಡುವ ಹಸುವನ್ನು, ಮತ್ತೊಬ್ಬರಿಗೆ ಎತ್ತನ್ನು ದಾನ ನೀಡಬೇಕು. ಅನಂತರ ಆ ಯಜ್ಞದಲ್ಲಿ ಭಾಗವಹಿಸಿದ ಹನ್ನೆರಡು ಪಂಡಿತರಿಗೂ ಸಪತ್ನೀಕರಾದ ಆಚಾರ್ಯರಿಗೂ ವಸ್ತ್ರ, ದಾನ, ದಕ್ಷಿಣೆಗಳನ್ನು ಕೊಟ್ಟು ಸಂತೋಷಪಡಿಸಬೇಕು. ಯೋಗ್ಯತೆ ಇದ್ದವರು ಹೋಮದಲ್ಲಿ ಭಾಗವಹಿಸಿದವರೆಲ್ಲರಿಗೂ ಹೆಚ್ಚು ಹಣವನ್ನು ಕೊಟ್ಟು ಸಂಪತ್ತನ್ನು ದಾನಮಾಡಿ ಸಂತೋಷಪಡಿಸಬೇಕು. ಅನಂತರ ಬಂದ ಅತಿಥಿ ಅಭ್ಯಾಗತರಿಗೆಲ್ಲ ಭೋಜನ ಮಾಡಿಸಿ ತಾನೂ ಕೂಡ ಪಾರಣೆ ಮಾಡಬೇಕು. ಪಾರಣೆಯ ಅನಂತರ ಊರಲ್ಲಿಯ ವೈದಿಕರನ್ನು ಕರೆದು ವಸ್ತ್ರಹೊದಿಸಿದ ಐವತ್ತು ಜಲಪೂರ್ಣ ಕಲಶಗಳನ್ನು ದಾನ ಮಾಡಬೇಕು. ಹೀಗೆ ತನ್ನ ಶಕ್ತ್ಯಾನುಸಾರ ಈ ಅಖಂಡ ಏಕಾದಶಿ ವ್ರತದ ಉದ್ಯಾಪನೆಯನ್ನು ಮಾಡಬೇಕು.

## ಜಾಗರಣೋತ್ಸವ ಮತ್ತು ಮತ್ಸ್ಯೋತ್ಸವಗಳ ವಿಧಾನ

**ಭಗವಂತ:-** ಎಲ್ಲ ಏಕಾದಶಿ ದಿನಗಳಂದು ಪೂರ್ಣದಿನ ಉಪವಾಸ, ರಾತ್ರಿ ಜಾಗರಣ, ದ್ವಾದಶಿ ಪ್ರಾತಃಕಾಲದಲ್ಲಿ ಪಾರಣೆ ಇವು ಮೂರು ಏಕಾದಶಿ ವ್ರತದ ಮುಖ್ಯ ಭಾಗಗಳು ಆಗಿರುತ್ತವೆ. ಏಕಾದಶಿ ರಾತ್ರಿ ಪ್ರಥಮ ಪ್ರಹರದಿಂದ ಕೊನೆಯ ಪ್ರಹರದವರೆಗೆ ನಿದ್ರೆ ಮಾಡದೇ ಎಚ್ಚರದಿಂದ ಇದ್ದು ಧ್ಯಾನ, ಭಜನ, ಸಂಗೀತ ಸೇವೆ ಮುಂತಾದವುಗಳಿಂದ ಶ್ರೀಹರಿಯ ಸೇವೆಯನ್ನು ಮಾಡಬೇಕು. ಈ ಏಕಾದಶಿಯ ಜಾಗರಣ ಕಾಲದಲ್ಲಿ ಸಾಂಸಾರಿಕ ವಿಷಯಗಳನ್ನು ಮಾತನಾಡುತ್ತ ಕಾಲಕಳೆಯಬಾರದು. ಭಗವಂತನ ದಿವ್ಯ ಚರಿತ್ರೆಯನ್ನು ಕೊಂಡಾಡುತ್ತ ಹಾಡುಪಾಡುಗಳನ್ನು ಹೇಳುತ್ತ, ಗೀತ, ವಾದ್ಯ, ನೃತ್ಯ ಪುರಾಣ ಪಾಠ, ಪಾರಾಯಣ, ಪ್ರವಚನ, ಮಂತ್ರ ಜಪ, ಸ್ತೋತ್ರ ಪಾಠ, ಧ್ಯಾನ, ನಾಮಸಂಕೀರ್ತನೆ, ಧೂಪ, ದೀಪ, ತುಲಸೀ ಅರ್ಚನೆ, ಪುಷ್ಪಾರ್ಚನೆ, ಫಲ ಸಮರ್ಪಣೆ, ಹರಿಪೂಜೆ ಪ್ರದಕ್ಷಿಣೆ, ನಮಸ್ಕಾರ, ನೀರಾಜನ, ಜಾವ ಜಾವಕ್ಕೆ ಮಂಗಳಾರತಿ ಮುಂತಾದ ಕಾರ್ಯಕ್ರಮಗಳಿಂದ ಏಕಾದಶಿ ಜಾಗರವನ್ನು ಸಾಂಗಗೊಳಿಸಬೇಕು.

ಜಾಗರದಲ್ಲಿ ಎಲ್ಲ ಕಾರ್ಯಕ್ರಮಗಳಿಗಿಂತ ಮುಖ್ಯವಾಗಿ ಪುರಾಣಪ್ರವಚನಾದಿ ಕಾರ್ಯಕ್ರಮಗಳನ್ನು ಮಾಡಲು ಏರ್ಪಡಿಸಬೇಕು. ಅದಕ್ಕಾಗಿ ಶಾಸ್ತ್ರಪುರಾಣಗಳಲ್ಲಿ ಪಂಡಿತನಾದ, ಏಕಾದಶಿ ಉಪೋಷಣೆ ಮಾಡುವ ಪುರಾಣಿಕರನ್ನು ಆದರದಿಂದ ಕರೆತಂದು ಅವರಿಂದ ಭಗವತ್ ಕಥಾವನ್ನು ಹೇಳಿಸಿ ಎಲ್ಲರೂ ಭಕ್ತಿಯಿಂದ ಪುರಾಣ ಶ್ರವಣವನ್ನು ಮಾಡಬೇಕು. ಹೀಗೆ ಭಗವಂತನ ಮಹಾಮಹಿಮೆಯನ್ನು ತಿಳಿಸುವ ಪುರಾಣಗಳ ಪಠಣ, ಪಾಠಣ, ಪಾರಾಯಣ, ಪ್ರವಚನ, ಶ್ರವಣ ಮುಂತಾದ ಜ್ಞಾನಕಾರ್ಯಗಳು ನಡೆದ ಜಾಗರೋತ್ಸವದಲ್ಲಿ ನಾನು ಸಂತೋಷದಿಂದ ನೃತ್ಯ ಮಾಡುತ್ತೇನೆ. ಏಕಾದಶೀ ರಾತ್ರಿ ಜಾಗರ ಸಮಯದಲ್ಲಿ ದೀಪದಾನ, ಧೂಪದಾನ, ಪ್ರದಕ್ಷಿಣೆ ನಮಸ್ಕಾರ, ವಿಷ್ಣು ಸಹಸ್ರನಾಮ ಪಾರಾಯಣ, ಗೀತಾಪಠಣ, ಸಂಗೀತ ಸೇವೆ. ನೃತ್ಯ, ಸ್ತೋತ್ರ ಪಾಠ ಮುಂತಾದ ಸೇವೆ ಸಲ್ಲಿಸುವವರು ನನ್ನ ಶ್ವೇತದ್ವೀಪದಲ್ಲಿಯೇ ಮುಂದೆ ನಿವಾಸ ಮಾಡುವರು. ಏಕಾದಶಿ ದಿನ ಜಾಗರ ಮಾಡಿದವರ ಪಾಪಗಳೆಲ್ಲವೂ ನಾಶವಾಗುವವು. ಅನೇಕ ಯಜ್ಞಗಳನ್ನು ಮಾಡಿದ ಪುಣ್ಯವು ಒಂದು ಏಕಾದಶಿ ರಾತ್ರಿ ಜಾಗರ ಮಾಡುವದರಿಂದ ಪ್ರಾಪ್ತವಾಗುವದು.

ಮಾರ್ಗಶೀರ್ಷ ಶುಕ್ಲ ದ್ವಾದಶಿದಿನದಂದು ಪ್ರಾತಃಕಾಲದಲ್ಲಿ ವಿಧಿಪೂರ್ವಕವಾಗಿ ಮತ್ಸ್ಯೋತ್ಸವವನ್ನು ಮಾಡ ಬಯಸುವವರು ಸ್ನಾನ, ದೇವರ ಪೂಜೆ ಮುಂತಾದ ತಮ್ಮ ನಿತ್ಯಾಹ್ನಿಕವನ್ನೆಲ್ಲ ಮಾಡಿ ಮುಗಿಸಿದ ಬಳಿಕ ವಿಧಿಪೂರ್ವಕವಾಗಿ ಅಗ್ನಿ ಸ್ಥಾಪನೆಯನ್ನು ಮಾಡಬೇಕು. ಅನಂತರ ಶಂಖ, ಚಕ್ರ, ಗದಾ, ಕಿರೀಟ, ಪೀತಾಂಬರ ಧಾರಣ ಮಾಡಿದ ಪ್ರಸನ್ನ ಮುಖ ಮುದ್ರೆಯ ಗೋವಿಂದನನ್ನು ಧ್ಯಾನಮಾಡಬೇಕು. ಈ ಗೋವಿಂದನು ಸೂರ್ಯಮಂಡಲದಲ್ಲಿ ವಾಸಮಾಡಿರುತ್ತಾನೆಂದು ಚಿಂತಿಸಿ ಅರ್ಘ್ಯವನ್ನು ಕೊಡಬೇಕು. ಅನಂತರ ''ತಾವರೆ ಗಣ್ಣಿನ ಶ್ರೀಹರಿಯೇ, ನಾನು ಏಕಾದಶಿಯ ದಿನ ಉಪವಾಸ ಮಾಡಿ ದ್ವಾದಶಿಯ ದಿನ ಪ್ರಾತಃಕಾಲದಲ್ಲಿ ನಿನ್ನ ಪೂಜೆಯನ್ನು ಮಾಡಿ ನಿನ್ನ ನೈವೇದ್ಯವನ್ನು ಪಾರಣೆ ಮಾಡುತ್ತೇನೆ. ನೀನು ನನ್ನನ್ನು ರಕ್ಷಿಸಿ ಈ ಏಕಾದಶಿ ವ್ರತವನ್ನು ಸಾಂಗಗೊಳಿಸು'' ಎಂದು

ಪ್ರಾರ್ಥಿಸಬೇಕು. ಅನಂತರ ಏಕಾದಶಿ ದಿನದಂದು ಪ್ರಾತಃಕಾಲದಲ್ಲಿಯೆ ಎದ್ದು ಸ್ನಾನ ಮಾಡಿ ಪೂಜಾ ಆಹ್ನಿಕಗಳನ್ನೆಲ್ಲ ಮುಗಿಸಿಕೊಂಡು ದೇವರ ಹತ್ತಿರವೆ ಕುಳಿತು ''ಓಂ ನಮೋ ನಾರಾಯಣಾಯ'' ಎಂಬ ಮೂಲ ಮಂತ್ರವನ್ನು ಯಥಾ ಶಕ್ತಿ ಜಪ ಮಾಡಬೇಕು. ಇದೆಲ್ಲವನ್ನು ಸೂರ್ಯೋದಯದ ಒಳಗಾಗಿ ಮುಗಿಸಿ ನಿರ್ಮಲವಾದ ನೀರು ಉಳ್ಳ ಮಹಾನದೀ ಅಥವಾ ಉಪನದಿ ಇಲ್ಲವೇ ಸರೋವರಗಳ ಬಳಿಗೆ ಹೋಗಬೇಕು. ಆ ಜಲಾಶಯದ ಒಳಗಿನ ಮಣ್ಣನ್ನು ಕೈಯಲ್ಲಿ ತೆಗೆದುಕೊಂಡು ಭೂ ದೇವಿಯ ಪ್ರಾರ್ಥನೆಯನ್ನು ಈ ಮಂತ್ರದಿಂದ ಮಾಡಬೇಕು.

**ಧಾರಣಂ ಪೋಷಣಂ ತ್ವತ್ತೋ ಭೂತಾನಾಂ ದೇವಿ ಸರ್ವದಾ ।**
**ತೇನ ಸತ್ಯೇನ ಮೇ ಪಾಪಂ ಯಾವನ್ಮೋಚಯ ಸುವ್ರತೆ ॥**

ಉತ್ತಮ ವ್ರತವನ್ನು ಪಾಲನ ಮಾಡುವ ಭೂದೇವಿಯೆ, ಎಲ್ಲ ಪ್ರಾಣಿಗಳನ್ನು ಧಾರಣ ಮಾಡುವವಳು ಪೋಷಣ ಮಾಡುವವಳು ನೀನೇ ಆಗಿರುತ್ತಿ. ಈ ಮಾತಿನ ಸತ್ಯದ ಪ್ರಭಾವದಿಂದ ನೀನು ನನ್ನ ಎಲ್ಲ ಪಾಪಗಳನ್ನು ಪರಿಹರಿಸು.

ಹೀಗೆ ಭೂ ಪ್ರಾರ್ಥನೆಯನ್ನು ಮಾಡಿದ ಬಳಿಕ ವರುಣನ ಪ್ರಾರ್ಥನೆಯನ್ನು ಮಾಡಬೇಕು.

**ತ್ವಯಿ ನಿತ್ಯಂ ರಸಾಃ ಸರ್ವೇ ಸ್ಥಿತಾ ವರುಣ ಸರ್ವದಾ ।**
**ತೇನ ಮಾಂ ಮೃತ್ತಿಕಾಂ ಪ್ಲಾವ್ಯ ಪೂತಾಂ ಕುರುಷ್ವ ಮಾ ಚಿರಮ್ ॥**

ಹೀಗೆ ಮೃತ್ತಿಕೆಯ ಅರ್ಥಾತ್ ಮಣ್ಣಿನ ಅಭಿಮಾನಿ ದೇವತೆಯಾದ ಭೂದೇವಿಯನ್ನು ನೀರಿನ ಅಧಿ ದೇವತೆಯಾದ ವರುಣನನ್ನು ಪ್ರಾರ್ಥಿಸಿ ಕೈಯಲ್ಲಿ ಹಿಡಿದು ಮೇಲಿನ ಮಂತ್ರದಿಂದ ಅಭಿಮಂತ್ರಿತವಾದ ಆ ಮಣ್ಣನ್ನು ತನ್ನ ಮೈಗೆ ಲೇಪಿಸಿಕೊಳ್ಳಬೇಕು. ಆ ಮಣ್ಣಿನಲ್ಲಿ ಮೂರು ಭಾಗಮಾಡಿ ನೀರಿನಲ್ಲಿ ಕಲೆಸಿ ಒಂದು ಭಾಗದಿಂದ ಹೊಕ್ಕಳದ ಕೆಳಗಿನ ದೇಹದ ಭಾಗಗಳಿಗೂ ಇನ್ನೊಂದು ಭಾಗದಿಂದ ಹೊಕ್ಕಳದ ಮೇಲೆ ವಕ್ಷಸ್ಥಳದವರೆಗೂ ಮೂರನೆಯ ಭಾಗದಿಂದ ವಕ್ಷಸ್ಥಳದ ಮೇಲಿನ ದೇಹದ ಭಾಗಕ್ಕೂ ಮೃತ್ತಿಕೆಯನ್ನು ಬಳಿದುಕೊಂಡು ಸ್ನಾನಮಾಡಬೇಕು.

ಅನಂತರ ಸಂಧ್ಯೆ ದೇವರ ಪೂಜೆ ಹಾಗೂ ನಿತ್ಯಾಹ್ನಿಕಗಳನ್ನು ಮಾಡಿ ಮುಗಿಸಿಕೊಂಡು ಶ್ರೀಹರಿಯ ದೇವಸ್ಥಾನಕ್ಕೆ ಬರಬೇಕು. ಅಲ್ಲಿ ಕೇಶವಾಯ ನಮಃ ನಾರಾಯಣಾಯ ನಮಃ ಎಂಬ ಮುಂತಾದ ಇಪ್ಪತ್ತುನಾಕು ಶ್ರೀಹರಿಯ ನಾಮಗಳಿಂದ ಆ ಭಗವನ್ ಮೂರ್ತಿಯನ್ನು ಅಡಿಯಿಂದ ಮುಡಿಯವರೆಗೆ ಪೂಜೆ ಮಾಡಬೇಕು. 'ನಂತರ ರಥಾಂಗ ಧಾರಿಣೇ ನಮಃ' ಎಂದು ವಿಷ್ಣುವಿನ ಕೈಯಲ್ಲಿಯ ಚಕ್ರವನ್ನೂ 'ಶ್ರೀ ಕರಾಯ ನಮಃ' ಎಂದು ಶಂಖವನ್ನೂ, ಗಂಭೀರಾಯ ನಮಃ ಎಂದು ಗದೆಯನ್ನೂ, 'ಶಾಂತ ಮೂರ್ತಯೇ ನಮಃ' ಎಂದು ಪದ್ಮವನ್ನೂ ಪೂಜೆ ಮಾಡಬೇಕು. ಹೀಗೆ ದೇವರ ಪೂಜೆ ಮಾಡಿ ದೇವರ ಎದುರು ನೀರು ತುಂಬಿದ ನಾಕು ಕಲಶಗಳನ್ನು ಇರಿಸಬೇಕು. ಆ ಕಲಶಗಳನ್ನು ಹೂವಿನ ಮಾಲೆಗಳಿಂದ ಸುತ್ತಿ, ಬಿಳಿ ಚಂದನವನ್ನು ಬಳಿದ ಮಾವಿನ ಎಲೆಗಳನ್ನು ಒಳಗೆ ಹಾಕಿ, ಬಿಳಿ ವಸ್ತ್ರವನ್ನು ಹೊದಿಸಿ, ಒಳಗೆ ಬಂಗಾರವನ್ನು ಹಾಕಿ ಮೇಲೆ ಎಳ್ಳು ತುಂಬಿದ ತಾಮ್ರದ ತಟ್ಟೆಗಳನ್ನು

ಮುಚ್ಚಬೇಕು. ಈ ನಾಕು ಕಲಶಗಳ ನಡುವೆ ಒಂದು ಪೀಠವನ್ನು ಇಟ್ಟು ಅದರ ಮೇಲೆ ಶುಭ್ರ ವಸ್ತ್ರವನ್ನು ಹೊದಿಸಿ ಅದರಲ್ಲಿ ಒಂದು ಪಾತ್ರವನ್ನು ಇಟ್ಟು ಅದನ್ನು ನೀರಿನಿಂದ ತುಂಬಬೇಕು. ಆ ಪಾತ್ರದಲ್ಲಿ ಮತ್ಸ್ಯಾವತಾರಿಯಾದ ಶ್ರೀಹರಿಯ ಬಂಗಾರದ ಪ್ರತಿಮೆಯನ್ನು ಇಡಬೇಕು. ಆ ಪ್ರತಿಮೆಯ ಕೈಯಲ್ಲಿ ಶ್ರುತಿ ಸ್ಮೃತಿ ಗ್ರಂಥಗಳು ಇರುತ್ತವೆ. ಎಂದು ಭಾವಿಸಬೇಕು. ಈ ಮತ್ಸ್ಯ ಪ್ರತಿಮೆಯನ್ನು ಷೋಡಶೋಪಚಾರ ಪೂಜೆಯಿಂದ ಪೂಜಿಸಿ, ಬಗೆ ಬಗೆಯ ಭಕ್ಷ್ಯ ಭೋಜ್ಯ ಪದಾರ್ಥಗಳ ನೈವೇದ್ಯ ತೋರಿಸಿ, ಮಂತ್ರ ಪುಷ್ಪಾರ್ಚನೆಯನ್ನು ಮಾಡಿ, ಮಂಗಳಾರತಿ ಬೆಳಗಿ, ವಿಧಿ ಪೂರ್ವಕವಾಗಿ ಪೂಜೆ ಸಲ್ಲಿಸಿ ಹೀಗೆ ಪ್ರಾರ್ಥನೆ ಮಾಡಬೇಕು.

**ರಸಾತಲ ಗತಾ ವೇದಾಃ ಯಥಾ ದೇವ ತ್ವಯೋದ್ಧೃತಾಃ।**
**ಮತ್ಸ್ಯ ರೂಪೇಣ ತದ್ವನ್ ಮಾಂ ಭವಾದುದ್ಧರ ಕೇಶವ ॥**

ಸ್ವಾಮಿ ಕೇಶವನೇ, ಹಿಂದೆ ನೀನು ಮತ್ಸ್ಯರೂಪವನ್ನು ಧರಿಸಿ ರಸಾತಲದಲ್ಲಿ ಇದ್ದ ವೇದಗಳನ್ನು ಮೇಲೆ ತಂದು ಉದ್ದರಿಸುಲಿಲ್ಲವೇ? ಅದರಂತೆ ಈ ಸಂಸಾರದ ಆಳದಲ್ಲಿ ಇಳಿದ ನನ್ನನ್ನು ಉದ್ಧಾರ ಮಾಡು.

ಹೀಗೆ ಪ್ರಾರ್ಥನೆಗೈದು ದೇವರ ಎದುರು ಅಂದು ರಾತ್ರಿ ಜಾಗರವನ್ನು ಮಾಡಬೇಕು. ಬೆಳಗಾದ ಬಳಿಕ ಆ ನಾಕು ಕಲಶಗಳನ್ನು ವೈದಿಕರಿಗೆ ದಾನ ಕೊಡಬೇಕು. ಬಂಗಾರದ ಆ ಭಗವಂತನ ಮತ್ಸ್ಯಾಕಾರದ ಮೂರ್ತಿಯನ್ನು ಗಂಧ, ಧೂಪ, ವಸ್ತ್ರ ಮುಂತಾದವುಗಳಿಂದ ಪೂಜಿಸಿ ಆಚಾರ್ಯರಿಗೆ ದಾನ ಕೊಡಬೇಕು. ಹೀಗೆ ವಿಧಿಪೂರ್ವಕವಾಗಿ ಮತ್ಸ್ಯೋತ್ಸವವನ್ನು ಆಚರಿಸಿದವರು ಸರ್ವಪಾಪಗಳಿಂದ ಮುಕ್ತರಾಗುವರು.

## ಶ್ರೀಕೃಷ್ಣನ ನಾಮಸ್ಮರಣದ ಮಹಿಮೆ

**ಭಗವಂತ:-** ಮಾರ್ಗಶೀರ್ಷ ಮಾಸದಲ್ಲಿ ಭಗವಾನ್ ಶ್ರೀಕೃಷ್ಣನ ಪೂಜೆಯನ್ನು ಹಿಂದೆ ಹೇಳಿದಂತೆ ವಿಧಿಪೂರ್ವಕವಾಗಿ ಮಾಡಬೇಕು. ಪ್ರತಿದಿನವೂ ಮಾರ್ಗಶೀರ್ಷಮಾಸದಲ್ಲಿ ಒಂದೇ ಹೊತ್ತು ಊಟವನ್ನು ಮಾಡಬೇಕು. ಹಾಗೂ ಸದಾಚಾರಸಂಪನ್ನರಾದ ವಿದ್ವಾಂಸರಿಗೆ ಭೋಜನ ಮಾಡಿಸಬೇಕು. ಮಾರ್ಗಶೀರ್ಷ ಮಾಸದಲ್ಲಿ ಬ್ರಾಹ್ಮಣ ಭೋಜನವು ಮುಖ್ಯಕರ್ತವ್ಯವಾಗಿರುತ್ತದೆ. ಬ್ರಾಹ್ಮಣ ಮತ್ತು ಅಗ್ನಿ ಇವು ಎರಡು ನನ್ನ ಮುಖ ಎನಿಸಿರುತ್ತವೆ. ಅಗ್ನಿಯಲ್ಲಿ ಆಹುತಿ ಹಾಕುವದಕ್ಕಿಂತ ಬ್ರಾಹ್ಮಣ ಮುಖದಲ್ಲಿ ಅನ್ನದಾನವು ನನ್ನ ಪ್ರೀತಿಗೆ ಕಾರಣವಾಗಿರುತ್ತದೆ. ಅಗ್ನಿಯಲ್ಲಿ ಮಾಡುವ ಹೋಮವೂ ಕೂಡ ಬ್ರಾಹ್ಮಣನ ಮುಖಾಂತರವೇ ಆಗಬೇಕು. ಅದಕ್ಕಿಂತ ಸಾಕ್ಷಾತ್ ಆಗಿ ಸದಾಚಾರ ಸಂಪನ್ನರಾದ ಜ್ಞಾನಿಗಳ ಮುಖದಲ್ಲಿಯೇ ರುಚಿಕರವಾದ ಅನ್ನ, ಬೇಳೆ, ಆಕಳ ತುಪ್ಪ, ಹಾಗೂ ವಿವಿಧ ಭಕ್ಷ್ಯ ಭೋಜ್ಯಗಳಿಂದ ಭೋಜನ ಮಾಡಿಸಿದರೆ ಅದೇ ಒಂದು ಯಜ್ಞವಾಗುತ್ತದೆ. ಚತುರ್ಮುಖನೇ, ನನ್ನ ಭಕ್ತರು ಪ್ರತಿದಿನವೂ ದೇವರ ಪೂಜೆ ಮಾಡಿ ಎಲ್ಲ ಪದಾರ್ಥಗಳನ್ನೂ ನನಗೆ ನಿವೇದನ ಮಾಡಿ ಆ ನೈವೇದ್ಯ ಶೇಷವನ್ನು ಶ್ರೀಹರಿಯ ಪ್ರಸಾದ ಎಂದು ಭಕ್ಷಣ ಮಾಡಬೇಕು. ಬೇರೆ ದೇವತೆಗಳ ನೈವೇದ್ಯವನ್ನು ಭಕ್ಷಣ ಮಾಡಕೂಡದು. ಮಾರ್ಗಶೀರ್ಷ ಮಾಸದಲ್ಲಿ ಕೃಷ್ಣ ಕೃಷ್ಣ ಎಂದು ನನ್ನ ನಾಮೋಚ್ಚಾರಣವನ್ನು ವಿಶೇಷ ರೂಪದಿಂದ ಮಾಡಬೇಕು. ಯಾರು ಮನಸ್ಸು, ಮಾತು ಮತ್ತು ಕ್ರಿಯೆ ಈ ಮೂರರ ಮುಖಾಂತರ ಶ್ರೀಹರಿಗೆ ಶರಣುಹೋಗುತ್ತಾರೋ ಅವರು ಇಹದಲ್ಲಿ ಎಲ್ಲ ಕಾಮನೆಗಳನ್ನು ಹೊಂದಿ ಕೊನೆಯಲ್ಲಿ ಸರ್ವಶ್ರೇಷ್ಠವಾದ ವೈಕುಂಠ ಲೋಕವನ್ನು ಕುರಿತು ಪ್ರಯಾಣ ಮಾಡುತ್ತಾರೆ.

**ಕೃಷ್ಣ ಕೃಷ್ಣೇತಿ ಕೃಷ್ಣೇತಿ ಯೋ ಮಾಂ ಸ್ಮರತಿ ನಿತ್ಯಶಃ।**
**ಜಲಂ ಭಿತ್ವಾ ಯಥಾ ಪದ್ಮಂ ನರಕಾದುದ್ಧರಾ ॥**

ಕೃಷ್ಣ ಕೃಷ್ಣ ಕೃಷ್ಣ ಎಂದು ಯಾರು ಪ್ರತಿನಿತ್ಯವೂ ನನ್ನನ್ನು ಸ್ಮರಣ ಮಾಡುವರೋ ಅವರನ್ನು ನೀರಿನಿಂದ ಕಮಲವನ್ನು ಮೇಲೆತ್ತಿದಂತೆ ಈ ಸಂಸಾರದಿಂದ ನಾನು ಉದ್ಧರಿಸುತ್ತೇನೆ. ವಿನೋದದಿಂದಾಗಲಿ, ಮೌಢ್ಯದಿಂದಾಗಲಿ, ಲೋಭದಿಂದಾಗಲಿ ಕೃಷ್ಣ ಕೃಷ್ಣ ಎಂದು ನನ್ನ ನಾಮೋಚ್ಚರಣೆ ಮಾಡಿದರೆ ಸರ್ವಪಾಪಗಳಿಂದಲೂ ಅವನು ಮುಕ್ತನಾಗಿ ಮುಕ್ತಿಗೆ ಅರ್ಹನಾಗುತ್ತಾನೆ. ಅವನು ಹಿಂದೆ ಮತ್ತು ಈ ಜನ್ಮದಲ್ಲಿ ಬಾಲ್ಯ, ಯೌವನ, ವಾರ್ಧಕ್ಯ ಅವಸ್ಥೆಗಳಲ್ಲಿ ಏನೇ ಪಾಪ ಮಾಡಿರಲಿ ಎಷ್ಟೇ ಪಾಪಮಾಡಿರಲಿ ಕೊನೆಗಾಲದಲ್ಲಿ ಕೃಷ್ಣನ ನಾಮಸ್ಮರಣೆ ಮಾಡಿದರೆ ಆ ಎಲ್ಲ ಪಾಪಗಳಿಂದಲೂ ಮುಕ್ತನಾಗಿ ಕೊನೆಗೆ ಮುಕ್ತಿ ಮಂದಿರಕ್ಕೆ ಹೋಗುವನು.

**ಸ್ಮಶಾನೇ ಯದಿ ರಥ್ಯಾಯಾಂ ಕೃಷ್ಣ ಕೃಷ್ಣೇತಿ ಜಲ್ಪತಿ।**
**ಮುಚ್ಯತೇ ಭುವಿ ಚೇತ್ ಪುತ್ರ ಮಾಮೇವೇತಿ ನ ಸಂಶಯಃ॥**

ರುದ್ರಭೂಮಿಯಲ್ಲಿಯೇ ಇರಲಿ ಬೀದಿಯಲ್ಲಿಯೇ ಇರಲಿ ಕೃಷ್ಣ ಕೃಷ್ಣ ಎಂದು ಉಚ್ಚಾರ ಮಾಡುತ್ತ ಮರಣ ಹೊಂದಿದರೆ ನನ್ನನ್ನೇ ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ಘೋರ ಪಾಪಗಳೆಂಬ ಅಗ್ನಿಜ್ವಾಲೆಗಳನ್ನು ಶ್ರೀಕೃಷ್ಣನ ನಾಮಸ್ಮರಣ ಎಂಬ ಮೇಘ ವೃಷ್ಟಿಯು ಆರಿಸಿಬಿಡುವುದು. ಕಲಿಕಾಲವೆಂಬ ಸರ್ಪಕ್ಕೆ ಕೃಷ್ಣನ ನಾಮಸ್ಮರಣವು ಗರುಡನಂತೆ ತೀವ್ರ ಪರಿಹಾರಕವಾಗಿದೆ. ಅನೇಕ ಮಹಾಪಾಪ, ಅಲ್ಪಪಾಪ, ಎಂಬ ರೋಗಗಳಿಂದ ಉಪಹತರಾದವರಿಗೆ ಕೃಷ್ಣನ ನಾಮಸ್ಮರಣವು ರಾಮಬಾಣ ಉಪಾಯವಾಗಿರುತ್ತದೆ. ಪ್ರಯಾಗದಲ್ಲಿ ಗಂಗೆ, ಶುಕ್ಲ ತೀರ್ಥದಲ್ಲಿ ನರ್ಮದೆ, ಕುರುಕ್ಷೇತ್ರದಲ್ಲಿ ಸರಸ್ವತಿ, ಪಾಪಪರಿಹಾರಕ ಆಗಿರುತ್ತವೆ. ಆದರೆ ಶ್ರೀಕೃಷ್ಣನ ನಾಮಸ್ಮರಣವು ಎಲ್ಲ ಸ್ಥಳಗಳಲ್ಲಿಯೂ, ಎಲ್ಲ ಕಾಲದಲ್ಲಿಯೂ ಎಲ್ಲ ಪಾಪಗಳ ಪರಿಹಾರಕ್ಕೆ ಉತ್ತಮ ಉಪಾಯವಾಗಿರುತ್ತದೆ.

**ದರ್ಶನಾತ್ ಮಮ ಭಕ್ತಾನಾಂ ಮೃತ್ಯುಮಾಪ್ನೋತಿ ಯಃ ಕ್ವಚಿತ್।**
**ವಿನಾ ಮತ್‌ಸ್ಮರಣಾತ್ ಪುತ್ರ, ಮುಕ್ತಿಮೇತಿ ಸ ಮಾನವಃ॥**

ಮರಣಕಾಲದಲ್ಲಿ ನನ್ನ ಭಕ್ತರ ದರ್ಶನ ಮಾಡಿಕೊಂಡವರು ನನ್ನಸ್ಮರಣ ಮಾಡದಿದ್ದರೂ ಮುಕ್ತಿಯನ್ನು ಹೊಂದುತ್ತಾರೆ. ಯಾವ ಮನೆ, ಮಠ, ಮಂದಿರಗಳಲ್ಲಿ ಶ್ರೀಕೃಷ್ಣನ ನಾಮ ಸಂಕೀರ್ತನವು ನಿರಂತರವೂ ನಡೆಯುವದೋ ಅದೇ ಕಾಶಿ, ಪುಷ್ಕರ, ಗಯಾ, ಕುರುಕ್ಷೇತ್ರ. ಗಂಗಾ, ಗೋದಾ, ಮುಂತಾದ ಎಲ್ಲ ತೀರ್ಥಗಳು ಆ ಮಂದಿರದಲ್ಲಿ ಇರುತ್ತವೆ.

**ಜೀವಿತಂ ಜನ್ಮ ಸಾಫಲ್ಯಂ ಮುಖಂ ತಸ್ಯೈವ ಸಾರ್ಥಕಂ।**
**ಸತತಂ ರಸನಾ ಯಸ್ಯ ಕೃಷ್ಣ ಕೃಷ್ಣೇತಿ ಜಲ್ಪತಿ॥**

ಯಾವನ ನಾಲಿಗೆಯು ಯಾವಾಗಲೂ ಕೃಷ್ಣ ಕೃಷ್ಣ ಎಂದು ನುಡಿಯುತ್ತಲಿರುವದೋ ಅವನ ಮುಖವು ಸಾರ್ಥಕ. ಜೀವನವು ಸಫಲ.

**ಸಕೃದುಚ್ಚರಿತಂ ಯೇನ ಹರಿರಿತ್ಯಕ್ಷರ ದ್ವಯಂ।**
**ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ॥**

ಹರಿ ಎಂಬ ಎರಡು ಅಕ್ಷರಗಳನ್ನು ಒಮ್ಮೆಯಾದರೂ ಯಾವನು ಉಚ್ಚರಿಸುವನೋ ಅವನು ಮೋಕ್ಷಕ್ಕೆ ಹೋಗಲು ಟೊಂಕ ಕಟ್ಟಿಕೊಂಡು ಸಿದ್ಧನಾಗಿ ನಿಂತುಕೊಂಡಂತೆ.

**ನಾಮ್ನೋಽಸ್ತಿ ಯಾವತೀ ಶಕ್ತಿಃ ಪಾಪನಿರ್ದಹನೇ ಹರೇಃ।**
**ತಾವತ್ ಕರ್ತುಂ ನ ಶಕ್ನೋತಿ ಪಾತಕಂ ಪಾತಕೀ ಜನಃ ॥**

ಶ್ರೀಹರಿಯ ನಾಮದಲ್ಲಿ ಎಷ್ಟು ಪಾಪಗಳನ್ನು ಸುಟ್ಟು ಹಾಕುವ ಶಕ್ತಿ ಇದೆಯೋ ಅಷ್ಟು ಪಾಪಗಳನ್ನು ಯಾವ ಪಾಪಿಷ್ಠನೂ ಮಾಡಲಾರ. ನೂರಾರು ಚಾಂದ್ರಾಯಣ, ಸಾವಿರಾರು ಕೃಚ್ಛ್ರ ಸಾಂತಪನ ಪರಾಕ ಮುಂತಾದ ವ್ರತಗಳಿಂದ ನಷ್ಟವಾಗದೆ ಉಳಿದಿರುವ ಮಹಾ ಮಹಾ ಪಾತಕಗಳೂ ಕೂಡ ಕೃಷ್ಣ ಕೃಷ್ಣ ಎಂದು ಭಗವನ್ ನಾಮಕೀರ್ತನದಿಂದ ನಷ್ಟವಾಗಿ ಹೋಗುತ್ತವೆ. ಸೂರ್ಯನ ಕಿರಣಗಳಿಂದ ಹಿಮದ ಗಡ್ಡೆಗಳು ಕರಗುವಂತೆ ಕೃಷ್ಣನ ನಾಮಕೀರ್ತನೆಯಿಂದ ಬ್ರಹ್ಮಹತ್ಯೆ ಸುರಾಪಾನ, ಗುರುಪತ್ನೀ, ಗಮನ, ಸುವರ್ಣಚೌರ್ಯ ಮುಂತಾದ ಮಹಾಪಾಪಗಳು ನಾಶವಾಗುವವು.

**ಪತತಾಂ ಶತಖಂಡಾ ತು ಸಾ ಜಿಹ್ವಾ ರೋಗ ರೂಪಿಣೀ।**
**ಶ್ರೀಕೃಷ್ಣ ಕೃಷ್ಣ ಕೃಷ್ಣೇತಿ ಯಾಕೃಷ್ಣೇತಿ ನ ಜಲ್ಪತಿ ॥**

ಯಾವ ನಾಲಿಗೆಯು ಶ್ರೀಕೃಷ್ಣ ಕೃಷ್ಣ ಶ್ರೀಕೃಷ್ಣ ಎಂದು ನಿರತಂರವೂ ನುಡಿಯುವದಿಲ್ಲವೋ ಅಂಥ ನಾಲಿಗೆ ಒಂದು ರೋಗವಿದ್ದಂತೆ. ನೂರು ತುಂಡಾಗಿ ಬಿದ್ದು ಹೋಗಲಿ ಅಂಥ ನಾಲಿಗೆ.

ಶ್ರೀಕೃಷ್ಣನ ನಾಮಕೀರ್ತನೆಯನ್ನು ಮಾಡುವ ಮನುಷ್ಯನ ದನಿಯನ್ನು ಕೇಳಿ ಯಮಧರ್ಮನು ಕೂಡ ಹೆದರಿ ಆ ಮನುಷ್ಯನ ನೂರು ಜನ್ಮದ ಪಾಪಗಳೆಲ್ಲವನ್ನೂ ಪರಿಮಾರ್ಜನೆ ಮಾಡಿಬಿಡುತ್ತಾನೆ. ಶ್ರೀಕೃಷ್ಣನ ನಾಮೋಚ್ಚಾರಣ ರೂಪವಾಗಿ ಪಥ್ಯವನ್ನು ನಿರಂತರವೂ ಮಾಡುವವರ ಮನಸ್ಸಿನಲ್ಲಿ ಯಾವ ಪಾಪರೋಗವೂ ಹುಟ್ಟುವದಿಲ್ಲ. ಶ್ರೀಕೃಷ್ಣನ ನಾಮೋಚ್ಚಾರಣೆಯ ಈ ಮಹಿಮೆಯನ್ನು ಪ್ರಾತಃಕಾಲದಲ್ಲಿ ಎದ್ದು ಪಠಿಸುವವರಿಗೆ ನಾನು ಸರ್ವವಿಧವಾದ ಕಲ್ಯಾಣವನ್ನು ಉಂಟುಮಾಡುತ್ತೇನೆ. ತ್ರಿಕಾಲದಲ್ಲಿಯೂ ಮೂರು ಸಂಧ್ಯಾಕಾಲದಲ್ಲಿಯೂ ಶ್ರೀಕೃಷ್ಣನ ನಾಮ ಉಚ್ಚರಿಸುವವರ ಮನೋರಥಗಳನ್ನೆಲ್ಲ ನಾನು ಪೂರ್ಣ ಮಾಡುತ್ತೇನೆ. ಮರಣಾನಂತರ ಅವರಿಗೆ ಸದ್ಗತಿಯನ್ನು ಪ್ರದಾನ ಮಾಡುತ್ತೇನೆ.

## ಶ್ರೀಕೃಷ್ಣನ ಧ್ಯಾನ, ದಾಮೋದರ ಮಂತ್ರದ ಅಧಿಕಾರಿಗಳಾದ ಗುರು-ಶಿಷ್ಯರ ರಕ್ಷಣೆ

**ಭಗವಂತ:-** ಪುತ್ರನಾದ ಬ್ರಹ್ಮನೇ, ನಾನು ಈಗ ಶ್ರೀಕೃಷ್ಣನ ಬಾಲರೂಪದ ಧ್ಯಾನವನ್ನು ಹೇಳುತ್ತೇನೆ ಕೇಳು.

ಒಂದು ಸುಂದರವಾದ ಉದ್ಯಾನ. ಅದರಲ್ಲಿ ಥಳಥಳಿಸುವ ರತ್ನಗಳಿಂದ ಹೊಳೆಯುವ ಒಂದು ಸುವರ್ಣ ಮಂಟಪ. ಅದರ ನಡುವೆ ಒಂದು ಕಲ್ಪವೃಕ್ಷ. ಆ ಕಲ್ಪವೃಕ್ಷದ ಕೆಳಗೆ ರತ್ನಮಯ ಸಿಂಹಾಸನ. ಅದರ ಮೇಲೆ ಕಮಲಾಸನ, ಆ ಕಮಲಾಸನದ ಮೇಲೆ

ಶ್ಯಾಮಸುಂದರನಾದ ಬಾಲಗೋಪಾಲ ರೂಪದಿಂದ ಒಪ್ಪುವ ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮ. ಹಣೆಯ ಮಣೆಯ ಮೇಲೆ ಹೊರಳಿ ಉರುಳಿದ ಗುಂಗುರು ಕೂದಲು. ಬಿರಿದ ಬೀರುವ ತಾವರೆಯಂತೆ ಸುಂದರವಾದ ಮುಖ, ಅದರ ಮೇಲೆ ಹೊಂದಾವರೆಯ ಸಂದೇಹದಿಂದ ಮತ್ತೂ ಮತ್ತೂ ಅದರ ಸುಗಂಧ ಲೋಭದಿಂದ ಮುಕುರುವ ಭ್ರಮಗಳು. ನೈದಿಲೆಯಂತೆ ಒಪ್ಪುವ ಕಪ್ಪು ಕಣ್ಣು, ಕುಂಡಲ ಕಾಂತಿಯಿಂದ ಶೋಭಿಸುವ ಉತ್ಫುಲ್ಲ ಗಲ್ಲ, ಎಸಳು ಮೂಗು, ಕೆಂಪು ತುಂಟಿ, ಮುಗುಳು ನಗೆ, ಕಂಠದಲ್ಲಿ ಅನೇಕ ಹಾರಗಳು ತುರು ಕರುಗಳ ಅಡಿಯ ಹುಡಿಯಿಂದ ಧೂಸರಿತವಾದ ಎದೆ. ಅಲಂಕಾರದ ಕಾಂತಿಯಿಂದ ಪರಿಪುಷ್ಟವಾದಂತೆ ತೋರುವ ಅಂಗಾಂಗಗಳು. ಕೆಂದಾವರೆಯಂತೆ ಸುಂದರವಾದ ಚರಣ, ಎಡಗೈಯಲ್ಲಿ ಹಾಲು, ಬಲಗೈಯಲ್ಲಿ ಬೆಣ್ಣೆ, ಹಿಂದೆ ಹಸುಗಳು, ಅಕ್ಕಪಕ್ಕದಲ್ಲಿ ಗೋಪಿಯರು. ಮುಂದೆ ಪುಟ್ಟಪಾದಕ್ಕೆ ಹಣೆ ಚಾಚಿ ನಿಂತ ಇಂದ್ರಾದಿ ದೇವತೆಗಳು. ಎಲ್ಲ ದೇವರ್ಷಿಗಳು ಕೈ ಜೋಡಿಸಿ ಆ ಭಗವಂತನ ಧ್ಯಾನ ಮಾಡುತ್ತಿದ್ದಾರೆ. ಇವರೆಲ್ಲರ ನಟ್ಟ ನಡುವೆ ಕೋಟಿ ಮನ್ಮಥರಿಗಿಂತ ಸುಂದರವಾದ ಬಾಲ ಗೋಪಾಲ ಕೃಷ್ಣನು ತನ್ನ ಶೈಶವ ಸಹಜ ಸುಂದರನಾದ ಮಂದಹಾಸದಿಂದ ಎಲ್ಲರನ್ನೂ ಅನುಗ್ರಹಿಸುತ್ತ ಎಲ್ಲರ ಮೇಲೆಯೂ ತನ್ನ ಕರುಣಾಪೂರ್ಣ ದೃಷ್ಟಿಯಿಂದ ಅಮೃತ ಸಿಂಚನ ಮಾಡುತ್ತ ನಿಂತು ಕೊಂಡಿದ್ದಾನೆ. ಹೀಗೆ ಬಾಲ ಗೋಪಾಲಕೃಷ್ಣನನ್ನು ಚಿಂತನೆ ಮಾಡಿ ಧ್ಯಾನಗೈದು ಪ್ರತಿದಿನವೂ ಪ್ರಾತಃಕಾಲದಲ್ಲಿ ಎದ್ದು ಪೂಜೆ ಮಾಡಬೇಕು. ಮತ್ತು ಹಾಲು, ಬೆಣ್ಣೆ, ಮೊಸರು ತುಪ್ಪ, ಪಾಯಸ ಮುಂತಾದವುಗಳನ್ನು ಸಮರ್ಪಿಸಬೇಕು.

ಹೀಗೆ ಪ್ರತಿದಿನವೂ ಭಕ್ತಿಯಿಂದ ಪ್ರಾತಃಸ್ನಾನ ಮಾಡಿ ಸಂಧ್ಯೆ, ಮಂತ್ರ ಜಪಗಳನ್ನು ಮುಗಿಸಿ, ಶ್ರೀಕೃಷ್ಣನ ಮೇಲೆ ಹೇಳಿದ ಬಾಲರೂಪವನ್ನು ಚಿಂತಿಸಿ, ಶ್ರೀಕೃಷ್ಣನ ಪೂಜೆಯನ್ನು ಮಾಡುವವರು ಈ ಲೋಕದಲ್ಲಿ ಐಶ್ವರ್ಯವನ್ನೂ ಪರಲೋಕದಲ್ಲಿ ಮೌಕ್ತಿಕ ಆನಂದವನ್ನೂ ಪಡೆಯುತ್ತಾರೆ. ಶ್ರೀಕೃಷ್ಣನ ಪರಮ ಪ್ರೀತಿ ಹಾಗೂ ಪ್ರಸಾದವನ್ನು ಪಡೆಯಲು ಶಾಸ್ತ್ರೋಕ್ತವಾದ ಮಂತ್ರಗಳನ್ನು ಜಪಿಸಬೇಕು. ಪ್ರತಿದಿನವೂ. ಓಂ ನಮೋ ನಾರಾಯಣಾಯ ಎಂಬ ಶ್ರೀಮನ್ನಾರಾಯಣ ಅಷ್ಟಾಕ್ಷರ ಮಂತ್ರವನ್ನೂ. ಓಂ ನಮೋ ಭಗವತೇ ವಾಸುದೇವಾಯ ಎಂಬ ವಾಸುದೇವ ದ್ವಾದಶಾಕ್ಷರ ಮಂತ್ರವನ್ನೂ, ಓಂ ಕ್ಲೀಂ. ಕೃಷ್ಣಾಯ ನಮಃ ಎಂಬ ಕೃಷ್ಣ ಷಡಕ್ಷರ ಮಂತ್ರವನ್ನೂ 'ಓಂ ಶ್ರೀದಾಮೋದರಾಯ ನಮಃ' ಎಂಬ ದಾಮೋದರ ಅಷ್ಟಾಕ್ಷರ ಮಂತ್ರವನ್ನೂ ಹಾಗೂ ಆಗಮೋಕ್ತವಾದ ಬೇರೆ ಬೇರೆ ಮಂತ್ರಗಳನ್ನೂ ಗುರುಗಳಿಂದ ಉಪದೇಶ ಪಡೆದು ಪ್ರತಿನಿತ್ಯವೂ ಸ್ನಾನಮಾಡಿ ಶುಚಿರ್ಭೂತನಾಗಿ ಭಕ್ತಿಯಿಂದ ಜಪಿಸಬೇಕು. ಈ ಮಂತ್ರಗಳನ್ನು ನಾಸ್ತಿಕರಿಗೂ, ಅಯೋಗ್ಯರಿಗೂ, ಹರಿ ಗುರುದ್ವೇಷಿಗಳಿಗೂ ಉಪದೇಶ ಮಾಡಬಾರದು. ಆಲಸ್ಯ, ಅಹಂಕಾರ, ರೋಗ, ಮುಂಗೋಪ, ವಿಷಯಲಂಪಟತೆ, ಅಸೂಯೆ, ಶಾಠ್ಯ, ದೌಷ್ಟ್ಯ, ಭೋಗಲಾಲಸೆ, ಅನ್ಯಾಯದಿಂದ ಧನ ಸಂಪಾದನೆ, ಪರಸ್ತ್ರೀಯರಲ್ಲಿ ಆಸಕ್ತಿ, ಪಂಡಿತ ದ್ವೇಷ, ವ್ರತ ಭ್ರಷ್ಟ, ಲೋಭ, ತಾನೇ ಪಂಡಿತ ಎಂಬ ಗರ್ವ, ನಿರ್ದಯತೆ, ದುಷ್ಪರ ಮುಂದಾಳುತನ, ಕ್ರೌರ್ಯ, ಮುಂತಾದ ದುರ್ಗುಣಗಳಿಂದ ಒಡಗೂಡಿದ ಶಿಷ್ಯರಿಗೆ ಮಂತ್ರಗಳನ್ನು ಉಪದೇಶ ಮಾಡಬಾರದು. ಮಾಡಿದರೆ ಆ ಶಿಷ್ಯನ ಎಲ್ಲ ದೋಷಗಳು

ಗುರುವಿಗೆ ತಗಲುತ್ತವೆ, ಮಂತ್ರಿಯ ದೋಷಗಳು ರಾಜನಿಗೂ, ಹೆಂಡತಿಯ ದೋಷಗಳು ಗಂಡನಿಗೂ, ಶಿಷ್ಯನ ದೋಷಗಳು ಗುರುವಿಗೂ ತಗಲುತ್ತವೆ ಎಂದು ಶಾಸ್ತ್ರವಚನವಿರುತ್ತದೆ. ಆದುದರಿಂದ ಗುರುಗಳು ಶಿಷ್ಯನ ಗುಣ ಅವಗುಣಗಳನ್ನು ಪರೀಕ್ಷಿಸಿ ಈ ಎಲ್ಲ ಮೇಲೆ ಹೇಳಿದ ದೋಷಗಳು ಇಲ್ಲದಿರುವವರನ್ನು ಮಾತ್ರ ಶಿಷ್ಯತ್ವೇನ ಸ್ವೀಕರಿಸಬೇಕು. ಅವರಿಗೆ ಈ ಮಂತ್ರಗಳ ಉಪದೇಶ ನೀಡಬೇಕು.

ಇನ್ನು ಗುರುಗಳ ಲಕ್ಷಣವನ್ನು ಹೇಳುತ್ತೇನೆ ಕೇಳು. ಯಾರ ಮನಸ್ಸು ಪ್ರಸನ್ನವಿರುವದೋ, ಯಾರು ಶ್ರೀಹರಿಯಲ್ಲಿ ಮನಸ್ಸನ್ನು ಇಟ್ಟು ಶಾಸ್ತ್ರೋಕ್ತವಾದ ಧರ್ಮ ಕರ್ಮಾನುಷ್ಠಾನಗಳನ್ನು ಆಚರಿಸುತ್ತಿರುವರೋ ಮತ್ತು ವೇದ ವೇದಾಂತಗಳನ್ನು ಅಧ್ಯಯನ ಮಾಡಿ ಶಿಷ್ಯರಿಗೆ ಪಾಠವನ್ನು ಹೇಳಿ ಬ್ರಹ್ಮೋಪದೇಶವನ್ನು ಮಾಡಲು ಸಮರ್ಥರೋ ಅಂಥವರು ಗುರು ಎಂದು ಕರೆಯಲ್ಪಡುತ್ತಾರೆ. ಇಂಥ ದಯಾಸಾಗರರೂ, ಸರ್ವ ಪ್ರಾಣಿಗಳಿಗೂ ಉಪಕಾರ ಮಾಡುವವರೂ, ಕಾಮಕ್ರೋಧಾದಿರಹಿತರೂ, ನಿಸ್ಪೃಹರೂ ಸರ್ವ ವಿದ್ಯಾವಿಶಾರದರೂ, ಶಿಷ್ಯರ ಸಂಶಯಗಳನ್ನು ಪರಿಹರಿಸುವವರೂ, ಮಹಾತ್ಮರೂ ಆದವರು ಮಾತ್ರ ಗುರು ಎಂಬ ಗೌರವಕ್ಕೆ ಅರ್ಹರಾಗಿರುತ್ತಾರೆ. ಈ ಎಲ್ಲ ಗುರುವಿನ ಲಕ್ಷಣಗಳಿಂದ ಯುಕ್ತರಾದ ಮಹಾನುಭಾವರಿಂದ ಮೇಲೆ ಹೇಳಿದ ಶಿಷ್ಯನ ಲಕ್ಷಣಗಳಿಂದ ಯುಕ್ತನಾದ ಮನುಷ್ಯನು ಮಾರ್ಗಶೀರ್ಷ ಮಾಸದಲ್ಲಿ ದಾಮೋದರ ಮಂತ್ರದ ಉಪದೇಶವನ್ನು ತೆಗೆದುಕೊಳ್ಳಬೇಕು. ಹಾಗೂ ಮಾರ್ಗಶೀರ್ಷ ಮಾಸದಲ್ಲಿ ದಾಮೋದರ ಮಂತ್ರವನ್ನು ಒಂದು ದಿನವೂ ತಪ್ಪದಂತೆ ಜಪಿಸಬೇಕು.

ವಿವೇಕಿಯಾದ ಮನುಷ್ಯನು ಈ ಮಾರ್ಗಶೀರ್ಷ ಮಾಸದಲ್ಲಿ ಮುಖ್ಯವಾಗಿ ಶ್ರೀಮತ್ ಭಾಗವತ ಪುರಾಣವನ್ನು ಶ್ರವಣ ಮಾಡಬೇಕು. ಭಾಗವತದ ಒಂದೊಂದು ಪದ್ಯದ ಶ್ರವಣ ಪಠಣ ಮಾಡಿದರೆ ಒಂದು ಹಸುವನ್ನು ದಾನ ನೀಡಿದಷ್ಟು ಪುಣ್ಯ ಬರುವದು. ಪ್ರತಿದಿನವೂ ಭಾಗವತದ ಒಂದು ಸ್ಕಂದ ಅಥವಾ ಒಂದು ಅಧ್ಯಾಯದ ಪಾರಾಯಣ, ಪ್ರವಚನ ಅಥವಾ ಶ್ರವಣ ಮಾಡಿದರೆ, ಒಂದು ಸಾವಿರ ಗೋದಾನ ಮಾಡಿದ ಪುಣ್ಯವು ಲಭಿಸುವದು. ಭಾಗವತ ಒಂದು ಶ್ಲೋಕ ಶ್ರವಣ ಮಾತ್ರದಿಂದ ಶ್ರೀವೇದವ್ಯಾಸ ರಚಿತ ಹದಿನೆಂಟು ಪುರಾಣಗಳ ಶ್ರವಣದಿಂದ ಬರುವಷ್ಟು ಪುಣ್ಯವು ಬರುತ್ತದೆ. ಕಲಿಯುಗದಲ್ಲಿ ಭಾಗವತ ಶಾಸ್ತ್ರದ ಪೂಜೆ ಮಾಡುವವರ ಮೇಲೆ ನಾನು ಪ್ರಸನ್ನನಾಗಿರುತ್ತೇನೆ. ಭಕ್ತಿಯಿಂದ ವೈಷ್ಣವ ವಿದ್ವಾಂಸರಿಗೆ ಭಾಗವತ ಗ್ರಂಥವನ್ನು ದಾನಕೊಟ್ಟವರು ವಿಷ್ಣುಲೋಕವನ್ನು ಹೊಂದುತ್ತಾರೆ. ಭಗವತ್ ಪ್ರೀತಿಯು ಆಗಲಿಕ್ಕೆ ಎಲ್ಲ ವೈಷ್ಣವಶಾಸ್ತ್ರ ಸಂಗ್ರಹವನ್ನು ಮಾಡಿ ಅವುಗಳನ್ನು ಸರಿಯಾಗಿ ರಕ್ಷಣೆ ಮಾಡುತ್ತ ಪ್ರತಿನಿತ್ಯವೂ ಪೂಜೆ ಮಾಡಿದರೆ ನನ್ನ ಪರಮಾನುಗ್ರಹಕ್ಕೆ ಪಾತ್ರನಾಗುತ್ತಾನೆ.

ಭಾಗವತ ಪುಸ್ತಕವು ಇದ್ದ ಮನೆಯಲ್ಲಿ ಎಲ್ಲ ದೇವತೆಗಳೊಂದಿಗೆ ನಾನು ಸನ್ನಿಹಿತನಾಗಿರುತ್ತೇನೆ. ಭಾಗವತದಲ್ಲಿ ಹೇಳಿದ ನನ್ನ ಕಥೆಯನ್ನು ಓದುತ್ತ ಕೇಳುತ್ತ ನನ್ನಲ್ಲಿ ಯಾರಿಗೆ ಭಕ್ತಿಭಾವವು ಅಭಿವೃದ್ಧವಾಗಿ, ನನ್ನ ಮಾಹಾತ್ಮ್ಯ ಜ್ಞಾನವನ್ನು ಮಾಡಿಕೊಂಡು ನನಗೇ ಶರಣು ಬರುವರೊ ಅವರನ್ನು ನಾನು ಎಂದಿಗೂ ಕೈ ಬಿಡುವದಿಲ್ಲ. ಅವರಿಗೆ ಇಹದಲ್ಲಿ ಭೋಗ ಭಾಗ್ಯಗಳನ್ನಿತ್ತು ಕೊನೆಗೆ ನನ್ನ ವೈಕುಂಠಲೋಕಕ್ಕೆ ಕರೆದುಕೊಂಡು

ಹೋಗುತ್ತೇನೆ. ಅಂಥ ಭಾಗವತ ಭಕ್ತರನ್ನು. ಯಾರು ಭಾಗವತವನ್ನು ಶ್ರವಣ ಮಾಡುವರೋ ಅವರು ನನ್ನನ್ನು ತಮ್ಮ ವಶಮಾಡಿಕೊಂಡಂತೆ. ಸಾಧ್ವೀಸ್ತ್ರೀಯು ಸೇವಾ ಭಾವದಿಂದ ಪತಿಯನ್ನು ತನ್ನ ಕೈವಶನನ್ನಾಗಿ ಮಾಡಿಕೊಳ್ಳುವಂತೆ ನಿಜವಾದ ಭಗವದ್ ಭಕ್ತರು ಭಾಗವತದ ಶ್ರವಣ, ಪಠಣ, ಪಾರಾಯಣ, ಪ್ರವಚನಗಳ ಮುಖಾಂತರ ಶ್ರೀಹರಿಯನ್ನು ತಮ್ಮ ವಶವರ್ತಿಯನ್ನಾಗಿ ಮಾಡಿಕೊಳ್ಳುವರು.

## ಮಥುರಾ ಸೇವನೆಯ ಮಹಿಮೆ ಮತ್ತು ಗ್ರಂಥದ ಉಪಸಂಹಾರ

**ಭಗವಂತ:-** ಭೂಲೋಕದಲ್ಲಿ ಅನೇಕ ಕ್ಷೇತ್ರಗಳು ಇರುತ್ತವೆ. ಅವುಗಳಲ್ಲೆಲ್ಲ ನನಗೆ ಪ್ರೀತ್ಯಾಸ್ಪದವಾದ ಕ್ಷೇತ್ರವೆಂದರೆ ಮಥುರಾ ಕ್ಷೇತ್ರ. ಸ್ವರ್ಗ, ಪಾತಾಳ, ಅಂತರಿಕ್ಷ, ಹಾಗೂ ಮನುಷ್ಯ ಲೋಕಗಳಲ್ಲಿ ಮಥುರಾ ಪುರಿಯಷ್ಟು ನನಗೆ ಪ್ರಿಯವಾದ ಬೇರೆ ಕ್ಷೇತ್ರವು ಇರುವದಿಲ್ಲ. ಈ ಮಥುರಾ ಮಂಡಲದ ಯಾತ್ರೆಯನ್ನು ಭಕ್ತಿಯಿಂದ ಮಾಡಿದವರು ತಮ್ಮ ಎಲ್ಲ ಪಾಪಗಳನ್ನು ತೊಳೆದುಕೊಂಡು ಶ್ರೀಕೃಷ್ಣನ ಅನುಗ್ರಹದಿಂದ ಸ್ವರ್ಗಲೋಕವನ್ನು ಹೊಂದುತ್ತಾರೆ. ಮೂರು ದಿನ ಈ ಮಥುರಾ ಮಂಡಲದಲ್ಲಿ ವಾಸ ಮಾಡಿದ ಮನುಷ್ಯನ ಪಾದಧೂಳಿಯ ಬೇರೆಯವರನ್ನು ಕೂಡ ಪವಿತ್ರಗೊಳಿಸುತ್ತದೆ. ಒಂದು ಸಣ್ಣ ಬೆಂಕಿಯ ಕಿಡಿಯು ಒಣ ಹುಲ್ಲಿನ ರಾಶಿಯನ್ನು ಸುಟ್ಟು ಹಾಕುವಂತೆ ಈ ಮಥುರಾ ಪುರಿಯು ರಾಶಿ ರಾಶಿ ಪಾಪಗಳನ್ನೆಲ್ಲ ಭಸ್ಮಮಾಡುತ್ತದೆ.

**ಅನ್ಯತ್ರ ಹಿ ಕೃತಂ ಪಾಪಂ ತೀರ್ಥಮಾಸಾದ್ಯ ನಶ್ಯತಿ ।**
**ತೀರ್ಥೇ ತುಂ ಯತ್ಕೃತಂ ಪಾಪಂ ವಜ್ರಲೇಪೋ ಭವಿಷ್ಯತಿ ॥**

ಬೇರೆ ಕಡೆ ಮಾಡಿದ ಪಾಪಗಳು ತೀರ್ಥಕ್ಷೇತ್ರಗಳಲ್ಲಿ ಬಂದು ಮಾಡಿದ ಸ್ನಾನ ದಾನಗಳಿಂದ ನಾಶವಾಗುತ್ತವೆ. ಆದರೆ ತೀರ್ಥಕ್ಷೇತ್ರಗಳಿಗೆ ಬಂದಾಗಲೇ ಪಾಪ ಮಾಡಿದರೆ ಅದು ಮಾತ್ರ ವಜ್ರಲೇಪವಾಗುತ್ತದೆ. ಆದುದರಿಂದ ಈ ಮಥುರಾ ಮಂಡಲಕ್ಕೆ ಬಂದವರು ಯಾವ ಪಾಪ ಕೃತ್ಯಗಳನ್ನು ಮಾಡದೆ ಇಲ್ಲಿ ಸ್ನಾನ ದಾನ, ಭಗವಂತನ ಧ್ಯಾನ, ಶ್ರೀಹರಿಯ ಗುಣಗಾನ 'ಭಾಗವತ ಕಥಾ ಶ್ರವಣ' ನಾಮ ಸಂಕೀರ್ತನ ಮುಂತಾದ ಪುಣ್ಯಕರ್ಮಗಳನ್ನು ಮಾಡಬೇಕು.

ಪ್ರಯಾಗ ಕ್ಷೇತ್ರದಲ್ಲಿ ಒಂದು ವರ್ಷ ಇದ್ದು ಸ್ನಾನದಾನ ಮಾಡುವದರಿಂದ ಬರುವಷ್ಟು ಪುಣ್ಯವು ಈ ಮಥುರಾ ಪುರಿಯಲ್ಲಿ ಕೇವಲ ಮಾರ್ಗಶೀರ್ಷ ಮಾಸದಲ್ಲಿ ವಾಸಮಾಡುವದರಿಂದಲೇ ಬರುವದು. ನಾನು ಅರ್ಥಾತ್ ಶ್ರೀಕೃಷ್ಣನು ಗೋಪಕನ್ಯೆಯರಿಂದ ಒಡಗೂಡಿಕೊಂಡು ಯಾವಾಗಲೂ ಈ ಮಥುರಾ ಕ್ಷೇತ್ರದಲ್ಲಿ ವಾಸಮಾಡಿರುತ್ತೇನೆ. ಮುಕ್ತಿದಾಯಕವಾದ ಮಥುರಾ ಕ್ಷೇತ್ರವು ಮಹೀಮಂಡಲದಲ್ಲಿ ಇದ್ದರೂ ಮಾನವರು ಅಲ್ಲಿ ಹೋಗದೇ ಸಂಸಾರದಲ್ಲಿ ತೊಳಲಾಡುತ್ತಿದಾರೆ. ಇದಕ್ಕಿಂತ ಮೂರ್ಖತನವು ಬೇರೆ ಯಾವುದಿದೆ? ಕಾಶಿ, ಪ್ರಯಾಗ ಮುಂತಾದ ತೀರ್ಥಗಳು ಮೋಕ್ಷದಾಯಕ ಎಂದು ಪ್ರಸಿದ್ಧವಾಗಿರುತ್ತವೆ. ಆದರೆ ಮಥುರೆಯಷ್ಟು ಬೇಗ ಮುಕ್ತಿಯನ್ನು ಪ್ರದಾನಮಾಡುವ ಕ್ಷೇತ್ರವು ಯಾವದೂ ಇರುವದಿಲ್ಲ.

ಈ ಮಥುರಾ ಕ್ಷೇತ್ರದಲ್ಲಿ ಇದ್ದು ಸ್ನಾನಮಾಡಿ ಶ್ರೀಕೃಷ್ಣನ ಧ್ಯಾನ ಉಪಾಸನೆ ಆರಾಧನೆ ಮಾಡುವವರಿಗೆ ಸಾಮೀಪ್ಯ, ಸಾರೂಪ್ಯ, ಸಾಲೋಕ್ಯ, ಸಾಯುಜ್ಯ ಎಂಬ ನಾಲ್ಕು ವಿಧವಾದ

ಮೋಕ್ಷಗಳು ಕರತಲಾಮಲಕವಾಗುತ್ತವೆ. ಈ ಮಥುರಾ ಮಂಡಲಕ್ಕೆ ಬಂದು ಮರಣ ಹೊಂದಿದ ಪಶು-ಪಕ್ಷಿ ನರ ವಾನರ, ಕ್ರಿಮಿಕೀಟ, ಖಗಮೃಗ, ಹುಳ ಹುಪ್ಪಡಿಗಳು ಕೂಡ ಚತುರ್ಭುಜ ರೂಪವನ್ನು ಹೊಂದಿ ಮೌಕ್ತಿಕ ಆನಂದವನ್ನು ಹೊಂದುತ್ತವೆ. ಈ ಮಥುರಾ ಕ್ಷೇತ್ರದಲ್ಲಿ ಹಾವು ಕಚ್ಚಿ, ಪಶು ಇರಿದು ಅಥವಾ ನೀರಿನಲ್ಲಿ ಮುಳುಗಿ ಅಪಮೃತ್ಯು ಬಂದರೂ ಕೂಡ ವಿಷ್ಣುಲೋಕ ಪ್ರಾಪ್ತಿಯಾಗುವದು. ಮುಕ್ತಿ ಕ್ಷೇತ್ರ ಎಂದು ಪ್ರಸಿದ್ಧವಾದ ಈ ಮಥುರೆಯು ಈ ಲೋಕದಲ್ಲಿ ಇರುವವರೆಗೆ ಧರ್ಮ, ಅರ್ಥ, ಕಾಮ, ಹಾಗೂ ಇತರ ಕಾಮನೆಗಳನ್ನೆಲ್ಲ ಪೂರ್ಣಮಾಡಿ ಮರಣಾನಂತರ ಮೋಕ್ಷವನ್ನು ಕೂಡ ಪ್ರದಾನ ಮಾಡುವದು. ಇಂಥ ಮೋಕ್ಷದಾಯಕವಾದ ಅಧೋಕ್ಷಜನ ಕ್ಷೇತ್ರವನ್ನು ಯಾವ ಜ್ಞಾನಿಯು ಆಶ್ರಯಿಸಲಿಕ್ಕಿಲ್ಲ!

ಇಂಥ ಮಹಾಮಹಿಮೆಗಳುಳ್ಳ ಮಧುಪುರಿ ಅಥವಾ ಮಥುರಾ ಕ್ಷೇತ್ರವನ್ನು ಮಾರ್ಗಶೀರ್ಷ ಮಾಸದಲ್ಲಿ ಸೇವೆ ಮಾಡುವವರ ಕೈಯಲ್ಲಿಯೇ ಮುಕುಂದನು ಇರುತ್ತಾನೆ. ಆ ಮುಕುಂದನ ಕೈಯಲ್ಲಿಯೇ ಮೋಕ್ಷವು ಇರುತ್ತದೆ. ಆದುದರಿಂದ ಮೋಕ್ಷಾಕಾಂಕ್ಷಿಗಳು ಮಾರ್ಗಶೀರ್ಷ ಮಾಸದಲ್ಲಿ ಮಥುರಾ ಪಟ್ಟಣವನ್ನು ತಪ್ಪದೇ ಸೇವಿಸಬೇಕು. ಮಾರ್ಗಶೀರ್ಷ ಪೌರ್ಣಿಮಾ ದಿನದಂದು ಮಥುರಾದಲ್ಲಿ ಯಮುನಾ ನದಿಯ ಸ್ನಾನವನ್ನು ಮಾಡಿ ಶ್ರೀಕೃಷ್ಣನು ಸಂಚಾರಮಾಡಿದ ಸ್ಥಾನಗಳಲ್ಲಿ ಕುಳಿತು ಆ ಭಗವಂತನ ಧ್ಯಾನವನ್ನು ಮಾಡಬೇಕು. ಅದರಿಂದ ಇಲ್ಲಿ ಇರುವವರೆಗೆ ಭುಕ್ತಿ ಅನಂತರ ಮುಕ್ತಿ ಎರಡೂ ಪ್ರಾಪ್ತವಾಗುವವು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಲ್ಲ ಜಾತಿ ಜನಾಂಗದವರಿಗೂ ಮಥುರಾ ಕ್ಷೇತ್ರದಲ್ಲಿ ಮಾರ್ಗಶೀರ್ಷ ವ್ರತದ ಅನುಷ್ಠಾನ ಹಾಗೂ ಸ್ನಾನ, ದಾನ, ಧ್ಯಾನಾದಿಗಳಿಂದ ದಿವ್ಯ ಸದ್ಗತಿಯು ಸುಲಭವಾಗಿ ದೊರಕುವದು. ಈ ಮಾರ್ಗಶೀರ್ಷಮಾಸದ ಮಾಹಾತ್ಮ್ಯವನ್ನು ಶ್ರವಣ ಮಾಡುವದರಿಂದ ಪರಮಾತ್ಮನನ್ನು ವಶೀಕರಣ ಮಾಡಿಕೊಳ್ಳುವ ದಿವ್ಯ ಭಗವದ್ ಭಕ್ತಿಯು ಮಾನವರಿಗೆ ಕರಗತವಾಗುವದು. ಅಂಥ ಭಕ್ತಿಯಿಂದ ಭಗವಂತನು ಕೈವಶನಾಗುವನು. ಅಂಥ ಭಕ್ತಿಯಿಂದ ಮುಕ್ತಿ ತಾನಾಗಿ ಸುಲಭಸಾಧ್ಯವಾಗುವದು. ಆದುದರಿಂದ ಎಲ್ಲರೂ ಈ ಮಥುರಾ ಮಂಡಲದ ಮಾಹಾತ್ಮ್ಯವನ್ನೂ ಮಾರ್ಗಶೀರ್ಷ ಮಾಸದ ಮಾಹಾತ್ಮ್ಯವನ್ನೂ ಅವಶ್ಯವಾಗಿ ಶ್ರವಣಮಾಡಬೇಕು.

*ಮಾರ್ಗಶೀರ್ಷ ಮಾಹಾತ್ಮ್ಯ ಸಂಪೂರ್ಣ*

## ವೈಶಾಖಮಾಸದ ಮಹಿಮೆ ಮತ್ತು ಹಿರಿಮೆ

## ಅಧ್ಯಾಯ - ೭೦

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀ ರಯೇತ್**

ಶ್ರೀ ನರ ನಾರಾಯಣರನ್ನು ಜೀವೋತ್ತಮನಾದ ವಾಯುದೇವನನ್ನೂ ಲಕ್ಷ್ಮೀದೇವಿಯನ್ನೂ ಸರಸ್ವತಿಯನ್ನೂ ಪುರಾಣಕರ್ತರಾದ ಶ್ರೀ ವೇದವ್ಯಾಸದೇವರನ್ನೂ ನಮಸ್ಕಾರ ಮಾಡಿ ಪುರಾಣವನ್ನು, ಇತಿಹಾಸವನ್ನು ಹೇಳಬೇಕು.

**ಸೂತ:-** ಪೂರ್ವಕಾಲದಲ್ಲಿ ಅಂಬರೀಷ ಮಹಾರಾಜನು ಬ್ರಹ್ಮಪುತ್ರರಾದ ನಾರದ ಮಹರ್ಷಿಗಳನ್ನು ಕುರಿತು ಪ್ರಶ್ನೆ ಮಾಡಿದನು.

**ಅಂಬರೀಷ:-** ಮಹರ್ಷಿಗಳೇ, ತಾವು ಈ ವರೆಗೆ ನನ್ನನ್ನು ಕುರಿತು ಎಲ್ಲ ಮಾಸಗಳ ಮಾಹಾತ್ಮ್ಯವನ್ನು ನಿರೂಪಿಸಿದಿರಿ. ಎಲ್ಲ ಮಾಸಗಳಲ್ಲಿ ವೈಶಾಖ ಮಾಸವು ಸರ್ವಶ್ರೇಷ್ಠ ಎಂದು ತಾವು ಅಪ್ಪಣೆ ಕೊಡಿಸಿದಿರಿ. ಈ ಮಾಸವು ಎಲ್ಲ ಮಾಸಗಳಲ್ಲಿ ಶ್ರೇಷ್ಠವಾಗಬೇಕಾದರೆ ಏನು ಕಾರಣ? ಇದರ ಶ್ರೇಷ್ಠತೆಗೆ ಶ್ರೀಹರಿಯ ಪ್ರೀತ್ಯಾಸ್ಪದತ್ವವೇ ನಿಜವಾದ ಕಾರಣವಾಗಿದ್ದರೆ ಆ ವಿಷ್ಣು ಪ್ರೀತಿಯು ಈ ವೈಶಾಖ ಮಾಸದ ಮೇಲೆಯೇ ಅತ್ಯಧಿಕವಾಗಿ ಇರಲು ಕಾರಣವೇನು? ಹಾಗೂ ಈ ಮಾಸದಲ್ಲಿ ಯಾವ ಯಾವ ಧರ್ಮಕಾರ್ಯಗಳನ್ನು ಮಾಡುವದರಿಂದ ಭಗವತ್ ಪ್ರೀತಿ ಆಗುವದು?

**ನಾರದ:-** ವಿದ್ಯೆಗಳಲ್ಲಿ ವೇದವಿದ್ಯೆ, ಮಂತ್ರಗಳಲ್ಲಿ ಓಂಕಾರ, ವೃಕ್ಷಗಳಲ್ಲಿ ಕಲ್ಪವೃಕ್ಷ, ಹಸುಗಳಲ್ಲಿ ಕಾಮಧೇನು, ದೇವತೆಗಳಲ್ಲಿ ವಿಷ್ಣು, ವರ್ಣದಲ್ಲಿ ಬ್ರಾಹ್ಮಣ, ಪ್ರಿಯ ವಸ್ತುಗಳಲ್ಲಿ ಪ್ರಾಣ, ನದಿಗಳಲ್ಲಿ ಗಂಗೆ, ತೇಜಸ್ಸಿನಲ್ಲಿ ಸೂರ್ಯ, ಶಸ್ತ್ರಾಸ್ತ್ರಗಳಲ್ಲಿ ಚಕ್ರ, ಧಾತುಗಳಲ್ಲಿ ಬಂಗಾರ, ವೈಷ್ಣವರಲ್ಲಿ ಶಂಕರ, ರತ್ನಗಳಲ್ಲಿ ಕೌಸ್ತುಭಮಣಿಗಳು ಶ್ರೇಷ್ಠವಾಗಿ ಇರುವಂತೆ ಧರ್ಮಸಾಧನವಾದ ಮಾಸಗಳಲ್ಲಿ ವೈಶಾಖಮಾಸವು ಸರ್ವಶ್ರೇಷ್ಠವಾಗಿರುತ್ತದೆ. ಈ ವೈಶಾಖ ಮಾಸದಲ್ಲಿ ಬೆಳಗ್ಗೆ ಸೂರ್ಯನು ಉದಯಿಸುವದಕ್ಕಿಂತ ಮೊದಲು ಸ್ನಾನ ಮಾಡಿದವರು ಶ್ರೀವಿಷ್ಣುವಿನ ಪರಮ ಪ್ರೀತಿಗೆ ಪಾತ್ರರಾಗುವರು. ಸೂರ್ಯನು ಉದಯ ಹೊಂದಿ ಆರು ಮಾರು ಹೊತ್ತು ಏರುವವರೆಗೆ ಎಲ್ಲ ಜಲಾಶಯಗಳ ನೀರಿನಲ್ಲಿ ಸರ್ವದೇವತೆಗಳೂ ಶ್ರೀಹರಿಯ ಆಜ್ಞೆಯಿಂದ ಸನ್ನಿಹಿತರಾಗಿರುತ್ತಾರೆ.

**"ನ ಮಾಧವ ಸಮೋ ಮಾಸೋ ನ ಕೃತೇನ ಯುಗಂ ಸಮಂ।**
**ನ ಚ ವೇದ ಸಮಂ ಶಾಸ್ತ್ರಂ ನ ತೀರ್ಥಂ ಗಂಗಯಾ ಸಮಂ॥**

ವೈಶಾಖ ಮಾಸಕ್ಕೆ ಸಮಾನವಾದ ತಿಂಗಳು ಇಲ್ಲ. ಕೃತಯುಗಕ್ಕೆ ಸಮಾನವಾದ ಯುಗವು ಇಲ್ಲ. ವೇದಕ್ಕೆ ಸಮಾನವಾದ ಶಾಸ್ತ್ರವಿಲ್ಲ. ಗಂಗೆಗೆ ಸಮಾನವಾದ ತೀರ್ಥವಿಲ್ಲ ಎಂದು ವೇದಶಾಸ್ತ್ರಜ್ಞರ ಮತ. ಇದರಂತೆ ಏಕಾದಶಿ ಉಪವಾಸಕ್ಕೆ ಸರಿಯಾದ ತಪಸ್ಸಿಲ್ಲ. ದಾನ ನೀಡುವದಕ್ಕಿಂತ ಹೆಚ್ಚಿನ ಸುಖವಿಲ್ಲ. ದಯಾಗುಣಕ್ಕೆ ಸಮಾನವಾದ ಧರ್ಮವಿಲ್ಲ. ಆರೋಗ್ಯಕ್ಕೆ ಸರಿಯಾದ ಉನ್ನತಿಯಿಲ್ಲ. ಶ್ರೀವಿಷ್ಣುವಿಗೆ ಸಮಾನರಾದ ಸಂರಕ್ಷಕರಿಲ್ಲ. ವೈಶಾಖ ಮಾಸದಂಥ ತಿಂಗಳಿಲ್ಲ. ಇದಕ್ಕೆ ಮುಖ್ಯ ಕಾರಣ ಈ ಮಾಸದ ಮೇಲೆ ಶ್ರೀಹರಿಯು ಮಾಡುವ ವಿಶೇಷ ಅಭಿಮಾನ. ಈ ವೈಶಾಖ ಮಾಸದಲ್ಲಿ ಅತ್ಯಲ್ಪ ಪುಣ್ಯ ಮಾಡಿದರೂ ಅತ್ಯಧಿಕ ಪ್ರೀತಿಯಾಗುವದು ಶ್ರೀವಿಷ್ಣುವಿಗೆ. ಇತರ ಮಾಸಗಳಲ್ಲಿ ಗೋದಾನ, ಭೂದಾನ, ಸುವರ್ಣದಾನ, ಸರ್ವಸ್ವದಾನ ಮುಂತಾದವುಗಳಿಂದ ಬರುವ ಪುಣ್ಯವು ವೈಶಾಖ ಮಾಸದಲ್ಲಿ ಕೇವಲ ಪ್ರಾತಃಸ್ನಾನ ಹಾಗೂ ಜಲದಾನಗಳಿಂದಲೇ ಲಭ್ಯವಾಗುವದು. ವೈಶಾಖ ಮಾಸದಲ್ಲಿ ದಾರಿ ನಡೆದು ಬಾಯಾರಿಕೆಯಿಂದ ಬಳಲಿ ಬೆಂಡಾದ ಯಾತ್ರಿಕರಿಗೆ ನೀರಿನ ಅರವಟ್ಟಿಗೆಯನ್ನು ಇಟ್ಟು ಜಲವನ್ನು ಹನಿಸುವವರು ಬ್ರಹ್ಮ ವಿಷ್ಣು ಶಿವ ಮೂರು ದೇವತೆಗಳನ್ನೂ ಸಂತೋಷ ಪಡಿಸುತ್ತಾರೆ. ವೈಶಾಖ ಮಾಸದಲ್ಲಿ ಹಸಿದವರಿಗೆ ಅನ್ನ ನೀಡಿದವರೂ, ನೀರಡಿಸಿದವರಿಗೆ ನೀರು ಹನಿಸಿದವರೂ, ಬಿಸಿಲಿನಲ್ಲಿ ಬಳಲಿದವರಿಗೆ ಬೀಸಣಿಕೆ ಬೀಸಿದವರೂ ವಿಷ್ಣುಲೋಕದಲ್ಲಿ ಪ್ರತಿಷ್ಠಿತರಾಗುತ್ತಾರೆ. ಈ ತಿಂಗಳಲ್ಲಿ ಪಾದರಕ್ಷೆಗಳನ್ನು ದಾನ ಮಾಡುವವರು ಮತ್ತು ದೂರ ದೂರದ ಊರುಗಳ ದಾರಿ ಕೂಟಗಳಲ್ಲಿ ತಂಗುದಾಣಗಳನ್ನು

ನಿರ್ಮಿಸುವವರು, ಅಲ್ಲಲ್ಲಿ ಅರವಟ್ಟಿಗೆಗಳನ್ನು ಇರಿಸಿ ನಿರಂತರ ಜಲದಾನ ಮಾಡುವವರು, ಮಧ್ಯಾಹ್ನದಲ್ಲಿ ಹಸಿದು ಬಂದ ಅತಿಥಿಗಳಿಗೆಲ್ಲ ಊಟಕ್ಕೆ ಹಾಕುವವರು ಶ್ರೀಹರಿಗೆ ಪರಮ ಪ್ರೀತ್ಯಾಸ್ಪದರಾಗುವರು, ಇಂಥವರನ್ನು ಶ್ರೀಹರಿಯು ತನ್ನ ವೈಕುಂಠಲೋಕದಲ್ಲಿ ಸ್ಥಾನಕೊಟ್ಟು ಇಟ್ಟುಕೊಳ್ಳುವನು ತನ್ನ ಸಮೀಪದಲ್ಲಿಯೇ.

## ಅನ್ನದಾನದ ಮಹಿಮೆ

ಎಲ್ಲ ದಾನಗಳಲ್ಲಿ ಅತ್ಯುತ್ತಮ ಅನ್ನದಾನ. ಬೇರೆ ದ್ರವ್ಯ, ಮನೆ, ಬಂಗಾರ, ಮುತ್ತು, ರತ್ನಗಳನ್ನು ಎಷ್ಟು ನೀಡಿದರೂ ಮನುಷ್ಯರಿಗೆ ತೃಪ್ತಿ ಆಗುವದಿಲ್ಲ. ಎಷ್ಟು ಕೊಟ್ಟರೂ 'ಇನ್ನಷ್ಟು ಬೇಕು' ಎನ್ನುವದು ಮನುಷ್ಯ ಸ್ವಭಾವ. ಧನ, ಧಾನ್ಯ, ವಸ್ತ್ರ, ಆಭರಣ ಮುಂತಾದವುಗಳನ್ನು ದಾನಕೊಟ್ಟು ಸಾಕು ಎಂದು ತೃಪ್ತಿಪಡಿಸುವದು ಯಾರಿಗೂ ಸಾಧ್ಯವಿಲ್ಲ. ಆದರೆ ಅನ್ನದಾನದಿಂದ ಮಾತ್ರ ಕೂಡಲೇ ತೃಪ್ತಿಯಾಗುವದು. ಹೊಟ್ಟೆತುಂಬ ಊಟಕ್ಕೆ ಹಾಕಿದ ಬಳಿಕ ಎಂಥ ಆಶೆ ಉಳ್ಳವನೂ ಸಾಕು ಎಂದು ಹೇಳುವನು. ಆದುದರಿಂದ ಕೂಡಲೇ ತೃಪ್ತಿಪಡಿಸಿ 'ಸಾಕು ಸಾಕು' ಎನಿಸುವ ದಾನಗಳಲ್ಲಿ ಜಲದಾನ, ಅನ್ನದಾನ ಎರಡೇ ಮುಖ್ಯವಾಗಿರುತ್ತವೆ. ಆದುದರಿಂದಲೇ ಶಾಸ್ತ್ರಗಳಲ್ಲಿ ಈ ಜಲದಾನ ಹಾಗೂ ಅನ್ನದಾನಗಳನ್ನು ಪ್ರಶಂಸಿಸಿದ್ದಾರೆ ಅತ್ಯಧಿಕವಾಗಿ. ತಾಯಿ ತಂದೆಗಳು ಕೇವಲ ಜನ್ಮವನ್ನು ಮಾತ್ರ ಕೊಡಲು ಕಾರಣರಾಗುತ್ತಾರೆ ಆದರೆ ತಾಯಿ ತಂದೆಗಳು ಕೊಟ್ಟ ಈ ಮಾನವ ದೇಹಗಳು ಗಟ್ಟಿಯಾಗಿ ಉಳಿಯುವದೂ ಬೆಳೆಯುವದೂ ಅನ್ನದಿಂದಲೇ. ಆದುದರಿಂದ ಅನ್ನವನ್ನು ಕೊಡುವವನೇ ನಿಜವಾದ ತಂದೆ ತಾಯಿ ಎಂದು ಶಾಸ್ತ್ರಗಳು ಘೋಷಿಸುತ್ತವೆ.

**ನಾರದ:-** ವೈಶಾಖ ಮಾಸದಲ್ಲಿ ಬಿಸಿಲಿನ ಬೇಗೆಯಿಂದ ಬಸವಳಿದವರಿಗೆ ಕೂಡಲು ಸುಖಾಸನ, ಮಲಗಲು ಮಂಚ, (ಪಲ್ಲಂಗ), ಉಡಲು ಬಟ್ಟೆ, ಮೆಟ್ಟಲು ಪಾದರಕ್ಷೆ, ವಿಶ್ರಮಿಸಲು ಚಾಪೆ, ಹೊದೆಯಲು ಕಂಬಳಿ, ಉಡಲು ಹಾಗೂ ಹೊದ್ದು ಕೊಳ್ಳಲು ತೆಳ್ಳಗಿನ ಬಟ್ಟೆ, ದೇಹಕ್ಕೆ ಲೇಪಿಸಿಕೊಳ್ಳಲು ಸುವಾಸನೆಯ ಗಂಧ, ಉಣ್ಣಲು ಅನ್ನ, ತಿನ್ನಲು ಹಣ್ಣು, ಕುಡಿಯಲು ನೀರು ಮತ್ತು ಪಾನಕ, ಮುಂತಾದವುಗಳನ್ನು ದಾನ ನೀಡುವವರು ಈ ಜನ್ಮದಲ್ಲಿ ಸರ್ವಭೋಗ ಭಾಗ್ಯಗಳನ್ನು ಪಡೆದು ತಮ್ಮ ಹಿಂದಿನ ಜನ್ಮಾರ್ಜಿತ ಪಾಪಗಳನ್ನೆಲ್ಲ ಕಳೆದುಕೊಂಡು ಮೋಕ್ಷವನ್ನು ಹೊಂದುವರು. ಈ ತಿಂಗಳಲ್ಲಿ ಮಜ್ಜಿಗೆಯನ್ನು ಕುಡಿಯಲು ನೀಡುವವರು ಐಶ್ವರ್ಯವನ್ನು ಪಡೆಯುತ್ತಾರೆ. ಗಟ್ಟಿ ಮೊಸರು, ಕಾಕಂಬಿ, ಗುಳಂಬ, ಹಸುವಿನ ಹಾಲು, ತುಪ್ಪ, ಅಕ್ಕಿ, ಕಬ್ಬು, ಲಿಂಬೆಹಣ್ಣಿನ ಶರಬತ್ತು! ಮಾವಿನಹಣ್ಣು, ಯಾಲಕ್ಕಿ, ಪಚ್ಚಕರ್ಪೂರ, ಬಾಳದ ಬೇರು ಹಾಕಿದ ತಣ್ಣಗಿನ ನೀರು, ಪಾನಕ ತುಂಬಿದ ಬಿಂದಿಗೆ, ಕಲಶ, ಮುಂತಾದವುಗಳನ್ನು ದಾನ ನೀಡುವವರು ಅಶ್ವಮೇಧ ಯಜ್ಞಮಾಡಿದ ಪುಣ್ಯವನ್ನು ಪಡೆಯುವರು.

ವೈಶಾಖ ಮಾಸದಲ್ಲಿ ವರ್ಜಿಸಬೇಕಾದ ಎಂಟು

**ತೈಲಾಭ್ಯಂಗಂ ದಿವಾಸ್ವಾಪಂ ತಥಾ ವೈ ಕಾಂಸ್ಯಭೋಜನಂ ।**
**ಖಟ್ವಾನಿದ್ರಾಂ ಗೃಹೇ ಸ್ನಾನಂ ನಿಷಿದ್ಧಸ್ಯ ಚ ಭಕ್ಷಣಂ ॥**
**ವೈಶಾಖೇ ವರ್ಜಯೇದಷ್ಟೌ ದ್ವಿಭುಕ್ತಂ ನಕ್ತ ಭೋಜನಂ**

(೧) ವೈಶಾಖ ಮಾಸದಲ್ಲಿ ಎಣ್ಣೆಯನ್ನು ಹಚ್ಚಿಕೊಂಡು ಮಜ್ಜನಮಾಡಿಕೊಳ್ಳುವದು ಎಂದರೆ ಎರೆದುಕೊಳ್ಳುವದು. (೨) ಹಗಲು ನಿದ್ದೆ (೩) ಕಂಚಿನ ಪಾತ್ರೆಯಲ್ಲಿ ಊಟ (೪) ಹೊರಸಿನ ಮೇಲೆ ಮಲಗುವದು (೫) ನದೀ ಇದ್ದರೂ ಮನೆಯಲ್ಲಿ ಸ್ನಾನ, (೬) ಈರುಳ್ಳಿ ಬಳ್ಳೊಳ್ಳಿ ಮುಂತಾದ ನಿಷಿದ್ಧ ಭಕ್ಷಣ (೭) ಎರಡು ಹೊತ್ತು ಊಟ (೮) ಮತ್ತು ರಾತ್ರಿ ಊಟ ಇವು ಎಂಟನ್ನು ಒಂದು ತಿಂಗಳು ಮಾಡಕೂಡದು. ವೈಶಾಖದಲ್ಲಿ ನಿಯಮದಿಂದ ಕಮಲದ ಎಲೆಯಲ್ಲಿಯೇ ಊಟ ಮಾಡುವವರುಪಾಪಮುಕ್ತರಾಗುತ್ತಾರೆ. ಸೂರ್ಯೋದಯ ಸಮಯದಲ್ಲಿ ಯಾವುದಾದರೂ ಸಮುದ್ರಕ್ಕೆ ಕೂಡುವ ಮಹಾನದಿಯಲ್ಲಿ ಸ್ನಾನ ಮಾಡವವನು ಏಳು ಜನ್ಮದ ಪಾಪಗಳಿಂದ ಬಿಡುಗಡೆ ಹೊಂದುತ್ತಾನೆ. ಈ ತಿಂಗಳಲ್ಲಿ ಉಷಃ ಕಾಲದಲ್ಲಿ ಗಂಗಾನದಿಯಲ್ಲಿ ಸ್ನಾನ ಮಾಡುವವನು ಕೋಟಿ ಜನ್ಮದಲ್ಲಿ ಗಳಿಸಿದ ಪಾಪಗಳಿಂದ ಮುಕ್ತನಾಗುವನು. ಈ ಭರತ ವರ್ಷದಲ್ಲಿ ಏಳು ನದಿಗಳು ಗಂಗಾನದಿಗಳು ಎಂದು ಪ್ರಸಿದ್ಧವಾಗಿವೆ.

''ಜಾಹ್ನವೀ ವೃದ್ಧಗಂಗಾ ಚ ಕಾಲಿಂದೀ ಚ ಸರಸ್ವತೀ।
ಕಾವೇರೀ ನರ್ಮದಾ ವೇಣೀ ಸಪ್ತಗಂಗಾ ಪ್ರಕೀರ್ತಿತಾ॥

ಭಾಗೀರಥಿ, ವೃದ್ಧ ಗಂಗಾ ಎಂದರೆ ಗೋದಾವರಿ, ಯಮುನಾ, ಸರಸ್ವತಿ, ಕಾವೇರಿ, ನರ್ಮದಾ, (ಕೃಷ್ಣ) ವೇಣೀ ಈ ಏಳು ನದಿಗಳು ಗಂಗಾ ನದಿಗೆ ಸಮಾನವಾದ ನದಿಗಳಾಗಿರುತ್ತವೆ. ಈ ಸಪ್ತ ಸರಿತೆಗಳಲ್ಲಿ ಸ್ನಾನ ಮಾಡಿದವರು ಮುಕ್ತಿಯನ್ನು ಹೊಂದುತ್ತಾರೆ. ವೈಶಾಖಮಾಸದಲ್ಲಿ ಗೆಡ್ಡೆ, ಗೆಣಸು, ಹಣ್ಣುಕಾಯಿ, ತರಕಾರಿ ಉಪ್ಪು, ಬೆಲ್ಲ, ಬೋರೆಹಣ್ಣು, ಮಾವಿನಹಣ್ಣು, ಮಜ್ಜಿಗೆ ನೀರು ಈ ಹತ್ತು ವಸ್ತುಗಳನ್ನು ದಾನ ನೀಡುವದರಿಂದ ಅಕ್ಷಯ ಪುಣ್ಯ ಪ್ರಾಪ್ತಿ. ಈ ವೈಶಾಖ ಮಾಸದಲ್ಲಿ ಪ್ರಾತಃ ಸ್ನಾನ ಹಾಗೂ ವಿಷ್ಣು ಪೂಜೆ ಇವು ಎರಡು ಮುಖ್ಯವಾಗಿ ಪಾಲಿಸಬೇಕಾದ ಧರ್ಮಗಳು. ಭಗವಂತನ ಪೂಜೆ ಮಾಡದೇ ಬರೀ ಸ್ನಾನ ಮಾತ್ರದಿಂದ ಯಾವ ಪುಣ್ಯವೂ ಬರಲಾರದು. ಪೂರ್ವ ಕಾಲದಲ್ಲಿ ಮಹೀರಥ ಎಂಬ ರಾಜನು ಮಹಾ ಕಾಮಿಯೂ ವಿಷಯ ಲಂಪಟನೂ ಇಂದ್ರಿಯ ಲೋಲುಪನೂ ಆಗಿದ್ದನು. ಆಯುಷ್ಯದಲ್ಲಿ ಅವನಿಂದ ಯಾವ ಪುಣ್ಯಕಾರ್ಯವನ್ನೂ ಮಾಡಲು ಆಗಿರಲಿಲ್ಲ. ಆದರೆ ಅವನು ಪ್ರತಿವರ್ಷವೂ ವೈಶಾಖ ಮಾಸದಲ್ಲಿ ಪ್ರಾತಃ ಸ್ನಾನವನ್ನು ಮಾತ್ರ ತಪ್ಪದೇ ಮಾಡುತ್ತಿದ್ದನು, ಒಂದು ತಿಂಗಳ ಕಾಲ. ಶ್ರೀಹರಿಯನ್ನೂ ಪೂಜಿಸುತ್ತಿದ್ದನು. ಆದರಿಂದ ಅವನು ವೈಕುಂಠಲೋಕವನ್ನು ಸಾರಿದನು. ತನ್ನ ಪುಣ್ಯ ಪ್ರಭಾವದಿಂದ. ವೈಶಾಖದಲ್ಲಿ ಮುಂಜಾವಿನಲ್ಲಿ ನದಿ ಸ್ನಾನ ಮಾಡುವವರು ಕೆಳಗಿನ ಮಂತ್ರವನ್ನು ಹೇಳಬೇಕು.

ಮಧುಸೂದನ ದೇವೇಶ ವೈಶಾಖೇ ಮೇಷಗೇ ರವೌ।
ಪ್ರಾತಃ ಸ್ನಾನಂ ಕರಿಷ್ಯಾಮಿ ನಿರ್ವಿಘ್ನಂ ಕುರು ಮಾಧವ॥

ಮಧುಸೂದನನೇ! ಮೇಷರಾಶಿಯಲ್ಲಿ ಸೂರ್ಯನು ಬಂದಾಗ ವೈಶಾಖಮಾಸದಲ್ಲಿ ನಾನು ಪ್ರಾತಃಸ್ನಾನವನ್ನು ಮಾಡುತ್ತೇನೆ. ಒಂದು ತಿಂಗಳವರೆಗೆ ನನ್ನ ಈ ಮುಂಜಾವು ಸ್ನಾನದ ನಿಯಮವು ಪೂರ್ತಿ ಸಾಂಗವಾಗುವಂತೆ ಅನುಗ್ರಹಿಸು. ಸ್ನಾನವನ್ನು ಮಾಡಿದ ಬಳಿಕ ಕೆಳಗಿನ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು.

**ವೈಶಾಖೇ ಮೇಷಗೇ ಭಾನೌ ಪ್ರಾತಃ ಸ್ನಾನ ಪರಾಯಣಃ।**
**ಅರ್ಘ್ಯಂ ತೇऽಹಂ ಪ್ರದಾಸ್ಯಾಮಿ ಗೃಹಾಣ ಮಧುಸೂದನ॥**

ಸೂರ್ಯನು ಮೇಷರಾಶಿಯಲ್ಲಿ ಇರುತ್ತಿದ್ದ ವೈಶಾಖ ಮಾಸದಲ್ಲಿ ಪ್ರತಿನಿತ್ಯವೂ ನಾನು ಬೆಳಗಿನ ಜಾವದಲ್ಲಿ ಸ್ನಾನ ಮಾಡುವ ವ್ರತವನ್ನು ಕೈಕೊಂಡಿದ್ದೇನೆ. ಮಧುಸೂದನ ಸ್ವಾಮಿಯೇ! ನಿನಗೆ ಅರ್ಘ್ಯವನ್ನು ನೀಡುತ್ತೇನೆ ಸ್ವೀಕರಿಸು. ಹೀಗೆ ಪ್ರಾರ್ಥನೆ ಮಾಡಿ ಅರ್ಘ್ಯವನ್ನು ನೀಡಬೇಕು. ಅನಂತರ ಒಣಬಟ್ಟೆ ಉಟ್ಟು ಸಂಧ್ಯಾವಂದನ, ದೇವ ಪಿತೃ ತರ್ಪಣ, ಮಂತ್ರ ಜಪ ಮುಂತಾದವುಗಳನ್ನು ಮಾಡಿ, ಆ ಕಾಲದಲ್ಲಿ ಅರಳುವ ಹೂಗಳಿಂದ ವಿಷ್ಣುವಿನ ಪೂಜೆಯನ್ನು ಮಾಡಬೇಕು. ತುಳಸೀ ದಳಗಳಿಂದಲೂ ಭಗವದರ್ಚನೆ ಮಾಡುವದರಿಂದ ಅಧಿಕ ಪುಣ್ಯ ಈ ಮಾಸದಲ್ಲಿ. ಅನಂತರ ವೈಶಾಖಮಾಸದ ಮಾಹಾತ್ಮ್ಯವನ್ನು ಅಲ್ಲಿ ಪ್ರತಿಪಾದಿತವಾದ ಶ್ರೀಹರಿಯ ಕಥಾಮೃತವನ್ನು ಶ್ರವಣ ಮಾಡಬೇಕು. ಈ ದೇಹವು ನಮ್ಮ ಅಧೀನವಿದೆ. ನದಿ, ಭಾವಿ. ಮುಂತಾದವುಗಳ ನೀರು ನಮ್ಮ ಹತ್ತಿರವೇ ಇದೆ. ನಮ್ಮ ನಾಲಿಗೆಯೂ ನಮ್ಮ ವಶದಲ್ಲೇ ಇದೆ. ಆ ನೀರಿನಲ್ಲಿ ಈ ನಮ್ಮ ದೇಹವನ್ನು ಎದ್ದಿ ನಮ್ಮ ಕೈಯಲ್ಲಿರುವ ನಾಲಿಗೆಯಿಂದ ಹರಿ ಅಥವಾ ಕೃಷ್ಣ ಎಂಬ ಎರಡು ಅಕ್ಷರಗಳನ್ನು ಉಚ್ಚರಿಸಿದರೆ ಸಾಕು. ಮುಕ್ತಿಯು ಕರಗತವಾಗುತ್ತದೆ. ಈ ವೈಶಾಖ ಮಾಸದಲ್ಲಿ ಪ್ರಾತಃಸ್ನಾನ, ಜಲದಾನ, ಹರಿಧ್ಯಾನ ಇವು ಮೂರು ಮುಕ್ತಿದಾಯಕ ಎಂದು ಪ್ರಸಿದ್ಧವಾಗಿರುತ್ತವೆ.

**ನಾರದ:-** ಇದೊಂದು ಬಹಳ ಹಿಂದಿನ ಕಾಲದ ಸಮಾಚಾರ. ಮಿಥಿಲಾಪುರಿಯಲ್ಲಿ ಜನಕ ರಾಜನ ಆಡಳಿತ. ಸಮಯ ಮಧ್ಯಾಹ್ನದ ಎರಡು ಗಂಟೆ. ಆ ವಿದೇಹರಾಜನ ಅರಮನೆಗೆ ಆಗಮಿಸಿದ ಒಬ್ಬ ಋಷಿ. ಅವನ ಹೆಸರು ಶ್ರುತದೇವ. ವೇದಾಂತದ ಆಳಕ್ಕೆ ಇಳಿದವ ಆ ಮಹಾಮನೀಷಿ. ಶಾಸ್ತ್ರಗಳೆಲ್ಲವೂ ಅಂಗೈಯಲ್ಲಿಯ ನೆಲ್ಲೀಕಾಯಿ ಆ ಶ್ರುತದೇವನಿಗೆ. ನಾಕು ವೇದಗಳು ಅವನ ನಾಲಿಗೆಯ ತುದಿಯಲ್ಲಿ. ಆತನನ್ನು ಕಂಡ ಕೂಡಲೇ ಸ್ವಯಂ ವಿದ್ವಾನ್ ರಾಜರ್ಷಿಯಾದ ಜನಕ ಮಹಾರಾಜನಿಗೆ ಪರಮಾನಂದ. ಉಲ್ಲಾಸದಿಂದ ಎದ್ದು ನಿಂತ, ಉತ್ಸಾಹದಿಂದ ಸ್ವಾಗತಿಸಿದ. ಭಕ್ತಿಯಿಂದ ಅರ್ಘ್ಯನೀಡಿದ. ಪ್ರೀತಿಯಿಂದ ಪಾದ್ಯ ಮಧುಪರ್ಕಗಳನ್ನು ಅರ್ಪಿಸಿದ. ಆದರದಿಂದ ಆಸನದ ಮೇಲೆ ಕೂಡಿಸಿದ. ವಿಧಿ ಪೂರ್ವಕವಾಗಿ ಅವರ ಚರಣಗಳನ್ನು ತೊಳೆದ. ಅವರ ಪಾದೋದಕವನ್ನು ಧರಿಸಿದ ತಲೆಯ ಮೇಲೆ. ವೈಶಾಖ ಮಾಸದ ಮಹಿಮೆಯನ್ನು ಹೇಳಬೇಕು ಎಂದು ನುಡಿದು ಕೈ ಜೋಡಿಸಿದ. ಮಹರ್ಷಿ ಶ್ರುತದೇವ ಆನಂದದಿಂದ ಹೇಳತೊಡಗಿದನು.

**ಶ್ರುತದೇವ:-** ಜನಕರಾಜ! ವೈಶಾಖಮಾಸದಲ್ಲಿ ಬಿಸಿಲಿನಿಂದ ಕಸಿವಿಸಿ ಪಡುವವರ ಮೇಲೆ ಕೊಡೆಯನ್ನು ಬಿಡಿಸಿ ಹಿಡಿದರೆ ಅನಂತ ಪುಣ್ಯ ಪ್ರಾಪ್ತಿ. ಈ ವಿಷಯದಲ್ಲಿ ಒಂದು ಪ್ರಾಚೀನ ಇತಿಹಾಸವನ್ನು ಹೇಳುತ್ತೇನೆ ಕೇಳು.

ಹಿಂದೆ ವಂಗ ದೇಶದಲ್ಲಿ ಕುಶಕೇತು ಮಹಾರಾಜನ ಮಗನಾದ ಹೇಮಕಾಂತ ಎಂಬ ಹೆಸರಿನ ಯುವರಾಜನು ತಂದೆಯ ಹಿರಿತನದಲ್ಲಿ ರಾಜ್ಯವನ್ನು ಆಳುತ್ತಿದ್ದ. ಅವನು ವೀರನಿದ್ದಷ್ಟೆ ಜ್ಞಾನಿಯೂ ಆಗಿದ್ದ. ಒಂದು ದಿನ ಮಹಾಪರಾಕ್ರಮಶಾಲಿಯಾದ ಆ ಹೇಮಕಾಂತ ಯುವರಾಜನು ಬೇಟೆಯಾಡಲು ಒಂದು ಬೆಂಗಾಡಿನಲ್ಲಿ ನುಗ್ಗಿದ. ಅಲ್ಲಿ ಅವನು ಕೊಚ್ಚಿಕೊಂದು ಹಾಕಿದ ಕ್ರೂರ ಪ್ರಾಣಗಳಿಗೆ ಲೆಕ್ಕವಿಲ್ಲ. ಬಿಸಿಲಿನ ಪರಿವೆಯಿಲ್ಲದೇ,

ದೇಹಾಯಾಸದ ಅರಿವು ಇಲ್ಲದೇ, ಒಂದು ಕ್ಷಣವೂ ತೆರವು ಇಲ್ಲದೇ ಕಾಡಿನ ಗೂಡಿನಲ್ಲಿ ನುಗ್ಗಿ ಹಿಂಸ್ರಪಶುಗಳ ಹಿಂಡನ್ನೆಲ್ಲ ತನ್ನ ಖಡ್ಗ ಬಾಣಗಳಿಂದ ತುಂಡರಿಸಿ ಹಾಕಿದ. ಸೂರ್ಯ ನಡುನೆತ್ತಿಗೆ ಬಂದಾಗ ಕಣ್ಣೆದುರಿನ ಕಾಡುಮಿಕಗಳೆಲ್ಲ ಛಿನ್ನಭಿನ್ನವಾಗಿ ನೆಲಕ್ಕೆ ಬಿದ್ದಿದ್ದವು. ಹಸಿವು ಹೊಟ್ಟೆಯಲ್ಲಿ ತಾಂಡವ ನಡೆಸಿತು. ಗಂಟಲು ಸೇದತೊಡಗಿತು. ಬಾಯಾರಿಕೆ ಅವನ ಮೇಲೆ ಸವಾರಿ ಮಾಡಿತು. ರಾಜ ಅತ್ತಿತ್ತ ಕಣ್ಣು ಓಡಿಸಿದ. ಕಾಲು ಆಡಿಸಿದ. ಮೈಯಿಂದ ಸುರಿಯುವ ಬೆವರಿನ ಕೋಡಿಯ ಹೊರತು ಎಲ್ಲಿಯೂ ನೀರು ಇಲ್ಲ. ವಿಶ್ರಮಿಸಲು ತಂಪಿನ ತಾಣವೂ ಇಲ್ಲ. ಹಾಗೆಯೇ ಮುಂದೆ ನಡೆದ ಯುವರಾಜ ಆ ವನ ವೀಥಿಯಲ್ಲಿ.

ಆ ವನ ಸೀಮೆಯ ಸೆರಗಿನಲ್ಲಿ ಒಂದು ಆಶ್ರಮ. ಅಲ್ಲಿಗೇ ಧಾವಿಸಿದ ಆ ಯುವರಾಜ. ಕರುಳುಗಳು ಕುದಿಯುತ್ತಿದ್ದವು. ಗಂಟಲು ಸೇದುತ್ತಿತ್ತು. ನಾಲಿಗೆ ತೆವಳುತ್ತಿತ್ತು. ಹಾಗೆಯೇ ಮಹಾರಾಜ 'ನೀರು ನೀರು' ಎಂದು ಚೀರಿದ. ಆಶ್ರಮದ ಅಂಗಳದಲ್ಲಿ ಶತರ್ಚ ಎಂಬ ಋಷಿಗಳು ತಪಸ್ಸಮಾಧಿಯಲ್ಲಿ ಕುಳಿತಿದ್ದರು. ಅವರಿಗೆ ಹೊರಗಿನ ಅರಿವು ಇಲ್ಲ. ಯುವರಾಜ ಅವರ ಎದುರು ಬಂದು ನಿಂತ. ''ಪ್ರಾಣ ಹೋಗುತ್ತಿದೆ. ನೀರು ನೀಡಿರಿ'' ಎಂದು ಅಂಗಲಾಚಿದ. ಮುನಿ ಅಚಲ. ಹೊರಗಿನ ಕಣ್ಣು ಮುಚ್ಚಿತ್ತು. ಒಳಗಿನ ಕಣ್ಣು ತೆರೆದಿತ್ತು. ಹೊರಗಿನ ಕಣ್ಣಿಗೆ ರಾಜ ಕಾಣಲಿಲ್ಲ. ಹೊರಗಿನ ಕಿವಿಗೆ ಅವನ ದನಿಯೂ ಕೇಳಲಿಲ್ಲ. ತಾನು 'ನೀರು ನೀರು' ಎಂದು ಹಲಬುತ್ತಿದ್ದರೂ ಈ ಮುನಿ ತಪಸ್ಸಿನ ನೆಪಮಾಡಿ ಕಣ್ಣು ಮುಚ್ಚಿ ಕುಳಿತಿದ್ದಾನೆ ಎಂದು ಬಗೆದ ಆ ಯುವರಾಜ. ಸಿಟ್ಟು ಒಟ್ಟರಿಸಿ ಬಂತು ಆ ಮುನಿಯ ಮೇಲೆ ರಾಜನಿಗೆ. ತನ್ನಂಥ ಧರಾನಾಥನು ಮನೆಯವರೆಗೆ ಬಂದರೂ ಮಾತನಾಡಿಸದ ಆ ಮುನಿಯನ್ನು ಕೊಂದು ಹಾಕಬೇಕೆಂದು ಖಡ್ಗ ಎತ್ತಿದ.

ಆ ಶತರ್ಚ ಮಹರ್ಷಿಗಳು ಕುಲಪತಿ. ಹತ್ತು ಸಾವಿರ ಶಿಷ್ಯರು ಅವರಲ್ಲಿ ವೇದ ವೇದಾಂತ ಪಾಠ ಓದುತ್ತಿದ್ದರು. ತಮ್ಮ ಗುರುಗಳನ್ನು ಕೊಲ್ಲ ಬಂದ ರಾಜನನ್ನು ಅವರೆಲ್ಲರೂ ಧಾವಿಸಿ ಬಂದು ತಡೆದರು. ಭಯಭೀತಿಯಿಂದ ಕೈಜೋಡಿಸಿ ನುಡಿದರು: ''ಮತಿಹೀನನಾದ ಯುವರಾಜ! ನಮ್ಮ ಗುರುಗಳು ಈಗ ತಪಸ್ಸಮಾಧಿಯಲ್ಲಿ ಕುಳಿತಿದ್ದಾರೆ. ಇದು ಅಸಂಪ್ರಜ್ಞಾತ ಸಮಾಧಿ ಎಂಬ ಹೆಸರಿನ ಒಂದು ತಪೋಯೋಗ. ಈ ಸಮಾಧಿಯ ಅವಸ್ಥೆಯಲ್ಲಿ ಇರುವವರಿಗೆ ಹೊರಗಿನ ಅರಿವು ಇರುವದಿಲ್ಲ. ಅಂತರ್ಮುಖಿಗಳಾದ ಅವರು ಭಗವಂತನ ಧ್ಯಾನೈಕ ತಾನ ಲೀನರು ಆಗಿರುತ್ತಾರೆ. ಅವರಿಗೆ ಹೊರಗಿನವರು ಯಾರು ಬಂದರೂ ಏನು ನುಡಿದರೂ ಏನು ಹೇಳಿದರೂ ಯಾವುದೂ ಗೊತ್ತಾಗುವುದಿಲ್ಲ. ನೀವು ಅವರ ಮೇಲೆ ಈಗ ಕೋಪ ಮಾಡುವದು ಸರಿಯಲ್ಲ''.

**ಹೇಮಕಾಂತ:-** ಶಿಷ್ಯೋತ್ತಮರೇ! ನಾನು ಬೇಟೆಯಾಡಿ ಬಳಲಿದ್ದೇನೆ. ಹಸಿವೆ ನನ್ನ ಜೀವ ಹಿಂಡುತ್ತಿದೆ. ಬಾಯಾರಿಕೆ ನನ್ನ ಜೀವನಾಡಿಯನ್ನೆ ಒಣಗಿಸುತ್ತಲಿದೆ. ನಿಮ್ಮ ಗುರುಗಳು ಸಮಾಧಿಯಲ್ಲಿದ್ದರೆ ಶಿಷ್ಯರಾದ ನೀವಾದರೂ ನನಗೆ ಆತಿಥ್ಯ ನೀಡಿರಿ. ನನ್ನ ಹಸಿವು ನೀರಡಿಕೆಗಳನ್ನು ಕಳೆಯಿರಿ.

**ಶಿಷ್ಯರು:-** ಮಹಾರಾಜ, ನಾವು ಭಿಕ್ಷೆ ಬೇಡಿ ಬದುಕುವವರು. ಮನೆಯಲ್ಲಿ ಯಾವುದನ್ನೂ ಸಂಗ್ರಹ ಮಾಡುವದಿಲ್ಲ. ಮಧ್ಯಾಹ್ನದ ಮೇಲೆ ಯಾವುದಾದರೂ ಹಳ್ಳಿಗೆ ಹೋಗಿ ತಿರಿದು ತಂದು ಸಾಯಂಕಾಲ ಊಟವನ್ನೋ ಉಪಹಾರವನ್ನೋ ಮಾಡುತ್ತೇವೆ.

ಈಗ ನಮ್ಮ ಬಳಿಯಲ್ಲಿ ಏನೂ ಇರುವದಿಲ್ಲ ನಿನ್ನ ಆತಿಥ್ಯ ಮಾಡಲಿಕ್ಕೆ. ಬಂದವರಿಗೆ ಆತಿಥ್ಯ ಮಾಡಲು ನಮಗೆ ಗುರುಗಳ ಅಪ್ಪಣೆಯೂ ಇಲ್ಲ. ನಾವೆಲ್ಲರೂ ಗುರುಗಳ ಆಜ್ಞೆಯ ಪರತಂತ್ರರು. ಅವರು ಹೇಳಿದಷ್ಟನ್ನು ಮಾತ್ರ ಮಾಡುವವರು. ಆತಿಥ್ಯ ನೀಡಲಿಕ್ಕೆ ಅವರ ಅಪ್ಪಣೆಯಿಲ್ಲದೇ ನಮಗೆ ಏನನ್ನೂ ಮಾಡಲಿಕ್ಕಿಲ್ಲ.''

ಶಿಷ್ಯರ ಈ ಮಾತುಗಳನ್ನು ಕೇಳಿ ರಾಜನ ಕೋಪದ ಕಿಡಿ ಕಿಚ್ಚಾಗಿ ಹೆಚ್ಚಾಗಿ ಧಗಧಗಿಸಿತು. ಕೂಡಲೇ ಅವನು ಕಣ್ಣು ಕೆಂಪಗೆ ಮಾಡಿ ಬಿಲ್ಲನ್ನು ಎತ್ತಿದನು. ಬಾಣ ಹೂಡಿದನು? ಸಿಟ್ಟಿನಿಂದ ನುಡಿ ಕಿಡಿಗಳನ್ನು ಉದುರಿಸಿದನು.

**ರಾಜ:-** ''ನಾನು ಎಷ್ಟು ಸಲ ನಿಮ್ಮನ್ನು ನಿಮ್ಮ ಗುರುಗಳನ್ನು ಕ್ರೂರ ಪ್ರಾಣಿಗಳಿಂದ ರಕ್ಷಿಸಿಲ್ಲ! ಎಷ್ಟು ಸಲ ದರೋಡೆಕೋರರ ದಾಳಿಗಳಿಂದ ನಿಮ್ಮನ್ನು ಕಾಯ್ದಿಲ್ಲ! ನಿಮಗೆ ನಿರಂತರವೂ ಧನ, ಧಾನ್ಯ, ದಾನ, ದಕ್ಷಿಣೆಗಳನ್ನು ಕೊಟ್ಟು ನಿಮ್ಮನ್ನು ನಾನು ರಕ್ಷಣೆ ಮಾಡುತ್ತಲೇ ಇರುತ್ತೇನೆ. ಇಂಥ ನನಗೆ ಒಂದು ದಿನ, ಒಂದು ಸಲ ಆತಿಥ್ಯ ನೀಡಲು ನೀವೆಲ್ಲರೂ ಹಿಂದೇಟು ಹಾಕುತ್ತಲಿರುವಿರಿ. ನೀವೆಲ್ಲರೂ ಮಹಾಕೃತಘ್ನರು. ದುರಭಿಮಾನಿಗಳು ಮತ್ತು ಆತತಾಯಿಗಳು. ನಿಮ್ಮಂಥ ಡಂಭಾಚಾರದ ದುರಭಿಮಾನಿಗಳನ್ನು ಕೊಂದು ಹಾಕಿದರೂ ನನಗೆ ತಗಲಲಾರದು ಪಾಪ. ತಟ್ಟಲಾರದು ಬ್ರಹ್ಮಹತ್ಯೆ.'' ಹೀಗೆ ನುಡಿದ ಆ ರಾಜನು ಆ ಶಿಷ್ಯರ ಮೇಲೆ ಬಾಣಗಳನ್ನು ಬಿಡತೊಡಗಿದ. ಭಯ ಭ್ರಾಂತರಾದ ಶಿಷ್ಯರು ದಿಕ್ಕೆಟ್ಟು ಓಡತೊಡಗಿದರು. ಅವರನ್ನು ಬೆನ್ನಟ್ಟಿದ ಹೇಮಕಾಂತ. ಹೋದಲ್ಲೆಲ್ಲ ಬೆನ್ನು ಹತ್ತಿ ಮೂರು ನೂರುಜನ ಶಿಷ್ಯರನ್ನು ಕೊಂದು ಹಾಕಿದ.

ಶಿಷ್ಯರೆಲ್ಲರೂ ಓಡಿ ಹೋದ ಬಳಿಕ ರಾಜನನ್ನು ಹುಡುಕುತ್ತ ಬಂದ ಅವನ ಸೈನಿಕರು ಆ ಆಶ್ರಮವನ್ನು ಲೂಟಿಮಾಡಿದರು. ರಾಜನ ಅಪ್ಪಣೆಯಂತೆ ಅಲ್ಲಿ ಇದ್ದುದನ್ನೆಲ್ಲ ದೋಚಿಕೊಂಡು ಸ್ವಚ್ಛಂದ ಭೋಜನ, ಪಾನಗೋಷ್ಠಿ, ಕ್ರೀಡಾ ವಿನೋದಗಳನ್ನು ಮಾಡಿ ತಮ್ಮ ರಾಜಧಾನಿಗೆ ಮರಳಿದರು. ಕುಶಕೇತು ಮಹಾರಾಜನು ತನ್ನ ಮಗ ಹಾಗೂ ಸೈನಿಕರ ಅನ್ಯಾಯದ ದುಷ್ಕೃತ್ಯಗಳನ್ನು ಕೇಳಿ ಕುಪಿತನಾದ ಮುನ್ನೂರು ಜನ ಮುನಿ ಮಹರ್ಷಿಗಳ ಪ್ರಚಂಡ ಬ್ರಹ್ಮಹತ್ಯೆಯನ್ನು ಮಾಡಿದ ತನ್ನ ಮಗ ಹೇಮಕಾಂತನನ್ನು ರಾಜ್ಯ ಬಿಟ್ಟು ಹೊರಗೆ ಹಾಕಿದನು. ಹೀಗೆ ತಂದೆಯು ದೇಶದಿಂದ ಉಚ್ಚಾಟನೆ ಮಾಡಿದ ಬಳಿಕ ರಾಜಕುಮಾರ ಹೇಮಕಾಂತನು ಒಂದು ಗಹನ ಅರಣ್ಯಕ್ಕೆ ಹೊರಟುಹೋದ. ಘೋರಾರಣ್ಯಗಳಲ್ಲಿಯೇ ಅವನು ಬಹಳ ವರ್ಷಗಳವರೆಗೆ ವಾಸಮಾಡಿದ. ಬ್ರಹ್ಮಹತ್ಯೆಯು ಅವನ ಬೆನ್ನುಬಿಟ್ಟಿರಲೇ ಇಲ್ಲ. ಪಾಪಗ್ರಹದಂತೆ ಅವನನ್ನು ಹಿಡಿದು ಹರಣವನ್ನು ಹಿಂಡುತ್ತಲೇ ಇತ್ತು. ತೇಜೋಭಂಗದಿಂದ ಬಿಳಿಚಿಕೊಂಡ ರಾಜಕುಮಾರನ ಮೈ ಎಲ್ಲವೂ ಸೊರಗಿ ಕೊರಗಿ ಕಟ್ಟಿಗೆಯಾಗಿತ್ತು. ಹೀಗೆ ಇಪ್ಪತ್ತೆಂಟು ವರ್ಷ ಅಡವೀ ಪಾಲಾಗಿ ಆ ಹೇಮಕಾಂತನು ಪಡಬಾರದ ಕಷ್ಟಗಳನ್ನೆಲ್ಲ ಪಟ್ಟ. ಉಣಬಾರದ ದುಃಖಗಳನ್ನೆಲ್ಲ ಉಂಡ.

ಒಮ್ಮೆ ವೈಶಾಖ ಮಾಸದ ಒಂದು ದಿನ. ಮಧ್ಯಾಹ್ನದ ಮೂರುಗಂಟೆಯ ಸಮಯ. ತ್ರಿತ ಎಂಬ ಮಹಾಮುನಿಗಳು ತೀರ್ಥಯಾತ್ರೆಗಾಗಿ ಅಲ್ಲಿಗೆ ಆಗಮಿಸಿದರು. ದಾರಿಯ ದಣಿವು, ಬಾಯಾರಿಕೆಯ ಬಳಲಿಕೆ, ಹಸಿವೆಯ ಕಸಿವಿಸಿಗಳು ಅವರನ್ನು ಕಂಗೆಡಿಸಿದ್ದವು. ಅವರಿಗೆ ಮುಂದೆ ನಡೆಯಲಿಕ್ಕಾಗಲಿಲ್ಲ. ನಡುದಾರಿಯಲ್ಲಿಯೇ ಸುಡು ಬಿಸಿಲಿನ ಬಯಲು ದಾರಿಯಲ್ಲಿ ಕುಸಿದು ಬಿದ್ದರು. ಮೂರ್ಛೆ ಮುನಿಯ ಮೇಲೆ ತನ್ನ ಸೆರಗು ಹೊದಿಸಿತು.

ನಡು ಬೀದಿಯಲ್ಲಿಯೇ ಬಿಸಿಲಿನ ಬಾಣಲೆಯಲ್ಲಿ ಮೂರ್ಛಾಕ್ರಾಂತರಾಗಿ ಬಿದ್ದುಕೊಂಡು ಬಿಟ್ಟರು ಮಹಾಮುನಿ. ಅಷ್ಟರಲ್ಲಿ ದೈವಯೋಗದಿಂದ ದೇಶಭ್ರಷ್ಟನಾದ ಹೇಮಕಾಂತನು ಅಲ್ಲಿಗೆ ಆಗಮಿಸಿದ. ಹಸಿವೆಯಿಂದ ಬಳಲಿ, ಬಾಯಾರಿಕೆಯಿಂದ ಮೂರ್ಛೆಹೋದ ಮುನಿಯನ್ನು ನೋಡಿ ಕರುಣೆ ಬಂದಿತು ರಾಜಕುಮಾರನಿಗೆ. ಕೂಡಲೇ ಮುತ್ತುಗದ ಎಲೆಗಳಿಂದ ಮಾಡಿದ ಛತ್ರವನ್ನು ಬಿಡಿಸಿ ಅವರ ತಲೆಯ ಮೇಲೆ ಹಿಡಿದ. ತನ್ನ ಜಲಪಾತ್ರೆಯಲ್ಲಿಯ ನೀರನ್ನು ಆ ಮುನಿಗಳ ಮುಖದ ಮೇಲೆ ಚಿಮುಕಿಸಿದ. ಗಾಳಿ ಬೀಸಿ ಶೈತ್ಯೋಪಚಾರ ಮಾಡಿದ. ಆ ಶೀತೋಪಚಾರದಿಂದ ಮುನಿಗಳಿಗೆ ಎಚ್ಚರ ಬಂದಿತು. ಆ ಹೇಮಕಾಂತನು ಕೊಟ್ಟ ಬೀಸಣಿಕೆಯಿಂದ ಬೀಸಿಕೊಂಡು ಮುನಿಗಳು ತಮ್ಮ ಆಯಾಸವನ್ನು ಕಡಿಮೆ ಮಾಡಿಕೊಂಡರು. ಅವನ ಕೈ ಹಿಡಿದುಕೊಂಡು ಸಮೀಪದ ಒಂದು ಊರಿಗೆ ತ್ರಿತ ಮಹಾಮುನಿಗಳು ಬಂದು ಮುಟ್ಟಿದರು. ಅಲ್ಲಿ ಅನೇಕ ಮುನಿಗಳು ಶಿಷ್ಯರು ತಮ್ಮ ಗುರುಗಳಾದ ಮಹಾಮುನಿಗಳಿಗೆ ಆದರೋಪಚಾರ ಮಾಡಿ ಆತಿಥ್ಯ ನೀಡಿದರು. ಅದರಿಂದ ತಮ್ಮ ಮೊದಲಿನ ಸ್ವಾಸ್ಥ್ಯವನ್ನು ಪಡೆದು ಮಹರ್ಷಿಗಳು ತಮ್ಮ ಆಶ್ರಮಕ್ಕೆ ತೆರಳಿದರು. ಇತ್ತ ಹೇಮಕಾಂತನು ಕೊಡೆ ಬಿಡಿಸಿ ತಣ್ಣೀರು ಚಿಮುಕಿಸಿ ಆ ಮಹರ್ಷಿಗಳಿಗೆ ಶೈತ್ಯೋಪಚಾರ ಮಾಡಿದ ಪುಣ್ಯದಿಂದ ಪೂತನಾದ. ಅವನ ಮುನ್ನೂರು ಬ್ರಹ್ಮಹತ್ಯಾ ಪಾಪಗಳೆಲ್ಲವೂ ನಷ್ಟವಾಗಿ ಹೋದವು.

ಮುಂದೆ ಕೆಲವೇ ದಿನಗಳಲ್ಲಿ ವನವಾಸ ಉಪವಾಸಗಳಿಂದ ಹಾಗೂ ದೇಶಭ್ರಷ್ಟನಾಗಿ ಬಂದ ಅಪಮಾನದಿಂದ ಮತ್ತು ಬ್ರಹ್ಮಹತ್ಯೆಯನ್ನು ಮಾಡಿದ ಪಶ್ಚಾತ್ತಾಪದಿಂದ ಅವನ ದೇಹವು ಕೃಶವಾಗಿ ಸಂಗ್ರಹಣೀ ಎಂಬ ರೋಗಕ್ಕೆ ತುತ್ತಾಯಿತು. ಮರಣಕಾಲದಲ್ಲಿ ಆ ವನಪ್ರಾಂತದಲ್ಲಿ ಏಕಾಕಿಯಾಗಿ ಸಾಯುವ ಸಂಕಟಕ್ಕೆ ಅವನು ಹೊರಳಾಡ ತೊಡಗಿದ. ಅವನ ಕಣ್ಣೆದುರು ಭಯಂಕರ ಯಮದೂತರು ಬಂದು ನಿಂತುಕೊಂಡರು. ಅವರ ಕರಾಳ ವೇಷವನ್ನು ಕಂಡು ನಡುಗತೊಡಗಿದ ಹೇಮಕಾಂತ. ತಾನು ಮಾಡಿದ ದುಷ್ಕರ್ಮದ ನೆನಪಾಗಿ ಕಣ್ಣು ಮುಚ್ಚಿದ. ತ್ರಿತ ಮಹಾಮುನಿಗೆ ಕೊಡೆಯನ್ನು ಬಿಡಿಸಿ ಹಿಡಿದು ಬೀಸಣಿಕೆ ಕೊಟ್ಟಿದ್ದರ ಪುಣ್ಯದಿಂದ ಅವನಿಗೆ ಆ ಮರಣ ಸಮಯದಲ್ಲಿ ಭಗವಾನ್ ಶ್ರೀವಿಷ್ಣುವಿನ ಸ್ಮರಣೆಯು ಒದಗಿ ಬಂದಿತು.

ತನ್ನ ಕ್ಷೀಣಧ್ವನಿಯಿಂದಲೇ ನೆನೆಯತೊಡಗಿದ ನಾರಾಯಣನ ನಾನಾ ನಾಮಗಳನ್ನು. ಆಗ ಭಗವಾನ್ ಶ್ರೀಹರಿಗೆ ಆ ಹೇಮಕಾಂತನ ಮೇಲೆ ದಯೆ ಬಂದಿತು. ಅವನು ತನ್ನ ಪಾರ್ಷದನಾದ ವಿಷ್ವಕ್ ಸೇನನಿಗೆ ಆಜ್ಞೆ ಮಾಡಿದ ''ನೀನು ಕೂಡಲೇ ಹೋಗು. ಹೇಮಕಾಂತನನ್ನು ಸೆಳೆದೊಯ್ಯಲು ಯಮದೂತರು ಬಂದು ನಿಂತಿದ್ದಾರೆ. ಅವರಿಂದ ಅವನನ್ನು ರಕ್ಷಿಸು. ಛತ್ರ ಹಾಗೂ ವ್ಯಜನ ದಾನಗಳಿಂದ ಅವನ ಪಾಪಗಳೆಲ್ಲ ಕಳೆದು ಹೋಗಿವೆ. ಅವನು ಈಗ ದೋಷಮುಕ್ತ, ನನ್ನ ಭಕ್ತ. ಅವನನ್ನು ನೀನು ಯಮದೂತರಿಂದ ಪಾರು ಮಾಡಿಕೊಂಡು ಸಾಯಗೊಡದೇ ಅವನ ರಾಜಧಾನಿಗೆ ಕರೆದುಕೊಂಡು ಹೋಗು. ಅವನ ತಂದೆಗೆ ಒಪ್ಪಿಸು. ಮತ್ತು ಅವನ ತಂದೆಗೆ ನಾನು ಹೇಳಿದ್ದೇನೆ ಎಂದು ಈ ಮಾತನ್ನು ತಿಳಿಸು.

''ಕುಶಕೇತು ಮಹಾರಾಜ! ಈ ನಿನ್ನ ಮಗನು ಮುನ್ನೂರು ಬ್ರಹ್ಮಹತ್ಯೆಗಳನ್ನು ಮಾಡಿದ್ದೇನೋ ನಿಜ. ಆದರೆ ವೈಶಾಖ ಮಾಸದಲ್ಲಿ ಛತ್ರದಾನ ಮಾಡಿ ತ್ರಿತರಂಥ ಮಹಾಮುನಿಗಳಿಗೆ ಜೀವದಾನ ಮಾಡಿದ್ದರಿಂದ ಅವನ ಆ ಬ್ರಹ್ಮಹತ್ಯಾದಿ ಪಾಪಗಳೆಲ್ಲವೂ

ನಾಶವಾಗಿ ಹೋಗಿವೆ. ಅದರ ಪ್ರಭಾವದಿಂದ ಈ ನಿನ್ನ ಮಗನು ಈಗ ಪುಣ್ಯಪುರುಷನಾಗಿದ್ದಾನೆ. ಜಿತೇಂದ್ರಿಯನೂ ದೀರ್ಘಾಯುಷಿಯೂ ಶೂರನೂ ಉದಾರನೂ, ಗುಣವಂತನೂ ಆಗಿ ಮಾರ್ಪಟ್ಟಿದ್ದಾನೆ ಈ ವೈಶಾಖದ ಛತ್ರದಾನದಿಂದ. ಆದುದರಿಂದ ನನ್ನ ಆಜ್ಞೆಯಿಂದ ಈ ಬಲಿಷ್ಠನಾದ ನಿನ್ನ ಮಗನನ್ನು ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕ ಮಾಡು. ರಾಜ್ಯದ ಭಾರವನ್ನೆಲ್ಲ ಅವನಿಗೆ ವಹಿಸಿ ನೀನು ತಪಸ್ಸಿಗೆ ತೆರಳು.'' ಹೀಗೆ ಕುಶಕೇತು ರಾಜನಿಗೆ ನನ್ನ ಆಜ್ಞೆಯನ್ನು ತಿಳಿಸಿ ಈ ಹೇಮಕಾಂತ ಎಂಬ ಪುತ್ರನನ್ನು ಅವನಿಗೆ ಒಪ್ಪಿಸಿ ನೀನು ಮರಳಿ ಇಲ್ಲಿಗೆ ಬಾ.''

ಈ ಪ್ರಕಾರ ಶ್ರೀಹರಿಯ ಆಜ್ಞೆಯಂತೆ ವಿಷ್ವಕ್ ಸೇನನು ಹೇಮಕಾಂತನ ಬಳಿಗೆ ಬಂದು ಯಮದೂತರನ್ನು ತಡೆದ. ಶ್ರೀಹರಿಯ ಆಜ್ಞೆಯನ್ನು ತಿಳಿಸಿ ಅವರೆಲ್ಲರನ್ನೂ ಯಮಲೋಕಕ್ಕೆ ಕಳಿಸಿದ. ತಾನು ಹೇಮಕಾಂತನ ಮೈಮೇಲೆಲ್ಲ ಕೈಯಾಡಿಸಿದ. ಭಗವದ್ ಭಕ್ತನಾದ ವಿಷ್ವಕ್ ಸೇನನ ಹಸ್ತಸ್ಪರ್ಶದಿಂದ ಹೇಮಕಾಂತನ ಎಲ್ಲ ಬೇನೆ ಬೇಸರಿಕೆಗಳೂ ಹೇಳಹೆಸರಿಲ್ಲದೇ ಹೊರಟು ಹೋದವು. ನಂತರ ಆರೋಗ್ಯಸಂಪನ್ನನಾಗಿ ಹೊಸ ಹುಟ್ಟನ್ನೇ ಪಡೆದು ಎದ್ದು ನಿಂತಿರುವ ಹೇಮಕಾಂತನನ್ನು ವಿಷ್ಣು ಪಾರ್ಷದ ವಿಷ್ವಕ್ ಸೇನನು ಕರೆದುಕೊಂಡು ಕುಶಕೇತು ರಾಜನ ಬಳಿಗೆ ಬಂದ. ತಂದೆಗೆ ಮಗನನ್ನು ಒಪ್ಪಿಸಿ ಶ್ರೀವಿಷ್ಣುವಿನ ಆಜ್ಞೆಯನ್ನು ತಿಳಿಸಿದ.

ವೃದ್ಧನಾದ ಮಹಾರಾಜನು ಮಗನ ಚಿಂತೆಯಿಂದಲೇ ಕೊರಗಿ ಕಾಷ್ಠನಾಗಿದ್ದ. ಧರ್ಮಬುದ್ಧಿ ಮಗನನ್ನು ಹೊರಗೆ ಹಾಕಿದ್ದರೂ ಹಡೆದ ಕರುಳು ತನ್ನ ಕೈಯಿಂದಲೇ ಹೊರದೂಡಿದ ಮಗನಿಗಾಗಿ ಹಗಲಿರುಳೂ ಕುದಿಯುತ್ತಿತ್ತು. ಶ್ರೀಹರಿಯ ಕರುಣೆಯ ಕಾರಂಜಿಯಲ್ಲಿ ಮುಳುಗಿ ಶುದ್ಧಾತ್ಮನಾಗಿ ಎದ್ದು ಬಂದ ಆ ಪುತ್ರನನ್ನು ಕಂಡು ಸಂತಸದಿಂದ ಬಿಗಿದಪ್ಪಿದ ಮುದುಕ ಮಹಾರಾಜ. ತನಗೆ ಮಗನನ್ನು ತಂದು ಒಪ್ಪಿಸಿದ ವಿಷ್ಣುದೂತನಾದ ವಿಷ್ವಕ್‌ಸೇನನನ್ನು ಬಗೆಬಗೆಯಾಗಿ ಸ್ತುತಿಸಿ ದೇವರಂತೆ ಪೂಜೆಮಾಡಿದ. ಶ್ರೀಹರಿಯ ಆಜ್ಞೆಯನ್ನು ಮನ್ನಿಸಿ ಹೇಮಕಾಂತನನ್ನು ತನ್ನ ಉತ್ತರಾಧಿಕಾರಿಯನ್ನಾಗಿ ಸಾಮ್ರಾಜ್ಯ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕಗೈದ. ಅನಂತರ ತನ್ನ ಹೆಂಡತಿಯೊಂದಿಗೆ ತಪೋನುಷ್ಠಾನಕ್ಕಾಗಿ ತೆರಳಿದ ಆರಣ್ಯಕ ಆಶ್ರಮಕ್ಕೆ.

ಇತ್ತ ವಿಷ್ವಕ್‌ಸೇನನು ಹೇಮಕಾಂತನಿಂದ ನಿರೋಪ ಪಡೆದು ಶ್ವೇತದ್ವೀಪಕ್ಕೆ ಪ್ರಯಾಣಿಸಿದ ಶ್ರೀವಿಷ್ಣುವಿನ ಸನ್ನಿಧಿಗೆ. ಅಂದಿನಿಂದ ಹೇಮಕಾಂತ ಮಹಾರಾಜ ವೈಶಾಖ ಮಾಸದಲ್ಲಿ ವಿಹಿತವಾದ ಛತ್ರದಾನ, ಬೀಸಣಿಕೆಯ ದಾನ, ಪಾನಕದಾನ, ಅನ್ನದಾನ ಅರವಟ್ಟಿಗೆಗಳಲ್ಲಿ ಜಲದಾನ, ಮತ್ತು ಪ್ರಾತಃಸ್ನಾನ ಮುಂತಾದ ಶುಭಕರ್ಮಗಳನ್ನು ತಪ್ಪದೇ ಮಾಡುತ್ತಲಿದ್ದ. ವೈಶಾಖ ಮಾಸದಲ್ಲಿ ವಿಹಿತವಾದ ಈ ಸ್ನಾನದಾನಾದಿ ಧರ್ಮಕರ್ಮಗಳೆಲ್ಲವೂ ಧರ್ಮ ಅರ್ಥ ಕಾಮ ಮೋಕ್ಷ ಎಂಬ ನಾಲ್ಕು ವಿಧವಾದ ಪುರುಷಾರ್ಥಗಳನ್ನು ತಂದು ಕೊಡಲು ಸಮರ್ಥವಾಗಿರುತ್ತವೆ.

**ಜನಕ:-** ಪೂಜ್ಯರೆ, ನಿಮ್ಮ ಹೇಳಿಕೆಯನ್ನು ಕೇಳಿದರೆ ವೈಶಾಖ ಮಾಸದಲ್ಲಿ ವಿಹಿತವಾದ ದಾನ ಧರ್ಮಗಳು ಬಹು ಸುಲಭ. ಆದರೆ ಅವುಗಳಿಂದ ಲಭಿಸಬಹುದಾದ ಗತಿ ಮಾತ್ರ ಅತ್ಯಂತ ದುರ್ಲಭ. ಮುಖ್ಯವಾಗಿ ಈ ವೈಶಾಖ ಧರ್ಮಗಳಿಂದ ಶ್ರೀಹರಿಗೆ ಪರಮ ಪ್ರೀತಿಯಾಗುತ್ತದೆ. ಮೇಲೆ ಚತುರ್ವಿಧ ಪುರುಷಾರ್ಥ ಪ್ರಾಪ್ತಿ. ಇಷ್ಟೆಲ್ಲ ಇದ್ದ ಬಳಿಕ ಈ ಪ್ರಪಂಚದಲ್ಲಿ ಇದರ ಪ್ರಸಿದ್ಧಿಯು ಸರಿಯಾಗಿ ಏಕೆ ಆಗಲಿಲ್ಲ?

**ಶ್ರುತದೇವ:-** ರಾಜನೇ, ಈ ಭೂಮಂಡಲದಲ್ಲಿ ಲೌಕಿಕವಾದ ಆಶೆ ಆಕಾಂಕ್ಷೆಗಳನ್ನು ಇಟ್ಟುಕೊಂಡು ಧರ್ಮಕರ್ಮಗಳನ್ನು ಮಾಡುವ ಜನರು ಅಧಿಕರಾಗಿದ್ದಾರೆ. ಅವರೆಲ್ಲರಿಗೂ ಸಾಮಾನ್ಯವಾಗಿ ಲೌಕಿಕ ಕಾಮನೆಗಳೇ ಮುಖ್ಯವಾಗಿರುತ್ತವೆ. ಅವುಗಳಲ್ಲಿ ಕೆಲವು ರಾಜಸ ಕಾಮನೆಗಳೂ, ಹಲವು ತಾಮಸ ಕಾಮನೆಗಳೂ ಇರುತ್ತವೆ. ಈ ಜಗತ್ತಿನಲ್ಲಿ ಬಹುಜನರು ಬಯಸುವದು ಮಡದಿ ಮಕ್ಕಳು, ಮನೆ ಮಾರು, ಸಂಪತ್ತು, ಅಧಿಕಾರ, ಪ್ರತಿಷ್ಠೆ, ಗೌರವ, ವೈಭವಗಳನ್ನು ಮಾತ್ರ. ಕ್ವಚಿತ್ ಆಗಿ ಕೆಲವುರು ಸ್ವರ್ಗಸುಖದ ಅಭಿಲಾಷೆಯಿಂದ ಯಜ್ಞಯಾಗ ಮುಂತಾದ ಪುಣ್ಯಕರ್ಮಗಳನ್ನು ಪ್ರಯತ್ನದಿಂದ ಅನುಷ್ಠಾನ ಮಾಡುತ್ತಾರೆ. ಆದರೆ ಪರಮಪುರುಷಾರ್ಥವಾದ ಮೋಕ್ಷವನ್ನು ಅಪೇಕ್ಷಿಸುವವರು ಮಾತ್ರ ಅತೀ ವಿರಳ. ಆದುದರಿಂದಲೇ ಆ ಮೋಕ್ಷ ಸಾಧನವಾದ ಸಾತ್ವಿಕ ಧರ್ಮಗಳ ಆಚರಣೆಯು ವಿರಳವಾಗಿಯೇ ಕಂಡು ಬರುತ್ತದೆ. ತುಚ್ಛವಾದ ಸುಖೋಪಭೋಗಗಳ ಆಶೆಯಿಂದ ಕಾಮ್ಯ ಕರ್ಮಗಳ ಉಪಾಸನೆಯನ್ನು ಬಹುಜನರು ಮಾಡುವದರಿಂದ ಲೋಕದಲ್ಲಿ ತಾಮಸ ರಾಜಸ ಧರ್ಮ ಕರ್ಮ ಪ್ರಚಾರವು ಹೆಚ್ಚಾಗಿ ಕಂಡುಬರುತ್ತದೆ. ಮೋಕ್ಷಪ್ರದವಾದ ಸಾತ್ವಿಕ ಧರ್ಮಗಳ ವಿಶೇಷ ಪ್ರಸಿದ್ಧಿಯು ಎಲ್ಲಿಯೂ ಹೆಚ್ಚಾಗಿ ಕಂಡುಬರುವುದಿಲ್ಲ.

ಪ್ರಾಣಿಗಳಿಗೆ ಮೋಕ್ಷವನ್ನು ಕರುಣಿಸುವವ ಮಹಾಪ್ರಭು ಶ್ರೀ ಭಗವಾನ್ ಮಹಾವಿಷ್ಣು. ಅವನನ್ನು ಪ್ರಸನನ್ನಾಗಿ ಮಾಡಲು ನಿಷ್ಕಾಮ ಬುದ್ಧಿಯಿಂದ ಆಚರಿಸಲ್ಪಡುವ ಧರ್ಮಕರ್ಮಗಳೆಲ್ಲವೂ ಸಾತ್ವಿಕ ಧರ್ಮ ಎಂದು ಕರೆಯಲ್ಪಡುತ್ತವೆ. ವಿಷ್ಣು ಪ್ರೀತ್ಯರ್ಥವಾಗಿ ಅನುಷ್ಠಿಸಲ್ಪಡುವ ಈ ನಿಷ್ಕಾಮ ಕರ್ಮ ಅಥವಾ ಸಾತ್ವಿಕ ಧರ್ಮಗಳಿಂದ ಇಹದಲ್ಲಿ ಸರ್ವವಿಧ ಸುಖ ಸೌಭಾಗ್ಯ ಸಂತಸಗಳ ಪ್ರಾಪ್ತಿ ಆಗುವದಲ್ಲದೇ, ಪರದಲ್ಲಿ ಮೋಕ್ಷವೂ ಕೂಡ ಲಭಿಸುವುದು. ಅಜ್ಞಾನದಿಂದ ಮುಗ್ಧನಾದ ಮೂಢ ಮಾನವನು ಈ ಶುದ್ಧ, ಸಾತ್ವಿಕ ಧರ್ಮಗಳ ಮಹಾಪ್ರಯೋಜನವನ್ನು ಅರಿಯುವುದಿಲ್ಲ.

ಬಹು ವರ್ಷಗಳ ಹಿಂದೆ ಕಾಶೀಪಟ್ಟಣದಲ್ಲಿ ಕೀರ್ತಿಮಾನ್ ಎಂಬ ಹೆಸರಿನ ಮಹಾರಾಜನು ಇರುತ್ತಿದ್ದ. ಆ ಕಾಲದಲ್ಲಿ ಅಖಂಡ ಭೂಮಂಡಲಕ್ಕೆ ಅವನೊಬ್ಬನೇ ಏಕಮಾತ್ರ ಚಕ್ರವರ್ತಿ ದೊರೆ. ಇಕ್ಷ್ವಾಕು ವಂಶದ ನೃಗಚಕ್ರವರ್ತಿಯ ಸತ್ಪುತ್ರನೇ ಈ ಕೀರ್ತಿಮಾನ್ ಮಹಾರಾಜ. ಅವನು ತನ್ನ ಬಾಹ್ಯ ವೈರಿಗಳನ್ನೆಲ್ಲ ಲೀಲಾಜಾಲವಾಗಿ ಗೆದ್ದಂತೆ ಅಂತರಂಗ ವೈರಿಗಳಾದ ಕಾಮ, ಕ್ರೋಧಾಧಿಗಳ ಮೇಲೂ ವಿಜಯವನ್ನು ಸಾಧಿಸಿದ್ದ. ಲೌಕಿಕ ಸುಖಸಂಪದಗಳಂತೆ ಅಧ್ಯಾತ್ಮ ಸಂಪತ್ತು ಅವನ ಸ್ವತ್ತಾಗಿತ್ತು. ದಿಗ್ದೇಶಗಳೆಲ್ಲವೂ ಅವನ ಅಂಕಿತದಲ್ಲಿದ್ದಂತೆ, ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೂ ಅವನ ಅಂಕಿತದಲ್ಲಿದ್ದವು. ಆದುದರಿಂದಲೇ ಆ ರಾಜನು ಆ ಕಾಲದಲ್ಲಿ ರಾಜರ್ಷಿ ಎಂದು ಪ್ರಸಿದ್ಧಿಯನ್ನು ಪಡೆದಿದ್ದ.

ಒಂದು ದಿನ ಆ ರಾಜನು ದುಷ್ಟ ಪ್ರಾಣಿಗಳನ್ನೂ, ಪುರಗ್ರಾಮಾದಿಗಳಲ್ಲಿ ನುಗ್ಗಿ ಜನರನ್ನು ಸಂಹರಿಸುವ ಹಿಂಸ್ರ ಪ್ರಾಣಿಗಳನ್ನೂ ಬೇಟೆಯಾಡಬೇಕೆಂದು ಕಾಡಿಗೆ ತೆರಳಿದ್ದ. ಬೇಟೆಯ ಆಟದಲ್ಲಿ ಕ್ರೂರ ಹಿಂಸ್ರ ಪಶುಗಳನ್ನು ಬೆನ್ನಟ್ಟಿ ಬೆಂಗಾಡಿನಲ್ಲಿ ಬಹುದೂರ ಸೆಳೆಯಲ್ಪಟ್ಟ ಮಹಾರಾಜನು ಒಂದು ವಿಪಿನ ಗರ್ಭದಲ್ಲಿ ಪ್ರವೇಶಿಸಿದ. ಆ ವನ ಶ್ರೇಣಿಯ ಸೆರಗಿನಲ್ಲಿ ಮಹರ್ಷಿ ವಶಿಷ್ಠರ ಪುಣ್ಯಾಶ್ರಮವು ಇದ್ದುದು ಮಹಾರಾಜನಿಗೆ ಗೋಚರಿಸಿತು.

ಆಗ ವೈಶಾಖ ಮಾಸ. ಮಧ್ಯಹ್ನ ಕಾಲ, ನಡುನೆತ್ತಿಯ ಮೇಲೆ ಸೂರ್ಯ. ರವಿಯ ಕಿರಣಗಳೆಲ್ಲವೂ ಕಿಡಿಯ ಹುಡಿಯಂತೆ ಸೂಸಿ, ಬರುತ್ತಿದ್ದವು. ಬಿಸಿಲಿನ ಬೇಗೆಯಿಂದ ಬಳಲಿ ಬೆಂಡಾದ ಆ ದೊರೆಯು ತಪೋವನದ ಪ್ರಾಂಗಣದಲ್ಲಿ ಕಾಲಿರಿಸಿದ ಕೂಡಲೇ ಅಲ್ಲಿಯ ಸುಗಂಧದ ಕಂಪಿಂಪು ತೀಡುವ ಅಲ್ಲಿಯ ತಂಗಾಳಿಯು ಅಪ್ಯಾಯನ ಎನಿಸಿತು ಆ ಮಹಾರಾಜನಿಗೆ. ವಶಿಷ್ಠರ ಅನೇಕ ಶಿಷ್ಯರು ಆ ತಪೋವನದ ನಾಲ್ಕೂ ದಿಕ್ಕಿನ ಉಪವನಗಳಲ್ಲಿ ಬೇರೆ ಬೇರೆ ಕಾರ್ಯಗಳಲ್ಲಿ ಮಗ್ನರಾಗಿದ್ದರು. ಕೆಲವರು ಲತಾಮಂಟಪಗಳನ್ನು ಕಟ್ಟುತ್ತಿದ್ದರು.

ಹಲವರು ನೆರಳು ನಿಬಿಡವಾಗಿ ಬೀಳುವಂತೆ ಛಾಯಾಮಂಟಪಗಳನ್ನು ರಚಿಸುತ್ತಿದ್ದರು. ಉಳಿದವರು ಗಿಡಬಳ್ಳಿಗಳಿಗೆ ಪಾತೆ ಕಟ್ಟಿ ನೀರನ್ನು ಉಣಿಸುತ್ತಿದ್ದರು. ಮತ್ತೆ ಕೆಲವು ಶಿಷ್ಯರು ಮಾರ್ಗಾಯಾಸದಿಂದ ದಣಿದು ಬಂದ ದಾರಿಹೋಕರನ್ನು ಅಲ್ಲಿಯ ಹೆಮ್ಮರಗಳ ತಣ್ಣೆಳಲಲ್ಲಿ ಕುಳ್ಳಿರಿಸಿ ಬೀಸಣಿಕೆಯಿಂದ ಬೀಸುತ್ತಿದ್ದರು. ಹಣ್ಣು ಕಾಯಿ ತಂಪು ಪಾನೀಯಗಳನ್ನು ಪ್ರವಾಸಿಕರಿಗೆ ಕೊಟ್ಟು ಉಪಚರಿಸುತ್ತಿದ್ದರು. ಕೆಲವು ವಿದ್ಯಾರ್ಥಿಗಳು ದಟ್ಟ ನೆರಳನ್ನು ನೆಲದ ಮೇಲೆ ಚೆಲ್ಲಿದ ಮರದಡಿಯ ಕಸಕಡ್ಡಿಗಳನ್ನು ತೆಗೆದು ಉಡುಗಿ ಸ್ವಚ್ಛಮಾಡಿ ಸಣ್ಣಗಿನ ಉಸುಕನ್ನು ಹಾಕಿ ಕುಳಿತುಕೊಳ್ಳಲು ಮೆತ್ತಗಿನ ಆಸನಗಳನ್ನು ಸಜ್ಜುಗೊಳಿಸುತ್ತಿದ್ದರು.

ವಶಿಷ್ಠ ಶಿಷ್ಯರ ಈ ವಿವಿಧ ಕಾರ್ಯಗಳನ್ನು ಕಂಡು ರಾಜನು, ಸಂತುಷ್ಟನಾಗಿ ಕೇಳಿದ : 'ಪೂಜ್ಯರೇ, ತಾವು ಯಾರು? ಈ ಎಲ್ಲವನ್ನು ಏನು ಮಾಡುತ್ತಲಿರುವಿರಿ?' ಆಗ ಆ ಮಹರ್ಷಿಗಳ ಅಂತೇವಾಸಿಗಳು ಸಂತಸದಿಂದ ಶಾಂತಸ್ವರದಲ್ಲಿ ಉತ್ತರಿಸಿದರು : ''ಬ್ರಹ್ಮರ್ಷಿ ವಶಿಷ್ಠರ ಶಿಷ್ಯರು ನಾವು. ಈಗ ವೈಶಾಖ ಮಾಸವಲ್ಲವೆ? ಈಗ ನಾವು ಮಾಡುತ್ತಿರುವುದು- ಶಾಸ್ತ್ರೋಕ್ತವಾದ ಆ ವೈಶಾಖ ಧರ್ಮದ ಅನುಷ್ಠಾನ. ಮಾಸಗಳಲ್ಲಿ ಮುಖ್ಯ ವೈಶಾಖ. ಧರ್ಮ ಅರ್ಥ ಕಾಮ ಮೋಕ್ಷ ಎಂಬ ನಾಲ್ಕೂ ವಿಧ ಪುರುಷಾರ್ಥಗಳಿಗೆ ಸಾಧಕವಾಗಿದೆ ಈ ವೈಶಾಖ ಮಾಸದಲ್ಲಿ ವಿಹಿತವಾದ ಈ ಕರ್ತವ್ಯ ಕರ್ಮ. ಈ ಮಾಸ ಧರ್ಮಗಳನ್ನು ತಪ್ಪದೇ ಅನುಷ್ಠಾನ ಗೈಯಬೇಕೆಂದು ಗುರುದೇವ ವಶಿಷ್ಠರ ಆಜ್ಞೆ ನಮಗೆ.

**ಕೀರ್ತಿಮಾನ್ ರಾಜ:-** ಪೂಜ್ಯರೇ, ಈ ಮಾಸ ಧರ್ಮಗಳ ಅನುಷ್ಠಾನದಿಂದ ಮಾನವನಿಗೆ ಯಾವ ಫಲವು ದೊರೆಯುವುದು? ಯಾವ ದೇವತೆಯ ಪ್ರಸನ್ನತೆಗಾಗಿ ಈ ಎಲ್ಲ ಕಾರ್ಯಕಲಾಪ?

**ವಶಿಷ್ಠ ಶಿಷ್ಯರು:-** ''ಮಹನೀಯ, ಈ ಬೇಸಿಗೆಯ ಬಿಸಿಲಿನ ತಾಪದಿಂದ ಬೆಂದು ಬಂದಿದ್ದಾರೆ ಈ ಎಲ್ಲ ಪಾಂಥರು. ದಣಿದು ಹೋದ ಈ ಎಲ್ಲ ದಾರಿಕಾರರಿಗೆ ಅರ್ಘ್ಯ, ಪಾದ್ಯ, ಆಸನ, ಪಾನೀಯ, ವ್ಯಜನ, ಉಪಹಾರ ಮುಂತಾದ ಉಪಚಾರಗಳನ್ನು ಒದಗಿಸುವ ಮಾಸ ಧರ್ಮದಲ್ಲಿ ನಾವೆಲ್ಲರೂ ಆಸಕ್ತರಾಗಿದ್ದೇವೆ. ನಿಮ್ಮ ಪ್ರಶ್ನೆಗಳಿಗೆ ಉತ್ತರ ಕೊಡುವಷ್ಟು ನಮಗೆ ಬಿಡುವು ಇರುವುದಿಲ್ಲ. ದಯಮಾಡಿ ತಾವು ಈ ಆಶ್ರಮದ ಒಳಗೆ ಹೋಗಿರಿ. ನಮ್ಮ ಗುರುಗಳು ಇರುತ್ತಾರೆ ಆಶ್ರಮದ ಒಳಗಡೆ. ತಾವು ಅವರನ್ನು ಕಂಡು ತಿಳಿದುಕೊಳ್ಳಬಹುದು ವೈಶಾಖ ಮಾಸದ ಮಹಿಮೆಯನ್ನು. ನಮಗಿಂತಲೂ ಚೆನ್ನಾಗಿ ಬಲ್ಲರು ಈ ಮಾಸಧರ್ಮಗಳನ್ನು ನಮ್ಮ ಗುರುಗಳು. ಹಾಗೂ ನಿಮಗೆ ಅವುಗಳನ್ನೆಲ್ಲ

ಚೆನ್ನಾಗಿ ಅವರೇ ತಿಳಿಸಿ ಹೇಳಬಲ್ಲರು. ನಿಮಗೆ ಸುಸ್ವಾಗತ. ತಾವು ಈ ಮರದಡಿಯ ತಂಪಿನ ತಾಣದಲ್ಲಿ ತುಸು ಹೊತ್ತು ತಂಗಿ ಈ ತಂಪು ಪಾನೀಯವನ್ನು ಸೇವಿಸಿ ದಣಿವನ್ನು ಆರಿಸಿಕೊಂಡು ನಮ್ಮ ಗುರುಗಳ ಬಳಿಗೆ ಹೋಗಬಹುದು.''

ಆ ತರುಣ ಛಾತ್ರರ ಆದರದ ಮಾತುಗಳನ್ನು ಕೇಳಿ ಮಹಾರಾಜನು ಸಂತುಷ್ಟನಾಗಿ ಆಶ್ರಮದ ಅಭ್ಯಂತರದಲ್ಲಿ ಪ್ರವೇಶಿಸಿದ. ಮಹರ್ಷಿಗಳು ಈ ರಾಜರ್ಷಿಯನ್ನು ಕಂಡಕೂಡಲೇ ಸಂತಸದಿಂದ ಸ್ವಾಗತ ಮಾಡಿದರು. ಅತಿಥ್ಯ ಸತ್ಕಾರ ನೀಡಿದರು. ಅವರ ಪ್ರೀತಿ ವಿಶ್ವಾಸದ ಉಪಚಾರದಿಂದ ಪರಿತುಷ್ಟನಾದ ಮಹಾರಾಜ ವಿನಯದಿಂದ ವಂದಿಸಿ ಕೇಳಿದ- ''ಪೂಜನೀಯರಾದ ಮಹರ್ಷಿಗಳೇ! ನಾನು ತಮ್ಮ ಪುಣ್ಯಾಶ್ರಮದ ಪರಿಸರದಲ್ಲಿ ಬಂದ ಕೂಡಲೇ ತಮ್ಮ ಅನೇಕ ಶಿಷ್ಯರು ಭಿನ್ನ ಭಿನ್ನ ಕೆಲಸಗಳಲ್ಲಿ ವ್ಯಾಪೃತರಾಗಿರುವದನ್ನು ಕಂಡೆ. ತಪೋವನದ ಪರಿಸರದ ಉಪವನಗಳಲ್ಲಿ ಬಗೆಬಗೆಯ ಕಾರ್ಯಗಳನ್ನು ತಮ್ಮ ಶಿಷ್ಯರು ಮಾಡುತ್ತಿದ್ದರು. ಇದೆಲ್ಲವೂ ಏನು ಎಂದು ನಾನು ಅವರನ್ನು ಪ್ರಶ್ನಿಸಿದೆ.

ಗುರುಗಳಾದ ತಮ್ಮನ್ನೇ ನಾನು ಕೇಳಬೇಕೆಂದು ಅವರೆಲ್ಲರೂ ಹೇಳಿದರು. ಅದನ್ನು ತಿಳಿದುಕೊಳ್ಳುತ್ತೇನೆಂದು ನಾನು ತಮ್ಮ ಬಳಿಗೆ ಬಂದಿದ್ದೇನೆ. ಆಶ್ರಮದಲ್ಲಿ ತಮ್ಮ ಶಿಷ್ಯರು ಸ್ವಾಧ್ಯಾಯ ಅಧ್ಯಯನ ಜಪತಪಾನುಷ್ಠಾನ ಮಾಡುವಂತೆ, ದಾರಿ ಹೋಕರಿಗೆ ಅನುಕೂಲ ವಾಗುವಂಥ ಪರೋಪಕಾರ ಕಾರ್ಯವನ್ನೂ ಕಾಲಧರ್ಮ ಎಂದು ಆಚರಿಸುತ್ತಿರುವದನ್ನು ಕಂಡೆ. ಈ ಜನಸೇವೆಯನ್ನು ಮಾಸಧರ್ಮವೆಂದು ಅನುಷ್ಠಾನ ಮಾಡುವದರ ರಹಸ್ಯವೇನು? ವೈಶಾಖ ಮಾಸದಲ್ಲಿ ಎಲ್ಲರೂ ಆಚರಿಸಬೇಕಾದ ಧರ್ಮಕರ್ಮಗಳು ಯಾವುವು? ಇದನ್ನೆಲ್ಲ ತಾವು ನನಗೆ ತಿಳಿಸಿ ಹೇಳಬೇಕು.

**ವಶಿಷ್ಠ**:- ರಾಜರ್ಷಿಯೇ! ವೈಶಾಖ ಮೊದಲಾದ ಮಾಸಗಳಲ್ಲಿ ಅವಶ್ಯವಾಗಿ ಮಾಡಬೇಕು ಎಂದು ವಿಧಿಸಲಾದ ಧರ್ಮಗಳು ಲೋಕೋಪಕಾರಕವಾಗಿವೆ. ಆದುದರಿಂದಲೇ ಶ್ರೀಹರಿಗೆ ಪರಮ ಪ್ರೀತಿಕಾರಕವೂ ಆಗಿರುತ್ತವೆ. ಈ ಎಲ್ಲ ಮಾಸಗಳಲ್ಲಿ ಅದರಲ್ಲಿಯೂ ವಿಶೇಷವಾಗಿ ವೈಶಾಖ ಮಾಸದಲ್ಲಿ ಅವಶ್ಯ ಕರ್ತವ್ಯ ಎಂದು ಹೇಳಲಾದ ಜನಸೇವಾರೂಪ ಧರ್ಮಕಾರ್ಯಗಳನ್ನು ಶ್ರೀಹರಿಯ ಆರಾಧನೆ ಎಂದು ಆದರದಿಂದ ಮಾಡುವವರು ಪರಮಾತ್ಮನ ಪರಮ ಪ್ರಸಾದಕ್ಕೆ ಪಾತ್ರರಾಗುತ್ತಾರೆ. ಈ ಮಾಸಧರ್ಮ ಗಳಿಂದ ಸಂತುಷ್ಟನಾದ ಶ್ರೀಹರಿಯು ಈ ಪರೋಪಕಾರ ಮಾಡಿದವರ ಮನೋವಾಂಛಿತ ಗಳನ್ನು ಪೂರ್ಣಗೊಳಿಸುವನು. ವೈಶಾಖಮಾಸದಲ್ಲಿ ಅತೀ ಅಲ್ಪ ಪರಿಶ್ರಮದಿಂದ ಮಾಡಬಹುದಾದ ಹಲವಾರು ಲೋಕೋಪಕಾರಕ ಧರ್ಮಗಳನ್ನು ಹೇಳಿದ್ದಾರೆ. ಇವುಗಳಿಂದ ಬಹು ಆಯಾಸ, ಅತಿ ಪರಿಶ್ರಮ, ಪ್ರಭೂತ ದ್ರವ್ಯವ್ಯಯಗಳಿಂದ ಮಾತ್ರ ಸಾಧ್ಯವಾದ ಅಶ್ವಮೇಧಾದಿ ಯಜ್ಞಗಳ ಪುಣ್ಯಫಲಗಳನ್ನು ಸುಲಭವಾಗಿಯೇ ಹೊಂದಬಹುದು.

ಆದುದರಿಂದ ಮಹಾರಾಜನೇ, ನೀನು ಕೂಡ ಈ ವೈಶಾಖ ಮಾಸದಲ್ಲಿ ಹೇಳಿದ ಧರ್ಮಕರ್ಮಗಳನ್ನು ತಪ್ಪದೇ ಅನುಷ್ಠಾನ ಮಾಡು. ನಿನ್ನ ರಾಜ್ಯದ ಎಲ್ಲ ಪ್ರಜೆಗಳಿಗೂ ತಿಳಿಸಿ ಹೇಳಿ, ಅವರ ಕಡೆಯಿಂದಲೂ ಮಾಡಿಸು. ಈ ವೈಶಾಖ ಮಾಸದಲ್ಲಿ ಜಲದಾನ, ಅನ್ನದಾನ, ಕೊಡೆ, ಬೀಸಣಿಕೆ, ನೀರು ತುಂಬಿದ ಪಾತ್ರೆ, ಪಾದರಕ್ಷೆ, ಪಾನಕ, ಚಾಪೆ

ಮುಂತಾದವುಗಳ ದಾನಗಳು ಅತ್ಯಧಿಕ ಪುಣ್ಯಪ್ರದವಾಗಿವೆ ನೀರಡಿಸಿ ಬಂದವರಿಗೆ ನೀರು, ದಾರಿ ನಡೆದು ದಣಿದು ಬಂದವರಿಗೆ ಅನ್ನಪಾನ ಮುಂತಾದವುಗಳನ್ನು ನೀಡಿ ಉಪಚರಿಸುವದು ಹರಿಪ್ರೀತಿಕರವಾಗಿದೆ ಈ ವೈಶಾಖ ಮಾಸದಲ್ಲಿ.

ಕೂಡುದಾರಿಯ ವೃತ್ತಗಳಲ್ಲಿಯೂ ಪುರಗ್ರಾಮಗಳ ಪ್ರತ್ಯಂತ ಪ್ರದೇಶಗಳಲ್ಲಿಯೂ ನೀರಿನ ಅರವಟ್ಟಿಗೆಗಳನ್ನು ಇರಿಸಿ ಪಾಂಥಸ್ಥರಿಗೆ ತಂಪಾದ ನೀರನ್ನು ಹನಿಸುವ ಏರ್ಪಾಡನ್ನು ಮಾಡುವದು ಪರಮ ಪುಣ್ಯಕರ. ಜನರು ಓಡಾಡುವ ದಾರಿಗಳ ಇಕ್ಕೆಲಗಳಲ್ಲಿ ಮರಬಳ್ಳಿಗಳನ್ನು ಬೆಳೆಸಿ, ಸುಖಾಸನಗಳನ್ನು ಇರಿಸಿ, ಲತಾ ಮಂಟಪ, ಛಾಯಾಮಂಟಪ, ಬಗೆಬಗೆಯ ಬಳ್ಳಿವಾಡ ಕುಂಜನಿಕುಂಜಗಳನ್ನು ರಚಿಸಿ, ಪ್ರವಾಸಿಗಳಿಗೆ ವಿಶ್ರಮಿಸಲು ಅನುಕೂಲವಾಗುವಂತೆ ವಿವಿಧ ಏರ್ಪಾಡುಗಳನ್ನು ಮಾಡುವವರು ನಿಜವಾಗಿಯೂ ಮಹಾವಿಷ್ಣುವಿನ ಮಹಾಸೇವೆಯನ್ನು ಮಾಡಿದಂತಾಗುವದು. ಶ್ರೀಹರಿಯ ಪರಮಪ್ರೀತಿಯನ್ನು ಗಳಿಸಲು ಈ ವೈಶಾಖಮಾಸದ ಪರೋಪಕಾರದ ಈ ಎಲ್ಲ ಮಾಸಧರ್ಮಗಳು ಸುಲಭ ಸಾಧನವಾಗಿವೆ. ಇವುಗಳನ್ನೆಲ್ಲ ನೀನು ಚೆನ್ನಾಗಿ ತಿಳಿದುಕೊಂಡು ನಿನ್ನ ರಾಜ್ಯದಲ್ಲಿ ನೀನು ಸ್ವಂತ ಆಚರಿಸು. ಹಾಗೂ ನಿನ್ನ ಪ್ರಜೆಗಳಿಂದಲೂ ಒತ್ತಾಯದಿಂದ ಮಾಡಿಸಿ ಪುಣ್ಯ ಸಂಪಾದನೆಯನ್ನು ಮಾಡಿಕೊ.''

ಹೀಗೆ ತಿಳಿ ಹೇಳಿ ವಶಿಷ್ಠರು ಆ ಕೀರ್ತಿಮಾನ್ ಮಹಾರಾಜನಿಗೆ ವೈಶಾಖ ಮಾಸದಲ್ಲಿ ಅವಶ್ಯವಾಗಿ ಆಚರಿಸಬೇಕಾದ ಬಗೆಬಗೆಯ ಧರ್ಮಗಳನ್ನೆಲ್ಲ ವಿವರವಾಗಿ ನಿರೂಪಿಸಿ ಅವನಿಗೆ ಮನಮುಟ್ಟುವಂತೆ ವರ್ಣಿಸಿ ಹೇಳಿದರು. ಅದನ್ನೆಲ್ಲ ಕೇಳಿ ಮಹಾರಾಜನಿಗೆ ಧನ್ಯತೆ ಎನಿಸಿತು. ಅವನು ಆ ಬ್ರಹ್ಮರ್ಷಿಗಳ ಬಾಯಿಯಿಂದ ವೈಶಾಖಮಾಸದ ಆಚಾರ ಧರ್ಮಗಳನ್ನೆಲ್ಲ ಸರಿಯಾಗಿ ಕೇಳಿ ತಿಳಿದುಕೊಂಡು ಪರಮ ಪ್ರೀತನಾಗಿ ಯಥಾವತ್ತಾಗಿ ಮಹರ್ಷಿಗಳ ಪೂಜೆಯನ್ನು ಮಾಡಿದನು. ಅವರಿಗೆ ದಾನದಕ್ಷಿಣೆಗಳನ್ನು ಕೊಟ್ಟು ತನ್ನ ರಾಜಧಾನಿಗೆ ಮರಳಿದನು.

ಕೀರ್ತಿಮಾನ್ ಮಹಾರಾಜನು ಮಂತ್ರಿ ಸೇನಾಪತಿಗಳೊಂದಿಗೆ ವಿಚಾರ ವಿನಿಮಯ ಮಾಡಿ ಆನೆಯ ಮೇಲೆ ನಗಾರಿ ಇಡಿಸಿ ತನ್ನ ರಾಜ್ಯದ ತುಂಬ ಡಂಗುರ ಹೊಡೆಸಿದನು.

''ನನ್ನ ರಾಜ್ಯದಲ್ಲಿ ಎಂಟರಿಂದ ಎಂಬತ್ತು ವರುಷದೊಳಗಿನ ಎಲ್ಲರೂ ವೈಶಾಖ ಮಾಸದಲ್ಲಿ ವಿಹಿತವಾದ ಪ್ರಾತಃಸ್ನಾನ, ಜಲದಾನ, ಅತಿಥಿ ಸೇವೆ, ಲೋಕೋಪಕಾರ, ಛಾಯಾಮಂಟಪ ರಚನೆ, ವೀಜನ, ವ್ಯಜನ, ಛಾಯಾನಿರ್ಮಾಣ, ಪಾನೀಯ ಪ್ರದಾನ, ಪಾದರಕ್ಷಾ ಪ್ರದಾನ, ಸೋದಕುಂಭದಾನ, ಪ್ರಪಾನಿರ್ಮಾಣ, ವಾಪೀಕೂಪ ಸರೋವರಾದಿ ಜಲಾಶಯ ನಿರ್ಮಾಣ ಮುಂತಾದ ವೈಶಾಖ ಮಾಸದ ಧರ್ಮಗಳನ್ನು ಎಲ್ಲರೂ ತಪ್ಪದೇ ತಮಗೆ ಸಾಧ್ಯವಾದವುಗಳನ್ನು ಸಾಧಿಸಬೇಕು. ಮೇಷರಾಶಿಯಲ್ಲಿ ಸೂರ್ಯನು ಇದ್ದಾಗ ವೈಶಾಖ ಮಾಸದ ಒಂದು ತಿಂಗಳ ಪ್ರಾತಃಕಾಲದಲ್ಲಿ ಸ್ನಾನ ಮಾಡದಿರುವವರನ್ನೂ ವೈಶಾಖಮಾಸ ಧರ್ಮಾನುಷ್ಠಾನದಲ್ಲಿ ಅಸಡ್ಡೆ ತೋರುವವರನ್ನೂ ದಂಡಿಸಲಾಗುವದು. ಆದುದರಿಂದ ಈ ವೈಶಾಖ ಮಾಸದಲ್ಲಿ ಎಲ್ಲರೂ ಅವಶ್ಯವಾಗಿ ಶಾಸ್ತ್ರೋಕ್ತವಾದ ಹಾಗೂ ಕಾಲೋಚಿತವಾದ ದಾನ ಧರ್ಮ ಹಾಗೂ ಪುಣ್ಯಕರ್ಮಗಳನ್ನು ಅವಶ್ಯವಾಗಿ ಮಾಡಬೇಕು, ಮಾಡದಿದ್ದವರು ಶಿಕ್ಷೆಗೆ ಪಾತ್ರರಾಗುವರು.''

ಹೀಗೆ ಕೀರ್ತಿಮಾನ್ ಮಹಾರಾಜನು ತನ್ನ ರಾಜ್ಯದ ತುಂಬ ಘೋಷಣೆಯನ್ನು ಹೊರಡಿಸಿ ಡಂಗುರವನ್ನು ಹೊಡಿಸಿ ರಾಜ್ಯದ ಎಲ್ಲ ಪ್ರಜೆಗಳು ವೈಶಾಖ ಧರ್ಮವನ್ನು ಅನುಷ್ಠಾನ ಮಾಡುವಂತೆ ಮಾಡಿದ. ತನ್ನ ಸಾಮ್ರಾಜ್ಯದ ಪ್ರತಿಯೊಂದು ಪಟ್ಟಣ ಹಾಗೂ ಹಳ್ಳಿಗಳಲ್ಲಿ ಈ ವೈಶಾಖ ಧರ್ಮಗಳನ್ನು ತಿಳಿಸಿ ಹೇಳಲಿಕ್ಕಾಗಿಯೇ ಒಬ್ಬೊಬ್ಬ ವಿದ್ವಾಂಸರನ್ನು ನೇಮಿಸಿದ. ಅವರು ಸರಿಯಾಗಿ ಧರ್ಮೋಪದೇಶವನ್ನು ತಮ್ಮ ತಮ್ಮ ಗ್ರಾಮಗಳಲ್ಲಿ ನೆರವೇರಿಸುವರೋ ಇಲ್ಲವೋ ಎಂದು ನೋಡಲಿಕ್ಕಾಗಿ ಐದೈದು ಊರುಗಳ ಮೇಲೆ ಒಬ್ಬೊಬ್ಬ ಧರ್ಮಾಧಿಕಾರಿಯನ್ನು ನಿಯಮಿಸಿದ. ಅವರ ಮೇಲೆ ಹತ್ತು ಇಪ್ಪತ್ತು ಐವತ್ತು ನೂರು ಗ್ರಾಮಗಳ ಮೇಲೆ ಒಬ್ಬೊಬ್ಬ ಅಧಿಕಾರೀ ಪುರುಷನನ್ನು ನಿಯಮಿಸಿ ಅವರೆಲ್ಲರ ಮೇಲೆ ತಾನೇ ನಿರೀಕ್ಷೆ ಮಾಡುತ್ತಿದ್ದನು.

ಹೀಗೆ ಕೀರ್ತಿಮಾನ್‌ಮಹಾರಾಜನ ಮಹಾಪ್ರಯತ್ನದಿಂದ ಅವನ ವಿಶಾಲವಾದ ಸಾಮ್ರಾಜ್ಯದ ಆ ತುದಿಯಿಂದ ಈ ತುದಿಯವರೆಗೂ ವೈಶಾಖ ಮಾಸದ ಎಲ್ಲ ಧರ್ಮಗಳೂ ಎಲ್ಲ ಜನರಿಂದಲೂ ಅನೂಚಾನವಾಗಿ ಆಚರಿಸಲ್ಪಡತೊಡಗಿದವು. ಇದರಿಂದ ಅವನ ಸಾಮ್ರಾಜ್ಯದ ತುಂಬೆಲ್ಲ, ಹಾದಿ ಬೀದಿಗಳಲ್ಲೆಲ್ಲ ಅರವಟ್ಟಿಗೆ, ಇಕ್ಕೆಲಗಳಲ್ಲಿಯೂ ದಟ್ಟ ಹೆಮ್ಮರಗಳು, ಲತಾ ಪ್ರತಾನಗಳು, ಹುಲ್ಲು ಹಾಸುಗಳು, ಹೊಂಡ ಹೊಕ್ಕರಣಿಗಳು, ಪುಷ್ಪ ವಾಟಿಕೆಗಳು. ಪುರಗ್ರಾಮಗಳಲ್ಲಿಯೂ ಅನೇಕ ವಾಪೀ ಕೂಪ ತಟಾಕಗಳೂ, ತನ್ನೆಳಲು ದಟ್ಟೈಸಿದ ಛಾಯಾಗೃಹಗಳೂ, ಅತಿಥಿ ಶಾಲೆಗಳೂ, ಅಭ್ಯಾಗತ ಮಂದಿರಗಳೂ, ಅನ್ನಛತ್ರಗಳೂ, ಪಾನೀಯ ಪಾತ್ರಗಳೂ, ತಂಗುದಾಣಗಳೂ, ವ್ಯಜನ ವೀಜನಗಳೂ ಕಂಗೊಳಿಸತೊಡಗಿದವು. ಇದರಿಂದಾಗಿ ಪ್ರವಾಸಿಗರಿಗೂ ಗೃಹಸ್ಥರಿಗೂ ಬಿಸಿಲಿನ ಬೇಗೆ, ಮಾರ್ಗದ ಆಯಾಸ, ಬೇಸಿಗೆಯ ತಾಪ ಮುಂತಾದವುಗಳ ಅರಿವೇ ಉಳಿಯುತ್ತಿರಲಿಲ್ಲ.

ಈ ಕಾರ್ಯಗಳನ್ನು ಮುಖ್ಯವಾಗಿ ಪ್ರಾತಃಸ್ನಾನ ಜಲದಾನ ಮುಂತಾದ ಸುಲಭವಾದ ವೈಶಾಖಧರ್ಮಗಳನ್ನು ಎಲ್ಲ ಜನರೂ ನಗುನಗುತ್ತಾ ಉಲ್ಲಾಸದಿಂದ ತಪ್ಪದೇ ಮಾಡತೊಡಗಿದರು. ಇದರಿಂದ ಎಲ್ಲರ ಮೇಲೆಯೂ ಶ್ರೀಹರಿಯ ಪ್ರೀತಿ ಉಂಟಾಯಿತು. ವೈಶಾಖಧರ್ಮವನ್ನು ಯಾರೂ ಉಲ್ಲಂಘಿಸದೇ ಯಥಾಶಕ್ತಿ ಆಚರಿಸಿ ಶ್ರೀಹರಿಯ ಪ್ರಸಾದವನ್ನು ಪಡೆದು ತಮ್ಮ ಪಾಪಗಳೆಲ್ಲವನ್ನು ಕಳೆದುಕೊಂಡು ಪರಮ ಪದವನ್ನು ಪಡೆಯತೊಡಗಿದರು. ಇದರಿಂದ ಯಮಲೋಕಕ್ಕೆ ಯಾರೂ ಹೋಗುತ್ತಲೇ ಇರಲಿಲ್ಲ. ಯಮದೇವರ ನರಕಗಳೆಲ್ಲವೂ ಬರಿದಾಗಿ ಹೋದವು. ಯಮಪಟ್ಟಣವೆಲ್ಲವೂ ಶೂನ್ಯವಾಯಿತು. ಇದರಂತೆ, ಸ್ವರ್ಗಲೋಕದ ಪರಿಸ್ಥಿತಿಯೂ ಆಯಿತು. ಭೂಲೋಕದ ಮಾನವರೆಲ್ಲರೂ ವಿಷ್ಣು ಪ್ರೀತಿಕರವಾದ ವೈಶಾಖಮಾಸದ ಕರ್ತವ್ಯ ಕರ್ಮಗಳನ್ನೂ ಅನುಷ್ಠೇಯ ಧರ್ಮಗಳನ್ನೂ ಸುಲಭವಾಗಿ ಆಚರಿಸಿ ನೇರವಾಗಿ ಮುಕ್ತಿಮಂದಿರವನ್ನೇ ಸೇರತೊಡಗಿದರು. ಅದರಿಂದ ಸ್ವರ್ಗಲೋಕವೂ ಬರಿದೋ ಬರಿದು. ಯಮಲೋಕವಂತೂ ತೆರವೋ ತೆರವು. ಎಂದಿನಿಂದಲೂ ಪಾಪಿ ಪುಣ್ಯ ಜನರಿಂದ ಕಿಕ್ಕಿರಿದು ತುಂಬಿದಂತಿರುವ ಈ ಎರಡೂ ಲೋಕಗಳೂ ಈಗ ಒಮ್ಮೆಲೇ ಶೂನ್ಯಪ್ರಾಯವಾಗಿ ಇದ್ದುದನ್ನು ಕಂಡು ತಲ್ಲಣಿಸಿ ಹೋದನು ಯಮಧರ್ಮ. ಏನು ಮಾಡಬೇಕೆಂದು ತಿಳಿಯಲಿಲ್ಲ ಆ ಪರೇತ ರಾಜನಿಗೆ. ಉಪಾಯಗಾಣದೇ ಧಾವಿಸಿದ ಸತ್ಯಲೋಕಕ್ಕೆ. ಆ ಚತುರ್ಮುಖನಿಗೆ ಅಡ್ಡಬಿದ್ದ ಈ ದೀನ ಮುಖದ ಯಮ. ದೀನದನಿಯಲ್ಲಿ ಕೇಳಿಕೊಂಡ ಕಮಲಾಸನನನ್ನು.

**ಯಮರಾಜ:-** ಹಂಸವಾಹನ, ಕಾರ್ಯದಲ್ಲಿ ನಿಯುಕ್ತನಾದ ಭೃತ್ಯನು ಒಡೆಯನ ಆಜ್ಞೆಯನ್ನು ಪಾಲನಮಾಡದೆ, ಅವನ ಧನವನ್ನು ಅಪಹರಿಸಿ ತಾನೇ ಭೋಗಮಾಡಿದರೆ ಕಟ್ಟಿಗೆ ಕೊರೆಯುವ ಹುಳವಾಗಿ ಜನಿಸುವನು. ದೇವರ ಹಾಗೂ ಒಡೆಯನ ಸ್ವತ್ತನ್ನು ಎತ್ತಿ ಹಾಕಿ, ಅವರ ಭೋಗ ಸಾಮಗ್ರಿಗಳನ್ನೆಲ್ಲ ತಾನೇ ಬಳಸಿ ಭೋಗಿಸಿ, ಸುಖಾನುಭವಪಟ್ಟರೆ, ಮೂರುನೂರು ವರ್ಷಗಳವರೆಗೆ ಕ್ರಿಮಿಕೀಟವಾಗಿ ನರಕದಲ್ಲಿ ದುಃಖಪಡುವನು. ಕೆಲಸ ಮಾಡಲು ಸಮರ್ಥನಿದ್ದರೂ ಮೈಗಳ್ಳತನದಿಂದ ಕೆಲಸ ಮಾಡದೇ ಒಡೆಯರಿಗೆ ದ್ರೋಹ ಬಗೆದು ಮನೆಯಲ್ಲಿಯೇ ಸುಖ ವಿಲಾಸದಲ್ಲಿ ಕಾಲಕಳೆಯುವ ಭೃತ್ಯನಿಗೆ ಬೆಕ್ಕಿನ ಜನ್ಮ ಬರುವುದು ಎಂದು ಶಾಸ್ತ್ರದಲ್ಲಿ ಹೇಳಿದ್ದಾರೆ. ಈಗ ನನಗೂ ಕೂಡ ಅಂಥದೇ ಪಾಪದ ಪ್ರಸಂಗ ಬಂದು ಒದಗಿದೆ. ಪಾಪಮಾಡಿದವರನ್ನು ದಂಡಿಸಿ, ನರಕಗಳಲ್ಲಿ ಶಿಕ್ಷಿಸಿ, ಶಾಸನ ಮಾಡುವ ಕಾರ್ಯವನ್ನು ತಾವು ನನಗೆ ಒಪ್ಪಿಸಿದ್ದೀರಿ. ಆದರೆ ಈಗ ನನಗೆ ಏನೂ ಕೆಲಸವಿಲ್ಲದ್ದರಿಂದ ತಮ್ಮ ಆಜ್ಞೆಯನ್ನು ಪಾಲಿಸಲಿಕ್ಕಾಗದೇ ಮೈಗಳ್ಳನಂತೆ ಮನೆಯಲ್ಲಿ ಖಾಲಿ ಕೂಡುವಂತಾಗಿದೆ.

ಭೂಲೋಕದಲ್ಲಿ ಈಗ ಕೀರ್ತಿಮಾನ್ ಮಹಾರಾಜನ ಶಾಸನದ ವೈಖರಿ ವಿಚಿತ್ರ. ಅವನು ಆನೆಯ ಮೇಲೆ ನಗಾರಿ ಇಡಿಸಿ ವೈಶಾಖ ಧರ್ಮವನ್ನು ಎಲ್ಲರೂ ಪಾಲಿಸಲೇಬೇಕೆಂದು ಡಂಗುರ ಹೊಡೆಸಿದ್ದಾನೆ. ಆದರಿಂದ ಎಲ್ಲ ಜನರೂ ಕಡ್ಡಾಯವಾಗಿ ವೈಶಾಖ ಮಾಸದಲ್ಲಿ ವಿಹಿತವಾದ ಸುಲಭ ಸ್ನಾನ ಪಾನದಾನಾದಿ ಸರಳ ಧರ್ಮಕಾರ್ಯಗಳನ್ನು ಮಾಡಿ ವಿಷ್ಣುವನ್ನು ಪೂಜಿಸಿ ಸಂತೋಷದಿಂದ ವೈಕುಂಠಲೋಕಕ್ಕೆ ಹೊರಟು ಹೋಗುವರು. ತಾವೊಬ್ಬರೇ ಹೋಗುವದಲ್ಲದೇ ನನ್ನ ಲೋಕದಲ್ಲಿ ಹೊರಳಾಡುತ್ತಿದ್ದ ತಮ್ಮ ತಮ್ಮ ತಾಯಿ ತಂದೆ ಅತ್ತೆ ಮಾವಂದಿರನ್ನೂ ತಮ್ಮ ವೈಶಾಖ ಮಾಸ ಧರ್ಮದ ಅನುಷ್ಠಾನದ ಪುಣ್ಯದ ಫಲದಿಂದ ಮುಕ್ತಿ ಮಂದಿರಕ್ಕೆ ಕರೆದೊಯ್ಯುತ್ತಿದ್ದಾರೆ.

ಅಶ್ವಮೇಧಾದಿ ಯಜ್ಞ, ಕೃಚ್ಛ್ರ ಚಾಂದ್ರಾಯಣಾದಿ ವ್ರತ, ಗಂಗಾದಿ ಸ್ನಾನ, ಉಗ್ರ ತಪಶ್ಚರ್ಯೆ, ಸರ್ವ ವ್ರತಾನುಷ್ಠಾನಗಳಿಂದಲೂ ಬಾರದಷ್ಟು ಪುಣ್ಯವು ಈ ವೈಶಾಖ ಧರ್ಮದ ಪರಿಪಾಲನೆಯಿಂದ ದೊರಕುವುದು. ಈ ವೈಶಾಖ ಮಾಸದಲ್ಲಿ ಪ್ರಾತಃಕಾಲದಲ್ಲಿ ಸ್ನಾನಮಾಡಿ, ಭಕ್ತಿಯಿಂದ ಶ್ರೀವಿಷ್ಣುವಿನ ಪೂಜೆಗೈದು, ಆದರದಿಂದ ಮಾಸ ಮಾಹಾತ್ಮ್ಯವನ್ನು ಶ್ರವಣಮಾಡಿದವರೂ, ವಿಷ್ಣುವಿಗೆ ಪರಮ ಪ್ರೀತ್ಯಾಸ್ಪದವಾದ ಕಾಲೋಚಿತವಾದ ಜಲದಾನ, ಪಾನಕದಾನ, ಪಾದರಕ್ಷಾದಾನ, (ಬೀಸಣಿಕೆ) ವ್ಯಜನ ದಾನ, ಕೊಡೆ ದಾನ, ಅರವಟ್ಟಿಗೆ, ಅನ್ನಛತ್ರ, ಜಲಾಶಯ ನಿರ್ಮಾಣ ಮುಂತಾದ ಪರೋಪಕಾರಕವಾದ ಧರ್ಮಗಳನ್ನು ಅವಶ್ಯ ಕರ್ತವ್ಯ ಕರ್ಮಗಳೆಂದು ತಿಳಿದು ಆಚರಿಸುವವರೂ ಖಂಡಿತವಾಗಿಯೂ ವಿಷ್ಣುಲೋಕವನ್ನು ಹೊಂದುವರು. ಕೀರ್ತಿಮಾನ್ ರಾಜನ ರಾಜ್ಯದಲ್ಲಿಯ ಪ್ರಜೆಗಳೆಲ್ಲರೂ ರಾಜಾಜ್ಞೆಯಿಂದ ಈ ವೈಶಾಖಮಾಸದ ಸೂಕ್ಷ್ಮ ಧರ್ಮಗಳನ್ನೆಲ್ಲ ಅವಿಕಲವಾಗಿ ಆಚರಿಸಿ ತಂಡೋಪತಂಡವಾಗಿ ವಿಷ್ಣುಲೋಕವನ್ನು ಸಾರುತ್ತಿದ್ದಾರೆ. ಇದರಿಂದಾಗಿ ನನ್ನ ಲೋಕವೆಲ್ಲವೂ ನಿರ್ಮಾನುಷವಾಗಿದೆ. ನಿರ್ಜೀವವಾಗಿದೆ. ಇಂದು ನನ್ನ ರಾಜಧಾನಿಯಾದ ಸಂಯಮನೀಪುರವು ಸರ್ವಥಾ ಶೂನ್ಯವಾಗಿದೆ. ಇದಕ್ಕೆ ಏನು ಗತಿ?

## ಬ್ರಹ್ಮದೇವರಿಂದ ಯಮದೇವನ ಸಾಂತ್ವನ

**ಬ್ರಹ್ಮ:-** 'ಯಮಧರ್ಮ, ಇದರಲ್ಲಿ ಆಶ್ಚರ್ಯ ಏನಿದೆ? ನಿನಗೇಕೆ ಇಷ್ಟು ವಿಷಾದವಾಗಿದೆ? ಭಗವಾನ್ ಶ್ರೀಹರಿಗೆ ಮಾಡಿದ ಒಂದೊಂದು ಪ್ರಣಾಮವೂ ನೂರು ಅಶ್ವಮೇಧ ಯಾಗಗಳಿಗೆ ಸಮಾನವಾಗಿದೆ.

**''ಏಕೋಪಿ ಗೋವಿಂದ ಕೃತಃ ಪ್ರಣಾಮಃ। ಶತಾಶ್ವಮೇಧಾವಭೃಥೇನ ತುಲ್ಯ: ॥**

**ಯಜ್ಞಸ್ಯ ಕರ್ತಾ ಪುನರೇತಿ ಜನ್ಮ। ಹರೇಃ ಪ್ರಣಾಮೋ ನ ಪುನರ್ಭ ವಾಯ ॥**

ಒಂದು ಸಲ ಭಕ್ತಿಯಿಂದ ಗೋವಿಂದನ ವಂದನೆಯನ್ನು ಮಾಡಿದರೆ ಬರುವ ಪುಣ್ಯವು ನೂರು ಅಶ್ವಮೇಧ ಯಜ್ಞಗಳ ಕೊನೆಯ ಅವಭೃಥ ಸ್ನಾನಗಳಿಂದ ಬರುವ ಪುಣ್ಯಕ್ಕೆ ಸಮಾನವಾಗಿದೆ. ಯಜ್ಞ ಮಾಡಿದವನು ಮತ್ತೆ ಈ ಪ್ರಪಂಚದಲ್ಲಿ ಹುಟ್ಟಿ ಬರಬೇಕಾಗುವದು. ಆದರೆ ಭಕ್ತಿಯಿಂದ ಭಗವಂತನನ್ನು ನಮಸ್ಕರಿಸುವವನು ಎಂದೂ ಪುನಃ ಹುಟ್ಟಿ ಬರುವದಿಲ್ಲ.

ಯಾರ ನಾಲಿಗೆಯ ತುದಿಯಲ್ಲಿ 'ಹರಿ' ಎಂಬ ಎರಡು ಅಕ್ಷರಗಳು ಇರುವುವೋ ಅವನಿಗೆ ತೀರ್ಥಸ್ನಾನ ಏಕೆ? ಮರಣ ಕಾಲದಲ್ಲಿ ಹರಿಯ ಸ್ಮರಣ ಮಾಡಿದವನು ತನ್ನ ಅಭಕ್ಷ್ಯ ಭಕ್ಷಣಾದಿ ಪಾಪಗಳೆಲ್ಲವನ್ನೂ ಕಳೆದುಕೊಂಡು ವಿಷ್ಣು ಸಾಯುಜ್ಯವನ್ನು ಹೊಂದುತ್ತಾನೆ.

ಯಮಧರ್ಮ, ಇದರಂತೆ ವೈಶಾಖ ಮಾಸವು ಶ್ರೀಹರಿಗೆ ಪರಮಪ್ರಿಯತಮವಾದ ಮಾಸ. ಈ ಮಾಸದ ಮಹಿಮೆಯನ್ನು ಶ್ರವಣಮಾಡಿದವರಿಗೆ ಎಲ್ಲ ಪಾಪಗಳಿಂದಲೂ ಮುಕ್ತಿ. ಈ ವೈಶಾಖಮಾಸದಲ್ಲಿ ವಿಹಿತವಾದ ಧರ್ಮಗಳನ್ನು ಪೂರ್ತಿ ಅನುಷ್ಠಾನ ಮಾಡುವವರು ಮುಕ್ತಿಯನ್ನು ಹೊಂದಿದರೆ, ಏನು ಆಶ್ಚರ್ಯ? ಪ್ರಕೃತ ಈ ಕೀರ್ತಿಮಾನ್ ರಾಜನು ವೈಶಾಖಧರ್ಮಗಳನ್ನು ಸ್ವಯಂ ತಾನು ಅನುಷ್ಠಾನ ಮಾಡಿ ಪ್ರಜೆಗಳಿಂದಲೂ ಅನುಷ್ಠಾನ ಮಾಡಿಸುತ್ತಾನೆ. ಈ ವಿಷಯದಲ್ಲಿ ಭಗವಾನ್ ಶ್ರೀಹರಿಯೇ ಅವನ ಸಹಾಯಕ್ಕಾಗಿ ನಿಂತುಕೊಂಡಿದ್ದಾನೆ. ಆದುದರಿಂದ ವೈಶಾಖ ಧರ್ಮವನ್ನು ಯಾವುದಕ್ಕೂ ಲೋಪವಿರದೆ ಆಚರಿಸುತ್ತಿರುವ ಕೀರ್ತಿಮಾನ್ ರಾಜನ ಪ್ರಜೆಗಳನ್ನು ಸ್ವಯಂ ಶ್ರೀಹರಿಯೇ ವಿಷ್ಣುಲೋಕಕ್ಕೆ ಕರೆದೊಯ್ಯುತ್ತಿದ್ದಾನೆ.

ಅದರಿಂದಾಗಿಯೇ ನಿನ್ನ ಲೋಕವೆಲ್ಲವೂ ರಿಕ್ತವಾಗಿದೆ. ಅದರಿಂದ ನಿನಗೂ ಕೆಲಸವಿಲ್ಲದಂತಾಗಿದೆ. ಇದರಲ್ಲಿ ನಿನ್ನ ತಪ್ಪು ಏನೂ ಇರುವದಿಲ್ಲ. ದುರ್ದೈವದಿಂದ ಈ ವೈಶಾಖ ಧರ್ಮವನ್ನು ಯಾರಾದರೂ ಎಂದಾದರೂ ಅನುಷ್ಠಾನ ಮಾಡದೇ ನರಕಕ್ಕೆ ಬಂದರೆ ಮಾತ್ರ ನೀನು ಅವರಿಗೆ ಶಾಸನ ಮಾಡು. ವೈಶಾಖ ಧರ್ಮವನ್ನು ಸರಿಯಾಗಿ ಅನುಷ್ಠಾನ ಮಾಡಿ ಶ್ರೀಹರಿಯ ಪ್ರಸಾದವನ್ನು ಪಡೆದು ಜನರು ಮುಕ್ತರಾದರೆ, ನೀನು ಅದರಿಂದ ದುಃಖ ಪಡಬೇಡ. ಅಂಥ ಆ ವಿಷ್ಣು ಭಕ್ತರನ್ನು ನೋಡಿ ನೀನೂ ಆನಂದ ಪಡು. ಅವರನ್ನು ಅಭಿನಂದಿಸು.''

ಬ್ರಹ್ಮದೇವರು ಹೀಗೆ ಹೇಳಿ ಬಳಿಕ ಯಮಧರ್ಮನನ್ನು ಕರೆದುಕೊಂಡು ವಿಷ್ಣುವಿನ ಬಳಿಗೆ ಹೋದರು. ಅಲ್ಲಿ ಅವರಿಬ್ಬರೂ ಭಗವಂತನಿಗೆ ಸಾಷ್ಟಾಂಗ ವಂದನೆಗೈದರು. ಆಗ ಶ್ರೀಹರಿಯು ನಸುನಗುತ್ತಾ 'ನೀವಿಬ್ಬರೂ ಇಲ್ಲಿಗೆ ಬಂದ ಕಾರಣವೇನು?' ಎಂದು ಕೇಳಿದನು. ಆಗ ಬ್ರಹ್ಮದೇವರು ಕೈಮುಗಿದು ನಮ್ರತೆಯಿಂದ ನಮಿಸಿ ನುಡಿದರು.

''ಪ್ರಭು, ಭೂಲೋಕದ ಸಾರ್ವಭೌಮನಾದ ಕೀರ್ತಿಮಾನನು ನಿನ್ನ ಏಕಾಂತಭಕ್ತ. ಪರಮಧರ್ಮಿಷ್ಠ. ಈ ಚಕ್ರವರ್ತಿಯು ಭೂಲೋಕದಲ್ಲಿ ಧರ್ಮಚಕ್ರವನ್ನು ಸರಿಯಾಗಿ ಪ್ರವರ್ತಿಸುತ್ತಲಿದ್ದಾನೆ. ರಾಜ್ಯಶಾಸನದೊಂದಿಗೆ ಧರ್ಮಶಾಸನವನ್ನು ಕೂಡ ಈ ರಾಜರ್ಷಿಯು ಶಾಸ್ತ್ರೋಕ್ತವಾಗಿ ಮಾಡುತ್ತಲಿದ್ದಾನೆ. ಇವನ ರಾಜ್ಯದಲ್ಲಿ ಈಗ ಎಲ್ಲ ಪ್ರಜೆಗಳೂ ವೈಶಾಖ ಧರ್ಮವನ್ನು ವಿಧ್ಯುಕ್ತವಾಗಿ ಆಚರಿಸುತ್ತಲಿದ್ದಾರೆ. ಇದರಿಂದ ಆ ಎಲ್ಲ ವಿಷ್ಣುಭಕ್ತರು ನಿನ್ನ ದಿವ್ಯಧಾಮವಾದ ವೈಕುಂಠಲೋಕವನ್ನು ಸೇರುತ್ತಲಿದ್ದಾರೆ. ಇತ್ತ ಯಮಲೋಕವು ಈಗ ಶೂನ್ಯಪ್ರಾಯ. ಯಮಧರ್ಮನು ನಿಷ್ಕ್ರಿಯ. ತನ್ನ ಈ ಆತಂಕವನ್ನು ಅರಿಕೆ ಮಾಡಲು ಆ ಯಮದೇವ ಸಾಕ್ಷಾತ್ ಆಗಿ ತಮ್ಮ ಪಾದದ ಬಳಿಗೆ ಬಂದಿರುತ್ತಾನೆ.''

ಆಗ ಶ್ರೀಹರಿಯು ನಸುನಕ್ಕು ನುಡಿದ -

**''ಲಕ್ಷ್ಮೀಂವಾಪಿ ಪರಿತ್ಯಕ್ಷ್ಯೇ ಪ್ರಾಣಾನ್ ದೇಹಮಥಾಪಿ ವಾ ।**
**ಶ್ರೀವತ್ಸಂ ಕೌಸ್ತುಭಂ ಮಾಲಾಂ ವೈಜಯಂತೀಮಥಾಪಿ ವಾ ॥**

**ಶ್ವೇತದ್ವೀಪಂ ಚ ವೈಕುಂಠಂ ಕ್ಷೀರಸಾಗರಮೇವ ಚ ।**
**ಶೇಷಂ ಚ ಗರುಡಂ ಚೈವ ನ ಭಕ್ತಂ ತ್ಯಕ್ತುಮುತ್ಸಹೇ ॥**

**ವಿಸೃಜ್ಯ ಸಕಲಾನ್ ಭೋಗಾನ್ ಮದರ್ಥೇ ತ್ಯಕ್ತಜೀವಿತಾನ್ ।**
**ಮದಾತ್ಮಕಾನ್ ಮಹಾಭಾಗಾನ್ ಕಥಂ ತಾಂಸ್ತ್ಯಕ್ತುಮುತ್ಸಹೇ ॥**

ನಾನು ನನ್ನ ಭಕ್ತರನ್ನು ಎಂದೂ ಬಿಡಲಾರೆ. ಲಕ್ಷ್ಮಿಯನ್ನೂ ನಾನು ಒಂದು ವೇಳೆ ತೊರೆಯಬಹುದು. ಪಂಚಪ್ರಾಣಗಳನ್ನೂ ಬಿಡಬಹುದು. ದೇಹವನ್ನೂ ತ್ಯಜಿಸಬಹುದು. ಮತ್ತು ಶ್ರೀವತ್ಸ ಚಿನ್ಹವನ್ನೂ ಕೌಸ್ತುಭರತ್ನವನ್ನೂ ವೈಜಯಂತೀ ಮಾಲೆಯನ್ನೂ ಕೂಡ ಪ್ರಸಂಗ ಬಂದರೆ ಬಿಟ್ಟು ಬಿಡಲು ನಾನು ಸಿದ್ಧ. ಆದರೆ ಭಕ್ತರನ್ನು ಮಾತ್ರ ಎಂದೂ ಕೈಬಿಡಲಾರೆ. ಶ್ವೇತದ್ವೀಪ, ವೈಕುಂಠ, ಹಾಲುಗಡಲು, ಹಾಸಿಗೆಯಾದ ಹಾವು, ಶ್ರೇಷ್ಠ ವಾಹನವಾದ ಗರುಡ ಮತ್ತು ನನ್ನ ಭಕ್ತ ಇಷ್ಟು ಪದಾರ್ಥಗಳನ್ನು ನಾನು ಎಂದಿಗೂ ಬಿಡಲಾರೆ. ನನ್ನ ಭಕ್ತರು ನನಗಾಗಿ ಪ್ರಾಣಾರ್ಪಣೆಗೂ ಸಿದ್ಧರಾಗಿರುತ್ತಾರೆ. ಐಹಿಕವಾದ ಸಕಲ ಸುಖಭೋಗ ಸಾಮಗ್ರಿಗಳನ್ನೆಲ್ಲ ನನಗಾಗಿ ತೊರೆದಿರುತ್ತಾರೆ. ನನಗೆ ತಮ್ಮ ಸರ್ವಸ್ವವನ್ನೂ ಅರ್ಪಣ ಮಾಡಿದ ಮಹಾನುಭಾವರಾದ ನನ್ನ ಭಕ್ತರನ್ನು ನಾನು ಹೇಗೆ ಪರಿತ್ಯಜಿಸಲಿ?

ನನ್ನ ಪರಮಭಕ್ತನಾದ ಈ ಕೀರ್ತಿಮಾನ್ ಮಹಾರಾಜನಿಗೆ ನಾನು ಹತ್ತು ಸಾವಿರ ವರ್ಷದ ಆಯುಷ್ಯ ದಾನವನ್ನು ಮಾಡಿದ್ದೇನೆ. ಅದರಲ್ಲಿ ಅವನು ಈಗ ಎಂಟು ಸಾವಿರ ವರ್ಷ ಅಖಂಡ ಭೂಮಂಡಲದ ಚಕ್ರವರ್ತಿಯಾಗಿ ಸಾಮ್ರಾಜ್ಯ ಶಾಸನವನ್ನೂ ಧರ್ಮಚಕ್ರವನ್ನೂ ಶಾಸ್ತ್ರೋಕ್ತ ವಿಧಾನದಿಂದ ನಿರ್ವಹಿಸಿದ್ದಾನೆ. ಇನ್ನು ಎರಡು ಸಾವಿರ

ವರ್ಷ ಈ ಧರ್ಮರಾಜ್ಯವನ್ನು ಆಳಿದ ಬಳಿಕ ಅವನು ಮುಕ್ತಿ ಪಡೆದು ಸಾಯುಜ್ಯ ಮೋಕ್ಷವನ್ನು ಹೊಂದುತ್ತಾನೆ. ಕೀರ್ತಿಮಾನ್ ದೊರೆಯ ನಂತರ ದುಷ್ಟ ದೊರೆಯಾದ ವೇನರಾಜನ ದುರಾಡಳಿತವು ನಡೆಯುವದು ಭೂಲೋಕದಲ್ಲಿ. ಆಗ ವೈಶಾಖಧರ್ಮವು ಛಿನ್ನ ಭಿನ್ನವಾಗಿ ಲುಪ್ತವಾಗಿ ಹೋಗುವುದು. ಆದರಿಂದ ವೇನನ ಆಡಳಿತದಲ್ಲಿ ಮೊದಲಿನಂತೆ ಯಮಲೋಕವು ಪಾಪಿಗಳಿಂದ ತುಂಬಿ ತುಳುಕುವುದು. ಮುಂದೆ ಅತ್ಯಧಿಕವಾದ ಪಾಪದಿಂದ ಆ ವೇನನು ತಾನಾಗಿಯೇ ಭಸ್ಮೀಭೂತನಾಗುವನು ಅರ್ಥಾತ್ ಮರಣ ಹೊಂದುವನು. ಅನಂತರ ಅವನ ಮಗನಾದ ಪೃಥುರಾಜನಲ್ಲಿ ನಾನೇ ಆವಿಷ್ಟನಾಗಿ ಲುಪ್ತವಾದ ವೈಶಾಖಧರ್ಮವನ್ನು ಎತ್ತಿ ಹಿಡಿಯುತ್ತೇನೆ.

ಸಹಸ್ರಾರು ಮಾನವರಲ್ಲಿ ಕೆಲವರು ಮಾತ್ರ ವೈಶಾಖ ಧರ್ಮವನ್ನು ಪಾಲನ ಮಾಡಿ ನನ್ನಲ್ಲಿ ಭಕ್ತಿ ಮಾಡಿ ವೈಕುಂಠ ಲೋಕಕ್ಕೆ ಬರುತ್ತಾರೆ. ಉಳಿದವರೆಲ್ಲರೂ ವೈಶಾಖ ಧರ್ಮದಲ್ಲಿ ಭಕ್ತಿ ಇರದೇ, ಸ್ನಾನದಾನಗಳನ್ನು ಮಾಡದೇ, ನರಕದ ದಾರಿ ಹಿಡಿಯುತ್ತಾರೆ. ಯಮಧರ್ಮನ ವ್ಯಾಪಾರಗಳಿಗೆ ಈಗ ಕೆಲವು ದಿನಗಳ ವರೆಗೆ ವಿಚ್ಛಿತ್ತಿಯು ಬಂದಂತೆ ತೋರಿದರೂ ಇದು ಶಾಶ್ವತವಲ್ಲ. ಅಪರೂಪಕ್ಕೆ ಕೀರ್ತಿಮಾನ್, ಪೃಥುರಾಜರಂಥ ರಾಜರು ಜನಿಸಿ ವೈಶಾಖ ಧರ್ಮ ಪಾಲನವನ್ನು ಕಡ್ಡಾಯವಾದ ರಾಜಶಾಸನವನ್ನಾಗಿಯೇ ಮಾರ್ಪಡಿಸಿ ಘೋಷಣೆ ಹೊರಡಿಸಿ ಎಲ್ಲರಿಂದಲೂ ವೈಶಾಖ ಧರ್ಮಗಳನ್ನು ಮಾಡಿಸತೊಡಗಿದಾಗ ಕೆಲಕಾಲ ಪರ್ಯಂತ ಈ ಯಮಧರ್ಮನು ನಿಷ್ಕ್ರಿಯನಾಗಿ ಕೂಡುವ ಪ್ರಸಂಗವು ಬರುವುದು. ಇಂಥ ಸಂದರ್ಭದಲ್ಲಿ ಬಹುಜನರು ಭಗವದ್ಭಕ್ತರಾಗಿ ಧರ್ಮಾತ್ಮರಾಗಿ ಮೋಕ್ಷಭಾಗಿಗಳಾದರು ಎಂದು ಅರಿತು ಈ ಯಮಧರ್ಮನು ಸಂತೋಷಪಡಲಿ. ವೈಶಾಖಮಾಸದ ವ್ರತವನ್ನು ಮಾಡುವವರು ಈ ಯಮಧರ್ಮನಿಗೂ ಒಂದು ಭಾಗವನ್ನು ಪ್ರದಾನಮಾಡಲಿ. ಅವನು ವೈಶಾಖಮಾಸ ಧರ್ಮವನ್ನು ಮಾಡುವವರಿಗೆ ಎಂದೂ ವಿಘ್ನವನ್ನು ಒಡ್ಡುವದು ಬೇಡ.''

ಹೀಗೆ ಯಮಧರ್ಮನಿಗೆ ಬ್ರಹ್ಮದೇವನ ಮೂಲಕ ಆಶ್ವಾಸನ ನೀಡಿ ಅಂತರ್ಧಾನ ಹೊಂದಿದ ಆ ಜಗದೀಶ್ವರ. ಅನಂತರ ಬ್ರಹ್ಮದೇವರೂ ಯಮದೇವರೂ ತಮ್ಮ ತಮ್ಮ ಲೋಕಗಳಿಗೆ ತೆರಳಿದರು.

ಆದುದರಿಂದ ಭಗವಂತನ ಆದೇಶದಂತೆ ವೈಶಾಖ ಮಾಸದ ಹುಣ್ಣಿಮೆ ದಿನದಂದು ಮೊದಲು ಧರ್ಮರಾಜನಿಗೆ ಒಂದು ನೀರು ತುಂಬಿದ ಕೊಡ ಹಾಗೂ ಮೊಸರು ಅನ್ನವನ್ನು ಸಮರ್ಪಿಸಬೇಕು. ಅನಂತರ ಪಿತೃಗಳ, ಗುರುಗಳ, ಹಾಗೂ ಶ್ರೀಹರಿಯ ಉದ್ದೇಶದಿಂದ ತಣ್ಣಗಿನ ನೀರು, ಮೊಸರು, ಅನ್ನ, ಪಾನೀಯ, ದಕ್ಷಿಣೆ, ಹಣ್ಣು ಮುಂತಾದವುಗಳನ್ನು ಕಂಚಿನ ಪಾತ್ರೆಯಲ್ಲಿ ಇಟ್ಟು ಸದಾಚಾರ ಸಂಪನ್ನನಿಗೆ ದಾನ ಕೊಡಬೇಕು. ವಿಷ್ಣುವಿನ ಸುಂದರವಾದ ಪ್ರತಿಮೆಯನ್ನು ಮಾಡಿಸಿ ವೈಶಾಖಮಾಸದ ಮಹಿಮೆಯನ್ನು ಹೇಳಿದ ದರಿದ್ರ ಬ್ರಾಹ್ಮಣನಿಗೆ ದಾನ ಕೊಡಬೇಕು.

ಕೀರ್ತಿಮಾನ್ ಮಹಾರಾಜನು ಭೂಲೋಕದಲ್ಲಿ ಇರುವವರೆಗೆ ಈ ಎಲ್ಲ ಧರ್ಮಗಳನ್ನು ತಪ್ಪದೇ ಆಚರಿಸಿದ. ಆದ್ದರಿಂದ ಭೂಲೋಕದಲ್ಲಿ ಎಲ್ಲ ಭೋಗ ಭಾಗ್ಯಗಳನ್ನು ಅನುಭವಿಸಿದ. ಮರಣಕಾಲದಲ್ಲಿ ಹರಿಯ ಸ್ಮರಣೆಗೈದ. ಕೊನೆಗೆ ವಿಷ್ಣುಮಂದಿರದಲ್ಲಿ ಆನಂದದಿಂದ ಪ್ರವೇಶಗೈದ.

**ಜನಕರಾಜ:-** ಪೂಜ್ಯರೇ, ದುಷ್ಟ ರಾಜನಾದ ವೇನನು ಸ್ವಾಯಂಭುವ ಮನ್ವಂತರದಲ್ಲಿ ಜನಿಸಿದ್ದನು ಎಂದು ನಾನು ತಮ್ಮ ಬಾಯಿಂದ ಹಿಂದೆ ಕೇಳಿದ್ದೆನು. ಆದರೆ ಈಗ ವೈವಸ್ವತ ಮನ್ವಂತರದಲ್ಲಿ ಇಕ್ಷ್ವಾಕು ವಂಶದಲ್ಲಿ ಕೀರ್ತಿಮಾನನ ಅನಂತರ ವೇನನು ಜನಿಸುವನು ಎಂದು ತಾವು ಅಪ್ಪಣೆ ಕೊಡಿಸಿದಿರಿ. ಇದು ಪರಸ್ಪರ ವಿಸಂಗತವಾಗುವುದಿಲ್ಲವೆ? ನನ್ನ ಈ ಸಂಶಯವನ್ನು ತಾವು ಪರಿಹರಿಸಬೇಕು.

**ಶ್ರುತದೇವ:-** ರಾಜನೇ! ಪುರಾಣಗಳಲ್ಲಿ ಹಿಂದೆ ಅಲ್ಲಲ್ಲಿ ಪರಸ್ಪರ ವಿಸಂವಾದವು ಕಂಡುಬರುವದು. ಆದರೆ ಯುಗಭೇದ ಕಲ್ಪಭೇದಗಳಿಂದ ಈ ತೋರಿಕೆಯ ವಿರೋಧವನ್ನು ಪರಿಹರಿಸಕೊಳ್ಳಬೇಕು. ಒಂದು ಕಲ್ಪದಲ್ಲಿ ಸ್ವಾಯಂಭುವ ಮನ್ವಂತರದಲ್ಲಿ ಹುಟ್ಟಿದ ವೇನರಾಜನು ಕಲ್ಪಾಂತರದಲ್ಲಿ ವೈವಸ್ವತ ಮನ್ವಂತರದಲ್ಲಿ ಜನಿಸಿ ಬರಬಹುದು. ಆದರಿಂದ ಪುರಾಣಗಳಲ್ಲಿ ಆಪಾತತಃವಿಸಂವಾದ ಅತವಾ ವಿರೋಧವು ಕಂಡುಬಂದರೆ ಅವುಗಳಲ್ಲಿ ಒಂದು ಅಪ್ರಮಾಣ ಎಂದು ತಿಳಿಯಬಾರದು. ಯುಗಭೇದ ಹಾಗೂ ಕಲ್ಪಭೇದಗಳಿಂದ ಎರಡೂ ಪ್ರಾಮಾಣಿಕ ಎಂದು ತಿಳಿಯಬೇಕು.

## ವೈಶಾಖ ಧರ್ಮಗಳ ಅನುಷ್ಠಾನದ ಪ್ರಭಾವ

**ಶ್ರುತದೇವ:-** ಮೇಷರಾಶಿಯಲ್ಲಿ ಸೂರ್ಯನು ಇದ್ದಾಗ ವೈಶಾಖ ಮಾಸದಲ್ಲಿ ನಸುಕಿನಲ್ಲಿ ಸ್ನಾನ, ಕಾಲೋಚಿತ ದಾನ, ವಿಧಿಪೂರ್ವಕ ವಿಷ್ಣುಪೂಜೆ, ಹಾಗೂ ವೈಶಾಖ ಮಾಹಾತ್ಮ್ಯ ಶ್ರವಣ ಇವು ನಾಲ್ಕು ಮುಖ್ಯವಾಗಿ ಆಚರಿಸಬೇಕಾದ ಧರ್ಮಗಳು. ಈ ಚತುರ್ವಿಧವಾದ ವೈಶಾಖ ಧರ್ಮದ ಅನುಷ್ಠಾನ ರೂಪವಾದ ವ್ರತವನ್ನು ಪಾಲಿಸುವದರಿಂದ ಭಕ್ತಜನರಿಗೆ ವಿಷ್ಣುಲೋಕಪ್ರಾಪ್ತಿ ನಿಶ್ಚಿತ. ಈ ವಿಷಯದಲ್ಲಿ ಒಂದು ಪ್ರಾಚೀನ ಇತಿಹಾಸ ಹೇಳುತ್ತೇನೆ ಕೇಳು-

**ಗೋದಾವರಿ** ತೀರದಲ್ಲಿ ಬ್ರಹ್ಮೇಶ್ವರ ಎಂಬ ಒಂದು ಪುಣ್ಯಕ್ಷೇತ್ರ. ಅಲ್ಲಿ ಬ್ರಹ್ಮರ್ಷಿ ದುರ್ವಾಸ ಮುನಿಗಳ ಇಬ್ಬರು ಶಿಷ್ಯರು ನೆಲೆಸಿದ್ದರು ಬ್ರಹ್ಮನಿಷ್ಠರಾದ ಅವರಿಬ್ಬರೂ ಪರಮಹಂಸರು. ಬ್ರಹ್ಮವಿದ್ಯೆಯಲ್ಲಿ ಪರಿಣತರು. ವೇದವೇದಾಂತ ಉಪನಿಷದಾದಿ ಗಳೆಲ್ಲವೂ ಅವರಿಗೆ ಕರಗತ. ವೈರಾಗ್ಯವೇ ಅವರ ಭಾಗ್ಯ. ಭಿಕ್ಷೆಯಿಂದ ಜೀವನ. ಸಂತತವೂ ಸ್ವಾಧ್ಯಾಯ. ಇಂಥ ಪುಣ್ಯಮಯ ಜೀವನವನ್ನು ಸಾಗಿಸುತ್ತ ಅವರೀರ್ವರೂ ಒಂದು ಗುಹೆಯಲ್ಲಿ ವಾಸವಾಗಿದ್ದರು- ಸತ್ಯನಿಷ್ಠ ತಪೋನಿಷ್ಠ ಎಂದು ಅವರಿಬ್ಬರ ಹೆಸರು. ಸತ್ಯನಿಷ್ಠನಿಗೆ ತನ್ನ ಹೆಸರಿಗೆ ತಕ್ಕಂತೆ ಯಾವಾಗಲೂ ವಿಷ್ಣು ಕಥಾ ನಿರೂಪಣೆಯಲ್ಲಿ ಆಸಕ್ತಿ. ಜನರು ಭಕ್ತಿಯಿಂದ ಕೇಳಲು ಬಂದರೆ ಭಗವತ್ಕಥಾ ಪ್ರವಚನ. ಯಾರೂ ಬಾರದಿದ್ದಾಗ ತಾನೊಬ್ಬನೇ ಏಕಾಂತದಲ್ಲಿ ಕುಳಿತು ವೇದಾಂತ ಚಿಂತನ ಭಗವಧ್ಯಾನಗಳನ್ನು ಕೈಕೊಳ್ಳುತ್ತಿದ್ದ. ಬೇರೆ ಯಾರಾದರೂ ಭಗವಂತನ ಕಥಾ ಮಾಹಾತ್ಮ್ಯವನ್ನು ಹೇಳುವವರು ಬಂದರೆ ಭಕ್ತಿಯಿಂದ ಬಂದು ಕುಳಿತುಕೊಂಡು ತಾನೂ ಕೇಳುತ್ತಿದ್ದ. ಕಥಾಶ್ರವಣವು ಮುಗಿದ ಬಳಿಕ ತನ್ನ ಉಳಿದ ಪೂಜೆ ಜಪ ತಪ ಮುಂತಾದ ನಿತ್ಯಾಹ್ನಿಕವನ್ನು ಮಾಡಿ ಪೂರೈಸುತ್ತಿದ್ದ. ಭಗವಂತನ ದಿವ್ಯ ಜ್ಞಾನಕ್ಕೆ ಶ್ರವಣ ಮನನ ನಿದಿಧ್ಯಾಸಗಳು ಅತ್ಯಾವಶ್ಯಕ ಎಂಬ ತತ್ವವನ್ನು ಚೆನ್ನಾಗಿ ಅರಿತಿದ್ದ ಆ ಸತ್ಯನಿಷ್ಠ.

ವಿಷ್ಣು ಕಥೆ, ಅದನ್ನು ಹೇಳಬಲ್ಲ ಸತ್ಪುರುಷರು ಇಲ್ಲದಿರುವ ಸ್ಥಳವು ಗಂಗಾತಟಾಕವಾಗಿದ್ದರೂ ಪರಿತ್ಯಾಜ್ಯವೇ. ತುಳಸೀ, ಹರಿಮಂದಿರ ಹಾಗೂ ಹರಿಕಥೆ, ಮೂರು ಇಲ್ಲದ ಸ್ಥಳದಲ್ಲಿ ಎಂದೂ ವಾಸಿಸಬಾರದು. ಎಲ್ಲಿಯೇ ಇದ್ದರೂ ದೂರವಾದರೂ ಮಾನವರು ವಿದ್ವಾಂಸರಿಂದ ಭಗವತ್ಕಥೆಯನ್ನು ದೇವರ ಪೂಜೆಯೆಂದು ಶ್ರವಣ ಮಾಡಬೇಕು. ಈ ಧರ್ಮ ರಹಸ್ಯವನ್ನು ಚೆನ್ನಾಗಿ ಅರಿತ ಸತ್ಯನಿಷ್ಠನು ಜ್ಞಾನಿಗಳು ಬಂದಾಗ ತನ್ನ ಪೂಜಾಹ್ನಿಕಗಳನ್ನು ಸಂಕೋಚ ಮಾಡಿಕೊಂಡು ಭಗವನ್ಮಾಹಾತ್ಮ್ಯವನ್ನು ಶ್ರವಣ ಮಾಡಿಸುತ್ತಿದ್ದ. ಶ್ರೋತೃಗಳು ಬಂದು ಶ್ರೀಹರಿಯ ಮಹಿಮೆಯನ್ನು ಹೇಳಬೇಕೆಂದು ಕೇಳಿದರೆ ಆನಂದದಿಂದ ತಾನೇ ಪ್ರವಚನ ಮಾಡುತ್ತಿದ್ದ. ವಕ್ತಾ ಶ್ರೋತಾ ಇಬ್ಬರೂ ಇಲ್ಲದಿದ್ದಾಗ ತನ್ನ ಪೂಜಾ ನಿತ್ಯಾಹ್ನಿಕಗಳನ್ನು ವಿಧಿಪೂರ್ವಕವಾಗಿ ಮಾಡಿಕೊಂಡು ಅನಂತರ ಚಿಂತನ ಮನನ ನಿಧಿಧ್ಯಾಸಗಳನ್ನು ಮಾಡುತ್ತಿದ್ದ.

ಆದರೆ ದುರ್ವಾಸ ಋಷಿಗಳ ಇನ್ನೊಬ್ಬ ಶಿಷ್ಯನಾದ ತಪೋನಿಷ್ಠನು ಸದಾಚಾರಿಯಾಗಿ ಜಪ ತಪೋನಿಷ್ಠಾನುಗಳನ್ನು ಮಾಡುತ್ತಲಿದ್ದರೂ ಭಗವತ್ಕಥಾ ಶ್ರವಣದಲ್ಲಿ ಮಾತ್ರ ಅವನಿಗೆ ಆದರವಿರಲಿಲ್ಲ. ಯಾರೇ ಜ್ಞಾನಿಗಳು ಬಂದು ಸಮೀಪದಲ್ಲಿಯೇ ಭಗವತ್ಕಥಾ ಪ್ರವಚನವನ್ನು ಮಾಡುತ್ತಲಿದ್ದರೂ ತಪೋನಿಷ್ಠನು ಅಲ್ಲಿಗೆ ಹೋಗುತ್ತಲಿರಲಿಲ್ಲ. ತನ್ನ ಬಾಯಿಂದಲೂ ಭಾವುಕರಿಗೆ ಕಥಾಶ್ರವಣವನ್ನು ಮಾಡಿಸುತ್ತಿರಲಿಲ್ಲ. ಅತ್ತ ಕಥಾಶ್ರವಣವು ನಡೆದಾಗ ತಾನು ತನ್ನ ಆಶ್ರಮದಲ್ಲಿ ಪೂಜೆ ಆಹ್ನಿಕ ಜಪ ತಪಗಳನ್ನು ಮಾಡುತ್ತ ಕುಳಿತುಕೊಳ್ಳುತ್ತಿದ್ದ. ಯಾರಾದರೂ ಕೇಳಲಿಕ್ಕೆ ಬಂದರೂ 'ನನಗೆ ಪೂಜಾ ಆಹ್ನಿಕ ಜಪ ಧ್ಯಾನಾದಿ ಕಾರ್ಯಗಳಲ್ಲಿ ಕಥಾಪ್ರವಚನಕ್ಕೆ ಬಿಡುವು ಇರುವುದಿಲ್ಲ' ಎಂದು ಹೇಳಿ ಕಳುಹಿಸಿಬಿಡುತ್ತಿದ್ದ. ಭಗವತ್ಕಥಾ ಶ್ರವಣ ಪ್ರವಚನಗಳಿಗೆ ತನಗೆ ಅವಕಾಶ ಇಲ್ಲವೆಂದು ತೋರಿಸಲಿಕ್ಕಾಗಿ ಯಾವಾಗಲೂ ಪೂಜಾ ಆಹ್ನಿಕ ಜಪ ತಪ, ಧ್ಯಾನ, ಭಜನ ಮುಂತಾದ ಧರ್ಮಕರ್ಮಗಳನ್ನು ಆಚರಿಸುತ್ತಿದ್ದ. ಇವನು ಇದ್ದಲ್ಲಿಯೇ ಯಾರಾದರೂ ಬಂದು ಪುಣ್ಯಕಥಾ ಪ್ರವಚನವನ್ನು ಮಾಡತೊಡಗಿದರೆ ಬೇರೆ ಯಾವುದಾದರೂ ಕರ್ಮಾಂತರದ ನೆಪ ಮಾಡಿಕೊಂಡು ಆ ಸ್ಥಾನದಿಂದ ಹೋಗಿಬಿಡುತ್ತಿದ್ದ. ಭಗವತ್ಕಥಾ ಶ್ರವಣ ಹಾಗೂ ಕಥನಗಳ ನಿಂದೆಯನ್ನೂ ಉಪಹಾಸವನ್ನೂ ತಾನು ಹೊದಲ್ಲೆಲ್ಲ ಮಾಡುತ್ತಿದ್ದ.

ಹೀಗೆ ಭಗವತ್ಕಥಾ ನಿಂದೆಯಿಂದ ಮುಂದೆ ಅವನು ಬಹಳ ಕಷ್ಟಪಡಬೇಕಾಯಿತು. ಆಧಿವ್ಯಾಧಿ ಪರಾಹತನಾಗಿ ದುಃಖದ ದಳ್ಳುರಿಯಲ್ಲಿಯೇ ಸಿಕ್ಕು ಅವನು ಬೇಯತೊಡಗಿದ. ಆಗ ಸತ್ಯನಿಷ್ಠನು ಬಂದು ಭಗವತ್ಕಥಾ ಶ್ರವಣದ ಮಹಿಮೆಯನ್ನು ಹೇಳಿ ಅವನಿಗೆ ಭಗವಂತನ ಚಾರು ಚರಿತ್ರೆಯನ್ನು ಶ್ರವಣ ಮಾಡಿಸಿ ಆ ಸಂಕಟದಿಂದ ಪಾರು ಮಾಡಿದ. ಕೊನೆಗೂ ತಪೋನಿಷ್ಠನ ಪ್ರಯತ್ನದಿಂದ ಭಗವನ್ ಮಾಹಾತ್ಮ್ಯವನ್ನು ಭಕ್ತಿಯಿಂದ ಶ್ರವಣ ಮಾಡಿ ಮುಂದೆ ಮನನ ನಿದಿಧ್ಯಾಸಗಳಿಂದ ಉದ್ಧಾರ ಹೊಂದಿದ.

ವಿಷ್ಣುವಿನ ಕಥೆಯು ಪರಮ ಪವಿತ್ರ. ಸರ್ವ ಪಾಪಗಳು ತೊಳೆದು ಹೋಗುವವು ಈ ಶ್ರೀಹರಿಯ ಕಥಾ ಕಥನ ಹಾಗೂ ಶ್ರವಣಗಳಿಂದ. ವಿಷ್ಣು ಕಥಾಶ್ರವಣ ಪಠಣ ಪಾರಾಯಣಗಳು ನಡೆದಲ್ಲಿ ಎಲ್ಲ ತೀರ್ಥಗಳೂ ಕೇಂದ್ರೀಕೃತವಾಗಿರುವವು. ಸರ್ವ ಕ್ಷೇತ್ರಾಭಿಮಾನಿ ದೇವತೆಗಳೂ ಅಲ್ಲಿ ಸನ್ನಿಹಿತವಾಗಿರುತ್ತಾರೆ. ಪರಮಾತ್ಮನ ಮಹಿಮೆಗಳ ಉಕ್ತಿ ಪುನರುಕ್ತಿ ಪುನಃ ಪುನಃ ಶ್ರವಣ ಮಾಡುವವರಿಗೆ ಕೈಯಲ್ಲಿಯೇ ಇರುವುದು ಮುಕ್ತಿ.

ಪೂರ್ವಕಾಲದಲ್ಲಿ ಪಾಂಚಾಲ ದೇಶದಲ್ಲಿ 'ಪುರುಯಶ' ಎಂಬ ರಾಜರ್ಷಿ ಇರುತ್ತಿದ್ದ. ಪುಣ್ಯಶೀಲನಾದ ಭೂರಿಯಶ ಎಂಬ ಮಹಾರಾಜನ ಅನಂತರ ಪಟ್ಟಕ್ಕೆ ಬಂದಿದ್ದ ಈ ಪುರಯಶ. ತಂದೆಯಂತೆ, ಪುರುಯಶನು ಧರ್ಮಪ್ರಾಣ, ರಾಜರ್ಷಿ. ಸತ್ಯನಿಷ್ಠ, ಶೂರ, ಧೀರ, ಉದಾರ, ಬಿಲ್ಲುವಿದ್ಯೆಯಲ್ಲಿ ಅಪ್ರತಿಮಮಲ್ಲ ಈ ರಾಜರ್ಷಿ. ಧರ್ಮದ ಮರ್ಯಾದೆಯನ್ನು ಎಂದೂ ಉಲ್ಲಂಘಿಸದೇ ರಾಜ್ಯವನ್ನು ಆಳುತ್ತಿದ್ದ ಪುರುಯಶ. ಕೆಲವು ದಿನಗಳ ಬಳಿಕ ದುರ್ದೈವ ಈ ಮಹಾರಾಜನ ಬೆನ್ನು ಹಿಡಿಯಿತು. ರಾಜ್ಯದಲ್ಲಿ ಎಲ್ಲ ಕಡೆಗೂ ಅನಾವೃಷ್ಟಿ. ಮಳೆಯಿಲ್ಲ ಬೆಳೆಯಿಲ್ಲ. ಜನರಲ್ಲಿ ಹಾಹಾಕಾರ. ತಿನ್ನಲಿಕ್ಕೆ ಅನ್ನವಿಲ್ಲದ ಪ್ರಜಾಜನರ ಚೀತ್ಕಾರ. ಅಲ್ಲಲ್ಲಿ ಭೀಕರ ರೋಗಗಳ ಹಾವಳಿ. ದೊಡ್ಡ ದೊಡ್ಡ ಆನೆ ಕುದುರೆ ಎತ್ತು ಹಸು ಕರುಗಳು ಸಾಮೂಹಿಕವಾಗಿ ರೋಗಗಳಿಗೆ ಬಲಿ. ಮಹಾರಾಜನು ತನ್ನ ಅರಮನೆಯ ಭಾಂಡಾರವನ್ನೆಲ್ಲ ಸೂರೆಮಾಡಿದರೂ ಜನರಿಗೆ ಅನ್ನವನ್ನು ಒದಗಿಸಲು ಆಗಲಿಲ್ಲ. ಕಾಳುಕಡ್ಡಿ ಇಲ್ಲದೇ ಕೂಳು ಕಾಣದೇ ಪ್ರಚಂಡ ಸಂಖ್ಯೆಯಲ್ಲಿ ಪ್ರಜೆಗಳ ಮರಣ. ಅದರಿಂದ ರಾಜ ಹಾಗೂ ಮಂತ್ರಿ ಮಾನ್ಯರೆಲ್ಲರೂ ಚಿಂತಾಗ್ರಸ್ತರು.

ಈ ಸಂಧಿಯನ್ನು ಸಾಧಿಸಿ ವೈರಿರಾಜರಿಂದ ಆಕ್ರಮಣ. ಮಹಾರಾಜನ ಪರಾಜಯ. ರಾಜಧಾನಿಯಿಂದ ಪಲಾಯನ. ಅವನ ಪಟ್ಟಮಹಿಷಿ 'ಶಿಖಿಣೀ' ದೇವಿಯು ಅವಳ ಪತಿಯನ್ನನುಸರಿಸಿ ಕಾಡು ಕಂದರದಲ್ಲಿ ಬಂದು ನೆಲೆಸಿದಳು. ಹೀಗೆ ರಾಜದಂಪತಿಗಳು ತಮ್ಮ ಪರಿಮಿತ ಪರಿವಾರದೊಂದಿಗೆ ಭೀಕರ ಅರಣ್ಯದ ಒಂದು ದರೀಕೊಳ್ಳದಲ್ಲಿ ಬಂದು ವಾಸಿಸಿದರು. ಮಹಾರಾಜನಿಗೆ ಬಹಳ ದುಃಖವಾಯಿತು. ತನ್ನ ಮನದಲ್ಲಿಯೇ ಅವನು ಯೋಚಿಸಿದ ''ಇದೇನು ನನ್ನ ದುರವಸ್ಥೆ? ನಾನು ಆಜನ್ಮ ಶುದ್ಧ. ನನ್ನ ತಂದೆ ಪುಣ್ಯಾತ್ಮ. ತಾಯಿ ಪರಮ ಪತಿವ್ರತೆ. ಆ ಇಬ್ಬರೂ ಪವಿತ್ರಾತ್ಮರಿಂದ ಪರಿಶುದ್ಧವಾದ ಜನ್ಮವನ್ನು ತಳೆದ ನನಗೆ ಇಂಥ ದುರ್ದೆಶೆ ಬರಲು ಕಾರಣವೇನು? ನಾನು ಹುಟ್ಟಿದಂದಿನಿಂದ ತಾಯಿತಂದೆಗಳ ಸೇವೆಯನ್ನು ಮಾಡಿದ್ದೇನೆ. ಗುರು ಬ್ರಾಹ್ಮಣರನ್ನು ಗೌರವಿಸಿದ್ದೇನೆ. ಧರ್ಮನಿಷ್ಠನೂ ದೇವಭಕ್ತನೂ ಜಿತೇಂದ್ರಿಯನೂ ಭೂತದಯಾಶೀಲನೂ ಆಗಿದ್ದೇನೆ. ಇಷ್ಟಾದರೂ ನನಗೆ ಈ ದೈನ್ಯ, ದುಃಖ, ದಾರಿದ್ರ್ಯ ದುರ್ದೆಶೆಗಳೂ ಬರಲು ಕಾರಣವೇನು? ವೈರಿಗಳಿಂದ ನನಗೆ ಇಂಥ ಘೋರ ಪರಾಜಯವು ಪ್ರಾಪ್ತವಾಗಲು ಏನು ಕಾರಣವಿರಬಹುದು? ನನಗೆ ಏಕೆ ಈ ವನವಾಸದ ದುರ್ಧರ ಪ್ರಸಂಗವು ಒದಗಿ ಬಂದಿದೆ?''

ಹೀಗೆ ನೂರಾರು ಚಿಂತೆ ಹಾಗೂ ಸಂತಾಪದಿಂದ ಮನಸ್ಸಿನಲ್ಲಿಯೇ ಕೊರಗಿ ಸೊರಗಿ ಹೋದನು ಆ ಮಹಾರಾಜ. ಮುಂದೆ ಏನು ಮಾಡಬೇಕು ಎಂದು ತಿಳಿಯದಾಯ್ತು ಆ ಧರ್ಮಿಷ್ಠ ದೊರೆಗೆ. ಈ ಸಂಕಟ ಸಮಯದಲ್ಲಿ ತನ್ನ ಗುರುಗಳಾದ ಯಾಜ, ಮತ್ತು ಉಪಯಾಜ ಎಂಬ ಸೋದರ ಮುನಿಗಳ ನೆನಪು ಬಂದಿತು ಆ ಧಾರ್ಮಿಕ ಮಹಾರಾಜನಿಗೆ. ಆ ಇಬ್ಬರೂ ಮುನಿಗಳಿಗೆ ಹೇಳಿಕಳಿಸಿದ. ರಾಜನ ಕರೆಗೆ ಓಗೊಟ್ಟರು ಆ ಅಣ್ಣತಮ್ಮಂದಿರು. ಕೂಡಲೇ ಆಗಮಿಸಿದರು ರಾಜನು ಇದ್ದ ಆ ದರೀ ಕೊಳ್ಳದ ಎಲೆಮನೆಗೆ. ಗುರುಗಳನ್ನು ಕಂಡು ತನ್ನ ಭಾಗ್ಯದೇವತೆಯೇ ತನ್ನೆಡೆಗೆ ನಡೆದು ಬಂದಂತೆನಿಸಿತು ಆ ರಾಜರ್ಷಿಗೆ. ಸಂಭ್ರಮದಿಂದ ಸ್ವಾಗತಿಸಿದ, ಶ್ರದ್ಧೆಯಿಂದ ಸತ್ಕರಿಸಿದ. ಭಕ್ತಿಯಿಂದ ಪೂಜಿಸಿದ. ವಿನಯದಿಂದ ವಂದಿಸಿದ. ನಮ್ರತೆಯಿಂದ ಕೇಳಿದ.

**ಪುರುಯಶ:-** ಗುರುಗಳೇ, ನಾನು ಹರಿಭಕ್ತ. ಗುರು ನಿಷ್ಠ. ಧರ್ಮಾಸಕ್ತ. ನ್ಯಾಯ ನೀತಿ ನಿಯಮ ನಿಷ್ಠುರ. ದೇವ ಬ್ರಾಹ್ಮಣ ಪೂಜಕ. ಇಷ್ಟಾದರೂ ನನಗೇಕೆ ಈ ಸೋಲು? ನನಗೇಕೆ ಮಕ್ಕಳಾಗಲಿಲ್ಲ? ನನಗೇಕೆ ಈ ದುಃಖ ದಾರಿದ್ರ್ಯ? ನಾನೇಕೆ ಕಾಡು ಪಾಲಾದೆ? ಧರ್ಮಪರಾಯಣನಾಗಿ ನ್ಯಾಯ ಮಾರ್ಗದಿಂದ ನಾನು ರಾಜ್ಯವನ್ನು ಪಾಲಿಸುತ್ತಿದ್ದರೂ ನನ್ನ ರಾಜ್ಯದಲ್ಲಿ ಬರಗಾಲ ತಲೆದೋರಲು ಕಾರಣವೇನು? ನಾನೇಕೆ ಏಕಾಕಿ? ನಾನೇಕೆ ಅನಾಥ!''

ಧರ್ಮಶೀಲನಾದ ಪುರುಯಶ ಮಹಾರಾಜನ ಮಾತಿನಿಂದ ಅವನ ಸಾಮ್ರಾಜ್ಯದ ದಾರುಣದ ಚಿತ್ರವು ಆ ಇಬ್ಬರೂ ಮುನಿಪುಂಗವರ ಕಣ್ಣೆದುರು ಕಟ್ಟಿತು. ಧರ್ಮಪ್ರಾಣನಾದ ಈ ಮಹಾರಾಜ ಹಾಗೂ ಅವನ ರಾಜ್ಯಕ್ಕೆ ಬಂದೊಗಿದ ಈ ದೀನ ದಯನೀಯ ದುರವಸ್ಥೆಯನ್ನು ಕಂಡು ಅವರಿಬ್ಬರಿಗೂ ಕಣ್ಣು ಹನಿಯಿತು. ಕರುಳು ಕಿವಿಚಿತು. ಕ್ಷಣ ಹೊತ್ತು ಅಂತರ್ಮುಖಿಗಳಾಗಿ ಅವರು ವಿಚಾರಿಸಿದರು. ಅನಂತರ ಅವರು ಮೃದು ಮಧುರವಾದ ಧ್ವನಿಯಿಂದ ಹೀಗೆ ನುಡಿದರು.

**ಯಾಜ ಉಪಯಾಜ:-** 'ರಾಜನೇ, ನೀನು ಹತ್ತು ಹಿಂದಿನ ಜನ್ಮದಲ್ಲಿ ಕ್ರೂರನಾದ ಕಾಡು ಕಿರಾತ ಆಗಿದ್ದೆ. ಅಷ್ಟೇ ಘೋರ ಕ್ರೂರ ಹಿಂಸೆಯೇ ನಿನ್ನ ಉದ್ಯೋಗ, ಪರೋಪದ್ರವವೇ ನಿನ್ನ ಕರ್ತವ್ಯ, ಪರದ್ರೋಹ, ಪರದ್ರವ್ಯಾಪಹಾರ ಪರಪೀಡೆ ನಿನ್ನ ಸಾಧನೆ, ನೀನು ಎಂದೂ ಧರ್ಮವನ್ನು ಆಚರಿಸಲಿಲ್ಲ. ಪುಣ್ಯಕರ್ಮವನ್ನು ಮಾಡಲಿಲ್ಲ. ಆಗ್ಗೆ ನಿನ್ನ ಮನಸ್ಸು ಉಚ್ಛೃಂಖಲ, ಇಂದ್ರಿಯಗಳು ಉದ್ದಾಮ. ನಿನ್ನ ನಾಲಿಗೆ ಎಂದೂ ನಾರಾಯಣನ ನಾಮವನ್ನು ನುಡಿಯಲಿಲ್ಲ. ನಿನ್ನ ಚಿತ್ತವು ಎಂದೂ ಶ್ರೀಹರಿಯ ಚಾರು ಚರಣಗಳನ್ನು ಚಿಂತಿಸಲಿಲ್ಲ. ಕಿವಿ ಕೇಳಲಿಲ್ಲ ಹರಿಯ ಕಥೆಯನ್ನು. ತಲೆ ಬಾಗಲಿಲ್ಲ ಭಗವಂತನಿಗೆ. ಹೀಗೆ ಧರ್ಮ ದ್ರೋಹಿಯಾಗಿ ದೇವದ್ವೇಷಿಯಾಗಿ, ವೇದದ್ವೇಷಿಯಾಗಿ ಹಿಂಸಾಪರಾಯಣನಾಗಿ ಅಧರ್ಮ ಜೀವನವನ್ನು ನಡೆಸುತ್ತ ಒಂಬತ್ತು ಜನ್ಮಗಳನ್ನು ಕಳೆದೆ. ಹತ್ತನೆಯ ಜನ್ಮವು ಬಂದಿದೆ ಈಗ ನಿನಗೆ.

ಈ ಹತ್ತನೆಯ ಜನ್ಮದಲ್ಲಿಯೂ ಮತ್ತೆ ಕಾಡುಬೇಡನಾಗಿ ಜನಿಸಿದೆ ಸಹ್ಯಾದ್ರಿ ಪರ್ವತದಲ್ಲಿ. ಅವೇ ಜನ್ಮಾಂತರದ ಕ್ರೌರ್ಯ ಕಾರ್ಪಣ್ಯ ಮುಂತಾದ ದುರ್ಗುಣಗಳು ಜನ್ಮಾಂತರದ ಬಳುವಳಿಯಾಗಿ ಈ ಹತ್ತನೆಯ ಜನ್ಮದಲ್ಲಿಯೂ ನಿನ್ನ ಬೆನ್ನು ಹತ್ತಿ ಬಂದಿದ್ದವು. ಜನರಿಗೆಲ್ಲ ನೀನೊಂದು ಯಮಗಂಡ, ಧರ್ಮಲಂಡ, ದಾರಿ ಹೋಕರನ್ನೆಲ್ಲ ದಯೆಯಿಲ್ಲದೇ ಸುಲಿಯುತ್ತಿದ್ದೆ. ದರೋಡೆ ನಿನ್ನ ಕಸುಬು. ಕಳುವು ನಿನ್ನ ಕುಲಧರ್ಮ. ಹಿಂಸೆಯೇ ವ್ರತ. ಸಂಹಾರವೂ ನಿನ್ನ ನಿತ್ಯನಿಯಮ. ಆ ಜನ್ಮದಲ್ಲಿ ನೀನು ಸಂಹರಿಸಿದ ಮಕ್ಕಳಿಗೆ ಲೆಕ್ಕವಿಲ್ಲ. ಪಶುಪಕ್ಷಿಗಳಿಗೆ ಇತಿಮಿತಿಯಿಲ್ಲ. ಆ ಪಾಪದಿಂದಲೇ ನಿನಗೆ ಈ ಜನ್ಮದಲ್ಲಿ ಮಕ್ಕಳಾಗಿಲ್ಲ. ಆ ಜನ್ಮದಲ್ಲಿ ನೀನು ವಿಶ್ವಾಸಘಾತಮಾಡದೇ ಇರುವ ಜನರೇ ಇಲ್ಲ. ಅದರಿಂದಾಗಿ ಈ ಜನ್ಮದಲ್ಲಿ ನಿನಗೆ ಅಣ್ಣ ತಮ್ಮ ಮಿತ್ರ ಯಾರೂ ಇಲ್ಲ. ಅದಕ್ಕಾಗಿಯೇ ನಿನಗೆ ಈ ಏಕಾಕಿತನ. ಹಿಂದಿನ ಜನ್ಮದಲ್ಲಿ ಸಾಧು ಸಂತರನ್ನು ನೀನು ನಿಂದಿಸಿ ಉಪಹಾಸ ಮಾಡಿದೆ. ಆ ಪಾಪದಿಂದ ನಿನಗೆ ಈ ಜನ್ಮದಲ್ಲಿ ವೈರಿಗಳಿಂದ ಪರಾಜಯವು ಪ್ರಾಪ್ತವಾಗಿದೆ. ಆಗ ನೀನು ಯಾರಿಗೂ ಏನೂ ದಾನ ಕೊಡಲಿಲ್ಲ. ಅದರ ದುಷ್ಪರಿಣಾಮವೇ ನಿನ್ನ ಈಗಿನ ದಾರಿದ್ರ್ಯ. ಈಗ ನೀನು ಅನುಭವಿಸುವ ಈ ವನವಾಸವು

ಅಂದು ಮಾಡಿದ ಪರೋಪದ್ರವದ ಫಲ. ಆಗ ನೀನು ಮಾಡಿದ ಕ್ರೂರಕರ್ಮ ಚೋರಕರ್ಮಗಳಿಂದ ಈ ಜನ್ಮದಲ್ಲಿ ನಿನ್ನ ರಾಜ್ಯವನ್ನು ವೈರಿಗಳು ಅಪಹರಿಸಿದ್ದಾರೆ. ಆ ಜನ್ಮದಲ್ಲಿನೀನು ಮಾಡಿದ ಒಂದೇ ಒಂದು ಪುಣ್ಯಕಾರ್ಯವೆಂದರೆ, ವೈಶಾಖಮಾಸದಲ್ಲಿ ನಡುಹಗಲಿನ ಕಡುಬಿಸಿಲಿನಲ್ಲಿ ಬಳಲಿ ಬಂದ ಒಬ್ಬ ಬ್ರಾಹ್ಮಣನಿಗೆ ಸ್ವಾರ್ಥವಶನಾಗಿ ಒಂದು ನೀರು ತುಂಬಿದ ಕೆರೆಯನ್ನು ತೋರಿಸಿದೆ. ಮತ್ತು ಗಾಳಿ ಹಾಕಿಕೊಳ್ಳಲಿಕ್ಕೆ ಒಂದು ಒಣಗಿದ ಮುತ್ತುಗದ ಎಲೆಯನ್ನು ನೀಡಿದೆ. ವೈಶಾಖ ಮಾಸದಲ್ಲಿ ಮಾಡಿದ ಆ ಅಲ್ಪಪುಣ್ಯದಿಂದ ನೀನು ಈ ಜನ್ಮದಲ್ಲಿ ರಾಜಪುತ್ರನಾಗಿ ಜನಿಸಿದೆ. ನೀನು ಇಂಥ ಪವಿತ್ರವಾದ ಅರಸು ಮನೆತನದಲ್ಲಿ ಜನಿಸಿದೆ. ಕಳೆದ ಜನ್ಮದ ವೈಶಾಖ ಧರ್ಮಪಾಲನೆಯ ಪುಣ್ಯ ಪ್ರಭಾವದಿಂದ ರಾಜ್ಯ, ಸಿಂಹಾಸನ, ಅಧಿಕಾರವೈಭವ ಸುಖಸಂಪದಗಳನ್ನೆಲ್ಲ ಪಡೆದಿದ್ದೆ. ಆದರೆ ಆಗಲೂ ನೀನು ವೈಶಾಖ ಧರ್ಮದ ವ್ರತನಿಯಮ ದಾನ ಮುಂತಾದವುಗಳನ್ನು ಮಾಡಲಿಲ್ಲ. ಹಾಗೂ ನಿನ್ನ ಜನ್ಮಾಂತರದ ಪಾಪಕರ್ಮಗಳು ಬಲವತ್ತರವಾಗಿದ್ದವು. ಆದ್ದರಿಂದ ನಿನಗೆ ಈ ದುಃಖ ದಾರಿದ್ರ್ಯ, ಪರಾಜಯ ವನವಾಸ ಮುಂತಾದವುಗಳು ಒದಗಿ ಬಂದಿರುತ್ತವೆ.

ಈಗಾದರೂ ನೀನು ವೈಶಾಖ ಧರ್ಮಗಳನ್ನು ಸರಿಯಾಗಿ ಪಾಲನ ಮಾಡಿದರೆ ನಿನ್ನ ಕಳೆದುಹೋದ ರಾಜ್ಯವೂ ಮರಳಿ ಬರುವುದು. ಹಿಂದಿನ ನಿನ್ನ ಸ್ಥಾನಮಾನಗಳೆಲ್ಲವೂ ಪುನಃ ಪ್ರಾಪ್ತವಾಗುವವು. ಹೇಗೂ ಈಗ ವೈಶಾಖ ಮಾಸವು ಪ್ರಾರಂಭವಾಗಿದೆ. ಇಂದು ಅಕ್ಷಯ ತೃತೀಯಾ. ಇಂದು ನೀನು ಸ್ನಾನ ಮಾಡಿ ಲಕ್ಷ್ಮೀಪತಿಯ ಪೂಜೆಯನ್ನು ಮಾಡು. ವೈಶಾಖ ಮಾಸದಲ್ಲಿ ಪ್ರಾತಃಸ್ನಾನ ಮಾಡಿ ಭಕ್ತಿಯಿಂದ ಭಗವಂತನ ಪೂಜೆಗೈದು ಕಾಲೋಚಿತ ದಾನ ಧರ್ಮಗಳನ್ನು ನೀಡಿದರೆ, ಮತ್ತು ನಿಷ್ಕಾಮ ಬುದ್ಧಿಯಿಂದ ವಿಷ್ಣು ಪ್ರೀತಿಕರವಾದ ಧರ್ಮವನ್ನು ಆಚರಿಸಿ ಭಗವಂತನಿಗೆ ಸಮರ್ಪಿಸಿ ಅತ್ಯುತ್ಕಟ ಭಕ್ತಿಯಿಂದ ಆತ್ಮನಿವೇದನವನ್ನು ಮಾಡಿದರೆ ಪರಮಾತ್ಮನ ಸಾಕ್ಷಾತ್ಕಾರವಾಗುವದು. ಭಗವತ್ ಸಾಕ್ಷಾತ್ಕಾರವಾದ ಬಳಿಕ ಯಾವುದು ತಾನೇ ದೊರಕಲಿಕ್ಕಿಲ್ಲ?''

ಹೀಗೆ ಹೇಳಿ ಯಾಜ ಉಪಯಾಜ ಇಬ್ಬರೂ ಮುನಿಗಳು ಅಲ್ಲಿಂದ ಹೊರಟು ಹೋದರು. ಆಗ ತನ್ನ ತಪ್ಪಿನ ಅರಿವಾಯಿತು ಆ ಪುರುಯಶ ಮಹಾರಾಜನಿಗೆ. ಇಷ್ಟು ದಿನ ಅವನು ಧಾರ್ಮಿಕನಾಗಿದ್ದರೂ ಅಜ್ಞಾನದಿಂದ ವೈಶಾಖ ಧರ್ಮವನ್ನು ಆಚರಿಸಿದ್ದಿಲ್ಲ. ಈಗ ಗುರುದ್ವಯರ ಮಾತಿನಿಂದ ಅವನಲ್ಲಿ ವಿವೇಕೋದಯವಾಯಿತು. ವೈಶಾಖಮಾಸದ ಎಲ್ಲ ಧರ್ಮಗಳನ್ನು ಅಪ್ರಮಾದದಿಂದ ಆಚರಿಸಿದ ಆ ಅರಸು. ನಸುಕಿನಲ್ಲಿ ಸ್ನಾನ, ಹಗಲಿನಲ್ಲಿ ಪೂಜೆ, ಸತ್ಪಾತ್ರದಲ್ಲಿ ದಾನ, ವಿದ್ವಾಂಸರಿಂದ ಹರಿಕಥಾಶ್ರವಣ. ಸಂತತವೂ ಭಗವಚ್ಚಿಂತನ. ಹೀಗೆ ವೈಶಾಖ ಮಾಸದ ಮೂವತ್ತು ದಿನಗಳನ್ನು ನಿರಂತರ ಧರ್ಮ ಕರ್ಮಾನುಷ್ಠಾನದಲ್ಲಿಯೇ ಕಳೆದ. ಈ ಸಂತತ ಭಗವದುಪಾಸನೆಯ ಪ್ರಭಾವದಿಂದ ಅವನಬಂಧು ಬಾಂಧವರು ಹಿಂದಿನ ಸೇನಾಧಿಪತಿಗಳು ಅವನಿದ್ದಲ್ಲಿಗೇ ಬಂದು ಸೇರಿದರು. ಅವನ ಅಳಿದುಳಿದ ಸೇನೆಯೆಲ್ಲವೂ ಈಗ ಅವನ ಸೇವೆಗೆ ಸಜ್ಜಾಗಿ ಬಂದು ನಿಂತಿತು. ಅವನು ಪಾಂಚಾಲ ನಗರದ ರಾಜಧಾನಿಯ ಮೇಲೆ ದಾಳಿಯಿಟ್ಟ. ವೈರಿ ರಾಜರನ್ನೆಲ್ಲ ತನ್ನ ಬಾಹುಬಲದಿಂದ ಸೋಲಿಸಿ ತನ್ನ ಮೊದಲಿನ ಸಾಮ್ರಾಜ್ಯವನ್ನೆಲ್ಲ ಮರಳಿ ಗೆದ್ದುಕೊಂಡ. ಇವನ ಪ್ರಚಂಡ ಪರಾಕ್ರಮದ ರಭಸವನ್ನು ತಾಳಲಾರದೇ ವೈರಿ ಸೇನೆ ತತ್ತರಿಸಿ ಛಿನ್ನ

ಭಿನ್ನವಾಗಿ ಹೌಹಾರಿ ಓಡಿ ಹೋಯಿತು. ವಿಜಯಶಾಲಿಯಾದ ಪಾಂಚಾಲ ದೇಶದ ಪುರುಯಶ ರಾಜನು ಸೋತು ಓಡಿ ಹೋದ ವೈರಿರಾಜರ ಸಮೃದ್ಧವಾದ ಮುತ್ತು ರತ್ನ ರಾಶಿ ಭಂಡಾರವನ್ನು ತನ್ನ ಕೈವಶಮಾಡಿಕೊಂಡ. ಹತ್ತು ಕೋಟಿ ಕುದುರೆ, ಮೂರು ಕೋಟಿ ಆನೆ, ಹತ್ತು ಸಾವಿರ ಒಂಟೆ, ಮೂರುಲಕ್ಷ ಹೇಸರುಗತ್ತೆ, ಅಸಂಖ್ಯ ರಥ, ಅಪರಿಮಿತ ಕಾಲಾಳು ಮುಂತಾದವುಗಳನ್ನೆಲ್ಲ ಸ್ವಾಧೀನ ಪಡಿಸಿಕೊಂಡು ತನ್ನ ರಾಜಧಾನಿಯಲ್ಲಿ ಪಟ್ಟಾಭಿಷಿಕ್ತನಾದ.

ವೈಶಾಖಧರ್ಮ ಪರಿಪಾಲನೆಯ ಪುಣ್ಯ ಪ್ರಭಾವದಿಂದ ಅಂದಿನ ಎಲ್ಲ ರಾಜ ಮಹಾರಾಜರು ಪುರುಯಶನ ಪಾದಾಕ್ರಾಂತರಾಗಿ, ಸಾರ್ವಭೌಮತ್ವವನ್ನು ಒಪ್ಪಿಕೊಂಡು, ಅಪರಿಮಿತವಾದ ಕಪ್ಪಕಾಣಿಕೆಯನ್ನು ತಂದು ಒಪ್ಪಿಸಿದರು. ಎಲ್ಲ ಕಡೆಯೂ ಸುವೃಷ್ಟಿಯಾಗಿ, ಮಳೆಬೆಳೆ ಸಮೃದ್ಧಿಯಾಗಿ, ರಾಷ್ಟ್ರವೆಲ್ಲವೂ ಸುಸಂಪನ್ನವಾಗಿ, ಜನರೆಲ್ಲರೂ ಆನಂದದಿಂದ ನಕ್ಕು ನಲಿದಾಡಿದರು. ವೈಶಾಖ ಮಾಸದ ದಾನ ಧರ್ಮ ವ್ರತಾನುಷ್ಠಾನದಿಂದ ಪರಮ ಪರಿತುಷ್ಟನಾದ ಶ್ರೀಹರಿಯ ಪರಮಪ್ರಸಾದದಿಂದ ಪಾಂಚಾಲ ದೇಶದ ಪುರುಯಶ ಮಹಾರಾಜನು ಏಕರಾಟ್ ಸಮ್ರಾಟ್ ಆಗಿ ಏಕ ಛತ್ರಾಧಿಪತಿಯಾಗಿ ಧರ್ಮದಿಂದ ಸಕಲ ಭೂಮಂಡಲವನ್ನೆಲ್ಲ ಆಳಿದ.

ಅವನಿಗೆ ಭಗವದನುಗ್ರಹದಿಂದ ಧೃಷ್ಟಕೀರ್ತಿ, ಧೃಷ್ಟಕೇತು, ಧೃಷ್ಟದ್ಯುಮ್ನ, ಚಿತ್ರಕೇತು, ವಿಜಯ ಎಂದು ಐದು ಜನ ಗಂಡು ಮಕ್ಕಳು ಹುಟ್ಟಿ ತಂದೆಯಂತೆಯೇ ಭಗವದ್ಭಕ್ತರಾಗಿ ಬೆಳೆದರು. ಇವೆಲ್ಲವೂ ತನ್ನ ವೈಶಾಖ ವ್ರತದಿಂದ ಸಂತುಷ್ಟನಾದ ಶ್ರೀಹರಿಯ ಪರಮಾನುಗ್ರಹದಿಂದಲೇ ತನಗೆ ಪ್ರಾಪ್ತವಾಗಿದೆ ಎಂದು ಮಹಾರಾಜನಿಗೆ ನಿಶ್ಚಯವಾಯಿತು. ಅದರಿಂದ ಅವನು ಮತ್ತಿಷ್ಟು ಉತ್ಸಾಹಗೊಂಡು ಪ್ರತಿವರುಷವೂ ತಪ್ಪದೇ ವೈಶಾಖ ಮಾಸದ ಧರ್ಮಗಳನ್ನು ವಿಧಾನ ಪೂರ್ವಕವಾಗಿ ನಿಷ್ಕಾಮ ಬುದ್ಧಿಯಿಂದ ಮಾಡಿ ಶ್ರೀಹರಿಯ ಪಾದಾರವಿಂದಗಳಲ್ಲಿ ಸಮರ್ಪಿಸುತ್ತಿದ್ದ. ಅದರಿಂದ ಪರಮಪ್ರೀತನೂ ಅತ್ಯಂತ ಸಂತುಷ್ಟನೂ ಆದ ಶ್ರೀಹರಿಯು ಆ ಪಾಂಚಾಲ ದೇಶದ ಧರ್ಮಿಷ್ಠ ದೊರೆಯಾದ ಪುರುಯಶ ಮಹಾರಾಜನಿಗೆ ಅಕ್ಷಯ ತೃತಿಯಾ ಸುಮೂಹೂರ್ತದಂದು ಪ್ರತ್ಯಕ್ಷ ದರ್ಶನ ದಯಪಾಲಿಸಿದ.

## ಪುರುಯಶನಿಗೆ ಶ್ರೀಹರಿಯ ಸಾಕ್ಷಾತ್ಕಾರ ಮತ್ತು ಮೋಕ್ಷ

**ಶ್ರುತದೇವ:-** ಲಕ್ಷ್ಮೀಪತಿಯಾದ ನಾರಾಯಣನು ನಿಷ್ಕಾಮ ಭಕ್ತಿ ಹಾಗೂ ವೈಶಾಖ ಧರ್ಮಾನುಷ್ಠಾನದಿಂದ ಪ್ರೀತಿ ಪ್ರಸನ್ನನಾಗಿ ಆ ಮಹಾರಾಜನ ಎದುರು ಪ್ರತ್ಯಕ್ಷವಾಗಿ ಬಂದು ನಿಂತ. ನಾಲ್ಕು ಬಾಹುಗಳಲ್ಲಿ ಶಂಖಚಕ್ರ ಗದಾ ಪದ್ಮ, ಕಟಿಯಲ್ಲಿ ಪೀತಾಂಬರ, ಕೊರಳಲ್ಲಿ ವನಮಾಲೆ, ವಕ್ಷಸ್ಥಳದಲ್ಲಿ ಲಕ್ಷ್ಮೀದೇವಿ, ಗುರುಡಾರೂಢನಾದ ಇಂಥ ಗೋವಿಂದ ಕಣ್ಣೆದುರು ವಿರಾಜಮಾನ. ಅವನ ದೇದೀಪ್ಯಮಾನವಾದ ದೇಹದ ದಿವ್ಯ ದೀಧಿತಿಯ ಕಾಂತಿಯಿಂದ ಮಹಾರಾಜನ ಕಣ್ಣುಕುಕ್ಕಿದಂತಾಗಿ ಅವನು ನಿಮೀಲಿತ ನೇತ್ರನಾದ. ಕಂಗಳಲ್ಲಿ ಆನಂದ ಬಾಷ್ಪ, ಅಂಗಗಳಲ್ಲಿ ರೋಮಾಂಚನ.

ತಕ್ಷಣದಲ್ಲಿಯೇ ಅವನು ಮುಂದೆ ಬಂದು ಸಾಷ್ಟಾಂಗ ವಂದನೆಗೈದ. ಕೆಲನಿಮಿಷಗಳವರೆಗೆ ಎವೆ ಪಿಳುಕಿಸದೆ ನಿರುಕಿಸಿದ ಆ ನಾರಾಯಣನ ದಿವ್ಯ ವಿಗ್ರಹವನ್ನು. ಅನಂತರ ಆ ಭಗವಂತನ

ಪವಿತ್ರ ಪಾದಗಳನ್ನು ತೀರ್ಥತೋಯಗಳಿಂದ ತೊಳೆದ. ಆ ಚರಣೋದಕವನ್ನು ತಲೆಯಲ್ಲಿ ತಳೆದ. ಅನಂತರ ಬೆಲೆಬಾಳುವ ಬಟ್ಟೆ, ಪೀತಾಂಬರ, ಚಂದನ, ಹಾರ, ಧೂಪ, ದೀಪ, ನೈವೇದ್ಯಗಳಿಂದ, ಪೂಜೆಮಾಡಿ ತನ್ನ ತನು ಮನ ಧನ ಆತ್ಮ ಮುಂತಾಗಿ ಸರ್ವಸ್ವವನ್ನು ಭಗವದರ್ಪಣಗೈದು ಧನ್ಯನಾದ. ಕೈ ಜೋಡಿಸಿ ಪುನಃ ಪುನಃ ಸ್ತೋತ್ರ ಮಾಡಿದ. ಅಚಿಂತ್ಯಾದ್ಭುತವಾದ ಭಗವಂತನ ಅಪರಿಚ್ಛಿನ್ನವಾದ ಗುಣಗಳನ್ನು ಕೊಂಡಾಡಿದ.

**ಪುರುಯಶ:-** ಬ್ರಹ್ಮಾದಿ ಪ್ರಜಾಪತಿಗಳಿಗೆಲ್ಲ ಅಧೀಶ್ವರನಾದ ನಿರ್ಗುಣ ನಿರಂಜನ ನಾರಾಯಣನಿಗೆ ವಂದನೆ. ಸರ್ವತಂತ್ರ ಸ್ವತಂತ್ರನಾದ ಪರಮೇಶ್ವರನಿಗೆ ಪುನಃ ಪುನಃ ಪ್ರಣಾಮ. ಜಗನ್ನಿವಾಸನಾದ ವಾಸುದೇವ! ನನ್ನ ಮೇಲೆ ಪ್ರಸನ್ನನಾಗು. ನಿನ್ನಲ್ಲಿ ಧೃಢವಾದ ಭಕ್ತಿಯನ್ನು ಕೊಡು. ಚಿತ್ತ ನಿನ್ನ ಚರಣ ಚಿಂತನದಲ್ಲಿ, ವಾಣಿ ನಿನ್ನ ಗುಣ ವರ್ಣನದಲ್ಲಿ, ನನ್ನ ನೇತ್ರ ನಿನ್ನ ಶ್ರೀವಿಗ್ರಹದ ದರ್ಶನದಲ್ಲಿ, ಕಿವಿ ಕಥಾಶ್ರವಣದಲ್ಲಿ. ನಾಲಿಗೆ ನಿನ್ನ ನೈವೇದ್ಯ ಭಕ್ಷಣದಲ್ಲಿ, ಮೂಗು ನಿನ್ನ ನಿರ್ಮಾಲ್ಯ ಮೂಸುವಲ್ಲಿ; ಕೈಗಳು ನಿನ್ನ ಮಂದಿರವನ್ನು ಗುಡಿಸುವಲ್ಲಿ, ಕಾಲು ನಿನ್ನ ಯಾತ್ರೆ ಮಾಡುವಲ್ಲಿ, ತಲೆ ನಿನಗೆ ನಮಸ್ಕರಿಸುವಲ್ಲಿ ಯಾವಾಗಲೂ ಆಸಕ್ತವಾಗಿರಲಿ. ನನ್ನ ಮನೆಯಲ್ಲಿ ಯಾವಾಗಲೂ ನಿನ್ನ ಭಕ್ತರಾದ ಮುನಿ ಮನೀಷಿಗಳಿಂದ ಭಗವತ್ಕಥಾ ಪ್ರವಚನವು ನಿರಂತರವೂ ನಡೆಯುತ್ತಲಿರಲಿ ಎಂಬ ಅಭಿಪ್ರಾಯದಿಂದ ಕೆಳಗಿನ ಪದ್ಯಗಳಿಂದ ಬೇಡಿಕೊಂಡನು.

**ಭೂಯಾನ್ ಮನಃ ಕೃಷ್ಣಪದಾರವಿಂದಯೋಃ।**
**ವಚಾಂಸಿ ತೇ ದಿವ್ಯ ಕಥಾನುವರ್ಣನೇ ॥**

**ನೇತ್ರೇ ಮಮೇಮೇ ತವ ವಿಗ್ರಹೇಕ್ಷಣೇ।**
**ಶ್ರೋತ್ರೇ ಕಥಾಯಾಂ ರಸನಾ ತ್ವದರ್ಪಿತೇ ॥**

**ಘ್ರಾಣಂ ಚ ತ್ವತ್ ಪಾದ ಸರೋಜ ಸೌರಭೇ।**
**ತ್ವದ್ ಭಕ್ತ ಗಂಧಾದಿ ವಿಲೇಪನೇಽ ಸಕೃತ್।**
**ಸ್ಯಾತಾಂ ಚ ಹಸ್ತೌ ತವ ಮಂದಿರೇ ವಿಭೋ।**
**ಸಂಮಾರ್ಜನಾದೌ ಮಮ ನಿತ್ಯದೈವ ॥**

**ಪಾದೌ ವಿಭೋಃ ಕ್ಷೇತ್ರಕಥಾನುಸರ್ಪಣೇ।**
**ಮೂರ್ಧಾ ಚ ಮೇ ಸ್ಯಾತ್ ತವ ವಂದನೇಽ ನಿಶಂ ॥**

ಇದರಂತೆ ಆ ಪಾಂಚಾಲ ರಾಜನು ತನ್ನ ಕಾಮನೆ, ಬುದ್ಧಿ, ಕಾಲ ಎಲ್ಲವೂ ಭಗವನ್ನಿಷ್ಠವಾಗಲಿ ಎಂದು ಬೇಡಿಕೊಳ್ಳುತ್ತಾನೆ.

ಕಾಮಶ್ಚ ಮೇ ಸ್ಯಾತ್ತವ ಸತ್ಕಥಾಯಾಂ
ಬುದ್ಧಿಶ್ಚ ಮೇ ಸ್ಯಾತ್ತವ ಚಿಂತನೇಽನಿಶಮ್ ॥

ದಿನಾನಿ ಮೇ ಸ್ಯುಸ್ತವ ಸತ್ಕಥೋದಯೈಃ
ಉದ್ಗೀಯಮಾನೈರ್ಮುನಿಭರ್ಗೃಹಾಗತೈಃ ॥

ಹೀನಃ ಪ್ರಸಂಗಸ್ತವ ಮೇ ನ ಭೂಯಾತ್
ಕ್ಷಣಂ ನಿಮೇಷಾರ್ಧ ಮಥಾಪಿ ವಿಷ್ಣೋ ॥

ಪ್ರಭು, ನನ್ನ ಇಚ್ಛೆಯು ನಿನ್ನ ಸತ್ಕಥೆಗಳನ್ನು ಕೇಳುವದರಲ್ಲಿಯೇ ಇರಲಿ. ಬುದ್ಧಿಯು ನಿನ್ನ ಚಿಂತನದಲ್ಲಿಯೇ ಆಸಕ್ತವಾಗಲಿ. ಮನೆಗೆ ಬಂದ ಮುನಿ ಮಹರ್ಷಿಗಳು ಹಾಡಿ ಪಾಡುವ ನಿನ್ನ ಕಥಾ ಶ್ರವಣದಿಂದಲೇ ನನ್ನ ದಿನಗಳು ಕಳೆಯಲಿ. ನಿನ್ನ ಗುಣವರ್ಣನೆಯನ್ನು ಮಾಡದೇ ನನ್ನ ಒಂದು ಕ್ಷಣವೂ ವ್ಯರ್ಥವಾಗದಿರಲಿ.

**ನ ಪಾರಮೇಷ್ಠ್ಯಂ, ನಚ ಸಾರ್ವಭೌಮಂ**
**ನ ಚಾಪವರ್ಗಂ ಸ್ಪೃಹಯಾಮಿ ವಿಷ್ಣೋ।**
**ತ್ವತ್ ಪಾದ ಸೇವಾಂ ಚ ಸದೈವ ಕಾಮಯೇ**
**ಪ್ರಾರ್ಥ್ಯಂ ಶ್ರಿಯಾ ಬ್ರಹ್ಮಭವಾದಿಭಿಃ ಸುರೈಃ॥**

ನನಗೆ ಬ್ರಹ್ಮಪದವಿಯಾಗಲಿ ಭೂಲೋಕದ ಸಾರ್ವಭೌಮ ಅಧಿಕಾರವಾಗಲಿ ಮೋಕ್ಷವಾಗಲಿ ಅಪೇಕ್ಷಿತವಲ್ಲ. ಲಕ್ಷ್ಮೀದೇವಿ, ಹಾಗೂ ಬ್ರಹ್ಮ ರುದ್ರದೇವತೆಗಳಿಂದ ಯಾವಾಗಲೂ ಪ್ರಾರ್ಥಿಸಲ್ಪಡುವ ನಿನ್ನ ಪಾದ ಸೇವೆಯನ್ನು ಯಾವಾಗಲೂ ಮಾಡಲು ನಾನು ಅಪೇಕ್ಷಿಸುತ್ತೇನೆ.''

ಪುರುಯಶ ಮಹಾರಾಜನ ಅರ್ಥಗರ್ಭಿತವಾದ ಈ ಪ್ರಾರ್ಥನೆಯನ್ನು ಕೇಳಿ ಮಹಾವಿಷ್ಣು ಸಂತುಷ್ಟನಾದ. ಗಂಭೀರವಾಣಿಯಲ್ಲಿ ನುಡಿದ- ''ಭಕ್ತಶ್ರೇಷ್ಠ, ನಿನ್ನ ಸ್ತೋತ್ರದಿಂದ ನಾನು ಮುದಿತನಾಗಿದ್ದೇನೆ. ಈ ನಿನ್ನ ಧೃಢ ಭಕ್ತಿಯಿಂದ ನೀನು ಕೊನೆಗೆ ಸಾಯುಜ್ಯ ಮೋಕ್ಷವನ್ನು ಹೊಂದು. ಇಂದು ವೈಶಾಖ ಶುದ್ಧ ತದಿಗಿ, ಈ ಶುಭದಿನದಂದು ನಾನು ನಿನಗೆ ಪ್ರತ್ಯಕ್ಷ ದರ್ಶನವಿತ್ತಿದ್ದೇನೆ. ಅಕ್ಷಯ ಫಲವಾದ ಮೋಕ್ಷವನ್ನು ಕೂಡ ನಾನು ಇಂದು ನಿನಗೆ ಕೊಡಮಾಡಿದ್ದೇನೆ. ಆದುದರಿಂದ ಇದು ಅಕ್ಷಯ ತೃತೀಯಾ ಎಂದು ಪ್ರಸಿದ್ಧಿಯಾಗಲಿ.

ಈ ತಿಥಿಯಂದು ಸ್ನಾನ, ದಾನ, ಭಗವತ್ಪೂಜಾದಿ ಪುಣ್ಯ ಕರ್ಮಗಳನ್ನು ಮಾಡುವವರು ನನ್ನ ಅಕ್ಷಯ ಪದವನ್ನು ಹೊಂದುತ್ತಾರೆ. ಈ ದಿನದಂದು ಅಲ್ಪಪುಣ್ಯವನ್ನು ಮಾಡಿದರೂ ಫಲ ಮಾತ್ರ ಅಕ್ಷಯ. ಮಾಡಿದ ಶ್ರಾದ್ಧವೂ ಅಕ್ಷಯ. ಕುಟುಂಬಿಯಾದ ವಿದ್ವಾಂಸರಿಗೆ ಈ ಅಕ್ಷಯ ತದಿಗೆಯ ಶುಭದಿನದಂದು ಗೋದಾನ ಮಾಡಿದರೆ ಮುಕ್ತಿ ಭುಕ್ತಿಗಳ ಉಭಯ ಪ್ರಾಪ್ತಿ. ವೈಶಾಖ ಮಾಸದಲ್ಲಿ ನನಗೆ ಪ್ರಿಯವಾದ ಸ್ನಾನ, ದಾನ, ವ್ರತ, ಉಪವಾಸಗಳನ್ನು ಮಾಡುವವರ ಹುಟ್ಟು, ಸಾವು, ಮುಪ್ಪು, ಭೀತಿ ಮುಂತಾದವುಗಳನ್ನೆಲ್ಲ, ನಾನೇ ದೂರ ಮಾಡುತ್ತೇನೆ.''

ಹೀಗೆ ಪುರುಯಶರಾಜನಿಗೆ ವರವನ್ನು ಕರುಣಿಸಿ ದೇವಾಧಿದೇವನಾದ ಆ ಲಕ್ಷ್ಮೀಪತಿಯು ಎಲ್ಲರೂ ನೋಡುತ್ತಿರುವಂತೆಯೇ ಅಲ್ಲಿಯೇ ಅಂತರ್ಧಾನ ಹೊಂದಿದನು. ಅನಂತರ ಪುರುಯಶರಾಜನು ಭಗವದಾದೇಶದಂತೆ ಪ್ರತಿವರ್ಷವೂ ತಪ್ಪದೇ ವೈಶಾಖ ಮಾಸದ ಧರ್ಮಗಳನ್ನು ವ್ರತವೆಂದು ಭಕ್ತಿಯಿಂದ ಆಚರಿಸಿದನು. ಹೀಗೆ ಬದುಕಿ ಇರುವವರೆಗೆ ವೈಶಾಖ ಸ್ನಾನ, ಭಗವದ್‌ಧ್ಯಾನ, ವಿಪುಲದಾನ, ಪ್ರಜಾಪಾಲನಾದಿ ಪುಣ್ಯಕಾರ್ಯಗಳನ್ನು ಮಾಡುತ್ತ ಕೊನೆಗೆ ವಿಷ್ಣು ಸಾಯುಜ್ಯರೂಪವಾದ ಮೋಕ್ಷವನ್ನು ಪಡೆದನು. ಪುರುಯಶ ಮಹಾರಾಜನ ಈ ಪುಣ್ಯ ಚರಿತ್ರವನ್ನು ಹೇಳಿದವರು ವಿಷ್ಣುವಿನ ದಿವ್ಯ ಪದವನ್ನು ಹೊಂದುವರು.

## ಶಂಖ, ವ್ಯಾಧರ ಸಂಭಾಷಣೆ, ಕಿರಾತನ ಜನ್ಮಾಂತರದ ವೃತ್ತಾಂತ :

**ಶ್ರುತದೇವ:-** "ರಾಜನೇ, ಪೂರ್ವಕಾಲದಲ್ಲಿ ಪಂಪಾ ಸರೋವರದ ದಂಡೆಯ ಮೇಲೆ ಶಂಖ ಎಂಬ ಹೆಸರಿನ ಒಬ್ಬ ಬ್ರಾಹ್ಮಣ ಇರುತ್ತಿದ್ದ. ಒಮ್ಮೆ ಬೃಹಸ್ಪತಿಯು ಸಿಂಹರಾಶಿಗೆ ಇದ್ದಾಗ ಗೋದಾವರಿ ಸ್ನಾನ ಮಾಡಬೇಕೆಂದು ಆ ಶಂಖವಿಪ್ರನು ನದೀತೀರಕ್ಕೆ ಹೋಗಬೇಕೆಂದು ಹೊರಟ. ದಾರಿಯಲ್ಲಿ ಅವನು ಪರಮ ಪವಿತ್ರವಾದ ಭೀಮರಥಿ ಎಂಬ ನದಿಯನ್ನು ದಾಟಿದ. ನದಿಯ ಆಚೆ ದುರ್ಗಮವಾದ ಗೊಂಡಾರಣ್ಯ. ಆ ಬೆಂಗಾಡಿನಲ್ಲಿಯೇ ಸೀಳುದಾರಿ ಹಿಡಿದು ಸಾಗಿದ ಆ ಶಂಖ ಬ್ರಾಹ್ಮಣ. ಮುಂದೆ ಹೋದಂತೆ ಕಾಡು ನಿಬಿಡವಾಗುತ್ತ ಹೋಗಿತ್ತು. ಎಲ್ಲಿಯೂ ನೀರು ಇಲ್ಲ. ಆ ರುಕ್ಷಾರಣ್ಯದ ಮಧ್ಯದಲ್ಲಿ ಬಾಯಾರಿಕೆಯಿಂದ ಬಳಲಿ ಕಂಗೆಟ್ಟ ಆ ಬ್ರಾಹ್ಮಣ. ವೈಶಾಖ ಮಾಸವಾದುದರಿಂದ ಬೆಂಕಿಯಲ್ಲಿ ಸೂಸಿ ಬಂದಂತೆ ಬಿಸಿಲು ಎಸರನ್ನೇ ಚೆಲ್ಲುತ್ತಿತ್ತು. ಮಧ್ಯಾಹ್ನದ ಎರಡುಗಂಟೆಯ ಸಮಯ, ನೆಲವೆಲ್ಲವೂ ಕಾದು ಕೆಂಡ. ಆ ಬ್ರಾಹ್ಮಣ ಚೆಂಡಾತಪದಿಂದ ಬೆಂದು ಒಂದು ಮರದಡಿಯಲ್ಲಿ ಹೋಗಿ ಕುಳಿತ. ಅದೇ ವೇಳೆಯಲ್ಲಿ ಓರ್ವ ಕಾಡು ಕಿರಾತ ಅಲ್ಲಿಗೆ ಬಂದ. ಕೈಯಲ್ಲಿ ಬಿಲ್ಲು ಬಾಣ ಹಿಡಿದು ಕಂಡವರನ್ನು ಕೊಲ್ಲುವ ಉದ್ದೇಶದಿಂದ ಅವನು ಅಲ್ಲಿಗೆ ಆಗಮಿಸಿದ್ದ. ಆದರೆ ಆ ಶಂಖ ವಿಪ್ರನನ್ನು ಕಂಡ ಕೂಡಲೇ ಆ ಬೇಡನ ದುರ್ಬುದ್ಧಿ ದೂರವಾಯಿತು. ಸದ್ಬುದ್ಧಿ ಉದಿಸಿತು.

**ವ್ಯಾಧ:-** ಪೂಜ್ಯರೇ, ನಾನು ಅತ್ಯಂತ ಪಾಪಿ, ದುಷ್ಟಬುದ್ಧಿಯ ದುರುಳ ಮಾನವ. ಆದರೆ ತಮ್ಮನ್ನು ಕಂಡ ಕೂಡಲೇ ನನ್ನ ದುರ್ಬುದ್ಧಿಯೆಲ್ಲವೂ ಅಳಿದು ಹೋಯಿತು. ಪವಿತ್ರ ಬುದ್ಧಿಯು ಈಗ ಉದಿಸುತ್ತಲಿದೆ. ಇದೆಲ್ಲವೂ ತಮ್ಮ ಪರಮಾನುಗ್ರಹ ಎಂದು ನಾನು ಭಾವಿಸಿದ್ದೇನೆ. ಇಂದಿನಿಂದ ನಾನು ತಮ್ಮ ಶಿಷ್ಯ. ತಾವು ನನ್ನ ಮೇಲೆ ದಯೆ ತೋರಬೇಕು. ತಾವು ನನಗೆ ತಮ್ಮ ದಿವ್ಯವಾಣಿಯಿಂದ ಉಪದೇಶವನ್ನು ನೀಡಬೇಕು. ತಮ್ಮಂಥ ಮಹನೀಯರ ಉಪದೇಶದಿಂದ ಮಾನವರು ಸಂಸಾರದಿಂದ ಬಂಧಮುಕ್ತರಾಗುವರು. ಭವಸಾಗರದಿಂದ ಜೀವಿಗಳನ್ನು ಪಾರುಮಾಡಲು ಗುರೂಪದೇಶವು ದಿವ್ಯಸಾಧನ. ಗಂಗೆಯು ಮನುಷ್ಯರ ಪಾಪಗಳನ್ನು ಪರಿಹರಿಸುವಂತೆ ಸಾಧುಪುರುಷರು ಪಾಮರ ಜನರನ್ನು ಉದ್ಧರಿಸುವರು. ಇದು ಅವರ ಸ್ವಭಾವವೇ ಆಗಿರುತ್ತದೆ. ಆದ್ದರಿಂದ ತಾವು ನನ್ನ ಮೇಲೆ ಕರುಣೆಯ ಕಟಾಕ್ಷವನ್ನು ಬೀರಿರಿ. ಉಪದೇಶಾಮೃತವನ್ನು ನೀಡಿರಿ. ದುಷ್ಟಬುದ್ಧಿಯ ಈ ಬೇಡನನ್ನು ಬೇಗ ಉದ್ಧಾರ ಮಾಡಿರಿ.

**ಶಂಖ:-** ವ್ಯಾಧ, ನೀನು ಕಲ್ಯಾಣವನ್ನು ಬಯಸುತ್ತಿದ್ದರೆ ವೈಶಾಖ ಮಾಸದಲ್ಲಿ ಶ್ರೀವಿಷ್ಣುವನ್ನು ಪ್ರಸನ್ನಗೊಳಿಸುವ ಮತ್ತು ಮಾನವರನ್ನು ಸಂಸಾರ ಸಮುದ್ರದಿಂದ ಪಾರುಗೈಯುವ ದಿವ್ಯ ಧರ್ಮಗಳನ್ನು ಆಚರಿಸು. ವೈಶಾಖ ಧರ್ಮವು ಭವತಾರಕ. ಹಾಗೂ ಕಲ್ಯಾಣಕಾರಕ. ಹೀಗೆ ಹೇಳಿ ಆ ಶಂಖ ಬ್ರಾಹ್ಮಣನು ಅಲ್ಲಿಯೇ ಸಮೀಪದಲ್ಲಿದ್ದ ಒಂದು ಸರೋವರಕ್ಕೆ ಹೋದ. ಅದರಲ್ಲಿ ಸ್ನಾನ ಮಾಡಿ ಮಾಧ್ಯಾಹ್ನಿಕ ಸಂಧ್ಯಾವಂದನೆ, ಹಾಗೂ ದೇವಪೂಜೆ, ಜಪ ಮುಂತಾದ ನಿತ್ಯಕರ್ಮಗಳನ್ನು ಮಾಡಿದ. ಅನಂತರ ಆ ಬೇಡನು ತಂದು ಕೊಟ್ಟ ರುಚಿಕರವಾದ ಬೇಲದ ಹಣ್ಣುಗಳನ್ನು ತಿಂದು ಆ ಸರೋವರದ ನೀರನ್ನು ಕುಡಿದು ಮರದೆಡೆಯಲ್ಲಿ ವಿಶ್ರಮಿಸಿ ದಣಿವನ್ನು ಆರಿಸಿಕೊಂಡ. ಅನಂತರ ಬೇಡನು ಬಂದು

ವಿನಯದಿಂದ ವಂದಿಸಿ ಕೈಜೋಡಿಸಿ ಕೇಳಿದ. "ಪೂಜ್ಯರೇ! ನಾನು ಈ ಕಾಡು ಕಿರಾತ ಜನ್ಮದಲ್ಲಿ ಏಕೆ ಜನಿಸಿದೆ. ಪೂರ್ವಜನ್ಮದಲ್ಲಿ ನಾನು ಯಾವ ಪಾಪಕೃತ್ಯವನ್ನು ಎಸಗಿದ್ದೆ? ಈ ಜನ್ಮದಲ್ಲಿ ನನಗೆ ತಮ್ಮಂಥ ಸಜ್ಜನರ ಸಂಗವು ಹೇಗೆ ಆಯಿತು? ತಮ್ಮನ್ನು ಕಂಡಕೂಡಲೇ ನನ್ನಲ್ಲಿ ಸದ್ಬುದಿ ಜನಿಸಿ ಮನಃಪರಿವರ್ತನೆಯು ಹೇಗೆ ಆಯಿತು?

**ಶಂಖ:-** ಕಿರಾತ, ಹಿಂದಿನ ಜನ್ಮದಲ್ಲಿ ನೀನೊಬ್ಬ ಸದಾಚಾರಿ ಬ್ರಾಹ್ಮಣ. ವೇದಗಳಲ್ಲಿ ಕೋವಿದ. ವೇದಾಂತಗಳಲ್ಲಿ ವಿದ್ವಾಂಸ. ಶಾಕಲ್ಯ ಎಂಬ ನಗರದಲ್ಲಿ ನಿನ್ನ ಜನನ. ಶ್ರೀವತ್ಸ ಗೋತ್ರದಲ್ಲಿ ನಿನ್ನ ಉತ್ಪತ್ತಿ. ಆಗ ನಿನ್ನ ಹೆಸರು ಸ್ತಂಭ. ನೀನು ಆಗ ಮಹಾಪಂಡಿತನಿದ್ದಂತೆ ಮಹಾತೇಜಸ್ವಿಯೂ ಆಗಿದ್ದೆ. ಆದರೆ ನಿನಗೆ ಆಗ ಉದ್ದಾಮ ಯೌವನ, ಸುಂದರ ರೂಪ. ಮೇಲೆ ಎಲ್ಲ ಕಡೆಗೂ ಪಾಂಡಿತ್ಯದ ಕೀರ್ತಿ. ಇದರಿಂದ ನಿನ್ನ ತಲೆ ತಿರುಗಿತು. ದಾರಿ ತಪ್ಪಿತು, ಒಂದು ಬೇರೆ ಹೆಣ್ಣಿನ ಸಹವಾಸ ನಿನಗೆ ಘಟಿಸಿತು. ಅದು ನಿನ್ನ ದುರ್ದೈವ. ಆ ವೇಶ್ಯೆಯ ಸಂಗ ದೋಷದಿಂದ ನೀನು ನಿನ್ನ ಬ್ರಾಹ್ಮಣೋಚಿತವಾದ ನಿತ್ಯ ಕರ್ಮಗಳನ್ನೆಲ್ಲ ತೊರೆದೆ. ಶೂದ್ರನಂತೆಯೇ ಅವಳ ಮನೆಯಲ್ಲಿ ಹೋಗಿ ನೆಲಿಸಿದೆ. ಧರ್ಮ ಕರ್ಮಗಳನ್ನೆಲ್ಲ ಪೂರ್ತಿ ಬಿಟ್ಟೆ.

ಆಗ ನಿನಗೊಬ್ಬ ಮಡದಿ ಇದ್ದಳು. ಕಾಂತಿಮತಿ ಎಂದು ಅವಳ ಹೆಸರು. ಅವಳು ಗುಣವತಿಯೂ ಆಗಿದ್ದಳು. ನೀನು ಪರಸ್ತ್ರೀಯಲ್ಲಿ ಆಸಕ್ತನಾಗಿದ್ದರೂ ಕಾಂತಿಮತಿಯು ಅತ್ಯಂತ ಭಕ್ತಿಯಿಂದ ನಿನ್ನ ಸೇವೆ ಮಾಡಿದಳು. ಹಾಗೂ ನಿನ್ನ ಪ್ರಸನ್ನತೆಗಾಗಿ ನಿನ್ನ ಪ್ರೇಯಸಿಯಾದ ಆ ವೇಶ್ಯಾ ಸ್ತ್ರೀಯ ಸೇವೆಯನ್ನೂ ಪರಿಪರಿಯಿಂದ ಗೈದಳು. ಅವಳು ನಿಮ್ಮಿಬ್ಬರ ಸೇವೆಯನ್ನು ಸಂತೋಷದಿಂದ ಮಾಡುತ್ತಲಿದ್ದಳು. ಇಬ್ಬರ ಆಜ್ಞೆಯನ್ನೂ ನಗೆ ಮೊಗದಿಂದಲೇ ಪಾಲಿಸುತ್ತಿದ್ದಳು. ನಿಮ್ಮಿಬ್ಬರ ಸ್ನಾನ, ಪಾನ ಭೋಜನ, ಉಪಹಾರ ಮುಂತಾದವುಗಳನ್ನೆಲ್ಲ ಸುವ್ಯವಸ್ಥಿತವಾಗಿ ಮಾಡುತ್ತಿದ್ದಳು. ಇಬ್ಬರ ಬಟ್ಟೆಗಳನ್ನೂ ಸ್ವಚ್ಛವಾಗಿ ನೆನಸಿ ಒಗೆದು ಹಾಕುತ್ತಿದ್ದಳು. ನಿಮ್ಮಿಬ್ಬರನ್ನೂ ಮಂಚದ ಮೇಲೆ ಮಲಗಿಸಿ ತಾನು ಕೆಳಗೆ ಮಲಗುತ್ತಿದ್ದಳು.

ಈ ರೀತಿಯಾಗಿ ವೇಶ್ಯೆಯೊಂದಿಗೆ ಪತಿಯ ಸೇವೆಮಾಡುತ್ತ ಆ ಕಾಂತಿಮತಿಯು ಬಹುಕಾಲದ ವರೆಗೆ ತನ್ನ ದೇಹವನ್ನು ಸವೆಸಿದಳು. ಒಂದು ದಿನ ನೀನು ನಿನ್ನ ಪ್ರೇಯಸಿಯಾದ ವೇಶ್ಯೆಯೊಂದಿಗೆ ಮೂಲಂಗಿಪಲ್ಲೆ ಹಾಗೂ ಉದ್ದಿನ ಒಡೆಗಳನ್ನು ಮತ್ತು ಎಣ್ಣೆಯಲ್ಲಿ ಕರಿದ ಅನೇಕ ಪದಾರ್ಥಗಳನ್ನು ಅಳತೆ ಮೀರಿ ನಾಲಿಗೆಯ ರುಚಿಯಿಂದ ಭಕ್ಷಣ ಮಾಡಿದೆ. ಈ ಅಪಥ್ಯ ಸೇವನೆಯಿಂದ ನಿನ್ನ ಹೊಟ್ಟೆ ಉಬ್ಬಿತು. ಮತ್ತು ನಿನಗೆ ಭಯಂಕರವಾದ ಭಗಂದರ ಎಂಬ ರೋಗವು ತಗುಲಿತು. ಆದರಿಂದ ನಿನಗೆ ಯಾವಾಗಲೂ ಹಗಲಿರುಳೂ ಉರುಪು. ಕೈಯಲ್ಲಿಯ ಹಣವೆಲ್ಲವೂ ವೇಶ್ಯಾಸಂಗದಿಂದ ಹಾಳಾಯಿತು. ಹಣವೆಲ್ಲ ಕಳೆದುಹೋದ ಬಳಿಕ ಆ ವೈಶ್ಯಾಸ್ತ್ರೀಯು ನಿನ್ನನ್ನು ತೊರೆದು ಹೊರಟು ಹೋದಳು. ಆಗ ರೋಗದಿಂದ ಜರ್ಜರಿತವಾದ ನೀನು ಪಶ್ಚಾತ್ತಾಪದಿಂದ ರೋದಿಸತೊಡಗಿದೆ. ನಿನ್ನ ಧರ್ಮಪತ್ನಿಯಾದ ಕಾಂತಿಮತಿಯನ್ನು ಹತ್ತಿರಕರೆದು ಹೇಳಿದೆ: "ಪ್ರಿಯೆ, ನೀನು ಮಾನವಿ ಅಲ್ಲ, ಸಾಕ್ಷಾತ್ ದೇವಿ. ನಾನು ಪರಮಪಾಪಿಷ್ಠ. ನೀನು ಪವಿತ್ರಮೂರ್ತಿ. ನೀನೇ ಈಗ ನನ್ನನ್ನು ರಕ್ಷಿಸು. ಈ ವರೆಗೆ ನಾನು ನಿನಗೆ ಯಾವ ಹಿತ ಉಪಭೋಗ ಸುಖವನ್ನು ಉಂಟುಮಾಡಲಿಲ್ಲ. ವಿನಯಶಾಲಿನಿಯಾದ ಮಡದಿಯನ್ನು ಧಿಕ್ಕರಿಸಿ ನಡೆಯುವ ಮನುಷ್ಯನು ಹದಿನೈದು

ಜನ್ಮಗಳವರೆಗೆ ನಪುಂಸಕನಾಗಿರುವನು. ಇಂಥ ಪಾಪಿಯನ್ನು ಸಜ್ಜನರು ಯಾವಾಗಲೂ ನಿಂದಿಸುವರು. ನೀನು ಮಾತ್ರ ಮಹಾಸಾಧ್ವಿ. ಪರಮ ಪತಿವ್ರತಾ ಶಿರೋಮಣಿ. ನಾನು ನಿನ್ನನ್ನು ಇಷ್ಟು ದಿನ ಅನಾದರ ಮಾಡಿ ದುಃಖಪಡಿಸಿ ಹಿಂಸೆ ಕೊಟ್ಟೆ. ಆದರಿಂದ ನಾನು ಭೀಕರವಾದ ನರಕದಲ್ಲಿ ಯಮಯಾತನೆಯನ್ನು ಅನುಭವಿಸುವೆನು. ನಾನು ನಿನ್ನನ್ನು ತಿರಸ್ಕರಿಸಿದ್ದರಿಂದ ನಿನಗೆ ಬಹಳ ಕೋಪಬಂದಿತು. ಆ ಕೋಪಾಗ್ನಿಯಲ್ಲಿ ನಾನು ದಗ್ಧವಾಗಿದ್ದೇನೆ.

ಪತಿಯ ಈ ಪಶ್ಚಾತ್ತಾಪದ ನುಡಿಯನ್ನು ಕೇಳಿ ಆ ಸಾಧ್ವೀಮಣಿಯು ವ್ಯಥಿತ ಚಿತ್ತಳಾದಳು. ಅವಳು ಕೈ ಮುಗಿದು ಗಂಡನಿಗೆ ಕೇಳಿಕೊಂಡಳು : ''ಪ್ರಾಣನಾಥ ! ತಾವು ನನ್ನ ವಿಷಯಕ್ಕೆ ಈ ವರೆಗೆ ನಡೆದುಕೊಂಡ ರೀತಿಯಿಂದ ನೀವು ದುಃಖಿಸಬಾರದು. ನಾಚಿಕೆಯನ್ನೂ ಪಡಬಾರದು. ನಿಮ್ಮ ಮೇಲೆ ನನಗೆ ಸ್ವಲ್ಪವೂ ಕೋಪವಿಲ್ಲ. ಕೋಪವೇ ಇಲ್ಲದ ಬಳಿಕ ಆ ನನ್ನ ಕೋಪಾಗ್ನಿಯಲ್ಲಿ ನೀವು ದಗ್ಧರಾಗಿ ಹೋಗುವ ಪ್ರಸಂಗ ಎಲ್ಲಿ ಬಂತು! ಜನ್ಮಾಂತರದಲ್ಲಿ ಮಾಡಿದ ಪಾಪವು ಈ ಜನ್ಮದಲ್ಲಿ ದುಃಖ ರೂಪದಿಂದ ಬಾಧಿಸುತ್ತದೆ. ಆ ದುಃಖವನ್ನು ಧೈರ್ಯದಿಂದ ಸಹನ ಮಾಡುವವಳೇ ಸಾಧ್ವೀಸ್ತ್ರೀ. ಅಂತಹ ದುಃಖವನ್ನು ಸಹಿಸುವ ಪುರುಷನು ಧೀರಪುರುಷ ಎನಿಸಿಕೊಳ್ಳುತ್ತಾನೆ.''

ಹೀಗೆ ಹೇಳಿ ಅವಳು ತನ್ನ ಪತಿಯನ್ನು ಸಮಾಧಾನಪಡಿಸಿದಳು. ಕೊನೆಗಾದರೂ ತನ್ನ ಪತಿಗೆ ಸದ್ಬುದ್ಧಿ ಬಂದಿತಲ್ಲ ಎಂದು ಅವಳಿಗೆ ಸಮಾಧಾನವಾಯಿತು. ಅವಳು ತನ್ನ ತಾಯಿ-ತಂದೆ ಬಂಧು-ಬಳಗದವರ ಮುಂದೆ ಹೋಗಿ ಬಾಯಿ ತೆರೆದು ಬೇಡಿ ಹಣವನ್ನು ತೆಗೆದುಕೊಂಡು ಬಂದಳು. ಆದರಿಂದ ತನ್ನ ಗಂಡನಾದ ನಿನ್ನನ್ನು ಔಷಧ ಪಥ್ಯ ಉಪಚಾರಗಳಿಂದ ಭಕ್ತಿಯಿಂದ ಸೇವೆಮಾಡಿ ರಕ್ಷಿಸತೊಡಗಿದಳು. ತನ್ನ ಪತಿಯಾದ ನಿನ್ನನ್ನು ಅವಳು ಸಾಕ್ಷಾತ್ ಲಕ್ಷ್ಮೀಪತಿ ನಾರಾಯಣನೇ ಎಂದು ತಿಳಿದು ಪರಿಪರಿಯಿಂದ ಪತ್ಯಂತರ್ಗತ ಪರಮಾತ್ಮನನ್ನು ಸೇವಿಸಿದಳು. ಹಗಲಿರುಳು ಮಲಗಿದಲ್ಲಿಯೇ ಮಲಗಿ ಬೇನೆಯಿಂದ ನರಳುವ ಪತಿಯಾದ ನಿನ್ನ ಮಲಮೂತ್ರಗಳನ್ನೆಲ್ಲ ತೆಗೆದು ಸ್ವಚ್ಛ ಮಾಡಿದಳು. ನಿನ್ನ ಮೈಯಲ್ಲಿ ಬಿದ್ದ ಹುಳುಗಳನ್ನು ಉಗುರಿನಿಂದ ಮೆಲ್ಲನೆ ನೋವಾಗದಂತೆ ತೆಗೆಯತ್ತಿದ್ದಳು.

ಅವಳು ಹಗಲು ಮಲಗುತ್ತಿದ್ದಿಲ್ಲ. ರಾತ್ರಿ ನಿದ್ದೆ ಮಾಡುತ್ತಿದ್ದಿಲ್ಲ. ಪತಿಯ ಆರೋಗ್ಯಕ್ಕಾಗಿ ದೇವರಲ್ಲಿ ಮೊರೆಯಿಟ್ಟು ಬೇಡಿಕೊಳ್ಳುತ್ತಿದ್ದಳು- ''ದೇವಾಧಿ ದೇವತೆಗಳೇ! ಹಾಗೂ ಪಿತೃಗಳೇ! ನನ್ನ ಈ ಪತಿಗೆ ದೀರ್ಘಾಯುಷ್ಯವನ್ನು ದಯಪಾಲಿಸಿರಿ. ಚಂಡೀದೇವಿಯೇ । ನನ್ನ ಪತಿಯನ್ನು ಆರೋಗ್ಯವಂತನನ್ನಾಗಿ ಮಾಡು. ನಿನಗೆ ಎಮ್ಮೆಯ ಮೊಸರು ಹಾಗೂ ಉತ್ತಮ ಅನ್ನಗಳ ಪೂಜೆಯನ್ನು ಮಾಡಿಸುತ್ತೇನೆ. ಗಣಪತಿಯೇ! ನಿನಗೆ ಮೋದಕವನ್ನು ಮಾಡಿಸಿ ನೈವೇದ್ಯ ತೋರಿಸುತ್ತೇನೆ. ಪ್ರತಿ ಶನಿವಾರವೂ ತನ್ನ ಪತಿಯ ಆರೋಗ್ಯಕ್ಕಾಗಿ ಉಪವಾಸ ಮಾಡುತ್ತೇನೆ. ಉಪ್ಪು ಹಾಗೂ ತುಪ್ಪ ಇವುಗಳನ್ನು ಪತಿಯ ಆರೋಗ್ಯಕ್ಕಾಗಿ ಬಿಟ್ಟುಬಿಡುತ್ತೇನೆ. ನನ್ನ ಪತಿಗೆ ಆರೋಗ್ಯ ಭಾಗ್ಯ ದೊರಕಲಿ, ಅವರು ನೂರುವರ್ಷ ಬಾಳಲಿ.'' ಹೀಗೆ ಅವಳು ಪ್ರತಿದಿನವೂ ದೇವರಲ್ಲಿ ಪ್ರಾರ್ಥಿಸಿ ಗಂಡನ ಆರೋಗ್ಯಕ್ಕಾಗಿ ಮೊರೆಯಿಡುತ್ತಿದ್ದಳು. ಒಂದು ದಿನ ಅಲ್ಲಿಗೆ ದೇವಲ ಮಹರ್ಷಿಗಳು ಆಗಮಿಸಿದರು. ಆಗ ವೈಶಾಖ ಮಾಸ. ಬಿಸಿಲಿನ ಬೇಗೆಯಿಂದ ಸಂತಪ್ತರಾಗಿದ್ದರು ಆ ಮಹರ್ಷಿಗಳು. ಹಸಿವೆ ಬಾಯಾರಿಕೆಗಳು ಆ ಮುನಿಯ ಹರಣವನ್ನೇ ಹಿಂಡಿ ಹಿಪ್ಪಿ ಮಾಡಿದ್ದವು.

ಅವರು ಈ ಕಾಂತಿಮತಿಯ ಮನೆಗೆ ಬಂದಾಗ ಸಂಧ್ಯಾಕಾಲ. ವಿಪ್ರೋತ್ತಮರು ಆಗಮಿಸಿದ್ದನ್ನು ಕಂಡು ಕಾಂತಿಮತಿಯು ಸಂತೋಷದಿಂದ ಎದ್ದು ಸ್ವಾಗತಮಾಡಿದಳು. ಭಕ್ತಿಯಿಂದ ಅವರ ಪಾದಗಳನ್ನು ತೊಳೆದು ತನ್ನ ಮೇಲೆ ಹಾಗೂ ಪತಿಯ ತಲೆಯ ಮೇಲೆ ಪ್ರೋಕ್ಷಣ ಮಾಡಿದಳು. ಬಿಸಿಲಿನಲ್ಲಿ ಬೆಂದು ಬಂದ ಆ ಮಹರ್ಷಿಗಳು ತಣ್ಣೀರಿನ ಪಾನಕ ಮಾಡಿ ಕೊಟ್ಟಳು. ಅಂದು ರಾತ್ರಿ ಅಲ್ಲಿಯೇ ಉಳಿದು ಋಷಿಗಳು ಪ್ರಾತಃಕಾಲದಲ್ಲಿ ಸ್ನಾನಮಾಡಿ ನಿತ್ಯಾಹ್ನಿಕವನ್ನು ಮುಗಿಸಿಕೊಂಡು ಅಲ್ಲಿಂದ ಹೊರಟುಹೋದರು. ಇಷ್ಟರಲ್ಲಿ ಅವಳ ಪತಿಯಾದ ನಿನಗೆ ಸನ್ನಿಪಾತ ರೋಗವು ಆಯಿತು. ಆಗ ಕಾಂತಿಮತಿಯು ಶುಂಠಿ ಮೆಣಸು ಅರೆದು ಔಷಧರೂಪವಾಗಿ ತನ್ನ ಪತಿಯ ಬಾಯಲ್ಲಿ ಹಾಕಿದಳು. ಆಗ ಜ್ವರದ ಸಂಕಟಕ್ಕೆ ಅವಳ ಪತಿಯಾದ ನೀನು ಬಾಯಲ್ಲಿ ಹಾಕಿದ ಅವಳ ಬೆರಳನ್ನು ಕಡಿದುಬಿಟ್ಟೆ. ಅವಳ ಬೆರಳು ನಿನ್ನ ಬಾಯಲ್ಲಿಯೇ ಉಳಿದುಬಿಟ್ಟಿತು. ತನ್ನ ಪ್ರೀತಿಯ ವೇಶ್ಯೆಯನ್ನು ನೆನೆಸುತ್ತ ಆ ಬ್ರಾಹ್ಮಣನು ಮರಣವನ್ನು ಹೊಂದಿದ. ಆಗ ದುಃಖಿತಳಾದ ಕಾಂತಿಮತಿಯು ತನ್ನ ಕೈಯಲ್ಲಿಯ ಬಂಗಾರದ ಬಳೆಗಳನ್ನು ಮಾರಿ ಕಟ್ಟಿಗೆಯನ್ನು ಕೊಂಡು ತಂದು ಚಿತೆಯನ್ನು ತಯಾರು ಮಾಡಿದಳು. ರೋಗಿಷ್ಠನಾದ ಆ ಪತಿಯ ಮೃತ ಶರೀರವನ್ನು ಆಲಿಂಗಿಸಿಕೊಂಡು ಚಿತೆಯ ಮೇಲೆ ತಾನೂ ಕುಳಿತುಕೊಂಡು ಪತಿಯೊಡನೆ ತನ್ನ ದೇಹ ದಹನ ಮಾಡಿಕೊಂಡು ಸತೀ ಹೋದಳು. ಅನಂತರ ಈ ಸಹಗಮನದ ಪುಣ್ಯದಿಂದಲೂ, ಪತಿಸೇವೆಯ ಪ್ರಭಾವದಿಂದಲೂ ಸತೀಹೋದ ಆ ಸತೀಮಣಿ ಕಾಂತಿಮತಿಯು ವಿಷ್ಣುಲೋಕಕ್ಕೆ ಹೊರಟುಹೋದಳು. ವೈಶಾಖ ಮಾಸದಲ್ಲಿ ದೇವಲ ಮುನಿಗೆ ತಣ್ಣೀರಿನ ಪಾನಕವನ್ನು ಕುಡಿಯಲು ಕೊಟ್ಟು ಆ ಮಹಾತ್ಮರ ಪಾದೋದಕವನ್ನು ಶಿರಸಾಧಾರಣ ಮಾಡಿದ್ದರಿಂದ ಅವಳಿಗೆ ಇಂಥ ದುರ್ಲಭವಾದ ವೈಕುಂಠ ಲೋಕ ಪ್ರಾಪ್ತಿಯಾಯಿತು.

ಅವಳನ್ನು ಇರುವವರೆಗೂ ದುಃಖಪಡಿಸಿ ವೇಶ್ಯಾಗಾಮಿಯಾಗಿ ಆ ವೇಶ್ಯೆಯನ್ನೇ ಕೊನೆಗಾಲದಲ್ಲಿ ನೆನೆಯುತ್ತ ಮರಣ ಹೊಂದಿದ ಆ ದುಷ್ಟ ಬ್ರಾಹ್ಮಣನೇ ನೀನು. ಆ ಪಾಪದಿಂದ ನೀನು ಈ ಬೇಡರ ಕುಲದಲ್ಲಿ ಹುಟ್ಟಿರುವೆ. ಹಿಂಸೆ, ಪರದ್ರೋಹ, ಕೊಲೆ ಮುಂತಾದ ಕ್ರೂರಕರ್ಮಗಳನ್ನು ಈ ಜನ್ಮದಲ್ಲಿಯೂ ಮಾಡುತ್ತಲಿರುವೆ. ನೀನು ಕಳೆದ ಜನ್ಮದಲ್ಲಿ ನಿನ್ನ ಮನೆಗೆ ದೇವಲ ಋಷಿಗಳು ಬಂದಾಗ ಅವರಿಗೆ ತಣ್ಣೀರಿನ ಪಾನಕವನ್ನು ಮಾಡಿಕೊಡಲು ನಿನ್ನ ಪತಿಗೆ ಸಮ್ಮತಿಯನ್ನು ಕೊಟ್ಟಿದ್ದೆ. ಆ ಪುಣ್ಯದಿಂದ ನಿನಗೆ ಈಗ ಧರ್ಮವಿಷಯಕ ಪ್ರಶ್ನೆಯನ್ನು ಮಾಡುವ ಸದ್ಬುದ್ಧಿಯು ಉತ್ಪನ್ನವಾಗಿದೆ. ಆ ಮುನಿಗಳ ಪಾದೋದಕವನ್ನು ನೀನೂ ನಿನ್ನ ಮಡದಿಯೊಂದಿಗೆ ನಿನ್ನ ತಲೆಯ ಮೇಲೆ ಧರಿಸಿದ್ದರಿಂದ ಸಾಧು ಸಂಗ ಅರ್ಥಾತ್ ನನ್ನ ಸಹವಾಸವು ಈಗ ನಿನಗೆ ಲಭಿಸಿತು.

**ಕಿರಾತ:-** ಪೂಜ್ಯರೇ, ''ವಿಷ್ಣುವಿನ ಪ್ರೀತಿಗಾಗಿ ಭಾಗವತ ಧರ್ಮಗಳನ್ನು ಅನುಷ್ಠಾನ ಮಾಡಬೇಕು. ಅದರಲ್ಲಿಯೂ ವೈಶಾಖಮಾಸದಲ್ಲಿ ಕರ್ತವ್ಯವೆಂದು ಹೇಳಿದ ನಿಯಮಗಳನ್ನು ವಿಶೇಷರೂಪದಿಂದ ಪಾಲಿಸಬೇಕು. ಇದರಿಂದ ಹರಿಪ್ರೀತಿ ಆಗುವದು'' ಎಂದು ತಮ್ಮ ಹೇಳಿಕೆ. ಆದರೆ ಆ ಶ್ರೀಹರಿಯ ಸ್ವರೂಪವೇನು? ಅವನ ಲಕ್ಷಣವೇನು? ಅವನನ್ನು ತಿಳಿಯುವ ಬಗೆ ಯಾವುದು? ವೈಷ್ಣವ ಧರ್ಮ ಎಂದರೆ ಏನು? ಶ್ರೀಹರಿಯು ಯಾವುದರಿಂದ ಪ್ರಸನ್ನನಾಗುವನು? ನಾನು ತಮ್ಮ ಕಿಂಕರ. ನನಗೆ ಇವೆಲ್ಲ ವಿಷಯವನ್ನು ಹೇಳಿರಿ.

**ಶಂಖ:-** ಜಗತ್ತಿಗೆಲ್ಲ ಸ್ವಾಮಿಯೂ, ಹುಟ್ಟು, ಸಾವು, ನೋವು, ರೋಗಗಳಿಂದ ರಹಿತನೂ ಆದ ಭಗವಾನ್ ನಾರಾಯಣನಿಗೆ ನಮಸ್ಕಾರ ಮಾಡಿ ನಾನು ನಿನಗೆ ವಿಷ್ಣುವಿನ ಸ್ವರೂಪವನ್ನು ಹೇಳುತ್ತೇನೆ ಕೇಳು. ಭಗವಾನ್ ಶ್ರೀಹರಿ ಸರ್ವಸದ್ಗುಣಗಳ ನಿಧಿ. ಚರಾಚರ ಪ್ರಪಂಚಕ್ಕೆಲ್ಲ ಒಡೆಯ. ಸಚ್ಚಿದಾನಂದ ವಿಗ್ರಹ. ಈ ಸ್ಥಾವರ ಜಂಗಮಾತ್ಮಕವಾದ ವಿಶ್ವವೆಲ್ಲವೂ ಅವನ ಅಧೀನ. ಈ ಪ್ರಪಂಚದ ಉತ್ಪತ್ತಿ, ಪಾಲನ, ಸಂಹಾರ, ನಿಯಮ, ಬಂಧನ, ಮೋಚನ, ಜ್ಞಾನ-ಅಜ್ಞಾನ, ಜೀವನ ಪ್ರವೃತ್ತಿ ಮುಂತಾದವುಗಳೆಲ್ಲವೂ ಆಗುವದು ಅವನಿಂದಲೇ, ಆ ಮಹಾ ವಿಷ್ಣುವನ್ನೇ ಜ್ಞಾನಿಗಳು 'ಪರಬ್ರಹ್ಮ' ಎಂದು ಕರೆಯುತ್ತಾರೆ. ವೇದ, ಶಾಸ್ತ್ರ, ಸ್ಮೃತಿ, ಪುರಾಣ, ಪಂಚರಾತ್ರ ಮತ್ತು ಮಹಾಭಾರತ ಇವೆಲ್ಲವೂ ವಿಷ್ಣುವಿನ ಸ್ವರೂಪವಾಗಿದ್ದು ಅವನನ್ನೇ ಪ್ರತಿಪಾದಿಸುತ್ತವೆ. ವೇದೈಕ ವೇದ್ಯನಾದ ಆ ಭಗವಾನ್ ನಾರಾಯಣನನ್ನು ಪ್ರತ್ಯಕ್ಷ ಅನುಮಾನ ಅಥವಾ ತರ್ಕದಿಂದ ತಿಳಿಯಲು ಸಾಧ್ಯವಿಲ್ಲ. ಯಾವ ಇಂದ್ರಿಯಗಳಿಗೂ ಅವನು ಗೋಚರನಾಗುವುದಿಲ್ಲ. ಆದರೂ ಬುದ್ಧಿವಂತರಾದ ಮಾನವರು ವೇದಶಾಸ್ತ್ರಗಳ ಮುಖಾಂತರ ಯಥಾಶಕ್ತಿ ಆ ಭಗವಂತನನ್ನು ತಿಳಿದುಕೊಂಡು ಉಪಾಸನೆ ಮಾಡಿ ಉದ್ಧೃತರಾಗಬೇಕು.

ಈ ಸಂಪೂರ್ಣ ಜಗತ್ತು ಪ್ರಾಣನಿಂದಲೇ ಉತ್ಪನ್ನವಾಗಿರುತ್ತದೆ. ಎಲ್ಲ ಪ್ರಾಣಿಗಳಿಗೂ ಪ್ರಾಣನೇ ಚೇಷ್ಟಾಪ್ರದನಾಗಿದ್ದಾನೆ. ಸರ್ವ ಜಗದಾಧಾರ ಭೂತನಾದ ಸೂತ್ರನಾಮಕ ಪ್ರಾಣನಲ್ಲಿ ಪ್ರಾಣ ಶಬ್ದ ವಾಚ್ಯನಾಗಿ ಮಹಾವಿಷ್ಣುವೇ ನಿಂತುಕೊಂಡು ಸರ್ವವ್ಯಾಪಾರವನ್ನು ಮಾಡಿಸುತ್ತಾನೆ. ಸರ್ವಜೀವರಲ್ಲಿಯೂ ನಿಯಾಮಕನಾಗಿದ್ದು ಸೂತ್ರನಾಮಕನಾದ ಈ ಪ್ರಾಣನು ಎಲ್ಲ ಜೀವರಿಗಿಂತ ಉಳಿದ ಎಲ್ಲ ದೇವತೆಗಳಿಗಿಂತ ಶ್ರೇಷ್ಠನಾಗಿದ್ದಾನೆ.

**ಕಿರಾತ:-** ಪೂಜ್ಯರೇ, ಎಲ್ಲ ಜೀವರಾಶಿಯಲ್ಲಿ ಸೂತ್ರಾತ್ಮಕನಾದ ಪ್ರಾಣನು ಸರ್ವ ಶ್ರೇಷ್ಠನು ಹೇಗೆ?

**ಶಂಖಮುನಿ:-** ಕಿರಾತನೇ ಕೇಳು, ಪೂರ್ವಕಾಲಲ್ಲಿ ಭಗವಾನ್ ಶ್ರೀ ನಾರಾಯಣನು ಬ್ರಹ್ಮಾದಿದೇವತೆಗಳನ್ನು ಸೃಷ್ಟಿಮಾಡಿ ಹೇಳಿದನು- "ದೇವತೆಗಳೇ, ನಾನು ನಿಮ್ಮೆಲ್ಲ ಸುರಸಮೂಹದ ಸಾರ್ವಭೌಮ ಪಟ್ಟದಲ್ಲಿ ಬ್ರಹ್ಮದೇವನನ್ನು ಸ್ಥಾಪನೆ ಮಾಡಿದ್ದೇನೆ. ಈ ಎಲ್ಲ ದೇವತಾ ಗಣಕ್ಕೆ ಈ ಬ್ರಹ್ಮದೇವನೇ ಅಧಿಪತಿ, ಸಾರ್ವಭೌಮ. ಈ ನಿಮ್ಮ ದೇವಗಣದಲ್ಲಿ ಎಲ್ಲರಿಗಿಂತ ಅಧಿಕ ಶಕ್ತಿ ಶಾಲಿಯಾದ ಒಬ್ಬ ದೇವತೆಯನ್ನು ಯುವರಾಜ ಪದದಲ್ಲಿ ಪ್ರತಿಷ್ಠೆಗೊಳಿಸಿರಿ."

ಮಹಾವಿಷ್ಣುವಿನ ಈ ಹೇಳಿಕೆಯನ್ನು ಕೇಳಿ ಇಂದ್ರಾದಿ ಇಂದ್ರಿಯಾಭಿಮಾನಿ ದೇವತೆಗಳು "ನಾನು ಯುವರಾಜನಾಗುತ್ತೇನೆ. ನಾನು ಯುವರಾಜನಾಗುತ್ತೇನೆ" ಎಂದು ವಿವಾದದಲ್ಲಿ ತೊಡಗಿದರು. ಕೊನೆಗೆ ಅವರಲ್ಲಿ ಯಾರು ಶ್ರೇಷ್ಠ ಎಂಬುದರ ನಿರ್ಣಯವಾಗದೇ ಸಾಕ್ಷಾತ್ ವಿಷ್ಣುವಿನ ಬಳಿಗೆ ಹೋಗಿ ಕೈಮುಗಿದು "ಭಗವನ್, ನಮ್ಮಲ್ಲಿ ಸರ್ವಶ್ರೇಷ್ಠರೂ ಬಲ ಜ್ಯೇಷ್ಠರೂ ಯಾರು! ನಮಗಂತೂ ನಿರ್ಣಯಮಾಡಲಾಗಲಿಲ್ಲ. ನೀನೇ ನಿರ್ಣಯವನ್ನು ಮಾಡು" ಎಂದು ಹೇಳಿದರು.

ಆಗ ಮಹಾವಿಷ್ಣು ನಗುತ್ತ ನುಡಿದನು, ''ಈ ವಿರಾಟ್‌ರೂಪಿಯಾದ ಬ್ರಹ್ಮದೇವರ ಶರೀರವು ಯಾರು ಹೊರಟುಹೋದರೆ ಕೆಳಗೆ ಬೀಳುವದೋ ಮತ್ತು ಯಾರು ಒಳಗೆ ಪ್ರವೇಶ ಮಾಡುವದರಿಂದ ಜೀವಂತವಾಗಿ ಎದ್ದು ನಿಲ್ಲುವದೋ ಅವನೇ ಸರ್ವದೇವತೆಗಳಲ್ಲೂ ಶ್ರೇಷ್ಠನಾದ ಸುರೋತ್ತಮ. ಆದುದರಿಂದ ನೀವು ಈ ಬ್ರಹ್ಮ ಶರೀರದ ನಿಮ್ಮ ನಿಮ್ಮ ವಾಸಸ್ಥಳದಿಂದ ಬಿಟ್ಟು ಹೋಗಿರಿ.''

## ದೇವತೆಗಳ ಪರಿಚಯ

ಮಹಾನ್ ವಿಷ್ಣುವು ಹೀಗೆ ಹೇಳಿದ ಬಳಿಕ ಎಲ್ಲ ದೇವತೆಗಳು ''ಹಾಗೆಯೇ ಆಗಲಿ'' ಎಂದು ಸಮ್ಮತಿಸಿದರು. ಅದರಂತೆ ಮೊಟ್ಟ ಮೊದಲು ದೇವತೆಗಳಲ್ಲಿಯ ಜಯಂತನು ಬ್ರಹ್ಮದೇವರ ಆ ವಿರಾಟ್ ಶರೀರದ ಪಾದದಿಂದ ಹೊರಬಿದ್ದನು. ಈ ಪಾದಾಭಿಮಾನಿ ಜಯಂತನ ನಿರ್ಗಮನದಿಂದ ಆ ದೇಹದ ಪಾದವು ಬಿದ್ದು ಹೋಯಿತು. ಅದರಿಂದ ಆ ಕಾಯವು ಕುಂಟವಾಯಿತು. ಆದರೆ ದೇಹವು ಮಾತ್ರ ಉರುಳಿ ಬೀಳದೇ ಸುರಕ್ಷಿತ ವಾಗಿಯೇ ಇತ್ತು. ಕಾಲು ಇಲ್ಲದ್ದರಿಂದ ಆ ಬ್ರಹ್ಮಶರೀರಕ್ಕೆ ನಡೆದಾಡಲು ಬಾರದಿದ್ದರೂ, ಪಂಗುವಾಗಿ ಉಳಿದರೂ ತಿನ್ನುವುದು. ಕುಡಿಯುವುದು, ಮಾತನಾಡುವುದು, ವಾಸನೆ ನೋಡುವದು, ಕೇಳುವದು ಮುಂತಾದ ಎಲ್ಲ ಕಾರ್ಯಗಳೂ ಯಥಾವತ್ತಾಗಿ ನಡೆದವು. ಅನಂತರ ಗುಹ್ಯಭಾಗದಿಂದ ದಕ್ಷ ಪ್ರಜಾಪತಿಯು ಹೊರಬಿದ್ದನು. ಆಗ ಜನರು ಅವನಿಗೆ ನಪುಂಸಕ ಎಂದು ಕರೆದರು. ದೇಹಮಾತ್ರ ಸುರಕ್ಷಿತವಾಗಿಯೇ ಇದ್ದಿತು. ಅನಂತರ ಹಸ್ತಾಭಿಮಾನಿ ಇಂದ್ರನು ಹೊರಬಿದ್ದನು. ದೇಹ ಬೀಳಲಿಲ್ಲ. ಕೈ ಇಲ್ಲದೆ ಊನವಾದರೂ ಉಳಿದ ವ್ಯಾಪಾರಗಳೆಲ್ಲವೂ ಮೊದಲಿನಂತೆ ಸಾಗಿದವು. ಕಣ್ಣಿನಿಂದ ಸೂರ್ಯನು ಹೊರಬಿದ್ದು ಬಂದ, ಆಗ ಕುರುಡತನ ಬಂದರೂ ಶರೀರಪಾತವಾಗಲಿಲ್ಲ. ಇದರಂತೆಯೇ ಮೂಗಿನಿಂದ ಅಶ್ವಿನೀ ಕುಮಾರರು, ಕಿವಿಯಿಂದ ದಿಗಭಿಮಾನಿ ದೇವತೆಗಳು, ನಾಲಿಗೆಯಿಂದ ವರುಣ, ವಾಗಿಂದ್ರಿಯದಿಂದ ಅಗ್ನಿದೇವ, ಅಂತಃಕರಣದಿಂದ ರುದ್ರದೇವ, ಹೊರಟು ಹೋದರು. ಆದರೆ ಇದಾವುದರಿಂದಲೂ ದೇಹಪಾತವು ಆಗಲಿಲ್ಲ. ಈ ಒಂದೊಂದು ಇಂದ್ರಿಯಗಳು ಆ ಆ ಅಭಿಮಾನಿ ದೇವತೆಗಳ ನಿರ್ಗಮನದಿಂದ ಬಿದ್ದು ಹೋದರೂ ದೇಹಪಾತವಾಗದೆಂದೇ ಶರೀರದ ಉಳಿದೆಲ್ಲ ದೈಹಿಕ ಕಾರ್ಯಗಳು ಯಥಾಪ್ರಕಾರ ನಡೆಯುವವು. ಕ್ರಮವಾಗಿ ಮೂಗಿನ ದೇವತೆ ಹೋದಾಗ ಗಂಧಜ್ಞಾನವಿಲ್ಲದವ, ಕಿವಿಯ ದೇವತೆ ಹೋದಾಗ ಕಿವುಡು, ನಾಲಿಗೆಯ ದೇವತೆ ಹೋದಾಗ ರಸಜ್ಞಾನವಿಲ್ಲದವ, ವಾಗಿಂದ್ರಿಯ ದೇವತೆ ಹೋದಾಗ ಮೂಕ, ಮನೋಭಿಮಾನಿ ರುದ್ರ ಹೋದಾಗ ಜಡ ಎಂದು ಆ ಬ್ರಹ್ಮಶರೀರವಾದ ದೇಹವು ಕರೆಯಲ್ಪಟ್ಟಿತು. ಆದರೆ ದೇಹದ ಪತನವು ಮಾತ್ರ ಯಾರು ಬಿಟ್ಟು ಹೋದರೂ ಆಗಲಿಲ್ಲ. ಕೊನೆಗೆ ಆ ಬ್ರಹ್ಮಶರೀರದಿಂದ ಪ್ರಾಣನು ಹೊರಟು ಹೋದನು. ಉಳಿದ ತತ್ವಾಭಿಮಾನಿ ದೇವತೆಗಳೆಲ್ಲರೂ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತಿದ್ದರು. ಪ್ರಾಣನು ನಿರ್ಗಮಿಸಿದ ಕೂಡಲೇ ಬ್ರಹ್ಮಶರೀರವು ಬಿದ್ದುಹೋಯಿತು. ಎಲ್ಲ ಇಂದ್ರಿಯ ವ್ಯಾಪಾರ ಗಳೂ ನಿಂತು ಹೋದವು. ಆಗ ಆ ದೇಹಕ್ಕೆ ಎಲ್ಲರೂ ''ಸತ್ತು ಹೋಯಿತು. ಮರಣ ಹೊಂದಿತು'' ಎಂದು ಕರೆದರು. ಅದನ್ನು ಕಂಡು ದೇವತೆಗಳಿಗೆಲ್ಲ ಆಶ್ಚರ್ಯವಾಯಿತು. ಆಗ ಅವರು ತಮ್ಮ ತಮ್ಮಲ್ಲಿ

ಮಾತನಾಡಿದರು- ''ನಾವೆಲ್ಲರೂ ಈಗ ಒಬ್ಬೊಬ್ಬರಾಗಿ ಈ ದೇಹದಲ್ಲಿ ಪ್ರವೇಶ ಮಾಡೋಣ. ಯಾರ ಪ್ರವೇಶ ಮಾತ್ರದಿಂದ ಈ ದೇಹವು ಎದ್ದು ನಿಲ್ಲುವುದೋ ಅವನೇ ಸುರಶ್ರೇಷ್ಠ ಎಂದು ನಿರ್ಣಯ. ಈ ಬ್ರಹ್ಮ ಶರೀರದ ಪುನರುತ್ಥಾನ ಅಥವಾ ಪುನರ್ಜೀವನಕ್ಕೆ ಕಾರಣನಾದವನಿಗೆ ಯುವರಾಜ ಪಟ್ಟ !'' ಎಂದು.

ಹೀಗೆ ಮಾತನಾಡಿ ಒಬ್ಬೊಬ್ಬರಾಗಿ ದೇವತೆಗಳು ಸತ್ತು ಬಿದ್ದ ಆ ಬ್ರಹ್ಮ ಶರೀರದಲ್ಲಿ ಪ್ರವೇಶ ಮಾಡತೊಡಗಿದರು. ಕಾಲುಗಳಲ್ಲಿ ಮೊದಲು ಜಯಂತನು ಪ್ರವೇಶಮಾಡಿದ. ಆದರೆ ದೇಹವು ಏಳಲಿಲ್ಲ. ಹಾಗೆಯೇ ಬಿದ್ದುಕೊಂಡಿತ್ತು. ಅನಂತರ ದಕ್ಷಪ್ರಜಾಪತಿಯು ನಿರ್ಜೀವವಾದ ಆ ಬ್ರಹ್ಮ ದೇಹದ ಗುಹ್ಯೇಂದ್ರಿಯವನ್ನು ಪ್ರವೇಶಮಾಡಿದ. ಆದರೂ ಆ ಚತುರ್ಮುಖನ ದೇಹವು ಏಳಲಿಲ್ಲ. ಇದರಂತೆ ಕೈಗಳಲ್ಲಿ ಇಂದ್ರ, ಕಣ್ಣುಗಳಲ್ಲಿ ಸೂರ್ಯ, ಕಿವಿಯಲ್ಲಿ ದಿಗಭಿಮಾನಿ ದೇವತೆಗಳು, ನಾಲಿಗೆಯಲ್ಲಿ ವರುಣ, ಮೂಗಿನಲ್ಲಿ ಅಶ್ವಿನೀ ಕುಮಾರರು, ವಾಗಿಂದ್ರಿಯದಲ್ಲಿ ಅಗ್ನಿದೇವ, ಅಂತಃಕರಣದಲ್ಲಿ ರುದ್ರಪ್ರವೇಶ ಮಾಡಿದ. ಆದರೂ ದೇಹವು ಏಳಲಿಲ್ಲ. ಜೀವಂತವಾಗಲಿಲ್ಲ. ಪ್ರಾಣ ಒಬ್ಬನನ್ನು ಬಿಟ್ಟು ಉಳಿದೆಲ್ಲ ದೇವತೆಗಳು ಆ ಬ್ರಹ್ಮಶರೀರದಲ್ಲಿ ಇದ್ದರೂ ಅವರಾರಿಗೂ ತಮ್ಮ ಬಲಪ್ರಭಾವ ದಿಂದ ಆ ದೇಹವನ್ನು ಪುನರುಜ್ಜೀವನಗೊಳಿಸಿ ಎದ್ದು ನಿಲ್ಲಿಸಲು ಆಗಲಿಲ್ಲ. ಆಗ ಕೊನೆಗೆ ಪ್ರಾಣನು ಆ ಚತುರ್ಮುಖ ದೇಹದಲ್ಲಿ ಪ್ರವೇಶ ಮಾಡಿದನು. ಕೂಡಲೇ ಆ ಬ್ರಹ್ಮದೇವರ ಆ ವಿರಾಟ್‌ದೇಹವು ಅತ್ಯಾಶ್ಚರ್ಯಕರ ರೀತಿಯಲ್ಲಿ ಎದ್ದು ನಿಂತಿತು. ಆಗ ಎಲ್ಲ ದೇವತೆಗಳು ಪ್ರಾಣನೇ ಸರ್ವ ಜೀವೋತ್ತಮ ಹಾಗೂ ಎಲ್ಲ ದೇವತೆಗಳಿಗಿಂತ ಪ್ರಾಣನೇ ಬಲಜ್ಞಾನಗಳಲ್ಲಿ ಉತ್ತಮ. ಹಾಗೂ ಎಲ್ಲ ದೇವೋತ್ತಮ, ಸರ್ವಶ್ರೇಷ್ಠ ದೇವತೆ, ಎಂದು ನಿರ್ಧರಿಸಿದರು. ಬಲ, ಜ್ಞಾನ, ಧೈರ್ಯ, ವೈರಾಗ್ಯ, ಜೀವನ ಶಕ್ತಿ ಮುಂತಾದ ಸದ್ಗುಣಗಳಲ್ಲಿ ಈ ಪ್ರಾಣನೇ ಎಲ್ಲರಿಗಿಂತ ಮಿಗಿಲು ಎಂದು ನಿರ್ಧರಿಸಿ, ಅವನನ್ನೇ ಯುವರಾಜ ಪದದಲ್ಲಿ ಪಟ್ಟಾಭಿಷೇಕ ಮಾಡಿದರು. ಈ ಉತ್ಕೃಷ್ಟವಾದ ಸ್ಥಾನದ ಕಾರಣದಿಂದ ಪ್ರಾಣನಿಗೆ ಅಂದಿನಿಂದ ಉಕ್ಥ ಎಂದು ಹೆಸರು ಬಂದಿತು.

ಈ ಚರಾಚರಾತ್ಮಕವಾದ ಸಮಸ್ತ ಪ್ರಪಂಚವೆಲ್ಲವೂ ಉಕ್ಥನಾಮಕ ಪ್ರಾಣನಿಂದಲೇ ನಿಯಂತ್ರಿತವಾಗಿದೆ. ಆದುದರಿಂದ ಎಲ್ಲ ಜೀವರಲ್ಲಿ ಪ್ರಾಣನು ಸರ್ವಶ್ರೇಷ್ಠ. ಸರ್ವಾಂತರ್ಯಾಮಿ, ಸರ್ವಾಧಿಕ ಬಲಶಾಲಿ ಎಂದು ಸಿದ್ಧವಾಯಿತು. ಆದುದರಿಂದ ಪ್ರಾಣೋಪಾಸಕರು ಈ ಪ್ರಾಣದೇವನೇ ಸರ್ವಶ್ರೇಷ್ಠ ಎಂದು ಹೇಳುವದು ಯಥಾರ್ಥವೇ ಆಗಿದೆ. ಈ ಪ್ರಾಣನು ಶ್ರೀವಾಸುದೇವನ ಅನುಯಾಯಿ. ಅವನನ್ನು ಆಧರಿಸಿಕೊಂಡೇ ಇರುತ್ತಾನೆ. ಈ ಎಲ್ಲ ಹರಿವಾಯುಗಳ ಮಾಹಾತ್ಮ್ಯ ಹಾಗೂ ಲಕ್ಷಣಗಳನ್ನು ಚೆನ್ನಾಗಿ ತಿಳಿದುಕೊಂಡು ಜ್ಞಾನಿಗಳಾದವರು ಆ ಮಹಾವಿಷ್ಣುವನ್ನು ಆರಾಧನೆ ಮಾಡಿ ಅವನ ಪ್ರಸಾದವನ್ನು ಪಡೆದು ತಮ್ಮ ಅಜ್ಞಾನಮಯವಾದ ಲಿಂಗ ಶರೀರವನ್ನು ಕಳಚಿ ಬಿಡುತ್ತಾರೆ. ಹಾವು ತನ್ನ ಪೊರೆಯನ್ನು ತೊರೆಯುವಂತೆ ಯೋಗ್ಯ ಅಧಿಕಾರಿಗಳು ಸಾಧನ ಸಂಪನ್ನರು ತಮ್ಮ ಅನಾದಿಯಾದ ಲಿಂಗದೇಹವನ್ನು ತ್ಯಜಿಸಿ ಸರ್ವಸ್ವಾಮಿಯಾದ ಶ್ರೀಮನ್ ನಾರಾಯಣನನ್ನು ಹೊಂದುವರು.

**ಕಿರಾತ:-** ಪ್ರಾಣನು ಇಷ್ಟು ಪ್ರಭಾವಶಾಲಿ ಹಾಗೂ ಜಗದ್ಗುರು ಮತ್ತು ಮಹತೋ ಮಹಿಷ್ಠನಿದ್ದರೆ ಅವನ ಪ್ರಸಿದ್ಧಿ ಅರ್ಥಾತ್ ಅವನ ಮಹಿಮೆಯ ಖ್ಯಾತಿಯು ಲೋಕದಲ್ಲಿ ಏಕೆ ಪ್ರಚುರವಾಗಿ ಪ್ರಸಾರವಾಗಿಲ್ಲ ?

**ಶಂಖ:-** ಇದು ಬಹಳ ಹಿಂದಿನ ಕಾಲದ ಘಟನೆ. ಪ್ರಾಣನಾಮಕನಾದ ವಾಯುದೇವನು ಒಮ್ಮೆ ಅಶ್ವಮೇಧ ಯಜ್ಞಮಾಡಿ ಭಗವಾನ್ ನಾರಾಯಣನನ್ನು ಮೆಚ್ಚಿಸಬೇಕು ಎಂದು ಸಂಕಲ್ಪಿಸಿ ಪ್ರಸನ್ನತೆಯಿಂದ ಗಂಗಾ ತಟಾಕಕ್ಕೆ ಹೋದನು. ಅಲ್ಲಿ ಅನೇಕ ಮುನಿಮಹರ್ಷಿಗಳು ನೆರದಿದ್ದರು ಗಂಗಾಸ್ನಾನಕ್ಕಾಗಿ. ಪ್ರಾಣದೇವನು ಅವರೆಲ್ಲ ಋಷಿಮುನಿಗಳೊಂದಿಗೆ ಯಜ್ಞಭೂಮಿಯನ್ನು ಶೋಧಿಸಲು ಉಪಕ್ರಮಿಸಿದನು. ಆಗ ಆ ಗಂಗೆಯ ತಡಿಯಲ್ಲಿ ಮಹಾತ್ಮರಾದ ಕಣ್ವಮುನಿಗಳು ಭೂಗರ್ಭದಲ್ಲಿ ತಪಸ್ಸಮಾಧಿಗೆ ಕುಳಿತಿದ್ದರು. ಅವರ ಮೇಲೆ ಹಾವಿನ ಹುತ್ತವು ಬೆಳೆದಿದ್ದಿತು. ಪ್ರಾಣದೇವನು ಮುನಿಗಳೊಂದಿಗೆ ಯಜ್ಞಭೂಮಿಯನ್ನು ನೇಗಿಲದಿಂದ ಹರಗುವಾಗ ಕಣ್ವಮುನಿಯ ತಪಸ್ಸಿಗೆ ಕುಳಿತ ಹುತ್ತವು ಕತ್ತರಿಸಿ ಬಿದ್ದಿತು. ಅದರಲ್ಲಿ ಕುಳಿತ ಕಣ್ವಮುನಿಯ ತಪೋಭಂಗವಾಯಿತು. ಅದರಿಂದ ಕುಪಿತನಾದ ಆ ಮಹರ್ಷಿಯು ಆ ಸ್ಥಾನದಿಂದ ಎದ್ದು ಬಂದು ಪ್ರಾಣನಿಗೆ ಶಾಪಕೊಟ್ಟನು:- ''ದೇವೇಶ್ವರ, ಇಂದಿನಿಂದ ಮೂರು ಲೋಕಗಳಲ್ಲಿ ವಿಶೇಷವಾಗಿ ಭೂಲೋಕದಲ್ಲಿ ನಿನ್ನ ಮಹಿಮೆಯು ಪ್ರಸಿದ್ಧವಾಗಬೇಡ. ನಿನ್ನ ಅವತಾರವು ಮಾತ್ರ ಎಲ್ಲ ಕಡೆಗೂ ಪ್ರಖ್ಯಾತಿಯನ್ನು ಹೊಂದಲಿ.''

ಬೇಡನೇ! ಅಂದಿನಿಂದ ಈ ಪ್ರಪಂಚದಲ್ಲಿ ದೇವೋತ್ತಮನಾದ ಪ್ರಾಣದೇವನ ಅರ್ಥಾತ್ ವಾಯುದೇವನ ಮಹಿಮೆಯು ಹೆಚ್ಚಾಗಿ ಪ್ರಸಾರವನ್ನೂ ಪ್ರಸಿದ್ಧಿಯನ್ನೂ ಹೊಂದಲಿಲ್ಲ. ಒಂದು ಮಾರ್ಮಿಕ ಪ್ರಶ್ನೆ

**ಕಿರಾತ:-** ವಿಪ್ರೋತ್ತಮರೆ, ಮಹಾವಿಷ್ಣು ಸೃಷ್ಟಿಸಿದ ಸಹಸ್ರಾವಧಿ ಕೋಟ್ಯಾವಧಿ ಜೀವರಾಶಿಗಳಲ್ಲಿ ಅಸಂಖ್ಯ ಜೀವರು ಇರುತ್ತಾರೆ. ಅವರೆಲ್ಲರ ಮಾರ್ಗಗಳೂ ಭಿನ್ನ ಭಿನ್ನ. ಸ್ವಭಾವ ಬೇರೆ ಬೇರೆ. ಅವರು ಮಾಡುವ ಕರ್ಮಗಳೂ ಬೇರೆ ಬೇರೆಯೇ ಆಗಿರುತ್ತವೆ. ಸೃಷ್ಟಿ ಮಾಡಿದವನು ಒಬ್ಬನೇ ದೇವ. ಅವನಿಂದ ಸೃಷ್ಟರಾದ ಪ್ರಾಣಿಗಳಿಗೆಲ್ಲ ಒಂದೇ ತರಹದ ಸ್ವಭಾವ, ಗುಣಧರ್ಮಗಳು ಏಕೆ ಇರುವದಿಲ್ಲ?

**ಶಂಖಮುನಿ:-** ರಜೋಗುಣ, ತಮೋಗುಣ, ಸತ್ವಗುಣ ಎಂದು ಈ ಪ್ರಪಂಚದಲ್ಲಿ ಮೂರು ವಿಧವಾದ ಗುಣಗಳು ಇರುತ್ತವೆ. ಈ ಗುಣಗಳಿಂದ ಮಾನವರಲ್ಲಿಯೂ ಕೂಡ ರಾಜಸ, ತಾಮಸ, ಸಾತ್ವಿಕ, ಎಂದು ಮೂರು ಪ್ರಭೇದಗಳು ಆಗಿರುತ್ತವೆ. ಇವರಲ್ಲಿ ರಾಜಸ ಸ್ವಭಾವವುಳ್ಳ ಜೀವರು ರಾಜಸ ಕರ್ಮವನ್ನು ಮಾಡುತ್ತಾರೆ. ತಮೋಗುಣವುಳ್ಳ ತಾಮಸೀ ಜೀವರು ತಾಮಸ ಕರ್ಮಗಳನ್ನು ಮಾಡುತ್ತಾರೆ. ಸತ್ವಗುಣವುಳ್ಳ ಸಾತ್ವಿಕ ಸ್ವಭಾವದ ಸಜ್ಜೀವರು ಸಾತ್ವಿಕ ಕರ್ಮವನ್ನು ಮಾಡುತ್ತಾರೆ. ಈ ಗುಣ ಹಾಗೂ ಸ್ವಭಾವಕ್ಕೆ ಅನುಸಾರವಾಗಿ ಆ ಆ ಕರ್ಮಗಳಿಗೆ ಭಿನ್ನ ಭಿನ್ನ ಫಲಗಳು ದೊರಕುತ್ತವೆ. ತಮೋಗುಣಿಯಾದ ಜೀವನು ತಾಮಸ ವೃತ್ತಿಯಿಂದ ಜೀವನವನ್ನು ನಿರ್ವಾಹ ಮಾಡುತ್ತ ಯಾವಾಗಲೂ ದುಃಖಸಾಗರದಲ್ಲಿಯೇ ಮುಳುಗಿರುತ್ತಾನೆ. ಈ ತಾಮಸೀ ಜೀವರಲ್ಲಿ ದಯೆ, ಮಾಯೆ, ಪ್ರೀತಿ, ಅಂತಃಕರಣ, ವಿಶ್ವಾಸ, ಭಕ್ತಿ ಯಾವ ಸದ್ಗುಣಗಳೂ ಇರುವದಿಲ್ಲ. ಇವರ ಸ್ವಭಾವವೂ ಬಹುಕ್ರೂರ. ಎಲ್ಲರೊಡನೆ ದ್ವೇಷ, ಪರದ್ರೋಹ, ಸ್ವಾರ್ಥ, ಮುಂತಾದ ದುರ್ಗುಣಗಳು ಅವರಲ್ಲಿ ಎದ್ದು ತೋರುತ್ತವೆ. ರಾಕ್ಷಸ, ಪಿಶಾಚ ಮುಂತಾದ ತಮೋಗುಣಿ ದುರ್ಜೀವಗಳು ತಾಮಸೀ ಗತಿಯನ್ನು ಹೊಂದುತ್ತಾರೆ.

ರಾಜಸ ಜನರ ಬುದ್ಧಿಯು ಮಿಶ್ರವಾಗಿರುತ್ತದೆ. ಅವರು ಪುಣ್ಯವನ್ನು ಮಾಡುತ್ತಾರೆ. ಪುಣ್ಯದಿಂದ ಸ್ವರ್ಗವನ್ನೂ ಪಾಪದಿಂದ ನರಕವನ್ನೂ ಪಡೆದು ಸ್ವರ್ಗ ನರಕ ಭೂಲೋಕಗಳಲ್ಲಿ ಸುಖದುಃಖಗಳನ್ನು ಅನುಭವಿಸುತ್ತ ತಿರುಗುತ್ತಲಿರುತ್ತಾರೆ. ಅದರಿಂದ ಇವರು ಮತ್ತೆ ಮತ್ತೆ ಸಂಸಾರಕ್ಕೆ ಬಂದು ತಮ್ಮ ಸ್ವಭಾವಕ್ಕೆ ಅನುಸಾರವಾಗಿ ಸತ್ಕರ್ಮ ದುಷ್ಕರ್ಮಗಳನ್ನು ಮಾಡಿ ಪುನಃ ಸ್ವರ್ಗಕ್ಕೂ ಮತ್ತೆ ನರಕಕ್ಕೂ ಹೋಗಿ ಬಂದು ಮಾಡುತ್ತಲಿರುತ್ತಾರೆ. ಸಾತ್ವಿಕ ಸ್ವಭಾವದ ಮಾನವರು ಧರ್ಮಶೀಲರು. ದಯಾಳುಗಳು. ಶ್ರದ್ಧಾವಂತರು, ಪರೋಪಕಾರಿಗಳು. ಭಗವನ್ನಿಷ್ಠರು ನಿರುಪದ್ರವಿಗಳು, ಯದೃಚ್ಛಾಲಾ ಭತುಷ್ಟರು ಆಗಿರುತ್ತಾರೆ. ಇಂಥವರಿಗೆ ದಿವ್ಯಲೋಕ ಪ್ರಾಪ್ತಿ ನಿಶ್ಚಿತ.

ಆದುದರಿಂದ ಭಿನ್ನ ಭಿನ್ನ ಕರ್ಮಗಳನ್ನು ಮಾಡುವ ಭಿನ್ನ ಭಿನ್ನ ಜೀವರಿಗೆ ಬಗೆ ಬಗೆಯ ಭಾವ ಸ್ವಭಾವಗಳು ಗುಣಕರ್ಮಗಳು ಇರುತ್ತವೆ. ಅದಕ್ಕೆ ಅನುಗುಣವಾಗಿ ಶ್ರೀಹರಿಯು ಅವರ ಕಡೆಯಿಂದ ಕರ್ಮವನ್ನು ಮಾಡಿಸಿ ಫಲವನ್ನು ಕೊಡುತ್ತಾನೆ. ಭಗವಾನ್ ಶ್ರೀವಿಷ್ಣುವು ಪೂರ್ಣಕಾಮ, ಅವನಿಗೆ ಯಾರ ಮೇಲೆಯೂ ದ್ವೇಷವೂ ಇಲ್ಲ. ಯಾರ ಬಗೆಗೆ ಪಕ್ಷಪಾತವೂ ಇಲ್ಲ. ಅವನು ಸಮಾನ ಭಾವದಿಂದಲೇ ಸೃಷ್ಟಿ, ಸ್ಥಿತಿ, ಸಂಹಾರಾದಿಗಳನ್ನು ಮಾಡುತ್ತಾನೆ. ಎಲ್ಲ ಜೀವರು ತಮ್ಮ ತಮ್ಮ ಗುಣ ಕರ್ಮಾನುಸಾರವಾಗಿ ಸುಖದುಃಖಾದಿ ಫಲವನ್ನು ಪಡೆಯುತ್ತಾರೆ. ಒಂದು ಉಪವನದಲ್ಲಿ ಇರುವ ಎಲ್ಲ ವೃಕ್ಷಗಳಿಗೂ ತೋಟದ ಮಾಲಿಯು ಒಂದೇ ಬಾವಿಯಿಂದ ಸಮಾನವಾಗಿಯೇ ನೀರನ್ನು ಹರಿಸುತ್ತಾನೆ. ಒಂದೇ ನೆಲ, ಒಂದೇ ಜಲ, ಒಂದೇ ಸ್ಥಲ, ಒಂದೇ ಹೊಲ, ಒಂದೇ ಬಾವಿ. ಒಬ್ಬನೇ ನೀರು ಹನಿಸುವವ. ಆದರೆ ಬೆಳೆಯುವ ಮರಬಳ್ಳಿಗಳು ಮಾತ್ರ ಭಿನ್ನ ಭಿನ್ನ. ಅವುಗಳಲ್ಲಿ ಅರಳಿದ ಹೂವುಹಣ್ಣು ಕಾಯಿಗಳಿಗೆಲ್ಲ ಭಿನ್ನ ಭಿನ್ನವಾದ ರೂಪ, ರಸ, ಗಂಧ, ರುಚಿ, ರಂಗು. ಆದರಿಂದ ಆ ತೋಟದ ಒಡೆಯನು ಕೆಲವು ಗಿಡಗಳ ಮೇಲೆ ಪಕ್ಷಪಾತ ಮಾಡುತ್ತಾನೆಂದಾಗಲೀ ಕೆಲವು ಗಿಡಗಳ ಮೇಲೆ ನಿರ್ದಯಿ ಆಗಿದ್ದಾನೆಂದಾಗಲೀ ಅಪವಾದವನ್ನು ಕೊಡಲು ಬರುವದಿಲ್ಲ. ಇದೇ ರೀತಿಯಾಗಿ ವಿಷ್ಣುವು ಸೃಷ್ಟಿ ಮಾಡುವವನು ಒಬ್ಬನೇ. ಆದರೂ ಅವರವರ ಗುಣಕರ್ಮ ಸ್ವಭಾವಗಳಿಗೆ ಅನುಸಾರವಾಗಿ ಫಲವನ್ನು ಮಾನವರು ಪಡೆಯುತ್ತಾರೆ. ಇದರಲ್ಲಿ ಪರಮಾತ್ಮನಿಗೆ ವೈಷಮ್ಯ, ನಿರ್ದಯತೆ, ಪಕ್ಷಪಾತ ಸ್ವಾರ್ಥ ಮುಂತಾದ ದೋಷಗಳು ಬರಲು ಪ್ರಸಕ್ತಿಯೇ ಇರುವದಿಲ್ಲ.

ದೇವಾಧಿದೇವನಾದ ವಿಷ್ಣುವಿನ ಒಂದು ನಿಮಿಷವು ಬ್ರಹ್ಮದೇವರ ಒಂದು ಕಲ್ಪಕ್ಕೆ ಸಮಾನವೆಂದು ತಿಳಿಯಲ್ಪಡುತ್ತದೆ. ಬ್ರಹ್ಮಕಲ್ಪದ ಕೊನೆಯಲ್ಲಿ ಶ್ರೀವಿಷ್ಣುವಿನ ನೇತ್ರ ಉನ್ಮೇಷವಾಗುತ್ತದೆ. ಎಂದರೆ ಶ್ರೀಹರಿಯು ಕಣ್ಣುತೆರೆದು ನೋಡುತ್ತಾನೆ. ಶ್ರೀಹರಿಯ ಔಪಚಾರಿಕವಾದ ಒಂದು ನಿಮಿಷ ಇರುವವರೆಗೆ ಪ್ರಳಯಕಾಲವಿರುತ್ತದೆ. ನಿಮೇಷದ ಅಂತಿಮ ಭಾಗದಲ್ಲಿ ಭಗವಾನ್ ವಿಷ್ಣುವು ತನ್ನ ಉದರದಲ್ಲಿ ಇರುವ ಎಲ್ಲ ಲೋಕಗಳನ್ನೂ ಸೃಷ್ಟಿಮಾಡಬೇಕು ಎಂದು ಇಚ್ಛೆಯನ್ನು ಮಾಡುತ್ತಾನೆ. ಸೃಷ್ಟಿಸಬೇಕು ಎಂಬ ಇಚ್ಛೆಯು ಹುಟ್ಟಿದ ಬಳಿಕ ಭಗವಂತನು ತನ್ನ ಉದರದಲ್ಲಿ ಇದ್ದ ಅನೇಕ ಪ್ರಕಾರದ ಜೀವ ಸಮೂಹಗಳನ್ನು ನೋಡುತ್ತಾನೆ. ಅವನ ಕುಕ್ಷಿಯಲ್ಲಿ ಯಾವ ಜೀವವು ಯಾವ ರೂಪದಲ್ಲಿ ಎಲ್ಲಿ ಇರುತ್ತದೆ ಎಂಬುದರ ಅರಿವು ಆ ಪರಮಾತ್ಮನಿಗೆ ಪೂರ್ಣವಾಗಿ ಇರುತ್ತದೆ.

## ಚತುರ್ಮೂರ್ತಿ-ಚತುರ್ವ್ಯೂಹ

ಭಗವಾನ್ ವಿಷ್ಣುವು ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ ವಾಸುದೇವ ಎಂದು ಚತುರ್ವ್ಯೂಹ ಸ್ವರೂಪನಾಗಿದ್ದಾನೆ. ಉನ್ಮೇಷಕಾಲದ ಪ್ರಥಮ ಭಾಗದಲ್ಲಿಯೇ ಈ ಅನಿರುದ್ಧಾದಿ ಚತುರ್ವ್ಯೂಹ ರೂಪದಿಂದ ಪ್ರಕಟನಾಗುತ್ತಾನೆ. ಈ ವ್ಯೂಹಗಾಮಿಯಾದ ವಾಸುದೇವ ಸ್ವರೂಪದಿಂದಲೇ ತನ್ನ ಭಕ್ತರಾದ ಮಹಾತ್ಮರಲ್ಲಿಯ ಕೆಲವರಿಗೆ ಸಾಯುಜ್ಯ ಮೋಕ್ಷ ಸಾಧಕವಾದ ತತ್ವಜ್ಞಾನವನ್ನು, ಹಲವರಿಗೆ ಸಾರೂಪ್ಯ ಪ್ರಾಪಕವಾದ ತತ್ವಜ್ಞಾನವನ್ನೂ ಮತ್ತೆ ಕೆಲವರಿಗೆ ಸಾಮೀಪ್ಯ ಗಮಕವಾದ ತತ್ವಜ್ಞಾನವನ್ನೂ ಮತ್ತಿತರರಿಗೆ ಸಾಲೋಕ್ಯದ ಉಪಧಾಯಕವಾದ ತತ್ವಜ್ಞಾನವನ್ನು ನೀಡುತ್ತಾನೆ. ಮತ್ತು ತನ್ನದೇ ಅಭಿನ್ನ ಸ್ವರೂಪವಾದ ಅನಿರುದ್ಧ ಮೂರ್ತಿಯ ವಶದಲ್ಲಿ ಇರುವ ಎಲ್ಲ ಲೋಕಗಳನ್ನೂ ನೋಡುತ್ತಾನೆ. ನೋಡಿ ಅವರನ್ನು ಪ್ರದ್ಯುಮ್ನ ಮೂರ್ತಿಯ ವಶದಲ್ಲಿ ಕೊಡುತ್ತಾನೆ ಹಾಗೂ ಹೊಸ ಸೃಷ್ಟಿಯನ್ನು ಮಾಡುವ ಸಂಕಲ್ಪವನ್ನು ಮಾಡುತ್ತಾನೆ. ಭಗವಾನ್ ಶ್ರೀಹರಿಯು ಗುಣಪರಿಪೂರ್ಣವಾದ ತನ್ನ ವಾಸುದೇವಾದಿ ಚತುರ್ವ್ಯೂಹಗಳ ದ್ವಾರಾ ಮಾಯಾ, ಜಯಾ, ಕೃತಿ ಮತ್ತು ಶಾಂತಿ ಎಂಬ ನಾಲ್ಕು ಲಕ್ಷ್ಮೀ ಸ್ವರೂಪಿಯರಾದ ಮಹಿಳಾಮಣಿಯರನ್ನು ಸ್ವೀಕಾರ ಮಾಡುತ್ತಾನೆ. ಈ ತನ್ನ ನಾಲ್ಕು ಪ್ರೇಯಸಿಯರಿಂದ ಒಡಗೂಡಿಕೊಂಡು ಚತುರ್ವ್ಯೂಹಾತ್ಮಕನಾದ ಮಹಾವಿಷ್ಣುವು ಸ್ವಯಂ ಪೂರ್ಣಕಾಮ ನಾದರೂ ಭಿನ್ನ ಭಿನ್ನವಾದ ಕರ್ಮ ಹಾಗೂ ವಾಸನೆವುಳ್ಳ ಜನರನ್ನು ಸೃಷ್ಟಿಮಾಡುತ್ತಾನೆ.

ಉನ್ಮೇಷ ಕಾಲವು ಮುಗಿದ ಬಳಿಕ ಭಗವಾನ್ ಶ್ರೀಹರಿಯು ಮತ್ತೆ ತನ್ನ ಯೋಗ ಮಾಯೆಯನ್ನು ಆಶ್ರಯಿಸಿ ವ್ಯೂಹಗಾಮಿಯಾದ ಸಂಕರ್ಷಣ ಸ್ವರೂಪದಿಂದ ಈ ಚರಾಚರ ಪ್ರಪಂಚವನ್ನೆಲ್ಲ ಸಂಹಾರ ಮಾಡುತ್ತಾನೆ. ಈ ರೀತಿಯಾಗಿ ಚತುರ್ಮೂರ್ತಿಯಾದ ದೇವತಾ ಸಾರ್ವಭೌಮನಾದ ಶ್ರೀಮಹಾವಿಷ್ಣುವಿನ ಸೃಷ್ಟ್ಯಾದಿ ವ್ಯಾಪಾರವು ಅಚಿಂತ್ಯಾದ್ಭುತ ವಾಗಿದೆ. ಬ್ರಹ್ಮದೇವರೇ ಮೊದಲಾದ ದೇವತಾಧುರೀಣರಿಗೂ ವಶಿಷ್ಠ ವಾಮದೇವಾದಿ ಯೋಗೀಶ್ವರರಿಗೂ ತಿಳಿಯಲು ಅಶಕ್ಯವಾಗಿರುತ್ತದೆ.

**ವ್ಯಾಧ:-** ಮಹಾಮುನಿಗಳೇ, ಭಾಗವತ ಧರ್ಮಗಳು ಎಂದರೆ ಯಾವವು? ಭಗವಾನ್ ಶ್ರೀವಿಷ್ಣು ಪ್ರಸನ್ನನಾಗುವ ಬಗೆ ಯಾವುದು?

**ಶಂಖಮುನಿ:-** ಯಾವುದರಿಂದ ಮಾನವನ ಅಂತಃಕರಣವು ಪರಿಶುದ್ಧವಾಗುವದೋ ಸಾಧು ಸಜ್ಜನರಿಗೆ ಉಪಕಾರವಾಗುವದೋ ಅದೇ ಸಾತ್ವಿಕ ಧರ್ಮ. ಸಜ್ಜನರ ಸೇವೆ, ಪರನಿಂದಾವರ್ಜನೆ ಇವು ಸಾತ್ವಿಕಧರ್ಮದ ಮುಖ್ಯ ಲಕ್ಷಣಗಳಾಗಿವೆ. ಯಾವ ಜೀವರು ಪರರಿಗೆ ಉಪಕಾರವನ್ನು ಮಾಡುತ್ತಾ ಶಾಸ್ತ್ರೋಕ್ತ ಆಚರಣವನ್ನು ದಿನವೂ ಬಿಡದೇ, ಇನ್ನೊಬ್ಬರ ನಿಂದೆಯನ್ನು ಎಂದಿಗೂ ಮಾಡದೇ ಭಗವಂತನ ನಿರಂತರ ಧ್ಯಾನವನ್ನು ಮಾಡುವರೋ ಅವರು ಪರಮಸಾತ್ವಿಕರು ಎನಿಸುತ್ತಾರೆ. ವೇದ, ಶಾಸ್ತ್ರ, ಸ್ಮೃತಿ, ಧರ್ಮ ಶಾಸ್ತ್ರಗಳಲ್ಲಿ ಹೇಳಿದ ವಿಧಿ ವಿಧಾನಗಳನ್ನು ನಿಷ್ಕಾಮ ಭಾವನೆಯಿಂದ ಭಗವದೈಕನಿಷ್ಠೆ ಯಿಂದ ಆಚರಿಸಿದರೆ ಅದು ಸಾತ್ವಿಕ ಧರ್ಮ ಎನಿಸುತ್ತದೆ. ವರ್ಣ ಮತ್ತು ಆಶ್ರಮದ ವಿಭಾಗಕ್ಕೆ ಅನುಸಾರವಾಗಿ ನಾಕು ನಾಕು ಪ್ರಕಾರದ ಧರ್ಮಗಳಿರುತ್ತವೆ. ಅವೂ ಕೂಡ ನಿತ್ಯ ನೈಮಿತ್ತಿಕ, ಕಾಮ್ಯವೆಂದು ಮೂರು ಪ್ರಕಾರದ್ದು ಇರುತ್ತವೆ. ಎಲ್ಲರೂ ತಮ್ಮ ತಮ್ಮ ವರ್ಣ

ಆಶ್ರಮ ಧರ್ಮಗಳನ್ನು ಭಗವಾನ್ ಶ್ರೀವಿಷ್ಣುವಿಗೆ ಸಮರ್ಪಣ ಮಾಡಿದರೆ ಅದು ಸಾತ್ವಿಕ ಧರ್ಮ ಎನಿಸುತ್ತದೆ. ಈ ಸಾತ್ವಿಕ ಧರ್ಮವೇ ಪರಮ ಮಂಗಳಮಯವಾದ ಭಾಗವತ ಧರ್ಮ ಎಂದು ಕರೆಯಲ್ಪಡುತ್ತದೆ.

ಬೇರೆಬೇರೆ ದೇವತೆಗಳ ಪ್ರೀತಿಗಾಗಿ ಒಂದೊಂದು ವಿಶಿಷ್ಟ ಕಾಮನೆಯ ಉದ್ದೇಶದಿಂದ ಮಾಡುವ ಧರ್ಮವು ರಾಜಸಧರ್ಮ ಎಂದು ಕರೆಯಲ್ಪಡುತ್ತದೆ. ಯಕ್ಷ, ರಾಕ್ಷಸ, ಪಿಶಾಚ ಮೊದಲಾದವುಗಳ ಉದ್ದೇಶದಿಂದ ಮಾಡಲ್ಪಡುವ ಹಿಂಸಾಪ್ರಧಾನವಾದ ಲೋಕನಿಷ್ಠುರವಾದ ನಿಂದ್ಯಕರ್ಮಗಳನ್ನು ತಾಮಸಧರ್ಮ ಎಂದು ಕರೆಯುತ್ತಾರೆ.

## ಭಾಗವತನ ಲಕ್ಷಣ

ಯಾವನು ಸತ್ವ ಗುಣವನ್ನು ಬೆಳೆಸಿಕೊಂಡು ಶ್ರೀಲಕ್ಷ್ಮೀಪತಿಯಾದ ನಾರಾಯಣನನ್ನು ಪ್ರಸನ್ನಗೊಳಿಸಲಿಕ್ಕಾಗಿ ವೇದಶಾಸ್ತ್ರೋಕ್ತವಾದ ಧರ್ಮಗಳನ್ನು ನಿಷ್ಕಾಮಭಾವದಿಂದ ಅನುಷ್ಠಾನ ಮಾಡುತ್ತಾನೋ ಅವನು ಭಾಗವತ ಎಂದು ಕರೆಯಲ್ಪಡುತ್ತಾನೆ.

ಯಾರ ಮನದಲ್ಲಿ ಮಹಾವಿಷ್ಣು, ನಾಲಿಗೆಯ ಮೇಲೆ ನಾರಾಯಣ, ಹೃದಯದಲ್ಲಿ ಹರಿ, ಅಂತಃಕರಣದಲ್ಲಿ ಅನಂತನು ಸಂತತವೂ ನಿಂತು ನಲಿಯುತ್ತಿರುವನೋ ಅವನೇ ಭಾಗವತ. ಸದಾಚಾರ ಪರೋಪಕಾರ ಇವು ಎರಡು ಮುಖ್ಯವಾದ ಭಾಗವತ ಧರ್ಮಗಳು.

ಯಾರಿಗೆ ಶಾಸ್ತ್ರದಲ್ಲಿಯೂ, ವೇದದಲ್ಲಿಯೂ, ಗುರುಗಳಲ್ಲಿಯೂ, ಶ್ರೀಹರಿ ಯಲ್ಲಿಯೂ, ಸತ್ಯಧರ್ಮಗಳಲ್ಲಿಯೂ, ವಿಹಿತ ಕರ್ಮಗಳಲ್ಲಿಯೂ ವಿಶ್ವಾಸವಿದ್ದು ವಿದ್ಯುಕ್ತ ಕರ್ಮಗಳನ್ನು ಯಾರು ಸದಾ ಸರ್ವದಾ ಭಗವತ್ ಪ್ರೀತಿಕರವಾದ ಸತ್ಕರ್ಮಾನುಷ್ಠಾನವನ್ನು ಮಾಡುತ್ತಲೇ ಇರುವರೋ ಅವರೇ ನಿಜವಾದ ಭಾಗವತರು. ಇಂಥ ಭಗವದ್ ಭಕ್ತರಾದ ಮಹಾತ್ಮರು ನಿತ್ಯದಲ್ಲಿಯೂ ಅನುಷ್ಠಾನ ಮಾಡುತ್ತಿರುವ ಶ್ರುತಿ, ಸ್ಮೃತಿಗಳಲ್ಲಿ ಪ್ರತಿಪಾದಿತವಾದ ವಿಷ್ಣುಪ್ರೀತಿಕರವಾದ ಪುಣ್ಯಕರ್ಮಗಳೆಲ್ಲವೂ ಸನಾತನ ಧರ್ಮ ಎಂದು ಕರೆಯಲ್ಪಡುತ್ತವೆ.

**ತೇಷಾಂ ಸುಸಮ್ಮತಾ ಧರ್ಮಾಃ ಶಾಶ್ವತಾ ವಿಷ್ಣುವಲ್ಲಭಾಃ ।**
**ಶ್ರುತಿಸ್ಮೃತ್ಯುದಿತಾ ಯೇ ಚ ತೇ ಧರ್ಮಾಃ ಶಾಶ್ವತಾ ಮತಾಃ ॥**

ಭಗವಾನ್ ಶ್ರೀಹರಿಯು ಕ್ಷೀರಸಾಗರದಲ್ಲಿ ಪವಡಿಸಿದಾಗ ಮಹಾಲಕ್ಷ್ಮೀದೇವಿಯನ್ನು ಕುರಿತು ಸರ್ವಲೋಕ ಕ್ಷೇಮಕ್ಕಾಗಿ ಸರ್ವಶಾಸ್ತ್ರಗಳ ಸಾರಭೂತವಾದ ವೈಶಾಖ ಧರ್ಮದ ಉಪದೇಶವನ್ನು ಮಾಡಿದ್ದಾನೆ.''

ಈ ರೀತಿಯಾಗಿ ಜ್ಞಾನಿ ಶ್ರೇಷ್ಠನಾದ ಶಂಖಮುನಿಯು ವ್ಯಾಧನನ್ನು ಕುರಿತು ವಿಷ್ಣು ಪ್ರಿಯವಾದ ವೈಶಾಖಮಾಸದ ಧರ್ಮಗಳನ್ನು ವರ್ಣನೆ ಮಾಡುತ್ತಲಿರುವಾಗ ಐದು ಶಾಖೆಗಳಿರುವ ಆ ವಟವೃಕ್ಷವು ಒಮ್ಮೆಲೆ ಭೂಮಿಯ ಮೇಲೆ ಮುರಿದುಬಿದ್ದಿತು. ಆ ಹೆಮ್ಮರದ ಹೊದರಿನಲ್ಲಿ ಒಂದು ವಿಕರಾಳವಾದ ಹೆಬ್ಬಾವು ಬಹುಕಾಲದಿಂದ ವಾಸವಾಗಿದ್ದಿತು. ಅದೂ ಕೂಡ ಈ ವೈಶಾಖಮಾಸದ ಮಹಾಮಹಿಮೆಯು ಶಂಖಮುನಿಯ ಬಾಯಿಯಿಂದ ಪ್ರವಚನರೂಪದಿಂದ ಹರಿದು ಬರುವಾಗ ಯದೃಚ್ಛೆಯಿಂದ ಅದನ್ನು ಕೇಳಿ ಉದ್ಧೃತವಾಯಿತು. ಪಾಪಯೋನಿಯಾದ ಆ ಹಾವಿನ ದೇಹವನ್ನು ತೊರೆದು ದಿವ್ಯರೂಪವನ್ನು ಧರಿಸಿತು. ಶಂಖಮುನಿಯ ಎದುರು ಬಂದು ಹಣೆಮಣಿದು ನಮಿಸಿ ಕೈಜೋಡಿಸಿ ನಿಂತುಕೊಂಡಿತು.

## ವ್ಯಾಧ ವಾಲ್ಮೀಕಿಯಾದುದು

**ಶುಕದೇವ:-** ಶಂಖಮುನಿಯು ತನ್ನ ಎದುರು ಕುಳಿತು ವ್ಯಾಧನಿಗೆ ವೈಶಾಖ ಮಹಿಮೆಯನ್ನು ಹೇಳುತ್ತಲಿರುವಾಗ ತಾವು ಕುಳಿತ ಮರ ಮುರಿದುಬಿದ್ದು ಹೊದರಿನಿಂದ ಹೊರಬಿದ್ದ ಹೆಬ್ಬಾವು ದಿವ್ಯಪುರುಷನಾಗಿ ನಿಂತದ್ದು ಕಂಡು ಇಬ್ಬರಿಗೂ ಅತ್ಯಾಶ್ಚರ್ಯವಾಯಿತು. ತನ್ನೆದುರು ಪ್ರಣಾಮಾಂಜಲಿಯನ್ನು ಜೋಡಿಸಿ ನಿಂತುಕೊಂಡ ಆ ದಿವ್ಯಪುರುಷನನ್ನು ಕುರಿತು ಶಂಖಮುನಿಯು ''ಪ್ರಶ್ನಿಸಿದನು-ನೀನು ಯಾರು? ನಿನಗೆ ಈ ಹಾವಿನ ಜನ್ಮವು ಏಕೆ ಬಂದಿತು?''

**ದಿವ್ಯಪುರುಷ:-** ಪೂರ್ವಜನ್ಮದಲ್ಲಿ ನಾನು ಪ್ರಯಾಗ ಕ್ಷೇತ್ರದಲ್ಲಿ ಇದ್ದೆ. ಓರ್ವ ಸದಾಚಾರಿ ಬ್ರಾಹ್ಮಣನೂ ಆಗಿದ್ದೆ. ಆಗ ನಾನು ಒಳ್ಳೇ ಸಿರಿವಂತ. ಅಪರಂಪಾರ ಐಶ್ವರ್ಯವು ನನ್ನ ಸ್ವತ್ತಾಗಿತ್ತು. ಮನೆ, ಮಡದಿ, ಮಕ್ಕಳು, ಪರಿವಾರ ಎಲ್ಲವೂ ಸಮೃದ್ಧವಾಗಿದ್ದಿತು. ಈ ಸಂಪನ್ನತೆ ನನ್ನಲ್ಲಿ ಮಿಕ್ಕುವಷ್ಟು ಸೊಕ್ಕನ್ನು ಉಂಟುಮಾಡಿತು. ನಾನು ಲೆಕ್ಕಮೀರಿ ಸಂಪಾದಿಸಿದ ಸಂಪತ್ತು ಅನೇಕ ದುರ್ವ್ಯಸನಗಳಿಗೆ ದಾರಿಮಾಡಿ ಕೊಟ್ಟಿತು. ಇಷ್ಟು ಹಣವನ್ನು ಗಳಿಸಲಿಕ್ಕಾಗಿ ನಾನು ಎಲ್ಲ ಬಗೆಯ ಕಪಟ, ಮೋಸ, ವಂಚನೆ, ಅನ್ಯಾಯ, ವಾಮಮಾರ್ಗ ಕಾಮಮಾರ್ಗ ಎಲ್ಲವನ್ನೂ ಬಳಸಿಕೊಂಡೆ. ''ಯೇನಕೇನ ಪ್ರಕಾರೇಣ ಶ್ರೀಯುಕ್ತಃ ಪುರುಷೋ ಭವೇತ್'' ಎಂಬಂತೆ ಅನೇಕ ಅವ್ಯಾಪಾರ ದುರ್ವ್ಯಾಪಾರಗಳನ್ನು ಮಾಡಿ ಹೇರಳವಾಗಿ ಹಣವನ್ನು ಗಳಿಸಿದೆ. ಯಾರಿಗೂ ಕೊಡದೇ ಆ ಸಂಪತ್ತನ್ನು ಜಿಪುಣತನದಿಂದ ಉಳಿಸಿ ಬೆಳೆಸಿದೆ. ಹಣದ ಹಿಂದೆ ವ್ಯಭಿಚಾರ, ಜೂಜಾಟ, ಕೊಲೆ, ಕಳವು, ಬಡ್ಡಿವ್ಯವಹಾರ, ಪರಪ್ರತಾರಣ, ಮುಂತಾದ ಪಾಪಕಾರ್ಯಗಳೆಲ್ಲವೂ ನನ್ನಿಂದ ರಾಜಾರೋಷವಾಗಿ ಆಚರಿಸಲ್ಪಟ್ಟವು.

ಜನ ನಿಂದೆಗೆ ಹೆದರಿ ಯಾವಾಗಲಾದರೂ ಪುಣ್ಯಕರ್ಮವನ್ನು ಮಾಡಿದರೂ ಮಹಾದಂಭದಿಂದಲೇ ಜನರಲ್ಲಿ ಆತ್ಮಪ್ರತಿಷ್ಠೆಯನ್ನು ಮೆರಿಸಲಿಕ್ಕಾಗಿಯೇ ಮಾಡುತ್ತಿದ್ದೆ. ಪುಣ್ಯಕರ್ಮಗಳಲ್ಲಿ ನನಗೆ ಎಂದೂ ಶ್ರದ್ಧೆ ಇರಲಿಲ್ಲ. ಹೀಗೆ ಸ್ವಚ್ಛಂದ ಜೀವನವನ್ನು ನಡೆಸಿ, ಚಕ್ಕಂದದಿಂದ ನಾನು ಬಾಳಿ, ಸ್ವೈರಾಚರಣ ಪರಾಯಣನಾಗಿ ಎಷ್ಟೋ ವರ್ಷ ಅಧರ್ಮ ಜೀವನದಲ್ಲಿಯೇ ಕಳೆದೆ.

ಒಂದು ದಿನ ವೈಶಾಖಮಾಸದಲ್ಲಿ ಜಯಂತ ಎಂಬ ಒಬ್ಬ ವಿದ್ವಾಂಸನು ಪ್ರಯಾಗ ಕ್ಷೇತ್ರದಲ್ಲಿ ಎಲ್ಲ ಜನರಿಗೂ ವೈಶಾಖ ಮಾಸದ ಮಹಿಮೆಯನ್ನು ಹೇಳುತ್ತಿದ್ದ. ಈ ಮಾಸದಲ್ಲಿ ಅವಶ್ಯವಾಗಿ ಮಾಡಬೇಕಾದ ದಾನಧರ್ಮ ಶುಭಕರ್ಮಗಳ ವಿಧಿವಿಧಾನ ಗಳನ್ನು ತಿಳಿಸಿಹೇಳುತ್ತಿದ್ದ. ಸಾವಿರಾರು ಜನ ಕ್ಷತ್ರಿಯ ವೈಶ್ಯ, ಶೂದ್ರ ಸ್ತ್ರೀ ಪುರುಷರು ಪ್ರತಿ ದಿನವೂ ಪ್ರಾತಃಕಾಲ ಸ್ನಾನಮಾಡಿ ಭಗವಂತನ ಪೂಜೆಗೈದು ಜಯಂತನು ಹೇಳುತ್ತಲಿರುವ ಭಗವತ್ಕಥೆಯನ್ನು ವೈಶಾಖಮಾಸದ ಮಹಿಮೆಯನ್ನು ಭಕ್ತಿಯಿಂದ ಕೇಳುತ್ತಿದ್ದರು.

ನಾನು ಒಂದು ದಿನ ಕುತೂಹಲದಿಂದ ಹೋಗಿ ''ಇವನು ಏನು ಹೇಳುತ್ತಾನೆ? ಇವರು ಹೇಗೆ ಕೇಳುತ್ತಾರೆ'' ಎಂದು ನೋಡಲಿಕ್ಕೆ ಕುಳಿತುಕೊಂಡೆ ಆ ಶ್ರೋತ್ರ ಮಂಡಲಿಯಲ್ಲಿ. ನನ್ನ ತಲೆಯ ಮೇಲೆ ಉಷ್ಣೀಷ (ರುಮಾಲು) ಇದ್ದಿತು. ಆದ್ದರಿಂದ ನಾನು ನಮಸ್ಕಾರವನ್ನು ಕೂಡ ಮಾಡಲಿಲ್ಲ. ಅಲ್ಲಿ ಕುಳಿತವರೆಲ್ಲರೂ ಮೌನದಿಂದ ಕುಳಿತು ಆದರದಿಂದ ಕಥಾಶ್ರವಣ ಮಾಡುತ್ತಲಿದ್ದರು. ಆದರೆ ನಾನು ಮಾತ್ರ ಹರಟೆ ಹೊಡೆಯುತ್ತ ದೊಡ್ಡ ದನಿಯಿಂದ ನಗುತ್ತ ಎಲ್ಲರಿಗೂ ಕಥಾಶ್ರವಣಕ್ಕೆ ವಿಘ್ನವನ್ನುಂಟು ಮಾಡುತ್ತಿದ್ದೆ.

ಹೀಗೆ ಜಯಂತನ ವೈಶಾಖಮಾಸ ಮಾಹಾತ್ಮ್ಯ ಪ್ರವಚನ ಮುಗಿಯುವವರೆಗೂ ಮನೆಯ ವಾರ್ತೆ ಸಮಾಚಾರಗಳ ಬಗ್ಗೆ ಮಾತನಾಡುತ್ತ ಪರರ ನಿಂದೆ ಮಾಡುತ್ತ ಕಾಲ ಕಳೆದೆ. ಮುಗಿದ ಬಳಿಕ ನಾನೂ ಮನೆಗೆ ಬಂದೆ. ಮರುದಿನ ನನಗೆ ಸನ್ನಿಪಾತ ರೋಗವಾಯಿತು. ಅದರಲ್ಲಿಯೇ ನಾನು ಮರಣ ಹೊಂದಿದೆ. ಯಮಲೋಕದಲ್ಲಿ ನನ್ನನ್ನು ಎಸರು ನೀರು ಕುದಿಯುವ ಹಾಲಾಹಲ ನರಕದಲ್ಲಿ ಹಾಕಿದರು. ಹೀಗೆ ಹದಿನಾಲ್ಕು ಮನ್ವಂತರಗಳ ಕಾಲ ಯಮಯಾತನೆಯನ್ನು ಭೋಗಿಸಿದೆ. ಅನಂತರ ಎಂಬತ್ತು ನಾಲ್ಕು ಲಕ್ಷ ಹೀನ ಯೋನಿಗಳಲ್ಲಿ ಜನಿಸುತ್ತ ಒಂದಕ್ಕಿಂತ ಇನ್ನೊಂದರಲ್ಲಿ ಹೆಚ್ಚು ಹೆಚ್ಚು ದುಃಖಪಡುತ್ತ ಹುಟ್ಟು ಸಾವುಗಳ ಚಕ್ರದಲ್ಲಿ ತಿರುಗುತ್ತ ಕೊನೆಗೆ ತಮೋಗುಣದ ಹೆಬ್ಬಾವು ಆಗಿ ಈ ಆಲದ ಮರದ ಹೊದರಿನಲ್ಲಿ ವಾಸವಾಗಿದ್ದೆ.

ಮಹರ್ಷಿಗಳೇ! ಸುದೈವದಿಂದ ನಾನು ತಮ್ಮ ಮುಖದಿಂದ ಇಂದು ಅಮೃತ ಮಯವಾದ ವೈಶಾಖ ಮಾಸದ ಮಹಿಮೆಯನ್ನು ಕೇಳಿದೆ ನನ್ನ ನೇತ್ರದ್ವಾರದಿಂದ. ಅದರಿಂದ ನನಗೆ ಆ ಹಾಳು ಹಾವಿನ ಜನ್ಮದಿಂದ ವಿಮೋಚನೆಯಾಯಿತು. ಈ ದಿವ್ಯ ದೇಹ ದೊರಕಿತು.

ಮುನಿಪುಂಗವರೇ! ನೀವು ನನ್ನ ಯಾವ ಜನ್ಮದ ಬಂಧುಗಳು ಎಂಬುದನ್ನು ನಾನು ಅರಿಯೆ. ನಾನಂತೂ ಎಂದೂ ಯಾರಿಗೂ ಉಪಕಾರವನ್ನು ಮಾಡಲಿಲ್ಲ. ಯಾರ ಮೇಲೆಯೂ ದಯೆ ತೋರಲಿಲ್ಲ ಇಷ್ಟಾದರೂ ತಾವು ಮಾತ್ರ ನನ್ನ ಮೇಲೆ ಕೃಪೆ ಮಾಡಿರುವಿರಿ. ನನ್ನಿಂದ ತಮಗೆ ಯಾವ ಪ್ರಯೋಜನವೂ ಇಲ್ಲ. ದೀನದಲಿತರ ಮೇಲೆ ದಯೆತೋರುವದರಲ್ಲಿಯೂ, ಯಾವಫಲ ಪ್ರಯೋಜನಗಳ ಆಶೆಯಿಲ್ಲದೇ ಉಪಕಾರ ಮಾಡುವುದರಲ್ಲಿಯೂ ಸಜ್ಜನರಿಗೆ ಸ್ವಾಭಾವಿಕ ಪ್ರವೃತ್ತಿ. ತಾವು ಇನ್ನು ಮುಂದೆ ನನಗೆ ಧರ್ಮಬುದ್ಧಿ ಹುಟ್ಟುವಂತೆ ಅನುಗ್ರಹ ಮಾಡಿರಿ. ನನ್ನ ಮನಸ್ಸಿನಲ್ಲಿ ಎಂದೂ ಶ್ರೀಹರಿಯ ವಿಸ್ಮರಣೆ ಆಗದಂತೆ ಮತ್ತು ತಮ್ಮಂಥ ಸಾಧು ಸತ್ಪುರುಷರ ಸತ್ಸಂಗವು ಸರ್ವದಾ ದೊರಕುವಂತೆ ತಾವು ದಯೆದೋರಿರಿ. ಹೀಗೆ ನುಡಿದ ಸರ್ಪಯೋನಿಯಿಂದ ಮುಕ್ತನಾದ ರೋಚನ ಎಂಬ ಬ್ರಾಹ್ಮಣನು ಶಂಖಮುನಿಗಳಿಗೆ ನಮಸ್ಕಾರ ಮಾಡಿ ಕೈ ಮುಗಿದು ನಿಂತುಕೊಂಡನು.

**ಶಂಖ:-** ಕುಶೀದ ಮುನಿಯ ಪುತ್ರನಾದ ರೋಚನನೇ! ನೀನು ಜನ್ಮಾಂತರದಲ್ಲಿ ಅರ್ಥಾತ್ ನಿನ್ನ ಹಾವಿನ ಯೋನಿಯಲ್ಲಿ ಆಕಸ್ಮಿಕವಾಗಿ ವೈಶಾಖಮಾಸದ ಮಹಾತ್ಮೆಯನ್ನು ಹಾಗೂ ಶ್ರೀಹರಿಯ ಮಹಿಮೆಯನ್ನು ಶ್ರವಣ ಮಾಡಿದ್ದರಿಂದ ಆ ದುರ್ಯೋನಿಯಿಂದ ಮುಕ್ತನಾದೆ. ಹೀಗೆ ನಿನ್ನ ಹಿಂದಿನ ಪಾಪಗಳೆಲ್ಲವೂ ನಷ್ಟವಾಗಿ ಹೋಗಿರುತ್ತವೆ. ಭಕ್ತಿಯಿಂದಾಗಲೀ ನಗೆಚಾಟಿಯಿಂದಾಗಲೀ, ಸಿಟ್ಟಿನಿಂದಾಗಲೀ, ದ್ವೇಷದಿಂದಾಗಲೀ ಕಾಮದಿಂದಾಗಲೀ ಶ್ರೀಹರಿಯ ನಾಮವನ್ನು ಉಚ್ಚರಿಸಿದರೆ ಅವನ ಪಾಪಗಳೆಲ್ಲವೂ ನಷ್ಟವಾಗಿ ಹೋಗುತ್ತವೆ. ಎಂಥ ಪಾಪಗಳಿದ್ದರೂ ಶ್ರೀಹರಿಯ ನಾಮೋಚ್ಚಾರಣದಿಂದ ನಶಿಸಿ ವೈಕುಂಠ ಲೋಕವನ್ನು ನಿರಾತಂಕವಾಗಿ ಹೊಂದುತ್ತಾರೆ. ಅಂದಬಳಿಕ ಕಾಮಕ್ರೋಧಗಳನ್ನು ಗೆದ್ದು, ಇಂದ್ರಿಯಗಳನ್ನು ಅಂಕಿತದಲ್ಲಿ ಇರಿಸಿಕೊಂಡ ಪ್ರಾಣಿದಯಾಶೀಲರಾದ ಸಜ್ಜನರು ಅತ್ಯಂತ ಭಕ್ತಿಯಿಂದ ಹರಿನಾಮಸ್ಮರಣೆಯನ್ನು ಮಾಡಿದರೆ ವೈಕುಂಠ ಲೋಕಕ್ಕೆ ಹೋಗುವರು ಎಂದು ಬೇರೆ ಹೇಳಬೇಕೆ?

**''ಹಾಸ್ಯಾದ್ ಭಯಾತ್ತಥಾ ಕ್ರೋಧಾತ್ ದ್ವೇಷಾತ್ ಕಾಮಾತ್ತಥಾಪಿ ವಾ**
**ಸ್ನೇಹಾದ್ವಾ ಸಕೃದುಚ್ಚಾರ್ಯ ವಿಷ್ಣೋರ್ನಾಮಾಘಹಾರಿ ಚ ||**
**ಪಾಪಿಷ್ಠಾ ಅಪಿ ಗಚ್ಛಂತಿ ವಿಷ್ಣೋರ್ಧಾಮ ನಿರಾಮಯಂ**
**ಕಿಮುತ ಶ್ರದ್ಧಯಾ ಯುಕ್ತಾಃ ಜಿತಕ್ರೋಧಾ ಜಿತೇಂದ್ರಿಯಾಃ**
**ದಯಾವಂತಃ ಕಥಾಂ ಶ್ರುತ್ವಾ ಗಚ್ಛಂತೀತಿ ದ್ವಿಜೋತ್ತಮ**

ಯಾವುದೇ ನೆಪದಿಂದ ಭಗವಂತನ ಕಥಾಶ್ರವಣ ಮಾಡಿದವರು. ನಾಮವನ್ನು ಉಚ್ಚರಿಸಿದವರು ಮುಕ್ತಿ ಮುಂದಿರವನ್ನು ಕುರಿತು ಹೋಗುವರು ಎಂದ ಬಳಿಕ ಭಕ್ತಿಯಿಂದ ಭಗವತ್ಕಥೆಯನ್ನು ಶ್ರವಣ ಮಾಡುವವರು ವೈಕುಂಠಕ್ಕೆ ಹೋಗುವರೆಂದು ಬೇರೆ ಹೇಳಬೇಕೆ?

ಬಾಲಕ ಕೃಷ್ಣನನ್ನು ಕೊಲ್ಲಬೇಕೆಂದು ಬಂದ ಪೂತನಾ ಎಂಬ ರಕ್ಕಸಿಯು ಕೂಡ ದಿವ್ಯಗತಿಯನ್ನೇ ಹೊಂದಿದಳು. ಆದುದರಿಂದ ಮಾನವರು ಎಲ್ಲವನ್ನೂ ತೊರೆದು ಸಾಧು ಸಜ್ಜನರ ಸಹವಾಸ ಮಾಡಿ, ಶ್ರೀಹರಿಯ ಗುಣಗಾನ, ಧ್ಯಾನ, ಭಜನ, ಶ್ರವಣ ಮನನಾದಿಗಳನ್ನು ತಪ್ಪದೇ ಮಾಡಬೇಕು. ಸಾಂಸಾರಿಕ ಚಿಂತೆಗಳನ್ನೆಲ್ಲ ಬದಿಗಿರಿಸಿ ಅನನ್ಯ ಭಕ್ತಿಯಿಂದ ಭಗವಾನ್ ನಾರಾಯಣನ ಚರಣವನ್ನೇ ಶರಣು ಹೊಂದಬೇಕು. ಬುದ್ಧಿವಂತನಾದ ವ್ಯಾಧನೆ, ನೀನು ಕೂಡ ವೈಶಾಖ ಮಾಸದಲ್ಲಿ ವಿಹಿತವಾದ ಎಲ್ಲ ಧರ್ಮಕಾರ್ಯಗಳನ್ನು ಮಾಡು. ವೈಶಾಖದಲ್ಲಿ ವಿಹಿತವಾದ ಧರ್ಮಾನುಷ್ಠಾನದಿಂದ ಭಗವಾನ್ ಶ್ರೀಹರಿಯು ಸುಪ್ರಸನ್ನನಾಗಿ ನಿನಗೆ ಕಲ್ಯಾಣವನ್ನುಂಟು ಮಾಡುವನು.''

ಶಂಖಮುನಿಯು ಹೀಗೆ ವೈಶಾಖ ಮಹಿಮೆಯನ್ನು ಹೇಳಿ, ಆ ವ್ಯಾಧನಿಗೆ ಸದುಪದೇಶ ನೀಡಿ ಅವನನ್ನು ಮತ್ತೊಮ್ಮೆ ಅನುಗ್ರಹ ಪೂರ್ಣವಾದ ದೃಷ್ಟಿಯಿಂದ ನೋಡಿ ಮೌನ ತಾಳಿದ. ಆಗ ಆ ದಿವ್ಯ ಪುರುಷನು ನುಡಿದ, ''ಮುನೀಶ್ವರ ! ನಾನು ಧನ್ಯ. ತಮ್ಮಂಥ ಮಹಾಪುರುಷರು ನನ್ನ ಮೇಲೆ ಅನುಗ್ರಹಮಾಡಿದ್ದು ಪರಮಭಾಗ್ಯ. ನನ್ನ ಹಿಂದಿನ ಪಾಪಗಳೆಲ್ಲವೂ ಇಂದು ಸವೆದುಹೋದವು. ಆ ಪಾಪಯೋನಿಯಿಂದ ನಾನೀಗ ಬಿಡುಗಡೆಯನ್ನು ಹೊಂದಿ ಈ ದಿವ್ಯ ದೇಹವನ್ನು ಪಡೆದಿದ್ದೇನೆ. ತಮ್ಮ ದಯೆಯಿಂದ ನಾನು ಭಗವದನುಗ್ರಹಕ್ಕೆ ಪಾತ್ರನಾಗಿ ದಿವ್ಯ ಗತಿಯನ್ನು ಹೊಂದುತ್ತೇನೆ'' ಹೀಗೆ ಹೇಳಿ ಆ ದಿವ್ಯ ಪುರುಷನು ಶಂಖಮುನಿಗೆ ಪ್ರದಕ್ಷಿಣೆಹಾಕಿ ನಮಸ್ಕಾರ ಮಾಡಿ ವಿಮಾನಾರೂಢನಾಗಿ ಪರಮಗತಿಯನ್ನು ಹೊಂದಿದನು.

ಅನಂತರ ಸಂಧ್ಯಾಕಾಲವಾಯಿತು. ಬಳಿಕ ಆ ಬೇಡನು ಶಂಖಮುನಿಯ ಸೇವೆಗೈದು ಅವರನ್ನು ಸಂತೋಷಪಡಿಸಿದನು. ಆಮೇಲೆ ಆ ಮುನೀಶ್ವರರು ತಮ್ಮ ಸಂಧ್ಯೋಪಾಸನೆಯನ್ನು ಮಾಡಿ ರಾತ್ರಿಕಾಲದ ತಮ್ಮ ಪೂಜಾನುಷ್ಠಾನವನ್ನೆಲ್ಲ ಮುಗಿಸಿದರು. ಸರಿರಾತ್ರಿಯವರೆಗೆ ಭಗವತ್ಕಥಾಲಾಪವನ್ನು ಮಾಡುತ್ತ ಎಚ್ಚರವಾಗಿದ್ದು ಅನಂತರ ಇಬ್ಬರೂ ವಿಶ್ರಮಿಸಿದರು.

## ರಾಮಮಂತ್ರದ ಉಪದೇಶ, ಸರ್ವಪಾಪ ಪ್ರಣಾಶ

ಶಂಖಮುನಿಗಳು ಮರುದಿನ ಬ್ರಾಹ್ಮಮುಹೂರ್ತದಲ್ಲಿಯೇ ಎದ್ದು ಮುಖ ಪ್ರಕ್ಷಾಲನಾದಿಗಳನ್ನು ಮಾಡಿಕೊಂಡು ಭಗವಂತನ ಮೌನ ಧ್ಯಾನವನ್ನು ಆಚರಿಸಿದರು. ಆ ಬಳಿಕ ಪ್ರಾತರ್ವಿಧಿಗಳನ್ನೆಲ್ಲ ಮುಗಿಸಿ ಅರುಣೋದಯ ಸಮಯದಲ್ಲಿ ವೈಶಾಖ ಸ್ನಾನ ಮಾಡಿದರು. ಸಂಧ್ಯಾ, ತರ್ಪಣ, ದೇವ ಪೂಜೆ ಮುಂತಾದ ತನ್ನ ನಿತ್ಯಾಹ್ನಿಕವನ್ನೆಲ್ಲ ಮಾಡಿ

ಮುಗಿಸಿ ಆ ಬೇಡನನ್ನು ತಾವಿದ್ದಲ್ಲಿ ಬರಮಾಡಿಕೊಂಡರು. ಪ್ರೀತಿಯಿಂದ ಅವನಿಗೆ ರಾಮಮಂತ್ರವನ್ನು ಉಪದೇಶಿಸಿದರು. ಮತ್ತು ಪ್ರಸನ್ನರಾಗಿ ಅವನಿಗೆ ಹೇಳಿದರು. ''ರಾಮ ಎಂಬ ಈ ಎರಡು ಅಕ್ಷರಗಳು ನಾಲ್ಕು ವೇದಗಳಿಗಿಂತ ಮಿಗಿಲಾಗಿವೆ.

**''ವಿಷ್ಣೋರೇಕೈಕನಾಮಾಪಿ ಸರ್ವವೇದಾಧಿಕಂ ಮತಂ ।**
**ತೇಭ್ಯಶ್ಚಾನಂತನಾಮಭ್ಯೋಽಧಿಕಂ ನಾಮ್ನಾಂ ಸಹಸ್ರಕಂ ॥**
**ತಾದೃಙ್ನಾಮ ಸಹಸ್ರೇಣ ರಾಮನಾಮ ಸಮಂ ಮತಂ ।**

ಅನಂತ ನಾಮಗಳು ಶ್ರೀಹರಿಗೆ. ಭಗವಂತನ ಆ ಒಂದೊಂದು ನಾಮವೂ ನಾಕುವೇದಗಳಿಗಿಂತ ಮಿಗಿಲಾಗಿದೆ. ಇಂಥ ಭಗವಂತನ ಅನಂತ ನಾಮಗಳಿಗಿಂತ ಪರಮಾತ್ಮನ ವಿಷ್ಣು ಸಹಸ್ರನಾಮ ಎಂಬ ಸ್ತೋತ್ರವು ಅತ್ಯಧಿಕವಾಗಿದೆ. ಆ ವಿಷ್ಣು ಸಹಸ್ರ ನಾಮಕ್ಕೆ ಸರಿಯಾಗಿದೆ ರಾಮ ಎಂಬ ಎರಡು ಅಕ್ಷರದ ಭಗವಂತನ ಈ ದಿವ್ಯನಾಮ.

ಆದುದರಿಂದ ಕಿರಾತನೇ! ನೀನು ಬದುಕಿ ಇರುವವರೆಗೂ ನಾನು ಉಪದೇಶಿಸಿದ ಈ ರಾಮ ನಾಮವನ್ನು ಬಿಟ್ಟುಬಿಡದೇ ಜಪ ಮಾಡು. ಕೊನೆಯವರೆಗೂ ವೈಶಾಖ ಧರ್ಮವನ್ನು ಪರಿಪಾಲಿಸು. ಈ ರಾಮ ನಾಮ ಜಪ ಹಾಗೂ ವೈಶಾಖ ಧರ್ಮಪಾಲನೆಯ ಪ್ರಭಾವದಿಂದ ನೀನು ಮುಂದಿನ ಜನ್ಮದಲ್ಲಿ ವಲ್ಮೀಕ ಎಂಬ ಮಹರ್ಷಿಯ ಮಗನಾಗಿ ಜನಿಸುವಿ. 'ವಾಲ್ಮೀಕಿ' ಎಂದು ಪ್ರಸಿದ್ಧಿಯನ್ನು ಪಡೆಯುವಿ.''

ಬೇಡನಿಗೆ ಹೀಗೆ ಉಪದೇಶ ಮಾಡಿ ಮತ್ತು ಆದೇಶನೀಡಿ ಮುನಿವರ್ಯರಾದ ಶಂಖ ಮಹರ್ಷಿಗಳು ಅಲ್ಲಿಂದ ತೆರಳಿ ದಕ್ಷಿಣ ದಿಕ್ಕಿಗೆ ಪ್ರಯಾಣ ಮಾಡಿದರು. ಆ ಬೇಡನು ಕೂಡ ಅಲ್ಲಿಂದ ಹೊರಟು ನಿಂತ ಶಂಖ ಮುನಿಗಳಿಗೆ ಪ್ರದಕ್ಷಿಣೆ ಹಾಕಿ ಭಕ್ತಿಯಿಂದ ನಮಸ್ಕಾರ ಮಾಡಿ ಅವರ ಪೂರ್ಣ ಅನುಗ್ರಹವನು ಪಡೆದ.*

ಗುರುಗಳು ಅಲ್ಲಿಂದ ಹೋದ ಬಳಿಕ ಆ ಬೇಡ ವೈಶಾಖ ಮಾಸದಲ್ಲಿ ಉಕ್ತವಾದ ಎಲ್ಲ ಧರ್ಮಗಳನ್ನೂ ಭಕ್ತಿಯಿಂದ ಪಾಲನ ಮಾಡಿದ. ಅರಣ್ಯದಲ್ಲಿ ದೊರಕುವ ಕಂದಮೂಲ ಫಲಗಳಿಂದ ಆ ವನ ಮಾರ್ಗದಲ್ಲಿ ಹಾದು ಹೋಗುವ ಪ್ರಯಾಣಿಕರಿಗೆ ಆತಿಥ್ಯವನ್ನು ನೀಡುತ್ತಿದ್ದ. ಬಂದವರಿಗೆಲ್ಲ ಅನ್ನ ನೀರು, ಆದರದ ಉಪಚಾರಗಳನ್ನು ಮಾಡಿ ಸಂತೋಷಪಡಿಸುತ್ತಿದ್ದನು.

ಬಿಸಿಲಲ್ಲಿ ದಾರಿ ನಡೆಯುವವರಿಗೆ ಪಾದರಕ್ಷೆ, ನೀರಡಿಸಿ ಬಂದವರಿಗೆ ಪಾನಕ, ನೀರು, ಚಂದನ, ಬೀಸಣಿಕೆ, ನೆರಳು ಹಸಿದುಬಂದವರಿಗೆ ಊಟ ಮುಂತಾದವುಗಳನ್ನು ಒದಗಿಸಿ 'ವೈಶಾಖ ಮಾಸಾಭಿಮಾನಿ ದೇವತೆ ಪ್ರೀತನಾಗಲಿ' ಎಂದು ಬೇಡಿಕೊಳ್ಳುತ್ತಿದ್ದ. ಮತ್ತು ವೈಶಾಖ ಮಾಸದಲ್ಲಿ ಒಂದು ದಿನವೂ ಬಿಡದೆ ಪ್ರಾತಃಸ್ನಾನ ಮಾಡಿ ಹಗಲಿರಳೂ ರಾಮನಾಮವನ್ನು ಜಪಿಸುತ್ತಿದ್ದ. ಹೀಗೆ ನಿರಂತರ ರಾಮನಾಮ ಜಪ ಹಾಗೂ ವೈಶಾಖ ಧರ್ಮ ಪರಿಪಾಲನೆಯ ಪುಣ್ಯದಿಂದ ಅವನು ಜನ್ಮಾಂತರದಲ್ಲಿ ಶಂಖಮುನಿಗಳ ಯಥಾರ್ಥ ವಚನದಂತೆ, ವಾಲ್ಮೀಕ ಮುನಿಯ ಹೊಟ್ಟೆಯಿಂದ ಹುಟ್ಟಿ ಬಂದ. ವಾಲ್ಮೀಕಿ ಎಂದು ಅವನಿಗೆ ಹೆಸರಾಯಿತು. ಈ ಜನ್ಮದಲ್ಲಿಯೂ ಕೂಡ ವಾಲ್ಮೀಕಿ ಋಷಿಯು ದೀರ್ಘಕಾಲದವರೆಗೆ ರಾಮಮಂತ್ರವನ್ನು ಜಪಿಸಿದ.

* ರಾಮಧ್ಯಾನ ವೈಶಾಖಧರ್ಮಾನುಷ್ಠಾನಗಳಿಂದ ವ್ಯಾಧ ವಾಲ್ಮೀಕಿ ಆದ.

## ರಾಮಾಯಣದ ಹುಟ್ಟು, ರಾಮನಾಮದ ಗುಟ್ಟು

ಪ್ರತಿಭಾತಪರಾವರನಾಗಿ ಆದರಿಂದ ಸಿದ್ಧಿ ಪಡೆದು, 'ರಾಮಾಯಣ' ಎಂಬ ಮಹಾಪ್ರಬಂಧವನ್ನು ಬರೆದ. ಅದರಲ್ಲಿ ಭಗವಾನ್ ಶ್ರೀಹರಿಯು 'ಶ್ರೀರಾಮಚಂದ್ರ' ಎಂಬ ಹೆಸರಿನಿಂದ ಅವತಾರ ಮಾಡಿ ಭೂಲೋಕದಲ್ಲಿ ಮಾಡಿದ ಅಗಾಧಲೀಲೆಯನ್ನೆಲ್ಲ ಲಲಿತ ಕೋಮಲ ಕಾಂತ ಪದಾವಲಿಗಳ ಕಾವ್ಯಮಯವಾದ ವಾಣಿಯಲ್ಲಿ ಬಣ್ಣಿಸಿದ. ಭಗವಂತನ ಗುಣಗಾನವನ್ನು ಮಾಡಿದ. ಸರಸ ಸುಂದರವಾದ ಪದಬಂಧ, ಮನೋಹರವಾದ ರಸಾಳಶೈಲಿ, ಸುಕುಮಾರವಾದ ಭಾವ, ರಮ್ಯವಾದ ಕಥಾನಕ, ಹೃದ್ಯವಾದ ನಿರೂಪಣೆ, ಗಂಭೀರವಾದ ಅರ್ಥ, ಕೋಮಲವಾದ ಭಾವ, ಪೇಶಲವಾದ ರಸ ರಮಣೀಯತೆಯಿಂದ ಈ ರಾಮಾಯಣ ಪ್ರಬಂಧ ಪ್ರಪಂಚದಲ್ಲಿಯೇ ಆದಿಕಾವ್ಯ ಎಂದು ಹೆಸರಾಯಿತು. ಅದರ ಪಠಣ ಪಾರಾಯಣ ಶ್ರವಣಮನನಾದಿಗಳಿಂದ ಮಾನವರ ಕರ್ಮಬಂಧನಗಳೆಲ್ಲವೂ ಉಚ್ಛಿನ್ನವಾಗುವವು.

'ಮಿಥಿಲಾಪತಿ' ಜನಕನೇ! ನೋಡಿದೆಯಾ? ವೈಶಾಖದ ಮಾಹಾತ್ಮ್ಯವು ಎಷ್ಟು ಮಹತ್ತರವಾದುದು! ಈ ವೈಶಾಖ ಧರ್ಮಪಾಲನೆಯಿಂದ ಓರ್ವ ಸಾಮಾನ್ಯ ಬೇಡನು ಅತ್ಯಂತ ದುರ್ಲಭವಾದ ಋಷಿ ಪದವನ್ನು ಹೊಂದಿದನು.

**ಮಿಥಿಲಾ ರಾಜ:-** ಮಹರ್ಷಿ ಶ್ರುತದೇವ, ಈ ವೈಶಾಖ ಮಾಸದಲ್ಲಿ ಪುಣ್ಯತಿಥಿಗಳು ಯಾವವು?

**ಶ್ರುತದೇವ:-** ವೈಶಾಖ ಮಾಸದಲ್ಲಿ ಮೂರು ತಿಥಿಗಳು ಅತ್ಯಂತ ಪುಣ್ಯಪ್ರದ. ವೈಶಾಖ ಮಾಸದ ಶುಕ್ಲಪಕ್ಷದ ಏಕಾದಶಿ ಮತ್ತು ಕೃಷ್ಣಪಕ್ಷದ ಏಕಾದಶೀ ಹಾಗೂ ಅಮಾವಾಸ್ಯೆ ಇವೇ ಮೂರು ಆ ಪುಣ್ಯ ತಿಥಿಗಳು. ವೈಶಾಖಮಾಸದ ಎರಡು ಏಕಾದಶೀ ದಿನಗಳಂದು ಪ್ರಾತಃಸ್ನಾನ, ದಾನ, ತಪಸ್ಸು, ಹೋಮ, ದೇವಪೂಜೆ, ಭಗವತ್ಕಥಾ ಶ್ರವಣ ಮುಂತಾದವುಗಳು ತತ್ಕಾಲದಲ್ಲಿ ಮುಕ್ತಿಪ್ರದವಾಗಿರುತ್ತವೆ. ದರಿದ್ರನಿರಲಿ, ಧನವಂತನಿರಲಿ, ದೀನನಿರಲಿ, ದೂನನಿರಲಿ, ಊನನಿರಲಿ, ಜಾತಿ ಹೀನನೇ ಆಗಿರಲಿ, ವಿಧವೆಯಾಗಲಿ, ಮುತ್ತೈದೆಯಾಗಲಿ, ಬಾಲಕನಿರಲಿ, ಮುದುಕನಿರಲಿ, ರೋಗಿಷ್ಠನಿರಲಿ, ಎಲ್ಲರಿಗೂ ವೈಶಾಖ ಧರ್ಮಗಳು ಸುಲಭವಾಗಿ ಅನುಷ್ಠಾನ ಮಾಡಲು ಬರುವಂಥವು ಇರುತ್ತವೆ. ಈ ಪುಣ್ಯಮಾಸದಲ್ಲಿ ಸ್ನಾನ, ದಾನ, ಕಥಾಶ್ರವಣಗಳಿಂದ ಹಾಗೂ ಈ ಎರಡು ಏಕಾದಶೀ ದಿನಗಳಲ್ಲಿ ಉಪವಾಸ ಹಾಗೂ ಹರಿ ಪೂಜೆಗಳಿಂದ ಮಾನವನು ಮುಕ್ತನಾಗುತ್ತಾನೆ.

ವೈಶಾಖ ಅಮಾವಾಸ್ಯೆಯ ದಿನ ಸ್ನಾನ ದಾನಗಳಿಂದ ಗಯಾಕ್ಷೇತ್ರದಲ್ಲಿ ಸ್ನಾನ. ದಾನ, ಗಯಾ ಗದಾಧರನ ಪೂಜೆಮಾಡಿದ್ದಕ್ಕಿಂತ ಎಷ್ಟೋ ಪಟ್ಟು ಹೆಚ್ಚಿನ ಪುಣ್ಯಪ್ರಾಪ್ತವಾಗುವದು.

ಪೂರ್ವಕಾಲದಲ್ಲಿ ಸಾವರ್ಣಿ ಎಂಬ ರಾಜ ಮೂವತ್ತನೇ ಕಲಿಯುಗದ ಕೊನೆಯ ಭಾಗದಲ್ಲಿ ಶಾಸನಗೈಯುತ್ತಿದ್ದ. ಈ ಸಾವರ್ಣಿ ರಾಜನ ಆಡಳಿತದಲ್ಲಿ ಎಲ್ಲ ಧರ್ಮಗಳೂ ಲೋಪವಾದವು. ಅದೇ ವೇಳೆಯಲ್ಲಿ ಆನರ್ತ ದೇಶದಲ್ಲಿ 'ಧರ್ಮವರ್ಣ' ಎಂಬ ಹೆಸರಿನ ಓರ್ವ ಸುಪ್ರಸಿದ್ಧ ಬ್ರಾಹ್ಮಣ ಇದ್ದ. ಆ ಧರ್ಮವರ್ಣ ಮಹಾಮುನಿಯು ತನ್ನ ಹೆಸರಿಗೆ ತಕ್ಕಂತೆ ಅತ್ಯಂತ ಧರ್ಮಿಷ್ಟನೂ ಭಗವದ್ಭಕ್ತನೂ ಆಗಿದ್ದ. ಆದರಿಂದ ಎಲ್ಲರೂ ''ಮುನಿಮಹಾತ್ಮಾ'' ಎಂದು ಅವನನ್ನು ಕರೆಯುತ್ತಿದ್ದರು. ಒಮ್ಮೆ 'ಧರ್ಮವರ್ಣ' ಎಂಬ ಹೆಸರಿನ ಈ ಮುನಿಪುಂಗವನು ಕಲಿಯುಗವು ಪ್ರಾಪ್ತವಾದದನ್ನು ಕಂಡು ಅಧಿಕಾಧಿಕವಾದ ಧರ್ಮಾನುಷ್ಠಾನದ ಕಾರ್ಯಗಳಲ್ಲಿ ತತ್ಪರನಾದ.

ಅದೇ ವೇಳೆಯಲ್ಲಿ ಪುಷ್ಕರ ಕ್ಷೇತ್ರದಲ್ಲಿ ಒಂದು ದೊಡ್ಡ ಸತ್ರಯಾಗ ನಡೆಯಿತು. ಮುನಿಮಹಾತ್ಮನಾದ ಧರ್ಮವರ್ಣನು ಆ ಸತ್ರಯಾಗಕ್ಕೆ ಬಂದಿದ್ದ. ಅದರಲ್ಲಿ ಭೂಮಂಡಲದ ಅನೇಕ ಮಹಾ ಮಹಾ ಮುನಿಪುಂಗವರೆಲ್ಲರೂ ಸೇರಿ ಸತ್ರಯಾಗದ ದೀಕ್ಷೆ ಪಡೆದು ಕುಳಿತುಕೊಂಡಿದ್ದರು. ವ್ರತಧಾರಿಗಳಾದ ಮುನಿಮಂಡಲದ ಮಹಾ ಮಹನೀಯರೆಲ್ಲರೂ ಕಲಿಯುಗವನ್ನು ಪ್ರಶಂಸೆ ಮಾಡುತ್ತ ಹೀಗೆ ಹೇಳಿದರು.

**''ಕೃತೇ ಯದ್ ವತ್ಸರಾತ್ ಸಾಧ್ಯಂ ಪುಣ್ಯಂ ಮಾಧವ ತೋಷಣಂ।**
**ತ್ರೇತಾಯಾಂ ಮಾಸತಃ ಸಾಧ್ಯಂ ದ್ವಾಪರೇ ಪಕ್ಷತೋ ನೃಪ ॥**
**ತಸ್ಮಾತ್ ದಶಗುಣಂ ಪುಣ್ಯಂ ಕಲೌ ವಿಷ್ಣು ಸ್ಮೃತೇರ್ಭವೇತ್ ।**

ಕೃತಯುಗ ಅಥವಾ ಸತ್ಯಯುಗದಲ್ಲಿ ಒಂದು ವರ್ಷ ಸಾಧನೆಯಿಂದ ಸಂಪಾದಿಸಿದ ಪುಣ್ಯದಿಂದ ಆಗುವಷ್ಟು ಶ್ರೀಹರಿಯ ಪ್ರೀತಿಯು ತ್ರೇತಾಯುಗದಲ್ಲಿ ಒಂದು ತಿಂಗಳ ಧರ್ಮಾಕರ್ಮಾನುಷ್ಠಾನದ ಪುಣ್ಯದಿಂದ ಆಗುವದು. ತ್ರೇತಾಯುಗದಲ್ಲಿ ಒಂದು ತಿಂಗಳ ಧರ್ಮಾನುಷ್ಠಾನದಿಂದ ಸಾಧ್ಯವಾದುದು ದ್ವಾಪರಯುಗದಲ್ಲಿ ಹದಿನೈದು ದಿನಗಳಿಂದ ಸಾಧ್ಯವಾಗುವದು. ಆದರೆ ಇದಕ್ಕಿಂತ ಹತ್ತು ಪಟ್ಟು ಹೆಚ್ಚು ಪುಣ್ಯವು ಮತ್ತು ಶ್ರೀಹರಿಯ ಪ್ರೀತಿಯೂ ಕಲಿಯುಗದಲ್ಲಿ ಶ್ರೀವಿಷ್ಣುವಿನ ನಾಮಸ್ಮರಣದಿಂದ ಲಭ್ಯವಾಗುವದು. ಈ ಕಲಿಯುಗದಲ್ಲಿ ಒಂದು ಸಲವಾದರೂ ಭಗವಂತನ ನಾಮೋಚ್ಚಾರವನ್ನು ಮಾಡಿ ದುರ್ಭಿಕ್ಷ ಕಾಲದಲ್ಲಿ ದರಿದ್ರರಿಗೆ ಅನ್ನವನ್ನು ನೀಡಿದರೆ ಆ ಮನುಷ್ಯನು ನಿಶ್ಚಯ ವಾಗಿಯೂ ದಿವ್ಯಲೋಕವನ್ನು ಪಡೆಯುತ್ತಾನೆ.

ಪುಷ್ಕರ ಕ್ಷೇತ್ರದಲ್ಲಿ ನೆರೆದ ಸತ್ರಯಾಗದ ದೀಕ್ಷಾಧಾರಿಗಳಾದ ಮುನಿ ಮಹರ್ಷಿಗಳು ಹೇಳಿದ ಈ ಕಲಿಯುಗ ಪ್ರಶಂಸಾಪರವಾದ ವಚನವನ್ನು ಕೇಳಿ ನಾರದರಿಗೆ ಪರಮಾನಂದವಾಯಿತು. ಆನಂದೋದ್ರೇಕದಿಂದ ಅವರು ಕುಣಿಯತೊಡಗಿದರು. ಆಗ ಸತ್ರಯಾಗದ ಮುನಿಗಳೆಲ್ಲರೂ ಬಂದು ನಾರದರನ್ನು ಕುರಿತು ತಮ್ಮ ಈ ನರ್ತನಕ್ಕೆ ಕಾರಣವೇನು ಎಂದು ಕೇಳಿದರು. ಅದಕ್ಕೆ ನಾರದರು - ''ನೀವು ಕಲಿಯುಗದಲ್ಲಿ ಹರಿನಾಮ ಸ್ಮರಣೆಯ ಮಹಿಮೆ ಹೇಳಿದ್ದನ್ನು ಕೇಳಿ ನನಗೆ ಪರಮಾನಂದವಾಯಿತು. ನೀವು ಹೇಳಿದ್ದೆಲ್ಲವೂ ಅಕ್ಷರಶಃ ನಿಜ. ಹೀಗೆ ಕಲಿಯುಗದಲ್ಲಿ ಅತ್ಯಲ್ಪ ಪುಣ್ಯ ಕರ್ಮ ಮಾಡಿದರೂ ಅನಂತ ಫಲ ಬರುತ್ತದೆ. ಈ ಕಲಿಕಾಲದಲ್ಲಿ ಕೇವಲ ಸ್ಮರಣ ಮಾತ್ರದಿಂದಲೇ ಕೇಶವನು ಪ್ರಸನ್ನನಾಗುತ್ತಾನೆ. ಈ ಕಲಿಯುಗದಲ್ಲಿ ಮುಖ್ಯವಾಗಿ ಎರಡು ಸಾಧನಗಳಿರುತ್ತವೆ. ಕಾಮದ ನಿಯಂತ್ರಣ, ಜಿಹ್ವಾ ನಿಯಂತ್ರಣ. ಈ ಎರಡು ಇಂದ್ರಿಯಗಳನ್ನು ಗೆದ್ದರೆ ಮನುಷ್ಯನು ಪ್ರಪಂಚವನ್ನೇ ಗೆದ್ದಂತೆ. ಇವೆರಡನ್ನೂ ಪರಮಭಗವದ್ಭಕ್ತರಾದ ನೀವು ಸಾಧಿಸಬಲ್ಲಿರಿ. ಆದರೆ ನೀವು ಈ ಕಲಿಯುಗದಲ್ಲಿ ಇಲ್ಲಿ ಮಾತ್ರ ನಿಲ್ಲಬೇಡಿರಿ.

ನಾರದರ ಈ ಮಾತನ್ನು ಕೇಳಿ ಆ ಮುನಿಮಹರ್ಷಿಗಳೆಲ್ಲರೂ ತಲೆದೂಗಿದರು. ಕೈಕೊಂಡ ಯಜ್ಞವನ್ನು ಪೂರ್ತಿ ಮಾಡಿ ಮುಗಿಸಿದರು. ಅಲ್ಲಿಂದ ಮುಂದೆ ತಮ್ಮ ಧರ್ಮ ಸಾಧನೆಗೆ ಅನುಕೂಲವಾದ ಸ್ಥಳಕ್ಕೆ ಅವರೆಲ್ಲರೂ ಹೊರಟು ಹೋದರು. ಇತ್ತ ಧರ್ಮವರ್ಣನು ನಾರದರ ಈ ಮಾತಿನಿಂದ ಭೂಲೋಕವನ್ನು ತ್ಯಜಿಸಬೇಕೆಂದು ನಿರ್ಧರಿಸಿದ. ಆಜನ್ಮ ಬ್ರಹ್ಮಚರ್ಯವ್ರತವನ್ನು ಧರಿಸಿ ಜಟಾವಲ್ಕ್ಯಲ ಧಾರಿಯಾಗಿ ಕೈಯಲ್ಲಿ ದಂಡ ಕಮಂಡಲವನ್ನು ಹಿಡಿದುಕೊಂಡು ಅವನು ಅಲ್ಲಿಂದ ಹೊರಟ.

## ಕಲಿಯ ಕರಾಳರೂಪ

ಅವನು ತನ್ನ ಸ್ಥಾನದಿಂದ ಮುಂದೆ ನಡೆನಡದಂತೆ ಪ್ರತಿಯೊಂದು ಊರಿನಲ್ಲಿಯೂ ಕಲಿಯುಗದ ಘೋರದೃಶ್ಯವು ಅವನ ಕಣ್ಣೆದುರು ಬರತೊಡಗಿತು. ಅವನು ಹೋದಲ್ಲೆಲ್ಲ ಮಾನವರೆಲ್ಲರಿಗೂ ಪಾಪಾಚಾರದಲ್ಲಿಯೇ ಪ್ರವೃತ್ತಿ. ಬ್ರಾಹ್ಮಣರೆಲ್ಲರೂ ಪಾಖಂಡಿಗಳಾಗಿದ್ದರು. ಶೂದ್ರರು ಸನ್ಯಾಸಧರ್ಮವನ್ನು ಜನರ ವಂಚನೆಗಾಗಿ ಧರಿಸಿದ್ದರು. ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಯುವಕರು ಧರ್ಮಮಾರ್ಗವನ್ನು ಬಿಟ್ಟು ದ್ರವ್ಯವನ್ನು ಗಳಿಸಬೇಕು ಎಂಬ ದುರಾಶೆಯಿಂದ ವ್ಯಾಪಾರ, ಉದ್ಯೋಗ, ಬಡ್ಡೀವ್ಯವಹಾರ, ಬೇಸಾಯ, ವ್ಯವಸಾಯ, ಭಿಕ್ಷೆ ವೇದವಿಕ್ರಯ, ನೀಚ ಸೇವನೆ, ದಾಸ್ಯ, ದಲ್ಲಾಳಿತನ ಮುಂತಾದವುಗಳನ್ನು ಮಾಡುತ್ತಲಿದ್ದರು. ಎಲ್ಲಿ ನೋಡಿದಲ್ಲೆಲ್ಲ ಮನೆಮನೆಯಲ್ಲಿ ಪತಿಪತ್ನಿಯರಲ್ಲಿ ವಿರಸ. ಗುರುಶಿಷ್ಯರಲ್ಲಿ ದ್ವೇಷ. ಒಡೆಯ ಸೇವಕರಲ್ಲಿ ವೈರ. ತಂದೆ ಮಕ್ಕಳಲ್ಲಿ ವಿಶ್ವಾಸಘಾತ. ಎಲ್ಲೆಡೆಗೂ ಭೂತ ಪಿಶಾಚಿಗಳ ಆರಾಧನೆ. ಉಪಾಸನೆ, ಮೈಥುನದಲ್ಲಿ ಆಸಕ್ತಿ, ದ್ರವ್ಯದಲ್ಲಿಯೇ ದೃಷ್ಟಿ, ದುಡ್ಡಿಗಾಗಿ ದೇಹತ್ಯಾಗ, ಸುಳ್ಳುಸಾಕ್ಷಿ, ಕಪಟವ್ಯವಹಾರ, ಮಾತಿನಲ್ಲಿ ಒಂದು, ಕೃತಿಯಲ್ಲಿ ಇನ್ನೊಂದು, ದುಡ್ಡಿಗಾಗಿಯೇ ಅಧ್ಯಯನ.

ಮೂರ್ಖರಿಗೆ ಮಹತ್ವ, ಸಜ್ಜನರಿಗೆ ಅವಮಾನ, ಕೀಳು ಕುಲದ ಜನರು ಕೂಡ ಹಣಕ್ಕಾಗಿ ಜಟಾಧಾರಿಗಳಾಗಿ ತಪಸ್ವಿಗಳ ವೇಷವನ್ನು ತೊಡುವರು. ಪುಣ್ಯಕ್ಷೇತ್ರಗಳಲ್ಲಿ ದೇವರ ಹೆಸರಿನಿಂದ ಸುಲಿಗೆ. ಎಲ್ಲೆಡೆಗೂ ಸಜ್ಜನರ ನಿಂದೆ, ದುರ್ಜನರ ಪ್ರಶಂಸೆ, ವೇದಶಾಸ್ತ್ರ ವಿದ್ವಾಂಸರು ಎಲ್ಲೆಡೆಗೂ ಹುಲ್ಲಿಗಿಂತ ಕಡೆ, ಸಜ್ಜನರಲ್ಲಿ ಇರುವ ಸಾಮಾನ್ಯ ದೋಷವನ್ನು ದೊಡ್ಡದಾಗಿ ತೋರಿಸಿ ಎಲ್ಲರೂ ನಿಂದಿಸುವರು. ಆದರೆ ದುರ್ಜನರ ದೋಷಗಳನ್ನು ಗುಣಗಳೆಂದು ಎಲ್ಲರೂ ಹೊಗಳುವರು. ಔಷಧಿಗಳಲ್ಲಿ ಶಕ್ತಿ ಇಲ್ಲ. ಭೋಜ್ಯಪದಾರ್ಥಗಳಲ್ಲಿ ರುಚಿ ಇಲ್ಲ. ರಾಷ್ಟ್ರದಲ್ಲಿ ಮೇಲಿಂದ ಮೇಲೆ ಕ್ಷಾಮ ಡಾಮರಗಳು.

ಕೆಲವು ಕಡೆ ಅತೀವೃಷ್ಟಿ, ಕೆಲವು ಕಡೆ ಅನಾವೃಷ್ಟಿ. ಕನ್ಯೆಯರು ದಾರಿತಪ್ಪಿ ನಡೆಯುವರು. ಜನರು ವೇದಶಾಸ್ತ್ರ ಪುರಾಣ ವಿದ್ಯೆಗಳಿಗೆ ಮಹತ್ವವನ್ನು ಕೊಡುವದಿಲ್ಲ. ಆದರೆ ಸಂಗೀತ ನೃತ್ಯ ಮೊದಲಾದ ಮನರಂಜನೆಯ ವಿದ್ಯೆಗಳಿಗೆ ಮನಸೋತು ನಟರನ್ನು ನರ್ತಕರನ್ನು ವೇದಶಾಸ್ತ್ರ ಪಂಡಿತರಿಗಿಂತ ಹೆಚ್ಚು ಮರ್ಯಾದೆಯಿಂದ ಪೂಜಿಸುವರು. ಶಾಸ್ತ್ರ ಸಾಹಿತ್ಯ ವೇದ ವೇದಾಂತ ಮೊದಲಾದ ವಿದ್ಯೆಗಳನ್ನು ಕಲಿತು ಸದಾಚಾರ ನಿಷ್ಠರಾಗಿರುವ ವಿದ್ವಾನ್ ವಿಪ್ರರನ್ನು ಮನೆಯ ಆಳಿಗಿಂತ ಕೀಳಾಗಿ ದುಡಿಸಿಕೊಳ್ಳುವರು. ಕಲಿಯುಗದಲ್ಲಿ ತಂದೆತಾಯಿಗಳ ಶ್ರಾದ್ಧವನ್ನು ಜನರು ಮಾಡುವದಿಲ್ಲ. ಉಳಿದ ವೇದೋಕ್ತ ಕಾರ್ಯಕಲಾಪಗಳೆಲ್ಲವೂ ಲುಪ್ತವಾಗಿ ಹೋಗುವವು. ಯಾರೂ ಶ್ರೀಹರಿಯ ನಾಮವನ್ನು ಒಮ್ಮೆಯೂ ಉಚ್ಚರಿಸುವದಿಲ್ಲ. ಯಾವುದೇ ವೇದಶಾಸ್ತ್ರ ಚರ್ಚೆಯನ್ನು ಒಮ್ಮೆಯೂ ಮಾಡುವದಿಲ್ಲ. ಯಜ್ಞ, ಯಾಗ, ತೀರ್ಥಯಾತ್ರೆ, ವೈಶಾಖಸ್ನಾನ, ಜಪ ತಪ ಅನುಷ್ಠಾನ ಮುಂತಾದ ಧರ್ಮಕಾರ್ಯಗಳು ನೋಡಲಿಕ್ಕೆ ಕೂಡ ಎಲ್ಲಿಯೂ ದೊರೆಯುತ್ತಿಲ್ಲ.

ಭೂಮಂಡಲದ ತುಂಬ ಕಂಡುಬರುವ ಈ ಘೋರ ಪರಿಸ್ಥಿತಿಯನ್ನು ಕಂಡು ತಲ್ಲಣಿಸಿ ಹೋದ ಆ ಧರ್ಮವರ್ಣ. ಕಲಿಯುಗದಲ್ಲಿ ಜಂಬೂ ದ್ವೀಪದಲ್ಲಿ ಎಲ್ಲಕಡೆಗೂ ಉಂಟಾಗಿರುವ ಧರ್ಮಗ್ಲಾನಿಯನ್ನು ಕಂಡು ಅವನಿಗೆ ದಿಗಿಲಾಯಿತು. ಅವನು ಇದನ್ನು

ತೊರೆದು ದ್ವೀಪಾಂತರಗಳಿಗೆ ಹೋದ. ಎಲ್ಲೆಡೆಗೂ ತಿರುಗಾಡಿ ಕುತೂಹಲದಿಂದ ಅವನು ಪಿತೃಲೋಕಕ್ಕೂ ಪ್ರಯಾಣಿಸಿದ. ಅಲ್ಲಿ ಅವನ ವಂಶದ ಹಿಂದಿನ ಪಿತೃ, ಪಿತಾಮಹ, ಪ್ರಪಿತಾಮಹ ಮುಂತಾದ ತನ್ನ ಪೂಜ್ಯ ಪಿತೃಗಣದವರೆಲ್ಲರೂ ಆ ಪಿತೃಲೋಕದಲ್ಲಿ ಒಂದು ಹಾಳು ಬಾವಿಯಲ್ಲಿ ಬಿದ್ದು ಬಹಳ ದುಃಖ ಪಡುತ್ತಿದ್ದುದು ಅವನಿಗೆ ಕಂಡುಬಂತು. ಆಗ ಅವನು ಅವರನ್ನು ಕುರಿತು ಕೂಗಿ ಕೇಳಿದನು. ''ಪೂಜ್ಯರೇ, ತಾವು ಯಾರು? ತಾವು ಇಂಥ ಘೋರ ಕತ್ತಲೆಯ ಕೂಪದಲ್ಲಿ ಬೀಳಲು ಏನು ಕಾರಣ?''

**ಪಿತೃಗಳು:-** ನಾವು ಶ್ರೀವತ್ಸ ಗೋತ್ರದ ಬ್ರಾಹ್ಮಣರು. ಈಗ ಪೃಥ್ವೀಮಂಡಲದಲ್ಲಿ ನಮ್ಮ ವಂಶದವರು ಯಾರೂ ಉಳಿದಿಲ್ಲ. ಆದರಿಂದ ನಾವು ಶ್ರಾದ್ಧಪಿಂಡಗಳಿಂದ ವಂಚಿತರಾಗಿದ್ದೇವೆ. ಸಂತಾನಹೀನರಾದ ದುರ್ದೈವಿ ಜನರು ಇಲ್ಲಿ ನರಕಯಾತನೆಯನ್ನು ಅನುಭವಿಸಬೇಕಾಗುವದು. ಈಗ ನಮ್ಮ ವಂಶದಲ್ಲಿ ಉಳಿದಿರುವ ಏಕಮಾತ್ರ ಆಶಾತಂತು ವ್ಯಕ್ತಿಯೆಂದರೆ, ಧರ್ಮವರ್ಣ. ಅವನು ಪರಮಧರ್ಮಿಷ್ಠ, ಜ್ಞಾನಿ. ಆದರೆ ಅವನು ಈಗ ವಿರಕ್ತನಾಗಿ ಆಚೀಚೆ ಭೂಲೋಕದಲ್ಲಿ ತಿರುಗಾಡುತ್ತಿದ್ದಾನೆ. ಅವನು ಗೃಹಸ್ಥಧರ್ಮವನ್ನು ಸ್ವೀಕರಿಸಲಿಲ್ಲ. ಆದರಿಂದ ನಮಗೆ ಮುಂದೆ ಶ್ರಾದ್ಧ ಮಾಡುವವರು ಯಾರೂ ಇಲ್ಲ. ಅನಂತರ ನಾವು ಇನ್ನೂ ಹೆಚ್ಚಾದ ದುಃಖವನ್ನು ಅನುಭವಿಸಬೇಕಾಗುವದು. ಆದುದರಿಂದ ನೀವು ಭೂಲೋಕಕ್ಕೆ ಹೋದರೆ ನಮ್ಮ ವಂಶದ ಕುಡಿಯಾದ ಆ ಧರ್ಮವರ್ಣನಿಗೆ ಹೇಳಿರಿ.

''ನಮ್ಮ ವಂಶದ ಹುಲ್ಲಿನ ಬೇರನ್ನು ಪ್ರತಿದಿನವೂ ಕಾಲಮೃತ್ಯುವು ಮೂಷಕ ರೂಪದಿಂದ ಕಡಿಯುತ್ತಲೇ ಇದೆ. ನಮ್ಮ ವಂಶದ ಎಲ್ಲರೂ ಸತ್ತುಹೋಗಿದ್ದಾರೆ. ನೀನೊಬ್ಬನು ಮಾತ್ರ ಇರುವೆ. ನೀನು ಕೂಡ ಮದುವೆ ಮಾಡಿಕೊಳ್ಳಲಿಲ್ಲ. ನಮ್ಮ ಮನೆತನದ ಸಂತಾನದ ತಂತುವೇ ವಿಚ್ಛಿನ್ನವಾದಂತಾಗಿದೆ. ಆದ್ದರಿಂದ ನಾವು ಈಗಲೇ ದುಃಖವನ್ನು ಅನುಭವಿಸುತ್ತಲಿದ್ದೇವೆ. ನೀನು ಕೂಡ ಮುಂದೆ ನಮ್ಮಂತೆಯೇ ಈ ದಾರುಣ ದುಃಖವನ್ನು ಅನುಭವಿಸಬೇಕಾಗುವದು. ಆದುದರಿಂದ ನೀನು ಬೇಗ ಮದುವೆಯಾಗು. ಗೃಹಸ್ಥಧರ್ಮವನ್ನು ಅಂಗೀಕರಿಸು. ಸಂತಾನ ವೃದ್ಧಿಯನ್ನು ಮಾಡು. ಇದರಿಂದ ನಿನ್ನ ಹಾಗೂ ನಮ್ಮ ಉದ್ಧಾರವಾಗುವದು. ಈಗ ನಮ್ಮ ಸಾಕ್ಷಾತ್ ಮಕ್ಕಳು ಮೊಮ್ಮಕ್ಕಳು ಯಾರೂ ಇಲ್ಲದ್ದರಿಂದ ನಾವು ಈ ದುಃಖವನ್ನು ಅನುಭವಿಸುತ್ತೇವೆ. ಈಗ ನಮ್ಮ ವಂಶದ ಒಂದು ಶಾಖೆಯಲ್ಲಿ ಬದುಕಿ ಉಳಿದ ನೀನೊಬ್ಬನಾದರೂ ಮದುವೆಯಾಗಿ ಮಗನನ್ನು ಪಡೆದರೆ, ಆ ನಿನ್ನ ಮಗನು ವೈಶಾಖಮಾಸದಲ್ಲಿ ಸ್ನಾನ ದಾನ ದೇವಪೂಜೆ ಮುಂತಾದವುಗಳನ್ನು ಆಚರಿಸಿ, ಪಿತೃಗಳ ಉದ್ದೇಶದಿಂದ ಶ್ರಾದ್ಧಮಾಡಿ, ನಮ್ಮೆಲ್ಲರಿಗೂ ಪಿಂಡವನ್ನು ನೀಡಿದರೆ, ನಮ್ಮೆಲ್ಲರ ಉದ್ಧಾರವೂ ಆಗುವದು. ಈ ನರಕದಿಂದ ನಾವೆಲ್ಲರೂ ಉದ್ಧೃತರಾಗಿ ದಿವ್ಯಲೋಕವನ್ನು ಪಡೆಯುವೆವು. ವಂಶದಲ್ಲಿ ಒಬ್ಬನಾದರೂ ವಿಷ್ಣು ಭಕ್ತನಾಗಿ ಏಕಾದಶೀ ವ್ರತವನ್ನು ಪಾಲನಮಾಡಿ, ಕಾರ್ತೀಕ ವೈಶಾಖ ಮಾಘ ಮಾಸಗಳಲ್ಲಿ ಪ್ರಾತಃಸ್ನಾನಗೈದು ದಾನ ಧರ್ಮಗಳನ್ನು ನೀಡಿ ದಿವ್ಯವಾದ ಶ್ರೀಹರಿ ಕಥೆಯನ್ನು ಶ್ರವಣಮಾಡಿದರೆ, ಅವನ ಹಿಂದಿನ ಮೂರು ತಲೆಮಾರಿನ ಪಿತೃಗಳೆಲ್ಲರೂ ಪಾಪಮುಕ್ತರಾಗಿ ಉದ್ಧೃತರಾಗುವರು. ಅವರಿಗೆ ಮುಂದೆ ಎಂದೂ ನರಕ ದರ್ಶನವಾಗುವದಿಲ್ಲ.

**ಕಿಮನ್ಯೈರ್ಬಹುಭಿಃ ಪುತ್ರೈರ್ದಯಾ ಧರ್ಮ ವಿವರ್ಜಿತೈಃ।**
**ಯೇ ಜಾತಾ ನಾರ್ಚಯಂತ್ಯದ್ಧಾ ವಿಷ್ಣುಂ ನಾರಾಯಣಂ ಕುಲೇ॥**

ಈ ಭೂಲೋಕದಲ್ಲಿ ಹುಟ್ಟಿ ದಯಾಧರ್ಮ ಶೂನ್ಯರಾಗಿ ನಾರಾಯಣನನ್ನು ಚೆನ್ನಾಗಿ ಭಕ್ತಿಯಿಂದ ಪೂಜೆಮಾಡದ ಮಕ್ಕಳು ಎಷ್ಟು ಜನರಿದ್ದರೂ ಏನು ಉಪಯೋಗ?''

ಪಿತೃಗಳ ಈ ಮಾತನ್ನು ಕೇಳಿ ಧರ್ಮವರ್ಣನಿಗೆ ಬಹಳ ಆಶ್ಚರ್ಯವೂ ಆಘಾತವೂ ಆಯಿತು. ಅವನು ಎರಡು ಕೈಗಳನ್ನು ಜೋಡಿಸಿ ಹೇಳಿದನು- ''ನಿಮ್ಮ ಮನೆತನದ ಬಳ್ಳಿಯ ಏಕಮಾತ್ರ ಅವಶಿಷ್ಟ ಕುಡಿಯು ನಾನೇ ಆಗಿದ್ದೇನೆ. ಧರ್ಮವರ್ಣ ಎಂದೇ ನನ್ನ ಹೆಸರು. 'ಈ ಕಲಿಯುಗದಲ್ಲಿ ಯಾರೂ ಇಂದ್ರಿಯನಿಗ್ರಹವನ್ನು ಮಾಡುವದಿಲ್ಲ' ಎಂದೂ ನಾರದರು ಹೇಳಿದ್ದನ್ನು ಕೇಳಿ, ಹೆದರಿದ್ದೇನೆ.

ಇಂಥ ಕಾಮಾಚಾರಿ, ವಾಮಾಚಾರಿ ದುರ್ಜನರ ಸಹವಾಸವು ಆಗಬಾರದೆಂದು ದ್ವೀಪ ದ್ವೀಪಗಳಲ್ಲಿ ಅಲೆಯುತ್ತಿದ್ದೇನೆ. ಈಗ ಕಲಿಯುಗದ ಮೂರು ಚರಣಗಳು ಕಳೆದಿವೆ. ಕೊನೆಯ ಚರಣದ ಮೂರುವರೆ ಭಾಗವು ಕಳೆದು ಹೋಗಿದ್ದು ಇಷ್ಟು ದಿನ ನನ್ನ ಜನ್ಮವು ವ್ಯರ್ಥವಾಗಿ ಹೋಗಿದೆ. ನಾನು ಹುಟ್ಟಿದ ಕುಲದ ಮಾತಾಪಿತೃಗಳ ಋಣವನ್ನು ಈ ವರೆಗೂ ನನಗೆ ತೀರಿಸಲಿಕ್ಕೆ ಆಗಲಿಲ್ಲ. ಯಾವನು ಭೂಲೋಕದಲ್ಲಿ ಹುಟ್ಟಿ ಶ್ರೀವಿಷ್ಣುವಿನ ಪೂಜೆಯನ್ನು ಮಾಡದೇ, ಪಿತೃಗಳ ಶ್ರಾದ್ಧಗಳನ್ನು ಕೂಡ ಗೈಯದೇ ಇರುವನೋ ಅಂಥ ಪುತ್ರನು ಶತ್ರುವೇ ಸರಿ. ಅವನೊಬ್ಬ ಭೂಮಿಗೆ ಭಾರ. ವಂಶಕ್ಕೆ ಒಜ್ಜೆ. ತಂದೆತಾಯಿಗಳಿಗೆ ಶತ್ರು. ಆದ್ದರಿಂದ ಈಗ ನಾನು ತಮ್ಮ ಆಜ್ಞೆಯನ್ನು ಪಾಲಿಸುತ್ತೇನೆ. ಆದುದರಿಂದ ತಾವು ಈಗ ನನಗೆ ಭೂಲೋಕದಲ್ಲಿ ಕಲಿಯುಗದಿಂದ ಯಾವದೇ ಬಾಧೆಯಾಗದಂತೆ ನಾನು ಏನು ಮಾಡಬೇಕು ಎಂಬುದನ್ನು ತಿಳಿಸಿ.

**ಪಿತೃಗಳು:-** ಮಗು, ನೀನು ಮೊದಲು ಮದುವೆಯಾಗು. ಮಕ್ಕಳನ್ನು ಹಡೆ. ಅದರಿಂದ ನಮ್ಮೆಲ್ಲರ ಉದ್ಧಾರ ಮಾಡು. ಶ್ರೀಹರಿಯ ಕಥಾಶ್ರವಣವನ್ನು ಮಾಡುತ್ತ ನಿರಂತರ ನಾರಾಯಣನ ನಾಮಸ್ಮರಣ ಗೈಯುತ್ತ ಇರು. ಸದಾಚಾರ ಸಂಪನ್ನರಾಗಿ ತತ್ತತ್ಕಾಲೋಚಿತವಾದ ಧರ್ಮಕರ್ಮಾನುಷ್ಠಾನವನ್ನು ಮಾಡುತ್ತ ಇರುವವರಿಗೆ ಕಲಿಯುಗದ ಬಾಧೆಯು ಇರಲಾರದು. ಯಾರ ಮನೆಯಲ್ಲಿ ಸಾಲಿಗ್ರಾಮ ಪೂಜೆಯು ಪ್ರತಿದಿನ ಆಗುವದೋ, ಯಾರ ಮನೆಯಲ್ಲಿ ಮಹಾಭಾರತದ ಪುಸ್ತಕದ ವಾಚನ ಕಥನ ಶ್ರವಣ ಪಾರಾಯಣಾದಿಗಳು ನಡೆಯುವವೋ ಅವರನ್ನು ಕಲಿಯು ಎಂದಿಗೂ ಬಾಧಿಸಲಾರನು. ಮತ್ತು ಯಾರು ವೈಶಾಖ ಮಾಸದಲ್ಲಿ ಬೆಳಿಗ್ಗೆ ಸ್ನಾನ, ಮಧ್ಯಾಹ್ನ ಅನ್ನದಾನ, ಅಪರಾಹ್ನದಲ್ಲಿ ಭಗವತ್ಕಥಾ ಶ್ರವಣ, ಸಂಧ್ಯಾಕಾಲದಲ್ಲಿ ಭಗವಧ್ಯಾನ, ರಾತ್ರಿಯಲ್ಲಿ ಭಗವದ್ಗುಣಗಾನ ರೂಪವಾದ ವೈಶಾಖ ಮಾಸದ ಮುಖ್ಯ ಧರ್ಮಗಳನ್ನು ಪಾಲಿಸುತ್ತ ತತ್ಕಾಲವಿಹಿತವಾದ ಎಲ್ಲ ಬಗೆಯಾದ ದಾನ ಧರ್ಮಾನುಷ್ಠಾನಾದಿಗಳನ್ನು ಮಾಡುವರೋ, ಇದರಂತೆ ಮಾಘ ಕಾರ್ತೀಕಗಳಲ್ಲಿ ಪ್ರಾತಃಸ್ನಾನ, ದೀಪದಾನ, ಅನ್ನದಾನ, ಹರಿಧ್ಯಾನ, ಮುಂತಾದವುಗಳನ್ನು ಆಚರಿಸುವರೋ ಅವರ ಹತ್ತಿರವೂ ಕೂಡ ಸುಳಿಯಲಾರನು ಆ ಕಲಿ. ಯಾರ ಮನೆಯಲ್ಲಿ ಪ್ರತಿದಿನ ಮೋಕ್ಷದಾಯಕವಾದ ಭಗವತ್ಕಥಾ ಶ್ರವಣ ಮತ್ತು ಪ್ರತಿನಿತ್ಯ ದೇವರ ಪೂಜೆ ನೈವೇದ್ಯ ವೈಶ್ವದೇವ ಅನ್ನದಾನಾದಿಗಳು ನಡೆಯುವವೋ ಮತ್ತು ಯಾರ ಮನೆಯ ಅಂಗಳದಲ್ಲಿ ತುಳಸೀ ಗಿಡವು ಇರುವುದೋ ಮತ್ತು ಕರು ಸಹಿತವಾಗಿ ಹಸು ಯಾರ ಮನೆಯಲ್ಲಿ ಪ್ರತಿನಿತ್ಯವೂ ಪೂಜಿಸಲ್ಪಡುವುದೋ ಅವರಿಗೆ ಕಲಿಯ ಬಾಧೆ ತಟ್ಟದು.

ವತ್ಸ! ಸಾಲಿಗ್ರಾಮ ಪೂಜೆ, ತುಳಸೀ ಪೂಜೆ, ಗೋಪೂಜೆ, ವೈಶಾಖ ಸ್ನಾನ, ಕಾರ್ತೀಕ ದೀಪ ದಾನ, ಹರಿಕಥಾ ಶ್ರವಣ, ಭೂತ ಯಜ್ಞ, ಪಿತೃಯಜ್ಞ ಮುಂತಾದವುಗಳನ್ನು ವಿಧಿಪೂರ್ವಕವಾಗಿ ಮಾಡುವವರಿಗೆ ಕಲಿಯ ಭಯವು ತಿಲಮಾತ್ರವೂ ಇರಲಾರದು. ಆದಕ್ಕಾಗಿ ನೀನೇಕೆ ಹೆದರುವಿ? ನೀನು ಈಗಲೇ ಭೂಲೋಕಕ್ಕೆ ಹೋಗು. ಈಗ ಹೇಗೂ ವೈಶಾಖ ಮಾಸ. ಸೂರ್ಯನು ಮೇಷ ರಾಶಿಯಲ್ಲಿ ಇರುವನು. ಈ ತಿಂಗಳಿನ ಮುವತ್ತು ದಿನಗಳೂ ಪುಣ್ಯದಾಯಕ. ಅದರಲ್ಲಿಯೂ ವೈಶಾಖ ಅಮಾವಾಸ್ಯ ತಿಥಿಯು ದೇವತೆಗಳಿಗೂ ಪಿತೃಗಳಿಗೂ ಪರಮ ಪ್ರಿಯಕರ. ಅಂದು ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಮಾಡಿ ಪಿಂಡಪ್ರದಾನ ಜಲಕುಂಭ ದಾನಗಳನ್ನು ಮಾಡುವವರು ಅಕ್ಷಯ ಪುಣ್ಯಫಲವನ್ನು ಪಡೆಯುತ್ತಾರೆ. ಆದುದರಿಂದ ನೀನು ಕೂಡಲೇ ಧರಣೀತಳಕ್ಕೆ ಹೋಗು. ಈ ವೈಶಾಖ ಅಮವಾಸ್ಯೆಯ ದಿನ ಜಲಕುಂಭ ಸಹಿತ ಪಿಂಡದಾನ ಮಾಡು. ಗೃಹಸ್ಥಧರ್ಮವನ್ನು ಪರಿಪಾಲಿಸು. ಉತ್ತಮ ಸಂತಾನವನ್ನು ಹೊಂದಿ ಅನಂತರ ವಿರಕ್ತನಾಗಿ ಪುನಃ ಈ ಮುನಿವೃತ್ತಿಯನ್ನು ಸ್ವೀಕರಿಸಿ ಯಥೇಚ್ಛವಾಗಿ ದ್ವೀಪಾಂತರ ಲೋಕಾಂತರ ಸಂಚಾರವನ್ನು ಮಾಡು.''

ಪಿತೃಗಳ ಈ ಆದೇಶವನ್ನು ಕೇಳಿ ಧರ್ಮವರ್ಣ ಮುನಿಯು ಕೂಡಲೇ ಮಹೀತಳಕ್ಕೆ ಬಂದನು. ಸೂರ್ಯನು ಮೇಷರಾಶಿಯಲ್ಲಿ ಇರುವಾಗಲೇ ವೈಶಾಖಮಾಸದಲ್ಲಿ ಮುಂಜಾನೆ ಸ್ನಾನ, ದೇವತಾರ್ಚನ, ಹರಿಪೂಜೆ, ಹರಿಕಥಾಶ್ರವಣ, ದೇವತರ್ಪಣ, ಋಷಿತರ್ಪಣ, ಪಿತೃ ತರ್ಪಣಾದಿಗಳನ್ನು ಮಾಡಿದನು. ಅನಂತರ ಶ್ರಾದ್ಧಮಾಡಿ ಪಿತೃಗಳ ಉದ್ದೇಶದಿಂದ ಪಿಂಡಪ್ರದಾನ ಉದಕುಂಭ ದಾನಗಳನ್ನು ಭಕ್ತಿಯಿಂದ ನೀಡಿದನು. ಅನಂತರ ತಾನು ಮದುವೆಯಾಗಿ ಉತ್ತಮ ಸಂತಾನವನ್ನು ಪಡೆದನು. ಆ ಮಗನು ದೊಡ್ಡವನಾದ ಬಳಿಕ ಅವನಿಗೆ ವೈಶಾಖ ಧರ್ಮ, ಹರಿಕಥಾ ಶ್ರವಣ, ಸಂತತ ಹರಿಧ್ಯಾನದ ವಿಧಿವಿಧಾನಗಳನ್ನೆಲ್ಲ ತಿಳಿಸಿ ಹೇಳಿ, ಇವುಗಳನ್ನೆಲ್ಲ ತಪ್ಪದೇ ಮಾಡಲು ಆದೇಶ ನೀಡಿ ತಾನು ಭಗವಾನ್ ಶ್ರೀ ನಾರಾಯಣನ ನಿರಂತರ ಉಪಾಸನೆಗಾಗಿ ಗಂಧಮಾಧನ ಪರ್ವತಕ್ಕೆ ಹೊರಟುಹೋದನು.

## ಅಕ್ಷಯ ತೃತೀಯಾ ಮತ್ತು ದ್ವಾದಶೀ ತಿಥಿಗಳ ಮಹತ್ವ

**ಶ್ರುತದೇವ:-** ವೈಶಾಖ ಶುಕ್ಲಪಕ್ಷ ತೃತೀಯಾದಿನಕ್ಕೆ ಅಕ್ಷಯ ತೃತೀಯಾ ಎನ್ನುತ್ತಾರೆ. ಆ ದಿನದಂದು ಸೂರ್ಯೋದಯ ಕಾಲದಲ್ಲಿ ಸ್ನಾನಮಾಡಿ ವಿಷ್ಣುವಿನ ಪೂಜೆಯನ್ನು ಗೈದು ಹರಿಕಥಾಶ್ರವಣ ಮಾಡಿದವರು ಮುಕ್ತಿಮಂದಿರವನ್ನು ಸೇರುತ್ತಾರೆ. ಈ ಅಕ್ಷಯ ತೃತೀಯಾದಂದು ಶ್ರೀ ಮಧುಸೂದನನ ಪ್ರೀತಿಗಾಗಿ ಮಾಡಿದ ದಾನ, ಧರ್ಮ ಹಾಗೂ ಪುಣ್ಯಕರ್ಮಗಳು ಅಕ್ಷಯವಾದ ಪುಣ್ಯಫಲವನ್ನು ನೀಡುತ್ತವೆ.

ವೈಶಾಖ ಶುಕ್ಲಪಕ್ಷದ ದ್ವಾದಶೀ ತಿಥಿಯು ಎಲ್ಲ ಪಾಪರಾಶಿಗಳನ್ನು ನಾಶಮಾಡುವದು. ಈ ದಿನದಂದು ಸತ್ಪಾತ್ರದಲ್ಲಿ ಅನ್ನದಾನ ಮಾಡಿದರೆ ಕೋಟಿ ಜನರ ಭೋಜನ ಮಾಡಿಸಿದ ಪುಣ್ಯ. ಏಕಾದಶಿಯಂದು ಉಪವಾಸ ಮಾಡಿ, ರಾತ್ರಿ ಜಾಗರಣ ಗೈದು, ದ್ವಾದಶೀ ದಿನ ಪ್ರಾತಃಕಾಲದಲ್ಲಿ ಸ್ನಾನ ಮಾಡಿ, ಎಳೆಯ ತುಳಸೀ ದಳಗಳಿಂದ ಶ್ರೀಹರಿಯನ್ನು ಪೂಜಿಸಿ, ವಿದ್ವಾಂಸರಿಗೆ ಭೋಜನ ಮಾಡಿಸಿದರೆ ಮಾನವನು ವೈಕುಂಠ ಲೋಕಕ್ಕೆ ಪ್ರಯಾಣ ಮಾಡುವನು. ವೈಶಾಖ ಶುಕ್ಲ ತ್ರಯೋದಶಿ ದಿನದಂದು ವಿಷ್ಣುವಿಗೆ ಹಸುವಿನ ಹಾಲು, ಮೊಸರು, ತುಪ್ಪ ಹಾಗೂ ಜೇನುತುಪ್ಪ ಸಕ್ಕರೆಗಳಿಂದ ಪಂಚಾಮೃತ ಅಭಿಷೇಕ ಮಾಡಿ ಪೂಜೆ ಸಲ್ಲಿಸಿ ಮಾನವನು ವಿಷ್ಣುಲೋಕದಲ್ಲಿ ಪ್ರತಿಷ್ಠಿತ ಆಗುತ್ತಾನೆ.

ಪ್ರಾಚೀನ ಕಾಲದಲ್ಲಿ ಕಾಶ್ಮೀರ ದೇಶದಲ್ಲಿ ದೇವವ್ರತ ಎಂಬ ಹೆಸರಿನ ಒಬ್ಬ ಬ್ರಾಹ್ಮಣ ವಾಸವಾಗಿದ್ದ. ಅವನಿಗೆ ಮಾಲಿನೀ ಎಂಬ ಅತ್ಯಂತ ಸುಂದರಿಯಾದ ಒಬ್ಬ ಮಗಳು. ರತಿಗಿಂತ ಮಿಗಿಲಾಗಿತ್ತು ಅವಳ ಚೆಲುವಿಕೆ. ಆದರೆ ಅವಳ ನಡತೆ ಸರಿಯಾಗಿರಲಿಲ್ಲ. ಸತ್ಯಶೀಲ ಎಂಬ ಬುದ್ಧಿವಂತನಾದ ಬ್ರಾಹ್ಮಣ ಯುವಕನಿಗೆ ಅವಳನ್ನು ದೇವವ್ರತ ಮದುವೆ ಮಾಡಿಕೊಟ್ಟ. ಅವನ ಮಗಳಾದ ಮಾಲಿನಿಯು ಮಾತ್ರ ದಾರಿ ಬಿಟ್ಟು ನಡೆದಳು. ಸ್ವಚ್ಛಂದ ವಿಹಾರ ಮಾಡತೊಡಗಿದಳು. ಸಾತ್ವಿಕನಾದ ತನ್ನ ಪತಿಯನ್ನು ಕಾಡಿ ಬೇಡಿ ತನಗೆ ಬೇಕು ಬೇಕಾದ ವಸ್ತು ಆಭರಣಗಳನ್ನು ಪಡೆದುಕೊಂಡಳು. ಅವಳು ಎಂದಿಗೂ ಪತಿಯ ಹಿತವನ್ನು ಬಯಸಲಿಲ್ಲ. ಸೇವೆಯನ್ನು ಮಾಡಲಿಲ್ಲ. ತನಗೆ ಬೇಕಾದ ತರುಣರನ್ನು ಮನೆಯ ಕೆಲಸ ಮಾಡುವ ನೆಪದಿಂದ ಇಟ್ಟುಕೊಂಡು ಅವರೊಡನೆ ಸ್ವೈರ ವಿಹಾರ ಮಾಡುತ್ತಿದ್ದಳು. ನೀಚ ಜಾತಿಯ ಅನೇಕ ವಿಟಪುರುಷರೊಡನೆ ಅವಳು ಸಂಪರ್ಕ ಹೊಂದಿದಳು.

ಅವಳಿಗೆ ದುರ್ಜನರ ಸಂಗದಿಂದ ಕೆಟ್ಟ ರೋಗ ತಗುಲಿತು. ಅಂಗಾಂಗಗಳಲ್ಲಿ ಹುಳ ಬಿದ್ದವು. ಕೊನೆಗೆ ಅವಳು ಮಹಾರೋಗಕ್ಕೆ ಬಲಿಯಾದಳು. ಕಿವಿ ಮೂಗು ಕೈ ಕಾಲು ಬೆರಳು ಮುಂತಾದ ಅವಯವಗಳೆಲ್ಲವೂ ಕತ್ತರಿಸಿ ಹೋದವು. ಕಾಲು ಕಡಿದು ಕುಂಟಿಯಾದಳು. ಹೀಗೆ ಬಹುಕಾಲ ಅವಳು ಇದೇ ಜನ್ಮದಲ್ಲಿಯೇ ನರಕಯಾತನೆಯನ್ನು ಅನುಭವಿಸಿ ಕೊನೆಗೆ ಮರಣ ಹೊಂದಿದಳು. ಅನಂತರ ಅವಳು ಒಂದೂವರೆ ಲಕ್ಷ ವರ್ಷಗಳವರೆಗೆ ನರಕ ಲೋಕದಲ್ಲಿ ಬಗೆಬಗೆಯ ಬವಣೆಪಟ್ಟಳು. ಹಾಗೂ ಘೋರ ಯಮಯಾತನೆಗಳನ್ನು ಅನುಭವಿಸಿದಳು. ನೂರು ನಾಯಿ ಜನ್ಮಗಳ ಪಡೆದು ಬಹಳಷ್ಟು ದುಃಖವನ್ನು ಭೋಗಿಸಿದಳು. ಅನಂತರ ಅವಳು ಸೌವೀರ ದೇಶದಲ್ಲಿ ಪದ್ಮಬಂಧು ಎಂಬ ಹೆಸರಿನ ಬ್ರಾಹ್ಮಣನ ಮನೆಯಲ್ಲಿ ಹೆಣ್ಣು ನಾಯಿಯಾಗಿ ಹುಟ್ಟಿದಳು. ಆದರೂ ಮಹಾರೋಗ ಅವಳ ಬೆನ್ನು ಬಿಟ್ಟಿರಲಿಲ್ಲ. ಹಿಂದಿನ ಎಲ್ಲ ಶ್ವಾನ ಜನ್ಮಗಳಲ್ಲಿ ಆದಂತೆ ಈಗಲೂ ಅವಳ ಅಥವಾ ಆ ಹೆಣ್ಣುನಾಯಿಯ ಕಣ್ಣು ಮೂಗು ಕಿವಿ ಬಾಲ ತಲೆ ಗುಹ್ಯಾಂಗ ಎಲ್ಲ ಕಡೆಗೂ ಹುಳುಗಳು ಬಿದ್ದು ದುರ್ಗಂಧ ನಾರುತ್ತಿತ್ತು.

## ಕ್ಷಣಸುಖಕ್ಕಾಗಿ ನೂರಾರು ನರಕ, ನಾಯಿ ಜನ್ಮ

ಹೀಗೆ ಮಾಲಿನಿಯು ಮಾನವ ಜನ್ಮದಲ್ಲಿ ವ್ಯಭಿಚಾರ ದೋಷದಿಂದ ಲಕ್ಷಾವಧಿ ವರ್ಷ ನರಕದಲ್ಲಿ ಕೊಳೆತು ಕಷ್ಟಪಟ್ಟು ಬಳಿಕ ನೂರು ನಾಯಿಯ ಜನ್ಮ ಅನುಭವಿಸಿದಳು. ಈಗಲೂ ಇನ್ನೂ ಆ ಪಾಪ ಸವೆಯದೇ ಮಹಾರೋಗ ರೂಪದಿಂದ ಪದ್ಮಬಂಧು ಬ್ರಾಹ್ಮಣನ ಮನೆಯಲ್ಲಿ ಹೆಣ್ಣು ನಾಯಿಯಾಗಿ ಹುಟ್ಟಿದ ಅವಳನ್ನು ಕಾಡುತ್ತಲೇ ಇತ್ತು. ಒಂದು ದಿನ ವೈಶಾಖ ಶುಕ್ಲಪಕ್ಷ ದ್ವಾದಶೀ ದಿನದಂದು ಆ ಪದ್ಮಬಂಧು ಬ್ರಾಹ್ಮಣನ ಪುತ್ರನು ಪ್ರಾತಃಕಾಲದಲ್ಲಿ ನದಿಯಲ್ಲಿ ಸ್ನಾನ ಮಾಡಿದ. ಒದ್ದೆ ಬಟ್ಟೆಯಲ್ಲಿಯೇ ಮನೆಗೆ ಬಂದು ತಮ್ಮ ಮನೆಯ ಅಂಗಳದಲ್ಲಿ ಇರುವ ತುಳಸೀ ಕಟ್ಟೆಯ ಹತ್ತಿರ ಇರುವ ಒಂದು ಕಲ್ಲಿನ ಮೇಲೆ ನಿಂತು ತನ್ನ ಕಾಲುಗಳನ್ನು ತೊಳೆದುಕೊಂಡ.

ಆ ಕಾಲದಲ್ಲಿ ಆ ರೋಗಿಷ್ಠ ನಾಯಿಯು ಅಲ್ಲಿಯೇ ಕಲ್ಲಿನ ಕೆಳಗೆ ಮಲಗಿ ಕೊಂಡಿದ್ದಿತು. ವೈಶಾಖ ಸ್ನಾನ ಮಾಡಿ ಒದ್ದೆ ಬಟ್ಟೆಯಿಂದ ಮನೆಗೆ ಬಂದು ಆ ಕಲ್ಲಿನ ಮೇಲೆ

ನಿಂತು ಕಾಲು ತೊಳೆದುಕೊಂಡ ಆ ಬ್ರಾಹ್ಮಣ ಕುಮಾರನ ಪಾದಪ್ರಕ್ಷಾಲನದ ನೀರು ಆ ಬೇನೆಕೊಳಕ ನಾಯಿಯ ಮೇಲೆ ಬಿದ್ದಿತು. ವೈಶಾಖ ಸ್ನಾನ ಮಾಡಿ ಪವಿತ್ರನಾಗಿ ಬಂದ ಬ್ರಾಹ್ಮಣ ಕುಮಾರನ ಚರಣೋದಕ ಬಿದ್ದು ಆ ಬೇನೆಕೊಳಕ ನಾಯಿಯ ದೇಹವೆಲ್ಲ ತೊಳೆದು ತೊಯ್ದು ಹೋಯಿತು. ವೈಶಾಖ ಸ್ನಾನದಿಂದ ಮಿಂದು ನೆಂದು ಬಂದ ಬ್ರಾಹ್ಮಣ ಪುತ್ರನ ಪಾದೋದಕದ ಪ್ರಭಾವದಿಂದ ಆ ನಾಯಿಯ ಪಾಪಗಳೆಲ್ಲವೂ ನಷ್ಟವಾದವು. ಅದಕ್ಕೆ ತನ್ನ ಪೂರ್ವ ಜನ್ಮಗಳ ಸ್ಮರಣವಾಯಿತು. ತಾನು ಹಿಂದೆ ಮನುಷ್ಯಳಾಗಿ ಮಾಲಿನಿ ಎಂಬ ಮಹಿಳೆಯಾಗಿದ್ದಾಗ ಮಾಡಿದ ಸ್ವೈರಾಚಾರ ವ್ಯಭಿಚಾರ ಪತಿಯ ಅಪಚಾರ ಮುಂತಾದ ದುಷ್ಕರ್ಮಗಳೆಲ್ಲವೂ ನೆನಪಿನಲ್ಲಿ ನುಗ್ಗಿ ಬಂದು ಅವಳು ನಡುಗಿ ಹೋದಳು. ಈ ನಾಯಿಯ ಜನ್ಮದಲ್ಲಿ ಪಶ್ಚಾತ್ತಾಪ ದಗ್ಧಳಾಗಿ ಆ ಬ್ರಾಹ್ಮಣ ಕುಮಾರನಿಗೆ ಮೊರೆಯಿಟ್ಟಳು. ತನ್ನ ಹಿಂದಿನ ಜನ್ಮದ ಕತೆಯನ್ನೆಲ್ಲ ಹೇಳಿ ಕೈ ಜೋಡಿಸಿ ಬೇಡಿಕೊಂಡಳು.

**ಹೆಣ್ಣುನಾಯಿ:-** ಪೂಜ್ಯರೇ, ಯಾವ ನಾರಿಯು ಪತಿಯನ್ನು ವಂಚಿಸಿ ಸ್ವಚ್ಛಂದ ಚಾರಿಣಿಯಾಗಿ, ದುಷ್ಟ ಜಾರಿಣಿಯಾಗಿ ಮಂತ್ರ ಮಾಟ ಮದ್ದು ಬೆಡಗು ಬಿನ್ನಾಣಗಳಿಂದ ಪತಿಯ ಮೇಲೆ ವಶೀಕರಣ ತಂತ್ರವನ್ನು ಪ್ರಯೋಗಿಸಿ ಅವನನ್ನು ತನ್ನ ಮನ ಬಂದಂತೆ ಕುಣಿಸಿ ತಾನು ವಿಟಪುರುಷರೊಂದಿಗೆ ಸರಸವಾಡುವಳೋ ಅವಳು ಅಸಂಖ್ಯ ವರ್ಷಗಳವರೆಗೆ ನನ್ನಂತೆ ನರಕ ಲೋಕದಲ್ಲಿ ಘೋರ ಯಮಯಾತನಗಳನ್ನು ಅನುಭವಿಸಿ ನೂರಾರು ನಾಯಿ, ಕತ್ತೆ, ಹಂದಿ, ಮುಂತಾದ ಕೀಳು ಯೋನಿಗಳಲ್ಲಿ ಹುಟ್ಟಿ, ರೋಗ ತಗುಲಿ ಬಗೆಬಗೆಯಿಂದ ಬಳಲ ಬೇಕಾಗುವದು. ಆದ್ದರಿಂದ ಸ್ತ್ರೀಯು ಯಾವಾಗಲೂ ಪತಿಯ ಆಜ್ಞೆಯನ್ನು ಪಾಲಿಸಬೇಕು.

**"ಭರ್ತಾ ನಾಥೋ ಗುರುರ್ಭರ್ತಾ ಭರ್ತಾದೈವತಮುತ್ತಮಮ್**
**ವಿಕ್ರಿಯಾಂ ಕೃತ್ಯ ಸಾಧ್ವೀ ಸಾ ಕಥಂ ಸುಖಮವಾಪ್ನುಯಾತ್"**

ಸ್ತ್ರೀಯರಿಗೆ ಗಂಡನೇ ಒಡೆಯ. ಗಂಡನೇ ಗುರುವು. ಗಂಡನೇ ಶ್ರೇಷ್ಠ ದೇವತೆ. ಅಂಥ ಪತಿಗೆ ಅಪಚಾರ ಮಾಡಿದ ಮಹಿಳೆಯು ಹೇಗೆ ಸುಖವನ್ನು ಹೊಂದುವಳು?

ಪೂಜ್ಯರೇ, ನಾನು ಮಾಲಿನೀ ಎಂಬ ಮಾನವ ಮಹಿಳೆ ಆಗಿದ್ದಾಗ ನನ್ನ ಪತಿಗೆ ಅಪಚಾರ ಬಗೆದೆ. ನನ್ನ ರೂಪ, ಬಿಂಕ, ಬಿನ್ನಾಣ ಹಾಗೂ ಮಾಟ ಮದ್ದುಗಳಿಂದ ಗಂಡನನ್ನು ವಂಚಿಸಿ, ವಶೀಕರಣ ವಿದ್ಯೆಯಿಂದ ಮರಳು ಮಾಡಿ, ಅವನು ಇದ್ದ ಮನೆಯಲ್ಲಿಯೇ ನನಗೆ ಬೇಕು ಬೇಕಾದ ವಿಟಪುರುಷರೊಂದಿಗೆ ಸ್ವೈರ ಕಾಮ ಕೇಳಿ ಆಡುತ್ತಲಿದ್ದೆ. ನನ್ನ ವಶೀಕರಣದಿಂದ ಮುಗ್ಧನಾದ ಪತಿಯು ನನ್ನ ದುಷ್ಟ ಸ್ವಭಾವ, ಮತ್ತು ಬೊಗಳುವ ಬಾಯಿಯ ಬಿರುಸು ಮಾತುಗಳಿಂದ ಹೆದರಿ ನನ್ನ ಯಾವ ದುರ್ವ್ಯಾಪಾರಗಳನ್ನೂ ಪ್ರತಿಬಂಧಿಸುತ್ತಿದ್ದಿಲ್ಲ. ಅದರಿಂದ ನನ್ನ ವಾಮಾಚಾರ ಹಾಗೂ ಕಾಮಾಚಾರಗಳು ಸ್ವಚ್ಛಂದವಾಗಿ ನಡೆದು ನನ್ನ ಪಾಪದ ಕೊಡ ತುಂಬಿತು. ಆಗಲೇ ಮಹಾರೋಗ ಅಂಟಿಕೊಂಡಿತು. ಬಳಿಕ ನೂರಾರು ನಾಯಿ ಜನ್ಮಗಳಲ್ಲಿಯೂ ಈ ನೂರಾ ಒಂದನೇಯ ನಾಯಿಯ ಜನ್ಮದಲ್ಲಿಯೂ ಆ ಹಿರಿಬೇನೆ ನನ್ನನ್ನು ಬಿಟ್ಟಿಲ್ಲ. ಹುಳ ಬಿದ್ದು ಹಾಳಾಗಿ ಹೋಗಿದೆ ಈ ನನ್ನ ಪಾಪಿ ದೇಹ, ಇದನ್ನು ನೋಡಿಯಾದರೂ ಹೆಣ್ಣುಮಕ್ಕಳು ಬುದ್ಧಿ ಕಲಿಯಲಿ. ಈಗ ನನಗೆ ಪಶ್ಚಾತ್ತಾಪವಾಗಿದೆ. ನನ್ನ ಯಾವುದೋ ಸುದೈವದಿಂದ ವೈಶಾಖ ಸ್ನಾನ ಮಾಡಿ ಬಂದ ತಮ್ಮ ಒದ್ದೆ ಬಟ್ಟೆಯ ನೀರು

ಹಾಗೂ ಕಾಲುತೊಳೆದ ನೀರು ನನ್ನ ದೇಹದ ಮೇಲೆ ಬಿದ್ದು ನನ್ನ ಪಾಪರಾಶಿಯೆಲ್ಲವೂ ನಷ್ಟವಾಗಿದೆ. ಇನ್ನು ಮುಂದಾದರೂ ತಾವೇ ನನ್ನ ಉದ್ಧಾರ ಮಾಡಬೇಕು. ತಾವು ಈ ವೈಶಾಖ ದ್ವಾದಶಿಯ ದಿನ ಸ್ನಾನ ದಾನ ಹಾಗೂ ಅನ್ನ ಭೋಜನ ಮಾಡಿಸಿದ ಒಂದು ದಿನದ ಪುಣ್ಯವನ್ನು ನನಗೆ ಧಾರೆ ಎರೆದು ಕೊಟ್ಟು ಈ ದುರಾಚಾರಿ ಹೆಣ್ಣನ್ನು ಉದ್ಧರಿಸಬೇಕು. ಮಹಾನುಭಾವರೇ, ನಿಮ್ಮ ಆರಾಧ್ಯ ದೇವರಾದ ಶ್ರೀಹರಿಯು ಭಕ್ತವತ್ಸಲ. ಅವನ ಆರಾಧಕರಾದ ನೀವು ಕೂಡ ಅವನಂತೆಯೇ ದೀನವತ್ಸಲರಲ್ಲವೇ! ದಯಮಾಡಿ ನನ್ನ ಮೇಲೆ ಕರುಣೆ ತೋರಿರಿ. ನಾನು ನಿಮ್ಮ ಮನೆಯ ಅಂಗಳ ಕಾಯುವ ನಾಯಿ ಅಲ್ಲವೆ? ಹೇಗಾದರೂ ಮಾಡಿ ನನ್ನನ್ನು ಉದ್ಧರಿಸಿರಿ. ನಿಮಗೆ ನಮಸ್ಕಾರ ಮಾಡುತ್ತೇನೆ.

**ಬ್ರಾಹ್ಮಣ ಕುಮಾರ:-** ನಾಯಿಯೇ, ಈ ಜಗತ್ತಿನಲ್ಲಿ ಎಲ್ಲಪ್ರಾಣಿಗಳೂ ಜನ್ಮಾಂತರದಲ್ಲಿ ತಾವು ಮಾಡಿದ ಪಾಪಪುಣ್ಯಗಳ ಫಲವನ್ನು ಅನುಭವಿಸುತ್ತಲಿರುವರು. ಹಾವಿಗೆ ಕುಡಿಯಲು ಕೊಟ್ಟ ಕೇಶರದ ಹಾಲು ಅದರ ಭೀಕರ ವಿಷವನ್ನು ಬೆಳೆಸಲು ಸಹಾಯಕವಾಗುತ್ತದೆ. ಅದರಂತೆ ಪಾಪಿಗೆ ಕೊಟ್ಟ ಪುಣ್ಯವು ಅವನ ಪಾಪವೃದ್ಧಿಗೆ ಸಹಾಯ ಮಾಡಿದಂತಾಗುತ್ತದೆ. ಆದ್ದರಿಂದ ನಾನು ನಿನ್ನಂಥ ಪಾಪಿಷ್ಠ ನಾಯಿಗೆ ನನ್ನ ವೈಶಾಖ ಸ್ನಾನದ, ಅದರಲ್ಲಿಯೂ ದ್ವಾದಶಿಯಂಥ ಪವಿತ್ರ ದಿನದ ಅನ್ನದಾನದ ಪುಣ್ಯವನ್ನು ಖಂಡಿತವಾಗಿಯೂ ನೀಡಲಾರೆ.''

ಹೀಗೆ ಆ ಮಣಿಕುಮಾರನು ನಿಷೇಧಿಸಿದ ಬಳಿಕ ಆ ಹೆಣ್ಣುನಾಯಿಗೆ ಬಹಳ ದುಃಖವಾಯಿತು. ಆಗ ಅದು ದುಃಖದಿಂದ ದೊಡ್ಡ ಧ್ವನಿ ತೆಗೆದು ಅಳತೊಡಗಿತು. ಅದರ ಧ್ವನಿಯನ್ನು ಕೇಳಿ ಒಳಗಿದ್ದ ಆ ಪದ್ಮಬಂಧು ಬ್ರಾಹ್ಮಣನು ಎದ್ದು ಹೊರಗೆ ಬಂದನು. ಆಗ ಅವನ ಮುಂದೆ ಆ ಹೆಣ್ಣುನಾಯಿ ಹುಡಿಯಲ್ಲಿ ಹೊರಳಾಡಿ ತನ್ನ ಭಾಷೆಯಲ್ಲಿ ಬೊಗಳುತ್ತ ಬೇಡಿಕೊಂಡಿತು.

''ಪೂಜ್ಯರೇ, ನಾನು ನಿಮ್ಮ ಮನೆಯ ತಲೆ ಬಾಗಿಲ ಕಾಯುವ ನಾಯಿ. ನಾನು ಮೂವತ್ತು ವರ್ಷ ನಿಮ್ಮಮನೆಯ ಎಂಜಲು ತಿಂದು ಬೆಳೆದಿದ್ದೇನೆ. ನೀವು ನನ್ನನ್ನು ಹೇಗಾದರೂ ಮಾಡಿ ರಕ್ಷಿಸಿರಿ. 'ಮನೆಯಲ್ಲಿ ಸಾಕಿ ಬೆಳೆಸಿದ ಪ್ರಾಣಿಗಳನ್ನು ಉದ್ಧಾರ ಮಾಡುವುದು ಗೃಹಸ್ಥರ ಕರ್ತವ್ಯ' ಎಂದು ವೇದ ವಿದ್ವಾಂಸರ ಅಭಿಪ್ರಾಯ. 'ತಾವು ಅನ್ನ ಹಾಕಿ ಬೆಳೆಸಿದ ಪ್ರಾಣಿಗಳು ಬೇನೆ ಹತ್ತಿ ಬಳಲುವಾಗ ಅವುಗಳ ಉದ್ಧಾರ ಮಾಡದಿದ್ದರೆ ಯಜಮಾನನು ನರಕ ಭಾಗಿಯಾಗುವನು' ಎಂದು ವಿದ್ವಾಂಸರ ಹೇಳಿಕೆ. ಈ ಪ್ರಪಂಚವನ್ನೆಲ್ಲ ನಿರ್ಮಾಣ ಮಾಡಿದ ಶ್ರೀಹರಿಯು ತನ್ನ ಪತ್ನಿಯಾದ ಲಕ್ಷ್ಮೀದೇವಿ, ಮಗನಾದ ಬ್ರಹ್ಮದೇವ, ಹಾಗೂ ಇತರ ಮಕ್ಕಳಾದ ತತ್ವಾಭಿಮಾನಿ ದೇವತೆಗಳ ಮುಖಾಂತರ ಪ್ರಪಂಚದಲ್ಲಿ ಇರುವ ಎಲ್ಲ ಬಗೆಯ ಜೀವ ಜಂತುಗಳನ್ನು ಪಾಲನ ಪೋಷಣಮಾಡುತ್ತಾನೆ. ಅವನ ಭಕ್ತರಾದ ನೀವು ಕೂಡ ನಿಮ್ಮ ಮನೆಯಲ್ಲಿ ಸಾಕಿ ಬೆಳೆಸಿದ ನನ್ನಂಥ ಪ್ರಾಣಿಗಳನ್ನು ಉದ್ಧರಿಸಿರಿ. ತಾವು ದಯಾಶೀಲರಲ್ಲವೆ? ನಿಮ್ಮ ಮನೆಯ ಅಂಗಳದ ನಾಯಿಯನ್ನು ನೀವಲ್ಲದೇ ಬೇರೆ ಯಾರು ಉದ್ಧರಿಸುವರು? ನಿಮ್ಮ ಈ ಚಿರಂಜೀವರು ನನ್ನನ್ನು ಉದ್ಧರಿಸುವದಿಲ್ಲ ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಇದರಿಂದ ನನಗೆ ಬಹಳ ದುಃಖವಾಗಿದೆ. ನೀವಾದರೂ ಅವರಿಗೆ ಹೇಳಿ ನನ್ನ ಉದ್ಧಾರ ಮಾಡಿಸಿರಿ.'' ಆಗ ಆ ಪದ್ಮಬಂಧು ಮುನಿಗಳು ತಮ್ಮ ಕುಮಾರನನ್ನು ಕುರಿತು ಹೇಳಿದರು.

**ಪದ್ಮಬಂಧು:-** ''ವತ್ಸ, ಈ ನಾಯಿಯ ವಿಷಯದಲ್ಲಿ ನೀನೇಕೆ ಇಷ್ಟು ನಿಷ್ಠುರವಾಗಿ ನುಡಿಯುತ್ತಲಿರುವೆ? ಉದ್ಧಾರ ಮಾಡಿರಿ ಎಂದು ಶರಣು ಬಂದವರನ್ನು ಹೀಗೆ ಎಂದೂ

ತಿರಸ್ಕರಿಸಬಾರದು. ಸಜ್ಜನರ ಬಾಯಿಂದ ದೀನರ, ಹೀನರ ವಿಷಯದಲ್ಲಿ ಹೀಗೆ ನಿಷೇಧದ ನಿಷ್ಠುರ ನುಡಿಗಳು ಹೊರಬರಕೂಡದು. ಪ್ರಾಣಿದಯೆಯೇ ನಮ್ಮ ಧರ್ಮ. ಪರೋಪಕಾರವೇ ನಮ್ಮ ಕರ್ತವ್ಯ. ನೋಡು ನಿನಗೆ ಕಾಣುವದಿಲ್ಲವೆ! ಸೂರ್ಯ, ಚಂದ್ರ, ಗಾಳಿ, ಬೆಳಕು, ಬೆಂಕಿ, ಹಗಲು ಇರುಳು, ನೀರು, ಮರ, ಸತ್ಪುರುಷರು ಮುಂತಾದವರೆಲ್ಲರೂ ಕೇವಲ ಪರೋಪಕಾರಕ್ಕಾಗಿಯೇ ತಮ್ಮ ಜನ್ಮವನ್ನು ಅರ್ಪಿಸಿರುವರು.

ಹಿಂದೆ ದಧೀಚಿ ಮಹರ್ಷಿಗಳು ದೇವತೆಗಳಿಗೆ ಉಪಕಾರ ಮಾಡಲಿಕ್ಕಾಗಿ ತಮ್ಮ ದೇಹದ ಮೂಳೆಗಳನ್ನೇ ದಾನಕೊಟ್ಟರು. ಶಿಬಿ ಚಕ್ರವರ್ತಿಯ ಕಥೆಯನ್ನು ನೀನು ಕೇಳಲಿಲ್ಲವೆ? ಒಂದು ಕಪೋತದ ಜೀವ ಉಳಿಸಲಿಕ್ಕಾಗಿ ತನ್ನ ದೇಹದ ಮಾಂಸವನ್ನೇ ನೀಡಿದ ಆ ಮಹಾತ್ಮ. ಜೀಮೂತವಾಹನ ಎಂಬ ರಾಜನು ಒಂದು ಹಾವನ್ನು ಉಳಿಸಲಿಕ್ಕಾಗಿ ಗರುಡನಿಗೆ ತನ್ನನ್ನೇ ಬಲಿಯಾಗಿ ಅರ್ಪಿಸಿದ. ಆದ್ದರಿಂದ ಪ್ರತಿಯೊಬ್ಬ ಮಾನವನೂ ಅದರಲ್ಲಿಯೂ ವಿಶೇಷವಾಗಿ ಬ್ರಾಹ್ಮಣರು ಪರೋಪಕಾರ ಮಾಡುವ ಪ್ರಸಂಗ ಬಂದಾಗ ಎಂದೂ ಹಿಂದೇಟು ಹಾಕಬಾರದು.

ದಯೆದೋರುವಾಗ ಜಾತಿ ಉಚ್ಚ, ನೀಚ ಕೀಳು, ಮೇಲು ಎಂಬ ಪಕ್ಷಪಾತ ದೃಷ್ಟಿ ಇರಕೂಡದು. ದೇವೇಂದ್ರನು ಮಳೆಗರೆಯುವಾಗ ಶುದ್ಧ ಸ್ಥಾನ, ಅಶುದ್ಧ ಸ್ಥಾನ, ಪುಣ್ಯಕ್ಷೇತ್ರ, ಪಾಪಿಗಳ ವಸತಿ, ಬ್ರಾಹ್ಮಣರು ಇದ್ದ ಅಗ್ರಹಾರ, ಚಂಡಾಲರು ನೆಲೆಸಿದ ಹೊಲೆಗೇರಿ ಎಂದು ಮುಂತಾಗಿ ಭೇದಭಾವ ಮಾಡುವನೇ? ಶುದ್ಧಾ ಶುದ್ಧ, ಪವಿತ್ರಾಪವಿತ್ರ ಎಲ್ಲ ಸ್ಥಾನಗಳಲ್ಲಿಯೂ ಸರಿಯಾಗಿ ಮಳೆಯನ್ನು ಸುರಿಸುವದಿಲ್ಲವೇ? ಸೂರ್ಯ ಚಂದ್ರರು ಚಂಡಾಲರ ಮನೆಯಲ್ಲಿ ಬೆಳಕನ್ನು ಬೀರುವದಿಲ್ಲವೆ? ಅದರಂತೆ ನಮ್ಮ ಮನೆಯ ಮುಂದಿನ ನಾಯಿಯು ಮತ್ತೆ ಮತ್ತೆ ಬಿದ್ದು ಬೇಡಿಕೊಳ್ಳುವಾಗ ನಾವೇಕೆ ಅದಕ್ಕೆ ನಮ್ಮ ಪುಣ್ಯವನ್ನು ಕೊಟ್ಟು ಉದ್ಧರಿಸಬಾರದು? ನಿನಗೆ ಬೇಡವಾದರೆ ಬಿಡು. ನಾನೇ ನನ್ನ ಪುಣ್ಯವನ್ನು ನೀಡಿ ಈ ನಾಯಿಯನ್ನು ಉದ್ಧರಿಸುತ್ತೇನೆ.''

ಹೀಗೆ ನುಡಿದು ಪರಮದಯಾಳುವಾದ ಆ ಪದ್ಮಬಂಧು ಮುನಿಯು ಆ ರೋಗಿಷ್ಠ ನಾಯಿಯನ್ನು ಮುಂದೆ ಕರೆದು ತಾನು ಅಂದು ವೈಶಾಖ ಶುಕ್ಲ ದ್ವಾದಶೀ ದಿನದಂದು ಮಾಡಿದ ಪ್ರಾತಃಸ್ನಾನದ ಪುಣ್ಯವನ್ನು ಸಂಕಲ್ಪಪೂರ್ವಕವಾಗಿ ''ಇದರಿಂದ ಈ ನಾಯಿಯ ಉದ್ಧಾರ ವಾಗಲಿ'' ಎಂದು ನುಡಿದು ನೀರು ಬಿಟ್ಟನು. ಹೀಗೆ ಆ ಬ್ರಾಹ್ಮಣನು ವೈಶಾಖ ಸ್ನಾನದ ಪುಣ್ಯವನ್ನು ದಾನಮಾಡಿ ತನ್ನ ಕಮಂಡಲದ ನೀರನ್ನು ಅದರ ಮೇಲೆ ಪ್ರೋಕ್ಷಿಸಿದ ಕೂಡಲೇ ಆ ನಾಯಿಯು ದೇಹವು ಬಿದ್ದು ಹೋಯಿತು. ಅದರ ಒಳಗಿನಿಂದ ದಿವ್ಯದೇಹಧಾರಣವನ್ನು ಮಾಡಿ ಹಿಂದಿನ ಮಾಲಿನೀ ಎಂಬ ಬ್ರಾಹ್ಮಣ ಕುಮಾರಿಯು ಎದ್ದು ಹೊರಬಂದಳು.

*ತನ್ನನ್ನು ವೈಶಾಖ ಸ್ನಾನದ ಪುಣ್ಯವನ್ನು ಕೊಟ್ಟು ಉದ್ಧರಿಸಿದ ಪದ್ಮಬಂಧು ಮುನಿಗಳ ಪಾದಾರವಿಂದಗಳಿಗೂ ಹಾಗೂ ಅಲ್ಲಿಯೇ ನಿಂತ ಆ ಬ್ರಾಹ್ಮಣಕುಮಾರನಿಗೂ ಭಕ್ತಿಯಿಂದ ವಂದಿಸಿದಳು. ಮತ್ತು ಆ ಇಬ್ಬರೂ ತಂದೆಮಕ್ಕಳಿಗೆ ಮೂರುಬಾರಿ ಪ್ರದಕ್ಷಿಣೆ ಹಾಕಿದಳು. ಅವರ ಉಪಕಾರವನ್ನು ಮನ್ನಿಸಿ ಮತ್ತೆ ಮತ್ತೆ ನಮಸ್ಕಾರ ಮಾಡಿದಳು. ಆ ಪದ್ಮಬಂಧು ಮುನಿಯ ಅಪ್ಪಣೆ ಪಡೆದು ವಿಮಾನಾರೂಢಳಾಗಿ ಸ್ವರ್ಗಕ್ಕೆ ಹೊರಟು ಹೋದಳು. ಅನೇಕ ವರ್ಷಗಳ ಕಾಲ ದೇವೇಂದ್ರನ ಆ ಅಮರಾವತಿ ಪಟ್ಟಣದಲ್ಲಿ ಸುಖವನ್ನು ಅನುಭವಿಸಿ ಕೊನೆಗೆ ಭೂಮಂಡಲದಲ್ಲಿ ಬದರಿಕಾಶ್ರಮದಲ್ಲಿ

* ವೈಶಾಖ ಸ್ನಾನದ ಪುಣ್ಯದಿಂದ ನಾಯಿ ಊರ್ವಶಿಯಾಯಿತು.

ಶ್ರೀಮನ್ನಾರಾಯಣ ದೇವರ ತೊಡೆಯಿಂದ ಊರ್ವಶಿ ಎಂಬ ಹೆಸರಿನ ಅಪ್ಸರಾ ಸ್ತ್ರೀಯಾಗಿ ಜನಿಸಿದಳು. ಅಂದಿನ ಮಾಲಿನಿಯೇ ಇಂದು ಊರ್ವಶಿಯಾಗಿ ಸ್ವರ್ಗಲೋಕದಲ್ಲಿ ಎಲ್ಲ ದೇವತೆಗಳಿಂದಲೂ ಮಾನನೀಯಳೂ ಪೂಜನೀಯಳೂ ಆಗಿರುತ್ತಾಳೆ. ಇದೆಲ್ಲವೂ ವೈಶಾಖ ಸ್ನಾನ, ದ್ವಾದಶೀ ದಿನದ ಅನ್ನದಾನದ ಪುಣ್ಯ ಪ್ರಭಾವ.

## ವೈಶಾಖ ಮಾಸದ ಕೊನೆಯ ಮೂರು ದಿನಗಳ ಮಹತ್ವ

**ಶ್ರುತದೇವ:-** ರಾಜೇಂದ್ರನೇ, ವೈಶಾಖ ಮಾಸದ ಶುಕ್ಲಪಕ್ಷದ ಕೊನೆಯ ಮೂರು ದಿನಗಳು ಪರಮ ಪವಿತ್ರ. ತ್ರಯೋದಶಿ, ಚತುರ್ದಶಿ, ಹುಣ್ಣಿಮೆ ಈ ಮೂರು ವೈಶಾಖ ಮಾಸದ ಕಡೆಯ ತಿಥಿಗಳಿಗೆ ಅಂತ್ಯ ಪುಷ್ಕರಣಿ ಎಂದು ಹೆಸರು. ವೈಶಾಖ ಮಾಸದ ಮೂವತ್ತೂ ದಿನಗಳಲ್ಲಿ ಪ್ರಾತಃಸ್ನಾನ ಮಾಡಲು ಸಾಮರ್ಥ್ಯ, ಅನುಕೂಲತೆ, ಅವಕಾಶ ಇಲ್ಲದವರು ಈ ಕೊನೆಯ ಮೂರು ದಿನಗಳ ಅಂತ್ಯ ಪುಷ್ಕರಣಿಯ ತಿಥಿತ್ರಯದಲ್ಲಿ ಸ್ನಾನ ಮಾಡಿದರೆ ವೈಶಾಖ ಮಾಸದ ಒಂದು ತಿಂಗಳ ಸ್ನಾನ ಮಾಡಿದ ಪುಣ್ಯವನ್ನು ಪಡೆಯುತ್ತಾರೆ.

ಪರಮಾತ್ಮನಿಗೆ ಅತ್ಯಂತ ಪ್ರಿಯವಾಗಿದೆ ಈ ವೈಶಾಖ ಮಾಸ. ಅದರಲ್ಲಿಯೂ ಕೊನೆಯ ಮೂರುದಿನಗಳು ಭಗವಂತನಿಗೆ ಇಷ್ಟ. ಅಂದು ಸ್ನಾನ ದಾನಾದಿಗಳಿಂದ ಸರ್ವಪಾಪಗಳೂ ನಷ್ಟ. ಈ ತಿಂಗಳಿನ ಈ ವಿಶಿಷ್ಟ ತಿಥಿಗಳಿಗೆ ಇಷ್ಟು ಪಾವಿತ್ರ್ಯ ಹಾಗೂ ಮಾಹಾತ್ಮ್ಯ ಬರಲು ಒಂದು ಕಾರಣ ಉಂಟು. ಪೂರ್ವಕಾಲದಲ್ಲಿ ದೇವದಾನವರು ಕೂಡಿ ಹಾಲು ಗಡಲನ್ನು ಕಡೆದರಷ್ಟೆ? ಆಗ ಅದರಿಂದ ಸುರಾಸುರರಿಗೆಲ್ಲ ಇಷ್ಟ ಪ್ರೇಷ್ಠವಾದ ಶ್ರೇಷ್ಠ ಅಮೃತವು ಹೊರಟದ್ದು ಈ ವೈಶಾಖ ಮಾಸದಲ್ಲಿಯೇ. ವೈಶಾಖ ಶುದ್ಧ ಏಕಾದಶಿಯಂದು ಕ್ಷೀರಸಮುದ್ರದಿಂದ ಅಮೃತವು ಪ್ರಾದರ್ಭೂತವಾಯಿತು. ದ್ವಾದಶೀ ದಿನ ಶ್ರೀಹರಿಯು ಅಮೃತಕಲಶವನ್ನು ರಕ್ಷಣೆಮಾಡಿದನು. ತ್ರಯೋದಶಿಯ ದಿನ ಶ್ರೀಹರಿಯು ಮೋಹಿನಿಯ ರೂಪದಿಂದ ದೇವತೆಗಳಿಗೆ ಆ ಅಮೃತವನ್ನು ಪ್ರಾಶನಮಾಡಿಸಿದನು. ವೈಶಾಖ ಶುಕ್ಲ ಚತುರ್ದಶಿ ದಿನದಂದು ದೇವವಿರೋಧಿಗಳಾದ ದೈತ್ಯರನ್ನು ಸಂಹಾರ ಮಾಡಿದನು. ಕೊನೆಯ ಪೂರ್ಣಿಮೆಯ ದಿನ ದೈತ್ಯರನ್ನೆಲ್ಲ ಗೆದ್ದು ದೇವತೆಗಳನ್ನು ಅವರ ಸ್ವರ್ಗ ಸಾಮ್ರಾಜ್ಯದಲ್ಲಿ ಪುನಃ ಪ್ರತಿಷ್ಠಾಪನೆಯನ್ನು ಮಾಡಿಸಿದನು. ಇದರಿಂದ ಪರಮ ಪರಿತುಷ್ಟರಾದ ಸುರೇಶ್ವರರು ವೈಶಾಖ ಮಾಸದ ತ್ರಯೋದಶಿ, ಚರ್ತುದಸಿ, ಹುಣ್ಣಿಮೆ ಈ ಮೂರು ತಿಥಿಗಳನ್ನು ಅಂತ್ಯ ಪುಷ್ಕರಣಿ ಎಂದು ಕರೆದು ಅವುಗಳಿಗೆ ಹೀಗೆ ವರವನ್ನು ಕೊಟ್ಟರು- ''ವೈಶಾಖ ಮಾಸದ ಕೊನೆಯ ಈ ಮೂರು ತಿಥಿಗಳು ಮಾನವರ ಪಾಪಗಳನ್ನು ನಾಶಮಾಡಿ ಅವರಿಗೆ ಪುತ್ರ ಪೌತ್ರ, ಐಶ್ವರ್ಯ ಸೌಭಾಗ್ಯಪ್ರದಾಯಕವಾಗಲಿ. ಈ ತಿಂಗಳ ಪೂರ್ತಿ ಪ್ರಾತಃಸ್ನಾನ ಮಾಡಲು ಅಶಕ್ತರಾದವರು ಈ ಮೂರು ದಿನಗಳ ಸ್ನಾನದಿಂದಲೇ ಪೂರ್ಣ ಫಲವನ್ನು ಪಡೆಯುವಂತಾಗಲಿ. ವೈಶಾಖ ಧರ್ಮಪಾಲನ ಮಾಡುವದರಿಂದ ಮಾನವರ ಎಲ್ಲ ಮನೋಭೀಷ್ಟಗಳು ಪೂರ್ಣವಾಗಿ ಅವರಿಗೆ ಮುಂದೆ ಶ್ರೀಹರಿಯ ಸಾಯುಜ್ಯ ಮೋಕ್ಷವು ಪ್ರಾಪ್ತವಾಗಲಿ.'' ಹೀಗೆ ವರವನ್ನು ನೀಡಿ ದೇವತೆಗಳು ತಮ್ಮ ತಮ್ಮ ಸ್ಥಾನಗಳಿಗೆ ತೆರಳಿದರು.

*ಅಂತ್ಯ ಪುಷ್ಕರಣಿ ಎಂದು ಹೆಸರಾದ ಈ ಕೊನೆಯ ಮೂರು ದಿನಗಳಂದು ಭಗವದ್ಗೀತೆಯ ಪಾರಾಯಣ ಮಾಡಿದವರಿಗೆ ಅಶ್ವಮೇಧ ಯಜ್ಞಮಾಡಿದ ಪುಣ್ಯವು ದೊರೆಯುವುದು. ವಿಷ್ಣು ಸಹಸ್ರನಾಮ ಮಂತ್ರವನ್ನು ಪಠಿಸುವವರಿಗೆ ಅನಂತ ಪುಣ್ಯಫಲ. ವೈಶಾಖ ಹುಣ್ಣಿಮೆಯಂದು ಶ್ರೀಹರಿಗೆ ಪಂಚಾಮೃತದಿಂದ ಅಭಿಷೇಕ ಮಾಡಿ ವಿಷ್ಣು ಸಹಸ್ರ

* ಸಂಕ್ಷಿಪ್ತ ವೈಶಾಖ ಧರ್ಮ

ನಾಮಾವಳಿಗಳಿಂದ ಭಗವಂತನಿಗೆ ಪುಷ್ಪಾರ್ಚನೆ, ತುಳಸೀ ಅರ್ಚನೆ ಮಾಡಿದವರು ವೈಕುಂಠ ಲೋಕಕ್ಕೆ ಹೋಗುತ್ತಾರೆ. ವೈಶಾಖ ಮಾಸದಲ್ಲಿ ಪ್ರತಿದಿನವೂ ಭಾಗವತದ ಒಂದು ಸ್ಕಂಧ ಅಥವಾ ಒಂದು ಶ್ಲೋಕ, ಕೊನೆಗೆ ಒಂದು ಪಾದವನ್ನಾದರೂ ಪಠಣ ಪಾರಾಯಣ ಶ್ರವಣ ಮಾಡಿದ ಮಾನವರು ಪರಬ್ರಹ್ಮ ಅಪರಬ್ರಹ್ಮ ಇಬ್ಬರ ಅನುಗ್ರಹಕ್ಕೆ ಪಾತ್ರರಾಗುವರು. ಬ್ರಹ್ಮಜ್ಞಾನದಿಂದ, ಪ್ರಯಾಗ ಮರಣದಿಂದ, ಹಾಗೂ ವೈಶಾಖ ಮಾಸದಲ್ಲಿ ಮೂವತ್ತು ದಿನ ವಿಧಿಪೂರ್ವಕವಾಗಿ ಪ್ರಾತಃಸ್ನಾನ ಮಾಡಿ ಭಕ್ತಿಯಿಂದ ಭಗವಂತನ ಪೂಜೆಮಾಡುವದರಿಂದ ಮೋಕ್ಷ ಪ್ರಾಪ್ತಿಯಾಗುವದು. ಆದ್ದರಿಂದ ವೈಶಾಖದ ಈ ಮೂರು ಪುಷ್ಕರಣಿ ದಿನಗಳಂದು ಸ್ನಾನ, ದಾನ, ಭಗವತ್ ಪೂಜೆ ಹಾಗೂ ಭಾಗವತಾದಿ ಪುರಾಣಗಳ ಶ್ರವಣ ಮಾಡುವುದರಿಂದ ಮಾನವರು ರೋಗ ಶೋಕಗಳಿಂದ ರಹಿತರಾಗಿ ಭಗವಂತನ ಸಾನ್ನಿಧ್ಯವನ್ನು ಸೇರುವರು. ವೈಶಾಖ ಮಾಸದ ಈ ಅಗಾಧವಾದ ಮಾಹಾತ್ಮ್ಯವನ್ನು ಯಾರು ವರ್ಣನೆ ಮಾಡಬಲ್ಲರು? ಆದ್ದರಿಂದ ನೀನಾದರೂ ಈ ವೈಶಾಖ ಮಾಸದಲ್ಲಿ ಪ್ರಾತಃಸ್ನಾನ ದೇವಪೂಜೆ ಅನ್ನದಾನ ಪುರಾಣ ಶ್ರವಣ ಪರೋಪಕಾರ ಮುಂತಾದವುಗಳನ್ನು ತಪ್ಪದೇ ಮಾಡು. ಅದರಿಂದ ನಿನಗೆ ಮೋಕ್ಷ ಪ್ರಾಪ್ತಿಯು ಖಂಡಿತ.''

ಹೀಗೆ ಮಿಥಿಲಾಪಟ್ಟಣದ ದೊರೆಯಾದ ಜನಕರಾಜನಿಗೆ ಮಹರ್ಷಿ ಶ್ರುತದೇವ ಉಪದೇಶವನ್ನು ನೀಡಿ ಅಲ್ಲಿಂದ ಹೊರಟರು. ಆಗ ರಾಜರ್ಷಿ ಜನಕ ರಾಜನು ಯಥೋಚಿತ ರೀತಿಯಿಂದ ಅವರನ್ನು ಪೂಜಿಸಿದ. ಅವರಿಗೆ ವಸ್ತ್ರ ಅಲಂಕಾರ, ಹಸು, ಭೂಮಿ, ಬೆಳ್ಳಿ ಬಂಗಾರ ಮುಂತಾದವುಗಳನ್ನು ಕೊಟ್ಟು ಗೌರವಿಸಿದ. ರಾಜಮಂತ್ರಿ ಸೇನಾಪತಿ ಪರಿವಾರದವರೆಲ್ಲರೂ ಆ ಮಹರ್ಷಿಗಳಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಕೈಜೋಡಿಸಿಕೊಂಡು ನಿಂತರು. ಅನಂತರ ಜನಕ ಮಹಾರಾಜನು ಮಹರ್ಷಿಗಳನ್ನು ಪಲ್ಲಕ್ಕಿಯಲ್ಲಿ ಕೂಡಿಸಿಕೊಂಡು ಮೆರವಣಿಗೆಯಿಂದ ಊರ ಹೊರಗೆ ಬೀಳ್ಕೊಟ್ಟನು. ಶ್ರುತದೇವ ಮಹರ್ಷಿಗಳು ಜನಕ ಮಹಾರಾಜನು ನೀಡಿದ ಸ್ವಾಗತ ಸತ್ಕಾರ ಪೂಜೆ ಪ್ರದಕ್ಷಿಣೆ ನಮಸ್ಕಾರಾದಿಗಳಿಂದ ಪರಮ ಪ್ರೀತರಾಗಿ ಅಲ್ಲಿಂದ ತಮ್ಮ ಸ್ಥಾನಕ್ಕೆ ತೆರಳಿದರು. ಅವರು ಹೇಳಿದಂತೆ ಜನಕ ಮಹಾರಾಜನು ವೈಶಾಖ ಧರ್ಮವನ್ನು ಪಾಲನೆಮಾಡಿ ಇಹದಲ್ಲಿ ಭುಕ್ತಿಯನ್ನು ಪರದಲ್ಲಿ ಮುಕ್ತಿಯನ್ನು ಪಡೆದನು.

**ನಾರದ:-** ಅಂಬರೀಷನೇ, ನಾನು ನಿನಗೆ ಉತ್ತಮವಾದ ಈ ವೈಶಾಖ ಮಾಸದ ಮಾಹಾತ್ಮ್ಯವನ್ನು ತಿಳಿಸಿದೆ. ಇದು ಸರ್ವಪಾಪ ಪ್ರಣಾಶಕ ಹಾಗೂ ಸರ್ವಸಂಪತ್ ಪ್ರದಾಯಕ.''

ನಾರದರು ಹೇಳಿದ ಈ ವೈಶಾಖ ಮಾಸದ ಮಹಿಮೆಯನ್ನು ಶ್ರದ್ಧೆಯಿಂದ ಕೇಳಿ ಅಂಬರೀಷ ಮಹಾರಾಜನು ಮನಸ್ಸಿನಲ್ಲಿ ಸುಪ್ರಸನ್ನನಾದನು. ನಾರದರಿಗೆ ಸಾಷ್ಟಾಂಗ ನಮಸ್ಕಾರಮಾಡಿ ತನ್ನ ಸಂಪತ್ತಿಗೆ ಅನುಗುಣವಾಗಿ ವೈಭವದಿಂದ ಪೂಜೆಮಾಡಿದನು. ಅನಂತರ ನಾರದರು ಅವನ ಅಪ್ಪಣೆ ಪಡೆದು ಅಲ್ಲಿಂದ ಹೊರಟು ಹೋದರು.

ನಾರದರು ಹೋದ ಬಳಿಕ ಅಂಬರೀಷ ರಾಜನು ವೈಶಾಖ ಧರ್ಮಗಳನ್ನು ಅನುಷ್ಠಾನ ಮಾಡಿ ಪರಬ್ರಹ್ಮ ಸಾಕ್ಷಾತ್ಕಾರವನ್ನು ಹೊಂದಿದನು. ಪುಣ್ಯವರ್ಧಕವಾದ ಈ ವೈಶಾಖ ಉಪಾಖ್ಯಾನವನ್ನು ಹೇಳಿದವರೂ, ಕೇಳಿದವರೂ ದಿವ್ಯಗತಿಯನ್ನು ಹೊಂದುತ್ತಾರೆ. ಈ ವೈಶಾಖ ಮಾಹಾತ್ಮ್ಯ ಪುಸ್ತಕವು ಮನೆಯಲ್ಲಿದ್ದರೆ ಮುಕ್ತಿಯೇ ಅವರ ಮನೆಯಲ್ಲಿದ್ದಂತೆ. ಇದರ ಶ್ರವಣ, ಮನನ, ಅನುಷ್ಠಾನಗಳಿಂದ ಭುಕ್ತಿ ಮುಕ್ತಿ ಎರಡೂ ಸುಲಭ ಸಾಧ್ಯ.

*ವೈಶಾಖ ಮಾಹಾತ್ಮೆ ಮುಗಿಯುವುದರೊಂದಿಗೆ ವೈಷ್ಣವ ಖಂಡ ಸಂಪೂರ್ಣ*

# ಬ್ರಹ್ಮ ಖಂಡ

# ಸೇತು ಮಾಹಾತ್ಮ್ಯ

## ಸೇತು ತೀರ್ಥ, ರಾಮೇಶ್ವರ ಕ್ಷೇತ್ರಗಳ ಮಹಿಮೆ — ಅಧ್ಯಾಯ - ೭೧

**ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।**
**ಪ್ರಸನ್ನ ವದನಂ ಧ್ಯಾಯೇತ್ ಸರ್ವ ವಿಘ್ನೋಪ ಶಾಂತಯೇ ॥**

ಎಲ್ಲ ವಿಘ್ನಗಳ ಪರಿಹಾರಕ್ಕಾಗಿ ಪ್ರಸನ್ನ ವದನನಾದ ವಿಷ್ಣುವನ್ನು ಧ್ಯಾನ ಮಾಡಬೇಕು. ಚಂದ್ರಮನಂತೆ ಚೆಲುವನಾದ ಆ ವಿಷ್ಣುವಿಗೆ ನಾಲ್ಕು ತೋಳುಗಳು. ಶುಭ್ರವಾದ ಬಟ್ಟೆಯನ್ನು ಧರಿಸಿದ್ದಾನೆ. ಇಂಥ ಪ್ರಸನ್ನ ಮುಖ ಮುದ್ರೆಯ ಶ್ರೀಹರಿಯನ್ನು ಚಿಂತಿಸಬೇಕು.

ಹಿಂದೆ ಶೌನಕರೇ ಮೊದಲಾದ ಮಹರ್ಷಿಗಳು ಅಷ್ಟಾಂಗ ಯೋಗಸಾಧನದಲ್ಲಿ ತತ್ಪರರಾಗಿ ಬ್ರಹ್ಮಜ್ಞಾನವನ್ನು ಪಡೆಯಲು ತವಕಿಸುತ್ತಿದ್ದರು. ಅವರೆಲ್ಲರೂ ಬ್ರಹ್ಮವಾದಿಗಳು. ಧರ್ಮದ ಮರ್ಮವನ್ನು ಅರಿತವರು. ಇಂದ್ರಿಯಗಳನ್ನೆಲ್ಲ ವಶದಲ್ಲಿ ಇಟ್ಟುಕೊಂಡವರು. ಸತ್ಯವನ್ನೇ ವ್ರತ ಎಂದು ಆಚರಿಸುವವರು. ಕಾಮ ಕ್ರೋಧಗಳನ್ನು ಗೆದ್ದವರು. ಭೂತ ದಯಾಶೀಲರು. ಇಂಥ ಈ ಶೌನಕಾದಿ ಋಷಿಗಳು ಭಕ್ತಿಯಿಂದ ಶ್ರೀಹರಿಯ ಪೂಜೆಯನ್ನು ಸಂತತವೂ ಗೈಯುತ್ತಲೇ ಇದ್ದರು. ಆ ಮುನಿಮಂಡಲದ ಮಹನೀಯರೆಲ್ಲರೂ ಹಗಲಿರುಳು ಹರಿಕಥಾಶ್ರವಣ, ಪಠಣ, ಪಾರಾಯಣ, ಪ್ರವಚನ ರೂಪವಾದ ವಾಙ್ಮಯ ತಪಸ್ಸನ್ನು ನಿತ್ಯ ನಿರಂತರವೂ ಮಾಡುತ್ತಲಿದ್ದರು. ಶ್ರೀಹರಿಯ ದಿವ್ಯವಾದ ಚರಿತ್ರೆಗಳ ಕಥನ ಹಾಗೂ ಶ್ರವಣಗಳೇ ಅವರ ತಪಸ್ಸು. ಈ ಭಗವದ್ ಗುಣಗಾನ ರೂಪವಾದ ಈ ಜ್ಞಾನಯಜ್ಞವನ್ನು ಅವರು ಬಿಡುವಿಲ್ಲದೇ ನಡೆಸಿದ್ದರು.

ಅದೇ ವೇಳೆಯಲ್ಲಿ ಅಲ್ಲಿಗೆ ಸೂತಾಚಾರ್ಯರು ಆಗಮಿಸಿದರು. ಈ ಸೂತಮುನಿಯು ವೇದವ್ಯಾಸರ ಸಾಕ್ಷಾತ್ ಶಿಷ್ಯ, ಪೌರಾಣಿಕರಲ್ಲಿ ಸರ್ವಶ್ರೇಷ್ಠ, ಮಹಾಪಂಡಿತ. ಪ್ರವಚನದಲ್ಲಿ ವಿಲಕ್ಷಣ ದೀಕ್ಷೆ ಆ ಸೂತ ಮುನಿಗೆ. ಯದೃಚ್ಛೆಯಿಂದ ಶ್ರೀವೇದವ್ಯಾಸರ ವಿದ್ವಾನ್ ಶಿಷ್ಯನು ಅಲ್ಲಿ ಆಗಮಿಸಿದ್ದನ್ನು ಕಂಡು ಆನಂದವಾಯಿತು ಶೌನಕಾದಿ ಮುನಿಗಳಿಗೆ. ಮುನಿಮಂಡಲದ ಸದಸ್ಯರೆಲ್ಲರೂ ಎದ್ದು ನಿಂತರು. ಅರ್ಘ್ಯ ನೀಡಿದರು. ಪಾದ್ಯವನ್ನು ಕೊಡಮಾಡಿದರು. ಮಧುಪರ್ಕವನ್ನು ಮುಂದೆ ಇರಿಸಿದರು. ಉಚ್ಚ ಆಸನದ ಮೇಲೆ ಅವರನ್ನು ಕೂಡಿಸಿದರು. ಕುಶಲ ಪ್ರಶ್ನೆಯನ್ನು ಮಾಡಿದರು. ಆ ನಂತರ ಅವರನ್ನು ಕುರಿತು ಕೇಳಿದರು ಸೌಜನ್ಯದಿಂದ.

**ಶೌನಕ:-** ಸೂತಾಚಾರ್ಯರೇ, ಜೀವಿಗಳು ಈ ಸಂಸಾರ ರೂಪ ಸಮುದ್ರದಿಂದ ಪಾರಾಗುವ ಬಗೆ ಎಂತು? ಮಾನವರಿಗೆ ಭಗವಾನ್ ಶಿವನಲ್ಲಾಗಲಿ ವಿಷ್ಣುವಿನಲ್ಲಾಗಲಿ ಭಕ್ತಿ ಹೇಗೆ ಉಂಟಾಗುವದು? ಇದನ್ನು ಮತ್ತೆ ಬೇರೆ ಬೇರೆ ಶ್ರೋತವ್ಯ ವಿಷಯಗಳನ್ನು ನಮಗೆ ನಿರೂಪಿಸಿರಿ.

ಆಗ ಸೂತಮುನಿಗಳು ಪ್ರಪ್ರಥಮವಾಗಿ ನಮಸ್ಕರಿಸಿದ್ದು ಭಗವಾನ್ ವೇದವ್ಯಾಸರಿಗೆ. ಸೂತರ ಸಾಕ್ಷಾತ್ ಗುರುಗಳಲ್ಲವೇ ಆ ಕೃಷ್ಣದ್ವೈಪಾಯನರು! ಹೀಗೆ ಮೊದಲು ಗುರುವಂದನೆಯನ್ನು ಮಾಡಿ ಸೂತರು ಪ್ರಾರಂಭಿಸಿದರು ತಮ್ಮ ಪುರಾಣ ಪ್ರವಚನವನ್ನು.

**ಸೂತ:-** ವಿಪ್ರೋತ್ತಮರೇ, ಈ ಪ್ರಪಂಚದಲ್ಲಿ ಎಲ್ಲ ಕ್ಷೇತ್ರಗಳಲ್ಲಿಯೂ ಸರ್ವೋತ್ತಮ ಕ್ಷೇತ್ರ ಎಂದರೆ ರಾಮೇಶ್ವರ ಕ್ಷೇತ್ರ. ಅದು ಪರಮ ಪವಿತ್ರ. ಪ್ರಭು, ಶ್ರೀರಾಮಚಂದ್ರ ದೇವನೇ ನಿರ್ಮಿಸಿದ್ದಾನೆ ಅಲ್ಲಿ ಸೇತುವೆಯನ್ನು. ಆ ರಾಮಸೇತುವೆ ಯಿಂದ ಆ ರಾಮೇಶ್ವರ ಕ್ಷೇತ್ರಕ್ಕೆ ಇಷ್ಟು ಪ್ರಸಿದ್ಧಿಯಿದೆ. ಮತ್ತು ಪಾವಿತ್ರ್ಯ ಸಂದಿದೆ. ಈ ದಿವ್ಯಕ್ಷೇತ್ರದ ದರ್ಶನ ಮಾತ್ರದಿಂದಲೇ ಮಾನವರಿಗೆ ಮುಕ್ತಿ ಸಂಸಾರ ಬಂಧನದಿಂದ. ಭಕ್ತಿ ಹರಿಹರರಲ್ಲಿ ಸಮೃದ್ಧವಾಗಿ ಪುಣ್ಯ ವೃದ್ಧಿ. ರಾಮರಚಿತವಾದ ಈ ಸೇತುವೆಯ ದರ್ಶನ ದಿಂದಲೇ ಮಾನವರಿಗೆ ಸರ್ವಯಜ್ಞಗಳನ್ನೂ ಮಾಡಿದ ಫಲ, ಇಲ್ಲಿ ಸ್ನಾನ ಮಾಡಿದರೆ ಸರ್ವ ವಿಧತಪೋನುಷ್ಠಾನಗಳ ಪುಣ್ಯ. ಈ ರಾಮಸೇತುವೆ ಮತ್ತು ಈ ರಾಮೇಶ್ವರ ಲಿಂಗಗಳ ಸ್ಮರಣ ಮಾಡಿದರೂ ಸಾಕು. ಸರ್ವಪಾಪಗಳಿಂದ ಮುಕ್ತಿ ಭಕ್ತರಿಗೆ. ಈ ಸೇತುವೆಯ ಮೇಲೆ ಬೀಸಿ ಬಂದ ಗಾಳಿ ಬಡಿದರೆ ಬ್ರಹ್ಮಹತ್ಯಾ, ಸುರಾಪಾನ ಮುಂತಾದ ಘೋರ ಪಾಪಗಳು ತತ್ಕಾಲದಲ್ಲಿ ನಷ್ಟವಾಗಿ ಹೋಗುವವು. ಮೃತ ಮನುಷ್ಯನ ಮೂಳೆಗಳನ್ನು ಅವನ ಮಕ್ಕಳು ಮೊಮ್ಮಕ್ಕಳು ಯಾರಾದರೂ ಈ ರಾಮೇಶ್ವರ ತೀರ್ಥದಲ್ಲಿ ತಂದು ಹಾಕಿದರೆ ಕೂಡಲೇ ಆ ಮೃತ ಮನುಷ್ಯನು ತನ್ನ ಪಂಚಮಹಾ ಪಾತಕಗಳನ್ನು ಮಾಡಿದ್ದರೂ ಅವುಗಳಿಂದ ಮುಕ್ತನಾಗಿ ಸ್ವರ್ಗಾರೋಹಣ ಮಾಡುವನು. ಈ ಸೇತು ತೀರ್ಥದಲ್ಲಿ ಸ್ನಾನಮಾಡಿದವರು ಉದ್ಧಾರ ಹೊಂದುವದಲ್ಲದೇ ಅವರು ಯಾರ ಹೆಸರಿನಿಂದ ಇಲ್ಲಿ ಮುಳುಗು ಹಾಕುವರೋ ಅವನೂ ಕೂಡ ಮಹಾಪಾತಕಗಳಿಂದ ಮುಕ್ತರಾಗುವರು.

## ಬ್ರಹ್ಮಹತ್ಯೆ ಎಂದರೆ ಏನು?

ಪಾಪಗಳಲ್ಲೆಲ್ಲ ದೊಡ್ಡ ಪಾಪ ಎಂದರೆ ಬ್ರಹ್ಮಹತ್ಯೆ. ಈ ಬ್ರಹ್ಮಹತ್ಯೆಯು ಅನೇಕ ಬಗೆಯದಾಗಿದೆ. ತಿಳಿಯದೇ ಇದ್ದವರನ್ನು ಅಡ್ಡದಾರಿಗೆ ಎಳೆದರೆ, ಸನ್ಯಾಸಿ ಹಾಗೂ ವಿದ್ವಾಂಸರ ನಿಂದೆಮಾಡಿದರೆ, ದ್ರವ್ಯವನ್ನು ತೆಗೆದುಕೊಂಡು ವೇದಶಾಸ್ತ್ರ ಪಾಠ ಹೇಳಿದರೆ, ನಿಷಿದ್ಧವಾದ ಅನ್ನವನ್ನು ಭಕ್ಷಣ ಮಾಡಿದರೆ. ಧರ್ಮೋಪದೇಶ ಮಾಡಿದವರನ್ನು ದೂಷಿಸಿದರೆ, ನೀರು ಕುಡಿಯಲು ಬಂದ ಹಸುಗಳನ್ನು ಅಥವಾ ಹುಲ್ಲು ಮೇಯಲು ಬಂದ ಕರು ಆಕಳುಗಳನ್ನು ತಡೆದರೆ ಬ್ರಹ್ಮಹತ್ಯಾ ರೂಪವಾದ ಪಾಪಗಳು ಬರುವವು. ಈ ಎಲ್ಲ ಪಾಪಗಳು ಸೇತು ತೀರ್ಥದಲ್ಲಿ ಸ್ನಾನಮಾಡುವದರಿಂದ ನಷ್ಟವಾಗಿ ಹೋಗುವವು.

ಪಂಚ ಮಹಾಪಾತಕಗಳಲ್ಲಿ ಮೊದಲನೆಯದು ಬ್ರಹ್ಮಹತ್ಯೆಯಾದರೆ ಎರಡನೆಯದು ಸುರಾಪಾನ. ಸುರಾಪಾನ ಎಂದರೆ ಶೆರೆ ಕುಡಿಯುವದು ಮಾತ್ರವಲ್ಲ. ಈ ಸುರಾಪಾನ ಎಂಬ ಮಹಾಪಾಪದ ಕಕ್ಷೆಯಲ್ಲಿ ಶೆರೆ ಕುಡಿಯುವದು ಮಾತ್ರವಲ್ಲದೇ ಅನೇಕ ಪಾಪಗಳು ಸೇರ್ಪಡೆಯಾಗಿವೆ. ಶ್ರೀಹರಿಯ ಪೂಜೆ ಉಪಾಸನೆಗಳನ್ನು ಬಿಟ್ಟು ಬಿಡುವದು, ದೇವರಿಗೆ ಎಂದು ಕೊಟ್ಟ ಹಾಲು ಹಣ್ಣು ಅಡಿಗೆಯ ಪದಾರ್ಥಗಳನ್ನು ದೇವರ ಹೆಸರು ಹೇಳಿ ತಂದ ದ್ರವ್ಯವನ್ನು ತಾನೇ ಬಳಸಿ ತಿನ್ನುವುದು, ಮದ್ಯಪಾನ ಮಾಡಿದ ಸ್ತ್ರೀಯ ಸಂಪರ್ಕ

ಮಾಡುವದು, ವೇಶ್ಯೆಯರ ದ್ರವ್ಯ ಅನ್ನ ಉಣ್ಣುವುದು, ಯಾವುದಾದರೂ ಒಂದು ಗುಂಪು ಅಥವಾ ಸಂಸ್ಥೆಯ ಅನ್ನವನ್ನು ತಿನ್ನುವದು ಮುಂತಾದ ಪಾಪಕೃತ್ಯಗಳೆಲ್ಲವೂ ಸುರುಪಾನ ಎಂದು ಕರೆಯಲ್ಪಡುವವು. ಈ ಎಲ್ಲ ಪಾಪಗಳು ಈ ರಾಮೇಶ್ವರ ಕ್ಷೇತ್ರದ ರಾಮ ಸೇತುವಿನಲ್ಲಿ ಸ್ನಾನಮಾಡುವದರಿಂದ ದೂರವಾಗುವವು.

## ಪವಿತ್ರ ಪದಾರ್ಥಗಳ ಕಳುವು ಪವಿತ್ರವಲ್ಲ

ಏನೇ ಕದ್ದರೂ ಅದು ಸುವಣದ ಚೌರ್ಯ ಮಾಡಿದಂತೆಯೇ ಸ್ವರ್ಣಸ್ತೇಯ ಎಂದರೆ ಬಂಗಾರದ ಕಳವು. ಪಂಚ ಮಹಾಪಾತಕಗಳಲ್ಲಿ ಈ ಸುವರ್ಣಚೌರ್ಯ ಎಂಬುವದು ಮೂರನೆಯ ಪಾಪ. ಈ ಬಂಗಾರ ಕದಿಯುವ ಪಾಪದ ಕಕ್ಷೆಯಲ್ಲಿ ಬಂಗಾರದ ಕಳವು ಮಾತ್ರವಲ್ಲದೇ, ಕಂದ, ಮೂಲ, ಗಡ್ಡೆ, ಗೆಣಸು, ಹಣ್ಣು ಕಾಯಿ, ಕಸ್ತೂರಿ, ರೇಶಿಮೆ ಬಟ್ಟೆ, ಹಾಲು, ಮೊಸರು, ಬೆಣ್ಣೆ, ತುಪ್ಪ, ಚಂದನ, ಅಡಿಕೆ, ಕರ್ಪೂರ, ತಾಮ್ರ, ಹಿತ್ತಾಳೆ, ಕಂಚು, ರುದ್ರಾಕ್ಷ, ತುಳಸೀಮಣಿ ಮುಂತಾದ ಯಾವದೇ ಪದಾರ್ಥದ ಚೌರ್ಯವು ಸುವರ್ಣ ಚೌರ್ಯವೆನಿಸುತ್ತದೆ. ಈ ಎಲ್ಲ ಪಾಪಗಳು ಈ ರಾಮೇಶ್ವರ ಸೇತು ಯಾತ್ರೆಯಿಂದ ಪ್ರನಷ್ಟವಾಗುವವು. ಈ ವಸ್ತುಗಳ ಕಳ್ಳರು ಈ ಸೇತು ತೀರ್ಥದಲ್ಲಿ ಸ್ನಾನಮಾಡಿದರೆ ಎಲ್ಲ ಪಾಪಗಳಿಂದ ಮುಕ್ತರಾಗುವರು.

ಪಂಚ ಮಹಾಪಾತಕಗಳಲ್ಲಿ ನಾಕನೆಯ ಪಾಪ ಎಂದರೆ ಗುರುಪತ್ನೀ ಗಮನ. ಗುರುಗಳ ಮಡದಿಯೊಡನೆ ಸರಸಾಟಕ್ಕೆ ಇಳಿಯುವದು ಘೋರ ಪಾಪ. ಈ ಪಾಪದ ಕಕ್ಷೆಯಲ್ಲಿ ಭಗಿನಿ, ಸೊಸೆ, ರಜಸ್ವಲೆ, ಸಹೋದರ ಪತ್ನಿ, ಮಿತ್ರನ ಮಡದಿ, ಹೀನ ಜಾತಿಯ ಹೆಣ್ಣು, ಮದ್ಯಪಾನ ಮಾಡುವ ಹೆಣ್ಣು, ಅಥವಾ ಯಾವುದೇ ಪರಸ್ತ್ರೀಯೊಡನೆ ಸಂಪರ್ಕ ಮಾಡಿದರೆ ಅದು ಗುರುಪತ್ನೀ ಗಮನ ಪಾಪದ ವ್ಯಾಪ್ತಿಯಲ್ಲಿ ಬರುವದು. ಇಂಥ ಪಾಪಿಗಳು ಎಲ್ಲ ಕರ್ಮಗಳಲ್ಲಿಯೂ ಬಹಿಷ್ಕೃತರು. ಇಂಥ ಎಲ್ಲ ಮಹಾಪಾತಕಿಗಳ ಉದ್ಧಾರಕ್ಕಾಗಿ ಇರುವ ಏಕೈಕ ಮಾರ್ಗವೆಂದರೆ ಶ್ರೀರಾಮ ನಿರ್ಮಿತವಾದ ಈ ರಾಮೇಶ್ವರ ಕ್ಷೇತ್ರದ ಸೇತು ತೀರ್ಥದಲ್ಲಿ ಸ್ನಾನ. ಈ ನಾಕು ಮಹಾಪಾತಕಗಳನ್ನು ಮಾಡಿದವರ ಸಂಪರ್ಕ ಸಹವಾಸ ಮಾಡಿದವರು ಐದನೇ ಮಹಾಪಾತಕಿಗಳು. ಅಂಥವರು ಕೂಡ ಈ ಸೇತು ತೀರ್ಥದಲ್ಲಿ ಸ್ನಾನ ಮಾಡಿದರೆ ತಕ್ಷಣದಲ್ಲಿ ತಮ್ಮ ಪಾಪದಿಂದ ಮುಕ್ತರಾಗುವರು.

## ಸೇತುಸ್ನಾನ ಕಲಿಯುಗದ ಕಾಮಧೇನು

ಈ ಸೇತು ತೀರ್ಥ ಸ್ನಾನಮಾಡಿದವರ ಪಾಪಗಳು ಪರಿಹಾರವಾಗುವದಲ್ಲದೇ ಅವರ ಅಂತಃಕರಣಗಳು ಪರಿಶುದ್ಧವಾಗಿ ಮೋಕ್ಷಕ್ಕೆ ಮಾರ್ಗವಾಗುವದು. ಈ ತೀರ್ಥದಲ್ಲಿ ನಿಷ್ಕಾಮ ಭಾವದಿಂದ ಭಗವತ್ ಪ್ರೀತ್ಯರ್ಥವಾಗಿ ಮಾಡಿದ ಸ್ನಾನವು ಮೋಕ್ಷಕ್ಕೆ ನಾಂದಿ. ಇದಲ್ಲದೇ ಇಲ್ಲಿ ಐಶ್ವರ್ಯದ ಅಪೇಕ್ಷೆಯಿಂದ ಸೇತುತೀರ್ಥದಲ್ಲಿ ಸ್ನಾನಮಾಡಿದರೆ ಐಶ್ವರ್ಯಪ್ರಾಪ್ತಿ. ಆತ್ಮಶುದ್ಧಿಗಾಗಿ ಮೀಯುವವರಿಗೆ ಆತ್ಮಶುದ್ಧಿಯ ಸಿದ್ಧಿ. ಸ್ವರ್ಗ ಸುಖಕ್ಕಾಗಿ ಮುಳುಗು ಹಾಕಿದರೆ ಸ್ವರ್ಗಸುಖ. ಮೋಕ್ಷಕ್ಕಾಗಿ ಮುಳುಗು ಹಾಕಿದರೆ ಮೋಕ್ಷ. ಪಾಂಡಿತ್ಯವನ್ನು ಬಯಸಿದವರಿಗೆ ಪಾಂಡಿತ್ಯ. ಮಂತ್ರಸಿದ್ಧಿಯನ್ನು ಅಪೇಕ್ಷಿಸಿ ಸೇತುಸ್ನಾನ ಮಾಡಿದವರಿಗೆ ಮಂತ್ರಸಿದ್ಧಿ ಆಗುವದರಲ್ಲಿ ಸಂದೇಹವಿಲ್ಲ. ಈ ಸಂಸಾರದಲ್ಲಿ ಕಾಮಧೇನು ಚಿಂತಾಮಣಿ ಕಲ್ಪವೃಕ್ಷಗಳು ಮಾನವರ ಇಷ್ಟಾರ್ಥವನ್ನು ಪೂರ್ಣ ಮಾಡುವಂತೆ ಈ ಸೇತು ಸ್ನಾನವು ಮನುಷ್ಯರ ಎಲ್ಲ ಮನೋರಥಗಳನ್ನು ಪೂರೈಸುತ್ತದೆ.

ರಾಮೇಶ್ವರದ ಯಾತ್ರೆ ಮಾಡುವವರಿಗೆ ಹಣವನ್ನಾಗಲಿ, ಧಾನ್ಯವನ್ನಾಗಲಿ, ಅಥವಾ ಬೇರೆ ಪ್ರವಾಸ ಉಪಯುಕ್ತ ಉಪಕರಣ, ವಸ್ತು ಮುಂತಾದವನ್ನು ಯಾರು ಕೊಡುವರೋ ಅವರಿಗೆ ಅಶ್ವಮೇಧ ಯಜ್ಞಮಾಡಿದ ಪುಣ್ಯ. ಸೇತು ತೀರ್ಥಕ್ಕೆ ಹೋಗುತ್ತೇನೆ ಎಂದು ಹೇಳಿ ಜನರಿಂದ ಹಣವನ್ನು ಪಡೆದು ಅಲ್ಲಿಗೆ ಹೋಗದೇ ಆ ದ್ರವ್ಯವನ್ನೆಲ್ಲ ತಿಂದು ಹಾಕಿದರೆ ಅವನಿಗೆ ಬ್ರಹ್ಮಹತ್ಯಾ ಪಾಪ. ಯಾವುದಾದರೂ ಉಪಾಯದಿಂದ ಮಾನವರು ರಾಮೇಶ್ವರ ಯಾತ್ರೆಯನ್ನು ಅವಶ್ಯವಾಗಿ ಮಾಡಲೇಬೇಕು. ತನಗೆ ಅಲ್ಲಿಯವರೆಗೆ ಹೋಗಲು ಶಕ್ತಿಯಿಲ್ಲದಿದ್ದರೆ ಬೇರೆಯವರನ್ನು ಹಣಕೊಟ್ಟು ಅವರಿಗೆ ರಾಮೇಶ್ವರ ಯಾತ್ರೆಯನ್ನು ಮಾಡಿಸಬೇಕು.

## ಸೇತು ನಿರ್ಮಾಣದ ವೃತ್ತಾಂತ ಮತ್ತು ರಾಮೇಶ್ವರದಲ್ಲಿ ಇರುವ ಮುಖ್ಯ ತೀರ್ಥಗಳ ಪರಿಚಯ

**ಶೌನಕಾದಿ ಋಷಿಗಳು:-** ಸೂತರೇ, ಶ್ರೀರಾಮಚಂದ್ರನು ಅಗಾಧವಾದ ಆ ಸಮುದ್ರದಲ್ಲಿ ಸೇತುವೆಯನ್ನು ಹೇಗೆ ನಿರ್ಮಿಸಿದ? ಸೇತುತೀರ್ಥದಲ್ಲಿ ಹಾಗೂ ಗಂಧ ಮಾದನ ತೀರ್ಥದಲ್ಲಿ ಎಷ್ಟು ತೀರ್ಥಗಳಿರುತ್ತವೆ? ನಮಗೆ ಹೇಳಿರಿ.

**ಸೂತರು:-** ಮುನಿ ಮಹರ್ಷಿಗಳೇ, ಪೂರ್ವಕಾಲದಲ್ಲಿ ಅಯೋಧ್ಯಾ ಪಟ್ಟಣದಲ್ಲಿ ದಶರಥ ಎಂಬ ಸೂರ್ಯವಂಶದ ದೊರೆಯ ಶಾಸನ ಕಾಲ. ಅವನಿಗೆ ಮೂವರು ಮಡದಿಯರು. ಕೌಸಲ್ಯ, ಸುಮಿತ್ರಾ, ಕೈಕೇಯಿ. ಅವರಿಂದ ನಾಲ್ಕು ಜನ ಗಂಡು ಮಕ್ಕಳು ರಾಮ, ಲಕ್ಷ್ಮಣ, ಭರತ, ಶತ್ರುಘ್ನ. ಪಟ್ಟರಾಣಿ ಕೌಸಲ್ಯೆಯ ಮಗ ರಾಮಚಂದ್ರ ಎಲ್ಲರಲ್ಲಿ ಹಿರಿಯ. ಸುಮಿತ್ರೆಯ ಮಕ್ಕಳು ಲಕ್ಷ್ಮಣ, ಶತ್ರುಘ್ನರು, ಚಿಕ್ಕರಾಣಿ, ಕೈಕೇಯಿಯ ಪುತ್ರನೇ ಭರತ.

## ಸಂಕ್ಷೇಪದಲ್ಲಿ ರಾಮಾಯಣ

ಹಿರಿಯ ಮಗ ರಾಮನಿಗೆ ಯುವರಾಜ ಪಟ್ಟಕಟ್ಟಬೇಕೆಂದು ದಶರಥನ ಅಪೇಕ್ಷೆ. ಅದರಂತೆ ಮಂತ್ರಿ ಪೌರ ಪರಿವಾರದವರಿಗೆಲ್ಲ ರಾಜಾದೇಶ. ಪಟ್ಟಾಭಿಷೇಕದ ಪೂರ್ಣಸಿದ್ಧತೆ. ಅದೇ ವೇಳೆಯಲ್ಲಿ ರಾಜನ ಪ್ರೀತಿಯ ಮಡದಿ ಕೈಕೇಯಿಯಿಂದ ಎರಡು ವರಗಳ ಯಾಚನೆ ದೊರೆಯಲ್ಲಿ. ಒಂದರಿಂದ ರಾಮನಿಗೆ ವನವಾಸ. ಇನ್ನೊಂದು ವರದಿಂದ ಭರತನಿಗೆ ಪಟ್ಟಾಭಿಷೇಕ ಆಗಬೇಕೆಂದು ಪಟ್ಟುಹಿಡಿದಳು ಪ್ರೀತಿಯ ಪತ್ನಿ. ಅದರಂತೆ ರಾಮಚಂದ್ರ ತಮ್ಮ ಲಕ್ಷ್ಮಣ ಹಾಗೂ ಸೀತೆಯೊಂದಿಗೆ ದಂಡಕಾರಣ್ಯಕ್ಕೆ ನಡೆದ. ಗೋದಾವರೀ ತೀರದ ಪಂಚವಟಿಯಲ್ಲಿ ಈ ರಾಜಪರಿವಾರದ ನಿವಾಸ. ಆಗ ಪಂಚವಟಿಯ ಪರಿಸರದಲ್ಲಿ ಮಿಸುನಿ ಜಿಂಕೆಯ ಓಡಾಟ. ಚಿಗರಿಗಂಗಳ ಚೆಲುವೆ ಸೀತೆಗೆ ಆ ಬಂಗಾರ ಚಿಗರೆಯ ಹಂಬಲ. ಅದನ್ನು ತಂದು ಕೊಡಬೇಕೆಂದು ರಾಮನಿಗೆ ಒತ್ತಾಯ. ಮನದನ್ನೆಯ ಮನೋಭೀಷ್ಟವನ್ನು ಪೂರೈಸಲಿಕ್ಕಾಗಿ ರಾಮನ ನಿರ್ಗಮನ. ರಾಮನಿಂದ ಆ ಬಂಗಾರ ಚಿಗರೆಯ ಸಂಹಾರ. ರಾಮನನ್ನು ಹುಡುಕಲು ಸೀತೆಯ ಒತ್ತಾಸೆಯಂತೆ ಲಕ್ಷ್ಮಣನೂ ಅವನನ್ನು ಬೆಂಬಲಿಸಿ ತೆರಳಿದ. ಆಗಲೇ ಕಪಟ ಸಂನ್ಯಾಸಿ ರಾವಣನಿಂದ ಸೀತೆಯ ಅಪಹರಣ. ರಾಮ ಲಕ್ಷ್ಮಣರಿಂದ ದಂಡಕಾರಣ್ಯದ ತುಂಬ ಸೀತೆಯ ಹುಡುಕಾಟ. ಅವಳನ್ನು ಕಾಣದೇ ಮಿಡುಕಾಟ. ಪಂಪಾಸರೋವರದ ತೀರದಲ್ಲಿ ಹನುಮಂತನ ಭೆಟ್ಟಿ. ಹನುಮಂತನಿಂದ

ರಾಮ ಸುಗ್ರೀವರಲ್ಲಿ ಅಗ್ನಿ ಸಾಕ್ಷಿಯಾಗಿ ಸ್ನೇಹ ಸಖ್ಯದ ಏರ್ಪಾಡು. ''ಸುಗ್ರೀವ, ನಿನ್ನ ಅಣ್ಣ ವಾಲಿಯನ್ನು ಕೊಂದು ನಿನ್ನ ಮಡದಿ ರುಮಾಳನ್ನು ನಿನಗೆ ಮರಳಿ ಕೊಡಿಸುತ್ತೇನೆ'' ಎಂದು ರಾಮನಿಂದ ಪ್ರತಿಜ್ಞೆ. ''ಸೀತೆಯನ್ನು ಇದ್ದಲ್ಲಿಂದ ತಂದು ಕೊಡುತ್ತೇನೆ'' ಎಂದು ಸುಗ್ರೀವನಿಂದ ಪ್ರತಿಜ್ಞೆ. ಮಡದಿ ಕಳಕೊಂಡ ಮಿತ್ರರಿಬ್ಬರ ಮಿಡಕಾಟ. ಪರಸ್ಪರ ಸಹಕಾರದ ಆಶ್ವಾಸನೆ.

ಇಷ್ಟಾದರೂ ಸುಗ್ರೀವನಿಗೆ ವಿಶ್ವಾಸವಿಲ್ಲ ರಾಮನ ಬಗೆಗೆ. ವಾಲಿ ಮಹಾಬಲಿಷ್ಠ. ಅವನನ್ನು ಕೊಲ್ಲಲು ರಾಮನಿಂದ ಆಗುವದೋ ಇಲ್ಲೋ ಎಂದು ಅವನ ಮನದಲ್ಲಿ ಸಂದೇಹ. ಅದನ್ನು ಹೋಗಲಾಡಿಸಲು ರಾಮ ಎರಡು ಕಾರ್ಯ ಮಾಡಿದ. ದುಂದುಭಿ ಎಂಬ ದೈತ್ಯ ವಾಲಿಯೊಡನೆ ಸೆಣಸಾಡಿದ್ದ. ವಾಲಿಯ ಸಮಬಲವೀರನಾದರೂ ಅವನ ವಜ್ರನಿಷ್ಠುರ ಮುಷ್ಟಿ ಏಟುಗಳಿಗೆ ಪ್ರಾಣ ಬಿಟ್ಟಿದ್ದ. ದೈತ್ಯಾಕಾರದ ಅವನ ಹೇಣ ಇನ್ನೂ ಅಲ್ಲಿಯೇ ಬಿದ್ದಿತ್ತು. ರಾಮ ತನ್ನ ಕಾಲಿನ ಕಿರುಬೆರಳಿನಿಂದ ಆ ದೈತ್ಯ ಕಾಯವನ್ನು ದೂರ ತೂರಿ ಒಗೆದ. ಆದರೂ ರಾಮನ ಬಲದ ಬಗೆಗೆ ವಿಶ್ವಾಸವಾಗಲಿಲ್ಲ ಸುಗ್ರೀವನಿಗೆ. 'ಒಣಗಿದ ದೇಹ ಹಗುರ' ಎಂದು ಅವನ ಗೊಣಗಾಟ. ಅಲ್ಲಿ ಬಳಿಯಲ್ಲಿಯೇ ಏಳು ತಾಳೆಯ ಹೆಮ್ಮರಗಳು. ಅವುಗಳನ್ನು ಮಹಾಪ್ರಯತ್ನದಿಂದ ವಾಲಿ ಬಾಣ ಹೊಡೆದು ತುದಿಯಲ್ಲಿಯೋ ಒಂದು ಬದಿಯಲ್ಲಿಯೋ ತುಸು ಅಲುಗಾಡಿಸುತ್ತಿದ್ದ. ರಾಮ ಒಂದೇ ಬಾಣದಿಂದ ಆ ಏಳೂ ಹೆಮ್ಮರಗಳನ್ನು ಬೇರುಸಹಿತ ಬುಡಮೇಲು ಮಾಡಿದ ಒಗೆದ. ರಾಮನ ತಾಕತ್ತಿನ ಬಗ್ಗೆ ವಿಶ್ವಾಸ ಕುದುರಿತು ಸುಗ್ರೀವನ ಮನದಲ್ಲಿ. ಅವನು ತನ್ನ ಅಣ್ಣವಾಲಿಯನ್ನು ಆಹ್ವಾನಿಸಿದ ಸಮರಕ್ಕೆ. ಒಂದೇ ನೆಗೆತದಲ್ಲಿ ಜಿಗಿದು ಬಂದ ವಾಲಿ. ಅವನ ಸಿಂಹ ಗರ್ಜನೆಯಿಂದಲೇ ಗರ್ಭಗಲಿತ ಸುಗ್ರೀವ. ಆದರೂ ಆರಾಮನ ಬೆಂಬಲದ ಆಸೆಯಿಂದ ಎದ್ದುನಿಂತ. ಹುಚ್ಚು ಧೈರ್ಯದಿಂದ ಕೆಣಕಿದ, ಕೆರಳಿದ ಕೇಸರಿಯಂತಿದ್ದ ವಾಲಿಯನ್ನು. ವಾಲಿಯ ಕಣ್ಣು ಕೆಂಡದ ಹೊಂಡ. ಅವನ ಬಿಗಿದ ಮುಷ್ಟಿ ವಜ್ರಕಠೋರ. ವಾಲಿಯು ಸುಗ್ರೀವನ ನಡುನೆತ್ತಿಗೆ ವಜ್ರಮುಷ್ಟಿಯಿಂದ ಕುಟ್ಟಿದ. ದೇಹದ ಸಂಧಿಬಂಧಗಳ ಎಲವುಗಳು ಪುಡಿಹುಡಿಯಾದ ಅನುಭವ. ಎರಡು ನಿಮಿಷ ಕಾಳಗ. ಸುಗ್ರೀವ ನೆಲಹಿಡಿದ. ವಿಜಯೋನ್ಮಾದದಿಂದ ವಾಲಿ ಅರಮನೆಗೆ ತೆರಳಿದ.

ಜೋಲು ಮುಖದ ಸುಗ್ರೀವ ರಾಮನೆಡೆಗೆ ಮರಳಿದ. ''ನಿಮ್ಮ ಅಣ್ಣ ತಮ್ಮಂದಿರ ಮುಖ. ಮೈ ನಿಲುವು ಎಲ್ಲವೂ ಒಂದೇ ತರಹ. ವಾಲಿ ಯಾರು, ಸುಗ್ರೀವ ಯಾರು ಎಂದು ತಿಳಿಯದೇ ನನಗೆ ಸಂದೇಹದ ಗೊಂದಲ. ವಾಲಿಯ ಬದಲು ನನ್ನ ಬಾಣ ಸುಗ್ರೀವನ ಪ್ರಾಣ ತೆಗೆದೀತು ಎಂದು ಹೆದರಿ ನನ್ನ ಸಾಯಕದ ಕಾಯಕ ನಡೆಸಲಿಲ್ಲ. ಈಗ ನಿನ್ನ ಕೊರಳಲ್ಲಿ ಈ ಕಾಡುಕುಸುಮಗಳ ಮಾಲೆ ತೊಡಕಿಸುತ್ತೇನೆ. ಇದರಿಂದ ನನಗೆ ನಿನ್ನನ್ನು ಗುರುತಿಸಲು ಅನುಕೂಲ. ಈಗ ಇನ್ನೊಮ್ಮೆ ವಾಲಿಯನ್ನು ಕರೆ. ಈ ನನ್ನ ಕರೆ, ನಿಮ್ಮ ಅಣ್ಣನಿಗೆ ಮೃತ್ಯುವಿನ ಕರೆ'' ಎಂದು ರಾಮ ಹೇಳಿದ.

ಸುಗ್ರೀವ ಈ ಸಲ ರಾಮನ ಮಾತಿನಲ್ಲಿ ವಿಶ್ವಾಸ ತಾಳಿದ. ಮತ್ತೆ ಕಿಷ್ಕಂಧೆಯ ಅಗಸೆಯಲ್ಲಿ ನಿಂತು ಹೂಂಕರಿಸಿದ. ಸುಗ್ರೀವನ ಈ ಮರು ಹೂಂಕಾರದಿಂದ ತಾರೆಯ ಮನದಲ್ಲಿ ಶಂಕೆಯ ಅಂಕುರ. ಯುದ್ಧ ಬೇಡವೆಂದು ಪತಿಗೆ ದೈನ್ಯದ ಬಿನ್ನಹ. ವೀರವರೇಣ್ಯ

ವಾಲಿ. ಗೆಲುವನ್ನು ಎಳೆದು ತರುವೆ ಎಂದು ಸಂತೈಸಿದ ಮನದನ್ನೆಯನ್ನು. ಮತ್ತೆ ಅಣ್ಣತಮ್ಮಂದಿರ ನಡುವೆ ಹುರುಡು. ಹೇವ, ಹಣಾಹಣಿ ಹೋರಾಟ. ವಾಲಿಯ ಪ್ರಾಣಾಂತಿಕ ಪ್ರಹಾರದಿಂದ ಕುಸಿಯ ತೊಡಗಿದ ಸುಗ್ರೀವ. ರಾಮ ಅವಿತುಕೊಂಡು ವಾಲಗೆ ಗುರಿಯಿಟ್ಟ. ಕೋದಂಡದಿಂದ ಒಂದು ಬಾಣ ಬಿಟ್ಟ. ಅದು ವಾಲಿಯ ಎದೆ ಸೀಳಿತು. ಪಂಚಪ್ರಾಣಗಳನ್ನು ಸೆಳೆಯಿತು. ನಂತರ ಕಿಷ್ಕಿಂಧೆಯ ಸಾಮ್ರಾಜ್ಯ ಸಿಂಹಾಸನದ ಮೇಲೆ ಲಕ್ಷ್ಮಣನಿಂದ ಪಟ್ಟಾಭಿಷೇಕ ಸುಗ್ರೀವನಿಗೆ. ವಾಲಿಯ ಮಗ ಅಂಗದನಿಗೆ ಯುವರಾಜ ಪದದಲ್ಲಿ ಅಭಿಷೇಕ ರಾಮನ ಅಣತಿಯಂತೆ.

## ಹನುಮಂತ ಬಲವಂತ

ಮಳೆಗಾಲದ ರಭಸ ಇಳಿದು ಬಳಿಕ ಸೀತೆಯ ಅನ್ವೇಷಣೆಗಾಗಿ ಸುಗ್ರೀವನಿಂದ ಸಹಸ್ರಾರು ವಾನರರ ಪ್ರೇಷಣೆ. ನಾಲ್ಕು ದಿಕ್ಕುಗಳಲ್ಲಿಯೂ ಸುಗ್ರೀವನ ಸೈನಿಕರಿಂದ ಸೀತೆಗಾಗಿ ಶೋಧ. ಎಲ್ಲಿಯೂ ಸೀತೆಯ ಪತ್ತೆಯಿಲ್ಲ. ದಕ್ಷಿಣ ದಿಕ್ಕಿಗೆ ಸೀತೆಯನ್ನು ಹುಡುಕಲು ಹೋದ ಹನುಮಂತನು ಮಾತ್ರ ಲಂಕೆಗೆ ಹಾರಿದ. ರಾವಣನು ಅಶೋಕವನದಲ್ಲಿ ಬಂದಿಯಾಗಿ ಇರಿಸಿದ ಜನಕನಂದಿನಿಯನ್ನು ನೋಡಿದ. ಗುರುತಿಗಾಗಿ ರಾಮನು ಕೊಟ್ಟ ಬೆರಳಿನ ಉಂಗುರುವನ್ನು ಸೀತೆಗೆ ನೀಡಿದ. ಅನಂತರ ತನ್ನನ್ನು ಹಿಡಿಯಲು ಬಂದ ರಾವಣನ ಅಸಂಖ್ಯ ಅನುಚರರನ್ನು ಅಂಗೈ ಮುಂಗೈಗಳಿಂದ ಕುಟ್ಟಿದ. ಯಮಪುರಿಗೆ ಅಟ್ಟಿದ. ಬ್ರಹ್ಮಾಸ್ತ್ರ ಬೀಸಿದ ಇಂದ್ರಜಿತುವಿಗೆ ವಶನಾಗಿ ರಾಕ್ಷಸರ ಹೆಗಲಮೇಲೆ ಸವಾರಿ ಏರಿ ರಾವಣನ ದರ್ಬಾರಕ್ಕೆ ಬಂದಿಳಿದ.ಧೈರ್ಯದಿಂದ ಅವನಿಗೆ ಬುದ್ಧಿವಾದ ಹೇಳಿದ. ದೈತ್ಯದೂತರು ತನ್ನ ಬಾಲಕ್ಕೆ ಬೆಂಕಿ ಕೊಟ್ಟಾಗ ಅದರಿಂದಲೇ ಲಂಕೆಯನ್ನು ಸುಟ್ಟುಹಾಕಿದ. ಅಲ್ಲಿಂದ ಮತ್ತೆ ಕಡಲನ್ನು ಹಾರಿ ರಾಮನ ಬಳಿಗೆ ಬಂದು ಸೀತೆಯು ನೆನಪಿಗಾಗಿ ಕೊಟ್ಟ ಚೂಡಾಮಣಿಯನ್ನು ಶ್ರೀರಾಮನಿಗೆ ಸಮರ್ಪಿಸಿದ.

ಅನಂತರ ಸುಗ್ರೀವ, ಲಕ್ಷ್ಮಣ, ಹನುಮಂತ, ಜಾಂಬವಂತ, ನಲ, ಅಂಗದ ಮುಂತಾದ ಕೋತಿ, ಕರಡಿ ಕಡುಗಲಿಗಳೊಂದಿಗೆ ರಾಮನ ಯುದ್ಧ ಪ್ರಯಾಣ ಅಭಿಜಿನ್ ಮೂಹೂರ್ತದಲ್ಲಿ. ಬೆಟ್ಟ-ಬಯಲು, ಕಾಡು-ನಾಡು, ದರಿ-ಕೊರಿಗಳನ್ನು ದಾಟಿ ಅಪಾರ ವಾನರ ಸೇನೆಯೊಂದಿಗೆ ಮಹೇಂದ್ರ ಪರ್ವತಕ್ಕೆ ಶ್ರೀರಾಮನ ಶುಭಾಗಮನ. ಅಲ್ಲಿಯ ಚಕ್ರತೀರ್ಥದ ದಂಡೆಯ ಪುಲಿನ ಪೀಠದಲ್ಲಿ ನಿವಾಸ. ಅಲ್ಲಿಗೆ ರಾಕ್ಷಸರಾಜನಾದ ರಾವಣನ ತಮ್ಮ ವಿಭೀಷಣನ ಶರಣಾಗತಿ. ರಾವಣನ ಗುಪ್ತಚಾರ ಎಂದು ಸುಗ್ರೀವನ ಸಂದೇಹ. ವಿಷ ಪರೀಕ್ಷೆ ಬೇಡ ಎಂದು ಅಂಗದನ ಸಲಹೆ. 'ಎಷ್ಟೆಂದರೂ ರಾಕ್ಷಸಬೀಜ ವಿಶ್ವಾಸಕ್ಕೆ ತಕ್ಕುದಲ್ಲ' ಎಂದು ಜಾಂಬವಂತನ ಎಚ್ಚರಿಕೆಯ ನುಡಿ. ಆದರೆ "ಶರಣು ಎಂದು ಬಂದವರನ್ನು ಕರುಣೆಯಿಂದ ಕಾಪಾಡುವುದು ನಿಮ್ಮ ಕರ್ತವ್ಯ. ನಂಬುಗೆ ಇಡಿ ಇಂಬು ಕೊಡಿ." ಎಂದು ಹನುಮಂತನ ಶಿಫಾರಸು. ಒಪ್ಪಿಗೆಯಾಯಿತು ಈ ಹನುಮನ ಹೇಳಿಕೆ ಶ್ರೀರಾಮ ಪ್ರಭುವಿಗೆ. ರಾಮನಿಂದ ವಿಭೀಷಣನಿಗೆ ಅಭಯ ದಾನ. ಮುಂದೆ ಲಂಕೆಯ ಸಾರ್ವಭೌಮ ಅಧಿಕಾರದ ಆಶ್ವಾಸನೆ. ರಾಕ್ಷಸರಾಜ್ಯದಲ್ಲಿ ಆಗಲೇ ವಿಭೀಷಣನಿಗೆ ಸಂಕಲ್ಪಿತ ಪಟ್ಟಾಭಿಷೇಕ.

ಶ್ರೀರಾಮಚಂದ್ರ ತನ್ನ ಮಂತ್ರಿ ಹಾಗೂ ಮಿತ್ರನಾದ ಸುಗ್ರೀವನಿಗೆ ಈ ಅಪಾರ ಸಾಗರವನ್ನು ದಾಟುವ ಬಗೆ ಹೇಗೆ ಎಂದು ಕೇಳಿದ. ಆದಕ್ಕೆ ಸುಗ್ರೀವ ಕೈ ಮುಗಿದು "ಪ್ರಭು, ನಾನು ಕೆಲವೇ ದಿನಗಳಲ್ಲಿ ಸಹಸ್ರಾರು ನೌಕೆಗಳನ್ನು ಸಿದ್ಧಪಡಿಸುತ್ತೇನೆ ಅದರಿಂದ ಈ ನಮ್ಮ

ಸೇನೆ ಎಲ್ಲವೂ ಸಮುದ್ರತರಣವನ್ನು ಸಾಧಿಸಬಹುದು'' ಎಂದ. ಸುಗ್ರೀವನ ಈ ಸಲಹೆ ಸಮಂಜಸವೆನಿಸಲಿಲ್ಲ ಶ್ರೀರಾಮನಿಗೆ. ಅವನು ಆಂತಕದಿಂದ ನುಡಿದ ''ಸುಗ್ರೀವ! ಈ ನಮ್ಮ ಕಪಿಸೇನೆ ಸಣ್ಣದೆ? ಕೋಟಿ ಸಂಖ್ಯೆಯನ್ನು ಮಿಕ್ಕಿದೆ. ಇವರನ್ನೆಲ್ಲ ಸಾಗಿಸಲು ಲಕ್ಷಾವಧಿ ಡೋಣಿ, ನಾವೆ, ತೆಪ್ಪ, ಹರಗೋಲು, ಹಾಯಿಗಳನ್ನು ಎಷ್ಟೆಂದು ತರುವದು? ಎಲ್ಲಿಂದ ತರುವದು! ವೈರಿಗಳು ಹೋಡಿ ಹರಗೋಲುಗಳಲ್ಲಿ ಹರಿದು ಬರುವ ಈ ನಮ್ಮ ವಾನರ ದಂಡನ್ನು ಕಂಡು ನಡುದಾರಿಯಲ್ಲಿಯೇ ಮುಗಿಲು ಮಾರ್ಗದಲ್ಲಿ ಬಂದು ನಮ್ಮ ನೌಕಾವಾಹನಗಳನ್ನೆಲ್ಲ ತುಂಡರಿಸಿ ಹಾಕಬಹುದು. ಲಂಕೆಯನ್ನು ತಲುಪುವ ಮೊದಲೇ ನಮ್ಮ ಸೈನ್ಯವೆಲ್ಲವೂ ಸಮುದ್ರದ ತಳ ಕಾಣಬಹುದು. ಇದಕ್ಕೆ ಏನು ಉಪಾಯ? ಈ ಎಲ್ಲ ನಮ್ಮ ಹಿಂಡು ಹಿಂಡು ವಾನರ ದಂಡು ಈ ದಕ್ಷಿಣ ಸಮುದ್ರದ ಆಚೆಯ ದಂಡೆಯನ್ನು ತಲುಪುವ ಉಪಾಯ ಯಾವುದು?'' ಎಂದು ಕಿಂಕರಿಸಿದ.

ಆಗ ರಾಮಸೇನೆಗೆ ಆಗಲೇ ಹೊಸದಾಗಿ ಸೇರ್ಪಡೆಯಾದ ವಿಭೀಷಣ ಕೈ ಮುಗಿದ. ಸಲಹೆ ಮಾಡಿದ- ''ಪ್ರಭೂ, ನೀವು ಸಗರ ವಂಶದ ಒಂದು ಉಜ್ವಲ ಕುಡಿ. ಈ ಸಮುದ್ರನೂ ಸಗರ ಸಂತಾನವೇ! ಸಾಗರ ಎಂದೇ ಇವನ ಹೆಸರು. ಅದಕ್ಕಾಗಿ ನಿಮ್ಮ ಸೇನೆಗೆ ದಾರಿ ಕೊಡಲು ಈ ಶರಧಿಯನ್ನೇ ಶರಣು ಹೋಗಬೇಕು. ಇದರಿಂದ ತಮ್ಮ ಕಾರ್ಯಸಿದ್ಧಿ ಆಗುವದರಲ್ಲಿ ಸಂದೇಹವಿಲ್ಲ.''

ವಿಭೀಷಣನ ಈ ಸೂಚನೆ ಹಾಗೂ ಹೊಸ ಯೋಚನೆ ಒಪ್ಪಿಗೆ ಆಯಿತು ಸೀತಾಪತಿಗೆ. ''ಸಮುದ್ರರಾಜನನ್ನು ಕೇಳಿಕೊಳ್ಳುವುದು, ಲಂಕೆಗೆ ದಾರಿಕೊಡು ಎಂದು ಬೇಡಿಕೊಳ್ಳುವುದು. ಕೊಡದಿದ್ದರೆ ಬಾಣ ಬಿಟ್ಟು ಆ ಜಲರಾಶಿಯನ್ನೇ ಸುಟ್ಟು ಹಾಕುವದು'' ಎಂದು ನಿರ್ಧರಿಸಿದ ರಾಘವ.

ಸಾಗರತೀರಕ್ಕೆ ದಯಮಾಡಿಸಿದ ಶ್ರೀರಾಮ. ತಮ್ಮನೊಂದಿಗೆ ಆ ಕಡಲತೀರದಲ್ಲಿ ಕುಶಾಸನದ ಮೇಲೆ ಕುಳಿತುಕೊಂಡ. ಸಮುದ್ರರಾಜನ ಆರಾಧನೆ ಮಾಡಿದ. ತನ್ನ ಸೇನೆಗೆ ದಾರಿ ಕೊಡು ಎಂದು ಅಂಗಲಾಚಿದ. ಯಥಾಯೋಗ್ಯ ಸಾಮಗ್ರಿಯಿಂದ ಆ ಪಯೋನಿಧಿಯ ಪೂಜೆಗೈದ. ಮೂರು ದಿನ ನಡೆಯಿತು ಈ ಶ್ರೀರಾಮನ ಸಮುದ್ರದ ಆರಾಧನೆ. ಇಷ್ಟಾದರೂ ಆ ಕಡಲಿನ ಹೃದಯ ಕರಗಲಿಲ್ಲ. ರಾಮನ ಬಿನ್ನಹಕ್ಕೆ ಅದು ಓಗೊಡಲಿಲ್ಲ.

ರಾಮನ ಪಿತ್ತ ನೆತ್ತಿಗೇರಿತು. ಕಣ್ಣನಲ್ಲಿ ಕೆಂಪೇರಿತು. ಅವನು ತನ್ನ ಕೋದಂಡ ಧನಸ್ಸನ್ನು ಕೈಯಲ್ಲಿ ತೆಗೆದುಕೊಂಡ. ಲಕ್ಷ್ಮಣನಿಗೆ ಹೇಳಿದ- ''ಲಕ್ಷ್ಮಣ! ಮಾನವನು ಮೃದುವಾದರೆ ಯಾರೂ ಕೇಳುವದಿಲ್ಲ. ಈ ವರೆಗೆ ನಾನು ಈ ವರುಣ ರಾಜನನ್ನು ಕೇಳಿ ಮಾಡಿದ ಪ್ರಾರ್ಥನೆಯೆಲ್ಲವೂ ಅರಣ್ಯರೋದನ. ನನಗೆ ಈಗ ಉಳಿದಿರುವುದು ದಂಡೋಪಾಯ ಒಂದೇ. ನನ್ನ ಕೋದಂಡದಿಂದ ಈ ಪ್ರಚಂಡಸಾಗರವನ್ನು ಒಣಗಿಸಿ ಬಿಡುವೆನು. ನನ್ನ ಸೈನಿಕರೆಲ್ಲರೂ ಒಣಗಿ ಹೋದ ಈ ಸಮುದ್ರ ಮಾರ್ಗವನ್ನು ಕಾಲ್ನಡಿಗೆಯಿಂದಲೇ ದಾಟಿ ಹೋಗಲಿ'' ಹೀಗೆ ಹೇಳಿ ಭಯಂಕರವಾದ ಬಾಣ ಪ್ರಯೋಗವನ್ನು ಜಲರಾಶಿಯ ಮೇಲೆ ಮಾಡಿದ, ಅದರಿಂದ ಅನೇಕ ಮೀನು, ಮೊಸಳೆ, ತಿಮಿ, ತಿಮಿಂಗಲಗಳಿಂದಲೂ ಹಾಗೂ ಜಲಚರವಾದ ದೈತ್ಯ ದಾನವರಿಂದಲೂ ಅಪಾರ

ಜಲರಾಶಿಯಿಂದಲೂ ತುಂಬಿ ಘೂರ್ಮಿಸುವ ಆ ಹೆಗ್ಗಡಲಿನ ವಿರಾಟ್ ಒಡಲು ಕತಕತ ಕುದಿಯತೊಡಗಿತು. ಆಗ ಪಾತಾಳದಿಂದ ಸಮುದ್ರರಾಜನು ಎದ್ದು ಬಂದು ಕೈ ಜೋಡಿಸಿ ಶ್ರೀರಾಮನಿಗೆ ಶರಣು ಬಂದ. ಭಕ್ತಿಭಾವದಿಂದ ಗದ್ಗದಿತನಾಗಿ ಹೃದಯ ತುಂಬಿ ನುಡಿದ.

**ಸಮುದ್ರ:-** ರಘುಕುಲ ಶಿರೋಮಣಿಯೇ, ನಿನಗೆ ನನ್ನ ಸಾಷ್ಟಾಂಗ ವಂದನೆ. ನೀನು ಸಾಕ್ಷಾತ್ ಮಹಾವಿಷ್ಣು. ಮಾನವರ ಉದ್ಧಾರಕ್ಕಾಗಿ ಮತ್ತು ದುಷ್ಟ ಜನರ ನಿಗ್ರಹಕ್ಕಾಗಿ ನರನಾಗಿ ಅವತರಿಸಿ ಬಂದಿರುವೆ. ಗೌತಮ ಪತ್ನಿ ಅಹಲ್ಯೆಯನ್ನು ನಿನ್ನ ಪಾದಧೂಳಿಯಿಂದ ಉದ್ಧರಿಸಿದೆ. ಮೊದಲು, ಮಧ್ಯ, ಕೊನೆ ಇಲ್ಲದ ಮೋಕ್ಷಪ್ರದನಾದ ನಿನಗೆ ನಾನು ಶರಣು ಬಂದಿದ್ದೇನೆ. ಭಗವನ್ ನಾರಾಯಣಾ! ನನ್ನನ್ನು ರಕ್ಷಿಸು. ನೆಲ, ಜಲ, ಮುಗಿಲು, ಗಾಳಿ, ಬೆಂಕಿ ಎಲ್ಲವನ್ನು ಮಾಡಿದವನು ನೀನೇ ಅಲ್ಲವೆ? ಈ ಪಂಚ ಮಹಾಭೂತಗಳಿಗೆಲ್ಲ ಒಂದೊಂದು ಗುಣ ಧರ್ಮ ಸ್ವಭಾವಗಳನ್ನು ಕರುಣಿಸಿದ ಮಹಾನುಭಾವನೂ ನೀನೇ. ನೀನು ಮಾಡಿದ ಗುಣ ಧರ್ಮ ಸ್ವಭಾವಕ್ಕೆ ಅನುಗುಣವಾಗಿಯೇ ನಡೆಯುವವು ಎಲ್ಲ ಭೂತಗಳು. ನಿನ್ನ ನಿಮಯಕ್ಕೆ ಅನುಗುಣವಾಗಿ ಆಗಾಧತೆಯೇ ನನ್ನ ಸ್ವಭಾವ. ನಾನು ನನ್ನ ಜಲರಾಶಿಯಿಂದ ಆಗಾಧ ಮತ್ತು ಗಂಭೀರ ಆಗದಿದ್ದರೆ ನನ್ನ ಸ್ವಭಾವವನ್ನು ಮೀರಿ ನಡೆದಂತೆ ಆಗುವದು. ಸ್ವರೂಪಭೂತವಾದ ನಮ್ಮ ಸ್ವಭಾವವನ್ನು ಬಿಡುವದೆಂದರೆ ನಾನು ನಾಶವಾದಂತೆಯೇ ಸರಿ. ನಾನು ಪೂರ್ತಿ ಒಣಗಿ ಹೋಗಿ ಜಲವಿದ್ದಲ್ಲೆಲ್ಲ ನಿನ್ನ ಸೇನೆ ಹೋಗಲು ಸ್ಥಳವಾಗಿ ಮಾರ್ಪಟ್ಟರೆ ನನ್ನ ಅಗಾಧ ಜಲಸ್ವರೂಪಕ್ಕೆ ಹಾನಿಯಾಗಿ ನಾನು ಸಂಪೂರ್ಣ ನಷ್ಟವಾದಂತೆ ಆಗುವದು. ನನ್ನನ್ನು ಅಗಾಧ ಸ್ವಭಾವ ವಿಶಿಷ್ಟವಾಗಿ ನಿರ್ಮಿಸಿದ ನಿನಗೂ ಕೂಡ ಸಮುದ್ರ ನಾಶವಾಗಲಿ, ಅಥವಾ ಸಮುದ್ರ ಸ್ವಭಾವ ನಾಶವಾಗಲೀ, ಇಷ್ಟವಾದುದಲ್ಲ. ಆದುದರಿಂದ ಅಪಾರ ಸಲಿಲರಾಶಿರೂಪವಾದ ಸಮುದ್ರದ ಆಗಾಧ ಸ್ವಭಾವವನ್ನ ನಾಶಪಡಿಸದೇ ಅದರ ತೋಯನಿಧಿ ಸ್ವರೂಪವನ್ನು ಮೊದಲಿನಂತೆ ಉಳಿಸಿ ಅದರ ಮೇಲೆ ಸೇತುವೆಯನ್ನು ರಚಿಸಿ ನಿನ್ನ ವಾನರ ಸೇನೆಯನ್ನು ಆ ಸೇತುವೆಯ ಮೇಲೆ ನಡೆಸಿಕೊಂಡು ಲಂಕೆಗೆ ಪ್ರಯಾಣ ಮಾಡು. ನಿನ್ನ ಆಜ್ಞೆಯಿಂದ ನಾನು ಅತ್ಯದ್ಭುತವಾದ ಸೇತುವೆಯನ್ನು ನನ್ನ ಜಲರಾಶಿಯಲ್ಲಿ ನನ್ನ ದಕ್ಷಿಣ ತೀರದಿಂದ ಲಂಕೆಯ ಆಚೆಯ ದಂಡೆಯ ವರೆಗೆ ನಿರ್ಮಿಸಲು ಅನುಕೂಲ ಮಾಡಿಕೊಡುತ್ತೇನೆ. ನಿನ್ನ ಸೈನ್ಯದಲ್ಲಿ ನಲ ಎಂಬ ನಿಪುಣನಾದ ಶಿಲ್ಪಿ ಇರುತ್ತಾನೆ. ಅವನು ಇಂಥ ದೊಡ್ಡ ದೊಡ್ಡ ಸೇತುಬಂಧನದ ಕಾರ್ಯದಲ್ಲಿ ಒಳ್ಳೆಯ ಪರಿಣಿತಪ್ರಜ್ಞನಾದ ಸ್ಥಾಪತ್ಯ ವಿಜ್ಞಾನಿ. ಭೂಲೋಕ ಸ್ವರ್ಗಲೋಕಗಳಲ್ಲಿಯ ಅನೇಕಾನೇಕ ವಿರಾಡ್ ಯೋಜನೆಗಳ ಕಟ್ಟಡ, ಸೇತುವೆ, ಸಭೆ, ಜಲಬಂಧ, ಸ್ಥಲಬಂಧ ಮತ್ತು ವಿವಿಧ ವೈಜ್ಞಾನಿಕ ವಿನ್ಯಾಸ ವಿಶೇಷಗಳನ್ನು ರಚಿಸುವಲ್ಲಿ ಪಳಗಿದ ದೇವತೆಗಳ ಬಡಿಗನಾದ ವಿಶ್ವಕರ್ಮನ ಸಾಕ್ಷಾತ್ ಪುತ್ರನೂ ಶಿಷ್ಯನೂ ಆಗಿರುತ್ತಾನೆ ಈ ನಲ. ಅವನಿಗೆ ನಿನ್ನ ಸೇನೆಯಲ್ಲಿಯ ಎಲ್ಲ ಕಪಿಗಳೂ, ಕರಡಿಗಳೂ, ಪರಿವಾರದವರೂ ಕಲ್ಲು, ಕಟ್ಟಿಗೆ, ಬಂಡೆ, ಬೆಟ್ಟ ಮುಂತಾದವುಗಳನ್ನು ತಂದುಕೊಡಲಿ. ಅವನು ಅವುಗಳನ್ನೆಲ್ಲ ವ್ಯವಸ್ಥಿತವಾಗಿ ಒಟ್ಟಿ, ಯೋಜನಾಬದ್ಧವಾಗಿ ಇಟ್ಟು, ನನ್ನ ಸಲಿಲರಾಶಿಯಲ್ಲಿ ಸೇತು ನಿರ್ಮಿಸಲಿ. ಈ ನಿನ್ನ ಕುಶಲನಾದ ಜಲಬಂಧ ಶಿಲ್ಪಿ ನಲನು ನನ್ನ ಕಡಲಿನ ಒಡಲಿನಲ್ಲಿ ತಂದು ಒಟ್ಟಿ ಇಟ್ಟ ಗಿಡ, ಗುಡ್ಡ, ಟೊಂಗೆ, ಕಡ್ಡಿ, ಕಲ್ಲು, ಕಟ್ಟಿಗೆ ಎಲ್ಲವನ್ನೂ ನಾನು

ಹೊತ್ತು ನಿಲ್ಲುತ್ತೇನೆ. ನನ್ನ ವಾರಿರಾಶಿಯ ವಕ್ಷಸ್ಥಳದ ಮೇಲೆ ವಿರಾಟ್ ಸೇತುಬಂಧನದ ಕಾರ್ಯಕ್ಕೆ ಎಲ್ಲ ರೀತಿಯಿಂದಲೂ ಅನುಕೂಲ ಕಲ್ಪಿಸಿಕೊಡುತ್ತೇನೆ. ನಿನ್ನ ಸ್ಥಾಪತ್ಯ ವಿಜ್ಞಾನಿಯಾದ ನಲನು ಇತರ ಶಿಲ್ಪಿ ವಾನರರ ಸಹಕಾರದಿಂದ ನನ್ನ ಅಗಾಧ ಜಲದ ಒಡಲಿನಲ್ಲಿ ತಂದು ಇರಿಸಿದ ಈ ಎಲ್ಲ ಬೆಟ್ಟ, ಕಲ್ಲು ಕಟ್ಟಿಗೆಗಳನ್ನು ನನ್ನ ನೆಲೆ ಇಲ್ಲದ ನೀರಿನ ಗರ್ಭದಲ್ಲಿ ಮುಳುಗಿ ಹೋಗದಂತೆ ನಾನು ಸುಸ್ಥಿರವಾಗಿ ತೇಲಿಸಿ ಹಿಡಿಯುತ್ತೇನೆ. ಒಟ್ಟಿನ ಮೇಲೆ ಈ ಸಮುದ್ರ ಸೇತುಬಂಧನಕ್ಕೆ ಸಕಲವಿಧವಾದ ಸೌಕರ್ಯವನ್ನು ಕಲ್ಪಿಸಿಕೊಟ್ಟು ನಿನ್ನ ಸೇವೆಯನ್ನು ಮಾಡಲು ನಾನು ಸನ್ನದ್ಧನಾಗಿದ್ದೇನೆ. ದಯಮಾಡಿ ನೀನು ನನ್ನ ಮೇಲೆ ಬಾಣ ಬಿಡಬೇಡ. ನನ್ನ ಸಲಿಲ ಶರೀರವನ್ನು ಶೋಷಿಸಬೇಡ.''

ಸಮುದ್ರರಾಜನ ಈ ವಿನಯಪೂರ್ವಕವಾದ ಬಿನ್ನಹವನ್ನು ಮನ್ನಿಸಿದ ಮರ್ಯಾದಾ ಪುರುಷೋತ್ತಮನಾದ ಶ್ರೀರಾಮ. ಆ ಶರಧಿ ಸಾರ್ವಭೌಮನ ಸೂಚನೆಯಂತೆ ತನ್ನ ವಿಧೇಯ ಸೈನಿಕನಾದ ನಲಕಪಿಯನ್ನು ಕರೆದು ಅವನಿಗೆ ಅಪ್ಪಣೆ ನೀಡಿದ. ''ಧೀಮಂತನೇ! ನೀನು ಮಹಾ ಮೇಧಾವಿ ಪಂಡಿತ ಶಿಲ್ಪ ವಿಜ್ಞಾನದಲ್ಲಿ. ಸಮುದ್ರಕ್ಕೆ ಸೇತುವೆ ಕಟ್ಟುವ ಶಕ್ತಿ ಇದೆ ನಿನ್ನಲ್ಲಿ. ಈ ನಮ್ಮ ಕಪಿಸೇನೆಗೆಲ್ಲ ಲಂಕೆಯವರೆಗೆ ನಡೆದುಕೊಂಡು ಹೋಗಲು ಅನುಕೂಲವಾಗಲಿಕ್ಕಾಗಿ ಈ ವಿಶಾಲ ಸೇತುವೆಯನ್ನು ಈ ದಕ್ಷಿಣ ಸಮುದ್ರದಲ್ಲಿ ರಚಿಸು.''

**ನಲ:-** ಪ್ರಭು, ನಿನ್ನ ಆಜ್ಞೆ ನನಗೆ ಶಿರೋಮಾನ್ಯ. ನಿನ್ನ ಅಪ್ಪಣೆಯಿಂದ ನಾನು ಈ ಸಮುದ್ರದಲ್ಲಿ ಸೇತುವೆಯನ್ನು ನಿರ್ಮಿಸುತ್ತೇನೆ. ಮಂದರ ಬೆಟ್ಟದಲ್ಲಿ ದೇವತೆಗಳ ಬಡಿಗನಾದ ವಿಶ್ವಕರ್ಮನು ನನ್ನತಾಯಿಗೆ ''ನಿನ್ನ ಮಗನು ಅರ್ಥಾತ್ ನನ್ನ ಮಗನೂ ಆದ ನಲನು ನನ್ನಂತೆಯೇ ಶಿಲ್ಪಕರ್ಮದಲ್ಲಿ ಮಹಾಪಂಡಿತನು ಆಗುತ್ತಾನೆ'' ಎಂದು ವರವನ್ನು ನೀಡಿದ್ದಾನೆ. ಅದರ ಮೇಲೆ ನಿನ್ನ ಆದೇಶ ಅನುಗ್ರಹದ ಬೆಂಬಲದಿಂದ ನಾನು ಈ ಸೇತುಬಂಧನ ಕಾರ್ಯವನ್ನು ಆರಂಭಿಸುತ್ತೇನೆ. ಈ ವಾನರ ಸೇನೆಯನ್ನು ನನ್ನ ಕಾರ್ಯದಲ್ಲಿ ಸಹಕರಿಸುವಂತೆ ನಿಯೋಜಿಸು.'' ಎಂದು ಬಿನ್ನವಿಸಿದ.

## ನಲನಿಂದ ನೀರ ನಿಧಿಯಲ್ಲಿ ವಿರಾಟ್ ಸೇತುವೆಯ ನಿರ್ಮಾಣ

ಅನಂತರ ಶ್ರೀರಾಮಚಂದ್ರನು ಎಲ್ಲ ವಾನರರಿಗೂ ಕಿರು ಬೆಟ್ಟಗಳನ್ನೂ ಗಿರಿಗಳ ಶಿಖರಗಳನ್ನೂ ಹಾಗೂ ಹೆಮ್ಮರ, ಹೆಬ್ಬಂಡೆ, ಕಟ್ಟಿಗೆ, ಕಸ, ಕಡ್ಡಿ, ವನಸ್ಪತಿ, ಬಳ್ಳಿ ಮುಂತಾದವುಗಳನ್ನು ತಂದು ಇರಿಸಲು ಅಪ್ಪಣೆ ನೀಡಿದ. ರಾಮನ ಆದೇಶದಂತೆ ಎಲ್ಲ ಕಪಿಗಳೂ ತಮ್ಮ ತಮ್ಮ ಯೋಗ್ಯತೆಗೆ ಅನುಗುಣವಾಗಿ ಗಿಡಗುಡ್ಡ ತೃಣಲತಾ ವನಸ್ಪತಿಗಳನ್ನು ಸಮುದ್ರದಲ್ಲಿ ತಂದು ಒಟ್ಟಿದರು. ಅವುಗಳನ್ನೆಲ್ಲ ಯೋಜನಾಬದ್ಧವಾಗಿ ವ್ಯವಸ್ಥಿತವಾಗಿ ಇಟ್ಟು, ಬಿರುಕು ಬಿಡದಂತೆ ಸುವ್ಯವಸ್ಥಿತವಾಗಿ ಕಟ್ಟಿ, ನಲನು ಸಮುದ್ರದ ಮಧ್ಯದಲ್ಲಿ ಹತ್ತು ಯೋಜನ ಅಗಲ ಹಾಗೂ ನೂರು ಯೋಜನ ಉದ್ದವಾದ ವಿರಾಟ್ ಸೇತುವೆಯನ್ನು ನಿರ್ಮಿಸಿದ. ಅಪರಂಪಾರವಾದ ದಕ್ಷಿಣ ಸಮುದ್ರದ ಮಧ್ಯದಲ್ಲಿ ಮಹೇಂದ್ರ ಪರ್ವತದ ತುಟ್ಟ ತುದಿಯಿಂದ ಲಂಕೆಯ ತ್ರಿಕೂಟಾಚಲದ ಪಾದಪ್ರತ್ಯಂತ ಪ್ರದೇಶದವರೆಗೆ ಘೂರ್ಮಿಸುತ್ತಿರುವ ಸಾಗರದ ನೀರಿನ ಮಧ್ಯದಲ್ಲಿ ನಿರ್ಮಿತವಾದ ಈ ಅತ್ಯದ್ಭುತ ಸಮುದ್ರ ಸೇತುವೆಯನ್ನು ಕಂಡು ರಾಮಲಕ್ಷ್ಮಣ, ಹನುಮಂತ ಮುಂತಾದ ಕಪಿ ವೀರರೆಲ್ಲರೂ

ಆನಂದದಿಂದ ಪುಲಕಿತಗೊಂಡರು. ಸ್ವಯಂ ಶ್ರೀರಾಮಚಂದ್ರನು ಲಕ್ಷ್ಮಣ ಹಾಗೂ ಸುಗ್ರೀವ ಆಂಜನೇಯರೊಂದಿಗೆ ಮೊದಲು ಸೇತುವೆಯ ಮೇಲೆ ನಡೆದುಕೊಂಡು ಲಂಕಾಪಟ್ಟಣದ ಸಮುದ್ರ ತೀರವನ್ನು ತಲುಪಿದನು. ಅವರ ಬೆನ್ನು ಹಿಂದೆ ಅಪಾರವಾದ ಆ ವಾನರ ಸೇನೆ ಎಲ್ಲವೂ ನಲನಿರ್ಮಿತವಾದ ಆ ಸೇತುವೆಯ ಮೇಲೆ ಕುಣಿದು ಕುಪ್ಪಳಿಸಿ ಹಾರಿ, ನೆಗೆದು ಜಿಗಿದು ಓಡಿ ಆಡುತ್ತ ಸಮುದ್ರವನ್ನು ಲಂಘಿಸಿ ಆಚೆ ದಂಡೆಗೆ ಹೋಯಿತು.

## ಇಪ್ಪತ್ತುನಾಲ್ಕು ಸೇತುತೀರ್ಥಗಳು

ಈ ಸೇತುವನ್ನು ರಚಿಸಲು ಪ್ರಾರಂಭ ಮಾಡಿದ ಸ್ಥಳವು ದರ್ಭಶಯನ ಎಂದು ಪ್ರಸಿದ್ಧವಾಗಿದೆ. ಈ ಸಮುದ್ರ ಸೇತುವಿನ ಈಚೆಯ ದಂಡೆಯಿಂದ ಆಚೆಯ ದಂಡೆಯ ವರೆಗೆ ಇಪ್ಪತ್ನಾಲ್ಕು ತೀರ್ಥಗಳು ಇರುತ್ತವೆ. ಅವುಗಳಲ್ಲಿಯ ಮೊದಲನೆಯ ತೀರ್ಥ ಚಕ್ರತೀರ್ಥ. ಎರಡನೆಯದು ವೇತಾಳ ವರದ ತೀರ್ಥ, ಮೂರನೆಯದು ಪಾಪವಿನಾಶ ತೀರ್ಥ, ನಾಲ್ಕನೆಯದೇ ಸೀತಾಸರೋವರ ತೀರ್ಥ, ಐದನೆಯದು ಮಂಗಲ ತೀರ್ಥ. ಹೀಗೆ ಈ ಸೇತುವೆಯ ಆರಂಭದಿಂದ ಕೊನೆಯವರೆಗೂ, ಸಮುದ್ರದ ಉದ್ದಕ್ಕೂ ಇರುವ ಅಥವಾ ಬರುವ ಎಲ್ಲ ಇಪ್ಪತ್ನಾಕು ತೀರ್ಥಗಳೂ ಪರಮ ಮಂಗಳಕರವಾಗಿವೆ. ಮತ್ತು ಪಾಪ ಪರಿಹಾರಕವಾಗಿರುತ್ತವೆ. ಇವುಗಳ ಮುಂದೆ-

೬) ಅಮೃತವಾಪಿ ೭) ಬ್ರಹ್ಮಕುಂಡ ೮) ಹನುಮತ್ಕುಂಡ ೯) ಅಗಸ್ತ್ಯತೀರ್ಥ ೧೦) ರಾಮ ತೀರ್ಥ ೧೧) ಲಕ್ಷ್ಮಣತೀರ್ಥ ೧೨) ಜಯತೀರ್ಥ ೧೩) ಲಕ್ಷ್ಮೀತೀರ್ಥ ೧೪) ಅಗ್ನಿತೀರ್ಥ ೧೫) ಸುಚಕ್ರತೀರ್ಥ ೧೬) ಶಿವತೀರ್ಥ ೧೭) ಶಂಖತೀರ್ಥ ೧೮) ಯಾಮುನ ತೀರ್ಥ ೧೯) ಗಂಗಾತೀರ್ಥ ೨೦) ಗಯಾತೀರ್ಥ ೨೧) ಕೋಟಿತೀರ್ಥ ೨೨) ಸಾಧ್ಯಾಮೃತ ತೀರ್ಥ ೨೩) ಮಾನಸತೀರ್ಥ ೨೪) ಧನುಷ್ಕೋಟಿ ತೀರ್ಥ. ಎಂದು ಚತುರ್ವಿಂಶತಿ ತೀರ್ಥಗಳು ಪರಮ ಪವಿತ್ರ ಎಂದು ಪ್ರಸಿದ್ಧವಾಗಿವೆ. ಶ್ರೀರಾಮನ ಆಜ್ಞೆಯಿಂದ ದಕ್ಷಿಣೋದಧಿಯ ವಿಶಾಲ ಕಾಯದಲ್ಲಿ ನಿರ್ಮಿತವಾದ ಈ ವಿರಾಟ್ ಸೇತುವೆಯನ್ನು ಸಂದರ್ಶಿಸಿದವರೂ ಅದರ ಮಧ್ಯದಲ್ಲಿ ಇರುವ ಈ ಮುಖ್ಯ ಮುಖ್ಯವಾದ ಈ ಇಪ್ಪತ್ನಾಕು ತೀರ್ಥಗಳಲ್ಲಿ ಸ್ನಾನಮಾಡಿ ಶ್ರೀರಾಮನಾಮವನ್ನು ಜಪಿಸಿದವರೂ ದಿವ್ಯಗತಿಯನ್ನು ಹೊಂದುತ್ತಾರೆ. ಈ ಸೇತುಬಂಧವನ್ನು ನೋಡಿದವರು ಸಂಸಾರಬಂಧದಿಂದ ಬಿಡುಗಡೆ ಹೊಂದುತ್ತಾರೆ ಮತ್ತು ಈ ಸೇತುವೆಯ ಮುಖಾಂತರ ಶ್ರೀರಾಮಚಂದ್ರನು ಸಮುದ್ರವನ್ನು ವಾನರರೊಂದಿಗೆ ದಾಟಿಹೋದ ಕತೆಯನ್ನು ಕೇಳಿದವರೂ ಸಂಸಾರ ಸಾಗರವನ್ನು ಸುಲಭವಾಗಿ ದಾಟಿ ಶ್ರೀರಾಮನ ಅನುಗ್ರಹದಿಂದ ದಿವ್ಯಗತಿಯನ್ನು ಹೊಂದುತ್ತಾರೆ.

**ಶೌನಕ:-** ಸೂತಾಚಾರ್ಯರೇ, ಸೇತುಬಂಧದ ಉದ್ದಕ್ಕೂ ಆಚೀಚೆ ಇರುವ ಪಾಪಪರಿಹಾರಕವಾದ ಇಪ್ಪತ್ನಾಕು ತೀರ್ಥಗಳ ಹೆಸರುಗಳನ್ನು ತಾವು ಹೇಳಿದಿರಿ. ಅವುಗಳಲ್ಲಿ ಮೊದಲನೆಯ ತೀರ್ಥ ಚಕ್ರತೀರ್ಥ ಎಂದು ನಿರೂಪಿಸಿದಿರಿ. ಪಾಪಪರಿಹಾರಕವಾದ ಈ ತೀರ್ಥಕ್ಕೆ ಚಕ್ರತೀರ್ಥ ಎಂದು ಹೆಸರು ಬರಲು ಕಾರಣವೇನು?

**ಸೂತ:-** ವಿಪ್ರೋತ್ತಮರೇ, ಈ ಸಮುದ್ರಸೇತುವಿನ ಮೂಲ ತೀರ್ಥ ಎಂದರೆ ದರ್ಭಶಯನ ತೀರ್ಥ. ಇಲ್ಲಿಯೇ ಇದೆ ಚತುರ್ವಿಂಶತಿ ತೀರ್ಥಗಳಲ್ಲಿ ಮೊಟ್ಟ ಮೊದಲನೆಯದಾದ ಚಕ್ರತೀರ್ಥ. ಈ ಆದಿತೀರ್ಥಕ್ಕೆ ಚಕ್ರತೀರ್ಥ ಎಂದು ನಾಮ ಬರಲು ಹಿನ್ನೆಲೆಯ ಕಾರಣವನ್ನು ವಿವರಿಸುತ್ತೇನೆ ಕೇಳಿರಿ.

## ಅಷ್ಟಾಕ್ಷರೀ ಮಂತ್ರಜಪದ ಯಶಸ್ಸು

ಪೂರ್ವಕಾಲದಲ್ಲಿ ಈ ತೀರ್ಥದ ತಡಿಯಡಿಯಲ್ಲಿ ಗಾಲವ ಎಂಬ ಹೆಸರಿನ ಮಹರ್ಷಿಯು ನೆಲೆಸಿದ್ದ. ಅವನು ಅತ್ಯುಚ್ಚ ಮಟ್ಟದ ವಿಷ್ಣುಭಕ್ತ. ದಕ್ಷಿಣ ಸಮುದ್ರ ತೀರದಲ್ಲಿ ಹಾಲಾಸ್ಯ ಗ್ರಾಮದಿಂದ ತುಸು ದೂರದ ಅಂತರದಲ್ಲಿ ಫುಲ್ಲ ಗ್ರಾಮ ಎಂಬ ಹಳ್ಳಿಯು ಇರುತ್ತದೆ. ಆ ಫುಲ್ಲಗ್ರಾಮದ ಬಳಿಯಲ್ಲಿ ಕ್ಷೀರ ಸರೋವರ ಸಮೀಪದ ಧರ್ಮಪುಷ್ಕರಣಿಯ ದಂಡೆಯಮೇಲೆ ಅತ್ಯುಗ್ರವಾದ ತಪಸ್ಸನ್ನು ಆಚರಿಸುತ್ತಿದ್ದ ಈ ಗಾಲವ ಮಹಾಮುನಿ. ಭೂತ ದಯೆ ಅವನ ಜೀವನದ ಉಸಿರು. ಪರೋಪಕಾರವೇ ಅವನ ವ್ರತ. ಹರಿಯಲ್ಲಿ ನಿರ್ವ್ಯಾಜ ಭಕ್ತಿ ಅವನ ಸ್ವಭಾವ. ಹುಸಿಯಾಡಿ ಗೊತ್ತಿಲ್ಲ. ಇಂದ್ರಿಯಗಳೆಲ್ಲವೂ ಅವನ ಅಂಕಿತದಲ್ಲಿ. ಆಹಾರವನ್ನು ಬಿಟ್ಟು ಅವನು ಎಷ್ಟೋ ವರ್ಷವಾಗಿತ್ತು. ತನ್ನ ಉಗ್ರತಪಸ್ಸಿನ ಪ್ರಾರಂಭಿಕ ದಿನಗಳಲ್ಲಿ ಒಣಗಿದ ತರಗೆಲೆಗಳನ್ನು ತಿಂದೋ ಅಥವಾ ತೊರೆಯಲ್ಲಿಯ ಒಂದು ಬೊಗಸೆಯ ನೀರನ್ನು ಕುಡಿದೋ ಇಲ್ಲವೇ ಬರೀ ಗಾಳಿ ಕುಡಿದೋ ಅವನು ಆಚರಿಸಿದ ಅತ್ಯಂತ ದುಷ್ಕರವಾದ ಮಹಾತಪಸ್ಸನ್ನು. ಹೀಗೆ ಸಮಯದ ಅರಿವೇ ಇಲ್ಲದೇ, ಹಸಿವು ನೀರಡಿಕೆಗಳ ಪರಿವೆ ಇಲ್ಲದೇ, ಛಳಿ ಬಿಸಿಲು ಗಾಳಿಗಳ ಎಚ್ಚರ ಇಲ್ಲದೇ, ಅಖಂಡವಾಗಿ ಸಾಗಿತು ಅವನ ತಪೋನುಷ್ಠಾನ. ಮುಖದಿಂದ ''ಓಂ ನಮೋ ನಾರಾಯಣಾಯ'' ಎಂಬ ಅಷ್ಟಾಕ್ಷರೀ ಮಂತ್ರದ ಪುರಶ್ಚರಣವು ಹಗಲಿರುಳೂ ನಡದೇ ಇರುತ್ತಿತ್ತು. ಗಾಲವ ಮುನಿಯ ಅತ್ಯಂತ ಕಠೋರವಾದ ಈ ಕ್ಲಿಷ್ಟ ತಪಸ್ಸನ್ನು ನೋಡಿ ಹಾಗೂ ಅವನು ನಿರಂತರವೂ ನಡೆಸಿದ ನಾರಾಯಣ ಅಷ್ಟಾಕ್ಷರ ಮಂತ್ರದ ಸಂತತ ಜಪಾನುಷ್ಠಾನವನ್ನೂ ಕಂಡು ಪರಿತುಷ್ಟನಾದ ಪರಮಾತ್ಮ ನಾರಾಯಣ. ಪ್ರತ್ಯಕ್ಷವಾಗಿಯೇ ಆ ಗಾಲವ ಮುನಿಯ ಸಾಕ್ಷಾತ್ಕಾರಕ್ಕೆ ಗೋಚರನಾದ. ಶಂಖ ಚಕ್ರ ಗದಾ ಪದ್ಮ ಧರಿಸಿಕೊಂಡು ಅವನೆದುರು ಬಂದು ನಿಂತುಕೊಂಡ.

## ನಾರಾಯಣನ ನಿಲವು, ವಿಶ್ವಮೋಹಕ ಚೆಲುವು

ಹೊಂದಾವರೆಗಿಂತ ಸುಂದರ ಆ ಶ್ಯಾಮಸುಂದರನ ಮುಖ. ಕೋಟಿ ಸೂರ್ಯರಿಗಿಂತಲೂ ಮಿಗಿಲು ಅವನ ದೇಹದ ದಿವ್ಯ ದೀಪ್ತಿ. ಪಕ್ಷಿರಾಜ ಗರುಡನೇ ಅವನ ಆಸನ. ಮುಖದಲ್ಲಿ ಸೌಮ್ಯಕಳೆ. ಕಂಗಳಲ್ಲಿ ಮಿಂಚಿನ ಸೆಳಕು. ಕೊರಳಲ್ಲಿ ಹಾರ, ತೋಳುಗಳಲ್ಲಿ ಭುಜ ಕಿರೀಟ. ತಲೆಯ ಮೇಲೆ ರತ್ನಖಚಿತ ಕಿರೀಟ. ವಿಷ್ವಕ್ ಸೇನ, ಸುನಂದ ಮುಂತಾದವರು ಅಂಗರಕ್ಷಕರು. ವಿಶ್ವಮೋಹಕವಾದ ಮಂದಹಾಸ. ಕೊರಳಲ್ಲಿ ಕೌಸ್ತುಭಮಣಿ. ಪ್ರಸನ್ನವಾದ ಮುಖಮುದ್ರೆ. ಅಮೃತವನ್ನು ಸುರಿಸುವ ಕರುಣಾಕಟಾಕ್ಷ.

ಹೀಗೆ ಕರುಣೋನ್ಮುಖವಾದ ಶ್ರೀಹರಿಯ ಈ ದಿವ್ಯ ದರ್ಶನದಿಂದ ಪ್ರೀತ ಪುಲಕಿತನಾದ ಗಾಲವ ಮುನಿ ಸಾಷ್ಟಾಂಗ ವಂದನೆಗೈದ. ಕೈ ಜೋಡಿಸಿ ಸ್ತೋತ್ರ ಮಾಡಿದ- ''ಭಗವನ್! ಶುದ್ಧ ಸಚ್ಚಿದಾನಂದ ಸ್ವರೂಪನಾದ ನಾರಾಯಣನೇ. ಭಕ್ತರ ಚಿಂತಾಸಂತಾಪಗಳನ್ನು ಪರಿಹರಿಸಿ ಅನುಗ್ರಹ ಮಾಡುವ ನಿನಗೆ ನನ್ನ ನಮಸ್ಕಾರ. ವೇದಾಂತ ವೇದ್ಯನಾದ ಪರಮೇಶ್ವರ, ಜಗತ್ ಸೃಷ್ಟಾರನಾದ ಬ್ರಹ್ಮದೇವನಿಗೆ ನೀನು ತಂದೆ. ವಿಶ್ವದ ಪ್ರಳಯಂಕರನಾದ ಶಂಕರನಿಗೆ ನೀನು ಅಜ್ಜ. ಶೇಷಶಾಯಿಯಾದ ನಾರಾಯಣ, ನಿನಗೆ ನಮಸ್ಕಾರ, ಮತ್ತೆ ಮತ್ತೆ ವಂದನೆ.''

ತನ್ನ ಭಕ್ತ ಮಹಾತ್ಮನಾದ ಗಾಲವನ ಈ ಸ್ತುತಿ ಹಿಗ್ಗನ್ನು ತಂದಿತು ಹರಿಗೆ. ಪ್ರೀತಿಯಿಂದ ಆ ಭಕ್ತನನ್ನು ಬಿಗಿದಪ್ಪಿದ ಭಗವಂತ. ಮತ್ತು ಹೃದಯತುಂಬಿ ಹೇಳಿದ ವಾತ್ಸಲ್ಯ ರಸವನ್ನು ಸುರಿಸುತ್ತ- ''ಗಾಲವ! ನಾನು ನಿನ್ನ ತಪಸ್ಸಿನಿಂದ ಪ್ರೀತ, ಸ್ತೋತ್ರದಿಂದ ಪರಿತುಷ್ಟ, ಭಕ್ತಿಯಿಂದ ಪ್ರಸನ್ನ. ಬೇಕಾದ ವರ ಬೇಡು. ನೀನು ಬಯಸಿದ್ದನ್ನು ನೀಡುವೆ.''

**ಗಾಲವ:-** ''ಭಗವನ್! ನನಗೆ ಬೇಕಾದದ್ದು ಇಂದು ಇದೀಗ ದೊರಕಿದೆ. ನಾನು ಎಂದಿನಿಂದಲೂ ನಿನ್ನ ದರ್ಶನಾಕಾಂಕ್ಷಿಯಾಗಿ ತಪವನ್ನು ತಪಿಸುತ್ತಿದ್ದೆ. ಜಪವನ್ನು ಜಪಿಸುತ್ತಿದ್ದೆ. ಮಂತ್ರಗಳನ್ನು ಪಠಿಸುತ್ತಿದ್ದೆ. ಇಂದು ನೀನು ನನ್ನ ಮೇಲೆ ಅನುಗ್ರಹಮಾಡಿ ನಿನ್ನ ಪ್ರತ್ಯಕ್ಷ ದರ್ಶನವನ್ನು ನೀಡಿದೆ. ನನಗೆ ಬೇಕಾದದ್ದು ನಿನ್ನ ದರ್ಶನವೇ. ಅದನ್ನು ನೀನು ನನಗೆ ಕರುಣಿಸಿದ್ದರಿಂದ ನನಗೆ ಬೇರೆ ಯಾವ ಆಸೆಯೂ ಉಳಿದಿಲ್ಲ. ನಿನ್ನ ಅಡಿದಾವರೆಗಳಲ್ಲಿ ಅಡಿಗಡಿಗೆ ಅಭಿವೃದ್ಧಿಯನ್ನು ಹೊಂದುತ್ತಲಿರಲಿ ನನ್ನ ಭಕ್ತಿ.

**ವಿಷ್ಣು:-** ''ಗಾಲವ, ತಥಾಸ್ತು. ನಿನಗೆ ನನ್ನಲ್ಲಿ ಹುಟ್ಟಿರುವ ಈ ನಿಷ್ಕಾಮ ಭಕ್ತಿಯು ವರ್ಧಮಾನವಾಗಲಿ ಅನುದಿನವು. ಈ ನಿನ್ನ ಮಾನವೀಯ ದೇಹ ಪಾತವಾದ ನಂತರ ನಿನಗೆ ನನ್ನ ಸಾರೂಪ್ಯ ಮೋಕ್ಷವನ್ನು ಕರುಣಿಸುವೆ. ನೀನು ಈ ಲೋಕದಲ್ಲಿ ಬದುಕಿ ಇರುವರೆಗೆ ಇದೇ ಆಶ್ರಮದಲ್ಲಿ ನೆಲಿಸು. 'ಧರ್ಮಪುಷ್ಕರಣಿ' ಎಂದು ಹೆಸರಾದ ಈ ತೀರ್ಥವು ಪಾಪ ನಾಶಿನಿಯೂ ಪುಣ್ಯ ವಿಕಾಸಿನಿಯೂ ಆಗಲಿ. ಈ ತೀರ್ಥದ ತೀರದಲ್ಲಿ ನಿಂತು ತಪವನ್ನು ಕೈಕೊಂಡವನಿಗೆ ಬಹುಸುಲಭ ಸಿದ್ಧಿ. ಅನಾಯಾಸ ಲಭ್ಯ ಮುಕ್ತಿ.

## 'ಧರ್ಮಪುಷ್ಕರಣಿ' ಹೆಸರು ಬರಲಿಕ್ಕೆ ಕಾರಣ

ಪೂರ್ವ ಕಾಲದಲ್ಲಿ ಯಮಧರ್ಮನು ದಕ್ಷಿಣ ಸಮುದ್ರದ ಈ ತೀರ್ಥಕ್ಕೆ ಬಂದು ಉಗ್ರತಪಸ್ಸನ್ನು ಮಾಡಿದ ಮಹಾದೇವರನ್ನು ಕುರಿತು. ಯಮಧರ್ಮನ ತಪೋನುಷ್ಠಾನ ದಿಂದ ಸಂತುಷ್ಟನಾದ ಶೂಲಪಾಣಿಯು ಅಲ್ಲಿಯೇ ಪ್ರಕಟನಾದ. ಆಗ ಯಮಧರ್ಮನು ಆನಂದಭರಿತನಾಗಿ ಆ ಚಂದ್ರಶೇಖರನನ್ನು ವಂದಿಸಿ ಭಕ್ತಿಯಿಂದ ಸ್ತೋತ್ರ ಮಾಡಿದ. ಅವನ ಸ್ತೋತ್ರದಿಂದ ಪ್ರಸನ್ನನಾದ ಪರಮೇಶ್ವರನು ಬೇಕಾದ ವರ ಬೇಡು, ಎಂದು ಹೇಳಿದ ಆ ಧರ್ಮರಾಜನಿಗೆ. ಆಗ ಆ ಧರ್ಮನು ಆ ಭವಾನೀಪತಿಗೆ ''ಸ್ವಾಮಿನ್, ನನ್ನನ್ನು ನಿನ್ನ ವಾಹನವನ್ನಾಗಿ ಮಾಡಿಕೋ'' ಎಂದು ಪ್ರಾರ್ಥನೆಯನ್ನು ಮಾಡಿಕೊಂಡ.

ಪಾರ್ವತೀ ಪತಿಯು ಧರ್ಮರಾಜನ ಈ ಬಿನ್ನಹವನ್ನು ಮಾನ್ಯಮಾಡಿದ. ಆ ಧರ್ಮನನ್ನು ತನ್ನ ವಾಹನವಾದ ಎತ್ತನ್ನಾಗಿ ಮಾಡಿಕೊಂಡ. ಎತ್ತಿನ ರೂಪವನ್ನು ಆ ಧರ್ಮನಿಗೆ ಕರುಣಿಸಿದ. ಅಂದಿನಿಂದ ಆ ಸರೋವರಕ್ಕೆ 'ಧರ್ಮ ಪುಷ್ಕರಣಿ' ಎಂದು ಹೆಸರು ಬಂದಿತು.

''ಗಾಲವ ಮುನಿಯೇ! ನೀನು ಇನ್ನು ಮುಂದೆ ಪರಮ ಪವಿತ್ರವಾದ ಈ ಧರ್ಮ ಪುಷ್ಕರಣಿ ತೀರ್ಥದಲ್ಲಿ ಇದ್ದು ತಪಸ್ಸನ್ನು ಆಚರಿಸು.''

ಹೀಗೆ ಭಕ್ತವತ್ಸಲನಾದ ಶ್ರೀಹರಿಯು ಗಾಲವ ಮುನಿಗೆ, ಆದೇಶ ನೀಡಿ ಅಂತರ್ಧಾನ ಹೊಂದಿದ. ಅನಂತರ ಮುನಿಮಂಡಲದಲ್ಲಿಯೇ ಮೇಲ್ಮಟ್ಟದ ಮಹಾಮುನಿ ಎಂದು ಪ್ರಸಿದ್ಧನಾದ ಗಾಲವ ಮುನಿಯು ಈ ಧರ್ಮಪುಷ್ಕರಣೀ ತೀರದಲ್ಲಿ ಬಂದು ನೆಲಿಸಿದ. ಹಗಲೆಲ್ಲ ಹರಿಯ ಧ್ಯಾನ. ಇರುಳೆಲ್ಲ ಆ ಪರಮಾತ್ಮನ ಗುಣಗಾನ, ಸದಾ ಸರ್ವದಾ ಭಗವಂತನ ಪೂಜೆ, ಸೇವೆ ಕೈಂಕರ್ಯದಲ್ಲಿಯೇ ಜೀವನಯಾಪನ.

ಮುಂದೆ ಒಂದಾನೊಂದು ಸಮಯದಲ್ಲಿ ಆ ಗಾಲವಮುನಿಯು ಮಾಘ ಶುಕ್ಲಪಕ್ಷ ಏಕಾದಶೀ ದಿನ ಪೂರ್ಣ ಉಪವಾಸ ಮಾಡಿದ. ಇರುಳೆಲ್ಲ ಜಾಗರ. ಬೆಳಗಾಗುವ ವರೆಗೆ ನಿರಂತರ ಹರಿಯ ಧ್ಯಾನ. ಮರುದಿನ ದ್ವಾದಶಿಯಂದು ಧರ್ಮ ಪುಷ್ಕರಣಿಯ ಪವಿತ್ರ ಜಲದಲ್ಲಿ ಮಿಂದ. ಸಂಧ್ಯಾವಂದನೆಗೈದ. ತನ್ನ ನಿತ್ಯಾಹ್ನಿಕಗಳನ್ನು ಮುಗಿಸಿದ. ದೇವರನ್ನು ಪೂಜಿಸಿದ. ಪರಮಾತ್ಮನ ಸ್ತೋತ್ರಗೈದು ಆ ಮಹಾಮುನಿಯು ಇದೇ ಧರ್ಮ ಪುಷ್ಕರಿಣಿಯ ದಂಡೆಯ ಮೇಲೆ ಧ್ಯಾನಮಗ್ನನಾಗಿ ಕುಳಿತುಕೊಂಡಿದ್ದ. ಅದೇ ವೇಳೆಯಲ್ಲಿ ಓರ್ವ ದುಷ್ಟ ದೈತ್ಯನು ಅಲ್ಲಿಗೆ ಆಗಮಿಸಿದ. ಹಸಿವೆಯಿಂದ ಹುಚ್ಚನಾಗಿದ್ದ ಆ ದೈತ್ಯಾಧಮ. ಈ ಗಾಲವ ಮುನಿಯನ್ನೇ ಕೊಂದು ತಿಂದು ಬಿಡಬೇಕೆಂದು ಓಡಿ ಬಂದ. ಗಟ್ಟಿಯಾಗಿ ಹಿಡಿದುಕೊಂಡ ಆ ಗಾಲವನನ್ನು. ಹರಿಯ ಧ್ಯಾನದಲ್ಲಿ ಪರವಶನಾಗಿಕುಳಿತ ಆ ಮಹಾಮುನಿಯು ದುಷ್ಟ ದೈತ್ಯನ ಆಕ್ರಮಣದಿಂದ ದಿಗ್ಭ್ರಮೆಗೊಂಡು ಮೊರೆ ಇಟ್ಟ ಶ್ರೀಹರಿಗೆ- ''ಅನಾಥ ರಕ್ಷಕನಾದ ಶ್ರೀಹರಿಯೇ! ಕಾಪಾಡು. ದಾಮೋದರ, ರಕ್ಷಿಸು ಜಗನ್ನಾಥ, ದಯೆತೋರು. ಭಕ್ತವತ್ಸಲನಾದ ಭಗವಂತ, ಹಿಂದೆ ನೀನು ತಂದೆಯಿಂದ ವಿಹ್ವಲನಾದ ಕಂದ ಪ್ರಹ್ಲಾದನನ್ನು ಕಾಯಲಿಲ್ಲವೆ? ಅದರಂತೆ ನನ್ನನ್ನು ರಕ್ಷಿಸು ಈ ದೈತ್ಯಾಪಸದನಿಂದ. ನನ್ನನ್ನು ಬಿಡುಗಡೆ ಮಾಡು.''

ಕರುಣೆಯ ಕೈವಾರಿಯಲ್ಲವೆ ನಮ್ಮ ಮುರಾರಿ! ಆ ಪರಮಾತ್ಮನ ಕರುಳನ್ನು ಕರಗಿಸಿತು ಗಾಲವನ ಈ ದೀನ ಧ್ವನಿ. ಕೂಡಲೇ ಶ್ರೀಹರಿಯು ತನ್ನ ಸುದರ್ಶನ ಚಕ್ರವನ್ನು ಕಳಿಸಿಕೊಟ್ಟ ತನ್ನ ಭಕ್ತ ಗಾಲವನ ರಕ್ಷಣೆಗಾಗಿ. ಬೆಂಕಿಯ ಬೆಟ್ಟದಂತೆ ಉರಿಯುತ್ತಲೇ ಬಂದಿತು ಕೃಷ್ಣನ ಕೈಯಲ್ಲಿಯ ಆ ಕರಾಳ ಚಕ್ರ. ಅದನ್ನು ಕಂಡು ಕಕ್ಕಾಬಿಕ್ಕಿಯಾಗಿ ಗಾಬರಿಗೊಂಡ ಆ ರಕ್ಕಸ ದಿಕ್ಕೆಟ್ಟು ಓಡತೊಡಗಿದ. ಬಿಟ್ಟೀತೆ? ಆ ಭಗವನ್ ಮುಕ್ತವಾದ ಚಕ್ರ! ಬೆನ್ನಟ್ಟಿತು ಆ ಬೆಂಕಿಯ ಬೆಟ್ಟ. ಸುಟ್ಟು ಹಾಕಿತು ಆ ದುಷ್ಟ ದೈತ್ಯನನ್ನು.

ಆಗ ಗಾಲವ ಮುನಿಯು ಕೈ ಮುಗಿದು ಆ ಸುದರ್ಶನ ಚಕ್ರವನ್ನು ಸ್ತೋತ್ರ ಮಾಡಿದ ''ಹರಿಯ ಹಸ್ತಾಲಂಕಾರವಾದ ಚಕ್ರವೇ! ನಿನಗೆ ನನ್ನ ನಮಸ್ಕಾರ. ಯುದ್ಧದಲ್ಲಿ ಮದಾಂಧರಾದ ದೈತ್ಯ ದಾನವರನ್ನೆಲ್ಲ ತರಿದೊಗೆದು ವಿಶ್ವರಕ್ಷಣವನ್ನು ಮಾಡುವ ಸುದರ್ಶನವೇ, ನಿನಗೆ ನನ್ನ ವಂದನೆ. ನೀನು ಜಗತ್ತಿನ ಕಲ್ಯಾಣಕ್ಕಾಗಿಯೇ ಈ ತೀರ್ಥ ದಲ್ಲಿಯೇ ಇನ್ನು ಮೇಲೆ ನೆಲಿಸು.

**ಸುದರ್ಶನ:-** 'ಗಾಲವ ಮುನಿಯೇ, ನಿನ್ನ ಅಪೇಕ್ಷೆಯಂತೆ ಆಗಲಿ. ಲೋಕ ಹಿತಕ್ಕಾಗಿ ನಾನು ಇಲ್ಲಿಯೇ ನೆಲಿಸುವೆನು. ಇಂದಿನಿಂದ ಈ ಧರ್ಮ ಪುಷ್ಕರಣಿಯು 'ಚಕ್ರತೀರ್ಥ' ಎಂದೇ ಪ್ರಸಿದ್ಧಿಯಾಗಲಿ. ಇಲ್ಲಿ ಸ್ನಾನಮಾಡಿದವರು ಸ್ವರ್ಗಕ್ಕೆ ಹೋಗುವರು. ಇಲ್ಲಿ ಶ್ರಾದ್ಧಮಾಡಿದವರ ಪಿತೃಗಳೆಲ್ಲರೂ ದಿವ್ಯ ಸದ್ಗತಿಯನ್ನು ಹೊಂದುವರು.''

ಹೀಗೆ ಹೇಳಿ ಮಹಾವಿಷ್ಣುವಿನ ಹಸ್ತಭೂಷಣವಾದ ಆ ಸುದರ್ಶನ ಚಕ್ರವು ಧರ್ಮಪುಷ್ಕರಣಿಯ ನೀರಿನಲ್ಲಿ ಎಲ್ಲರೂ ನೋಡುತ್ತಿರುವಂತೆಯೇ ಅಂತಃಪ್ರವೇಶ ಮಾಡಿತು. ಅಂದಿನಿಂದ ಈ ತೀರ್ಥ ಚಕ್ರತೀರ್ಥ ಎಂದು ಹೆಸರು ಪಡೆಯಿತು.

## ಸೇತುಯಾತ್ರೆಯ ಕ್ರಮ

**ಸೂತ:-** "ಮುನೀಶ್ವರರೇ, ಕುಶಲ ಶಿಲ್ಪಿಯಾದ ನಲನು ಈ ಸಮುದ್ರ ಸೇತುವೆ ಯನ್ನು ನಿರ್ಮಿಸುವದಕ್ಕಿಂತ ಮೊದಲು ಸ್ವಯಂ ಶ್ರೀರಾಮಚಂದ್ರನಿಗೆ "ಈ ಸೇತುಬಂಧನ ಕಾರ್ಯವನ್ನು ನಿನ್ನ ಅಮೃತ ಹಸ್ತದಿಂದಲೇ ಪ್ರಾರಂಭಿಸು" ಎಂದು ಬೇಡಿಕೊಂಡ ಆ ಪ್ರಾಜ್ಞನಾದ ಸ್ಥಪತಿಯ ಈ ವಿಜ್ಞಾಪನೆಯನ್ನು ಅನುಮೋದಿಸಿದ ಸ್ವಯಂ ಶ್ರೀರಾಮ. ಮೊದಲು ತಾನೇ ತನ್ನ ಕೈಯಿಂದಲೇ ಒಂಬತ್ತು ಕಲ್ಲುಗಳನ್ನು ದಕ್ಷಿಣ ಸಮುದ್ರ ತೀರದ ಅಂಚಿನಲ್ಲಿ ಇರಿಸಿ, ಸೇತು ನಿರ್ಮಾಣ ಕಾರ್ಯಕ್ಕೆ ಶ್ರೀಕಾರವನ್ನು ಹಾಕಿದ. ರಾಮಭಗವಾನನು ಸೇತುಬಂಧನವನ್ನು ಉಪಕ್ರಮ ಮಾಡಿದ ಸ್ಥಳದಲ್ಲಿಯೇ ಇಂದು ದೇವೀಪತ್ತನ ಎಂಬ ಒಂದು ನಗರವಿದೆ. ಅಲ್ಲಿಯೇ ಇರುತ್ತದೆ ಈ ಚಕ್ರತೀರ್ಥ. ಶ್ರೀರಾಮನು ಶುಭ ಮುಹೂರ್ತದಲ್ಲಿ ಈ ದೇವೀಪತ್ತನ ನಗರದಿಂದಲೇ ಸೇತುಬಂಧಕ್ಕೆ ಪ್ರಾರಂಭಮಾಡಿದ. ಅದಕ್ಕಿಂತ ಮೊದಲು ಈ ಮಹಾಕಾರ್ಯವು ನಿರ್ವಿಘ್ನವಾಗಿ ನೆರವೇರಲಿ ಎಂದು ಗಣಪತಿ ಪೂಜೆಗೈದು, ಮಹಾದೇವರನ್ನು ಬೇಡಿಕೊಂಡು, ಪ್ರಸನ್ನ ಮನಸ್ಸಿನಿಂದ ತನ್ನ ಅಮೃತ ಹಸ್ತದಿಂದ ಒಂಬತ್ತು ಕಲ್ಲುಗಳನ್ನು ಇಟ್ಟು ಸೇತು ರಚನಾ ಕಾರ್ಯವನ್ನು ಮೊದಲು ಮಾಡಿದ.

ಆಗ ಎಲ್ಲರ ವಾನರ ವೀರರೂ ದೊಡ್ಡ ದೊಡ್ಡ ಗಿಡ, ಗುಡ್ಡ, ಕಡ್ಡಿ, ಕಲ್ಲು, ಕಟ್ಟಿಗೆ, ಗಿರಿಶೃಂಗ, ಶಿಲಾಖಂಡ ಮುಂತಾದವುಗಳನ್ನು ತಂದು ತಂದು ಒಟ್ಟಿದರು. ನಲನು ಅವುಗಳನ್ನೆಲ್ಲ ಜೋಡಿಸಿ ಕೂಡಿಸಿ ಸಾಗರದ ಸಲಿಲ ಶರೀರದ ವಿಶಾಲ ಕಾಯದಲ್ಲಿ ವ್ಯವಸ್ಥಿತವಾಗಿ ಒಟ್ಟಿ ಇಟ್ಟು ದಿವ್ಯವಾದ ಸಮುದ್ರಸೇತುವೆಯನ್ನು ಐದೇ ಐದು ದಿನಗಳಲ್ಲಿ ಲಂಕಾಪಟ್ಟಣದ ಆ ತುದಿಯವರೆಗೆ ಮಾಡಿ ಮುಗಿಸಿದನು. ನೂರು ಯೋಜನ ಉದ್ದ ಹತ್ತು ಯೋಜನ ಅಗಲವಾದ ಈ ವಿಶಾಲ ಸೇತುಬಂಧನಕ್ಕೆ ದೇವೀಪಟ್ಟಣದ ಹತ್ತಿರ ಶ್ರೀರಾಮಚಂದ್ರ ಪ್ರಭು ಸ್ವಯಂ ತನ್ನ ಕೈಯಿಂದಲೇ ಇರಿಸಿದ ಒಂಭತ್ತು ಕಲ್ಲುಗಳೇ ಮೂಲವಾಗಿರುತ್ತವೆ. ಇಲ್ಲಿ ಸ್ನಾನಮಾಡಿದ ಮಾನವರ ಪಾಪಗಳೆಲ್ಲವೂ ದೂರವಾಗುವವು.

ಈ ದೇವೀಪತ್ತನದಿಂದ ಈ ವಿರಾಟ್ ಸೇತುಬಂಧನವು ಪ್ರಾರಂಭವಾದದ್ದರಿಂದ ಇದು ಸೇತು ಮೂಲ ಎಂದು ಕರೆಯಲ್ಪಡುತ್ತದೆ. ಈ ಸೇತುವಿನ ಪಶ್ಚಿಮದಂಡೆಯು ದರ್ಭಶಯನ ತೀರ್ಥ ಎಂದೂ, ಪೂರ್ವದಂಡೆಯು ದೇವೀತೀರ್ಥ ಎಂದೂ ಹೇಳಲ್ಪಡುತ್ತವೆ. ಇವೆರಡೂ ಸೇತು ಮೂಲವಾಗಿದ್ದು ಪರಮಪವಿತ್ರವೂ, ಪುಣ್ಯಜನಕವೂ ಪಾಪನಾಶಕವೂ ಆಗಿರುತ್ತವೆ. ಯಾತ್ರಿಕರು ಸೇತುಮೂಲಕ್ಕೆ ಯಾವ ಮಾರ್ಗದಿಂದ ಹೋಗಿರುವರೋ ಅದೇ ಮಾರ್ಗದಿಂದಲೇ ಸೇತು ಮೂಲತೀರ್ಥದಲ್ಲಿ ಸ್ನಾನಮಾಡಿ ಮರಳಿ ಬಂದು ಚಕ್ರತೀರ್ಥದಲ್ಲಿ ಸ್ನಾನ ಮಾಡಬೇಕು. ಅನಂತರ ಸೇತುಬಂಧ ತೀರ್ಥಕ್ಕೆ ಹೋಗಿ ಸ್ನಾನಮಾಡಿ ಶ್ರೀರಾಮಚಂದ್ರನನ್ನು ಮನಸ್ಸಿನಲ್ಲಿ ಧ್ಯಾನಮಾಡಿ ಈ ಕೆಳಗಿನ ಮಂತ್ರ ಹೇಳಿ ನಮಸ್ಕಾರ ಮಾಡಬೇಕು.

ರಘುವೀರ ಪದನ್ಯಾಸ ಪವಿತ್ರೀಕೃತ ಪಾಂಸವೇ ।
ದಶಕಂಠ ಶಿರಚ್ಛೇದ ಹೇತವೇ ಸೇತವೇ ನಮಃ ॥

ಕೇತವೇ ರಾಮಚಂದ್ರಸ್ಯ ಮೋಕ್ಷಮಾರ್ಗೈಕ ಹೇತವೇ ।
ಸೀತಾಯಾ ಮಾನಸಾಂಭೋಜಭಾನವೇ ಸೇತವೇ ನಮಃ ॥

ಈ ಸೇತುವಿಗೆ ನಮಸ್ಕಾರ. ಇದರಲ್ಲಿಯ ಹುಡಿಯೆಲ್ಲವೂ ರಾಮಚಂದ್ರನು ಅಡಿಯನ್ನು ಇಡುವದರಿಂದ ಪರಮಪವಿತ್ರ. ರಾವಣನ ಸಂಹಾರಕ್ಕೆ ಈ ಸೇತುವೆಯೇ ಕಾರಣ. ಈ ಸೇತುವೆಯ ಶ್ರೀರಾಮನ ಕೀರ್ತಿಯ ಧ್ವಜದಂತೆ ಇದೆ. ಮತ್ತು ಮೋಕ್ಷಕ್ಕೂ ಕಾರಣವಾಗಿದೆ. ಸೀತೆಯ ಹೃದಯ ಕಮಲವನ್ನು ಈ ಸೇತುವೆಯು ಸೂರ್ಯನಂತೆ ಅರಳಿಸುತ್ತದೆ. ಇಂಥ ಈ ಸೇತುವೆಗೆ ನನ್ನ ವಂದನೆ'' ಈ ಮಂತ್ರವನ್ನು ಹೇಳಿ ಸೇತುವೆಗೆ ಸಾಷ್ಟಾಂಗ ನಮಸ್ಕಾರ ಮಾಡಿ 'ವೇತಾಲವರದ' ಎಂಬ ತೀರ್ಥಕ್ಕೆ ಹೋಗಬೇಕು ಚಕ್ರತೀರ್ಥದ ದಕ್ಷಿಣಕ್ಕಿರುವ ಈ 'ವೇತಾಲ ವರದ' ತೀಥದಲ್ಲಿ ಸ್ನಾನಮಾಡಿ ಪಿತೃಗಳಿಗೆ ಪಿಂಡ ಪ್ರದಾನವನ್ನು ಮಾಡಿದ ಮಾನವ ಜೀವನ್ಮುಕ್ತ. ಅನಂತರ ಸಮುದ್ರದಲ್ಲಿ ಸೇತುವಿನ ರೂಪದಲ್ಲಿರುವ ಗಂಧಮಾಧನ ಪರ್ವತಕ್ಕೆ ಹೋಗಬೇಕು. ಅಲ್ಲಿ ಇರುವ ಪರಮೇಶ್ವರನ ದರ್ಶನ ತೆಗೆದುಕೊಂಡು ಅದರ ತೀರದ ಸಮುದ್ರದಲ್ಲಿ ಸ್ನಾನ ಪಿಂಡದಾನಗಳನ್ನು ನೇರವೇರಿಸಬೇಕು. ಅದರ ಮುಂದೆ ಪಾಪವಿನಾಶನ ಎಂಬ ಮಹಾತೀರ್ಥವಿರುತ್ತದೆ ಅದರ ದರ್ಶನದಿಂದಲೇ ಪಾಪಗಳೆಲ್ಲವೂ ಪ್ರಣಷ್ಟವಾಗುವವು. ಸ್ನಾನಮಾಡಿದರಂತೂ ವೈಕುಂಠ ಪ್ರಾಪ್ತಿ ನಿಶ್ಚಿತ.

## ಸೀತಾಸರೋವರ ಮಂಗಲ ತೀರ್ಥಗಳ ಮಹಿಮೆ

**ಸೂತ:-** ಪಾಪನಾಶನ ತೀರ್ಥದಲ್ಲಿ ಸ್ನಾನಮಾಡಿ ನಂತರ ಯಾತ್ರಿಕರು ಸೀತಾ ಸರೋವರಕ್ಕೆ ಆಗಮಿಸಬೇಕು. ಹಿಂದೆ ಶ್ರೀರಾಮಚಂದ್ರನು ರಾವಣನನ್ನು ಲಂಕೆಯಲ್ಲಿ ಸಂಹರಿಸಿದ ಬಳಿಕ ಸೀತಾದೇವಿಯು ತನ್ನ ಸತೀತ್ವವನ್ನು ಲೋಕಕ್ಕೆಲ್ಲ ಮನಗಾಣಿಸಿ ಕೊಡಲು ಅಗ್ನಿ ಪ್ರವೇಶ ಮಾಡಿದಳು. ತನ್ನ ಪಾತಿವ್ರತ್ಯ ಪ್ರಭಾವದಿಂದ ಆ ಅಗ್ನಿ ದಿವ್ಯದಲ್ಲಿ ಪಾರಾಗಿ ಬಂದು ಲೋಕ ರಕ್ಷಣೆಗಾಗಿ ತನ್ನ ಹೆಸರಿನಿಂದ ಒಂದು ಉತ್ತಮ ತೀರ್ಥವನ್ನು ನಿರ್ಮಿಸಿದಳು. ಮೊದಲು ಅದರಲ್ಲಿ ತನ್ನ ಮೈ ತೊಳೆದಳು. ಅದರಿಂದಾಗಿಯೇ ಇದಕ್ಕೆ ''ಸೀತಾಸರೋವರ'' ಎಂದು ಹೆಸರು. ಇದರಲ್ಲಿ ಅವಗಾಹನ ಸ್ನಾನಮಾಡಿ ದಾನ. ದಕ್ಷಿಣೆ, ಯಜ್ಞ, ಜಪ ಅನುಷ್ಠಾನಮಾಡಿದವರಿಗೆ ಪರಮೇಶ್ವರನ ಪರಂಧಾಮದಲ್ಲಿ ಪ್ರವೇಶ ಸುಲಭಪ್ರಾಪ್ಯ. ಈ ಸೀತಾಕುಂಡದಲ್ಲಿ ಸ್ನಾನಮಾಡಿ ಯಾತ್ರಿಕರು ಇದರ ಮುಂದಿರುವ ಮಂಗಲ ತೀರ್ಥಕ್ಕೆ ಪ್ರಯಾಣಿಸಬೇಕು. ಅಲ್ಲಿ ಹರಿಪ್ರೇಯಸಿಯಾದ ಲಕ್ಷ್ಮೀದೇವಿಯ ನಿತ್ಯ ನಿವಾಸ. ಪೂರ್ವಕಾಲದಲ್ಲಿ ಚಂದ್ರವಂಶದಲ್ಲಿ ಮನೋಜವ ಎಂಬ ಹೆಸರಿನ ದೊರೆ ಆಗಿ ಹೋದ. ಪ್ರತಿವರ್ಷವೂ ಅವನು ಮಾಡುವ ಯಜ್ಞ ಯಾಗಗಳಿಗೆ ಲೆಕ್ಕವಿಲ್ಲ. ನೀಡುವ ದಾನ ದಕ್ಷಿಣೆ ಗಳಿಗೆ ಮಿತಿ ಇಲ್ಲ. ವಿವಿಧ ಭಕ್ಷ್ಯ ಭೋಜ್ಯ ಪಕ್ವಾನ್ನಗಳಿಂದ ಆಬಾಲ ವೃದ್ಧರನ್ನೂ ಪಂಡಿತ ಪಾಮರರನ್ನೂ ತೃಪ್ತಿಪಡಿಸುತ್ತಿದ್ದ ಆ ಮನೋಜವ ಮಹಾರಾಜ. ಅವನ ಯಜ್ಞಗಳಿಂದ ದೇವತೆಗಳು ಪ್ರೀತರಾದರೆ, ಶ್ರಾದ್ಧ ತೀರ್ಥಯಾತ್ರೆಗಳಿಂದ ಪಿತೃಗಳು ಪ್ರಸನ್ನರಾಗಿದ್ದರು. ಮಹಾಬಲಿಷ್ಠ ಆ ರಾಜಶ್ರೇಷ್ಠ. ಎದುರಾಳಿಗಳ ಹುಟ್ಟನ್ನೇ ಅಡಗಿಸಿಬಿಟ್ಟ ಆ ವೀರಭೂಪ.

ಇಂಥ ನಿರಂಕುಶ ಸತ್ತೆ ಹಾಗೂ ನಿಷ್ಕಂಟಕ ಸಾರ್ವಭೌಮ ಅಧಿಕಾರಗಳಿಂದ ಅಹಂಕಾರ ಅಂಕುರಿಸಿತು ಆ ರಾಜನ ಪಂಕಿಲ ಹೃದಯದಲ್ಲಿ. ಆ ಅಹಂಕಾರದ ಹಿಂದೆ ಲೋಭ, ಮದ, ಕಾಮ, ಕ್ರೋಧ, ಹಿಂಸೆ, ಅಸೂಯೆ ಎಲ್ಲ ದುರ್ಗುಣಗಳೂ ಸಾಲುಗಟ್ಟಿ ಅಂತರಂಗದಲ್ಲಿ ಮನೆ ಮಾಡಿದವು. ಕಂಡ ಕಂಡಲ್ಲಿಂದ ಹಣವನ್ನು ಕಿತ್ತಿಕೊಳ್ಳುವ ಹುಚ್ಚು ಅವನ ತಲೆಗೇರಿತು. ಪಂಡಿತರ ಭೂಮಿಗಳನ್ನೆಲ್ಲ ಕಸಿದುಕೊಂಡ. ಅಗ್ರಹಾರಗಳನ್ನೆಲ್ಲ ಕಿತ್ತುಕೊಂಡ. ಮಠ

ದೇವಸ್ಥಾನ ಧಾರ್ಮಿಕ ಕೇಂದ್ರಗಳ ದುಡ್ಡನ್ನೆಲ್ಲ ಎತ್ತಿ ಹಾಕಿದ. ಬಡವ, ವಿಧವೆ, ಅನಾಥ, ಪಂಡಿತ ಪಾಮರ ಎಲ್ಲರ ಮೇಲೆಯೂ ತಲೆಭಾರವಾಗುವಂತೆ ಕರ ಹೇರಿ ಜನರನ್ನು ಹಿಂಸೆ ಪಡಿಸಿ ದುಡ್ಡನ್ನು ವಸೂಲಿ ಮಾಡತೊಡಗಿದ. ಇದರಿಂದ ರಾಜ್ಯದಲ್ಲಿ ಎಲ್ಲ ಕಡೆಯೂ ಅಸಂತುಷ್ಟಿ, ವಿರೋಧಿ ಭಾವನೆಗಳು ಹೊಗೆಯಾಡತೊಡಗಿದವು.

ಈ ಸಂಧಿಯನ್ನು ಸಾಧಿಸಿ ರಣದೇಶದ ಗೋಲಭ ರಾಜನು ಪ್ರಚಂಡ ಸೇನಾಸನ್ನಾಹ ದೊಂದಿಗೆ ಬಂದು ಮನೋಜವನ ರಾಜಧಾನಿಗೆ ಮುತ್ತಿಗೆ ಹಾಕಿದ. ಆರು ತಿಂಗಳವರೆಗೆ ನಡೆಯಿತು ಆ ಇಬ್ಬರೂ ರಾಜರಲ್ಲಿ ಹಣಾಹಣಿ ಹೋರಾಟ. ಕೊನೆಗೆ ಗೆದ್ದವ ಗೋಲಭ. ಬಿದ್ದವ ಮನೋಜವ.

ಸಮರಾಂಗಣದಲ್ಲಿ ಸೋತುಹೋದ ಮನೋಜವ ಮಡದಿ ಮಕ್ಕಳೊಂದಿಗೆ ತಲೆ ಮರೆಸಿಕೊಂಡ. ಕಾಡು ಸೇರಿದ. ಅವನ ಪತ್ನಿ ಸುಮಿತ್ರೆಯು ಪರಮ ಪತಿವ್ರತೆ. ದುರ್ದೈವದಿಂದ ಅಡವೀ ಪಾಲಾದ ಆ ರಾಜ ಕುಟುಂಬದವರು ತುತ್ತು ಅನ್ನಕ್ಕೆ ಗತಿಯಿಲ್ಲದೇ ಕಾಡು ನಾಡುಗಳಲ್ಲಿ ಅಂಡಲೆದರು. ಚಿಕ್ಕ ಮಗು ಹಸಿವೆಯಿಂದ ಕಂಗೆಟ್ಟು ಅನ್ನ ಅನ್ನ ಎಂದು ಅಳತೊಡಗಿತು. ಆ ಮಗುವಿನ ಚೀತ್ಕಾರ ಹಾಗೂ ಹಸಿವೆಯ ಕಸಿವಿಸಿಯನ್ನು ಕಣ್ಣಿನಿಂದ ನೋಡಲಾರದೇ ತಾಯಿತಂದೆಗಳಿಬ್ಬರೂ ಆ ಕಾಡಿನಲ್ಲಿ ಮೂರ್ಛಿತರಾಗಿ ಬಿದ್ದರು. ತೀಡುವ ತಂಗಾಳಿಗೆ ಚೇತರಿಸಿಕೊಂಡು ಎದ್ದ ಬಳಿಕ ಮನೋಜವ ಹೇಳಿದ ತನ್ನ ಗೃಹಿಣಿಗೆ.

ಸುಮಿತ್ರೆ, ಈಗ ಏನು ಮಾಡೋಣ? ನಮಗೆ ಯಾರು ದಿಕ್ಕು? ಎಲ್ಲಿಗೆ ಹೋಗೋಣ? ಇನ್ನು ಕೆಲ ಹೊತ್ತಿಗೆ ಹಸಿವೆಯಿಂದ ಈ ನಮ್ಮ ಮಗು ಸತ್ತು ಹೋಗುವದು. ನಾವು ಮಾಡಿದ ಘೋರ ಪಾಪವು ಈಗ ನಮ್ಮನ್ನೇ ತಿನ್ನುತ್ತಲಿರುವದು. ನಾನು ದುರಾಶೆಯಿಂದ ಶಿವಾಲಯದ ಹಣವನ್ನು ಎತ್ತಿ ಹಾಕಿದೆ. ವಿಷ್ಣುಮಂದಿರದ ಆಭರಣಗಳನ್ನು ಕಸಿದುಕೊಂಡೆ. ವಿದ್ವಾಂಸರ ಆಗ್ರಹಾರಗಳಿಗೆಲ್ಲ ಮುಟ್ಟುಗೋಲು ಹಾಕಿದೆ. ಬಡವ, ಬಾಲಕ, ವಿಧವೆ, ಅಂಗಹೀನರನ್ನು ಕೂಡ ಬಿಡದೇ ಕರ ಹಾಕಿ ಸುಲಿದೆ. ಅದರ ಫಲವಾಗಿಯೇ ನನಗೆ ಈ ಸೋಲು, ಸಾವು, ನೋವು, ಅಪಮಾನ, ರಾಜ್ಯಭ್ರಂಶ, ವನವಾಸ. ಎಲ್ಲವೂ ಸರಪಳಿಯಾಗಿ ಸಾಲಾಗಿ ಉರುಲಾಗಿ ನನಗೆ ಬಂದಿವೆ. ನನಗೆ ಒಂದು ತುತ್ತು ಕೂಡ ಈಗ ಅನ್ನ ದೊರೆಯದು. ಹಸಿದು ಪ್ರಾಣ ಬಿಡುತ್ತಲಿರುವ ಈ ಮಗನಿಗೆ ಅನ್ನವನ್ನು ಎಲ್ಲಿಂದ ತರಲಿ?''

ಹೀಗೆ ವಿಲಪಿಸುತ್ತ ಆ ಮನೋಜವ ಮಹಾರಾಜನು ದುಃಖದಗ್ಧನಾಗಿ ನೆಲದ ಮೇಲೆ ಕುಸಿದು ಬಿದ್ದ. ಮೂರ್ಛೆ ಅವನ ಮೇಲೆ ತನ್ನ ಸೆರಗನ್ನು ಹೊದಿಸಿತು. ಪತಿಯ ಈ ದುರ್ದಶೆಯನ್ನು ಕಂಡು ಸತೀಮಣಿ ಸುಮಿತ್ರೆಯು ರೋದಿಸತೊಡಗಿದಳು. ಸಾಯುತ್ತಿರುವ ಮಗ, ಮೂರ್ಛಾಕ್ರಾಂತನಾದ ಪತಿ ಇವರಿಬ್ಬರನ್ನು ಕಂಡು ಆ ಸತೀಮಣಿಯ ಎದೆ ಬಿರಿದು ಹೋಯಿತು.

ಅಷ್ಟರಲ್ಲಿ ಅಲ್ಲಿ ಪರಾಶರ ಮಹರ್ಷಿಗಳು ಆಗಮಿಸಿದರು. ಅವರನ್ನು ಕಂಡ ಕೂಡಲೇ ಸುಮಿತ್ರೆಯು ಎದ್ದು ಬಂದು ಮುನಿಗಳಿಗೆ ವಂದಿಸಿದಳು. ಮಗನನ್ನು ತಂದು ಅವರ

ಕಾಲಮೇಲೆ ಹಾಕಿದಳು. ಪರಾಶರು "ಕಲ್ಯಾಣೀ, ನೀನು ಯಾರು? ನಿನ್ನ ಪಕ್ಕದಲ್ಲಿ ಮೂರ್ಛಿತನಾಗಿ ಬಿದ್ದಿರುವ ಇವನು ಯಾರು? ಈ ಬಾಲಕ ಯಾರು? ಎಂದು ಕೇಳಿದರು.

**ಸುಮಿತ್ರೆ:-** "ಮುನಿಶ್ರೇಷ್ಠರೇ! ಇವರು ನನ್ನ ಪತಿ. ಈ ಬಾಲಕ ನಮ್ಮ ಮಗ ಚಂದ್ರಕಾಂತ. ನನ್ನ ಪತಿದೇವರಾದ ಈ ಮನೋಜವ ಮಹಾರಾಜರು ಚಂದ್ರವಂಶದ ಸುಪ್ರಸಿದ್ಧ ವಿಕ್ರಮಾಢ್ಯ ರಾಜರ ಚಿರಂಜೀವರು. ನಾನು ಇವರ ಕೈಹಿಡಿದ ಮಡದಿ. ನನ್ನ ಹೆಸರು ಸುಮಿತ್ರೆ. ಗೋಲಭರಾಜನು ನಮ್ಮ ರಾಜಧಾನಿಗೆ ಮುತ್ತಿಗೆ ಹಾಕಿ ಯುದ್ಧದಲ್ಲಿ ನನ್ನ ಪತಿಯನ್ನು ಸೋಲಿಸಿದ. ರಾಜ್ಯಭ್ರಷ್ಟರಾದ ನಾವು ಅಡವೀ ಪಾಲಾಗಿ ಇಲ್ಲಿ ಹಸಿವೆ ನೀರಡಿಕೆಗಳಿಂದ ಕಂಗಾಲಾಗಿ ತಿರುಗುತ್ತಿದ್ದೇವೆ. ಹೊಟ್ಟೆಗೆ ಅನ್ನ ಇಲ್ಲದೇ ಈ ಮಗು ಹಸಿವೆಯಿಂದ ಕಸಿವಿಸಿ ಪಡುತ್ತಲಿದೆ. ಮಗುವಿನ ಈ ದುಃಖ ದುರವಸ್ಥೆಯನ್ನೂ ಅನ್ನಕ್ಕಾಗಿ ಮಾಡುವ ಆಕ್ರೋಶವನ್ನೂ ಕೇಳಲಾಗದೇ ತಾಳಲಾಗದೇ ಮೂರ್ಛೆ ಹೋಗಿದ್ದಾರೆ ನನ್ನ ಪತಿ."

ಆ ಸಾಧ್ವೀಮಣಿಯ ಈ ಮಾತುಗಳನ್ನು ಕೇಳಿ ಪರಾಶರ ಮುನಿಗಳ ಅಂತಃಕರಣ ಕರಗಿತು. ಕರುಣಾಪೂರ್ಣರಾಗಿ ಆ ಮುನಿಗಳು ಮನಸ್ಸಿನಲ್ಲಿ ಮಹಾದೇವರನ್ನು ನೆನೆಯುತ್ತ ಮೂರ್ಛಿತರಾಗಿ ಬಿದ್ದ ಮನೋಜನ ಮಹಾರಾಜನ ಮೈಮೇಲೆಲ್ಲ ಕೈಯಾಡಿಸಿದರು. ದೊಡ್ಡವರ ಹಸ್ತಸ್ಪರ್ಶ ಮಾತ್ರದಿಂದಲೇ ಸರ್ವಪಾಪಗಳೂ ಧ್ವಂಸ. ಅವರ ಕರಸ್ಪರ್ಶವು ಮನೋಜವನಲ್ಲಿ ಒಂದು ಪವಾಡವನ್ನೇ ಮಾಡಿತು. ಕೂಡಲೇ ಚೇತರಿಸಿಕೊಂಡು ಎದ್ದು ಕುಳಿತ ಮಹಾರಾಜ. ಎದ್ದು ಬಂದು ವಂದಿಸಿದ ಮುನಿಗಳ ಪಾದಾರವಿಂದಗಳಿಗೆ. "ಗುರುಗಳೇ! ಅನಾಥನಾದ ನನ್ನನ್ನು ರಕ್ಷಿಸಿರಿ. ಕೃಪೆಯಿಂದ ಕಾಪಾಡಿರಿ." ಎಂದು ಮೊರೆಯಿಟ್ಟು ಬೇಡಿಕೊಂಡ. ಅವನ ಈ ದೀನ ಪ್ರಾರ್ಥನೆಯನ್ನು ಕೇಳಿ ಮುನಿಗಳ ಹೃದಯವು ಹಿಂಡಿ ಹೋಯಿತು. ಕಣ್ಣು ಹನಿಯಿತು. ಅವರು ಅವನನ್ನು ಸಂತೈಸುತ್ತ ನುಡಿದರು- "ರಾಜನೇ! ನಾನು ನಿನಗೆ ವಿಜಯ ಶ್ರೀ ಒಲಿದು ಬರಲು ಒಂದು ಉಪಾಯವನ್ನು ಹೇಳುತ್ತೇನೆ ಕೇಳು. ನೀನು ದಕ್ಷಿಣೋದಧಿಯ ಸೇತುಮೂಲದಲ್ಲಿರುವ ಗಂಧಮಾಧನ ಪರ್ವತಕ್ಕೆ ಹೋಗು. ಶ್ರೀರಾಮಚಂದ್ರನು ನಿರ್ಮಿಸಿದ ಆ ಪುಣ್ಯ ಸೇತುವಿನ ಉದ್ದಕ್ಕೂ ಅನೇಕ ತೀರ್ಥಗಳಿವೆ. ಅವುಗಳಲ್ಲಿ ಮಂಗಲ ತೀರ್ಥವೆಂಬ ಸರೋವರವು ಪರಮಪವಿತ್ರ. ಲಕ್ಷ್ಮೀ ನಾರಾಯಣ ಸ್ವರೂಪರಾದ ಶ್ರೀ ಸೀತಾರಾಮಚಂದ್ರ ದಂಪತಿಗಳು ಸದಾಕಾಲವೂ ನೆಲೆಸಿರುತ್ತಾರೆ ಆ ಪುಣ್ಯ ತೀರ್ಥದಲ್ಲಿ. ನೀನು ನಿನ್ನ ಕುಟುಂಬ ಸಹಿತವಾಗಿ ಅಲ್ಲಿಗೆ ಹೋಗಿ ಸ್ನಾನದಾನ ಹರಿಪೂಜೆಗಳನ್ನು ಹಾಗೂ ಶ್ರೀರಾಮಚಂದ್ರನ ಭಕ್ತಿಯುಕ್ತವಾದ ಸೇವೆಯನ್ನು ಯಥಾವತ್ತಾಗಿ ನೆರವೇರಿಸು. ಆ ತೀರ್ಥಸ್ನಾನದ ಪುಣ್ಯ ಪ್ರಭಾವದಿಂದ ಕಳೆದು ಹೋದ ನಿನ್ನ ರಾಜ್ಯೈಶ್ವರ್ಯಗಳೆಲ್ಲವೂ ಮರಳಿ ದೊರಕುವವು. ನಾನೂ ನಿಮ್ಮೊಡನೆ ಬರುತ್ತೇನೆ ನಡೆಯಿರಿ ಆ ಮಂಗಳತೀರ್ಥಕ್ಕೆ."

ಹೀಗೆ ಹೇಳಿ ಪರಾಶರ ಮಹರ್ಷಿಗಲು ಆ ರಾಜಕುಟುಂಬವನ್ನು ತಮ್ಮೊಡನೆ ಮಂಗಲ ತೀರ್ಥಕ್ಕೆ ಕರೆದುಕೊಂಡು ಹೋದರು. ತಾವೂ ಸ್ನಾನಮಾಡಿ ಮಹಾರಾಜನಿಗೂ ಅವನ ಮಡದಿ ಮಕ್ಕಳಿಗೂ ತಾವೇ ಸಂಕಲ್ಪ ಹೇಳಿ ವಿಧಿಪೂರ್ವಕ ಸ್ನಾನ ಮಾಡಿಸಿದರು. ಹಾಗೂ ರಾಮಮಂತ್ರವನ್ನು ಅವನಿಗೆ ಉಪದೇಶಕೊಟ್ಟು ಜಪಮಾಡಲಿಕ್ಕೆ ಹೇಳಿದರು. ಮಹಾರಾಜನು ಅವನ ಪರಿವಾರದವರೂ ಮೂರು ತಿಂಗಳು ಆ ಮಂಗಲ ತೀರ್ಥದಲ್ಲಿ

ಸ್ನಾನಮಾಡಿದರು. ಅನಂತರ ನಲವತ್ತು ದಿನಗಳವರೆಗೆ ಮನೋಜವನು ಅತ್ಯಂತ ಭಕ್ತಿಯಿಂದ ಶ್ರೀರಾಮ ಮಂತ್ರವನ್ನು ಹಗಲಿರುಳು ಬಿಟ್ಟು ಬಿಡದೇ ನಿರಂತರವಾಗಿ ಧ್ಯಾನಮಾಡಿದನು. ಹೀಗೆ ಆ ದೊರೆಯು ನಿರಂತರವೂ ಮಂತ್ರಜಪವನ್ನು ಸಂತತವಾಗಿ ಮಾಡುತ್ತಲಿರುವಾಗ ಆ ಮಂಗಲ ತೀರ್ಥದಿಂದ ಒಮ್ಮೆಲೇ ಒಂದು ದಿವ್ಯವಾದ ಧನಸ್ಸು, ಬಾಣ, ಅಕ್ಷಯ ಬತ್ತಳಿಕೆ, ಬಂಗಾರ ಹಿಡಿಕೆಯ ಎರಡು ಖಡ್ಗ, ಒಂದು ಢಾಲು, ಗದೆ, ಶಂಖ, ರಥ, ಸಾರಥಿ, ಕವಚ, ಹಾರ, ಕೇಯೂರ, ಕಿರೀಟ, ದಿವ್ಯ ವಸ್ತ್ರ, ದಿವ್ಯಮಾಲೆ ಎಲ್ಲವೂ ಪ್ರಕಟವಾದವು. ಪರಾಶರ ಮುನಿಗಳು ಅದೇ ಮಂಗಲ ತೀರ್ಥದ ಪವಿತ್ರ ನೀರಿನಿಂದ ಆ ಮನೋಜವ ಮಹಾರಾಜನಿಗೆ ಅಭಿಷೇಕ ಮಾಡಿ ತೀರ್ಥದಿಂದ ಪ್ರಕಟವಾದ ಬಿಲ್ಲು, ಬಾಣ, ಕಿರೀಟ, ಕವಚ, ಕುಂಡಗಳನ್ನು ಧರಿಸಲು ಹೇಳಿದರು.

ಮುನಿಪುಂಗವರ ಅಣತಿಯನ್ನು ತಲೆಯಲ್ಲಿ ಹೊತ್ತು ಅವುಗಳನ್ನೆಲ್ಲ ಧರಿಸಿ ಕವಚ ತೊಟ್ಟು ಕಿರೀಟಯಿಟ್ಟು, ಬಿಲ್ಲು ಬಾಣ ಮುಂತಾದ ಆಯುಧಗಳನ್ನೆಲ್ಲ ಹಿಡಿದುಕೊಂಡು ರಥಾರೂಢನಾಗಿ ಯುದ್ಧಕ್ಕೆ ಹೊರಟ ಮನೋಜವ ಮಹಾರಾಜ. ಪರಾಶರ ಮುನಿಗಳು ಬ್ರಹ್ಮಾಸ್ತ್ರವೇ ಮುಂತಾದ ಅನೇಕ ರಹಸ್ಯ ಮಂತ್ರ ಸಹಿತ ಅಸ್ತ್ರಗಳನ್ನು ಅವುಗಳ ಪ್ರಯೋಗ ಉಪಸಂಹಾರ ವಿಧಿಸಹಿತವಾಗಿ ಉಪದೇಶಿಸಿ ಆಶೀರ್ವದಿಸಿ ಯುದ್ಧಕ್ಕೆ ಕೊಟ್ಟು ಕಳುಹಿಸಿದರು. ರಾಜನು ತನ್ನ ರಾಜಧಾನಿಗೆ ಹೋಗಿ ತನಗೆ ತೀರ್ಥದಲ್ಲಿ ದೊರೆತ ಶಂಖವನ್ನು ಊದಿ ಗೋಲಭರಾಜನನ್ನು ಸಂಪೂರ್ಣವಾಗಿ ಸೋಲಿಸಿದ ಮನೋಜವ. ಆ ಯುದ್ಧದಲ್ಲಿ ಗೆಲುವು ಮನೋಜವನಿಗೆ ವಿಜಯ ಮಾಲೆಯನ್ನು ಹಾಕಿತು. ತನ್ನ ಮಡದಿ ಮಕ್ಕಳೊಡನೆ ತನ್ನ ಮೊದಲಿನ ರಾಜ್ಯ ಐಶ್ವರ್ಯ ಅಧಿಕಾರಗಳನ್ನು ಹೊಂದಿ ನಿರಾತಂಕವಾಗಿ ಸಾಮ್ರಾಜ್ಯವನ್ನು ಮನೋಜವ ಮಹಾರಾಜ ಮೊದಲಿನಂತೆ ಆಳತೊಡಗಿದ. ಹೀಗೆ ಅನೇಕ ವರ್ಷಗಳವರೆಗೆ ನಿಷ್ಕಂಟಕವಾದ ಸಾಮ್ರಾಜ್ಯವನ್ನು ಆಳಿದ. ಭೂಲೋಕ ಲಭ್ಯವಾದ ಎಲ್ಲ ಸಿರಿ ಸಂಪದ ಸೌಭಾಗ್ಯಗಳನ್ನು ಅನುಭವಿಸಿದ. ಕೊನೆಗೆ ವಯಸ್ಸು ಆದ ಬಳಿಕ ತನ್ನ ಮಗನಿಗೆ ರಾಜ್ಯಾಧಿಕಾರವನ್ನು ಒಪ್ಪಿಸಿ ಮತ್ತೆ ಗಂಧಮಾಧನ ಪರ್ವತಕ್ಕೆ ಮಡದಿಯೊಂದಿಗೆ ಆಗಮಿಸಿದ. ಅಲ್ಲಿ ಮಂಗಲ ತೀರ್ಥದಲ್ಲಿ ಮಿಂದು ಹೃದಯದಲ್ಲಿ ಸದಾಶಿವನ ಧ್ಯಾನಮಾಡುತ್ತಾ ತಪಸ್ಸನ್ನು ಆಚರಿಸಿದ. ಅಂತ್ಯ ಕಾಲದಲ್ಲಿ ಪರಮೇಶ್ವರನ ಧ್ಯಾನಗೈಯುತ್ತ ಬಹುಕಾಲ ತೀರ್ಥ ಸ್ನಾನ ಹಾಗೂ ತೀರ್ಥವಾಸದ ಪುಣ್ಯ ಪ್ರಭಾವದಿಂದ ಶಿವಲೋಕವನ್ನು ಹೊಂದಿದ. ಅವನ ಧರ್ಮಪತ್ನಿ ಸುಮಿತ್ರೆಯು ತನ್ನ ಪತಿಯ ಮರಣದ ನಂತರ ಸಹಗಮನ ಮಾಡಿ ಪತಿಲೋಕವನ್ನು ಐದಿದಳು. ಆದುದರಿಂದ ಈ ಮಂಗಲತೀರ್ಥವು ಪರಮಪವಿತ್ರ, ಕಲ್ಯಾಣಕರ ಮತ್ತು ಪಾಪಹರ. ಇಲ್ಲಿ ಸ್ನಾನಮಾಡುವದರಿಂದ ಇಹದಲ್ಲಿ ಭುಕ್ತಿ, ಪರದಲ್ಲಿ ಮುಕ್ತಿ ಎರಡೂ ನಿಶ್ಚಿತ.

## ಏಕಾಂತರಾಮನಾಥ; ಬ್ರಹ್ಮಕುಂಡ; ಹನಮತ್ಕುಂಡ ಮತ್ತು ಅಗಸ್ತ್ಯ ತೀರ್ಥಗಳ ಮಹಿಮೆ

**ಸೂತ:-** ಯಾತ್ರಿಕರು ಮಂಗಲತೀರ್ಥದಲ್ಲಿ ಸ್ನಾನಮಾಡಿ ಏಕಾಂತರಾಮನಾಥ ಎಂಬ ಕ್ಷೇತ್ರಕ್ಕೆ ಪ್ರಯಾಣಿಸಬೇಕು. ಅಲ್ಲಿ ಸೀತಾ, ಲಕ್ಷ್ಮಣ ಹಾಗೂ ಹನುಮಂತರೊಡನೆ ಶ್ರೀರಾಮಚಂದ್ರನು ನಿರಂತರ ನಿವಾಸ ಮಾಡಿರುತ್ತಾನೆ. ಅಲ್ಲಿ ಇರುವ ಅಮೃತವಾಪಿಕಾ

ಎಂಬ ಹೊಕ್ಕರಣೆಯು ಪಾಪಪರಿಹಾರಕ, ಪುಣ್ಯಪ್ರದಾಯಕ. ಅಲ್ಲಿ ಶ್ರದ್ಧೆಯಿಂದ ಸ್ನಾನಮಾಡಿದವರಿಗೆ ಶಂಕರನ ಅನುಗ್ರಹ. ಅಮೃತತ್ವ ಪ್ರಾಪ್ತಿ. ಅಲ್ಲಿ ಮೂರು ವರ್ಷ ಸ್ನಾನ ಮಾಡಿದವರಿಗೆ ಮೋಕ್ಷ ಸಿದ್ಧಿ.

**ಶೌನಕ:-** ಈ ಕ್ಷೇತ್ರಕ್ಕೆ 'ಏಕಾಂತರಾಮನಾಥ' ಎಂಬ ಹೆಸರು ಏಕೆ? ಮತ್ತು ಹೇಗೆ ಬಂದಿತು?

## ಪ್ರಶಾಂತ ಮುದ್ರೆಯ ಸಮುದ್ರ

**ಸೂತ:-** ಪೂರ್ವಕಾಲದಲ್ಲಿ ಸ್ಥಾಪತ್ಯ ವಿಜ್ಞಾನಿ ನಲನು ರಾಮನ ಆದೇಶದಂತೆ ಸಮುದ್ರ ಸೇತುವನ್ನು ನಿರ್ಮಿಸಿದ. ಬಳಿಕ ಶ್ರೀರಾಮ ಪ್ರಭು ಸುಗ್ರೀವ, ವಿಭೀಷಣ, ಲಕ್ಷ್ಮಣ ಹಾಗೂ ಹನುಮಂತರೊಡನೆ ಆ ಸೇತುವಿನ ಮೇಲಿಂದ ಸಮುದ್ರವನ್ನು ನಡೆಯುತ್ತಾ ದಾಟುತ್ತಲಿದ್ದನು. ದಾರಿಯಲ್ಲಿ ರಾಕ್ಷಸರೊಡನೆ ಮುಂದೆ ನಡೆಯಲಿರುವ ಯುದ್ಧದ ಬಗೆಗೂ ಹಾಗೂ ಸೀತೆಯನ್ನು ಮರಳಿ ಕರೆತರುವ ಬಗೆಗೂ ವಿಚಾರ ವಿನಿಮಯವನ್ನು ಮಾಡುತ್ತಲಿದ್ದನು. ಆಗ ಸಮುದ್ರವು ತನ್ನ ಆಲ್ಲೋಲಕಲ್ಲೋಲವಾದ ತರಂಗಮಾಲೆಗಳಿಂದ ಘನಘೋರ ಗರ್ಜನೆಯನ್ನು ಮಾಡುತ್ತ ಭಯಂಕರ ಸದ್ದನ್ನು ಮಾಡುತ್ತಿತ್ತು. ಆ ಹೆದ್ದೆರಗಳ ಉದ್ದಾಮ ಸಂಘರ್ಷದ ಧ್ವನಿಯಿಂದ ಮಂತ್ರಾಲೋಚನೆಯಲ್ಲಿ ತೊಡಗಿದ ರಾಮಲಕ್ಷ್ಮಣ ಹನುಮಂತ ಸುಗ್ರೀವರ ಮಾತುಗಳು ಒಬ್ಬರಿಗೊಬ್ಬರಿಗೆ ಕೇಳದಂತಾದವು. ಆಗ ಶ್ರೀರಾಮಚಂದ್ರನು ಸಮುದ್ರದ ಆ ತರಂಗ ಸಂಘರ್ಷದ ಭೋರ್ಗರೆತದ ಸದ್ದನ್ನು ಕೆಲವು ಕ್ಷಣ ತನ್ನ ಆದೇಶದಿಂದ ತಡೆದು ನಿಲ್ಲಿಸಿ ವಾನರ ವೀರರೊಂದಿಗೆ ಈ ವಿಶಿಷ್ಟ ಸ್ಥಳದಲ್ಲಿ ಏಕಾಂತ ಸಮಾಲೋಚನೆಯನ್ನು ನಡೆಸಿದ. ಅನೇಕ ರಹಸ್ಯವಾದ ಯುದ್ಧದ ನಿರ್ಣಯಗಳನ್ನು ಇಲ್ಲಿಯ ಈ ಏಕಾಂತ ಸ್ಥಳದಲ್ಲಿಯೇ ತೆಗೆದುಕೊಂಡ. ಆದ್ದರಿಂದ ಇದಕ್ಕೆ 'ಏಕಾಂತರಾಮನಾಥ' ಎಂಬ ಹೆಸರು ಬಂದಿತು. ಶ್ರೀರಾಮನ ಅಂದಿನ ಈ ಆದೇಶದಂತೆ ಸಮುದ್ರನಾಥನು ಉಳಿದೆಡೆ ತನ್ನ ಘನಘೋರ ಊರ್ಮಿಮಾಲೆಗಳ ಗುಡುಗು ಸಿಡಿಲುಗಳಂಥ ಅಬ್ಬರದಿಂದ ಘೂರ್ಮಿಸುತ್ತಿದ್ದರೂ ಇಲ್ಲಿ ಮಾತ್ರ ನಿಶ್ಚಲನೂ ಪ್ರಶಾಂತನೂ ಆಗಿರುವಂತೆ ಕಂಡುಬರುತ್ತದೆ. ಇಲ್ಲಿ ಇರುವ ಅಮೃತವಾಪಿ ತೀರ್ಥದಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿ ಶ್ರೀರಾಮನ ಸೇವೆ ಮಾಡುವವರು ಮುಕ್ತಿ ಹೊಂದುವರು.

ಈ ಅಮೃತವಾಪಿ ತೀರ್ಥವು ಒಂದು ಹೊಕ್ಕರಿಣಿಯಂತೆ ಇರುವದರಿಂದ ಇದಕ್ಕೆ ಪುಣ್ಯಪ್ರದ ಪುಷ್ಕರಿಣಿ ಎಂಬ ಹೆಸರು ಬಂದಿದೆ. ಇಲ್ಲಿ ಸ್ನಾನಮಾಡಿ ಏಕಾಂತ ರಾಮನಾಥನ ಸೇವೆಗೈದು ಯಾತ್ರಿಕರು ಮುಂದೆ ಬ್ರಹ್ಮಕುಂಡಕ್ಕೆ ತೆರಳಬೇಕು. ಈ ಬ್ರಹ್ಮಕುಂಡ ತೀರ್ಥವು ಸಮುದ್ರಸೇತುವಿನ ಮಧ್ಯಭಾಗದಲ್ಲಿ ಗಂಧಮಾದನ ಪರ್ವತದ ಶೈಲಶ್ರೇಣಿಯಲ್ಲಿ ಇರುತ್ತದೆ. ಈ ಬ್ರಹ್ಮಕುಂಡ ತೀರ್ಥದ ದರ್ಶನದಿಂದಲೇ ಸುಟ್ಟು ಹೋಗುತ್ತವೆ ಬೆಟ್ಟದಷ್ಟು ಪಾಪರಾಶಿಗಳು. ಈ ಬ್ರಹ್ಮಕುಂಡದಲ್ಲಿ ಹುಟ್ಟಿದ ಭಸ್ಮದಿಂದ ತ್ರಿಪುಂಡ್ರಧಾರಣ ಮಾಡಿದವರ ಕರಗತವೇ ಆಗುತ್ತದೆ ಮೋಕ್ಷ. ಇಲ್ಲಿ ಸ್ನಾನಮಾಡಿದವನಿಗೆ ಶಿವಸಾರೂಪ್ಯ. ಇಲ್ಲಿ ನಿಂತು ಶ್ರೀರಾಮಚಂದ್ರನ ಉಪಾಸನೆ ಮಾಡಿದವರಿಗೆ ಮೋಕ್ಷದ ಬಾಗಿಲು ತಾನಾಗಿಯೇ ತೆರೆದುಕೊಳ್ಳುತ್ತದೆ. ಇಲ್ಲಿ ಸ್ನಾನಮಾಡಿ ಯಾತ್ರಿಕರು ಮುಂದೆ ಹನುಮಂತ್ಕುಂಡಕ್ಕೆ ಪ್ರಯಾಣ ಬೆಳೆಸಬೇಕು. ಪೂರ್ವಕಾಲದಲ್ಲಿ ಶ್ರೀರಾಮಚಂದ್ರನು

ರಾವಣನೇ ಮೊದಲಾದ ಎಲ್ಲ ರಾಕ್ಷಸರನ್ನು ಕೊಂದು ಲಂಕಾಪಟ್ಟಣದಲ್ಲಿ ವಿಭೀಷಣನಿಗೆ ಪಟ್ಟಾಭಿಷೇಕ ಮಾಡಿಸಿ ಸೀತಾದೇವಿಯನ್ನು ಕರೆದುಕೊಂಡು ಮರಳಿ ಹೊರಟನು. ಆಗ ಮಧ್ಯದಲ್ಲಿ ಸೀತೆಗೆ ನಲನಿರ್ಮಿತ ಸೇತುವಿನ ರಚನೆಯನ್ನು ತೋರಿಸಲಿಕ್ಕಾಗಿ ಈ ಗಂಧ ಮಾದನ ಪರ್ವತದಲ್ಲಿ ತಂಗಿದನು. ಆಗ ಅವನ ಭೃತ್ಯನಾದ ಹನುಮಂತನು ಲೋಕೋದ್ಧಾರಕ್ಕಾಗಿ ಇಲ್ಲಿ ಒಂದು ತೀರ್ಥವನ್ನು ನಿರ್ಮಿಸಿದನು. ಅದಕ್ಕೆ 'ಹನುಮತ್ಕುಂಡ' ಎಂಬ ಹೆಸರು ಬಂದಿದೆ. ಇಲ್ಲಿ ಸ್ನಾನ ಮಾಡುವದರಿಂದ ಯಾತ್ರಿಕರಿಗೆ ಸದ್ಗತಿಯು ಪ್ರಾಪ್ತವಾಗುವದು.

ಪೂರ್ವಕಾಲದಲ್ಲಿ ,ಧರ್ಮಸಖ ಎಂಬ ದೊರೆ ರಾಜ್ಯವಾಳುತ್ತಿದ್ದನು. ನೀತಿನಿಷ್ಠ ಆ ರಾಜ. ವೈರಿಗಳನ್ನೆಲ್ಲ ಪರಾಜಯಗೊಳಿಸಿದ. ಬಹುವರ್ಷ ಧರ್ಮಶಾಸನ ನಡೆಸಿದ. ಆದರೆ ಅವನಿಗೆ ಸಂತಾನವು ಆಗಲಿಲ್ಲ. ಸಂತತಿಯ ಹೆಬ್ಬಯಕೆಯಿಂದ ಅವನು ಒಂದಾದ ಮೇಲೆ ಒಂದರಂತೆ ನೂರು ಜನ ಮಡದಿಯರನ್ನು ಮಾಡಿಕೊಂಡ. ಆ ನೂರು ನಾರಿಯರಲ್ಲಿ ಒಬ್ಬರಿಗೂ ಮಕ್ಕಳಾಗಲಿಲ್ಲ. ಆಗ ಸಂತತಿಯ ಬಗೆಗೆ ನಿರಾಶೆಗೊಂಡು ನೊಂದು ಬೆಂದು ಹೋದ ಆ ಭೂಪಾಲನು ಬ್ರಾಹ್ಮಣರ ಬಳಿಗೆ ಬಂದು ಕೇಳಿದ- ''ಮುನೀಶ್ವರರೇ! ಪುತ್ರರನ್ನು ಪಡೆಯುವ ಹಂಬಲದಿಂದ ನಾನು ನೂರು ನಾರೀಮಣಿಯರನ್ನು ಮದುವೆಯಾದೆ. ಆದರೂ ನನಗೆ ಯಾವ ಮಡದಿಯಿಂದಲೂ ಮಕ್ಕಳಾಗಲಿಲ್ಲ. ಈಗಾಗಲೇ ನನಗೆ ಮುಪ್ಪು ಬರತೊಡಗಿದೆ. ಆದ್ದರಿಂದ ತಾವು ನನ್ನ ಮೇಲೆ ಅನುಗ್ರಹ ಮಾಡಿರಿ. ನನ್ನ ಮಡದಿಯರಾದ ನೂರು ಮಹಿಳೆಯರಿಗೂ ಕನಿಷ್ಠ ಒಬ್ಬೊಬ್ಬ ಗಂಡು ಮಗುವಾದರೂ ಆಗುವಂತೆ ಯಾವುದಾದರೂ ಒಂದು ಉಪಾಯವನ್ನು ದಯವಿಟ್ಟು ಸೂಚಿಸಿರಿ. ಇದಕ್ಕಾಗಿ ತಾವು ಹೇಳಿದ ಯಾವುದೇ ಕಠಿಣ ಕರ್ಮವನ್ನಾಗಲೀ ದುಷ್ಕರ ಧರ್ಮವನ್ನಾಲೀ ಅನುಷ್ಠಾನ ಗೈಯಲು ನಾನು ಸಿದ್ಧ.'' ರಾಜನ ಈ ಮಾತುಗಳನ್ನು ಕೇಳಿ ಅವನ ಆಸ್ಥಾನ ಪಂಡಿತರು, ಪುರೋಹಿತರು, ರಾಜಗುರುಗಳು ಹಾಗೂ ಇತರ ಮುನಿ ಮಹರ್ಷಿಗಳು ಕೂಡಿ ವಿಚಾರಮಾಡಿ ಹೇಳಿದರು - ''ಮಹಾರಾಜ, ದಕ್ಷಿಣ ಸಮುದ್ರದ ಮಧ್ಯದಲ್ಲಿ 'ಗಂಧಮಾದನ' ಎಂಬ ಬೆಟ್ಟವು ಸೇತುರೂಪವಾಗಿ ನಿಂತಿದೆ. ಅಲ್ಲಿ ಇದೆ 'ಹನುಮತ್ಕುಂಡ' ಎಂಬ ಲೋಕವಿಖ್ಯಾತವಾದ ಒಂದು ತೀರ್ಥ. ಅಲ್ಲಿ ಸ್ನಾನ ಮಾಡುವದರಿಂದ ಯಾತ್ರಿಕರ ದಾರಿದ್ರ್ಯ ದೂರಾಗುವದು. ದುಃಖ ನಾಶವಾಗುವದು. ಪಾಪಪರಿಹಾರವಾಗುವದು. ಅಲ್ಲಿ ಮಿಂದು ಬಂದ ಬಂಜೆಯರಿಗೆಲ್ಲ ನಂದನರನ್ನು ಹೊಂದುವ ಆನಂದವು ಉಂಟಾಗುವದು. ಆದ್ದರಿಂದ ನೀನು ಕೂಡ ನಿನ್ನ ನೂರೂ ಧರ್ಮಪತ್ನಿಯರೊಂದಿಗೆ ಅಲ್ಲಿಗೆ ಹೋಗಿ ಸ್ನಾನಮಾಡು. ಆ ಹನುಮತ್ಕುಂಡದ ತೀರ್ಥದ ತಟಾಕದಲ್ಲಿ ಪುತ್ರಕಾಮೇಷ್ಟಿ ಎಂಬ ಯಜ್ಞವನ್ನು ಮಾಡು. ಆದರಿಂದ ನಿನ್ನ ನೂರೂ ಜನ ನಾರಿಯರಿಗೂ ಒಬ್ಬೊಬ್ಬ ಸತ್ಪುತ್ರನು ಜನಿಸುವನು.''

ಸದಾಚಾರ ಸಂಪನ್ನನಾದ ಹಾಗೂ ವಾಕ್ ಸಿದ್ಧಿಯುಳ್ಳ ಆ ಬ್ರಾಹ್ಮಣರ ಮಾತುಗಳನ್ನು ಕೇಳಿ ಪರಮಾನಂದವಾಯಿತು ಆ ಧರ್ಮಸಖ ಮಹಾರಾಜನಿಗೆ. ಆ ಮುನಿಮಂಡಲದ ಆದೇಶದಂತೆ ಮಹಾರಾಜನು ತನ್ನ ಎಲ್ಲ ಮಡದಿಯರಾದ ನೂರು ಮಹಿಳಾಮಣಿ

ಗಳೊಂದಿಗೆ 'ಹನುಮತ್ಕುಂಡ'ಕ್ಕೆ ಹೋಗಿ ಸ್ತ್ರೀ, ಸೇನಾ, ಮಂತ್ರಿ, ಪರಿವಾರದೊಂದಿಗೆ ಸ್ನಾನ ಮಾಡಿದನು. ಒಂದು ತಿಂಗಳ ಕಾಲ ಅಲ್ಲಿಯೇ ನೆಲೆಸಿ ಪ್ರತಿದಿನ ಸ್ನಾನ, ದಾನ, ಶ್ರೀರಾಮಚಂದ್ರನ ಪೂಜೆ, ಅನ್ನಸಂತರ್ಪಣ ಮುಂತಾದವುಗಳನ್ನು ವೈಭವದಿಂದ ನಡೆಸಿದನು. ಅನಂತರ ವಸಂತ ಋತು ಬಂದಿತು. ಚೈತ್ರಮಾಸದಲ್ಲಿ ಪುರೋಹಿತರು ಹಾಗೂ ಋತ್ವಿಜರಿಂದ ಕೂಡಿ ಮಹಾರಾಜನು ತನ್ನ ನೂರು ಜನ ಮಡದಿಯರೊಂದಿಗೆ ದೀಕ್ಷಾಬದ್ಧನಾಗಿ ಪುತ್ರಕಾಮೇಷ್ಟಿ ಯಜ್ಞವನ್ನು ವಿಧ್ಯುಕ್ತರೀತಿಯಿಂದ ನೇರವೇರಿಸಿದನು. ಯಜ್ಞವು ಮುಗಿದ ಬಳಿಕ ಪುರೋಹಿತರ ಆದೇಶದಂತೆ ಯಜ್ಞಮಾಡಿ ಉಳಿದ ಹವಿಷ್ಯಾನ್ನವನ್ನು ತನ್ನ ಶತಸಂಖ್ಯಾಕ ಸತೀಮಣಿಯರೊಡನೆ ಭುಂಜಿಸಿ ಭೋಜನಮಾಡಿದ. ಯಜ್ಞವು ಪೂರ್ತಿ ಸಮಾಪ್ತಿಗೊಂಡ ಬಳಿಕ ಅವಭೃಥ ಸ್ನಾನವನ್ನು ಮಾಡಿ ಯಜ್ಞ ಮಂಟಪಕ್ಕೆ ಆಗಮಿಸಿದ. ವಿದ್ವಾಂಸರಿಗೂ, ಪುರೋಹಿತರಿಗೂ, ಋತ್ವಿಜರಿಗೂ, ಮುನಿಮಹರ್ಷಿಗಳಿಗೂ ವಿಪುಲವಾಗಿ ದಾನ ದಕ್ಷಿಣೆಗಳನ್ನು ನೀಡಿದ. ಅವರ ಆಶೀರ್ವಾದವನ್ನು ಪಡೆದ. ಮುಂದೆ ಯಜ್ಞ ಮುಗಿಸಿಕೊಂಡು ತನ್ನ ರಾಜಧಾನಿಗೆ ಮರಳಿಬಂದ. ಆ ಬಳಿಕ ಅವನ ಎಲ್ಲ ರಾಣಿಯರೂ ಯಜ್ಞಪುರುಷನ ಅನುಗ್ರಹದಿಂದ ಗರ್ಭಧಾರಣ ಮಾಡಿದರು. ಹತ್ತು ತಿಂಗಳು ತುಂಬಿದ ಬಳಿಕ ಅವನ ನೂರು ಜನ ರಾಣಿಯರೂ ಮಂತ್ರಿನಂತಹ ಒಂದೊಂದು ಗಂಡುಮಕ್ಕಳನ್ನು ಹೆತ್ತರು.

ಆ ಮಕ್ಕಳು ಬೆಳೆದು ದೊಡ್ಡವರಾದ ಬಳಿಕ ಧರ್ಮಸಖ ರಾಜನು ತನ್ನ ಸಾಮ್ರಾಜ್ಯವನ್ನೆಲ್ಲ ಸರಿಯಾಗಿ ಹಂಚಿಕೊಟ್ಟು ತನ್ನ ವಿಶಾಲ ಸಾಮ್ರಾಜ್ಯ ಶಾಸನದ ಭಾರವನ್ನು ಅವರಿಗೆ ಒಪ್ಪಿಸಿದ. ಮತ್ತು ತಾನು ವಿರಕ್ತನಾಗಿ ಸತೀಶಿರೋರತ್ನದಂತಿರುವ ನೂರು ಜನ ರಾಣಿಯರೊಂದಿಗೆ ತನ್ನ ಸಿರಿಮನೆ, ಅರಮನೆ, ರಾಜ್ಯ, ಐಶ್ವರ್ಯ, ಮಕ್ಕಳು, ಮಂತ್ರಿ, ಸೇನಾಪತಿ, ಪರಿವಾರ, ಸುಖ ಸೌಭಾಗ್ಯಗಳನ್ನೆಲ್ಲ ತೊರೆದು ಮತ್ತೆ ಈ ಗಂಧಮಾದನ ಪರ್ವತಕ್ಕೆ ಬಂದ. ಇಲ್ಲಿರುವ ಹನುಮತ್ಕುಂಡದ ತೀರದಲ್ಲಿ ನಿಂತು ಕೊಂಡ. ತಪೋನು ಷ್ಠಾನವನ್ನು ಕೈಗೊಂಡ. ತನ್ನ ಉಪಾಸ್ಯದೇವನಾದ ಪರಮೇಶ್ವರನನ್ನು ನಿರಂತರ ಧ್ಯಾನಗೈದ. ಹೀಗೆ ಸ್ನಾನ, ದಾನ, ಭಗವದ್ ಧ್ಯಾನಗಳಲ್ಲಿ ತನ್ಮಯನಾಗಿ ತಪವನ್ನು ತಪಿಸುತ್ತಲಿರುವಾಗಲೇ ಅವನಿಗೆ ವಾರ್ಧಕ್ಯದಿಂದ ಮರಣವು ಬಂದಿತು. ಪರಮ ಪತಿವ್ರತೆಯರಾದ ಆ ನೂರು ಸತಿಯರೂ ಕೊನೆಗಾಲದಲ್ಲಿ ತಮ್ಮ ಪತಿಯನ್ನೇ ಅನುಸರಿಸಿ ಧನ್ಯರಾದರು.

ರಾಜನ ಹಿರಿಯ ಮಗ ಸುಚಂದ್ರನು ತನ್ನ ಎಲ್ಲ ಮಾತಾಪಿತೃಗಳಿಗೆ ಉತ್ತರ ಸಂಸ್ಕಾರ ಮಾಡಿ ಶ್ರದ್ಧೆಯಿಂದ ಶ್ರಾದ್ಧ ಕರ್ಮವನ್ನು ತನ್ನ ಎಲ್ಲ ಸಹೋದರರೊಂದಿಗೆ ವಿಧಿಪೂರ್ವಕವಾಗಿ ಮಾಡಿದ. ಸುಚಂದ್ರನೇ ಮೊದಲಾದ ಆ ಮಹಾರಾಜನ ನೂರು ಜನ ಮಕ್ಕಳು ಮಹಾತೇಜಸ್ವಿಗಳು. ತಮ್ಮ ತಂದೆಯಂತೆಯೇ ಮುನ್ನಡೆದು ಧರ್ಮಶಾಸನವನ್ನು ನಡೆಸುತ್ತಲಿದ್ದರು, ಆ ಅರಸುಕುಮಾರರು. ಆದ್ದರಿಂದ ಮಾನವರು ತಮ್ಮ ಎಲ್ಲ ಮನಃಕಾಮನೆಗಳ ಪೂರ್ತಿಗಾಗಿ ಈ ಸಮುದ್ರ ಸೇತುವಿನ ಮಧ್ಯದಲ್ಲಿ ಇರುವ ಈ ಹನುಮತ್ಕುಂಡದಲ್ಲಿ ವಿಧಿಪೂರ್ವಕವಾಗಿ ಸ್ನಾನ ಮಾಡಿ ಹನುಮಂತ ಹಾಗೂ ಅವನ ಇಷ್ಟದೈವವಾದ ಶ್ರೀರಾಮಚಂದ್ರನ ಧ್ಯಾನೋಪಾಸನೆ ಮಾಡಬೇಕು.

ಈ ಹನುಮತ್ಕುಂಡದಲ್ಲಿ ಸ್ನಾನಮಾಡಿ ಯಾತ್ರಿಕರು ಇದರ ಮುಂದೆ ಇರುವ ಅಗಸ್ತ್ಯ ತೀರ್ಥಕ್ಕೆ ಹೋಗಬೇಕು. ಸ್ವಯಂ ಅಗಸ್ತ್ಯರೇ ತಮ್ಮ ಹೆಸರಿನಿಂದ ಈ ತೀರ್ಥವನ್ನು ನಿರ್ಮಿಸಿದ್ದಾರೆ. ಹಿಂದೆ ಮಹರ್ಷಿ ಅಗಸ್ತ್ಯರು ವಿಂಧ್ಯಾಚಲವನ್ನು ಉಲ್ಲಂಘಿಸಿ ದಕ್ಷಿಣಾಪಥಕ್ಕೆ ಆಗಮಿಸಿದ ಬಳಿಕ ಎಲ್ಲ ಕಡೆಗೂ ಸಂಚಾರ ಮಾಡಿದರು. ಹಾಗೇ ತೀರ್ಥಾಟನೆಗೈಯುತ್ತ ಅವರು ಈ ಗಂಧಮಾದನ ಪರ್ವತಕ್ಕೆ ಆಗಮಿಸಿದರು. ಇಲ್ಲಿ ಬಂದ ಬಳಿಕ ಸೇತುವಿನ ಮಧ್ಯದಲ್ಲಿ ಇರುವ ಈ ಗಂಧಮಾದನ ಶೈಲದ ಹಾಗೂ ಸೇತುವಿನ ಮಹಿಮೆಯನ್ನು ತಿಳಿದುಕೊಂಡನಂತರ ಅವರಿಗೆ ಇದರ ಬಗೆಗೆ ಬಹಳ ಗೌರವ ಬುದ್ಧಿ ಉಂಟಾಯಿತು. ಆಗ ಅವರು ಇಲ್ಲಿ ತಮ್ಮ ಹೆಸರಿನಲ್ಲಿ ಒಂದು ತೀರ್ಥವನ್ನು ನಿರ್ಮಿಸಿದರು. ಮತ್ತು ತಮ್ಮ ಧರ್ಮಪತ್ನಿ ಲೋಪಾಮುದ್ರಾದೇವಿಯೊಂದಿಗೆ ಬಹುಕಾಲ ಈ ಪುಣ್ಯತೀರ್ಥ ತಟಾಕದಲ್ಲಿಯೇ ವಾಸಮಾಡಿ ತಪೋನುಷ್ಠಾನಗೈದರು. ಈಗಲೂ ಕೂಡ ಆ ಪ್ರಾಚೀನ ಋಷಿದಂಪತಿಗಳು ಒಂದು ರೂಪದಿಂದ ಇಲ್ಲಿಯೇ ಇರುತ್ತಾರೆ. ಇಲ್ಲಿ ಸ್ನಾನ, ದಾನ ಹಾಗೂ ಜಲ ಪಾನ ಮಾಡಿದವರಿಗೆ ಪುನರ್ಜನ್ಮ ಇಲ್ಲ.

## ರಾಮತೀರ್ಥ, ಲಕ್ಷ್ಮಣತೀರ್ಥ ಹಾಗೂ ಜಟಾತೀರ್ಥಗಳ ಮಹಿಮೆ

**ಶ್ರೀಸೂತ:-** ಅಗಸ್ತ್ಯತೀರ್ಥದಲ್ಲಿ ಸ್ನಾನಮಾಡಿದ ನಂತರ ಯಾತ್ರಿಕರು ಇದರ ಮುಂದಿನ ರಾಮಕುಂಡಕ್ಕೆ ಪ್ರಯಾಣಿಸಬೇಕು. ಹಿಂದೆ ಮಹರ್ಷಿ-ಶ್ರೇಷ್ಠರಾದ ಅಗಸ್ತ್ಯ ಮುನಿಗಳ ಸುತೀಕ್ಷ್ಣ ಎಂಬ ಶಿಷ್ಯನು ಈ ರಾಮಕುಂಡದ ತೀರದಲ್ಲಿ ನಿಂತು ಶ್ರೀರಾಮನ ಚಿಂತನೆಗೈಯುತ್ತ ಘೋರ ತಪಸ್ಸನ್ನು ಆಚರಿಸಿದ. 'ಓಂ ರಾಮಾಯ ನಮಃ' ಎಂಬ ಶ್ರೀರಾಮ ಷಡಕ್ಷರ ಮಂತ್ರವನ್ನು ಪಠಿಸುತ್ತ ರಾಮನ ಚರಣಾರವಿಂದವನ್ನು ನಿರಂತರವೂ ಅಂತರಂಗದಲ್ಲಿ ಚಿಂತನೆಮಾಡುತ್ತ ಅಖಂಡ ನಾಮಜಪರೂಪವಾದ ತಪಸ್ಸನ್ನು ಆಚರಿಸಿದ. ಪ್ರತಿದಿನವೂ ಅರುಣೋದಯ ಕಾಲದಲ್ಲಿ ಈ ರಾಮಕುಂಡದ ಶೀತಲೋದಕದಲ್ಲಿ ಸ್ನಾನಮಾಡಿ ಜಿತೇಂದ್ರಿಯನಾಗಿ ಮಿತಾಹಾರದಿಂದ ಐದು ಸಾವಿರ ರಾಮಮಂತ್ರ ಜಪಿಸಿ ಅನಂತರ ರಾಮದೇವರ ಪೂಜೆ, ಧ್ಯಾನ, ಉಪಾಸನೆ ಹಾಗೂ ರಾಮಾರಾಧನೆಗಳನ್ನು ಬೇಸರವಿಲ್ಲದೆ ಮಾಡುತ್ತಲಿದ್ದ. ಈ ಶ್ರೀರಾಮ ಷಡಕ್ಷರ ಮಂತ್ರ ಹಾಗೂ ಈ ರಾಮಕುಂಡ ಸ್ನಾನದಿಂದ ಆ ಸುತೀಕ್ಷ್ಣಣ ಮುನಿಗೆ ಶ್ರೀರಾಮನಲ್ಲಿ ನಿಶ್ಚಲ ಭಕ್ತಿ ಉಂಟಾಯಿತು.

## ರಾಮಧ್ಯಾನ ಹಾಗೂ ರಾಮಕುಂಡ ಸ್ನಾನದಿಂದ ಸಿದ್ಧಿಗಳ ಸಮೃದ್ಧಿ

ಆ ಭಕ್ತಿಯಿಂದ ಆತ್ಮ ಸಾಕ್ಷಾತ್ಕಾರಕ್ಕೆ ಉಪಯುಕ್ತವಾದ ವೇದ ವೇದಾಂತಾದಿ ದಿವ್ಯಜ್ಞಾನವು ತಾನಾಗಿ ಉದಿಸಿಬಂದಿತು. ಹಾಗೂ ಪರಕಾಯ ಪ್ರವೇಶ, ಆಕಾಶ ಸಂಚಾರ, ಅರವತ್ನಾಲ್ಕು ಕಲಾಕಲಾಪಗಳಲ್ಲಿ ಕೌಶಲ್ಯ, ಓದದೇ ಇರುವ ಸರ್ವವಿದ್ಯೆಗಳಲ್ಲಿಯೂ ಪರಿಣತಿ, ಮನಬಂದ ಲೋಕಗಳಲ್ಲಿ ಸ್ವೈರ ಸಂಚಾರ. ಇಂದ್ರಿಯಾತೀತ ವಿಷಯಗಳ ಪರಿಜ್ಞಾನ, ದೇವತೆಗಳೊಂದಿಗೆ ವಾರ್ತಾಲಾಪ, ಇರುವೆ, ಹುಳ, ಹಾಗೂ ಎಲ್ಲ ಕ್ರಿಮಿ, ಕೀಟ, ಪಶುಪಕ್ಷಿಗಳ ಭಾಷೆಗಳ ಅರಿವು ಹಾಗೂ ಇನ್ನೂ ಅನೇಕ ದುರ್ಲಭವಾದ ಸಿದ್ಧಿಗಳು ಸರ್ವವಿಧವಾದ ಸಾತ್ವಿಕ ಶಕ್ತಿಗಳು ಅವನಿಗೆ ಕರಗತವಾದವು. ಈ ಎಲ್ಲ ಸಿದ್ಧಿ, ಶುದ್ಧಿ, ಜ್ಞಾನ, ಭಕ್ತಿ ಮುಂತಾದವುಗಳ ಸಮೃದ್ಧಿಗಳಿಗೆ ಆ ಸುತೀಕ್ಷಣ ಮುನಿಯು ಮಾಡಿದ

ಈ ರಾಮಕುಂಡದ ಸ್ನಾನವೇ ಮುಖ್ಯ ಕಾರಣ. ಈ ರಾಮತೀರ್ಥದ ದಂಡೆಯಲ್ಲಿ ಎಲ್ಲ ಜನರ ಮೇಲೆಯೂ ಅನುಗ್ರಹ ಮಾಡಲು ಒಂದು ಶಿವಲಿಂಗವು ಪ್ರಕಟವಾಗಿದೆ. ಈ ರಾಮ ಕುಂಡದಲ್ಲಿ ಸ್ನಾನಮಾಡಿ ಅಲ್ಲಿಯ ಶಿವಲಿಂಗದ ದರ್ಶನ ತೆಗೆದುಕೊಡು ಅಲ್ಲಿಯೇ ನಿಂತು 'ಓಂ ಶ್ರೀರಾಮಾಯ ನಮಃ' ಎಂಬ ಷಡಕ್ಷರ ಮಂತ್ರವನ್ನು ಜಪಿಸಿದರೆ ಮೋಕ್ಷವೇ ಲಭಿಸುವದು. ಉಳಿದ ಕ್ಷುದ್ರ ಸಿದ್ಧಿಗಳು ಸಿದ್ಧಿಸುವವು ಎಂದು ಬೇರೆ ಹೇಳಬೇಕೇ?

ತಾರಕಬ್ರಹ್ಮ ಎಂದು ವೇದಪುರಾಣಗಳಲ್ಲಿ ಸುಪ್ರಥಿತನಾದ ಶ್ರೀರಾಮಚಂದ್ರ ಪ್ರಭುವಿನ ಹೆಸರಿನಿಂದ ಸಿದ್ಧಿಪ್ರಸಿದ್ಧಿ ಪಡೆದ ಈ ರಾಮಕುಂಡ ತೀರ್ಥದಲ್ಲಿ ಸ್ನಾನ ಮಾಡಿ ಬಳಿಕ ಲಕ್ಷ್ಮಣ ತೀರ್ಥಕ್ಕೆ ಹೋಗಿ ಸ್ನಾನಮಾಡಬೇಕು. ಈ ಲಕ್ಷ್ಮಣ ತೀರ್ಥದಲ್ಲಿ ಸ್ನಾನಮಾಡಿ ರಾಮಮಂತ್ರವನ್ನು ಜಪಿಸಿದವರಿಗೆ ನಾಲ್ಕು ವೇದಗಳ ರಹಸ್ಯ ಜ್ಞಾನವು ಉಂಟಾಗುವದು. ಈ ತೀರ್ಥದ ದಂಡೆಯಮೇಲೆ ಆ ರಾಮಾನುಜನಾದ ಲಕ್ಷ್ಮಣನು ಒಂದು ಈಶ್ವರ ಲಿಂಗವನ್ನು ಸ್ಥಾಪನೆ ಮಾಡಿದ್ದಾನೆ. ಅದಕ್ಕೆ ಲಕ್ಷ್ಮಣೇಶ್ವರ ಎಂದು ಹೆಸರು. ಈ ಲಕ್ಷ್ಮಣ ತೀರ್ಥದಲ್ಲಿ ಸ್ನಾನಮಾಡಿ ಲಕ್ಷ್ಮಣೇಶ್ವರನ ದರ್ಶನ ಮಾಡಿಕೊಂಡು ಸೇವೆ ಮಾಡಿದರೆ, ದಾರಿದ್ರ್ಯವು ನಾಶವಾಗುವದು. ರೋಗವು ದೂರವಾಗುವದು. ಪಾಪವು ಪರಿಹಾರವಾಗುವದು. ಈ ಲಕ್ಷ್ಮಣ ತೀರ್ಥದ ಮುಂದೆ ಭಗವಾನ್ ಶಂಕರನು ಲೋಕೋಪಕಾರಕ್ಕಾಗಿ ನಿರ್ಮಿಸಿದ ಜಟಾತೀರ್ಥವು ಇರುತ್ತದೆ. ಹಿಂದೆ ಶ್ರೀರಾಮಚಂದ್ರನು ರಾವಣನನ್ನು ಸಂಹರಿಸಿದ ಬಳಿಕ ತನ್ನ ಜಡೆಗಳನ್ನು ಇಲ್ಲಿಯೇ ತೊಳೆದುಕೊಂಡನಂತೆ. ಆ ಕಾರಣಕ್ಕಾಗಿ ಇದಕ್ಕೆ ಜಟಾತೀರ್ಥ ಎಂಬ ಹೆಸರು ಬಂದಿದೆ. ಈ ಜಟಾತೀರ್ಥದಲ್ಲಿ ಸ್ನಾನ ರಾಮಧ್ಯಾನ ಮಾಡಿದ ಮಾನವರಿಗೆ ಅಂತಃಕರಣ ಶುದ್ಧಿಯಾಗಿ ದಿವ್ಯ ಜ್ಞಾನೋದಯವಾಗುವದು. ಪೂರ್ವಕಾಲದಲ್ಲಿ ಅವಧೂತ ಶಿರೋಮಣಿಯಾದ ಶುಕಮುನಿಯು ತನ್ನ ತಂದೆ ವೇದವ್ಯಾಸ ಮುನಿಗಳಿಗೆ ಒಂದು ಪ್ರಶ್ನೆ ಮಾಡಿದನು.

## ಶುಕರ ಪ್ರಶ್ನೆ, ವ್ಯಾಸರ ಉತ್ತರ

**ಶುಕಾಚಾರ್ಯ:-** ಪೂಜ್ಯ ತಂದೆಯೇ, ಈ ಭೂಲೋಕದಲ್ಲಿ ಅಂತಃಕರಣ ಶುದ್ಧಿ, ಅಜ್ಞಾನದ ನಾಶ, ದಿವ್ಯ ಜ್ಞಾನದ ಉದಯ, ಮೋಕ್ಷ ಪ್ರಾಪ್ತಿ ಇವು ನಾಲ್ಕು ಹೇಗೆ ಮಾನವರಿಗೆ ಲಭ್ಯವಾಗುವವು? ಇದರ ಉಪಾಯವನ್ನು ನನಗೆ ಹೇಳಿರಿ.

**ವೇದವ್ಯಾಸ:-** ವತ್ಸ ಶುಕದೇವ! ಗಂಧಮಾದನ ಪರ್ವತದಲ್ಲಿ ಇರುವ ರಾಮಸೇತುವಿನ ಮಧ್ಯದಲ್ಲಿ ಇರುವ ಜಟಾತೀರ್ಥದಲ್ಲಿ ಸ್ನಾನಮಾಡುವದರಿಂದ ನೀನು ಹೇಳಿದ ನಾಲ್ಕೂ ಅಭೀಷ್ಟಗಳು ಸುಲಭವಾಗಿ ಸಿದ್ಧಿಸುವವು. ಈ ಜಟಾತೀರ್ಥದ ಸ್ನಾನದಿಂದ ಮಾನವರ ಹೃದಯಗ್ರಂಥಿ ಭೇದನವಾಗಿ ಅಂತಃಕರಣ ಶುದ್ಧಿ ಪ್ರಾಪ್ತವಾಗುವದು. ಅದರಿಂದ ಅವಿದ್ಯೆಯ ನಾಶವಾಗಿ ದಿವ್ಯ ಜ್ಞಾನೋದಯವಾಗುವದು. ಆ ಬಳಿಕ ಜ್ಞಾನಿಯಾದ ಮಾನವನು ಭಕ್ತಿಯಿಂದ ಶ್ರೀರಾಮನನ್ನು ಆರಾಧಿಸಿದರೆ ಮೋಕ್ಷವು ತಾನಾಗಿಯೇ ಸಿದ್ಧಿಸುವದು. ಹಿಂದೆ ಶ್ರೀರಾಮಚಂದ್ರನು ಈ ತೀರ್ಥದಲ್ಲಿ ತನ್ನ ಜಟೆಯನ್ನು ತೊಳೆದುಕೊಂಡ ಬಳಿಕ ಅದಕ್ಕೆ ಒಂದು ವರವನ್ನು ಕೊಟ್ಟಿದ್ದಾನೆ. ''ಯಜ್ಞ, ಜ್ಞಾನ, ಜಪ, ತಪ, ಉಪಾಸನೆಗಳು ಇಲ್ಲದೆ, ಕೇವಲ ಈ ಜಟಾತೀರ್ಥದಲ್ಲಿ ಸ್ನಾನಮಾಡುವ ಮಾತ್ರದಿಂದಲೇ ಮಾನವರಿಗೆ ಬುದ್ಧಿ, ಶುದ್ಧಿ ಹಾಗೂ ಮೋಕ್ಷಾದಿ ಪುರುಷಾರ್ಥ ಸಿದ್ಧಿಗಳು ಪ್ರಾಪ್ತವಾಗಲಿ.''

ಶುಕಕುಮಾರಾ, ಪೂರ್ವಕಾಲದಲ್ಲಿ ವರುಣ ಪುತ್ರನಾದ ಭೃಗು ಮುನಿಯು ತನ್ನ ತಂದೆಗೆ- "ಬುದ್ಧಿಯನ್ನು ಶುದ್ಧಮಾಡುವ ಪಾವನ ಉಪಾಯವು ಯಾವುದು?" ಎಂದು ಪ್ರಶ್ನೆ ಮಾಡಿದನು. ಅದಕ್ಕೆ ವರುಣ ದೇವನು "ಜಟಾತೀರ್ಥ ಸ್ನಾನವೇ ಅದಕ್ಕೆ ಉಪಾಯ" ಎಂದು ತಿಳಿಸಿದನು.

ವರುಣನ ಸಲಹೆಯಂತೆ ಭೃಗುಮುನಿಯು ಈ ಜಟಾತೀರ್ಥದಲ್ಲಿ ಸ್ನಾನ ಮಾಡಿದ. ಶ್ರೀರಾಮಚಂದ್ರನ ಧ್ಯಾನಮಾಡಿದ. ಶ್ರೀರಾಮ ಷಡಕ್ಷರ ಮಂತ್ರದ ಜಪಮಾಡಿದ. ಅದರಿಂದ ಕೊನೆಗೆ ಅವನಿಗೆ ಪರಿಶುದ್ಧವಾದ ಬುದ್ಧಿಯು ಉದಿಸಿತು. ದಿವ್ಯ ಜ್ಞಾನವು ಪ್ರಾಪ್ತವಾಯಿತು. ಪರಮಾತ್ಮನಲ್ಲಿ ನಿಶ್ಚಲ ಭಕ್ತಿಯೂ ಉಂಟಾಯಿತು. ಅದರಿಂದ ಆ ಭೃಗು ಮಹರ್ಷಿಗೆ ಭಗವತ್ ಸಾಕ್ಷಾತ್ಕಾರವು ಸುಲಭವಾಗಿ ಸಿದ್ಧಿಸಿತು. ಇದರಂತೆ ಮಹಾದೇವರ ಅಂಶ ಸಂಭೂತರಾದ ದುರ್ವಾಸಮುನಿಗಳು ಜಟಾತೀರ್ಥದಲ್ಲಿ ಸ್ನಾನಮಾಡಿ ಶುದ್ಧ ಬುದ್ಧಿ ಹಾಗೂ ಸಿದ್ಧಿ ಸಮೃದ್ಧಿಗಳನ್ನು ಹೊಂದಿದರು.

## ಶುಕಾಚಾರ್ಯರಿಗೆ ರಾಮಮಂತ್ರ ಜಪದಿಂದ ಭಗವತ್ಸಾಕ್ಷಾತ್ಕಾರ

ಆದುದರಿಂದ ವತ್ಸ ಶುಕ! ನೀನು ಕೂಡ ಗಂಧಮಾದನ ಪರ್ವತದಲ್ಲಿ ಸಮುದ್ರ ಸೇತುವಿನ ಮಧ್ಯದಲ್ಲಿರುವ ಜಟಾತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡು. ದೇವರ ಧ್ಯಾನ ಮಾಡು. ಅದರಿಂದ ಅವಿದ್ಯಾ ಗ್ರಂಥಿ ಭೇದನವಾಗಿ, ಅಂತಃಕರಣಶುದ್ಧಿ, ಸದ್ಬುದ್ಧಿ, ದಿವ್ಯ ಜ್ಞಾನವೃದ್ಧಿ ಹಾಗೂ ಮೋಕ್ಷ ಸಿದ್ಧಿ, ಎಲ್ಲವೂ ನಿನಗೆ ಲಭಿಸುವವು.

ತಂದೆಯಾದ ಭಗವಾನ್ ಶ್ರೀ ವೇದವ್ಯಾಸರ ಅಪ್ಪಣೆಯಂತೆ ವಿರಕ್ತ ಶಿಖಾಮಣಿ ಶುಕಾಚಾರ್ಯರು ಈ ಗಂಧಮಾದನ ಪರ್ವತಕ್ಕೆ ಬಂದರು. ಅಲ್ಲಿಯ ಜಟಾತೀರ್ಥದಲ್ಲಿ ಮಿಂದರು. ಶ್ರೀರಾಮ ಮಂತ್ರವನ್ನು ಜಪಿಸಿದರು. ಶ್ರೀರಾಮನನ್ನು ಭಕ್ತಿಯಿಂದ ಭಜಿಸಿದರು. ಅದರಿಂದ ಅವರಿಗೆ ಅಂತಃಕರಣ ಸಿದ್ಧಿಯಾಗಿ, ದಿವ್ಯಜ್ಞಾನೋದಯ ವಾಯಿತು. ಭಗವಂತನದಲ್ಲಿ ಭಕ್ತಿವೃದ್ಧಿಯಾಗಿ ಪರಮಾತ್ಮನ ಸಾಕ್ಷಾತ್ಕಾರವು ಸಿದ್ಧಿಸಿತು. ಆದುದರಿಂದ ಮನಸ್ಸಿನ ಸಿದ್ಧಿ ಹಾಗೂ ಸಮೃದ್ಧಿ, ಆತ್ಮ ಶುದ್ಧಿ ಜ್ಞಾನ ಭಕ್ತಿಗಳ ಅಭಿವೃದ್ಧಿ ಮತ್ತು ಮೋಕ್ಷಾದಿ ಪುರುಷಾರ್ಥ ಸಿದ್ಧಿಗಳನ್ನು ಬಯಸುವವರು ಈ ಜಟಾತೀರ್ಥಗಳು ಇದ್ದಲ್ಲಿ ಹೋಗಿ ಅಲ್ಲಿ ಸ್ನಾನಮಾಡಿ ಶ್ರೀರಾಮಚಂದ್ರನ ಸೇವೆ ಹಾಗೂ ಆರಾಧನೆಗಳನ್ನು ಮಾಡಬೇಕು.

## ಲಕ್ಷ್ಮೀತೀರ್ಥ ಅಗ್ನಿತೀರ್ಥಗಳ ಮಹಿಮೆ,

**ಸೂತ:-** ಈ ಜಟಾತೀರ್ಥದಿಂದ ಮುಂದೆ ಮಾನವರ ಮನೋರಥವನ್ನೆಲ್ಲ ಪೂರ್ಣ ಮಾಡುವ ಲಕ್ಷ್ಮೀತೀರ್ಥ ಇರುತ್ತದೆ. ಲಕ್ಷ್ಮೀದೇವಿಯ ಹೆಸರಿನಿಂದ ವಿಖ್ಯಾತವಾಗಿರುವ ಈ ತೀರ್ಥದಲ್ಲಿ ಸ್ನಾನಮಾಡುವವರ ಕಡು ಬಡತನ ತಾನಾಗಿ ನೀಗಿ ಹೋಗುವದು. ಪಾಪರಾಶಿಗಳೆಲ್ಲ ನಾಶವಾಗುವವು. ಇದರ ಅನಂತರ ಯಾತ್ರಿಕರು ಅಗ್ನಿತೀರ್ಥಕ್ಕೆ ಹೋಗಬೇಕು. ಈ ಅಗ್ನಿತೀರ್ಥದಲ್ಲಿ ಸ್ನಾನಮಾಡುವದರಿಂದ ಬೆಟ್ಟದಂಥ ಪಾಪವೂ ಕೂಡ ಸುಟ್ಟು ಹೋಗುವದು. ಪೂರ್ವಕಾಲದಲ್ಲಿ ಶ್ರೀರಾಮಚಂದ್ರನು ರಾವಣಾದಿ ದೈತ್ಯರನ್ನು ಸಂಹರಿಸಿದ. ಲಕ್ಷ್ಮಣನಿಂದ ವಿಭೀಷಣನಿಗೆ ಪಟ್ಟಗಟ್ಟಿಸಿದ. ನಂತರ ಈ ಸೇತುವೆಯನ್ನು

ಆಮೂಲಾಗ್ರವಾಗಿ ನೋಡಬೇಕೆಂದು ಪಾದಚಾರಿಯಾಗಿ ಲಂಕಾಪಟ್ಟಣದಿಂದ ಗಂಧಮಾದನ ಪರ್ವತಕ್ಕೆ ಬಂದ. ಅಲ್ಲಿಯ ಲಕ್ಷ್ಮೀತೀರ್ಥದ ತೀರದಲ್ಲಿ ಕುಳಿತುಕೊಂಡು ಅಲ್ಲಿ ನೆರೆದ ದೇವತೆಗಳು, ಋಷಿಗಳು ಪಿತೃಗಳ ಎದುರು ಅಗ್ನಿದೇವರನ್ನು ಆವಾಹನ ಮಾಡಿದ. ಶ್ರೀರಾಮಚಂದ್ರನು ಕರೆದಕೂಡಲೇ ಅಗ್ನಿಯು ಸಮುದ್ರದಿಂದ ಎದ್ದು ಮಾನವರೂಪದಿಂದ ಬಂದು ಶ್ರೀರಾಮಚಂದ್ರನಿಗೆ ನಮಸ್ಕರಿಸಿ ಕೈಜೋಡಿಸಿ ಬಿನ್ನವಿಸಿದ.

**ಅಗ್ನಿ:-**"ಪ್ರಭು ರಾಮಚಂದ್ರ, ಎಲ್ಲ ದೇವಾಧಿದೇವತೆಗಳಿಗೂ ಅಜಿಂಕ್ಯನಾದ ಹಾಗೂ ಅವಧ್ಯನಾದ ರಾವಣ, ಕುಂಭಕರ್ಣ ಮೊದಲಾದ ಘೋರ ರಕ್ಕಸರನ್ನು ನೀನು ಲೀಲಾಜಾಲವಾಗಿ ಸಂಹರಿಸಿದೆ. ಇವೆಲ್ಲವೂ ಪರಮ ಪತಿವ್ರತೆಯೂ ಹುತಾತ್ಮಳೂ ಆದ ಸೀತಾದೇವಿಯ ಪಾತಿವ್ರತ್ಯದ ಪ್ರಭಾವವೇ ಸರಿ. ಇದರಲ್ಲಿ ಸಂದೇಹವೇ ಇಲ್ಲ. ಸೀತೆಯ ಸತೀತ್ವದ ಪ್ರಭಾವದಿಂದಲೇ ರಾವಣನು ಸತ್ತಿದ್ದು. ಇದು ಸತ್ಯ ಸತ್ಯ ಸತ್ಯ. ಈ ಸೀತೆಯು ಸಾಕ್ಷಾತ್ ಲಕ್ಷ್ಮೀದೇವಿ. ಜಗನ್ಮಾತೆ. ನೀನು ದುಷ್ಟ ದಮನ ಹಾಗೂ ಶಿಷ್ಟ ರಕ್ಷಣೆಗಾಗಿ ಭೂಲೋಕದಲ್ಲಿ ಅವತಾರ ಮಾಡಿದಾಗ ತಾನೂ ಅವತಾರ ಮಾಡಿ ಲೀಲಾ ಮಾನವೀ ರೂಪದಿಂದ ನಿನ್ನ ಸೇವೆಗೆ ಅಣಿಯಾಗುವಳು. ಈಗ ಸಾಕ್ಷಾತ್‌ಮಹಾವಿಷ್ಣುವಾದ ನೀನು ಲೀಲಾಮಾಯೆದಿಂದ ರಾಮರೂಪನಾಗಿ ಅವತರಿಸಿ ಬಂದಿರುವಿ. ಅದಕ್ಕಾಗಿಯೇ ಈ ಜಗಜ್ಜನನಿಯಾದ ಲಕ್ಷ್ಮೀದೇವಿಯು ಕೂಡ ಜನಕರಾಜ ನಂದಿನಿಯಾಗಿ ಸೀತಾದೇವಿ ಎಂಬ ಹೆಸರಿನಿಂದ ನಿನ್ನ ಸೇವೆಗೆ ಅವತರಿಸಿ ಬಂದಿದ್ದಾಳೆ. ಹಿಂದೆ ನೀನು ಪರಶುರಾಮ ರೂಪದಿಂದ ಭಾರ್ಗವನಾಗಿ ಅವತರಿಸಿ ಬಂದಾಗ ಇವಳು ಧರಿಣೀ ರೂಪದಿಂದ ಅವತಾರ ತಾಳಿ ನಿನ್ನ ಸೇವೆಗೈದಳು. ಈಗ ನೀನು ರಘುನಂದನನಾಗಿ ಅವತರಿಸಿದಾಗ ಇವಳು ಜನಕನಂದಿನಿಯಾಗಿ ನಿನ್ನ ಸೇವೆಗೆ ಸಿದ್ಧಳಾಗಿ ನಿಂತಿದ್ದಾಳೆ. ಮುಂದೆ ನೀನು ಕೃಷ್ಣಾವತಾರ ಮಾಡಿದಾಗ ಈ ಜಗದಂಬೆಯು ರುಕ್ಮಿಣೀ ದೇವಿಯಾಗಿ ನಿನ್ನಸೇವೆಯನ್ನು ಮಾಡಲಿರುವಳು. ಹೀಗೆ ನಿನ್ನ ಸರ್ವಾವತಾರ ಸಹಾಯಕ ಸತಿಯೂ ಸಾರ್ವಕಾಲಿಕ ಸಖಿಯೂ ಪ್ರಾಣಪ್ರಿಯ ಪ್ರೇಯಸಿಯೂ ಆದ ಈ ಸೀತಾದೇವಿಯನ್ನು ನೀನು ಎಂದೂ ಕೈ ಬಿಡಬೇಡ."

ಅಗ್ನಿದೇವನ ಈ ಮಾತುಗಳನ್ನು ಕೇಳಿ ಎಲ್ಲ ಋಷಿಗಳೂ ದೇವತೆಗಳೂ ಸೀತಾದೇವಿಯನ್ನು ಮುಕ್ತಕಂಠದಿಂದ ಹೊಗಳಿದರು. ಲಂಕಾಪಟ್ಟಣದಲ್ಲಿ ಅಗ್ನಿದಿವ್ಯವನ್ನು ಮಾಡಿದ ಆ ಜಾನಕಿಯನ್ನು ಶ್ರೀರಾಮಚಂದ್ರನು ಪುನಃ ಮತ್ತೊಮ್ಮೆ ಅದೇ ಅಗ್ನಿದೇವನು ಪ್ರತ್ಯಕ್ಷನಾಗಿ ಸೀತೆಯ ಗುಣಗಾನ ಮಾಡಿದ್ದನ್ನು ಕೇಳಿ ತುಂಬು ಹೃದಯದಿಂದ ಗೌರವಿಸಿದ. ಸೀತೆಯ ಶುದ್ಧಿಯನ್ನು ಚಾರಿತ್ರ್ಯದ ಪಾವಿತ್ರ್ಯವನ್ನು ಮತ್ತೆ ಮತ್ತೆ ಬಂದು ಜಗತ್ತಿನಲ್ಲಿಯ ಎಲ್ಲ ಜನರಿಗೆ ಮನಮೆಚ್ಚುವಂತೆ ಬಿತ್ತರಿಸಿದ ಅಗ್ನಿದೇವನನ್ನೂ ಆದರಿಸಿದ. ಅಗ್ನಿಯು ಗಂಧಮಾದನ ಪರ್ವತದಲ್ಲಿ ಪ್ರಕಟನಾಗಿ ಶ್ರೀರಾಮನಿಗೆ ಸೀತೆಯ ಗುಣಗಾನವನ್ನು ಮಾಡಿದ ಸ್ಥಳವೇ ಅಗ್ನಿತೀರ್ಥ ಎಂದು ಹೆಸರಾಗಿದೆ. ಈ ಅಗ್ನಿತೀರ್ಥದಲ್ಲಿ ಸ್ನಾನಮಾಡಿ ಉಪವಾಸವಿದ್ದು ವೇದವಿದ್ವಾಂಸರಿಗೆ ಭೋಜನಮಾಡಿಸಬೇಕು. ವಸ್ತ್ರಗಳನ್ನೂ ವಿಪುಲ ದಕ್ಷಿಣೆಯನ್ನೂ ನೀಡಬೇಕು. ಇದರಿಂದ ಮುಕ್ತನಾಗುವನು ಮಾನವ ಸಂಸಾರ ಬಂಧನದಿಂದ.

ಪೂರ್ವಕಾಲದಲ್ಲಿ ಪಾಟಲೀಪುತ್ರದಲ್ಲಿ ಒಬ್ಬ ವೈಶ್ಯ. ಅವನ ಹೆಸರು ಪಶುಮಾನ್. ಅವನು ಸದಾ ಧರ್ಮತತ್ಪರ. ವಿದ್ವಾಂಸರ ಸೇವೆಯಲ್ಲೇ ಆಸಕ್ತ. ಕೃಷಿ ಅವನ ಉದ್ಯೋಗ. ಗೋರಕ್ಷಣೆ ಅವನ ಉದ್ದೇಶ. ಬೆಳ್ಳಿ ಬಂಗಾರಗಳ ವ್ಯಾಪಾರ ಅವನ ಉಪದಂಧೆ. ಅವನಿಗೆ ಮಡದಿಯರು ಮೂವರು. ಆ ಮೂರೂ ನಾರಿಯರೂ ಪರಮ ಪವಿವ್ರತೆಯರು. ಪತಿಸೇವೆಯಲ್ಲಿ ಅವರಿಗೆ ಅಹಮಹಮಿಕೆ. ಆ ಮೂವರಲ್ಲಿಯೂ ಪರಸ್ಪರರಲ್ಲಿ ಸ್ನೇಹ ಸಖ್ಯ. ಅದರಿಂದ ಆ ವೈಶ್ಯನ ಮನೆಯಲ್ಲಿ ಯಾವಾಗಲೂ ಎಂದೂ ನಂದದ ಆನಂದದ ನಂದಾದೀಪ. ಆ ಮೂವರೂ ಮಡದಿಯರಿಂದ ಪಶುಮಾನ್ ವೈಶ್ಯನಿಗೆ ಎಂಟು ಜನ ಮಕ್ಕಳು. ಅವರಲ್ಲಿ ಏಳು ಮಕ್ಕಳಿಗೆ ಸಾತ್ವಿಕತೆ ತಾಯಂದಿರ ಬಳುವಳಿ. ಧರ್ಮಬುದ್ಧಿ ತಂದೆಯಿಂದ ಬಂದ ಅನುವಂಶಿಕ ಗುಣ. ಅವರ ಸುಪುಣ್ಯ ಮೊದಲಾದ ಏಳು ಜನ ಮಕ್ಕಳು ತಾಯಿ ತಂದೆಗಳಲ್ಲಿದ್ದ ಧಾರ್ಮಿಕತೆ, ಸಾತ್ವಿಕತೆ, ಸದಾಚಾರ, ಸದ್ಬುದ್ಧಿಗಳು ಸಂಗಮಿಸಿದ ಮೂರ್ತಿಗಳಂತಿದ್ದರು. ಆದರೆ ಅವನ ಎಂಟನೆಯ ಮಗ ದುಷ್ಪಣ್ಯ ಎಂಬುವವನು ಮಾತ್ರ ಇದಕ್ಕೆ ಅಪವಾದ. ಗುಣ ಸ್ವಭಾವಗಳಲ್ಲಿ ತನ್ನ ಏಳೂ ಜನ ಅಣ್ಣಂದಿರಿಗೆ ವಿಪರೀತ. ಸುಪುಣ್ಯ ಮೊದಲಾದ ಏಳೂ ಜನ ಮಕ್ಕಳು ತಂದೆತಾಯಿ ಹೇಳಿದ ಒಂದೂ ಮಾತನ್ನು ಮೀರುತ್ತಿರಲಿಲ್ಲ. ತಂದೆಯ ಉಪದೇಶದಿಂದ ಬೇಸಾಯ, ವ್ಯವಸಾಯ, ಸುವರ್ಣ ವ್ಯಾಪಾರಗಳಲ್ಲಿ ಏಳು ಜನರೂ ಪಳಗಿದರು. ತಂದೆಯ ಉದ್ಯೋಗ ವ್ಯವಸಾಯಗಳನ್ನು ಮುಂದುವರಿಸಿದರು.

ಆದರೆ ಎಂಟನೆಯವನಾದ ದುಷ್ಪುಣ್ಯನು ಮಾತ್ರ ಹುಟ್ಟಿನಿಂದಲೇ ಕೆಟ್ಟ ಸ್ವಭಾವದವ. ದುಷ್ಟ ಮಾರ್ಗದಲ್ಲಿಯೇ ಪ್ರವೃತ್ತ. ತಂದೆಯ ಮಾತನ್ನು ಕೇಳುತ್ತಿರಲಿಲ್ಲ. ತಾಯಂದಿರ ಹಿತವಚನವನ್ನು ಲಕ್ಷಿಸುತ್ತಿರಲಿಲ್ಲ. ಪಶುಮಾನ್ ವೈಶ್ಯನು ದುರ್ಮಾರ್ಗಗಾಮಿಯಾದ ಹಾಗೂ ತನ್ನ ಆಜ್ಞೆಯನ್ನು ಧಿಕ್ಕರಿಸಿ ನಡೆಯುವ ಆ ಎಂಟನೆಯ ಮಗನನ್ನು ಉಪೇಕ್ಷಿಸಿ ಬಿಟ್ಟ. ಅವನಿಗೆ ಏನೂ ಹೇಳುತ್ತಲೇ ಇರಲಿಲ್ಲ. ಅವನ ಎಂಟೂ ಜನ ಮಕ್ಕಳೂ ಬೆಳೆದು ದೊಡ್ಡವರಾದರು. ತಾರುಣ್ಯ ಸಹಜವಾದ ಬಲ, ಪೌರುಷಗಳು ಅವರ ದೇಹದಲ್ಲಿ ಪ್ರತಿಷ್ಠಿತವಾದವು.

ತರುಣನಾದ ದುಷ್ಪುಣ್ಯ ಊರಲ್ಲಿಯ ಚಿಕ್ಕ ಚಿಕ್ಕ ಮಕ್ಕಳನ್ನು ಎತ್ತಿಕೊಂಡು ಹೋಗಿ ಬಾವಿ, ನದೀ, ಅಥವಾ ಕೆರೆಗಳಲ್ಲಿ ಮುಳುಗಿಸಿಬಿಡುತ್ತಿದ್ದ. ಜನರಿಗೆ ಇವನ ದುರ್ವ್ಯಾಪಾರವು ಗೊತ್ತೇ ಆಗುತ್ತಿರಲಿಲ್ಲ. ಮುಂದೆ ಒಂದೆರಡು ದಿನಗಳ ನಂತರ ಆ ಬಾಲಕರ ಶವಗಳು ನೀರಮೇಲೆ ತೇಲತೊಡಗಿದಾಗ ಅವರ ತಾಯ್ತಂದೆಗಳಿಗೆ ಸತ್ತದ್ದು ಗೊತ್ತಾಗಿ ಅವರು ಬಹಳ ದುಃಖದಿಂದ ತಮ್ಮ ಮಕ್ಕಳ ಶವಸಂಸ್ಕಾರ ಮಾಡುತ್ತಿದ್ದರು. ಅವರಿಗೆ ಈ ಬಾಲಹತ್ಯೆಯನ್ನು ಮಾಡಿದ ಘಾತಕಿ ಯಾರು ಎಂದು ತಿಳಿಯದೆ ತಮ್ಮ ದುರ್ದೈವವನ್ನು ನಿಂದಿಸುತ್ತ ಗೋಳಿಡುತ್ತಿದ್ದರು. ಹೀಗೆ ಊರಲ್ಲಿಯ ಚಿಕ್ಕ ಚಿಕ್ಕ ಮಕ್ಕಳೆಲ್ಲರೂ ಗುಟ್ಟಾಗಿಯೇ ಕಣ್ಮರೆಯಾಗಿ ಒಮ್ಮೆಲೇ ಮಾಯವಾಗಿ, ಮುಂದೆ ಜಲಾಶಯಗಳಲ್ಲಿ ಹೆಣವಾಗಿ ತೇಲಾಡುವದನ್ನು ಕಂಡು ಜನರೆಲ್ಲರೂ ಭಯ ಭ್ರಾಂತರಾದರು. ಆಗ ಆ ಊರಿನ ಜನರೆಲ್ಲರೂ ಕೂಡಿ ರಾಜನ ಬಳಿಗೆ ಬಂದು ತಮ್ಮ ದುಃಖವನ್ನು ತೋಡಿಕೊಂಡರು. ಅದಕ್ಕಾಗಿ ಆ ಅರಸನು ಗುಪ್ತಚಾರರನ್ನು ನಿಯಮಿಸಿದ. "ಬಾಲಕರ ಹಂತಕನನ್ನು ಪತ್ತೆ ಹಚ್ಚಿರಿ" ಎಂದು ಕಟ್ಟಪ್ಪಣೆ ಮಾಡಿದ. ಆದರೆ ಈ ದುಷ್ಟನಾದ

ದುಷ್ಪುಣ್ಯನು ಯಾರಿಗೂ ಗೊತ್ತಾಗದಂತೆ ಗುಟ್ಟಾಗಿ ಹೇಗೋ ಕುತಂತ್ರಮಾಡಿ ಜನರಿಲ್ಲದಾಗ ಅಥವಾ ಮಲಗಿ ನಿದ್ರಿಸುವಾಗ ಮಕ್ಕಳನ್ನು ಎತ್ತಿಕೊಂಡು ಹೋಗಿ ಕತ್ತು ಹಿಸುಕಿ ನೀರಿನಲ್ಲಿ ಬಿಸಾಕಿ ಬರುತ್ತಿದ್ದ. ಅರಸನ ಬೇಹುಗಾರರು ಎಷ್ಟೇ ಶೋಧಮಾಡಿದರೂ ಹಂತಕನ ಪತ್ತೆ ಆಗಲಿಲ್ಲ. ರಾಜನ ಬೇಹುಗಾರರು ಘಾತಕಿಯನ್ನು ಹುಡುಕಿ ದೊರಕದೇ ಮನದಲ್ಲಿಯೇ ಮಿಡುಕಿದರು. ರಾಜನು ಮತ್ತೂ ಕೆಲವು ಗೂಢಚಾರರನ್ನು ನಿಯಮಿಸಿದ.

ಒಂದು ದಿನ ದುಷ್ಪುಣ್ಯನು ಅಲ್ಲಿಯೂ ಸರೋವರದ ದಂಡೆಯ ಮೇಲೆ ಬಾಲಕರ ಬೇಟೆಯಾಡಲು ತಿರುಗಾಡುತ್ತಿದ್ದ. ದಂಡೆಯ ಮೇಲೆ ಲತಾಕುಂಜದಲ್ಲಿ ಕೆಲವು ಹುಡುಗರು ಆಟವಾಡುತ್ತಿದ್ದರು. ಅವರ ಕಣ್ಣಿಗೆ ಸರೋವರದ ಮಧ್ಯದಲ್ಲಿ ತೇಲಾಡುತ್ತಿರುವ ಅರೆಬಿರಿದ ಕಮಲದ ಮೊಗ್ಗುಗಳು ಕಂಡುಬಂದವು.

ಆದರೆ ನೀರಿನ ನಡುವಿರುವ ಆ ಸುಂದರ ಹೊಂದಾವರೆಗಳನ್ನು ತರುವುದು ಹೇಗೆ ಎಂದು ಆ ಬಾಲಕರು ಯೋಚಿಸುತ್ತ ನಿಂತುಕೊಂಡರು. ಅದನ್ನು ಕಂಡು ದುಷ್ಪುಣ್ಯನು ಆ ಮಕ್ಕಳಿದ್ದಲ್ಲಿ ಬಂದು ''ನಾನು ನಿಮಗೆ ಆ ತಾವರೆ ಹೂಗಳನ್ನು ಹರಿದು ಕೊಡುತ್ತೇನೆ ಬನ್ನಿ.'' ಎಂದು ನೀರಿನಲ್ಲಿ ಆ ಮಕ್ಕಳನ್ನು ಕರೆದುಕೊಂಡು ಹೋದ. ನೀರಿನಲ್ಲಿ ಇಳಿದು ನಾಲ್ಕು ಹೆಜ್ಜೆ ನಡೆಯುವಷ್ಟರಲ್ಲಿ ದುಷ್ಪುಣ್ಯ ಒಂದೊಂದೆ ಹುಡುಗನನ್ನು ಹಿಡಿದು ನೀರಿನಲ್ಲಿ ಮುಳುಗಿಸತೊಡಗಿದ. ಆಗ ಎಲ್ಲ ಹುಡುಗರು ದೊಡ್ಡ ದನಿಯಿಂದ ಚೀರಿ ಕೂಗಿ ರೋದಿಸತೊಡಗಿದವು. ಆದರೂ ಆ ದುಷ್ಟ ಆ ಮಕ್ಕಳನ್ನು ಬಲಾತ್ಕಾರದಿಂದ ಕುತ್ತಿಗೆ ಮಟ ನೀರಿನಲ್ಲಿ ಸೆಳೆದೊಯ್ದು ಮುಳುಗಿಸಿ ಸತ್ತು ಹೋಗಿರುವರು ಎಂದು ಭಾವಿಸಿ ಮೇಲೆ ಜನ ಬರುವರೆಂಬ ಹೆದರಿಕೆಯಿಂದ ಅಲ್ಲಿಂದ ಓಡಿ ಹೋದ. ಅಷ್ಟರಲ್ಲಿ ಅವರ ತಾಯಿ ತಂದೆಗಳು ಮನೆಯಲ್ಲಿ ಮಕ್ಕಳನ್ನು ಕಾಣದೇ ಊರ ತುಂಬ ತಮ್ಮ ಪರಿವಾರದೊಂದಿಗೆ ಹುಡುಕತೊಡಗಿದ್ದರು. ದುಷ್ಪುಣ್ಯ ಮುಳುಗಿಸಿದ ಮಕ್ಕಳು ಅಷ್ಟು ಚಿಕ್ಕವರು ಇರಲಿಲ್ಲ. ಗಡಿಬಿಡಿಯಲ್ಲಿ ದುಷ್ಪುಣ್ಯನು ಮುಳುಗಿಸಿ ಓಡಿ ಹೋದ ಬಳಿಕ ಆ ಮಕ್ಕಳು ಸಾಯದೇ ಹೇಗೋ ಕೈ ಕಾಲು ಬಡಿಯುತ್ತ ಮೇಲೆ ಎದ್ದು ಬಂದರು. ನೀರು ಕೂಡ ಬಹಳ ಆಳವಾಗಿರಲಿಲ್ಲ. ಕೂಡಲೇ ಅವರ ಕಾಲಿಗೆ ನೆಲ ತಾಕಿತು. ಸಾಯುವ ಸಂಕಟಕ್ಕೆ ಅವರು ಕೈಕಾಲು ಬಡಿಯುತ್ತ ನೆಲ ಹತ್ತಿದ ಮೇಲೆ ನಡೆಯುತ್ತ ಸರೋವರದ ದಂಡೆಗೆ ಬಂದು ತಲುಪಿದರು.

ಇತ್ತ ಊರಲ್ಲಿ ಆ ಮಕ್ಕಳನ್ನು ಹುಡುಕುತ್ತಲಿರುವ ಅಪ್ತೇಷ್ಟರೂ ಬಂಧು ಬಳಗದವರೂ ಆ ಮಕ್ಕಳ ಹೆಸರು ಹಿಡಿದು ದೊಡ್ಡ ದನಿಯಿಂದ ಕೂಗುತ್ತಿದ್ದರು. ಅದಕ್ಕೆ ಪ್ರತಿಯಾಗಿ ಈ ಮಕ್ಕಳು ತಮ್ಮ ದನಿಯನ್ನು ಎತ್ತರಿಸಿ ಕೂಗಿ ಉತ್ತರಕೊಟ್ಟರು. ತಮ್ಮ ಮಕ್ಕಳ ಚೀತ್ಕಾರ ಧ್ವನಿಯನ್ನು ಕೇಳಿ ತಂದೆತಾಯಿ ಬಂಧು ಬಳಗದವರೆಲ್ಲರೂ ಓಡಿ ಸರೋವರದ ದಂಡೆಯ ವರೆಗೂ ಬಂದರು. ಅಲ್ಲಿ ತಮ್ಮ ಎಲ್ಲ ಮಕ್ಕಳೂ ಜೀವಂತವಿರುವದನ್ನು ಕಂಡು ಪರಮಾನಂದವಾಯಿತು. ಅವರೆಲ್ಲರೂ ಸಾಗರಬಿದ್ದು ಸರೋವರದ ದಂಡೆಯಲ್ಲಿ ಬಿದ್ದ ತಮ್ಮ ಮಕ್ಕಳನ್ನು ಎತ್ತಿ ಮುತ್ತಿಟ್ಟು ಕೇಳಿದರು :

''ನೀವು ಇಲ್ಲಿ ಏಕೆ ಬಂದಿರಿ? ಯಾರು ನಿಮ್ಮನ್ನು ಇಲ್ಲಿ ತಂದರು?'' ಎಂದು.

ಆಗ ಆ ಮಕ್ಕಳು-''ಪಶುಮಾನ್ ವೈಶ್ಯನ ಮಗನಾದ ದುಷ್ಪುಣ್ಯನು ತಾವರೆ

ಹೂಗಳನ್ನು ಕೊಡುತ್ತೇನೆಂದು ಹೇಳಿ ಈ ಸರೋವರದ ನೀರಿನಲ್ಲಿ ಮುಳುಗಿಸಿ ಓಡಿಹೋದ. ನೀರಿನಲ್ಲಿ ಮುಳುಗಿದ್ದರೂ ನಾವು ಅವನು ಓಡಿ ಹೋದ ಬಳಿಕ ಸಾಯುವ ಸಂಕಟಕ್ಕೆ ಕೈಕಾಲು ಬಡೆಯುತ್ತ ದಂಡೆಗೆ ಬಂದು ಹತ್ತಿದೆವು'' ಎಂದು ಹೇಳಿದರು. ಇದನ್ನು ತಿಳಿದು ಊರ ಜನರೆಲ್ಲರೂ ರಾಜನಿಗೆ ಈ ಸಮಾಚಾರ ಮುಟ್ಟಿಸಿದರು. ಅವನು ಪಶುಮಾನ್ ವೈಶ್ಯನನ್ನು ತನ್ನ ದರ್ಬಾರಕ್ಕೆ ಕರಿಸಿಕೊಂಡು ಹೇಳಿದ.

**ರಾಜ:-** ''ಪಶುಮಾನನೇ, ನೀನೇನೋ ಸಾತ್ವಿಕ ಹಾಗೂ ಧಾರ್ಮಿಕ. ಆದರೆ ನಿನ್ನ ಮಗ ಇಂಥ ಘಾತಕ ಮತ್ತು ಬಾಲಹಂತಕ ಎಂಬುದು ನನಗೆ ಗೊತ್ತೇ ಇರಲಿಲ್ಲ. ಈ ನಮ್ಮ ನಗರವು ಯಾವಾಗಲೂ ಚಿಕ್ಕಮಕ್ಕಳಿಂದ ತುಂಬಿ ತುಳುಕುತ್ತಿದ್ದಿತು. ನಿನ್ನ ಮಗ ದುಷ್ಪುಣ್ಯನು ಒಂದೊಂದಾಗಿ ಆ ಮಕ್ಕಳನ್ನು ಕೊಂದುಹಾಕಿ ಬಿಟ್ಟಿದ್ದಾನೆ. ಆದಿರಂದ ಮಕ್ಕಳೆಲ್ಲವೂ ಪ್ರಾಯಃಸತ್ತು ಹೋಗಿ ಮಸಣಗಟ್ಟೆಯಾಗಿದೆ ಈ ಮಹಾನಗರ. ದೈವಯೋಗದಿಂದ ಈ ಐವರು ಮಕ್ಕಳು ದುಷ್ಪಣ್ಯನು ಮುಳುಗಿಸಿದರೂ ಸಾಯದೇ ಹೇಗೋ ಬದುಕಿ ಉಳಿದಿದ್ದಾರೆ. ಈಗ ನೀನೇ ಹೇಳು ಏನು ಮಾಡಬೇಕು? ನೀನು ಧರ್ಮನಿಷ್ಠ. ನ್ಯಾಯ ತತ್ಪರ. ನೀನು ಹೇಳಿದಂತೆ ಮಾಡುತ್ತೇನೆ.

**ಪಶುಮಾನ್:-** ರಾಜನೇ! ಇದರಲ್ಲಿ ನನ್ನನ್ನು ಕೇಳುವದು ಏನಿದೆ? ಈ ಕ್ರೂರ ಕರ್ಮಿಯು ನನ್ನ ಪುತ್ರನಲ್ಲ. ಶತ್ರು. ಸಮಗ್ರ ನಗರವನ್ನೇ ಶೂನ್ಯಪ್ರಾಯ ಮಾಡಿದ ಈ ಹಂತಕನಿಗೆ ಪ್ರಾಣದಂಡನೆಯೇ ಸರಿಯಾದ ಶಿಕ್ಷೆ. ಇಷ್ಟು ಜನ ಮುಗ್ಧ ಬಾಲಕರನ್ನು ಕೊಲೆಮಾಡಿದ ಹಿಂಸಾಕಾರಿಯನ್ನು ವಧೆ ಮಾಡುವದೇ ಈಗ ಯೋಗ್ಯ. ಇಷ್ಟು ಜನ ಮಕ್ಕಳನ್ನು ನಷ್ಟ ಮಾಡಿದ ಪಾಪಿಯ ಉದ್ಧಾರಕ್ಕೆ ನನಗಂತೂ ಯಾವ ಉಪಾಯವೂ ತೋರುವದಿಲ್ಲ. ಆದುದರಿಂದ ಈ ಬಾಲಘಾತಕಿಯಾದ ಮಹಾಪಾತಕಿಗೆ ಮರಣ ದಂಡನೆಯನ್ನು ತಾವು ವಿಧಿಸಬೇಕು.''

ಧರ್ಮಜ್ಞನೂ ನ್ಯಾಯನಿಷ್ಠನೂ ಆದ ಪಶುಮಾನ್ ವೈಶ್ಯನ ಈ ನುಡಿಯನ್ನು ಕೇಳಿ ಜನರೆಲ್ಲರೂ ಅವನನ್ನೂ ಅವನ ನ್ಯಾಯ ನಿಷ್ಠುರತೆಯನ್ನೂ ಪ್ರಶಂಸಿಸಿದರು. ಮತ್ತು ಈ ಪಶುಮಾನ್‌ನ ಮುಖವನ್ನು ನೋಡಿ ಹಂತಕನಾದ ದುಷ್ಪುಣ್ಯನನ್ನು ಕೊಲ್ಲದೇ ಊರು ಬಿಟ್ಟು ಹೊರಗೆ ಹಾಕಿ ಅವನನ್ನು ದೇಶಭ್ರಷ್ಟನನ್ನಾಗಿ ಮಾಡಬೇಕು ಎಂದು ಸಲಹೆ ಇತ್ತರು. ನಾಗರಿಕರ ಈ ಅನುರೋಧವನ್ನು ಮನ್ನಿಸಿ ಮಹಾರಾಜನು ದುಷ್ಪುಣ್ಯನನ್ನು ಕರಿಸಿ,- ''ದುಷ್ಪಾತ್ಮನೇ, ನೀನು ಇನ್ನು ಒಂದು ಕ್ಷಣವೂ ನನ್ನ ನಗರದಲ್ಲಿ ಇರಕೂಡದು. ಕೂಡಲೇ ಈ ಊರು ದಾಟಿ ದೂರ ಹೋಗು. ಇಲ್ಲಿ ನಿಂತರೆ ಇಲ್ಲಿಯೇ ನಿನ್ನನ್ನು ಕೊಂದು ಹಾಕಲಾಗುವುದು.'' ಹೀಗೆ ಹೇಳಿ ದೂತರಿಂದ ಅವನನ್ನು ನಗರದಿಂದ ಹೊರಗೆ ಹಾಕಿಸಿದ.

ಹೀಗೆ ರಾಜಶಾಸನವನ್ನು ಕೇಳಿ ದುಷ್ಪುಣ್ಯನು ಹೆದರಿ ಊರು ಬಿಟ್ಟು ಕಾಡು ಸೇರಿದ. ಅಲ್ಲಿಯೂ ಅವನು ತನ್ನ ಸ್ವಭಾವವನ್ನು ಬಿಡಲಿಲ್ಲ. ಅಲ್ಲಿಯ ಅರಣ್ಯದಲ್ಲಿ ಅನೇಕ ಋಷಿಮುನಿಗಳು ಆಶ್ರಮ ಕಟ್ಟಿಕೊಂಡು ತಪಸ್ವಾಧ್ಯಾಯ ನಿರತರಾಗಿ ವಾಸಿಸುತ್ತಿದ್ದರು ಅವರ ಮಕ್ಕಳು ಅಲ್ಲಿಯೇ ಸಮೀಪದಲ್ಲಿ ಹರಿಯುತ್ತಿದ್ದ ನದಿಯ ದಂಡೆಯ ಮೇಲೆ ಆಟ ಆಡುತ್ತಿದ್ದವು. ದುಷ್ಪುಣ್ಯನಿಗೆ ಏಕಾಂತ ವನಾಂತದಲ್ಲಿ ಯಾರೂ ಇಲ್ಲದಾಗ ನದಿಯ ದಂಡೆಯ ಮೇಲೆ ಆಡುತ್ತಿರುವ ಆ ಚಿಕ್ಕ ಮಕ್ಕಳನ್ನು ನೋಡಿ ಮತ್ತೆ ಅವನ ದುರ್ಬುದ್ಧಿಯು

ಜಾಗ್ರತವಾಯಿತು. ಆ ಮಕ್ಕಳಲ್ಲಿ ಒಂದು ಮಗು ಆಟವಾಡುತ್ತ ನದಿಯ ದಂಡೆಗೆ ಹತ್ತಿರದಲ್ಲಿ ಬಂದಿತ್ತು. ದುಷ್ಪಣ್ಯನು ಸ್ನಾನ ಮಾಡುವ ನೆಪದಲ್ಲಿ ತಾನು ನದಿಯಲ್ಲಿ ಇಳಿದು ಉಳಿದ ಮಕ್ಕಳೆಲ್ಲ ತೀರದ ಮರಗಳ ಮರೆಯಲ್ಲಿ ಆಟಪಾಟಗಳಲ್ಲಿ ತೊಡಗಿದಾಗ ನೀರ ಹತ್ತಿರ ಬಂದ. ಒಂದು ಚಿಕ್ಕಮಗುವನ್ನು ನೀರಲ್ಲಿ ಮುಳುಗಿಸಿ ಬಿಟ್ಟ. ಮತ್ತು ತಾನು ಯಾರಿಗೂ ಗೊತ್ತಾಗದಂತೆ. ನಿಬಿಡವಾದ ಅಲ್ಲಿಯ ಹೆಮ್ಮರಗಳ ಸಾಲಿನಲ್ಲಿ ಮರೆಯಾಗಿ ಹೋದ.

ಆಟವಾಡುವ ಬಾಲಕರು ತಮ್ಮ ಗೆಳೆಯನು ಅಲ್ಲಿ ಕಾಣದ್ದನ್ನು ನೋಡಿ ಹುಡುಕುತ್ತ ನದಿಯ ದಂಡೆಗೆ ಬಂದರು. ನೀರಿನಲ್ಲಿ ಮುಳುಗಿ ತಮ್ಮ ಬಾಲಮಿತ್ರನು ಸತ್ತು ಹೋದದ್ದು ಅವರಿಗೆ ಕಂಡಿತು. ಅವರು ಕೂಡಲೇ ಹೋಗಿ ಉಗ್ರಶ್ರವ ಮಹರ್ಷಿಗಳಿಗೆ ಅವರ ಮಗನು ನದಿಯಲ್ಲಿ ಮುಳುಗಿ ಮರಣಹೊಂದಿದ್ದನ್ನು ತಿಳಿಸಿದರು. ಮಹಾತಪಸ್ವಿ ಆ ಉಗ್ರಶ್ರವ ಮಹರ್ಷಿ. 'ತಮ್ಮ ಎಳೆ ಮಗು ಎಂದೂ ಇಲ್ಲದೇ ಇಂದು ನದಿಗೆ ಬಿದ್ದು ನೀರಿನಲ್ಲಿ ಮುಳುಗಿ ಮರಣ ಹೊಂದಲು ಏನು ಕಾರಣವಿರಬಹುದು?' ಎಂದು ತಮ್ಮ ತಪಃಪ್ರಭಾವದಿಂದ ನೋಡಿದರು. ನಡೆದ ಸಂಗತಿಯೆಲ್ಲ ತಿಳಿದು ಬಂದಿತು ನಿಚ್ಚಳವಾಗಿ. ದುಷ್ಪಣ್ಯನು ತಾನು ಮಾಡಿದ ಬಾಲಕಹತ್ಯೆಯು ಯಾರಿಗೂ ತಿಳಿದಿಲ್ಲ ಎಂದು ನಿರ್ಭಯವಾಗಿ ಆಶ್ರಮದ ಸಮೀಪದಲ್ಲಿಯೇ ತಿರುಗಾಡುತ್ತಿದ್ದ. ಆಗ ಉಗ್ರಶ್ರವ ಮುನಿಯು ಶಾಪಕೊಡುತ್ತ ಹೇಳಿದರು- ''ಪಾಪಾತ್ಮನೇ, ನೀನು ನನ್ನ ಮಗನನ್ನು ನೀರಿನಲ್ಲಿ ಮುಳುಗಿಸಿ ಕೊಂದೆ. ನಿಮ್ಮ ಊರಿನಲ್ಲಿಯೂ ಅನೇಕ ಮಕ್ಕಳನ್ನು ಜಲಾಶಯಗಳಲ್ಲಿ ಮುಳುಗಿಸಿ ಸಂಹರಿಸಿದೆ. ಆದುದರಿಂದ ನಿನಗಾದರೂ ಕೂಡ ನೀರಿನಲ್ಲಿ ಮುಳುಗಿಯೇ ಸಾವು ಬರಲಿ ಹಾಗೂ ಮುಂದೆ ಅನೇಕ ವರ್ಷ ನೀನು ಪಿಶಾಚಿಯಾಗಿ ಅಲೆದಾಡು.''

ಉಗ್ರಶ್ರವ ಮುನಿಯ ಶಾಪವೂ ಕೂಡ ಅಷ್ಟೇ ಉಗ್ರವಾಗಿತ್ತು. ಇದನ್ನು ಕೇಳಿ ಬಹಳ ದುಃಖವಾಯಿತು ಆ ದುಷ್ಪಣ್ಯನಿಗೆ. ಅವನು ಆ ತಪೋವನವನ್ನು ಬಿಟ್ಟು ಬೇರೆ ಒಂದು ಗೊಂಡಾರಣ್ಯಕ್ಕೆ ತೆರಳಿದ. ಅಲ್ಲಿ ಬರೀ ಕ್ರೂರ ಶ್ವಾಪದಗಳು. ಯಾವಾಗಲೂ ಸಿಂಹಗಳ ಗರ್ಜನೆ. ಹುಲಿಗಳ ಗುಡುಗಾಟ, ಮದ್ದಾನೆಗಳ. ಘೀಳಿಡುವಿಕೆ, ಕಾಡುಹಂದಿ, ಕರಡಿ, ಚಿರತೆ ಮುಂತಾದ ಹಿಂಸ್ರ ಪ್ರಾಣಿಗಳ ಸ್ವಚ್ಛಂದ ಸಂಚಾರದಿಂದ ಪ್ರಾಣಾಂತಕವಾಗಿತ್ತು ಆ ವನಾಂತ. ಅಲ್ಲಿಂದ ದಾಟಿ ಪಾರಾಗಿ ಹೋಗಬೇಕೆಂದು ವೇಗದಿಂದ ಓಡತೊಡಗಿದ ದುಷ್ಪಣ್ಯ. ಆದರೆ ದಾರಿಯಲ್ಲಿಯೇ ಭಯಂಕರ ಮಳೆ ಹಾಗೂ ಬಿರುಗಾಳಿ ಸುರುವಾದವು.

ಆ ಭೀಕರ ಮಳೆಗಾಳಿಗಳನ್ನು ತಡೆಯಲಾರದೇ ಹೌಹಾರಿ ನಿಂತುಕೊಂಡ ಆ ದುಷ್ಟ. ಅಲ್ಲಿ ಒಂದು ಸತ್ತುಬಿದ್ದ ಆನೆಯ ಒಣಗಿದ ದೇಹವು ಕಂಡಿತು. ಆದರ ಹೊಟ್ಟೆಯಲ್ಲಿ ಒಂದು ಗುಹೆಯಂತೆ ಕುಳಿತುಕೊಳ್ಳಲು ಅವಕಾಶವನ್ನು ಕಂಡ. ಮಳೆಯಲ್ಲಿ ನಿಲ್ಲಲಾರದೆ ದುಷ್ಪಣ್ಯ ಸೇರಿಕೊಂಡ ಆದರ ಒಳಗೆ. ಮಳೆ ಒಂದೇ ಸಮನೆ ಸುರಿಯುತ್ತಲೇ ಇದ್ದಿತು. ಆ ಸತ್ತ ಆನೆಯ ಉದರದ ಹೊದರಿನಲ್ಲಿ ದುಷ್ಪಣ್ಯನು ಕುಳಿತುಕೊಂಡಾಗಲೂ ಧಾರಾಕಾರ ವಾಗಿ ಸುರಿಯುವ ಮಳೆಯಿಂದ ಸಮೀಪದ ಕೆರೆ, ತೊರೆ, ಝರಿ, ಹೊಂಡ, ಹಳ್ಳಗಳೆಲ್ಲವೂ ತುಂಬಿ ಹರಿದು ಜಲಪ್ರವಾಹವೇ ಉಂಟಾಯಿತು. ಆ ಜಲಪ್ರವಾಹದಲ್ಲಿ ದುಷ್ಪಣ್ಯನು ಕುಳಿತ ವಿಶಾಲ ಕಾಯದ ಆನೆಯ ದೇಹವೂ ಕೂಡ ತೇಲಿಕೊಂಡು ಹೊರಟಿತು. ಅದು

ಹಾಗೇ ತೇಲುತ್ತ ಹಳ್ಳದ ಪ್ರವಾಹದ ಜೊತೆ ದೊಡ್ಡ ನದಿಯನ್ನು ಸೇರಿತು. ಆ ನದಿಯು ಕೊನೆಗೆ ಸಮುದ್ರವನ್ನು ಕೂಡಿತು. ಆ ಹಳ್ಳ ಹಾಗೂ ಹೊಂಡಗಳ ಮಹಾಪ್ರವಾಹದೊಂದಿಗೆ ಗಜದೇಹದೊಂದಿಗೆ ತೇಲಾಡುತ್ತ ದುಷ್ಪಣ್ಯನು ಕೂಡ ಸಮುದ್ರದ ನೀರಿನಲ್ಲಿ ಬಂದು ಬಿದ್ದ. ಅಲ್ಲಿಯ ಗುಡ್ಡದಂಥ ದೊಡ್ಡ ದೊಡ್ಡ ತೆರೆಗಳ ಹೊಡೆತದಿಂದ ಜರ್ಜರಿತನಾಗಿ ನೀರಿನಲ್ಲಿ ತೂರಾಡಿ ತೇಲಾಡುವ ದುಷ್ಪಣ್ಯ ಮುಳುಗಿ ಸತ್ತು ಹೋದ. ಮರಣಾನಂತರದಲ್ಲಿ ಉಗ್ರಶ್ರವ ಮುನಿಗಳ ಶಾಪದಂತೆ ಅವನು ಪಿಶಾಚ ಜನ್ಮವನ್ನು ಹೊಂದಿದ.

ಹಸಿವೆ ನೀರಡಿಕೆಗಳಿಂದ ಕಂಗಾಲಾಯಿತು ಆ ಪಿಶಾಚ. ಭಯಾನಕ ರೂಪಧರಿಸಿ ತರತರಹದ ದುಃಖ ದಾವಾಗ್ನಿಯಿಂದ ದಗ್ಧವಾಗಿ ಆ ಬೆಂಗಾಡಿನಲ್ಲಿ ಅಲೆಯ ತೊಡಗಿತು. ಕಾಡಿನಿಂದ ಕಾಡಿಗೆ ಅಂಡಲೆಯುತ್ತ, ವನವನಾಂತರಗಳನ್ನೆಲ್ಲ ತಿರುಗುತ್ತ ಕೊನೆಗೆ ಆ ಭಯಾನಕ ಪಿಶಾಚವು ದಂಡಕಾರಣ್ಯಕ್ಕೆ ಬಂದಿತು. ಆ ದಂಡಕಾರಣ್ಯದಲ್ಲಿ ದೊಡ್ಡ ದನಿಯಿಂದ ಒದರುತ್ತ ಕೂಗತೊಡಗಿತು. ''ತಪಸ್ವಿಗಳಾದ ಮಹಾತ್ಮರೇ, ನೀವು ಭೂತದಯಾಶೀಲರಲ್ಲವೇ? ಪ್ರಾಣಿಗಳಿಗೆ ಹಿತ ಮಾಡುವದು ನಿಮ್ಮ ಕರ್ತವ್ಯ. ನಾನು ದುಃಖಗಳಿಂದ ಪೀಡಿತ. ನಾನು ಜನ್ಮಾಂತರದಲ್ಲಿ ವೈಶ್ಯನಾಗಿದ್ದಾಗ ಅನೇಕ ಮಕ್ಕಳನ್ನು ಕೊಂದುಹಾಕಿದ್ದೆ. ಆದ್ದರಿಂದ ಈಗ ಪಿಶಾಚಯೋನಿಯಲ್ಲಿ ಗೋಳಾಡುತ್ತಿದ್ದೇನೆ. ಹಸಿವು ನೀರಡಿಕೆಗಳನ್ನು ತಾಳಲಾರೆ. ದಯಮಾಡಿ ನನ್ನನ್ನು ಉದ್ಧಾರಮಾಡಿ ತಪೋಧನರೇ! ಈ ಪಿಶಾಚಯೋನಿಯಿಂದ ನನ್ನನ್ನು ಬಿಡುಗಡೆ ಮಾಡಿರಿ.''

ಪಿಶಾಚದ ಈ ಮೊರೆಯನ್ನು ಕೇಳಿ ಮಮ್ಮಲನೇ ಮರುಗಿದರು ಅಲ್ಲಿದ್ದ ಋಷಿಗಳು. ಅವರೆಲ್ಲರೂ ಅಗಸ್ತ್ಯ ಋಷಿಗಳ ಬಳಿಗೆ ಹೋಗಿ ಈ ಪಿಶಾಚದ ಸಮಾಚಾರ ತಿಳಿಸಿ 'ಅದರ ಉದ್ಧಾರಕ್ಕೆ ಏನಾದರೂ ಉಪಾಯ ಮಾಡಬೇಕು' ಎಂದು ವಿನಂತಿಸಿಕೊಂಡರು. ಆಗ ಅಗಸ್ತ್ಯರು ತಮ್ಮ ಶಿಷ್ಯ ಸುತೀಕ್ಷ್ಣನನ್ನು ಕರೆದು ಹೇಳಿದರು.

**ಅಗಸ್ತ್ಯ:-** ''ಸುತೀಕ್ಷ್ಣ ! ನೀನು ಈಗಲೇ ಸಮುದ್ರಸೇತುವಿನ ಮಧ್ಯದಲ್ಲಿರುವ ಗಂಧಮಾದನ ಪರ್ವತಕ್ಕೆ ಹೋಗು. ಅಲ್ಲಿರುವ ಅಗ್ನಿತೀರ್ಥದಲ್ಲಿ ಈ ಪಿಶಾಚಿಯ ಉದ್ಧಾರದ ಉದ್ದೇಶದಿಂದ ಸ್ನಾನಮಾಡು.''

ಅಗಸ್ತ್ಯರ ಆದೇಶದಂತೆ ಸುತೀಕ್ಷ್ಣ ಮುನಿಯು ಗಂಧಮಾದನ ಪರ್ವತಕ್ಕೆ ಹೋದ. ಅಲ್ಲಿರುವ ಅಗ್ನಿತೀರ್ಥದಲ್ಲಿ ''ದುಷ್ಪಣ್ಯ ವೈಶ್ಯನನ್ನು ಪಿಶಾಚಯೋನಿಯಿಂದ ಉದ್ಧಾರಮಾಡಲಿಕ್ಕಾಗಿ'' ಎಂದು ಸಂಕಲ್ಪಮಾಡಿ ಸ್ನಾನಮಾಡಿದ. ಹೀಗೆ ಮೂರು ದಿನ ಸ್ನಾನಗೈದ. ಅಲ್ಲಿರುವ ಉಳಿದ ರಾಮನಾಥ ಮುಂತಾದ ಅನೇಕ ತೀರ್ಥಗಳಲ್ಲಿ ಅವಗಾಹನ ಮಾಡಿದ. ಶ್ರೀರಾಮಚಂದ್ರನನ್ನು ಧ್ಯಾನಮಾಡಿ, ಶ್ರೀರಾಮ ಷಡಕ್ಷರ ಮಂತ್ರವನ್ನು ಒಂದು ಕ್ಷಣವೂ ಬಿಡದೇ ಜಪಿಸಿದ. ಆ ಪುಣ್ಯವನ್ನೆಲ್ಲ ಆ ಪಿಶಾಚಿಗೆ ಧಾರೆಯೆರೆದು ಕೊಟ್ಟ. ಆ ಅಗ್ನಿತೀರ್ಥಸ್ನಾನ ಮತ್ತು ಶ್ರೀರಾಮಚಂದ್ರನ ನಿರಂತರ ಧ್ಯಾನ ಹಾಗೂ ಭಕ್ತಿಯುಕ್ತ ಉಪಾಸನೆಯಿಂದ ಆ ದುಷ್ಪಣ್ಯ ಪಿಶಾಚವು ಪಿಶಾಚಯೋನಿಯಿಂದ ಮುಕ್ತವಾಯಿತು. ಮತ್ತು ದಿವ್ಯ ದೇಹವನ್ನು ಧರಿಸಿ ತನ್ನ ಉದ್ಧಾರ ಕಾರಣರಾದ ಸುತೀಕ್ಷ್ಣ ಮುನಿಗೆ

ನಮಸ್ಕಾರ ಮಾಡಿತು. ಅನಂತರ ಆ ಸುತೀಕ್ಷ್ಣ ಮುನಿಗೆ ಆದೇಶ ನೀಡಿ ತನ್ನ ಸಲುವಾಗಿ ಅಗ್ನಿ ತೀರ್ಥದಲ್ಲಿ ಸ್ನಾನಮಾಡಲು ಅಪ್ಪಣೆಕೊಟ್ಟ ಅಗಸ್ತ್ಯರನ್ನು ಕಂಡು ಕೃತಜ್ಞತೆಯ ವಂದನೆಯನ್ನು ಸಲ್ಲಿಸಿದ. ಅನಂತರ ಅಗಸ್ತ್ಯ ಮುನಿಗೆ ತಾನು ಪಡುತ್ತಿರುವ ದಾರುಣ ದುಃಖವನ್ನು ಶ್ರುತಪಡಿಸಿದ. ತನ್ನ ಉದ್ಧಾರಕ್ಕಾಗಿ ಅವರಲ್ಲಿ ಮೊರೆಯಿಟ್ಟ. ದಂಡಕಾರಣ್ಯದ ಎಲ್ಲ ಮುನಿಮಹರ್ಷಿಗಳಿಗೂ ಸಾಷ್ಟಾಂಗ ವಂದನೆಗೈದ. ಅನಂತರ ಆ ಎಲ್ಲ ಮುನಿಮಂಡಲದ ಮತ್ತು ಅಗಸ್ತ್ಯಋಷಿಯ ಹಾಗೂ ಸುತೀಕ್ಷ್ಣ ಮುನಿಯ ಆಶೀರ್ವಾದ ಅನುಗ್ರಹ ಅನುಮೋದನೆಗಳನ್ನು ಪಡೆದು ದಿವ್ಯವಿಮಾನಾರೂಢನಾಗಿ ಸ್ವರ್ಗಲೋಕಕ್ಕೆ ತೆರಳಿದ ಆ ದುಷ್ಪಣ್ಯ ಎಂಬ ಹೆಸರಿನ ವೈಶ್ಯ. ಇಂಥ ಮಹಾಮಹಿಮೋಪೇತವಾಗಿದೆ ಪರಮ ಪವಿತ್ರವೂ ಪಾಪನಾಶನವೂ ಆದ ಅಗ್ನಿತೀರ್ಥ.

## ಚಕ್ರತೀರ್ಥ, ಶಿವತೀರ್ಥ, ಶಂಖತೀರ್ಥ, ಯಮುನಾತೀರ್ಥ, ಗಂಗಾತೀರ್ಥ ಮಹಿಮೆ

**ಸೂತ:-** ಅಗ್ನಿತೀರ್ಥದಲ್ಲಿ ಸ್ನಾನಮಾಡಿ ಯಾತ್ರಿಕರು ಚಕ್ರತೀರ್ಥದ ಯಾತ್ರೆಯನ್ನು ಮಾಡಬೇಕು. ಮನುಷ್ಯನು ಯಾವ ಕಾಮನೆಯನ್ನು ಮನಸ್ಸಿನಲ್ಲಿ ಹಿಡಿದು ಈ ಚಕ್ರ ತೀರ್ಥದಲ್ಲಿ ಸ್ನಾನಮಾಡುವನೋ ಆ ಮನೋಭೀಷ್ಟವು ನಿಶ್ಚಿತವಾಗಿ ಪೂರ್ಣವಾಗುವದು. ಪೂರ್ವಕಾಲದಲ್ಲಿ ಅಹಿರ್ಬುಧ್ನ್ಯ ಎಂಬ ಮಹರ್ಷಿಯು ಈ ಗಂಧಮಾದನ ತೀರ್ಥದ ತಡಿಯಲ್ಲಿ ನೆಲೆನಿಂತು ಸುದರ್ಶನ ಚಕ್ರದ ಉಪಾಸನೆಯನ್ನು ಮಾಡುತ್ತಲಿದ್ದ. ವಿಘ್ನ ಸಂತೋಷಿಗಳಾದ ದುರುಳ ದಾನವರು ಆ ಮಹಾಮುನಿಯ ತಪೋಭಂಗಮಾಡಬೇಕೆಂದು ಸಾಂಘಿಕವಾಗಿ ಅವನ ಮೇಲೆ ಏರಿ ಬಂದರು. ಭೀಕರ ಆಕಾರವನ್ನು ಧರಿಸಿ ಆ ತಪೋನಿಧಿಯ ಮೇಲೆ ಸಾಮೂಹಿಕವಾಗಿ ದಾಳಿ ನಡೆಸಿದ ಆ ದಾರುಣ್ಯ ದೈತ್ಯರನ್ನು ಭಗವಂತನ ಸುದರ್ಶನ ಚಕ್ರಬಂದು ಅವರೆಲ್ಲರನ್ನೂ ಕೊಂದು ಹಾಕಿತು. ಆಗ ಅಹಿರ್ಬುಧ್ನ್ಯ ಮಹಾಮುನಿಯು ತನ್ನ ತಪಸ್ಸಿನ ವಿಘ್ನಕಾರಿಗಳಾದ ವ್ರಾತ್ಯ, ದೈತ್ಯರನ್ನು ಕತ್ತರಿಸಿ ಹಾಕಿದ ಆ ಸುದರ್ಶನ ಚಕ್ರಕ್ಕೆ ಇದೇ ತೀರ್ಥದಲ್ಲಿ ನೆಲೆಸಲು ಬೇಡಿಕೊಂಡ. ಅವನ ಪ್ರಾರ್ಥನೆಯನ್ನು ಮನ್ನಿಸಿ ಆ ಸುದರ್ಶನ ಚಕ್ರವು ಅಲ್ಲಿಯೇ ಇರತೊಡಗಿತು. ಅಂದಿನಿಂದ ಈ ತೀರ್ಥಕ್ಕೆ ಚಕ್ರತೀರ್ಥ ಎಂಬ ಹೆಸರು ಬಂದಿತು. ಈ ತೀರ್ಥದಲ್ಲಿ ಸ್ನಾನಮಾಡುವದರಿಂದ ರಾಕ್ಷಸ ಪಿಶಾಚಾದಿಗಳ ಬಾಧೆಯು ತಟ್ಟುವದಿಲ್ಲ.

ಶ್ಯಾಮಲಾಪುರದಲ್ಲಿ ಹರಿಹರ ಎಂಬ ಬ್ರಾಹ್ಮಣನು ವಾಸಿಸುತ್ತಿದ್ದ. ಒಂದು ದಿನ ಹೂ ತುಳಸಿ ತರಲಿಕ್ಕಾಗಿ ಆ ಬ್ರಾಹ್ಮಣ ವನಕ್ಕೆ ತೆರಳಿದ್ದ. ಆ ಕಾನನದ ಕಾವಣದಲ್ಲಿ ಓರ್ವ ಕಾಡು ಕಿರಾತ ಅದೇ ಕಾಲದಲ್ಲಿ 'ಲಕ್ಷ್ಯ ಭೇದನ' ಎಂಬ ಗುರಿ ಸಾಧನೆಯ ಅಭ್ಯಾಸವನ್ನು ಮಾಡುವದಕ್ಕಾಗಿ ಬಾಣ ಪ್ರಯೋಗವನ್ನು ನಡೆಸಿದ್ದ. ಅಕಸ್ಮಾತ್ತಾಗಿ ಅಲ್ಲಿಗೆ ಆಗಮಿಸಿದ ಹರಿಹರ ಬ್ರಾಹ್ಮಣನ ಕಾಲುಗಳಿಗೆ ಆ ಬೇಡನು ಗುರಿ ಸಾಧನೆಗಾಗಿ ಬಿಟ್ಟ ಬಾಣಗಳು ತಗಲಿದವು. ತೀಕ್ಷ್ಣವಾದ ಆ ಬಾಣಗಳಿಂದ ಆ ಹರಿಹರ ವಿಪ್ರನ ಎರಡೂ ಕಾಲುಗಳು ಕತ್ತರಿಸಿ ಹೋದವು. ಹರೆಯದ ವಯಸ್ಸಿನ ಆ ಹರಿಹರ ಕಾಲು ಹೋಗಿ ಕಂಗಾಲಾದ. ಆ ತಪೋವನದಲ್ಲಿರುವ ಹಿರಿಯ ತಾಪಸರನ್ನು ಕೇಳಿದ. ಅವರು ಗಂಧಮಾದನ ತೀರ್ಥಕ್ಕೆ ಹೋಗಲು ಸಲಹೆ ನೀಡಿದರು. ಮಿತ್ರರ ಸಹಾಯದಿಂದ ಹೇಗೋ ಗಂಧಮಾದನ ತೀರ್ಥಕ್ಕೆ ಆಗಮಿಸಿದ. ಆ ಹೆಳವ ಹರಿಹರ ಇಲ್ಲಿ ಈ ಬೆಟ್ಟದಲ್ಲಿಯ ಶ್ರೀರಾಮ ಸೇತುಬಂಧನದಲ್ಲಿ

ಘಟಕವಾದ ಈ ಚಕ್ರತೀರ್ಥದಲ್ಲಿ ಸ್ನಾನಮಾಡಿದ. ಕಡಿದು ಹೋದ ಅವನ ಕಾಲುಗಳು ಎರಡೂ ಚಿಗಿತು ಮತ್ತೆ ಮೊದಲಿನಂತಾದವು. ಆಶ್ಚರ್ಯವೇ ಆಶ್ಚರ್ಯ ಆ ಹರಿಹರನಿಗೆ. ಅಂದಿನಿಂದ ಈ ತೀರ್ಥಕ್ಕೆ ಮುನಿತೀರ್ಥ ಎಂಬ ಹೆಸರು ಬಂದಿತು. ಈ ಮುನಿತೀರ್ಥದಲ್ಲಿಯೇ ಮುಂದೆ ಅಹಿರ್ಬುಧ್ನ್ಯ ಎಂಬ ಮಹರ್ಷಿಯ ತಪಸ್ಸಿಗೆ ಮೆಚ್ಚಿ ಸುದರ್ಶನ ಚಕ್ರವು ಆಗಮಿಸಿ ತಪೋಭಂಗಕಾರಿ ರಾಕ್ಷಸರನ್ನು ಸಂಹರಿಸಿದ್ದರಿಂದ ಇದಕ್ಕೆ ಚಕ್ರತೀರ್ಥ ಎಂದು ಹೆಸರೂ ಬಂದಿತು. ಹೀಗೆ ಅಂದು ಮುನಿತೀರ್ಥ ಎಂದೂ, ಇಂದು ಚಕ್ರತೀರ್ಥ ಎಂದೂ ಕರೆಯಲ್ಪಡುವ ಗಂಧಮಾದನ ತೀರ್ಥದಲ್ಲಿ ಸ್ನಾನ ಮಾಡುವದರಿಂದ ಊನರು, ಅಂಗಹೀನರು, ಸಾಂಗ-(ಅಂಗಸಹಿತರು) ಆಗುವರು. ಇಲ್ಲಿ ಸ್ನಾನಮಾಡಿದ ಮಾನವರನ್ನು ಸಂಸಾರ ಚಕ್ರದಿಂದ ಪಾರುಮಾಡಿಸಿ ಚಕ್ರಧರನ ಒಳಗೆ ಕೊಂಡೊಯ್ಯುವದರಿಂದ ಸಾರ್ಥಕವಾಗಿದೆ ಇದರ ಚಕ್ರತೀರ್ಥ ಎಂಬ ಹೆಸರು.

ಇದರ ಮುಂದಿನ ಶಿವತೀರ್ಥದಲ್ಲಿ ಸ್ನಾನಮಾಡುವದರಿಂದ ಮಾನವನು ಸ್ವರ್ಗವನ್ನು ಪಡೆಯುವನು. ಇದರ ಅನಂತರದ ಶಂಖತೀರ್ಥ ಯಾತ್ರೆಯಿಂದ ಯಾವುದರಿಂದಲೂ ಪರಿಹಾರವಾಗದಿರುವ ಕೃತಘ್ನತೆ ಎಂಬ ಪಾಪವು ನಾಶವಾಗುವುದು. ಪೂರ್ವಕಾಲದಲ್ಲಿ ಗಂಧಮಾದನ ಪರ್ವತದಲ್ಲಿ ತಪಸ್ಸನ್ನು ಆಚರಿಸುತ್ತಲಿರುವ ಶಂಖಮುನಿಯು ನಿರ್ಮಿಸಿದ್ದರಿಂದ ಇದಕ್ಕೆ ಶಂಖತೀರ್ಥ ಎಂಬ ಹೆಸರು ಬಂದಿದೆ. ತಾಯಿ ತಂದೆಗಳ ಪಾಲನ ಪೋಷಣ ಮಾಡದಿರುವ ಮಕ್ಕಳು, ಗುರುಗಳನ್ನು ನಿಂದೆ ಮಾಡುತ್ತಲಿರುವ ಶಿಷ್ಯರು, ಯಜ್ಞಯಾಗ ಮುಂತಾದ ದೇವ ಪಿತೃಕಾರ್ಯಗಳನ್ನು ಮಾಡಿಸಿಕೊಂಡು ಬ್ರಾಹ್ಮಣರಿಗೆ ದಕ್ಷಿಣೆ ಕೊಡದವರು, ಪಿತೃಗಳನ್ನು ಪೀಡಿಸಿ ಹೊಟ್ಟೆಗ ಹಾಕದಿರುವ ದುಷ್ಟಮಕ್ಕಳು, ಉಪಜೀವನಕ್ಕೆ ಹಾದಿಹಾಕಿ ಕೊಟ್ಟ ಉಪಕಾರಿ ಮನುಷ್ಯನನ್ನು ನೆನೆಯದಿರುವ ಸ್ವಾರ್ಥಿಗಳೂ ಕೃತಘ್ನತಾ ಎಂಬ ಪಾಪಕ್ಕೆ ಪಾತ್ರರಾಗುತ್ತಾರೆ. ಮಾಡಿದ ಉಪಕಾರವನ್ನು ಮನ್ನಿಸದೇ ಇರುವ ಈ ಕೃತಘ್ನತಾ ಎಂಬ ಪಾಪಕ್ಕೆ ಶಾಸ್ತ್ರದಲ್ಲಿ ಅಗ್ನಿಪ್ರವೇಶವೇ ಪ್ರಾಯಶ್ಚಿತ್ತ ಎಂದು ಹೇಳಲಾಗಿದೆ. ಇಂಥ ಘೋರವಾದ ಕೃತಘ್ನತಾ ಎಂಬ ಪಾಪವು ಈ ಶಂಖತೀರ್ಥದಲ್ಲಿ ಸ್ನಾನಮಾಡುದರಿಂದ ತೊಳೆದು ಹೋಗುತ್ತದೆ. ಇದರ ಮುಂದೆ ಯಮುನಾ ತೀರ್ಥ, ಗಂಗಾತೀರ್ಥ, ಗಯಾತೀರ್ಥ ಎಂಬ ಮೂರು ತೀರ್ಥಗಳು ಇರುತ್ತವೆ. ತೀರ್ಥತ್ರಯ ಎಂದು ಕರೆಯುತ್ತಾರೆ ಈ ಮೂರು ಪವಿತ್ರ ತೀರ್ಥಗಳನ್ನು. ಇವುಗಳಲ್ಲಿ ಸ್ನಾನಮಾಡುವದರಿಂದ ರೋಗನಿವಾರಣ, ಅಜ್ಞಾನ ನಾಶ ಮತ್ತು ಜ್ಞಾನಸಿದ್ಧಿ ಎಂಬ ಮೂರು ಪ್ರಯೋಜನಗಳು ಲಭಿಸುತ್ತವೆ. ಈ ತೀರ್ಥತ್ರಯದಲ್ಲಿ ಸ್ನಾನಮಾಡಿ ಹಿಂದೆ 'ರೈಕ್ವ' ಎಂಬ ವಿಪ್ರೋತ್ತಮನು ದಿವ್ಯ ಜ್ಞಾನವನ್ನು ಪಡೆದನು.

ಮಹರ್ಷಿ 'ರೈಕ್ವ'ನು ಮೊದಲು ಹೆಳವನಾಗಿದ್ದ. ಹುಟ್ಟು ಹೆಳವನಾದ ಈ ಮಹರ್ಷಿಯು ಈ ಗಂಧಮಾದನ ಪರ್ವತದಲ್ಲಿಯೇ ನೆಲೆಸಿ ಈ ಎಲ್ಲ ತೀರ್ಥಗಳ ಯಾತ್ರೆ ಮಾಡುತ್ತಿದ್ದ. ಅವನಿಗೆ ಕಾಲು ಇರಲಿಲ್ಲ. ಆದುದರಿಂದ ಅವನು ಚಕ್ಕಡಿಯಲ್ಲಿ ಕುಳಿತುಕೊಂಡು ಇಲ್ಲಿಯ ಸಮೀಪದಲ್ಲಿರುವ ತೀರ್ಥಗಳಿಗೆಲ್ಲ ಹೋಗಿ ಸ್ನಾನಮಾಡಿ ಭಕ್ತಿಯಿಂದ ಭಗವದಾರಾಧನೆಯನ್ನು ಮಾಡುತ್ತಲಿದ್ದ.

ಈ ತಪೋನುಷ್ಠಾನದಲ್ಲಿಯೇ ಅವನು ತನ್ನ ದೇಹವನ್ನೆಲ್ಲ ಒಣಗಿಸಿ ಬಿಟ್ಟಿದ್ದ. ಬಿಸಿಲು ಹಾಗೂ ಚಳಿಗಳಿಂದ ಒಣಗಿದ ಅವನ ದೇಹದಲ್ಲಿ ಕಜ್ಜಿ, ಹುಣ್ಣು ಆಗಿ ಯಾವಾಗಲೂ ತುರಿಕೆಯಾಗುತ್ತಿತ್ತು. ಆದರೂ ಧೃಡನಿರ್ಧಾರದ ಆ 'ರೈಕ್ವ' ಮುನಿಯು ಹಿಂದೆಗೆಯಲಿಲ್ಲ ತನ್ನ ತಪೋನುಷ್ಠಾನದಿಂದ. ಅವನು ಮನಸ್ಸಿನಲ್ಲಿ "ನಾನು ಗಂಗಾ ಯಮುನಾ ಮುಂತಾದ ತೀರ್ಥಗಳಲ್ಲಿ ಒಮ್ಮೆಯೂ ಸ್ನಾನಮಾಡಲಿಲ್ಲ. ಕಾಲಿಲ್ಲದ ನಾನು ಕಾಶಿಗೆ ಹೋಗವದೆಂತು? ಪ್ರಯಾಗಕ್ಕೆ ಪಯಣಿಸುವದೆಂತು? ಗಯಾತೀರ್ಥದಲ್ಲಿ ಮೀಯುವದೆಂತು? ಕಾಶಿ ಗಯಾ ಪ್ರಯಾಗಗಳಿಗೆ ಹೋಗಿ ಗಂಗಾ ಯಮುನಾ ಹಾಗೂ ಫಲ್ಗು ನದಿಗಳಲ್ಲಿ ಸ್ನಾನಮಾಡಿ ತ್ರಿಸ್ಥಳೀಯಾತ್ರೆ ಮಾಡದ ಮಾನವನ ಜನ್ಮವು ವ್ಯರ್ಥ. ಈ ನನ್ನ ಚಕ್ಕಡಿಯಲ್ಲಿ ಕುಳಿತು ಅಷ್ಟು ದೂರದ ಯಾತ್ರೆ ಮಾಡುವುದು ಹುಟ್ಟು ಹೆಳವನಾದ ನನ್ನಿಂದ ಅಶಕ್ಯ. ಹುಟ್ಟಿದ್ದಕ್ಕೆ ಆ ತ್ರಿಸ್ಥಳೀ ಯಾತ್ರೆಯನ್ನಂತೂ ನಾನು ಮಾಡಲೇಬೇಕು. ಆದ್ದರಿಂದ ನನ್ನ ತಪೋಬಲದಿಂದ ಆ ಮೂರೂ ತೀರ್ಥಗಳನ್ನು ಇಲ್ಲಿಯೇ ಆಹ್ವಾನಿಸಿ ಅವುಗಳಲ್ಲಿ ಸ್ನಾನಮಾಡುವೆನು" ಎಂದು ಸಂಕಲ್ಪಿಸಿದ. ತಾನು ತನ್ನ ಜನ್ಮಾವಧಿ ಮಾಡಿದ ತಪಸ್ಸಿನ ಪುಣ್ಯಧಾರೆಯನ್ನು ಎರೆದು ಮೂರು ತೀರ್ಥಗಳನ್ನು ನಿರ್ಮಿಸಿದ. ಅವುಗಳಲ್ಲಿ ಗಂಗಾ ಯಮುನಾ ಗಯಾ ತೀರ್ಥ ಎಂಬ ಮೂರೂ ತೀರ್ಥಧಾರೆಗಳನ್ನು ಆಹ್ವಾನಿಸಿದ. ಪೂರ್ವಾಭಿಮುಖನಾಗಿ ಕುಳಿತು ಮೂರು ಸಲ ಆಚಮನಗೈದ. ಗಂಗಾ ಯಮುನಾ ಗಯಾ ತೀರ್ಥಗಳನ್ನು ಧ್ಯಾನಿಸಿ ಆವಾಹನೆ ಮಾಡಿದ. ಕೂಡಲೇ ಆ ಮೂರೂ ತೀರ್ಥಾಭಿಮಾನಿ ದೇವತೆಗಳು ಭೂಮಿ ಬಿರಿದು ಮೇಲಕ್ಕೆ ಎದ್ದು ಬಂದವು. ದೇಹಧಾರಿಗಳಾಗಿ ಅವನ ಮುಂದೆ ಪ್ರಕಟವಾದವು. ಮತ್ತು ಪ್ರಸನ್ನ ಮುಖ ಮುದ್ರೆಯಿಂದ ಅವನಿಗೆ ಹೇಳಿದವು- "ರೈಕ್ವ! ನಿನ್ನ ತಪಸ್ಸಿನಿಂದ ನಾವು ಪ್ರೀತರಾಗಿದ್ದೇವೆ. ನಿನ್ನ ಆವಾಹನೆಯನ್ನು ಮನ್ನಿಸಿ ಇಲ್ಲಿ ಉಪಸ್ಥಿತರಾಗಿದ್ದೇವೆ. ನಿನ್ನ ಮಂತ್ರ ಪ್ರಭಾವದಿಂದ ಆಕೃಷ್ಟರಾಗಿ ಇಲ್ಲಿ ಬಂದಿದ್ದೇವೆ. ನಿನ್ನ ಅಪೇಕ್ಷೆ ಏನು? ಎಂಬುದನ್ನು ತಿಳಿಸು.

**ರೈಕ್ವ:-** "ನನ್ನ ಮಂತ್ರದಿಂದ ಆಹೂತರಾಗಿ ಇಲ್ಲಿಗೆ ಆಗಮಿಸಿದ ಮೂರೂ ತೀರ್ಥಾಭಿಮಾನಿಗಳಾದ ನಿಮಗೆ ನನ್ನ ವಂದನೆ. ಲೋಕಪಾವನೆಯಾದ ಗಂಗೆಯೇ, ಹಾಗೂ ಯಮುನೆಯೇ, ಮತ್ತು ಗಯಾತೀರ್ಥವೇ, ನನ್ನ ಪ್ರಾರ್ಥನೆಯಂತೆ ಇಲ್ಲಿಯ ಈ ಗಂಧ ಮಾದನ ಪರ್ವತದಲ್ಲಿ ನೆಲವನ್ನು ಸೀಳಿಕೊಂಡು ಎದ್ದು ಬಂದು ನನ್ನ ಎದುರು ಪ್ರಕಟರಾದ ನೀವು ಮೂವರೂ ಪೂತಾಹೂತರಾದ ತೀರ್ಥ ದೇವತೆಗಳು ಈ ದಕ್ಷಿಣಾಪಥದ ಭಕ್ತರ ಉದ್ಧಾರಕ್ಕಾಗಿ ಇಲ್ಲಿಯೇ ನೆಲಿಸಬೇಕು. ನಿಮ್ಮ ಹೆಸರುಗಳಿಂದ ಇಲ್ಲಿ ಮೂರು ತೀರ್ಥಗಳು ಏರ್ಪಡಲಿ. ಅವುಗಳಲ್ಲಿ ಸ್ನಾನ ಮಾಡಿ ಜನರು ಉದ್ಧಾರ ಹೊಂದಲಿ."

ರೈಕ್ವ ಮಹರ್ಷಿಯ ಈ ಭಕ್ತಿಯುಕ್ತವಾದ ಬಿನ್ನಹಕ್ಕೆ "ತಥಾಸ್ತು" ಎಂದು ಹೇಳಿ ಅಂತರ್ಧಾನ ಹೊಂದಿದರು ಆ ಮೂವರೂ ತೀರ್ಥ ದೇವತೆಯರು. ಅಂದಿನಿಂದ ಆ ಮೂರೂ ತೀರ್ಥಗಳು ಯಮುನಾತೀರ್ಥ, ಗಂಗಾತೀರ್ಥ, ಗಯಾತೀರ್ಥ ಎಂದು ಪ್ರಸಿದ್ಧವಾದವು. ಈ ತೀರ್ಥತ್ರಯಿಯಲ್ಲಿ ಮಿಂದು ಭಗವಂತನ ಆರಾಧನೆ ಮಾಡಿದವರಿಗೆ ಅಜ್ಞಾನವು ನಾಶವಾಗಿ ಜ್ಞಾನೋದಯವಾಗುವದು. ರೈಕ್ವಮುನಿಯು ಬಹುಕಾಲದ ವರೆಗೆ ಈ ತೀರ್ಥತ್ರಯಿಯಲ್ಲಿ ಸ್ನಾನಮಾಡಿ ತಪಸ್ಸನ್ನು ಆಚರಿಸುತ್ತ ಇಲ್ಲಿಯೇ ವಾಸವಾಗಿದ್ದ.

## ಒಬ್ಬ ದೊರೆ, ಐದುಕರೆ

ರೈಕ್ವ ಮಹರ್ಷಿಯು ಗಂಧಮಾದನ ಪರ್ವತದ ಇಲ್ಲಿಯ ಸೇತುತೀರ್ಥದಲ್ಲಿ ಸ್ನಾನಮಾಡಿ ತಪೋನುಷ್ಠಾನದಲ್ಲಿ ನಿರತನಾಗಿದ್ದಾಗ ಅತ್ತ ಭೂಲೋಕದಲ್ಲಿ ಜಾನಶ್ರುತಿ ಎಂಬ ರಾಜರ್ಷಿಯು ರಾಜ್ಯವನ್ನು ಆಳುತ್ತಲಿದ್ದ. ಅನ್ನದಾನ ಮಾಡುವಲ್ಲಿ ಮಹಾದೀಕ್ಷೆ ಈ ಜಾನಸ್ರುತಿ ಮಹಾರಾಜನಿಗೆ. ಬೇಡಲು ಬಂದ ಯಾಚಕರಿಗೆ ಈ ಮಹಾರಾಜ ಶ್ರದ್ಧೆಯಿಂದ ಆದರೋಪಚಾರಮಾಡಿ ತೃಪ್ತಿಯಾಗುವವರೆಗೆ ಅನ್ನವನ್ನು ಶ್ರದ್ಧೆಯಿಂದ ನೀಡುತ್ತಿದ್ದ. ಆದುದರಿಂದ ಮುನಿಗಳು 'ಅವನನ್ನು ಶ್ರದ್ಧಾದೇಯ' ಎಂದು ಕರೆಯುತ್ತಿದ್ದರು. ಹಸಿದು ಬಂದವರಿಗೆ ಹೊಟ್ಟೆ ತುಂಬ ಅನ್ನ, ಹಾಗೂ ಭಕ್ಷ್ಯ ಭೋಜ್ಯಗಳನ್ನು ತೃಪ್ತಿಯಾಗುವವರೆಗೆ ನೀಡಿ ಬಂದ ಅತಿಥಿಗಳನ್ನು ಪರಿಪರಿಯ ಆದರೋಪಚಾರದ ಮಾತುಗಳಿಂದ ಒಲಿಸಿ ಸಂತೋಷಪಡಿಸುತ್ತಿದ್ದುದರಿಂದ ಅವನನ್ನು ಯಾಚಕರೆಲ್ಲರೂ 'ಬಹುವಾಕ್ಯ' ಎಂಬ ಹೆಸರಿನಿಂದ ಕರೆಯುತ್ತಿದ್ದರು ಅನ್ನ ದಾನ ಮಾತ್ರವಲ್ಲದೆ ಬೆಳ್ಳಿ, ಬಂಗಾರ, ಭೂಮಿ, ಬದುಕು, ಭವನ, ಹಸು, ಹಣ ಮುಂತಾಗಿ ಬಗೆಬಗೆಯ ವಸ್ತುಗಳನ್ನು ಬೇಡಿದಷ್ಟು ಬಯಸಿದಷ್ಟು ಅಭ್ಯಾಗತರಿಗೆ ನೀಡುತ್ತಿದ್ದುದರಿಂದ ''ಬಹುದಾಯಿ'' ಎಂದೂ ಅವನು ಜಗತ್ತಿನಲ್ಲಿ ಪ್ರಖ್ಯಾತಿಯನ್ನು ಹೊಂದಿದ್ದ. ಜನಶ್ರುತ ಮಹಾರಾಜನ ಮಗನಾದುದರಿಂದ ''ಜಾನಶ್ರುತಿ'', ಪುತ್ರ ಎಂಬ ಮಹಾರಾಜನ ಮೊಮ್ಮಗನಾದುದರಿಂದ ''ಪೌತ್ರಾಯಣ'' ಎಂಬ ಎರಡು ಹೆಸರುಗಳು ಅವನಿಗೆ ವಂಶಪರಂಪರೆಯಿಂದ ಬಂದಿದ್ದರೂ ಅನ್ನದಾನಾದಿ ಸದ್ಗುಣಗಳಿಂದ ಅವನಿಗೆ 'ಶ್ರದ್ಧಾದೇಯ' 'ಬಹುವಾಕ್ಯ' 'ಬಹುದಾಯಿ' ಎಂದೂ ನಾಮತ್ರಯಗಳು ಪ್ರಾಪ್ತವಾಗಿದ್ದವು.

ಈ ಮಹಾರಾಜನ ಔದಾರ್ಯ ಜ್ಞಾನ ಹಾಗೂ ವೈರಾಗ್ಯಗಳಿಂದ ಸಂತುಷ್ಟರಾಗಿದ್ದರು ದೇವತೆಗಳು. ಸುಪ್ರಸನ್ನರಾಗಿದ್ದರು ಮಹರ್ಷಿಗಳು. ಈ ರಾಜರ್ಷಿಯ ಮೇಲೆ ವಿಶೇಷ ಅನುಗ್ರಹವನ್ನು ಮಾಡಬೇಕು ಎಂಬ ಸದ್ಬುದ್ಧಿಯು ಉದಿಸಿತು ಆ ದೇವರ್ಷಿಗಳ ಮನಸ್ಸಿನಲ್ಲಿ.

ಒಂದು ದಿನ ಬೇಸಿಗೆಯಲ್ಲಿ ಜಾನಶ್ರುತಿ ಮಹಾರಾಜನು ತನ್ನ ಅರಮನೆಯ ಮೇಲು ಮಹಡಿಯ ಉಪ್ಪರಿಗೆಯ ಮೇಲೆ ಕಿಡಿಕಿಯ ಬಳಿಯಲ್ಲಿ ಮಂಚದ ಮೇಲೆ ಮಲಗಿದ್ದ. ರಾತ್ರಿಯ ವೇಳೆ, ಬೇಸಿಗೆಯ ಕಾಲವಾದುದರಿಂದ 'ಗಾಳಿ ಬರಲಿ' ಎಂದು ಕಿಟಕಿಯ ಬಾಗಿಲು ಗಳನ್ನು ತೆರದಿತ್ತು. ದೇವರ್ಷಿಗಳು ಹಂಸಗಳ ರೂಪವನ್ನು ಧರಿಸಿ ಒಂದೇ ಸಾಲಿನಲ್ಲಿ ಹಾರುತ್ತಾ ಆಕಾಶಮಾರ್ಗದಲ್ಲಿ ರಾಜನು ಮಲಗಿದ ಉಪ್ಪರಿಗೆಯ ಮೇಲಿನಿಂದ ನಡೆದಿದ್ದರು. ಆ ಹಂಸಪಂಕ್ತಿಯಲ್ಲಿ ಒಂದು ಹಂಸವು ತನ್ನ ಮುಂದೆ ಹಾರುತ್ತಲಿರುವ ಒಂದು ಅರಸಂಚೆಯನ್ನು ಕುರಿತು ರಾಜನಿಗೆ ಕೇಳುವಂತೆ ಗಟ್ಟಿಸಿ ಹೇಳಿತು. ''ಭಲ್ಲಾಕ್ಷ! ನೀನು ಕುರುಡನಂತೆ ಮುಂದೆ ಮುಂದೆ ಹಾರುತ್ತಲಿರುವೆ. ನಿನಗೆ ಕಣ್ಣು ಕಾಣುವದಿಲ್ಲವೆ? ಇಲ್ಲಿಯೇ ಪೂಜ್ಯನಾದ ''ಜಾನಶ್ರುತಿ'' ಮಹಾರಾಜನು ಪವಡಿಸಿರುತ್ತಾನೆ. ನೀನು ಅವನನ್ನು ಉಲ್ಲಂಘಿಸಿ ಮುಂದೆ ಹಾರಿ ಹೋದರೆ, ಅವನ ತೇಜಸ್ಸಿನಿಂದ ನೀನು ಸುಟ್ಟು ಬೂದಿ ಆಗುವೆ. ಜೋಕೆ.''

ತನ್ನ ಹಿಂದಿನಿಂದ ತನ್ನನ್ನು ಅನುಸರಿಸಿಕೊಂಡು ಬರುತ್ತಲಿರುವ ಅರಸಂಚೆಯ ಈ ಎಚ್ಚರಿಕೆಯ ನುಡಿಯನ್ನು ಕೇಳಿ ಮುಂದೆ ಹಾರಿ ಹೋಗುತ್ತಲಿರುವ ಹಂಸವು ಹೊರಳಿ ನೋಡಿ ಉತ್ತರ ಕೊಟ್ಟಿತು. ''ಅಯ್ಯಾ ಅರಸು ಅರಸಂಚೆಯೇ, ನೀನು ಮಹಾಜ್ಞಾನಿ, ಎಲ್ಲ

ಬಲ್ಲವ. ಇಲ್ಲಿ ಮಲಗಿದ ಜಾನಶ್ರುತಿರಾಜ ಕ್ಷುದ್ರ. ಜ್ಞಾನದರಿದ್ರ. ಅವನನ್ನು ಏಕೆ ಇಷ್ಟು ಪರಿಯಿಂದ ನೀನು ಹೊಗಳುವೆ? ಧರ್ಮರಹಸ್ಯದ ಅರಿವು ಇಲ್ಲ ಈ ಮಹಾರಾಜನಿಗೆ. ಈಗ ಭೂಮಂಡಲದಲ್ಲಿ ಧರ್ಮದ ಮರ್ಮವನ್ನು ಸರಿಯಾಗಿ ತಿಳಿದ ಮಹಾಪುರುಷ ಒಬ್ಬನೇ ಒಬ್ಬನು ಇರುತ್ತಾನೆ. ಅವನೇ ಬಂಡಿ ಹೊಡೆಯುವ ಆ ರೈಕ್ವಮುನಿ. ಈ ಪ್ರಪಂಚದಲ್ಲಿ ತೇಜಸ್ವಿ, ತಪಸ್ವಿ, ಮನಸ್ವಿ ಎಂದರೆ ಆ ರೈಕ್ವ ಮುನಿ ಒಬ್ಬನೇ. ಈ ಜಾನಶ್ರುತಿ ಮಹಾರಾಜನಲ್ಲಿ ಆ ರೈಕ್ವನ ತೇಜವೂ ಇಲ್ಲ. ತಪಸ್ಸೂ ಇಲ್ಲ. ಅವನ ಧರ್ಮಾಚರಣೆಯೂ ಇಲ್ಲ. ಅಂಥ ದಿವ್ಯ ಜ್ಞಾನವೂ ಇಲ್ಲ. ಪೊಡವಿಯಲ್ಲಿಯ ಮಣ್ಣಿನ ಹುಡಿಯ ಕಣಗಳನ್ನು ಎಣಿಸಬಹುದು. ಅಗಸದಲ್ಲಿಯ ಚಿಕ್ಕೆಗಳ ರಾಶಿಯನ್ನು ಗಣಿಸಬಹುದು. ಆದರೆ ಗಂಧಮಾದನ ಗಿರಿಯಲ್ಲಿರುವ ಪಂಗು ಮುನಿಪುಂಗವನಾದ ರೈಕ್ವ ಮಹರ್ಷಿಯ ಗುಣಪುಂಜಗಳನ್ನು ಮಾತ್ರ ಯಾರೂ ಗಣನೆ ಮಾಡಲಾರರು. ಕಾಲಿಲ್ಲದ ಆ ತಪಸ್ವಿ ಕರೆದ ಕೂಡಲೇ ಗಂಗಾ ಯಮುನಾದಿ ತೀರ್ಥಗಳು ಧಾವಿಸಿ ಬಂದು ಅವನು ಇದ್ದಲ್ಲಿಯೇ ಮಡುಗಟ್ಟಿ ನಿಂತಿವೆ. ಇಂಥ ಮಂತ್ರ ಸಿದ್ಧಿ ಇದ್ದ ರೈಕ್ವ ಮಹರ್ಷಿಯನ್ನು ನೀನು ಬೇಕಾದಷ್ಟು ಹೊಗಳು. ಅದನ್ನು ಬಿಟ್ಟು ಸಾಮಾನ್ಯ ಮಾನವನಾದ ಜಾನಶ್ರುತಿಯನ್ನು ಏಕೆ ಹೊಗಳುವಿ?

## ಹಂಸಗಳ ಮಾತಿನಿಂದ ಮಾನಸಿಕ ಹಿಂಸೆ

ಮುಂದೆ ಹೋಗುವ ಹಂಸವು ಹೀಗೆ ಹೇಳಿದ. ಮಾತುಗಳು ಉಪ್ಪರಿಗೆಯ ಮೇಲೆ ಹಂಸದುಪ್ಪಳದ ಸುಪ್ಪತ್ತಿಗೆಯಲ್ಲಿ ಪವಡಿಸಿದ ಜಾನಶ್ರುತಿ ಮಹಾರಾಜನಿಗೆ ನಿಚ್ಚಳವಾಗಿ ಕೇಳಿಬಂದವು. ಅದರಿಂದ ಅವನಿಗೆ ವಿಷಾದವೆನಿಸಿತು. ದೀರ್ಘವಾದ ನಿಟ್ಟುಸಿರನ್ನು ಬಿಟ್ಟು ಅವನು ಮನದಲ್ಲಿಯೇ ಯೋಚಿಸತೊಡಗಿದ- ''ಆಗಸದಲ್ಲಿ ಹಾರಾಡುವ ಈ ಅರಸಂಚೆಗಳು ನನ್ನನ್ನು ತುಚ್ಛ ಎಂದು ಹೇಳಿ ರೈಕ್ವಮುನಿಯನ್ನು 'ಅತ್ಯುಚ್ಚ ಮಹಾಜ್ಞಾನಿ, ತಪಸ್ಸಿದ್ಧ' ಎಂದು ಮುಂತಾಗಿ ಬಣ್ಣಿಸಿದವು. ಹಾರುವ ಹಕ್ಕಿಗಳಿಂದ ಕ್ಷುದ್ರನೆಂದು ಹೀಗಳೆಯಲ್ಪಟ್ಟ ನನ್ನ ಜೀವಿತಕ್ಕೆ ಧಿಕ್ಕಾರ. ನಾನು ಈಗಲೇ ಈ ರಾಜ್ಯ, ಮನೆಮಾರುಗಳನ್ನೆಲ್ಲ ತೊರೆದುಬಿಡುವೆ. ಮಹಾಜ್ಞಾನಿಯಾದ ರೈಕ್ವನಿಗೆ ಶರಣು ಹೋಗುವೆ. ಅವನು ಕಾಲಿನಿಂದ ಕುಂಟನಾದರೆ ನಾನು ಅಧ್ಯಾತ್ಮ ಕ್ಷೇತ್ರದಲ್ಲಿ ಜ್ಞಾನವಿಲ್ಲದ ಕುಂಟನೇ ಆಗಿರುತ್ತೇನೆ. ಜ್ಞಾನದ ಚರಣವಿಲ್ಲದೇ ಪಂಗುವಾದ ನಾನು ಈ ಅಧ್ಯಾತ್ಮ ಪಥದಲ್ಲಿ ಮುಂದುವರೆಯುವ ಬಗೆ ಹೇಗೆ? ಗುರಿಯನ್ನು ತಲುಪುವ ದಾರಿ ಯಾವುದು? ಆದುದರಿಂದ ನಾನು ರೈಕ್ವಮುನಿ ಇದ್ದಲ್ಲಿಗೆ ಹೋಗಿ ಅವನಿಂದ ಉಪದೇಶ ಪಡೆದು ಆತ್ಮಜ್ಞಾನ ಸಂಪಾದಿಸಬೇಕು.'' ಹೀಗೆ ಮನದಲ್ಲಿ ವಿಚಾರಿಸಿ ಆ ಜಾನಶ್ರುತಿ ಮಹಾರಾಜ ತನ್ನ ಸಾರಥಿಯನ್ನು ಕರೆದು ಹೇಳಿದ- ''ಸೂತನೇ, ನೀನು ಈಗಲೇ ಇಲ್ಲಿಂದ ಹೊರಡು. ಬ್ರಹ್ಮಜ್ಞಾನಿಯಾದ ರೈಕ್ವ ಮುನಿಯನ್ನು ಹುಡುಕಿಕೊಂಡು ಬಾ, ಅವನು ಎಲ್ಲಿಯೇ ಇರಲಿ. ಪತ್ತೆ ಹಚ್ಚಿ ಹುಡಿಕಿಕೊಂಡು ಬಾ, ಅವನು ಎಲ್ಲಿಯೇ ಇರಲಿ. ಪತ್ತೆ ಹಚ್ಚಿ ಹುಡುಕಿಕೊಂಡು ಬಂದು ನನಗೆ ಸಮಾಚಾರವನ್ನು ತಿಳಿಸು. ಅವನು ಭಾರತದೇಶದ ಯಾವುದಾದರೂ ಒಂದು ಪವಿತ್ರ ತೀರ್ಥ, ಕ್ಷೇತ್ರ, ಋಷಿ ಮುನಿಗಳ ಆಶ್ರಮ, ಪುಣ್ಯಾರಣ್ಯ, ಏಕಾಂತ, ವನಾಂತ, ವಿಜನ ಪರ್ವತ ಪ್ರಾಂತ, ಸತ್ಸಂಗ, ಜ್ಞಾನಸತ್ರ, ಯಜ್ಞ ವೇದಿಕೆ, ಹರಿಮಂದಿರ. ತಪಸ್ವಿ ಕುಟೀರ ಎಲ್ಲಿಯಾದರೂ ಇರಬಹುದು. ಅವನು ಹುಟ್ಟು ಹೆಳವ, ಬಂಡಿಯಲ್ಲಿ ಕುಳಿತು ತಾನೇ ಬಂಡಿ

ಹೊಡೆಯುತ್ತ ತೀರ್ಥಕ್ಷೇತ್ರ ಯಾತ್ರೆ ಮಾಡುತ್ತಾನೆ. ಹೂಡಿದ ಎತ್ತು ಬಳಲಿದಂತೆ ಕಂಡಾಗ ಅದನ್ನು ಮೇಯಲು ಬಿಟ್ಟು ತಾನು ಬಂಡಿಯ ಬುಡದಲ್ಲಿಯೇ ವಿಶ್ರಮಿಸುವದೂ ಉಂಟು.

ಅವನು ಇರುವದು ಬಯಲಲ್ಲಿಯೇ, ಬೇಸಿಗೆಯ ಬಿಸಿಲು ಹಾಗೂ ಬಿರುಗಾಳಿಗಳಿಂದ ಮೈ ಒಡೆದು ಕಜ್ಜಿಯಾಗಿ ರಕ್ತಕೀವು ಸೋರುತ್ತಲಿದ್ದರೂ ಮೈ ತುರಿಸುತ್ತಲೇ ಅವನು ದೇವರನ್ನು ಸ್ಮರಿಸುತ್ತ ಇರುತ್ತಾನೆ. ಅವನ ಚಿತ್ತ, ಯಾವಾಗಲೂ ದೇವರತ್ತ. ದೇಹದ ವ್ಯಾಧಿ ಬಾಧೆಗಳ ಪರಿವೆಯೇ ಇರುವದಿಲ್ಲ ಆ ತಪೋಮೂರ್ತಿಗೆ. ಅವನೊಂದು ಜ್ಞಾನದ ತವನಿಧಿ. ಹೇಗಾದರೂ ಮಾಡಿ ನೀನು ಆ ತಪೋನಿಧಿಯನ್ನು ಗೊತ್ತುಹಚ್ಚಿಕೊಂಡು ಬಾ.

'ಹಾಗೇ ಆಗಲಿ' ಎಂದು ಹೇಳಿದ ಜಾನಶ್ರುತಿಯ ಸಾರಥಿ. ರಾಜನ ಅಪ್ಪಣೆಯಂತೆ ಅವನು ತನ್ನ ರಥಕ್ಕೆ ಗಾಳಿ ವೇಗದಿಂದ ಓಡುವ ಕುದುರೆಗಳನ್ನು ಹೂಡಿದ. ಮನೋವೇಗದಿಂದ ಓಡಿದ. ಪವಿತ್ರವಾದ ತೀರ್ಥಕ್ಷೇತ್ರ ಪುಣ್ಯಾಶ್ರಮಗಳಲ್ಲಿ ಹುಡುಕಾಡಿದ. ಎಲ್ಲಿಯೂ ಸಿಗದೆ ಕೊನೆಗೆ ಗಂಧಮಾದನ ಬೆಟ್ಟಕ್ಕೆ ಹುಡುಕುತ್ತ ಬಂದ. ಅಲ್ಲಿ ಒಂದು ಗಾಡಿಯಲ್ಲಿ ಓರ್ವ ಮನುಷ್ಯ ಕುಳಿತು ಮೈಕೆರೆಯುತ್ತಿದ್ದ. ಭಗವನ್ನಾಮವನ್ನು ಜಪಿಸುತ್ತಲಿದ್ದ. 'ಬಂಡಿಯಲ್ಲಿ ಕುಳಿತು ಅಖಂಡ ಭಗವನ್ನಾಮ ಸಂಕೀರ್ತನೆಯನ್ನು ಗೈಯುವ ಈ ಕೊಳಕು ಮನುಷ್ಯನೇ ಬ್ರಹ್ಮಜ್ಞಾನಿ ರೈಕ್ವ ಇರಬಹುದು'' ಎಂದು ಸಾರಥಿಯು ಇವನ ಬಳಿಗೆ ಬಂದ. ಅವನಿಗೆ ಸಾಷ್ಟಾಂಗ ವಂದನೆಯನ್ನು ಮಾಡಿದ. ವಿನಯದಿಂದ ಅವನ ಹತ್ತಿರ ಹೋಗಿ ಕುಳಿತ ಕೈ ಮುಗಿದು ಕೇಳಿದ. ''ಪೂಜ್ಯರೇ, ಬಂಡಿ ಹೊಡೆಯುವ ಬ್ರಹ್ಮಜ್ಞಾನಿ ರೈಕ್ವ ಮುನಿಗಳು ತಾವೇ. ಅಹುದೇ!''

**ರೈಕ್ವ:-** ಅಹುದು. ನಾನೇ ಚಕ್ಕಡಿ ಹೊಡೆಯುವ ರೈಕ್ವ.

ಅದನ್ನು ಕೇಳಿಕೊಂಡು ಸಾರಥಿಯು ವಾಯುವೇಗದ ಕುದುರೆಗಳನ್ನು ಓಡಿಸುತ್ತ ''ಜಾನಶ್ರುತಿ'' ಮಹಾರಾಜನಿಗೆ ಸಮಾಚಾರವನ್ನು ತಿಳಿಸಿದ. ಆಗ ಮಹಾರಾಜನು ಸಂತೋಷ ದಿಂದ ಉಬ್ಬಿಹೋದ. ಆ ಬ್ರಹ್ಮಜ್ಞಾನಿಯನ್ನು ಕಂಡುಹಿಡಿದ ತನ್ನ ಸಾರಥಿಗೆ ಪಾರಿತೋಷಕವಿತ್ತ. ತಾನೂ ಹೊರಟ ಆ ರೈಕ್ವಮುನಿಯ ಬಳಿಗೆ. ಒಂದು ಬಂಡಿಯಲ್ಲಿ ಹೇರಳವಾಗಿ ಹಣ ಮುತ್ತು ರತ್ನ ಬಂಗಾರಗಳನ್ನು ಹೇರಿಕೊಂಡು ಹೇಸರಗತ್ತೆಗಳನ್ನು ಹೂಡಿ ಅದನ್ನು ವೇಗದಿಂದ ಓಡಿಸುತ್ತ ಆರುನೂರು ಹಸುಗಳೊಂದಿಗೆ ಗಂಧಮಾದನ ಪರ್ವತಕ್ಕೆ ಆಗಮಿಸಿದ. ಅಲ್ಲಿಗೆ ಬಂದು ಬಂಡಿಯ ಬುಡದಲ್ಲಿ ಕುಳಿತ ಬ್ರಹ್ಮಜ್ಞಾನಿಗೆ ತಲೆಬಾಗಿ ವಂದಿಸಿದ. ತಾನು ತಂದ ಆ ಕಾಮಧೇನುಗಳ ವೃಂದವನ್ನು ಮತ್ತು ಒಂದು ಬಂಡಿ ತುಂಬ ಬಂಗಾರದ ನಗ ನಾಣ್ಯಗಳನ್ನು ಅವನ ಮುಂದೆ ಸುರಿದ. ಕೈಮುಗಿದು ಕೇಳಿಕೊಂಡ.
ಜಾನಶ್ರುತಿ : ಪೂಜ್ಯರೇ! ಈ ಹಸು ಹಾಗೂ ಎಲ್ಲ ಐಶ್ವರ್ಯ ಹಾಗೂ ಈ ಅಗಣ್ಯ ನಗ ನಾಣ್ಯಗಳೆಲ್ಲವೂ ತಮ್ಮ ಪಾದಾರವಿಂದಕ್ಕೆ ಸಮರ್ಪಿತ. ಇವೆಲ್ಲವುಗಳನ್ನು ತಾವು ಸ್ವೀಕರಿಸಿರಿ. ನನಗೆ ಬ್ರಹ್ಮಜ್ಞಾನವನ್ನು ಉಪದೇಶಿಸಿರಿ.

**ರೈಕ್ವ:-** ರಾಜನೇ, ಈ ಎಲ್ಲ ಹಸುಗಳನ್ನು ನೀನೇ ಇಟ್ಟುಕೋ. ಬಂಗಾರ ತುಂಬಿದ ಬಂಡಿ, ನಗನಾಣ್ಯ, ಮುತ್ತು ರತ್ನ ಹೇರಿದ ಈ ರಥ, ಹಾಗೂ ಎಲ್ಲ ಐಶ್ವರ್ಯವೂ ನಿನ್ನ ಬಳಿಯಲ್ಲಿಯೇ ಇರಲಿ. ಇದನ್ನೆಲ್ಲ ತೆಗೆದುಕೊಂಡು ವಿರಕ್ತನಾದ ನಾನು ಏನು ಮಾಡಬೇಕಾಗಿದೆ? ಕಲ್ಪಜೀವಿಯಾದ ನನಗೆ ಅಲ್ಪ ಕಾಲ ಚಲಾವಣೆಯಲ್ಲಿರುವ

ಈ ನಿನ್ನ ನಗ ನಾಣ್ಯಗಳಿಂದ ಏನು ಆಗಬೇಕಾಗಿದೆ? ನನ್ನ ನಾಣ್ಯ ಪುಣ್ಯ. ನನ್ನ ಸಂಪತ್ತು ಜ್ಞಾನ. ನನ್ನ ಸರ್ವಸ್ವ ಪರಬ್ರಹ್ಮ. ಅದಕ್ಕೆ ಇದಾವುದರ ಅಗತ್ಯವೂ ಇಲ್ಲ. ಇವಾವುದಕ್ಕೂ ಅದು ಲಭ್ಯವಲ್ಲ.

**ಜಾನಶ್ರುತಿ:-** ಭಗವನ್, ತಮ್ಮ ಮಾತು ನಿಜ. ತಮ್ಮ ಬಳಿಯಲ್ಲಿ ಇರುವ ಬ್ರಹ್ಮಜ್ಞಾನಕ್ಕೆ ಬೆಲೆಯೇ ಇಲ್ಲ. ನಾನು ತಂದ ಈ ಬಂಗಾರ ಮುತ್ತು ರತ್ನ ವೈಭವ ಎಲ್ಲವೂ ಆ ನಿಮ್ಮ ಬ್ರಹ್ಮಜ್ಞಾನದ ಮೂಲ್ಯಕ್ಕೆ ಅಲ್ಪಾಂಶದಲ್ಲಿಯೂ ಸರಿಸಾಟಿ ಆಗಲಾರವು. ನನ್ನ ಈ ಕ್ಷುದ್ರವಾದ ಕಾಣಿಕೆಯನ್ನು, ಈ ನನ್ನ ಧನ ಧೇನು ಮುಂತಾದವುಗಳನ್ನು ಬೇಕಾದರೆ, ಸ್ವೀಕರಿಸಿರಿ. ಬೇಡವಾದರೆ ಪರಿತ್ಯಜಿಸಿರಿ. ಆದರೆ ಆ ದಿವ್ಯ ಬ್ರಹ್ಮಜ್ಞಾನವನ್ನು ಮಾತ್ರ ತಾವು ನನಗೆ ನಿರೂಪಿಸಿರಿ. ''ಎಲ್ಲವೂ ಭಗವದಧೀನ. ಭಗವನ್ಮಯ. ಅವನ ಕೈವಶ.'' ಎಂಬ ಈ ಅದ್ವೈತಜ್ಞಾನವನ್ನು ತಾವು ಉಪದೇಶ ಮಾಡಿರಿ.''

**ರೈಕ್ವ:-** ''ರಾಜನ್, ಬ್ರಹ್ಮಜ್ಞಾನವನ್ನು ಕಂಡ ಕಂಡವರಿಗೆ ಉಪದೇಶ ಮಾಡಲು ಬರುವದಿಲ್ಲ. ಯೋಗ್ಯರಾದ ಅಧಿಕಾರಿಗಳಿಗೆ ಮಾತ್ರ ಆ ಬ್ರಹ್ಮಜ್ಞಾನವನ್ನು ಉಪದೇಶ ಮಾಡಬೇಕಾಗುವದು. ಅದಕ್ಕೆ ಮುಖ್ಯ ವೈರಾಗ್ಯ. ''ಸಂಸಾರದಲ್ಲಿ ವಿರಕ್ತನಾಗಿ ಬ್ರಹ್ಮಜ್ಞಾನಕ್ಕೆ ಪ್ರತಿಬಂಧಕವಾದ ಪಾಪರಾಶಿಯನ್ನೆಲ್ಲ ನಾಶಮಾಡಿಕೊಂಡ ಪುಣ್ಯಾತ್ಮರಿಗೆ ಮಾತ್ರ ಈ ಬ್ರಹ್ಮಜ್ಞಾನವನ್ನು ಉಪದೇಶಿಸಬೇಕು'' ಎಂದು ಶಾಸ್ತ್ರದ ಶಾಸನ. ನಿನಗೆ ಸಂಸಾರದಲ್ಲಿ ವೈರಾಗ್ಯ ಎಂದೋ ಹುಟ್ಟಿದೆ. ಬ್ರಹ್ಮಜ್ಞಾನದ ವಿಷಯದಲ್ಲಿ ಜಿಜ್ಞಾಸೆಯೂ ಅಂಕುರಿಸಿದೆ ನಿನ್ನ ಮನಸ್ಸಿನಲ್ಲಿ. ಆದರೆ ಪ್ರತಿಬಂಧಕವಾದ ಆ ಪಾಪದರಾಶಿಯು ಮಾತ್ರ ಸವೆದಿಲ್ಲ. ಆ ಪಾಪದ ಬೆಟ್ಟ ಕರಗುವವರೆಗೆ ನೀನು ಅಧಿಕಾರಿ ಆಗಲಾರೆ ಆ ಬ್ರಹ್ಮಜ್ಞಾನಕ್ಕೆ. ಆದುದರಿಂದ ನೀನು ಇಲ್ಲಿ ನನ್ನ ಮಂತ್ರಪೂತವಾದ ಆವಾಹನೆಯಿಂದ ಆಗಮಿಸಿ ಮಡುಗಟ್ಟಿ ನಿಂತುಕೊಂಡ ಯಮುನಾ ತೀರ್ಥ ಗಂಗಾತೀರ್ಥ ಗಯಾತೀರ್ಥಗಳಲ್ಲಿ ಸ್ನಾನಮಾಡು. ಈ ತೀರ್ಥತ್ರಯಿಯಲ್ಲಿ ಸ್ನಾನದಿಂದ ನಿನ್ನ ಪ್ರಾರಬ್ಧ ಕರ್ಮಗಳೆಲ್ಲವೂ ಸವೆದು ಹೋಗುವವು. ನಿನ್ನ ಅಂತಃಕರಣವೆಲ್ಲವೂ ಪರಿಶುದ್ಧವಾಗುವದು. ಆ ಬಳಿಕ ನೀನು ಬ್ರಹ್ಮಜ್ಞಾನೋಪದೇಶಕ್ಕೆ ಅರ್ಹನಾದ ಅಧಿಕಾರಿ ಆಗುವೆ. ಅನಂತರ ನಾನು ನಿನಗೆ ಆ ಜ್ಞಾನೋಪದೇಶವನ್ನು ಮಾಡುವೆನು.''

ರೈಕ್ವ ಮುನಿಯ ಆದೇಶದಂತೆ ರಾಜ್ಯಾಧಿಕಾರವನ್ನು ತೊರೆದ ಜಾನಶ್ರುತಿ. ನಂತರ ಆ ಮಹಾರಾಜ ಆ ಮೂರೂ ತೀರ್ಥಗಳಲ್ಲಿ ಸ್ನಾನಮಾಡಿದ. ಇದರಿಂದ ಅವನ ಪ್ರಾರಬ್ಧ ಪಾಪರಾಶಿಯೆಲ್ಲವೂ ಕ್ಷಯಿಸಿತು. ಅಂತಃಕರಣ ಪರಿಶುದ್ಧವಾಯಿತು. ತ್ರಿಸ್ಥಳೀ ತೀರ್ಥಸ್ನಾನದಿಂದ ಪವಿತ್ರಾತ್ಮನಾದ ಜಾನಶ್ರುತಿಯು ರೈಕ್ವಗುರುಗಳ ಬಳಿಗೆ ಬಂದ. ಅವರು ಅವನಿಗೆ ಆನಂದದಿಂದ ಬ್ರಹ್ಮೋಪದೇಶವನ್ನು ಮಾಡಿದರು. ಅದರಿಂದ ಜಾನಶ್ರುತಿಗೆ ಬಹುದಿನದಿಂದ ಬೇಡಿಬಯಸಿದ ಪರಬ್ರಹ್ಮ ವಿಷಯಕವಾದ ದಿವ್ಯ ಜ್ಞಾನವು ಉದಿಸಿ ಬಂದಿತು. ಆದ್ದರಿಂದ ಅವನು ನಿರಂತರ ಧ್ಯಾನ ಸಮಾಧಿಯಿಂದ ಬ್ರಹ್ಮೋಪಾಸನೆಯನ್ನು ಮಾಡಿದ. ಈ ಸಂತತ ಭಗವದಾರಾಧನೆಯಿಂದ ಜಾನಶ್ರುತಿ ಮಹಾರಾಜನು ಬ್ರಹ್ಮಾಪರೋಕ್ಷವನ್ನು ಹೊಂದಿ ಧನ್ಯನಾದ.

## ಕೋಟಿ ತೀರ್ಥದ ಮಹಿಮೆ.

**ಸೂತ:-** ಯಮುನಾ ಗಂಗಾ ಗಯಾತೀರ್ಥದಲ್ಲಿ ಸ್ನಾನಮಾಡಿ ಯಾತ್ರಿಕರು ಕೋಟಿತೀರ್ಥದ ಯಾತ್ರೆಯನ್ನು ಮಾಡಬೇಕು. ಈ ಪುಣ್ಯತೀರ್ಥವು ದುಃಸ್ವಪ್ನ ನಾಶಕ ಪಾಪಪರಿಹಾರಕ. ಹಾಗೂ ವಿಘ್ನ ವಿನಾಶಕ.

ಪೂರ್ವಕಾಲದಲ್ಲಿ ದಶರಥ ನಂದನನಾದ ಶ್ರೀರಾಮಚಂದ್ರನು ಈ ಗಂಧಮಾದನ ಗಿರಿಶೃಂಗದಲ್ಲಿ ಲೋಕಾನುಗ್ರಹಕ್ಕಾಗಿ ಒಂದು ಶಿವಲಿಂಗವನ್ನು ಸ್ಥಾಪನೆ ಮಾಡಿದ. ಆ ಲಿಂಗಕ್ಕೆ ಅಭಿಷೇಕ ಮಾಡಲಿಕ್ಕಾಗಿ ಸಿಹಿಯಾದ ತಿಳಿನೀರು ಬೇಕು ಎಂದು ರಾಮನು ಅತ್ತಿತ್ತ ಹುಡುಕಾಡಿದ. ಅಂಥ ಸ್ವಾದು ಸ್ವಚ್ಛ ಸಲಿಲವು ಸಮೀಪದಲ್ಲಿ ಎಲ್ಲಿಯೂ ಅವನಿಗೆ ದೊರೆಯಲಿಲ್ಲ. ಆಗ ಶ್ರೀರಾಮಚಂದ್ರ ಪ್ರಭು ತನ್ನ ಬಿಲ್ಲಿನ ತುದಿಯಿಂದ ನೆಲದ ಎದೆಯನ್ನು ಬಗೆದು ಅಗೆದ. ದೊಡ್ಡ ತೆಗ್ಗನ್ನು ತೋಡಿದ. ತನ್ನ ಧನುಷ್ಕೋಟಿಯಿಂದ ಪಾತಾಳದವರೆಗೂ ವಿವರವನ್ನು ಮಾಡಿ ಪಾತಾಳಗಂಗೆಯನ್ನು ಮೇಲಕ್ಕೆ ತಂದ. ಆ ಪಾತಾಳಗಂಗೆಯ ನೀರಿನಿಂದಲೇ ಶಿವಲಿಂಗಕ್ಕೆ ತನ್ನ ಕೈಯಿಂದಲೇ ಅಭಿಷೇಕ ಮಾಡಿದ. ಅವನು ತನ್ನ ಬಿಲ್ಲಿನ ತುದಿಯಿಂದ ತೆಗ್ಗು ತೋಡಿ ತೀರ್ಥವನ್ನು ನಿರ್ಮಿಸಿದ್ದರಿಂದ ಇದಕ್ಕೆ ಧನುಷ್ಕೋಟತೀರ್ಥ ಅಥವಾ ಕೋಟಿತೀರ್ಥ ಎಂಬ ಹೆಸರು ಬಂದಿದೆ. ಈ ಕೋಟ ತೀರ್ಥದಲ್ಲಿ ಸ್ನಾನಮಾಡುವದರಿಂದ ಮಾನವರ ಕೋಟಿ ಜನ್ಮಾರ್ಜಿತ ಪಾಪಗಳೆಲ್ಲವೂ ನಷ್ಟವಾಗಿ ಹೋಗುವವು. ಈ ಸೇತುಬಂಧದಲ್ಲಿ ಇರುವ ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿದ ಮೇಲೆಯೂ ನಾಶವಾಗದೇ ಇರುವ ಮಹಾಮಹಾ ಪಾಪಗಳೆಲ್ಲವೂ ಈ ಕೋಟಿ ತೀರ್ಥಸ್ನಾನದಿಂದ ನಷ್ಟವಾಗಿ ಹೋಗುವವು. ಹಿಂದೆ ಪೂರ್ವಕಾಲದಲ್ಲಿ ಪ್ರಭು ಶ್ರೀರಾಮಚಂದ್ರನು ರಾಮೇಶ್ವರನಿಗೆ ಅಭಿಷೇಕಮಾಡಲಿಕ್ಕಾಗಿ ನಿರ್ಮಿಸಿದ ಈ ಕೋಟಿತೀರ್ಥದಲ್ಲಿ ಆ ಗಂಗಾದಿ ತೀರ್ಥಗಳೆಲ್ಲವೂ ನೆಲೆಸಿರುತ್ತವೆ.

## ಆಕಾಶವಾಣಿ ನುಡಿದ ಕಣಿ

ರಾಮಾವತಾರದ ಅನಂತರ ಯುಗ ಪರಿವರ್ತನವಾದ ನಂತರ ದ್ವಾಪರಯುಗದಲ್ಲಿ ಯದು ವಂಶದಲ್ಲಿ ವಿಖ್ಯಾತನಾದ ಶೂರಸೇನನಿಗೆ ವಸುದೇವ ಎಂಬ ಯಾದವನು ಪುತ್ರನಾಗಿ ಜನಿಸಿದನು. ಈ ವಸುದೇವನಿಗೆ ಭೋಜಕುಲದ ಆ ದೇವಕನ ಮಗಳಾದ ದೇವಕಿಯನ್ನು ಮದುವೆಮಾಡಿ ಕೊಡಲಾಗಿತ್ತು. ವಿವಾಹವಾದ ಬಳಿಕ ವಸುದೇವನು ತನ್ನ ನವವಧು ದೇವಕಿಯೊಂದಿಗೆ ರಥಾರೂಢನಾಗಿ ತನ್ನ ಮನೆಗೆ ಹೊರಟಿದ್ದ. ಉಗ್ರಸೇನನ ಮಗನಾದ ಕಂಸ ಪ್ರೀತಿಯಿಂದ ಸ್ವಯಂ ತಾನೇ ಸಾರಥಿಯಾಗಿ ರಥವನ್ನು ನಡೆಸುತ್ತಿದ್ದ. ಆಗ ಆಕಾಶವಾಣಿಯಾಯಿತು. - ''ಕಂಸ, ನೀನು ಈಗ ನಿನ್ನ ತಂಗಿ ದೇವಕಿ ಹಾಗೂ ತಂಗಿಯ ಗಂಡ ವಸುದೇವನನ್ನು ರಥದಲ್ಲಿ ಕರೆದುಕೊಂಡು ಹೊರಟಿರುವಿ. ಈ ನಿನ್ನ ಸೋದರಿಯ ಹೊಟ್ಟೆಯಿಂದ ಹುಟ್ಟಲಿರುವ ಎಂಟನೆಯ ಮಗು ನಿನ್ನ ಗಂಟಲಗಾಣವಾಗುವುದು. ಈ ದೇವಕೀ ದೇವಿಯ ಅಷ್ಟಮ ಗರ್ಭದಿಂದಲೇ ನಿನಗೆ ಮೃತ್ಯು.''

ಆಕಾಶವಾಣಿಯ ಈ ಭವಿಷ್ಯ ವಚನವನ್ನು ಕೇಳಿ ಕೆಂಡದ ಉಂಡೆಯಾದ ಆ ಕಲಿ ಕಂಸ. ಸೋದರಿಯ ಹೊಟ್ಟೆಯಿಂದ ಮಗು ಹುಟ್ಟುವದಕ್ಕೆ ಅವಕಾಶವೇ ಆಗದಂತೆ ಇವಳನ್ನು

ಇಲ್ಲಿಯೇ ಕೊಂದು ಹಾಕಬೇಕೆಂದು ನಿರ್ಧರಿಸಿದ. ಖಡ್ಗವನ್ನು ಮೇಲೆತ್ತಿದ್ದ. ಆಗ ವಸುದೇವ ಮುಂದೆ ಬಂದ. ದೈನ್ಯದಿಂದ ಹೇಳಿಕೊಂಡ.- ''ಕಂಸರಾಜ, 'ಇವಳ ಹೊಟ್ಟೆಯಿಂದ ಹುಟ್ಟುವ ಎಂಟನೆಯ ಮಗುವಿನಿಂದ ನಿನಗೆ ಮೃತ್ಯು' ಎಂದು ಆಕಾಶವಾಣಿ ಆಗಿದೆಯಷ್ಟೇ! ಇವಳ ಹೊಟ್ಟೆಯಿಂದ ಹುಟ್ಟುವ ಎಲ್ಲ ಮಕ್ಕಳನ್ನೂ ನಾನು ನಿನಗೆ ತಂದು ಒಪ್ಪಿಸುತ್ತೇನೆ. ಅವುಗಳನ್ನೆಲ್ಲ ನೀನು ಕೊಂದುಹಾಕು ಒಂದೊಂದಾಗಿ. ವ್ಯರ್ಥವಾಗಿ ಈ ನಿನ್ನ ಬಡಪಾಯಿ ಭಗಿನಿಯನ್ನು ಏಕೆ ಕೊಲ್ಲುತ್ತಿ? ಈ ನಿರುಪದ್ರವಿಯಾದ ನನ್ನ ಮಡದಿ ಹಾಗೂ ನಿನ್ನ ಸೋದರಿಯು ನಿನ್ನ ದಯೆಯಿಂದ ಬದುಕಿ ಉಳಿಯಲಿ. ಆಕಾಶವಾಣಿಯು ಇವಳಿಂದ ನಿನಗೆ ಮೃತ್ಯು ಎಂದು ಹೇಳಲಿಲ್ಲ ತಾನೆ?''

ಇದನ್ನು ಕೇಳಿ ಕಂಸ ತನ್ನ ಖಡ್ಗವನ್ನು ಒರೆಗಾಣಿಸಿದ. ಆ ವಸುದೇವ ದೇವಕಿಯರಿಬ್ಬರನ್ನೂ ಕಾರಾಗೃಹದಲ್ಲಿ ಇರಿಸಿದ. ಅಲ್ಲಿಯೇ ದೇವಕಿಯು ಆರು ಮಕ್ಕಳಿಗೆ ಜನ್ಮವಿತ್ತಳು. ಹುಟ್ಟಿದ ಕೂಡಲೇ ಆ ಹಸುಗೂಸುಗಳನ್ನೆಲ್ಲ ತನ್ನ ಮಾತಿನಂತೆ ವಸುದೇವ ಕಂಸನಿಗೆ ತಂದು ಒಪ್ಪಿಸಿದ. ಆ ಕ್ರೂರ ಕರ್ಮಿಯು ಒಂದೊಂದಾಗಿ ಆರೂ ಕಂದಮ್ಮಗಳನ್ನು ಕೊಂದು ಹಾಕಿದ. ಅನಂತರ ದೇವಕಿಯ ಗರ್ಭದಲ್ಲಿ ಆದಿಶೇಷ ಸಪ್ತಮ ಗರ್ಭ ರೂಪದಿಂದ ಪ್ರವೇಶಮಾಡಿದ. ವಿಷ್ಣುವಿನ ಆಜ್ಞೆಯಿಂದ ಮಾಯಾದೇವಿಯು ದೇವಕಿಯ ಆ ಸಪ್ತಮ ಗರ್ಭವನ್ನು ನಂದಗೋಕುಲದಲ್ಲಿ ಇರುವ ವಸುದೇವನ ಮತ್ತೊಬ್ಬ ಮಡದಿಯಾದ ರೋಹಿಣಿಯ ಗರ್ಭದಲ್ಲಿ ಸ್ಥಾಪಿಸಿದಳು 'ಜನರಲ್ಲಿ ದೇವಕಿಯ ಏಳನೆಯ ಗರ್ಭವು ಬಿದ್ದು ಹೋಯಿತು' ಎಂದು ಸುದ್ದಿ ಆಯಿತು. ಹೀಗೆ ದೇವಕೀ ದೇವಿಯ ಸಪ್ತಮ ಗರ್ಭಪಾತವಾದ ನಂತರ ಭಗವಾನ್ ಶ್ರೀಹರಿಯು ದೇವಕಿಯ ಎಂಟನೆಯ ಗರ್ಭರೂಪದಿಂದ ಉದರದಲ್ಲಿ ಪ್ರವೇಶಿಸಿದ. ಹತ್ತು ತಿಂಗಳು ಕಳೆದ ಬಳಿಕ ಭಗವಾನ್ ವಿಷ್ಣುವು ಶಂಖಚಕ್ರಗದಾಪದ್ಮ ಧಾರಿಯಾಗಿ ದೇವಕಿಯ ಉದರದಿಂದ ಪ್ರಾದುರ್ಭೂತನಾದ.

ತಲೆಯಮೇಲೆ ರತ್ನ ಖಚಿತವಾದ ಕಿರೀಟ. ವಕ್ಷಸ್ಥಳದಲ್ಲಿ ಕೌಸ್ತುಭ. ಕೊರಳಲ್ಲಿ ವನಮಾಲೆ. ಕಟಿಯಲ್ಲಿ ಪೀತಾಂಬರ. ಶ್ರೀಕಂಠದಲ್ಲಿ ವೈಜಯಂತೀ ಹಾರ ಮುಂತಾದವುಗಳು ಶೋಭಿಸುತ್ತಿದ್ದವು. ವಸುದೇವ ದೇವಕಿಯರು ಭಕ್ತಿಯಿಂದ ಆ ಭಗವಂತನನ್ನು ಸ್ತೋತ್ರ ಮಾಡಿದರು. ಅವರ ಸ್ತೋತ್ರದಿಂದ ಪ್ರೀತನಾದ ಶ್ರೀಹರಿಯು ಮಂದಹಾಸ ಸುಂದರ ಮುಖದಿಂದ ಮಾತನಾಡಿದ ಶ್ರೀಹರಿ-''ತಾಯಿ ತಂದೆಗಳೇ, ನೀವು ಹೆದರಬೇಡಿರಿ. ದುಷ್ಟನಾದ ಕಂಸನನ್ನು ನಾನು ವಧಗೈಯುತ್ತೇನೆ. ನಾನು ಅವತಾರ ಮಾಡಿದ್ದು ಇಂಥ ದುಷ್ಟರ ಸಂಹಾರಕ್ಕಾಗಿಯೇ. ನಾನು ಈಗ ಮಗುವಿನ ರೂಪದಿಂದ ಇಲ್ಲಿ ಮಲಗುತ್ತೇನೆ. ಅಲ್ಲಿ ನಂದಗೋಪನ ಮನೆಯಲ್ಲಿ ಯಶೋದೆಯು ಇದೀಗ ಒಂದು ಹೆಣ್ಣು ಮಗುವಿಗೆ ಜನ್ಮವಿತ್ತಿದ್ದಾಳೆ. ಅವಳೇ ಯೋಗಮಾಯೆ. ಈಗ ನೀನು ಮಗುವಾದ ನನ್ನನ್ನು ಎತ್ತಿಕೊಂಡು ನಂದಗೋಕುಲಕ್ಕೆ ಹೋಗು. ಅಲ್ಲಿ ಮಲಗಿದ ಯಶೋದೆಯ ಪಕ್ಕದಲ್ಲಿ ನನ್ನನ್ನು ಮಲಗಿಸು. ಯಶೋದೆಯು ಇದೀಗ ಹಡೆದ ಆ ಹೆಣ್ಣು ಮಗುವನ್ನು ಇಲ್ಲಿಗೆ ಕರೆದುಕೊಂಡು ಬಾ.''

ವಸುದೇವನು ಆ ಬಂದೀಖಾನೆಯಲ್ಲಿ ಹುಟ್ಟಿದ ಶ್ರೀಹರಿಯ ಆದೇಶದಂತೆ ಬಾಲಕೃಷ್ಣನನ್ನು ತಲೆಯಮೇಲೆ ಹೊತ್ತುಕೊಂಡು ನಡೆದ. ಸೆರಮನೆಯ ಬಾಗಿಲು ತಾನಾಗಿಯೇ ತೆರೆಯಿತು. ಪ್ರಹರಿಗಳೆಲ್ಲರೂ ನಿದ್ರಾಮುದ್ರಿತ ಲೋಚನರು. ಶ್ರಾವಣ ಕೃಷ್ಣ

ಪಕ್ಷದ ಅಷ್ಟಮಿ ತಿಥಿ. ಸರಿ ರಾತ್ರಿ. ಆಕಾಶದ ತುಂಬ ಕಪ್ಪು ಮೋಡಗಳು ಹೆಪ್ಪುಗಟ್ಟಿದ್ದವು. ತುಂತುರು ಮಳೆ ಹನಿಯುತ್ತಿತ್ತು. ದಾರಿಯಲ್ಲಿ ಯಮುನಾ ನದಿ ತುಂಬಿ ಹರಿಯುತ್ತಿತ್ತು. ಆದರೂ ಭಗವಂತನಿಗೆ ದಾರಿಮಾಡಿಕೊಟ್ಟ ಆ ನದಿಯನ್ನು ದಾಟಿ ವಸುದೇವ ನೇರವಾಗಿ ನಂದಗೋಕುಲಕ್ಕೆ ಬಂದ. ಯಶೋದೆ ಹಡೆದು ಮಲಗಿದ ಹಟ್ಟಿಯಲ್ಲಿ ಹೊಕ್ಕ.ಹಡೆದು ಹೈರಾಣ ಆದ ಯಶೋದೆಗೆ ಗಾಢ ನಿದ್ರೆ. ವಸುದೇವ ಸದ್ದಿಲ್ಲದೇ ಗೋಕುಲದ ಜನರು ನಿದ್ದೆಯಲ್ಲಿ ಇದ್ದಾಗ ತನ್ನ ಗಂಡು ಮಗುವನ್ನು ಅವಳ ಪಕ್ಕದಲ್ಲಿ ಮಲಗಿಸಿದ. ಅವಳ ಮುದ್ದಾದ ಹೆಣ್ಣು ಮಗುವನ್ನು ಎತ್ತಿಕೊಂಡು ಬಂದ ದಾರಿಯಿಂದ ಬಂದೀಖಾನೆಗೆ ಮರಳಿದ. ತೆರೆದ ಬಾಗಿಲು ಮುಚ್ಚಿಕೊಂಡವು.

ದೇವಕಿಯ ಮಡಿಲಲ್ಲಿ ಯಶೋದೆಯ ಸುಂದರವಾದ ಹೆಣ್ಣು ಕೂಸನ್ನು ತಂದು ಇರಿಸಿದ. ಕೂಡಲೇ ರೋದಿಸತೊಡಗಿತು ಆ ಕನ್ಯಾರತ್ನ. ಕೂಸಿನ ಅಳುವ ಧ್ವನಿ ಕೇಳಿ ಓಡಿಬಂದ ಕಂಸ. ಬಾಣಂತಿಯ ಕೋಣೆಯಲ್ಲಿಯೇ ಗಾಬರಿಗೆಟ್ಟು ನುಗ್ಗಿದ. ಆ ಕನ್ಯೆಯನ್ನು ತಾಯಿಯ ಮಡಿಲಿನಿಂದ ಕಸಿದುಕೊಂಡ. ಹೊರಗೆ ಬಂದು ಆ ಎಳೆಯ ಮಗುವನ್ನು ಆ ಹೆಬ್ಬಂಡೆಗೆ ಅಪ್ಪಳಿಸಿದ. ಆದರೆ ಆ ಮಗು ದುಷ್ಟ ಕಂಸನ ಕೈಯಿಂದ ಕೊಸರಿಕೊಂಡು ಮೇಲೆ ಮುಗಿಲಿಗೆ ಹಾರಿತು. ಶಸ್ತ್ರಾಸ್ತ್ರ ಸುಸಂಪನ್ನವಾದ ಎಂಟು ಭುಜಗಳಿಂದ ಮಹಾದೇವಿಯ ರೂಪವಾಂತು ಪ್ರಕಟಳಾಗಿ ಕಂಸನನ್ನೂ ಕೂಗಿ ಹೇಳಿದಳು- ''ಪಾಪಿ ಕಂಸ, ನಿನ್ನನ್ನು ಸಂಹರಿಸಲಿಕ್ಕಾಗಿ ಹುಟ್ಟಿದ ಮಗು ಬೇರೆ ಕಡೆ ಸುರಕ್ಷಿತವಾಗಿ ಬೆಳೆಯುತ್ತಲಿದೆ. ನಿನ್ನ ಮೃತ್ಯುವನ್ನು ನೀನು ಹುಡುಕುತ್ತ ಇರು.'' ಹೀಗೆ ಹೇಳಿ ಅಷ್ಟಭುಜ ಯುಕ್ತಳಾದ ಆ ಯೋಗ ಮಾಯಾದೇವಿಯು ತನ್ನ ದಿವ್ಯಸ್ಥಾನಕ್ಕೆ ಹೊರಟು ಹೋದಳು.

## ಕೃಷ್ಣನ ಬಾಲವಿಹಾರ, ದೈತ್ಯರ ಸಂಹಾರ

ಆ ಮಹಾದೇವಿಯ ವಚನವನ್ನು ಕೇಳಿ ಗಾಬರಿಯಾಯಿತು ಕಂಸನಿಗೆ. ಅವನು ಪೂತನಾ ಮೊದಲಾದ ರಕ್ಕಸಿಯರನ್ನೂ ಹಾಗೂ ತೃಣಾಸುರ, ವತ್ಸಾಸುರ, ಕೇಶೀ, ವೃಷಭಾಸುರ ಮುಂತಾದ ದೈತ್ಯರನ್ನೂ ಕರೆದು ''ಭೂಮಂಡಲದಲ್ಲಿ ಇರುವ ಚಿಕ್ಕ ಚಿಕ್ಕ ಮಕ್ಕಳನ್ನೆಲ್ಲ ನಾಶಪಡಿಸಿರಿ'' ಎಂದು ಅಪ್ಪಣೆಕೊಟ್ಟ. ಅವರೆಲ್ಲರೂ ಕಂಡಲ್ಲೆಲ್ಲ ಹಸುಗೂಸುಗಳನ್ನು ಕೊಲ್ಲುತ್ತ ನಂದಗೋಕುಲಕ್ಕೆ ಹೋಗಿ ಬಾಲಕೃಷ್ಣನಿಂದ ಒಬ್ಬರೊಬ್ಬರಾಗಿ ಹತಪತಿತರಾದರು. ಶ್ರೀಕೃಷ್ಣ ಬಲರಾಮರು ಗೋಕುಲದಲ್ಲಿ ಬಾಲಕ್ರೀಡೆಗಳನ್ನು ಆಡುತ್ತ ತಮ್ಮನ್ನು ಕೊಲ್ಲಲು ಬಂದ ರಕ್ಕಸರನ್ನೆಲ್ಲ ಯಮಲೋಕಕ್ಕೆ ಅಟ್ಟುತ್ತಿದ್ದರು. ಯಮುನಾ ನದಿಯ ದಂಡೆಯ ಹುಲ್ಲುಗಾವಲಿನಲ್ಲಿ ತುರುಕರುಗಳನ್ನು ಮೇಯಿಸುತ್ತ ಬಾಲಕ್ರೀಡೆಗಳನ್ನು ಗೋಪಬಾಲಕರೊಡನೆ ಆಡುತ್ತಿದ್ದರು. ತಲೆಯಲ್ಲಿ ನವಿಲುಗರಿಗಳನ್ನು ಸಿಕ್ಕಿಸಿಕೊಂಡು ಕೊರಳಲ್ಲಿ ಗುಲಗಂಜಿಯ ಹಾರಗಳನ್ನು ಧರಿಸಿ ತಮ್ಮ ಕೊಳಲು ದನಿಯಿಂದ ಗೋಪಿಕಾ ಸ್ತ್ರೀಯರನ್ನು ರಮಿಸಿದರು. ಹಾಗೂ ದನಕರು, ಸ್ತ್ರೀಪುರುಷ, ದೇವದಾನವ, ಪಶುಪಕ್ಷಿ, ಖಗ ಮೃಗಗಳನ್ನೂ ಸಂತೋಷಪಡಿಸಿದರು. ರಾಸಕ್ರೀಡೆಯನ್ನಾಡುತ್ತ ಅನೇಕ ಲೀಲೆಗಳನ್ನು ಮಾಡಿ ಆನಂದದಿಂದ ಲೋಕ ಮೋಹನಾರ್ಥವಾಗಿ ಆಟವಾಡಿದರು.

ಬಾಲಲೀಲೆಗಳಲ್ಲಿಯೇ ಅನೇಕ ನಾಮಾಂಕಿತ ಜಗಜಟ್ಟಿಗಳನ್ನು ಪುಡಿಗಟ್ಟಿ ಮಣ್ಣು ಮುಕ್ಕಿಸಿದ ಕೃಷ್ಣನ ಕೌತುಕ ವೃತ್ತಾಂತವನ್ನು ಕೇಳಿ ಕಂಸನ ಎದೆ ಒಡೆಯಿತು. ಅವನು ಬಿಲ್ಲು

ಹಬ್ಬದ ನೆವದಿಂದ ಅಕ್ರೂರನನ್ನು ನಂದಗೋಕುಲಕ್ಕೆ ಕಳಿಸಿದ. ಕೃಷ್ಣ ಬಲರಾಮರನ್ನು ತನ್ನ ರಾಜಧಾನಿಯಾದ ಮಥುರಾ ಪಟ್ಟಣಕ್ಕೆ ಬರಮಾಡಿಕೊಂಡ. ಅಲ್ಲಿಯ ಬಿಲ್ಲುಶಾಲೆಯಲ್ಲಿ ಶಸ್ತ್ರಾಸ್ತ್ರ ಪ್ರದರ್ಶನದಲ್ಲಿ ಇರಿಸಿದ ದೈತ್ಯ ಬಿಲ್ಲನ್ನು ಎತ್ತಿ ಕೃಷ್ಣನು ತನ್ನ ಕೈಯಿಂದ ಬಗ್ಗಿಸಿ ಮುರಿದು ಹಾಕಿದ. ಆ ಧನುರ್ಭಂಗದ ಭಯಂಕರ ಸಪ್ಪಳದಿಂದ ಧಾವಿಸಿ ಬಂದ ಕಂಸನ ಸೇನಾಪತಿಗಳನ್ನು ಹಾಗೂ ರಕ್ಷಾಪಡೆಯ ದಳಪತಿಗಳನ್ನೂ ಆ ಬಿಲ್ಲಿನ ಮುರಿದ ತುಂಡಿನಿಂದಲೇ ಹೊಡೆದು ಸಂಹರಿಸಿದರು ರಾಮಕೃಷ್ಣರು. ಅಲ್ಲಿಂದ ಹೊರಟು ಮಥುರಾ ಪಟ್ಟಣದ ಬೀದಿಯಲ್ಲಿ ವಿಜಯಶಾಲಿ ವೀರರಾಗಿ ಮೆರೆಯುತ್ತ ರಂಗಶಾಲೆಗೆ ಹೊರಟರು. ರಂಗಶಾಲೆಯ ಮುಂಬಾಗಿಲ ಬಳಿಯಲ್ಲಿಯೇ ಕಂಸನು ನಿಲ್ಲಿಸಿದ 'ಕುವಲಯಾ ಪೀಡ' ಎಂಬ ಮದ್ದಾನೆಯನ್ನು ಹೊಡೆದು ಹಲ್ಲು ಕಿತ್ತಿ, ಗಂಡಸ್ಥಳಕ್ಕೆ ಪ್ರಹರಿಸಿ, ಕೊಂದು ಹಾಕಿದರು. ಅನಂತರ ರಂಗಭೂಮಿಯಲ್ಲಿ ಬಂದು ಚಾಣೂರ, ಮುಷ್ಟಿಕ, ಬಲ, ತೋಶಲ ಮುಂತಾದ ಜಗಜಟ್ಟಿಗಳನ್ನು ಮಲ್ಲಯುದ್ಧದಲ್ಲಿ ವಧಿಸಿದರು. ಸಿಂಹನಾದ ಮಾಡಿದರು.

ಆಗ ಎತ್ತರವಾದ ಮಂಚದಲ್ಲಿ ಕುಳಿತು ರಾಮಕೃಷ್ಣರನ್ನು ಬಂಧಿಸಿ ಸಂಹರಿಸಲು ಆಜ್ಞೆ ನೀಡುತ್ತಲಿರುವ ಕಂಸನ ಉಚ್ಚ ಆಸನಕ್ಕೆ ಶ್ರೀಕೃಷ್ಣನು ಒಂದೇ ನೆಗೆತದಲ್ಲಿ ಹಾರಿ ಹಿಡಿದ. ಅವನ ಕಾಲು ಹಿಡಿದು ಜಗ್ಗಿ ಎತ್ತಿ ಮುಗಿಲಿನಲ್ಲಿ ಗಿರಿಗಿರಿ ತಿರಿಗಿಸಿ ನೆಲಕ್ಕೆ ಅಪ್ಪಳಿಸಿ ಕೊಂದು ಹಾಕಿದ. ಅನಂತರ ಬಲರಾಮನು ಕಂಸನ ಎಂಟು ಮಂದಿ ಅಣ್ಣತಮ್ಮಂದಿರನ್ನು ಮುಷ್ಟಿಯಿಂದ ಹೊಡೆದು ನೆಲಕ್ಕೆ ಬೀಳಿಸಿದ. ಅನಂತರ ಕೃಷ್ಣನು ಕಂಸನು ಸೆರೆಮನೆಯಲ್ಲಿ ಇಟ್ಟ ತನ್ನ ತಂದೆ ತಾಯಿಗಳಾದ ವಸುದೇವ ದೇವಕಿಯರನ್ನು ಕಾರಾಗೃಹದಿಂದ ಮುಕ್ತರನ್ನಾಗಿ ಮಾಡಿದ. ಕಂಸನ ದುರಾಡಳಿತದಲ್ಲಿ ಕಷ್ಟಕೋಟಲೆಗಳಿಗೆ ಒಳಗಾಗಿದ್ದ ಪ್ರಜಾಕೋಟಿಗಳಿಗೆಲ್ಲ ಅಭಯದ ಆಶ್ವಾಸನೆ ನೀಡಿದ. ಕಂಸನಿಂದ ಸಂತ್ರಸ್ತರಾಗಿ ದೇಶಾಂತರ ಗ್ರಾಮಾಂತರಗಳಿಗೆ ಓಡಿಹೋದ ಯಾದವರೆಲ್ಲರೂ ಮಥುರಾ ಪಟ್ಟಣಕ್ಕೆ ಮರಳಿ ಬಂದರು. ಮಥುರೆಯ ರಾಜ್ಯದ ಸಿಂಹಾಸನದ ಮೇಲೆ ಕಂಸನ ತಂದೆಯಾದ ಉಗ್ರಸೇನನನ್ನು ಕೂಡಿಸಿ ಪಟ್ಟಾಭಿಷೇಕಗೈದ ಶ್ರೀಕೃಷ್ಣ.

## ಕೃಷ್ಣನ ಆತ್ಮ ನಿರೀಕ್ಷೆ, ಪ್ರಾಯಶ್ಚಿತ್ತದ ಅಪೇಕ್ಷೆ

ಮುಂದೆ ಒಂದು ದಿನ ಶ್ರೀಕೃಷ್ಣನ ದರ್ಶನಕ್ಕೆ ನಾರದರೇ ಮೊದಲಾದ ಮುನಿಮಹರ್ಷಿಗಳು ಬಂದಾಗ ಶ್ರೀಕೃಷ್ಣನು ಒಂದು ಪ್ರಶ್ನೆಮಾಡಿದ. ಕೃಷ್ಣ- 'ಪುಣ್ಯಾತ್ಮರೇ, ಕಂಸನು ನನಗೆ ಸೋದರಮಾವ.' ಅವನು ಪರಮ ದುಷ್ಟ. ಪ್ರಜಾಪೀಡಕ. ಅದುದರಿಂದ ನಾನು ಅವನನ್ನು ವಧಿಸಬೇಕಾಯಿತು. ಸೋದರಮಾವನ ಹತ್ಯೆ ಮಹಾಪಾಪ ಎಂದು ಹೇಳಿದ್ದಾರೆ ಧರ್ಮಶಾಸ್ತ್ರದಲ್ಲಿ. ಇದಕ್ಕೆ ಏನು ಪ್ರಾಯಶ್ಚಿತ್ತ? ನೀವು ಹೇಳಿರಿ?

**ನಾರದ:-** ಯದುನಂದನ, ನೀನು ಸಾಕ್ಷಾತ್ ಪರಮಾತ್ಮ. ದುಷ್ಟ ಶಿಕ್ಷಣ ಶಿಷ್ಟ ರಕ್ಷಣಕ್ಕಾಗಿಯೇ ನಿನ್ನ ಅವತಾರ. ನೀನು ನಿತ್ಯಮುಕ್ತ. ನಿನಗೆ ಯಾವ ಪಾಪಲೇಪವೂ ಇಲ್ಲ. ನಿನ್ನ ಹೆಸರು ಹೇಳಿದರೆ ಪಾಪಗಳೆಲ್ಲವೂ ನಾಶವಾಗುವವು. ಅಂದಬಳಿಕ ಪಾಪಿ ಕಂಸನನ್ನು ಕೊಂದದ್ದಕ್ಕಾಗಿ ನಿನಗೆಲ್ಲಿಯ ಪಾಪ? ದುಷ್ಟ ಸಂಹಾರವು ಒಂದು ಪುಣ್ಯ ಕರ್ಮವೇ. ಅದಕ್ಕಾಗಿ ನಿನಗೆ ಎಲ್ಲ ಲೋಕವು ಋಣಿಯಾಗಿದೆ. ಇಂಥ ನಿನಗೆ ಪಾಪವೇ ಇಲ್ಲವೆಂದ ಬಳಿಕ ಪ್ರಾಯಶ್ಚಿತ್ತದ ಮಾತು ಎಲ್ಲಿ ಬಂತು? ಆದರೂ ಲೋಕಶಿಕ್ಷಣಾರ್ಥವಾಗಿ ನೀನು

ಕೇಳುತ್ತಲಿರುವಿ? ಅದಕ್ಕಾಗಿಯೇ ನಿನ್ನ ಅಭಿಪ್ರಾಯ ತಿಳಿದು ನಾವು ಮುಂದಿನ ಜನರಿಗೆ ಮಾರ್ಗದರ್ಶನಕ್ಕಾಗಿ ಒಂದು ಪ್ರಾಯಶ್ಚಿತ್ತವನ್ನು ಹೇಳುತ್ತಿದ್ದೇವೆ. 'ನೀನು ಗಂಧಮಾದನ ಪರ್ವತದ ಬಳಿ ಇರುವ ಸೇತು ತೀರ್ಥಗಳಲ್ಲಿ ಒಂದಾದ ಕೋಟಿತೀರ್ಥಕ್ಕೆ ಹೋಗು. ಅಲ್ಲಿ ಶ್ರೀರಾಮಚಂದ್ರನು ತನ್ನ ಬಿಲ್ಲಿನ ತುದಿಯಿಂದ ನಿರ್ಮಿಸಿದ ಆ ಕೋಟಿತೀರ್ಥದಲ್ಲಿ ಸ್ನಾನ ಮಾಡುವದರಿಂದ ಬ್ರಹ್ಮಹತ್ಯಾ, ಬಂಧುಹತ್ಯಾದಿ ಪಾತಕಗಳು ತೊಳೆದು ಹೋಗುತ್ತವೆ.''

ನಾರದರ ಈ ನುಡಿಯನ್ನು ಕೇಳಿ ಕೋಟಿತೀರ್ಥಕ್ಕೆ ತೆರಳಿದ ಶ್ರೀಕೃಷ್ಣ. ಅಲ್ಲಿ ಬಂಧು ಬಾಂಧವರೊಂದಿಗೆ ಸ್ನಾನಮಾಡಿ, ದಾನ ನೀಡಿ, ರಾಮೇಶ್ವರನ ಸೇವಾ ಪೂಜೆಗಳನ್ನು ಮಾಡಿಕೊಂಡು ಮಧುರಾಪುರಿಗೆ ಮರಳಿಬಂದ. ಈ ಕೋಟಿತೀರ್ಥ ಸ್ನಾನದಿಂದ ಬ್ರಹ್ಮವಿಷ್ಣು ಶಿವ ಈ ದೇವತಾ ತ್ರಿಮೂರ್ತಿಗಳು ಸಂತುಷ್ಟರಾಗಿ ಪರಮಾನುಗ್ರಹ ಮಾಡುತ್ತಾರೆ. ಈ ಕೋಟಿತೀರ್ಥದ ಮಹಾತ್ಮೆಯ ಶ್ರವಣದಿಂದ ಮಾನವರು ಸರ್ವಪಾಪಗಳಿಂದಲೂ ಮುಕ್ತರಾಗುತ್ತಾರೆ.

## ಸರ್ವತೀರ್ಥ ಧನುಷ್ಕೋಟ ತೀರ್ಥಗಳ ಮಹಿಮೆ

**ಸೂತ:-** ಕೋಟಿತೀರ್ಥದ ಯಾತ್ರೆ ಮಾಡಿದ ಬಳಿಕ ಯಾತ್ರಿಕರು ಸರ್ವತೀರ್ಥದ ಯಾತ್ರೆ ಮಾಡಬೇಕು. ಪೂರ್ವಕಾಲದಲ್ಲಿ ಸುಚರಿತ ಎಂಬ ಒಬ್ಬ ಮುನಿ ಮಹಾಬ್ರಹ್ಮಿಷ್ಠ ಸರ್ವದಾ ತಪೋನಿಷ್ಠ. ಆದರೆ ಅವನು ಹುಟ್ಟು ಗುರುಡ. ಭೃಗುವಂಶದಲ್ಲಿ ಅವನ ಜನ್ಮ. ತಪಸ್ಸು ಅವನ ಮನೆತನದ ಬಳುವಳಿ. ಕಣ್ಣು ಕಾಣದಿದ್ದರೂ ಕಾಲಾಡಿಸುತ್ತಲೇ ಅವನು ಸಮೀಪದ ಜಲಾಶಯಕ್ಕೆ ಹೋಗಿ ಸ್ನಾನಮಾಡಿ, ನಿತ್ಯಾಹ್ನಿಕ ಪೂಜೆ ಪುನಸ್ಕಾರಗಳನ್ನು ಮುಗಿಸಿ, ರಾತ್ರಿಯವರೆಗೂ ಭಗವಂತನ ನಾಮಜಪವನ್ನು ಮಾಡುತ್ತ ಕುಳಿತು ಬಿಡುತ್ತಿದ್ದ. ಜನರು ತಾವಾಗಿಯೇ ತಂದು ಕೊಟ್ಟ ಹಣ್ಣುಕಾಯಿಗಳಿಂದಲೇ ಅವನ ಉಪಜೀವನ. ಹೀಗೆ ಅನೇಕ ವರ್ಷಗಳು ಕಳೆದವು. ಅವನಿಗೆ ಮುಪ್ಪು ಬಂದಿತು. ತಪಸ್ಸು ಮಾತ್ರ ತಪ್ಪಲಿಲ್ಲ.

ಆದರೆ ಆ ಮುನಿಯ ಮನಸ್ಸಿನಲ್ಲಿ ಬಹುಕಾಲದಿಂದ ಒಂದು ಆಸೆ ಉಳಿದಿತ್ತು. ''ಎಲ್ಲ ತೀರ್ಥ ಕ್ಷೇತ್ರಗಳ ಯಾತ್ರೆ ಮಾಡಬೇಕು. ಗಂಗಾದಿ ತೀರ್ಥಗಳಲ್ಲಿ ಮಿಂದು ಬರಬೇಕು.'' ಇದೇ ಆ ಅಂಧ ಮಹರ್ಷಿಯ ಮನದ ಬಯಕೆ. ಆದರೆ ಕಣ್ಣಿಲ್ಲದ ಆ ಮುನಿಯ ಈ ಬಯಕೆ ನೆರವೇರುವುದೆಂತು? ಮೈಯಲ್ಲಿ ಬಲ ಇಲ್ಲದಿದ್ದರೂ ಮನದಲ್ಲಿ ಛಲ ಇದ್ದಿತು ಆ ಮುದುಕ ಮಹರ್ಷಿಗೆ. ನಾಲ್ಕು ಜನರ ಸಹಾಯದಿಂದ ಅವನು ಹೇಗೋ ಬಂದ ದಕ್ಷಿಣ ಸಮುದ್ರದ ತೀರಕ್ಕೆ. ಆ ತೀರದಲ್ಲಿರುವ ತೀರ್ಥಸ್ನಾನ, ತ್ರಿಪುಂಡ್ರ ಭಸ್ಮಧಾರಣ, ಜಾಬಾಲ ಉಪನಿಷತ್ತಿನಲ್ಲಿ ಹೇಳಿದ ರುದ್ರಾಕ್ಷ ಮಾಲಾ ಧಾರಣ. ಹಗಲಿರುಳೂ ಶಿವಧ್ಯಾನ, ಶಿವನನ್ನು ಕುರಿತೇ ತಪೋನುಷ್ಠಾನ ಹೀಗೆ ಹತ್ತು ವರ್ಷ ಸಾಗಿತು ಆ ಅಂಧಮುನಿಯ ಉಗ್ರತಪಶ್ಚರ್ಯೆ.

## ಶ್ರೀಪರಮೇಶ್ವರ ಪ್ರಸನ್ನ

ಒಂದು ದಿನ ಜಟಾಧಾರಿ ಪರಮೇಶ್ವರ ಸುಪ್ರಸನ್ನ. ಸುಚರಿತ ಯೋಗಿಯ ಉಗ್ರ ತಪಸ್ಸೆಯಿಂದ ಸುಪ್ರೀತನಾದ ಶಂಕರ. ಆ ಕುರುಡ ತಪಸ್ವಿಗೆ ಎರಡು ಕಣ್ಣುಗಳನ್ನು ದಯಪಾಲಿಸಿದ. ಶಿವಪ್ರಸಾದದಿಂದ ಲಭ್ಯವಾದ ಆ ಹೊಸಗಣ್ಣಿನಿಂದ ಪರಮೇಶ್ವನ ದಿವ್ಯಮೂರ್ತಿಯನ್ನು ಯೋಗಿಯು ಕಣ್ಣಾರೆ ಕಂಡ. ನಂತರ ಬಾಯ್ತುಂಬ

ಕೊಂಡಾಡತೊಡಗಿದ ಶಿವನನ್ನು ಸುಚರಿತ ಮುನಿ ''ದೇವದೇವೇಶ್ವರನಾದ ಮಹೇಶ್ವರ, ನಿನಗೆ ಜಯವಾಗಲಿ. ಕಾಮನನ್ನು ಗೆದ್ದ, ಮೃತ್ಯುವನ್ನು ಮೀರಿ ನಿಂತ, ತ್ರಿಪುರಾಸುರನನ್ನು ಸಂಹರಿಸಿದ ತ್ರಿಲೋಚನ, ನಿನಗೆ ನನ್ನ ನಮಸ್ಕಾರ. ನೀನು ಕೃಪಾದೃಷ್ಟಿಯಿಂದ ನೋಡಿ ನನ್ನ ತಪ್ಪುಗಳನ್ನು ಮನ್ನಿಸಿ ನನ್ನನ್ನು ಉದ್ಧರಿಸು.''

ಸುಚರಿತ ಮುನಿಯ ಈ ಸ್ತೋತ್ರದಿಂದ ಪರಿತುಷ್ಟನಾದ ಪರಮೇಶ್ವರನು ''ಸುಚರಿತ, ನಿನಗೆ ಬೇಕಾದ ವರವನ್ನು ಬೇಡು. ನಾನು ನೀಡುತ್ತೇನೆ'' ಎಂದು ಹೇಳಿದ.

## ಸ್ನಾನಮಾಡದೇ ಸರ್ವತೀರ್ಥ ಸ್ನಾನದ ಪುಣ್ಯ ಬರಬೇಕು

**ಸುಚರಿತ:-** ''ಭಗವನ್ ಚಂದ್ರಶೇಖರ, ನನಗೆ ಈಗ ವಯಸ್ಸು ಆಗಿದೆ. ಮುಪ್ಪು ಅಪ್ಪಿಹಿಡಿದಿದೆ ಈ ನನ್ನ ಶರೀರವನ್ನು. ನಿನ್ನ ದಯೆಯಿಂದ ನನಗೆ ಕಣ್ಣು ಬಂದರೂ ಈಗ ನನಗೆ ಹೆಚ್ಚು ನಡೆದಾಡಲು ಶಕ್ತಿ ಇಲ್ಲ. ಆದರೂ ನನಗೆ ಈ ಜನ್ಮದಲ್ಲಿ ಒಮ್ಮೆಯಾದರೂ ಎಲ್ಲ ತೀರ್ಥಗಳಲ್ಲಿಯೂ ಸ್ನಾನಮಾಡಬೇಕೆಂಬ ಅಪೇಕ್ಷೆ ಇರುತ್ತದೆ. ಅದಂತೂ ಈ ವಾರ್ಧಕ್ಯದಲ್ಲಿ ನನ್ನಿಂದ ಆಗದು. ಆದುದರಿಂದ ನನಗೆ ಎಲ್ಲ ತೀರ್ಥಗಳಲ್ಲಿಯೂ ಸ್ನಾನಮಾಡಿದ ಪುಣ್ಯವು ಬರಬೇಕು. ಅದಕ್ಕಾಗಿ ಏನಾದರೂ ಉಪಾಯವಿದ್ದರೆ ದಯಮಾಡಿ ತಿಳಿಸು.

**ಮಹಾದೇವ:-** ಭಕ್ತಮುನಿಯೇ, ನಿನ್ನ ಅಭೀಷ್ಟದಂತೆ ಆಗಲಿ. ನಾನು ನಿನ್ನ ಅಪೇಕ್ಷೆಯನ್ನು ಪೂರ್ಣಮಾಡಲಿಕ್ಕಾಗಿ ಶ್ರೀರಾಮ ಸೇತುವಿನಿಂದ ಪವಿತ್ರವಾದ ಈ ಗಂಧ ಮಾದನ ಪರ್ವತದಲ್ಲಿ ಒಂದು ತೀರ್ಥವನ್ನು ನಿರ್ಮಿಸಿ ಅಲ್ಲಿ ಎಲ್ಲ ತೀರ್ಥಗಳನ್ನು ಆವಾಹಿಸುತ್ತೇನೆ. ಭೂಲೋಕದಲ್ಲಿ ಇರುವ ಎಲ್ಲ ತೀರ್ಥಗಳೂ ನನ್ನ ಆಹ್ವಾನದ ಮೇರೆಗೆ ಅದರಲ್ಲಿ ನಿವಾಸ ಮಾಡುವವು. ಅದರಿಂದಾಗಿ 'ಸರ್ವತೀರ್ಥ ಎಂದು ಇದಕ್ಕೆ ಹೆಸರು ಬರುವದು. ಇದರಲ್ಲಿ ಸ್ನಾನಮಾಡುವದರಿಂದ ಮಾನವರ ಸರ್ವಪಾಪಗಳೂ ಪರಿಹಾರ ವಾಗುವವು. ಕುಂಭೀಪಾಕವೇ ಮೊದಲಾದ ಘೋರ ನರಕಗಳಲ್ಲಿ ಪಾಪಿಗಳನ್ನು ಕಲ್ಪಕಾಲದವರೆಗೆ ಕೊಳೆಯಿಸುವ ಮಹಾ ಮಹಾ ಪಾತಕಗಳೂ ಈ ಸರ್ವತೀರ್ಥಸ್ನಾನ ಮಾತ್ರದಿಂದ ನಾಶವಾಗುವವು. ಜನ್ಮ, ಮೃತ್ಯು, ಆದಿ, ವ್ಯಾಧಿ ಮುಂತಾದ ಮೊಸಳೆಗಳಿಂದ ತುಂಬಿದೆ ಈ ಸಂಸಾರವೆಂಬ ಸಮುದ್ರ. ಇದರಿಂದ ಪಾರಾಗಲು ಸುಲಭ ಉಪಾಯ ಈ ಸರ್ವತೀರ್ಥಸ್ನಾನ. ಮೋಕ್ಷಪ್ರಾಪ್ತಿಗೆ ಸಾಧನವೂ ಆಗಿದೆ ಈ ತೀರ್ಥಸ್ನಾನ.

ಮಹಾದೇವರು ಇಷ್ಟು ನುಡಿದ ಬಳಿಕ ಮುಪ್ಪಿನಿಂದ ಹಣ್ಣು ಹಣ್ಣು ಮುದುಕನಾದ ಆ ಸುಚರಿತ ಮುನಿಯು ಆ ಸರ್ವತೀರ್ಥದಲ್ಲಿ ಸ್ನಾನ ಮಾಡಿದ. ಆ ನೀರಿನಲ್ಲಿ ಮುಳುಗು ಹಾಕಿ ಅವನು ಮೇಲೆ ಎದ್ದು ಬಂದಾಗ ಜರಾಜರ್ಜರವಾದ ಅವನ ಮುದಿ ಮೈ ಮಾಯವಾಗಿ ಅತ್ಯಂತ ಸುಂದರವಾದ ಒಂದು ತರುಣ ದೇಹವು ಅವನಿಗೆ ಪ್ರಾಪ್ತವಾಗಿದ್ದಿತು. ಅವನ ಹಿಂದಿನ ಮುಪ್ಪಿನ ದೇಹದಲ್ಲಿ ಸುಕ್ಕುಗಟ್ಟಿದ ತೊಗಲು, ಹಾಗೂ ನಿರಿಗೆಗಳು ಒಂದೂ ಉಳಿದಿರಲಿಲ್ಲ ಹರೆಯದ ಸಿರಿಯಿಂದ, ನಳನಳಿಸುವ ತುಂಬುತಾರುಣ್ಯದ ಕಾಂತಿಯುಕ್ತವಾದ ಸುಚರಿತ ಮುನಿಯ ಶರೀರವು ದೇವಶರೀರದಂತೆ ಹೊಳೆಯ ತೊಡಗಿತು. ಅನಂತರ ಆ ಸುಚರಿತ ಮುನಿಯು ತನಗೆ ಇಂಥ ದಿವ್ಯ ದೇಹವನ್ನು ದಿವ್ಯ ಚಕ್ಷುಸ್ಸನ್ನು ದಯಪಾಲಿಸಿದ ಮಹಾದೇವರಿಗೆ ಭಕ್ತಿಯಿಂದ ವಂದಿಸಿದ. ಮುಂದೆ ಮಹಾದೇವರು ಅಂತರ್ಧಾನ

ಹೊಂದಿದ ಬಳಿಕ ಬಹುಕಾಲದ ವರೆಗೆ ಆ ಸುಚರಿತ ಮುನಿಯು ಆ ಸರ್ವತೀರ್ಥದ ತೀರದಲ್ಲಿಯೇ ತಪಸ್ಸನ್ನು ಆಚರಿಸುತ್ತ ನೆಲಿಸಿದ. ಮುಂದೆ ಕಾಲಪ್ರಾಪ್ತವಾದ ಮರಣವನ್ನು ಹೊಂದಿ ಶಿವ ಸಾಯುಜ್ಯವನ್ನು ಪಡೆದ.

ಈ ಸರ್ವತೀರ್ಥದಲ್ಲಿ ಸ್ನಾನಮಾಡಿದ ಬಳಿಕ ತೀರ್ಥಯಾತ್ರಿಗಳು ಧನುಷ್ಕೋಟಿ ತೀರ್ಥಕ್ಕೆ ಹೋಗಬೇಕು. ಇದರಲ್ಲಿ ಸ್ನಾನಮಾಡಿದವರು ಇಪ್ಪತ್ತೆಂಟು ಬಗೆಯ ನರಕಗಳಲ್ಲಿ ಎಂದೂ ಬೀಳುವದಿಲ್ಲ. ತುಲಾ ಪುರುಷದಾನ, ಸಹಸ್ರ ಗೋದಾನಗಳಿಂದ ಬರುವ ಪುಣ್ಯವೂ ಧನುಷ್ಕೋಟಿ ತೀರ್ಥದಲ್ಲಿ ಒಮ್ಮೆ ಮುಳುಗು ಹಾಕುವದರಿಂದ ಲಭಿಸುವದು.

**ಋಷಿಗಳು:-** ಸೂತಾಚಾರ್ಯರೇ, ಇದಕ್ಕೆ ಧನುಷ್ಕೋಟಿ ಎಂದು ಹೆಸರು ಬರಲು ಏನು ಕಾರಣ?

**ಸೂತ:-** ಲೋಕಕಂಟಕನಾದ ರಾವಣನನ್ನು ಶ್ರೀರಾಮಚಂದ್ರನು ಹಿಂದೆ ಸಂಹರಿಸಿದನಷ್ಟೇ? ಅನಂತರ ಲಂಕೆಯ ಗದ್ದುಗೆಯ ಮೇಲೆ ವಿಭೀಷಣನಿಗೆ ಪಟ್ಟಾಭಿಷೇಕವನ್ನು ಮಾಡಿಸಿದ. ಸೀತಾ, ಲಕ್ಷ್ಮಣ, ಹನುಮಂತ, ಸುಗ್ರೀವ ಮೊದಲಾದ ತನ್ನ ಪರಿವಾರದೊಂದಿಗೆ ಇದೇ ಸೇತುಮಾರ್ಗದಿಂದ ಸಮುದ್ರವನ್ನು ದಾಟಿ ಈ ಗಂಧಮಾದನ ಪರ್ವತಕ್ಕೆ ಬಂದ. ಇಲ್ಲಿಗೆ ಬಂದ ಬಳಿಕ ಲಂಕಾಧೀಶ್ವರನಾದ ವಿಭೀಷಣನು ಕೈ ಮುಗಿದು ಶ್ರೀರಾಮಚಂದ್ರನಿಗೆ ಬೇಡಿಕೊಂಡ.

## ಲಂಕೆಗೆ ಅಪಾಯದ ಶಂಕೆಯಿಂದ ಸೇತುಭಂಗ

**ವಿಭೀಷಣ:-** ರಾಮಚಂದ್ರಪ್ರಭು! ನೀನು ದಕ್ಷಿಣಸಮುದ್ರದಲ್ಲಿ ನಿರ್ಮಿಸಿದ ಈ ಸೇತುಮಾರ್ಗದಿಂದ ಅನೇಕ ದುಷ್ಟರಾಜರು ಅತ್ತ ಕಡೆಯ ಭೂಭಾಗದಿಂದ ದಂಡೆತ್ತಿ ಬಂದು ನನ್ನ ರಾಜಧಾನಿಯಾದ ಲಂಕಾಪಟ್ಟಣದ ಮೇಲೆ ದಾಳಿ ಮಾಡಬಹುದು. ಇದರಿಂದ ನನ್ನ ಲಂಕಾಸಾಮ್ರಾಜ್ಯಕ್ಕೆ ನಿತ್ಯವೂ ಗಂಡಾಂತರ. ಆದ್ದರಿಂದ ನೀನು ದಯಮಾಡಿ ನಿನ್ನ ಈ ಧನುಸ್ಸಿನ ತುದಿಯಿಂದ ನೀನು ನಿರ್ಮಿಸಿದ ಈ ಸುಭದ್ರವಾದ ಸೇತುವನ್ನು ಮುರಿದುಹಾಕು. ಇಲ್ಲದಿದ್ದರೆ ನನಗೆ ತಪ್ಪಿದ್ದಲ್ಲ ಶಾಶ್ವತ ಅಪಾಯ.''

ವಿಭೀಷಣನ ಪ್ರಾರ್ಥನೆಯಂತೆ ಶ್ರೀರಾಮಭದ್ರನು ತನ್ನ ಬಿಲ್ಲಿನ ತುದಿಯಿಂದ ನಲ ನಿರ್ಮಿತವಾದ ಆ ವಿರಾಟ್ ಸೇತುವೆಯನ್ನು ಮುರಿದುಹಾಕಿದನು. ಆದ್ದರಿಂದ ಈ ತೀರ್ಥಕ್ಕೆ ಧನುಷ್ಕೋಟಿ ಎಂಬ ಹೆಸರು ಬಂದಿತು. ಶ್ರೀರಾಮನು ತನ್ನ ಧನುಷ್ಯದ ಕೋಟಿ ಎಂದರೆ ತುದಿಯಿಂದ ಭಗ್ನಗೊಳಿಸಿದ ಸೇತುಮಾರ್ಗದ ಗುರುತು ತೋರುವ ಈ ಗೆರೆಯನ್ನು ದರ್ಶನ ಮಾಡಿಕೊಂಡವರು ಸರ್ವಪಾಪಗಳಿಂದ ಮುಕ್ತರಾಗುವರು. ನರ್ಮದಾತೀರದಲ್ಲಿ ಮಾಡಿದ ತಪಸ್ಸಿನಿಂದ ಮಹಾಪಾಪ ವಿನಾಶ. ಗಂಗಾತೀರದಲ್ಲಿ ಮರಣದಿಂದ ಮೋಕ್ಷ, ಕುರುಕ್ಷೇತ್ರದಲ್ಲಿ ಸ್ನಾನದಿಂದ ಬ್ರಹ್ಮಹತ್ಯಾದಿ ಪಾಪಪರಿಹಾರ ಆಗುವದೆಂದು ಶಾಸ್ತ್ರದಲ್ಲಿ ಹೇಳಲಾಗಿದೆ. ಆದರೆ ಧನುಷ್ಕೋಟಿಯಲ್ಲಿ ಸ್ನಾನಮಾಡುವದರಿಂದ ಎಲ್ಲ ಪಾಪಪರಿಹಾರ ಹಾಗೂ ಮೋಕ್ಷಗಳು ತಾವಾಗಿ ಸಿದ್ಧಿಸುವವು. ಈ ಧನುಷ್ಕೋಟಿಯಲ್ಲಿ ಸ್ನಾನ, ದೇವತರ್ಪಣ, ಪಿತೃತರ್ಪಣ, ಪಿಂಡಪ್ರದಾನ, ಬ್ರಾಹ್ಮಣ ಭೋಜನ, ಮಾಘಸ್ನಾನ, ಗೋದಾನ, ಭೂದಾನ, ತಿಲದಾನ, ಧನದಾನ, ಗ್ರಹಣ, ಸಂಕ್ರಮಣ, ಪರ್ವಕಾಲಸ್ನಾನ ಮುಂತಾದವುಗಳನ್ನು ಮಾಡಿದವರು ತಾವು ಮಾಡಿದ ಬ್ರಹ್ಮಹತ್ಯಾದಿ ಘೋರಪಾಪಗಳನ್ನೆಲ್ಲ ಕಳೆದುಕೊಂಡು ಮೋಕ್ಷವನ್ನು ಹೊಂದುತ್ತಾರೆ. ಪೂರ್ವಕಾಲದಲ್ಲಿ ದ್ರೋಣಾಚಾರ್ಯರ

ಚಿರಂಜೀವರಾದ ಅಶ್ವತ್ಥಾಮಾಚಾರ್ಯರು ಈ ಧನುಷ್ಕೋಟಿಯಲ್ಲಿ ಸ್ನಾನಮಾಡಿ ಮುಕ್ತರಾದರು ತಾವು ಮಾಡಿದ ಬಾಲಹತ್ಯಾ ಪಾಪದಿಂದ.

**ಅಶ್ವತ್ಥಾಮನಿಂದ ಮಲಗಿದ ಪಾಂಡವವೀರರ ಸಂಹಾರ; ಧನುಷ್ಕೋಟಿಸ್ನಾನದಿಂದ ಪಾಪಪರಿಹಾರ;**

**ಋಷಿಗಳು:-** ಸೂತಾಚಾರ್ಯರೇ, ಅಶ್ವತ್ಥಾಮಾಚಾರ್ಯರು ಮಲಗಿದವರನ್ನು ಕೊಲ್ಲುವ ಘೋರ ಪಾಪವನ್ನು ಏಕೆ ಮಾಡಿದರು? ಧನುಷ್ಕೋಟಿಯಲ್ಲಿ ಮಿಂದ ಮಾತ್ರಕ್ಕೆ ಇಂಥ ದಾರುಣ ಪಾತಕದಿಂದ ಹೇಗೆ ಮುಕ್ತರಾದರು?

**ಸೂತ:-** ದ್ವಾಪರಯುಗದ ಕೊನೆಯ ಭಾಗದಲ್ಲಿ ಕೌರವ ಪಾಂಡವರ ನಡುವೆ ನಡೆಯಿತು ಘನಘೋರ ಸಂಗ್ರಾಮ. ಹದಿನೆಂಟು ದಿನಗಳವರೆಗೆ ನಡೆದ ಈ ಮಹಾಯುದ್ಧದಲ್ಲಿ ಕೌರವಸೇನೆಯ ಮೊಟ್ಟಮೊದಲನೆಯ ಸೇನಾಪತಿ ಕುರುಕುಲ ಪಿತಾಮಹನಾದ ಭೀಷ್ಮ ಹತ್ತು ದಿನ ಕಲಿತನದಿಂದ ಕಾದಿ ಶಸ್ತ್ರ ಕೆಳಗಿಟ್ಟ. ಅನಂತರ ಐದು ದಿನ ಕರ್ಣನ ಸೈನಾಪತ್ಯ. ಅರ್ಜುನನಿಂದ ಕರ್ಣವಧ. ಒಂದು ದಿನದಲ್ಲಿ ಶಲ್ಯನ ಅವಸಾನ. ಹದಿನೆಂಟನೆಯ ದಿನದ ಯುದ್ಧದಲ್ಲಿ ಭೀಮನ ಗದಾ ಪ್ರಹಾರದಿಂದ ದುರ್ಯೋಧನನ ತೊಡೆ ಒಡೆದು ಧಾರಾತೀರ್ಥದಲ್ಲಿ ಕುರುಪತಿಯ ದಾರುಣ ಮರಣ. ಅನಂತರ ಯುದ್ಧ ಸಮಾಪ್ತಿ.

ವಿಜಯೋಲ್ಲಾಸದೊಂದಿಗೆ ಪಾಂಡವರ ಶಿಬಿರಪ್ರಸ್ಥಾನ. ದೃಷ್ಟದ್ಯುಮ್ನ ಶಿಖಂಡಿ ಮೊದಲಾದ ಅಳಿದುಳಿದ ಕ್ಷತ್ರಿಯ ರಾಜರು ತಮ್ಮ ತಮ್ಮ ಶಿಬಿರಗಳಿಗೆ ಮರಳಿದರು. ಕೃಷ್ಣನು, ಸಾತ್ಯಕಿ ಹಾಗೂ ಪಾಂಡವರು ಶಿಬಿರದಲ್ಲಿ ವಿಶ್ರಮಿಸಿದಾಗ ನುಡಿದನು- ''ಇಂದು ರಾತ್ರಿ ನಾವು ಇಲ್ಲಿ ಇರುವದು ಬೇಡ. ಓಘವತೀ ನದಿಯ ತೀರಕ್ಕೆ ಹೋಗೋಣ. ತಂಪಿಂಪಾಗಿ ತೀಡುತಿದೆ ಅಲ್ಲಿ ತಂಗಾಳಿ. ಹದಿನೆಂಟು ದಿನದ ಹೋರಾಟದಲ್ಲಿ ದಣಿದುಹೋದ ನಮ್ಮೆಲ್ಲರಿಗೂ ಆ ನದೀತೀರದ ತಂಪಿನ ತಾಣದಲ್ಲಿ ಸುಖನಿದ್ರೆ ಆಗುವದು. ನಡೆಯಿರಿ ಅಲ್ಲಿಗೆ ಹೋಗೋಣ.'' ಎಂದು ಹೇಳಿ ಪಂಚಪಾಂಡವರನ್ನೂ, ಸಾತ್ಯಕಿಯನ್ನು ಹೊರಡಿಸಿಕೊಂಡು ಓಘವತೀ ನದೀತಟಾಕಕ್ಕೆ ತೆರಳಿದ ಆ ಮುರವೈರಿ.

ಇತ್ತ ಕೃತವರ್ಮ, ಕೃಪಾಚಾರ್ಯ ಹಾಗೂ ಗುರುಪುತ್ರ ಅಶ್ವತ್ಥಾಮ ಮೂವರೂ ಕುರುಕ್ಷೇತ್ರದ ರಣಭೂಮಿಯಲ್ಲಿ ತೊಡೆಮುರಿದು ಮರಣೋನ್ಮುಖನಾಗಿ ಬಿದ್ದುಕೊಂಡ ತಮ್ಮ ದೊರೆ ದುರ್ಯೋಧನನ ಬಳಿ ಬಂದರು. ಇನ್ನೂ ಅವನ ಜೀವ ಹೋಗಿರಲಿಲ್ಲ. ನೆತ್ತರಿನ ಮಡುವಿನಲ್ಲಿ ಬಿದ್ದು ಒದ್ದಾಡುತ್ತಿದ್ದ ಆ ಕುರುಸಾರ್ವಭೌಮ, ತಮ್ಮ ದೊರೆಗೆ ಬಂದ ಈ ದಯನೀಯ ದುರ್ದೆಶೆ ಕಂಡು ಮಮ್ಮಲ ಮರುಗಿದರು ಆ ಮೂವರೂ ಹಿತೈಷಿಗಳು. ದುರ್ಯೋಧನನಿಗೂ ಉಕ್ಕಿಬಂತು ದುಃಖ ಆ ಮೂವರನ್ನು ಕಂಡು. ಅಶ್ವತ್ಥಾಮನಿಗಂತೂ ಬ್ರಹ್ಮಾಂಡಕೋಪ ಬಂದಿತು. ಸಿಡಿದೆದ್ದು ನುಡಿಕಿಡಿಗಳನ್ನು ಉದುರಿಸಿದ.

**ಅಶ್ವತ್ಥಾಮ:-** ''ಕುರುರಾಜ, ಪರಮನೀಚರು ಈ ಪಾಂಡವರು. ಅವರು ಮಾಡಿದ ಈ ಯುದ್ಧದಲ್ಲಿ ಮೋಸಗಳಿಗೆ ಮಿತಿ ಇಲ್ಲ. ಕಪಟ ಕಾರಸ್ಥಾನಗಳಿಗೆ ಎಣಿಕೆ ಇಲ್ಲ. ಶಿಖಂಡಿಯನ್ನು ತಂದು ನಿಲ್ಲಿಸಿ ಭೀಷ್ಮರು ಶಸ್ತ್ರ ಇಡುವಂತೆ ಮಾಡಿದರು. 'ಅಶ್ವತ್ಥಾಮ ಸತ್ತನು' ಎಂದು ಹೇಳಿ ನಮ್ಮ ತಂದೆ ದ್ರೋಣರಿಂದ ಯುದ್ಧವನ್ನು ಬಿಡಿಸಿದರು. ಕರ್ಣನ ರಥ ನೆಲದೆದೆಯಲ್ಲಿ ಹೂತು ಸಿಕ್ಕುಕೊಂಡಾಗ ಬಾಣ ಬಿಟ್ಟ ಕಲಿ ಪಾರ್ಥ. ಗದಾಯುದ್ಧಕ್ಕೆ ವಿರುದ್ಧವಾಗಿ ಹೊಕ್ಕಳ ಕೆಳಗೆ ತೊಡೆಗೆ ಹೊಡೆದು ನಿನ್ನನ್ನು ಉರುಳಿಸಿದ ಆ ಭೀಮ.

ಎಲ್ಲವೂ ಅನ್ಯಾಯ. ಶುದ್ಧ ವಂಚನೆ. ನಾನು ಈ ಪಾಂಡವರ ಅನ್ಯಾಯದ ಯುದ್ಧವನ್ನು ಸಹಿಸಲಾರೆ. ಈಗಲೇ ನಿನ್ನೆದುರು ಆಣೆ ಇಟ್ಟು ಹೇಳುತ್ತೇನೆ. ಇಂದಿನ ಇರುಳಿನಲ್ಲಿಯೇ ಸೃಂಜಯ ಸಹಿತವಾಗಿ ಎಲ್ಲ ಪಾಂಡವರನ್ನು ಕೊಂದುಹಾಕುತ್ತೇನೆ. ಮಹಾರಾಜಾ, ನನಗೆ ನೀನು ಅಪ್ಪಣೆ ನೀಡು.

ಮೃತ್ಯುವಿನ ಉಡಿಯಲ್ಲಿ ಬಿದ್ದ ದುರ್ಯೋಧನನಿಗೆ ಮತ್ತೆ ಹೊಸ ಜೀವ ಬಂದಂತಾಯಿತು ಈ ಶಪಥದಿಂದ. ಆನಂದದಿಂದ ಅಪ್ಪಣೆ ನೀಡಿದ. ಪಕ್ಕದಲ್ಲಿ ನಿಂತ ಕೃಪಾಚಾರ್ಯರಿಗೆ ಹೇಳಿದ. "ಆಚಾರ್ಯ, ಈ ಗುರುಪುತ್ರ ನನ್ನ ಕೊನೆಯ ಸೇನಾಪತಿ. ನನ್ನ ವೈರಿಗಳನ್ನೆಲ್ಲ ಕೊನೆಗಾಣಿಸುವ ಪ್ರಥಮ ಸೇನಾಪತಿ. ಇವನಿಗೆ ಈಗಲೇ ಸೇನಾಪತಿ ಪಟ್ಟದಲ್ಲಿ ಅಭಿಷೇಕ ಮಾಡಿರಿ."

ಕೃಪಾಚಾರ್ಯರು ರಾಜಾಜ್ಞೆಯನ್ನು ಯಥಾವತ್ತಾಗಿ ನೆರವೇರಿಸಿದರು. ಸೋದರಮಾವ ಕೃಪರಿಂದ ಪಟ್ಟಾಭಿಷಿಕ್ತನಾದ ಅಶ್ವತ್ಥಾಮ ಆನಂದದಿಂದ ಉಬ್ಬಿ ಹೋದ. ಸಂತಸದಿಂದ ತಬ್ಬಿಕೊಂಡ ಸಾಯಹೊರಟ ಸುಯೋಧನನನ್ನು. ಅನಂತರ ಕೃಪಾಚಾರ್ಯ, ಕೃತವರ್ಮರೊಂದಿಗೆ ಅಲ್ಲಿಂದ ಹೊರಟ.

ಆಗ ಸೂರ್ಯಾಸ್ತದ ಸಮಯ. ಮೂವರೂ ಪಾಂಡವರ ಶಿಬಿರ ಸಮೀಪಕ್ಕೆ ಬಂದರು. ಅಲ್ಲಿ ಪಾಂಡವಕುಮಾರರ ವಿಜಯಘೋಷ. ಉಲ್ಲಾಸದ ಗರ್ಜನೆಗಳು. ಕೃಷ್ಣ ಹಾಗೂ ಭೀಮಾರ್ಜುನರ ಹೆಸರಿನಿಂದ ಪ್ರಚಂಡ ಜಯಜಯಕಾರಗಳು ಉಚ್ಚಧ್ವನಿಯಲ್ಲಿ ಬ್ರಹ್ಮಾಂಡಬಿರಿಯುವಂತೆ ಸದ್ದು ಗದ್ದಲಗಳೊಂದಿಗೆ ಕೇಳಿಬರುತ್ತಿದ್ದವು. ಗೆಲುವಿನ ಗರುಡಗಂಬವೇರಿ ನಲಿದಾಡುತ್ತಿದ್ದ ಚಂಡಪ್ರಚಂಡರಾದ ಆ ಪಾಂಡವಪಕ್ಷೀಯರ ವಿಜಯೋನ್ಮಾದದ ವೀರಗರ್ಜನೆಗಳನ್ನು ಕೇಳಿಯೇ ಭಯಭ್ರಾಂತರಾದರು ದುರ್ಯೋಧನ ಪಕ್ಷದ ಈ ಮೂವರೂ ಮಿತ್ರರು. ಭೀಮಾರ್ಜುನರ ಭಯದಿಂದ ಅವರಿಗೆ ಅಲ್ಲಿ ನಿಲ್ಲಲು ಆಗಲಿಲ್ಲ. ಭಯಭ್ರಾಂತರಾಗಿ ಅಲ್ಲಿಂದ ಓಡಿದರು. ದೂರ ಬಂದು ಹಿಂದಿರುಗಿ ನೋಡಿದರು. ಯಾರೂ ಬೆನ್ನಟ್ಟಿ ಬಂದಿರಲಿಲ್ಲ. ಸಮಾಧಾನದ ನಿಟ್ಟುಸಿರು ಈಗ ಹೊರಬಂದಿತು. ಓಡಿ ಓಡಿ ದಣಿದ ತಮ್ಮ ರಥದ ಕುದುರೆಗಳಿಗೆ ಮೂವರೂ ನೀರು ಕುಡಿಸಿದರು, ಹುಲ್ಲು ತಿನಿಸಿದರು. ತಾವು ಕೂಡ ಅಲ್ಲಿಯೇ ಹರಿಯುವ ತೊರೆಯಲ್ಲಿ ಕಾಲು ತೊಳೆದುಕೊಂಡು ಆಚಮನ ಮಾಡಿದರು. ಸಂಧ್ಯಾವಂದನೆಯನ್ನು ಮುಗಿಸಿದರು. ಅಂದಿನರಾತ್ರಿ ಅವರಿಗೆ ಇನ್ನೂ ಭೀಕರ ಎನಿಸಿತು.

ರಾತ್ರಿಯ ಕರಾಳ ಕತ್ತಲೆಯು ಪ್ರಪಂಚವನ್ನೆಲ್ಲ ಆವರಿಸಿತು. ಕೃಪ, ಕೃತವರ್ಮ, ಹಾಗೂ ಅಶ್ವತ್ಥಾಮರು ಅಲ್ಲಿಯೇ ಒಂದು ವಟವೃಕ್ಷದ ಅಡಿಯಲ್ಲಿ ಹತಾಶರಾಗಿ ಕುಳಿತುಕೊಂಡರು. ಓಡಿ ಓಡಿ ದಣಿದ ಕೃತವರ್ಮ ಹಾಗೂ ಕೃಪಾಚಾರ್ಯರಿಗೆ ಗಾಢನಿದ್ರೆ. ಆದರೆ ದುರ್ಯೋಧನನ ಎದುರು ಆಣೆ ಇಟ್ಟು ಸಿಟ್ಟಿನಿಂದ ಕುದಿಯುತ್ತಿರುವ ಅಶ್ವತ್ಥಾಮನ ಸಮೀಪವೂ ಸುಳಿಯಲಿಲ್ಲ ನಿದ್ರೆ. ತನ್ನ ಪ್ರತಿಜ್ಞೆಯನ್ನು ಪೂರ್ಣಮಾಡುವುದು ಹೇಗೆ ಎಂದು ಚಿಂತಿಸುತ್ತ ಕುಳಿತಿದ್ದ. ನಿರಾಶೆಯ ನಿಟ್ಟುಸಿರು ಬಿಟ್ಟು ಅವನು ತಾನು ಕುಳಿತ ಆ ಹೆಮ್ಮರದ ಹರವಾದ ಶಾಖೆಗಳ ಕಡೆಗೆ ನೋಡಿದ.

## ಗುರುಪುತ್ರನಿಗೆ ಗೂಗೆಯೇ ಗುರು ಆಯಿತು

ಅಲ್ಲಿ ಒಂದು ದುರಂತ. ಆ ವಟವೃಕ್ಷದ ಟೊಂಗೆಟೊಂಗೆಗಳಲ್ಲಿ ಅನೇಕ ಕಾಗೆಗಳು ಸುಖವಾಗಿ ಮಲಗಿದ್ದವು. ಅಷ್ಟರಲ್ಲಿ 'ಮಾಸ' ಎಂಬ ಒಂದು ಭಯಂಕರ ಗೂಗೆ ಪಕ್ಷಿಯು ಅಲ್ಲಿಗೆ ಬಂದಿತು. ಆ ಭೀಕರ ಪ್ರಾಣಿಯು ಅಲ್ಲಿಯೇ ಗಿಡದಲ್ಲಿ ಅಡಗಿ ಮಲಗಿದ ಕಾಗೆಗಳನ್ನೆಲ್ಲ ಕೊಲ್ಲತೊಡಗಿತು. ಎಲ್ಲ ಶಾಖೋಪಶಾಖೆಗಳಲ್ಲಿ ವಿಶ್ರಮಿಸಿದ ನಿರುಪದ್ರವಿ ಕಾಗೆಗಳನ್ನೆಲ್ಲ ಆ ಘೋರ ಗೂಗೆಯು ಒಂದೊಂದಾಗಿ ಕೊಂದುಹಾಕಿತು. ಸ್ವಲ್ಪ ಹೊತ್ತಿನಲ್ಲಿಯೇ ಎಲ್ಲ ಕಾಗೆಗಳೂ ಸತ್ತು ಗಿಡದಡಿಯಲ್ಲಿ ಛಿನ್ನವಿಛಿನ್ನವಾಗಿ ಬಿದ್ದುಬಿಟ್ಟವು. ಹೀಗೆ ಆ ವಟವೃಕ್ಷದ ಟೊಂಗೆತೋಳುಗಳಲ್ಲಿರುವ ಎಲ್ಲ ಪಕ್ಷಿಗಳನ್ನು ಪಟಪಟನೇ ಕೊಂದು ಹಿಗ್ಗಿನಿಂದ ಕೇಕೆಹಾಕುತ್ತ ಗೂಗೆಯು ಹಾರಿ ಹೋಯಿತು.

ಈ ದಾರುಣದೃಶ್ಯವನ್ನು ಕಂಡು ಅಶ್ವತ್ಥಾಮನಿಗೆ ಒಮ್ಮೆಲೇ ಸ್ಫೂರ್ತಿ. ಹೊಸಹಂಚಿಕೆ ಹೊಳೆಯಿತು. ಅವನು ಮನದಲ್ಲಿಯೇ ಯೋಚಿಸಿದ. ''ಇಂದು ಈ ಗೂಗೆಯೇ ನನಗೆ ಮಾರ್ಗದರ್ಶಕ. ನನ್ನದೂ ಈ ಗೂಗೆಯದೇ ಅವಸ್ಥೆ. ಈ ಗೂಗೆಗೆ 'ದಿವಾಭೀತ' ಎಂದು ಹೆಸರು. ನಾನೂ ದಿವಾಭೀತನೇ ಸರಿ. ಹಗಲು ಹೊತ್ತು ಆ ಭೀಮಾರ್ಜುನರ ಮುಂದೆ ನಿಲ್ಲುವ ಎಂಟದೆಯ ಬಂಟ ಯಾರು ಈ ಭೂಮಂಡಲದಲ್ಲಿ? ಹದಿನೆಂಟು ದಿನದ ಯುದ್ಧಗಳಲ್ಲಿ ಈ ಭೀಮಾರ್ಜುನರ ಏಟು, ಶಸ್ತ್ರಗಳ ಆಟೋಪಗಳನ್ನು ತಾಳಲಾರದೇ ನಾನು ಓಡಿದ್ದು ಎಷ್ಟು ಸಲ? ಬಲಭೀಮನ ಮುಷ್ಟಿಪ್ರಹಾರವನ್ನು ನೆನೆದರೆ ಮೈಯಲ್ಲಿಯ ಮೂಳೆಗಳೆಲ್ಲವೂ ಮುರಿದು ಮುಟಿಗೆಯಂತಾಗುವವು. ಅವನನ್ನು ಗೆಲ್ಲುವುದೂ ನನಗೆ ಶಕ್ಯವಿಲ್ಲ. ಕೊಲ್ಲುವ ಮಾತಂತೂ ದೂರವೇ ಉಳಿಯಿತು. ಆದ್ದರಿಂದ ನನಗೆ ಈ ಘೂಕವೇ (ಗೂಗೆ) ಮಾರ್ಗದರ್ಶಿ. ರಾತ್ರಿ ಸಮಯದಲ್ಲಿ ಪಾಂಡವರೆಲ್ಲ ಮಲಗಿದಾಗಲೇ ಅವರನ್ನು ನಾನು ಸಂಹರಿಸಬೇಕು. ಇದೇ ನನ್ನ ನಿಶ್ಚಯ. ಇಂದಿನ ಈ ಕಾಳ ರಾತ್ರಿಯಲ್ಲಿ ನಿದ್ದೆಯ ಅಳಕ್ಕೆ ಇಳಿದ ಎಲ್ಲ ಪಾಂಡವರ ಕೊಲೆಗೈದು ನನ್ನ ಪ್ರತಿಜ್ಞೆಯನ್ನು ಪೂರೈಸಿಕೊಳ್ಳುತ್ತೇನೆ.''

ತಲೆಯಲ್ಲಿ ಈ ದುಷ್ಟವಿಚಾರವು ಹೊಳೆದ ಕೂಡಲೇ ಅವನು ಅಲ್ಲಿಯೇ ಗಿಡದಡಿಯಲ್ಲಿ ನೆಲದ ಹುಡಿಯಲ್ಲಿ ಪವಡಿಸಿದ್ದ ತನ್ನ ಸೋದರಮಾವ ಕೃಪಾಚಾರ್ಯರನ್ನು ಹಾಗೂ ಕೃತವರ್ಮರನ್ನು ಎಬ್ಬಿಸಿ ತನ್ನ ದುರಾಲೋಚನೆಯನ್ನು ಹೇಳಿದ- ''ಮಾವ, ಈ ದುಷ್ಟ ಭೀಮನು ದುರ್ಯೋಧನ ಮಹಾರಾಜನ ತಲೆಗೆ ಕಾಲಿನಿಂದ ಒದ್ದು ಅಪಮಾನಗೈದ. ಆದ್ದರಿಂದ ನಾನು ಇಂದಿನ ರಾತ್ರಿಯಲ್ಲಿ ಪಾಂಡವ ಶಿಬಿರದಲ್ಲಿ ಹೊಕ್ಕು ನಿದ್ದೆಯಲ್ಲಿ ಇದ್ದಾಗಲೇ ಅವರೆಲ್ಲರ ಶಿರಚ್ಛೇದವನ್ನು ಮಾಡುತ್ತೇನೆ.

**ಕೃಪಾಚಾರ್ಯ:-** ಅಶ್ವತ್ಥಾಮ, ಮಲಗಿದವರನ್ನು ಕೊಲ್ಲುವುದು ಅಧರ್ಮ. ನಿಶ್ಶಸ್ತ್ರರಾಗಿ ನಿದ್ರಾದೇವಿಯ ಮಡಿಲಲ್ಲಿ ಎಚ್ಚರವಿಲ್ಲದೇ ಮಲಗಿದ ಮಾನವರನ್ನು ಸಂಹರಿಸುವದು ಘೋರ ಅನ್ಯಾಯ. ಇಂಥ ಕ್ರೂರ ಕರ್ಮವನ್ನು ಮಾಡುವದಕ್ಕಿಂತ ಮೊದಲು ಧೃತರಾಷ್ಟ್ರನನ್ನು ವಿಚಾರಿಸು. ಗಾಂಧಾರಿಯ ಸಲಹೆ ಸೂಚನೆಯನ್ನು ಮೊದಲು ಕೇಳು. ವಿದುರನಿಗೆ ತಿಳಿಸಿ ಅವನ ಅಭಿಪ್ರಾಯವನ್ನು ತಿಳಿದುಕೊ. ಅವರು ಆಗಬಹುದು ಎಂದರೆ ಈ ಕುಕೃತ್ಯಕ್ಕೆ ಕೈಹಾಕು. ಇಲ್ಲವೇ ಅವರು ಹೇಳಿದಂತೆ ಕೇಳು.

**ಅಶ್ವತ್ಥಾಮ:-** "ಮಾವ, ಈ ಯುದ್ಧದಲ್ಲಿ ಪಾಂಡವರು ಬಲದಿಂದ ಗೆಲ್ಲಲಿಲ್ಲ. ಛಲದಿಂದ ಗೆದ್ದಿದ್ದಾರೆ. ಅನ್ಯಾಯದಿಂದ ಎಲ್ಲರನ್ನೂ ಕೊಂದಿದ್ದಾರೆ. ಅವರನ್ನು ನಾನು ಕೂಡ ಅದೇ ಅನ್ಯಾಯ ಮಾರ್ಗದಿಂದಲೇ ಇಂದು ಸಂಹರಿಸಿ ಅವರಿಗೆ ಪ್ರತೀಕಾರ ಮಾಡುತ್ತೇನೆ. ಈ ವಿಷಯದಲ್ಲಿ ನಾನು ಯಾರನ್ನೂ ಕೇಳುವದಿಲ್ಲ."

ಹೀಗೆ ಹೇಳಿ ಅಶ್ವತ್ಥಾಮನು ರಥವನ್ನು ಏರಿದ. ಕುದುರೆಗಳ ಮೇಲೆ ಚಾವಟಿ ಬಾರಿಸಿದ. ಸಿಟ್ಟಿನಿಂದ ಕೆಂಡದ ಉಂಡೆಯಾಗಿ ಉರಿಯುತ್ತಿದ್ದವು ಅವನ ಕಿಡಗಣ್ಣುಗಳು. ಕೃಪ, ಕೃತವರ್ಮರು ಅವನನ್ನು ಬೆಂಬಲಿಸಿ ಬಂದರು. ಪಾಂಡವರ ಶಿಬಿರದ ಬಳಿಯಲ್ಲಿ ರಥದಿಂದ ಇಳಿದು ಶಿಬಿರದ ಬಾಗಿಲಲ್ಲಿಯೇ ನಿಂತುಕೊಂಡ ಅಶ್ವತ್ಥಾಮ. ನಿಂತಲ್ಲಿಯೇ ನೆನೆಸಿದ ನೀಲಕಂಠನನ್ನು. ಆ ದಯಾಳು ಪ್ರಭುಪರಮೇಶ್ವರ ಅಶ್ವತ್ಥಾಮನಿಗೆ ಕೊಡಮಾಡಿದ ದಿವ್ಯ ಖಡ್ಗವನ್ನು ಝುಳಪಿಸಿದ. ಅನಂತರ ಕೃತವರ್ಮ ಹಾಗೂ ಕೃಪಾಚಾರ್ಯ ಇಬ್ಬರನ್ನೂ ಆ ಶಿಬಿರದ ಬಾಗಿಲಬಳಿಯಲ್ಲಿ ನಿಲ್ಲಿಸಿ 'ಹೊರಗೆ ಬಂದವರ ಶಿರವನ್ನು ತರಿದುಹಾಕಿರಿ' ಎಂದು ಹೇಳಿ ತಾನು ಶಿಬಿರದ ಒಳಗಡೆ ನುಗ್ಗಿದ. ಕೃಷ್ಣ ಪಂಚಪಾಂಡವರು ಬೇರೆ ಕಡೆ ಹೋಗಿದ್ದಾರೆ.

ಅಲ್ಲಿ ಒಂದು ಕೋಣೆಯಲ್ಲಿ ಪಾಂಡವರ ಏಕೈಕ ಸೇನಾಪತಿಯಾದ ದೃಷ್ಟದ್ಯುಮ್ನ ದಣಿದು ಮಲಗಿದ್ದ. ಸಿಟ್ಟಿನಿಂದ ಉರಿಯುತ್ತಿರುವ ಅಶ್ವತ್ಥಾಮ ದೃಷ್ಟದ್ಯುಮ್ನನ ತಲೆಗೆ ಮೊದಲು ಒದ್ದುಬಿಟ್ಟ. ಹೊಡೆತ ತಿಂದು ಹಾಸಿಗೆಯಲ್ಲಿಯೇ ಎದ್ದು ಕುಳಿತ ದೃಷ್ಟದ್ಯುಮ್ನನ ಕೂದಲು ಹಿಡಿದು ನೆಲದ ಮೇಲೆ ಕೆಡವಿ ಅಶ್ವತ್ಥಾಮನು ಅವನ ಎದೆಯ ಮೇಲೆ ಕುಳಿತುಕೊಂಡ. ಮತ್ತು ಬಿದ್ದಲ್ಲಿಯೇ ಒದ್ದಾಡುತ್ತಿರುವ ದೃಷ್ಟದ್ಯುಮ್ನನ ಕೊರಳಿಗೆ ತನ್ನ ಬಿಲ್ಲಿನ ಹೆದೆಯ ದಾರದಿಂದಲೇ ಉರುಲು ಬಿಗಿದು ಕೊಂದು ಹಾಕಿದ. ಇದರಂತೆ ಅಲ್ಲಿ ಮಲಗಿದವರೆಲ್ಲರನ್ನೂ ತನ್ನ ಖಡ್ಗದಿಂದ ಕೊರಳು ಕೊಯ್ದು ಕತ್ತರಿಸಿ ಹಾಕಿದ. ದ್ರೌಪದಿಯ ಐದು ಮಕ್ಕಳು, ಯುಧಾಮನ್ಯು, ಉತ್ತಮೌಜ ಹಾಗೂ ಸೋಮಕ ಎಂಬ ರಾಜಕುಮಾರ ಮುಂತಾದವರನ್ನೆಲ್ಲ ತನ್ನ ಕರಾಳ ಖಡ್ಗದಿಂದ ಕಡಿದು ಕೊಚ್ಚಿ, ಚುಚ್ಚಿ, ತಿವಿದು ಯಮಪಟ್ಟಣಕ್ಕೆ ಅಟ್ಟಿದ. ಸೋಮಕ ಶಿಖಂಡಿ ಮುಂತಾದ ವೀರರನ್ನೆಲ್ಲ ತನ್ನ ಖಡ್ಗದ ತೀಕ್ಷ್ಣಧಾರೆಯಿಂದ ತರಿದೊಗೆದ. ಅವನ ಅಂಜಿಕೆಯಿಂದ ಶಿಬಿರ ಬಿಟ್ಟು ಹೊರಗೆ ಬಂದವರನ್ನು ಕೃಪ ಹಾಗೂ ಕೃತವರ್ಮರು ತಮ್ಮ ಖಡ್ಗದಿಂದ ತುಂಡರಿಸಿ ಹಾಕುತ್ತಿದ್ದರು. ಒಳಗೆ ಇದ್ದವರನ್ನೆಲ್ಲ ಮಹಾಪರಾಕ್ರಮಿಯಾದ ಅಶ್ವತ್ಥಾಮನು ರೋಷ ರೊಚ್ಚಿನಿಂದ ಹುಚ್ಚೆದ್ದು, ಕಡಿದು, ಕೊಚ್ಚಿದ. ಇಷ್ಟು ಹೊತ್ತಿನವರೆಗೆ ವಿಜಯೀವೀರರಿಂದ ಕಿಕ್ಕಿರಿದು ತುಂಬಿದ ಆ ವಿಶಾಲ ಶಿಬಿರವು ಈಗ ಮೃತಪತಿತರಾದ ಪಾಂಡವವೀರರ ಅಸಂಖ್ಯ ಶವಗಳಿಂದ ಮಸಣಗಟ್ಟೆಯಾಯಿತು. ಅನಂತರ ಅಶ್ವತ್ಥಾಮ ಹಾಗೂ ಅವನ ಇಬ್ಬರು ಸಂಗಡಿಗರು ಪಾಂಡವರು ಬಂದಾರೆಂದು ಭಯಭ್ರಾಂತರಾಗಿ ಅವರು ಬರುವದರೊಳಗಾಗಿ ತಾವು ಪಾರಾಗಿ ಹೋಗಬೇಕೆಂದು ಅಲ್ಲಿಂದ ಕಾಲು ತೆಗೆದರು.

ಹೀಗೆ ನಿದ್ರಾಮುದ್ರಿತರಾದ ನಿಖಿಲ ಪಾಂಡವಸೇನೆಯನ್ನೆಲ್ಲ ಕಪಟದಿಂದ ನಾಶಮಾಡಿ ಅಶ್ವತ್ಥಾಮನು ನರ್ಮದಾನದಿಯ ತೀರಕ್ಕೆ ಬಂದನು. ಅಲ್ಲಿ ಸಾವಿರಾರು ಜನ ವೇದವಾದಿ ಮಹರ್ಷಿಗಳು ಪರಸ್ಪರ ಪುರಾಣ ಪುಣ್ಯ ಕಥೆಗಳನ್ನು ಹೇಳಿ ಕೇಳುತ್ತಲಿದ್ದರು. ಅದೇ ಅವರ

ವಾಙ್ಮಯ ತಪಸ್ಸು. ಅಲ್ಲಿದ್ದ ಪ್ರತಿಯೊಬ್ಬ ಪಂಡಿತನೂ ಶಬ್ದಬ್ರಹ್ಮದಲ್ಲಿ ನಿಷ್ಣಾತ. ಪುರಾಣ ಪ್ರವಚನದಲ್ಲಿ ನದೀಷ್ಣ. ಅಲ್ಲಿಗೆ ಬಂದ ಈ ನೀತಿಭ್ರಷ್ಟನಾದ ದ್ರೋಣಕುಮಾರ. ಅಧರ್ಮದಿಂದ ಇಷ್ಟೊಂದು ಸುಪ್ತ ಜನರ ಸಾಮೂಹಿಕ ಕಗ್ಗೊಲೆಗೈದ ಆ ಅಶ್ವತ್ಥಾಮನ ಮುಖದ ಮೇಲೆ ಹಂತಕರ ಅವಲಕ್ಷಣ ಕಳೆ ಹುಚ್ಚೆದ್ದು ಸುರಿಯುತ್ತಿತ್ತು. ಅವನ ಬ್ರಹ್ಮತೇಜವೆಲ್ಲವೂ ಈ ದುಷ್ಕರ್ಮದಿಂದ ಅಳಿದುಹೋಗಿತ್ತು. ಅಶ್ವತ್ಥಾಮ ಅವರ ಆಶ್ರಮದ ಅಂಗಳದಲ್ಲಿ ಕಾಲನ್ನು ಇಟ್ಟ ಕೂಡಲೇ ಅವನ ಮುಖದಮೇಲಿನ ದುರ್ಲಕ್ಷಣ ಕಳೆಯನ್ನು ಕಂಡೇ ಆ ಮುನಿಗಳು ತಿಳಿದುಕೊಂಡರು ಇವನ ಘೋರ ದೌಷ್ಟ್ಯದ ದುಷ್ಕರ್ಮಗಳನ್ನು. ಮತ್ತು ಬಿಚ್ಚುಮಾತುಗಳಲ್ಲಿ ಅವನನ್ನು ನಿರ್ಭತ್ಸನೆ ಗೈಯುತ್ತ ನುಡಿದರು- ''ದ್ರೋಣಪುತ್ರ, ಮಲಗಿದ ಮಕ್ಕಳನ್ನು ದಯೆ ಇಲ್ಲದೇ ಕತ್ತರಿಸಿ ಹಾಕಿದ ನೀನು ಬ್ರಾಹ್ಮಣನೇ? ನಿದ್ರಿಸುವ ನರರನ್ನು ಹತ್ಯೆಗೈದ ಅತ್ಯಾಚಾರಿಯು ಬ್ರಾಹ್ಮಣನೇ ಆಗಲಾರ. ನಿನ್ನನ್ನು ನೋಡುವದರಿಂದಲೇ ನಾವೆಲ್ಲರೂ ಪತಿತರಾಗಿ ಹೋಗುತ್ತೇವೆ. ನಿನ್ನೊಡನೆ ಮಾತನಾಡಿದರಂತೂ ಹತ್ತುಸಾವಿರ ಬ್ರಹ್ಮಹತ್ಯಾ ಪಾಪಗಳು ನಮಗೆ ಮೆತ್ತಿಕೊಳ್ಳಬಹುದು. ಆದ್ದರಿಂದ ಬ್ರಾಹ್ಮಣಾಧಮ, ನೀನು ಈ ನಮ್ಮ ಆಶ್ರಮದಿಂದ ಕೂಡಲೇ ಹೊರಟು ಹೋಗು.''

ಅಲ್ಲಿಯ ವಿಪ್ರವೃಂದದವರು ಹೀಗೆ ನಿಷ್ಠುರರಾಗಿ ನುಡಿದಬಳಿಕ ಆ ಅತಂತ್ರ ಕುತಂತ್ರಿ ಬ್ರಾಹ್ಮಣನಿಗೆ ಎಲ್ಲಿಯೂ ಆಶ್ರಯ ಸಿಗಲಿಲ್ಲ. ಅಲ್ಲಿಂದ ಅವನು ನೇರವಾಗಿ ಹೊರಟು ಕಾಶಿ, ಗಯಾ, ಪ್ರಯಾಗ ಮುಂತಾದ ಪುಣ್ಯತೀರ್ಥಗಳಿಗೆ ಹೋದ. ಎಲ್ಲರೂ ಹೆದರುವವರೇ ಈ ಹೀನ ಬ್ರಾಹ್ಮಣನೊಡನೆ ವ್ಯವಹರಿಸಲು. ಹೋದಲ್ಲೆಲ್ಲ ವಿದ್ವಾನ್ ಬ್ರಾಹ್ಮಣರಿಂದ ಅಶ್ವತ್ಥಾಮನ ನಿರ್ಭತ್ಸನೆ, ನಿಂದೆ, ಗರ್ಹಣೆ ನಡೆಯಿತು. ಯಾರೂ ಅವನನ್ನು ಆದರಿಸಲಿಲ್ಲ. ನಿರುಪಾಯನಾಗಿ ಕೊನೆಗೆ ಅವನು ಬದರಿಕಾಶ್ರಮಕ್ಕೆ ಹೋದ. ವೇದವ್ಯಾಸರ ಚರಣಗಳಿಗೇ ಶರಣು ಹೊಕ್ಕ. ಆದರೆ ಅವರು ಕೂಡ - ''ನಿದ್ರಿತರನ್ನು ನಾಶಪಡಿಸಿದ ನೀಚ ಬ್ರಾಹ್ಮಣನೇ! ನೀನು ನಮ್ಮ ಈ ಆಶ್ರಮದಲ್ಲಿ ಬರಬೇಡ. ನಿನ್ನ ಪಾಪ ನಮಗೂ ಲೇಪವಾದೀತು ಎಂದರು.''

**ಅಶ್ವತ್ಥಾಮ:-** ಪೂಜ್ಯರೇ, ಈ ಲೋಕದಲ್ಲಿ ಎಲ್ಲರೂ ನನ್ನನ್ನು ನಿಂದಿಸುವವರೇ. ಎಲ್ಲಿಯೂ ದಿಕ್ಕುಗಾಣದೇ ನಿಮ್ಮನ್ನು ಶರಣುಹೊಕ್ಕಿದ್ದೇನೆ. ನೀವೇ ನನ್ನ ಮೇಲೆ ಕೃಪೆಮಾಡಿರಿ. ಮಲಗಿದವರನ್ನು ಕಡಿದುಹಾಕಿದ ನನಗೆ ಹಾಗೂ ನನ್ನ ಪಾಪಕ್ಕೆ ಏನಾದರೂ ಪ್ರಾಯಶ್ಚಿತ್ತವಿದ್ದರೆ ಹೇಳಿ. ನೀವು ಸಾಕ್ಷಾತ್ ಸರ್ವಜ್ಞಮೂರ್ತಿಗಳಲ್ಲವೆ?

**ವೇದವ್ಯಾಸ:-** ಅಶ್ವತ್ಥಾಮ, ಪ್ರಾಯಶ್ಚಿತ್ತವನ್ನು ಮೀರಿನಿಂತಿದೆ ನಿನ್ನ ಈ ಪಾಪದ ರಾಶಿ. ನಿದ್ದೆಯ ಮಡಿಲಲ್ಲಿ ಮೈ ಮರೆತು ಮಲಗಿದ ನಿರುಪದ್ರವಿ ನಿರಪರಾಧಿ ನರರನ್ನು ನಿಷ್ಕುರಣೆಯಿಂದ ನಾಶಮಾಡಿದ ನಿನ್ನಂಥ ಪಾಪಿಗೆ ಯಾವ ಪ್ರಾಯಶ್ಚಿತ್ತವೂ ಇರುವದಿಲ್ಲ. ಆದರೂ ಕೂಡ ನಾನು ನಿನಗಾಗಿ ಒಂದು ಉಪಾಯವನ್ನು ಹೇಳುತ್ತೇನೆ. ದಕ್ಷಿಣಸಮುದ್ರ ತೀರದಲ್ಲಿ ರಾಮಸೇತು ಇರುತ್ತದೆ. ಅದು ಪರಮ ಪವಿತ್ರ. ಅಲ್ಲಿ ದನುಷ್ಕೋಟಿ ಎಂಬ ಒಂದು ಪವಿತ್ರ ತೀರ್ಥವಿದೆ. ಆದರಲ್ಲಿ ಸ್ನಾನದಾನ ಮಾಡಿದವರು ಕೊನೆಗೆ ಮೋಕ್ಷಕ್ಕೆ ಹೋಗುವರು. ಬದುಕಿ ಇದ್ದವರ ಪಾಪಗಳು ಪರಿಹಾರವಾಗುವುದು ಏನು ಆಶ್ಚರ್ಯ?

ಆ ಧನುಷ್ಕೋಟಿ ತೀರ್ಥಕ್ಕೆ ನೀನು ಹೋಗು. ಮೂವತ್ತು ದಿನ ಅಲ್ಲಿ ನಿಲ್ಲು. ಪ್ರತಿದಿನವೂ ಅಲ್ಲಿಯ ಧನುಷ್ಕೋಟಿ ತೀರ್ಥದಲ್ಲಿ ಮಿಂದು ಚಂದ್ರಚೂಡನನ್ನು ಧ್ಯಾನಮಾಡು. ಶ್ರೀಕೃಷ್ಣನ ಆರಾಧನೆ ಮಾಡು. ಅದರಿಂದ ನಿನ್ನ ಪಾಪಗಳೆಲ್ಲವೂ ತೊಳೆದು ಹೋಗುವವು.''

ವೇದವ್ಯಾಸರ ವಚನದಿಂದ ಆನಂದ ಭರಿತನಾದ ಅಶ್ವತ್ಥಾಮ. ಅವನು ನೇರವಾಗಿ ರಾಮಸೇತುವೆಗೇ ಬಂದ. ಧನುಷ್ಕೋಟಿ ತೀರ್ಥದಲ್ಲಿ ಮಿಂದ. ಮೂವತ್ತು ದಿನಗಳವರೆಗೆ ಅಲ್ಲಿ ಸ್ನಾನಮಾಡಿ ರಾಮೇಶ್ವರನ ಸೇವೆಗೈದ. ಪಂಚಾಕ್ಷರಿ ಮಂತ್ರದ ಜಪವನ್ನು ಉಪವಾಸ ದಿಂದ ಜಪಿಸಿದ. ಅಂದು ರಾತ್ರಿ ರಾಮೇಶ್ವರನ ಎದುರು ಜಾಗರಣ ಮಾಡಿದ. ಮರುದಿನ ಧನುಷ್ಕೋಟಿ ತೀರ್ಥದಲ್ಲಿ ಸಂಕಲ್ಪ ಪೂರ್ವಕ ಸ್ನಾನಮಾಡಿ ಭಕ್ತಿಯಿಂದ ಪರಮೇಶ್ವರನ ಪೂಜೆಗೈದ. ಅವನ ಈ ಶಿವಾರ್ಚನೆಯಿಂದ ಸುಪ್ರಸನ್ನನಾದ ಆ ಶಂಕರ. ಅನುಗ್ರಹದ ಅಭಯವಚನವನ್ನು ನುಡಿದ- ''ದ್ರೋಣಾತ್ಮಜ, ಈ ಧನುಷ್ಕೋಟಿ ತೀರ್ಥದಲ್ಲಿ ಸ್ನಾನಮಾಡಿದ್ದರಿಂದ ನಿನಗೆ ಮಲಗಿದಾಗ ನಿರಪರಾಧಿಗಳನ್ನು ಕೊಂದುದರಿಂದ ಬಂದ ಪಾಪವು ಪರಿಹಾರವಾಗಿದೆ. ಈಗ ಏನಾದರೂ ವರ ಬೇಕಾದರೆ ಕೇಳಿಕೊ.

**ಅಶ್ವತ್ಥಾಮ:-** ಭಗವನ್, ನಾನು ನಿನ್ನ ದರ್ಶನ ಮಾತ್ರದಿಂದಲೇ ಕೃತಾರ್ಥ. ನೀನೇ ನನ್ನ ಪರಮ ಪುರುಷಾರ್ಥ. ನಿನ್ನ ಚರಣಾರವಿಂದದಲ್ಲಿ ನನಗೆ ಅವಿಚ್ಛಿನ್ನವಾದ ಭಕ್ತಿಯನ್ನು ನೀಡು.''

'ತಥಾಸ್ತು' ಎಂದು ಹೇಳಿ ಅವನನ್ನು ಆಶೀರ್ವದಿಸಿ ಅಂತರ್ಧಾನಹೊಂದಿದ ಪ್ರಭು ಪರಮೇಶ್ವರ. ಹೀಗೆ ಧನುಷ್ಕೋಟಿ ತೀರ್ಥಸ್ನಾನದಿಂದ ಪಾಪಮುಕ್ತನಾಗಿ ಪರಿಶುದ್ಧನಾದ

## ದನುಷ್ಕೋಟಿ ತೀರ್ಥದ ಸ್ನಾನದಿಂದ ಪರಾವಸುವಿನ ಉದ್ಧಾರ

**ಸೂತ:-** ಇದೊಂದು ಹಿಂದೆ ನಡೆದ ಘಟನೆ. ಭರತಖಂಡದಲ್ಲಿ ಪುರಾಣ ಕಾಲದಲ್ಲಿ ಬೃಹದ್ಯುಮ್ನ ಎಂಬ ಹೆಸರಿನ ಚಕ್ರವರ್ತಿಯ ಆಡಳಿತ. ಸಾಗರದ ತೀರದ ವರೆಗೆ ಚಾಚಿದ ಧರಣೀತಲದಲ್ಲೆಲ್ಲ ಬೃಹದ್ಯುಮ್ನನ ಧರ್ಮಶಾಸನ. ರಾಜನಿಂದ ಬೃಹತ್ ಪ್ರಮಾಣದ ಒಂದು ಸತ್ರಯಾಗ ಪ್ರಾರಂಭ. ಇಂದ್ರಾದಿದೇವತೆಗಳಿಗೆಲ್ಲ ಆವಾಹನ. ಆ ಕಾಲದಲ್ಲಿ ಶ್ರೌತಭಾಗದಲ್ಲಿ ವಿಶ್ರುತರಾದ ರೈಭ್ಯ ಮುನಿಯ ಅನುವಂಶಿಕ ಪೌರೋಹಿತ್ಯ. ಆ ರೈಭ್ಯ ಮುನಿಗೆ ಇಬ್ಬರು ಮಕ್ಕಳು, ಅರ್ವಾವಸು, ಪರಾವಸು. ಇಬ್ಬರೂ ಮಹಾಪಂಡಿತರು. ಷಡಂಗಸಹಿತವಾದ ನಾಲ್ಕೂ ವೇದಗಳಲ್ಲಿ ಪಾರಂಗತರು. ಶ್ರೌತಸ್ಮಾರ್ತಕರ್ಮಾ ನುಷ್ಠಾನದಲ್ಲಿ ಪರಿಣತರು. ಧರ್ಮಶಾಸ್ತ್ರಗಳ ಮರ್ಮಜ್ಞರು. ವೈಶೇಷಿಕದಲ್ಲಿ ವಿಶೇಷಜ್ಞಾನ ಇಬ್ಬರಿಗೂ. ಯೋಗಶಾಸ್ತ್ರದ ಪ್ರಯೋಗ ಉಪಯೋಗ ಎರಡೂ ಮಾಡಿಕೊಂಡು ತಜ್ಞಾಭಿಜ್ಞ ಎನಿಸಿದವರು. ತರ್ಕದಲ್ಲಿ ಆ ಕಾಲದಲ್ಲಿ ಇವರದೇ ವಿಕ್ರಮ. ಅವರಿಬ್ಬರ ಹದನವಾದ ಮತಿಯು ಮೀಮಾಂಸೆಯಲ್ಲಿ ಮಾಂಸಲ. ಸಾಂಖ್ಯಶಾಸ್ತ್ರ ದಲ್ಲಿಯೂ ಸೀಮಾ ಪುರುಷರು ಅವರಿಬ್ಬರೂ ವೇದಾಂತದ ತಳತುದಿಗಳನ್ನೆಲ್ಲ ತಲಕಾಡಿ ಪಾರದರ್ಶಿ ಎನಿಸಿದವರು. ಒಟ್ಟಾರೆ ಅಂದಿನ ಪ್ರಪಂಚದಲ್ಲಿ ಆ ಬಂಧುಗಳಿಬ್ಬರೂ ಸರ್ವಜ್ಞರ ಮರಿಮೂರ್ತಿ ಎನಿಸಿದ್ದರು.

ಬೃಹದ್ಯುಮ್ನ ಸಾರ್ವಭೌಮನು ಈ ಪುರೋಹಿತ ಪುತ್ರರಾದ ಪಂಡಿತ ಸಾರ್ವಭೌಮರನ್ನು ತನ್ನ ಸತ್ರಯಾಗದ ಸಹಾಯಕರನ್ನಾಗಿ ಕಳಿಸಿಕೊಡಬೇಕೆಂದು ಅವರ ತಂದೆ ರೈಭ್ಯಮುನಿಗೆ ಪ್ರಾರ್ಥಿಸಿಕೊಂಡ. ಒಬ್ಬ ರೈಭ್ಯಮುನಿಗಿಂತ ಅವನಷ್ಟೇ ಶ್ರೌತಸ್ಮಾರ್ತ ಕ್ರಿಯಾಕಲಾಪಗಳಲ್ಲಿ ಪಳಗಿ ಪಾರಂಗತರೆನಿಸಿದ ಇಬ್ಬರು ತರುಣ ಪುರೋಹಿತರು ತನಗೆ ದೊರಕಲಿ ಎಂದು ರಾಜನ ಇಂಗಿತ. ಇದನ್ನು ಚಾಣಾಕ್ಷರಾದ ರೈಭ್ಯರು ತಿಳಿದುಕೊಂಡರು. 'ಪುತ್ರಾದಿಚ್ಛೇತ್ ಪರಾಜಯಂ' ಎಂಬ ಮಾತು ಅವರಿಗೆ ಅನ್ವಯವಾದದ್ದರಿಂದ ಅವರಿಗೆ ಹೆಮ್ಮೆಯಾಯಿತು. ತಾವು ಬದುಕಿದ್ದಾಗಲೇ ತಮ್ಮ ಮಕ್ಕಳು ರಾಜಪೌರೋಹಿತ್ಯದ ಭಾರವನ್ನು ಹೊತ್ತು ಸಮರ್ಥರೀತಿಯಿಂದ ಮಹಾರಾಜನಿಗೆ ಮೆಚ್ಚಿಗೆ ಆಗುವಂತೆ ಕಾರ್ಯ ನಿರ್ವಹಿಸುವದು ಅವರಿಗೆ ಇಷ್ಟವೇ ಆಗಿದ್ದಿತು. ಸಂತೋಷದಿಂದ ಅವರು ಸಮ್ಮತಿಸಿ ತಮ್ಮ ಇಬ್ಬರೂ ಪಂಡಿತಾಗ್ರೇಸರರಾದ ಪುತ್ರರನ್ನು ಚಕ್ರವರ್ತಿಯ ಸತ್ರಯಾಗಕ್ಕೆ ಕಳಿಸಿದರು. ತಾವು ಹಿರಿಯ ಸೊಸೆಯೊಂದಿಗೆ ಆಶ್ರಮದಲ್ಲಿಯೇ ಉಳಿದುಕೊಂಡರು.

## ವಿದ್ವಾನ್ ಸರ್ವತ್ರ ಪೂಜ್ಯತೆ

ತಂದೆಯ ಅನುಮತಿ, ಆದೇಶ ಪಡೆದು ಇಷ್ಟಿಕಾರ್ಯದಲ್ಲಿ ವಿಶಿಷ್ಟ ಪಾಂಡಿತ್ಯ ಪಡೆದ ಸೋದರಿಬ್ಬರೂ ಬ್ರಹ್ಮದ್ಯುಮ್ನನ ಯಜ್ಞಮಂಟಪಕ್ಕೆ ಆಗಮಿಸಿದರು. ಸಾರ್ವಭೌಮನು ಆಮಂತ್ರಿಸಿದ ಲೌಕಿಕರೂ ವೈದಿಕರೂ, ಹಾಗೂ ಎಲ್ಲ ಮುನಿಮಹರ್ಷಿಗಳೂ ಆ ಸತ್ರಯಾಗಕ್ಕೆ ಆಗಮಿಸಿದ್ದರು. ಬಂದವರಿಗೆಲ್ಲ ಅತ್ಯಾದರದ ಸ್ವಾಗತ ಕಾದಿತ್ತು ಸ್ವಯಂ ಸಾರ್ವಭೌಮ ಬ್ರಹ್ಮದ್ಯುಮ್ನನಿಂದ. ಆದರ, ಉಪಚಾರ, ಊಟ ಉಪಹಾರ ಎಲ್ಲದರಲ್ಲಿಯೂ ವೈಶಿಷ್ಟ್ಯ ಅಲ್ಲಿ ಎದ್ದು ತೋರುತ್ತಿತ್ತು. ಆ ಯಜ್ಞಕ್ಕಾಗಿ ಆಹೂತರಾದ ಅನೇಕ ರಾಜಾಧಿರಾಜರು ತಮ್ಮ ಚತುರಂಗಸೇನೆಯೊಂದಿಗೆ ಆಗಮಿಸಿ ತಮಗಾಗಿ ಸಿದ್ಧವಾದ ಶಿಬಿರ ಪ್ರಕೋಷ್ಠಗಳಲ್ಲಿ ಹಾಗೂ ರಮ್ಯ ಹರ್ಮ್ಯಗಳಲ್ಲಿ ತಂಗಿದರು. ಯಥೇಚ್ಛವಾಗಿ ಮೃಷ್ಟಾನ್ನ ಪಕ್ವಾನ್ನಗಳನ್ನು ತಿಂದು ತೇಗಿದರು. ನಾಡಿನ ಎಲ್ಲ ನಿಟ್ಟುಗಳಿಂದಲೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದ ಎಲ್ಲ ಜಾತಿಜನಾಂಗದ ಜನರೂ ಆ ಅಪೂರ್ವ ಯಜ್ಞ ಸಮಾರಂಭವನ್ನು ನೋಡಲು ಕಿಕ್ಕಿರಿದು ಸೇರಿದ್ದರು. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ, ಈ ನಾಲ್ಕೂ ಆಶ್ರಮದವರೂ ಅಲ್ಲಿ ನೆರೆದು ರಾಜಾತಿಥ್ಯವನ್ನು ಪಡೆದರು. ಆ ಬೃಹದ್‌ಯಜ್ಞದ ಮಹಾವೈಭವವನ್ನು ಕಂಡು ತಮ್ಮ ಜನ್ಮ ಸಾರ್ಥಕ ಎಂದುಕೊಂಡರು. ಸತ್ರಯಾಗಕ್ಕಾಗಿ ಬಂದ ಜನರೆಲ್ಲರಿಗೂ ಯಥೇಚ್ಛವಾಗಿ ಊಟ ಉಪಚಾರಗಳನ್ನು ಒದಗಿಸಿದ್ದಲ್ಲದೇ ಬ್ರಹದ್ಯುಮ್ನ ಮಹಾರಾಜ ಎಲ್ಲರಿಗೂ ಬೆಲೆಬಾಳುವ ಬಟ್ಟೆ, ಬಂಗಾರ, ರತ್ನ, ನಗ, ನಾಣ್ಯ, ದಾನ ದಕ್ಷಿಣೆಗಳನ್ನಿತ್ತು ಸಂತೋಷಪಡಿಸಿದ.

ರೈಭ್ಯಮುನಿಯ ಮಕ್ಕಳಾದ ಅರ್ವಾವಸು, ಪರಾವಸು ಸೋದರರು ಸಮಗ್ರ ಸತ್ರಯಾಗದ ವಿಧಿವಿಧಾನಗಳನ್ನೆಲ್ಲ ಪುರೋಹಿತರಾಗಿ ಶಾಸ್ತ್ರೋಕ್ತವಾಗಿ ಎಲ್ಲಿಯೂ ತಪ್ಪದಂತೆ ಆಚರಿಸಿದರು. ವಶಿಷ್ಠ, ಗೌತಮ, ಅತ್ರಿ, ಮರೀಚಿ, ವಿಶ್ವಾಮಿತ್ರ, ವಾಮದೇವ, ಮದುಚ್ಛಂದ ಮುಂತಾದ ಮುನಿಮಂಡಲದ ಮುಂದಾಳುಗಳು ಈ ಹೊಸಹರೆಯದ ಹುಡುಗರಾದ ಪುರೋಹಿತ ಬಂಧುಗಳ ಯಜ್ಞಾಭಿಜ್ಞತೆಯನ್ನೂ, ಕರ್ಮಕಾಂಡದಲ್ಲಿಯ

ಚಾಕಚಕ್ಯತೆಯನ್ನೂ, ಮಂತ್ರತಂತ್ರಗಳ ಸೂಕ್ಷ್ಮ ಜ್ಞಾನದ ಜಾಣ್ಮೆ ಮೇಲ್ಮೆಗಳನ್ನೂ ಪರೀಕ್ಷಿಸಿ ನೋಡಿದರು. ಒಂದರಲ್ಲಿಯೂ ಕುಂದನ್ನು ಕಾಣದೇ ಆನಂದದಿಂದ ಅಭಿನಂದಿಸಿದರು. ಮಹಾರಾಜನಿಗೂ ಈ ನೂತನ ಪುರೋಹಿತರ ಇಷ್ಟಿಕಾರ್ಯನಿರ್ವಹಣೆಯ ನೈಪುಣ್ಯ ನೋಡಿ ಪೂರ್ಣತೃಪ್ತಿ ಆಯಿತು.

ತೃತೀಯಸವನದ ಕೊನೆಯಲ್ಲಿ ಪರಾವಸುವು ಅವಶ್ಯ ಕಾರ್ಯವಾದ ಕೆಲವೊಂದು ಕರ್ಮಕಲಾಪಗಳನ್ನು ಮಾಡಿಸಿ ಸಾಯಂಕಾಲದಲ್ಲಿ ತನ್ನ ಆಶ್ರಮಕ್ಕೆ ಹೋಗಿ ನೋಡಿಕೊಂಡು ಬರಬೇಕೆಂದು ಹೊರಟ. ಇಷ್ಟುಹೊತ್ತು ಇಷ್ಟಿ ಸಮಯದಲ್ಲಿ ಹೋಮಾಗ್ನಿಯ ಮುಂದೆ ಸಾಯಂಕಾಲದವರೆಗೆ ಕುಳಿತು ಹೊಗೆಯಿಂದ ಅವನ ಕಣ್ಣುಗಳೆರಡೂ ಊದಿಕೊಂಡಿದ್ದವು. ಶ್ರೌತಕಾರ್ಯದ ಸಂತತ ಪರಿಶ್ರಮದಿಂದ ದಣಿವು ದೇಹದಲ್ಲಿ ನಿಶ್ಶಕ್ತಿಯನ್ನು ತಂದಿತ್ತು. ನಿದಾನವಾಗಿಯೇ ಕಾಲು ಹೆಜ್ಜೆಯೆಳೆಯುತ್ತ ಅವನು ಆಶ್ರಮದ ಕಡೆಗೆ ಸಾಗಿದ್ದ. ವನ ಮಧ್ಯದಲ್ಲಿ ಆಶ್ರಮ. ಯಜ್ಞಮಂಟಪದಿಂದ ತುಸು ದೂರ. ರಾತ್ರಿಯ ಅಂಧಕಾರ ಹೆಪ್ಪುಗಟ್ಟತೊಡಗಿತ್ತು. ಮೆಲ್ಲಮೆಲ್ಲನೇ ಕಾಲೆಳೆಯುತ್ತ ಆಶ್ರಮದ ಸಮೀಪಕ್ಕೆ ಬಂದಾಗ ಸರಿರಾತ್ರಿ. ಆಶ್ರಮದ ಹತ್ತಿರ ಕತ್ತಲೆಯಲ್ಲಿ ಯಾವುದೋ ಕಾಡುಮಿಕ ಸಮೀಪದಲ್ಲಿ ಓಡಾಡುತ್ತಿರುವಂತೆ ಪರಾವಸುವಿಗೆ ಭಾಸ. ಆದರೆ ಅದು ಯಾವ ಮೃಗವೂ ಆಗಿರಲಿಲ್ಲ. ತಪ್ಪಿಸಿಕೊಂಡ ಆಶ್ರಮದ ಕರುವನ್ನು ಹುಡುಕಾಡಲು ಬಂದ ರೈಭ್ಯಮುನಿಯೇ ಆಗಿದ್ದ. ಹೊದೆಯಲು ಸಾಕಷ್ಟು ವಸ್ತ್ರವಿಲ್ಲದ ರೈಭ್ಯಮುನಿಯು ರಾತ್ರಿಕಾಲದಲ್ಲಿ ಕರುವನ್ನು ಹುಡುಕಲು ಆಶ್ರಮದ ಹೊರಗೆ ಬರುವಾಗ ಮೃಗದಚರ್ಮವನ್ನೇ ಹೊದ್ದುಕೊಂಡು ಬಂದಿದ್ದ. ಕತ್ತಲೆಯಲ್ಲಿ ಆ ಕರಿಯ ಮೃಗಚರ್ಮವನ್ನು ಹೊತ್ತ ಮುನಿಯನ್ನು ನೋಡಿ ಪರಾವಸುವಿಗೆ 'ಯಾವುದೇ ಕಾಡುಪ್ರಾಣಿ ತನ್ನನ್ನು ಕೊಲ್ಲಲು ಬರುತ್ತದೆ' ಎಂದು ಹೆದರಿಕೆಯಾಯಿತು. ಆದ್ದರಿಂದ ಆತ್ಮರಕ್ಷಣೆ ಮಾಡಲಿಕ್ಕಾಗಿ ತನ್ನ ಕೈಯಲ್ಲಿರುವ ದಂಡಕಾಷ್ಠವನ್ನು ಬಿರುಸಿನಿಂದ ಬೀಸಿ ಹೊಡೆದು ಅದನ್ನು ಕೊಂದ. ಅಯ್ಯೋ ಎಂಬ ಚೀರುವ ಧ್ವನಿಯನ್ನು ಕೇಳಿ ತಾನು ಹೊಡೆದುಕೊಂದಿದ್ದು ಕಾಡುಮೃಗವಲ್ಲ. ತನ್ನ ತಂದೆ ರೈಭ್ಯಮುನಿಯೇ' ಎಂದು ಅವನಿಗೆ ತಿಳಿಯಿತು. ಆದರೆ ಕಾರ್ಯಮಿಂಚಿ ಹೋಗಿತ್ತು. ತಂದೆಯ ಪ್ರಾಣ ಹೋಗಿತ್ತು.

ಪರಾವಸುವಿಗೆ ಬಹಳ ದುಃಖವಾಯಿತು. ಅರಣ್ಯ ಮಧ್ಯದಲ್ಲಿ ತನ್ನ ಕೈಯಿಂದಲೇ ಮರಣಹೊಂದಿದ ತಂದೆಯ ಶವವನ್ನು ಅಪ್ಪಿಕೊಂಡು ದೀನದುಃಖಿತನಾಗಿ ರೋದಿಸಿದ. ಅನಂತರ ಶವಸಂಸ್ಕಾರ ಹಾಗೂ ಔರ್ಧ್ವದೇಹಿಕ ಕಾರ್ಯಕಲಾಪಗಳನ್ನೆಲ್ಲ ಮುಗಿಸಿಕೊಂಡು ಮತ್ತೆಹನ್ನೆರಡು ದಿನಗಳ ಬಳಿಕ ಸತ್ರಯಾಗದ ಯಜ್ಞಮಂಟಪಕ್ಕೆ ಬಂದ. ತಮ್ಮ ಅರ್ವಾವಸುವಿಗೆ ತನ್ನಿಂದ ನಡೆದ ಪಿತೃಹತ್ಯೆಯ ದುರ್ಘಟನೆಯನ್ನು ತಿಳಿಸಿದ. ದುಃಖಸಂತಪ್ತನಾದ ಅರ್ವಾವಸು ತನ್ನ ಪಿತೃಕಾರ್ಯವನ್ನು ಮುಗಿಸಿದ. ಅನಂತರ ಅಣ್ಣ ಪರಾವಸು ತಮ್ಮ ಅರ್ವಾವಸುವಿಗೆ ಹೇಳಿದ.

**ಪರಾವಸು:-** ಸೋದರ, ದುರ್ದೈವದಿಂದ ನನ್ನಿಂದ ಪಿತೃಹತ್ಯೆ ಘಟಿಸಿತು. ಅದಕ್ಕೆ ನಾನು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಆದರೆ ಈಗ ಇಲ್ಲಿ ಚಕ್ರವರ್ತಿಯ ಸತ್ರಯಾಗವು ನಡೆದಿದೆ. ಇದಕ್ಕೆ ನಾನೇ ಮುಖ್ಯ ಪುರೋಹಿತ. ನೀನು ಇನ್ನೂ ಚಿಕ್ಕವನು.

ಜ್ಞಾನದಲ್ಲಿಯೂ ಅಷ್ಟೇ. ಇದು ದೀರ್ಘಕಾಲೀನವಾದ ಮಹಾಯಜ್ಞ. ಮೈತುಂಬ ಕಣ್ಣು ಮಾಡಿಕೊಂಡೇ ಇಲ್ಲಿರಬೇಕು. ಅತ್ಯಂತ ಸೂಕ್ಷ್ಮವಾದ ಯಾಜ್ಞಿಕ ಕ್ರಿಯಾಕಲಾಪಗಳನ್ನು ಒಳಗೊಂಡ ಈ ಮಹಾಯಜ್ಞವನ್ನು ಮಂತ್ರ, ತಂತ್ರ, ವಿಧಿ, ವಿಧಾನ, ಅನುಷ್ಠಾನಗಳಲ್ಲಿ ಒಂದೂ ತ್ರುಟಿ ಆಗದಂತೆ, ಎಲ್ಲಿಯೂ ಲೋಪ ಬಾರದಂತೆ ನೀನೊಬ್ಬನೇ ಮಾಡಲಾರಿ. ನಾನು ಮಾತ್ರ ದಕ್ಷ ರೀತಿಯಿಂದ ಈ ಶ್ರೌತಭಾಗದ ಸೂಕ್ಷ್ಮಾತಿಸೂಕ್ಷ್ಮ ಕ್ರಿಯಾಕಲಾಪಗಳನ್ನೆಲ್ಲ ಯಥಾವತ್ತಾಗಿ ಬಲ್ಲೆ. ನಿಂತು ನೆರವೇರಿಸಬಲ್ಲೆ. ಆದ್ದರಿಂದ ಈಗ ನೀನು ಈ ಯಜ್ಞಮಂಟಪದಿಂದ ಹೊರಬಿದ್ದು ಪುಣ್ಯತೀರ್ಥಕ್ಕೆ ಹೋಗು. ಅಲ್ಲಿ ನಿಂತು ನನ್ನ ಬ್ರಹ್ಮಹತ್ಯೆ ಹಾಗೂ ಪಿತೃಹತ್ಯೆ ಪಾಪದ ಪರಿಹಾರಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡು. ನಾನು ಇಲ್ಲಿಯೇ ನಿಂತು ಸಾಮ್ರಾಟನ ಈ ಸತ್ರಯಾಗವನ್ನು ಯಥಾಸಾಂಗವಾಗಿ ನೆರವೇರಿಸಿಕೊಡುತ್ತೇನೆ. ನನಗೆ ಈ ಯಾಜ್ಞಿಕ ವಿಭಾಗದಲ್ಲಿ ಸಾಕಷ್ಟು ಅವಗತಿ, ಪರಿಣತಿ, ಪಾಂಡಿತ್ಯ, ಪ್ರಾವೀಣ್ಯ, ಪ್ರಾವಣ್ಯ, ಅನುಭವ, ಅಧಿಕಾರ ಎಲ್ಲವೂ ಇದೆ.''

ಅಣ್ಣ ಪರಾವಸುವಿನ ಅಪ್ಪಣೆಯನ್ನು 'ತಥಾಸ್ತು' ಎಂದು ಹೇಳಿ ಸ್ವೀಕರಿಸಿದ ಜಾತ್ಯಾ ಸಜ್ಜನನಾದ ಅರ್ವಾವಸು, ಯಜ್ಞಮಂಟಪದಿಂದ ಅಣ್ಣನಿಗೆ ವಂದಿಸಿ ಅರ್ವಾವಸು ಹೊರಬಿದ್ದ. ಗಂಗಾತೀರಕ್ಕೆ ಬಂದ. ಅಲ್ಲಿ ನಿಂತು ಅಣ್ಣ ಮಾಡಿದ ಪಿತೃಹತ್ಯಾ ಪಾಪಕ್ಕೆ ಪ್ರಾಯಶ್ಚಿತ್ತರೂಪವಾಗಿ ವ್ರತಬದ್ಧನಾದ. ನಿಂತುಕೊಂಡು ಜಪ, ತಪ, ಅನುಷ್ಠಾನ, ಕೃಚ್ಛ್ರ ಚಾಂದ್ರಾಯಣ, ಸಾಂತಪನ ಮುಂತಾದ ಎಲ್ಲ ವ್ರತ, ಉಪವಾಸ, ಉಪಾಸನೆಗಳನ್ನು ಮಾಡಿದ. ಒಂದಕ್ಕಿಂತ ಒಂದು ಕಠಿಣಾತಿಕಠಿಣತರವಾಗಿದ್ದವು ಅವನು ಪಿತೃಹತ್ಯಾ ಪ್ರಾಯಶ್ಚಿತ್ತ ರೂಪವಾಗಿ ಕೈಕೊಂಡ ವ್ರತೋಪವಾಸ, ಜಪತಪೋನುಷ್ಠಾನ, ತೀರ್ಥಯಾತ್ರಾ, ದೇವತಾರಾಧನಾದಿಗಳು. ಹೀಗೆ ಧೃಢಮನಸ್ಸಿನಿಂದ ಹಾಗೂ ತಂದೆಯ ಮೇಲಿನ ಭಕ್ತಿಯಿಂದ ಹಾಗೂ ಅಣ್ಣನ ಮೇಲಿನ ಪ್ರೀತಿಯಿಂದ ಹನ್ನೆರಡು ವರ್ಷ ಕಷ್ಟಪಟ್ಟು ಬಗೆಬಗೆಯ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡ. ಅಣ್ಣನ ಪರವಾಗಿ ಬ್ರಹ್ಮಹತ್ಯಾ ಪಾಪವನ್ನೆಲ್ಲ ತೊಳೆದುಕೊಂಡ. ಪರಿಶುದ್ಧನಾಗಿ ರಾಜನ ಯಜ್ಞಮಂಟಪಕ್ಕೆ ಆಗಮಿಸಿದ ಅರ್ವಾವಸು.

ಇತ್ತ ಬೃಹದ್ಯುಮ್ನ ಚಕ್ರವರ್ತಿಯ ಯಜ್ಞವು ಇನ್ನೂ ನಡೆದೇ ಇತ್ತು. ಪರಾವಸು ಪುರೋಹಿತನಾಗಿ ಬೇಸರವಿಲ್ಲದೇ ಆ ದೀರ್ಘಕಾಲೀನ ಯಜ್ಞವನ್ನು ನಿರಾತಂಕವಾಗಿ ಮಾಡಿಸುತ್ತಲೇ ಇದ್ದ. ಎಂದಿನಂತೆ ಅತಿಥಿಗಳು, ಅಭ್ಯಾಗತರು, ಋಷಿಮುನಿಗಳು, ಲೌಕಿಕವೈದಿಕರು ಆ ಯಜ್ಞವನ್ನು ಬಂದು ನೋಡಿಕೊಂಡು, ತಮಗೆಬೇಕಾದಷ್ಟು ದಿನ ಇದ್ದು, ಅಲ್ಲಿಯ ಅತಿಥ್ಯವನ್ನು ಉಂಡು, ದಾನದಕ್ಷಿಣೆಗಳನ್ನು ಕೊಂಡು, ರಾಜಾತಿಥ್ಯದ ಆದರೋಪಚಾರದ ರುಚಿಯನ್ನು ಮನಗಂಡು, ಆನಂದದಿಂದ ತೆರಳುತ್ತಿದ್ದರು. ಧಾರಾಪ್ರವಾಹರೂಪವಾಗಿ ಅಸಂಖ್ಯ ಜನ ಬಂದು ಹೋಗುತ್ತಲೇ ಇತ್ತು. ತುಪ್ಪಸಕ್ಕರೆಯ ಕಾಲುವೆಯು ಹರಿಯುತ್ತಲೇ ಇತ್ತು. ಹಾಲು ಮೊಸರು ಪಂಚಾಮೃತದ ಸಾರ್ವತ್ರಿಕ ಅಭಿಷೇಕ ನಿರಂತರ ನಡದೇ ಇತ್ತು. ಅರ್ವಾವಸುವಿಗೆ ತಾನಿದ್ದಾಗ ನಡೆದಂತೆಯೇ ಅದ್ದೂರಿಯಿಂದ ನಡೆದ ಯಜ್ಞಕಾರ್ಯವನ್ನು ಕಂಡು ಸಂತೋಷವಾಯಿತು. ಅವನು ಉತ್ಸಾಹದಿಂದಲೇ ಅಗ್ನ್ಯಾಗಾರಕ್ಕೆ ಆಗಮಿಸಿದ. ದೂರದಿಂದಲೇ ಪರಾವಸು ನೋಡಿದ ಬರುತ್ತಲಿರುವ ತಮ್ಮನನ್ನು. ಇಷ್ಟು ಸಮರ್ಥರೀತಿಯಿಂದ ಯಜ್ಞಕಾರ್ಯವನ್ನು ಮಾಡಿಸುವ ಪರಾವಸುವಿಗೆ ಅತ್ಯಂತ ಕೃತಜ್ಞನಾಗಿದ್ದ ಬೃಹದ್ಯುಮ್ನ ಮಹಾರಾಜ. ಪರಾವಸು ಹೇಳಿದ ಒಂದು ಮಾತನ್ನೂ ಆ ಭೂಪಾಲ ತೆಗೆದು ಹಾಕುತ್ತಲಿರಲಿಲ್ಲ. ಈಗ ಪರಾವಸು ಮಹಾರಾಜನಿಗೆ ನುಡಿದ.

**ಪರಾವಸು:-** ಮಹಾರಾಜ, ಆಕೋ ಅಲ್ಲಿ ನೋಡು. ನನ್ನ ತಮ್ಮ ಅರ್ವಾವಸು ಬರುತ್ತಲಿದ್ದಾನೆ. ಅವನು ಬ್ರಹ್ಮಹತ್ಯಾ ಪಾಪವನ್ನು ಗೈದಿದ್ದಾನೆ. ಅವನು ಈ ಯಜ್ಞ ಮಂಟಪದಲ್ಲಿ ಕಾಲಿಟ್ಟರೆ ನಿನಗೆ ಈ ಸತ್ರಯಾಗದ ಫಲವೇ ಬರುವದಿಲ್ಲ. ಇಷ್ಟು ದಿನ ನೀನು ಕಷ್ಟಪಟ್ಟು ಮಾಡಿದ ಯಾಗವೆಲ್ಲವೂ ನಿಷ್ಫಲವಾಗುವದು. ಆದ್ದರಿಂದ ಆ ಅರ್ವಾವಸುವನ್ನು ಈ ಯಜ್ಞಮಂಟಪದ ಒಳಗೆ ಬಾರದಂತೆ ಅಲ್ಲಿಂದಲೇ ಹೊರಗೆ ಹಾಕಿಸು.''

ಸಮ್ರಾಟ್ ಬೃಹದ್ಯುಮ್ನನು ಒಂದು ರೀತಿಯಿಂದ ಪರಾವಸು ಪುರೋಹಿತನಿಗೆ ದಾಸಾನುದಾಸ. ಅವನ ಮಾತು ವೇದವಚನ ಇವನಿಗೆ. ತಕ್ಷಣವೇ ಆದೇಶ ನೀಡಿದ. ಅರ್ವಾವಸುವನ್ನು ಯಜ್ಞಶಾಲೆಯ ಹೊರ ಅಂಗಣದಿಂದಲೇ ಹೊರದೂಡಿಸಿದ ಸೇವಕರ ಕಡೆಯಿಂದ. ಅಲ್ಲಿ ನೆರೆದ ಋತ್ವಿಜರು ಕೂಡ ಬೆಂಬಲಿಸಿದರು ಪರಾವಸುವಿನ ಈ ಸೋದರ ನಿಷ್ಕಾಸನ ಕ್ರಮವನ್ನು.

ಯಜ್ಞಭೂಮಿಯಿಂದ ಹೊರತಳ್ಳಲ್ಪಟ್ಟ ಅರ್ವಾವಸು ಮನದಲ್ಲಿ ಮಿಡುಕಲಿಲ್ಲ. ಅಣ್ಣನನ್ನು ನಿಂದಿಸಲಿಲ್ಲ. ರಾಜನ ಮೇಲೆ ಕೋಪಿಸಲಿಲ್ಲ. ತನಗೆ ಆದ ಅವಮಾನವನ್ನು ತಾಳ್ಮೆಯಿಂದ ನುಂಗಿಕೊಂಡು ವಿಜನ ವನಾಂತರಕ್ಕೆ ಬಂದ. ಅಲ್ಲಿಯ ವನಾಂತ ಏಕಾಂತದಲ್ಲಿ ನಿಂತು ಸೂರ್ಯನಾರಾಯಣನನ್ನು ಕುರಿತು ಆಚರಿಸಿದ ಉಗ್ರತಪಸ್ಸನ್ನು. ಇವನ ಭಕ್ತಿ ಹಾಗೂ ತೀಕ್ಷ್ಣ ತಪಶ್ಚರ್ಯೆಯನ್ನು ಕಂಡು ಸುಪ್ರಸನ್ನನಾದ ಸೂರ್ಯನಾರಾಯಣ. ತಪಂಗೈಯುತ್ತಿದ್ದ ಅರ್ವಾವಸುವಿನ ಎದುರು ಪ್ರತ್ಯಕ್ಷನಾದ ಮತ್ತು ಅವನಿಗೆ ಅನುಗ್ರಹಗೈದು ನುಡಿದ-

**ಸೂರ್ಯ:-** ಅರ್ವಾವಸು, ನಿನ್ನ ತಪಸ್ಸು ಹಿರಿದು. ಬ್ರಹ್ಮಚರ್ಯ ಅಖಂಡ. ಆಚಾರ ಶಾಸ್ತ್ರಶುದ್ಧ. ವೇದಶಾಸ್ತ್ರಜ್ಞಾನ ಪರ್ಯಾಪ್ತ. ನಿನ್ನ ಶಿಕ್ಷಾದೀಕ್ಷೆಗಳು ಆದರ್ಶ. ಯಾಜ್ಞಿಕ ಕ್ರಿಯಾ ಕೌಶಲ್ಯ ಅತುಲ್ಯ. ನೀನು ಯಜ್ಞದಲ್ಲಿ ಪುರೋಹಿತನಾಗಿ ಕುಳಿತುಕೊಂಡರೆ ತನ್ನ ಬೆಳಕು ಬೀಳುವದಿಲ್ಲ ಎಂದು ಪರಾವಸುವು ನಿನ್ನನ್ನು ಹೊರಗೆ ಹಾಕಿಸಿದ್ದಾನೆ. ತಂದೆಯನ್ನು ಕೊಂದವ ಪರಾವಸು. ಅದಕ್ಕಾಗಿ ದೊಡ್ಡ ಮನಸ್ಸಿನಿಂದ ನೀನು ಅವನ ಪಾಪ ಕಳೆಯಲಿಕ್ಕಾಗಿ ಹನ್ನೆರಡು ವರ್ಷ ಪ್ರಾಯಶ್ಚಿತ್ತ ಮಾಡಿಕೊಂಡಿರುವೆ. ಇದಕ್ಕಾಗಿ ಪರಾವಸು ಕೃತಜ್ಞನಾಗಿರುವ ಬದಲು ಕೃತಘ್ನನಾದ. ರಾಜನಿಗೆ ಹೇಳಿ ನಿನ್ನನ್ನು ಹೊರಗೆ ಹಾಕಿಸಿದ. ಇಷ್ಟಾದರೂ ನೀನು ನಿನ್ನ ಹಿರಿಯ ಸೋದರನ ಮೇಲೆ ಸಿಟ್ಟಾಗಲಿಲ್ಲ. ತಾಳ್ಮೆಯಿಂದಲೇ ತಪಸ್ಸನ್ನು ಮಾಡಿದೆ ಆದ್ದರಿಂದ ನೀನು ಸರ್ವರೀತಿಯಿಂದಲೂ ಜ್ಞಾನ, ಭಕ್ತಿ, ವೈರಾಗ್ಯ, ವ್ಯವಹಾರ ಎಲ್ಲದರಲ್ಲಿಯೂ ಎಲ್ಲರಿಗಿಂತಲೂ ಸರ್ವಶ್ರೇಷ್ಠನಾಗು ಎಂದು ವರವನ್ನು ಕೊಟ್ಟಿದ್ದೇನೆ.''

ಸೂರ್ಯನಾರಾಯಣನು ಹೀಗೆ ವರವನ್ನು ಕೊಟ್ಟಿದ್ದನ್ನು ಕೇಳಿ ಇಂದ್ರಾದಿ ದೇವತೆಗಳೆಲ್ಲರೂ ಅಲ್ಲಿಗೆ ಬಂದರು. ಎಲ್ಲ ಮಾನವರಲ್ಲಿಯೂ ಮುನಿಮಂಡಲದಲ್ಲಿಯೂ ಅರ್ವಾವಸು ಸರ್ವಶ್ರೇಷ್ಠ ಎಂದು ಒಪ್ಪಿಕೊಂಡರು. ಮತ್ತು ಸಾಧು ಶಿರೋಮಣಿಯಾದ ಆ ಋಷಿಕುಮಾರನಿಗೆ 'ಬಯಸಿದ ವರವನ್ನು ಬೇಡು' ಎಂದು ಹೇಳಿದರು.

## ಕನಿಷ್ಠನ ಜ್ಯೇಷ್ಠತೆ ಹಾಗೂ ಶ್ರೇಷ್ಠತೆ

**ಅರ್ವಾವಸು:-** ದೇವತಾಪುರುಷರೇ, ನೀವು ನನ್ನ ಮೇಲೆ ಸಂತುಷ್ಟರಾಗಿದ್ದರೆ ಮೃತನಾದ ನಮ್ಮ ತಂದೆಯು ಮತ್ತೆ ಬದುಕಿ ಬರಲಿ. ಅವನಿಗೆ ತನ್ನ ಮಗನೇ ತನ್ನನ್ನು ಹೊಡೆದು ಕೊಂದಿದ್ದಾನೆ ಎಂಬ ನೆನಪು ಇರದಿರಲಿ. ಈ ದುರ್ಘಟನೆಯನ್ನು ಅವನು ಪೂರ್ಣ ಮರೆಯಲಿ.

**ದೇವತೆಗಳು:-** ತಥಾಸ್ತು, ಮತ್ತೆ ಬೇರೆ ವರ ಬೇಕಿದ್ದರೆ ಕೇಳು.

**ಅರ್ವಾವಸು:-** ನನ್ನ ಅಣ್ಣ ಮಾಡಿದ ದುಷ್ಕರ್ಮಗಳ ಪಾಪಗಳೆಲ್ಲವೂ ಪರಿಹಾರವಾಗಲಿ. ಅವನಿಗೆ ಸದ್ಬುದ್ಧಿ ಹುಟ್ಟಲಿ.

**ದೇವತೆಗಳು:-** ಮಹಾಪಾಪಗಳನ್ನು ಮಾಡಿದವರು ಬೇರೆಯವರಿಂದ ಪ್ರಾಯಶ್ಚಿತ್ತ ಮಾಡಿಸಿದರೆ ಪರಿಹಾರವಾಗುವದಿಲ್ಲ. ಕ್ಷುದ್ರಪಾಪಗಳು ಪರರು ಮಾಡಿದ ಪ್ರಾಯಶ್ಚಿತ್ತದಿಂದ ನಾಶವಾಗುವವು. ಆದರೆ ಪಿತೃಹತ್ಯೆ, ಬ್ರಹ್ಮಹತ್ಯೆಯಂತಹ ಮಹಾಪಾಪಗಳು ನಿವೃತ್ತ ಆಗಬೇಕೆಂದರೆ ಹಂತಕನು ತಾನೇ ಸ್ವಯಂ ನಿಂತು ಕಠಿಣತರವಾದ ಪ್ರಾಯಶ್ಚಿತ್ತ ವಿಧಾನಗಳನ್ನು ಮಾಡಿಕೊಳ್ಳಬೇಕು. ಆದ್ದರಿಂದ ನಿನ್ನ ಅಣ್ಣ ಪರಾವಸುವಿನ ಉದ್ಧಾರವು ನೀನು ಮಾಡಿಕೊಂಡ ಪ್ರಾಯಶ್ಚಿತ್ತದಿಂದ ಆಗಲಾರದು.

**ಅರ್ವಾವಸು:-** ಪೂಜ್ಯರೇ, ಹಾಗಾದರೆ, ನಮ್ಮ ಅಣ್ಣನ ಉದ್ಧಾರ ಆಗುವದೆಂತು? ತಾವೆಲ್ಲರೂ ದೊಡ್ಡವರಲ್ಲವೆ? ಕರುಣಾಶಾಲಿಗಳು. ತಾವು ಮೇಲಾಗಿ ಭೂತದಯಾ ಶೀಲರು. ನಮ್ಮ ಅಣ್ಣನ ಮೇಲೆ ತಾವೆಲ್ಲರೂ ದಯದೋರಿರಿ. ಅವನ ಉದ್ಧಾರದ ಉಪಾಯ ಹೇಳಿರಿ. ಎಷ್ಟು ಕಷ್ಟವಾದರೂ ನಾನು ಅದನ್ನು ಮಾಡುತ್ತೇನೆ.

**ದೇವತೆಗಳು:-** ನಾವೆಲ್ಲರೂ ನಿನ್ನ ಬಿನ್ನಹದ ಮೇರೆಗೆ ಪರಸ್ಪರ ವಿಚಾರ ವಿನಿಮಯ ಮಾಡಿ ನಿನಗೆ ನಿರ್ಣಯವನ್ನು ಹೇಳುತ್ತೇವೆ ಕೇಳು. ಪಾಪಗಳಲ್ಲೆಲ್ಲ ಪಿತೃಹತ್ಯೆ ಬಹಳ ಭೀಕರವಾದ ಪಾಪ. ಅದಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ಆದರೂ ನಿನ್ನ ಬಿನ್ನಹವನ್ನು ಅನುಲಕ್ಷಿಸಿ ನಿಮ್ಮ ಅಣ್ಣನ ಮಹಾಪಾಪವನ್ನು ಕಳೆಯಲು ಒಂದು ಉಪಾಯವನ್ನು ಹೇಳುತ್ತೇವೆ ಕೇಳು. ದಕ್ಷಿಣಸಮುದ್ರ ತೀರದಲ್ಲಿ ಇರುವ ರಾಮಸೇತು ಮೋಕ್ಷದಾಯಕ. ಅಲ್ಲಿ ಇರುವ ಧನುಷ್ಕೋಟಿ ತೀರ್ಥವು ಬ್ರಹ್ಮಹತ್ಯಾ, ಸುರಾಪಾನ, ಸುವರ್ಣ ಚೌರ್ಯ, ಗುರುಪತ್ನೀಗಮನ ಮುಂತಾದ ಮಹಾಮಹಾಪಾಪಗಳನ್ನು ಅಳಿದು ಬಿಡುವದು. ಮನಸ್ಸಿನಲ್ಲಿ ಯಾವ ಕಾಮನೆಯನ್ನು ಇಟ್ಟುಕೊಳ್ಳದೇ ಇಲ್ಲಿ ಸ್ನಾನಮಾಡಿದವರಿಗೆ ಬರುವ ಫಲ ಎಂದರೆ ಸಾಕ್ಷಾತ್ ಮೋಕ್ಷ. ನಿನ್ನ ಅಣ್ಣ ಪರಾವಸು ಆ ಧನುಷ್ಕೋಟಿ ತೀರ್ಥದಲ್ಲಿ ಸ್ನಾನಮಾಡಿದರೆ ತೊಳೆದು ಹೋಗುವದು ಅವನ ಪಿತೃಹತ್ಯಾ ಪಾಪ.''

ಹೀಗೆ ಹೇಳಿ ಎಲ್ಲ ದೇವತೆಗಳೂ ಸೂರ್ಯನಾರಾಯಣನೊಂದಿಗೆ ತಮ್ಮ ತಮ್ಮ ಲೋಕಗಳಿಗೆ ತೆರಳಿದರು.

ಅನಂತರ ಅರ್ವಾವಸು ಪರಾವಸುವಿನ ಬಳಿಗೆ ಬಂದು ತನಗೆ ಆದ ಸೂರ್ಯ ನಾರಾಯಣನ ಸಾಕ್ಷಾತ್ಕಾರ ಹಾಗೂ ದೇವತೆಗಳು ಹೇಳಿದ ಉದ್ಧಾರದ ಉಪಾಯಗಳನ್ನು ತಿಳಿಸಿದ. ಅದಕ್ಕೆ ಸಮ್ಮತಿಸಿ ಪರಾವಸುವು ಸೋದರ ಅರ್ವಾವಸುವಿನೊಂದಿಗೆ ಧನುಷ್ಕೋಟಿ ತೀರ್ಥಕ್ಕೆ ಆಗಮಿಸಿದ.

ಇಬ್ಬರೂ ಸೋದರರು ಧನುಷ್ಕೋಟಿ ತೀರ್ಥದಲ್ಲಿ ಸ್ನಾನಮಾಡಿ ರಾಮೇಶ್ವರನ ಪೂಜೆಗೈದು ಶ್ರೀರಾಮಚಂದ್ರನ ಧ್ಯಾನವನ್ನು ಭಕ್ತಿಯಿಂದ ಮಾಡಿದರು. ಅನಂತರ ತಮ್ಮ ಆಶ್ರಮಕ್ಕೆ ಮರಳಿದರು. ದೇವತೆಗಳು ಅರ್ವಾವಸುವಿಗೆ ಕೊಟ್ಟ ವರದಂತೆ ರೈಭ್ಯಮುನಿಯು ಪುನಃಜೀವಿತನಾಗಿ ಆಶ್ರಮದಲ್ಲಿ ಇಬ್ಬರು ಮಕ್ಕಳ ದಾರಿ ಕಾಯುತ್ತ ಕುಳಿತುಕೊಂಡಿದ್ದನು. ಈರ್ವರೂ ಸೋದರರು ಆಗಮಿಸಿ ದೇವತಾ ಅನುಗ್ರಹದಿಂದ ಯಮಪಟ್ಟಣದಿಂದ ಮರಳಿಬಂದ ತಂದೆಯನ್ನು ವಂದಿಸಿದರು. ರೈಭ್ಯಮುನಿಯು ಮತ್ತೆ ಮಕ್ಕಳೊಂದಿಗೆ ಬಂದು ಸೇತುತೀರ್ಥ ಧನುಷ್ಕೋಟಿ ತೀರ್ಥಗಳಲ್ಲಿ ಸ್ನಾನಮಾಡಿ ರಾಮಾರಾಧನೆಯನ್ನು ಗೈಯುತ್ತ ಸುಖದಿಂದ ಬಹುಕಾಲ ಈ ಭೂಲೋಕದಲ್ಲಿ ವಾಸಮಾಡಿದನು.

**ಸೂತ:-** ಧನುಷ್ಕೋಟಿ ತೀರ್ಥದ ಮಹಿಮೆಯನ್ನು ನಿಮಗೆ ಮನಗಾಣಿಸಿ ಕೊಡಲು ನರಿ ಹಾಗೂ ಕೋತಿಗಳ ನಡುವೆ ನಡೆದ ಒಂದು ಸಂವಾದವನ್ನು ಬಣ್ಣಿಸುತ್ತೇನೆ ಕೇಳಿರಿ. ಪೂರ್ವಕಾಲದಲ್ಲಿ ಒಂದು ಸ್ಥಳದಲ್ಲಿ ಒಂದು ನರಿ ಹಾಗೂ ಮಂಗ ಇರುತ್ತಿದ್ದವು. ಸುದೈವದಿಂದ ಅವೆರಡಕ್ಕೂ ತಮ್ಮ ಜನ್ಮಾಂತರದ ಸ್ಮರಣೆ ಇದ್ದಿತು. ಹಿಂದೆ ಆ ಶೃಗಾಲ ಹಾಗೂ ಮರ್ಕಟಗಳಲ್ಲಿ ಒಳ್ಳೆ ಘನಿಷ್ಠ ಮೈತ್ರಿ ಇದ್ದಿತು. ನರಿಯ ಹೆಸರು ರುದ್ರಭೂಮಿಷ್ಠ. ಒಂದು ದಿನ ಆ ಮರ್ಕಟವು ರುದ್ರಭೂಮಿಯಲ್ಲಿ ನರಿಯನ್ನು ನೋಡಿತು. ಅದಕ್ಕೆ ಹಿಂದಿನ ಜನ್ಮದ ನೆನಪನ್ನು ತಂದುಕೊಟ್ಟು ಪ್ರಶ್ನೆ ಮಾಡಿತು.

**ಮರ್ಕಟ:-** ನರಿಯೇ, ನೀನು ಹಿಂದಿನ ಜನ್ಮದಲ್ಲಿ ಏನು ಭಯಂಕರ ಪಾಪ ಮಾಡಿದ್ದೆ? ಈ ಜನ್ಮದಲ್ಲಿ ಈ ಸುಡುಗಾಡಿನಲ್ಲಿ ದುರ್ಗಂಧ ವಾಸನೆ ಬರುವ ಹೆಣಗಳನ್ನು ಹರಿದು ತಿನ್ನುವ ದುರವಸ್ಥೆಯು ನಿನಗೆ ಬರಲು ಕಾರಣವೇನು?

**ನರಿ:-** ವಾನರ, ನಾನು ಪೂರ್ವಜನ್ಮದಲ್ಲಿ ಒಬ್ಬ ವೈದಿಕ ಪಂಡಿತ. ವೇದೋಕ್ತವಾದ ಯಜ್ಞಯಾಗಾದಿ ಕರ್ಮಕಲಾಪಗಳ ಪರಿಪೂರ್ಣ ಜ್ಞಾನವು ನನಗೆ ಇದ್ದಿತು. ನನ್ನ ಹೆಸರು ಆಗ ವೇದಶರ್ಮ. ಆ ಜನ್ಮದಲ್ಲಿ ನಾನು ಓರ್ವ ವೇದಶಾಸ್ತ್ರ ಪಂಡಿತನಿಗೆ ಒಂದು ದಾನವನ್ನು ಕೊಡುತ್ತೇನೆ ಎಂದು ಹೇಳಿ ಸಂಕಲ್ಪಮಾಡಿದ್ದೆ. ಅನಂತರ ಆ ದಾನ ದ್ರವ್ಯವನ್ನು ಕೊಡಬಾರದು ಎಂಬ ದುರ್ಬುದ್ಧಿ ನನಗೆ ಬಂದಿತು. ಜಿಪುಣತನದಿಂದ ಆ ವೇದವಿದ್ವಾಂಸನಿಗೆ ಎಂದು ತೆಗೆದು ಇರಿಸಿದ ದ್ರವ್ಯವನ್ನು ನಾನೇ ಬಳಸಿಬಿಟ್ಟೆ. ಆ ಪಾಪದಿಂದ ನನಗೆ ಈ ನರಿಯ ಜನ್ಮ ಬಂದಿತು. ವೇದಶಾಸ್ತ್ರ ಪಂಡಿತರಲ್ಲಿ ಕೊಡುತ್ತೇನೆ ಎಂದು ಪ್ರತಿಜ್ಞೆ ಮಾಡಿ ಕೊಡದೇ ಇದ್ದರೆ ಹತ್ತು ಜನ್ಮಗಳಲ್ಲಿ ಮಾಡಿದ ಪುಣ್ಯವೆಲ್ಲವೂ ನಷ್ಟವಾಗುತ್ತದೆ. ಮತ್ತು ನಿಂದ್ಯವಾದ ನರಿಯ ಜನ್ಮವು ಪ್ರಾಪ್ತವಾಗುತ್ತದೆ. ಆದ್ದರಿಂದ ವಿವೇಕಿಗಳಾದವರು 'ಕೊಡುತ್ತೇನೆ' ಎಂದು ಪ್ರತಿಜ್ಞೆ ಮಾಡಿದ ಪದಾರ್ಥವನ್ನು ಕೊಟ್ಟುಬಿಡಬೇಕು. ಇದು ನನ್ನ ಕತೆ ಇನ್ನು ನಿನಗೆ ಈ ಕೀಳು ಕೋತಿಯ ಜನ್ಮ ಬರಲು ಏನು ಕಾರಣ? ನಿನ್ನ ಜನ್ಮಾಂತರದ ಕತೆಯನ್ನು ತಿಳಿಸು.

**ವಾನರ:-** ಪೂರ್ವಜನ್ಮದಲ್ಲಿ ನಾನು ಒಬ್ಬ ಬ್ರಾಹ್ಮಣ. ವೇದನಾಥ ಎಂದು ನನ್ನ ಹೆಸರು. ತಂದೆ ವಿಶ್ವನಾಥ. ತಾಯಿ ಕಮಲಾಲಯಾ, ನರಿಯೇ, ಕಳೆದ ಜನ್ಮದಲ್ಲಿ ನಾವಿಬ್ಬರೂ ಮಿತ್ರರೇ ಆಗಿದ್ದೆವು. ನಿನಗೆ ಅದು ಈಗ ನೆನಪಿರಲಿಕ್ಕಿಲ್ಲ. ಆದರೆ ನನಗೆ ಮಾತ್ರ ಅದರ ನೆನಪು ಅಚ್ಚಳಿಯದೇ ಉಳಿದಿದೆ. ಕಳೆದ ಜನ್ಮದಲ್ಲಿ ನಾನು ಓರ್ವ ಶಿಷ್ಟ ವಿಶಿಷ್ಟ

ಬ್ರಾಹ್ಮಣನ ಮನೆಯಲ್ಲಿಯ ತರಕಾರಿಯನ್ನು ಕದ್ದುಬಿಟ್ಟಿದ್ದೆ. ಆದ್ದರಿಂದಲೇ ನನಗೀಗ ಈ ಕೀಳು ಕೋತಿಯ ಜನ್ಮ. ಬ್ರಹ್ಮಸ್ವವನ್ನು ಅಪಹರಿಸಿದರೆ ಮೊದಲು ನರಕ. ನಂತರ ಈ ಮಂಗಜನ್ಮ. ವಿಷವು ಕುಡಿದವರನ್ನು ಮಾತ್ರ ಕೊಲ್ಲುತ್ತದೆ. ಆದರೆ ಈ ಬ್ರಹ್ಮಸ್ವ ಅಪಹರಣವು ಸಮಗ್ರ ಕುಲವನ್ನೇ ನರಕದಲ್ಲಿ ಕೊಳೆಯ ಹಾಕುತ್ತದೆ. ಆದ್ದರಿಂದ ವೇದಶಾಸ್ತ್ರ ಓದಿದ ವಿದ್ವಾಂಸರ ಹಣವನ್ನು ಎಂದೂ ಅಪಹರಿಸಬಾರದು. ಅಂಥವರ ಮನೆಯಲ್ಲಿ ಕಳವು ಮಾಡಿಯೇ ನಾನು ಈ ನಿಂದ್ಯವಾದ ಕೋತಿಯ ಜನ್ಮದಲ್ಲಿ ಯಾತನೆ ಪಡುತ್ತಿದ್ದೇನೆ. ನಮ್ಮಿಬ್ಬರನ್ನೂ ಈ ನಿಂದ್ಯ ಯೋನಿಯಿಂದ ಉದ್ಧಾರ ಮಾಡುವ ಪುಣ್ಯಾತ್ಮರು ಎಲ್ಲಿಯಾದರೂ ಇರುವರೆ?''

ಹೀಗೆ ಆ ಶೃಗಾಲ ಹಾಗೂ ವಾನರ ಎರಡೂ ಮಾತುಕತೆ ಆಡುತ್ತಲಿದ್ದಾಗ ಸಿಂಧುದ್ವೀಪ ಎಂಬ ಮಹರ್ಷಿಗಳು ಆಗಮಿಸಿದರು. ಅವರಿಗೆ ವಂದನೆಮಾಡಿ ಆ ನರಿ ಮಂಗಗಳು ಕೇಳಿದವು- ''ಪೂಜ್ಯರೆ, ನಾವು ಈ ಪಾಪಿ ಜನ್ಮದಿಂದ ಉದ್ಧಾರ ಹೊಂದುವ ಉಪಾಯವನ್ನು ಸೂಚಿಸಿರಿ.

**ಸಿಂಧುದ್ವೀಪ:-** ನೀವಿಬ್ಬರೂ ಶ್ರೀರಾಮಚಂದ್ರನು ನಿರ್ಮಿಸಿದ ಧನುಷ್ಕೋಟಿ ತೀರ್ಥಕ್ಕೆ ಹೋಗಿ ಸ್ನಾನಮಾಡಿರಿ. ಅದರಿಂದ ನೀವಿಬ್ಬರೂ ಮುಕ್ತರಾಗುವಿರಿ.

ಮುನಿಯ ಆದೇಶದಂತೆ ನಡೆದವು ಆ ಎರಡೂ ಪ್ರಾಣಿಗಳು. ದಕ್ಷಿಣತೀರ್ಥದ ದಾರಿ ಹಿಡಿದವು. ಸೇತುತೀರ್ಥಕ್ಕೆ ಬಂದವು. ಧನುಷ್ಕೋಟಿ ತೀರ್ಥದಲ್ಲಿ ಮಿಂದವು. ಪಾಪಮುಕ್ತವಾದವು. ಆ ಪಾಪಿ ಯೋನಿಯಿಂದಲೂ ಮುಕ್ತವಾದವು. ದಿವ್ಯ ದೇಹ ಧರಿಸಿದವು. ದೇವ ಲೋಕದ ವಿಮಾನಲೋಕದಲ್ಲಿ ಕುಳಿತು ಸ್ವರ್ಗಾರೋಹಣ ಮಾಡಿದವು. ಅಲ್ಲಿ ದೇವೇಂದ್ರನು ತನ್ನ ಅಕ್ಕಪಕ್ಕದಲ್ಲಿ ಅರ್ಧಾಸನ ಕೊಟ್ಟು ತನ್ನ ಬಳಿಗೆ ಕೂಡಿಸಿಕೊಂಡನು.

ಗೋದಾವರೀ ತೀರದಲ್ಲಿ ದುರಾಚಾರಿ ಎಂಬ ಒಬ್ಬ ಬ್ರಾಹ್ಮಣ. ಮಹಾಪಾಪಿಷ್ಠ ಆ ದುಷ್ಟ. ಪಂಚಮಹಾಪಾತಕಿಗಳ ಜೊತೆಗೇ ಅವನ ಒಡನಾಟ. ಅವರ ಸಂಗಸಹವಾಸ ಗಳಿಂದ ಅವನ ಬ್ರಾಹ್ಮಣ್ಯ ಎಂದೋ ನಷ್ಟವಾಗಿತ್ತು. ಬ್ರಾಹ್ಮಣ್ಯವು ಕಳೆದುಹೋದ ಬಳಿಕ ಅವನನ್ನು ಮಹಾಬಲಿಷ್ಠವಾದ ಒಂದು ವೇತಾಳವು ಹಿಡಿದುಕೊಂಡಿತು. ವೇತಾಳದಿಂದ ಆವಿಷ್ಟನಾದ ಆ ಬ್ರಾಹ್ಮಣ. ಅದರಿಂದ ಪೀಡಿತನಾಗಿ ಹಾಗೂ ಪರವಶನಾಗಿ ದೇಶ ದೇಶ ತಿರುಗಿದ. ವನ ವನ ಅಲೆದ. ಹೀಗೆ ಕಂಡಲ್ಲೆಲ್ಲ ಅಂಡಲೆಯುತ್ತ ಕೊನೆಗೆ ಧನುಷ್ಕೋಟಿಗೆ ಬಂದ. ವೇತಾಳ ಹಿಡಿದ ಆ ದುರಾಚಾರ ಎಂಬ ಹೆಸರಿನ ಬ್ರಾಹ್ಮಣನು ಪರತಂತ್ರನಾಗಿ ಆ ವೇತಾಳದ ಪ್ರೇರಣೆಯಂತೆಯೇ ಧನುಷ್ಕೋಟಿ ತೀರ್ಥದಲ್ಲಿಯೇ ಸ್ನಾನಮಾಡಿದ. ಅದರ ನೀರಿನಲ್ಲಿ ಮುಳುಗಿ ಹಾಕಿದ ಕೂಡಲೇ ಆ ವೇತಾಳವು ಅವನನ್ನು ಬಿಟ್ಟು ಬಿಟ್ಟಿತು. ಅದರಿಂದ ಆ ಬ್ರಾಹ್ಮಣನಿಗೆ ಜ್ಞಾನೋದಯವಾಯಿತು. ಅವನು ವಿಚಾರಿಸತೊಡಗಿದ. ''ಗೋದಾವರೀ ತೀರದಲ್ಲಿದ್ದ ನಾನು ಈ ಸಮುದ್ರ ತೀರಕ್ಕೆ ಹೇಗೆ ಬಂದೆ? ಹೀಗೆ ವಿಚಾರ ಮಾಡುತ್ತ ಅವನು ಧನುಷ್ಕೋಟಿ ತೀರ್ಥದ ದಂಡೆಯ ಬಳಿ ಇರುವ ದತ್ತಾತ್ರೇಯ ಯೋಗಿಯ ಬಳಿ ಬಂದು ನಮಸ್ಕಾರ ಮಾಡಿ ಕೇಳಿದ.

**ದುರಾಚಾರ:-** 'ಭಗವನ್ ಗೋದಾವರೀ ತಟಾಕದಲ್ಲಿದ್ದ ನಾನು ಈ ಸಮುದ್ರ ತಟಾಕಕ್ಕೆ ಬಂದದ್ದು ಹೇಗೆ?

**ದತ್ತಾತ್ರೇಯ:-** ಮಹಾಪಾಪಿಗಳ ಸಂಪರ್ಕದಿಂದ ನಿನ್ನ ಬ್ರಾಹ್ಮಣ್ಯ ನಷ್ಟವಾದದ್ದರಿಂದ ಒಂದು ವೇತಾಳವು ಹಿಡಿದುಬಿಟ್ಟಿತ್ತು ನಿನ್ನನ್ನು. ಆ ವೇತಾಳವು ನಿನ್ನನ್ನು ನಡೆಸಿಕೊಂಡು ಧನುಷ್ಕೋಟಿ ತೀರ್ಥಕ್ಕೆ ತಂದು ಸ್ನಾನ ಮಾಡಿಸಿತು. ಆ ಸ್ನಾನದಿಂದ ಮಹಾಪಾತಕಿಗಳ ಸಂಪರ್ಕಮೂಲಕ ಬಂದ ನಿನ್ನ ದೋಷಗಳೆಲ್ಲವೂ ನಾಶವಾಗಿರುತ್ತವೆ.

ನಿನ್ನನ್ನು ಇಷ್ಟು ದಿನ ಹಿಡಿದುಕೊಂಡ ವೇತಾಳವು ಜನ್ಮಾಂತರದಲ್ಲಿ ಬ್ರಾಹ್ಮಣ ನಾಗಿದ್ದಿತು. ಆಶ್ವೀನ ಕೃಷ್ಣಪಕ್ಷದಲ್ಲಿ ಪಾರ್ವಣ ವಿಧಿಯಿಂದ ಪಿತೃಗಳಿಗೆ ಸಂತೋಷದಿಂದ ಅವನು ಮಹಾಲಯ ಶ್ರಾದ್ಧವನ್ನು ಮಾಡಲಿಲ್ಲ. ಅದರಿಂದ ಪಿತೃಗಳು ಅವನಿಗೆ ಶಾಪಕೊಟ್ಟು ವೇತಾಳನನ್ನಾಗಿ ಮಾಡಿದರು. ಈಗ ಧನುಷ್ಕೋಟಿ ದರ್ಶನದಿಂದ ಅದರ ಆ ದುರ್ಯೋನಿಯಿಂದ ಮುಕ್ತಿಯಾಗಿ ವಿಷ್ಣುಲೋಕಕ್ಕೆ ಪ್ರಯಾಣ ಮಾಡಿತು ಆ ವೇತಾಳ.

## ಶ್ರಾದ್ಧಪಕ್ಷ ಮಾಡದವರೇ ಭೂತವೇತಾಳರಾಗುವರು

ಭಾದ್ರಪದ ಕೃಷ್ಣಪಕ್ಷದಲ್ಲಿ ಮಹಾಲಯ ಶ್ರಾದ್ಧಮಾಡದೇ ಇದ್ದವರು ವೇತಾಳ ರಾಗುತ್ತಾರೆ. ಮಹಾಲಯಶ್ರಾದ್ಧದಲ್ಲಿ ತನ್ನ ಶಕ್ತ್ಯಾನುಸಾರ ಇಬ್ಬರು ಅಥವಾ ಮೂವರು ಬ್ರಾಹ್ಮಣರನ್ನು ಕರೆದು ಭೋಜನ ಮಾಡಿಸಬೇಕು. ಭಾದ್ರಪದ ಕೃಷ್ಣಪಕ್ಷದಿಂದ ಆರಂಭಿಸಿ ಮಾರ್ಗಶಿರಮಾಸದ ಕೊನೆಯವರೆಗೆ ಮಹಾಲಯ ಶ್ರಾದ್ಧಮಾಡುವ ಸಮಯ. ಇದರಲ್ಲಿ ಭಾದ್ರಪದ ಕೃಷ್ಣಪಕ್ಷ ಹಾಗೂ ಆಶ್ವೀನ ಕೃಷ್ಣಪಕ್ಷಗಳು ಅತ್ಯುತ್ತಮ. ಅಗ ಪ್ರತಿಪದೆಯ ತಿಥಿಯಂದು ಮಹಾಲಯ ಶ್ರಾದ್ಧ ಮಾಡಿದವರ ಮೇಲೆ ಶಂಕರನೂ, ತೃತಿಯಾ ದಿನ ಶ್ರಾದ್ಧ ಮಾಡಿದವನ ಮೇಲೆ ಬ್ರಹ್ಮವಿಷ್ಣು ಶಿವ ದೇವತೆಗಳೂ, ಅನುಗ್ರಹ ಮಾಡುತ್ತಾರೆ. ಮುಂದೆ ತೃತೀಯಾದಿಂದ ಚತುರ್ದಶಿಯವರೆಗೆ ಮಹಾಲಯ ಶ್ರಾದ್ಧಮಾಡುವವರಿಗೆ ಉತ್ತರೋತ್ತರ ಅಧಿಕಾಧಿಕ ಪುಣ್ಯಫಲವು ಪ್ರಾಪ್ತವಾಗುವುದು.

ಅಮಾವಾಸ್ಯಾ ದಿನದಂದು ಶ್ರಾದ್ಧಮಾಡಿದವನು ಪಿತೃಗಳಿಗೆ ಶಾಶ್ವತ ತೃಪ್ತಿಯನ್ನು ಉಂಟುಮಾಡುತ್ತಾನೆ. ಅಂದು ಮಹಾಲಯ ಶ್ರಾದ್ಧಮಾಡುವವರು ವೇದಶಾಸ್ತ್ರ ವಿದ್ವಾಂಸರನ್ನು ಕರೆದು ಭೋಜನಮಾಡಿಸಬೇಕು. ಅಂದು ಶ್ರಾದ್ಧ ಮಾಡಿಸುವವರು ಭಗವದನುಗ್ರಹ ಪಡೆದು ಸಾಯುಜ್ಯ ಮೋಕ್ಷವನ್ನು ಹೊಂದುತ್ತಾರೆ.

ಭಾದ್ರಪದ ಹಾಗೂ ಆಶ್ವೀನ ಮಾಸಗಳಲ್ಲಿ ಪ್ರತಿದಿನವೂ ಭಕ್ತಿಯಿಂದ ಒಬ್ಬೊಬ್ಬ ಬ್ರಾಹ್ಮಣರ ಭೋಜನಮಾಡಿಸಬೇಕು. ಇದರಿಂದ ಮಾತಾಪಿತೃ ಕುಲಗಳ ಹಿಂದಿನ ಹಿರಿಯರು ತೃಪ್ತರಾಗುತ್ತಾರೆ. ಭಾದ್ರಪದ ಕೃಷ್ಣ ಪಕ್ಷ ಸಪ್ತಮಿಯಿಂದ ಅಮಾವಾಸ್ಯೆ ಯವರೆಗೆ ಅನುದಿನವೂ ಮೂರು ಮೂರು ಬ್ರಾಹ್ಮಣರನ್ನು ಕರೆದು ಸತ್ಕಾರಪೂರ್ವಕವಾಗಿ ಊಟ ಮಾಡಿಸಬೇಕು. ಮುಂದೆ ದ್ವಾದಶೀಯಿಂದ ಅಮಾವಾಸ್ಯೆವರೆಗೆ ಹೀಗೇ ಬ್ರಾಹ್ಮಣ ಭೋಜನ ಮಾಡಿಸಬೇಕು. ವೇದವಿದ್ವಾಂಸರಿಗೆ ಸಂಪೂರ್ಣ ತೃಪ್ತಿ ಆಗುವಂತೆ ಊಟಮಾಡಿಸಬೇಕು. ಆದ್ದರಿಂದ ಬ್ರಹ್ಮ, ವಿಷ್ಣು, ಶಿವ ಎಂಬ ತ್ರಿಮೂರ್ತಿಗಳು ತೃಪ್ತರಾಗುತ್ತಾರೆ. ಅಗ್ನಿಷ್ವಾತ್ತ ಮೊದಲಾದ ಪಿತೃಗಳು, ಇಂದ್ರಾದಿ ದೇವತೆಗಳು ಇದರಿಂದ ತೃಪ್ತರಾಗುತ್ತಾರೆ. ಮಹಾಲಯದಲ್ಲಿ ಪಾರ್ವಣ ವಿಧಿಯಿಂದ ಶ್ರಾದ್ಧಮಾಡಬೇಕು. ಮಹಾಲಯ ಶ್ರಾದ್ಧದಲ್ಲಿ ತಂದೆಯ ಕುಲದ ಪಿತೃಗಳಂತೆ ತಾಯಿಯ ಕುಲದ ಮಾತಾಮಹಾದಿ ಪಿತೃಗಳಿಗೂ ಭೋಜನ

ಮಾಡಿಸಬೇಕು. ಅನಂತರ ಯಥಾಶಕ್ತಿ ದಕ್ಷಿಣೆನೀಡಬೇಕು. ದಕ್ಷಿಣೆ ಇಲ್ಲದೇ ಮಾಡಿದ ಶ್ರಾದ್ಧವು ಎಂದೂ ಸಫಲವಾಗುವದಿಲ್ಲ. ಮಾತಾ ಪಿತೃಗಳ ಕ್ಷಯಾಹದ ದಿನ ಏಕೋದ್ದಿಷ್ಟ ಶ್ರಾದ್ಧವನ್ನು ಮರೆತು ಮಾಡದೇ ಇದ್ದರೆ ಮಹಾಲಯ ಶ್ರಾದ್ಧವನ್ನಾದರೂ ಮಾಡಲೇಬೇಕು. ತನ್ನಲ್ಲಿ ಹಣ ಇಲ್ಲದಿದ್ದರೆ ಬೇರೆಯವರನ್ನು ಬೇಡಿ ತಂದಾದರೂ ಮಾಡಬೇಕು. ಸೂತಕ ಬಂದಾಗ ಶ್ರಾದ್ಧ ಮಾಡಬಾರದು. ಸೂತಕ ನಿವೃತ್ತಿ ಆದಬಳಿಕ ಆಶ್ವೀನಮಾಸವು ಮುಗಿಯುವದರೊಳಗಾಗಿ ಎಂದಾದರೂ ಒಂದು ದಿನ ಪಾರ್ವಣಶ್ರಾದ್ಧವನ್ನು ಮಾಡಬೇಕು. ಮಹಾಲಯಶ್ರಾದ್ಧಕ್ಕಾಗಿ ಒಂಬತ್ತು ಜನ ಬ್ರಾಹ್ಮಣರಿಗೆ ಹೇಳಬೇಕು. ತಂದೆ, ಅಜ್ಜ, ಮುತ್ತಜ್ಜರಿಗಾಗಿ ಮೂವರು, ತಾಯಿಯ ತಂದೆ, ಅಜ್ಜ ಮುತ್ತಜ್ಜರಿಗಾಗಿ ಮೂವರು, ವಿಶ್ವೇದೇವರಿಗಾಗಿ ಇಬ್ಬರು, ಶ್ರೀವಿಷ್ಣುವಿಗಾಗಿ ಒಬ್ಬ. ಹೀಗೆ ಒಂಬತ್ತು ಜನ ಬ್ರಾಹ್ಮಣರನ್ನು ಆಮಂತ್ರಿಸಬೇಕು. ಅಷ್ಟು ಯೋಗ್ಯತೆ ಇಲ್ಲದಿದ್ದರೆ ತಂದೆಯ ಪಿತೃವರ್ಗಕ್ಕೆ ಒಬ್ಬ, ತಾಯಿಯ ಪಿತೃವರ್ಗಕ್ಕಾಗಿ ಒಬ್ಬ, ವಿಶ್ವೇದೇವರಿಗಾಗಿ ಒಬ್ಬ, ವಿಷ್ಣುವಿಗಾಗಿ ಒಬ್ಬ ಹೀಗೆ ನಾಲ್ಕು ಬ್ರಾಹ್ಮಣರನ್ನು ವರಣಮಾಡಬೇಕು. ಅವರೆಲ್ಲರೂ ಸದಾಚಾರಿಗಳೂ, ವೇದಪಂಡಿತರೂ ಆಗಿರಬೇಕು. ಖೊಟ್ಟ ಸ್ವಭಾವದ ದುಷ್ಟ ಬ್ರಾಹ್ಮಣರನ್ನು ವರಣ ಮಾಡುವದರಿಂದ ಶ್ರಾದ್ಧ ಘಾತ ಆಗುವದು. ಪಿತೃಪಕ್ಷದಲ್ಲಿ ಶ್ರದ್ಧೆಯಿಂದ ಮಹಾಲಯ ಶ್ರಾದ್ಧ ಅಥವಾ ಪಕ್ಷವನ್ನು ಮಾಡಿದರೆ ಎಲ್ಲ ತೀರ್ಥದಲ್ಲಿ ಸ್ನಾನಮಾಡಿದ ಪುಣ್ಯ ಬರುವದು.

ಧರ್ಮರಾಜನು ವನವಾಸದಲ್ಲಿ ಇದ್ದಾಗ ಮಹಾಲಯ ಶ್ರಾದ್ಧವನ್ನು ಮಾಡಿಯೇ ಸಮರಾಂಗಣದಲ್ಲಿ ವಿಜಯಶಾಲಿಯಾದನು. ವಶಿಷ್ಠ ವಿಶ್ವಾಮಿತ್ರಾದಿ ಮಹರ್ಷಿಗಲು ಈ ಮಹಾಲಯ ಶ್ರಾದ್ಧದಿಂದಲೇ ಅಣಿಮಾದಿ ಅಷ್ಟಸಿದ್ಧಿಗಳನ್ನು ಹೊಂದಿದರು. ಆದ್ದರಿಂದ ಮಾನವನು ತನ್ನ ಅಭ್ಯುದಯಕ್ಕಾಗಿ ಮಹಾಲಯ ಶ್ರಾದ್ಧ ಅರ್ಥಾತ್ ಪಕ್ಷವನ್ನು ಅವಶ್ಯವಾಗಿ ಮಾಡಬೇಕು.'' ಕಳೆದ ಜನ್ಮದಲ್ಲಿ ನಿನ್ನಲ್ಲಿ ಒಂದು ದೆವ್ವವು ಪ್ರವಿಷ್ಟವಾಗಿದ್ದಿತಷ್ಟೆ? ನಿನ್ನಲ್ಲಿ ಹೊಕ್ಕ ಅದು ಪೂರ್ವದಲ್ಲಿ ವೇದನಿಧಿ ಎಂಬ ಬ್ರಾಹ್ಮಣ. ಮಹಾತ್ಮಾ ಭರದ್ವಾಜರ ಪುತ್ರನಾದ ಆ ಬ್ರಾಹ್ಮಣನು ಕುಶಸ್ಥಲಿ ಗ್ರಾಮದಲ್ಲಿ ಇರುತ್ತಿದ್ದನು. ಅವನು ವಿಧಿಪೂರ್ವಕವಾಗಿ ಮಹಾಲಯಶ್ರಾದ್ಧವನ್ನು ಮಾಡದೇ ಇದ್ದರಿಂದ ಅವನಿಗೆ ಪಿತೃಗಳ ಶಾಪ ತಟ್ಟಿ ವೇತಾಳವಾಗಿದ್ದನು.

ದುರಾಚಾರ ಎಂಬ ಹೆಸರಿನ ದುರ್ದೈವಿ ಬ್ರಾಹ್ಮಣನೇ, ನೀನು ಕೂಡ ಭಾದ್ರಪದ ಮಾಸದಲ್ಲಿ ಪಿತೃಗಳ ತೃಪ್ತಿಗಾಗಿ ಷಡ್ರಸಗಳ ಅಡಿಗೆ ಮಾಡಿಸಿ ಬ್ರಾಹ್ಮಣರಿಗೆ ಭೋಜನಮಾಡಿಸು. ಇದರಿಂದ ನಿನ್ನ ದಾರಿದ್ರ್ಯ ನಾಶವಾಗುವುದು. ಪಾಪಿಗಳ ಸಂಪರ್ಕ ಮಾಡಬೇಡ. ಬೇಗನೇ ನಿನ್ನ ದೇಶಕ್ಕೆ ಹೊರಟು ಹೋಗು.''

ಯೋಗೀಶ್ವರನಾದ ದತ್ತಾತ್ರೇಯನ ಆಜ್ಞೆಯಂತೆ ದುರಾಚಾರ ಎಂಬ ಹೆಸರಿನ ಆ ಬ್ರಾಹ್ಮಣನು ಅವನಿಗೆ ನಮಸ್ಕರಿಸಿ ತನ್ನ ದೇಶಕ್ಕೆ ಹೊರಟು ಹೋದನು.

ದತ್ತಾತ್ರೇಯನು ಹೇಳಿದಂತೆ ಅವನು ಶ್ರಾದ್ಧಪಕ್ಷ ಮತ್ತು ಇತರ ವರ್ಣಾಶ್ರಮೋಚಿತವಾದ ಕರ್ತವ್ಯಗಳನ್ನು ಪಾಲನಮಾಡುತ್ತ ಪಾಪಿಗಳ ಸಂಪರ್ಕವನ್ನು ಬಿಟ್ಟು ಧನುಷ್ಕೋಟಿ ತೀರ್ಥದಲ್ಲಿ ಸ್ನಾನ ಭಗವದಾರಾಧನೆಯನ್ನು ಮಾಡಿದನು. ಅದರಿಂದ ಮುಂದೆ ಅವನಿಗೆ ಮೋಕ್ಷವು ದೊರಕಿತು.

## ಕ್ಷೀರ ಕುಂಡದ ಮಾಹಾತ್ಮ್ಯ

ಸೂತ:- ನೈಮಿಷಾರಣ್ಯದ ನಿವಾಸಿಗಳೇ, ಚಕ್ರತೀರ್ಥದಿಂದ ಧನುಷ್ಕೋಟಿಯವರೆಗೆ ಇರುವ ಇಪತ್ನಾಕು ತೀರ್ಥಗಳ ಮಹಿಮೆಯನ್ನು ನಾನು ನಿಮಗೆ ಈ ವರೆಗೆ ಬಿತ್ತರಿಸಿದ್ದಾಯಿತು. ಇನ್ನು ಯಾವುದನ್ನು ನೀವು ಕೇಳಲು ಬಯಸುವಿರಿ?

**ಮುನಿಗಳು:-** "ಚಕ್ರತೀರ್ಥದ ಬಳಿಯಲ್ಲಿ ಇರುವ ಕ್ಷೀರ ಕುಂಡದ ಮಾಹಾತ್ಮ್ಯವನ್ನು ನಮಗೆ ದಯಮಾಡಿ ತಿಳಿಸಿ."

**ಸೂತ:-** ಮಹರ್ಷಿಗಳೇ, ದೇವೀಪುರದಿಂದ ಪಶ್ಚಿಮಕ್ಕೆ ತುಸು ಅಂತರದಲ್ಲಿಯೇ 'ಫುಲ್ಲಗ್ರಾಮ' ಎಂಬ ಊರು. ಶ್ರೀರಾಮನು ಈ ಫುಲ್ಲಗ್ರಾಮದಿಂದಲೇ ಈ ಸಮುದ್ರ ಸೇತುವನ್ನು ನಿರ್ಮಿಸಲು ಪ್ರಾರಂಭಿಸಿದ್ದು. ಈ ಫುಲ್ಲಗ್ರಾಮವು ಒಂದು ಪುಣ್ಯತಮ ಕ್ಷೇತ್ರ. ಕ್ಷೀರ ಕುಂಡ ಇರುವುದು ಇಲ್ಲಿಯೇ. ಈ ಕ್ಷೀರ ಕುಂಡದ ದರ್ಶನದಿಂದಲೇ ಪಾಪಗಳಿಂದ ಮುಕ್ತಿ. ಇದರ ಧ್ಯಾನದಿಂದ ಭಗವದ್‌ಜ್ಞಾನ. ಕೀರ್ತನದಿಂದ ಪರಮಾತ್ಮನ ಪೂರ್ಣಾನುಗ್ರಹ.

ಹಿಂದಿನ ಯುಗದಲ್ಲಿ ಈ ಫುಲ್ಲಗ್ರಾಮದಲ್ಲಿ ಮುದ್ಗಲ ಎಂಬ ಮಹರ್ಷಿ ವಾಸವಾಗಿದ್ದ. ಆ ಮಹಾಮನೀಷಿ ಒಂದು ಯಜ್ಞವನ್ನು ಮಾಡಿದ. ಅಂಥ ಮಹರ್ಷಿಗೆ ಹರಿಪ್ರೀತಿಯ ಹೊರತು ಬೇರೆ ಏನು ಹಂಬಲ ಇದ್ದೀತು? ವಿಷ್ಣು ಪ್ರೀತ್ಯರ್ಥವಾಗಿ ಮಾಡಿದ ಆ ನಿಷ್ಕಾಮ ಹೋಮದಿಂದ ಶ್ರೀವಿಷ್ಣುವು ಪ್ರತ್ಯಕ್ಷನಾದ. ಗರುಡಾರೂಢನಾಗಿ ನಾಕು ತೋಳುಗಳಲ್ಲಿಯೂ ಶಂಖಚಕ್ರಾದಿ ಆಯುಧಗಳನ್ನು ತನ್ನ ಮುಂದೆ ಧರಿಸಿ ನಿಂತ ಆ ಶ್ರೀಹರಿಯನ್ನು ಬಾಯ್ತುಂಬ ಹೊಗಳಿದ ಮುದ್ಗಲ ಮುನಿ.

**ಮುದ್ಗಲ:-** ಬ್ರಹ್ಮರೂಪದಿಂದ ಸೃಷ್ಟಿ, ವಿಷ್ಣುರೂಪದಿಂದ ರಕ್ಷಣೆ, ಶಿವರೂಪದಿಂದ ಈ ಚರಾಚರ ಪ್ರಪಂಚವನ್ನು ಸಂಹಾರ ಮಾಡುತ್ತಿರುವ "ಶ್ರೀಮನ್ನಾರಾಯಣ ತೇ ನಮೋ ನಮಃ" ಮೀನ, ಆಮೆ, ಹಂದಿ, ಸಿಂಹ, ಕುಳ್ಳವಟು, ಕೊಡಲಿ ಹಿಡಿದ ಭಾರ್ಗವ, ಕೋದಂಡರಾಮ, ದನಗಾಹಿ ಕೃಷ್ಣ, ವಿಜ್ಞಾನಾತ್ಮ ಬುದ್ಧ, ಶೂರಕಲ್ಕಿ ಮುಂತಾಗಿ ಹತ್ತು ಅವತಾರಗಳನ್ನು ತಾಳಿ ಭೂಮಿಗೆ ಭಾರವಾಗಿ ನಿಂತ ದುಷ್ಟದೈತ್ಯರನ್ನೆಲ್ಲ ನಾಶಮಾಡುವ ಜಗದೀಶ್ವರಾ, ನಿನಗೆ ವಂದನೆ. ನಾನು ನಾಚಿಕೆಗೆಟ್ಟ ಕ್ರೂರ ಕೃಪಣ ಪ್ರಾಣಿ. ಪರಸ್ತ್ರೀ ಪರಧನಗಳ ಮೇಲೆಯೇ ನನ್ನ ಕಣ್ಣು. ಉಳಿದ ಎಲ್ಲ ಪಾಪಗಳನ್ನು ನಾನು ಮಾಡಿ ಮುಗಿಸಿದ್ದೇನೆ. ಚಾಡಿ ಕೋರತನ, ಡಂಭಾಚಾರ, ಹಿಂಸಾಚಾರಗಳು ನನ್ನ ಸ್ವಭಾವಕ್ಕೆ ಒಗ್ಗಿ ಹೋಗಿವೆ. ನಾನು ಮಾಡದ ಪಾಪಗಳಿಲ್ಲ. ಆಚರಿಸದ ದುರಾಚಾರವಿಲ್ಲ. ನನ್ನನ್ನು ಉದ್ಧರಿಸಲು ಬೇರೆಯವರಿಂದ ಶಕ್ಯವಿಲ್ಲ. ನೀನೇ ನನ್ನನ್ನು ಉದ್ಧರಿಸು. ಜಗದೋದ್ಧಾರಕ, ನಿನಗೆ ಅನಂತ ಪ್ರಣಾಮ."

ಮುದ್ಗಲ ಮಹರ್ಷಿಯ ಈ ಸ್ತೋತ್ರದಿಂದ ಭಗವಾನ್ ಶ್ರೀವಿಷ್ಣುವು ಪ್ರಸನ್ನನಾದ. ತಾನು ಮಾಡಿದ ಯಜ್ಞದ ಫಲವು ಭಗವಂತನ ಸಾಕ್ಷಾತ್ಕಾರ ರೂಪದಿಂದ ಅವನ ಕಣ್ಣೆದುರು ನಿಂತುಕೊಂಡಿತ್ತು. ಒಲಿದು ಬಂದ ಆ ಭಗವಂತನಿಗೆ ಮುದ್ಗಲ ದಂಪತಿಗಳು ಆಸನವಿತ್ತರು. ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿದರು. ಪ್ರಸನ್ನ ಮನಸ್ಸಿನಿಂದ ಯಜ್ಞದ ಪುರೋಡಾಶವನ್ನು ಸಮರ್ಪಿಸಿದರು. ಮುದ್ಗಲ ದಂಪತಿಗಳು ತಮ್ಮ ಕೈಯಿಂದಲೇ ಭಕ್ತಿಯಿಂದ ನೀಡಿದ

ಹವಿಷ್ಯಾನ್ನವನ್ನು ಪರಮಾತ್ಮನು ಆನಂದದಿಂದ ಸ್ವೀಕರಿಸಿದ. ತೃಪ್ತಿಯಿಂದ ಭೋಜನ ಮಾಡಿದ. ಭಗವದರ್ಪಿತವಾದ ಆ ಹವಿಷ್ಯಾನ್ನ ಭೋಜನದಿಂದ ಅಗ್ನಿಸಹಿತರಾಗಿ ಎಲ್ಲ ದೇವತೆಗಳೂ ಸಂತೃಪ್ತರಾದರು. ಋತ್ವಿಜ, ಯಜಮಾನ, ಪುರೋಹಿತ, ಪ್ರೇಕ್ಷಕ, ಸದಸ್ಯ ಮುಂತಾದ ಎಲ್ಲ ಚರಾಚರ ಜಗತ್ತೇ ಆ ಶ್ರೀಹರಿಯಿಂದ ಸ್ವೀಕೃತವಾಗಿ ಭುಕ್ತವಾದ ಆ ಯಜ್ಞಾನ್ನದಿಂದ ಸಂತೃಪ್ತವಾಯಿತು. ಅನಂತರ ಶ್ರೀಹರಿಯು ಅವನಿಗೆ ಬೇಕಾದ ವರಬೇಡು ಎಂದು ಹೇಳಿದನು.

**ಮುದ್ಗಲ:-** ''ಪ್ರಭು, ನೀನು ಪ್ರತ್ಯಕ್ಷನಾದ ಬಳಿಕ ನನಗೆ ಬೇರೆ ಏನು ಬೇಕಾಗಿದೆ? ನಿನ್ನಲ್ಲಿ ನನಗೆ ನಿಶ್ಚಲ ನಿಷ್ಕಪಟ ನಿಷ್ಕಂಟಕ ನಿಷ್ಕಾಮ ಭಕ್ತಿಯು ನಿರಂತರ ಇರಲಿ. ಇದು ನನ್ನ ಮೊದಲನೆಯ ವರ. ಎರಡನೆಯದಾಗಿ ನಾನು ಪ್ರತಿದಿನವೂ ಸಂಜೆ ಮುಂಜಾವುಗಳಲ್ಲಿ ನಿನ್ನ ಸ್ವರೂಪ ಭೂತನಾದ ಅಗ್ನಿನಾರಾಯಣನಲ್ಲಿ ನಿನ್ನ ಪ್ರೀತ್ಯರ್ಥವಾಗಿ ಹಸುವಿನ ಹಾಲಿನಿಂದ ಹೋಮ ಮಾಡಬೇಕೆಂದು ಬಯಸಿದ್ದೇನೆ. ನನ್ನಿಂದ ಹರಿ ಪ್ರೀತಿಗಾಗಿ ಹಸುವಿನ ಹಾಲಿನಿಂದ ಹೋಮವನ್ನು ನೀನೇ ಮಾಡಿಸಿಕೊಳ್ಳಬೇಕು.''

## ಹಾಲಿನಹೊಂಡ, ಹೋಮ ಅಖಂಡ

ಮುದ್ಗಲನ ಈ ಪ್ರಾರ್ಥನೆಯನ್ನು ಕೇಳಿ ಶ್ರೀ ನಾರಾಯಣನು ವಿಶ್ವಕರ್ಮನನ್ನು ಕರೆಯಿಸಿ ಒಂದು ಸುಂದರವಾದ ಸರೋವರವನ್ನು ನಿರ್ಮಾಣಮಾಡಿಸಿದ. ಅದರ ಸುತ್ತು ಮುತ್ತು ಗೋಡೆ ಕಟ್ಟಿ ಸುಂದರವಾಗಿ ಮೆಟ್ಟಿಲುಗಳನ್ನು ವಿಶ್ವಕರ್ಮನು ನಿರ್ಮಿಸಿದ. ಅನಂತರ ಮಧುಸೂದನನು ಕಾಮಧೇನುವನ್ನು ಕರೆದು ಹೇಳಿದ. ವಿಷ್ಣು- ''ದೇವ ಗವಿಯಾದ ಸುರಭಿಯೇ. ನನ್ನ ಪ್ರಸನ್ನತೆಗಾಗಿ ಹಸುವಿನ ಹಾಲಿನಿಂದ ಹೋಮಮಾಡ ಬೇಕೆಂದು ಬಯಸಿದ್ದಾನೆ ಈ ಮುನಿ. ಆದುದರಿಂದ ನೀನು ಪ್ರತಿನಿತ್ಯವೂ ಸಾಯಂಕಾಲ ಪ್ರಾತಃಕಾಲಗಳಲ್ಲಿ ಇಲ್ಲಿಗೆ ಆಗಮಿಸಿ ನಿನ್ನ ಹಾಲಿನಿಂದ ಈ ಸರೋವರವನ್ನು ತುಂಬಿಬಿಡು.''

ಹೀಗೆ ದೇವಲೋಕದ ಸುರಭಿಧೇನುವಿಗೆ ಅಪ್ಪಣೆ ನೀಡಿ ಆ ಮುಕುಂದನು ಮುದ್ಗಲ ಮುನಿಗೆ ಆಶೀರ್ವಾದ ಮಾಡಿ ಅದೃಶ್ಯನಾದ. ಶ್ರೀಹರಿಯ ಆಜ್ಞೆಯಂತೆ ಕಾಮಧೇನುವು ಪ್ರತಿದಿನವೂ ಮುಂಜಾನೆ ಸಂಜೆ ಸಮಯಗಳಲ್ಲಿ ಬಂದು ಆ ಹೊಕ್ಕರಣಿಯ ತುಂಬ ಹಾಲು ತುಂಬಿ ಹೋಗುತ್ತಿತ್ತು. ಮುದ್ಗಲ ಮುನಿಯು ಪ್ರತಿನಿತ್ಯವೂ ಆ ಗೋ ಕ್ಷೀರದಿಂದ ವಿಷ್ಣು ಪ್ರೀತ್ಯರ್ಥವಾಗಿ ಅಗ್ನಿಯಲ್ಲಿ ಆಹುತಿ ನೀಡಿ ಹಾಲಿನಿಂದ ಹೋಮ ಮಾಡುತ್ತಿದ್ದನು. ಆದುದರಿಂದ ಅದಕ್ಕೆ ಕ್ಷೀರ ಸರೋವರ ಎಂದು ಹೆಸರಾಯಿತು. ಕ್ಷೀರ ಕುಂಡ ಎಂತಲೂ ಆ ತೀರ್ಥವನ್ನು ಕರೆಯುತ್ತಲಿದ್ದಾರೆ. ಹೀಗೆ ನೂರು ವರ್ಷಗಳವರೆಗೆ ಇದ್ದು ಪ್ರತಿದಿನವೂ ಎರಡೂ ಹೊತ್ತು ಪ್ರಾತಃಸಾಯಂ ಸಂಧ್ಯಾಕಾಲಗಳಲ್ಲಿ ಕ್ಷೀರಾಹುತಿಯಿಂದ ಹೋಮ ಮಾಡುತ್ತಾ ಆ ಮುದ್ಗಲ ಮುನಿಯು ಈ ಫುಲ್ಲಗ್ರಾಮದಲ್ಲಿ ವಾಸಮಾಡಿದನು. ಅನಂತರ ಆ ಮುನಿಯು ಮರಣಹೊಂದಿ ಮುಕ್ತಿಮಂದಿರದಲ್ಲಿ ಶ್ರೀಹರಿಯ ಸಾಯುಜ್ಯ ಮೋಕ್ಷವನ್ನು ಹೊಂದಿ ಧನ್ಯನಾದನು.

## ಕಪಿತೀರ್ಥದ ಮಾಹಾತ್ಮ್ಯ, ದುರ್ಯೋನಿಯಿಂದ ರಂಭಾಘೃತಾಚಿಯರ ಉದ್ಧಾರ

**ಸೂತ:-** ಪೂರ್ವಕಾಲದಲ್ಲಿ ಎಲ್ಲ ವಾನರರೂ ಕೂಡಿ ಸೇತು ಮೂಲವಾದ ಗಂಧಮಾದನ ವಿಪಿನಾಂತರದಲ್ಲಿ ಒಂದು ತೀರ್ಥವನ್ನು ನಿರ್ಮಿಸಿದವು. ಅದಕ್ಕೆ ಕಪಿತೀರ್ಥ

ಎಂದು ಹೆಸರು. ಅದರಲ್ಲಿ ಆನಂದದಿಂದ ಆ ಕೋತಿಗಳೆಲ್ಲವೂ ಭಕ್ತಿಯಿಂದ ಸ್ನಾನಮಾಡಿದವು. ಶ್ರೀರಾಮನನ್ನು "ತೀರ್ಥಕ್ಕೆ ಪ್ರಭು, ನೀನು ಕೂಡ ವರವನ್ನು ನೀಡು" ಎಂದು ಪ್ರಾರ್ಥಿಸಿದವು. ಅವರ ವಿಜ್ಞಪ್ತಿಯನ್ನು ಮನ್ನಿಸಿ ಶ್ರೀರಾಮಚಂದ್ರ ನುಡಿದ "ಈ ತೀರ್ಥದಲ್ಲಿ ಸ್ನಾನಮಾಡಿದವರಿಗೆ ಗಂಗಾ, ಪ್ರಯಾಗ ಹಾಗೂ ಸರ್ವತೀರ್ಥಗಳಲ್ಲಿ ಅವಗಾಹನ ಮಾಡಿದ ಪುಣ್ಯ ಲಭಿಸಲಿ. ಕಪಿಗಳೆಲ್ಲರೂ ಕೂಡಿ ನಿರ್ಮಿಸಿದ್ದರಿಂದ ಇದಕ್ಕೆ ಕಪಿ ತೀರ್ಥ ಎಂದು ಹೆಸರಾಗಲಿ." ಹೀಗೆ ಎರಡು ವರಗಳನ್ನು ಕರುಣಿಸಿದ. ಇಲ್ಲಿ ಮುಳುಗು ಹಾಕಿದವರಿಗೆ ನರಕಭಯವಿಲ್ಲ. ಬಡತನ ಬರುವುದಿಲ್ಲ. ಪಾಪಗಳ ಲೇಪವಿಲ್ಲ.

## ಹೊಗೆಯಿಲ್ಲದ ಅಡಿಗೆ ಹಗೆತನಕ್ಕೆ ಮೂಲ

ಪ್ರಾಚೀನಕಾಲದ ಕಥೆ. ಕೌಶಿಕ ವಂಶದಲ್ಲಿ ವಿಶ್ವಾಮಿತ್ರ ದೊಡ್ಡ ದೊರೆ. ಒಂದು ದಿನ ದೇಶಭ್ರಮಣ ಮಾಡುತ್ತ ವಶಿಷ್ಠರ ಆಶ್ರಮಕ್ಕೆ ಬಂದಿತು ಅವರ ರಾಜ ಪರಿವಾರ. ವಶಿಷ್ಠ ಮುನಿಗಳ ಆಶ್ರಮದಲ್ಲಿ ಅದ್ದೂರಿಯ ಅತಿಥ್ಯ ವಿಶ್ವಾಮಿತ್ರರ ಆ ಎಲ್ಲ ಸೈನಿಕ ಬಳಗಕ್ಕೆ. ಆಶ್ರಮದ ಅಂಗಳದಲ್ಲಿಯೇ ದೇವಲೋಕದ ಕಾಮಧೇನು. ಬೇಡಿದ ಪಕ್ವಾನ್ನ, ಬಯಸಿದ ಮೃಷ್ಟಾನ್ನಗಳು ಕಾಮಧೇನುವಿನ ಕೃಪೆಯಿಂದ ಪರ್ಯಾಪ್ತ ಪ್ರಮಾಣದಲ್ಲಿ ಒದಗಿಸಲ್ಪಟ್ಟವು. ರಾಜ ಪರಿವಾರದವರಿಗೆ ತೃಪ್ತಿ. ಆದರೆ ರಾಜ ವಿಶ್ವಾಮಿತ್ರರಿಗೆ ಕೌತುಕ. ಅದರೊಟ್ಟಿಗೆ ಇಷ್ಟೆಲ್ಲ ಇಷ್ಟಾರ್ಥಗಳ ಸೃಷ್ಟಿ ಮಾಡಿದ ಆ ಸ್ವರ್ಗಲೋಕದ ಹಸುವಿನ ಮೇಲೆ ಕಣ್ಣು. ಅದನ್ನು ಅರಮನೆಗೆ ಸಾಗಿಸಬೇಕೆಂಬ ಯೋಚನೆ. ಅದಕ್ಕಾಗಿ ವಶಿಷ್ಠರಲ್ಲಿ ಯಾಚನೆ. ಅವರಿಂದ ನಕಾರ. ವಿಶ್ವಾಮಿತ್ರರಿಂದ ಬಲಾತ್ಕಾರ. ಕಾಮಧೇನುವಿನ ಮೇಲೆ ಹಲ್ಲೆ. ಅದು ಬರಲು ಒಪ್ಪದ್ದಕ್ಕಾಗಿ ಎಳೆದಾಟ. ವಶಿಷ್ಠರ ಪುಣ್ಯಾಶ್ರಮವನ್ನು ಬಿಡಲು ಒಪ್ಪದ ಕಾಮಧೇನುವಿನ ಕೊಸರಾಟ. ಕ್ರೂರ ರಾಜಪರಿವಾರದವರು ಬಿಡದೇ ಎಳೆಯತೊಡಗಿದಾಗ ಕಾಮಧೇನುವಿನ ಕೋಪ. ವಿಶ್ವಾಮಿತ್ರರ ಸೇನೆಯ ಪ್ರತೀಕಾರಕ್ಕಾಗಿ ಮ್ಲೇಂಛಪಡೆಯ ಉತ್ಪಾದನೆ. ಕಾಮಧೇನುವಿನ ಕುಮಾರರಾದ ವೀರ ಮ್ಲೇಂಛರಿಂದ ವಿಶ್ವಾಮಿತ್ರರ ಪ್ರಚಂಡ ಸೇನೆಯ ಪರಾಜಯ. ವಿಶ್ವಾಮಿತ್ರರ ಸೋಲು. ಅವಮಾನ. ನಿರುಪಾಯವಾಗಿ ಮಹಾದೇವರನ್ನು ಕುರಿತು ತಪಸ್ಸು. ಅತ್ಯುಗ್ರವಾದ ಕೌಶಿಕನ ತಪೋನುಷ್ಠಾನದಿಂದ ಪರಮೇಶ್ವರ ಸುಪ್ರಸನ್ನ. ವರರೂಪವಾಗಿ ಶಂಕರನಿಂದ ವಿಶ್ವಾಮಿತ್ರರಿಗೆ ಘೋರವಾದ ಶಸ್ತ್ರಾಸ್ತ್ರಗಳ ಪ್ರಾಪ್ತಿ.

## ಬ್ರಹ್ಮತೇಜ ರಾಜತೇಜಗಳ ಹೋರಾಟ

ಪುನಃ ವಿಶ್ವಾಮಿತ್ರರಿಂದ ವಶಿಷ್ಠರ ಆಶ್ರಮದ ಮೇಲೆ ದಾಳಿ. ಶಿವನಿಂದ ಲಬ್ಧವಾದ ಎಲ್ಲ ಶಸ್ತ್ರಾಸ್ತ್ರಗಳ ಪ್ರಯೋಗ ವಶಿಷ್ಠರ ಮೇಲೆ. ಆದರೂ ವಶಿಷ್ಠರು ನಿರ್ವಿಕಾರ. ನಿಷ್ಕೋಪನಿಷ್ಪಾಪ. ಮತ್ತೆ ಮತ್ತೆ ವಿಶ್ವಾಮಿತ್ರರಿಂದ ಮಹಾತ್ಮ ಮುನಿಗಳ ಮೇಲೆ ಘೋರಾಯುಧ ಪ್ರಹಾರ. ವಶಿಷ್ಠರು ಮಾತ್ರ ನಿರ್ವಿಕಾರ. ಮತ್ತು ನಿಷ್ಪ್ರತೀಕಾರ. ಇದು ಮತ್ತಿಷ್ಟು ಕೆರಳಿಸಿತು ವಿಶ್ವಾಮಿತ್ರರನ್ನು.

ಕೊನೆಗೆ ರೊಚ್ಚಿಗೆದ್ದು ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿಬಿಟ್ಟರು ವಿಶ್ವಾಮಿತ್ರರು. ಅದನ್ನೂ ಕೂಡ ಶಾಂತಮೂರ್ತಿಗಳಾದ ವಶಿಷ್ಠರು ತಮ್ಮ ಬ್ರಹ್ಮದಂಡದಿಂದ ನಿಷ್ಕ್ರಿಯಗೊಳಿಸಿದರು. ಬ್ರಹ್ಮಾಸ್ತ್ರವು ಕೂಡ ವಶಿಷ್ಠರ ಬ್ರಹ್ಮದಂಡದ ಮುಂದೆ ಉಳಿದೆಲ್ಲ

ತನ್ನ ಅಸ್ತ್ರಗಳಂತೆ ವಿಫಲವಾದದನ್ನು ಕಂಡು ಬ್ರಹ್ಮಾಂಡ ಕೋಪ ವಿಶ್ವಾಮಿತ್ರರಿಗೆ. ಅದಕ್ಕಿಂತ ಹೆಚ್ಚು ಅಪಮಾನ. ಇವೆರಡಕ್ಕಿಂತ ಮಿಗಿಲಾಗಿ ರೊಚ್ಚು. ಹೊಟ್ಟೆಕಿಚ್ಚು, 'ಧಿಗ್ಬಲಂ ಕ್ಷತ್ರಿಯ ಬಲಂ ಬ್ರಹ್ಮ ತೇಜೋ ಬಲಂ ಬಲಂ' ಎಂಬ ಉದ್ಗಾರ ತಾನಾಗಿಯೇ ಹೊರಬಂದಿತು ವಿಶ್ವಾಮಿತ್ರರ ಬಾಯಿಂದ. ಕೈಯಲ್ಲಿಯ ಶಸ್ತ್ರಾಸ್ತ್ರಗಳನ್ನೆಲ್ಲ ಮುರಿದು ಹಾಕಿದರು. ಉಟ್ಟ ತೊಟ್ಟ ರಾಜವೇಷಭೂಷಣ ಗಳನ್ನೆಲ್ಲ ತೆಗೆದು ಹಾಕಿದರು. ಮನೆಮಾರು ತೊರೆದರು. ಕ್ಷತ್ರಿಯರ ಶಸ್ತ್ರಾಸ್ತ್ರ ಬಲವನ್ನು ಜರಿದರು. ನಾಡು ಬಿಟ್ಟರು. ಕಾಡು ಸೇರಿದರು. ವಿಜನ ವನಾಂತದ ಏಕಾಂತ. ಅಲ್ಲಿ ಹಿಮಾಲಯ ಪರ್ವತದಲ್ಲಿ ವಿಶ್ವಾಮಿತ್ರರ ಘೋರ ತಪಸ್ಸು. ಕೌಶಿಕೀ ನದಿಯ ಪುಣ್ಯ ತಟಾಕದಲ್ಲಿ ಸಾವಿರ ವರ್ಷಸಾಗಿತು ಆ ಉಗ್ರ ತಪೋನುಷ್ಠಾನ. ಊಟ ಇಲ್ಲ ನೋಟ ಇಲ್ಲ. ಇಂದ್ರಿಯಗಳೆಲ್ಲವೂ ಆ ಮುನಿಯ ಹತೋಟಿಯಲ್ಲಿ. ಶ್ವಾಸವೂ ಕೂಡ ಅವರ ನಿಯಂತ್ರಣದಲ್ಲಿ. ಈ ಘೋರ ಕೌಶಿಕನ ತಪಸ್ಸು ಕಂಗೆಡಿಸಿತು ದೇವೇಂದ್ರನನ್ನು. ಅವನು ರಂಭೆಯನ್ನು ಕರೆದ. ವಿಶ್ವಾಮಿತ್ರನ ತಪೋಭಂಗ ಮಾಡು ಎಂದು ಆದೇಶ ನೀಡಿದ.

ಹೈಮಾಚಲದ ಉತ್ತುಂಗ ಶೈಲ ಶೃಂಗದಲ್ಲಿ ಅಪ್ಸರಾಂಗನೆಯ ಅವತರಣ. ಕಾಡಿನ ಮೂಲೆ ಮೂಲೆಯಲ್ಲಿಯೂ ಚೈತ್ರ ಚುಂಬನ. ಮರವಟ್ಟ ಮರಬಳ್ಳಿಗಳಿಗೆಲ್ಲ ಸಂಜೀವಿನಿ ಸ್ಪರ್ಶ. ಕುಡಿ ಮಿಡಿಗಳ ದಾಂಗುಡಿ. ಕಣ್ಣು ಚೆಲ್ಲಿದಲ್ಲೆಲ್ಲ ಚೈತ್ರದ ಚೆಲುವಿನ ಚಿತ್ತಾರ. ಕೋಗಿಲೆಗಳ ಇಂಚರ. ತಳಿರುಗಳ ತೋರಣ. ದುಂಬಿಗಳ ಬಂಚರ. ತಂಗಾಳಿಯ ತಂಪಿಂಪು. ಬನವನಗಳಲ್ಲಿ ಹೂಗಂಪು. ಸಮಗ್ರ ಹಿಮವನದ ತುಂಬ ಚೈತ್ರದ ಚಿಗುರು. ಹೂಗಳ ಹೊಗರು.

ಇಂಥ ಸ್ವಪ್ನ ಸುಂದರವಾದ ಪ್ರಕೃತಿ ರಮಣೀಯ ನೈಸರ್ಗೀಕ ವಾತಾವರಣದಲ್ಲಿ ರಂಭೆಯ ಆಗಮನ. ತನ್ನ ಬಗೆಬಗೆಯ ಭಾವಭಂಗಿಗಳಿಂದ ಹಾಗೂ ವಿಲಾಸ ವಿಭ್ರಮಗಳಿಂದ ಸಂಗೀತ ನಾಟ್ಯಗಳಿಂದ ವಿಶ್ವಾಮಿತ್ರರ ಮನ ಮರಳು ಮಾಡುವ ಎತ್ತುಗಡೆ. ಈ ಶೃಂಗಾರ ಚೇಷ್ಟೆಗಳೆಲ್ಲ ಗೊತ್ತು ಆ ತಪಸ್ವೀ ವಿಶ್ವಾಮಿತ್ರರಿಗೆ. ಅನೇಕ ಬಾರಿ ಸೋತು ಅವರು ಪಾಠ ಕಲಿತಿದ್ದರು. ಆದುದರಿಂದ ಈ ಸಲ ಅವರು ಈ ಸಗ್ಗದ ಬೆಲೆವೆಣ್ಣಿನ ಒನಪು ಮೈಯ್ಯಾರಗಳಿಗೆ ಮನಸೋಲಲಿಲ್ಲ. ಮನ ಬಾಗಲಿಲ್ಲ. ಆದರೆ ತನ್ನ ಶೃಂಗಾರ ಚೇಷ್ಟೆಗಳಿಂದ ತಪೋಭಂಗಮಾಡಲು ಬಂದ ಆ ಸುರಾಂಗನೆಯನ್ನು ಕಂಡು ಅವರ ಕೋಪ ಕೆರಳಿತು- ''ರಂಭೆ, ನನ್ನ ತಪಸ್ಸಿಗೆ ಭಂಗ ಮಾಡಲು ಬಂದ ನೀನು ಹತ್ತು ಲಕ್ಷ ವರ್ಷ ಕಲ್ಲಾಗಿ ಬೀಳು'' ಎಂದು ಶಾಪ ಕೊಟ್ಟರು.

ರಂಭೆ ಸೋತರೂ ಅವಳನ್ನು ಕಳಿಸಿದ ಇಂದ್ರ ಗೆದ್ದಿದ್ದ. ವಿಶ್ವಾಮಿತ್ರನ ಮನಸ್ಸಿನ ಕಾಮ ಅರಳದಿದ್ದರೂ ಕೋಪ ಕೆರಳಿತ್ತು. ಕಾಮದಿಂದ ಅಲ್ಲದಿದ್ದರೂ ಕೋಪದಿಂದ ಅವನ ತಪಸ್ಸು ಹಾಳಾಗಿತ್ತು. ಇದರಿಂದ ಇಂದ್ರನಿಗೆ ಸಂತಸ. ವಿಶ್ವಾಮಿತ್ರನಿಗೆ ಸಂತಾಪ. ಇವರಿಬ್ಬರ ಕಲಹ ಕೇಳಿಯಲ್ಲಿ ಪಾಪ ಆ ರಂಭೆಗೆ ಮಾತ್ರ ಕಲ್ಲಾಗಿ ಬೀಳುವುದು ತಪ್ಪಲಿಲ್ಲ.

## ಬ್ರಹ್ಮರ್ಷಿಪಟ್ಟ

ವಿಶ್ವಾಮಿತ್ರನಿಗೆ ಪಶ್ಚಾತ್ತಾಪ. ಕಾಮವನ್ನು ಗೆದ್ದು ಕೋಪದ ಕಿಚ್ಚಿನಲ್ಲಿಯೇ ನಾನು ಬಿದ್ದೆ ಎಂಬ ಅನುತಾಪ. ಮತ್ತೆ ತಪಸ್ಸಿಗೆ 'ಹರಿ ಓಂ'. ಮೊದಲಿಗಿಂತ ಅತ್ಯುಗ್ರ ತಪಸ್ಸು. ಇಂದ್ರಿಯಗಳಿಗೆಲ್ಲ ಸಂಯಮದ ಕಟ್ಟು. ಮನಸ್ಸು ಪೂರ್ಣ ಧ್ಯಾನಾಧೀನ. ಹೀಗೆ ಸಾವಿರ

ವರ್ಷ ತಪಸ್ಸಮಾಧಿ. ಆ ತಪಸ್ಸಿನ ಕಾವಿಗೆ ಕರಗತೊಡಗಿತು ಅಂತರಿಕ್ಷದ ನಕ್ಷತ್ರ ಮಂಡಲ. ಆಗ ಬ್ರಹ್ಮದೇವರ ಸಾಕ್ಷಾತ್ಕಾರ ಕೌಶಿಕರಿಗೆ. ಬ್ರಹ್ಮರ್ಷಿತ್ವ ಪ್ರದಾನ. ಅದಕ್ಕೆ ವಶಿಷ್ಠರಿಂದಲೂ ಅನುಮೋದನೆ. ಹೀಗೆ ತಪೋಬಲದಿಂದ ಕ್ಷತ್ರಿಯನಾದ ವಿಶ್ವಾಮಿತ್ರ ಬ್ರಾಹ್ಮಣನಾಗಿ ಮಾರ್ಪಟ್ಟ. ತಪಸ್ಸಿದ್ಧಿಯ ತುಟ್ಟ ತುದಿಯನ್ನು ಮುಟ್ಟಿದ. ವಿಶ್ವವಂದ್ಯ ವಿಭೂತಿ ಪುರುಷನಾದ ವಿಶ್ವಾಮಿತ್ರ. ಮಹರ್ಷಿಯು ನಿಂತು ತಪಸ್ಸು ಮಾಡಿದ ಕೌಶಿಕೀ ತೀರದ ಹೈಮಾಚಲದ ಆ ಪುಣ್ಯಾಶ್ರಮವು 'ಸಿದ್ಧಾಶ್ರಮ' ಎಂದು ಪ್ರಸಿದ್ಧಿ ಪಡೆಯಿತು.

ಮುಂದೆ ಕೆಲಕಾಲದ ಬಳಿಕ ಅದೇ ಕೌಶಿಕೀ ತೀರದ ಸಿದ್ಧಾಶ್ರಮದ ಬಳಿಯಲ್ಲಿ ಅಗಸ್ತ್ಯಮಹರ್ಷಿಗಳ ಪ್ರಿಯ ಶಿಷ್ಯನಾದ ಶ್ವೇತಮುನಿಯು ದೀರ್ಘಕಾಲ ತಪಸ್ಸನ್ನು ಮಾಡಿದ. ತಪಸ್ಸಮಾಧಿಯಲ್ಲಿ ಕುಳಿತ ಆ ಶ್ವೇತಮುನಿಯ ಆಶ್ರಮಕ್ಕೆ ಒಂದು ದಿನ 'ಅಂಗಾರಕಾ' ಎಂಬ ಕ್ರೂರ ರಾಕ್ಷಸಿಯು ಬಂದಿತು. ಮಲ, ಮೂತ್ರ, ರಕ್ತ ಕೀವುಗಳನ್ನು ಆಶ್ರಮದ ಅಂಗಳದಲ್ಲೆಲ್ಲ ಚೆಲ್ಲಿತು. ಶ್ವೇತಮುನಿಯ ತಪಸ್ಸಿಗೆ ಬಗೆ ಬಗೆಯಿಂದ ವಿಘ್ನವನ್ನು ಉಂಟುಮಾಡಲು ತೊಡಗಿತು. ಆದರಿಂದ ಶಾಂತನಾದ ಶ್ವೇತಮುನಿಗೂ ಚಿಂತೆಹತ್ತಿತು. ತಾವು ತಪಸ್ಸಮಾಧಿಗೆ ಕುಳಿತ ತಾಣದ ಸುತ್ತಲೂ ಮೂಳೆಗಳನ್ನು ಎರಚಿ, ನೆತ್ತರಿನ ಓಕುಳಿಯಾಡುತ್ತಿರುವ ಆ ರಕ್ಕಸಿಯನ್ನು ಹೇಗೆ ಎದುರಿಸುವದು ತಿಳಿಯದಾಯಿತು.

ಕೊನೆಗೆ ಆ ಮುನಿಯು ಹಿಂದೆ ವಿಶ್ವಾಮಿತ್ರರ ಶಾಪದಿಂದ ಕಲ್ಲಾಗಿ ಬಿದ್ದ ರಂಭೆಯನ್ನೇ ವಾಯವ್ಯಾಸ್ತ್ರದಿಂದ ಸಂಯೋಜನೆ ಮಾಡಿ ಪ್ರಯೋಗಿಸಿಬಿಟ್ಟರು. ಮುನಿ ಪ್ರಯುಕ್ತವಾದ ಆ ರಂಭಾ ಶಿಲೆಯು ವಿಘ್ನಮಾಡ ಬಂದ ಅಂಗಾರಕ ರಾಕ್ಷಸಿಯ ಮೇಲೆ ಬಂದು ಅಪ್ಪಳಿಸಿತು. ಅಷ್ಟರಲ್ಲಿಯೇ ಚತುರಮತಿಯಾದ ಆ ದೈತ್ಯಾಂಗನೆಯು ಚಪಲತೆಯಿಂದ ತಪ್ಪಿಸಿಕೊಂಡು ಓಡತೊಡಗಿದಳು. ಮುನಿಯಿಂದ ಮಂತ್ರ ಪ್ರಯೋಗ ಪೂರ್ವಕವಾಗಿ ಬಿಡಲ್ಪಟ್ಟ ಆ ರಂಭಾ ಶಿಲೆಯು ವಾಯವ್ಯಾಸ್ತ್ರದಿಂದ ಪ್ರೇರಿತವಾಗಿ ಪಲಾಯನಮಾಡುವ ಆ ರಾಕ್ಷಸಿಯನ್ನು ಬೆನ್ನಟ್ಟಿತು. ಪ್ರಾಣ ಭಯದಿಂದ ದಿಕ್ಕೆಟ್ಟು ಓಡುತ್ತಿರುವ ಆ ರಕ್ಕಸಿಯು ಅದನ್ನು ಕಂಡು ಪಲಾಯನ ಗೈಯುತ್ತ ಸಮುದ್ರತೀರದ ಸೇತುಬಂದ ಕಪಿತೀರ್ಥವರೆಗೂ ಓಡಿ ಬಂದಿತು. ಸಾಯುವ ಸಂಕಟಕ್ಕೆ ಕಪಿತೀರ್ಥದ ನೀರಿನಲ್ಲಿ ಮುಳುಗಿತು. ಅಲ್ಲಿಯೂ ಅವಳನ್ನು ಬಿಡಲಿಲ್ಲ ಮುನಿಯಿಂದ ಅಭಿಮಂತ್ರಿತವಾದ ಆ ರಂಭಾಶಿಲೆ. ಕಪಿತೀರ್ಥದಲ್ಲಿ ಬಿದ್ದು ನೀರಿನಲ್ಲಿ ಮುಳುಗಿ ಮೇಲೆ ಎದ್ದ ಆ ಅಂಗಾರಕ ದೈತ್ಯಾಂಗನೆಯ ತಲೆಯಮೇಲೆ ಅಪ್ಪಳಿಸಿತು ವಾಯವ್ಯಾಸ್ತ್ರದಿಂದ ಒಡಗೂಡಿದ ಆ ರಂಭಾ ಪಾಷಾಣ. ಆ ಹೆಬ್ಬಂಡೆಯ ಆಘಾತದಿಂದ ಆ ರಾಕ್ಷಸಿಯು ಅಲ್ಲಿಯೇ ಮರಣ ಹೊಂದಿತು. ಆ ರಂಭಾ ಶಿಲೆಯು ಕಪಿತೀರ್ಥದ ನೀರಿನಲ್ಲಿ ರಾಕ್ಷಸಿಯನ್ನು ಕೊಂದು ತಾನೂ ನಡುನೀರಿನಲ್ಲಿ ಮುಳುಗಿತು. ಕಪಿತೀರ್ಥದ ನೀರಿನಲ್ಲಿ ನೆಂದುದರ ಪರಿಣಾಮವಾಗಿ ಆ ಹೆಬ್ಬಂಡೆಗೆ ಕಲ್ಲಿನ ರೂಪ ಹೋಗಿ ಮೊದಲಿನ ರಂಭಾರೂಪವು ಪ್ರಾಪ್ತವಾಯಿತು.

ಅವಳನ್ನು ಕರೆಯಲು ಸಪ್ಪಳಮಾಡುತ್ತ ಬಂದಿತು ಸುರಪುರದ ವಿಮಾನ. ಕಪಿತೀರ್ಥದ ಅತ್ಯದ್ಭುತವಾದ ಮಹಿಮೆಯನ್ನು ಕೊಂಡಾಡುತ್ತ ವಿಮಾನಾರೋಹಣ ಮಾಡಿದಳು ಆ ರಂಭಾರಮಣಿ. ಅಮರಾವತಿಯ ನರ ನಾರಿಯರಿಗೆಲ್ಲರಿಗೂ ಭೂಲೋಕದ ಈ ಕಪಿತೀರ್ಥದ ಆತ್ಮಾನುಭೂತವಾದ ಮಹಾಮಹಿಮೆಯನ್ನು ಬಿತ್ತರಿಸಿ ಹೇಳಿದಳು.

ಶ್ವೇತಮುನಿಯ ತಪಸ್ಸಿಗೆ ವಿಘ್ನವನ್ನುಂಟುಮಾಡಲು ಬಂದ ಆ ರಕ್ಕಸಿಯೂ ಹಿಂದೆ ಶಾಪಗ್ರಸ್ತಳಾದ ಅಪ್ಸರೆಯೇ. ಅವಳು ಹೆಸರು ಘೃತಾಚಿ. ರಾಕ್ಷಸಯೋನಿಯಲ್ಲಿ ಜನಿಸಿದ ಆ ಘೃತಾಚಿಯು ಶ್ವೇತಮುನಿಯ ತಪಸ್ಸಿಗೆ ವಿಘ್ನವನ್ನು ಒಡ್ಡಲು ಹೋಗಿದ್ದಳು ಅವನು ವಾಯುವ್ಯಾಸ್ತ್ರದಿಂದ ತನ್ನ ಮೇಲೆ ತೂರಿ ಒಗೆದ ರಂಭಾ ಶಿಲೆಯಿಂದ ತಪ್ಪಿಸಿಕೊಳ್ಳಲಿಕ್ಕಾಗಿ ಓಡುತ್ತ ಬಂದು ಕಪಿತೀರ್ಥದಲ್ಲಿ ಮುಳುಗಿದ್ದಳು. ಉಸಿರು ಗಟ್ಟುವುದೆಂದು ಮೇಲೆದ್ದಾಗ ಆ ರಂಭಾಪಾಷಾಣವು ತಲೆಗೆ ತಾಕಿ ಆ ಕಪಿತೀರ್ಥದ ನೀರಿನಲ್ಲಿಯೇ ಮರಣ ಹೊಂದಿ ಬಿದ್ದಳು. ಆ ಪುಣ್ಯೋದಕದಲ್ಲಿ ಮಿಂದು ಮರಣ ಹೊಂದಿದ್ದರಿಂದ ಅವಳು ಉದ್ಧೃತ ಳಾದಳು. ಆ ರಕ್ಕಸಿಯು ತನ್ನ ಮೊದಲಿನ ಘೃತಾಚಿಯ ರೂಪವನ್ನು ಧರಿಸಿ ಕಪಿತೀರ್ಥಕ್ಕೆ ವಂದನೆಗೈದು ವಿಮಾನಾರೂಢಳಾಗಿ ಅಮರಾವತಿಗೆ ನಡೆದಳು. ಆದುದರಿಂದ ಎಲ್ಲರೂ ಈ ಸೇತು ಮಾರ್ಗದಲ್ಲಿ ಇರುವ ಕಪಿತೀರ್ಥದಲ್ಲಿ ಸ್ನಾನದಾನ ಹಾಗೂ ರಾಮೋಪಾಸನೆ ಮಾಡಬೇಕು.

## ರಾಮೇಶ್ವರ ಲಿಂಗದ ಮಹಿಮೆ

**ಸೂತ:-** ಸ್ವಯಂ ಶ್ರೀರಾಮಚಂದ್ರನು ಸ್ಥಾಪಿಸಿದ ರಾಮೇಶ್ವರ ಲಿಂಗವನ್ನು ಒಂದು ಸಲ ನೋಡಿದವರು ಶಂಕರನ ಸಾಯುಜ್ಯ ಸ್ವರೂಪ ಮೋಕ್ಷವನ್ನು ಹೊಂದುತ್ತಾರೆ. ಈ ರಾಮೇಶ್ವರ ಲಿಂಗದಲ್ಲಿ ಎಲ್ಲ ದೇವತೆಗಳ ಸನ್ನಿಧಾನ. ಎಲ್ಲ ಮಹಾತೀರ್ಥಗಳ ಸನ್ನಿಧಿ. ತ್ರಿಕಾಲದಲ್ಲಿ ಪ್ರತಿದಿನವೂ ರಾಮೇಶ್ವರನ ಸ್ಮರಣಕೀರ್ತನಗೈಯುವದರಿಂದ ಪಾಪ ಪಟಲದಿಂದ ಮುಕ್ತಿ. ಮರ್ಯಾದಾ ಪುರುಷೋತ್ತಮನಾದ ಶ್ರೀರಾಮ ಪ್ರಭು ತನ್ನ ಕೈಯಿಂದಲೇ ಲೋಕೋದ್ಧಾರಕ್ಕಾಗಿ ಈ ಶಿವಲಿಂಗವನ್ನು ಇಲ್ಲಿ ಸ್ಥಾಪನೆ ಮಾಡಿದ್ದಾನೆ. ಮತ್ತು ಸ್ವಯಂ ತಾನು ಲೋಕ ಶಿಕ್ಷಣಕ್ಕಾಗಿ ಈ ಶಿವಲಿಂಗದ ಪೂಜೆಯನ್ನು ಮಾಡಿದ್ದಾನೆ. ಆದುದ ರಿಂದಲೇ ಇದಕ್ಕೆ 'ರಾಮೇಶ್ವರ' ಎಂಬ ಹೆಸರು ಬಂದಿದೆ. ಈ ರಾಮೇಶ್ವರ ಎಂಬ ಹೆಸರಿನ ಮಹಾಲಿಂಗವನ್ನು ನಮಸ್ಕಾರಮಾಡಿ ಪೂಜೆ ಮಾಡಿದವರ ಜನ್ಮ ಸಫಲ. ಪಾಪ ಪ್ರಣಷ್ಟ.

**"ದಶವರ್ಷೈಸ್ತು ಯತ್‌ಪುಣ್ಯಂ ಕ್ರಿಯತೇ ತು ಕೃತೇ ಯುಗೇ ।**
**ತ್ರೇತಾಯಾಮೇಕವರ್ಷೇಣ ತತ್ ಪುಣ್ಯಂ ಸಾಧ್ಯತೇ ನೃಭಿಃ ॥**
**ದ್ವಾಪರೇ ತಚ್ಚ ಮಾಸೇನ ತದ್ದಿನೇನ ಕಲೌ ಯುಗೇ ।**
**ತತ್ಫಲಮ್ ಕೋಟಿ ಗುಣಿತಂ ನಿಮಿಷೇ ನಿಮಿಷೇ ನೃಣಾಂ ॥**
**ನಿಸ್ಸಂದೇಹಂ ಭವೇದೇವಮ್ ರಾಮನಾಥ ವಿಲೋಕಿನಾಂ ॥"**

ಸತ್ಯಯುಗದಲ್ಲಿ ಹತ್ತು ವರ್ಷಗಳ ವರೆಗೆ ಪರಿಶ್ರಮಪಟ್ಟು ಸಾಧಿಸಿದ ಪುಣ್ಯವನ್ನು ತ್ರೇತಾಯುಗದಲ್ಲಿ ಒಂದು ವರ್ಷದ ಪರಿಶ್ರಮದಿಂದಲೇ ಪಡೆಯಬಹುದು. ಅಷ್ಟೇ ಪುಣ್ಯವನ್ನು ದ್ವಾಪರ ಯುಗದಲ್ಲಿ ಒಂದು ತಿಂಗಳ ಪ್ರಯತ್ನದಿಂದ ಸಾಧಿಸಬಹುದು. ಕಲಿಯುಗದಲ್ಲಿ ಮಾತ್ರ, ದ್ವಾಪರದಲ್ಲಿ ಒಂದು ತಿಂಗಳು. ತ್ರೇತಾಯುಗದಲ್ಲಿ ಒಂದು ವರ್ಷ, ಕೃತಯುಗದ ಹತ್ತು ವರ್ಷಗಳ ಪರಿಶ್ರಮ ಪ್ರಯತ್ನಗಳಿಂದ ಸಾಧಿಸಬಹುದಾದ ಪುಣ್ಯಗಳನ್ನು ಒಂದೇ ಒಂದು ದಿನದ ಸಾಧನೆಯಿಂದ ಪಡೆಯಬಹುದು. ಆದರೆ ರಾಮೇಶ್ವರನ ದರ್ಶನ ಮಾಡುವದರಿಂದ ಒಂದೊಂದು ನಿಮಿಷ ನಿಮಿಷಕ್ಕೂ ಇವೆಲ್ಲವುಗಳಿಗಿಂತ ಕೋಟಿ ಪಟ್ಟು ಮಿಗಿಲಾದ ಪುಣ್ಯವನ್ನು ಭಕ್ತರು ಪಡೆಯಬಹುದು. ಶ್ರೀರಾಮೇಶ್ವರನ ದರ್ಶನದಿಂದ ಬರುವ ಪುಣ್ಯಕ್ಕೆ ಸರಿಸಾಟಿಯೂ ಇಲ್ಲ. ಇತಿಮಿತಿಯೂ ಇಲ್ಲ.

ಉರಿಯುವ ಅಗ್ನಿಯು ಒಣಗಿದ ಕಟ್ಟಿಗೆಯ ರಾಶಿಯನ್ನು ಸುಟ್ಟು ಬೂದಿಮಾಡುವುದಿಲ್ಲವೆ? ಅದೇ ತೆರನಾಗಿ ರಾಮೇಶ್ವರನ ದರ್ಶನವು ಮಾನವರ ರಾಶಿ ರಾಶಿ ಪಾಪಗಳನ್ನೆಲ್ಲ ಕ್ಷಣಾರ್ಧದಲ್ಲಿ ಸುಟ್ಟು ಬೂದಿಮಾಡಿ ಹಾಕುತ್ತದೆ.

## ರಾಮೇಶ್ವರನ ಎಂಟು ಬಗೆಯ ಸೇವೆ

ರಾಮೇಶ್ವರನ ಮಹಾಲಿಂಗದಲ್ಲಿ ಮಾನವರು ಎಂಟು ವಿಧದಿಂದ ಭಕ್ತಿಭಾವವನ್ನು ಸಮರ್ಪಣೆ ಮಾಡಬಹುದು ೧) ಸ್ವಯಂ ಶ್ರೀರಾಮೇಶ್ವರನನ್ನು ಶ್ರದ್ಧೆಯಿಂದ ಪೂಜಿಸುವುದು. ೨) ರಾಮೇಶ್ವರನ ಭಕ್ತರನ್ನು ಪ್ರೀತ್ಯಾದರಗಳಿಂದ ನೋಡುವುದು ೩) ರಾಮೇಶ್ವರನ ಭಕ್ತರ ಪೂಜೆಮಾಡಿ ಅವರನ್ನು ಸಂತೋಷಗೊಳಿಸುವದು. ೪) ರಾಮೇಶ್ವರನ ಸಲುವಾಗಿ ತನ್ನ ದೈಹಿಕ ವ್ಯಾಪಾರಗಳನ್ನೆಲ್ಲ ಮೀಸಲಾಗಿ ಇಡುವದು. ೫) ರಾಮೇಶ್ವರನ ಮಾಹಾತ್ಮ್ಯ ಮತ್ತು ಕಥಾ ಶ್ರವಣವನ್ನು ಆದರದಿಂದ ಮಾಡುವುದು ೬) ರಾಮೇಶ್ವರನ ಮೇಲಿನ ಭಕ್ತಿಯ ಉದ್ರೇಕದಿಂದ ಆನಂದ ಬಾಷ್ಪ ಉದುರಿಸುವದು ಮೈಯಲ್ಲಿ ರೋಮಾಂಚನ, ವಾಣಿಯಲ್ಲಿ ಗದ್ಗದಕಂಠ. ಹೃದಯದಲ್ಲಿ ಭಕ್ತಿಭಾವದಿಂದ ಅರ್ದ್ರತೆಯನ್ನು ಅನುಭವಿಸುವದು. ೭) ಶ್ರೀರಾಮೇಶ್ವರ ಮಹಾಲಿಂಗವನ್ನು ನಿರಂತರ ಸ್ಮರಣಮಾಡುವದು. ೮) ಶ್ರೀರಾಮೇಶ್ವರ ಮಹಾಲಿಂಗಕ್ಕೆ ಶರಣು ಹೋಗಿ ಇಡೀ ಜೀವನವನ್ನು ರಾಮೇಶ್ವರ ಸ್ಮರಣಕ್ಕೆ ಮುಡುಪಾಗಿ ಇಡುವುದು.

ಈ ಅಷ್ಟವಿಧವಾದ ರಾಮೇಶ್ವರ ಭಕ್ತಿಯನ್ನು ಮಾಡಿದ ಮಾನವನು ಬ್ರಾಹ್ಮಣನೇ ಇರಲಿ. ಮ್ಲೇಂಛನೇ ಇರಲಿ, ಅಂತ್ಯಜನೇ ಇರಲಿ, ಮೋಕ್ಷಕ್ಕೆ ಅಧಿಕಾರಿ ಆಗುತ್ತಾನೆ. ಸಂನ್ಯಾಸಿಗಳಿಗೂ ಹಾಗೂ ಬ್ರಹ್ಮಚಾರಿ ವಿದ್ವಾಂಸರಿಗೂ ವೇದಾಂತ ಶಾಸ್ತ್ರದ ಶ್ರವಣ, ಮನನ, ನಿದಿಧ್ಯಾಸಗಳಿಂದ ಮಾತ್ರ ಲಭಿಸಬಹುದಾದ ಮೋಕ್ಷವು ಅಂತ್ಯಜಾದಿ ಎಲ್ಲ ವರ್ಣಜಾತಿ, ಜನಾಂಗದವರಿಗೆ ಸರ್ವೇ ಸಾಮಾನ್ಯವಾಗಿ ಸುಲಭವಾಗಿ ದೊರಕುವ ಏಕೈಕ ಮಾರ್ಗವೆಂದರೆ ರಾಮೇಶ್ವರ ಮಹಾಲಿಂಗದ ದರ್ಶನ. ಋಷಿಮುನಿಗಳಿಗೆ ಅಖಂಡ ತಪಸ್ಸಮಾಧಿಯಿಂದ ದೊರಕುವ ಸದ್ಗತಿಯು ಈ ರಾಮೇಶ್ವರ ದರ್ಶನದಿಂದ ಎಲ್ಲ ಪ್ರಾಣಿಗಳಿಗೂ ನಿಶ್ಚಿತವಾಗಿಯೂ ದೊರಕುವದು. ರಾಮೇಶ್ವರ ಲಿಂಗವನ್ನು ನೋಡಿ ಬಂದ ಮನುಷ್ಯನ ದರ್ಶನಮಾಡಿಕೊಂಡರೂ ಮಾನವನ ಪಾಪಗಳು ತತ್ಕಾಲದಲ್ಲಿ ನಾಶವಾಗುತ್ತವೆ. ಪ್ರಾತಃಕಾಲದಲ್ಲಿ ಎದ್ದು ಮೂರು ಸಲ ರಾಮನಾಥ ಅಥವಾ ರಾಮೇಶ್ವರ ಎಂಬ ಶಬ್ದವನ್ನು ಉಚ್ಚಾರ ಮಾಡಿದರೆ ಅವನು ಆ ದಿನ ಮಾಡಿದ ಪಾಪಗಳೆಲ್ಲವೂ ನಷ್ಟವಾಗಿ ಹೋಗುತ್ತವೆ.

**''ರಾಮನಾಥ ಮಹಾದೇವ ಮಾಂ ರಕ್ಷ ಕರುಣಾನಿಧೇ ।**
**ಇತಿ ಯಃ ಸತತಂ ಬ್ರೂಯಾತ್ ಕಲಿನಾಸೌ ನ ಬಾಧ್ಯತೇ ॥**

ಕರುಣಾನಿಧಿಯಾದ ದೇವಶ್ರೇಷ್ಠ ರಾಮೇಶ್ವರಾ, ನನ್ನನ್ನು ರಕ್ಷಿಸು ಎಂದು ಆ ಮಹಾದೇವನಲ್ಲಿ ಮೊರೆ ಇಟ್ಟವನನ್ನು ಕಲಿಯು ಎದಿಗೂ ಬಾಧಿಸುವದಿಲ್ಲ.

ರಾಮೇಶ್ವರ ಮಹಾಲಿಂಗಕ್ಕೆ ಅಭಿಷೇಕಮಾಡುವಾಗ ರುದ್ರಾಧ್ಯಾಯ, ಚಮಕ, ಪುರುಷಸೂಕ್ತ, ತ್ರಿಸುಪರ್ಣ, ಪಂಚಶಾಂತಿ, ಪವಮಾನ ಸೂಕ್ತ ಮುಂತಾದ ವೇದ ಮಂತ್ರಗಳನ್ನು ಪಠಿಸುವವರು ಎಂದೂ ನರಕದ ನಿಟ್ಟಿಗೆ ಹೋಗುವುದಿಲ್ಲ. ರಾಮೇಶ್ವರ ಲಿಂಗಕ್ಕೆ ಹಸುವಿನ ಹಾಲಿನಿಂದ ಕ್ಷೀರಾಭಿಷೇಕ ಮಾಡಿಸುವವರು ಶಿವಲೋಕವನ್ನು ಹೊಂದುತ್ತಾರೆ. ಈ ರಾಮೇಶ್ವರ ಲಿಂಗಕ್ಕೆ ಮೊಸರಿನಿಂದ ದಧಿಸ್ನಾನ ಮಾಡಿಸುವವರು

ವಿಷ್ಣುಲೋಕಕ್ಕೂ, ತೆಂಗಿನ ಹಾಲಿನಿಂದ ಅಭಿಷೇಕ ಮಾಡಿಸುವವರು ವೈಕುಂಠಲೋಕಕ್ಕೂ, ಶುದ್ಧೋದಕದಿಂದ ಸ್ನಾನಮಾಡಿಸುವವರು ವರುಣ ಲೋಕಕ್ಕೂ ಮರಣಾನಂತರ ಪ್ರಯಾಣ ಮಾಡುತ್ತಾರೆ. ಮಾನವರು ಎಲ್ಲಿಯೇ ಸ್ನಾನಮಾಡಲಿ, ಸ್ನಾನಕಾಲದಲ್ಲಿ ರಾಮಸೇತು ರಾಮೇಶ್ವರ ಎಂದು ನಾಮೋಚ್ಚಾರಣೆ ಮಾಡಿದರೂ ಸಾಕು. ಅವರಿಗೆ ಸೇತುಸ್ನಾನದ ಫಲವು ಬರುತ್ತದೆ. ಕಾಶಿಯಿಂದ ತಂದ ಗಂಗಾ ಜಲದಿಂದ ರಾಮೇಶ್ವರ ಮಹಾಲಿಂಗಕ್ಕೆ ಸ್ನಾನಮಾಡಿಸಿದವರನ್ನು ಸ್ವಯಂ ಶಂಕರನು ಆದರಿಸಿ ಸದ್ಗತಿಯನ್ನು ನೀಡುತ್ತಾನೆ. ಈ ರಾಮೇಶ್ವರನ ಮಹಾಲಿಂಗದ ಶ್ರವಣ, ಕೀರ್ತನ, ವಂದನ, ಕೀರ್ತನ, ಚಿಂತನ, ಸ್ತವನ ಮುಂತಾದ ಬಗೆ ಬಗೆಯ ಸೇವೆ ಹಾಗೂ ಆರಾಧನೆಗೈಯುವವರು ತಮ್ಮ ಬ್ರಹ್ಮಹತ್ಯಾದಿ ಅನೇಕ ಭೀಕರ ಪಾಪಗಳನ್ನು ಕಳೆದುಕೊಂಡು ಇಲ್ಲಿ ಇರುವವರೆಗೆ ಸುಖ ಸೌಭಾಗ್ಯಗಳನ್ನೆಲ್ಲ ಅನುಭವಿಸಿ ಮರಣಾನಂತರ ಪುನರಾವೃತ್ತಿ ರಹಿತವಾದ ಮೋಕ್ಷ ಸುಖವನ್ನು ಹೊಂದುವರು. ಈ ರಾಮೇಶ್ವರ ಮಹಾಲಿಂಗದ ಮಹಿಮೆಯನ್ನು ಭಕ್ತಿಯಿಂದ ಕೇಳಿದವರು ಶ್ರದ್ಧೆಯಿಂದ ಹೇಳಿದವರು ರಾಮೇಶ್ವರನ ಸೇವೆಯ ಫಲವನ್ನು ಹೊಂದುತ್ತಾರೆ.

## ರಾಮೇಶ್ವರ ಲಿಂಗ ಪ್ರತಿಷ್ಠಾಪನೆ

**ಶೌನಕಾದಿ ಋಷಿಗಳು:**-ಸೂತ ಪುರಾಣಿಕರೇ, ದಶರಥ ಕುಮಾರನಾದ ಶ್ರೀರಾಮನು ಸೇತುಕ್ಷೇತ್ರದಲ್ಲಿ ರಾಮೇಶ್ವರ ಲಿಂಗವನ್ನು ಪ್ರತಿಷ್ಠೆಮಾಡಿದ ಸಮಾಚಾರವನ್ನು ತಿಳಿಸಿರಿ.

**ಸೂತ ಪುರಾಣಿಕ:**- ರಾವಣನು ಮಾಯಾ ಮೃಗದ ಕಪಟದಿಂದ ಮಾರೀಚನ ಮುಖಾಂತರ ರಾಮಲಕ್ಷ್ಮಣರನ್ನು ಪಂಚವಟಿಯ ಆಶ್ರಮದಿಂದ ಕರೆದೊಯ್ದು ಸೀತೆಯನ್ನು ಸೆಳೆದೊಯ್ದ. ಮಾರೀಚನನ್ನು ಸಂಹರಿಸಿ ಮರಳಿ ಪರ್ಣ ಕುಟೀರಕ್ಕೆ ಬಂದ ರಾಮಲಕ್ಷ್ಮಣರು ಸೀತೆಯನ್ನು ಕಾಣದೇ ಕಂಗಾಲಾದರು. ಜಟಾಯು ಪಕ್ಷಿಯಿಂದ ಸೀತೆಯ ಸಮಾಚಾರ ತಿಳಿದು, ಅಗ್ನಿಸಾಕ್ಷಿಯಾಗಿ ಸುಗ್ರೀವನ ಸಖ್ಯ ಬೆಳಸಿ ಅವನ ಸಹಾಯದಿಂದ ಕಪಿ ಸೇನೆಯೊಂದಿಗೆ ಮಹೇಂದ್ರಗಿರಿಗೆ ಬಂದರು.

ಮುಂದೆ ನಲ ಮುಂತಾದ ವಾನರರ ಸಹಾಯದಿಂದ ಸಮುದ್ರಕ್ಕೆ ಸೇತುವೆ ಕಟ್ಟಿ ಸುಗ್ರೀವ ಹನುಮಂತ ಲಕ್ಷ್ಮಣ ಹಾಗೂ ಪ್ರಚಂಡ ವಾನರ ಸೇನೆಯೊಂದಿಗೆ ಶ್ರೀರಾಮನು ಸಮುದ್ರವನ್ನು ದಾಟಿ ಲಂಕಾಪಟ್ಟಣಕ್ಕೆ ಬಂದಿಳಿದ. ಅಂದು ಹುಣ್ಣಿಮೆಯ ತಿಥಿ. ಸಂಧ್ಯಾಕಾಲದಲ್ಲಿ ಶ್ರೀರಾಮ ಸುವೇಲ ಪರ್ವತದ ಮೇಲೆ ಲಂಕೆಯ ಅರಮನೆಯ ಕಡೆಗೆ ನೋಡುತ್ತ ನಿಂತುಕೊಂಡಿದ್ದ.

## ಸುಗ್ರೀವನ ಸಾಹಸ

ಇತ್ತ ರಾವಣನೂ ಕೂಡ ತನ್ನ ಅರಮನೆಯ ಉಪ್ಪರಿಗೆಯ ಮೇಲೆ ನಿಂತುಕೊಂಡು ಸೇತುಮಾರ್ಗದಿಂದ ಸಾಗರವನ್ನು ಲಂಘಿಸಿಬಂದ ರಾಮನ ಸೇನಾಸಾಗರವನ್ನು ಕೌತುಕದಿಂದ ನೋಡುತ್ತಲಿದ್ದ. ಸುವೇಲ ಪರ್ವತದ ಮೇಲೆ ರಾಮಚಂದ್ರನೊಡನೆ ನಿಂತುಕೊಂಡಿದ್ದ ಸುಗ್ರೀವನು ಲಂಕೆಯ ರಾಜಭವನದ ಮಾಳಿಗೆಯ ಮೇಲೆ ನಿಂತು ತಮ್ಮ ಕಡೆಗೆ ನೋಡುತ್ತ ನಿಂತುಕೊಂಡ ರಾವಣನನ್ನು ದೂರದಿಂದಲೇ ನೋಡಿದ. ಮೊದಲೇ ಕಪಿ. ರಾವಣನ್ನು ಕಂಡ ಕೂಡಲೇ ಸುಗ್ರೀವನಿಗೆ ಮೈ ಉರಿದುಹೋಯಿತು. ಸುವೇಲ

ಪರ್ವತದ ಶಿಖರದಿಂದ ಒಮ್ಮೆಲೇ ಲಂಕೆಯ ಮಹಡಿಗೆ ಟಣ್ಣನೇ ಜಿಗಿದ. ರಾವಣನ ತಲೆಯ ಮೇಲಿನ ಕಿರೀಟಕ್ಕೆ ಹಾರಿ ಒದ್ದ. ಅದು ನೆಲದ ಮೇಲೆ ಬಿದ್ದು ರಾಕ್ಷಸರಾಜನಿಗೆ ಅಮಂಗಳವನ್ನು ಸೂಚಿಸಿತು. ಮುಂದೆ ಆರಂಭವಾಯಿತು. ರಾಮ-ರಾವಣರ ಪುರಾಣ ಪ್ರಸಿದ್ಧವಾದ ಹೋರಾಟ. ಶ್ರೀರಾಮನ ನೇತೃತ್ವದಲ್ಲಿ ಬಲ ತುಂಬಿದ ವಾನರವೀರರು ಲಂಕೆಯ ರಾಕ್ಷಸರನ್ನೆಲ್ಲ ಮರ, ಬಂಡೆ, ಕಲ್ಲು, ಹಲ್ಲು ಉಗುರುಗಳಿಂದ ಹೊಡೆದು, ಬಡೆದು, ಪರಚಿ, ತಿವಿದು, ಸೀಳಿ ಸಾಯಬೀಳಿಸಿದರು. ರಾವಣನ ಸೇನೆ ರಾಮಲಕ್ಷ್ಮಣ ಹಾಗೂ ವೀರಹನುಮಂತರ ಭೀಕರ ಪ್ರಹಾರಗಳನ್ನು ತಾಳಲಾರದೇ ಸಾಮೂಹಿಕವಾಗಿ ಮರಣಹೊಂದಿತು. ಬಹುಪಾಲು ಸೈನಿಕರು ತಮ್ಮ ದೇಹದ ರಕ್ತಧಾರೆಯನ್ನು ಹರಿಸಿ ಧಾರಾತೀರ್ಥದಲ್ಲಿ ಧರಾಶಾಯಿಯಾದರು.

ಇದರಿಂದ ಅತ್ಯಂತ ಕ್ರುದ್ಧನಾಗಿ ರಾವಣನ ಚೊಚ್ಚಲು ಗಂಡುಮಗ ಇಂದ್ರಜಿತನು ಕಾಲಾಂತಕನಾಗಿ ರಣಭೂಮಿಯಲ್ಲಿ ಭೀಕರವಾಗಿ ಬಾಣವೃಷ್ಟಿಗೈದು ವಾನರಸೇನೆಯಲ್ಲಿ ಕೋಲಾಹಲವನ್ನೇ ಎಬ್ಬಿಸಿದ. ಕಪಿಗಳೆಲ್ಲವೂ ಅವನ ಭೀಕರ ಶಸ್ತ್ರಾಸ್ತ್ರ ಪ್ರಯೋಗ ಪ್ರಹಾರಗಳನ್ನು ತಾಳಲಾರದೇ ಕಂಡ ಕಡೆ ಓಡತೊಡಗಿದರು. ಅದರಿಂದ ಹುರುಪುಗೊಂಡ ಇಂದ್ರಜಿತನು ನಾಗಾಸ್ತ್ರವನ್ನು ಪ್ರಯೋಗಿಸಿ ರಾಮಲಕ್ಷ್ಮಣರನ್ನು ಕೂಡ ಬಂಧಿಸಿಬಿಟ್ಟ. ಆಗ ವಿನತಾನಂದನನಾದ ಗರುಡನು ಬಂದು ನಾಗಪಾಶದಿಂದ ಎಲ್ಲರನ್ನೂ ಬಿಡುಗಡೆ ಮಾಡಿದ. ಅನಂತರ ವಿಭೀಷಣನಿಂದ ಎಂಟುಘಂಟೆಗಳೂ ನಿನದಿಸುವ ಶಕ್ತ್ಯಾಯುಧದಿಂದ ಪ್ರಹಸ್ತನ ಶಿರಚ್ಛೇದ. ಹನುಮಂತನಿಂದ ಧೂಮ್ರಾಕ್ಷ ಸಂಹಾರ. ಲಕ್ಷ್ಮಣನಿಂದ ಬ್ರಹ್ಮಾಸ್ತ್ರದಿಂದ ಕುಂಭಕರ್ಣವಧ. ನಲನಿಂದ ವಜ್ರದಂಷ್ಟ್ರನ ವಿನಾಶ. ಅಂಗದನಿಂದ ಪ್ರಮಾಥಿಯ ಮಥನ. ಕುಮುದನಿಂದ ಅಕಂಪನನ ಪ್ರಣಾಶ. ಲಕ್ಷ್ಮಣನಿಂದ ಅತಿಕಾಯ ಮತ್ತು ತ್ರಿಶಿರ ದೈತ್ಯರ ಸಂಹಾರ. ಸುಗ್ರೀವನಿಂದ ದೇವಾಂತಕ ನರಾಂತಕರ ಪ್ರಾಣಾಪಹಾರ. ಮಾರುತಿಯಿಂದ ಕುಂಭ ಕರ್ಣನ ಇಬ್ಬರು ಪುತ್ರರ ವ್ಯಾಪಾದನೆ. ವಿಭೀಷಣನಿಂದ ಮಕರಾಕ್ಷಾದಿ ವಿನಾಶಗಳು ನಡೆದವು.

ಕೊನೆಗೆ ರಾವಣನು ತನ್ನ ಚೊಚ್ಚಲ ಗಂಡುಮಗನಾದ ಇಂದ್ರಜಿತನನ್ನು ಯುದ್ಧಕ್ಕೆ ಕಳುಸಿದ. ಇಂದ್ರಜಿತನು ತನ್ನ ಭಯಂಕರವಾದ ಅಸ್ತ್ರ ಪ್ರಯೋಗದಿಂದ ಸುಗ್ರೀವ, ನಲ, ಜಾಂಬವಂತ, ಕುಮುದ, ಅಂಗದ ಮುಂತಾದ ವೀರರನ್ನೆಲ್ಲ ಸೋಲಿಸಿದ. ನೆಲದ ಮೇಲೆ ಬೀಳಿಸಿದ. ನಿಶ್ಚೇಷ್ಟರನ್ನಾಗಿ ಮಾಡಿದ. ರಾಮಲಕ್ಷ್ಮಣರನ್ನು ಕೂಡ ನಿಶ್ಚೇಷ್ಟಿತಗೊಳಿಸಿದ. ಅನಂತರ ತಾನು ಆಕಾಶದಲ್ಲಿ ಅದೃಶ್ಯನಾದ. ಇಂದ್ರಜಿತನು ಅಂತರ್ಧಾನ ವಿದ್ಯೆಯಿಂದ ಅದೃಶ್ಯನಾಗಿ ಯಾರ ಕಣ್ಣಿಗೂ ಕಾಣದಂತೆ ತನ್ನ ಬಾಣಪ್ರಯೋಗವನ್ನು ಮುಂದುವರೆಸಿದ. ಆಗ ವಿಭೀಷಣನು ರಾಮಲಕ್ಷ್ಮಣರು ಮೂರ್ಛಿತರಾಗಿ ಮಲಗಿದಲ್ಲಿ ಬಂದು ಅವರಿಗೆ ಶೈತ್ಯೋಪಚಾರಮಾಡಿ ಎಬ್ಬಿಸಿ ಕುಳ್ಳಿರಿಸಿ ನಮಸ್ಕರಿಸಿ ನುಡಿದ.

**ವಿಭೀಷಣ:-** ಪ್ರಭು, ಕುಬೇರನ ಒಬ್ಬ ಸೇವಕನು ಅವನ ಅಪ್ಪಣೆಯಂತೆ ನಿಮ್ಮ ಸೇವೆಗಾಗಿ ಬಂದಿದ್ದಾನೆ. ಒಂದು ದಿವ್ಯ ಜಲವನ್ನು ಕಲಶದಲ್ಲಿ ತುಂಬಿ ತಂದಿದ್ದಾನೆ. ಆ ನೀರನ್ನು ಕಣ್ಣಿಗೆ ಹಚ್ಚಿಕೊಂಡರೆ ಆಕಾಶದಲ್ಲಿ ಅದೃಶ್ಯನಾದ ಪ್ರಾಣಿಗಳು ಸ್ಪಷ್ಟವಾಗಿ ಕಾಣುತ್ತವೆ. ಆದ್ದರಿಂದ ನೀವೂ ನಿಮ್ಮ ಪರಿವಾರದವರೂ ಯಕ್ಷರಾಜನು ಕಳಿಸಿದ ಈ ಮಂತ್ರಜಲವನ್ನು ಕಣ್ಣಿಗೆ ಹಚ್ಚಿಕೊಂಡು ನೋಡಿದರೆ ಅಂತರಿಕ್ಷದಲ್ಲಿ ಅದೃಶ್ಯರಾಗಿ ನಿಂತುಕೊಂಡು ಬಾಣಪ್ರಯೋಗ ಮಾಡುತ್ತಲಿರುವ ಈ ದುಷ್ಟದೈತ್ಯರನ್ನು ಕಾಣಬಲ್ಲಿರಿ. ಅವರನ್ನು ಇದ್ದಲ್ಲಿಂದ ಹೊಡೆದು ಕೊಲ್ಲಬಲ್ಲಿರಿ.''

ವಿಭೀಷಣನ ಈ ಮಾತನ್ನು ಕೇಳಿ ಶ್ರೀರಾಮಚಂದ್ರನು 'ಒಳ್ಳೆಯದು, ಹಾಗೆಯೇ ಆಗಲಿ' ಎಂದು ಹೇಳಿದ. ಮತ್ತು ಕುಬೇರನು ಕಳಿಸಿದ ಆ ನೀರನ್ನು ಕಣ್ಣಿಗೆ ಹಚ್ಚಿಕೊಂಡ. ಅದರಂತೆ ಲಕ್ಷ್ಮಣ, ಸುಗ್ರೀವ, ಜಾಂಬವಂತ, ಹನುಮಂತ, ಅಂಗದ ಮೊದಲಾದ ವಾನರ ವೀರರೆಲ್ಲರೂ ರಾಮನ ಕೈಯಿಂದ ತೆಗೆದುಕೊಂಡರು ಕುಬೇರನು ಕಳಿಸಿದ ಆ ದಿವ್ಯ ಜಲವನ್ನು. ಅದನ್ನು ತಮ್ಮ ತಮ್ಮ ಕಣ್ಣಿಗೆ ಹಚ್ಚಿಕೊಂಡರು. ಕೂಡಲೇ ಅವರೆಲ್ಲರಿಗೂ ಆಕಾಶದಲ್ಲಿ ಅದೃಶ್ಯನಾಗಿ ನಿಂತು ಬಾಣಪ್ರಯೋಗಮಾಡುತ್ತಲಿರುವ ಇಂದ್ರಜಿತನು ಕಾಣಿಸಿಕೊಂಡ. ಲಕ್ಷ್ಮಣನು ಇಂದ್ರಜಿತನನ್ನು ಕಂಡು ಒಮ್ಮೆಲೇ ಅವನ ಮೇಲೆ ದಾಳಿ ಇಟ್ಟ. ಆ ರಾವಣನ ಮಗ, ಹಾಗೂ ಈ ರಾಮನ ತಮ್ಮ ಇವರಿಬ್ಬರ ನಡುವೆ ಅಬ್ಬರದಿಂದ ಸಂಗ್ರಾಮವು ನಡೆಯಿತು. ಹೀಗೆ ಮೂರು ದಿನ ಹಣಾಹಣಿ ಹೋರಾಡಿ ಕೊನೆಗೆ ಆ ಇಂದ್ರಜಿತನನ್ನು ರಣಾಂಗದಲ್ಲಿ ಸಂಹರಿಸಿದ ಲಕ್ಷ್ಮಣ.

## ರಾಮ-ರಾವಣಯೋರ್ಯುದ್ಧಂ ರಾಮ-ರಾವಣಯೋರಿವ

ರಾವಣನ ತಮ್ಮ ಕುಂಭಕರ್ಣ ಬಿದ್ದುಹೋದ. ಮಗ ಮೇಘನಾದ ಅರ್ಥಾತ್ ಇಂದ್ರಜಿತ ಮರಣಹೊಂದಿದ. ಸೇನಾಪತಿಗಳೆಲ್ಲರೂ ಒಬ್ಬೊಬ್ಬರಾಗಿ ಮಸಣಗಟ್ಟೆಗೆ ನಡೆದರು. ಅಳಿದುಳಿದ ಸೇನೆಯನ್ನು ತೆಗೆದುಕೊಂಡು ಸ್ವಯಂ ರಾವಣನೇ ರಥಾರೂಢನಾಗಿ ಸಂಗ್ರಾಮಕ್ಕೆ ತೆರಳಿದ. ರಾಮ ಕಾಲು ನಡಿಗೆಯಲ್ಲಿಯೇ ಕಾದುತ್ತಿದ್ದ. ಈ ವೈಷಮ್ಯ ಕಂಡು ಸುರಪುರದ ಸಾಮ್ರಾಟ್ ದೇವೇಂದ್ರ ತನ್ನ ರಥವನ್ನು ಕಳಿಸಿದ. ಮಾತಲಿ ಅದರ ಸಾರಥಿ. ಆ ಇಂದ್ರನ ತೇರು ನೋಡಲು ಒಂದು ಸೂರ್ಯಮಂಡಲದಂತಿತ್ತು. ಅಂಥ ದಿವ್ಯ ಸ್ಯಂದನವನ್ನು ಆರೋಹಣ ಮಾಡಿ ರಾಮ ರಾವಣನನ್ನು ಎದುರಿಸಿದ. ರಾಮ-ರಾವಣರಲ್ಲಿ ಭೀಕರವಾದ ಸಂಗ್ರಾಮ ಮಸಗಿತು. ಕೊನೆಗೆ ರಾಮನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ರಾವಣನ ಹತುಕತ್ತುಗಳನ್ನು ಕತ್ತರಿಸಿ ಹಾಕಿದ. ಭೂಲೋಕದ ತುಂಬ ಶ್ರೀರಾಮನ ಜೈ ಜೈ ಕಾರ. ಅಂತರಿಕ್ಷದಲ್ಲಿ ರಾಮನ ಜಯಘೋಷದ ಉದ್ಘೋಷ. ಅಮರಾವತಿಯ ನಾಗರಿಕರಿಂದ ಶ್ರೀರಾಮ ಪ್ರಭುವಿನ ಮೇಲೆ ಮಂದಾರ ಹೂಗಳ ಸುರಿಮಳೆ. ರಾಮನ ಆದೇಶದಂತೆ ಲಂಕೆಯ ಸಿಂಹಾಸನದ ಮೇಲೆ ಲಕ್ಷ್ಮಣನಿಂದ ವಿಭೀಷಣನ ಪಟ್ಟಾಭಿಷೇಕ.

ಅನಂತರ ಆ ರಘೂತ್ತಮನ ಪ್ರಯಾಣ ಲಂಕೆಯಿಂದ. ಎಲ್ಲ ಕಪಿವೀರರಿಂದ ಒಡಗೂಡಿ ಸೀತಾಲಕ್ಷ್ಮಣ ಸಮೇತವಾಗಿಯೇ ಗಂಧಮಾದನ ಬೆಟ್ಟಕ್ಕೆ ಬಂದು ಇಳಿದ ಶ್ರೀರಾಮಚಂದ್ರ. ಆ ಗಿರಿಯಲ್ಲಿಯೇ ರಾಮನ ಸಂದೇಹವನ್ನು ದೂರಮಾಡಲಿಕ್ಕಾಗಿ ವಿದೇಹ ನಂದಿನಿಯಾದ ಸೀತೆಯು ಅಗ್ನಿದಿವ್ಯ ಮಾಡಿದಳು. ಆಗ ದೇವತೆಗಳು, ಮುನಿಗಳು, ಮಾನವರು, ದಾನವರು, ಎಲ್ಲರೂ ಅಗ್ನಿಸ್ನಾನಮಾಡಿ ಪೂತಾಽವಿನೀತಳಾದ ಸೀತಾದೇವಿಯನ್ನು ಅಭಿನಂದಿಸಿದರು. ರಾಮನೂ ಕೂಡ ಜಗದ್ವಂದ್ಯಳಾದ ತನ್ನ ಮನದನ್ನೆ ಸೀತೆಯನ್ನು ಲೋಕದೃಷ್ಟಿಯಿಂದ ಪರೀಕ್ಷಿಸಿ ಅವಳು ಅಪ್ಪಟ ಅಪರಂಜಿ ಎಂದು ತೋರಿಸಿಕೊಟ್ಟು ತಾನೂ ಆನಂದಿಸಿದ. ಅವಳನ್ನೂ ಅಭಿನಂದಿಸಿದ.

ಅನಂತರ ದಂಡಕಾರಣ್ಯದಲ್ಲಿ ನೆಲೆಸಿದ ಮುನಿ ಮನುಜ ಮಹರ್ಷಿಗಳೆಲ್ಲರೂ ಬ್ರಹ್ಮರ್ಷಿ ಅಗಸ್ತ್ಯರನ್ನು ದರ್ಶನವನ್ನು ಮಾಡಿಕೊಂಡು ಶ್ರೀರಾಮಚಂದ್ರನ ದರ್ಶನವನ್ನು ಮಾಡಿಕೊಂಡು ಕೊಂಡಾಡಿದರು.

**ಮುನಿಗಳು:-** ಎಲ್ಲ ಲೋಕಗಳ ಮೇಲೆ ಅನುಗ್ರಹದ ಮಳೆ ಕರೆಯುವ ಶ್ರೀರಾಮ ಚಂದ್ರ. ನಿನಗೆ ನಮಸ್ಕಾರ. ದುಷ್ಟ ರಾವಣನನ್ನು ಸಂಹರಿಸಲಿಕ್ಕಾಗಿಯೇ ನಿನ್ನ ಅವತಾರ. ನೀನು ಮೊದಲು ತಾಟಕೆಯನ್ನು ಸಂಹರಿಸಿದೆ. ವಿಶ್ವಾಮಿತ್ರರ ಯಜ್ಞವನ್ನು ಸಂರಕ್ಷಿಸಿದೆ. ಮಾರೀಚನನ್ನು ಗೆದ್ದೆ. ಅನಂತರ ಸುಬಾಹುವನ್ನು ಸಂಹರಿಸಿದೆ. ನಿನ್ನ ಪಾದಧೂಳಿಯಿಂದ ಅಹಲ್ಯೆಯನ್ನು ಉದ್ಧರಿಸಿದೆ. ಶಿವಧನುಸ್ಸನ್ನು ಲೀಲಾಜಾಲವಾಗಿ ಮುರಿದು ಜನಕರಾಜಕುಮಾರಿಯಾದ ಸೀತೆಯನ್ನು ವರಿಸಿದೆ. ಇಂಥ ಸೀತಾಪತಿ ಶ್ರೀರಾಮಚಂದ್ರನಿಗೆ ನಮ್ಮ ನಮಸ್ಕಾರ.

## ರಾಮಾಯಣದ ಕಥಾನಾಯಕನಿಗೆ ನಮನ

ಅನಂತರ ನಿನ್ನಿಂದ ಪರಶುರಾಮನ ಪರಾಜಯ. ಕೈಕೇಯಿಯ ಮಾತಿನಂತೆ ತಂದೆಯ ವಚನವನ್ನು ಸತ್ಯಮಾಡಲಿಕ್ಕಾಗಿ ಸೀತಾಲಕ್ಷ್ಮಣರೊಂದಿಗೆ ದಂಡ್ಯಕಾರಣ್ಯ ಗಮನ. ಚಿತ್ರಕೂಟದಲ್ಲಿ ಭರತನಿಗೆ ಪಾದುಕಾಪ್ರದಾನ. ಶರಭಂಗ ಮುನಿಯ ಉದ್ಧಾರ. ವಿರಾಧ ವಧ. ಮಾಯಾಮೃಗನಾದ ಮಾರೀಚನ ಸಂಹಾರ. ರಾವಣನಿಂದ ಅಪಹರಿಸಲ್ಪಟ್ಟ ಸೀತೆಯನ್ನು ಬಿಡುಗಡೆ ಮಾಡಲಿಕ್ಕಾಗಿ ಆತ್ಮಾರ್ಪಣ ಮಾಡಿದ ಜಟಾಯುವಿನ ಶವಸಂಸ್ಕಾರ ಹಾಗೂ ಅವನಿಗೆ ಮೋಕ್ಷ ಪ್ರದಾನ. ಕಬಂಧ ಸಂಹಾರ. ಶಬರಿಯ ಅತಿಥ್ಯ ಸ್ವೀಕಾರ. ಸುಗ್ರೀವನೊಂದಿಗೆ ಅಗ್ನಿಸಾಕ್ಷಿಯಾಗಿ ಮೈತ್ರಿ ಸಂಬಂಧ ಸ್ಥಾಪನೆ. ವಾಲಿ ವಧ. ಸಮುದ್ರದಲ್ಲಿ ಸೇತುಬಂಧ. ಸಕಲ ರಾಕ್ಷಸ ಸಂಹಾರ. ರಾವಣ ವಧ ಮುಂತಾದ ಅನೇಕಾನೇಕ ಮಹಾಮಹತ್ತರವಾದ ಲೀಲಾವಿಲಾಸಗಳನ್ನು ಮಾಡಿದ ಪ್ರಭು ಪರಮೇಶ್ವರನಾದ ಶ್ರೀರಾಮಚಂದ್ರನಿಗೆ ನಮ್ಮ ನಮಸ್ಕಾರ. ಸರ್ವ ಪ್ರಪಂಚದ ಸೃಷ್ಟಿ, ಸ್ಥಿತಿ, ಸಂಹಾರಾದಿಗಳನ್ನು ಮಾಡುವ ಜಾನಕೀಪತಿಗೆ ಜನಾರ್ದನನಿಗೆ, ಜಗನ್ನಾಥನಿಗೆ ನಮ್ಮ ನಮಸ್ಕಾರಗಳು. ಸ್ವಾಮೀ, ಶ್ರೀರಾಮಚಂದ್ರ, ವಿಶ್ವವನ್ನೆಲ್ಲ ರಕ್ಷಿಸುವ ನೀನು ನಮ್ಮನ್ನು ಕೂಡ ಕರುಣೆಯಿಂದ ಕಾಪಾಡು.

**ಮುನಿಮಹರ್ಷಿಗಳು:-** ಭಗವನ್, ನೀನು ಲೋಕಹಿತಕ್ಕಾಗಿಯೇ ಆ ರಾವಣನನ್ನು ಕೊಂದದ್ದು. ನಿನಗೆ ಪಾಪಲೇಪವೇ ಇಲ್ಲ. ಪ್ರಾಯಶ್ಚಿತ್ತದ ಮಾತು ಎಲ್ಲಿ ಬಂತು? ಆದರೂ ಲೋಕಶಿಕ್ಷಾರ್ಥವಾಗಿ ಏನಾದರೂ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು ಎಂದು ನಿನ್ನ ಅಪೇಕ್ಷೆ ಇದ್ದರೆ ನೀನು ಮಹಾದೇವರ ಆರಾಧನೆ ಮಾಡು. ದಕ್ಷಿಣಸಮುದ್ರ ತೀರದಲ್ಲಿ ಇರುವ ಗಂಧಮಾದನ ಪರ್ವತಕ್ಕೆ ಹೋಗು. ಅದರ ಶಿಖರ ಪ್ರದೇಶದಲ್ಲಿ ಲೋಕಸಂಗ್ರಹಕ್ಕಾಗಿ ಶಿವಲಿಂಗವನ್ನು ಪ್ರತಿಷ್ಠೆಮಾಡು. ಅದರಿಂದ ನಿನಗೆ ರಾವಣಸಂಹಾರದಿಂದ ಬಂದ ಪಾಪವು ದೂರವಾಗುವುದು. ನೀನು ಪ್ರತಿಷ್ಠೆ ಮಾಡಿದ ಆ ಶಿವಲಿಂಗದ ದರ್ಶನದಿಂದ ಮಾನವರಿಗೆ ಕಾಶೀ ವಿಶ್ವನಾಥನ ದರ್ಶನಕ್ಕಿಂತ ಕೋಟಿಪಟ್ಟು ಅಧಿಕ ಪುಣ್ಯವು ಪ್ರಾಪ್ತವಾಗುವುದು. ಗಂಧಮಾದನ ಬೆಟ್ಟದಲ್ಲಿ ನೀನು ಪ್ರತಿಷ್ಠೆ ಮಾಡಿದ ಶಿವಲಿಂಗವು ನಿನ್ನ ಹೆಸರಿನಿಂದಲೇ ರಾಮೇಶ್ವರ ಎಂದು ಹೆಸರು ಪಡೆಯುವದು.''

ಮುನಿಗಳ ಈ ವಚನವನ್ನು ಕೇಳಿ ಜಗದೊಡೆಯನಾದ ಜಾನಕೀಪತಿಯು ಗಂಧಮಾದನ ಗುಡ್ಡದ ಮೇಲೆ ಶಿವಲಿಂಗವನ್ನು ಸ್ಥಾಪಿಸುವ ನಿರ್ಧಾರ ಕೈಗೊಂಡ. ಆದರೆ ಪ್ರತಿಷ್ಠಾಪನೆಯ ಪುಣ್ಯಮೂಹೂರ್ತಕ್ಕೆ ಎರಡು ಗಳಿಗೆ ಮಾತ್ರ ಉಳಿದಿತ್ತು ಅವಕಾಶ.

ಅಷ್ಟರಲ್ಲಿ ಶಿವಲಿಂಗವನ್ನು ತರಲಿಕ್ಕಾಗಿ ಹನುಮಂತನನ್ನು ಕೈಲಾಸಕ್ಕೆ ಕಳುಹಿಸಿದ. ಉತ್ಸಾಹದಿಂದ ಆ ಅಂಜನೇಯನು ದೇವಮುನಿಗಳು ನೋಡುತ್ತಿರುವಂತೆಯೇ ಒಮ್ಮೆಲೇ ಮುಗಿಲಿಗೆ ಹಾರಿದ. ಆಕಾಶಮಾರ್ಗದಿಂದ ನಿಮಿಷಾರ್ಧದಲ್ಲಿ ಕೈಲಾಸ ಪರ್ವತಕ್ಕೆ ತೆರಳಿದ. ಅವನಿಗೆ ಅಲ್ಲಿ ಎಲ್ಲಿಯೂ ಲಿಂಗರೂಪ ಧರಿಸಿದ ಮಹಾದೇವರ ದರ್ಶನ ಆಗಲಿಲ್ಲ. ಆಗ ಅವನು ಸಾಕ್ಷಾತ್ ಮಹಾದೇವರನ್ನೇ ಪ್ರಸನ್ನಗೊಳಿಸಿದ. ಪ್ರತ್ಯಕ್ಷವಾಗಿ ಕಂಡ ಅವನ ದಯೆಯಿಂದ ಒಂದು ಶಿವಲಿಂಗವನ್ನು ದೊರಕಿಸಿದ. ಇತ್ತ ಗಂಧಮಾದನ ಶೈಲದಲ್ಲಿ ಋಷಿಮುನಿಗಳೂ, ದೇವತಾ ಧುರೀಣರೂ ಪ್ರತಿಷ್ಠಾಪನೆಯ ಮೂಹೂರ್ತ ಎಲ್ಲಿ ಮೀರಿ ಹೋಗುವುದೋ ಎಂದು ಚಿಂತಾಕ್ರಾಂತರಾಗಿ ಕುಳಿತಿದ್ದರು. ಪ್ರತಿಷ್ಠಾಪನೆಗೆ ನಿಶ್ಚಿತಗೊಳಿಸಿದ ಮೂಹೂರ್ತವು ಮೀರಬಂದಿತು. ಆದರೂ ಹನುಮಂತನ ಸುದ್ದಿ ಇಲ್ಲ. ಆಗ ಅಲ್ಲಿ ನೆರೆದ ದೇವಮುನಿಗಳೆಲ್ಲರೂ ಬಿನ್ನವಿಸಿದರು ಆ ಮೈಥಿಲೀಪತಿ ಶ್ರೀರಾಮನಿಗೆ.

**ದೇವಮುನಿಗಳು:-** ''ಮಹಾಪ್ರಭು, ಪ್ರತಿಷ್ಠೆಯ ಪುಣ್ಯಕಾಲವು ಮೀರಲಿದೆ. ಕೈಲಾಸದಿಂದ ಶಿವಲಿಂಗ ಈ ವರೆಗೂ ಬರಲಿಲ್ಲ. ಆದ್ದರಿಂದ ಸೀತಾದೇವಿಯು ತನ್ನ ಲೀಲಾವಿನೋದಕ್ಕಾಗಿ ಇಲ್ಲಿ ಮಳಲರಾಶಿಯಿಂದ ತನ್ನ ಕೈಯಿಂದಲೇ ನಿರ್ಮಿಸಿದ ಒಂದು ಶಿವಲಿಂಗವಿದೆ. ಅದನ್ನೇ ನೀವು ಇಲ್ಲಿ ಈಗ ಸ್ಥಾಪನೆ ಮಾಡಿಬಿಡಿರಿ. ಮುಹೂರ್ತದ ಹೊತ್ತು ಮೀರಿ ಹೋದರೆ ಮತ್ತೆ ಬರಲಾರದು.''

## ರಾಮನಿಂದ ರಾಮೇಶ್ವರ ಪ್ರತಿಷ್ಠೆ

ಒಪ್ಪಿಗೆಯಾಯಿತು ಶ್ರೀರಾಮದಂಪತಿಗಳಿಗೆ ಆ ಸುರಸಿದ್ಧ ಸಂಘದ ಹಿರಿಯರು ಮಾಡಿದ ಈ ಸೂಚನೆ. ಕೂಡಲೇ ಶ್ರೀ ಸೀತಾರಾಮಚಂದ್ರರು ಪುಣ್ಯಾಹವಾಚನಾದಿ ಮಂಗಳಕಾರ್ಯವನ್ನು ಮೊದಲು ಮಾಡಿ ಪ್ರತಿಷ್ಠಾಪನೆಯ ಶುಭಾರಂಭವನ್ನು ಮಾಡಿದರು. ಸಚ್ಚಿದಾನಂದ ವಿಗ್ರಹನಾದ ಸಾಕ್ಷಾತ್ ಶ್ರೀಹರಿಯ ಅವತಾರ ರೂಪನಾದ ಶ್ರೀರಾಮಾಚಂದ್ರನು ಶ್ರೀಹರಿಯೊಂದಿಗೆ ಜ್ಯೇಷ್ಠ ಮಾಸದ ಶುಕ್ಲಪಕ್ಷ ದಶಮಿ ತಿಥಿಯಂದು ಬುಧವಾರ ದಿನ ಹಸ್ತಾ ನಕ್ಷತ್ರದ ಯೋಗದಲ್ಲಿ ಆನಂದ ಯೋಗದಲ್ಲಿ, ಕನ್ಯಾರಾಶಿಯಲ್ಲಿ ಚಂದ್ರ, ವೃಷಭ ರಾಶಿಯಲ್ಲಿ ಸೂರ್ಯ ಇದ್ದಾಗ ಪುಣ್ಯಮಯವಾದ, ಉಪಯುಕ್ತ ಹತ್ತು ಯೋಗಗಳ ಉಪಸ್ಥಿತಿಯಲ್ಲಿ ಗಂಧಮಾದನ ಶ್ರೀಪರ್ವತದ ಮೇಲೆ ಸೇತುಬಂಧದ ಸೀಮೆಯಲ್ಲಿ ಲಿಂಗದ ಪೂಜೆಯನ್ನು ಗೈದು ವಿಧಿಪೂರ್ವಕವಾಗಿ ಪ್ರತಿಷ್ಠೆಮಾಡಿದ. ಆ ಕಾಲದಲ್ಲಿ ರಾಮನಿಂದ ಪ್ರತಿಷ್ಠಿತವಾದ ಆ ಶಿವಲಿಂಗದಲ್ಲಿ ಪಾರ್ವತೀ ಸಹಿತನಾದ ಪರಮೇಶ್ವರನು ಪ್ರತ್ಯಕ್ಷನಾಗಿ ಪ್ರಕಟನಾಗಿ ನಿಂತುಕೊಂಡಿದ್ದ. ಅವನ ಲಲಾಟದಲ್ಲಿ ಚಂದ್ರಕಲೆ, ಜಟಾಜೂಟದಲ್ಲಿ ದೇವಗಂಗೆ ಶೋಭಿಸುತ್ತಿದ್ದವು.

ಆಗ ಶ್ರೀರಾಮಚಂದ್ರನು ನೆರವೇರಿಸಿದ ಸ್ವಪ್ರತಿಷ್ಠೆಯಿಂದ ಸಂತುಷ್ಟನಾದ ಶಂಕರನು ಆ ರಘುಕುಲ ಚೂಡಾಮಣಿಗೆ ಹೀಗೆ ವರವನ್ನು ನೀಡಿದ.

**ಶಂಕರ:-** ರಾಘವೇಂದ್ರ, ನೀನು ಈ ಪರ್ವತದ ಮಸ್ತಕದಲ್ಲಿ ಪ್ರತಿಷ್ಠಿಸಿದ ಶಿವಲಿಂಗದ ದರ್ಶನ ಮಾಡಿಕೊಂಡವರು ಮಹಾಪಾಪಗಳಿಂದ ಮುಕ್ತರಾಗುತ್ತಾರೆ. ರಾಮೇಶ್ವರ ಎಂದು ಇದು ಈ ಜಗತ್ತಿನಲ್ಲಿ ಪ್ರಖ್ಯಾತಿಯನ್ನು ಪಡೆಯುತ್ತದೆ. ರಾಮೇಶ್ವರ ಲಿಂಗದ ದರ್ಶನದಿಂದ ಮಹಾ ಮಹಾಪಾಪಗಳೆಲ್ಲವೂ ನಷ್ಟವಾಗಿ ಭಕ್ತರ ಮೇಲೆ ಇಷ್ಟಾರ್ಥಗಳ ವೃಷ್ಟಿಯೇ ಆಗುವದು.

ಅನಂತರ ಶ್ರೀರಾಮನು ಆ ರಾಮೇಶ್ವರನ ಎದುರು ನಂದೀಕೇಶ್ವರನನ್ನು ಸ್ಥಾಪಿಸಿದ. ಮತ್ತು ತನ್ನ ಬಿಲ್ಲಿನ ತುದಿಯಿಂದ ನೆಲದ ಎದೆಯನ್ನು ಸೀಳಿ ಒಂದು ಬಾವಿಯನ್ನು ನಿರ್ಮಿಸಿದ. ಅದೇ ಬಾವಿಯಿಂದ ನೀರನ್ನು ತೆಗೆದುಕೊಂಡು ತಾನೇ ರಾಮೇಶ್ವರ ಲಿಂಗಕ್ಕೆ ಅಭಿಷೇಕಗೈದ. ಆ ಪುಣ್ಯತೀರ್ಥಕ್ಕೆ ಕೋಟಿತೀರ್ಥ ಎಂದು ಅಂದಿನಿಂದ ಹೆಸರು ಬಂದಿದೆ. ಅದರ ಮಹಿಮೆಯನ್ನು ಹಿಂದೆ ವರ್ಣಿಸಲಾಗಿದೆ.

## ಹನುಮಂತನಿಗೆ ಶ್ರೀರಾಮನಿಂದ ಜ್ಞಾನೋಪದೇಶ

**ಸೂತ:-** ಕೈಲಾಸಕ್ಕೆ ಹೋದ ಆಂಜನೇಯನು ಸ್ವಯಂ ಚಂದ್ರಚೂಡನೇ ತನ್ನ ಕೈಯಿಂದ ಕರುಣಿಸಿದ ಶಿವಲಿಂಗವನ್ನು ಹಿಡಿದುಕೊಂಡು ಗಂಧಮಾದನ ಗಿರಿಗೆ ಬಂದ. ಅವನು ಬರುವದರೊಳಗಾಗಿ ಶ್ರೀರಾಮನು ಸೀತಾದೇವಿಯು ತನ್ನ ಲೀಲಾಕೇಲೀ ಕೌತುಕದಲ್ಲಿ ಕೈಯಿಂದ ನಿರ್ಮಿಸಿದ ಮಳಲಲಿಂಗವನ್ನು ಪ್ರತಿಷ್ಠೆಮಾಡಿ ಅದರ ಪೂಜೆಯಲ್ಲಿ ತೊಡಗಿದ್ದ. ಅದನ್ನು ನೋಡಿ ಆ ಮಾರುತಿಗೆ ಬಹಳ ಖೇದವಾಯಿತು. ಅವನು ಅತ್ಯಂತ ವಿಷಾದದಿಂದ ನುಡಿದ-

**ಹನುಮಂತ:-** ಭಗವನ್, ನಾನು ಕೈಲಾಸಪರ್ವತಕ್ಕೆ ಹೋದಕೂಡಲೇ ಮಹಾದೇವನ ದರ್ಶನ ಆಗಲಿಲ್ಲ. ನಾನು ಆಗ ಅದೇ ಕೈಲಾಸ ಶೈಲದಲ್ಲಿ ನಿಂತುಕೊಂಡು ಶಿವನನ್ನು ಕುರಿತು ತಪಸ್ಸು ಮಾಡಿದೆ. ಪ್ರಸನ್ನನಾದ ಪರಮೇಶ್ವರನ ಕೈಯಿಂದಲೇ ಶಿವಲಿಂಗವನ್ನು ಇಸಿದುಕೊಂಡು ಬರಲು ತುಸು ವಿಳಂಬವಾಯಿತು. ಅಷ್ಟರಲ್ಲಿ ನೀವು ಇಲ್ಲಿ ಉಸುಕಿನ ಶಿವಲಿಂಗವನ್ನು ಪ್ರತಿಷ್ಠೆಮಾಡಿ ಬಿಟ್ಟಿದ್ದೀರಿ. ಎಲ್ಲ ಜನರೂ ಇನ್ನು ಮೇಲೆ ನೀನು ಪ್ರತಿಷ್ಠಾಪಿಸಿದ ಈ ಮಳಲ ಲಿಂಗವನ್ನೇ ಪೂಜೆಮಾಡುವರು. ನಾನು ಕಷ್ಟಪಟ್ಟು ಕೈಲಾಸ ಪರ್ವತದಿಂದ ಈ ಶಿವಲಿಂಗವನ್ನು ತಂದದ್ದು ವ್ಯರ್ಥವೇ ಆಯಿತು. ಇನ್ನು ಮೇಲೆ ನಾನು ಈ ಶಿವಲಿಂಗವನ್ನು ತೆಗೆದುಕೊಂಡು ಏನು ಮಾಡಲಿ?

ಖಿನ್ನನಾದ ಆ ಕಪಿಶ್ರೇಷ್ಠನ ಈ ವಿಷಾದ ವಚನವನ್ನು ಕೇಳಿ ಶ್ರೀರಾಮಚಂದ್ರನು ಬಗೆಬಗೆಯ ತತ್ವಜ್ಞಾನವನ್ನು ಉಪದೇಶಿಸಿ ಅವನನ್ನು ಸಮಾಧಾನಪಡಿಸಿದ. ಮತ್ತು ತನಗಾಗಿ ಜೀವನವನ್ನೇ ಮುಡುಪಾಗಿಟ್ಟ ಆ ಕಪಿವೀರನನ್ನು ಸಂತೈಸುತ್ತ ನುಡಿದ.

**ಶ್ರೀರಾಮ:-** ವೀರವಾನರೋತ್ತಮ, ನೀನು ನನಗೆ ಪರಮ ಆಪ್ತ. ನೀನು ನನ್ನ ಜೀವಿತ ಸರ್ವಸ್ವ. ನಿನ್ನದೆಲ್ಲವೂ ನನಗೆ ಅರ್ಪಿತ. ನನ್ನನ್ನು ಬಿಟ್ಟು ನಿನಗೆ ಪ್ರತ್ಯೇಕ ಅಸ್ತಿತ್ವ ಎಲ್ಲಿದೆ? ಇಲ್ಲಿ ಈ ಶಿವಲಿಂಗವನ್ನು ನಾನು ಪ್ರತಿಷ್ಠೆಮಾಡಿದರೆ ನೀನು ಮಾಡಿದಂತೆಯೇ. ಈ ಮಳಲ ಲಿಂಗವನ್ನು ನೀನೇ ಪ್ರತಿಷ್ಠೆಗೈದಿರುವಿ ಎಂದು ತಿಳಿದುಕೊ. ಶಿವಲಿಂಗ ಪ್ರತಿಷ್ಠೆಯ ಮೂಹೂರ್ತವು ಮೀರ ಬಂದಿದ್ದರಿಂದ ನಾನು ಸೀತೆಯಿಂದ ನಿರ್ಮಿತವಾದ ಈ ಶಿವಲಿಂಗವನ್ನು ಪ್ರತಿಷ್ಠೆಮಾಡಿದೆ. ಅದಕ್ಕಾಗಿ ನೀನು ಕೋಪಿಸಿಕೊಳ್ಳಬೇಡ.

ಖೇದಪಡಬೇಡ. ಇಂದು ಶುಭದಿನ. ಕೈಲಾಸಪರ್ವತದಿಂದ ಸಾಕ್ಷಾತ್ ವಿರೂಪಾಕ್ಷನ ಕರಕಮಲದಿಂದಲೇ ಪಡೆದು ತಂದ ಈ ನಿನ್ನ ಶಿವಲಿಂಗವನ್ನು ನೀನೇ ಇಲ್ಲಿ ಪ್ರತಿಷ್ಠೆಮಾಡು. ಅದು ಮುಂದೆ ಈ ಲೋಕದಲ್ಲಿ ನಿನ್ನ ಹೆಸರಿನಿಂದಲೇ 'ಹನುಮದೀಶ್ವರ' ಎಂದು ಪ್ರಸಿದ್ಧವಾಗಲಿ. ಬಂದ ಯಾತ್ರಿಕರೆಲ್ಲರೂ ಮೊದಲು ಹನುಮದೀಶ್ವರನನ್ನು

ದರ್ಶನಮಾಡಿಕೊಂಡೇ ನಂತರ ರಾಮೇಶ್ವರನನ್ನು ನೋಡಬೇಕು. ಇತ್ತೀಚಿಗೆ ನಡೆದ ಮಹಾಸಂಗ್ರಾಮದಲ್ಲಿ ಹೆಚ್ಚು ಜನ ರಕ್ಕಸರನ್ನು ಸಂಹರಿಸಿದವ ನೀನೇ. ಲೋಕದೃಷ್ಟಿಯಿಂದ ಆ ಕೋಟಿ ಕೋಟಿ ದೈತ್ಯರ ಸಂಹಾರದಿಂದ ನಿನಗೆ ಬಂದಿರಬಹುದಾದ ಪಾಪವೆಲ್ಲವೂ ಈ ಶಿವಲಿಂಗ ಪ್ರತಿಷ್ಠಾಪನೆಯಿಂದ ತಾನಾಗಿಯೇ ನಷ್ಟವಾಗಿ ಹೋಗುವದು. ಈ ಹನುಮಲ್ಲಿಂಗ ಹಾಗೂ ರಾಮೇಶ್ವರ ಲಿಂಗಗಳ ದರ್ಶನ ಮಾಡಿಕೊಂಡವರು ಉದ್ಧೃತರಾಗುವರು.

## ಹನುಮಂತನಿಂದ ಸೀತಾರಾಮರ ಸ್ತೋತ್ರ ಹಾಗೂ ಶಿವಲಿಂಗ ಸ್ಥಾಪನೆ

**ಸೂತ:-** ಶ್ರೀರಾಮಪ್ರಭುವಿನ ದಯಾಪೂರ್ಣವಾದ ಈ ಮಾತನ್ನು ಕೇಳಿ ಭಕ್ತಿಭಾವವು ಉಕ್ಕಿಬಂದಿತು ಹನುಮಂತನ ಹೃದಯದಲ್ಲಿ. ಆ ಜಾನಕೀಪತಿಯ ಎದುರು ದಂಡಕಾಷ್ಠದಂತೆ ಅಡ್ಡಬಿದ್ದು ಅವನು ಸಾಷ್ಟಾಂಗ ಪ್ರಣಾಮ ಮಾಡಿದ. ಎರಡೂ ಕೈಗಳನ್ನು ಜೋಡಿಸಿದ. ಭಕ್ತಿಯಿಂದ ಗದ್ಗದಿತನಾಗಿ ಮೃದು ಮಧುರವಾದ ಪದಗಳಿಂದ ಕವನರೂಪದಿಂದ ಆ ಶ್ರೀರಾಮನ ಸ್ತವನ ಮಾಡಿ ಅವನ ಮಹಾಮಹಿಮೆಯನ್ನು ಅನಂತ ಅವತಾರಗಳ ವಿವಿಧ ಲೀಲೆಗಳನ್ನು ಬಾಯಿತುಂಬ ಕೊಂಡಾಡಿದ.

**ಹನುಮಂತ:-** ಈ ಚರಾಚರ ಪ್ರಪಂಚಕ್ಕೆಲ್ಲ ಆದಿ ಕಾರಣನೂ ವಿಶ್ವವ್ಯಾಪಿಯೂ ಸಾಕ್ಷಾತ್ ಶ್ರೀಹರಿ ಸ್ವರೂಪಿಯೂ ಆದ ಶ್ರೀರಾಮಚಂದ್ರನಿಗೆ ನಮಸ್ಕಾರ. ಲೋಕಕಂಟನಾದ ರಾವಣನನ್ನು ಸಂಹರಿಸಿ ಜಗತ್ತಿಗೆಲ್ಲ ಕ್ಷೇಮವನ್ನು, ಸೌಭಾಗ್ಯವನ್ನು ದಯಪಾಲಿಸುವ ಕರುಣಾಶಾಲಿಗೆ ವಂದನೆ. ಕಲ್ಲಾಗಿ ಬಿದ್ದ ಅಹಲ್ಯೆಯನ್ನು ಉದ್ಧರಿಸಿ ಪತಿತ ಪಾವನ ಎಂದು ಹೆಸರಾದ ನಿನಗೆ ನನ್ನ ಪ್ರಣಾಮ. ಭಕ್ತರ ದುಃಖಸಾಗರವನ್ನು ಒಣಗಿಸಲು ನೀನೊಬ್ಬ ಅಗಸ್ತ್ಯ. ಸಜ್ಜನರ ಹೃದಯಾರವಿಂದಗಳನ್ನು ಅರಳಿಸುವಲ್ಲಿ ನೀನೊಬ್ಬ ಸೂರ್ಯ. ಸಂಸಾರದಲ್ಲಿ ಸಿಲುಕಿ ತೊಳಲಾಡುವವರಿಗೆ ನೀನೇ ತಾರಕ ಬ್ರಹ್ಮ. ಯೋಗಿಗಳ ಮನಸ್ಸನ್ನು ಆನಂದಪಡಿಸುವುದರಿಂದ ನೀನು ರಾಮ. ಹುಟ್ಟಿದ ಪ್ರತಿಯೊಂದು ಪ್ರಾಣಿಗೂ ಆಹ್ಲಾದವನ್ನು ನೀಡುವುದರಿಂದ ನೀನು ಚಂದ್ರ. ಅದಕ್ಕಾಗಿ ನಿನಗೆ ರಾಮಚಂದ್ರ ಎಂಬ ಹೆಸರು ಸಾರ್ಥಕ. ನಿನ್ನ ಮಹಿಮೆಯನ್ನು ಸಂಪೂರ್ಣವಾಗಿ ಬ್ರಹ್ಮಾದಿಗಳೂ ಅರಿಯಲಾರರು. ವೇದಗಳು ಅರುಹಲಾರವು. ಅಗಮ್ಯಮಹಿಮನಾದ ಶ್ರೀರಾಮ, ನಿನಗೆ ನನ್ನ ಅನಂತಾನಂತ ನಮಸ್ಕಾರ. ನಾನು ನಿನ್ನ ಚರಣಗಳಿಗೆ ಶರಣು ಬಂದಿದ್ದೇನೆ. ನನ್ನನ್ನು ಕರುಣೆಯಿಂದ ಕಾಪಾಡು. ನಿನ್ನ ಮಡದಿಯಾದ ಈ ಸೀತಾದೇವಿಯು ಸಾಕ್ಷಾತ್ ಲಕ್ಷ್ಮೀ ಸ್ವರೂಪಿಣಿಯು. ಪರಮ ಪತಿವ್ರತೆಯಾದ ಆ ಸೀತಾದೇವಿಗೆ ನನ್ನ ನಮಸ್ಕಾರ. ಭೂಮಿತಾಯಿಯ ಪ್ರೀತಿಯ ಪುತ್ರಿಯಾದ ಆ ಜನಕನಂದಿನಿಗೆ ನನ್ನ ವಂದನೆ. ಎಲ್ಲ ವೇದಗಳಿಗೂ ಈ ಮಹಾತಾಯಿಯೇ ಅಭಿಮಾನಿ ದೇವತೆ. ಕಮಲವನದಲ್ಲಿ ಈ ಜಗದೀಶ್ವರಿಯ ನಿವಾಸ. ಕೈಗಳಲ್ಲಿಯೂ ಎರಡು ಕಮಲ. ವಿಷ್ಣುವಿನ ಹೃದಯ ಕಮಲದಲ್ಲಿ ವಾಸಮಾಡಿದ ಆ ಮಹಾಲಕ್ಷ್ಮಿಯ ಚರಣಕಮಲಗಳನ್ನು ನಾನು ಭಕ್ತಿಯಿಂದ ವಂದಿಸುತ್ತೇನೆ.'' ಹೀಗೆ ಸೀತಾರಾಮರನ್ನು ಬಾಷ್ಪಗದ್ಗದ ಕಂಠದಿಂದ ಸ್ತೋತ್ರಮಾಡಿ ಹನುಮಂತನು ರಾಮೇಶ್ವರಲಿಂಗದ ಎತ್ತರಭಾಗದಲ್ಲಿ ತಾನು ತಂದ ಶಿವಲಿಂಗವನ್ನು ಪ್ರತಿಷ್ಠೆ ಮಾಡಿದನು.

## ಶಂಕರರಾಜನ ಬ್ರಹ್ಮಹತ್ಯಾ ಮತ್ತು ಸ್ತ್ರೀಹತ್ಯಾ ಪಾಪ ಪರಿಹಾರ

**ಸೂತ:-** ಬಹಳ ಕಾಲದ ಹಿಂದೆ ಶಂಕರ ಎಂಬ ರಾಜನು ಪಾಂಡ್ಯದೇಶದಲ್ಲಿ ರಾಜ್ಯವಾಳುತ್ತಿದ್ದ. ಆ ಶಂಕರರಾಜನು ಸತ್ಯಪ್ರತಿಜ್ಞ ಯಜ್ಞನಿಷ್ಠ. ಮತ್ತು ಧರ್ಮಾತ್ಮ. ಶಿವ ವಿಷ್ಣು ಇಬ್ಬರನ್ನೂ ಸಮನಾಗಿಯೇ ಉಪಾಸನೆಗೈಯುತ್ತಿದ್ದ. ಒಳ್ಳೇ ದಾನಶೀಲ. ಒಂದು ದಿನ ಆ ಶಂಕರರಾಜ ಬೇಟೆಯಾಡಲಿಕ್ಕೆ ಕಾಡಿಗೆ ಹೋಗಿದ್ದ. ಕಾಡುಮೃಗಗಳ ಬೆನ್ನುಹತ್ತಿ ಒಂದು ಗೂಢ ಗಹನ ಅರಣ್ಯದ ಅಂಚಲದಲ್ಲಿ ಇದ್ದ ತಪೋವನದ ಪರಿಸರದಲ್ಲಿ ಪ್ರವೇಶಿಸಿದ. ಬಹಳ ರಮಣೀಯವಾಗಿತ್ತು ಆ ಪರ್ವತಪ್ರಾಂತ. ಅಲ್ಲಿಯ ದರಿ, ಕಂದರ, ಗುಹೆ, ಹಳ್ಳ, ಕೊಳ್ಳ ಎಲ್ಲವೂ ನಿಸರ್ಗ ಸೌಂದರ್ಯದಿಂದ ಮನೋಹರವಾಗಿ ಕಂಗೊಳಿಸುತ್ತಿದ್ದವು. ಇಂಥ ಪ್ರಕೃತಿ ಸೌಂದರ್ಯ ನೆಲೆವೀಡಾದ ಆ ತಪೋವನದ ಒಂದು ಭಾಗದಲ್ಲಿ ಸೌಕಲ್ಯ ಎಂಬ ಓರ್ವ ಮುನಿಯು ಮಡದಿ ಮಕ್ಕಳೊಂದಿಗೆ ನೆಲೆಸಿದ್ದ. ಅವನ ಧರ್ಮಪತ್ನಿಯೂ ಪತಿಯೊಂದಿಗೆ ಅವನ ಹಿಂದೆ ಕುಳಿತು ತಪವನ್ನು ಆಚರಿಸುತ್ತಿದ್ದಳು. ಒಂದು ದಿನ ಮುನಿ ಹುಲಿದೊಗಲು ಹೊದ್ದು ತಪಂಗೈಯುತ್ತಲಿದ್ದ ಒಂದು ಗುಹೆಯಲ್ಲಿ. ವೀರನಾದ ಆ ಶಂಕರರಾಜನಿಗೆ ಗಹನ ಅರಣ್ಯ ಭಾಗದಲ್ಲಿ ಗುಪ್ತ ಗಹ್ವರಗಳಲ್ಲಿ ಅವಿತುಕೊಂಡಿರುವ ಕ್ರೂರ ಕಾಡುಪ್ರಾಣಿಗಳನ್ನು ಬಡೆದು ಹೊಡೆದೆಬ್ಬಿಸಿ ಬೇಟೆಯಾಡುವ ಹುಚ್ಚು. ಅದಕ್ಕಾಗಿ ಅವನು ಆ ಗೊಂಡಾರಣ್ಯದ ಪ್ರತಿಯೊಂದು ಗುಹೆಯಲ್ಲಿಯೂ ಹೊಕ್ಕು ನೋಡುತ್ತಿದ್ದ. ಒಂದು ಗುಹೆಯಲ್ಲಿ ಹುಲಿಯ ಚರ್ಮವನ್ನು ಹೊದೆದುಕೊಂದು ಕುಳಿತ ಮುನಿಯನ್ನು ಕಂಡು ಅದನ್ನು ಹುಲಿಯೆಂದೇ ಭ್ರಮಿಸಿದ. ದೂರದಿಂದಲೇ ಗುರಿ ಇಟ್ಟು ಬಾಣಬಿಟ್ಟ.

ಒಳ್ಳೇ ಬಿಲ್ಲಾಳು ಆ ರಾಜ. ಬಿಟ್ಟ ಗುರಿ ತಪ್ಪಲಿಲ್ಲ ಅವನ ಬಾಣ ತಾಕಿ ತಕ್ಷಣದಲ್ಲಿಯೇ ಮುನಿ ಮರಣ ಹೊಂದಿದ. ರಾಜನು ಬಿಟ್ಟ ಹದನವಾದ ಬಾಣ ಮುನಿಯ ದೇಹವನ್ನು ಭೇದಿಸಿಕೊಂಡು ಅವನ ಹಿಂದೆ ಕುಳಿತು ಮುನಿಯ ಮಡದಿಗೂ ತಾಕಿತು. ಅವಳ ಪ್ರಾಣವನ್ನೂ ತೆಗೆದುಕೊಂಡಿತು. ಹೀಗೆ ಶಂಕರರಾಜನ ಒಂದು ಬಾಣಪ್ರಯೋಗದಿಂದ ಮುನಿದಂಪತಿಗಳಿಬ್ಬರೂ ಗತಪ್ರಾಣರಾಗಿ ನೆಲಕ್ಕೆ ಉರುಳಿದರು. ಅಲ್ಲಿಯೇ ಇದ್ದ ಮುನಿಕುಮಾರ ಜಾಂಗಲನು ಒಂದೇ ಪೆಟ್ಟಿಗೆ ತಾಯಿ ತಂದೆ ಇಬ್ಬರೂ ಸತ್ತು ಬಿದ್ದುದನ್ನು ಕಂಡು ಶೋಕಮಾಡತೊಡಗಿದ.

''ಅಯ್ಯೋ, ತಂದೆಯೇ, ಪ್ರೀತಿಯ ಮಾತೆಯೇ, ನೀವಿಬ್ಬರೂ ನನ್ನನ್ನು ಬಿಟ್ಟು ಹೋಗಿಬಿಟ್ಟಿರಾ? ಇನ್ನು ಮುಂದೆ ನನ್ನ ಗತಿ ಏನು? ನನಗೆ ಉಣಿಸುವವರು ಯಾರು? ತಿನಿಸುವವರು ಯಾರು? ವೇದಶಾಸ್ತ್ರಗಳನ್ನು ಕಲಿಸುವವರು ಯಾರು? ಯಾವ ಪಾಪಿಯು ನಿರಪರಾಧಿಗಳಾದ ನಿಮ್ಮನ್ನು ಬಾಣಬಿಟ್ಟು ನಿಷ್ಕಾರಣವಾಗಿ ಸಂಹರಿಸಿದ?''

ಮುನಿಪುತ್ರನ ಈ ಕರುಣಾಪೂರ್ಣ ಆಕ್ರಂದನವನ್ನು ಕೇಳಿ ರಾಜನು ಓಡಿಬಂದ. ಅಷ್ಟರಲ್ಲಿ ಆ ಅರಣ್ಯದಲ್ಲಿ ಇರುವ ಋಷಿಗಳೆಲ್ಲರೂ ಮುನಿಕುಮಾರನ ಚೀತ್ಕಾರದ ಧ್ವನಿಯನ್ನು ಕೇಳಿ ಧಾವಿಸಿ ಬಂದರು. ವೃದ್ಧರಾದ ದಂಪತಿಗಳಿಬ್ಬರೂ ಹತಪತಿತರಾಗಿದ್ದರು. ಮುನಿಪುತ್ರ ರೋದಿಸುತ್ತಿದ್ದ. ರಾಜ ಬಿಲ್ಲುಬಾಣ ಹಿಡಿದು ಓಡಿ ಅಲ್ಲಿಯೇ ಬಂದು ನಿಂತಿದ್ದ. ಅವರಿಗೆ ಆ ಸನ್ನಿವೇಶದ ಅರ್ಥವಾಯಿತು. ಆ ಮುನಿತನಯನಿಗೆ ಅಳಬೇಡ ಎಂದು ಹೇಳಿ ಅವರು ಸಂತೈಸತೊಡಗಿದರು.

**ಮುನಿಗಳು:-** ಮಗು, ಶೋಕ ಮಾಡಬೇಡ. ಸಾವು ಯಾರಿಗೂ ಬಿಟ್ಟಿದ್ದಲ್ಲ. ಧನಿಕ, ದರಿದ್ರ, ಭಿಕ್ಷುಕ, ಭೂಪತಿ, ಪಂಡಿತ, ಪಾಮರ, ಯಾರೇ ಇರಲಿ ಯಮರಾಜನು ಆಯುಷ್ಯ ಮುಗಿದ ಬಳಿಕ ಸೆಳೆದೊಯ್ದು ಬಿಡುವನು. ಮೃತ್ಯುವನ್ನು ಮೀರಿ ನಿಂತ ಮಾನವರು ಈ ಜಗತ್ತಿನಲ್ಲಿ ಯಾರು? ಸಚ್ಚಿದಾನಂದ ಸ್ವರೂಪವಾದ ಪರಬ್ರಹ್ಮ ಒಂದೇ. ಮೃತ್ಯುಂಜಯ ಅಜರಾಮರ, ಉಪನಿಷತ್ ಪ್ರತಿಪಾದ್ಯವಾದ ಆ ಪರಬ್ರಹ್ಮನಿಗೆ ಮಾತ್ರ ಹುಟ್ಟು ಇಲ್ಲ, ಸಾವು ಇಲ್ಲ, ನೋವು ಇಲ್ಲ. ಅವನೊಬ್ಬನನ್ನು ಬಿಟ್ಟರೆ ಜಗತ್ತಿನಲ್ಲಿ ಎಲ್ಲರೂ ಒಂದಿಲ್ಲ ಒಂದು ದಿನ ಮರಣವನ್ನು ಹೊಂದಲೇಬೇಕು. ಈ ಪ್ರಾಣಿಗಳ ಜೀವನವು ನೀರಿನ ಮೇಲಿನ ಗುಳ್ಳೆಯಂತೆ ಕ್ಷಣ ಭಂಗುರ, ಕಾಮ, ಕ್ರೋಧ, ಭಯ, ದ್ರೋಹ, ಮೋಹ, ಮಾತ್ಸರ್ಯ ಮುಂತಾದ ದುರ್ಗುಣಗಳಿಗೆಲ್ಲ ಆಶ್ರಯವಾದ ಈ ಮಾನವೀಯ ಶರೀರವು ಮಲದ ಭಾಂಡ. ಮೂತ್ರಕುಂಡ. ಇಂಥ ಮಾಂಸದ ಪಿಂಡದಂತಿರುವ ಈ ದೇಹವು ಬಹಳ ಸುಂದರ ಎಂದು ತಿಳಿಯುವವರಷ್ಟು ಮೂರ್ಖರು ಯಾರು ಈ ಜಗತ್ತಿನಲ್ಲಿ? ಅನೇಕ ತೂತು ಉಳ್ಳ ಕೊಡದಲ್ಲಿ ನೀರು ಹೇಗೆ ನಿಂತೀತು? ಅದರಂತೆ ಅನೇಕ ಸಂದು ರಂಧ್ರಗಳುಳ್ಳ ಈ ಅಪವಿತ್ರ ಪಾಂಚಭೂತ ಶರೀರದಲ್ಲಿ ಗಾಳಿರೂಪವಾದ ಪ್ರಾಣವಾಯು ಎಷ್ಟು ಹೊತ್ತು ನಿಂತೀತು?

ಆದ್ದರಿಂದ ನೀನು ಮರಣಿಸಿದ ತಂದೆತಾಯಿಗಳಿಗಾಗಿ ದುಃಖಪಡಬೇಡ. ಅವರು ತಮ್ಮ ತಮ್ಮ ಕರ್ಮಾಧೀನರಾಗಿ ಈ ದೇಹವನ್ನು ಬಿಟ್ಟು ಹೋಗಿದ್ದಾರೆ. ನೀನೂ ಒಂದು ದಿನ ಅವರಂತೆ ಮರಣ ಹೊಂದಲೇಬೇಕು. ನಾವೂ ಅಷ್ಟೇ. ಅದಕ್ಕಾಗಿ ಶೋಕವನ್ನು ಏಕೆ ಮಾಡಬೇಕು? ಸಾಯುವ ಪ್ರೇತ, ಸತ್ತ ಪ್ರೇತಕ್ಕಾಗಿ ಅಳುವದೇ? ಆದ್ದರಿಂದ ನೀನು ಶೋಕವನ್ನು ಬಿಟ್ಟು ನಿಮ್ಮ ತಾಯ್ತಂದೆಗಳ ಸಲುವಾಗಿ ಮುಂದೆ ಮಾಡಬೇಕಾದ ಪ್ರೇತಕಾರ್ಯಗಳನ್ನು ಮಾಡು. ಅವರಿಬ್ಬರೂ ರಾಜನ ಬಾಣ ಪ್ರಹಾರದಿಂದ ಸತ್ತಿದ್ದಾರೆ. ಆ ದೋಷಶಾಂತಿಗಾಗಿ ನೀನು ಇವರ ಮೂಳೆಗಳನ್ನು ತೆಗೆದುಕೊಂಡು ರಾಮೇಶ್ವರ ಕ್ಷೇತ್ರಕ್ಕೆ ಹೋಗು. ಮುಕ್ತಿದಾಯಕವಾದ ಆ ರಾಮಸೇತುವಿನಲ್ಲಿ ಆ ಮೂಳೆಗಳನ್ನು ಬಿಟ್ಟು ಸಪಿಂಡೀಕರಣ ಮುಂತಾದ ಶ್ರಾದ್ಧ ಕಾರ್ಯವನ್ನು ಪೂರೈಸು. ಅದರಿಂದ ನಿಮ್ಮ ತಂದೆ ತಾಯಿಗಳಿಗೆ ಆಕಸ್ಮಿಕವಾಗಿ ಪ್ರಾರಬ್ಧ ಕರ್ಮವಶದಿಂದ ಒದಗಿ ಬಂದ ಈ ದುರ್ಮರಣದ ದೋಷವು ನಾಶವಾಗುವದು.''

ಮುನಿಗಳಿಗೆ ಮಾತಿನಂತೆ ಮೃತನಾದ ಶಾಕಲ್ಯ ಮುನಿಯ ಚಿರಂಜೀವನಾದ ಜಾಂಗಲನು ತನ್ನ ತಾಯಿತಂದೆಗಳ ಅಂತೇಷ್ಟಿ ಸಂಸ್ಕಾರವನ್ನು ಮಾಡಿದ. ಎರಡನೆಯ ದಿನ ಅವರ ಮೂಳೆಗಳನ್ನು ತೆಗೆದುಕೊಂಡು ಹಾಲಾಸ್ಯ ಕ್ಷೇತ್ರಕ್ಕೆ ಹೋದ. ಅಲ್ಲಿಂದ ರಾಮೇಶ್ವರ ಕ್ಷೇತ್ರಕ್ಕೆ ಬಂದ. ಅಲ್ಲಿ ತಾಯಿತಂದೆಗಳ ಮೂಳೆಗಳನ್ನು ಹಾಕಿದ. ಒಂದು ವರ್ಷದವರೆಗೆ ಅಲ್ಲಿಯೇ ನಿಂತ. ಎಲ್ಲ ಶ್ರಾದ್ಧಾದಿಕಾರ್ಯಗಳನ್ನು ಮಾಡಿ ಪೂರೈಸಿದ. ಒಂದು ವರ್ಷದ ನಂತರ ಜಾಂಗಲನಿಗೆ ಕನಸಿನಲ್ಲಿಯೇ ತನ್ನ ತಂದೆತಾಯಿಗಳ ದರ್ಶನವಾಯಿತು. ಅವರು ಶ್ರೀಹರಿಯ ಸಾರೂಪ್ಯ ಮೋಕ್ಷವನ್ನು ಹೊಂದಿ ದಿವ್ಯ ದೇಹ ಕಾಂತಿಯಿಂದ ಹೊಳೆಯುತ್ತ ಸಂತೋಷದಲ್ಲಿ ಇರುವದನ್ನು ಅವನು ಕನಸಿನಲ್ಲಿ ನೋಡಿದ. ಅದರಿಂದ ಅವನಿಗೆ ತಾನು ಈ ರಾಮಸೇತುವಿಗೆ ಬಂದು ಇಲ್ಲಿ ತನ್ನ ಮಾತಾಪಿತೃಗಳ ಅಸ್ಥಿವಿಸರ್ಜನೆಮಾಡಿ ಶ್ರಾದ್ಧ

ಕಾರ್ಯವನ್ನು ಯಥಾಶಕ್ತಿ ನೇರವೇರಿಸಿದ್ದು ಫಲಪ್ರದವಾಗಿದೆ ಎನಿಸಿತು. ತನ್ನನ್ನು ಹಡೆದ ತಾಯಿ, ಪಡೆದ ತಂದೆ ಇಬ್ಬರೂ ಶ್ರೀಹರಿಯ ಸಾರೂಪ್ಯ ಮೋಕ್ಷವನ್ನು ಹೊಂದಿ ಸಂತೋಷದಿಂದ ಇರುತ್ತಾರೆ ಎಂದು ತಿಳಿದು ಸಮಾಧಾನವೆನಿಸುತು ಜಾಂಗಲನಿಗೆ.

ಇತ್ತ ಮುನಿತನಯನಾದ ಜಾಂಗಲಕುಮಾರನಿಗೆ ರಾಮೇಶ್ವರಕ್ಕೆ ಹೋಗಲು ಆದೇಶ ನೀಡಿ ಅವನನ್ನು ಕೊಟ್ಟು ಕಳಿಸಿದ ಬಳಿಕ ಆ ಎಲ್ಲ ಮುನಿಮಹರ್ಷಿಗಳು ಆ ಪಾಂಡ್ಯರಾಜನ ಮೇಲೆ ಸಿಟ್ಟಿಗೆದ್ದು ಅವನನ್ನು ಚೆನ್ನಾಗಿ ನಿರ್ಭತ್ಸನೆಗೈದರು.

**ಮುನಿಗಳು:-** ಮೂರ್ಖ ಮಹಾರಾಜ, ನೀನು ನಿನ್ನ ಕ್ರೌರ್ಯದಿಂದ ಆ ಬ್ರಾಹ್ಮಣ ದಂಪತಿಗಳನ್ನು ಕೊಂದು ಬ್ರಹ್ಮಹತ್ಯಾ ಹಾಗೂ ಸ್ತ್ರೀಹತ್ಯಾ ಎರಡು ಪಾಪಗಳನ್ನು ಮಾಡಿರುವೆ. ಎರಡು ನಿಗಿ ನಿಗಿ ಕೆಂಡಗಳನ್ನು ನೀನು ಬಟ್ಟೆಯಲ್ಲಿ ಕಟ್ಟಿಕೊಂಡಂತಾಗಿದೆ. ನಿರಪರಾಧಿಗಳಾದ ಆ ಮುನಿದಂಪತಿಗಳನ್ನು ಕೊಂದದ್ದಕ್ಕೆ ನಿನಗೆ ಯಾವ ಪ್ರಾಯಶ್ಚಿತ್ತವೂ ಇಲ್ಲ. ಬೆಂಕಿಯಲ್ಲಿ ಬಿದ್ದು ಶರೀರವನ್ನು ಸುಟ್ಟುಕೊಂಡು ದೇಹಾಂತ ಪ್ರಾಯಶ್ಚಿತ್ತವನ್ನು ಮಾಡಿಕೊ. ಇಲ್ಲದಿದ್ದರೆ ನೀನು ನೂರಾರು ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡರೂ ಈ ಮಹಾಪಾಪದಿಂದ ಮುಕ್ತನಾಗಲಾರೆ. ನಿನ್ನಂಥ ಪಾಪಿಷ್ಠನೊಂದಿಗೆ ಮಾತನಾಡಿದರೂ ನಿನ್ನ ಪಾಪವು ಮಾತನಾಡಿದವರಿಗೆ ತಗುಲಿ ಕೊಂದುಬಿಡುವುದು.''

ಮುನಿಮನೀಷಿಗಳ ಈ ಮಾತು ನಿಜವೆಂದು ತೋರಿತು ಆ ಅರಸನಿಗೆ. ಅವನು ಆ ಮುನಿಮಂಡಳದ ಮುಂದಾಳುಗಳಿಗೆಲ್ಲ- ''ಪೂಜ್ಯರೇ, ತಾವು ಹೇಳಿದಂತೆ ಮಾಡುತ್ತೇನೆ. ಅಗ್ನಿನಾರಾಯಣನಿಗೆ ನನ್ನ ದೇಹದ ಆಹುತಿ ನೀಡುತ್ತೇನೆ. ಈ ಶರೀರ ತ್ಯಾಗವನ್ನು ಮಾಡಿದ ಬಳಿಕಾದರೂ ನನ್ನ ಪಾಪವು ಪರಿಹಾರವಾಗುವಂತೆ ತಾವು ಅನುಗ್ರಹ ಮಾಡಿರಿ.'' ಎಂದು ಎಲ್ಲ ಮುನಿಗಳಿಗೂ ವಂದಿಸಿ ಹೇಳಿಕೊಂಡು ರಾಜಧಾನಿಗೆ ಮರಳಿದ ಆ ಪಾಂಡ್ಯನರೇಶ. ತನ್ನ ಎಲ್ಲ ಮಂತ್ರಿಗಳನ್ನು ಸೇನಾಪತಿಗಳನ್ನೂ ಮಿತ್ರರನ್ನೂ ಕರೆದು ತನ್ನ ಕೈಯಿಂದ ಆದ ಮಹಾಪರಾಧವನ್ನು ತಿಳಿಸಿ ಪ್ರಜ್ವಲಿತ ಅಗ್ನಿಯಲ್ಲಿ ತನ್ನ ಆತ್ಮಾಹುತಿ ನೀಡುವ ನಿರ್ಧಾರವನ್ನು ತಿಳಿಸಿದ. ಮತ್ತು ''ಬೇಗನೇ ಕುಳ್ಳುಕಟ್ಟಿಗೆಯನ್ನು ಕೂಡಿ ಹಾಕಿ ಅಗ್ನಿಯನ್ನು ಪ್ರಜ್ವಲಿತಗೊಳಿಸಿರಿ. ನನ್ನ ಮಗನಾದ ಸುರುಚಿಯನ್ನು ಕೂಡಲೇ ಸಿಂಹಾಸನದ ಮೇಲೆ ಕೂಡಿಸಿರಿ'' ಎಂದು ಬಿನ್ನವಿಸಿದ.

ರಾಜನ ಆದೇಶದಂತೆ ಮಂತ್ರಿ ಸೇನಾಪತಿಗಳು ಬಹು ದುಃಖದಿಂದ ಅಗ್ನಿಯನ್ನು ಕಾಷ್ಠರಾಶಿಯಲ್ಲಿ ಪ್ರತಿಷ್ಠೆಗೊಳಿಸಿದರು. ಉರಿಯನ್ನು ಪ್ರಜ್ವಲಿತಗೊಳಿಸಿದರು. ಶಂಕರಮಹಾರಾಜನು ಅಗ್ನಿ ಪ್ರಜ್ವಲಿತವಾದುದನ್ನು ಕಂಡು ಸ್ನಾನ ದೇವತಾರ್ಚನೆ ಮಾಡಿಕೊಂಡು ಎಲ್ಲ ಋಷಿಮುನಿಗಳ ಎದುರಿಗೇ ಮಂತ್ರಿಗಳು ಹೊತ್ತಿಸಿದ ಅಗ್ನಿಗೆ ಪ್ರದಕ್ಷಿಣೆ ಹಾಕಿದ. ಅನಂತರ ಅಲ್ಲಿ ನೆರೆದ ಮುನಿಗಳಿಗೆಲ್ಲ ಪ್ರದಕ್ಷಿಣೆ ನಮಸ್ಕಾರ ಮಾಡಿದ. ಪುನಃ ಅಗ್ನಿ ಹಾಗೂ ಮುನಿಗಳಿಗೆ ನಮಸ್ಕಾರ ಹಾಕಿದ. ನಂತರ ಭಗವಾನ್ ಶಂಕರನ ಧ್ಯಾನವನ್ನು ಮಾಡಿದ. ಈ ರಾಜ ಶಂಕರನು ಧೈರ್ಯದಿಂದ ಅಗ್ನಿಯಲ್ಲಿ ಬಿದ್ದು ಆತ್ಮಾಹುತಿಯನ್ನು ನೀಡಲು ಸಿದ್ಧನಾದ. ಆಗ ಒಮ್ಮೆಲೇ ಆಕಾಶವಾಣಿ ಆಯಿತು.

## ರಾಮೇಶ್ವರನಿಗೆ ಪಂಚಾಮೃತ ಅಭಿಷೇಕದಿಂದ ಪಂಚಮಹಾಪಾಪನಾಶ

**ಆಕಾಶವಾಣಿ:-** ಶಂಕರರಾಜನೇ, ನೀನು ಅಗ್ನಿಪ್ರವೇಶ ಮಾಡಬೇಡ. ನೀನು ಮಾಡಿದ ಘೋರವಾದ, ಸ್ತ್ರೀಹತ್ಯಾ ಮತ್ತು ಬ್ರಹ್ಮಹತ್ಯಾ ಮಹಾರೂಪವಾದ ಪಾತಕಗಳನ್ನು ಕಳೆದು

ಕೊಳ್ಳಲಿಕ್ಕಾಗಿ ದಕ್ಷಿಣದಲ್ಲಿರುವ ಗಂಧಮಾದನ ಬೆಟ್ಟಕ್ಕೆ ಹೋಗು. ಅಲ್ಲಿರುವ ರಾಮಸೇತುವಿನಲ್ಲಿ ರಾಮಚಂದ್ರ ದೇವರಿಂದ ಸ್ಥಾಪಿತವಾದ ರಾಮೇಶ್ವರ ಎಂಬ ಹೆಸರಿನ ಶಿವಲಿಂಗವು ಇರುತ್ತದೆ. ನೀನು ಅಲ್ಲಿ ಹೋಗಿ ನೆಲೆಸು. ಒಂದು ವರ್ಷದವರೆಗೆ ತ್ರಿಕಾಲದಲ್ಲಿಯೂ ಭಕ್ತಿಯಿಂದ ರಾಮೇಶ್ವರನ ಸೇವೆಮಾಡು. ಪ್ರದಕ್ಷಿಣೆ ನಮಸ್ಕಾರಗಳನ್ನು ಹಾಕು. ಅಭಿಷೇಕ ಮಾಡು. ಚಂದನ, ಅಗರು, ಕರ್ಪೂರಗಳಿಂದ ಶ್ರೀರಾಮಲಿಂಗದ ಪೂಜೆಮಾಡು. ಎರಡು ಭಾರ ತೂಕದ ಹಸುವಿನ ತುಪ್ಪದಿಂದ ಈ ರಾಮೇಶ್ವರನಿಗೆ ಅಭಿಷೇಕ ಮಾಡು. ಪ್ರತಿದಿನವೂ ಗೋಕ್ಷೀರ ಮತ್ತು ಗೋ-ದಧಿ ಮತ್ತು (ಹಸುವಿನ ಹಾಲು ಮೊಸರು) ಗೋಘೃತ ಮುಂತಾದವುಗಳಿಂದ ಈ ಶಿವಲಿಂಗಕ್ಕೆ ಪಂಚಾಮೃತ ಅಭಿಷೇಕವನ್ನು ಮಾಡು. ಒಳ್ಳೇ ಗೋಕ್ಷೀರದಿಂದ ಮಾಡಿದ ಪಾಯಸವನ್ನು ನೈವೇದ್ಯ ರೂಪದಿಂದ ರಾಮೇಶ್ವರನಿಗೆ ಸಮರ್ಪಿಸು. ರಾತ್ರಿಕಾಲದಲ್ಲಿ ಎಳ್ಳೆಣ್ಣೆಯ ದೀಪದಿಂದ ದೀಪಾರಾಧನೆ ಮಾಡು. ಆದರಿಂದ ನಿನ್ನ ಸ್ತ್ರೀಹತ್ಯಾ ಬ್ರಹ್ಮಹತ್ಯಾದಿ ಪಾಪಗಳೂ ಪಂಚಮಹಾಪಾಪಗಳೂ ದೂರವಾಗುವವು.''

ಆಕಾಶವಾಣಿಯ ಆದೇಶದಂತೆ ಶಂಕರರಾಜನು ಆ ಎಲ್ಲ ಋಷಿಮುನಿಗಳನ್ನು ವಂದಿಸಿದ. ಆಜ್ಞೆ ಪಡೆದುಕೊಂಡು ಗಂಧಮಾದನ ಪರ್ವತಕ್ಕೆ ಬಂದ. ಅಲ್ಲಿ ರಾಮಸೇತುವಿನಲ್ಲಿ ಒಂದು ವರ್ಷದ ವರೆಗೆ ವಾಸಮಾಡಿದ. ಭಕ್ತಿಯಿಂದ ರಾಮೇಶ್ವರನ ಸೇವೆಗೈಯುತ್ತ ಪ್ರತಿದಿನವೂ ಆ ಮಹಾಲಿಂಗದ ಮಹಾಪೂಜೆಯನ್ನು ಮಾಡಿಸುತ್ತಿದ್ದ. ದಿನವೂ ಧನುಷ್ಕೋಟಿಯಲ್ಲಿ ಸ್ನಾನ, ಅನ್ನದಾನಗಳನ್ನು ಅಖಂಡವಾಗಿ ನಡೆಸಿದ. ಮತ್ತು ರಾಮೇಶ್ವರನನ್ನು ದೈನ್ಯದಿಂದ ಸ್ತೋತ್ರಮಾಡಿದ. ಪ್ರಾರ್ಥನೆ ಮಾಡಿಕೊಂಡ.

**ಶಂಕರರಾಜ:-** ಸರ್ವೇಶ್ವರನಾದ ರಾಮೇಶ್ವರನಿಗೆ ನಮಸ್ಕಾರ. ಭಗವನ್, ನೀವು ನನ್ನನ್ನು ರಕ್ಷಿಸಿರಿ. ನನ್ನ ಬ್ರಹ್ಮಹತ್ಯಾ ದೋಷವನ್ನು ಸುಟ್ಟುಹಾಕಿರಿ. ನನ್ನ ಪಾಪಗಳನ್ನು ಪರಿಹರಿಸಿ ನನ್ನನ್ನು ರಕ್ಷಣೆ ಮಾಡಿರಿ.''

## ಭೈರವನಿಂದ ಬ್ರಹ್ಮಹತ್ಯೆಯ ಹತ್ಯೆ

ಹೀಗೆ ರಾಮೇಶ್ವರನನ್ನು ಭಕ್ತಿಯಿಂದ ಸ್ತೋತ್ರ ಮಾಡುತ್ತಲ್ಲಿರುವಾಗಲೇ ಆ ಶಂಕರ ರಾಜನ ಮುಖದಿಂದ ಬ್ರಹ್ಮಹತ್ಯೆಯು ಕಪ್ಪು ಬಟ್ಟೆ ಉಟ್ಟು ಹೊರಬಿದ್ದಿತು. ಅವನ ಮುಖದಿಂದ ಹೊರಬಿದ್ದು ಬಂದ ಭೀಭತ್ಸವಾದ ಆ ಬ್ರಹ್ಮಹತ್ಯೆಯನ್ನು ಪರಮೇಶ್ವರನ ಆಜ್ಞೆಯಂತೆ ಭೈರವನು ತನ್ನ ತ್ರಿಶೂಲದಿಂದ ಕೊಂದನು. ಆಗ ರಾಮೇಶ್ವರನು ಶಂಕರರಾಜನಿಗೆ ಹೇಳಿದ.

**ರಾಮೇಶ್ವರ:-** ಪಾಂಡ್ಯರಾಜ, ನಿನ್ನ ಸ್ತ್ರೀಹತ್ಯಾ ಹಾಗೂ ಬ್ರಹ್ಮಹತ್ಯಾ ಪಾಪಗಳೆರಡೂ ನಾಶವಾಗಿರುತ್ತವೆ. ಈಗ ನೀನು ಪರಿಶುದ್ಧ, ನಿಷ್ಪಾಪ. ಮೊದಲಿನಂತೆ ನೀನು ನಿನ್ನ ರಾಜ್ಯವನ್ನು ಪಾಲನೆಮಾಡು. ಮತ್ತು ನಿನಗೆ ಬೇಕಾದ ವರವನ್ನು ಬೇಡು ನೀಡುತ್ತೇನೆ.

**ಶಂಕರರಾಜ:-** ಮಹೇಶ್ವರ, ನಾನು ನಿನ್ನ ದರ್ಶನ ಮಾತ್ರದಿಂದಲೇ ಕೃತಾರ್ಥ, ನನಗೆ ನಿನ್ನ ದರ್ಶನಕ್ಕಿಂತ ಮಿಗಿಲಾದ ಬೇರೆ ಯಾವ ವಸ್ತುವೂ ಅಪೇಕ್ಷಣೀಯ ಎನಿಸುವದಿಲ್ಲ. ನಿನ್ನ ಚರಣಕಮಲದಲ್ಲಿ ನನಗೆ ಅವಿಚ್ಛಿನ್ನ ಭಕ್ತಿಯನ್ನು ನೀಡು.''

ರಾಮೇಶ್ವರನು 'ತಥಾಸ್ತು' ಎಂದು ಹೇಳಿದ. ಶಂಕರರಾಜನ ಮೇಲೆ ಅನುಗ್ರಹಗೈದು ಅದೇ ಶಿವಲಿಂಗದಲ್ಲಿ ಅದೃಶ್ಯನಾದ.

ಇತ್ತ ಮಹಾರಾಜನಾದರೂ ತನ್ನ ಊರಿಗೆ ಮರಳಿ ಬಂದ. ವನವಾಸಿಗಳಾದ ಋಷಿಮುನಿಗಳಿಗೆಲ್ಲ ತನ್ನ ಈ ಸಮಾಚಾರವನ್ನು ತಿಳಿಸಿದ. ಅವರೆಲ್ಲರೂ ಕೂಡಿ ಪ್ರಸನ್ನಚಿತ್ತರಾಗಿ ಆ ರಾಜನನ್ನು ಮತ್ತೆ ರಾಜ್ಯಸಿಂಹಾಸನದಲ್ಲಿ ಕೂಡಿಸಿದರು. ಪಟ್ಟಾಭಿಷೇಕ ಗೈದರು. ಬಹು ವರ್ಷ ಧರ್ಮಶಾಸನವನ್ನು ನಡೆಸಿದ ಆ ರಾಜ. ಕೊನೆಗಾಲದಲ್ಲಿ ಆ ಮಹಾರಾಜನು ರಾಮೇಶ್ವರ ಲಿಂಗದ ಧ್ಯಾನಮಾಡುತ್ತ ದೇಹತ್ಯಾಗ ಮಾಡಿದ. ಮತ್ತು ರಾಮೇಶ್ವರನ ಸಾಯುಜ್ಯ ಮೋಕ್ಷವನ್ನು ಹೊಂದಿದ.

## ಪುಣ್ಯನಿಧಿ ಮಹಾರಾಜನ ಚರಿತ್ರೆ ಮತ್ತು ಸೇತುಮಾಧವನ ಮಹಿಮೆ

**ಸೂತ:-** ಹಿಂದೆ ಮಥುರಾ ಪಟ್ಟಣದಲ್ಲಿ ಪುಣ್ಯನಿಧಿ ಎಂಬ ಹೆಸರಿನ ಚಂದ್ರವಂಶದ ರಾಜನು ರಾಜ್ಯವಾಳುತ್ತಿದ್ದ. ಒಂದಾನೊಂದು ಕಾಲದಲ್ಲಿ ಆ ರಾಜನಿಗೆ ರಾಮಸೇತು ತೀರ್ಥಕ್ಕೆ ಸ್ನಾನಾರ್ಥವಾಗಿ ಹೋಗಬೇಕು ಎಂದು ಅಪೇಕ್ಷೆ ಉಂಟಾಯಿತು. ಅವನು ತನ್ನ ಮಗನನ್ನು ಸಿಂಹಾಸನದ ಮೇಲೆ ಕೂಡಿಸಿ, ತೀರ್ಥಯಾತ್ರೆಗೆ ಪ್ರಯಾಣ ಮಾಡಿದ. ಅವನ ಅಂತಃಪುರ ಪರಿವಾರ ಹಾಗೂ ಚತುರಂಗ ಸೇನೆ ಹಿಂಬಾಲಿಸಿತು ಆ ಮಹಾರಾಜನನ್ನು. ಅಲ್ಲಿ ಹೋಗಿ ಸಂಕಲ್ಪಪೂರ್ವಕವಾಗಿ ಧನುಷ್ಕೋಟಿ ತೀರ್ಥದಲ್ಲಿ ಸ್ನಾನಮಾಡಿದ ಆ ಪುಣ್ಯನಿಧಿ. ಭಕ್ತಿಪೂರ್ವಕವಾಗಿ ಶ್ರೀರಾಮೇಶ್ವರನ ಸೇವೆಗೈದ. ಹೀಗೆ ಅನೇಕ ವರ್ಷಗಳ ಕಾಲ ಆ ಮಹಾರಾಜನು ಅಲ್ಲಿ ವಾಸಮಾಡಿದ. ಬಳಿಕ ಒಮ್ಮೆ ವಿಷ್ಣುವನ್ನು ಪ್ರಸನ್ನಗೊಳಿಸಲಿಕ್ಕಾಗಿ ಒಂದು ಯಜ್ಞವನ್ನು ಮಾಡಿದ. ಯಜ್ಞ ಸಮಾಪ್ತಿಯ ಕಾಲದಲ್ಲಿ ಅವಭೃಥ ಸ್ನಾನಕ್ಕಾಗಿ ಆ ಪುಣ್ಯನಿಧಿ ಭೂಪತಿಯು ತನ್ನ ಅಂತಃಪುರದ ರಾಣೀವಾಸದವರು ಹಾಗೂ ಪರಿಚಾರಕ ಪರಿವಾರದೊಂದಿಗೆ ಧನುಷ್ಕೋಟಿ ತೀರ್ಥಕ್ಕೆ ಹೋಗಿ ವಿಧಿಪೂರ್ವಕವಾಗಿ ಸ್ನಾನಮಾಡಿದ. ದಾನ ನೀಡಿದ. ಪುಣ್ಯಕರ್ಮಗಳನ್ನು ಆಚರಿಸಿದ.

ಹೀಗೆ ಪುಣ್ಯನಿಧಿಯು ಆ ಧನಷ್ಕೋಟಿ ತೀರ್ಥದ ತೀರದಲ್ಲಿ ಇದ್ದು ಅನೇಕ ಧರ್ಮ ಕರ್ಮಗಳನ್ನು ನೆರವೇರಿಸುತ್ತಲಿದ್ದಾಗ ಆ ರಾಜನ ಭಕ್ತಿಯನ್ನು ಪರೀಕ್ಷಿಸಲಿಕ್ಕಾಗಿ ಮಹಾವಿಷ್ಣುವು ತನ್ನ ಮನದನ್ನೆಯಾದ ಲಕ್ಷ್ಮೀದೇವಿಯನ್ನು ಕೊಟ್ಟು ಕಳುಹಿದ. ಅವಳು ಎಂಟು ವರ್ಷದ ಸಣ್ಣ ಹುಡುಗಿಯಾಗಿ ಗಂಧಮಾದನ ಗಿರಿಯ ಮೇಲೆ ಸಂಚರಿಸುತ್ತಿದ್ದಳು. ಅದೇ ಸಮಯದಲ್ಲಿ ಪುಣ್ಯನಿಧಿ ದೊರೆಯು ಧನುಷ್ಕೋಟಿ ತೀರ್ಥದಲ್ಲಿ ಸ್ನಾನಮಾಡಲಿಕ್ಕಾಗಿ ಹೋಗಿದ್ದ. ಅಲ್ಲಿ ಸ್ನಾನಮಾಡಿ ಪುಣ್ಯಕರವಾದ ಧರ್ಮಕರ್ಮ ಅನುಷ್ಠಾನಗಳನ್ನೆಲ್ಲ ಮಾಡಿ ಮುಗಿಸಿದ. ಬಳಿಕ ಆ ಮಹಾರಾಜನು ಎಂಟು ವರ್ಷದ ಒಂದು ಕನ್ಯಾಮಣಿಯನ್ನು ನೋಡಿದ. ಅಲೌಕಿಕವಾಗಿತ್ತು ಅವಳ ರೂಪಸೌಂದರ್ಯ. ಲೋಕೋತ್ತರವಾಗಿತ್ತು ಅವಳ ದೇಹಯಷ್ಟಿಯಲ್ಲಿ ಮಿಂಚಾಡುವ ಕಳೆಕಾಂತಿ.

ಪುಣ್ಯನಿಧಿ ಅವಳನ್ನು ನೋಡಿದ ಕೇಳಿದ- "ಮಗು, ನೀನು ಯಾರು? ಇಲ್ಲಿಗೆ ಏಕೆ ಬಂದಿರುವೆ?"

**ಕನ್ಯಾಮಣಿ:-** "ಮಹಾರಾಜ, ನಾನು ಮಹಾದುರ್ದೈವಿ. ತಂದೆಯನ್ನು ಕಳೆದುಕೊಂಡಿದ್ದೇನೆ. ತಾಯಿಯಂತೂ ಎಂದೋ ಕಣ್ಣುಮುಚ್ಚಿಕೊಂಡಿದ್ದಾಳೆ. ಬಂಧು

ಬಾಂಧವರಂತೂ ಯಾರೂ ನನಗೆ ಮೊದಲಿನಿಂದಲೂ ಇಲ್ಲ. ಈಗ ನಾನು ಅನಾಥೆ. ದೀನ ದೀನೆ, ದೂನ ದೂನೆ. ನಾನು ಈಗ ನಿನ್ನ ಮಗಳಾಗಿ ಇರಬೇಕೆಂದು ಅಪೇಕ್ಷಿಸುತ್ತೇನೆ. ನೀನೊಬ್ಬ ನನ್ನ ತಂದೆಯೆಂದು ಬಗೆದು ಇಲ್ಲಿಗೆ ಬಂದಿದ್ದೇನೆ. ನಿನ್ನ ಮನೆಯಲ್ಲಿಯೇ ವಾಸ ಮಾಡುವೆನು. ಆದರೆ ನನ್ನದು ಮಾತ್ರ ಒಂದು ಕರಾರು ಇದೆ- ''ಯಾವನು ನನ್ನನ್ನು ಕೈಯಿಂದ ಹಿಡಿದು ಬಲಾತ್ಕಾರದಿಂದ ಎಳೆದುಕೊಂಡು ಹೋಗುವನೋ ಅವನನ್ನು ನೀನು ದಂಡಿಸಿದರೆ ಮಾತ್ರ ನಾನು ನಿನ್ನ ಮನೆಯಲ್ಲಿ ನಿನ್ನ ಮಗಳಾಗಿ ಕೊನೆಯವರೆಗೂ ವಾಸಮಾಡುವೆನು.''

ಸ್ಫುರದ್ರೂಪಿಣಿಯಾದ ಆ ಅಪರಿಚಿತ ಕನ್ಯೆಯ ಈ ಕರಾರಿನ ನುಡಿಯನ್ನು ಕೇಳಿ ರಾಜನಿಗೆ ಕೌತುಕ ಎನಿಸಿತು. ಆ ದಿಟ್ಟ ಹುಡುಗಿಯ ಈ ಧೈರ್ಯದ ಮಾತುಗಳಿಂದ ಅವನಿಗೆ ಆ ಮುಗ್ಧ ಬಾಲಿಕೆಯ ವಿಷಯದಲ್ಲಿ ಏನೋ ಒಂದು ತರಹದ ಆಕರ್ಷಣೆ ಆಯಿತು. ವಾತ್ಸಲ್ಯ ಮೂಡಿತು. ಅವಳನ್ನು ಪುಣ್ಯನಿಧಿ ರಾಜನು ತನ್ನ ಮಗಳೇ ಎಂದು ಭಾವಿಸಿ ಅಂತಃಕರಣದಿಂದ ಅವಳಿಗೆ ಉಸುರಿದ.

**ಪುಣ್ಯನಿಧಿ:-** ''ಶುಭಾಂಗಿಯೆ, ನೀನು ಹೇಳಿದ ಎಲ್ಲ ಮಾತುಗಳೂ ನನಗೆ ಒಪ್ಪಿಗೆ, ನನಗೆ ಯಾರೂ ಹೆಣ್ಣು ಮಕ್ಕಳು ಇಲ್ಲ. ನನಗೆ ಇದ್ದವ ಒಬ್ಬನೇ ಒಬ್ಬ ಗಂಡು ಮಗ. ನೀನು ಯಾರನ್ನು ಬಯಸುವೆಯೋ ಅವನಿಗೇ ನಿನ್ನನ್ನು ಕೊಟ್ಟು ಮದುವೆ ಮಾಡುವೆ. ಮಗಳೇ, ಬಾ. ನಡೆ ನನ್ನ ಮನೆಗೆ, ನನ್ನ ಮಡದಿಗೆ ಮಗಳಾಗು, ನನ್ನ ಮನೆಯ ಬೆಳಕಾಗು. ನಮ್ಮ ಅಂತಃಪುರದ ಸಂತಸದ ಸೆಲೆಯಾಗು. ಹೋಗೋಣ ನಡೆ.''

ಮಹಾರಾಜನ ಈ ಪ್ರೀತಿಯ ಕರೆ ಹಾಗೂ ಕಕ್ಕುಲಾತಿಯ ನುಡಿಗಳನ್ನು ಕೇಳಿ ಹರ್ಷವಾಯಿತು ಆ ಹುಡುಗಿಗೆ. ಅವನ ರಾಣಿಯ ಹೆಸರು ವಿಂಧ್ಯಾವಲಿ. ಈ ಹೊಸ ಹುಡುಗಿಯನ್ನು ತನ್ನ ಮಡದಿ ಮಹಾರಾಣಿಗೆ ಪರಿಚಯಿಸುತ್ತ ರಾಜ ಹೇಳಿದ ''ದೇವಿ, ಇವಳು ನಮ್ಮಿಬ್ಬರ ಮಗಳು. ಇವಳನ್ನು ಪರಪುರುಷರಿಂದ ನೀನು ರಕ್ಷಿಸು.''

ಪರಮ ಪತಿನಿಷ್ಠೆ ಆ ವಿಂಧ್ಯಾವಲಿ. ರಾಜನು ಕಾಲಿನಿಂದ ಸೂಚಿಸಿದ್ದನ್ನು ತಲೆಯಿಂದ ಹೊತ್ತು ನಡೆಸುವ ಸ್ವಭಾವ ಅವಳದು. ಪತಿಯ ಆಜ್ಞೆಗೆ ಸ್ವಸಂತೋಷದಿಂದ ಒಪ್ಪಿ ಅಪ್ಪಿಕೊಂಡಳು ಆ ಅಪರಿಚಿತ ಕನ್ಯೆಯನ್ನು. ರಾಜದಂಪತಿಗಳಿಬ್ಬರೂ ತಮ್ಮ ಹೊಟ್ಟೆಯಿಂದ ಹುಟ್ಟಿದ ಗಂಡುಮಗನಂತೆಯೇ ಈ ಕನ್ಯಾಮಣಿಯನ್ನು ಆದರದಿಂದ ಸ್ವಾಗತಿಸಿದರು. ಪ್ರೀತಿಯಿಂದ ಲಾಲಿಸಿದರು. ತಮ್ಮ ಔರಸ ಸಂತಾನವೆಂದೇ ಪೋಷಿಸಿದರು.

ಇತ್ತ ಪುಣ್ಯನಿಧಿ ರಾಜನ ಭಕ್ತಿಯನ್ನು ಪರೀಕ್ಷಿಸಲಿಕ್ಕಾಗಿ ತನ್ನ ಪ್ರೇಯಸಿಯಾದ ಲಕ್ಷ್ಮಿಯನ್ನು ರಾಜನ ಬಳಿಗೆ ಕನ್ಯಾರೂಪದಿಂದ ಕಳಿಸಿಕೊಟ್ಟ ಮಹಾವಿಷ್ಣುವು ಅವಳಿಂದ ಯಾವ ಸುದ್ದಿಯೂ ತಿಳಿಯದೇ ಚಿಂತಿಸತೊಡಗಿದ. ಪ್ರಾಕೃತ ಮಾನವರಂತೆ ಅಜ್ಞಾನವನ್ನು ನಟಿಸುತ್ತ ಅವಳನ್ನು ಹುಡುಕುತ್ತ ತನ್ನ ವೈಕುಂಠ ಧಾಮದಿಂದ ಹೊರಟ. ನೇರವಾಗಿ ರಾಮಸೇತುವಿನ ಬಳಿಗೆ ಬಂದ. ಅಲ್ಲಿ ಆಚೀಚೆ ಅರಸುಗಣ್ಣಿನಿಂದ ಓಡಾಡತೊಡಗಿದ. ಅಷ್ಟರಲ್ಲಿ ಅಲ್ಲಿಯ ಮಹಾರಾಜನ ರಾಜಭವನದ ಉದ್ಯಾನದಲ್ಲಿ ಆ ಕನ್ಯಾಮಣಿಯು ಗೆಳತಿಯರಿಂದ ಒಡಗೂಡಿಕೊಂಡು ಹೂಗಳನ್ನು ಹರಿಯತೊಡಗಿದ್ದಳು.

ಆಗ ವಿಷ್ಣುವು ಓರ್ವ ಬ್ರಾಹ್ಮಣನ ವೇಷ ತೆಗೆದುಕೊಂಡು ಅಲ್ಲಿ ಬಂದು ನಿಂತುಕೊಂಡ. ಕನ್ಯಾಮಣಿಯು ದೂರದಿಂದಲೇ ನೋಡಿದಳು. ಆ ತೇಜಸ್ವಿಯಾದ ವರ್ಚಸ್ವಿ ಬ್ರಾಹ್ಮಣನನ್ನು ಕಂಡು ಕೂಡಲೇ ಗಕ್ಕನೇ ತಡೆದು ನಿಂತುಬಿಟ್ಟಳು. ಮೃದು ಮಧುರವಾಗಿ ಮಾತಾನಾಡುವ ಆ

ಕನ್ಯಾಮಣಿಯನ್ನು ನೋಡಿ ಆ ಆಗಂತುಕ ಬ್ರಾಹ್ಮಣ ಒಮ್ಮೆಲೇ ಬಂದು ಅವಳ ಕೈಯನ್ನು ಹಿಡಿದ. ಆಗ ಆ ಸುಕುಮಾರಿಯು ತಾನು ಇದ್ದ ಉಪವನದಲ್ಲಿಯೇ ಚೀರತೊಡಗಿದಳು. ಅವಳ ಚೀತ್ಕಾರವನ್ನು ಕೇಳಿ ಪುಣ್ಯನಿಧಿ ಮಹಾರಾಜನು ಅಲ್ಲಿ ಧಾವಿಸಿ ಬಂದ. ಅವಳ ಜೊತೆಗೆ ಅವಳ ಸಖಿಯರೂ ಚೀರುತ್ತಿದ್ದರು. ಆ ಎಲ್ಲ ಕುಮಾರಿಯರ ಈ ಚೀರಾಟವನ್ನು ಕೇಳಿ ಗಾಬರಿಗೊಂಡು ಬಂದ ಆ ಪ್ರಜಾನಾಥ. ಕೌತುಕದಿಂದ ಕೇಳಿದ.

**ರಾಜ:-** ಮಗಳೇ, ನೀನು ಈಗ ಸಖಿಯರೊಂದಿಗೆ ಏಕೆ ಹೀಗೆ ಗಾಬರಿಯಿಂದ ಚೀರಿಕೊಳ್ಳುತ್ತಿರುವೆ?

**ಕನ್ಯಾಮಣಿ:-** 'ಪಾಂಡ್ಯರಾಜನೇ, ಇಗೋ ಅಲ್ಲಿ ನಿಂತಿರುವನಲ್ಲ. ಆ ಬ್ರಾಹ್ಮಣ ಬಂದು ನನ್ನ ಕೈಯನ್ನು ಹಿಡಿದ. ನಾವು ಕೂಗಿಕೊಂಡ ಕೂಡಲೇ ಅವನು ಆ ಮರದಡಿಯಲ್ಲಿ ಹೋಗಿ ನಿಂತುಕೊಂಡಿದ್ದಾನೆ.''

ರಾಜನು ಒಳ್ಳೆ ಬುದ್ಧಿವಂತ. ಮೇಲಾಗಿ ಸದ್ಗುಣಗಳ ನಿಧಿ. ಆ ಬ್ರಾಹ್ಮಣನ ಬಲ ಎಷ್ಟೆಂಬುವದರ ಗುರುತಿರಲಿಲ್ಲ ಈ ಧರಾನಾಥನಿಗೆ. ಆದುದರಿಂದ ಅವನನ್ನು ಬಲಾತ್ಕಾರದಿಂದ ಹಿಡಿದು ರಾಮೇಶ್ವರ ಮಂದಿರಕ್ಕೆ ಕರೆದುಕೊಂಡು ಹೋದ. ಅವನ ಕಾಲುಗಳಲ್ಲಿ ಬೇಡಿ ಜಡಿದ. ಕೈಗಳನ್ನು ಹಗ್ಗದಿಂದ ಬಿಗಿದು ಮಂಟಪದೊಳಗೆ ಕರೆದೊಯ್ದು ಬಂಧಿಸಿಟ್ಟ. ಮೊದಲಿಗೆ ಅವಳ ಕೈ ಹಿಡಿದು ಜಗ್ಗಿದ ಬ್ರಾಹ್ಮಣನನ್ನು ಬಂಧಿಸಿದ ವಾರ್ತೆಯನ್ನು ಕನ್ಯೆಗೆ ಹೇಳಿ ಹೆದರಬೇಡ ಎಂದು ತಿಳಿಸಿದ. ತಾನೂ ಅರಮನೆಗೆ ಹೋಗಿ ಸುಖವಾಗಿ ಮಲಗಿಕೊಂಡ. ಅವನು ನಿಶ್ಚಿಂತವಾಗಿ ಮಲಗಿಕೊಂಡಾಗ ಅವನಿಗೆ ಒಂದು ಕನಸು. ಆ ಸ್ವಪ್ನದಲ್ಲಿಯೂ ಅದೇ ಸುಂದರ ಬ್ರಾಹ್ಮಣ. ತನ್ನ ಮಗಳ ಕೈ ಹಿಡಿದ ಆ ತೇಜಸ್ವಿ ಬ್ರಾಹ್ಮಣನಿಗೆ ನಾಲ್ಕು ಕೈಗಳು. ಶಂಖ ಚಕ್ರ ಗದಾ ಪದ್ಮ ಮುಂತಾದ ಆಯುಧಗಳು ಒಂದೊಂದು ಕೈಯಲ್ಲಿ. ವನಮಾಲೆ ಕೊರಳಲ್ಲಿ, ಕೌಸ್ತುಭ ಎದೆಯಲ್ಲಿ, ವೈಜಯಂತಿ ಶ್ರೀಕಂಠದಲ್ಲಿ ಶೋಭಿಸುತ್ತಿತ್ತು. ಬ್ರಾಹ್ಮಣನ ರೂಪದಿಂದ ಸಾಕ್ಷಾತ್ ಶ್ರೀಹರಿಯೇ ಆ ರಾಜನ ಸ್ವಪ್ನದಲ್ಲಿ ಕಾಣಿಸಿಕೊಂಡಿದ್ದ. ವಿಷ್ವಕ್‌ಸೇನ ಮೊದಲಾದ ಪಾರ್ಷದರು ಶೇಷಶಾಯಿಯಾದ ಬ್ರಾಹ್ಮಣರೂಪಿ ಶ್ರೀಹರಿಯ ಸೇವೆಮಾಡುತ್ತಿದ್ದರು. ಅಲ್ಲಿ ಮಹಾರಾಜನು ನೋಡಿದ ಇನ್ನೊಂದು ಆಶ್ಚರ್ಯವೆಂದರೆ ತನ್ನ ಸಾಕುಮಗಳಾದ ಕನ್ಯಾಮಣಿಯೂ ಕೂಡ ಅಲ್ಲಿಯೇ ಕಮಲದ ಆಸನದ ಮೇಲೆ ಲಕ್ಷ್ಮೀರೂಪದಿಂದ ಕುಳಿತುಕೊಂಡಿದ್ದಾಳೆ. ಇಲ್ಲಿ ತನ್ನ ಮನೆಯಲ್ಲಿ ಇರುವ ಕನ್ಯೆಯೇ ಸ್ವಪ್ನದಲ್ಲಿ ಸಾಕ್ಷಾತ್ ಲಕ್ಷ್ಮೀದೇವಿಯಾಗಿ ಶೋಭಿಸುತ್ತಿದ್ದಾಳೆ. ತನ್ನ ಮಗಳಾದ ಆ ಕನ್ಯಾಮಣಿಯು ಲಕ್ಷ್ಮೀರೂಪದಲ್ಲಿ ಕಮಲಾಸನದಲ್ಲಿ ಕುಳಿತುಕೊಂಡಾಗ ಅವಳ ಎರಡೂ ಕೈಗಳಲ್ಲಿ ಕಮಲ ಕುಸುಮಗಳು ಶೋಭಾಯಮಾನವಾಗಿದ್ದವು. ಇದನ್ನು ಕಂಡು ರಾಜನಿಗೆ ಆಶ್ಚರ್ಯದ ಆಘಾತವಾಗಿ ಎಚ್ಚರವಾಯಿತು. ಎದ್ದಕೂಡಲೇ ಅವನು ಮೊದಲು ತನ್ನ ಸಾಕು ಮಗಳ ಶಯ್ಯಾಗಾರಕ್ಕೆ ತೆರಳಿದ. ಅಲ್ಲಿ ಆ ಕನ್ಯೆಯು ತಾನು ಕನಸಿನಲ್ಲಿ ಕಂಡಂತೆ ಲಕ್ಷ್ಮಿಯ ರೂಪದಲ್ಲಿಯೇ ಇದ್ದಳು. ತಾನು ಸ್ವಪ್ನದಲ್ಲಿ ಕಂಡದ್ದು ಯಥಾರ್ಥ ಎಂದು ಆ ಅರಸನಿಗೆ ನಿಶ್ಚಯವಾಯಿತು. ಮರುದಿನ ಪ್ರಾತಃಕಾಲದಲ್ಲಿ ಸೂರ್ಯೋದಯವಾದ ಕೂಡಲೇ ಪುಣ್ಯನಿಧಿ ರಾಜನು ಆ ತನ್ನ ಕನ್ಯೆಯನ್ನು ರಾಮೇಶ್ವರ ಮಂದಿರಕ್ಕೆ ಕರೆದುಕೊಂಡು ಹೋದ. ಆ ಮಂದಿರದ ಒಂದು ಮಂಟಪದಲ್ಲಿ ಆ ಹಿಂದಿನ ದಿನ ತನ್ನ ಮಗಳ ಕೈಹಿಡಿದ ಬ್ರಾಹ್ಮಣನನ್ನು ಬಂಧಿಸಿ ಇಡಲಾಗಿತ್ತು.

ಅಲ್ಲಿ ರಾಜನಿಗೆ ಮತ್ತೊಂದು ಆಶ್ಚರ್ಯಕಾದಿತ್ತು. ತಾನು ಹಿಂದಿನ ದಿನ ಕಾಲಿಗೆ ಬೇಡಿ ಜಡಿದು ಕೈಗೆ ಹಗ್ಗ ಕಟ್ಟಿ ಬಂಧನದಲ್ಲಿರಿಸಿದ ಬ್ರಾಹ್ಮಣ ಈಗ ಅಲ್ಲಿ ಸಾಕ್ಷಾತ್ ಶ್ರೀಹರಿಯೇ ಆಗಿ ಮಾರ್ಪಟ್ಟಿದ್ದ. ಶಂಖ, ಚಕ್ರ, ಕಿರೀಟ, ವನಮಾಲೆ, ವೈಜಯಂತಿ, ಕೌಸ್ತುಭ, ರತ್ನ ಎಲ್ಲ ವಿಷ್ಣುವಿನ ಚಿನ್ಹಗಳನ್ನು ಅವನು ಧರಿಸಿದ್ದ. ಈಗ ಆ ರಾಜನಿಗೆ ನಿಶ್ಚಯವಾಯಿತು ತಾನು ಬಂಧಿಸಿ ಇಟ್ಟ ವಿಪ್ರ ಬರೀ ಬ್ರಾಹ್ಮಣನಲ್ಲ ಭಗವಾನ್ ವಿಷ್ಣು ಎಂದು. ಕೂಡಲೇ ಹೋಗಿ ಅವನಿಗೆ ಸಾಷ್ಟಾಂಗ ಪ್ರಣಾಮಮಾಡಿದ. ಕೈಜೋಡಿಸಿ ಬೇಡಿಕೊಂಡ.

''ಲಕ್ಷ್ಮೀಪತಿ, ನನ್ನ ಅಪರಾಧ ಕ್ಷಮಿಸು. ನನ್ನ ಮೇಲೆ ಪ್ರಸನ್ನನಾಗು. ವಿಶ್ವಾಧಾರನಾದ ನಿನ್ನನ್ನು ನಾನು ತಿಳಿಯಲಿಲ್ಲ. ನನ್ನ ತಪ್ಪನ್ನು ಮನ್ನಿಸು.'' ಹೀಗೆ ಮಹಾವಿಷ್ಣುವನ್ನು ಸ್ತೋತ್ರ ಮಾಡಿ ಆ ಪುಣ್ಯನಿಧಿ ಮಹಾರಾಜನು ಜಗಜ್ಜನನಿಯಾದ ಲಕ್ಷ್ಮೀದೇವಿಯನ್ನು ಕೊಂಡಾಡಿದ.

''ಜಗಜ್ಜನನಿಯಾದ ಶ್ರೀದೇವಿಯೆ, ನಿನಗೆ ನನ್ನ ಸಮಸ್ಕಾರ. ನೀನು ಹುಟ್ಟಿದ್ದು ಸಮುದ್ರದಲ್ಲಿ, ನೆಲೆಸಿದ್ದು ಕಮಲದಲ್ಲಿ, ನಿಂತಿದ್ದು ವಿಷ್ಣುವಿನ ವಕ್ಷಸ್ಥಳದಲ್ಲಿ. ನೀನು ಸಿದ್ಧಿ. ನೀನೇ ಪುಷ್ಟಿ, ನೀನೇ ಸ್ವಧಾ, ಸ್ವಾಹಾ, ಸಂಧ್ಯಾ, ಪ್ರಭಾ, ಧಾತ್ರಿ, ಭೂತಿ, ಶ್ರದ್ಧಾ, ಮೇಧಾ, ಸರಸ್ವತಿ, ಎಲ್ಲವೂ ನೀನೇ ಆಗಿರುವೆ. ಪ್ರಾಣಿಗಳಿಗೆ ಮುಕ್ತಿ ದೊರೆಯುವದು ನಿನ್ನಿಂದಲೇ; ಭುಕ್ತಿ ಒದಗಿ ಬರುವುದು ನಿನ್ನಿಂದಲೇ. ನೀನು ಸಮಗ್ರ ಸಂಸಾರವನ್ನೇ ರಕ್ಷಣೆಮಾಡುವೆ. ನನ್ನೊಬ್ಬನ ರಕ್ಷಣೆ ನಿನಗೆ ಎಷ್ಟು ಹೊರೆಯಾದೀತು? ತಾಯೀ ನನ್ನನ್ನು ರಕ್ಷಿಸು.''

ಹೀಗೆ ವಿಷ್ಣುವನ್ನೂ ಮಹಾಲಕ್ಷ್ಮಿಯನ್ನೂ ಪ್ರಾರ್ಥನೆಮಾಡಿ ತಿಳಿಯದೇ ಬ್ರಾಹ್ಮಣ ರೂಪದಿಂದ ಬಂದ ಅವನ ಕಾಲುಗಳಿಗೆ ಸಂಕೋಲೆ ಬಿಗಿಸಿದ ತನ್ನ ಮಹಾಪರಾಧಕ್ಕಾಗಿ ಮತ್ತೊಮ್ಮೆ ಕ್ಷಮೆ ಕೇಳಿಕೊಂಡ.

## ಪ್ರೀತಿಯ ಬಂಧನ, ಆನಂದ ಸ್ಪಂದನ

**ವಿಷ್ಣು:-** ''ರಾಜನ್, ನೀನು ನನ್ನ ಪ್ರೀತ್ಯರ್ಥವಾಗಿ ಈ ತೀರ್ಥದ ತೀರದಲ್ಲಿ ಯಜ್ಞವನ್ನು ಮಾಡಿರುತ್ತಿ. ನೀನು ನನ್ನ ಒಳ್ಳೆ ಪ್ರೀತ್ಯಾಸ್ಪದನಾದ ಭಕ್ತ. ಭಕ್ತರ ಅಪರಾಧಗಳನ್ನು ನಾನು ಯಾವಾಗಲೂ ಕ್ಷಮಿಸುತ್ತಲೇ ಇರುತ್ತೇನೆ. ನೀನು ಯಾವಾಗಲೂ ಯಜ್ಞ, ಯಾಗ, ಧರ್ಮ, ಕರ್ಮಗಳನ್ನು ಹರಿ ಪ್ರೀತ್ಯರ್ಥವಾಗಿ ಮಾಡುತ್ತಲಿರುವದರಿಂದ ನೀನು ನನಗೆ ಪರಮ ಪ್ರಿಯ ಭೃತ್ಯ. ನನ್ನ ಭಕ್ತರ ಅಪರಾಧಗಳನ್ನು ನಾನು ಎಂದು ಕ್ಷಮೆ ಮಾಡಿಲ್ಲ? ನಿನ್ನ ಭಕ್ತಿಯ ಪರೀಕ್ಷೆ ಮಾಡಲಿಕ್ಕಾಗಿಯೇ ನಾನು ಲಕ್ಷ್ಮಿಯನ್ನು ನಿನ್ನ ಮನೆಗೆ ಕಳಿಸಿಕೊಟ್ಟಿದ್ದೆ. ಅವಳನ್ನು ನೀನು ಒಳ್ಳೆ ಕಕುಲಾತಿಯಿಂದ ಸಂರಕ್ಷಣೆ ಮಾಡಿದೆ. ಆದ್ದರಿಂದ ನಾನು ನಿನ್ನ ಮೇಲೆ ಅತ್ಯಂತ ಪ್ರಸನ್ನನಾಗಿದ್ದೇನೆ. ಈ ಪ್ರಪಂಚದಲ್ಲಿ ಮಹಾಲಕ್ಷ್ಮಿಯಲ್ಲಿ ಭಕ್ತಿಮಾಡಿದವರು ನನ್ನ ಭಕ್ತರೇ ಎನಿಸುತ್ತಾರೆ. ಯಾರು ಇವಳನ್ನು ವಿರೋಧಿಸುವರೋ ಅವರು ನನ್ನ ದ್ವೇಷಕ್ಕೆ ಪಾತ್ರರಾಗುತ್ತಾರೆ. ನೀನು ಭಕ್ತಿಯಿಂದ ಕನ್ಯಾರೂಪದಲ್ಲಿದ್ದ ಇವಳನ್ನು ಮನೆಯಲ್ಲಿ ಲಾಲನ ಪಾಲನ ಪೋಷಣೆಮಾಡಿ ಬೆಳೆಸಿದೆ. ಆದ್ದರಿಂದ ನೀನು ನನ್ನ ಪೂಜೆಯನ್ನು ಮಾತ್ರ ಮಾಡಿರುವೆ. ನನ್ನ ಪ್ರೀತಿಯ ಪತ್ನಿಯಾದ ಲಕ್ಷ್ಮೀ ಬೇರೆಯಲ್ಲ. ನಾನು ಬೇರೆಯಲ್ಲ. ನೀನು ಅವಳನ್ನು ರಕ್ಷಣೆಮಾಡಿದ್ದು ಒಂದು ಲಕ್ಷ್ಮೀಪೂಜೆಯೇ ಸರಿ. ಅದು ನನ್ನ ಪೂಜೆಯೂ ಸರಿ. ಅವಳ ರಕ್ಷಣೆಯ ಉದ್ದೇಶದಿಂದ ಅವಳ ಕೈಹಿಡಿದ ನನ್ನನ್ನು ಈ ಬಂಧನದಲ್ಲಿ ಇರಿಸಿದ್ದು ನನಗೆ ಅತ್ಯಂತ ಪ್ರಿಯತರವಾಗಿದೆ.

**ಲಕ್ಷ್ಮೀ:-** ರಾಜನೇ, ನಿನ್ನ ಭಕ್ತಿಯನ್ನು ಪರೀಕ್ಷೆಮಾಡಲಿಕ್ಕಾಗಿಯೇ ನಾನು ಇಲ್ಲಿಗೆ ಬಂದಿದ್ದೆ. ನಿನ್ನ ಮನಸ್ಸಿನ ನಿಗ್ರಹ, ಭಗವದ್ಭಕ್ತಿ, ಪರೋಪಕಾರ ಮುಂತಾದ ಗುಣಗಳನ್ನು ನೋಡಿ ನನಗೆ ಬಹಳೇ ಸಂತೋಷವಾಗಿದೆ. ನಮ್ಮಿಬ್ಬರ ಕೃಪೆಯಿಂದ ನಿನಗೆ ಶಾಶ್ವತ ಸುಖರೂಪವಾದ ಮೋಕ್ಷವು ದೊರಕುವುದು. ನಮ್ಮ ಚರಣಗಳಲ್ಲಿ ನಿನ್ನ ಅವಿಚಲ ಭಕ್ತಿಯು ಬೆಳೆಯುತ್ತ ಹೋಗುವುದು. ಮರಣಾನಂತರದಲ್ಲಿ ನಿನಗೆ ಶ್ರೀಹರಿಯ ಸಾಯುಜ್ಯ ಮೋಕ್ಷವು ದೊರೆಯುವುದು.

**ವಿಷ್ಣು:-** ರಾಜನ್, ನೀನು ಬ್ರಾಹ್ಮಣರೂಪದಿಂದ ಬಂದ ನನಗೆ ಸಂಕೋಲೆ ತೊಡಸಿರುವೆಯಷ್ಟೇ! ನಾನು ಅದೇ ರೂಪದಿಂದ ಈ ಮಂಟಪದಲ್ಲ ವಾಸಮಾಡುತ್ತೇನೆ. ಸೇತುಮಾಧವ ಎಂದು ನನಗೆ ಹೆಸರು ಬರುವುದು. ಈ ಸೇತುಮಾಧವ ಹಾಗೂ ಮಹಾಲಕ್ಷ್ಮೀ ಇವರಿಬ್ಬರ ಸೇವೆ ಮಾಡಿದವರು ನನ್ನ ಪರಂಧಾಮವನ್ನು ಕುರಿತು ಪ್ರಯಾಣಮಾಡುವರು. ಅವರಿಗೆ ಪುನರಾವೃತ್ತಿ ಇಲ್ಲ.''

ಹೀಗೆ ಮಹಾವಿಷ್ಣುವು ಪುಣ್ಯನಿಧಿ ರಾಜನಿಗೆ ಹೇಳಿ ತಾನು ಅಲ್ಲಿಯೇ ಪೂರ್ಣರೂಪ ದಿಂದ ವಾಸಮಾಡತೊಡಗಿದ. ರಾಜನು ಸೇತುಮಾಧವ ರೂಪಿಯಾದ ಭಗವಾನ್ ವಿಷ್ಣುವಿಗೆ ಭಕ್ತಿಯಿಂದ ಅವನ ಮಹಾಪೂಜೆಯನ್ನು ಮಾಡಿದ. ರಾಮೇಶ್ವರನನ್ನು ಸೇವಿಸಿದ. ಅನಂತರ ತನ್ನ ಮನೆಯ ಕಡೆಗೆ ಹೊರಟ. ಊರಿಗೆ ಬಂದು ರಾಜ ಸಿಂಹಾಸನದ ಮೇಲೆ ಈ ವರೆಗೆ ಯುವರಾಜನಾಗಿದ್ದ ತನ್ನ ಮಗನನ್ನು ಮಹಾರಾಜನಾಗಿ ಪಟ್ಟಾಭಿಷೇಕಗೈದ. ತಾನು ಪರಮ ಪವಿತ್ರವಾದ ಆ ಸೇತುತೀರ್ಥದಲ್ಲಿಯೇ ವಾಸಮಾಡಿದ. ಇರುವವರೆಗೂ ಸೇತುಸ್ನಾನ, ರಾಮೇಶ್ವರ ದರ್ಶನ, ಈ ಸೇತುಮಾಧವನ ಪೂಜೆ ಮೂರನ್ನೂ ಒಂದು ದಿನವೂ ತಪ್ಪದೇ ಮಾಡಿ ತನ್ನ ಜನ್ಮವನ್ನು ಸಾರ್ಥಕ ಮಾಡಿಕೊಂಡ. ಮರಣಾನಂತರ ಮೋಕ್ಷವನ್ನು ಹೊಂದಿದ. ಅವನ ಧರ್ಮಪತ್ನಿಯಾದ ವಿಂಧ್ಯಾವಲಿಯೂ ಆ ಮಹಾರಾಜನ ಜೊತೆಗೆ ಸೇತುಸ್ನಾನ, ರಾಮೇಶ್ವರನ ದರ್ಶನ, ಸೇತುಮಾಧವನ ಆರಾಧನೆಗಳನ್ನು ಮಾಡಿ ಪತಿಯ ಜೊತೆಗೇ ಮೃತಿಯನ್ನೂ ಹೊಂದಿ ಮರಣಾನಂತರ ಮುಕ್ತಿಯನ್ನು ಹೊಂದಿದಳು.

ಸೇತುತೀರ್ಥದ ತೀರದಲ್ಲಿ ನೆಲಿಸಿದ ಸೇತುಮಾಧವನ ದರ್ಶನವನ್ನು ಪ್ರತಿನಿತ್ಯವೂ ಮಾಡಿಕೊಳ್ಳುವವರು ಇಲ್ಲಿ ಇರುವವರೆಗೆ ಭಾಗ್ಯ, ವೈಭವ, ಅಧಿಕಾರ, ಆನಂದಗಳನ್ನು ಹೊಂದಿ ಸತ್ತನಂತರ ಸದ್ಗತಿಯನ್ನು ಪಡೆದು ಮತ್ತೆ ಈ ಸಂಸಾರಕ್ಕೆ ಎಂದೂ ಮರಳಿ ಬರುವುದಿಲ್ಲ. ಈ ಸೇತುತೀರ್ಥದ ಮಳಲನ್ನು ತೆಗೆದುಕೊಂಡು ಗಂಗೆಯಲ್ಲಿ ಹಾಕಿದವರು ಮರಣೋತ್ತರ ವೈಕುಂಠ ಧಾಮದಲ್ಲಿ ವಾಸಮಾಡುವರು. ಗಂಗಾ ಜಲವನ್ನು ತಂದು ರಾಮೇಶ್ವರನಿಗೆ ಸ್ನಾನ ಮಾಡಿಸುವದರಿಂದ ಪರಬ್ರಹ್ಮ ಪ್ರಾಪ್ತಿ ಆಗುವದು.

## ಸೇತುತೀರ್ಥದ ಯಾತ್ರೆಯ ಕ್ರಮ

**ಸೂತ:-** ಬ್ರಾಹ್ಮಣರೇ! ಈ ನಾನು ನಿಮಗೆ ಈಗ ಸೇತುತೀರ್ಥದ ಯಾತ್ರೆಯನ್ನು ಮಾಡುವ ರೀತಿಯನ್ನು ಹೇಳಿಕೊಡುತ್ತೇನೆ ಕೇಳಿ. ಬುದ್ಧಿವಂತನಾದ ಮಾನವನು ಇಲ್ಲಿಯ ತೀರ್ಥದಲ್ಲಿ ಸ್ನಾನಮಾಡಿ, ಆಚಮನ, ಸಂಧ್ಯಾವಂದನ, ದೇವಪೂಜೆ, ಮಂತ್ರಜಪ ಮುಂತಾದ ತನ್ನ ನಿತ್ಯಾಹ್ನಿಕವನ್ನೆಲ್ಲ ಮಾಡಿ ಮುಗಿಸಬೇಕು. ಅನಂತರ ಶ್ರೀರಾಮ ಹಾಗೂ ರಾಮೇಶ್ವರರ ಪ್ರೀತಿಗಾಗಿ ವೇದವೇದಾಂತ ವಿದ್ವಾಂಸರಾದ ಶ್ರೋತ್ರಿಯರನ್ನು ಕರೆದು ಯಥಾಶಕ್ತಿ ಭೋಜನ ಮಾಡಿಸಬೇಕು. ನಂತರ ಭಸ್ಮ ಅಥವಾ ಗೋಪೀಚಂದನವನ್ನು

ಬಳಿದುಕೊಂಡು, ರುದ್ರಾಕ್ಷಿ ಮಾಲೆಯನ್ನು ಧರಿಸಿ, ಕೈಯಲ್ಲಿ ಪವಿತ್ರ ಹಿಡಿದು- 'ನಾನು ಸೇತುತೀರ್ಥದ ಯಾತ್ರೆಯನ್ನು ಮಾಡುತ್ತೇನೆ. ರಾಮೇಶ್ವರನೇ, ನಿನ್ನ ದಯೆಯಿಂದ ಈ ನನ್ನ ಯಾತ್ರೆಯು ನಿರ್ವಿಘ್ನವಾಗಿ ನೆರವೇರಲಿ' ಎಂದು ಪ್ರಾರ್ಥನೆಮಾಡಬೇಕು. ಅನಂತರ ನಾರಾಯಣ ಅಷ್ಟಾಕ್ಷರ ಮಂತ್ರವನ್ನಾಗಲೀ ಶಿವಪಂಚಾಕ್ಷರಿ ಮಂತ್ರವನ್ನಾಗಲೀ ಜಪಿಸುತ್ತ ಮನೆಯಿಂದ ಹೊರಬೀಳಬೇಕು. ಯಾತ್ರೆಮಾಡುವಾಗ ಕಾಲಲ್ಲಿ ಪಾದರಕ್ಷೆ ಅವಿಗೆ ಮುಂತಾದವುಗಳನ್ನು ಹಾಕಬಾರದು. ಜಿತೇಂದ್ರಿಯನಾಗಿರಬೇಕು. ಯಾತ್ರೆ ಮುಗಿಯುವುವರೆಗೆ ಒಂದೇ ಹೊತ್ತು ಹವಿಷ್ಯಾನ್ನವನ್ನು ಭೋಜನ ಮಾಡಬೇಕು. ಪ್ರತಿನಿತ್ಯವೂ ಸ್ನಾನ, ತ್ರಿಕಾಲ ಸಂಧ್ಯಾವಂದನೆ, ದೇವಪೂಜೆ, ರಾಮ ರಾಮೇಶ್ವರರ ಧ್ಯಾನ, ದಾನ, ಗಾಯತ್ರೀ ಜಪ, ಮಾರ್ಗದಲ್ಲಿ ಸೇತುತೀರ್ಥದ ಮಾಹಾತ್ಮ್ಯದ ಪಠಣ, ರಾಮಯಣಾದಿ ಪುರಾಣ ಶ್ರವಣ ಮುಂತಾದವುಗಳನ್ನು ಮಾಡುತ್ತಾ ಯಾತ್ರೆಯನ್ನು ಮಾಡಬೇಕು. ಅನಂತರ ಸೇತುಮೂಲ ಸ್ಥಾನಕ್ಕೆ ಹೋಗಿ ಸಮುದ್ರರಾಜನನ್ನು ಆವಾಹನೆ ಮಾಡಿ ನಮಸ್ಕರಿಸಿ ಈ ಮಂತ್ರ ಹೇಳಬೇಕು.

**'ನಮಸ್ತೇ ವಿಶ್ವಗುಪ್ತಾಯ ನಮೋ ವಿಷ್ಣೋಹ್ಯಪಾಂಪತೇ ।**
**ನಮೋ ಹಿರಣ್ಯ ಶೃಂಗಾಯ ನದೀನಾಂ ಪತಯೇ ನಮಃ ॥**

ಈ ಮಂತ್ರ ಹೇಳಿ ನಮಸ್ಕಾರಮಾಡಿ. ಮನಸ್ಸಿನಲ್ಲಿ ರಾಮೇಶ್ವರನ ಧ್ಯಾನ ಮಾಡುತ್ತಾ ಸಂಕಲ್ಪಪೂರ್ವಕವಾಗಿ ವಿಧ್ಯುಕ್ತವಾಗಿ ಸಮುದ್ರಸ್ನಾನವನ್ನು ಆಚರಿಸಬೇಕು. ಸ್ನಾನಕಾಲದಲ್ಲಿ

**"ಅಶೇಷ ಜಗದಾಧಾರ ಶಂಖಚಕ್ರ ಗದಾಧರ ।**
**ದೇವ ದೇಹಿ ಮಮಾನುಜ್ಞಾಂ ಯುಷ್ಮತ್ತೀರ್ಥ ನಿಷೇವಣೇ ॥"**

'ಎಲ್ಲ ಜಗತ್ತಿಗೂ ಆಧಾರನಾದ ಶಂಖ ಚಕ್ರ ಗದಾದಿ ಆಯುಧಗಳನ್ನು ಧರಿಸಿದ ಶ್ರೀಹರಿಯೇ, ನಿನ್ನ ತೀರ್ಥದ ಈ ಸಮುದ್ರದಲ್ಲಿ ಸ್ನಾನಮಾಡಲು ನನಗೆ ಅಪ್ಪಣೆಯನ್ನು ನೀಡು' ಎಂದು ಪ್ರಾರ್ಥಿಸಿ ಸ್ನಾನವನ್ನು ಮಾಡಬೇಕು ಮತ್ತು

**'ಸರ್ವರತ್ನಮಯಃ ಶ್ರೀಮಾನ್ ಸರ್ವರತ್ನಾಕರಾಕರ ।**
**ಸರ್ವರತ್ನ ಪ್ರಧಾನಸ್ತ್ವಂ ಗೃಹಾಣಾರ್ಘ್ಯಂ ನಮೋಽಸ್ತು ತೇ ॥**

'ಸರ್ವರತ್ನಗಳಿಗೂ ಖಣಿಯಂತೆ ಇರುವ ಮತ್ತು ಸರ್ವರತ್ನಗಳಲ್ಲಿ ಪ್ರಧಾನನಾದ ರತ್ನಮಯನಾದ ಸಮುದ್ರರಾಜನೇ, ನಾನು ನೀಡುವ ಈ ಅರ್ಘ್ಯವನ್ನು ಸ್ವೀಕರಿಸು. ನಿನಗೆ ನನ್ನ ನಮಸ್ಕಾರ' ಎಂಬ ಈ ಮಂತ್ರದಿಂದ ಸಮುದ್ರರಾಜನಿಗೆ ಅರ್ಘ್ಯವನ್ನು ಕೊಡಬೇಕು ಮತ್ತು ಸಮುದ್ರದಲ್ಲಿ ಸ್ನಾನಮಾಡುವಾಗ ಈ ಕೆಳಗಿನ ಮಂತ್ರವನ್ನು ಹೇಳಬೇಕು.

**'ವೇದಾದಿರ್ಯೋ ವೇದ ವಸಿಷ್ಠಯೋನಿಃ ಸರಿತ್ಪತಿಃ ಸಾಗರರತ್ನಯೋನಿಃ ।**
**ಅಗ್ನಿಶ್ಚತೇ ಯೋನಿರಿಡಾ ಚ ರೇತೋಧಾ ವಿಷ್ಣೋರಮೃತಸ್ಯ ನಾಭಿಃ ॥**
**ಇದಂ ತೇಽನ್ಯಾಭಿರಸ್ಯಮಾನ ಮದ್ಭಿರ್ಯಾಃಕಾಶ್ಚ ಸಿಂಧುಂ ಪ್ರವಿಶಂತ್ಯಾಪಃ ।**
**ಸರ್ಪೋ ಜೀರ್ಣಾಮಿವ ತ್ವಚಂ ಜಹಾಮಿ ಪಾಪಂ ಶರೀರಾತ್ಸ**
**ಶರೀರೋಽಭ್ಯುಪೇತ್ಯ ॥**

## ತರ್ಪಣದ ವಿಧಿ

ಈ ಮಂತ್ರ ಹೇಳಿ ಸೇತುತೀರ್ಥದಲ್ಲಿ ಮೂರು ಸಲ ಮುಳುಗು ಹಾಕಿ ಸ್ನಾನಮಾಡಬೇಕು. ಸೇತುಯಾತ್ರೆಯನ್ನು ದೇವೀಪಟ್ಟಣದಿಂದ ಪ್ರಾರಂಭಿಸಿದವರು ಒಂಬತ್ತು ಕಲ್ಲುಗಳ ಮಧ್ಯದಿಂದ ಸೇತುವಿನಲ್ಲಿ ಸ್ನಾನಮಾಡಬೇಕು. ದರ್ಭಶಯನ ಮಾರ್ಗದಿಂದ ಸೇತುತೀರ್ಥಕ್ಕೆ ಹೋಗುವವರು ಅಲ್ಲಿಯ ಸಮುದ್ರದಲ್ಲಿಯೇ ಸ್ನಾನಮಾಡಬೇಕು. ಸ್ನಾನಾನಂತರ, 'ಪಿಪ್ಪಲಾದಾಯ ನಮಃ ಪಿಪ್ಪಲಾದಂ ತರ್ಪಯಾಮಿ' 'ಕವಯೇ ನಮಃ, ಕವಿಂ ತರ್ಪಯಾಮಿ' 'ಕಣ್ವಾಯ ನಮಃ, ಕಣ್ವಂ ತರ್ಪಯಾಮಿ' 'ಕೃತಾಂತಾಯ ನಮಃ, ಕೃತಾಂತಂ ತರ್ಪಯಾಮಿ' 'ಜೀವಿತೇಶ್ವರಾಯ ನಮಃ, ಜೀವಿತೇಶ್ವರಂ ತರ್ಪಯಾಮಿ' 'ಮನ್ಯವೇ ನಮಃ ಮನ್ಯುಂ ತರ್ಪಯಾಮಿ' ಎಂದು ಹೇಳುತ್ತ ಕಾಲ, ರಾತ್ರಿ, ವಿದ್ಯಾ, ಅಹಃ, ಗಣೇಶ್ವರ, ವಶಿಷ್ಠ, ವಾಮದೇವ, ಪರಾಶರ, ಉಮಾಪತಿ, ವಾಲ್ಮೀಕಿ, ನಾರದ, ವಾಲಖಿಲ್ಯ, ಮುನಿಗಣ, ನಲ, ನೀಲ, ಗವಾಕ್ಷ, ಗವಯ, ಗಂಧಮಾಧನ, ಮೈಂದ, ದ್ವಿವಿದ, ಶರಭ, ವೃಷಭ, ಸುಗ್ರೀವ, ಹನುಮಾನ್, ವೇಗದರ್ಶನ, ರಾಮ, ಲಕ್ಷ್ಮಣ, ಸೀತೆ, ವಿಭು' ಇಷ್ಟು ಜನರ ನಾಮೋಚ್ಚಾರಣವನ್ನು ಚತುರ್ಥಿ ವಿಭಕ್ತಿಯಿಂದ ಮಾಡಿ ಕೊನೆಗೆ 'ನಮಃ' ಎಂದು ಹೇಳಿ, ದ್ವಿತೀಯಾ ವಿಭಕ್ತಿಯ ಏಕವಚನವನ್ನು ಉಚ್ಚರಿಸಿ ತರ್ಪಯಾಮಿ ಎಂದು ನುಡಿದ 'ರಾಮಾಯನಮಃ, ರಾಮಂ ತರ್ಪಯಾಮಿ, ಲಕ್ಷ್ಮಣಾಯ ನಮಃ, ಲಕ್ಷ್ಮಣಂ ತರ್ಪಯಾಮಿ, ಸೀತಾಯೈ ನಮಃ, ಸೀತಾಂ ತರ್ಪಯಾಮಿ' ಎಂದು ಮುಂತಾಗಿ ಸ್ಪಷ್ಟವಾಗಿ ಉಚ್ಚಾರಮಾಡಿ ನೀರಿನಿಂದ ತರ್ಪಣವನ್ನು ಕೊಡಬೇಕು.

ಹೀಗೆ ತರ್ಪಣ ಮತ್ತು ನಮಸ್ಕಾರ ಮಾಡಿ ನೀರಿನಿಂದ ಹೊರಗೆ ಬಂದು ಒಣ ಬಟ್ಟೆ ಉಟ್ಟುಕೊಂಡು ಕೈಯಲ್ಲಿ ಪವಿತ್ರ ಇಟ್ಟುಕೊಂಡು ಆಚಮನ, ಸಂಧ್ಯೋಪಾಸನೆ, ಜಪತರ್ಪಣ, ದೇವಪೂಜಾದಿ ನಿತ್ಯಾಹ್ನಿಕವನ್ನು ಮಾಡಿಕೊಂಡು ವಿಧಿಪೂರ್ವಕವಾಗಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಮಾಡಬೇಕು. ಎಳ್ಳು ಹಾಗೂ ಅಕ್ಕಿಗಳಿಂದ ಪಿತೃಗಳಿಗೆ ಪಿಂಡದಾನ ಮಾಡಬೇಕು.

ಅನಂತರ ಚಕ್ರತೀರ್ಥದಲ್ಲಿ ಸ್ನಾನಮಾಡಿ ಸೇತುಸ್ವಾಮಿಯಾದ ಶ್ರೀನಾರಾಯಣನ ದರ್ಶನಮಾಡಿಕೊಳ್ಳಬೇಕು. ಪಶ್ಚಿಮ ಮಾರ್ಗದಿಂದ ಹೊಗುವವರು ಅಲ್ಲಿಯ ಚಕ್ರತೀರ್ಥದಲ್ಲಿ ಸ್ನಾನಮಾಡಿ ದರ್ಭಶಯನದಲ್ಲಿ ಪವಡಿಸಿದ ಶ್ರೀರಾಮನ ದರ್ಶನ ಮಾಡಿಕೊಳ್ಳಬೇಕು. ಅನಂತರ ಕಪಿತೀರ್ಥ, ಸೀತಾಕುಂಡ, ಋಣಮೋಚನ ತೀರ್ಥ ಲಕ್ಷ್ಮಣ ತೀರ್ಥ, ರಾಮ ತೀರ್ಥ, ಪಾಪವಿನಾಶನ ತೀರ್ಥಗಳಲ್ಲಿ ಸ್ನಾನಮಾಡಬೇಕು ಅನಂತರ ಗಂಗಾತೀರ್ಥ, ಯಮುನಾತೀರ್ಥ, ಸಾವಿತ್ರೀತೀರ್ಥ, ಸರಸ್ವತೀತೀರ್ಥ. ಗಾಯತ್ರೀತೀರ್ಥ, ಹನುಮತ್ಕುಂಡ. ಬ್ರಹ್ಮಕುಂಡ, ನಾಗಕುಂಡಗಳಲ್ಲಿ ಸ್ನಾನಮಾಡಬೇಕು. ಅನಂತರ ಯಾತ್ರಿಕರು ಅಗಸ್ತ್ಯ ತೀರ್ಥದಲ್ಲಿ ಸ್ನಾನಮಾಡಬೇಕು. ಅನಂತರ ಅಗ್ನಿತೀರ್ಥಕ್ಕೆ ಹೋಗಿ ಸ್ನಾನತರ್ಪಣ ಹಾಗೂ ಶ್ರಾದ್ಧಾದಿಗಳನ್ನು ಮಾಡಬೇಕು. ಹಿಂದೆ ಹೇಳಿದ ಚಕ್ರತೀರ್ಥವೇ ಮೊದಲಾದ ಎಲ್ಲ ತೀರ್ಥಗಳಲ್ಲಿಯೂ ಸ್ನಾನ, ತರ್ಪಣ, ಶ್ರಾದ್ಧಗಳನ್ನು ವಿಧಿಪೂರ್ವಕವಾಗಿ ಮಾಡಿದವರಿಗೆ ಸರ್ವಪಾಪಗಳೂ ನಷ್ಟವಾಗುವವು. ನರಕದ ಭಯವೇ

ತಪ್ಪಿ ಹೋಗುವುದು. ಮತ್ತು ಶ್ರೀರಾಮ ಹಾಗೂ ರಾಮೇಶ್ವರರ ಪೂರ್ಣಾನುಗ್ರಹದಿಂದ ಮೋಕ್ಷಾದಿ ಪುರುಷಾರ್ಥಗಳು ದೊರಕುವವು. ಆದುದರಿಂದ ಯಾತ್ರಿಕರು ಎಲ್ಲ ತೀರ್ಥಗಳಲ್ಲಿ ಸ್ನಾನ ತರ್ಪಣ ಶ್ರಾದ್ಧಾದಿಗಳನ್ನು ಮಾಡಬೇಕು.

ಕೊನೆಗೆ ರಾಮೇಶ್ವರಕ್ಕೆ ಬಂದು ಪರಮೇಶ್ವರನ ದರ್ಶನ ತೆಗೆದುಕೊಂಡು ಶಿವನ ಸೇವೆಯನ್ನು ಮಾಡಬೇಕು. ಮತ್ತೆ ಸೇತು ಮಾಧವನಲ್ಲಿಗೆ ಬಂದು ಕ್ರಮಶಃ ರಾಮತೀರ್ಥ, ಲಕ್ಷ್ಮಣತೀರ್ಥ, ಸೀತಾತೀರ್ಥ, ಹನುಮತ್ತೀರ್ಥಗಳಲ್ಲಿ ಸ್ನಾನಮಾಡಬೇಕು. ಆ ಬಳಿಕ ಮತ್ತೊಮ್ಮೆ ರಾಮೇಶ್ವರನ ಬಳಿಗೆ ಬಂದು ಆ ರಾಮಲಿಂಗಕ್ಕೂ ಮತ್ತು ಶ್ರೀರಾಮಚಂದ್ರರಿಗೂ ನಮಸ್ಕಾರಮಾಡಿ ಧನುಷ್ಕೋಟಿತೀರ್ಥಕ್ಕೆ ಬಂದು ಅಲ್ಲಿ ಸ್ನಾನಮಾಡಬೇಕು. ಅಲ್ಲಿ ಯಥಾಶಕ್ತಿ ದಾನ ದಕ್ಷಿಣೆ ಕೊಡಬೇಕು. ಅನಂತರ ಕೋಟಿತೀರ್ಥಕ್ಕೆ ಬಂದು ಸ್ನಾನಮಾಡಿ ರಾಮೇಶ್ವರರನ್ನು ವಂದಿಸಿ ತನ್ನ ಯೋಗ್ಯತೆಯನ್ನು ಅನುಸರಿಸಿ ಎಳ್ಳು, ಧಾನ್ಯ, ಹಸು, ಫಲ, ಮನೆ, ವಸ್ತ್ರ, ಅಕ್ಕಿ, ಬಂಗಾರ ಮುಂತಾದವುಗಳನ್ನು ಸದಾಚಾರಿಯಾದ ಶ್ರೋತ್ರಿಯ ಬ್ರಾಹ್ಮಣರಿಗೆ ದಾನಕೊಡಬೇಕು. ಭಗವಾನ್ ರಾಮೇಶ್ವರನಿಗೆ ಧೂಪ, ದೀಪ, ನೈವೇದ್ಯ, ಅಭಿಷೇಕ ಮುಂತಾದ ವಿವಿಧ ಪೂಜೆಗಳನ್ನು ಮಾಡಲು ಬೇಕಾಗುವ ಉಪಕರಣಗಳನ್ನು ದಾನನೀಡಬೇಕು. ಅನಂತರ ಸೇತುಮಾಧವನಲ್ಲಿಗೆ ಹೋಗಿ ಅಲ್ಲಿಯೂ ಧೂಪದೀಪಾದಿ ಪೂಜೆಯ ಉಪಕರಣಗಳನ್ನು ಕಾಣಿಕೆಯಾಗಿ ಸಮರ್ಪಿಸಬೇಕು. ಕ್ಷೇತ್ರಸ್ಥರಾದ ಸದಾಚಾರಿ ವೇದಶಾಸ್ತ್ರ ವಿದ್ವಾಂಸರನ್ನು ಕರೆದು ಷಡ್ರಸ ಭೋಜನಮಾಡಿಸಿ ಉಣಿಸಿ ತೃಪ್ತಿಪಡಿಸಬೇಕು. ಯಥಾಶಕ್ತಿ ದಕ್ಷಿಣೆ ನೀಡಿ ಸಂತೋಷಪಡಿಸಬೇಕು. ಹೀಗೆ ವಿಧಿಪೂರ್ವಕವಾಗಿ ರಾಮೇಶ್ವರ ಯಾತ್ರೆ ಮಾಡಿದವರ ಮನೋಭೀಷ್ಟಗಳೆಲ್ಲವೂ ಸಿದ್ಧಿಸುವವು. ದುಃಖ ದಾರಿದ್ರ್ಯಗಳೆಲ್ಲವೂ ದೂರವಾಗುವವು. ಸಂತಾನ ಸಂಪತ್ತು ಸೌಭಾಗ್ಯಗಳ ವೃದ್ಧಿಯಾಗುವುದು. ಕೊನೆಗೆ ಈ ಸಂಸಾರ ಬಂಧನದಿಂದ ಮುಕ್ತರಾಗಿ ಯಾತ್ರಿಕರು ಮೋಕ್ಷವನ್ನು ಹೊಂದುವರು. ಈ ಸೇತುಯಾತ್ರೆಯನ್ನು ಮಾಡುವ ಯೋಗ್ಯತೆ ಇಲ್ಲದಿದ್ದವರು ಮತ್ತು ಯೋಗ್ಯತೆ ಇದ್ದರೂ ಕುಂಟ, ಕುರುಡು ಅಥವಾ ಯಾವುದಾದರೂ ರೋಗಗಳಿಂದ ಸೇತುಯಾತ್ರೆ ಮಾಡಲು ಸಾಧ್ಯವಿಲ್ಲದವರು ಬೇರೆ ಬೇರೆ ಪುರಾಣಗಳಲ್ಲಿ ಹೇಳಿದ ಸೇತುಯಾತ್ರೆಯ ಕ್ರಮ ಮತ್ತು ಮಹಿಮೆಗಳನ್ನು ಶ್ರವಣ ಮಾಡಿದರೆ ಅವರಿಗೆ ಸೇತುತೀರ್ಥ ಯಾತ್ರೆಯ ಪೂರ್ಣ ಫಲವು ದೊರಕುವುದು.

## ಸೇತುತೀರ್ಥದ ಮಾಹಾತ್ಮ್ಯ

**ಸೂತ:-** ಮುನಿಶ್ರೇಷ್ಠರೇ, ಈ ಸೇತುತೀರ್ಥದಲ್ಲಿ ಜಪ, ಹೋಮ, ತಪಸ್ಸು, ದಾನ ಎಲ್ಲವೂ ಅಕ್ಷಯ ಪುಣ್ಯಪ್ರದವಾಗಿರುತ್ತವೆ. ಧನುಷ್ಕೋಟಿಯಲ್ಲಿ ಸ್ನಾನಮಾಡಿ ಯಾತ್ರಿಕರು ಶ್ರೀರಾಮೇಶ್ವರನ ದರ್ಶನಮಾಡಿಕೊಂಡು ಅಲ್ಲಿ ಮೂರು ದಿವಸ ವಾಸಮಾಡಬೇಕು. 'ಓಂ ನಮಃ ಶಿವಾಯ' ಎಂಬ ಶಿವಷಡಕ್ಷರ ಮಂತ್ರವನ್ನು ಒಂದು ಸಾವಿರ ಎಂಟು ಸಲ ಜಪಮಾಡಬೇಕು. ಮತ್ತು ಸೇತುತೀರ್ಥದ ಹಾಗೂ ಈ ದಕ್ಷಿಣ ಸಮುದ್ರದ ಮಹಿಮೆಯನ್ನು ಬಣ್ಣಿಸುವ ವೇದದಲ್ಲಿಯ ''ದ್ವೌ ಸಮುದ್ರೌ, ಆದೋಯದ್ದಾರು. 'ವಿಷ್ಣೋಃ ಕರ್ಮಾಣಿ ಪಶ್ಯತ್' 'ತದ್ ವಿಷ್ಣೋಃ' ಮುಂತಾದ ಮಂತ್ರಗಳನ್ನು ಅರ್ಥಾನುಸಂಧಾನ ಪೂರ್ವಕವಾಗಿ ಪಠಿಸಬೇಕು. ಚಂದ್ರಗ್ರಹಣ, ಸೂರ್ಯಗ್ರಹಣ,

ವಿಷುವ ಯೋಗ, ಸಂಕ್ರಮಣ, ಸೋಮವಾರ, ಹುಣ್ಣಿಮೆ, ಅಮಾವಾಸ್ಯೆ ಮುಂತಾದ ಪುಣ್ಯಕಾಲ ಹಾಗೂ ಪರ್ವಕಾಲಗಳಲ್ಲಿ ಸೇತುತೀರ್ಥದಲ್ಲಿ ಸ್ನಾನಮಾಡುವದರಿಂದ ಮಾನವರು ಏಳು ಜನ್ಮಗಳಲ್ಲಿ ಮಾಡಿದ ಪಾಪವು ನಾಶವಾಗುವುದು. ಸೂರ್ಯನು ಮಕರ ರಾಶಿಯಲ್ಲಿದ್ದಾಗ ಸೂರ್ಯೋದಯ ಸಮಯದಲ್ಲಿ ಮೂರು ದಿನ ಧನುಷ್ಕೋಟಿ ತೀರ್ಥದಲ್ಲಿ ಸ್ನಾನಮಾಡುವದರಿಂದ ಸರ್ವಪಾಪ ಪರಿಹಾರ. ಮಾಘಮಾಸದಲ್ಲಿ ಧನುಷ್ಕೋಟಿ ಹಾಗೂ ಸೇತುತೀರ್ಥದಲ್ಲಿ ಇಪ್ಪತ್ತು ದಿನ ಇದ್ದು ಸ್ನಾನಮಾಡಿದರೆ ಮನುಷ್ಯನಿಗೆ ಮುಂದೆ ಶಿವ ಸಾಯುಜ್ಯ ಪ್ರಾಪ್ತವಾಗುವದು. ಸ್ವಯಂ ಶ್ರೀರಾಮಚಂದ್ರನು ಈ ಧನುಷ್ಕೋಟಿ ತೀರ್ಥದಲ್ಲಿ ಸ್ನಾನಮಾಡಿ ಗ್ರಹಣ ಪರ್ವಕಾಲಗಳಲ್ಲಿ ಇಲ್ಲಿ ಅವಶ್ಯವಾಗಿ ಸ್ನಾನಮಾಡಬೇಕು ಎಂದು ವಿಧಿಸಿದ್ದಾನೆ. ಅರ್ಧೋದಯ ಪರ್ವಕಾಲದಲ್ಲಿ ಸೇತುತೀರ್ಥ ಸ್ನಾನ, ಪಿತೃತರ್ಪಣ, ಪಿಂಡ ದಾನಾದಿಗಳನ್ನು ಮಾಡಿದವರು ಆಚಂದ್ರಾರ್ಕ ಶಾಶ್ವತ ಕಾಲದವರೆಗೆ ಪಿತೃಗಳನ್ನು ತೃಪ್ತಿಪಡಿಸುವರು.

ಬೇರೆ ಕಡೆಗಳಲ್ಲಿ ಶುಕ್ರವಾರ, ಮಂಗಳವಾರ, ಶನಿವಾರ ದಿನಗಳಲ್ಲಿ ಸಮುದ್ರವನ್ನು ಸ್ಪರ್ಶಮಾಡಬಾರದು. ಬಸಿರು ಹೆಣ್ಣು ಮಗಳ ಗಂಡನು, ಮತ್ತು ಮಕ್ಕಳಿಲ್ಲದಿದ್ದವರು ಸಮುದ್ರವನ್ನು ಮುಟ್ಟಬಾರದು. ಆದರೆ ಈ ಸೇತುತೀರ್ಥಗಳಲ್ಲಿ ಮತ್ತು ನದೀ ಸಮುದ್ರ ಸಂಗಮದಲ್ಲಿ ಗಂಗಾಸಾಗರ ಸಂಗಮದಲ್ಲಿ ಹಾಗೂ ಗೋಕರ್ಣ ಮತ್ತು ಪುರುಷೋತ್ತಮ ತೀರ್ಥಗಳಲ್ಲಿ ಈ ನಿಯಮವಿರುವುದಿಲ್ಲ. ಉಳಿದ ಕಡೆ ಪರ್ವದಿನಗಳಲ್ಲಿ ಮಾತ್ರ ಸಮುದ್ರ ಸ್ನಾನವು ವಿಹಿತವಾಗಿದೆ. ಆದರೆ ಈ ಸೇತು, ಗೋಕರ್ಣ, ಸಾಗರಸಂಗಮ ಮುಂತಾದ ಸ್ಥಳಗಳಲ್ಲಿ ಮಾತ್ರ ಬೇಕಾದಾಗ ಸಮುದ್ರ ಸ್ನಾನವನ್ನು ಮಾಡಬಹುದು.

ಹಿಂದೆ ಶ್ರೀರಾಮಚಂದ್ರನು ಸ್ವಯಂ ಸೀತಾ ಲಕ್ಷ್ಮಣರೊಂದಿಗೆ ಸ್ನಾನಮಾಡಿ ಹೀಗೆ ಪ್ರತಿಜ್ಞೆ ಮಾಡಿದ್ದಾನೆ- 'ನಾನು ನಿರ್ಮಿಸಿದ ಈ ಸಮುದ್ರಸೇತುವಿನಲ್ಲಿ ಸ್ನಾನಮಾಡಿದವರು ಸಂಸಾರ ಬಂಧನದಿಂದ ಮುಕ್ತರಾಗುವರು. ಅವರಿಗೆ ಪುನರ್ಜನ್ಮವೇ ಇಲ್ಲ. ಈ ಸೇತುವಿನ ದರ್ಶನದಿಂದಲೇ ಎಲ್ಲ ಪಾಪಗಳೂ ನಷ್ಟವಾಗಿ ಹೋಗುತ್ತವೆ. ಈ ರಾಮಸೇತುವಿನ ರಕ್ಷಣೆಗಾಗಿಯೇ ಶ್ರೀ ಮಹಾವಿಷ್ಣುವು ಸೇತುಮಾಧವ ಎಂಬ ಹೆಸರಿನಿಂದ ಇಲ್ಲಿ ನಿಂತು ಕೊಂಡಿದ್ದಾನೆ. ಶ್ರವಣ ನಕ್ಷತ್ರ, ಅಮವಾಸ್ಯೆ ತಿಥಿ, ವ್ಯತೀಪಾತ ಯೋಗ, ರವಿವಾರ, ಮಾಘಮಾಸ, ಅಮಾವಾಸ್ಯೆ, ಅರ್ಧೋದಯ ಮಹೋದಯ ಪರ್ವಕಾಲ ಇವೆಲ್ಲವೂ ಮಿಲಿತವಾಗಿ ಅಥವಾ ಬೇರೆ ಬೇರೆಯಾಗಿ ಇದ್ದಾಗ ಈ ಸಮುದ್ರಸೇತುವಿನಲ್ಲಿ ಸ್ನಾನಮಾಡುವದರಿಂದ ಮಾನವರಿಗೆ ಮುಕ್ತಿಯಾಗುವುದು.

ಈ ರಾಮೇಶ್ವರ ಕ್ಷೇತ್ರದಲ್ಲಿ ಸದಾಚಾರ, ತಪಸ್ಸು, ವೇದ ವೇದಾಂತ ಪಾಠ ಪುರಾಣಗಳನ್ನು ಹೇಳುವ ಬ್ರಾಹ್ಮಣನು ದಾನ ದಕ್ಷಿಣೆಗಳಿಗೆ ಸತ್ಪಾತ್ರ ಎನಿಸಿದ್ದಾನೆ. ಅಂಥ ಉತ್ತಮ ಪಾತ್ರದಲ್ಲಿ ನೀಡಿದ ದಾನವು ಅನಂತ ಪುಣ್ಯಪ್ರದವಾಗಿರುತ್ತದೆ.

## ದಾನಕ್ಕೆ ಪಾತ್ರಾಪಾತ್ರ ವಿಚಾರ

ಹಿಂದೆ ಒಂದಾನೊಂದು ಸಮಯದಲ್ಲಿ ದಿಲೀಪರಾಜನು ವಶಿಷ್ಠರನ್ನು ಕುರಿತು ದಾನಕ್ಕೆ ಒಳ್ಳೆ ಪಾತ್ರ ಯಾವುದು ಎಂದು ಪ್ರಶ್ನೆ ಮಾಡಿದನು. ವಶಿಷ್ಠ ಅಂದದ್ದು- ''ವೇದಶಾಸ್ತ್ರಗಳನ್ನು ಓದಿಕೊಂಡು ಅದರಂತೆ ಸದಾಚಾರನಿಷ್ಠನಾದ ಬ್ರಾಹ್ಮಣನು ಅತ್ಯುತ್ತಮ ಪಾತ್ರ ಎನಿಸುತ್ತಾನೆ. ವೇದಪುರಾಣಗಳಲ್ಲಿ ಹೇಳಿದ ಮಂತ್ರ ಜಪ, ಶಿವ ವಿಷ್ಣು

ದೇವತೆಗಳ ಪೂಜೆ, ವರ್ಣಾಶ್ರಮ ಧರ್ಮಗಳ ಪಾಲನೆ ಇವು ಮೂರನ್ನು ಮಾಡುತ್ತಲಿರುವ ಕುಟುಂಬಿಯಾದ ದರಿದ್ರ ಶ್ರೋತ್ರಿಯನು ಸರ್ವವಿಧ ದಾನಗಳಿಗೆ ಅರ್ಹ ವ್ಯಕ್ತಿ ಆಗಿದ್ದಾನೆ. ಇಂಥ ಸತ್ಪಾತ್ರದಲ್ಲಿ ಇಂಥ ಪವಿತ್ರ ತೀರ್ಥಕ್ಷೇತ್ರಗಳಲ್ಲಿ ನೀಡಿದ ದಾನ ಧರ್ಮಗಳು ಮೋಕ್ಷಕ್ಕೆ ಸಾಧಕವಾಗುತ್ತವೆ. ದುರಾಚಾರಿಗಳಿಗೆ ಮತ್ತು ಜ್ಞಾನಶೂನ್ಯರಾದವರಿಗೆ ಕೊಟ್ಟ ದಾನವು ವ್ಯರ್ಥವಾಗುವದಲ್ಲದೇ ಪಾಪಕ್ಕೂ ಕಾರಣವಾಗುತ್ತದೆ. ತೀರ್ಥಕ್ಷೇತ್ರಗಳಿಗೆ ಬಂದಾಗ ಅಲ್ಲಿ ಸತ್ಪಾತ್ರವು ದೊರಕದಿದ್ದಲ್ಲಿ ತಮಗೆ ಪರಿಚಿತವಿದ್ದ ಯೋಗ್ಯ ವಿದ್ವಾಂಸರ ಹೆಸರಿನಿಂದ ಸಂಕಲ್ಪಮಾಡಿ ಈ ತೀರ್ಥಕ್ಷೇತ್ರದಲ್ಲಿ ಸಂಕಲ್ಪಾಂಗವಾಗಿ ನೀರು ಬಿಡಬೇಕು. ಅದನ್ನು ಊರಿಗೆ ಹೋದಬಳಿಕ ಸಂಕಲ್ಪಾನುಸಾರ ದಾನಕೊಡಬೇಕು. ಅವರು ಮೃತರಾಗಿದ್ದರೆ, ಅವರ ಹೆಂಡತಿ ಮಕ್ಕಳಿಗೆ ಆ ದಾನವನ್ನು ಕೊಡಬೇಕು. ಆದರೆ ಎಂಥ ಪ್ರಸಂಗದಲ್ಲಿಯೂ ತೀರ್ಥಕ್ಷೇತ್ರದಲ್ಲಿ ಅಧಮ ಪಾತ್ರರಿಗೆ ಅನಾಚಾರಿಗಳಿಗೆ ಅಜ್ಞಾನಿಗಳಿಗೆ, ದೇವ ಧರ್ಮದ್ವೇಷಿ ನಾಸ್ತಿಕರಿಗೆ ಮಾತ್ರ ಎಂದೂ ದಾನಕೊಡಬಾರದು.''

ವಶಿಷ್ಠರು ಹೀಗೆ ಹೇಳಿದ ಬಳಿಕ ದಿಲೀಪರಾಜನು ಸತ್ಪಾತ್ರರನ್ನು ನೋಡಿ ಹುಡುಕಿ ಅವರಿಗೆ ಮಾತ್ರ ಎಲ್ಲ ದಾನವನ್ನು ನೀಡಿದನು. ಅಯೋಧ್ಯಾ, ದಂಡಕಾರಣ್ಯ, ವಿರೂಪಾಕ್ಷ, ವೆಂಕಟಾಚಲ, ಸಾಲಿಗ್ರಾಮ, ಪ್ರಯಾಗ, ಕಾಂಚಿ, ದ್ವಾರಕಾ, ಮಧುರಾ, ಪದ್ಮನಾಭ, ಕಾಶಿ, ಸಮುದ್ರ ಮತ್ತು ಭಾಸ್ಕರ ಪರ್ವತ ಇಷ್ಟು ಕ್ಷೇತ್ರಗಳಲ್ಲಿಯೂ ಮತ್ತು ಗಂಗಾ ಗೋದಾವರೀ ಮುಂತಾದ ಮಹಾನದಿಗಳಲ್ಲಿಯೂ ಮುಂಡನ ಉಪವಾಸಗಳು ಅವಶ್ಯ ಕರ್ತವ್ಯವಾಗಿವೆ. ಮುಂಡನ ಉಪವಾಸ ಮಾಡದೇ ಮರಳಿ ಮನೆಗೆ ಹೋದ ಯಾತ್ರಿಕರ ಜೊತೆಗೆ ಅವರ ಪಾಪಗಳೆಲ್ಲವೂ ತಿರುಗಿ ಬಂದು ಅವರಲ್ಲಿಯೇ ಧೃಡವಾಗಿ ನೆಲಿಸುತ್ತವೆ. ಆದುದರಿಂದ ಮೇಲೆ ಹೇಳಿದ ತೀರ್ಥಕ್ಷೇತ್ರಗಳಿಗೆ ಹೋದಾಗ ಮುಂಡನ ಸ್ನಾನ ಶ್ರಾದ್ಧ ದಾನ ಧರ್ಮಗಳು ಅವಶ್ಯ ಕರ್ತವ್ಯವೆಂದು ವಿಹಿತವಾಗಿವೆ. ಗಂಧಮಾದನ ಪರ್ವತಗಳಲ್ಲಿ ಇರುವ ಇಪ್ಪತ್ನಾಲ್ಕು ತೀರ್ಥಗಳಲ್ಲಿ ಲಕ್ಷ್ಮಣತೀರ್ಥದಲ್ಲಿ ಮುಂಡನ, ಉಪವಾಸವನ್ನು ಮಾಡಬೇಕು. ಸೇತು ತೀರ್ಥದಲ್ಲಿ ಅರ್ಧೋದಯ ಸಮಯದಲ್ಲಿ ಸ್ನಾನಮಾಡಿ ಅರ್ಧೋದಯ ಎಂಬ ಹೆಸರಿನ ಶ್ರೀಹರಿಯನ್ನು ಪೂಜೆಮಾಡಬೇಕು. ಮತ್ತು ಈ ಪರ್ವಕಾಲದಲ್ಲಿ ಸೂರ್ಯಚಂದ್ರರರನ್ನು ಕುರಿತು.

''ದಿವಾಕರ ನಮಸ್ತೇಸ್ತು ತೇಜೋರಾಶೇ ಜಗತ್ಪತೇ ।
ಅತ್ರಿ ಗೋತ್ರ ಸಮುತ್ಪನ್ನ ಲಕ್ಷ್ಮೀ ದೇವ್ಯಾಃ ಸಹೋದರ ॥
ಅರ್ಘ್ಯಂ ಗೃಹಾಣ ಭಗವನ್ ಸುಧಾ ಕುಂಭ ನಮೋಽಸ್ತುತೇ ।

ಎಂಬ ಮಂತ್ರದಿಂದ ಅರ್ಘ್ಯವನ್ನು ನೀಡಬೇಕು. ವ್ಯತೀಪಾತದ ಯೋಗವಿದ್ದಾಗ

''ವ್ಯತೀಪಾತ ಮಹಾಯೋಗಿನ್, ಮಹಾಪಾತಕ ನಾಶನ ।
ಸಹಸ್ರ ಬಾಹೋ ಸರ್ವಾತ್ಮನ್ ಗೃಹಾಣಾರ್ಘ್ಯಂ ನಮೋಽಸ್ತುತೇ ॥''

ಎಂಬ ಮಂತ್ರವನ್ನು ಹೇಳಿ ಅರ್ಘ್ಯವನ್ನು ನೀಡಬೇಕು. ತಿಥಿ, ವಾರ ನಕ್ಷತ್ರಗಳ ಅಭಿಮಾನಿಯಾದ ಹಾಗೂ ಮಾಸಾಭಿಮಾನಿಯಾದ ಕಾಲರೂಪಿ ಪರಮಾತ್ಮನಿಗೆ-

''ತಿಥಿ-ನಕ್ಷತ್ರ-ವಾರಾಣಾಮಧೀಶ ಪರಮೇಶ್ವರ ।
ಮಾಸರೂಪ ಗೃಹಾಣಾರ್ಘ್ಯಂ ಕಾಲರೂಪ ನಮೋಽಸ್ತುತೇ ॥''

ಎಂಬ ಮಂತ್ರದಿಂದ ಅರ್ಘ್ಯವನ್ನು ಕೊಡಬೇಕು.

ಹೀಗೆ ಬೇರೆ ಬೇರೆ ಮಂತ್ರಗಳಿಂದ ಅರ್ಧೋದಯ ಪರ್ವಕಾಲದಲ್ಲಿ ಅರ್ಘ್ಯವನ್ನು ಕೊಟ್ಟು ಹದಿನಾಕು, ಹನ್ನೆರಡು, ಎಂಟು, ಏಳು. ಆರು, ಕನಿಷ್ಠ ಐದು ಜನ ಬ್ರಾಹ್ಮಣರನ್ನಾದರೂ ಕರೆದು ಅನ್ನಪಾನಾದಿಗಳಿಂದ ಪೂಜೆಮಾಡಬೇಕು. ಅನಂತರ ಹಿರಣ್ಯಶ್ರಾದ್ಧ, ಆಮಶ್ರಾದ್ಧ, ಪಾಕಶ್ರಾದ್ಧ, ಪಾರ್ವಣಶ್ರಾದ್ಧ ಮುಂತಾದವುಗಳನ್ನು ತಮ್ಮ ಯೋಗ್ಯತೆಗೆ ಅನುಸರಿಸಿ ಯಥಾನುಕೂಲ ಯಥಾಶಕ್ತಿ ಮಾಡಬೇಕು. ಸ್ನಾನ ಮಾಡುವಾಗ ''ಸೇತವೇ ನಮಃ, ಸೇತವೇ ನಮಃ'' ಎಂದು ಉಚ್ಚರಿಸುತ್ತ ಮುಳುಗು ಹಾಕಿದರೆ ಎಲ್ಲ ಪಾಪಗಳೂ ನಷ್ಟವಾಗುವವು. ಈ ಸೇತುತೀರ್ಥದಲ್ಲಿ ಹಾಗೂ ಬೇರೆ ಬೇರೆ ತೀರ್ಥ ಜಲಾಶಯ ಅಥವಾ ಮನೆಗಳಲ್ಲಿ ಸ್ನಾನಮಾಡುವಾಗ ಈ ರಾಮಸೇತು ಧನುಷ್ಕೋಟಿ ಮುಂತಾದ ತೀರ್ಥಗಳ ಸ್ಮರಣೆಯನ್ನೂ ನಾಮೋಚ್ಚಾರಣೆಯನ್ನೂ ಮಾಡಬೇಕು. ಮತ್ತು ಶ್ರೀರಾಮ, ಸೀತೆ, ಲಕ್ಷ್ಮಣ, ರಾಮೇಶ್ವರ, ಹನುಮಾನ್, ಸುಗ್ರೀವ, ವಿಭೀಷಣ, ನಾರದ, ವಿಶ್ವಾಮಿತ್ರ, ಅಗಸ್ತ್ಯ, ವಶಿಷ್ಠ, ವಾಮದೇವ, ಜಾಬಾಲಿ, ಕಶ್ಯಪ ಮುಂತಾದ ಪುಣ್ಯ ಪುರುಷರ ನಾಮೋಚ್ಚಾರಣವನ್ನು ಸ್ನಾನಕಾಲದಲ್ಲಿ ಮಾಡಬೇಕು.

ಬ್ರಾಹ್ಮಣರಾಗಿ ಜನಿಸಿಯೂ ತ್ರಿಕಾಲ ಸಂಧ್ಯಾವಂದನೆ, ಗಾಯತ್ರೀ ಜಪ, ದೇವರಪೂಜೆ, ಬ್ರಹ್ಮಯಜ್ಞ, ವೈಶ್ವದೇವ, ಬಲಿಹರಣ, ಅತಿಥಿ ಸತ್ಕಾರ ಮುಂತಾದ ವಿಹಿತ ಕರ್ಮಗಳನ್ನು ಮಾಡದವರಿಗೆ ಘೋರ ಪಾಪಗಳನ್ನು ಹೇಳಿದ್ದಾರೆ ಶಾಸ್ತ್ರದಲ್ಲಿ. ಆದರೆ ಅಂಥ ಪಾಪಿಗಳು ಸೇತುತೀರ್ಥಕ್ಕೆ ಬಂದು ಧನುಷ್ಕೋಟಿ ತೀರ್ಥದಲ್ಲಿ ಸ್ನಾನಮಾಡುವದರಿಂದ ಅವರ ಪಾಪಗಳೆಲ್ಲವೂ ನಷ್ಟವಾಗಿ ಹೋಗುತ್ತವೆ. ಮಧ್ಯಾಹ್ನಕ್ಕೆ ಮನೆಗೆ ಬಂದ ಸಂನ್ಯಾಸಿಗಳಿಗೆ ಭಿಕ್ಷೆಯನ್ನು ಕೊಡದಿರುವುದು. ವೇದಶಾಸ್ತ್ರಗಳನ್ನು ಓದದೇ ಇರುವುದು, ಓದಿದ್ದನ್ನು ತಾನು ಮತ್ತೆ ಮತ್ತೆ ಪಠಿಸದೇ, ಬೇರೊಬ್ಬರಿಗೆ ಪಾಠಹೇಳದೇ ಮರೆತು ಬಿಡುವುದು, ತಾಯಿ ತಂದೆಗಳ ಶ್ರಾದ್ಧ ಪಕ್ಷಗಳನ್ನು ಮಾಡದೇ ಇರುವುದು ಮೊದಲಾದವುಗಳು ಮಹಾಪಾಪಗಳು ಎನಿಸುತ್ತವೆ. ಧನುಷ್ಕೋಟಿ ತೀರ್ಥದ ಸ್ನಾನಮಾತ್ರದಿಂದ ಮಾನವನ ಈ ಎಲ್ಲ ಮಹಾಪಾತಕಗಳು ನಾಶವಾಗಿ ಮೋಕ್ಷಮಂದಿರಕ್ಕೆ ಮಾರ್ಗವು ಮುಕ್ತದ್ವಾರ ವಾಗುವುದು. ಸಂಸಾರ ಸಾಗರವನ್ನು ದಾಟಿ ಆಚೆಗೆ ಹೋಗಬೇಕೆಂದು ಬಯಸುವವರು ಮೊದಲು ಧನುಷ್ಕೋಟಿಗೆ ಹೋಗಬೇಕು.

ಮುನಿಗಳೇ, ನೀವು ಕೂಡ ಮೋಕ್ಷ ಸಿದ್ಧಿಗಾಗಿ ಶ್ರೀರಾಮಚಂದ್ರ ಪ್ರಭುವಿನಿಂದ ನಿರ್ಮಿತವಾದ ಸೇತುತೀರ್ಥದ ಆ ಧನುಷ್ಕೋಟಿ ತೀರ್ಥಕ್ಕೆ ಹೋಗಿರಿ. ರಾಮೇಶ್ವರ ಯಾತ್ರೆ ಮಾಡಿರಿ. ಅಲ್ಲಿಯ ಪುಣ್ಯ ತೀರ್ಥಗಳ ಪುಣ್ಯೋದಕಗಳಲ್ಲಿ ಮುಳುಗು ಹಾಕಿರಿ. ಅರ್ಥಾತ್ ಸಂಕಲ್ಪಪೂರ್ವಕವಾಗಿ ವಿಧ್ಯುಕ್ತರೀತಿಯಿಂದ ಸ್ನಾನಮಾಡಿರಿ. ಶ್ರಾದ್ಧ ಮಾಡಿರಿ. ರಾಮೇಶ್ವರನ ದರ್ಶನ ತೆಗೆದುಕೊಳ್ಳಿರಿ. ಸೀತಾಪತಿ ಶ್ರೀರಾಮಚಂದ್ರನನ್ನು ಭಜಿಸಿರಿ ಪೂಜಿಸಿರಿ. ಅವನ ಅನುಗ್ರಹದಿಂದ ಮುಕ್ತಿಮಾರ್ಗದಲ್ಲಿ ಮುನ್ನಡೆಯಿರಿ.

ಶೌನಕಾದಿ ಬ್ರಾಹ್ಮಣರೆ, ನಾನು ನಿಮಗಾಗಿ ಸರ್ವಶ್ರೇಷ್ಠವಾದ ಈ ಸೇತುತೀರ್ಥದ ದಿವ್ಯ ಮಾಹಾತ್ಮ್ಯವನ್ನು ಈ ವರೆಗೆ ಹೇಳಿದೆನು. ಇದನ್ನು ಭಕ್ತಿಯಿಂದ ಹೇಳಿದವರು ಮತ್ತು ಕೇಳಿದವರು ಅಗ್ನಿಷ್ಟೋಮವೇ ಮುಂತಾದ ಯಜ್ಞಗಳನ್ನು ಮಾಡಿದ ಪುಣ್ಯವನ್ನು ಪಡೆಯುತ್ತಾರೆ. ಇದನ್ನು ಎರಡು ಸಲ ಶ್ರವಣ ಪಠಣ ಮಾಡಿದರೆ, ಶಿವನ ಸಾಲೋಕ್ಯವನ್ನೂ ಮೂರು ಸಲ ಇದರ ಶ್ರವಣ ಪಠಣದಿಂದ ಶಿವನ ಸಾರೂಪ್ಯವನ್ನೂ ಮೇಲಿಂದ ಮೇಲೆ ಇದರ ಪಠಣ ಪಾಠಣದಿಂದ ಶಿವಸಾಯುಜ್ಯವನ್ನೂ ಮಾನವರು ಹೊಂದುತ್ತಾರೆ. ಸೇತುವಿನಲ್ಲಿ ಇರುವ ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿದ ಫಲವು ಸೇತುಮಾಹಾತ್ಮ್ಯದ ಶ್ರವಣ ಪಠಣಗಳಿಂದಲೂ ಬರುತ್ತದೆ. ಈ ಮಾಹಾತ್ಮ್ಯ ಪುಸ್ತಕವು ಮನೆಯಲ್ಲಿ ಇದ್ದರೆ ಭೂತಪ್ರೇತ ಬೇತಾಳಾದಿಗಳು ಆ ಮನೆಯ ಸಮೀಪಕ್ಕೂ ಬರುವದಿಲ್ಲ. ಶನಿ ಮಂಗಳ ಮೊದಲಾದ ಪಾಪಗ್ರಹಗಳ ಪೀಡೆಯೂ ಆಗುವುದಿಲ್ಲ. ಈ ಪುಸ್ತಕವಿದ್ದ ಮನೆಯೇ ಒಂದು ರಾಮಸೇತುತೀರ್ಥ ಎಂದು ತಿಳಿಯಬೇಕು. ಮಠ, ದೇವಾಲಯ, ನದೀ, ಸರೋವರಗಳ ತಟಾಕದಲ್ಲಿ ಮತ್ತು ಸ್ವಚ್ಛಗೊಳಿಸಲ್ಪಟ್ಟ ತಮ್ಮ ತಮ್ಮ ಮನೆಗಳಲ್ಲಿ ಪರ್ವಕಾಲ, ಪುಣ್ಯಕಾಲ, ವರ್ಷಾರಂಭ, ವಿಷುವಯೋಗ ಮುಂತಾದ ಪುಣ್ಯ ದಿನಗಳಲ್ಲಿ ಈ ಸೇತುಮಾಹಾತ್ಮ್ಯದ ಶ್ರವಣ ಪಠಣಗಳನ್ನು ವಿಶೇಷ ರೂಪದಿಂದ ಮಾಡಬೇಕು. ಇದನ್ನು ಹೇಳಿದ ಆಚಾರ್ಯರಿಗೆ ತನ್ನ ಶಕ್ತ್ಯಾನುಸಾರ ದಾನ ದಕ್ಷಿಣೆ, ವಸ್ತ್ರ, ಬಂಗಾರಗಳನ್ನು ಕೊಟ್ಟು ಪೂಜೆಮಾಡಬೇಕು.

## ವ್ಯಾಸರ ಆಗಮನ, ಗುರುಶಿಷ್ಯರ ಮಿಲನ

ನೈಮಿಷಾರಣ್ಯ ವಾಸಿಗಳಾದ ಶೌನಕಾದಿ ಮುನಿಗಳೇ! ನೀವು ನನ್ನಿಂದ ವೇದಸಮ್ಮಿತ ವಾದ ಈ ಸೇತುಮಾಹಾತ್ಮ್ಯವನ್ನು ಅತ್ಯಂತ ಭಕ್ತಿಯಿಂದ ಕೇಳಿದಿರಿ. ಇನ್ನು ಮೇಲೆ ನೀವು ಪ್ರತಿದಿನವೂ ಸೇತು ಮಾಹಾತ್ಮ್ಯವನ್ನು ಪಠಿಸಿರಿ ಮತ್ತು ನಿಮ್ಮ ಶಿಷ್ಯರಿಗೆ ಹೇಳಿರಿ.'' ಹೀಗೆ ಹೇಳಿ ಈ ಪುರಾಣದ ಪ್ರವಕ್ತಾರರಾದ ಸೂತಾಚಾರ್ಯರು ಶ್ರೀರಾಮನ ಆ ಸೇತು ರಚನೆಯ ಸಮಗ್ರ ಸಮಾಚಾರವನ್ನು ಭಕ್ತಿಯ ಉದ್ರೇಕದಿಂದ ನಿರೂಪಿಸಿದರು. ತನಗೆ ಈ ದಿವ್ಯ ಪುರಾಣವನ್ನು ಹೇಳಿದ ಹಾಗೂ ಬರೆದ ತಮ್ಮ ಗುರು ಶ್ರೀ ವೇದವ್ಯಾಸರನ್ನು ನೆನೆದರು. ಮತ್ತು ಅವರ ನಾಮೋಚ್ಚಾರಣೆಯನ್ನು ಭಕ್ತಿಯಿಂದ ಮಾಡುತ್ತ ಗದ್ಗದಿತ ಕಂಠರಾಗಿ ಆನಂದ ಬಾಷ್ಪಗಳನ್ನು ಉದುರಿಸುತ್ತ ಕುಣಿಯತೊಡಗಿದರು. ಅದೇ ವೇಳೆಯಲ್ಲಿ ಭಗವಾನ್ ಶ್ರೀ ವೇದವ್ಯಾಸರು ತಮ್ಮ ಶಿಷ್ಯರ ಮೇಲೆ ಅನುಗ್ರಹ ಮಾಡಬೇಕೆಂದು ಆಗಲೇ ಅಲ್ಲಿ ಪ್ರಕಟರಾದರು. ಅದನ್ನು ನೋಡಿ ಸೂತರೂ ಮತ್ತು ನೈಮಿಷಾರಣ್ಯದ ಎಲ್ಲ ಮುನಿಗಳೂ ಅಲ್ಲಿ ಪ್ರಕಟರಾದ ವೇದವ್ಯಾಸದೇವರ ಚರಣಾರವಿಂದಗಳಿಗೆ ಸಾಷ್ಟಾಂಗ ವಂದನೆಗೈದರು. ಮಹಾತೇಜಸ್ವಿಗಳಾದ ಆ ಶ್ರೀ ವೇದ ವ್ಯಾಸದೇವರು ಶೌನಕಾದಿ ಮುನಿಗಳು ನೀಡಿದ ಉಚ್ಚಾಸನದ ಮೇಲೆ ಕುಳಿತು ನುಡಿದರು.

**ವೇದವ್ಯಾಸ:-** 'ಮುನಿಗಳೇ, ನನ್ನ ಶಿಷ್ಯನಾದ ಈ ಸೂತನು ಈ ವರೆಗೆ ನಿಮಗೆ ಹೇಳಿದ ಈ ಸೇತುತೀರ್ಥದ ಮಾಹಾತ್ಮ್ಯವು ಯಥಾರ್ಥವಾಗಿದೆ. ಬಹಳ ಮಹತ್ವ ಪೂರ್ಣವೂ ಆಗಿದೆ. ಸರ್ವಪಾಪ ಪರಿಹಾರಕವೂ ಆಗಿದೆ. ಸಂಸಾರ ಸಾಗರದಿಂದ ತಾರಕವೂ ಆಗಿದೆ. ಹಿಂದೆ

ಧರ್ಮರಾಜಾದಿ ಪಾಂಡವರು ನನ್ನ ಅಪ್ಪಣೆಯಿಂದ ಈ ಸೇತುಮಾಹಾತ್ಮ್ಯವನ್ನು ತಮ್ಮ ಪುರೋಹಿತರಾದ ಧೌಮ್ಯ ಮುನಿಗಳ ಮುಖದಿಂದ ಪ್ರತಿನಿತ್ಯವೂ ಕೇಳುತ್ತಿದ್ದರು. ನೀವು ಕೂಡ ಈ ಸೇತು ಮಾಹಾತ್ಮ್ಯವನ್ನು ಯಾವಾಗಲೂ ಕೇಳಿರಿ. ಓದಿರಿ. ಶಿಷ್ಯರಿಗೆ ಹೇಳಿರಿ.

ವೇದವ್ಯಾಸದೇವರ ಈ ವಚನವನ್ನು ಕೇಳಿ ನೈಮಿಷಾರಣ್ಯದ ಶೌನಕಾದಿ ಮುನಿಗಳೆಲ್ಲರೂ ಆನಂದದಿಂದ ತಲೆತೂಗಿ ವ್ಯಾಸರ ಆಜ್ಞೆಯನ್ನು ಶಿರಸಾ ಧಾರಣ ಮಾಡಿದರು. 'ತಮ್ಮ ಅಪ್ಪಣೆಯನ್ನು ನಾವು ತಪ್ಪದೇ ಪಾಲಿಸುತ್ತೇವೆ' ಎಂದು ಅವರಿಗೆ ವಚನವಿತ್ತರು. ಇದರಿಂದ ಪರಮಪ್ರೀತರಾದ ಭಗವಾನ್ ಶ್ರೀ ವೇದವ್ಯಾಸ ದೇವರು ಅತ್ಯಂತ ಸಂತೋಷದಿಂದ ತಮ್ಮ ಬದರಿಕಾಶ್ರಮ ಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದರು.

**ಇತಿ ಸ್ಕಂದಪುರಾಣ ಬ್ರಾಹ್ಮಖಂಡ ಸೇತು ಮಾಹಾತ್ಮ್ಯ ಸಂಪೂರ್ಣ**

## ದರ್ಮಾರಣ್ಯ ಮಾಹಾತ್ಮ್ಯ

## ಅಧ್ಯಾಯ - ೭೨

**"ತರ್ತುಂ ಸಂಸ್ಕೃತಿವಾರಿಧಿಂ ತ್ರಿಜಗತಾಂ ನೌರ್ನಾಮ ಯಸ್ಯ ಪ್ರಭೋಃ।**
**ಯೇನೇದಂ ಸಕಲಂ ವಿಭಾತಿ ಸತತಂ ಜಾತಂ ಸ್ಥಿತಂ ಸಂಸ್ಕೃತಮ್ ॥**
**ಯಶ್ಚೈತನ್ಯಘನಃ ಪ್ರಮಾಣವಿಧುರೋ ವೇದಾಂತವೇದ್ಯೋ ವಿಭುಃ**
**ತಂ ವಂದೇ ಸಹಜ ಪ್ರಕಾಶ ಮಮಲಂ ಶ್ರೀರಾಮಚಂದ್ರಂ ಪರಮ್ ॥**

**ದಾರಾಃ ಪುತ್ರಾ ಧನಂ ವಾ ಪರಿಜನಸಹಿತೋ ಬಂಧು ವರ್ಗಃ ಪ್ರಿಯೋ ವಾ**
**ಮಾತಾ ಭ್ರಾತಾ ಪಿತಾ ವಾ ಶ್ವಶುರ ಕುಲಜನಾ ಭೃತ್ಯ ಐಶ್ವರ್ಯವಿತ್ತೇ ॥**
**ವಿದ್ಯಾರೂಪಂ ವಿಮಲ ಭವನಂ ಯೌವನಂ ಯೌವತಂ ವಾ**
**ಸರ್ವಂ ವ್ಯರ್ಥಂ ಮರಣಸಮಯೇ ಧರ್ಮ ಏಕಃ ಸಹಾಯಃ ॥**

ಸರ್ವಶ್ರೇಷ್ಠನಾದ ಶ್ರೀರಾಮಚಂದ್ರನನ್ನು ನಾನು ನಮಸ್ಕರಿಸುತ್ತೇನೆ. ಈ ಸಂಸಾರ ಎಂಬ ಸಮುದ್ರವನ್ನು ದಾಟಲು ಮೂರು ಲೋಕದ ಒಡೆಯನಾದ ಶ್ರೀರಾಮಚಂದ್ರ ಪ್ರಭುವಿನ 'ರಾಮ' ಎಂಬ ನಾಮವು ಒಂದು ನೌಕೆ ಆಗಿದೆ. ಈ ಸಂಸಾರದಲ್ಲಿ ಇರುವ ಪ್ರಾಣಿಗಳೆಲ್ಲವೂ ಈ ರಾಮನಿಂದಲೇ ಉತ್ಪನ್ನವಾಗಿರುತ್ತವೆ. ಮತ್ತು ಪಾಲಿಸಲ್ಪಟ್ಟಿರುತ್ತವೆ ಹಾಗೂ ಶೋಭಾಯಮಾನವಾಗಿರುತ್ತವೆ. ಎಲ್ಲ ಪ್ರಾಣಿಗಳಿಗೂ ಚೈತನ್ಯವನ್ನು ಪ್ರದಾನ ಮಾಡಿದ ಆ ಶ್ರೀರಾಮನು ಜ್ಞಾನ ಸ್ವರೂಪಿಯಾಗಿದ್ದಾನೆ. ಯಾವ ಪ್ರಮಾಣಗಳೂ ಅವನ ನಿಜವಾದ ಪೂರ್ಣ ಸ್ವರೂಪವನ್ನು ತಿಳಿಸಲಾರವು. ಆದರೆ, ವೇದವೇದಾಂತಗಳು ಮಾತ್ರ ಅವನ ಸ್ವರೂಪವನ್ನು ಯಥಾಯೋಗ್ಯವಾಗಿ ತಿಳಿಸಬಲ್ಲವು. ಇಂಥ ದೋಷರಹಿತನೂ ಪ್ರಕಾಶ ಸ್ವರೂಪನೂ ಆದ ಶ್ರೀರಾಮಚಂದ್ರನನ್ನು ನಮಸ್ಕರಿಸುತ್ತೇನೆ.

ಮಾನವನ ಮರಣ ಸಮಯದಲ್ಲಿ ಯಾರೂ ಸಹಾಯಕ್ಕೆ ಬರುವುದಿಲ್ಲ. ಧರ್ಮವೊಂದೇ ಮನುಷ್ಯರ ಮರಣ ಸಮಯದಲ್ಲೂ ಮರಣೋತ್ತರ ಕಾರ್ಯಗಳಲ್ಲಿಯೂ ಜೀವಿಗಳಿಗೆ ಸಹಾಯಕವಾಗಿರುವುದು. ಮಡದಿ, ಮಕ್ಕಳು, ದ್ರವ್ಯ, ಪ್ರೀತಿಯ ಬಂಧುವರ್ಗ, ಪರಿವಾರ ಜನ, ತಾಯಿತಂದೆ, ಅಣ್ಣತಮ್ಮಂದಿರು, ಅತ್ತೆಯ ಮನೆಯ ಜನರು, ನೌಕರ

ಚಾಕರರು, ಐಶ್ವರ್ಯ, ವಿದ್ಯೆ, ರೂಪ, ದೊಡ್ಡ ಮನೆ, ತಾರುಣ್ಯ, ತರುಣಿಯರ ಬಳಗ ಮುಂತಾದ ಯಾವುದೂ ಸಾಯುವ ಅತವಾ ಸತ್ತ ಮನುಷ್ಯನಿಗೆ ಸಹಾಯ ಮಾಡಲಾರವು. ಆದುದರಿಂದ ಅವೆಲ್ಲವೂ ಮನುಷ್ಯರ ಪಾಲಿಗೆ ಇದ್ದೂ ಇಲ್ಲದಿದ್ದಂತೆಯೇ ಸರಿ. ಎಲ್ಲವೂ ವ್ಯರ್ಥ. ಧರ್ಮವೊಂದೇ ಮಾನವರಿಗೆ ತಾರಕ ಮತ್ತು ಸಹಾಯಕ.

## ಹೊಗೆ ಇಲ್ಲದ ಯಜ್ಞ, ಮಾಡಿದವನೇ ಪ್ರಾಜ್ಞ

ಒಂದಾನೊಂದು ಸಮಯದಲ್ಲಿ ನೈಮಿಷಾರಣ್ಯಕ್ಕೆ ಪುರಾಣಗಳ ಪ್ರವಕ್ತಾರರಾದ ಸೂತರು ಆಗಮಿಸಿದರು. ಅಲ್ಲಿ ಈ ಮೊದಲೇ ಶೌನಕಾದಿ ಮಹರ್ಷಿಗಳು ನೆರೆದಿದ್ದರು. ಜ್ಞಾನ ಸತ್ರವನ್ನು ಪ್ರಾರಂಭಿಸಿದರು. ಬಹುದೀರ್ಘಕಾಲೀನ ಅವರು ಕೈಕೊಂಡ ಆ ಜ್ಞಾನಯಜ್ಞ. ಅವರ ಬಾಳಿನುದ್ದಕ್ಕೂ ನಡೆಯುವಂಥದ್ದು. ತತ್ವ ಜಿಜ್ಞಾಸೆ ಮತ್ತು ಪಾರಮಾರ್ಥಿಕ ವಿಷಯಗಳನ್ನು ತಿಳಿದುಕೊಳ್ಳಬೇಕೆಂಬ ಲವಲವಿಕೆಯೇ ಇದರ ಪ್ರೇರಕ ಶಕ್ತಿ. ಶೌನಕಾದಿ ಮಹರ್ಷಿಗಳು ಮೊದಲು ಮಾಡಿದ ಈ ಜ್ಞಾನ ಸತ್ರ ಒಂದು ವಿಚಿತ್ರ ಯಜ್ಞ. ಈ ಯಜ್ಞದಲ್ಲಿ ಹೋಮಕುಂಡ ಇಲ್ಲ. ಅಗ್ನಿ ಇಲ್ಲ. ಆಹುತಿ ಇಲ್ಲ. ಹೋಮದ ಹೊಗೆ ಇಲ್ಲ. ತುಪ್ಪ ಹೊಯ್ಯುವುದು ಇಲ್ಲ. ಕೇವಲ ಪುರಾಣ ಪುಣ್ಯಕಥೆಗಳ ಪಾಠ ಪ್ರವಚನ, ಶ್ರವಣ, ಮನನಗಳೇ ಈ ಯಜ್ಞದ ಮುಖ್ಯ ಕಾರ್ಯಗಳು. ತಾತ್ವಿಕ ಮತ್ತು ಧಾರ್ಮಿಕ ಹಾಗೂ ಪೌರಾಣಿಕ ವಿಷಯಗಳ ಶ್ರವಣ, ಕಥನ, ಪ್ರವಚನ, ಪಾರಾಯಣಗಳೇ ಈ ಜ್ಞಾನ ಯಜ್ಞದ ಪ್ರಧಾನ ಕೃತ್ಯಗಳು. ಇಂಥ ಜ್ಞಾನ ಕಾರ್ಯಗಳನ್ನು ಶೌನಕಾದಿ ಮುನಿಗಳು ನೈಮಿಷಾರಣ್ಯದ ಪುಣ್ಯಕ್ಷೇತ್ರದಲ್ಲಿ, ಹಮ್ಮಿಕೊಂಡಾಗ ಯಾದೃಚ್ಛಿಕವಾಗಿ ಸೂತಾಚಾರ್ಯರು ಆಗಮಿಸಿದ್ದನ್ನು. ನೋಡಿ ಅವರೆಲ್ಲರಿಗೂ ತುಂಬ ಹರ್ಷ. ಪುರಾಣ ಪ್ರವಚನ ಕಾರ್ಯದಲ್ಲಿ ನದೀಷ್ಣ, ಹಾಗೂ ಒಳ್ಳೆ ನಿಷ್ಣಾತ ಎಂದು ಪ್ರಸಿದ್ಧಿ ಇದ್ದಿತು ಆ ಸೂತಮುನಿಗೆ. ಸಾಕ್ಷಾತ್ ಶ್ರೀವೇದವ್ಯಾಸದೇವರ ಶ್ರೀ ಮುಖದಿಂದಲೇ ಸರ್ವಪುರಾಣಗಳನ್ನೂ ಕೇಳಿ ಓದಿ ತಿಳಿದುಕೊಳ್ಳುವ ಮಹಾಭಾಗ್ಯ ಸೂತ ಮುನಿಯದು. ಅವರೊಂದು ಜ್ಞಾನದ ತವನಿಧಿ. ಪುರಾಣ ಪ್ರಚನದಲ್ಲಿ ಎತ್ತಿದ ಕೈ. ಇಂಥ ವಿದ್ಯೆಯ ನಿಧಿ ತಾವು ಇದ್ದಲ್ಲಿಗೆ ನಡೆದು ಬಂದುದನ್ನು ಕಂಡು ಅತ್ಯಂತ ಹರ್ಷವಾಯಿತು ಆ ಶೌನಕಾದಿ ಮುನಿಗಳಿಗೆ. ತುಂಬು ಹೃದಯದಿಂದ ಸ್ವಾಗತಿಸಿದರು. ಆ ಎಲ್ಲ ವಿದ್ವಾಂಸರಾದ ಬ್ರಾಹ್ಮಣರು ಈ ಸೂತಜಾತಿಯ ಪುರಾಣ ಪ್ರವಚನಕಾರರನ್ನು ಅರ್ಘ್ಯ ಪಾದ್ಯಾದಿಗಳನ್ನು ಕೊಟ್ಟು ಉಪಚರಿಸಿದರು. ಎತ್ತರವಾದ ಆಸನದ ಮೇಲೆ ಕೂಡಿಸಿ ಸತ್ಕರಿಸಿದರು. ವಿನಯದಿಂದ ತಲೆಬಾಗಿಸಿ ಕೈಜೋಡಿಸಿ ಪ್ರಶ್ನೆಮಾಡಿದರು.

**ಶೌನಕಾದಿ ಮುನಿಗಳು:-** ಸೂತಾಚಾರ್ಯರೇ, ನೀವು ಆಕಸ್ಮಿಕವಾಗಿ ಇಲ್ಲಿಗೆ ಬಂದದ್ದು ನಮಗೆ ಪರಮ ಪ್ರಹರ್ಷ. ನಿಮ್ಮಂಥ ಜ್ಞಾನಿಗಳ ಸಹವಾಸ ದುರ್ಲಭ. ಇಲ್ಲಿಗೆ ನೀವು ಬಂದದ್ದು ನಮ್ಮೆಲ್ಲರ ಭಾಗ್ಯ. ಈಗ ನೀವು ನಮ್ಮ ಎಲ್ಲ ಪಾಪಗಳನ್ನು ತೊಡೆದು ಹಾಕುವ ಯಾವುದಾದರೂ ಪುಣ್ಯಕಥೆಯನ್ನು ನಿರೂಪಣೆ ಮಾಡಿರಿ.

**ಸೂತ:-** ಶೌನಕಾದಿ ಬ್ರಾಹ್ಮಣರೇ, ನಾನು ಪ್ರವಚನವನ್ನು ಪ್ರಾರಂಭಿಸುವುದಕ್ಕೆ ಮೊದಲು ವಿದ್ಯೆಯ ಅಧಿದೇವತೆಯಾದ ಸರಸ್ವತಿಯನ್ನು ವಂದಿಸುತ್ತೇನೆ. ಗಣಪತಿಯನ್ನು

ನಮಿಸುತ್ತೇನೆ. ಮತ್ತು ಎಲ್ಲ ದೇವತೆಗಳ ಅಡಿದಾವರೆಗಳಿಗೆ ನಮಸ್ಕರಿಸುತ್ತೇನೆ. ಹಾಗೂ ಸರ್ವನಿಯಾಮಕವಾದ ಧರ್ಮಸ್ವರೂಪಿ ಪರಮೇಶ್ವರನ ಚರಣಾರವಿಂದಗಳಿಗೆ ಪ್ರಣಾಮವನ್ನು ಸಲ್ಲಿಸಿ ಎಲ್ಲ ತೀರ್ಥಗಳಲ್ಲಿ ಶ್ರೇಷ್ಠವಾದ ತೀರ್ಥಕ್ಷೇತ್ರಗಳ ಮಹಿಮೆಯನ್ನು ಬಣ್ಣಿಸುತ್ತೇನೆ.

ಹಿಂದೆ ದ್ವಾಪರ ಯುಗದ ಕೊನೆಯ ಭಾಗದಲ್ಲಿ ನಡೆದ ಘಟನೆ. ಸತ್ಯವತಿಯ ಸತ್ಪುತ್ರರಾದ ಭಗವಾನ್ ವೇದವ್ಯಾಸರು ಒಮ್ಮೆ ಧರ್ಮರಾಜನ ಆಸ್ಥಾನಕ್ಕೆ ದಯಮಾಡಿಸಿದರು. ಪಂಚಪಾಂಡವರು ಸಂಭ್ರಮದಿಂದ ಎದ್ದು ಸ್ವಾಗತ ಸತ್ಕಾರ ಮಾಡಿದರು. ಭಕ್ತಿಯಿಂದ ವಂದಿಸಿದರು. ಆದರದಿಂದ ಉಚ್ಚ ಆಸನದ ಮೇಲೆ ಕೂಡಿಸಿ ಅವರ ಮುಖದಿಂದ ಅನೇಕ ಪವಿತ್ರ ಕಥೆಗಳನ್ನು ಶ್ರವಣ ಮಾಡಿದರು. ಅನಂತರ ಕೊನೆಗೆ ಧರ್ಮರಾಜನು ವ್ಯಾಸಮಹರ್ಷಿಗಳನ್ನು ಕೇಳಿಕೊಂಡ.

**ಧರ್ಮರಾಜ:-** ಪೂಜ್ಯರೇ, ತಾವು ಈ ವರೆಗೆ ನಮಗೆ ಅನೇಕ ದಿವ್ಯ ಕಥೆಗಳನ್ನು ನಿರೂಪಿಸಿದಿರಿ. ಈಗ ಧರ್ಮಾರಣ್ಯದ ಮಾಹಾತ್ಮ್ಯದ ಕಥೆಯನ್ನು ಕೇಳಬೇಕು ಎಂದು ನನ್ನ ಅಪೇಕ್ಷೆ. ತಾವು ದಯಮಾಡಿ ನಿರೂಪಿಸಬೇಕು.

**ವೇದವ್ಯಾಸ:-** ಪಾಂಡುನಂದನ, ಬಗೆಬಗೆಯ ಮರಬಳ್ಳಿಗಳಿಂದ ಶೋಭಿತವಾದ ಈ ಧರ್ಮಾರಣ್ಯವು ಎರಡು ಅರ್ಥದಲ್ಲಿ ಫಲವತ್ತರವಾಗಿವೆ. ಅಲ್ಲಿ ಬೆಳೆಯುವ ಮರಗಳಲ್ಲಿ ರಸಭರಿತವಾದ ಅನೇಕ ಫಲಗಳು ಅರ್ಥಾತ್ ಹಣ್ಣುಕಾಯಿಗಳು ಶೋಭಿಸುವಂತೆ, ನಿರಂತರ ಪುಣ್ಯಫಲವನ್ನು ಈ ಕ್ಷೇತ್ರವು ಮಾನವರಿಗೆ ಒದಗಿಸುವದು. ಈ ಧರ್ಮಾರಣ್ಯವು ನಿಜವಾಗಿಯೂ ಒಂದು ಅಭಯಾರಣ್ಯವೇ ಆಗಿರುತ್ತದೆ. ಇಲ್ಲಿಯ ಪಸುಗಳು ಹುಲಿಗಳೊಡನೆ ಒಡನಾಟವಾಡುವವು. ಇಲಿ ಬೆಕ್ಕುಗಳು ಕೂಡಿಯೇ ಕ್ರೀಡೆಮಾಡುವವು. ಹಾವು ಕಪ್ಪೆಗಳು ಒಡನಾಡಿಯಾಗಿರುವವು. ಮನುಷ್ಯರು ರಾಕ್ಷಸರು ಇಲ್ಲಿ ಪರಸ್ಪರ ಪ್ರೀತಿ ವಿಶ್ವಾಸದಿಂದ ಹೊಂದಿಕೊಂಡು ನಡೆಯುವರು. ಈ ಧರ್ಮಾರಣ್ಯವು ಪರಮ ಪಾವನ. ದೇವತೆಗಳು ಕೂಡ ಇದನ್ನು ಹೊಗಳುವರು.

**ಧರ್ಮರಾಜ:-** ದೇವತೆಗಳು ಈ ಕ್ಷೇತ್ರಕ್ಕೆ ಧರ್ಮಾರಣ್ಯ ಎಂದು ನಾಮಕರಣವನ್ನು ಏಕೆ ಮಾಡಿದರು? ಮತ್ತು ಎಂದು ಮಾಡಿದರು?

**ವೇದವ್ಯಾಸ:-**'ರಾಜರ್ಷಿಯೇ, ಹಿಂದೆ ಒಮ್ಮೆ ಯಮಧರ್ಮನು ಅತ್ಯಂತ ಉಗ್ರವಾದ ತಪಸ್ಸನ್ನು ಆಚರಿಸಿದ. ಅವನ ಈ ತಪಶ್ಚರ್ಯೆಯ ಉಗ್ರತೆಯನ್ನು ಕಂಡು ಹೆದರಿ ಬ್ರಹ್ಮ, ದೇವೇಂದ್ರ ಮೊದಲಾದ ಎಲ್ಲ ದೇವತೆಗಳು ಕೈಲಾಸ ಪರ್ವತಕ್ಕೆ ಹೋದರು. ಅಲ್ಲಿ ಲೋಕ ಕ್ಷೇಮಂಕರನಾದ ಶಂಕರ ಪರ್ವತರಾಜ ನಂದಿನಿಯಾದ ಉಮಾದೇವಿಯೊಂದಿಗೆ ಒಂದು ಮರದಡಿಯ ತಣ್ಣೆಳಲಿನಲ್ಲಿ ಕುಳಿತುಕೊಂಡಿದ್ದ. ಎಲ್ಲ ದೇವತೆಗಳೂ ಭಕ್ತಿಯಿಂದ ಅವರನ್ನು ಸ್ತುತಿಸಿದರು. ಮತ್ತು ಶ್ರದ್ಧೆಯಿಂದ ವಂದಿಸಿದರು. ಅವರ ಭಕ್ತಿಯುಕ್ತವಾದ ಸ್ತೋತ್ರಪಾಠವನ್ನು ಕೇಳಿ ಪರಮಪ್ರೀತನಾದ ಆ ಪರಮೇಶ್ವರ. ಮತ್ತು ಪ್ರಶ್ನಿಸಿದ- ''ದೇವತೆಗಳೇ, ನಿಮ್ಮ ಅಪೇಕ್ಷೆ ಏನು? ನಿಮಗೆ ಏನು ಬೇಕಾಗಿದೆ?''

**ಬ್ರಹ್ಮ:-** ''ಮಹಾದೇವ, ಯಮಧರ್ಮನು ಅತ್ಯುಗ್ರ ತಪಸ್ಸನ್ನು ಕೈಕೊಂಡಿದ್ದಾನೆ. ಅದಕ್ಕೆ ಕಾರಣ ಏನು ಇರಬಹುದು? ದೇವತೆಗಳ ಯಾವ ಅತ್ಯುನ್ನತ ಸ್ಥಾನವನ್ನು

ಪಡೆಯುವದ್ದಕ್ಕಾಗಿ ನಡೆದಿದೆ ಅವನ ಈ ಉಗ್ರ ತಪಸ್ಸು? ಅದರಿಂದ ಹೆದರಿ ಹೋಗಿದ್ದಾರೆ ಈ ಇಂದ್ರಾದಿ ದೇವತೆಗಳು. ಈ ಘೋರತಪಸ್ಸಿನಿಂದ ಅವನನ್ನು ಪರಾವರ್ತಿಸಲು ಏನು ಮಾಡಬೇಕು? ಆ ಧರ್ಮರಾಜನನ್ನು ಈ ಸಾಹಸದಿಂದ ಹಿಂದೆಗೆಯಿಸಲು ನೀವೇ ಸಮರ್ಥರು.''

**ಮಹಾದೇವ:-** ''ದೇವತೆಗಳೇ, ನಾನು ನಿಜವನ್ನೇ ನುಡಿಯುತ್ತೇನೆ. ನನ್ನ ಮಾತನ್ನು ನಂಬಿರಿ. ನಿಮಗೆ ಆ ಯಮಧರ್ಮನಿಂದ ಯಾವ ಭಯವೂ ಇಲ್ಲ. ಎಂದೂ ಅಪಾಯ ವಾಗುವುದಿಲ್ಲ. ನಿರಪಾಯ ಪ್ರಾಣಿ, ನಿರುಪದ್ರವಿ ಜೀವಿ ಆ ಯಮಧರ್ಮ.''

ಮಹಾದೇವರ ವಿಶ್ವಾಸದ ನುಡಿ ದೇವತೆಗಳ ಭಯವನ್ನು ದೂರಗೊಳಿಸಿತು. ಆದರೆ ದೇವರಾಜ ಇಂದ್ರನಿಗೆ ಮಾತ್ರ ಪೂರ್ಣ ಸಮಾಧಾನ ಆಗಲಿಲ್ಲ. ಯಮಧರ್ಮನು ಅತ್ಯುಗ್ರ ತಪೋನುಷ್ಠಾನ ಕೈಕೊಂಡು ತನ್ನ ಸುರ ಸಾಮ್ರಾಜ್ಯವನ್ನು ಕಬಳಿಸಲಿಕ್ಕಾಗಿಯೇ ಹೊಂಚು ಹಾಕಿದ್ದಾನೆ ಎಂದು ಅವನ ಗ್ರಹಿಕೆ. ತನ್ನ ಈ ಮನದ ಅಳುಕನ್ನು ಸುರಾಚಾರ್ಯ ಬ್ರಹಸ್ಪತಿಯ ಮುಂದೆ ತೋಡಿಕೊಂಡ. ಅದಕ್ಕೆ ಅವರು ''ಧರ್ಮರಾಜನ ತಪೋಭಂಗಕ್ಕಾಗಿ ಸ್ವರ್ಗಲೋಕದ ಅಂಗನೆಯರ ಪಡೆಯನ್ನು ಕಳಿಸಿ ಕೊಡು'' ಎಂಬ ಸೂಚನೆಯಿತ್ತರು. ಕೂಡಲೇ ಶಚೀಪತಿಯು ವರ್ಧಿನೀ ಎಂಬ ಅಪ್ಸರೆಯನ್ನು ಕರೆದು ಹೇಳಿದ.

**ಇಂದ್ರ:-** ''ಸುರಲೋಕದ ಶೃಂಗಾರ ಮೂರ್ತಿಯಾದ ವರ್ಧಿನಿ, ನೀನು ಉಳಿದ ಅಪ್ಸರೆಯರೊಂದಿಗೆ ಭೂಲೋಕಕ್ಕೆ ತೆರಳಿರಿ. ಅಲ್ಲಿಯ ಧರ್ಮಾರಣ್ಯದಲ್ಲಿ ಯಮಧರ್ಮನು ತಪಂಗೈಯುತ್ತಿದ್ದಾನೆ. ನಿಮ್ಮ ಹಾವ ಭಾವ ಮತ್ತು ವಿಲಾಸ ವಿನೋದಗಳಿಂದ ಅವನ ಮನವನ್ನು ಮರುಳುಮಾಡಿರಿ. ತಪಸ್ಸನ್ನು ಭಗ್ನಗೊಳಿಸಿರಿ.''

ದೇವರಾಜನ ಈ ಆದೇಶವನ್ನು ಕೇಳಿ ವರ್ಧಿನಿ ಎಂಬ ಅಪ್ಸರೆಯು ಎದ್ದು ನಿಂತು ಹೇಳಿದಳು.

**ವರ್ಧಿನಿ:-** ''ಅಮರನಾಥ. ನಾವು ಇದ್ದದ್ದು ದೇವತಾ ಕಾರ್ಯ ಸಿದ್ಧಿಗಾಗಿಯೇ, ನಿಮ್ಮ ಕಾರ್ಯಸಿದ್ಧಿಗಾಗಿ ಮೀಸಲು ಈ ನಮ್ಮ ಬದುಕು. ನಮ್ಮ ರೂಪ, ಸೌಂದರ್ಯ, ಅಲಂಕಾರ ಹಾಗೂ ಶೃಂಗಾರ ಚೇಷ್ಟೆ ಮುಂತಾಗಿ ಎಲ್ಲ ರೀತಿಯಿಂದಲೂ ಆ ಯಮಧರ್ಮನ ಮನಸ್ಸನ್ನು ಮೋಹಗೊಳಿಸಲು, ಅದರಿಂದ ಅವನ ತಪಸ್ಸನ್ನು ಭಂಗಗೊಳಿಸಲು ನಾವು ಯತ್ನಿಸುತ್ತೇವೆ.'' ಹೀಗೆ ಹೇಳಿ ವರ್ಧಿನಿ ಎಂಬ ಅಪ್ಸರೆಯು ಧರ್ಮಾರಣ್ಯಕ್ಕೆ ಬಂದಳು. ಧರ್ಮರಾಜನು ತಪಸ್ಸು ಮಾಡುವ ಸ್ಥಾನಕ್ಕೆ ಬಂದು ವಸ್ತ್ರಾಲಂಕಾರಗಳಿಂದ ಭೂಷಿತಳಾದಳು. ಕಣ್ಣಿಗೆ ಕಾಡಿಗೆ ಹಚ್ಚಿ ಚೆನ್ನಾಗಿ ಅಲಂಕಾರ ಮಾಡಿಕೊಂಡು ತಪಸ್ಸನ್ನು ಆಚರಿಸುವ ಧರ್ಮರಾಜನ ಎದುರು ಸುಳಿದಾಡಿದಳು. ಮನ ಮೋಹಕವಾದ ವಿವಿಧಭಾವ ಭಂಗಿಗಳಿಂದ ನೃತ್ಯಮಾಡಿದಳು. ನಾಟ್ಯ ಸರಸ್ವತಿಯಂತಿದ್ದ ಅವಳ ಕುಣಿತ ಮಣಿತ, ಭಾವ ಭಂಗಿ, ಇಲಾಸ ವಿಭ್ರಮಗಳಿಂದ ಮರುಳುಗೊಂಡಂತೆ ತೋರಿತು ಧರ್ಮರಾಜನ ಮನಸ್ಸು. ತನ್ನ ಚೆಲುವಿಕೆಗೆ ಮಾರುಹೋಗಿ ಮನಸೋತು ತನ್ನ ಎಲ್ಲ ವಿಧ ಶೃಂಗಾರ ಚೇಷ್ಟೆಗಳನ್ನು ಮುಗ್ಧ ಮನಸ್ಸಿನಿಂದ ನಿಟ್ಟಿಸಿ ನಿರುಕಿಸುತ್ತಲಿರುವನೆಂದು ತಿಳಿದು ಯಮಧರ್ಮನನ್ನು ವ್ಯೆಯ್ಯಾರದಿಂದಲೇ ಕೇಳಿದಳು ವರ್ಧಿನಿ.

**ವರ್ಧಿನಿ:-** ''ಪ್ರಭು, ನಿಮ್ಮ ಈ ತಪಸ್ಸಿನ ಉಗ್ರತೆಯೇ ದೇವೇಂದ್ರನ ವ್ಯಗ್ರತೆಗೆ ಕಾರಣವಾಗಿದೆ. ನಿಮ್ಮ ಈ ತಪೋನುಷ್ಠಾನದ ರೀತಿ ಸುರಪುರದ ನಾಗರಿಕರಲ್ಲಿ ಭೀತಿಯನ್ನು ಹುಟ್ಟಿಸಿದೆ. ನಿಮ್ಮ ಈ ಅತ್ಯುಗ್ರ ತಪಶ್ಚರ್ಯೆಯ ಭಂಗಕ್ಕಾಗಿ ನಾನು ಇಲ್ಲಿಗೆ ಬಂದದ್ದು.

**ಧರ್ಮರಾಜ:-** 'ಸುಂದರಿ, ನೀನು ಸತ್ಯವನ್ನು ನುಡಿದಿರುವೆ. ನಿನ್ನ ಯಥಾರ್ಥ ವಚನವನ್ನು ಕೇಳಿ ನಾನು ಪ್ರೀತನಾಗಿದ್ದೇನೆ. ಪಾಪಕರ್ಮ ಮಾಡುವ ದುರ್ಬುದ್ಧಿಯ ದುರಾತ್ಮರ ಪಾಲಿಗೆ ನಾನು ಯಮದಂಡದಿಂದ ಶಾಸನಮಾಡುವ ಕಾಲಾಂತಕ. ಆದರೆ ಇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಂಡು ಧರ್ಮಕರ್ಮಗಳನ್ನು ಆಚರಿಸುವವರಿಗೆ ನಾನು ಧರ್ಮ ಸ್ವರೂಪ. ನೀನು ತಿಳಿದುಕೊಂಡಂತೆ ನಿನ್ನ ರೂಪವಿಲಾಸಗಳಿಗೆ ನಾನು ಮನಸೋತಿಲ್ಲ. ನನ್ನ ಮನಸ್ಸು ನಿನಗೆ ಮರುಳಾಗಿಲ್ಲ. ''ಇಂದ್ರನಿಗೆ ಏಕೆ ನನ್ನ ಮೇಲೆ ಅಪನಂಬಿಕೆ? ನನ್ನ ತಪೋಭಂಗಕ್ಕಾಗಿ ಈ ಎರಳೆಗಣ್ಣಿನ ತರಳೆಯನ್ನು ಏಕೆ ಇಲ್ಲಿಗೆ ಕಳಿಸಿದ್ದಾನೆ?'' ಎಂದು ಕಣ್ಣಿಟ್ಟು ನೋಡಿದೆ ಅಷ್ಟೆ. ನನ್ನ ನಿರೀಕ್ಷಣೆಯಲ್ಲಿ ಕೌತುಕಮಾತ್ರ ಇದೆ. ಕಾಮುಕತೆ ಇಲ್ಲ. ಆದರೆ ನೀನು ನಿಜವನ್ನು ನುಡಿದೆ. 'ತಪೋಭಂಗಕ್ಕಾಗಿ ನಿಂತಿದ್ದೇನೆ' ಎಂದು ಸತ್ಯವನ್ನು ಹೇಳಿದೆ. ಆದ್ದರಿಂದ ನನಗೆ ಸಂತಸವಾಗಿದೆ.ಆದಕ್ಕಾಗಿ ನಿನಗೆ ಬೇಕಾದ ವರ ಬೇಡು. ನನ್ನ ಮನಸ್ಸನ್ನು ಮರುಳುಗೊಳಿಸುವ ಹವ್ಯಾಸವನ್ನು ತೊರೆದುಬಿಡು. ಯಾವ ಪದವಿಯ ಆಸೆಯಿಂದಲೂ ನಾನು ಈ ತಪಸ್ಸನ್ನು ಕೈಕೊಂಡಿಲ್ಲ ಎಂದು ತಿಳಿಸು ಆ ನಿನ್ನ ದೇವಲೋಕದ ದೊರೆಗೆ. ನನ್ನ ಮೇಲೆ ಅವಿಶ್ವಾಸ ಬೇಡ ಆ ಸುರರಾಜನಿಗೆ. ಕೇವಲ ಕೈಲಾಸಪತಿಯ ಕೃಪಾಕಟಾಕ್ಷಕ್ಕಾಗಿ ಇದೆ ಈ ನನ್ನ ತಪೋನುಷ್ಠಾನ ಎಂಬ ಸತ್ಯ ಸಂಗತಿಯನ್ನು ಅರಿಕೆ ಮಾಡು ಆ ಅಮರಲೋಕದ ಅರಸನಲ್ಲಿ. ಈಗ ನಿನಗೆ ಬೇಕಾದ ವರವನ್ನು ಬೇಡು. ನೀಡುತ್ತೇನೆ.

**ವರ್ಧಿನಿ:-** ''ಧರ್ಮರಾಜ, ಲೋಕಹಿತಕ್ಕಾಗಿ ನಾನು ಅಮರಾವತಿಯಲ್ಲಿ ಸ್ಥಿರವಾಗಿ ನೆಲಿಸುವಂತೆ ಮಾಡು. ಆ ಸುರಲೋಕದ ವಾಸವು ಅಸ್ಥಿರ. ಅಲ್ಲಿ ಸ್ಥಿರತೆಯೇ ದುರ್ಮಿಳ. ಆ ನಾಕಲೋಕದಲ್ಲಿ ನನಗೆ ಒಂದು ನಿರಂತರ ನೆಲೆನಿಲ್ಲುವ ಅವಕಾಶವನ್ನು ಕರುಣಿಸು. ಮತ್ತು ನೀನು ತಪೋನುಷ್ಠಾನ ಕೈಕೊಂಡ ಈ ನೆಲದಲ್ಲಿ ನಾನು ಇಲ್ಲಿಗೆ ಬಂದುದರ ನೆನಪಾಗಿ ಒಂದು ತೀರ್ಥವು ಏರ್ಪಡಲಿ. ಅದಕ್ಕೆ ನನ್ನ ಹೆಸರು ಇರಲಿ. ಅದರಲ್ಲಿ ಮಿಂದವರ ಪಾಪಗಳೆಲ್ಲವೂ ದೂರವಾಗಲಿ. ಈ ನನ್ನ ತೀರ್ಥದ ತಡಿಯಲ್ಲಿ ನೀಡಿದ ದಾನ, ಮಾಡಿದ ತಪಸ್ಸು, ಆಚರಿಸಿದ ಹೋಮ ಹವನ ಮುಂತಾದ ಧರ್ಮ ಕಾರ್ಯಗಳು ಅಕ್ಷಯ ಫಲವನ್ನು ನೀಡುವಂತಾಗಲಿ.''

ವರ್ಧಿನಿಯ ಈ ಬೇಡಿಕೆಗೆ 'ತಥಾಸ್ತು' ಎಂದು ಹೇಳಿದ ಯಮಧರ್ಮ. ತನಗೆ ಬಯಸಿದ ವರಗಳನ್ನು ಕೊಟ್ಟು ಕರುಣಿಸಿದ ಆ ಧರ್ಮಮೂರ್ತಿಗೆ ಮೂರು ಪ್ರದಕ್ಷಿಣೆ ಹಾಕಿದಳು ಆ ವರ್ಧಿನಿ. ಮತ್ತೆ ಮತ್ತೆ ಭಕ್ತಿಯಿಂದ ನಮಸ್ಕಾರ ಮಾಡಿ ಸ್ವರ್ಗಕ್ಕೆ ನಡೆದಳು. ಆ ವಿಲಾಸಿನಿ ಅಲ್ಲಿ ಹೋಗಿ ಅರಮೇಶ್ವರನಿಗೆ ''ದೇವರಾಜ, ಆ ಸೂರ್ಯಕುಮಾರನಾದ ಯಮಧರ್ಮನು ಕೇವಲ ಪರಮೇಶ್ವರನ ಪ್ರಸಾದಕ್ಕಾಗಿ ತಪಿಸುತ್ತಿದ್ದಾನೆ. ಅವನಿಗೆ ಬೇರೆ ಯಾವ ಹಂಬಲವೂ ಇಲ್ಲ. ಯಾವ ಹೆಣ್ಣಿನ ಬಿಂಕ ಬಿನ್ನಾಣಗಳಿಗೆ ಬಗ್ಗುವ ಜಾತಿಯಲ್ಲ. ನಿರ್ವಿಕಾರ ಮೂರ್ತಿ ಆ ಯಮಧರ್ಮ ನನಗೇ ವರವಿತ್ತು ಕರುಣೆದೋರಿ ಕೊಟ್ಟು ಕಳುಹಿದ್ದಾನೆ'' ಎಂದು ಹೇಳಿದಳು.

## ಮೃತ್ಯುಂಜಯನ ಸಾಕ್ಷಾತ್ಕಾರ

ಅನಂತರ ಇಂದ್ರಾದಿ ದೇವತೆಗಳು ಮಹೇಶ್ವರನಲ್ಲಿ ಮೊರೆ ಇಟ್ಟರು. ಅವರ ಬಿನ್ನಹವನ್ನು ಮನ್ನಿಸಿ ಧರ್ಮರಾಜನು ತಪಸ್ಸನ್ನು ಮಾಡುವಲ್ಲಿ ತಾನಾಗಿ ಆಗಮಿಸಿದ ಆ ಮಹಾದೇವ. ನಂದಿಯನ್ನು ಏರಿಕೊಂಡುಬಂದ ಆ ಚಂದ್ರಶೇಖರನು ಪ್ರಸನ್ನ ಮನಸ್ಸಿನಿಂದ ತಪೋಮಗ್ನನಾದ ಧರ್ಮರಾಜನನ್ನು ಕುರಿತು ನುಡಿದ- "ಧರ್ಮರಾಜ, ನಿನ್ನ ಈ ಉಗ್ರತಪಸ್ಸು ನನಗೆ ಸಂತಸವನ್ನು ತಂದಿದೆ. ಸಾಕು ಮಾಡು ಈ ನಿನ್ನ ದೇಹ ದಂಡನೆಯನ್ನು. ನಿನಗೆ ಬೇಕಾದ ವರ ಬೇಡು. ನಾನು ನಿನ್ನ ತಪಸ್ಸಿನಿಂದ ತುಷ್ಟನಾಗಿ ನಿನ್ನ ಇಷ್ಟಾರ್ಥವನ್ನು ಈಡೇರಿಸಲು ನಿನ್ನ ಮುಂದೆ ಬಂದು ನಿಂತಿದ್ದೇನೆ. ನಿನ್ನ ಬೇಡಿಕೆ ಏನು? ಬೇಡಿಕೊ."

ಪ್ರಸನ್ನನಾಗಿ ತನಗೆ ಪ್ರತ್ಯಕ್ಷ ದರ್ಶನವನ್ನು ನೀಡಲು ಬಂದ ಪರಮೇಶ್ವರನನ್ನು ಕಂಡು ಪರಮಾನಂದವಾಯಿತು ಆ ಯಮಧರ್ಮನಿಗೆ. ತಾನು ಈವರೆಗೂ ತಪಸ್ಸನ್ನು ಮಾಡುತ್ತ ಕುಳಿತುಕೊಂಡ ಬಿದಿರು ಮೆಳೆಯ ಪೊದೆಯಿಂದ ಎದ್ದು ಹೊರಗೆ ಬಂದ. ಸಾಷ್ಟಾಂಗ ವಂದನೆಗೈದ. ಭಕ್ತಿಯಿಂದ ಕೈಜೋಡಿಸಿ ಗದ್ಗದ ಕಂಠದಿಂದ ಸ್ತೋತ್ರಮಾಡಿದ ಆ ವೃಷಭಧ್ವಜನನ್ನು.

**ಯಮಧರ್ಮ:-** ತ್ರಿಪುರಾಂತಕ, ನೀನು ನನ್ನ ಮೇಲೆ ಪ್ರಸನ್ನನಾಗಿದ್ದರೆ, ನಾನು ನಿಂತು ತಪಸ್ಸನ್ನು ಮಾಡಿದ ಈ ಕ್ಷೇತ್ರದಲ್ಲಿ ನನ್ನ ಹೆಸರಿನಿಂದಲೇ ನೀನು ವಾಸಮಾಡು. ಈ ಕ್ಷೇತ್ರವು ಮುಂದೆ ಧರ್ಮಾರಣ್ಯ ಎಂಬ ಹೆಸರಿನಿಂದ ಪ್ರಸಿದ್ಧವಾಗಲಿ. ಎರಡು ಯೋಜನ ವಿಸ್ತಾರವಾದ ಈ ಪುಣ್ಯಕ್ಷೇತ್ರವು ನನ್ನ ಹೆಸರಿನಿಂದ ಧರ್ಮತೀರ್ಥ ಎಂದು ಪ್ರಖ್ಯಾತವಾಗಲಿ.

## ಧರ್ಮೇಶ್ವರನ ಮಹಿಮೆ

**ಮಹಾದೇವ:-** "ಭಕ್ತಾಗ್ರೇಸರ, ನಿನ್ನ ಇಷ್ಟದಂತೆ ಆಗಲಿ. ನಾನು ಈ ಸ್ಥಳವನ್ನು ಬಿಟ್ಟು ಕದಲುವುದಿಲ್ಲ. ಇಲ್ಲಿಯ ತೀರ್ಥದಲ್ಲಿ ಒಂದು ಅಂಶದಿಂದ ನಾನು ನಿರಂತರವಾಗಿ ನೆಲಿಸುವೆನು. ಮತ್ತು ವಿಶ್ವೇಶ್ವರ ಎಂಬ ಮಹಾಲಿಂಗದ ರೂಪದಿಂದ ನಾನು ಪ್ರಕಟವಾಗುವೆನು ಈ ಸ್ಥಳದಲ್ಲಿ". ಹೀಗೆ ಹೇಳಿ ಮಹಾದೇವನು ಅಂತರ್ಧಾನವನ್ನು ಐದಿದ. ಅನಂತರ ಅಲ್ಲಿ ಒಂದು ಅದ್ಭುತವಾದ ಲಿಂಗವು ಪ್ರಕಟವಾಯಿತು. ಭಕ್ತಿಯಿಂದ ಅಲ್ಲಿ ಅದನ್ನು ಪ್ರತಿಷ್ಠೆಗೊಳಿಸಿದ ಯಮಧರ್ಮ. ಧರ್ಮರಾಜನಿಂದ ಸ್ಥಾಪಿತವಾದ ಆ ಲಿಂಗವು 'ಧರ್ಮೇಶ್ವರ' ಎಂಬ ಹೆಸರಿನಿಂದ ಪ್ರಸಿದ್ಧಿಪಡೆಯಿತು. ಅದರ ಬಳಿಯಲ್ಲಿಯೇ 'ಧರ್ಮವಾಪಿ' ಎಂಬ ಕೊಳವನ್ನು ನಿರ್ಮಿಸಿದ ಆ ಧರ್ಮರಾಜ. ಈ ಧರ್ಮವಾಪಿಯಲ್ಲಿ ಸ್ನಾನಮಾಡುವದರಿಂದ ಚಾತುರ್ಥ್ಯಜ್ವರ, ಧನುರ್ವಾತ, ಶೀತಜ್ವರ, ಮುಂತಾದ ಬೇನೆಗಳೆಲ್ಲವೂ ವಾಸಿಯಾಗುವವು. ಇಲ್ಲಿ ಸ್ನಾನಮಾಡಿ ಧರ್ಮೇಶ್ವರನನ್ನು ಪೂಜಿಸಿ ಯಮತರ್ಪಣವನ್ನು ನೀಡಬೇಕು. ಹಾಗೂ ಈ ತೀರ್ಥದ ತಡಿಯಲ್ಲಿ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಮಾಡಿ ಶಮೀಪತ್ರ ಪ್ರಮಾಣದಲ್ಲಿ ಪಿಂಡದಾನ ಮಾಡಿದರೆ ಮನುಷ್ಯನಿಗೆ ಪುನಃ ಗರ್ಭವಾಸ ದುಃಖವು ಮರುಕಳಿಸುವದಿಲ್ಲ. ಮತ್ತು ಈ ಧರ್ಮವಾಪಿಯಲ್ಲಿ ಸ್ನಾನ ತರ್ಪಣ ಮಾಡಿದರೆ ಬರ್ಹಿಷದ, ಅಗ್ನಿಷ್ವಾತ್ತ, ಆಜ್ಯಪ, ಸೋಮಪ ಮುಂತಾಗಿ ಹೆಸರುಳ್ಳ ಪಿತೃಗಣದ ಎಲ್ಲ ಸದಸ್ಯರು ಸಂತೃಪ್ತರಾಗುವರು. ಶ್ರಾದ್ಧ ಕರ್ತೃವಿಗೆ ಈಪ್ಸಿತವಾದ

ವರಪ್ರದಾನವನ್ನು ಮಾಡುವರು. ವಿಷಯ ವಾಸನೆಯಿಂದ ಲೋಲುಪನಾಗಿ ಪರಸ್ತ್ರೀ ಗಮನ, ಸುವರ್ಣಚೌರ್ಯ, ಹಿಂಸೆ, ಪರದ್ರೋಹ, ಗುರುದ್ರೋಹ ಮುಂತಾದ ಘೋರ ಪಾಪಗಳನ್ನು ಎಸಗಿದವರು ಈ ಧರ್ಮಾರಣ್ಯಕ್ಕೆ ಬಂದು, ಧರ್ಮವಾಪಿಯಲ್ಲಿ ಮಿಂದು, ಧರ್ಮೇಶ್ವರನನ್ನು ಪೂಜಿಸಿದರೆ ಆ ಎಲ್ಲ ಪಾಪಗಳಿಂದಲೂ ಮುಕ್ತರಾಗುವರು. ಈ ಪವಿತ್ರವಾದ ತೀರ್ಥವು ಮಾನವರ ಎಲ್ಲ ಕಾಮನೆಗಳನ್ನೂ ಸಾಂಸಾರಿಕರ ಎಲ್ಲ ಬೇಡಿಕೆಗಳನ್ನೂ ಈಡೇರಿಸುವದು. ಸಾಧಕ ಪುರುಷರಿಗೆ ಸಿದ್ಧಿಯನ್ನು ಪ್ರದಾನ ಮಾಡುವ ಈ ಐಕ್ಯೆಕ ತೀರ್ಥವು ಕಾಮಿತಾರ್ಥ ಪ್ರದಾಯಕವಾದ ದಿವ್ಯ ತೀರ್ಥವಾಗಿದೆ.

## ಸ್ನಾನ, ಸಂಧ್ಯೆ, ತರ್ಪಣ ವೈಶ್ವದೇವ ಬಲಿಹರಣ ಸದಾಚಾರಗಳ ಮಹತ್ವ

**ವೇದವ್ಯಾಸ:-** ಈ ಧರ್ಮಾರಣ್ಯದಲ್ಲಿ ಹಿಂದೆ ಹದಿನೆಂಟು ಸಾವಿರ ಪರಿಶುದ್ಧ ಕುಲದ ಬ್ರಾಹ್ಮಣರು ಇರುತ್ತಿದ್ದರು. ಶೀಲ, ಸದಾಚಾರ, ಕುಲ, ಕರ್ಮ, ಧರ್ಮಗಳಿಂದ ಅತ್ಯಂತ ಪರಿಶುದ್ಧರಾದ ಈ ವಿಪ್ರಶ್ರೇಷ್ಠರನ್ನು ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ತ್ರಿಮೂರ್ತಿಗಳು ಧರ್ಮಪ್ರಸಾರಕ್ಕಾಗಿ ಮೊದಲು ಉತ್ಪಾದಿಸಿದರು. ಇವರು ಬುದ್ಧಿಯಿಂದ ಶ್ರೇಷ್ಠರೂ ಕರ್ಮದಿಂದ ಪವಿತ್ರರೂ ಆಗಿದ್ದರು. ಬ್ರಹ್ಮನನ್ನು ಅರಿತಿದ್ದರು. ಬಹ್ಮನಿಷ್ಠರೇ ಆಗಿದ್ದರು. ಆದುದರಿಂದ ಈ ಬ್ರಹ್ಮಪರಾಯಣರಾದ ಈ ಮುನಿಗಳು ಪೂರ್ಣ ಅರ್ಥದಲ್ಲಿ ಬ್ರಾಹ್ಮಣರು ಆಗಿದ್ದರು.

ಇಂಥ ಸದಾಚಾರಿ ಬ್ರಾಹ್ಮಣರು ಎಲ್ಲ ಕರ್ಮಕಾಂಡ, ಜ್ಞಾನಕಾಂಡಗಳಲ್ಲಿ ಯೋಗ್ಯರಾದ ಅಧಿಕಾರಿಗಳು. ಆಚಾರ ಭ್ರಷ್ಟನಾದ ಬ್ರಾಹ್ಮಣ ಶೂದ್ರನಿಗಿಂತ ಕಡೆ. ಅವನಿಗೆ ಯಾವ ಧರ್ಮಕರ್ಮಗಳಲ್ಲಿಯೂ ಅಧಿಕಾರ ಇರುವುದಿಲ್ಲ. ಬ್ರಾಹ್ಮಣನಾದವನಿಗೆ ಜ್ಞಾನ, ಅದೂ ಕೂಡ ಬ್ರಹ್ಮವಿಷಯಕವಾಗಿ ಇರಬೇಕು. ಆಚಾರ ವಿಚಾರ ಎಲ್ಲವೂ ಧರ್ಮಪೂತವಾಗಿರಬೇಕು. ಇಂಥ ಸದಾಚಾರ, ಸದ್ವಿಚಾರ, ಬ್ರಹ್ಮಜ್ಞಾನ, ಬ್ರಹ್ಮನಿಷ್ಠೆ ಇದ್ದವನು ಮಾತ್ರ ಬ್ರಾಹ್ಮಣ ಎಂದು ಕರೆಯಲ್ಪಡುತ್ತಾನೆ. ರಾಗ ದ್ವೇಷಗಳಿಂದ ಒಡಗೂಡಿ ಸ್ವೈರಾಚಾರದಲ್ಲಿ ತೊಡಗಿ, ಧರ್ಮದ್ವೇಷ ದೇವದ್ರೋಹ ಮಾಡುವ, ಮಾನವನು ಎಂಥ ಉಚ್ಚ ಕುಲದಲ್ಲಿ ಹುಟ್ಟಿದರೂ ಬ್ರಾಹ್ಮಣನು ಆಗಲಾರ. ಕೇವಲ ವೇದಶಾಸ್ತ್ರಗಳ ಅಧ್ಯಯನದಿಂದ ಮಾತ್ರ ಯಾವನೂ ವಿದ್ವಾನ್ ಎನಿಸಲಾರ.

ಉಚ್ಚಜಾತಿಯಲ್ಲಿ ಹುಟ್ಟಿರದಿದ್ದರೂ ಕುಲಹೀನನಾದರೂ ರಾಗದ್ವೇಷ ರಹಿತನಾಗಿ ಸದಾಚಾರವನ್ನು ಪರಿಪಾಲನ ಮಾಡುತ್ತ ಅಹಿಂಸಾ, ಅಸ್ತೇಯ, ಸತ್ಯ, ಪರೋಪಕಾರ, ಭೂತದಯೆ, ಧರ್ಮಶ್ರದ್ಧೆ, ಮುಂತಾದ ಸದ್ಗುಣಗಳಿಂದ ಒಡಗೂಡಿದ ಮಾನವನು ಎಲ್ಲರಿಗೂ ಆದರಣೀಯನಾಗುತ್ತಾನೆ. ದುರಾಚಾರಿಯೂ ದುರ್ವಿಚಾರಿಯೂ ಎಲ್ಲರಿಂದಲೂ ನಿಂದನೀಯನಾಗುತ್ತಾನೆ. ಆದುದರಿಂದ ಮಾನವನು ಯಾವುದೇ ಜಾತಿಯಲ್ಲಿ ಹುಟ್ಟಿದರೂ ಮುಖ್ಯವಾಗಿ ತನ್ನ ವರ್ಣಾಶ್ರಮಕ್ಕೆ ಉಚಿತವಾದ ಆಚಾರ ವಿಚಾರಗಳನ್ನು ಪಾಲಿಸಿಕೊಂಡು ಧರ್ಮಾತ್ಮನಾಗಿ 'ಧಾರ್ಮಿಕ' ಎಂಬ ಹೆಸರಿಗೆ ಅರ್ಹನಾಗಬೇಕು. ಈ ಧಾರ್ಮಿಕ ಮಾನವನು ಧರ್ಮ ಆಚಾರಗಳನ್ನು ತೊರೆದ, ಬ್ರಾಹ್ಮಣ, ವೈಶ್ಯ, ಕ್ಷತ್ರಿಯನಿಗಿಂತ ಶ್ರೇಷ್ಠನಾಗಿರುತ್ತಾನೆ. ಧಾರ್ಮಿಕನಾಗಲು ಮೊದಲು ಮಾನವರು

ಯಮನಿಯಮಗಳನ್ನು ಪಾಲನಮಾಡಬೇಕು. ಧರ್ಮಶಾಸ್ತ್ರದಲ್ಲಿ ಹತ್ತು ಗುಣಗಳು 'ಯಮ' ಎಂದೂ ಹತ್ತು ಗುಣಗಳು 'ನಿಯಮ'ವೆಂದೂ ಹೇಳಲ್ಪಟ್ಟಿವೆ. ಈ ಹತ್ತು ಯಮ ಹಾಗೂ ಹತ್ತು ನಿಯಮಗಳನ್ನು ಪಾಲಿಸುವವರು ಧರ್ಮಾತ್ಮ ಎನಿಸುವರು. ಎಲ್ಲ ಜಾತಿಯವರೂ ಈ ಯಮನಿಯಮಗಳನ್ನು ಪಾಲಿಸಿ ಧರ್ಮಜೀವನವನ್ನು ನಡೆಸಬೇಕು.

**'ಸತ್ಯಂ ಕ್ಷಮಾऽರ್ಜವಂ ಧ್ಯಾನಮಾನೃಶಂಸ್ಯಮಹಿಂಸನಂ ।**
**ದಮಃ ಪ್ರಸಾದೋ ಮಾಧುರ್ಯಂ ಮೃದುತೇತಿ ಯಮಾ ದಶ ॥**
**ಶೌಚಂ, ಸ್ನಾನಂ, ತಪೋ ದಾನಂ, ಮೌನೇಜ್ಯಾಧ್ಯಯನಂ ವ್ರತಂ ।**
**ಉಪೋಷಣೋಪಸ್ಥದಂಡೌಚ ದಶೈತೇ ನಿಯಮಾಃ ಸ್ಮೃತಾಃ ॥**

ಸತ್ಯ, ಕ್ಷಮೆ, ಸರಳ ಸ್ವಭಾವ, ದೇವರ ಧ್ಯಾನ, ಕ್ರೂರತನವಿಲ್ಲದ ಪ್ರಾಣಿಗಳ ಮೇಲೆ ದಯೆಯನ್ನು ತೋರುವುದು, ಯಾರ ಹಿಂಸೆಯನ್ನು ಮಾಡದಿರುವುದು, ಮನಸ್ಸನ್ನು ಮತ್ತು ಇಂದ್ರಿಯಗಳನ್ನು ಅಂಕಿತದಲ್ಲಿಟ್ಟುಕೊಳ್ಳುವುದು. ಮನಸ್ಸನ್ನು ಪ್ರಸನ್ನವಾಗಿರಿಸುವುದು, ಮಧುರವಾಗಿ ನುಡಿಯುವುದು, ಅದರಂತೆ ನಡೆಯುವುದು, ಎಲ್ಲ ಪ್ರಾಣಿಗಳ ವಿಷಯದಲ್ಲಿ ಸಹಾನುಭೂತಿಪರನಾಗಿ ಇದ್ದು ಯಥಾಶಕ್ತಿ ಸಂಕಟದಲ್ಲಿರುವವರಿಗೆ ಸಹಾಯ ಸಲ್ಲಿಸುವುದು ಇವು ಹತ್ತು ಯಮ ಎಂದು ಕರೆಯಲ್ಪಡುವವು. ಇದರಂತೆ ನಿಯಮಗಳು ಕೂಡ ಹತ್ತು ಬಗೆಯಾಗಿರುತ್ತವೆ. ಹತ್ತು ನಿಯಮಗಳಲ್ಲಿ ಶೌಚವು ಮೊದಲನೆಯದೂ ಮುಖ್ಯವೂ ಆಗಿರುತ್ತದೆ. ಶೌಚ ಎಂದರೆ ಮಡಿ ಮೈಲಿಗೆ ಎಂಜಲು ಮುಸುರೆ ತಿಳಿದು ಬಟ್ಟೆ, ದೇಹ, ಮನೆ, ಮನಸ್ಸು ಎಲ್ಲವನ್ನೂ ಪರಿಶುದ್ಧವಾಗಿ ಸ್ವಚ್ಛವಾಗಿ ಕೊಳೆಇಲ್ಲದೇ ಇಟ್ಟುಕೊಳ್ಳುವುದು. ಇದಕ್ಕೆ ಶೌಚ ಎನ್ನುತ್ತಾರೆ. ಇದಕ್ಕೆ ಪೂರಕವಾಗಿದೆ ನಿಯಮದಲ್ಲಿ ಎರಡನೆಯದಾದ ಸ್ನಾನ.

ಈ ಸ್ನಾನವು ಜಲಸ್ನಾನ, ಧ್ಯಾನಸ್ನಾನ, ಮಂತ್ರಸ್ನಾನ, ಎಂದು ಹಲವು ತೆರನಾಗಿದೆ ತಿಳಿನೀರಿನ ಕೊಳ, ಕೆರೆ, ಹೊಕ್ಕರಣಿ, ಸರೋವರ ನದಿಗಳಲ್ಲಿ ಮಿಂದು ದೇಹವನ್ನು ನಿಯಮಿತವಾಗಿ ತ್ರಿಕಾಲದಲ್ಲಿ ಕನಿಷ್ಠ ಒಂದು ಸಲವಾದರೂ ತೊಳೆದುಕೊಂಡು ನಿರ್ಮಲವಾಗಿ ಇಡುವುದಕ್ಕೆ ಬಾಹ್ಯಸ್ನಾನ ಎನ್ನುವರು. ದೇವರ ನೆನವರಿಕೆ ಪವಿತ್ರವಾದ ಮಂತ್ರಗಳ ಅರ್ಥಾನುಸಂಧಾನ, ವೇದಶಾಸ್ತ್ರೋಕ್ತವಾದ ತತ್ವಗಳ ಚಿಂತನ, ಭಗವಂತನ ನಾಮಸ್ಮರಣ, ಅಧ್ಯಾತ್ಮಿಕ ತತ್ವಾರ್ಥಗಳ ಮನನ ಇದೆಲ್ಲವೂ ಧ್ಯಾನ ಸ್ನಾನ ಅಥವಾ ಮಂತ್ರಸ್ನಾನ ಎನಿಸುತ್ತವೆ.

ನಿಯಮಗಳಲ್ಲಿ ಮೂರನೆಯದಾದ ತಪಸ್ಸು ಕೂಡ ಮನೋಮಯ, ವಾಙ್ಮಯ ಕ್ರಿಯಾಮಯ ಎಂದು ಮೂರು ಬಗೆಯಾಗಿದೆ. ಮನಸ್ಸಿನಲ್ಲಿ ವೇದಶಾಸ್ತ್ರೋಕ್ತವಾದ ಭಗವಂತನ ದಿವ್ಯವಾದ ಗುಣಗಳನ್ನು ಧ್ಯಾನಮಾಡುತ್ತ ಇರುವುದು ಮನೋಮಯ ತಪಸ್ಸು ಎನಿಸುವುದು. ಶಾಸ್ತ್ರ ಗ್ರಂಥಗಳನ್ನು ಸ್ವಾಧ್ಯಾಯ ರೂಪವಾಗಿ ನಿರಂತರ ಪಾಠ ಪ್ರವಚನ, ಉಪದೇಶ, ಗ್ರಂಥ ಲೇಖನ, ಪುರಾಣ, ಉಪನ್ಯಾಸ ರೂಪಗಳಿಂದ ಅಧ್ಯಯನ ಅಧ್ಯಾಪನ ಮಾಡುತ್ತಲಿರುವುದು ವಾಙ್ಮಯ ತಪಸ್ಸು ಎಂದು ಕರೆಯಲ್ಪಡುತ್ತದೆ. ಕೃಚ್ಛ್ರ, ಚಾಂದ್ರಾಯಣ, ಸಾಂತಪನ, ಉಪವಾಸ, ವಿಷ್ಣುಪಂಚಕ, ಬಗೆಬಗೆಯ ವ್ರತಾನುಷ್ಠಾನ ಮುಂತಾದವುಗಳನ್ನು ಮಾಡುವದು, ಮನೆ ಮಾರು ತೊರೆದು ಅರಣ್ಯದಲ್ಲಿದ್ದು ಆಹಾರವನ್ನು ನಿಯಮಿತಗೊಳಿಸಿ ಮಂತ್ರವನ್ನು ಜಪಿಸುವುದು, ಬಗೆಬಗೆಯ ತಪೋನುಷ್ಠಾನಗಳನ್ನು ಗೈಯುವುದು ಕ್ರಿಯಾಮಯ ತಪಸ್ಸು ಎಂದು ಕರೆಯಲ್ಪಡುವುದು.

ನಾಲ್ಕನೇಯದು ದಾನ, ಐದನೆಯದು ಮೌನ, ಆರನೆಯದು ಯಜ್ಞ. ಇದು ಜ್ಞಾನ ಯಜ್ಞ ದ್ರವ್ಯಯಜ್ಞ ಎಂದು ಎರಡು ಬಗೆಯದಾಗಿದೆ. ಏಳನೆಯದು ಸ್ವಾಧ್ಯಾಯ ಎಂದರೆ ತಾನು ವೇದಶಾಸ್ತ್ರ ಪುರಾಣಗಳನ್ನು ಓದಿ ಮನೆಯಲ್ಲಿ ವಿದ್ಯಾರ್ಥಿಗಳನ್ನು ಇಟ್ಟುಕೊಂಡು ನಿರಂತರವೂ ಅವರಿಗೆ ಮನೆಯಲ್ಲಿ ಪಾಠ ಹೇಳುವುದೂ, ಮತ್ತು ಬೇರೆಯವರಿಗೂ ಧರ್ಮೋಪದೇಶವನ್ನು ನೀಡಿ ಜ್ಞಾನಪ್ರಸಾರ ಮಾಡುವುದು ಇದಕ್ಕೆ ಅಧ್ಯಯನ ಎನ್ನುತ್ತಾರೆ. ನಿಯಮಗಳಲ್ಲಿ ಐದನೆಯದೆಂದು ಹಿಂದೆ ಹೇಳಲಾದ ಮೌನವು ಎರಡು ವಿಧವಾಗಿದೆ. ಭಗವಂತನಲ್ಲಿಯೇ ಮನಸ್ಸನ್ನು ಇಟ್ಟು ಕೇವಲ ಭಗವಂತನ ನಾಮಸ್ಮರಣ ಮಾಡುತ್ತ ಹೊರಗಿನ ಮಾತುಕತೆಗಳನ್ನು ತೊರೆದು ಸಂಪೂರ್ಣ ಮೌನಿಯಾಗಿರುವುದು ಒಂದು ವಿಧ ಮೌನ. ಮಿತವಾದ ಮಾತುಗಳನ್ನು ಆಡುತ್ತ ಅನಾವಶ್ಯಕ ಮಾತು ಕತೆ, ಹರಟೆ, ಪರನಿಂದೆ, ಲೋಕವಾರ್ತೆ ಮುಂತಾದವುಗಳನ್ನೆಲ್ಲ ತ್ಯಜಿಸಿ ಅನಿವಾರ್ಯವಾದಲ್ಲಿ ಮಾತ್ರ ಕಾರ್ಯನಿರ್ವಾಹವಾಗುವಷ್ಟರ ಮಟ್ಟಿಗೆ ವಾಗ್ ವ್ಯಾಪಾರವನ್ನು ಪರಿಮಿತಗೊಳಿಸಿ ಭಗವಂತನ ಧ್ಯಾನ, ನಾಮಸ್ಮರಣ, ತತ್ತ್ವೋಪದೇಶ, ಪಾಠ ಪ್ರವಚನಾದಿಗಳಿಗೆ ತನ್ನ ವಾಕ್‌ಶಕ್ತಿಯನ್ನೆಲ್ಲ ಮೀಸಲಾಗಿ ಇಡುವುದು ಮೌನ ಎನಿಸುವುದು.

ಇದರಂತೆ ಆರನೆಯದಾದ ಇಜ್ಯಾ ಎಂದರೆ ಯಜ್ಞವು ಜ್ಞಾನಯಜ್ಞ ದ್ರವ್ಯ ಯಜ್ಞ, ಎಂದು ಎರಡು ಬಗೆಯದಾಗಿರುವುದು. ಗುರುಹಿರಿಯರ ಸೇವೆ, ಲೋಕೋಪಕಾರ ಮುಂತಾದ ಕಾರ್ಯಗಳೂ ಕೂಡ ಯಜ್ಞ ಎಂದು ಕರೆಯಲ್ಪಡುತ್ತವೆ. ಯಜ-ದೇವಪೂಜಾ, ಸಂಗತಿಕರಣ, ಯಜನ, ದಾನೇಷು ಎಂಬ ಧಾತುವಿನಿಂದಾಗಿದೆ ಯಜ್ಞ ಎಂಬ ಶಬ್ದ. ದೇವರಪೂಜೆ, ಸತ್ಸಂಗತಿ, ಯಜ್ಞ, ದಾನ, ಧರ್ಮ ಮುಂತಾದವುಗಳೆಲ್ಲವೂ ಯಜ್ಞ ಶಬ್ದಾರ್ಥ ಆಗಿರುತ್ತದೆ. ನಿಯಮಿತವಾಗಿ ಪ್ರತಿದಿನವೂ ದೇವರಪೂಜೆ, ಸಜ್ಜನರ ಸಹವಾಸ, ಜ್ಞಾನಯಜ್ಞ, ದಾನ ಮುಂತಾದವುಗಳನ್ನು ಮಾಡುವುದು ಹತ್ತು ನಿಯಮಗಳಲ್ಲಿಯ ಇಜ್ಯಾ ಶಬ್ದದಿಂದ ಅಭಿಪ್ರೇತವಾಗಿರುತ್ತದೆ.

ಎಂಟನೆಯದಾದ ವ್ರತವು ಶಾಕವ್ರತ, ದಧಿ ವ್ರತ, ಪಯೋವ್ರತ, ಧಾನ್ಯ ವ್ರತ, ಕೃಚ್ಛ್ರ, ಚಾಂದ್ರಾಯಣ, ಎಂದು ಮುಂತಾಗಿ ಬಗೆಬಗೆಯದಾಗಿದೆ. ಪರೋಪಕಾರ ವ್ರತ, ಅಹಿಂಸಾವ್ರತ, ಸತ್ಯವ್ರತ, ತ್ಯಾಗವ್ರತ, ದಯಾವ್ರತ ಎಂದೂ ಹಲವಾರು ತೆರನಾಗಿದೆ. ಒಂಬತ್ತನೆಯದಾದ ಉಪೋಷಣ ಎಂದರೆ ಉಪವಾಸವು ಏಕಾದಶೀ, ಸೋಮವಾರ, ಶಿವರಾತ್ರಿ, ವಿಷ್ಣುಪಂಚಕ, ಎಂದು ಅನೇಕ ರೀತಿಯದಾಗಿ ಧರ್ಮಶಾಸ್ತ್ರದಲ್ಲಿ ವಿವರಿಸಲ್ಪಟ್ಟಿದೆ. ಕೊನೆಯದಾದ ಉಪಸ್ಥದಂಡ ಎಂದರೆ ಎಲ್ಲ ಇಂದ್ರಿಯಗಳನ್ನು ಮನಸ್ಸಿನಿಂದ ನಿಯಂತ್ರಿಸಿ ಮನಸ್ಸನ್ನು ಕೂಡ ಅಧ್ಯಾತ್ಮಪ್ರವಣವನ್ನಾಗಿ ಮಾಡುವುದು. ಅವು ಹತ್ತು ಯಮ, ಇವು ಹತ್ತು ನಿಯಮ ಕೂಡಿ ಇಪ್ಪತ್ತು ಗುಣಗಳು ಯಮನಿಯಮ ಎಂದು ಶಾಸ್ತ್ರದಲ್ಲಿ ಕರೆಯಲ್ಪಡುತ್ತವೆ. ಈ ಯಮನಿಯಮ ಪಾಲನ ಮಾಡುವ ಮನುಷ್ಯನು ಯಾವ ಜಾತಿಯವನೇ ಇರಲಿ ಧರ್ಮಾತ್ಮ ಎಂದು ಪೂಜಿಸಲ್ಪಡುತ್ತಾನೆ.

ನಿಜವಾದ ಧಾರ್ಮಿಕನು ಈ ಎಲ್ಲ ಯಮನಿಯಮ ಆಚರಿಸುವುದಕ್ಕಿಂತ ಮೊದಲು ಮನುಷ್ಯನನ್ನು ಯವಾಗಲೂ ಮುತ್ತಿ ಆಕ್ರಮಿಸುವ ಆರು ವೈರಿಗಳನ್ನು ಗೆಲ್ಲಬೇಕು. ಕಾಮ, ಕ್ರೋಧ ಮದ, ಮೋಹ, ಲೋಭ, ಮಾತ್ಸರ್ಯ, ಇವೇ ಮಾನವನ ಷಡ್ವೈರಿಗಳು.

ಈ ಅರಿಷಡ್ವರ್ಗಗಳನ್ನು ಗೆದ್ದರೆ ಆ ಪುರುಷನು ನಿಜವಾಗಿಯೂ ವೀರ ಎನಿಸುವನು. ಕಾಮ ಕ್ರೋಧಾದಿಗಳನ್ನು ಗೆದ್ದವನು ಹೋದಲ್ಲೆಲ್ಲ ವಿಜಯಶಾಲಿಯಾಗುವನು. ಮಾನವನು ಇನ್ನೊಬ್ಬರಿಗೆ ಉಪದ್ರವವನ್ನು ಮಾಡದೇ ಯಾರಿಗೂ ಕಷ್ಟಕೊಡದೇ ಯಥಾಶಕ್ತಿ ಧರ್ಮಾಚರಣೆಯನ್ನು ಮಾಡಬೇಕು. ಧರ್ಮವನ್ನು ಸರಿಯಾಗಿ ರಕ್ಷಿಸಿದರೆ ಅದು ಮುಂದೆ ಮಾನವನಿಗೆ ಬದುಕಿ ಇದ್ದಾಗಲೂ ಮರಣೋತ್ತರ ಕಾಲದಲ್ಲಿಯೂ ಏಕೈಕ ಸಹಾಯಕವಾಗಿ ಸಂರಕ್ಷಕವಾಗಿ ಒದಗಿ ಬರುವುದು.

**"ಜಾಯತೇ ಚೈಕಲಃ ಪ್ರಾಣೀ ಮ್ರಿಯತೇ ಚ ತಥೈಕಲಃ ।**
**ಏಕಲಃ ಸುಕೃತಂ ಭುಂಕ್ತೇ ಭುಂಕ್ತೇ ದುಷ್ಕೃತಮೇಕಲಃ ॥**
**ದೇಹೇ ಪಂಚತ್ವಮಾಪನ್ನೇ ತ್ಯಕ್ತ್ವೈಕಂ ಕಾಷ್ಠ-ಲೋಷ್ಠವತ್ ।**
**ಬಾಂಧವಾ ವಿಮುಖಾ ಯಾಂತಿ ಧರ್ಮೋ ಯಾಂತಮನುವ್ರಜೇತ್ ॥"**

ಪ್ರಾಣಿಯು ಹುಟ್ಟುವಾಗ ಒಬ್ಬನೇ ಹುಟ್ಟುತ್ತಾನೆ. ಮರಣ ಹೊಂದುವಾಗಲೂ ಒಬ್ಬನೇ ಸಾಯುತ್ತಾನೆ. ತಾನು ಮಾಡಿದ ಪಾಪ ಪುಣ್ಯಗಳನ್ನು ತಾನೊಬ್ಬನೇ ಭೋಗಿಸುತ್ತಾನೆ. ಮನುಷ್ಯನು ಮರಣವನ್ನು ಹೊಂದಿದಾಗ ಅವನ ಈ ದೇಹವನ್ನು ಕಟ್ಟಿಗೆ, ಕಲ್ಲಿನಂತೆ ಇಲ್ಲಿಯೇ ಸ್ಮಶಾನದಲ್ಲಿ ಬಿಟ್ಟು ಬಂಧುಬಾಂಧವರೆಲ್ಲರೂ ಮೋರೆ ತಿರುವಿಕೊಂಡು ಮನೆಗೆ ಹೋಗುತ್ತಾರೆ. ಯಾರೂ ಸತ್ತ ಮನುಷ್ಯನನ್ನು ಹಿಂಬಾಲಿಸುವುದಿಲ್ಲ. ಮೃತ್ಯುವಿನ ಅನಂತರ ಮಾನವನನ್ನು ಬೆಂಬಿಡದೇ ಹಿಂಬಾಲಿಸುವ ಒಂದೇ ಒಂದು ವಸ್ತು ಎಂದರೆ ಧರ್ಮ. ಆದುದರಿಂದ ಧರ್ಮದಿಂದ ಸಂಗ್ರಹಿಸಿದ ಪುಣ್ಯವು ಈ ಲೋಕದಲ್ಲಿ ಸಹಾಯಕವಾಗುವದು. ಪರಲೋಕದಲ್ಲಿಯೂ ತಾರಕವಾಗುವುದು. ಈ ಧರ್ಮದ ಸಹಾಯದಿಂದ ಮಾತ್ರ ಮಾನವನು ನರಕದ ಘೋರ ದುಃಖದಿಂದ ಪಾರಾಗಲು ಸಾಧ್ಯ. ಅದಕ್ಕಾಗಿ ವಿವೇಕಿಯಾದ ಮನುಷ್ಯನು ಸಜ್ಜನರ ಸಹವಾಸ ಮಾಡಬೇಕು. ನೀಚರ ಸಂಗವನ್ನು ತೊರೆಯಬೇಕು ಧರ್ಮವನ್ನು ಪಾಲಿಸಬೇಕು. ಸದಾಚಾರದ ಸಾಂಪ್ರದಾಯಿಕವಾದ ನಿಯಮಗಳನ್ನು ಅನುಸರಿಸಬೇಕು.

ಪ್ರತಿದಿನವೂ ರಾತ್ರಿಯ ಕೊನೆಯ ಭಾಗವಾದ ಉಷಃಕಾಲದಲ್ಲಿ ಏಳಬೇಕು. ಅದಕ್ಕೆ ಬ್ರಾಹ್ಮಮುಹೂರ್ತ ಎನ್ನುವರು. ಎದ್ದಕೂಡಲೇ ಗಣಪತಿ, ಶಿವ, ಪಾರ್ವತಿ, ಶ್ರೀರಂಗ, ವಿಷ್ಣು, ಲಕ್ಷ್ಮಿ, ಬ್ರಹ್ಮ ಮುಂತಾದ ದೇವತೆಗಳನ್ನು ನಾಮೋಚ್ಚಾರ ಪೂರ್ವಕವಾಗಿ ಧ್ಯಾನಮಾಡಿ ನಮಸ್ಕರಿಸಬೇಕು. ಅನಂತರ ಇಂದ್ರಾದಿ ದೇವತೆಗಳನ್ನೂ ವಶಿಷ್ಠ ವಿಶ್ವಾಮಿತ್ರಾದಿ ಋಷಿಮುನಿಗಳನ್ನೂ ಸ್ಮರಿಸಬೇಕು. ಗಂಗಾ, ಯಮುನಾ, ಗೋದಾವರಿ, ಕೃಷ್ಣವೇಣಿ ಮುಂತಾದ ನದಿಗಳನ್ನು ನೆನೆಯಬೇಕು. ಶ್ರೀಶೈಲ, ಹಿಮಾಲಯ, ಮೇರು ಮಂದರ ಮೊದಲಾದ ಪರ್ವತಗಳನ್ನೂ ಕ್ಷೀರ ಸಮುದ್ರ, ಲವಣಸಮುದ್ರ, ಮಾನಸ ಸರೋವರ, ಕಾಮಧೇನು ಮುಂತಾದವುಗಳನ್ನೂ ಸ್ಮರಿಸಬೇಕು. ಅನಂತರ ಧ್ರುವ ಪ್ರಲ್ಹಾದ ನಾರದ ಮುಂತಾದ ಭಗವದ್ಭಕ್ತರನ್ನು ಧ್ಯಾನಿಸಬೇಕು. ಮನದಲ್ಲಿಯೇ ವಂದಿಸಬೇಕು. ಅನಂತರ ತಾಯಿತಂದೆ, ಗುರುಗಳು ಬದುಕಿದ್ದರೆ ಅವರಿಗೆ ಪಾದಮುಟ್ಟಿ ನಮಸ್ಕಾರ ಮಾಡಬೇಕು. ಬದುಕಿ ಇಲ್ಲದಿದ್ದರೆ ಮನದಲ್ಲಿಯೇ ಅವರ ಹೆಸರು ಹೇಳಿ ಮಾನಸಿಕ ಪ್ರಣಾಮವನ್ನು ಮಾಡಬೇಕು.

ಹೀಗೆ ಪ್ರಾತಃಕಾಲದ ಪ್ರಾರ್ಥನೆ ವಂದನೆಗಳನ್ನೂ ಮಾಡಿ ಶೌಚಾದಿಕಾರ್ಯಕ್ಕಾಗಿ ಮನೆಬಿಟ್ಟು ಹೊರಬೀಳಬೇಕು. ನೈಋತ್ಯದಿಕ್ಕಿಗೆ ತನ್ನ ಊರಿನಿಂದ ನೂರು ಮಾರಿನಷ್ಟಾದರೂ ದೂರ ಹೋಗಬೇಕು. ತಾನು ಇದ್ದುದು ಪಟ್ಟಣವಾದರೆ ಆರು ನೂರು ಮಾರು ದೂರ ಮಲವಿಸರ್ಜನೆಗೆ ಹೋಗಬೇಕು. ಬ್ರಾಹ್ಮಣ, ಗೋ, ಅಗ್ನಿ ಅಥವಾ ಬೇರೆ ಜನ ಸಂಚಾರಮಾಡುವ ಸ್ಥಳದಲ್ಲಿ, ಹರಗಿದ ಹೊಲದಲ್ಲಿ, ರಸ್ತೆಯ ಮೇಲೆ, ಜನರು ಕೂಡುವ, ನಿಲ್ಲುವ ಸ್ಥಳದಲ್ಲಿ ಮಲಮೂತ್ರ ವಿಸರ್ಜನೆ ಮಾಡಬಾರದು. ಮಲವಿಸರ್ಜನೆ ಮಾಡುವುದಕ್ಕಿಂತ ಮೊದಲು ಆ ಸ್ಥಳದಲ್ಲಿ ಹುಲ್ಲು ಮಣ್ಣು ಹಾಕಿ ವಿಸರ್ಜನೆಯ ನಂತರವೂ ಹುಲ್ಲು ಮಣ್ಣು ಹಾಕಿ ಮುಚ್ಚಬೇಕು. ಮಲವಿಸರ್ಜನ ಅನಂತರದಲ್ಲಿ ಶುದ್ಧವಾದ ಮಣ್ಣಿನಿಂದ ಮೃತ್ತಿಕಾ ಶೌಚವನ್ನು ಮಾಡಿಕೊಳ್ಳಬೇಕು. ಐದು ಸಲ ಮಣ್ಣು ಹಾಗೂ ನೀರಿನಿಂದ ಪೃಷ್ಠ ಮಾರ್ಜನವನ್ನು ಮಾಡಿಕೊಳ್ಳಬೇಕು. ಆ ಬಳಿಕ ಎರಡೂ ಕಾಲುಗಳಿಗೂ ಒಂದೊಂದು ಸಲ ಮಣ್ಣು ಹಾಕಿ ನೀರಿನಿಂದ ತೊಳೆದುಕೊಳ್ಳಬೇಕು. ಎರಡೂ ಕೈಗಳಿಗೆ ಮೂರು ಮೂರು ಸಲ ಮಣ್ಣು ಹಚ್ಚಿ ತೊಳೆಯಬೇಕು. ದುರ್ಗಂಧವು ಹೋಗುವವರೆಗೆ ಮತ್ತೆ ಮತ್ತೆ ಮಣ್ಣು ನೀರುಗಳಿಂದ ಪೃಷ್ಠ, ಕೈ, ಕಾಲುಗಳನ್ನು ತೊಳೆದು ಕೊಳ್ಳಬೇಕು. ಬ್ರಹ್ಮಚಾರಿಗಳು ಇದರ ಎರಡು ಪಟ್ಟು, ವಾನಪ್ರಸ್ಥಾಶ್ರಮಿಗಳು ಮೂರು ಪಟ್ಟು, ಸನ್ಯಾಸಿಗಳು ನಾಲ್ಕು ಪಟ್ಟು ಮೃತ್ತಿಕಾಶೌಚವನ್ನು ಮಾಡಿಕೊಳ್ಳಬೇಕು. ಹಗಲು ಹೊತ್ತು ಹೇಳಿದ್ದರ ಅರ್ಧ ರಾತ್ರಿಕಾಲದಲ್ಲಿ ಮೃತ್ತಿಕಾಶೌಚವು ವಿಹಿತವಾಗಿದೆ. ಅದರ ಅರ್ಧ ಪರಸ್ಥಳದಲ್ಲಿಯೂ ಹಾಗೂ ಮಾರ್ಗ ಅದರ ಮಧ್ಯದಲ್ಲಿಯೂ ಶೌಚವಿಧಾನ ಹೇಳಲ್ಪಟ್ಟಿದೆ. ರೋಗಿಗೆ ಅದಕ್ಕಿಂತ ಅರ್ಧ ಅಂದರೆ ಅತ್ಯಂತ ಕಡಿಮೆ ಶೌಚದ ನಿಯಮಗಳು.

ಹೀಗೆ ಮಲಮೂತ್ರ ವಿಸರ್ಜನೆಯ ನಂತರ ಗಂಡೂಷ ವಿಧಿ ಹಾಗೂ ಮುಖಮಾರ್ಜನಾದಿಗಳನ್ನು ಮಾಡಿಕೊಂಡು ಪವಿತ್ರ ಭೂಮಿಯಲ್ಲಿ ಕುಳಿತು ಪೂರ್ವ ಅಥವಾ ಉತ್ತರದಿಕ್ಕಿಗೆ ಮುಖಮಾಡಿ ಆಚಮನ ಮಾಡಬೇಕು. ಸ್ನಾನ ಭೋಜನ, ಜಲಪಾನಗಳನ್ನು ಮಾಡಿದನಂತರ ಅವಶ್ಯವಾಗಿ ಆಚಮನವನ್ನು ಮಾಡಬೇಕು. ಮತ್ತು ಎಲ್ಲ ಶುಭಕಾರ್ಯಗಳ ಪ್ರಾರಂಭದಲ್ಲಿಯೂ ಆಚಮನಮಾಡಬೇಕು. ಮಲಗಿ ಎದ್ದ ಬಳಿಕ, ಹಳೆ ಬಟ್ಟೆಯನ್ನು ಬದಲಿಸಿದರೆ, ಹೊಸಬಟ್ಟೆಯನ್ನು ಉಟ್ಟುಕೊಂಡರೆ, ಅಮಂಗಳ ವಸ್ತು ನೋಡಿದರೆ, ಅಪವಿತ್ರ ವಸ್ತುವನ್ನು ಮುಟ್ಟಿದರೆ, ಎಲ್ಲ ವಿಧ ಧರ್ಮಕಾರ್ಯಗಳ ಮೊದಲು ಹಾಗೂ ಕೊನೆಗೂ ಎರಡೆರಡು ಆಚಮನಗಳನ್ನು ಮಾಡಬೇಕು. ಹೀಗೆ ಆಚಮನ ಮಾಡಿದ ನಂತರ ಧರ್ಮಶಾಸ್ತ್ರದಲ್ಲಿ ಹೇಳಿದ ನಿಯಮಗಳನ್ನನುಸರಿಸಿ ಹಲ್ಲುಗಳನ್ನು ಉಜ್ಜಬೇಕು. ಹನ್ನೆರಡು ಸಲ ನೀರಿನಿಂದ ಮುಕ್ಕಳಿಸಿ ಗಂಡೂಷ ವಿಧಿಯನ್ನು ಪಾಲಿಸಬೇಕು. ಹಲ್ಲುಜ್ಜಲಿಕ್ಕಾಗಿ ಹನ್ನೆರಡು ಬೆರಳು ಉದ್ದವಾದ ಹಸಿರು ಬಣ್ಣದ ದಂತಕಾಷ್ಠದ ಮುಂದಿನ ಭಾಗವನ್ನು ಮೊದಲು ಹಲ್ಲಿನಿಂದ ಜಗಿದು ಕುಂಚದಂತೆ ಮಾಡಿಕೊಂಡು ಅದರಿಂದ ಹಲ್ಲನ್ನು ತಿಕ್ಕಿ ಸ್ವಚ್ಛಮಾಡಿಕೊಳ್ಳಬೇಕು.

## ಪ್ರಾತಃಸ್ನಾನದ ಪುಣ್ಯಫಲ

ಅನಂತರ ನದೀ ಸರೋವರ ಹೊಕ್ಕರಣಿ ಎಲ್ಲಿಯಾದರೂ ಯಾವದಾದರೂ ಒಂದು ಜಲಾಶಯಕ್ಕೆ ಹೋಗಿ ಸ್ನಾನಮಾಡಬೇಕು. ಇಲ್ಲದಿದ್ದರೆ ಮನೆಯಲ್ಲಿಯೇ ಗಂಗಾದಿ ತೀರ್ಥಗಳನ್ನು ನೆನೆಯುತ್ತ ಶುದ್ಧ ನೀರಿನಿಂದ ಸ್ನಾನಮಾಡಬೇಕು. ಪ್ರತಿದಿನವೂ ಪ್ರಾತಃ

ಕಾಲದಲ್ಲಿ ಮಾಡುವ ಸ್ನಾನವು ಪ್ರಾಜಾಪತ್ಯವ್ರತಕ್ಕೆ ಸಮಾನವಾಗಿದೆ. ಪ್ರಾತಃಸ್ನಾನದಿಂದ ಮನುಷ್ಯರ ದಾರಿದ್ರ್ಯ, ಪಾಪ, ತಾಪ, ಗ್ಲಾನಿ, ಮಾಲಿನ್ಯ, ದುಃಸ್ವಪ್ನ ಮುಂತಾದವುಗಳೂ ನಾಶವಾಗುವವು. ಮತ್ತು ಉತ್ಸಾಹ ಬುದ್ಧಿ ಶಕ್ತಿಸೌಭಾಗ್ಯ ಸೌಂದರ್ಯ, ಸಂಪತ್ತು ಪುಣ್ಯಗಳೂ ಅಭಿವೃದ್ಧವಾಗುವವು. - ಈ ಸ್ನಾನವನ್ನು ಶಾಸ್ತ್ರೋಕ್ತವಾದ ವಿಧಿಯನ್ನು ಅನುಸರಿಸಿ ಮಾಡಿದರೆ ಸಾಧಾರಣ ಸ್ನಾನಕ್ಕಿಂತ ನೂರುಪಟ್ಟು ಹೆಚ್ಚಿನ ಪುಣ್ಯವು ಬರುವುದು. ಈ ಸ್ನಾನಾನಂತರ, ವಸ್ತ್ರಧಾರಣ ಮಾಡಿ ಕೈಯಲ್ಲಿ ದರ್ಭೆಯ ಪವಿತ್ರವನ್ನು ಇಟ್ಟುಕೊಂಡು ಆಚಮನ, ಸಂಧ್ಯಾವಂದನೆ, ಪ್ರಾಣಾಯಾಮ, ಗಾಯತ್ರಿ ಜಪ, ಉಪಸ್ಥಾನ ಮುಂತಾದ ವಿಧಿಪೂರ್ವಕವಾಗಿ ಸಂಧ್ಯಾವಂದನವನ್ನು ಮಾಡಬೇಕು. ಈ ಸಂಧ್ಯಾವಂದನದಲ್ಲಿ ಪ್ರಾಣಾಯಾಮ ಹಾಗೂ ಗಾಯತ್ರಿ ಇವೆರಡೂ ಪರಮಮುಖ್ಯ.

**"ಏಕಾಕ್ಷರಂ ಪರಂ ಬ್ರಹ್ಮ ಪ್ರಾಣಾಯಾಮಃ ಪರಂ ತಪಃ ।**
**ಗಾಯತ್ರ್ಯಾಸ್ತು ಪರಂ ನಾಸ್ತಿ ಪಾವನಂ ಚ ನೃಪೋತ್ತಮ ॥"**

ಓಂ ಎಂಬ ಏಕಾಕ್ಷರದ ಈ ಪ್ರಣವ ಮಂತ್ರವು ಗುಣಪರಿಪೂರ್ಣನಾದ ಪರಬ್ರಹ್ಮನನ್ನು ಹೇಳುತ್ತದೆ. ಶ್ವಾಸ ನಿರೋಧಮಾಡಿ ಆ ಪರಬ್ರಹ್ಮನನ್ನು ಪ್ರಣವ ಮಂತ್ರದಿಂದ ಧ್ಯಾನಮಾಡುವುದೇ ಪ್ರಾಣಾಯಾಮ. ಈ ಪ್ರಾಣಾಯಾಮ ಪೂರ್ವಕವಾಗಿ ದೇವರ ಧ್ಯಾನಮಾಡುವುದು ಒಂದು ಶ್ರೇಷ್ಠ ತಪಸ್ಸು. ಈ ಪ್ರಣವ ಮಂತ್ರಾರ್ಥವಾದ ಗಾಯತ್ರಿಯ ಜಪವು ಅತ್ಯಂತ ಪಾವನತರವಾಗಿದೆ. ಗಾಯತ್ರಿ ಮಂತ್ರ ಜಪಕ್ಕಿಂತ ಬೇರೆ ಪವಿತ್ರ ಕಾರ್ಯವಿಲ್ಲ. ಪ್ರಾಣಾಯಾಮಕ್ಕಿಂತ ಮಿಗಿಲಾದ ತಪಸ್ಸಿಲ್ಲ.

**"ಕರ್ಮಣಾ ಮನಸಾ ವಾಚಾ ಯದ್ ರಾತ್ರೌ ಕುರುತೇ ತ್ವಘಂ ।**
**ಉತ್ತಿಷ್ಠನ್ ಪೂರ್ವ ಸಂಧ್ಯಾಯಾಂ ಪ್ರಾಣಾಯಾಮ್ಯೆ**
**ರ್ವ್ಯಪೋಹಯೇತ್ ॥"**

ಕೃತಿ, ಮನಸ್ಸು, ಮಾತುಗಳಿಂದ ರಾತ್ರಿ ಮಾಡಿದ ಪಾಪಗಳೆಲ್ಲವೂ ಸಂಧ್ಯಾಂಗವಾಗಿ ಪ್ರಾತಃಕಾಲದಲ್ಲಿ ಮಾಡಿದ ಪ್ರಾಣಯಾಮಗಳಿಂದ ತೊಳೆದು ಹೋಗುತ್ತವೆ.

**"ಯದನ್ಹಾ ಕುರುತೇ ಪಾಪಂ ಮನೋವಾಕ್ಕಾಯ ಕರ್ಮಭಿಃ ।**
**ಆಸೀನಃ ಪಶ್ಚಿಮಾಂ ಸಂಧ್ಯಾಂ ಪ್ರಾಣಾಯಾಮ್ಯೆರ್ವ್ಯಪೋಹತಿ ॥"**

ಇಡೀ ದಿನ ಹಗಲು ಹೊತ್ತಿನಲ್ಲಿ ಕೈ ಕಾಲು, ಮನಸ್ಸಿನಿಂದ ಮಾಡಿದ ಪಾಪಗಳೆಲ್ಲ ಸಾಯಂಕಾಲ ಸಂಧ್ಯಾವಂದನೆಯಲ್ಲಿ ಮಾಡಿದ ಪ್ರಾಣಾಯಾಮದಿಂದ ನಾಶವಾಗುತ್ತವೆ. ಹೀಗೆ ಸಾಯಂಪ್ರಾತಃಕಾಲದ ಪ್ರಾಣಾಯಾಮದಿಂದ ಹಗಲು ರಾತ್ರಿಮಾಡಿದ ಪಾಪಗಳೆಲ್ಲವೂ ಪರಿಹೃತವಾಗುವವು.

**"ನೋಪತಿಷ್ಠೇ ತ್ತು ಯಃ ಪೂರ್ವಾಂ ನೋಪಾಸ್ತೇ ಯಸ್ತು ಪಶ್ಚಿಮಾಮ್ ।**
**ಸ ಶೂದ್ರವತ್ ಬಹಿಷ್ಕಾರ್ಯಃ ಸರ್ವಸ್ಮಾತ್ ದ್ವಿಜಕರ್ಮಣಃ ॥**

ಪ್ರಾತಃಸಂಧ್ಯೆಯನ್ನು ಮಾಡದಿರುವವನೂ, ಸಾಯಂಸಂಧ್ಯೆಯನ್ನು ಆಚರಿಸದಿರುವವನೂ, ತತ್ಕಾಲೋಚಿತವಾದ ಪ್ರಾಣಾಯಾಮ, ಗಾಯತ್ರೀಜಪ ಸಂಧ್ಯೋಪಸ್ಥಾನ, ದಿಗುಪಸ್ಥಾನ, ಮಾರ್ಜನ, ಅಘಮರ್ಷಣ, ಪಾಪಪುರುಷ ವಿಸರ್ಜನ, ಅರ್ಘ್ಯಪ್ರದಾನ, ದೇವತಾ ಧ್ಯಾನ, ಮುಂತಾದವುಗಳನ್ನೂ ಮಾಡದಿರುವ ಮನುಷ್ಯನು ಶೂದ್ರನಿಗಿಂತ ಕಡೆ. ಅವನಿಗೆ ಯಾವ ಶುಭ ಕರ್ಮದಲ್ಲಿಯೂ ಅಧಿಕಾರವಿರುವದಿಲ್ಲ.

## ಆಚಮನದ ವಿಧಾನ

ಹೀಗೆ ಆಚಮನ ಪ್ರಾಣಾಯಾಮಗಳ ಅನಂತರ ಮತ್ತೊಮ್ಮೆ ಆಚಮನಮಾಡಬೇಕು. ಆಚಮನ ಎಂದರೆ ಕೇಶವಾಯಸ್ವಾಹಾ, ನಾರಾಯಣಾಯಸ್ವಾಹಾ. ಮಾಧವಾಯಸ್ವಾಹಾ, ಎಂದು ಮೂರು ಬಾರಿ ಅಂಗೈನಡುವೆ ಒಂದು ತುಂಬಿದ ಸೌಟಿನಿಂದ ಒಂದು ಉದ್ದಿನಕಾಳು ಮುಳುಗುವಷ್ಟು ಬಲಗೈ ಬೊಗಸೆಯಲ್ಲಿ ನೀರು ಹಾಕಿಕೊಂಡು ಕೆಳದುಟಿಯಿಂದ ಪ್ರಾಶನಮಾಡಬೇಕು. ನೀರನ್ನು ಪ್ರಾಶನಮಾಡುವಾಗ ಮೊದಲನೆಯ ಸಲ 'ಕೇಶವಾಯ ನಮಃ' ಎರಡನೆಯ ಸಲ 'ನಾರಾಯಣಾಯ ನಮಃ' ಮೂರನೆಯ ಸಲ 'ಮಾಧವಾಯ ನಮಃ' ಎಂದು ಹೇಳಿ, ನಾಕನೆಯ ಸಲ 'ಗೋವಿಂದಾಯ ನಮಃ' ಎಂದು ನೀರನ್ನು ಕೆಳಗೆ ಬಿಡಬೇಕು. ಹೀಗೆ ಮೂರು ಬಾರಿ ಆಚಮನಮಾಡಿ ಕಣ್ಣು, ಕಿವಿ ಮೊದಲಾದ, ಇಂದ್ರಿಯಗಳಿಗೂ ಬೆರಳಿನಿಂದ ನೀರನ್ನು ಹಚ್ಚಿ, ಸ್ಪರ್ಶಮಾಡಿ ಶುದ್ಧಮಾಡಬೇಕು. ಹೆಬ್ಬೆರಳಿನ ಬುಡದಿಂದ ತುಟಿಗಳಿಗೆ ನೀರು ತಗುಲಿಸಬೇಕು. ನೀರಿನಿಂದ ಹೃದಯಕ್ಕೆ ಸ್ಪರ್ಶಮಾಡಿಸಿ ಐದೂ ಬೆರಳಿನಿಂದ ತಲೆಗೆ ಜಲಸ್ಪರ್ಶವನ್ನು ಮಾಡಿಸಬೇಕು. ಹಾಗೂ ಬೆರಳುಗಳನ್ನು ನೀರಿನಲ್ಲಿ ಎದ್ದಿ ಅವುಗಳ ತುದಿಯಿಂದ ಎರಡೂ ಹೆಗಲುಗಳನ್ನು ಸ್ಪರ್ಶಮಾಡಿಸಬೇಕು. ಹೀಗೆ ಎರಡನೇಯ ಬಾರಿ ಆಚಮನಮಾಡಿ ಆಪೋಹಿಷ್ಠಾ ಎಂಬ ಮಂತ್ರದ ಮೂರು ಋಕ್ಕುಗಳಿಂದ ನೀರನ್ನು ದರ್ಭೆಯ ತುದಿಯಿಂದ ಪ್ರೋಕ್ಷಣಮಾಡಿಕೊಳ್ಳಬೇಕು. ಎಡಗೈಯಲ್ಲಿ ತಾಮ್ರ ಅಥವಾ ಬೆಳ್ಳಿಯ ಉದ್ಧರಣೆ ಅಥವಾ ತೀರ್ಥಸೌಟಿನಲ್ಲಿ ನೀರನ್ನು ಎತ್ತಿಕೊಂಡು ಅದರಲ್ಲಿ ತುಳಸಿ ದೂರ್ವಾ ಅಥವಾ ದರ್ಭೆಯನ್ನು ಎದ್ದಿ ಆಪೋಹಿಷ್ಠಾ ಎಂಬ ಮಂತ್ರವನ್ನು ಉಚ್ಚರಿಸುತ್ತ ಪ್ರೋಕ್ಷಿಸಬೇಕು. ಮೊದಲು ನೆಲದ ಮೇಲೆ, ಅನಂತರ ತಲೆಯ ಮೇಲೆ, ಆ ಬಳಿಕ ಆಕಾಶದಲ್ಲಿ. ಅನಂತರ ಪ್ರಥ್ವಿಮೇಲೆ, ಬಳಿಕ ತನ್ನ ತಲೆಯ ಮೇಲೆ ನೀರನ್ನು ತನ್ನ ದರ್ಭದ ತುದಿಯಿಂದ ಪ್ರೋಕ್ಷಿಸಬೇಕು. ಅನಂತರ ಮೂರನೇಯ ಬಾರಿ, ಮೊದಲು ತನ್ನ ತಲೆ ಅನಂತರ ಆಕಾಶ, ಆ ಬಳಿಕ ಭೂಮಿಯ ಮೇಲೆ ನೀರನ್ನು ಸಿಂಪಡಿಸಬೇಕು ತುಳಸಿಯ ದಳದಿಂದ. ಹೀಗೆ ಒಂಬತ್ತು ಬಾರಿ ಒಂಬತ್ತು ಸ್ಥಾನಗಳಲ್ಲಿ ಮೂರು ಋಕ್ಕುಗಳಿಂದ ದರ್ಭದೂರ್ವಾಗಳಿಂದ ನೀರನ್ನು ಪ್ರೋಕ್ಷಿಸುವುದಕ್ಕೆ ಮಾರ್ಜನ ಎನ್ನುತ್ತಾರೆ. ಭೂಮಿ ಅಥವಾ ಪ್ರಥ್ವಿ ಎಂದರೆ ಸಂಧ್ಯಾವಂದನೆ ಮಾಡುವವನ ಕಾಲು. ಆಕಾಶ ಎಂದರೆ ಹೃದಯ ಮಸ್ತಕ ಎಂದರೆ ತನ್ನ ತಲೆ ಹೀಗೆ ಭೂಮಿ ಆಕಾಶ ತನ್ನ ದೇಹ ಮೂರು ಕಡೆಗಳಲ್ಲಿಯೂ ಮಂತ್ರಪೂತವಾದ ಜಲವನ್ನು ಪ್ರೋಕ್ಷಿಸಿ, ಪಿಂಡಾಂಡ, ಬ್ರಹ್ಮಾಂಡಗಳನ್ನು ಶುದ್ಧೀಕರಿಸುವುದೇ ಈ ಮಾರ್ಜನವಿಧಿಯ ಉದ್ದೇಶ. ಮಾರ್ಜನ ವಿಧಿಯು ಆರು ವಿಧವಾದ ಸ್ನಾನಗಳಿಗಿಂತ ಪವಿತ್ರವಾಗಿದೆ.

ಆ ಷಡ್ವಿಧಸ್ನಾನಗಳು ಇಂತಿವೆ. ವಾರುಣಸ್ನಾನ ಎಂದರೆ ನೀರಿನಲ್ಲಿ ಮಾಡಿದ ಸ್ನಾನ. ಆಗ್ನೇಯ ಸ್ನಾನ ಎಂದರೆ ಬೆಂಕಿಯ ಝಳಕ್ಕೆ ದೇಹವನ್ನು ಒಡ್ಡಿ ಅಂಗಾಂಗಗಳನ್ನು ಕಾಯಿಸುವುದು ಅಥವಾ ತನ್ನ ಎಲ್ಲ ಅವಯವಗಳಿಗೂ ತಾಗುವಂತೆ ಧೂಪ ಹಾಕಿ ಅದರ ಹೊಗೆಯನ್ನು ಬಡಿಸಿಕೊಳ್ಳುವುದು. ಮೂರನೆಯ ಸ್ನಾನ ಎಂದರೆ ವಾಯವ್ಯ ಸ್ನಾನ. ಸ್ವಚ್ಛವಾದ ಗಂಗಾದಿ ತೀರ್ಥ ಅಥವಾ ತುಳಸೀವನ, ದೇವಸ್ಥಾನಗಳ ಮೇಲಿನಿಂದ ಸೂಸಿ ಬರುವ ಗಾಳಿಗೆ ಮೈತೆರೆದು ತಂಗಾಳಿಗೆ ತನ್ನ ತನುವನ್ನು ಒಡ್ಡುವುದು. ನಾಲ್ಕನೆಯ ಸ್ನಾನಕ್ಕೆ

'ಐಂದ್ರಸ್ನಾನ' ಎನ್ನುವರು. ಮಳೆ ಸುರಿಯುವಾಗ ಬಯಲಲ್ಲಿ ಬಂದು ಕುಳಿತು ಪೂರ್ತಿಯಾಗಿ ನೆನೆದು ಹೋಗುವುದಕ್ಕೆ ಐಂದ್ರಸ್ನಾನ ಎನ್ನುವರು. ಮಂತ್ರ ಸ್ನಾನ ಐದನೆಯದು. ದೇಹದಲ್ಲಿ ಅನಾರೋಗ್ಯದಿಂದ ಸ್ನಾನಮಾಡುವ ಪರಿಸ್ಥಿತಿ ಇಲ್ಲದಿದ್ದರೆ ಮಂತ್ರವನ್ನು ಹೇಳಿ, ದೇವರ ಧ್ಯಾನ ಮಾಡಿ ಅಥವಾ ಇನ್ನೊಬ್ಬರಿಂದ ಹೇಳಿಸಿ ಶ್ರವಣಮಾಡಿದರೂ ಮಂತ್ರಸ್ನಾನ ಮಾಡಿದಂತಾಗುವುದು.

## ಮಾರ್ಜನಂ ಪಾಪಮಾರ್ಜನಮ್

ಕೊನೆಯದಾದ ಬ್ರಾಹ್ಮ ಸ್ನಾನವು ಸರ್ವಶ್ರೇಷ್ಠವಾಗಿರುತ್ತದೆ. ಮೊದಲು ಶುದ್ಧೋದಕದಿಂದ ಜಲಾಭಿಮಾನಿ ದೇವತೆಗಳನ್ನು ಪ್ರಾರ್ಥಿಸಿ, ವಿಧಿಪೂರ್ವಕವಾಗಿ ಸ್ನಾನಮಾಡಿ. ಆಚಮನ ಪ್ರಾಣಾಯಾಮ ಸಂಧ್ಯಾಸಂಕಲ್ಪಾದಿಗಳನ್ನು ಪೂರೈಸಿ, ಅಪೋಹಿಷ್ಠಾ ಮುಂತಾದ ಮೂರು ಋಕ್ಕುಗಳನ್ನು ಹೇಳುತ್ತ ದರ್ಭೆಯಿಂದ ಆಮಂತ್ರಿತವಾದ ನೀರನ್ನು ಪ್ರೋಕ್ಷಸಿಗೊಂಡು ಮಾರ್ಜನವಿಧಿಯನ್ನು ಮಾಡಿಕೊಳ್ಳುವುದು ಬ್ರಾಹ್ಮಸ್ನಾನ ಎನಿಸಿಕೊಳ್ಳುತ್ತದೆ. ಈ ಬ್ರಾಹ್ಮ ಸ್ನಾನದ ವಿಧಿಯಿಂದ ಸ್ನಾನಮಾಡಿದವನು ಬಾಹ್ಯ ಶುದ್ದಿ ಅಂತರಂಗ ಶುದ್ಧಿಯನ್ನು ಪಡೆದು ದೇವಪೂಜಾದಿ ಎಲ್ಲ ಧರ್ಮಕರ್ಮಗಳನ್ನು ಮಾಡಲಿಕ್ಕೆ ಅಧಿಕಾರ ಅಥವಾ ಅರ್ಹತೆಯನ್ನು ಹೊಂದುತ್ತಾನೆ. ಬರೀ ಜಲ ಸ್ನಾನಮಾಡಿ ಮೈತೊಳೆದುಕೊಂಡ ಮಾತ್ರಕ್ಕೆ ಮನುಷ್ಯರಿಗೆ ದೇವಪೂಜಾದಿಗಳಿಗೆ ಅವಶ್ಯವಾದ ಶುದ್ಧತೆಯಾಗಲೀ ಅರ್ಹತೆಯಾಗಲೀ ಬರುವದಿಲ್ಲ. ಈ ಮಾರ್ಜನ ವಿಧಿರೂಪವಾದ ಬ್ರಾಹ್ಮಸ್ನಾನದಿಂದ ಮಾತ್ರ ಮನುಷ್ಯನಿಗೆ ಭಾವಶುದ್ಧಿ ಉಂಟಾಗುವುದು. ಭಾವಶುದ್ಧಿ ಇರದಿದ್ದವರು ನೂರು ಸಲ ಮುಳುಗು ಹಾಕಿದರೂ ಶುದ್ಧರಾಗುವುದಿಲ್ಲ. ಯಾವನ ಮನಸ್ಸು ನಿರ್ಮಲವಿದೆಯೋ, ಯಾವನಲ್ಲಿ ಭಾವಶುದ್ಧಿ ಇರುವುದೋ ಅವನು ಎಲ್ಲ ತೀರ್ಥಗಳಲ್ಲಿ ಸ್ನಾನಮಾಡಿದಂತೆ. ತೀರ್ಥಸ್ನಾನದ ಮುಖ್ಯ ಉದ್ದೇಶ ಚಿತ್ತ ನೈರ್ಮಲ್ಯ. ಈ ಚಿತ್ತದ ನಿರ್ಮಲತೆ ಅಥವಾ ಭಾವಶುದ್ಧಿ ಉಂಟಾಗದೇ ಏನು ಸ್ನಾನಮಾಡಿದರೂ ಎಷ್ಟು ಮುಳುಗು ಹಾಕಿದರೂ ವ್ಯರ್ಥ. ಅದಕ್ಕಾಗಿ ಸ್ನಾನಮಾಡುವಾಗ ಪರಿಶುದ್ಧ ಮನಸ್ಸಿನಿಂದ ದೇವರನ್ನು ಧ್ಯಾನ ಮಾಡುತ್ತ ಸ್ನಾನಮಾಡಿ ಮಾರ್ಜನ ಮಂತ್ರವನ್ನು ಹೇಳಿ ಮಂತ್ರ ಪೂತವಾದ ಜಲದಿಂದ ತನ್ನನ್ನು ಪ್ರೋಕ್ಷಿಸಿಕೊಳ್ಳಬೇಕು. ನಂತರ ಋತಂಚ, ಸತ್ಯಂಚ ಇತ್ಯಾದಿ ಮಂತ್ರದಿಂದ ಅಘಮರ್ಷಣವನ್ನು ಮಾಡಿಕೊಳ್ಳಬೇಕು. ಸ್ನಾನಮಾಡುವಾಗ ನೀರಿನಲ್ಲಿ ಮುಳುಗಿ ಮೂರು ಸಲ ಈ ಅಘಮರ್ಷಣ ಮಂತ್ರವನ್ನು ಜಪಿಸಬೇಕು. ಸಂಧ್ಯಾವಂದನೆ ಕಾಲದಲ್ಲಿ ಒಮ್ಮೆ ಈ ಮಂತ್ರವನ್ನು ಪಠಿಸಬೇಕು. ಅನಂತರ ಪ್ರಣವ ಮತ್ತು ವ್ಯಾಹೃತಿ ಮಂತ್ರದಿಂದ ಸಹಿತವಾಗಿ ಗಾಯತ್ರಿ ಮಂತ್ರವನ್ನು ಉಚ್ಚರಿಸಿ ಎದ್ದು ನಿಂತು ಸೂರ್ಯನಿಗೆ ಮೂರು ಸಲ ನೀರಿನಿಂದ ಅರ್ಘ್ಯಪ್ರದಾನವನ್ನು ಮಾಡಬೇಕು.

ಅರ್ಘ್ಯಾಂಜಲಿಯನ್ನು ಕೊಟ್ಟ ಬಳಿಕ ಸೂರ್ಯೋದಯದ ವರೆಗೆ ಎದ್ದು ನಿಂತು ಗಾಯತ್ರೀ ಮಂತ್ರಜಪವನ್ನು ಮಾಡಬೇಕು. ಸಾಯಂಕಾಲದಲ್ಲಿಯೂ ಸೂರ್ಯನು ಅಸ್ತಮಿಸುವ ಮೊದಲೇ ಸೂರ್ಯನಿಗೆ ಅರ್ಘ್ಯನೀಡಿ ಮುಗಿಲಿನಲ್ಲಿ ಚಿಕ್ಕೆ ಕಾಣುವವರೆಗೆ ಗಾಯತ್ರೀ ಮಂತ್ರವನ್ನು ಕುಳಿತು ಜಪಿಸಬೇಕು.

## ತ್ರಿಕಾಲಸಂಧ್ಯೆ ಸಕಾಲಸಂಧ್ಯೆಗಳ ಮಹತ್ವ

ಸಂಧ್ಯಾವಂದನೆಯನ್ನು ಬೆಳಗು ಮುಂಜಾವು, ಮಧ್ಯಾಹ್ನ ಹಾಗೂ ಸಂಜೆ ಮೂರು ಕಾಲಗಳಲ್ಲಿಯೂ ಸೂರ್ಯೋದಯ ಸೂರ್ಯಾಸ್ತ ಸಮಯಕ್ಕೆ ಸರಿಯಾಗಿ ತಪ್ಪದೇ ಮಾಡಬೇಕು.

''ವಿಧಿನಾಪಿ ಕೃತಾ ಸಂಧ್ಯಾ ಕಾಲಾತೀತಾಽಫಲಾ ಭವೇತ್''

ಸಂಧ್ಯೆಗೆ ವಿಹಿತವಾದ ಕಾಲಮೀರಿ ಮಾಡಿದ ಸಂಧ್ಯಾವಂದನೆಯು ಶಾಸ್ತ್ರೋಕ್ತವಾಗಿದ್ದರೂ ವ್ಯರ್ಥವಾಗುತ್ತದೆ.

ಸೂರ್ಯನಿಗೆ ಹೀಗೆ ಮೂರು ಅರ್ಘ್ಯವನ್ನು ಕೊಟ್ಟ ಬಳಿಕ ಒಂದು ಸಾವಿರ, ಅಥವಾ ಒಂದು ನೂರು, ಕನಿಷ್ಠ ಹತ್ತು ಸಲವಾದರೂ ಗಾಯಿತ್ರಿ ಮಂತ್ರವನ್ನು ಜಪಮಾಡಬೇಕು. ಅನಂತರ ಸೂರ್ಯೋಪಸ್ಥಾನವನ್ನು ಮಾಡಿ ದಿಗಭಿಮಾನಿದೇವತೆಗಳನ್ನು ವಂದಿಸಿ ಸಂಧ್ಯಾಕಾರ್ಯವನ್ನು ಮುಗಿಸಬೇಕು.

ಹೀಗೆ ಸಂಧ್ಯಾವಂದನೆಯು ಪೂರ್ಣವಾದ ಬಳಿಕ ತನ್ನ ಶಾಖೋಕ್ತವಿಧಿಗೆ ಅನುಗುಣವಾಗಿ ಚಂದನ, ಪಚ್ಚ ಕರ್ಪೂರ, ಹೂವುಗಳನ್ನು ಹಾಕಿದ, ಅಥವಾ ಸ್ವಯಂ ನಿರ್ಮಲವಾದ ನೀರಿನಿಂದ ಬ್ರಹ್ಮಾದಿ ದೇವತೆಗಳನ್ನೂ ಮರೀಚಿ ಮೊದಲಾದ ಋಷಿಗಳನ್ನೂ ದೇವತೆಗಳನ್ನೂ ಪಿತೃಗಳನ್ನೂ ಉದ್ದೇಶಿಸಿ ನೀರಿನ ಅಂಜಲಿಗಳಿಂದ ''ತೃಪ್ಯಂತು'' ''ತೃಪ್ಯಂತು'' ಎಂದು ಹೇಳಿ ತರ್ಪಣವನ್ನು ಬಿಡಬೇಕು. ಆ ಬಳಿಕ 'ನಿವೀತಿ' ಆಗಿ ಎಂದರೆ ಜನಿವಾರವನ್ನು ಕೊರಳಲ್ಲಿ ಮಾಲೆಯಂತೆ ಧರಿಸಿ ಋಷಿಗಳಿಗೆ ತರ್ಪಣವನ್ನು ಕೊಡಬೇಕು. ಆ ಬಳಿಕ ಯಜ್ಞೋಪವೀತವನ್ನು ಎಡಗಡೆ ಹಾಕಿಕೊಂಡು ದರ್ಭೆ ಮತ್ತು ಎಳ್ಳು ಬೆರಸಿದ ನೀರಿನಿಂದ ಪಿತೃತೀರ್ಥದಿಂದ ಕವ್ಯವಾಟ್, ಅನಲ, ಮುಂತಾದ ದೇವಲೋಕದ ಪಿತೃಗಳ ಅನಂತರ, ಸ್ವಂತ ಪಿತೃಗಳ ತರ್ಪಣವನ್ನು ನೀಡಬೇಕು. ರವಿವಾರ, ಶುಕ್ಲಪಕ್ಷ ತ್ರಯೋದಶಿ, ಸಪ್ತಮಿ, ರಾತ್ರಿ ಮತ್ತು ಎರಡೂ ಸಂಧ್ಯಾಕಾಲಗಳಲ್ಲಿ ತಿಲತರ್ಪಣವನ್ನು ಎಂದೂ ಕೊಡಬಾರದು. ಕೊಡಲೇಬೇಕಾದ ಪ್ರಸಂಗ ಬಂದರೆ ಬಿಳಿಎಳ್ಳಿನಿಂದ ಕೊಡಬೇಕು. ಅನಂತರ ಯಮದೇವರ ಹದಿನಾಕು ಹೆಸರುಗಳನ್ನು ಉಚ್ಚರಿಸುತ್ತ ಯಮತರ್ಪಣವನ್ನು ನೀಡಬೇಕು. ತರ್ಪಣವನ್ನು ಮೊದಲು ದೇವತೆಗಳಿಗೂ, ಅನಂತರ ದೇವಲೋಕದ ಪಿತೃಗಳಿಗೂ ಕೊಟ್ಟು ಅನಂತರ ತನ್ನ ಪಿತೃಗಳಿಗೂ ಗೋತ್ರವನ್ನು ಉಚ್ಚರಿಸುತ್ತ ನೀರಿನಿಂದ ತರ್ಪಣವನ್ನು ಕೊಡಬೇಕು. ದೇವತೆಗಳಿಗೆ ಒಂದು ಸಲ, ಋಷಿಗಳಿಗೆ ಎರಡೆರಡು ಸಲ, ಪಿತೃಗಳಿಗೆ ಮೂರು ಮೂರು ಸಲ, ಹೆಣ್ಣು ಮಕ್ಕಳಿಗೆ ಒಂದೊಂದು ಸಲ ಹೆಸರು ಗೋತ್ರವನ್ನು ಉಚ್ಚರಿಸುತ್ತ ತರ್ಪಣವನ್ನು ಕೊಡಬೇಕು. ದೇವತೆಗಳಿಗೆ ದೇವತೀರ್ಥದಿಂದ ತರ್ಪಣವನ್ನು ಕೊಡಬೇಕು. ಕೈಯನ್ನು ಕೆಳಗೆ ಮಾಡಿ ಬೆರಳುಗಳ ಮುಂಭಾಗದಲ್ಲಿ ನೀರು ಹಾಕಿ ಅರ್ಘ್ಯ ನೀಡುವುದಕ್ಕೆ ದೇವತೀರ್ಥ ಎನ್ನುವರು. ನಾಕೂ ಬೆರಳುಗಳ ಮೂಲದಿಂದ ಕೊಡುವ ತೀರ್ಥವು ಋಷಿತೀರ್ಥ ಎನಿಸಲ್ಪಡುವುದು. ಹೆಬ್ಬೆರಳು ಮತ್ತು ತೋರುಬೆರಳುಗಳ ಮೂಲಕ ನೀರನ್ನು ಬಿಡುವುದಕ್ಕೆ ಪಿತೃತೀರ್ಥ ಎನ್ನುವರು.

ಬ್ರಹ್ಮದೇವರು ಮೊದಲು ಮಾಡಿ ಕ್ರಿಮಿ ಕೀಟ ಪರ್ಯಂತರ ಎಲ್ಲ ದೇವತೆಗಳೂ ಋಷಿಗಳೂ, ಮುನಿಗಳೂ, ಮನುಷ್ಯರೂ, ಪಿತೃಗಳೂ, ತಂದೆ, ತಾಯಿ, ಅಜ್ಜ, ಅಜ್ಜಿ, ಬಂಧು ಬಳಗ ಎಲ್ಲರೂ ತೃಪ್ತರಾಗಲಿ ಎಂದು ಹೇಳಿ ಆ ಮಂತ್ರವನ್ನು ಉಚ್ಚರಿಸಿ ತರ್ಪಣವನ್ನು ಮಾಡಬೇಕು.

## ಭೋಜನ ಪ್ರಕರಣ

ಅನಂತರ ಅಗ್ನಿಹೋತ್ರವಿಧಿಯನ್ನು ಪೂರೈಸಿ ವೇದಾಧ್ಯಯನವನ್ನು ಮಾಡಬೇಕು. ವೇದಶಾಸ್ತ್ರಗಳನ್ನು ಸ್ವಯಂ ತಾನು ಮನನ, ಪಠಣ, ಪಾರಾಯಣ, ಚಿಂತನಗೈದು ಬೇರೆಯವರು ಬಂದರೆ ಅವರಿಗೆ ಪಾಠ, ಪ್ರವಚನ, ಉಪದೇಶ ಮುಂತಾದವುಗಳನ್ನು ಮಾಡಬೇಕು. ಮಧ್ಯಾಹ್ನದಲ್ಲಿ ಮತ್ತೆ ಸ್ನಾನ, ಮಧ್ಯಾಹ್ನ ಸಂಧ್ಯಾವಂದನೆ, ದೇವರಪೂಜೆ, ನೈವೇದ್ಯ, ವೈಶ್ವದೇವ, ಬಲಿಹರಣ, ಮುಂತಾದವುಗಳನ್ನು ಮಾಡಿ ಅತಿಥಿಗಳಿಗೆ ಭೋಜನಮಾಡಿಸಿ ತಾನು ಕೂಡ ಭಗವಂತನ ನಾಮಸ್ಮರಣೆಮಾಡುತ್ತ ಭೋಜನಮಾಡಬೇಕು. ಪ್ರತಿದಿನವೂ ಭಿಕ್ಷುಕರಿಗೆ ಅನ್ನದಾನವನ್ನು ಮಾಡಬೇಕು.

"ಅಧ್ವಗಃ ಕ್ಷೀಣ ವೃತ್ತಿಶ್ಚ ವಿದ್ಯಾರ್ಥೀ ಗುರುಪೋಷಕಃ।
ಯತಿಶ್ಚ ಬ್ರಹ್ಮಚಾರೀ ಚ ಷಡೈತೇ ಧರ್ಮಭಿಕ್ಷುಕಾಃ॥"

ದಾರಿಹೋಕ, ಉಪಜೀವನಕ್ಕೆ ಏನೂ ಇಲ್ಲದವ, ವಿದ್ಯಾರ್ಥಿ, ಗುರುಹಿರಿಯರನ್ನು ಪೋಷಿಸುವವ, ಸನ್ಯಾಸಿ, ಬ್ರಹ್ಮಚಾರಿ ಇವರು ಆರುಜನ ಭಿಕ್ಷುಕರು. ಇವರಿಗೆ ಎಂದೂ ಭೋಜನ ಇಲ್ಲ ಎನ್ನಬಾರದು. ವೈಶ್ವದೇವ ಬಲಿಹರಣ ಆದಬಳಿಕ ಒಂದು ಹಸುವನ್ನು ಕರೆಯುವಷ್ಟು ಹೊತ್ತು ಹೊರಗೆ ನಿಂತು ಅತಿಥಿಗಳ ದಾರಿನೋಡಿ ಊಟಮಾಡಬೇಕು. ಬಂದ ಅತಿಥಿಗಳನ್ನು ಉಪಚರಿಸಿ ಆದರದಿಂದ ಊಟಕ್ಕೆ ಹಾಕಬೇಕು. ಪ್ರತಿನಿತ್ಯವೂ ತನ್ನ ಶಕ್ತ್ಯಾನುಸಾರ ಒಬ್ಬ, ಇಬ್ಬರು, ಅಥವಾ ಮೂವರು ವಿದ್ವಾಂಸರನ್ನು ಕರೆದು ಊಟಕ್ಕೆ ಹಾಕಬೇಕು. ಅನಂತರ ಯಜಮಾನನು ಬಂಧು ಬಾಂಧವರೊಂದಿಗೆ ತೀರ್ಥ ತೆಗೆದುಕೊಂಡು ಗಂಧವನ್ನು ಲೇಪಿಸಿಕೊಂಡು ಶುದ್ಧವಸ್ತ್ರವನ್ನು ಉಟ್ಟುಕೊಂಡು ಪೂರ್ವ ಅಥವಾ ಉತ್ತರಕ್ಕೆ ಮುಖಮಾಡಿ ಊಟವನ್ನು ಮಾಡಬೇಕು. ಊಟದ ಮೊದಲೂ ನಂತರವೂ ಆಚಮನ ಮಾಡಬೇಕು. ಉಣ್ಣುವ ಅನ್ನವು ನಗ್ನವಾಗಬಾರದೆಂದು ಊಟದ ಎಲೆಯ ಕೆಳಗೆ ನೀರನ್ನು ಸಿಂಪಡಿಸಿ ಅನ್ನದಮೇಲೂ ಗಾಯಿತ್ರಿಯಿಂದ ನೀರನ್ನು ಪ್ರೋಕ್ಷಿಸಬೇಕು. ಅನಂತರ ನೆಲದ ಮೇಲೆ ಪೂರ್ವಕ್ಕೆ ಮೂರು ತುತ್ತು ಇಟ್ಟು ಅದರ ಮೇಲೆ ನೀರನ್ನು ಹಾಕಬೇಕು. ಅನಂತರ ಒಂದು ಆಚಮನಮಾಡಿ 'ಪ್ರಾಣಾಯಸ್ವಾಹಾ, ಅಪಾನಾಯ ಸ್ವಾಹಾ ವ್ಯಾನಾಯ ಸ್ವಾಹಾ, ಉದಾನಾಯ ಸ್ವಾಹಾ, ಸಮಾನಾಯ ಸ್ವಾಹಾ ಎಂಬ ಮಂತ್ರಗಳಿಂದ ತನ್ನ ಜಠರಾಗ್ನಿಯಲ್ಲಿ ಪ್ರಾಣಾಗ್ನಿಗಳ ಹೋತ್ರ ವಿಧಿಯಿಂದ ಐದು ಆಹುತಿಗಳನ್ನು ತನ್ನ ಬಾಯಿಯ ಮುಖಾಂತರ ಹಾಕಬೇಕು. ಊಟಮಾಡುವಾಗ ದರ್ಭೆಯ ಪವಿತ್ರವನ್ನು ಧರಿಸಿಕೊಂಡೇ ಉಣ್ಣಬೇಕು. ಉಣ್ಣುವಾಗ ಮೌನದಿಂದ ಇರಬೇಕು. ಅನಂತರ ಕೊನೆಗೆ ಒಮ್ಮೆ ಆಚಮನಮಾಡಿ ಎಲೆಬಿಟ್ಟು ಎದ್ದು ಕೈಕಾಲು ಮುಖಗಳನ್ನು ಸ್ವಚ್ಛವಾಗಿ ತೊಳೆದುಕೊಳ್ಳಬೇಕು. ಅನಂತರ ಮುಖಶುದ್ಧಿಯನ್ನು ಮಾಡಿಕೊಂಡು ಪುರಾಣ ಶ್ರವಣ, ಪಾಠ ಪ್ರವಚನ, ಶಾಸ್ತ್ರಾರ್ಥವಿಚಾರವನ್ನು ಮಾಡುತ್ತ ದಿನವನ್ನು ಕಳೆಯಬೇಕು. ಸಾಯಂಕಾಲ ಮತ್ತೆ ಸಂಧ್ಯಾವಂದನೆ, ದೇವತಾರ್ಚನ ಮುಂತಾದವುಗಳನ್ನು ಮಾಡಬೇಕು. ಹೀಗೆ ಶಾಸ್ತ್ರೋಕ್ತ ರೀತಿಯಿಂದ ನಿತ್ಯ ಕರ್ಮಗಳನ್ನು ಆಚರಿಸಿ ಸತ್ಯ, ಅಹಿಂಸೆ, ಸದಾಚಾರ, ಪರೋಪಕಾರ, ಪ್ರಾಣಿದಯೆ, ಶಾಸ್ತ್ರವಿಮರ್ಶನಾದಿಗಳನ್ನು ಮಾಡುತ್ತ ಜೀವನವನ್ನು ಯಾಪನಮಾಡಬೇಕು.

## ಸದಾಚಾರಗಳ ನಿರೂಪಣ

**ವೇದವ್ಯಾಸ:**-ಗೃಹಸ್ಥಾಶ್ರಮದಲ್ಲಿ ಇದ್ದವರು ಅನುಷ್ಠಾನ ಮಾಡಬೇಕಾದ ಧಾರ್ಮಿಕ ಕ್ರಿಯಾಕಲಾಪಗಳನ್ನು ಹೇಳುತ್ತೇನೆ, ಕೇಳು.

ಧರ್ಮರಾಜ! ಗೃಹಸ್ಥಾಶ್ರಮ ಧರ್ಮವನ್ನು ಸ್ವೀಕರಿಸಿದ ಮಾನವನು ಜಗತ್ತನ್ನು ಪೋಷಣ ಮಾಡುತ್ತಾನೆ. ದೇವತೆಗಳು, ಪಿತೃಗಳು, ಮನುಷ್ಯರು, ಕ್ರಿಮಿಕೀಟ, ಪಕ್ಷಿಪಶು ಮುಂತಾದ ಎಲ್ಲ ಪ್ರಾಣಿಗಳು ಗೃಹಸ್ಥಾಶ್ರಮಿಯನ್ನು ಅವಲಂಬಿಸಿರುತ್ತವೆ. ಇವರೆಲ್ಲರಿಗೂ ತೃಪ್ತಿ ಗೃಹಾಶ್ರಮಿಯಿಂದಲೇ.

ಗೃಹಸ್ಥಾಶ್ರಮಿಯು ಮುಖ್ಯವಾಗಿ ವೇದಗಳ ಅಧ್ಯಯನ ಅಧ್ಯಾಪನಾದಿ ಕಾರ್ಯಗಳನ್ನು ಮಾಡಬೇಕು. ಈ ಸ್ವಾಧ್ಯಾಯ ವ್ರತವು ಒಂದು ದೊಡ್ಡ ಯಜ್ಞ. ಋಗ್ವೇದ ಯಜುರ್ವೇದ, ಸಾಮವೇದ ರೂಪವಾದ ವೇದವು ಒಂದು ಗೋಮಾತೆ ಇದ್ದಂತೆ. ಈ ವೇದತ್ರಯಿಯ ಪಠಣ, ಪಾಠಣ, ಪಾರಾಯಣ ಪ್ರವಚನಾದಿಗಳನ್ನು ಮಾಡುವದರಿಂದ ಮಾನವನಿಗೆ ಸ್ವರ್ಗ ಅಪವರ್ಗಗಳು ಸುಲಭವಾಗಿ ಲಭಿಸುವವು.

ಪ್ರತಿದಿನಿವೂ ಗೃಹಸ್ಥಾಶ್ರಮಿಯು ಸ್ನಾನ ದೇವರಪೂಜೆ, ಬ್ರಹ್ಮಯಜ್ಞ, ದೇವತರ್ಪಣ, ಪಿತೃತರ್ಪಣ, ಅಗ್ನಿಹೋತ್ರ, ವೈಶ್ವದೇವ, ಬಲಿಹರಣ, ಭೂತಬಲಿ, ಅತಿಥಿಭೋಜನ, ಮುಂತಾದವುಗಳನ್ನು ಆಚರಿಸಬೇಕು. ಮಧ್ಯಾಹ್ನ ಮನೆಗೆ ಹಸಿದು ಬಂದ ಅತಿಥಿಯನ್ನು ಅರ್ಘ್ಯ ಪಾದ್ಯಾದಿಗಳನ್ನು ಕೊಟ್ಟು ಸತ್ಕರಿಸಬೇಕು. ಬಳಲಿ ಬಂದ ಅತಿಥಿಗಳಿಗೆ ಅವರ ಆಚಾರ ವಿಚಾರ ಅಧ್ಯಯನಾದಿ ವಿಷಯಗಳಲ್ಲಿ ಯಾವ ಪ್ರಶ್ನೆಯನ್ನೂ ಮಾಡಬಾರದು. ಬಂದ ಅತಿಥಿಯು ಸುಂದರನೇ ಇರಲಿ. ಕುರೂಪಿಯೇ ಇರಲಿ, ದಡ್ಡನೇ ಇರಲಿ, ಪಂಡಿತನೇ ಇರಲಿ. ಅವನನ್ನು ಪ್ರಜಾಪತಿಯೆಂದೇ ಭಾವಿಸಬೇಕು. ಅತಿಥಿಗಳಿಗೆ ಉಣಿಸಿ ನಂತರ ಮಾಡಿದ ಭೋಜನವು ಅಮೃತ ಭೋಜನ ಎನಿಸುತ್ತದೆ. ಯಾವ ಅತಿಥಿಯನ್ನೂ ಊಟಕ್ಕೆ ಇಲ್ಲ ಎಂದು ಹೇಳಿ ಮರಳಿ ಕಳಿಸಬಾರದು.

## ಅತಿಥಿ ದೇವೋ ಭವ

**''ಅತಿಥಿರ್ಯಸ್ಯ ಭಗ್ನಾಶೋ ಗೃಹಾತ್ ಪ್ರತಿನಿವರ್ತತೇ ।**
**ಸ ದತ್ವಾ ದುಷ್ಕೃತಂ ತಸ್ಯ ಪುಣ್ಯಮಾದಾಯ ಗಚ್ಛತಿ ॥''**

ಯಾರ ಮನೆಯಿಂದ ಅತಿಥಿಯು ನಿರಾಶನಾಗಿ ತಿರುಗಿ ಹೋಗುತ್ತಾನೋ ಅವನು ತನ್ನ ಪಾಪವನ್ನು ಮನೆಯ ಯಜಮಾನನಿಗೆ ಕೊಟ್ಟು ಅವನ ಪುಣ್ಯವನ್ನು ಸೆಳೆದುಕೊಂದು ಹೋಗುವನು. ಆದುದರಿಂದ ಬಂದ ಅತಿಥಿಯನ್ನು ತನ್ನ ಯೋಗ್ಯತಾನುಸಾರ ಅರ್ಘ್ಯ ಪಾದ್ಯಾದಿಗಳನ್ನು ಇತ್ತು, ಅನ್ನ ಪಾನಾದಿಗಳನ್ನು ಕೊಟ್ಟು, ಸತ್ಕಾರ ಮಾಡಿಕಳಿಸಬೇಕು.

**ಧರ್ಮರಾಜ** (ಯುಧಿಷ್ಠಿರ)-ವಿವಾಹದ ಎಂಟು ಪ್ರಕಾರಗಳನ್ನು ನನಗೆ ತಿಳಿಸಿಹೇಳಿರಿ.

## ಎಂಟು ಬಗೆಯ ಮದುವೆ

**ವೇದವ್ಯಾಸ:**- ಯುಧಿಷ್ಠಿರ, ವಿವಾಹವು ಬ್ರಾಹ್ಮ, ದೈವ, ಆರ್ಷ, ಪ್ರಾಜಾಪತ್ಯ, ಅಸುರ, ಗಾಂಧರ್ವ, ರಾಕ್ಷಸ, ಪೈಶಾಚ ಎಂದು ಎಂಟು ವಿಧವಾಗಿರುತ್ತದೆ. ವರನನ್ನು ಕರೆದು ವಸ್ತ್ರ ಆಭರಣಗಳಿಂದ ಅಲಂಕೃತಳಾದ ಕನ್ಯೆಯನ್ನು ವಿಧಿಪೂರ್ವಕವಾಗಿ ಧಾರೆ

ಎರೆದು ಕೊಟ್ಟು ಮಾಡುವ ಮದುವೆ ಬ್ರಾಹ್ಮ ವಿವಾಹ ಎನಿಸುವುದು. ಯಜ್ಞ ಯಾಗಗಳನ್ನು ಮಾಡಿಸುವ ಪುರೋಹಿತ ಮುಖಾಂತರ ವಿಧಿಪೂರ್ವಕವಾಗಿ ಮಾಡಿಕೊಟ್ಟ ಕನ್ಯಾದಾನವು ದೈವವಿವಾಹ. ವರನಿಂದ ಒಂದು ಹಸು ಹಾಗೂ ಎತ್ತು ತೆಗೆದುಕೊಂಡು ಮಗಳನ್ನು ಕೊಡುವ ಪದ್ಧತಿಗೆ ಆರ್ಷ ವಿವಾಹ ಎನ್ನುವರು. ವರಕನ್ಯೆಯರ ತಾಯಿ ತಂದೆಯರು ಪರಸ್ಪರ ಮಾತನಾಡಿ ವಧೂವರರಿಗೆ "ನೀವಿಬ್ಬರೂ ವಿವಾಹ ಬಂಧನಕ್ಕೆ ಒಳಪಟ್ಟು ಯಾವಜ್ಜನ್ಮ ಕೂಡಿಯೇ ಬಾಳಿ ಬದುಕಿ ನಿಮ್ಮ ಸ್ವಧರ್ಮವನ್ನು ಪಾಲನ ಮಾಡಿರಿ." ಎಂದು ಹೇಳಿ ಮಾಡಿದ ವಿವಾಹವು ಪ್ರಾಜಾಪತ್ಯ ವಿವಾಹ ಎನಿಸುತ್ತದೆ.

ವಧೂವರರು ಪರಸ್ಪರ ಪ್ರೇಮಿಸಿ ಕಾಮಿಸಿ ಕೂಡಿಕೊಂಡರೆ ಅದಕ್ಕೆ ಗಾಂಧರ್ವ ವಿವಾಹ ಎನ್ನುವರು. ಕನ್ಯೆಯ ಸಮ್ಮತಿಯಿಂದಲೇ ಆ ಕನ್ಯೆಯನ್ನು ಬಲವಂತದಿಂದ ವರನು ಅಪಹರಿಸಿಕೊಂಡು ಹೋಗಿ ಮದುವೆಯಾದರೆ ಅದು ರಾಕ್ಷಸ ವಿವಾಹ. ಕನ್ಯೆಯ ಸಮ್ಮತಿ ಇಲ್ಲದೆ ಬಲಾತ್ಕಾರದಿಂದ ಸೆಳೆದುಕೊಂಡು ಹೋದರೆ ಪೈಶಾಚ ವಿವಾಹ.

ಹಣಕೊಟ್ಟು ಖರೀದಿ ಮಾಡಿ ಮದುವೆ ಮಾಡಿಕೊಳ್ಳುವುದು ಆಸುರ ವಿವಾಹ ಎಂದು ಕರೆಯಲ್ಪಡುವುದು. ಇವುಗಳಲ್ಲಿ ಎಂಟನೆಯದಾದ ಪೈಶಾಚ ವಿವಾಹವು ಅತ್ಯಂತ ನಿಂದ್ಯ ವಾಗಿದೆ. ಈ ಅಸುರ ವಿವಾಹವು ಅಧಾರ್ಮಿಕ ವಿವಾಹವೆಂದೇ ಪರಿಗಣಿಸಲ್ಪಡುವದು. ಇಂಥ ವಿವಾಹದಿಂದ ಪಾಪಿಷ್ಠ ಸಂತತಿಯು ಬೆಳೆಯುವದು. ಪ್ರತಿಯೊಬ್ಬ ಮಾನವನು ತನ್ನ ಸಮಾನ ವರ್ಣದ ಕನ್ಯೆಯರ ಪಾಣಿಗ್ರಹಣವನ್ನು ಮಾಡಬೇಕು. ಋತುಕಾಲ ಬಿಟ್ಟು, ಬೇರೆ ಕಾಲ, ಶ್ರಾದ್ಧ, ಪರ್ವಕಾಲ, ಪುಣ್ಯದಿನ, ನಿಷಿದ್ಧ ತಿಥಿಗಳಲ್ಲಿ ಸ್ತ್ರೀ ಸಹವಾಸವನ್ನು ವರ್ಜಿಸಬೇಕು.

ಋತುಕಾಲದಲ್ಲಿ ಮಾತ್ರ ಸ್ತ್ರೀ ಸಮಾಗಮ ಮಾಡುವ, ಸ್ವಸ್ತ್ರೀಯಲ್ಲಿ ಮಾತ್ರ ಅನುರಾಗ ಇಡುವ ಗೃಹಸ್ಥನು ಬ್ರಹ್ಮಚಾರಿಯೆಂದು ಕರೆಯಲ್ಪಡುತ್ತಾನೆ.

'ಋತುಕಾಲಾಭಿಗಾಮೀ ಯಃ ಸ್ವದಾರನಿರತಶ್ಚ ಯಃ ।
ಸ ಸದಾ ಬ್ರಹ್ಮಚಾರೀತಿ ವಿಜ್ಞೇಯಃ ಸ ಗೃಹಾಶ್ರಮೀ ॥'

ಆರ್ಷವಿವಾಹದಲ್ಲಿ ಎರಡು ಗೋಗಳನ್ನು (ಒಂದು ಎತ್ತು ಒಂದು ಆಕಳು) ತೆಗೆದುಕೊಳ್ಳುವ ಸಂಪ್ರದಾಯವಿದ್ದರೂ ದ್ರವ್ಯ ಶುಲ್ಕ ಅಥವಾ ಕರಾರು ಯಾ ತೆರವಿನ ರೂಪದಲ್ಲಿ ಇದ್ದರೆ, ಅದು ನಿಷಿದ್ಧವೇ. ಕೇವಲ ಪ್ರೀತಿಯ ಅಥವಾ ಆದರದ ಸಂಕೇತವಾಗಿ ವರಪಕ್ಷದವರಿಂದ ನಿಮಿತ್ತ ಮಾತ್ರಕ್ಕೆ ಒಂದು ಎತ್ತು ಹಸುವನ್ನು ತೆಗೆದುಕೊಳ್ಳುವ ರೂಢಿಯು ಬಂದಿದೆ. ಈ ಎಲ್ಲ ವಿವಾಹಗಳಲ್ಲಿಯೂ ಕನ್ಯಾಪಿತನು ಸ್ವಸಂತೋಷದಿಂದ ಮಗಳ ಮೇಲಿನ ಮಮತೆಯಿಂದ ವಸ್ತ್ರ ಆಭರಣ ಅಲಂಕಾರ ದಾನ ದಕ್ಷಿಣೆಗಳನ್ನು ಪ್ರೀತಿ ಪುರಸ್ಸರವಾಗಿ ಕೊಡುವುದಕ್ಕೆ ಅವಕಾಶವಿದೆ. ಆದರೆ ಅದು ಕಡ್ಡಾಯ, ಕರಾರ, ಕನ್ಯಾಶುಲ್ಕ, ಮುಂತಾದ ರೂಪವನ್ನು ತಳೆದರೆ ಅದು ಅತ್ಯಂತ ನಿಷಿದ್ಧವೂ ಅಧರ್ಮವೂ ಪಾಪಜನಕವೂ ಆಗುತ್ತದೆ. ಕರಾರು ಮಾಡಿ ಕನ್ಯೆಯ ಕಡೆಯಿಂದ ಶುಲ್ಕ, ದಕ್ಷಿಣೆ ಅತವಾ ತೆರವು ರೂಪದಿಂದ ಅತ್ಯಲ್ಪ ಹಣವನ್ನು ತೆಗೆದುಕೊಂಡರೂ ಅದು ಕನ್ಯಾವಿಕ್ರಯ ರೂಪವಾದ ಮಹಾಪಾಪವೆನಿಸಿ ನರಕಾದಿ ಅನರ್ಥಗಳಿಗೆ ಕಾರಣವಾಗುವುದು. ಕನ್ಯೆಯನ್ನು ಮಾರಾಟ ಮಾಡುವುದರಿಂದ ಮನುಷ್ಯನು ಒಂದು ಕಲ್ಪಕಾಲದವರೆಗೆ 'ಕ್ರಿಮಿ ಭೋಜನ' ಎಂಬ ನರಕದಲ್ಲಿ ಕೊಳೆಯಬೇಕಾಗುವದು.

ಆದುದರಿಂದ ಕನ್ಯೆಯಿಂದ ಹಣವನ್ನು ತೆಗೆದುಕೊಂಡು ಮಾಡುವ ಎಲ್ಲ ವಿವಾಹಗಳೂ ನಿಂದ್ಯವೂ ಪಾಪಕಾರಕವೂ ಆಗಿರುತ್ತವೆ. ಇಂಥ ವಿವಾಹಗಳಿಂದ ವರವಧೂ ಪಕ್ಷದವರಿಬ್ಬರೂ ಪತಿತರಾಗುತ್ತಾರೆ. ನ್ಯಾಯದ ವ್ಯಾಪಾರ, ಅಧಮರ ಸೇವೆ, ವೇದಗಳ ನಿಂದ್ಯೆ ಸ್ವಕರ್ಮ ಲೋಪ, ಕನ್ಯಾಶುಲ್ಕ ಅಥವಾ ವರಶುಲ್ಕ ತೆಗೆದುಕೊಂಡು ಮಾಡಿದ ವಿವಾಹ ಇವು ಆರು ಮಾನವನು ಪತಿತನಾಗಲಿಕ್ಕೆ ಪ್ರಮುಖ ಕಾರಣಗಳು ಆಗಿರುತ್ತವೆ.

ಗೃಹಸ್ಥನು ತನ್ನ ವೈವಾಹಿಕ ಅಗ್ನಿಯಲ್ಲಿ ಪ್ರತಿದಿನವೂ ಗೃಹ್ಯ ಕರ್ಮಗಳನ್ನು ಅನುಷ್ಠಾನ ಮಾಡಬೇಕು. ಪಾಕಯಜ್ಞವನ್ನು ಪಂಚಯಜ್ಞಗಳನ್ನೂ ಅನುಷ್ಠಾನ ಮಾಡಬೇಕು. ಈ ಪ್ರಪಂಚದಲ್ಲಿ ಬದುಕಿ ಬಾಳುವ ಪ್ರತಿಯೊಬ್ಬ ಮಾನವನಿಂದ ಅನೇಕ ತರಹದ ಪ್ರಾಣಿಹಿಂಸೆಗಳು ಅನಿವಾರ್ಯವಾಗಿ ಮಾಡಲ್ಪಡುತ್ತವೆ. ಕಣ್ಣಿಗೆ ಕಾಣದ ಅತೀ ಸೂಕ್ಷ್ಮ ಜಂತುಗಳು ಇರುವದರಿಂದ ಉಸಿರಾಡುವಾಗ, ನಡೆದಾಡುವಾಗ, ಅಡಿಗೆ ಬೇಯಿಸುವಾಗ, ತರಕಾರಿ ಹೆಚ್ಚುವಾಗ, ಧಾನ್ಯವನ್ನು ಒರಳಲ್ಲಿ ಕುಟ್ಟುವಾಗ, ಕಸ ಹೊಡೆಯುವಾಗ, ಕಾಲು ಇರಿಸುವಾಗ ಎಷ್ಟೋ ಸೂಕ್ಷ್ಮಾತಿಸೂಕ್ಷ್ಮ ಪ್ರಾಣಿಗಳು ಸತ್ತು ಹೋಗುವದರಿಂದ ನಮಗೆ ತಿಳಿಯದೇ ಪ್ರಾಣಿಹಿಂಸೆ ನಡೆದುಹೋಗುತ್ತದೆ. ಈ ಬಗೆ ಬಗೆಯ ಜಂತುಗಳ ಹಿಂಸೆ ಮಾಡದೇ ಮನುಷ್ಯನು ಬದುಕುವುದೇ ಸಾಧ್ಯವಿಲ್ಲ. ಆದುದರಿಂದ ಈ ಎಲ್ಲ ಅಜ್ಞಾತ ಅನಿವಾರ್ಯ ಜಂತುಹಿಂಸಾ ಪಾಪಗಳನ್ನೆಲ್ಲ ಕ್ರೋಢೀಕರಿಸಿ, 'ಪಂಚಸೂನಾ' ಎಂದು ಕರೆದಿದ್ದಾರೆ. ಈ ಪಂಚಸೂನಾ ದೋಷಗಳಿಂದ ಬಂದ ಪಾಪಗಳ ಪರಿಹಾರಕ್ಕಾಗಿ ಪ್ರಾಯಶ್ಚಿತ್ತ ಎಂದು ವೈಶ್ವದೇವ ಬಲಿಹರಣಾದಿ ಪಂಚಮಹಾಯಜ್ಞಗಳನ್ನು ಗೃಹಸ್ಥಾಶ್ರಮಿಗಳು ಮಾಡಬೇಕು.

ಈ ಪಂಚಮಹಾಯಜ್ಞಗಳು ಗೃಹಸ್ಥಾಶ್ರಮಿಯು ತಾನು ಬಾಳಿ ಬದುಕಲಿಕ್ಕಾಗಿ ಅನಿವಾರ್ಯವಾಗಿ ಮಾಡಲೇಬೇಕಾದ ಪ್ರಾಣಿಹಿಂಸಾರೂಪ ಪಾಪಗಳನ್ನು ನಾಶಮಾಡವುದಲ್ಲದೇ ಗೃಹಸ್ಥಾಶ್ರಮಿಗಳ ಸರ್ವತೋಮುಖವಾದ ಪುಣ್ಯವೃದ್ಧಿ ಹಾಗೂ ಕಲ್ಯಾಣಗಳಿಗೆ ಕಾರಣವಾಗುತ್ತವೆ.

ಬ್ರಹ್ಮಯಜ್ಞ, ಪಿತೃಯಜ್ಞ, ದೇವಯಜ್ಞ, ಭೂತಯಜ್ಞ, ಮನುಷ್ಯಯಜ್ಞ ಇವೇ ಐದು ಗೃಹಸ್ಥರು ಪ್ರತಿದಿನವೂ ಮಾಡಬೇಕಾದ ಪಂಚಮಹಾಯಜ್ಞಗಳು. ವೇದಶಾಸ್ತ್ರಗಳ ಅಧ್ಯಯನ, ಅಧ್ಯಾಪನ, ಸ್ವಾಧ್ಯಾಯ, ಪಾಠ, ಪ್ರವಚನ ಉಪದೇಶ ಮುಂತಾದ ಜ್ಞಾನಕಾರ್ಯಗಳೆಲ್ಲವೂ ಬ್ರಹ್ಮಯಜ್ಞ ಎನಿಸುವುವು. ಕಾಲ ಶ್ರಾದ್ಧ ಹಾಗೂ ಪ್ರತಿದಿನ ಎಳ್ಳು ನೀರಿನಿಂದ ತರ್ಪಣಗಳು, ಪಿತೃಯಜ್ಞ ಬಗೆಬಗೆಯ ಹೋಮಹವನಗಳು ಪಾಕಯಜ್ಞ, ಅಗ್ನಿಹೋತ್ರ ಔಪಾಸನ ಮುಂತಾದವುಗಳು ದೇವಯಜ್ಞ, ಶಾಸ್ತ್ರೋಕ್ತ ಬಲಿಹರಣ, ವೈಶ್ವದೇವಗಳು ಭೂತಯಜ್ಞ. ತಾವಾಗಿಬಂದ ಅತಿಥಿ ಅಭ್ಯಾಗತರ ಸತ್ಕಾರ ಹಾಗೂ ಭೋಜನಗಳು ಮನುಷ್ಯಯಜ್ಞ ಎನಿಸುತ್ತವೆ. ಮನೆಗೆ ಹಸಿದು ಬಂದ ಅಭ್ಯಾಗತನು ಅತಿಥಿ ಎಂದು ಕರೆಯಲ್ಪಡುತ್ತಾನೆ.

ಹೀಗೆ ಯಜ್ಞ ರೂಪವಾಗಿ ದೇವತೆಗಳಿಗೆ ನೈವೇದ್ಯ, ಪಿತೃಗಳಿಗೆ ತರ್ಪಣ, ಅತಿಥಿಗಳಿಗೆ ಅನ್ನವನ್ನು ಕೊಟ್ಟು ತಾನು ಭೋಜನಮಾಡುವವನು 'ಅಮೃತ ಭೋಜಿ' ಎನಿಸುತ್ತಾನೆ. ಇವರೆಲ್ಲರನ್ನು ಬಿಟ್ಟು, ಯಾರಿಗೂ ಊಟಕ್ಕೆ ಹಾಕದೆ, ತಾನೊಬ್ಬನೇ ಉಂಡು ಹೊಟ್ಟೆ

ತುಂಬಿಸಿಕೊಳ್ಳುವವನು 'ಪಾಪಭೋಜಿ' ಆಗುತ್ತಾನೆ. ಆದುದರಿಂದ ಪ್ರತಿಯೊಬ್ಬ ಮಾನವನೂ ಪಂಚಮಹಾಯಜ್ಞಗಳನ್ನು ಮಾಡಿ, ನೈವೇದ್ಯ ವೈಶ್ವದೇವ ಮಾಡಿದ ಅನ್ನವನ್ನು ಅತಿಥಿ ಅಭ್ಯಾಗತರಿಗೆ ಉಣಿಸಿ, ಬಂಧುಬಾಂಧವರೊಂದಿಗೆ ಅಮೃತ ಭೋಜನವನ್ನು ಮಾಡಬೇಕು. ವೈಶ್ವದೇವವಿಲ್ಲದೇ ಊಟಮಾಡುವದರಿಂದ ಜನ್ಮಾಂತರದಲ್ಲಿ ಕಾಗೆಯ ಜನ್ಮ ಬರುವುದು.

## ಮಾನವರು ಮಾಡಬಾರದ ನಿಷಿದ್ಧಕಾರ್ಯಗಳು

ಈ ವರೆಗೆ ಧರ್ಮದೃಷ್ಟಿಯಿಂದ ಕರ್ತವ್ಯಾಂಶಗಳನ್ನು ಹೇಳಿದೆ. ಈಗ ಅಕರ್ತವ್ಯಾಂಶಗಳನ್ನು ಎಂದರೆ, ಮಾಡಬಾರದ ನಿಷಿದ್ಧ ಕಾರ್ಯಗಳು ಯಾವವು ಎನ್ನುವುದನ್ನು ಹೇಳುತ್ತೇನೆ ಕೇಳು. ಉದಯಹೊಂದುವ ಹಾಗೂ ಅಸ್ತಮಿಸುವ ಸೂರ್ಯನನ್ನು ನೋಡಬಾರದು. ಮಧ್ಯಾಹ್ನ ಸೂರ್ಯನನ್ನು, ನಡುನೆತ್ತಿಯ ಮೇಲೆ ಉರಿಯುತ್ತಿರುವ ಸೂರ್ಯಮಂಡಲವನ್ನು ತೆರಗಣ್ಣಿನಿಂದ ನಿರುಕಿಸಬಾರದು. ನೀರಿನಲ್ಲಿ ತನ್ನ ನೆರಳನ್ನು ನೋಡಬಾರದು. ಕೆಸರಿನಲ್ಲಿ ಓಡಬಾರದು. ಬಟ್ಟೆಯಿಲ್ಲದೇ ಸ್ನಾನಮಾಡಬಾರದು. ಬಟ್ಟೆ ತೊಡದ ಸ್ತ್ರೀಯನ್ನು ನೋಡಬಾರದು. ರಜಸ್ವಲೆಯಾದ ಸ್ತ್ರೀಯರ ಜೊತೆಗೆ ಒಂದೇ ಮನೆಯಲ್ಲಿ ಕುಳಿತು ಊಟ ಉಪಹಾರ ಮಾಡಬಾರದು. ಒಂಟಿ ವಸ್ತ್ರ ಧರಿಸಿ ಭೋಜನ ಮಾಡಬಾರದು. ದೇವರ ಪೂಜೆ ತರ್ಪಣಗಳನ್ನು ಮಾಡದೆ ಅನ್ನ ಗ್ರಹಣಮಾಡಬಾರದು. ಗೋಶಾಲೆ, ಬಿದಿರುಮೆಳೆ, ಬೂದಿ, ಪವಿತ್ರ ಸ್ಥಳಗಳಲ್ಲಿ ಮಲಮೂತ್ರ ವಿಸರ್ಜನೆ ಮಾಡಬಾರದು. ಬೆಂಕಿಯಲ್ಲಿ ಕಾಲುಗಳನ್ನು ಕಾಯಿಸಬಾರದು. ಅಪವಿತ್ರ ವಸ್ತುಗಳನ್ನು ಬೆಂಕಿಯಲ್ಲಿ ಹಾಕಬಾರದು. ಯಾವ ಪ್ರಾಣಿಯನ್ನೂ ಹಿಂಸಿಸಬಾರದು. ಎರಡೂ ಸಂಧ್ಯಾಕಾಲಗಳಲ್ಲಿ ಭೋಜನ ಶಯನಗಳನ್ನು ಮಾಡಬಾರದು. ಕರು ಹಾಲು ಕುಡಿಯುವಾಗ ತಡೆಯಬಾರದು. ಯಾರೂ ಇಲ್ಲದಲ್ಲಿ ಮಲಗಬಾರದು. ಮಲಗಿದ ಮನುಷ್ಯನನ್ನು ಎಬ್ಬಿಸಬಾರದು. ಒಂಟಿಯಾಗಿ ಕಾಡುದಾರಿಯಲ್ಲಿ ನಡೆಯಬಾರದು. ಬೊಗಸೆಯಿಂದ ನೀರನ್ನು ಕುಡಿಯಬಾರದು. ಕೆನೆತೆಗೆಯದ ಮೊಸರನ್ನು ಹಗಲಿನಲ್ಲಿ ತಿನ್ನಬಾರದು. ರಜಸ್ವಲೆಯರ ಜೊತೆ ಮಾತನಾಡಬಾರದು. ರಾತ್ರಿಯಲ್ಲಿ ಹೊಟ್ಟೆಭಾರವಾಗುವಂತೆ ಊಟಮಾಡಬಾರದು. ನೃತ್ಯ ಸಂಗೀತ ವಾದ್ಯಗಳನ್ನು ವ್ಯಸನ ರೂಪವಾಗಿ ಅಂಟಿಸಿಕೊಳ್ಳಬಾರದು. ಕಂಚಿನ ಪಾತ್ರೆಯಲ್ಲಿ ಕಾಲುತೊಳೆಯಬಾರದು. ತನ್ನ ಮನೆಯಲ್ಲಿ ಶ್ರಾದ್ಧಮಾಡಿ ಬೇರೆ ಕಡೆ ಊಟಕ್ಕೆ ಹೋಗಬಾರದು. ಬೇರೆಯವರು ಉಟ್ಟು ತೊಟ್ಟ ಬಟ್ಟೆಯನ್ನು ತೊಡಬಾರದು. ಬೇರೊಬ್ಬರ ಜೋಡುಗಳನ್ನು ಮೆಟ್ಟಬಾರದು. ಒಡಕು ಪಾತ್ರೆಯಲ್ಲಿ ಉಣ್ಣಬಾರದು. ಸುಟ್ಟುಹೋದ ಆಸನದಮೇಲೆ ಕೂಡಬಾರದು. ಎತ್ತು ಆಕಳುಗಳ ಬೆನ್ನಮೇಲೆ ಏರಬಾರದು. ಹಗಲು ಮಲಗಬಾರದು. ನದೀ ದಂಡೆಯಲ್ಲಿ ಮನೆ ಮಾಡಬಾರದು. ಸ್ಮಶಾನದ ಹೊಗೆಯನ್ನು ಬಡಿಸಿಕೊಳ್ಳಬಾರದು. ಸ್ನಾನಮಾಡಿದ ಬಳಿಕ ಮೈಯನ್ನು ಮತ್ತೆ ಮಲಿನ ಮಾಡಿಕೊಳ್ಳಬಾರದು. ಬೀದಿಯಲ್ಲಿ ಚಂಡಿಕೆಯನ್ನು ಬಿಚ್ಚಿ ನಡೆಯಬಾರದು. ತಲೆ ನಡುಗಿಸಬಾರದು. ತೋಳುಗಳನ್ನು ಬೀಸಬಾರದು. ಕಾಲಿನಿಂದ ಆಸನವನ್ನು ಎಳೆದುಕೊಂಡು ಕೂಡಬಾರದು. ಕೈಯಿಂದ ಶರೀರವನ್ನು ತಿಕ್ಕಬಾರದು. ಸ್ನಾನಮಾಡುವಾಗ ಉಟ್ಟುಕೊಂಡ ವಸ್ತ್ರದಿಂದಲೂ ಮೈಯನ್ನು ಒರೆಸಬಾರದು. ಬೇರೆ ಪಂಜೆಯಿಂದ ಒರಿಸಬೇಕು.

ಹಲ್ಲಿನಿಂದ ಉಗುರನ್ನು ಕಡಿಯಬಾರದು. ಧರ್ಮದ್ರೋಹಿಗಳ ಜೊತೆಗೆ ಊಟಮಾಡಬಾರದು. ಬಟ್ಟೆಯಿಲ್ಲದೇ ಮಲಗಬಾರದು. ಕೈಯಲ್ಲಿ ಅನ್ನ ರೊಟ್ಟಿ ತೆಗೆದುಕೊಂಡು ಊಟಮಾಡಬಾರದು. ಒದ್ದೆಯಾದ ಕಾಲುಗಳನ್ನು ಒರೆಸಿಕೊಳ್ಳದೇ ಮಲಗಬಾರದು. ಹಾಸಿಗೆಯಮೇಲೆ ಕುಳಿತು ತಿನ್ನಬಾರದು. ಎದ್ದು ನಿಂತು ನೀರು ಕುಡಿಯಬಾರದು. ಮುಸುರೆ ಕೈಯಿಂದ ತಲೆ, ಅಂಗಾಂಗಗಳನ್ನು ಮುಟ್ಟಬಾರದು. ಬೂದಿ, ಇದ್ದಿಲು, ಕೂದಲು, ಮೂಳೆಗಳ ಮೇಲೆ ನಿಲ್ಲಬಾರದು. ಎರಡೂ ಕೈಗಳಿಂದ ತಲೆ ತುರಿಸಬಾರದು. ಎರಡೂ ಕೈಗಳಿಂದ ಯಾರನ್ನೂ ಬಡೆಯಬಾರದು. ಇನ್ನೊಬ್ಬರನ್ನು ನಿಂದಿಸಬಾರದು. ಅಯೋಗ್ಯರಿಗೆ ಮಂತ್ರೋಪದೇಶ ಮಾಡಬಾರದು. ಧರ್ಮದ್ರೋಹಿಗಳನ್ನು ಗೌರವಿಸಿ ಉಚ್ಚ ಆಸನಗಳ ಮೇಲೆ ಕೂಡಿಸಿ ಸತ್ಕರಿಸಬಾರದು. ಶಾಸ್ತ್ರ ವಿರುದ್ಧ ನಡೆಯಬಾರದು. ದೇವ ಧರ್ಮ ವೇದಶಾಸ್ತ್ರಗಳ ನಿಂದೆಯನ್ನು ಮಾಡಬಾರದು. ಈ ಎಲ್ಲ ನಿಷಿದ್ಧಕಾರ್ಯಗಳನ್ನು ಮಾಡಿದರೆ ಮಾನವನು ಇಪ್ಪತ್ತೊಂದು ಬಗೆಯಾದ ನರಕಗಳಲ್ಲಿ ಬಿದ್ದು ದುಃಖವನ್ನು ಪಡಬೇಕಾಗುವುದು.

ಅಕಾಲದಲ್ಲಿ ಮೋಡಗುಡುಗಿದಾಗ ಅನಾಧ್ಯಾಯ ಮಾಡಬೇಕು. ಎಂದರೆ, ಹೊಸಪಾಠವನ್ನು ಅಂದು ಓದಬಾರದು. ಉಲ್ಕಾಪಾತ, ಭೂಕಂಪ, ಬೆಂಕಿಯ ಅನಾಹುತ ಅರ್ಧರಾತ್ರಿ, ಸಂಧ್ಯಾಕಾಲ, ರಾಜ್ಯದ ಮೇಲೆ ಸಂಕಟ, ಸೂತಕ, ಚತುರ್ದಶಿ, ಅಷ್ಟಮಿ ಪ್ರತಿಪದೆ, ಹುಣ್ಣಿಮೆ, ಅಮಾವಾಸ್ಯೆ, ಶ್ರಾದ್ಧ ದಿನ, ಶ್ರಾವಣೀ ದಿನ, ಯುಗಾದಿ ಮುಂತಾದ ದಿನಗಳಂದು ಅಧ್ಯಯನವನ್ನು ಮಾಡಬಾರದು.

ಚತುದರ್ಶಿ ಅಷ್ಟಮಿ ಅಮಾವಾಸ್ಯೆ ಪೂರ್ಣಿಮಾ ದಿನಗಳಲ್ಲಿ ಬ್ರಹ್ಮಚರ್ಯೆಯನ್ನು ಪಾಲಿಸಬೇಕು. ಸತ್ಯವನ್ನು ನುಡಿಯಬೇಕು.

**'ಸತ್ಯಂ ಭ್ರೂಯಾತ್ ಪ್ರಿಯಂ ಭೂಯಾತ್, ನ ಬ್ರೂಯಾತ್ ಸತ್ಯಮಪ್ರಿಯಮ್ ।**
**ಪ್ರಿಯಂ ಚ ನಾನೃತಂ ಭ್ರೂಯಾದೇಷ ಧರ್ಮೋಃ ವಿಧೀಯತೆ ॥'**

ಸತ್ಯವನ್ನು ನುಡಿಯಬೇಕು. ಪ್ರಿಯವನ್ನು ನುಡಿಯಬೇಕು. ಆದರೆ ಅಸತ್ಯವಾದ ಪ್ರಿಯವನ್ನು ಮಾತ್ರ ನುಡಿಯಬಾರದು. ಅಪ್ರಿಯವಾದ ಸತ್ಯವನ್ನೂ ನುಡಿಯಬಾರದು. ಇದೇ ಬೇರೆ ಎಲ್ಲ ಶಾಸ್ತ್ರಗಳಲ್ಲಿ ವಿಹಿತವಾದ ಧರ್ಮ. ಮಾತು, ಮನಸ್ಸು ಮತ್ತು ನಾಲಿಗೆ ಇವು ಮೂರನ್ನೂ ಬಿಗಿ ಹಿಡಿಯಬೇಕು. ಗುರುಹಿರಿಯರನ್ನು ಕಂಡಾಗ ನಮಸ್ಕಾರ ಮಾಡದೇ ಇರಬಾರದು. ಅವರಿಗೆ ತನ್ನ ಆಸನವನ್ನು ಕೊಟ್ಟು ಕೂಡಿಸಿ ಅವರು ಹೇಳಿದ ಮಾತನ್ನು ಕೇಳಬೇಕು ದೇವ, ಬ್ರಾಹ್ಮಣ, ವೇದ, ಅರಸು, ಸಜ್ಜನ, ತಪಸ್ವಿ, ಹಾಗೂ ಪತಿವ್ರತಾ ಸ್ತ್ರೀಯರನ್ನು ಎಂದೂ ನಿಂದೆ ಮಾಡಬಾರದು. ಸತ್ಪಾತ್ರದಲ್ಲಿ ದಾನ ಕೊಡಬೇಕು. ಅದರಿಂದ ಅಕ್ಷಯ ಫಲ ದೊರಕುತ್ತದೆ.

## ದಾನಗಳಿಂದ ಬಗೆಬಗೆಯ ಪುಣ್ಯಫಲ

ಲೋಕದಲ್ಲಿ ಭೂಮಿದಾನ ಮಾಡಿದವನು ಅರಸನಾಗುತ್ತಾನೆ. ಅನ್ನದಾನ ಮಾಡಿದವನು ಸೌಭಾಗ್ಯ ಪಡೆಯುತ್ತಾನೆ. ನೀರನ್ನು ದಾನ ಮಾಡಿದವನು ಸೌಂದರ್ಯವನ್ನು ಹೊಂದುತ್ತಾನೆ. ಯಥೇಷ್ಟ ಭೋಜನವನ್ನು ಮಾಡಿಸಿದವನು ಆರೋಗ್ಯ ವಂತನಾಗುತ್ತಾನೆ.

ದೀಪ ದಾನ ಮಾಡಿದವನು ನೇತ್ರ ಪಾಟವವನ್ನು ಹೊಂದುತ್ತಾನೆ. ಗೋದಾನದಿಂದ ಸೂರ್ಯಲೋಕ, ಸುವರ್ಣದಾನದಿಂದ ದೀರ್ಘಾಯುಷ್ಯ, ಎಳ್ಳಿನ ದಾನದಿಂದ ಉತ್ತಮ ಸಂತಾನ, ಗೃಹದಾನದಿಂದ ಐಶ್ವರ್ಯ, ವಸ್ತ್ರ ದಾನದಿಂದ ಚಂದ್ರಲೋಕ, ಕುದುರೆಯ ದಾನದಿಂದ ದಿವ್ಯ ದೇಹ. ಎತ್ತಿನ ದಾನದಿಂದ ಸಂಪತ್ತು, ಪಲ್ಲಕ್ಕಿಯ ದಾನದಿಂದ ಸುಂದರ ಹೆಂಡತಿ. ಮಂಚ, ಪಲ್ಲಂಗಗಳ ದಾನದಿಂದ ಸುಖೋಪಭೋಗ ಮುಂತಾದವುಗಳು ಫಲ ರೂಪವಾಗಿ ದೊರಕುತ್ತವೆ. ಸುಳ್ಳು ಮಾತಾಡುವದರಿಂದ ಯಜ್ಞಫಲವು ನಷ್ಟವಾಗುತ್ತದೆ. ತಾನು ಮಾಡಿದ ದಾನ ಧರ್ಮ ಕರ್ಮಗಳನ್ನು ತಾನೇ ಪ್ರಶಂಸೆಮಾಡಿಕೊಂಡರೆ, ಹಾಗೂ ತಾನೇ ಪ್ರಚಾರಮಾಡಿದರೆ, ಅವನ ಪುಣ್ಯವೆಲ್ಲವೂ ಕ್ಷೀಣವಾಗುವದು. ದಾನವನ್ನು ಯೋಗ್ಯ ಮನುಷ್ಯನಿಂದಲೇ ತೆಗೆದುಕೊಳ್ಳಬೇಕು. ಆದರೆ ಗಂಧ, ಹೂ, ದರ್ಭೆ, ಹಸು, ಹಾಲು, ಮೊಸರು, ಜೇನುತುಪ್ಪ, ನೀರು, ಕಟ್ಟಿಗೆ, ಇದ್ದಿಲು, ಹಣ್ಣು, ಕಾಯಿ, ಗೆಡ್ಡೆ, ಗೆಣಸು, ಸೊಪ್ಪು, ತರಕಾರಿ, ದಕ್ಷಿಣೆ ಇವುಗಳನ್ನು ಯಾರು ಕೊಟ್ಟರೂ ತೆಗೆದುಕೊಳ್ಳಬಹುದು.

## ಪತಿವ್ರತಾ ಸ್ತ್ರೀಯರ ನಿಯಮ ಮತ್ತು ಧರ್ಮಗಳು

**ವೇದವ್ಯಾಸ:-** ಈ ಧರ್ಮವಾಪಿಯಲ್ಲಿ ಪಿತೃಗಳನ್ನು ಉದ್ದೇಶಿಸಿ ತರ್ಪಣ ಹಾಗೂ ಪಿಂಡದಾನಗಳನ್ನು ಮಾಡಿದರೆ ಅವನ ಪಿತೃಗಳು ಹದಿನಾಕು ಇಂದ್ರರು ಸ್ವರ್ಗದಲ್ಲಿ ಶಾಸನ ಮಾಡುವಷ್ಟು ಕಾಲ ತೃಪ್ತಿಯನ್ನು ಪಡೆಯುತ್ತಾರೆ. ಈ ಕಲಿಯುಗದಲ್ಲಿ ಪುರುಷರು ಸ್ತ್ರೀಯರು ಇಬ್ಬರೂ ಲಂಪಟರೂ, ಚಪಲರೂ, ಪರಸ್ಪರ ವಿಶ್ವಾಸ ಘಾತಿಗಳೂ, ಸ್ವಾರ್ಥಿಗಳೂ, ಪರದ್ರೋಹಿಗಳೂ ಆಗಿ ಇರುವರು. ಅವರ ಇಂಥ ಅನೇಕಾನೇಕ ಪಾಪಗಳು ಈ ಧರ್ಮಾರಣ್ಯ ಯಾತ್ರೆಯಿಂದ ನಾಶವಾಗುವವು. ಇದರಂತೆ ಈ ಧರ್ಮಾರಣ್ಯದ ಯಾತ್ರೆಗೈದು ಈ ಪವಿತ್ರ ತೀರ್ಥದಲ್ಲಿ ಸ್ನಾನಮಾಡಿದ ಸ್ತ್ರೀಯರು ಪರಮ ಪವಿತ್ರರೂ, ಧರ್ಮಬುದ್ಧಿಯವರೂ ಆಗುತ್ತಾರೆ. ಪುರುಷರೂ ಕೂಡ ಈ ಧರ್ಮಾರಣ್ಯದ ತೀರ್ಥಸ್ನಾನದಿಂದ ಅಹಿಂಸಕರೂ ಅತಿಥಿ ಪೂಜಕರೂ ಧರ್ಮಾಪರಾಯಣರೂ ಆಗುತ್ತಾರೆ.

**ಶೌನಕ:-** ಧರ್ಮದ ಮರ್ಮವನ್ನು ಅರಿತ ಸೂತರೇ, ಪತಿವ್ರತಾ ಸ್ತ್ರೀಯರ ಲಕ್ಷಣ ಏನು? ಅವರ ನೀತಿ ನಡವಳಿಕೆ ಹೇಗೆ ಇರಬೇಕು?

**ಸೂತ:-** ಪತಿಯಲ್ಲಿ ನಿರತಿಶಯ ಪ್ರೀತಿಮಾಡುವ ಸತೀಮಣಿಯು ಪತಿವ್ರತೆ ಎನಿಸುವಳು. ಇಂಥ ಪತಿನಿಷ್ಠ ಮಹಿಳೆ ಇರುವ ಮನೆಯೇ ಪಾವನ. ಅಂಥ ಸತೀಮಣಿಯ ಕೈಹಿಡಿದ ಮಾನವ ಧನ್ಯ. ಇಂಥ ಪತಿವ್ರತಾ ಸ್ತ್ರೀಯರ ನೆರಳು ಕೂಡ ಪವಿತ್ರ. ಅವರ ಕಥೆ ಸಮಾಚಾರ ಎಲ್ಲವೂ ಪುಣ್ಯದಾಯಕ. ಅರುಂಧತಿ, ಸಾವಿತ್ರಿ, ಅನಸೂಯಾ, ಶಾಂಡಿಲೀ, ಶತರೂಪಾ, ಸುನೀತಿ, ಸಂಜ್ಞಾ, ಸ್ವಾಹಾ, ಗೌರೀ, ಲಕ್ಷ್ಮೀ, ಮುಂತಾದ ಮಹಿಳಾ ಮಣಿಗಳಂತೆ ಪೂಜ್ಯರಾಗಿರುತ್ತಾರೆ ಎಲ್ಲ ಸತೀಶಿರೋಮಣಿಗಳು. ಇಂಥ ಪತಿವ್ರತಾ ಸ್ತ್ರೀಯರ ಧರ್ಮವನ್ನು ವ್ಯಾಸರು ಧರ್ಮರಾಜನನ್ನು ಕುರಿತು ಚೆನ್ನಾಗಿ ನಿರೂಪಿರುತ್ತಾರೆ.

**ವ್ಯಾಸ:-** ಪತಿವ್ರತಾ ಸ್ತ್ರೀಯರು ಮುಖ್ಯವಾಗಿ ಪತಿಪ್ರಾಣರಾಗಿರಬೇಕು. ಪತಿ ಭೋಜನವಾಗುವವರೆಗೂ ತಾವು ಊಟಮಾಡಬಾರದು. ಅವರು ಎದ್ದುನಿಂತಾಗ ತಾವು ಕುಳಿತು ಕೊಳ್ಳಬಾರದು. ಅವನು ಮಲಗುವುದಕ್ಕಿಂತ ಮೊದಲು ಮಲಗಬಾರದು. ಅವನು ಏಳುವದಕ್ಕಿಂತ ಮೊದಲೇ ಎದ್ದು ಅವನ ಸ್ನಾನ ಪಾನಾದಿಗಳಿಗೆ ಎಲ್ಲವನ್ನೂ

ಅಣಿಗೊಳಿಸಬೇಕು. ಗಂಡನು ಪರಊರಿಗೆ ಹೋದಾಗ ತನ್ನ ಶರೀರವನ್ನು ಆಭರಣ ಅಲಂಕಾರ, ಗಂಧ, ಮಾಲೆ, ಹೊಸಬಟ್ಟೆ, ತಾಂಬೂಲ ಮುಂತಾದವುಗಳಿಂದ ಶೃಂಗಾರ ಮಾಡಿಕೊಳ್ಳಬಾರದು. ಮೇಲಿಂದ ಮೇಲೆ ಪತಿಯ ಹೆಸರನ್ನು ಉಚ್ಚರಿಸಬಾರದು. ಪತಿಯ ನಾಮೋಚ್ಚಾರಣೆಯಿಂದ ಅವನ ಆಯುಷ್ಯವು ಕ್ಷೀಣವಾಗುತ್ತದೆ. ಪರಪುರುಷರ ನಾಮವನ್ನು ಉಚ್ಚರಿಸಬಾರದು. ಅವರೊಡನೆ ಮಾತನಾಡಬಾರದು. ಆದರೆ ಪತಿಯು ಹೇಳದೆ ಇದ್ದರೂ ಅವನ ಸೇವೆ, ಅವನ ಬಟ್ಟೆ ಬರೆಗಳನ್ನು ಸ್ವಚ್ಛಮಾಡುವುದು, ಅವನ ಕಾರ್ಯಕ್ಕೆ ಸೌಕರ್ಯ ಕಲ್ಪಿಸುವುದು. ಪೂಜೆ ಹಾಗೂ ಉಳಿದ ಅವನ ಕಾರ್ಯದ ಒತ್ತಡವನ್ನು ಕಡಿಮೆ ಮಾಡಲು ಪ್ರಯತ್ನಿಸುವದು ತಪ್ಪಲ್ಲ. ಪ್ರತ್ಯಕ್ಷ ಹಾಗೂ ಅಪ್ರತ್ಯಕ್ಷ ದೃಷ್ಟಿಯಿಂದ ಅವನ ಹಿತಕ್ಕಾಗಿ ಕಾರ್ಯಮಾಡುವದು ವಿಹಿತವೇ. ಪತಿಯು ಹೇಳದೇ ಇದ್ದರೂ ಅವನ ಕೆಲಸ ಮಾಡುವುದು ನಾರಿಯ ಕರ್ತವ್ಯ. ಪತಿಯ ಅಪ್ಪಣೆಯಿಲ್ಲದೇ ವ್ರತ, ಉಪವಾಸ, ತೀರ್ಥಯಾತ್ರೆ, ವಿವಾಹ, ಉತ್ಸವ ಯಾವಕಾರ್ಯವನ್ನೂ ಮಾಡಬಾರದು. ಪತಿಯ ಸಮ್ಮತಿಯಿಲ್ಲದೇ ಸ್ತ್ರೀಯರು ಮಾಡಿದ ವ್ರತ ಉಪವಾಸಗಳೆಲ್ಲವೂ ವ್ಯರ್ಥವಾಗುವವು. ಮತ್ತು ಪತಿಯ ಆಯುಷ್ಯ ಕ್ಷೀಣಮಾಡುವವು.

**ವ್ರತೋಪವಾಸ ನಿಯಮಂ ಪತಿಮುಲ್ಲಂಘ್ಯ ಯಾ ಚರೇತ್ ।**
**ಆಯುಷ್ಯಂ ಹರತೇ ಭರ್ತುಃ ಮೃತಾ ನಿರಯಮೃಚ್ಛತಿ ॥**

## ಮುತ್ತೈದೆಯರು ದರಿಸಲೇ ಬೇಕಾದ ಹತ್ತು ವಸ್ತುಗಳು

ಪತಿಯ ಆಯುಷ್ಯವು ಹೆಚ್ಚಾಗಬೇಕು ಎಂದು ಬಯಸುವ ಮುತ್ತೈದೆಯರು ಅರಿಷಿಣ, ಕುಂಕುಮ, ಸಿಂಧೂರ, ಕಾಡಿಗೆ, ಕುಬುಸ, ಮಂಗಳಸೂತ್ರ, ಬಳೆ, ಕಿವಿ ಓಲೆ, (ಪತಿ ಊರಲ್ಲಿದ್ದಾಗ) ತಾಂಬೂಲ, ಕೇಶಶೃಂಗಾರ ಮುಂತಾದ ಹತ್ತು ಸೌಭಾಗ್ಯದ್ರವ್ಯಗಳನ್ನು ಅಗಲಬಾರದು. ಎಂದರೆ ಇವುಗಳನ್ನು ಎಂದೂ ಧರಿಸದೇ ಇರಬಾರದು. ಪತಿಯನ್ನು ನಿಂದಿಸುವ ಅಥವಾ ದ್ವೇಷಮಾಡುವ ಸ್ತ್ರೀಯರ ಸಂಪರ್ಕ ಇಟ್ಟುಕೊಳ್ಳಬಾರದು. ಪತಿ ಊರಲ್ಲಿ ಇಲ್ಲದಾಗ ಒಬ್ಬಳೇ ಮನೆಯಲ್ಲಿ ಇರಬಾರದು. ಬಟ್ಟೆ ಇಲ್ಲದೇ ಮೈ ತೊಳೆಯಬಾರದು, ಒರಳು, ಒನಿಕೆ, ಪೊರಕೆ, ಮಡಿಕೆ, ಬೀಸುಕಲ್ಲು, ಹೊಸ್ತಿಲು ಇವುಗಳ ಮೇಲೆ ಕುಳಿತುಕೊಳ್ಳಬಾರದು. ಪತಿಯ ಎದುರು ಅಹಂಕಾರ, ಜಂಬ, ಹುಚ್ಚು ಧೈರ್ಯಗಳನ್ನು ತೋರಿಸಬಾರದು. ಪತಿಯ ರೋಗಿಯಾಗಿದ್ದರೂ, ವೃದ್ಧನಾಗಿದ್ದರೂ, ದರಿದ್ರದೀನ ದುಃಖಿತನಾಗಿದ್ದರೂ ಅವನನ್ನು ತ್ಯಜಿಸಕೂಡದು. ಕಬ್ಬಿಣದ ಪಾತ್ರೆಯಲ್ಲಿ ಭೋಜನ ಮಾಡಬಾರದು.

ಪತಿಯ ಮಾತಿಗೆ ಸಿಟ್ಟಿನಿಂದ ಉತ್ತರ ಕೊಟ್ಟ ನಾರಿಯು ಊರಲ್ಲಿ ನಾಯಿಯಾಗಿ ಹುಟ್ಟುವಳು. ಅಥವಾ ಕಾಡಿನಲ್ಲಿ ನರಿಯಾಗಿ ಜನಿಸುವಳು. ಪ್ರತಿದಿನವೂ ಪತಿಯ ಪಾದಪೂಜೆ ಮಾಡಿಯೇ ಸತಿಯು ಭೋಜನಮಾಡಬೇಕು. ಅವನಿಗಿಂತ ಎತ್ತರದ ಆಸನದ ಮೇಲೆ ಕೂಡಬಾರದು. ಹೆರವರ ಮನೆಗೆ ಹೋಗಕೂಡದು. ಮುಖದಿಂದ ಬಿರುನುಡಿಗಳನ್ನು ನುಡಿಯಬಾರದು. ಗುರುಹಿರಿಯರ ಎದುರು ದೊಡ್ಡ ದನಿಯಲ್ಲಿ ಗಟ್ಟಿಸಿ ಮಾತನಾಡಬಾರದು. ದುರ್ಬುದ್ಧಿಯಿಂದ ಪತಿಯನ್ನು ಬಿಟ್ಟು ತಾನೊಬ್ಬಳೇ ಬೇರೆ

ಮನೆಯನ್ನು ಮಾಡಿ ಇರುವವಳು ಮುಂದಿನ ಜನ್ಮದಲ್ಲಿ ಗೂಗೆಯಾಗಿ ಹುಟ್ಟುವಳು. ಪರಪುರುಷನನ್ನು ಕಡೆಗಣ್ಣಿನಿಂದ ನೋಡಿದವಳು ಮುಂದೆ ಮೆಳ್ಳಗಣ್ಣಿನಿಂದ ಅರೆಗುರುಡಳಾಗಿ ಹುಟ್ಟುವಳು. ಪತಿಯನ್ನು ಬಿಟ್ಟು ಒಬ್ಬಳೇ ಭಕ್ಷ್ಯಭೋಜ್ಯ, ಸಿಹಿ ತಿಂಡಿಗಳನ್ನು ತಿಂದರೆ ಹಂದಿಯಾಗಿ ಹುಟ್ಟುವಳು. ಗಂಡನಿಗೆ ನೀನು ತಾನು ಎಂದು ಅನಾದರದಿಂದ ಮಾತನಾಡಿದರೆ ಮುಂದೆ ಕಿವುಡಿಯಾಗುವಳು.

''ಮಿತಂ ದದಾತಿ ಹಿ ಪಿತಾ, ಮಿತಂ ಭ್ರಾತಾ ಮಿತಂ ಸುತಃ ।
ಅಮಿತಸ್ಯ ಹಿ ದಾತಾರಂ ಭರ್ತಾರಂ ಕಾ ನ ಪೂಜಯೇತ್ ॥

ಭರ್ತಾ ದೇವೋ ಗುರುರ್ಭರ್ತಾ ಧರ್ಮತೀರ್ಥ ವ್ರತಾನಿ ಚ ।
ತಸ್ಮಾತ್ ಸರ್ವಂ ಪರಿತ್ಯಜ್ಯ ಪತಿಮೇಕಂ ಸಮರ್ಚಯೇತ್ ॥

ತಂದೆ, ತಾಯಿಗಳು ಹೆಣ್ಣು ಮಕ್ಕಳಿಗೆ ಎಷ್ಟೇ ಕೊಟ್ಟರೂ ಪರಿಮಿತವಾಗಿಯೇ ಕೊಡುವರು. ಅಣ್ಣ ತಮ್ಮಂದಿರು ಸ್ವಂತ ಮಕ್ಕಳು ಕೂಡ ಹಣ ಕೊಡುವುದಾದರೆ ಹೆಂಗಸಿಗೆ ಎಣಿಸಿ ಮಿತವಾಗಿ ಲೆಕ್ಕ ಮಾಡಿಯೇ ಕೊಡುವರು. ಲೆಕ್ಕವಿಲ್ಲದೇ ಅಪರಿಮಿತವಾದ ಬೇಕಾದಷ್ಟು ಹಣವನ್ನು ಕೊಡುವವ ಗಂಡ ಮಾತ್ರ. ಹೀಗೆ ಲೆಕ್ಕವಿಲ್ಲದೇ ಸಾಕಾಗುವಷ್ಟು, ಬೇಕಾದಷ್ಟು, ಬೇಡಿದಷ್ಟು ಹಣವನ್ನು 'ಕೊಟ್ಟೆ' ಎನ್ನದೆ ಕೊಡುವ ಪತಿಯನ್ನು ಯಾವನಾರಿ ತಾನೆ ಪೂಜಿಸಲಿಕ್ಕಿಲ್ಲ! ಸ್ತ್ರೀಯರಿಗೆ ಪತಿಯೇ ದೇವರು. ಪತಿಯೇ ಗುರು. ಎಲ್ಲ ತೀರ್ಥಕ್ಷೇತ್ರ, ಧರ್ಮ, ವ್ರತ ಎಲ್ಲವೂ ಪತಿಯೇ ಆಗಿರುತ್ತಾನೆ. ಆದುದರಿಂದ ಪತಿವ್ರತೆಯಾದ ಹೆಂಗಸು ಈ ಎಲ್ಲ ದೇವರ ಪೂಜೆ ಗುರುಸೇವೆ, ಧರ್ಮಾಚರಣ, ತೀರ್ಥಯಾತ್ರೆ, ವ್ರತೋಪವಾಸ ಮುಂತಾದವುಗಳನ್ನೆಲ್ಲ ತೊರೆದು ಬಿಟ್ಟು ಪತಿಯ ಪೂಜೆಯೊಂದನ್ನೇ ಮಾಡಬೇಕು.

ಇಂಥ ಪತಿವ್ರತೆಯನ್ನು ನೋಡಿದರೆ ಬೆಂಕಿಯು ಕೂಡ ನಡುಗುತ್ತದೆ. ಸೂರ್ಯನು ಕೂಡ ಅಂಥವಳಿಗೆ ತನ್ನ ಬಿಸಿಲಿನ ಝಳವನ್ನು ತಾಗಿಸಲು ಹೆದರುತ್ತಾನೆ. ಪತಿವ್ರತೆಯಾದ ಪ್ರಮದೆಯು ತನ್ನ ತಾಯಿ ತಂದೆ ಹಾಗೂ ಗಂಡ ಈ ಮೂರೂ ಮನೆತನಗಳ ಹಿಂದು ಮುಂದಿನ ಮೂರೂ ತಲೆಮಾರಿನ ಬಂಧು ಬಳಗದವರೆಲ್ಲರೂ ಸ್ವರ್ಗ ಸುಖ ಅನುಭವಿಸುವಂತೆ ಮಾಡುವಳು. ಇದಕ್ಕೆ ವಿರುದ್ಧವಾಗಿ ದುರಾಚಾರಿ ಸ್ತ್ರೀಯು ತನ್ನ ಮೂರು ಕುಲದ ಬಾಂಧವರನ್ನು ನರಕದಲ್ಲಿ ಹಾಕುವಳು. ಪತಿವ್ರತೆಯರು ಮುಟ್ಟಿದ ವಸ್ತು, ಮೆಟ್ಟಿದ ನೆಲ, ಇದ್ದ ಮನೆ, ಮಿಂದ ಜಲ, ಎಲ್ಲವೂ ತೀರ್ಥದಷ್ಟು ಪವಿತ್ರ.

ಶ್ರೇಷ್ಠ ಬ್ರಾಹ್ಮಣರು ಪಠಿಸುವ ಗಾಯತ್ರಿ ಮಂತ್ರಗಳಲ್ಲಿ ಪರಮ ಪತಿವ್ರತೆಯಾದ ಗಾಯತ್ರೀದೇವಿಯ ಪಾತಿವ್ರತ್ಯ ಪ್ರಭಾವವೇ ಪ್ರತಿಷ್ಠಿತವಾಗಿದ್ದು ಅದರ ಪುಣ್ಯ ಪ್ರಭಾವಕ್ಕೆ ಕಾರಣವಾಗಿದೆ.

ಸೌಂದರ್ಯದಿಂದ ಚೆಲುವೆಯರಾದ ಲಾವಣ್ಯವತಿಯರು ಈ ಭೂಲೋಕದಲ್ಲಿ ಅಸಂಖ್ಯ ಜನರು ಇರಬಹುದು. ಆದರೆ ಪರಮ ಪತಿವ್ರತೆಯಾದ ಪುಣ್ಯ ಮಹಿಳೆ ಮಾತ್ರ ವಿಶ್ವೇಶ್ವರನ ಪರಮಾನುಗ್ರಹದಿಂದಲೇ ಮಾನವನಿಗೆ ಮಡದಿಯಾಗಿ ದೊರಕುವಳು. ಗೃಹಸ್ಥಾಶ್ರಮಕ್ಕೆ ಮೂಲ ಆಧಾರ ಪತ್ನಿಯೇ ಆಗಿರುತ್ತಾಳೆ. ಮಾನವ ಜೀವನದ ಸುಖದ

ಸ್ತ್ರೋತವೂ ಆಗಿದ್ದಾಳೆ ಈ ಮಹಿಳೆ. ಧರ್ಮದ ಫಲ ಅವಳ ಅಧೀನ. ಒಳ್ಳೆ ಸಂತಾನ ಪ್ರಾಪ್ತಿಯು ಭಾರ್ಯೆ ಮೂಲಕವೇ. ಮನೆಯಲ್ಲಿ ಹೆಂಡತಿ ಇದ್ದರೆ ಮಾತ್ರ ದೇವತೆಗಳಿಗೆ ಸಂತಸ. ಪಿತೃಗಳಿಗೆ ಸಮಾಧಾನ. ಅತಿಥಿಗಳಿಗೆ ತೃಪ್ತಿ, ಯಾವನ ಮನೆಯಲ್ಲಿ ಪತಿವ್ರತೆಯಾದ ನಾರಿ ನೆಸಿಲಿರುವಳೋ ಅದೇ ಮಂಗಳ ಮಂದಿರ. ಇಂಥ ಸತೀಮಣಿಯ ಕೈಹಿಡಿದವನೇ ಭಾಗ್ಯವಂತ ಗೃಹಸ್ಥ. ಗಂಗೆಯಲ್ಲಿ ಮಿಂದರೆ ಮೈ ಶುಚಿ ಆಗುವದು. ಪತಿವ್ರತೆಯರ ದರ್ಶನ ಮಾಡಿಕೊಂಡರೆ ಮನೆಯ ಜನರೆಲ್ಲರೂ ಪವಿತ್ರರಾಗುವರು.

## ವಿಧವಾಧರ್ಮ

ವಿಧವಾ ಸ್ತ್ರೀ ಪಲ್ಲಂಗದ ಮೇಲೆ ಸುಖ ಸುಪ್ಪತ್ತಿಗೆಯಲ್ಲಿ ಮಲಗಬಾರದು. ನೆಲದಮೇಲೆಯೇ ಶಯನ ಮಾಡಬೇಕು ಮೈಯನ್ನು ಶೃಂಗರಿಸಬಾರದು. ಅಲಂಕಾರಗಳನ್ನು ಮಾಡಬಾರದು. ವಿಲಾಸೀ ವಸ್ತುಗಳನ್ನು ಸೇವಿಸಬಾರದು. ಸುಗಂಧೀ ಪರಿಮಳ ದ್ರವ್ಯಗಳನ್ನು ಉಪಯೋಗಿಸಕೂಡದು. ಪ್ರತಿದಿನವೂ ಪತಿಯ ಹೆಸರಿನಿಂದ ದರ್ಭೆಹಾಕಿದ ನೀರಿನಿಂದ ತರ್ಪಣವನ್ನು ಕೊಡಬೇಕು. ಪತಿ, ಪತಿಯ ತಂದೆ, ಪತಿಯ ತಂದೆಯ ತಂದೆ ಇವರ ಹೆಸರನ್ನು ಮೂರು ಮೂರು ಸಲ ಉಚ್ಚರಿಸಿ ನೀರು ಬಿಡಬೇಕು. ಪತಿಯ ಅಂತರ್ಗತನಾದ ವಿಷ್ಣುವನ್ನು ದಿನ ದಿನವೂ ಪೂಜೆಮಾಡಬೇಕು. ಪತಿರೂಪಿಯಾದ ಪರಮೇಶ್ವರನನ್ನು ಧ್ಯಾನಿಸಬೇಕು. ಪತಿಗೆ ಅತ್ಯಂತ ಇಷ್ಟವಾದ ವಸ್ತುಗಳನ್ನು ಸದಾಚಾರಿ ಬ್ರಾಹ್ಮಣರಿಗೆ ಪತಿಯ ತೃಪ್ತಿಗಾಗಿ ದಾನಕೊಡಬೇಕು. ವಿಧವಾ ಸ್ತ್ರೀಯರು ವಿಶೇಷವಾಗಿ ಕಾರ್ತೀಕ ವೈಶಾಖ ಮಾಸಗಳಲ್ಲಿ ವಿಹಿತವಾದ ಧರ್ಮಕರ್ಮಗಳನ್ನು ಮಾಡಿ, ನಿಯಮ ನಿಬಂಧನೆಗಳನ್ನು ತಪ್ಪದೇ ಪಾಲಿಸಬೇಕು. ಸ್ನಾನ, ದಾನ, ತೀರ್ಥಯಾತ್ರೆ, ಪುರಾಣ ಶ್ರವಣ ಮುಂತಾದವುಗಳನ್ನು ಸಂತತವೂ ಮಾಡುತ್ತಲಿರಬೇಕು.

ಆಸ್ತಿಕರಾದವರು ಈ ಧರ್ಮಾರಣ್ಯದಲ್ಲಿಯ ಧರ್ಮತೀರ್ಥದಲ್ಲಿ ವಿಧಿಪೂರ್ವಕವಾಗಿ ಶ್ರಾದ್ಧವನ್ನು ಮಾಡಬೇಕು. ಶ್ರಾದ್ಧ ಕಾಲದಲ್ಲಿ ನೆಲದ ಮೇಲೆ ಚೆಲ್ಲಿದ ಪಿಂಡಾನ್ನದಿಂದ ಪಿಶಾಚಿ ಯೋನಿಯಲ್ಲಿದ್ದ ಪಿತೃಗಳಿಗೂ ತೃಪ್ತಿಯಾಗುವದು. ಶ್ರಾದ್ಧ ಕರ್ತೃವಿನ ಕೈಯಿಂದ ಕೆಳಗೆಬಿದ್ದ ಅನ್ನದ ಕಣಗಳಿಂದ ದೇವಭಾವಹೊಂದಿದ ಪಿತೃಗಳಿಗೆ ತೃಪ್ತಿ ಪಿಂಡಗಳನ್ನು ಎತ್ತಿದ ಬಳಿಕ ನೆಲದ ಮೇಲೆ ಬಿದ್ದ ಅನ್ನದ ಕಣಗಳಿಂದ ಪಾತಾಳದಲ್ಲಿದ್ದ ಪಿತೃಗಳಿಗೂ ತೃಪ್ತಿಯಾಗುವುದು. ಶ್ರಾದ್ಧ ಕಾಲದಲ್ಲಿ ಕೂರ್ಚಾ ಎಂಬ ದರ್ಭೆಯ ಪೊರಕೆಯಿಂದ ನೀರನ್ನು ಪ್ರೋಕ್ಷಿಸುವರು. ಅದರಿಂದ ಸಂಸ್ಕಾರ ಹೀನರಾದ ಧರ್ಮಭ್ರಷ್ಟ ಹಿಂದಿನ ಪಿತೃಗಳಿಗೆ ತೃಪ್ತಿ ಆಗುವುದು. ಹೀಗೆ ಶ್ರಾದ್ಧ ಕರ್ಮದಿಂದ ಎಲ್ಲ ಬಂಧುಬಾಂಧವರ ಸಂತೃಪ್ತಿ ಆಗುವದು. ಅನ್ನದಿಂದ ಶ್ರಾದ್ಧ ಮಾಡುವ ಯೋಗ್ಯತೆ ಇಲ್ಲದಿದ್ದರೆ ಕೇವಲ ತರಕಾರಿಯಿಂದಲೂ ಶ್ರಾದ್ಧ ಮಾಡಬಹುದು. ಒಟ್ಟಾರೆ ಹೇಗಾದರೂ ಮಾಡಿ ಪಿತೃಕಾರ್ಯವಾದ ಶ್ರಾದ್ಧವನ್ನು ಶ್ರದ್ಧೆಯಿಂದ ಮಾಡಬೇಕು. ಇದರಿಂದ ಶ್ರಾದ್ಧಕರ್ತರು ಎಂದೂ ಪರಲೋಕದಲ್ಲಿ ದುಃಖವನ್ನು ಅನುಭವಿಸುವ ಪ್ರಸಂಗವು ಬರುವದಿಲ್ಲ.

ಈ ಧರ್ಮಾರಣ್ಯದಲ್ಲಿ ಪುಣ್ಯಕರ್ಮಗಳನ್ನು ಆಚರಿಸಿದರೆ ಅದು ಅನಂತ ಫಲದಾಯಕ. ಪಾಪಕರ್ಮಗಳನ್ನು ಆಚರಿಸಿದರೆ ಅದರಿಂದ ಅನಂತ ದುಃಖ. ಈ ಧರ್ಮಾರಣ್ಯದಲ್ಲಿ ಎಲ್ಲ ಶುಭಾಶುಭ ಕರ್ಮಗಳು ಅತ್ಯಧಿಕವಾದ ಪುಣ್ಯಪಾಪಗಳ ಫಲಾನುಭವಕ್ಕೆ ಕಾರಣ ಆಗುವವು.

**ಧರ್ಮರಾಜ:-** ಧರ್ಮಾರಣ್ಯದಲ್ಲಿ ಆಚಾರಪೂತರಾದ ಕರ್ಮಠ ಬ್ರಾಹ್ಮಣರು ನೆಲಸಿದ್ದರಷ್ಟೆ? ಅವರು **ಜನಿಸಿದ ಕುಲ** ಯಾವುದು?

**ವೇದವ್ಯಾಸ:-** ಯುಧಿಷ್ಠಿರ, ಪೂರ್ವಕಾಲದಲ್ಲಿ ಋಷಿಮುನಿಗಳ ಪವಿತ್ರವಾದ ವಂಶಗಳು ಶಾಖೋಪಶಾಖೆಗಳಾಗಿ ಬೆಳೆದವು ಹಾಗೂ ಬೆಳಗಿದವು. ಬ್ರಹ್ಮ ಜ್ಞಾನಿಗಳಾದ ಅಂಥ ಮಹಾಮಹರ್ಷಿಗಳ ವಂಶಪರಂಪರೆಗೆ 'ಗೋತ್ರ' ಎಂದು ಹೆಸರು. ಈ ಅನೇಕ ಗೋತ್ರಗಳಲ್ಲಿ ಇಪ್ಪತ್ನಾಲ್ಕು ಗೋತ್ರಗಳು ಮುಖ್ಯ. ಭಾರದ್ವಾಜ, ವತ್ಸ, ಕೌಶಿಕ, ಕುಶ, ಶಾಂಡಿಲ್ಯ, ಕಾಶ್ಯಪ, ಗೌತಮ, ಛಾಂದಸ, ಜಾತೂಕರ್ಣ್ಯ, ದ್ವಿತೀಯ ವತ್ಸ, ವಶಿಷ್ಠ, ಧಾರಣ, ಆತ್ರೇಯ, ಭಾಂಡಿಲ, ಲೌಕಿಕ, ಕೃಷ್ಣಾಯಣ, ಉಪಮನ್ಯು ಗಾರ್ಗ್ಯ, ಮುದ್ಗಲ, ಕೌಶಿಕ, ಪುಣ್ಯಾಸನ, ಪರಾಶರ, ಕೌಂಡಿಣ್ಯ ಮತ್ತು ಗಾಂಗಾಸನ ಈ ಇಪ್ಪತ್ತುನಾಕು ಪ್ರಧಾನ ಗೋತ್ರಗಳಲ್ಲಿ ಅನೇಕಾನೇಕ ವೇದವಿದ್ವಾಂಸರೂ, ಶಾಸ್ತ್ರಪಾರಂಗತರೂ, ಯಜ್ಞಾನುಷ್ಠಾನ ಪಾರಂಗತರೂ, ಜ್ಞಾನಯೋಗಿಗಳೂ, ಕರ್ಮಯೋಗಿಗಳೂ, ಭಕ್ತಶ್ರೇಷ್ಠರೂ ಉತ್ಪನ್ನರಾದುದರಿಂದ ಈ ಗೋತ್ರಗಳು ಪ್ರಪಂಚದಲ್ಲಿ ಪ್ರಸಿದ್ಧಿಯನ್ನು ಪಡೆದವು. ಪೂರ್ವಕಾಲದಲ್ಲಿ ಈ ಸದಾಚಾರ ಸಂಪನ್ನರಾದ ವಿದ್ವಾಂಸರಿಗೆ ಯಕ್ಷ, ರಾಕ್ಷಸ, ಪಿಶಾಚರಿಂದ ವಿಪರೀತ ತೊಂದರೆ. ಈ ಕೀಳು ಕುಲದ ಕೆಟ್ಟ ಜನರಿಂದ ಬಗೆಬಗೆಯ ಕಾಟ-ಕೋಟಲೆಗಳನ್ನು ಅನುಭವಿಸಿ ಆ ಬ್ರಹ್ಮಜ್ಞಾನಿಗಳು ದೇವತೆಗಳಿಗೆ ಮೊರೆಹೊಕ್ಕರು. "ಈ ರಕ್ಕಸರ ಪೀಡೆಯನ್ನು ನಾವು ತಾಳಲಾರೆವು. ಈ ಗೋಳಿನ ಬದುಕನ್ನು ಬಾಳಲಾರೆವು. ಈ ಸ್ಥಾನವನ್ನು ತೊರೆದು ಬೇರೆಡೆಗೆ ತೆರಳುತ್ತೇವೆ" ಎಂದು ನುಡಿದರು. ಈ ಜ್ಞಾನ ಯೋಗಿಗಳ ನಿರ್ವೇದದ ನುಡಿ ಕೇಳಿ ಎಲ್ಲ ದೇವತೆಗಳು ಮನದಲ್ಲಿ ನೊಂದರು. ಅವರಿಗೆ ಅಭಯದ ಆಶ್ವಾಸನೆ ನೀಡಿ ಅಲ್ಲಿಯೇ ನೆಲೆ ನಿಲ್ಲಲು ಹೇಳಿದರು. ಅವರ ರಕ್ಷಣೆಗಾಗಿ ಪ್ರತಿಯೊಂದು ಗೋತ್ರದಲ್ಲಿಯೂ ಒಬ್ಬೊಬ್ಬ ಯೋಗಿನಿಯನ್ನು ಸ್ಥಾಪಿಸಿದರು. ಆ ಯೋಗಿನಿಯರು ಆ ಗೋತ್ರ ರಕ್ಷಣೆಯ ಭಾರವನ್ನು ವಹಿಸಿದರು. ಇದರಿಂದ ಆ ಗೋತ್ರಗಳಿಗೆ ಆ ದೇವಿಯರು ಕುಲದೇವಿ ಎಂದು ಪೂಜಿತರಾದರು. ಶ್ರೀಮಾತಾ, ತಾರಿಣಿ, ಗೋತ್ರಪಾ, ಆಶಾಪುರಿ, ಇಷ್ಟಾರ್ಥದಾಯಿನಿ, ಪಿಪ್ಪಲಿ, ವಿಕಾರವಶಾ, ಜಗನ್ಮಾತಾ, ಮಹಾಮಾತಾ, ಸಿದ್ಧಾ, ಭಟ್ಟಾರಿಕಾ, ಕದಂಬವಾಸಿನೀ, ಸುಪರ್ಣಾ, ವಸುಜಾ, ಮಹಾದೇವಿ, ಮಾತಂಗಿ, ವಾಣಿ, ಮುಕುಟೇಶ್ವರಿ, ಭದ್ರಿ, ಮಹಾಶಕ್ತಿ, ಸಂಹಾರಿ, ಮಹಾಬಲಾ, ಚಾಮುಂಡಾ ಎಂಬ ಹೆಸರಿನ ಗೋತ್ರಮಾತೆಯರನ್ನು ಆ ಆ ಗೋತ್ರಗಳ ರಕ್ಷಣೆಗಾಗಿ ಬ್ರಹ್ಮ, ವಿಷ್ಣು, ಮಹೇಶ್ವರಾದಿ ದೇವತೆಗಳು ಸ್ಥಾಪನೆ ಮಾಡಿದರು. ಇವರು ಆ ಎಲ್ಲ ಬ್ರಹ್ಮಕುಲದ ಯಜ್ಞಯಾಗ ಮುಂತಾದ ಕರ್ಮಕಲಾಪಗಳು ಪಾಠಪ್ರವಚನ, ಉಪನ್ಯಾಸ, ಉಪದೇಶ ಮೊದಲಾದ ಜ್ಞಾನಕಾರ್ಯಗಳು ನಿರ್ವಿಘ್ನವಾಗಿ ನೆರವೇರುವಂತೆ ಆ ಎಲ್ಲ ಗೋತ್ರದ ಪುತ್ರಪೌತ್ರ ಸಂತಾನ ಪರಂಪರೆಯನ್ನು ಪಾಲಿಸಿಕೊಂಡು ಬಂದರು.

ಹೀಗೆ ಒಂದುನೂರು ವರ್ಷ ಕಳೆದವು. ಅಷ್ಟರಲ್ಲಿ ಈ ಧರ್ಮಾರಣ್ಯದ ಪರಿಸ್ಥಿತಿಯಲ್ಲಿ ಮಾರ್ಪಾಡು ಆಗಿತ್ತು. ಒಂದು ದಿನ ಮುಂಜಾವಿನ ಸಮಯ. ಸೂರ್ಯ ಉದಯಗಿರಿಯ ಮೇಲೆ ತನ್ನ ಅರುಣಕಿರಣಗಳನ್ನು ಎರಚತೊಡಗಿದ್ದ. ಬ್ರಹ್ಮ, ಶಿವ, ವಿಷ್ಣು ತ್ರಿಮೂರ್ತಿಗಳು ಅಲ್ಲಿಗೆ ವಿಮಾನಾರೂಢರಾಗಿ ಬಂದರು. ಅಲ್ಲಿ ನೆಲಸಿದ ವೇದಶಾಸ್ತ್ರ

ಪಾರಂಗತ ವಿದ್ವತ್ ಕುಟುಂಬಗಳು ಕಡು ಕಷ್ಟದಲ್ಲಿ ಇದ್ದುದು ಕಂಡು ಬಂದಿತು. ಮೂವರ ಮನವೂ ನೊಂದಿತು. ಆಗ ವಿಷ್ಣು ಚತುರ್ಮುಖ ಬ್ರಹ್ಮನಿಗೆ ಹೇಳಿದ- ''ಶಾರದಾಪತಿ, ಉಪಜೀವನಕ್ಕಾಗಿ ಕಡು ಕಷ್ಟಬಡುತ್ತಿದ್ದಾರೆ ಇಲ್ಲಿನ ಕುಲೀನ ವಿದ್ವಾಂಸರು ಇವರ ಪಾಲನೆಗಾಗಿ ಏನಾದರೂ ಒಂದು ಯೋಜನೆ ಮಾಡು.''

ಹರಿಯ ಆಜ್ಞೆ ಶಿರೋಮಾನ್ಯ ಆ ಕಮಲಸಂಭವನಿಗೆ. ಕೂಡಲೇ ಅವನು ಕಾಮಧೇನುವನ್ನು ನೆನೆದ. ಬ್ರಹ್ಮದೇವನ ಆದೇಶದಂತೆ ಆ ದೇವಲೋಕದ ಧೇನುವು ತನ್ನ ಖುರಪುಟದಿಂದ ನೆಲವನ್ನು ಕೆದರಿತು. ಮತ್ತು ಹೂಂಕಾರದಿಂದ ಗುಟುರು ಹಾಕಿತು. ಅದರಿಂದ ಮೂವತ್ತಾರು ಸಾವಿರ ವೈಶ್ಯರು ಪ್ರಕಟರಾದರು. ಎಲ್ಲರೂ ಮಹಾಬಲಿಷ್ಠರು. ತಲೆಯಮೇಲೆ ಶಿಖೆ, ಕೊರಳಲ್ಲಿ ಯಜ್ಞೋಪವೀತ. ಮುಖದಲ್ಲಿ ವೇದಶಾಸ್ತ್ರ. ಬ್ರಹ್ಮನಲ್ಲಿ ಭಕ್ತಿ, ಬ್ರಾಹ್ಮಣರಲ್ಲಿ ವಿಶ್ವಾಸ, ತಪಸ್ಸಿನಲ್ಲಿ ನಿಷ್ಠೆ, ಆಚಾರದಲ್ಲಿ ಶುದ್ಧಿ. ಧರ್ಮದಲ್ಲಿ ಪ್ರವೃತ್ತಿ. ಇವರೆಲ್ಲರೂ ಈ ಧರ್ಮಾರಣ್ಯ ಕ್ಷೇತ್ರದಲ್ಲಿ ಮೊದಲಿನಿಂದಲೂ ನೆಲಿಸಿದ ವಿಪ್ರೋತ್ತಮರ ರಕ್ಷಣೆಗಾಗಿ ಟೊಂಕ ಕಟ್ಟಿದರು. ಆಗ ಬ್ರಹ್ಮದೇವರು ಆ ವೈಶ್ಯ ಕುಲದವರಿಗೆ ಹೀಗೆ ಅನುಶಾಸನಗೈದರು.

**ಬ್ರಹ್ಮ:-** ''ನೀವು ಇಲ್ಲಿಯ ಬ್ರಾಹ್ಮಣರು ಮಾಡುವ ಯಜ್ಞಯಾಗಾದಿ ನೈಮಿತ್ತಿಕ ಕಾರ್ಯಗಳಿಗೂ ದೇವಪೂಜೆ, ಪಾಠ ಪ್ರವಚನ, ನೈವೇದ್ಯ ವೈಶ್ವದೇವ ಮುಂತಾದ ನಿತ್ಯಕಾರ್ಯಗಳಿಗೂ ಯಥಾಶಕ್ತಿ ಸಹಾಯ ಸಲ್ಲಿಸಿರಿ. ಅವರಿಗೆ ಉಪಯುಕ್ತವಾದ ದರ್ಭೆ, ಹೂ, ಹಣ್ಣು ಸಮಿಧೆ ಮುಂತಾದವುಗಳನ್ನು ತಂದುಕೊಡಿರಿ. ಅವರ ಆಜ್ಞೆಯನ್ನು ಪಾಲಿಸುತ್ತ ಅವರ ಅನುವರ್ತಿಗಳಾಗಿ ನೀವು ಇರಬೇಕು. ನಿಮ್ಮ ಮನೆಯ ಜಾತಕರ್ಮ, ನಾಮಕರಣ ಮೊದಲು ಮಾಡಿ ಕೊನೆಯ ಅಂತ್ಯಸಂಸ್ಕಾರದವರೆಗೆ ಎಲ್ಲ ಧಾರ್ಮಿಕ ಸಂಸ್ಕಾರಗಳು ಈ ಬ್ರಾಹ್ಮಣರ ಪೌರೋಹಿತ್ಯದಲ್ಲಿಯೇ ನಡೆಯಲಿ.''

ಬ್ರಹ್ಮದೇವನ ಈ ವಚನವನ್ನು ತಲೆಯ ಮೇಲೆ ಹೊತ್ತು ನಡೆಸಿದರು ಗುಣದಿಂದ ಉತ್ತಮರಾದ ಆ ವೈಶ್ಯರು.

ಅಲ್ಲಿಯ ವಿದ್ವಾಂಸರ ಯೋಗಕ್ಷೇಮದ ಹೊಣೆಯನ್ನು ಹೊತ್ತು ನಿಂತ ಆ ಎಲ್ಲ ವೈಶ್ಯರ ಮೇಲೆ ಕರುಣೆ ತುಂಬಿ ಬಂತು ಕೈಲಾಸಪತಿಗೆ. ಯಮಧರ್ಮನಿಗೂ ಈ ವೈಶ್ಯ ಸಮಾಜದ ಸೇವೆ ಹಾಗೂ ಆತ್ಮಾರ್ಪಣೆಯಿಂದ ತುಂಬ ಸಂತೋಷವಾಯಿತು. ಶಿವನ ಆಜ್ಞೆಯಂತೆ ಯಮಧರ್ಮನು ವಿಶ್ವಾವಸು ಎಂಬ ಗಂಧರ್ವನನ್ನು ಮಹಾದೇವರ ಬಳಿಗೆ ಕರೆತಂದ. ಅರವತ್ತು ಸಾವಿರ ಕನ್ಯಾಮಣಿಗಳು ವಿಶ್ವಾವಸುವೇ ಮೊದಲಾದ ಆ ಗಂಧರ್ವರ ಕುಲದಲ್ಲಿ. ಅವರೆಲ್ಲರನ್ನೂ ಪರಮೇಶ್ವರನ ಆಜ್ಞೆಯಂತೆ ವಿಶ್ವಾವಸು ಧರ್ಮಾರಣ್ಯದಲ್ಲಿ ಜ್ಞಾನಿಗಳ ರಕ್ಷಣೆಗಾಗಿ ನೆಲಿಸಿದ ವೈಶ್ಯರಿಗೆ ಧಾರೆ ಎರೆದು ಕೊಟ್ಟ. ಆ ಸಮಯದಲ್ಲಿ ವೇದೋಕ್ತ ವಿಧಿಪೂರ್ವಕವಾಗಿ ದೇವಾಧಿದೇವತೆಗಳ ಸಮಕ್ಷಮದಲ್ಲಿ ಆ ವಿವಾಹಸಮಾರಂಭಗಳು ವೈದಿಕ ಮರ್ಯಾದೆಯಿಂದಲೇ ನಡೆದವು. ಆ ಸಮಯದಲ್ಲಿ ವೈಶ್ಯರು ಗಂಧರ್ವರಿಗೂ, ಪೂರ್ವಜದೇವತೆಗಳಿಗೂ, ಸೂರ್ಯಚಂದ್ರರಿಗೂ, ಯಮರಾಜನಿಗೂ, ಮೃತ್ಯುವಿಗೂ ತಾವು ನಡೆಸಿದ ಯಜ್ಞಗಳಲ್ಲಿ ಆಜ್ಯಹಾಕಿ ಆಹುತಿ ನೀಡಿದರು. ಹೀಗೆ ವಿಧಿಪೂರ್ವಕ ಆಜ್ಯಭಾಗವನ್ನು ಹೋಮದಲ್ಲಿ ಅರ್ಪಣ ಮಾಡಿದ

ಬಳಿಕವೇ ಎಲ್ಲ ವೈಶ್ಯರು ಆ ಕನ್ಯಾಮಣಿಗಳ ಪ್ರಾಣಿಗ್ರಹಣ ಮಾಡಿದರು. ಈ ಮೂವತ್ತಾರು ಸಾವಿರ ಕಾಮಧೇನು ಕುಮಾರರಾದ ವೈಶ್ಯರ ವಂಶವು ಕುಡಿಬಿಟ್ಟು ದಾಂಗುಡಿ ಇಟ್ಟು ಭರದಿಂದ ಬೆಳೆದು ಕೆಲವೇ ದಿನಗಳಲ್ಲಿ ಅಭಿವೃದ್ಧಿಯನ್ನು ಹೊಂದಿತು. ಜನಸಂಖ್ಯೆಯಲ್ಲಿ ಹೀಗೆ ಲಕ್ಷಕ್ಕೂ ಮೀರಿದ ಆ ವೈಶ್ಯರು ಧರ್ಮಾರಣ್ಯದಲ್ಲಿ ನೆಲಿಸಿದ ಕರ್ಮಠ ಧರ್ಮಿಷ್ಠ ಬ್ರಾಹ್ಮಣರಿಗೆ ಸೇವಕರಾದರು. ಈ ವೈಶ್ಯರೆಲ್ಲರೂ ಸದಾಚಾರ ಸಂಪನ್ನರಾಗಿ ಯಜ್ಞ, ಯಾಗ, ಅಗ್ನಿಹೋತ್ರ ಸ್ವಾದಾಕಾರ, ಸ್ವಾಹಾಕಾರ, ಪಾಠ ಪ್ರವಚನ, ಶ್ರವಣ ಮುಂತಾದ ಧರ್ಮಕಾರ್ಯಗಳನ್ನು ನಿರಂತರವೂ ನೇರವೇರಿಸುತ್ತಲೇ ಇದ್ದರು.

## ಗಣೇಶನ ಉತ್ಪತ್ತಿ

**ವ್ಯಾಸ:-** ಬಹು ದೀರ್ಘಕಾಲವು ಕಳೆದ ಬಳಿಕ ಸತ್ಯಯುಗವು ಮುಗಿದು ತ್ರೇತಾಯುಗವು ಆರಂಭವಾಯಿತು. ಆ ಕಾಲದಲ್ಲಿ ಲೋಲಜಿಹ್ವಾಕ್ಷ ಎಂಬ ಓರ್ವ ರಾಕ್ಷಸ ಚಕ್ರವರ್ತಿ. ಅವನಿಗೆ ಬ್ರಹ್ಮಜ್ಞಾನಿಗಳನ್ನು ಕಂಡರೆ ಹೊಟ್ಟೆಯಲ್ಲಿ ಉರಿ. ಈ ಬ್ರಾಹ್ಮಣರು ನೆಲಿಸಿದ ಗುಡಿಸಲುಗಳಿಗೆ ದ್ವೇಷದಿಂದ ಆ ರಾಕ್ಷಸ ಕೊಳ್ಳಿಯಿಟ್ಟ. ಅದರಿಂದ ಆ ಬ್ರಹ್ಮಪುರಿ ಎಲ್ಲವೂ ಬೆಂಕಿಯ ಜ್ವಾಲೆಯಿಂದ ಉರಿಯತೊಡಗಿತು. ಆಕಸ್ಮಿಕವಾಗಿ ತಮ್ಮ ನಗರದಲ್ಲಿ ಈ ಅಗ್ನಿತಾಂಡವವನ್ನು ಕಂಡ ಆ ಪಂಡಿತ ಪ್ರಕಾಂಡರೆಲ್ಲರೂ ಹೆದರಿ ಹೌಹಾರಿದರು. ಅಚೀಚೆ ಚದುರಿ ಓಡಿದರು. ಶ್ರೀಮಾತಾ ಮುಂತಾದ ಗೋತ್ರ ಮಾತೆಯರಿಗೆಲ್ಲ ಕೋಪ ಕೆರಳಿತು. ಅವರು ಲೋಲಜಿಹ್ವಾಕ್ಷನ ಮೇಲೆ ಪ್ರಹಾರ ಮಾಡತೊಡಗಿದರು. ಹೀಗೆ ಅಲ್ಲಿಯ ಕುಲದೇವಿಯರು ಹಾಗೂ ಲೋಲಜಿವ್ಹಾಕ್ಷರಲ್ಲಿ ಭೀಕರ ಯುದ್ಧವು ನಡೆದಾಗ ದೇವೇಂದ್ರನು ದೇವತೆಗಳೊಂದಿಗೆ ಮುರವೈರಿ ಶ್ರೀಹರಿಗೆ ಮೊರೆ ಇಟ್ಟ. ಅವರ ಬಿನ್ನಹವನ್ನು ಕೇಳಿ ಮಹಾವಿಷ್ಣು ಧರ್ಮಾರಣ್ಯಕ್ಕೆ ಬಂದು ತನ್ನ ಸುದರ್ಶನ ಚಕ್ರದಿಂದ ಆ ಲೋಲಜಿವ್ಹಾಕ್ಷ ರಕ್ಕಸನನ್ನು ಸಂಹರಿಸಿದ. ಆಗ ಋಷಿಮುನಿಗಳೆಲ್ಲರೂ ಆನಂದ ನಿರ್ಭರರಾಗಿ ಶ್ರೀಹರಿಯ ಸ್ತೋತ್ರ ಮಾಡಿದರು. ಭಗವಾನ್ ಮಹಾವಿಷ್ಣು ಅವರ ಸ್ತೋತ್ರದಿಂದ ಪ್ರಸನ್ನನಾಗಿ ನುಡಿದ-

''ಋಷಿಮುನಿಗಳೇ, ಹಿಂದೆ ಈ ಕ್ಷೇತ್ರದಲ್ಲಿ ಅನೇಕ ಬ್ರಾಹ್ಮಣರು ನೆಲಿಸಿದ್ದರು. ಅವರೆಲ್ಲರೂ ಈಗ ಎಲ್ಲಿಗೆ ಹೋಗಿರುವರು? ಅವರೆಲ್ಲರನ್ನೂ ಈಗ ಇದ್ದಲ್ಲಿಂದ ಇಲ್ಲಿ ಕರೆದು ತನ್ನಿರಿ'' ಎಂದು ದೇವಗಂಧರ್ವರಿಗೆ ಅಪ್ಪಣೆ ನೀಡಿದ. ಅವನ ಆದೇಶದಂತೆ ದೇವತೆಗಳೂ ಗಂಧರ್ವರೂ ಕೂಡಿ ಲೋಲಜಿಹ್ವಾಕ್ಷನ ಉಪದ್ರವದಿಂದ ಓಡಿಹೋಗಿ ಅಲ್ಲಲ್ಲಿ ಬೇರೆ ಬೇರೆ ಕಡೆಗಳಲ್ಲಿ ನೆಲಿಸಿದ ಬ್ರಾಹ್ಮಣ ಕುಟುಂಬಗಳನ್ನೆಲ್ಲ ಕರೆತಂದರು. ದುಷ್ಟ ದೈತ್ಯನು ಶ್ರೀಹರಿಯ ಸುದರ್ಶನ ಚಕ್ರದಿಂದ ಹತಪತಿತನಾದ ಸುದ್ದಿಯನ್ನು ಕೇಳಿ ಅವರಿಗೂ ಪರಮಾನಂದವಾಗಿ ಧಾವಿಸಿ ಬಂದರು. ಶ್ರೀಲಕ್ಷ್ಮೀಪತಿಗೆ ಭಕ್ತಿಯಿಂದ ವಂದನೆ ಮಾಡಿ ಹೇಳಿದರು- ''ಪ್ರಭು, ನೀನು ಸತ್ಯಲೋಕದಿಂದ ಬಂದು ಈ ಸತ್ಯಮಂದಿರ ರೂಪವಾದ ನಗರವನ್ನು ಮತ್ತೆ ಪುನಃ ಸ್ಥಾಪನೆ ಮಾಡಿರುವೆ. ಆದ್ದರಿಂದ ಇದು ಇನ್ನು ಮುಂದೆ ಕಲಿಯುಗದಲ್ಲಿ 'ಸತ್ಯಮಂದಿರ' ಎಂಬ ಹೆಸರಿನಿಂದ ಪ್ರಖ್ಯಾತವಾಗುವುದು. ಈ ಧರ್ಮಾರಣ್ಯಕ್ಕೆ ಕೃತಯುಗದಲ್ಲಿ ಬ್ರಹ್ಮಾರಣ್ಯ ಎಂಬ ಹೆಸರು ಇದ್ದಿತು. ಈ ತ್ರೇತಾಯುಗದಲ್ಲಿ ಹಾಗೂ ದ್ವಾಪರ ಯುಗದಲ್ಲಿ ಇದಕ್ಕೆ ಸತ್ಯಮಂದಿರ ಎಂದು ಹೆಸರು ಸ್ಥಿರವಾಗಿ ಉಳಿಯಲಿ.''

ಬ್ರಾಹ್ಮಣರ ಈ ಬೇಡಿಕೆಗೆ 'ತಥಾಸ್ತು' ಎಂದ ಶ್ರೀ ವಿಷ್ಣು. ಅನಂತರ ಆ ಎಲ್ಲ ವಿದ್ವಾಂಸರು ತಮ್ಮ ಪುತ್ರ, ಪೌತ್ರ, ಪತ್ನಿ ಪರಿವಾರ, ಸೇವಕರೊಂದಿಗೆ ಮೊದಲಿನಂತೆ ನೆಲೆ ನಿಂತರು. ಈ ಸತ್ಯಮಂದಿರದ ಪೂರ್ವಕ್ಕೆ ಧರ್ಮೇಶ್ವರ, ದಕ್ಷಿಣಕ್ಕೆ ಗಣೇಶ, ಪಶ್ಚಿಮದಲ್ಲಿ ಸೂರ್ಯ, ಉತ್ತರದಲ್ಲಿ ಬ್ರಹ್ಮದೇವರ ಸ್ಥಾನಗಳು ಇರುತ್ತವೆ.

**ಧರ್ಮರಾಜ:-** ಪೂಜ್ಯರೆ, ಗಣಪತಿಯ ಸ್ಥಾಪನೆಯನ್ನು ಯಾರು ಮಾಡಿದರು?

**ವೇದವ್ಯಾಸ:-** ಹಿಂದೆ ಒಮ್ಮೆ ಪಾರ್ವತಿಯು ತನ್ನ ಮೈಮೇಲಿನ ಮಣ್ಣಿನಿಂದ ಒಂದು ಸುಂದರವಾದ ಪ್ರತಿಮೆಯನ್ನು ಮಾಡಿದಳು. ಕೌತುಕದಿಂದ ಅದರಲ್ಲಿ ಜೀವ ಸಂಚಾರವನ್ನು ಮಾಡಿಸಿದಳು. ಆ ಮಗುವಿಗೆ ''ನಾನು ಒಳಗೆ ಸ್ನಾನ ಮಾಡುತ್ತೇನೆ. ಯಾರನ್ನೂ ಒಳಗೆ ಬಿಡಬೇಡ'' ಎಂದು ಹೇಳಿ ಸ್ನಾನಗೃಹದ ಬಾಗಿಲ ಬಳಿ ಕೂಡಿಸಿದಳು. ಅಷ್ಟರಲ್ಲಿ ಮಹಾದೇವರ ಸವಾರಿ ಅಲ್ಲಿಗೆ ಚಿತ್ತೈಸಿತು. ಬಾಗಿಲಲ್ಲಿ ಖಡ್ಗ ಹಿಡಿದು ನಿಂತ ಗಣಪತಿ ಪಾರ್ವತಿಯ ಸ್ನಾನಗೃಹದಲ್ಲಿ ಪ್ರವೇಶಿಸ ಹೊರಟ ಧೂರ್ಜಟಿಯನ್ನು ತಡೆದು ನಿಲ್ಲಿಸಿದ. ''ಯಾರನ್ನೂ ಒಳಗೆ ಬಿಡಲು ಅಪ್ಪಣೆಯಿಲ್ಲ. ಆದುದರಿಂದ ನಿಮ್ಮನ್ನು ನಾನು ಒಳಗೆ ಬಿಡಲಾರೆ.'' ಇದರಿಂದ ಮಹಾದೇವರಿಗೆ ಕೆಂಡದಂಥ ಕೋಪ. ಯಮದಂಡದಂಥ ತ್ರಿಶೂಲ ಎತ್ತಿದ ಎತ್ತಿನ ಮೇಲೆ ಕುಳಿತಂಥ ಆ ಮಹಾದೇವ. ಬಾಲಕ ಗಣಪತಿಯ ತಲೆಯನ್ನು ಕಡಿದು ಹಾಕಿದ. ಅಷ್ಟರಲ್ಲಿ ಒಳಗಿನಿಂದ ಪಾರ್ವತಿ ಬಂದಳು. ತನ್ನ ಹೊಸಮಗು ಸತ್ತುಬಿದ್ದುದನ್ನು ನೋಡಿದಳು. ಉಕ್ಕಿಬಂತು ಅವಳ ದುಃಖ. ಬಿಕ್ಕಿಬಿಕ್ಕಿ ಅತ್ತಳು. ಮಡದಿಯ ಶೋಕ ನೋಡಿ ಮನದಲ್ಲೆ ಮಿಡುಕಿದ ಆ ಮಹಾದೇವ. ಮತ್ತೆ ಆಚೀಚೆ ಹುಡುಕಿದ. ಗಜಾಸುರ ಎಂಬ ದುಷ್ಟದೈತ್ಯ ಆ ಖಂಡ ಪರಶುವಿನ ಕಣ್ಣಿಗೆ ಕಂಡ. ಅವನ ರುಂಡ ಚಂಡಾಡಿತಂದ. ಇಲ್ಲಿ ಸತ್ತುಬಿದ್ದ ಗಣಪತಿಯ ತಲೆಗೆ ಜೋಡಿಸಿದ. ಆದರಿಂದ ಸತ್ತುಬಿದ್ದ ಗಣಪತಿ ಎದ್ದುನಿಂತ. ಆದರೆ ಅವನ ತಲೆ ಮಾತ್ರ ಆನೆಯದಾಗಿತ್ತು. ಆದುದರಿಂದ ಅವನಿಗೆ ಗಜಾನನ ಎಂದು ಹೆಸರು ಇಟ್ಟ ಪರಮೇಶ್ವರ. ಆಗ ಎಲ್ಲ ದೇವತೆಗಳೂ ಮುನಿಗಳೂ ಗಣಪತಿಯನ್ನು ಸ್ತುತಿಸಿದರು. ಪರಮ ಸಂತುಷ್ಟನಾದ ಆ ಗಜಾನನ. ಬೇಕಾದ ವರ ಬೇಡಿರಿ ಎಂದು ಹೇಳಿದ. ಆಗ ದೇವತೆಗಳು ''ಧರ್ಮಾರಣ್ಯದಲ್ಲಿ ನೆಲೆಸಿದ ಬ್ರಾಹ್ಮಣ, ವೈಶ್ಯ ಹಾಗೂ ಎಲ್ಲ ಧರ್ಮದ, ಎಲ್ಲ ಜಾತಿಯ ಜನರನ್ನೂ ನೀನೇ ರಕ್ಷಣೆಮಾಡು. ನಿನ್ನ ಪ್ರಸಾದದಿಂದ ಇಲ್ಲಿ ನೆಲಿಸಿದ ಬ್ರಾಹ್ಮಣ ವೈಶ್ಯ ಹಾಗೂ ಉಳಿದೆಲ್ಲ ಜಾತಿಯ ಜನರೂ ಧನದಿಂದ ಸಂಪನ್ನರಾಗಲಿ. ಸುಖ ಸೌಭಾಗ್ಯಗಳನ್ನು ಪಡೆಯಲಿ ಎಂದು ಕೇಳಿದರು. ದೇವತೆಗಳ ಈ ಅಪೇಕ್ಷೆಯನ್ನು ಏವಮಸ್ತು ಎಂದು ಹೇಳಿ ಗಣಪತಿಯು ವರವನ್ನು ನೀಡಿದ. ದೇವತೆಗಳೆಲ್ಲರೂ ಪರಮಾನಂದಭರಿತರಾಗಿ ಆ ಗಣಾಧಿಪನ ಪೂಜೆಯನ್ನು ಮಾಡಿದರು. ಅಂದಿನಿಂದ ಲೋಕದ ಎಲ್ಲ ಜನರು ವಿವಾಹ, ಉತ್ಸವ, ಯಜ್ಞಗಳಲ್ಲಿ ಮೊದಲು ಗಣಪತಿಯ ಪೂಜೆಯನ್ನು ಮಾಡುತ್ತಾರೆ. ಧರ್ಮಾರಣ್ಯದ ನಿವಾಸಿಗಳ ಮೇಲೆ ಈ ಗಣಾಧೀಶನು ಸರ್ವದಾ ಸುಪ್ರಸನ್ನನಾಗಿಯೇ ಇರುತ್ತಾನೆ.

## ಅಶ್ವಿನೀಕುಮಾರರ ಉತ್ಪತ್ತಿ. ಬಕುಲಾದಿತ್ಯ ಸ್ಥಾಪನೆ

**ವೇದವ್ಯಾಸ:-** ಧರ್ಮರಾಜ, ಭಗವಾನ್ ಶಿವನ ಪಶ್ಚಿಮಕ್ಕೆ ಸೂರ್ಯನ ಪ್ರತಿಷ್ಠಾಪನೆಯನ್ನು ಮಾಡಲಾಗಿದೆ. ಆದುದರಿಂದ ಇದಕ್ಕೆ ರವಿಕ್ಷೇತ್ರ ಎನ್ನುವರು.

ಹಿಂದೆ ದೇವಬಡಿಗನಾದ ವಿಶ್ವಕರ್ಮನ ಕನ್ಯೆ ಸಂಜ್ಞೆಯನ್ನು ಸೂರ್ಯ ನಾರಾಯಣನಿಗೆ ಮದುವೆ ಮಾಡಿಕೊಡಲಾಗಿತ್ತು. ಸಂಜ್ಞೆಗೆ ಸೂರ್ಯದೇವನಿಂದ ಯಮ ಯಮುನಾ ಎಂದು ಇಬ್ಬರು ಪುತ್ರ ಪುತ್ರಿಯರು ಆದರು. ಯಮುನೆ ನದಿಯಾಗಿ ಹರಿದಳು.

ಸೂರ್ಯದೇವನ ತೇಜಸ್ಸು ದಿನದಿನಕ್ಕೆ ವರ್ಧಮಾನ. ಆದರೆ ಸಂಜ್ಞೆಗೆ ಮಾತ್ರ ಆದಿತ್ಯನ ವರ್ಧಿಷ್ಣು ತೇಜವನ್ನು ತಾಳಲಿಕ್ಕೆ ಆಗಲಿಲ್ಲ. ಅವಳು ತನ್ನ ನೆರಳಿನಲ್ಲಿ ತಿರುಳನ್ನು ತುಂಬಿದಳು. ತನ್ನ ಪ್ರತಿಬಿಂಬವಾದ ಛಾಯೆಯಲ್ಲಿಯೇ ಜೀವಾಧಾನಮಾಡಿ ತನ್ನ ಸ್ಥಾನದಲ್ಲಿಟ್ಟು ಹೇಳಿದಳು.

''ಸೋದರಿ, ನೀನು ನನ್ನ ಸ್ಥಾನದಲ್ಲಿಯೇ ಇದ್ದು ನನ್ನ ಪತಿ ರವಿದೇವನ ಸೇವೆ ಮಾಡು. ನನ್ನ ಮಕ್ಕಳಾದ ಯಮ ಯಮುನೆಯರನ್ನು ಚೆನ್ನಾಗಿ ನೋಡಿಕೋ'' ಹೀಗೆ ಹೇಳಿ ಸಂಜ್ಞೆ ವಿಶ್ವಕರ್ಮನ ಮನೆಗೆ ಬಂದಳು. ಕೆಲದಿನಗಳ ಬಳಿಕ ತಂದೆ ವಿಶ್ವಕರ್ಮನು ಮಗಳಿಗೆ ''ಹೆಣ್ಣುಮಕ್ಕಳು ಬಹಳ ದಿನ ತಂದೆಯ ಮನೆಯಲ್ಲಿ ಇರಬಾರದು. ನೀನು ಇನ್ನು ಪತಿಗೃಹಕ್ಕೆ ತೆರಳು'' ಎಂದು ಹೇಳಿದ. ಆದರೆ ಸಂಜ್ಞೆಗೆ ಹೆದರಿಕೆ. ಅವಳ ಪತಿ ಬೆಂಕಿಯ ಬಣಿವೆ. ಅವನ ಅಗ್ನಿ ಚುಂಚನ ವಿದ್ಯುದಾಲಿಂಗನಗಳನ್ನು ನೆನೆದ ಮಾತ್ರಕ್ಕೆ ಅವಳು ಬೆಂದು ಹೋಗುತ್ತಿದ್ದಳು. ಆ ಕೆಂಡದ ಹೊಂಡನಾದ ಗಂಡ ಎಷ್ಟೇ ಸೌಮ್ಯರೂಪ ಧರಿಸಿಬಂದರೂ ಅವನೊಡನೆ ಸರಸ ಅವಳಿಗೊಂದು ಅಗ್ನಿದಿವ್ಯ. ಮದುವೆ ನಂತರ ಕೆಲದಿನ ಹೇಗೋ ಅವನ ಜೊತೆಗೆ ಹೇಗೋ ಸಂಸಾರಮಾಡಿ ಎರಡು ಮಕ್ಕಳನ್ನು ಹೆತ್ತು ಬಾಳುವೆಮಾಡುವಷ್ಟರಲ್ಲಿ ಅವಳ ದೇಹವೆಲ್ಲವೂ ಬೆಂದು ಭರ್ಜಿತ. ಮುಂದೆ ಸೂರ್ಯನ ದೀಪ್ತಿ ದಿನದಿನವೂ ದೇದಿಪ್ಯಮಾನವಾಗಿ ಜ್ವಲಿಸತೊಡಗಿತ್ತು. ಇನ್ನು ಅವನೊಡನೆ ಈ ಅಗ್ನಿಸಮಾಗಮ ತನ್ನಿಂದ ಸಾಧ್ಯವಿಲ್ಲ ಎನಿಸಿತು ಆ ಪತಿವ್ರತೆಗೆ. ದೇಹದಿಂದ ತನ್ನ ಪತಿಯಿಂದ ದೂರವಿರುವದಾಗಿ ಸಂಕಲ್ಪಿಸಿ ತಂದೆಯ ಮನೆಗೆ ಬಂದಿದ್ದಳು. ಅವನೂ ಬೇಡವೆಂದಾಗ ನಿರುಪಾಯಳಾಗಿ ಅವಳು ಉತ್ತರ ಕುರು ಪ್ರದೇಶಕ್ಕೆ ಪ್ರಯಾಣ ಬೆಳೆಸಿದಳು.

ತನ್ನ ಅಂಗಾಂಗಳಲ್ಲಿ ಚಿಮ್ಮಿ ಚೆಲುವಿಕೆ ಸೂಸುವ ಕಾಂತಿ ಕಮನೀಯತೆಗಳು ಈಗ ಅವಳಿಗೆ ದೊಡ್ಡ ಸಮಸ್ಯೆಯನ್ನು ಒಡ್ಡಿದವು. ತುಂಬು ತಾರುಣ್ಯದ ಲೋಭನೀಯ ಲಾವಣ್ಯದಿಂದ ತುಳುಕಾಡುವ ತನ್ನ ಬಳ್ಳಿಮೈಯನ್ನು ಕಂಡಾಗ ರಕ್ಕಸರು ಕಾಮಾಂಧರಾಗಿ ಬೆನ್ನು ಹತ್ತುವರು ಎಂಬ ಭಯ ಅವಳನ್ನು ಉದ್ಭ್ರಾಂತಳನ್ನಾಗಿ ಮಾಡಿತ್ತು. ಈ ಅಪಾಯ ತಪ್ಪಿಸಲು ಒಂದು ಸುರಕ್ಷಿತ ಉಪಾಯ ಮಾಡಿದಳು ಆ ಪ್ರಾಜ್ಞಳಾದ ಸಂಜ್ಞೆ. ತನ್ನ ಮಾನವ ದೇಹವನ್ನೇ ಬದಲಿಸಿ 'ಅಶ್ವಿನಿ' ಎಂದರೆ ಒಂದು ಹೆಣ್ಣು ಕುದುರೆಯ ರೂಪವನ್ನು ಧರಿಸಿದಳು. ಪತಿಯನ್ನೇ ಮನದಲ್ಲಿ ನೆನೆಯುತ್ತ ಉತ್ತರ ಕುರುಜಾಂಗಲದಲ್ಲಿ ಅನಾಥವಾದ ಅಶ್ವಿನಿಯಂತೆ ಅಲೆದಾಡ ತೊಡಗಿದಳು.

ಇತ್ತ ಸೂರ್ಯನ ಸಂಸಾರ ಯಥಾ ಪ್ರಕಾರ ನಡೆದಿತ್ತು. ರವಿಯು ಬೆಳಕಿನ ಬೆಟ್ಟನಾದರೂ ಲೌಕಿಕ ಜ್ಞಾನ ಅಷ್ಟಕ್ಕಷ್ಟೆ. ಮಡದಿಯ ವೇಷ ತೊಟ್ಟು ಬಂದ ಛಾಯೆ ತನ್ನ ನಿಜವಾದ ಧರ್ಮಪತ್ನಿ ಎಂದೇ ಬಗೆದ ಆ ಪ್ರಭಾಕರ. ಹಿಂದಿನ ಹೆಂಡತಿ ಸಂಜ್ಞೆ. ಹೊಸ ಹೆಣ್ಣು ಛಾಯೆ, ಇವರಲ್ಲಿ ಅಂತರದ ಅರಿವು ಆಗಲೇ ಇಲ್ಲ ಆ ಆದಿತ್ಯನಿಗೆ. ಅವಳೇ ಇವಳು ಎಂದು ಬಗೆದ. ಇವಳಿಗೂ ಎರಡು ಗಂಡು ಒಂದು ಹೆಣ್ಣು ಮೂವರು ಮಕ್ಕಳಾದರು. ತನ್ನ ಹೊಟ್ಟೆಯಿಂದ ಮಕ್ಕಳು ಹುಟ್ಟಿದ ಬಳಿಕ ಪಕ್ಷಪಾತ ಪ್ರಾರಂಭವಾಯಿತು ಛಾಯೆಯ

ವ್ಯವಹಾರದಲ್ಲಿ. ಸಂಜ್ಞೆಯ ಮಕ್ಕಳನ್ನು ಕಂಡರೆ ಅಸಡ್ಡೆ. ತನ್ನ ಮಕ್ಕಳ ಮೇಲೆ ಪ್ರೇಮ ವೃಷ್ಟಿ. ಊಟದಲ್ಲಿಯೂ ಪಂಕ್ತಿ ಭೇದ. ಉಪಹಾರದಲ್ಲಿಯೂ ಅವರಿಗೊಂದು ಇವರಿಗೊಂದು. ಬಟ್ಟೆ ಆಭರಣ ಅಂತಃಕರಣ ಎಲ್ಲದರಲ್ಲಿಯೂ ಭೇದಭಾವ. ಸಂಜ್ಞೆಯ ಮಗಳಾದ ಯಮುನೆ, ವಿವೇಕವತಿ, ಮೌನದಿಂದಲೇ ತಾಯಿಯ ಈ ಭೇದಬುದ್ಧಿಯನ್ನು ಸಹಿಸುತ್ತಿದ್ದಳು. ಆದರೆ ಸಂಜ್ಞೆಯ ಗಂಡುಮಗು ಯಮಧರ್ಮ ಸ್ವಲ್ಪ ಸಿಡುಕು. ಸಿಟ್ಟಿನ ಭರದಲ್ಲಿ ಹೆಚ್ಚು ದುಡುಕು. ಅವನಿಂದ ಸಹಿಸಲಿಕ್ಕಾಗಲಿಲ್ಲ ತಾಯಿಯ ಈ ಪಕ್ಷಪಾತ ಬುದ್ಧಿಯನ್ನು. ಅವನು ನೇರವಾಗಿ ನಡೆದ ತನ್ನ ತಂದೆ ತರಣಿಯ ಬಳಿಗೆ. ದಿಟ್ಟತನದಿಂದ ಆ ದಿವಾಕರನಿಗೆ ಹೇಳಿದ-

'ತಂದೆಯೇ ಇವಳು ನನ್ನ ತಾಯಿಯಲ್ಲ. ನನ್ನ ತಾಯಿ ಸಂಜ್ಞಾದೇವಿ ಹೀಗೆ ಭೇದ ಬುದ್ಧಿಯವಳು ಇರಲಿಲ್ಲ. ಇವಳು ಯಾರೋ ನನಗಂತೂ ತಿಳಿಯದು.'

ಕೂಡಲೇ ಆ ಅಂಬರಮಣಿ ಅಲ್ಲಿಯೇ ನಿಂತ ಛಾಯಾದೇವಿಯನ್ನು ಕೇಳಿದ. ಸೂರ್ಯ- "ಶುಭೆ, ನೀನು ಯಾರು? ನನ್ನ ಮೆಚ್ಚಿನ ಮಡದಿಯಾದ ಸಂಜ್ಞೆ ಎಲ್ಲಿ ಇರುವಳು? ಇಲ್ಲಿಂದ ಎಂದು ಹೋದಳು? ಎಲ್ಲಿ ಹೋದಳು?"

ಪತಿಯ ಈ ಪ್ರಶ್ನಾವಳಿಗಳಿಗೆ ಛಾಯೆಗೆ ಏನು ಉತ್ತರ ಕೊಡಬೇಕು ಎಂಬುದೇ ತೋಚಲಿಲ್ಲ. ಮೌನಮೂಢಳಾಗಿಯೇ ನಿಂತುಕೊಂಡಳು. ಅದರಿಂದ ಆದಿತ್ಯನಿಗೆ ಅತ್ಯಧಿಕ ಕ್ರೋಧ. ಕೋಪದಿಂದ ಕೆಂಪಡರಿದ ಅವನ ಮುಖವನ್ನು ಕಂಡು ಛಾಯೆ ನಡುಗಿಹೋದಳು. ನಡೆದ ಸಮಾಚಾರವನ್ನೆಲ್ಲ ಪೂರ್ತಿ ತಿಳಿಸಿ ಹೇಳಿದಳು.

ಇದನ್ನು ಕೇಳಿ ಕೂಡಲೇ ಸೂರ್ಯದೇವ ಸಂಭ್ರಾಂತನಾದ. ಮಾವ ವಿಶ್ವಕರ್ಮನ ಬಳಿಗೆ ಧಾವಿಸಿದ. 'ನನ್ನ ಪ್ರಥಮ ಪತ್ನಿಯಾದ ಸಂಜ್ಞೆಯು ಇಲ್ಲಿಗೆ ಬಂದಿದ್ದಳೇ? ಈಗ ಎಲ್ಲಿ ಇರುವಳು?' ಎಂದು ಕೇಳಿದ.

**ವಿಶ್ವಕರ್ಮ:-** ಬಹುದಿನಗಳ ಹಿಂದೆ ನನ್ನ ಮಗಳು ಇಲ್ಲಿ ಬಂದದ್ದೇನೋ ನಿಜ. ಅವಳನ್ನು ನಾನು ನಿನ್ನ ಮನೆಗೇ ಕಳಿಸಿದೆ. ನಿನ್ನ ಮನೆಯಲ್ಲಿ ಇಲ್ಲದಿದ್ದರೆ ಆ ನನ್ನ ಮಗಳು ಎಲ್ಲಿ ಹೋದಳು?"

ಅಳಿಯ ಮಾವ ಇಬ್ಬರೂ ಸಂಜ್ಞೆಯ ಸ್ಥಿತಿಗತಿಗಳ ಬಗ್ಗೆ ಚಿಂತಾಕ್ರಾಂತರಾದರು. ಸಂಜ್ಞೆಯು ಇವರಿಬ್ಬರಿಂದ ಕಣ್ಮರೆಯಾಗಿ ಆಗಲೇ ಐವತ್ತು ವರ್ಷವಾಗಿ ಹೋಗಿತ್ತು. ಸೂರ್ಯನು ಕೊನೆಗೆ ಧ್ಯಾನ ಸಮಾಧಿಯಿಂದ ಯೋಚಿಸಿ ನೋಡಿದ. ಉತ್ತರ ಕುರುದೇಶದಲ್ಲಿ 'ಅಶ್ವಿನಿ'ಯ ರೂಪದಲ್ಲಿದ್ದ ಸಂಜ್ಞೆಯು ಈಗ ಧರ್ಮಾರಣ್ಯಕ್ಕೆ ಬಂದಿದ್ದಳು. ದಿವಾಕರನು ಅಲ್ಲಿಗೇ ಧಾವಿಸಿ ಬಂದ. ಕುದುರೆಯ ರೂಪದಲ್ಲಿದ್ದ ತನ್ನ ಕಾಮಿನಿಯನ್ನು ಕಂಡು ತಾನೂ ಧರಿಸಿದ ಗಂಡು ಅಶ್ವರೂಪವನ್ನು. ತುರಗ ರೂಪದಲ್ಲಿದ್ದ ಆ ದಿವಾಕರ ದಂಪತಿಗಳಿಂದ ಅಶ್ವಿನೀ ಕುಮಾರರ ಉತ್ಪತ್ತಿಯಾಯಿತು. ಆ ಕುದುರೆ ರೂಪದಲ್ಲಿರುವ ಆ ಸೂರ್ಯ ದಂಪತಿಗಳ ಬಲಖುರದ ಕೆದರುವಿಕೆಯಿಂದ ಒಂದು ತೀರ್ಥಕುಂಡವು ನಿರ್ಮಿತವಾಗಿದೆ. ಮತ್ತೊಂದು ಗೊರಸಿನಿಂದಲೂ ಒಂದು ತೀರ್ಥಕುಂಡದ ಉತ್ಪತ್ತಿಯಾಗಿದೆ. ಇವೆರಡೂ ಸೂರ್ಯತೀರ್ಥಗಳಲ್ಲಿ ಸ್ನಾನ

ಮಾಡುವದರಿಂದ ಸರ್ವಪಾಪ ಪರಿಹಾರ. ಕುಷ್ಠಾದಿರೋಗ ನಿವಾರಣೆ. ಎಲ್ಲ ದೇವತೆಗಳೂ ಕೂಡಿ ಆಗ ಅಲ್ಲಿ ಬಕುಲವನದ ಸ್ವಾಮಿಯ ರೂಪದಿಂದ ಆದಿತ್ಯನನ್ನೂ ಅವನ ಪ್ರೇಯಸಿಯಾದ ಸಂಜ್ಞಾರಾಣಿಯನ್ನೂ ಅವರಿಬ್ಬರ ಪ್ರೀತಿಯ ಮಕ್ಕಳಾದ ಅಶ್ವಿನೀಕುಮಾರರನ್ನೂ ಪ್ರತಿಷ್ಠೆಮಾಡಿದ್ದಾರೆ. ಭಾನುವಾರ ಸಪ್ತಮಿ ದಿನದಂದು ಮತ್ತು ಗ್ರಹಣ, ಸಂಕ್ರಮಣ, ವ್ಯತೀಪಾತ, ವೈಧೃತಿ, ಪರ್ವಕಾಲ, ಹುಣ್ಣಿಮೆ, ಅಮಾವಾಸ್ಯೆ, ಚತುರ್ದಶೀ ದಿನಗಳಲ್ಲಿ ಈ ಸೂರ್ಯಕುಂಡದಲ್ಲಿ ಸ್ನಾನಮಾಡಿ ಇಲ್ಲಿರುವ ಬಕುಲಾದಿತ್ಯನನ್ನು ಪೂಜೆಮಾಡಿದವರು ಮರಣಾನಂತರ ಸ್ವರ್ಗಾರೋಹಣ ಮಾಡುತ್ತಾರೆ. ಈ ಸೂರ್ಯಕುಂಡದಲ್ಲಿ ಆರು ತಿಂಗಳ ಸ್ನಾನಮಾಡಿದರೆ, ಮಾನವರ ಸರ್ವರೋಗಗಳೂ ಪರಿಹಾರ ಆಗುತ್ತವೆ. ಇಲ್ಲಿ ಮಾಡಿದ ಕನ್ಯಾದಾನ, ಗೋದಾನ, ಶಯ್ಯಾದಾನ, ಅಶ್ವದಾನ, ಮಹಿಷದಾನ, ತಿಲದಾನ, ಸುವರ್ಣದಾನಗಳು ಅನಂತ ಪುಣ್ಯಪ್ರದವಾಗಿರುತ್ತವೆ. ಅಶ್ವರೂಪದಲ್ಲಿದ್ದ ಸಂಜ್ಞಾ ರಾಣಿಯನ್ನು ಮೊಟ್ಟಮೊದಲು ಸೂರ್ಯನು ಈ ಧರ್ಮಾರಣ್ಯದ ಬಕುಲ ವೃಕ್ಷದ ಕೆಳಗೆ ಅಶ್ವರೂಪದಿಂದಲೇ ಸಂಧಿಸಿ ಅಶ್ವಿನೀ ಕುಮಾರರನ್ನು ಪಡೆದದ್ದರಿಂದ ಸೂರ್ಯನಿಗೆ ಬಕುಲಾರ್ಕ ಎಂಬ ಹೆಸರು ಬಂದಿತು. ಸೂರ್ಯನು ಬರುವದಕ್ಕಿಂತ ಮೊದಲು ಸಂಜ್ಞೆಯು ಈ ಬಕುಲ ವೃಕ್ಷದ ಕೆಳಗೆ ನಿಂತು ತನ್ನ ಪತಿ ಆದಿತ್ಯದೇವನನ್ನು ಕುರಿತು ತಪಸ್ಸು ಮಾಡಿದ್ದರಿಂದ ಇದು ಸಿದ್ಧಿಕ್ಷೇತ್ರವೆಂದೂ ಹೆಸರು ಪಡೆದಿದೆ. ಇಲ್ಲಿ ಆರು ತಿಂಗಳು ನಿಂತು ತಪಸ್ಸು ಮಾಡಿದರೆ ಮನುಷ್ಯನಿಗೆ ತಪಸ್ಸಿದ್ಧಿ ಹಾಗೂ ಮೋಕ್ಷಪ್ರಾಪ್ತಿ ಎರಡೂ ಲಭಿಸುತ್ತವೆ.

## ಲೋಹಾಸುರನ ಉಪಟಳದಿಂದ ಧರ್ಮಾರಣ್ಯದ ಜನರ ಪಲಾಯನ.

**ವೇದವ್ಯಾಸ:-** ಧರ್ಮರಾಜ! ಈ ಧರ್ಮಾರಣ್ಯ ನಗರದಲ್ಲಿ ಉತ್ತರದಿಶೆಯಲ್ಲಿ ದೇವೇಂದ್ರನು ಹಿಂದೆ ಮೂರುನೂರು ವರ್ಷ ತಪಸ್ಸು ಮಾಡಿದ ಶಿವನನ್ನು ಕುರಿತು. ವೃತ್ರಾಸುರ ವಧದಿಂದ ತನಗೆ ತಗಲಿದ ಪಾಪವನ್ನು ತೊಳಯಲಿಕ್ಕಾಗಿ ಸುರನಾಥ ಶುರುಮಾಡಿದ್ದ ಈ ತಪಸ್ಸನ್ನು. ಅವನ ತಪಸ್ಸಿನಿಂದ ತುಷ್ಟನಾದ ಚಂದ್ರಚೂಡ. ಮತ್ತು ಅವನಿಗೆ ಆದೇಶ ನೀಡಿದ. ''ದೇವೇಂದ್ರ, ಈ ಧರ್ಮಾರಣ್ಯದಲ್ಲಿಯ ಈ ತೀರ್ಥದಲ್ಲಿ ನೀನು ಸ್ನಾನಮಾಡು. ಬ್ರಹ್ಮಹತ್ಯಾದಿ ಯಾವ ಪಾಪಗಳೂ ಈ ಧರ್ಮಾರಣ್ಯದಲ್ಲಿ ಸ್ನಾನಪೂಜೆ ಮಾಡುವವರಿಗೆ ತಗಲಲಾರವು. ನೀನು ಈಗ ಇಲ್ಲಿಯ ತೀರ್ಥದಲ್ಲಿ ಸ್ನಾನಮಾಡು. ನಿನ್ನ ಅಪೇಕ್ಷೆಯಂತೆ ನಾನೂ ಇಲ್ಲಿ ಸನ್ನಿಹಿತನಾಗುತ್ತೇನೆ ಇಂದ್ರೇಶ್ವರ ಎಂಬ ಹೆಸರಿನಿಂದ.''

ತನ್ನ ವಚನದಿಂದ ಈ ಧರ್ಮಾರಣ್ಯದಲ್ಲಿ ಸ್ವಯಂ ಸನ್ನಿಹಿತನಾದ ಇಂದ್ರೇಶ್ವರನನ್ನು ಭಕ್ತಿಯಿಂದ ಪೂಜಿಸಿದವರು ಮುಕ್ತಿ ಭಾಜನರು ಆಗುತ್ತಾರೆ. ವಿಶೇಷವಾಗಿ ಮಾಘಮಾಸದ ಅಷ್ಟಮಿ ಚತುರ್ದಶಿ ದಿನಗಳಲ್ಲಿ ರುದ್ರ ಮಂತ್ರವನ್ನು ಜಪಿಸಿ ಇಂದ್ರೇಶ್ವರನ ಪೂಜೆ ಮಾಡುವದರಿಂದ ಕುಷ್ಠಾದಿ ಮಹಾರೋಗಗಳೂ ಬ್ರಹ್ಮಹತ್ಯಾದಿ ಪಾಪಗಳು ನಷ್ಟವಾಗಿ ಹೋಗುತ್ತವೆ.

ಈ ಧರ್ಮಾರಣ್ಯದಲ್ಲಿ ಧರಾಕ್ಷೇತ್ರ ಎಂಬ ತೀರ್ಥದಲ್ಲಿ ದೇವಮಜ್ಜನಕ ಎಂಬ ವಿಶಾಲವಾದ ಸರೋವರವು ನಿರ್ಮಿತವಾಗಿದೆ. ಇಲ್ಲಿ ಉಪವಾಸಮಾಡಿ ಮಹೇಶ್ವರನ

ಪೂಜೆಮಾಡುವದರಿಂದ ಶಾಕಿನಿ, ಡಾಕಿನಿ, ವೇತಾಳ, ಭೂತಪ್ರೇತ ಹಾಗೂ ಅನಿಷ್ಟಗ್ರಹ ನಕ್ಷತ್ರ ಪೀಡೆಯು ತಾನಾಗಿ ಪರಿಹೃತವಾಗುವುದು. ತ್ರೇತಾಯುಗದಲ್ಲಿ ಲೋಹಾಸುರ ಎಂಬ ದೈತ್ಯನು ಬ್ರಾಹ್ಮಣರ ವೇಷಧರಿಸಿ ಈ ಧರ್ಮಾರಣ್ಯದಲ್ಲಿ ಪ್ರವೇಶಿಸಿದ. ಬಗೆಬಗೆಯಿಂದ ಕ್ಷೇತ್ರವಾಸಿಗಳನ್ನು ಪೀಡಿಸಿದ. ಆದರಿಂದ ಭಯಭ್ರಾಂತರಾದ ಈ ಧರ್ಮಾರಣ್ಯದ ನಿವಾಸಿಗಳು ಈ ಕ್ಷೇತ್ರವನ್ನು ಬಿಟ್ಟು ಓಡಿ ಹೋದರು ನಾಲ್ಕೂ ದಿಕ್ಕಿಗೆ, ಬ್ರಾಹ್ಮಣ ವೈಶ್ಯ ಹಾಗೂ ಶೂದ್ರರೂ ಮೂವರೂ ಮಿಲಿತರಾಗಿ 'ಮುಕ್ತಾರಣ್ಯ' ಎಂಬ ವಿಜನ ವನಾಂತರದಲ್ಲಿ 'ವಜಿಜ್ಞ' ಎಂಬ ಗ್ರಾಮವನ್ನು ನಿರ್ಮಿಸಿಕೊಂಡರು. ಮುಂದೆ ಅದಕ್ಕೆ 'ಶಂಭುಗ್ರಾಮ' ಎಂಬ ಹೆಸರು ಬಂದಿತು. ಕೆಲದಿನಗಳ ಬಳಿಕ ಲೋಹಾಸುರನ ಭಯದಿಂದ ಓಡಿಬಂದ ಮತ್ತೊಂದು ವೈಶ್ಯರ ತಂಡವು ಈ ಶಂಭುಗ್ರಾಮದ ಸಮೀಪದಲ್ಲಿಯೇ ಮಂಡಲ, ಅದಾಲಂಜ ಮೋಹಮಯೀ ಮುಂತಾದ ಬೇರೆಬೇರೆ ವಸಾಹತುಗಳನ್ನು ನಿರ್ಮಿಸಿಕೊಂಡು ವಾಸಮಾಡಿತು. ಹೀಗೆ ಲೋಹಾಸುರನ ದಾಳಿ ಹಾಗೂ ಹಾವಳಿಗಳಿಗೆ ತುತ್ತಾಗಿ ಧರ್ಮಾರಣ್ಯವು ಕೆಲವೇ ದಿನಗಳಲ್ಲಿ ನಿರ್ಮಾನುಷವಾಯಿತು.

## ಸರಸ್ವತೀ ನದಿ, ದ್ವಾರಕಾತೀರ್ಥ, ಗೋವತ್ಸ ತೀರ್ಥಗಳ ಮಹಿಮೆ

**ಸೂತ:-** ಶೌನಕರೇ, ನಾನು ಈಗ ನಿಮಗೆ ಧರ್ಮಾರಣ್ಯ ತೀರ್ಥದ ಮಹಾತ್ಮ್ಯದ ವಿಷಯದಲ್ಲಿ ಮತ್ತೊಂದು ಕಥಾ ಸಂದರ್ಭವನ್ನು ಬಿತ್ತರಿಸುತ್ತೇನೆ ಕೇಳಿ. ಹಿಂದೊಮ್ಮೆ ಎಲ್ಲ ಋಷಿಮುನಿಗಳು ಮಾರ್ಕಂಡೇಯ ಮಹಾಮುನಿಗಳ ಬಳಿಗೆ ''ಬಂದು ಪ್ರಶ್ನಿಸಿದರು ಪೂಜ್ಯರೇ, ತಾವು ಈ ಮೊದಲು ಬ್ರಹ್ಮಪುತ್ರಿಯಾದ ಸರಸ್ವತಿ ನದಿಯು ಭೂಲೋಕಕ್ಕೆ ಅವತರಿಸುವಂತೆ ಮಾಡಿ ಸರ್ವಮಾನವರಿಗೂ ಪರಮೋಪಕಾರ ಮಾಡಿದಿರಿ. ಆ ಸರಸ್ವತೀ ನದಿಯ ಮಹಿಮೆಯನ್ನು ಹೇಳಿರಿ.

**ಮಾರ್ಕಂಡೇಯ:-** ವಿಪ್ರೋತ್ತಮರೇ! ನಾನು ಪೂರ್ವಕಾಲದಲ್ಲಿ ಭಾದ್ರಪದ ಶುಕ್ಲಪಕ್ಷ ದ್ವಾದಶಿ ದಿನದಂದು ಧರ್ಮಾರಣ್ಯದ ದ್ವಾರಾವತೀ ತೀರ್ಥದಲ್ಲಿ ಬ್ರಹ್ಮಕುಮಾರಿಯಾದ ಸರಸ್ವತೀ ನದಿಯನ್ನು ಆವಾಹಿಸಿ ನನ್ನ ತಪೋಬಲದಿಂದ ಇಳಿಯುವಂತೆ ಮಾಡಿದೆನು. ಈ ಸರಸ್ವತೀ ನದಿಯು ಮಹೀಮಂಡಳಕ್ಕೆ ಅವತರಿಸಿ ಮಡುಗಟ್ಟಿ ನಿಂತುಕೊಂಡ ಈ ದ್ವಾರಕಾ ಅಥವಾ ದ್ವಾರಾವತೀ ತೀರ್ಥವು ಪರಮ ಪವಿತ್ರ. ಇದರಲ್ಲಿ ಸ್ನಾನ ಪಿಂಡದಾನಗಳು ದೇವಮುನಿ ಪಿತೃಗಳಿಗೆ ತೃಪ್ತಿದಾಯಕ. ಅದರಂತೆ ಅಲ್ಲಿಂದ ಮುಂದೆ ಹರಿದು ಭರತ ದೇಶದ ಭೂಭಾಗವನ್ನೆಲ್ಲ ಪಾವನಗೊಳಿಸಿದ ಸರಸ್ವತೀ ನದಿಯು ಪರಮ ಮಂಗಲಕಾರಕ ಮತ್ತು ಬ್ರಹ್ಮಹತ್ಯಾದಿ ಪಾಪಪರಿಹಾರಕ.

ವೇದವ್ಯಾಸ:- ಮಾರ್ಕಂಡೇಯ ಮುನಿಯು ಸರಸ್ವತೀ ನದಿಯನ್ನು ಈ ಭೂಲೋಕಕ್ಕೆ ಇಳಿಸಿ ವೈಕುಂಠದ ಬಾಗಿಲವನ್ನು ಮುಕ್ತದ್ವಾರವನ್ನಾಗಿ ಮಾಡಿದ್ದಾನೆ. ಇಲ್ಲಿ ಸ್ನಾನ, ಹರಿಧ್ಯಾನ, ಶ್ರಾದ್ಧ, ಏಕಾದಶೀ ಉಪವಾಸ ಮಾಡಿದವರು ನೇರವಾಗಿ ವೈಕುಂಠಲೋಕಕ್ಕೆ ಹೋಗುತ್ತಾರೆ. ಈ ಸರಸ್ವತೀ ನದಿಯು ಹುಟ್ಟಿ ಮಡುಗಟ್ಟಿದ ದ್ವಾರಾವತೀ ಅಥವಾ ದ್ವಾರಕಾ ತೀರ್ಥದ ಸಮೀಪದಲ್ಲಿಯೇ ಗೋವತ್ಸ ಎಂಬ ತೀರ್ಥವು ಇರುತ್ತದೆ. ಇಲ್ಲಿ ಪರಶಿವನು ಒಂದು ತುರು ಕರುವಿನ ರೂಪದಿಂದ ಅವತಾರಮಾಡಿ ಹಿಂದೆ ಸ್ವಯಂಭೂ ಲಿಂಗದಲ್ಲಿ ವಿರಾಜಮಾನನಾಗಿದ್ದಾನೆ.

ಪೂರ್ವಕಾಲದಲ್ಲಿ ಬಲಾಹಕ ಎಂಬ ಶೂರನಾದ ಅರಸನು ಬೇಟೆಯಾಡಲು ತೆರಳಿದ್ದ ಒಂದು ಗೊಂಡಾರಣ್ಯಕ್ಕೆ. ಅಲ್ಲಿ ದೂರದಲ್ಲಿ ಕಾಡುಮಿಕಗಳ ಹಿಂಡಿನಲ್ಲಿ ಒಂದು ಹಸುವಿನ ಕರು ಇದ್ದುದು ಸೈನಿಕರ ಕಣ್ಣಿಗೆ ಬಿದ್ದಿತು. ಅವರು ತಮ್ಮ ದೊರೆಗೆ ಈ ಸಮಾಚಾರ ತಿಳಿಸಿದರು. ಮತ್ತು ಆ ಮೃಗಗಳ ಹಿಂಡಿನಲ್ಲಿದ್ದ ಹಸುವಿನ ಕರುವನ್ನು ತೋರಿಸಿದರು. ರಾಜನು ಅದನ್ನು ಪಾರುಮಾಡಬೇಕೆಂದು ಆ ಮಿಕಗಳ ಬಳಿಗೆ ನಡೆದ. ಇವನನ್ನು ಕಂಡು ಆ ಹಿಂಡು ಮುಂದೆ ನಡೆಯಿತು. ರಾಜನೂ ಅವುಗಳನ್ನು ಬೆನ್ನಟ್ಟಿದ. ಗಿಡದ ತೋಪಿನಲ್ಲಿ ನುಗ್ಗಿದ. ಆ ಮೃಗಗಳ ಗುಂಪಿನಲ್ಲಿ ರಾಜನು ಒಮ್ಮೆಲೇ ಪ್ರವೇಶಿಸಿ, ಆ ಹಸುವಿನ ಕರುವನ್ನು ಹಿಡಿಯಲು ಹೋದ.

## ಕರುವಿನಲ್ಲಿ ಲಿಂಗ. ಲಿಂಗದಲ್ಲಿ ಕರು

ಕೂಡಲೇ ಆ ಕರು ಒಂದು ಶಿವಲಿಂಗವಾಯಿತು. ಅದನ್ನು ಕಂಡು ರಾಜನಿಗೆ ಅತ್ಯಾಶ್ಚರ್ಯ. ಇದೇನು ಕೌತುಕ ಎಂದು ಮತ್ತೊಮ್ಮೆ ಆ ಶಿವಲಿಂಗವನ್ನು ಕಣ್ಣಿಟ್ಟು ನೋಡಿದ. ಇನ್ನೂ ಒಂದು ಕೌತುಕ ಅಲ್ಲಿ ಅವನಿಗೆ ಕಾದಿತ್ತು. ಆ ಶಿವಲಿಂಗದ ಮಧ್ಯದಲ್ಲಿಯೇ ತಾನು ಆರಿಸಿಕೊಂಡು ಬಂದ ಆಕಳ ಕರು ಕಾಣಿಸಿಕೊಂಡಿತು. ಆಗ ಮಹಾರಾಜನಿಗೆ ಈ ಗೋವತ್ಸದ ರೂಪದಿಂದ ಸಾಕ್ಷಾತ್ ಶಿವನೇ ಅವತರಿಸಿದ್ದಾನೆ ಎಂದು ನಿಶ್ಚಯವಾಯಿತು. ಆಗ ಆ ಬಲಾಹಕ ರಾಜನು ಅಲ್ಲಿ ಆಗಲೇ ಪ್ರಾದುರ್ಭೂತವಾದ ಶಿವಲಿಂಗವನ್ನು ಎತ್ತಿಕೊಂಡು ಹೋಗಬೇಕೆಂದು ಕಿತ್ತತೊಡಗಿದ. ಎಷ್ಟು ಪ್ರಯತ್ನಿಸಿದರೂ ಆ ಲಿಂಗವನ್ನು ಅಲ್ಲಿಂದ ಎತ್ತಲಿಕ್ಕೂ ಬರಲಿಲ್ಲ. ಕಿತ್ತಲಿಕ್ಕೂ ಬರಲಿಲ್ಲ. ಅಲ್ಲಿಂದ ಅಲುಗಾಡಿಸಲಿಕ್ಕೂ ಆಗಲಿಲ್ಲ. ಕೂಡಲೇ ಎಲ್ಲ ದೇವತೆಗಳೂ ಅಲ್ಲಿಗೆ ಬಂದು 'ಲೋಕೋದ್ಧಾರಕ್ಕಾಗಿ ಬಿಳಿಯ ಲಿಂಗದ ರೂಪದಿಂದ ನಿರಂತರವೂ ಅಲ್ಲಿ ಸನ್ನಿಹಿತನಾಗಿ ಇರಬೇಕು' ಎಂದು ಪರಮೇಶ್ವರನನ್ನು ಪ್ರಾರ್ಥಿಸಿಕೊಂಡರು. ಅದಕ್ಕೆ ಪರಮೇಶ್ವರ ಉತ್ತರಿಸಿದ.

**ಪರಮೇಶ್ವರ:-** ಸುರಾಧೀಶರೇ, ನಿಮ್ಮ ಅಪೇಕ್ಷೆಯಂತೆ ನಾನು ಶುಭ್ರಲಿಂಗ ರೂಪದಿಂದ ಈ ರಾಜನಿಂದ ಪ್ರತಿಷ್ಠಾಪಿತನಾಗಿ ಇಲ್ಲಿ ಸದಾಸನ್ನಿಹಿತನಾಗಿ ಇರುತ್ತೇನೆ. ನಾನು ಲಿಂಗರೂಪದಿಂದ ಉದ್ಭೂತನಾದದ್ದು ಭಾದ್ರಪದ ಅಮಾವಾಸ್ಯೆಯ ದಿನ ಇಲ್ಲಿ ಬಂದು ಸ್ನಾನಮಾಡಿ ಈ ಶಿವಲಿಂಗವನ್ನು ಪೂಜೆಮಾಡಿದವರಿಗೂ ಹಾಗೂ ಆ ದಿನ ರಾತ್ರಿ ಶ್ರಾದ್ಧ, ಗೀತಾ ಪಾಠ, ಶಿವಮಾಹಾತ್ಮ್ಯ ಶ್ರವಣ, ರುದ್ರಮಂತ್ರ ಜಪ, ಮತ್ತು ದಾನ ಧರ್ಮ ಮಾಡಿದವರಿಗೂ ನಿಶ್ಚಿತವಾಗಿ ಶಿವಲೋಕ ಪ್ರಾಪ್ತಿ ಆಗುವುದು. ಇನ್ನು ಮುಂದೆ ಈ ಶಿವಲಿಂಗವು ಗೋವತ್ಸ ಲಿಂಗ ಎಂದು ಜಗತ್ತಿನಲ್ಲಿ ಪ್ರಸಿದ್ಧವಾಗುವುದು. ಇಲ್ಲಿಯ ಗೋವತ್ಸ ತೀರ್ಥದಲ್ಲಿ ಸ್ನಾನಮಾಡಿ ಈ ಗೋವತ್ಸೇಶ್ವರನಾದ ಶಿವಲಿಂಗವನ್ನು ಪೂಜಿಸಿದವರಿಗೆ ರುದ್ರಲೋಕ ಪ್ರಾಪ್ತಿ ಖಂಡಿತ. ಭಾದ್ರಪದ ಮಾಸದ ಕೃಷ್ಣಪಕ್ಷದ ಕೊನೆಯ ದಿನಗಳಲ್ಲಿ ಇಲ್ಲಿ ಶ್ರಾದ್ಧ, ತರ್ಪಣ, ಪಿಂಡ ಪ್ರದಾನಾದಿಗಳಿಂದ ಗಯಾದಲ್ಲಿ ಇಪ್ಪತ್ತೊಂದು ಸಲ ಶ್ರಾದ್ಧ ಮಾಡಿದಷ್ಟು ಪುಣ್ಯವು ಬರುವುದು. ಗೋವತ್ಸ ತೀರ್ಥದಿಂದ ನೈಋತ್ಯ ದಿಕ್ಕಿಗೆ ಲೋಹಯಷ್ಟಿ ಎಂಬ ತೀರ್ಥ. ಅಲ್ಲಿ ಭಾದ್ರಪದ ಅಮಾವಾಸ್ಯೆಯ ದಿನ ಶ್ರಾದ್ಧಮಾಡುವದರಿಂದ ಪಿತೃಗಳಿಗೆ ಶಾಶ್ವತ ತೃಪ್ತಿ. ಸರಸ್ವತೀ ನದಿಯಲ್ಲಿ ಸ್ನಾನಮಾಡಿ ಹಾಲು ಹಾಗೂ ಬಿಳೀ ಎಳ್ಳುಗಳಿಂದ ತರ್ಪಣಮಾಡಿದರೆ ಪಿತೃಗಳು ತೃಪ್ತರಾಗುವರು.

## ಶ್ರೀರಾಮನ ಚರಿತ್ರೆ ಹಾಗೂ ಮಾಹಾತ್ಮ್ಯ

**ವೇದವ್ಯಾಸ:-** ಹಿಂದೆ ತ್ರೇತಾಯುಗದಲ್ಲಿ ಮಹಾವಿಷ್ಣುವು ಸೂರ್ಯಕುಲದ ರಘುರಾಜನ ವಂಶದಲಿ ರಾಮರೂಪದಿಂದ ಅವತರಿಸಿದ. ಲಕ್ಷ್ಮಣ ಭರತ ಶತ್ರುಘ್ನರು ಅವನ ಸೋದರರು. ವಿಶ್ವಾಮಿತ್ರನ ಆದೇಶದಂತೆ ತಂದೆಯ ಅಪ್ಪಣೆ ಪಡೆದು ರಾಮಲಕ್ಷ್ಮಣರು ಯಜ್ಞ ರಕ್ಷಣೆಗಾಗಿ ಅರಣ್ಯಕ್ಕೆ ತೆರಳಿದರು. ಯಜ್ಞಕ್ಕೆ ವಿಘ್ನಮಾಡುವ ತಾಟಕಾ ಎಂಬ ರಕ್ಕಸಿಯನ್ನೂ ಸುಬಾಹು, ಎಂಬದೈತ್ಯನನ್ನೂ ಸಂಹರಿಸಿದರು. ತನ್ನ ಚರಣ ಧೂಳಿಯಿಂದ ಕಲ್ಲಾಗಿ ಬಿದ್ದ ಅಹಲ್ಯೆಯನ್ನು ಉದ್ಧರಿಸಿದ ಶ್ರೀರಾಮ. ಜನಕರಾಜನ ಮಿಥಿಲಾಪುರಿಗೆ ವಿಶ್ವಾಮಿತ್ರ ಮುನಿ ರಾಮಲಕ್ಷ್ಮಣರನ್ನು ಕರೆತಂದ. ಶಿವಧನುಸ್ಸನ್ನು ರಾಮಚಂದ್ರನು ಲೀಲಾಜಾಲವಾಗಿ ಮುರಿದು ಸೀತೆಯ ಪಾಣಿಗ್ರಹಣ ಮಾಡಿದ. ಅಯೋಧ್ಯೆಗೆ ಮರಳಿ ಬರುವಾಗ ಪರಶುರಾಮನನ್ನು ನಿಗ್ರಹಿಸಿದ. ತನ್ನ ಇಪ್ಪತ್ತೇಳನೇಯ ವಯಸ್ಸಿನಲ್ಲಿ ರಾಮನಿಗೆ ಯುವರಾಜ ಪದದಲ್ಲಿ ಪಟ್ಟಾಭಿಷೇಕ ಮಾಡಲು ದಶರಥ ಎಲ್ಲ ಸಿದ್ಧತೆಮಾಡಿದ. ಆಗ ಮಂಥರೆಯಿಂದ ಪ್ರೇರಿತಳಾದ ಕೈಕೇಯಿಯ ವಚನದಂತೆ ತಂದೆಯ ಮಾತನ್ನು ಸತ್ಯವನ್ನಾಗಿ ಮಾಡಲು ರಾಮನು ಅರಣ್ಯಕ್ಕೆ ತೆರಳಿದ ಸೀತಾಲಕ್ಷ್ಮಣರೊಂದಿಗೆ.

ಕಾಡಿನ ದಾರಿಯಲ್ಲಿ ಮೂರು ದಿನ ಪ್ರಯಾಣಮಾಡುವಾಗ ಉಪವಾಸ, ಕೇವಲ ನೀರು ಕುಡಿದೇ ಇದ್ದರು ಮೂವರೂ. ನಾಕನೆಯ ದಿನ ದಾರಿಯಲ್ಲಿ ದೊರೆತ ಹಣ್ಣುಕಾಯಿ ತಿಂದು ಫಲಾಹಾರಮಾಡಿ ಮುನ್ನಡೆದರು. ಐದನೆಯ ದಿನ ಚಿತ್ರಕೂಟದಲ್ಲಿ ಒಂದು ಎಲೆ ಮನೆಯನ್ನು ಕಟ್ಟಿಕೊಂಡರು.

ಇತ್ತ ಅಯೋಧ್ಯೆಯಲ್ಲಿ ರಾಮನನ್ನು ನೆನೆಯುತ್ತ ದಶರಥ ರಾಜ ನಿಧನ ಹೊಂದಿದ. ಅನಂತರ ಭರತ ಶತ್ರುಘ್ನರು ಚಿತ್ರಕೂಟಕ್ಕೆ ಬಂದರು. ತಂದೆಯ ಮರಣದ ಸಮಾಚಾರ ಅಣ್ಣ ರಾಮನಿಗೆ ತಿಳಿಸಿದರು. ಮರಳಿಬಂದು ಅಯೋಧ್ಯೆಯ ಸಿಂಹಾಸನವನ್ನು ಏರಬೇಕು ಎಂದು ಪ್ರಾರ್ಥಿಸಿದರು. ರಾಮನು ಒಪ್ಪದಿದ್ದಾಗ ಅವನ ಪಾದುಕೆಗಳನ್ನು ತಲೆಯ ಮೇಲೆ ಇಟ್ಟುಕೊಂಡು ಭರತ ಶತ್ರುಘ್ನರು ನಿರಾಶರಾಗಿ ನಂದಿಗ್ರಾಮಕ್ಕೆ ಮರಳಿ ಬಂದರು. ಅಲ್ಲಿ ಆ ಇಬ್ಬರೂ ಸೋದರರು ರಾಮನ ರಾಜದೂತರಾಗಿ ರಾಮರಾಜ್ಯವನ್ನು ಪ್ರತಿನಿಧಿಯ ರೂಪದಿಂದ ರಕ್ಷಿಸುತ್ತ ಹದಿನಾಲ್ಕು ವರ್ಷ ಶ್ರೀರಾಮನ ಕಾಲಿನ ಆವುಗೆಗಳ ಪೂಜೆಯಲ್ಲಿ ನಿರತರಾದರು.

ಇತ್ತ ರಾಮನು ಅರಣ್ಯದಲ್ಲಿ ಮೊದಲು ಅತ್ರಿ ಅನಸೂಯಾ ದಂಪತಿಗಳನ್ನು ಕಂಡು ದಂಡಕಾರಣ್ಯದಲ್ಲಿ ಮುನಿಮಾನುಷರ ಹಿಂಸೆಮಾಡುತ್ತಿರುವ ರಾಕ್ಷಸರ ಸಂಹಾರ ಕಾರ್ಯವನ್ನು ಪ್ರಾರಂಭಿಸಿದ. ಮೊದಲು ವಿರಾಧ ಎಂಬ ದೈತ್ಯನನ್ನು ಕೊಂದು ಹಾಕಿದ. ಅನಂತರ ಹನ್ನೆರಡು ವರ್ಷ ಆರು ತಿಂಗಳವರೆಗೆ ಪಂಚವಟಿಯಲ್ಲಿ ವಾಸಮಾಡಿದ. ಆಗ ರಾಮನನ್ನು ಕಾಮಿಸಿ ಬಂದ ಶೂರ್ಪನಖಿ ಎಂಬ ರಕ್ಕಸಿಯನ್ನು ಲಕ್ಷ್ಮಣನು ಕಿವಿ ಮೂಗು ಕೊಯ್ದು ವಿರೂಪಗೊಳಿಸಿದ.

ಮಾರೀಚನೊಂದಿಗೆ ದುಷ್ಟ ರಾವಣನು ಹಂಚಿಕೆಮಾಡಿ ರಾಮ ಲಕ್ಷ್ಮಣರಿಬ್ಬರನ್ನೂ ಆಶ್ರಮದಿಂದ ಹೊರಹೊರಡಿಸಿದ. ಮಾರೀಚನು ಮಾಯಾ ಮೃಗ ರೂಪದಿಂದ ರಾಮನನ್ನೂ ದೂರ ಸೆಳೆದೊಯ್ದ. ರಾಮನ ಬಾಣ ತಗಲಿ ಪ್ರಾಣ ಬಿಡುವಾಗ 'ಹಾ!

ಲಕ್ಷ್ಮಣ' ಎಂದು ಕೂಗಿ ಲಕ್ಷ್ಮಣನೂ ಆಶ್ರಮದಿಂದ ಹೊರಗೆ ಬರುವಂತೆ ಮಾಡಿದ. ಹೀಗೆ ರಾಮ ಲಕ್ಷ್ಮಣರಿಬ್ಬರೂ ದೂರ ಹೋದ ಸಂಧಿಯನ್ನು ಸಾಧಿಸಿ ರಾವಣನು ಸೀತೆಯನ್ನು ಅಪಹರಿಸಿದ. ಮಾರೀಚನನ್ನು ಕೊಂದು ಮರಳಿ ಬಂದ ಸೋದರರಿಬ್ಬರೂ ಆಶ್ರಮದಲ್ಲಿ ಸೀತೆಯನ್ನು ಕಾಣದೇ ಗಾಬರಿಯಾಗಿ ಎಲ್ಲ ಕಡೆಗೂ ಹುಡುಕಿದರು.

ಇತ್ತ ರಾವಣನು ಮಾಘಮಾಸ ಕೃಷ್ಣಪಕ್ಷ ಅಷ್ಟಮೀ ದಿನದಂದು ವೃಂದ ಮುಹೂರ್ತದಲ್ಲಿ ಸೀತೆಯನ್ನು ಅಪಹರಿಸಿಕೊಂಡು ಆಕಾಶ ಮಾರ್ಗದಿಂದ ಲಂಕಾಪಟ್ಟಣದೆಡೆಗೆ ನಡೆದ. ಸೀತೆಯ ಹಾ ರಾಮ, ಹಾ ರಾಮ ಎಂಬ ಚೀತ್ಕಾರ ಕೇಳಿ ಜಟಾಯು ಪಕ್ಷಿ ತಡೆದ. ಆಗ ಸಿಟ್ಟಿಗೆದ್ದ ರಾವಣ ಜಟಾಯುವಿನ ಜೊತೆಗೆ ಯುದ್ಧಮಾಡಿ ಅವನನ್ನು ಖಡ್ಗದಿಂದ ಗಾಯಗೊಳಿಸಿ ಸೀತೆಯೊಂದಿಗೆ ಲಂಕೆಗೆ ಹಾರಿದ. ಮಾಘ ಕೃಷ್ಣ ನವಮಿಯ ದಿನ ಸೀತೆಯನ್ನು ಹುಡುಕುತ್ತ ರಾಮಲಕ್ಷ್ಮಣರು ಜಟಾಯು ಇದ್ದಲ್ಲಿಗೆ ಬಂದರು. ರಾಮನಿಗೆ ಸೀತಾಹರಣದ ಸಮಾಚಾರ ತಿಳಿಸಿ ಆ ಪಕ್ಷಿರಾಜ ಪ್ರಾಣಬಿಟ್ಟ. ರಾಮನು ಜಟಾಯುವಿನ ಅಂತ್ಯ ಸಂಸ್ಕಾರವನ್ನು ಭಕ್ತಿಯಿಂದ ಮಾಡಿದ. ಅನಂತರ ಸೀತೆಯನ್ನು ಹುಡುಕುತ್ತ ಪಂಪಾಸರೋವರದ ಬಳಿ ಶಬರಿಯ ಆತಿಥ್ಯವನ್ನು ಸ್ವೀಕರಿಸಿ ಹನುಮಂತನನ್ನು ಭೇಟಿಮಾಡಿದ. ಹನುಮಂತನು ಅಗ್ನಿಸಾಕ್ಷಿಯಾಗಿ ರಾಮ ಸುಗ್ರೀವರಲ್ಲಿ ಸಖ್ಯವನ್ನು ಏರ್ಪಡಿಸಿದ. ಅನಂತರ ಸುಗ್ರೀವನ ಅಪೇಕ್ಷೆಯಂತೆ ಅವನ ಅಣ್ಣ ವಾಲಿಯನ್ನು ಸಂಹರಿಸಿದ ಶ್ರೀರಾಮ. ರಾಮನ ಆದೇಶದಂತೆ ಹನುಮಂತನೇ ಮೊದಲಾದ ವಾನರರು ರಾಮನ ಉಂಗುರವನ್ನು ತೆಗೆದುಕೊಂಡು ಸೀತಾನ್ವೇಷಣೆಗಾಗಿ ದಕ್ಷಿಣ ದಿಕ್ಕಿಗೆ ನಡೆದರು. ದಾರಿಯಲ್ಲಿ ಸಂಪಾತಿಯಿಂದ ಲಂಕೆಯಲ್ಲಿ ರಾವಣನಿಂದ ಇರಿಸಲ್ಪಟ್ಟ ಸೀತೆಯ ಸಮಾಚಾರವನ್ನು ತಿಳಿದು ಹನುಮಂತನು ಸಮುದ್ರ ಹಾರಿದ. ಲಂಕಾಪಟ್ಟಣದ ಅಶೋಕವನದಲ್ಲಿದ್ದ ಸೀತೆಯ ಶೋಧಮಾಡಿ ಅವಳ ದರ್ಶನವನ್ನು ಮೊದಲು ದೂರಿಂದಲೇ ತೆಗೆದುಕೊಂಡ.

ದ್ವಾದಶೀ ದಿನದಂದು ಅಶೋಕ ವೃಕ್ಷದ ಮೇಲೆಯೇ ಕುಳಿತು ರಾಮಚರಿತ್ರೆಯನ್ನು ಗಾಯನಮಾಡಿ ಅವಳಿಗೆ ವಿಶ್ವಾಸಹುಟ್ಟಿಸಿದ. ರಾಮನು ಕೊಟ್ಟ ಉಂಗುರವನ್ನು ಅವಳಿಗೆ ನೀಡಿದ. ತ್ರಯೋದಶಿಯ ದಿನ ಅಕ್ಷ ಕುಮಾರನ ಜೊತೆಗೆ ಹನುಮಂತನು ಯುದ್ದ ಮಾಡಿದ. ಅಂದೇ ರಾವಣನ ಹಿರಿಯ ಮಗ ಇಂದ್ರಜಿತುವು ಹನುಮಂತನನ್ನು ರಾವಣನ ಆಸ್ಥಾನಕ್ಕೆ ಕರೆದೊಯ್ದು ಬಾಲಕ್ಕೆ ಬೆಂಕಿ ಹಚ್ಚಿಸಿದ. ಅದೇ ಬೆಂಕಿಯಿಂದ ಲಂಕಾಪಟ್ಟಣವನ್ನೆಲ್ಲ ಸುಟ್ಟು ಹಾಕಿ ಹುಣ್ಣಿಮೆಯ ದಿನ ಹಾರಿ ಬಂದೆ ಹನುಮಂತ ಮಹೇಂದ್ರ ಪರ್ವತಕ್ಕೆ. ಮಾರ್ಗಶೀರ್ಷ ಶುಕ್ಲ ಪ್ರತಿಪದೆಯಿಂದ ಐದು ದಿನ ದಾರಿ ನಡೆದು ಕಪಿಗಳು ಷಷ್ಠಿ ದಿನ ಮಧುವನವನ್ನು ಧ್ವಂಸಗೊಳಿಸಿದರು. ಸಪ್ತಮಿಯ ದಿನ ರಾಮನಿಗೆ ನಮಸ್ಕಾರಗೈದು, ಸೀತೆಯ ಸಮಾಚಾರ ತಿಳಿಸಿ, ಅವಳು ಕೊಟ್ಟ ಚೂಡಾಮಣಿಯನ್ನು ಮಾರುತಿ ಶ್ರೀರಾಮನಿಗೆ ಸಮರ್ಪಿಸಿದ. ಅಷ್ಟಮಿಯ ದಿನ ಉತ್ತರಾ ಫಾಲ್ಗುಣಿ ನಕ್ಷತ್ರ. ವಿಜಯ ಮುಹೂರ್ತ. ಮಧ್ಯಾಹ್ನ ಎರಡು ಗಂಟೆಗೆ ರಾಮನು ಕಿಷ್ಕಿಂಧೆಯಿಂದ ಹೊರಟ ಕಪಿಸೇನೆಯೊಂದಿಗೆ. ಏಳು ದಿನ ದಾರಿ ನಡೆದು ದಕ್ಷಿಣ ಸಮುದ್ರ ತೀರಕ್ಕೆ ಬಂದಿತು ರಾಮಸೇನೆ.

ಪುಷ್ಯಶುಕ್ಲ ಪ್ರತಿಪದೆಯಿಂದ ಮೂರು ದಿನ ಸಮುದ್ರತೀರದಲ್ಲಿ ರಾಮನು ಸೇನಾಪತಿ ಸುಗ್ರೀವ, ಹನುಮಂತ, ಜಾಂಬವಂತ, ಅಂಗದ, ನಲ, ಲಕ್ಷ್ಮಣ, ದ್ವಿವಿದ, ಮೈಂದ,

ಸುಷೇಣ, ತಾರ, ಮುಂತಾದ ತನ್ನ ಪರಿವಾರದೊಂದಿಗೆ ವಾಸಮಾಡಿದ. ಚತುರ್ಥಿಯ ದಿನ ವಿಭೀಷಣನು ಬಂದು ರಾಮಚಂದ್ರನ ಆಶ್ರಯ ಪಡೆದ. ಪಂಚಮಿಯ ದಿನ ಸಮುದ್ರ ಲಂಘನೆಯ ವಿಚಾರ. ನಾಲ್ಕು ದಿನ ಸಮುದ್ರತೀರದಲ್ಲಿ ರಾಮನು "ಲಂಕೆಗೆ ದಾರಿಮಾಡಿಕೊಡು" ಎಂದು ಶರಧಿಯನ್ನು ಕೇಳಿ ಪಟ್ಟು ಹಿಡಿದು ಉಪವಾಸ ಕುಳಿತ. ನಾಲ್ಕನೆಯ ದಿನ ಸಮುದ್ರನು ತಾನಾಗಿ ಬಂದು ಸೇತುವೆಯನ್ನು ರಚಿಸಬೇಕೆಂದು ಸೂಚನೆ ನೀಡಿದ. ದಶಮಿಯ ದಿನ ಪ್ರಾರಂಭವಾಯ್ತು ಸೇತುಬಂಧನದ ಕಾರ್ಯ. ತ್ರಯೋದಶಿ ದಿನ ಪೂರ್ತಿಗೊಂಡಿತು ಸೇತು ನಿರ್ಮಾಣ.

ಚತುರ್ದಶಿಯ ದಿನ ರಾಮನು ಸುವೇಲ ಪರ್ವತವನ್ನು ತಲುಪಿದ. ಹುಣ್ಣಿಮೆ ಪ್ರತಿಪದ ಹಾಗೂ ದ್ವಿತೀಯ ಮೂರು ದಿನಗಳಲ್ಲಿ ಎಲ್ಲ ಕಪಿಸೇನೆಯು ಸೇತುವೆಮಾರ್ಗ ದಿಂದ ಲಂಕೆಗೆ ಬಂದು ಇಳಿಯಿತು. ತೃತಿಯಾ ದಿನದಿಂದ ದಶಮಿಯವರೆಗೆ ಎಂಟು ದಿನ ತನ್ನ ಸೇನೆಯನ್ನು ವ್ಯವಸ್ಥಿತಗೊಳಿಸಿ ರಾಮ ಲಂಕಾಪಟ್ಟಣಕ್ಕೆ ಮುತ್ತಿಗೆ ಹಾಕಿದ. ಏಕಾದಶಿಯ ದಿನ ರಾವಣನ ಶುಕ ಸಾರಣ ಎಂಬ ಇಬ್ಬರು ಮಂತ್ರಿಗಳು ರಾಮನ ಕಡೆಗೆ ಬಂದು ಹೋದರು. ಪುಷ್ಯ ಕೃಷ್ಣ ದ್ವಾದಶಿಯ ದಿನ ಸುಗ್ರೀವನ ಸೇನೆಯ ಎಣಿಕೆ ಆಯಿತು. ತ್ರಯೋದಶಿಯಿಂದ ಅಮಾವಾಸ್ಯೆಯ ದಿನ ಪೂರ್ತಿ ಮೂರು ದಿನ ರಾವಣನು ತನ್ನ ಸೇನೆಯನ್ನು ಸಂಘಟಿಸಿದ. ಹಾಗೂ ಯುದ್ಧ ಯೋಜನೆಮಾಡಿದನು. ಮಾಘ ಶುದ್ಧ ಪ್ರತಿಪದೆಯಂದು ರಾಮನು ವಾಲಿಯ ಪುತ್ರ ಅಂಗದನನ್ನು ರಾವಣನ ದರ್ಬಾರಕ್ಕೆ ದೂತನನ್ನಾಗಿ ಕೊಟ್ಟು ಕಳುಹಿದನು.

ದ್ವಿತೀಯಾ ದಿನ ಸೀತೆಗೆ ಮಾಯೆಯಿಂದ ರಾವಣನು ರಾಮನ ಶಿರಸ್ಸನ್ನು ಕಡಿದು ತೋರಿಸಿದ. ಮಾಘ ಶುಕ್ಲ ದ್ವಿತೀಯಾ ದಿನದಂದು ಏಳು ದಿನಗಳವರೆಗೆ ರಾಕ್ಷಸ ಹಾಗೂ ವಾನರರಲ್ಲಿ ಯುದ್ಧವಾಯಿತು. ನವಮಿಯಂದು ಮೇಘನಾದನು ರಾಮಲಕ್ಷ್ಮಣರನ್ನು ನಾಗಪಾಶದಲ್ಲಿ ಬಂಧಿಸಿದ. ಆಗ ರಾಮನು ಗರುಡನನ್ನು ನೆನೆದ. ಅವನು ಬಂದ ಕೂಡಲೇ ನಾಗಪಾಶವು ಆ ದಶಮೀ ದಿನದಂದು ತಾನಾಗಿ ಕಳಚಿ ಬಿದ್ದಿತು. ಮಾಘ ಶುಕ್ಲ ಏಕಾದಶೀ ದಿನ ಯುದ್ಧವನ್ನು ನಿಲ್ಲಿಸಲಾಗಿತ್ತು. ದ್ವಾದಶಿಯಂದು ಹನುಮಂತನು ಧೂಮ್ರಾಕ್ಷನನ್ನು ತ್ರಯೋದಶಿಯ ದಿನ ಅಕಂಪನನ್ನು ಕೊಂದು ಹಾಕಿದ. ಚತುರ್ದಶಿಯಿಂದ ಮಾಘ ಕೃಷ್ಣ ಪ್ರತಿಪದೆಯವರೆಗೆ ಮೂರು ದಿನ ಅನೇಕ ದೈತ್ಯರು ರಣಭೂಮಿಯಲ್ಲಿ ಹತಪತಿತರಾದರು. ನೀಲನು ಪ್ರಹಸ್ತನನ್ನು ಸಂಹರಿಸಿದ.

ಮಾಘ ಕೃಷ್ಣ ತೃತಿಯಾ ದಿನದಂದು ಶ್ರೀರಾಮನು ರಾವಣನನ್ನು ಯುದ್ಧ ಮಾಡಿ ರಣರಂಗದಿಂದ ಹೊಡೆದು ಓಡಿಸಿದ. ಚತುರ್ಥಿ ದಿನವೂ ರಾವಣನು ಪೂರ್ವದಿನದಂತೆ ಸಮರಾಂಗಣದಿಂದ ಸೋತು ಪಲಾಯನ ಮಾಡಬೇಕಾಯಿತು. ಪಂಚಮಿಯ ದಿನ ನಿರುಪಾಯನಾಗಿ ರಾವಣನು ತನ್ನ ಸೋದರ ಕುಂಭಕರ್ಣನನ್ನು ಎಬ್ಬಿಸಿದ. ನಾಕು ದಿನ ಹಸಿದ ಆ ಕುಂಭಕರ್ಣನ ಬ್ರಹ್ಮಾಂಡ ಭೋಜನದ ಸಂಭ್ರಮ. ನವಮಿಯ ದಿನ ಪ್ರಾರಂಭವಾಯಿತು ಕುಂಭಕರ್ಣನ ಯುದ್ಧ. ನವಮಿ, ದಶಮಿ, ಏಕಾದಶೀ, ದ್ವಾದಶಿ ನಾಲ್ಕು ದಿನಗಳವರೆಗೆ ಕುಂಭಕರ್ಣನು ಘೋರವಾಗಿ ಕಾದಿದ. ಅನೇಕ ವಾನರರನ್ನು ಕೊಂದು ತಿಂದು ಹಾಕಿದ. ತ್ರಯೋದಶಿ ದಿನ ರಾಮನ ಕೈಯಿಂದ ಕುಂಭಕರ್ಣನ ಸಂಹಾರ ಆಯಿತು. ಅಮಾವಾಸ್ಯೆಯ ದಿನ ರಾಕ್ಷಸರೆಲ್ಲರೂ ಲಂಕಾಪಟ್ಟಣದಲ್ಲಿ ಕುಂಭಕರ್ಣನ ಮರಣದ

ಶೋಕ ಸೂತಕವನ್ನು ಆಚರಿಸಿದರು. ಫಾಲ್ಗುಣ ಶುದ್ಧ ಚತುರ್ದಶಿಯಿಂದ ನಾಲ್ಕು ದಿನ ನರಾಂತಕ ಮುಂತಾದ ಐದು ರಾಕ್ಷಸ ಸೇನಾಪತಿಗಳು ಹೋರಾಡಿ ಧಾರಾ ತೀರ್ಥದಲ್ಲಿ ದೇಹ ಬಿಟ್ಟರು. ಮುಂದೆ ಪಂಚಮಿ ಷಷ್ಠಿ ಸಪ್ತಮಿ ಮೂರು ದಿನ ಅತಿಕಾಯನು ಶತಪ್ರಯತ್ನದಿಂದ ಹೋರಾಡಿ ಗತಪ್ರಾಣನಾಗಿ ಬಿದ್ದ. ಅಷ್ಟಮಿಯಿಂದ ದ್ವಾದಶಿಯವರೆಗೆ ಐದು ದಿನ ಕುಂಭ ನಿಕುಂಭರ ವಧ. ಮುಂದೆ ನಾಲ್ಕುದಿನ ಮಕರಾಕ್ಷನು ವಾನರ ವೀರರೊಂದಿಗೆ ಕಲಿತನದಿಂದ ಕಾದಿ ಮರಣಹೊಂದಿದನು.

ಫಾಲ್ಗುಣ ಕೃಷ್ಣ ದ್ವಿತೀಯಾ ದಿನ ಇಂದ್ರಜಿತನು ಸೋತು ಓಡಿ ಹೋದ. ತೃತೀಯಾದಿಂದ ಸಪ್ತಮಿಯ ವರೆಗೆ ಐದು ದಿನ ಗಾಯಾಳುಗಳ ಉಪಚಾರಕ್ಕಾಗಿ ಯುದ್ಧವು ನಿಲ್ಲಿಸಲ್ಪಟ್ಟಿತು. ಅಷ್ಟಮಿಯ ದಿನ ರಾವಣನು ಮಾಯಾ ಸೀತೆಯ ವಧವನ್ನು ಮಾಡಿ ತೋರಿಸಿದ. ಮುಂದೆ ನಾಲ್ಕು ದಿನ ಎರಡೂ ಸೈನಿಕರು ಯುದ್ಧದಿಂದ ದಣಿದು ಹೋದದ್ದರಿಂದ ತಾತ್ಕಾಲಿಕ ಯುದ್ಧ ವಿರಾಮವು ಘೋಷಿಸಲ್ಪಟ್ಟಿತು. ತ್ರಯೋದಶಿ ಯಿಂದ ಐದು ದಿನಗಳವರೆಗೆ ಲಕ್ಷ್ಮಣನು ಶೌರ್ಯದಿಂದ ಕಾದಾಡಿ ಇಂದ್ರಜಿತನನ್ನು ಸಂಹರಿಸಿದ. ಚತುರ್ದಶಿಯಂದು ರಾವಣನು ಯುದ್ಧವನ್ನು ನಿಲ್ಲಿಸಿ ಯಜ್ಞ ದೀಕ್ಷೆಯನ್ನು ಪಡೆದ. ಅಮಾವಾಸ್ಯೆಯ ದಿನ ಯುದ್ಧಕ್ಕೆ ಹೊರಟು ಬಂದ. ಚೈತ್ರ ಶುಕ್ಲಪ್ರತಿಪದೆಯಿಂದ ಐದು ದಿನಗಳವರೆಗೆ ರಾವಣನು ಬಿಟ್ಟೂ ಬಿಡದೇ ಯುದ್ಧಮಾಡುತ್ತಲೇ ಇದ್ದ. ಆಗ ಅಸಂಖ್ಯ ರಾಕ್ಷಸರ ಸಂಹಾರ ನಡೆಯಿತು. ಮತ್ತೆ ಮುಂದೆ ಮೂರು ದಿನಗಳಲ್ಲಿ ರಾವಣನ ಕಾದಿಟ್ಟ ಸೈನ್ಯ ಪಡೆಯೆಲ್ಲವೂ ರಥ ಕುದುರೆ ಸಹಿತವಾಗಿ ಧ್ವಸ್ತವಾಯಿತು.

ಚೈತ್ರ ಶುಕ್ಲ ನವಮಿಯಂದು ಲಕ್ಷ್ಮಣನಿಗೆ ರಾವಣನ ಶಸ್ತ್ರದಿಂದ ಆಘಾತವಾಯಿತು. ಆಗ ವಿಭೀಷಣನ ಸಲಹೆಯಂತೆ ಹನುಮಂತನು ದ್ರೋಣಾಚಲ ಪರ್ವತಕ್ಕೆ ಹೋಗಿ ವಿಶಲ್ಯಾ ಎಂಬ ಸಂಜೀವಿನಿ ಬೇರನ್ನು ತೆಗೆದುಕೊಂಡು ಬಂದು ಲಕ್ಷ್ಮಣನಿಗೆ ಅದರ ರಸವನ್ನು ಅರೆದು ಕುಡಿಸಿದ. ದಶಮೀ ದಿನ ದೈತ್ಯರು ಹಗಲು ಯುದ್ಧ ನಿಲ್ಲಿಸಿ ರಾತ್ರಿ ಯುದ್ಧ ಪ್ರಾರಂಭವಾಯಿತು.

ಏಕಾದಶಿಯ ದಿನ ಇಂದ್ರನು ತನ್ನ ಸಾರಥಿಯಾದ ಮಾತಲಿಯ ಜೊತೆಗೆ ರಾಮನಿಗಾಗಿ ತನ್ನ ದೇವರಥವನ್ನು ಕಳಿಸಿಕೊಟ್ಟ. ಚೈತ್ರ ಶುಕ್ಲಪಕ್ಷ ದ್ವಾದಶಿಯಿಂದ ಚೈತ್ರ ಕೃಷ್ಣ ಚತುರ್ದಶಿಯವರೆಗೆ ಹದಿನೆಂಟು ದಿನಗಳವರೆಗೆ ರಾಮರಾವಣರಲ್ಲಿ ಇತಿಹಾಸ ಪ್ರಸಿದ್ಧವಾದ ಯುದ್ಧವು ನಡೆಯಿತು. ಕೊನೆಗೆ ಚತುರ್ದಶಿ ಸಾಯಂಕಾಲ ದ್ವಂದ್ವ ಯುದ್ಧಮಾಡಿ ರಾಮನು ರಾವಣನನ್ನು ಸಂಹರಿಸಿದ. ಅಮಾವಾಸ್ಯೆಯ ದಿನ ರಾವಣನೇ ಮೊದಲಾದ ರಾಕ್ಷಸರ ದಾಹ ಸಂಸ್ಕಾರ ನಡೆಯಿತು. ಹೀಗೆ ಮಾಘ ಶುಕ್ಲ ದ್ವಿತೀಯೆಯಿಂದ ಆರಂಭಮಾಡಿ ಚೈತ್ರ ಕೃಷ್ಣಪಕ್ಷ ಚತುರ್ದಶಿಯತನಕ ಎಂಬತ್ತೇಳು ದಿನಗಳವರೆಗೆ ರಾಮರಾವಣನರ ಸೇನೆಗಳಲ್ಲಿ ಯುದ್ಧವು ನಡೆಯಿತು. ಇದರಲ್ಲಿ ಮಧ್ಯೆ ಹದಿನೈದು ದಿನ ಬೇರೆ ಬೇರೆ ಕಾರಣಗಳಿಗಾಗಿ ಯುದ್ಧವು ನಿಲ್ಲಿಸಿಲ್ಪಟ್ಟಿತು. ಒಟ್ಟು ಎಪ್ಪತ್ತೆರಡು ದಿನ ಈ ಘೋರ ಸಂಗ್ರಾಮವು ನಡೆಯಿತು.

ವೈಶಾಖ ಶುಕ್ಲ ಪ್ರತಿಪದೆಯಂದು ರಾಮನು ರಣಭೂಮಿಯಲ್ಲಿಯೇ ಉಳಿದು ಕೊಂಡನು. ದ್ವಿತೀಯಾ ದಿನ ವಿಭೀಷಣನನ್ನು ಲಂಕಾಪಟ್ಟಣದ ಸಿಂಹಾಸನದ ಮೇಲೆ ಕೂಡಿಸಿ ಪಟ್ಟಾಭಿಷೇಕಮಾಡಿಸಿದ ರಾಮ. ವೈಶಾಖ ಶುದ್ಧ ತೃತೀಯಾ ದಿನ ಸೀತಾದೇವಿಯ

ಅಗ್ನಿ ದಿವ್ಯವು ಆಯಿತು. ಅಗ್ನಿ ಪರೀಕ್ಷೆಯಲ್ಲಿ ಪರಮ ಪವಿತ್ರಳೆಂದು ಉತ್ತೀರ್ಣಳಾದ ಆ ಮಹಾದೇವಿಗೆ ದೇವತೆಗಳು ವರಗಳನ್ನು ನೀಡಿದರು. ಅಂದೇ ಸ್ವರ್ಗಲೋಕದಿಂದ ಬಂದ ದಶರಥರಾಜನು ರಾಮನಿಗೆ ದರ್ಶನವಿತ್ತು ಸೀತೆಯ ಪಾವಿತ್ರ್ಯದ ವಿಷಯದಲ್ಲಿ ತನ್ನ ಗೌರವ ಭಾವನೆಯನ್ನು ಪ್ರಕಟಿಸಿ ಸೀತೆಯನ್ನು ಸ್ವೀಕರಿಸು ಎಂದು ರಾಮನಿಗೆ ಆದೇಶ ನೀಡಿದ. ತಂದೆಯ ಆದೇಶ, ಅಗ್ನಿಯ ಸಾಕ್ಷಿ ಮತ್ತು ತನ್ನ ಆತ್ಮ ಸಾಕ್ಷಿಯಿಂದ ಸೀತೆ ಪರಮಪಾವನೆಯೆಂದು ಮನಗಂಡ ಶ್ರೀರಾಮನು ಅವಳನ್ನು ಪ್ರೀತಿಯಿಂದ ಪರಿಗ್ರಹಿಸಿ ವೈಶಾಖ ಶುಕ್ಲ ಚತುರ್ಥಿ ದಿನದಂದು ಪುಷ್ಪಕ ವಿಮಾನದಲ್ಲಿ ಕುಳಿತು ಆಕಾಶ ಮಾರ್ಗದಿಂದ ಅಯೋಧ್ಯಾ ಪಟ್ಟಣದ ಕಡೆಗೆ ಹೊರಟ. ಪಂಚಮೀ ದಿನ ಭಾರದ್ವಾಜ ಆಶ್ರಮದಲ್ಲಿ ಇಳಿದು ಷಷ್ಠೀದಿನ ಪುಷ್ಪಕದಿಂದ ನಂದಿಗ್ರಾಮಕ್ಕೆ ಬಂದ.

ಸಪ್ತಮಿಯ ದಿನ ಅಯೋಧ್ಯೆಯಲ್ಲಿ ಶ್ರೀರಾಮಚಂದ್ರನ ಪಟ್ಟಾಭಿಷೇಕ ಮಹೋತ್ಸವವು ವಿಜೃಂಭಣೆಯಿಂದ ನೆರವೇರಿತು. ಹದಿನಾಲ್ಕು ತಿಂಗಳು ಮೇಲೆ ಹತ್ತು ದಿನ ಸೀತೆಯು ರಾಮನಿಂದ ಆಗಲಿ ರಾವಣನ ಮನೆಯಲ್ಲಿ ಅಶೋಕ ವನದಲ್ಲಿ ಇದ್ದಳು. ತನ್ನ ನಲವತ್ತೆರಡನೆಯ ವಯಸ್ಸಿನಲ್ಲಿ ರಾಮನು ರಾಜ್ಯ ಶಾಸನವನ್ನು ಪ್ರಾರಂಭಿಸಿದ. ಆಗ ಸೀತೆಗೆ ಮೂವತ್ತೆರಡು ವರ್ಷ. ರಾಮನು ತನ್ನ ಸೋದರರೊಂದಿಗೆ ಒಟ್ಟು ಹನ್ನೊಂದು ಸಾವಿರ ವರ್ಷ ರಾಜ್ಯ ಆಳಿದ. ಹೀಗೆ ನ್ಯಾಯವಾಗಿ ಧರ್ಮಶಾಸನ ಗೈಯುತ್ತ ಪ್ರಜೆಗಳನ್ನೆಲ್ಲ ಆನಂದದಿಂದ ಸಂತೋಷಭರಿತರನ್ನಾಗಿ ಇರಿಸಿ ಶ್ರೀರಾಮಚಂದ್ರನು ತನ್ನ ಪರಿವಾರದೊಂದಿಗೆ ಪರಂಧಾಮಕ್ಕೆ ಪ್ರಯಾಣ ಬೆಳೆಸಿದ.

ಆದರ್ಶವಾಗಿತ್ತು ರಾಮನ ಆ ರಾಮರಾಜ್ಯ. ಜನರೆಲ್ಲರೂ ಸುಪ್ರಸನ್ನ, ಪ್ರಜೆಗಳೆಲ್ಲರೂ ಪರಿತುಷ್ಟ ಧನಧಾನ್ಯಗಳ ಸಮೃದ್ಧಿ, ಸಂತಾನ ಸೌಭಾಗ್ಯ ಸಂಪತ್ತು ಸಮೃದ್ಧ, ಇಚ್ಛಾನುಸಾರ ವೃಷ್ಟಿ, ಅಧಿಕಾಧಿಕ ಧಾನ್ಯ ವೃದ್ಧಿ. ಎಲ್ಲ ಕಡೆಗೂ ಸಂತೃಪ್ತಿ. ಎಲ್ಲ ಮರಬಳ್ಳಿಗಳಲ್ಲಿ ಫಲಪುಷ್ಪಗಳ ಸುಗ್ಗಿ. ಎಲ್ಲ ಹಸುಗಳ ಕೆಚ್ಚಲಿನಲ್ಲಿಯೂ ಕೊಡ ತುಂಬಿ ಸೂಸುವಷ್ಟು ಹಾಲು. ಪ್ರಮದೆಯರೆಲ್ಲರೂ ಪತಿವ್ರತೆಯರೇ. ಪುರುಷರೆಲ್ಲರೂ ಸದಾಚಾರ ಸಂಪನ್ನರೇ. ಇಡೀ ದೇಶದ ತುಂಬೆಲ್ಲ ಬೇನೆಯಿಲ್ಲ, ಬೇಸರಿಕೆಯಿಲ್ಲ. ವರ್ಗಕಲಹವಿಲ್ಲ. ಜಾತಿಮಾತ್ಸರ್ಯವಿಲ್ಲ. ವರ್ಣ ಸಂಕರವಿಲ್ಲ. ಸಮಗ್ರ ರಾಜ್ಯದಲ್ಲಿ ಒಬ್ಬಳೂ ಬಂಜೆ ಹೆಣ್ಣು ಇಲ್ಲ. ವಿಧುರ ಗಂಡು ಇಲ್ಲ. ತಂದೆ ತಾಯಿಗಳನ್ನು ನಿಂದಿಸುವ ಮಕ್ಕಳಿಲ್ಲ. ಗುರುದ್ರೋಹಿ ಶಿಷ್ಯರಿಲ್ಲ. ರಾಜ್ಯದಲ್ಲಿ ಎಲ್ಲಿ ನೋಡಿದರೂ ದರಿದ್ರ, ರೋಗಿಷ್ಠ, ಕಳ್ಳ, ಕುಡುಕ, ಕೆಡುಕ, ತಲೆಗಡುಕ, ಸುಳ್ಳು ಮಾತನಾಡುವವ, ಕೃತಘ್ನ, ಹಿಂಸಕ, ನಾಸ್ತಿಕ ಒಬ್ಬರೂ ಇರಲಿಲ್ಲ. ರಾಮರಾಜ್ಯದಲ್ಲಿ ಎಲ್ಲರೂ ಆಸ್ತಿಕರು, ಧಾರ್ಮಿಕರು, ಭಗವದ್ಭಕ್ತರು ಸುಖಿಗಳು, ಸಂತೃಪ್ತರು, ಪುಣ್ಯವಂತರೂ ಆಗಿದ್ದರು.

ರಾಮನು ರಾಜ್ಯವನ್ನು ಆಳುತ್ತಿರುವಾಗ ವಶಿಷ್ಠರು ಒಮ್ಮೆ ತೀರ್ಥಯಾತ್ರೆಗೆ ಹೋಗಿದ್ದರು. ಮರಳಿ ಬಂದ ಬಳಿಕ ಶ್ರೀರಾಮಚಂದ್ರನು ಅವರು ಭೂಮಂಡಲ ತುಂಬ ತಿರುಗಾಡಿ ಬಂದ ಎಲ್ಲ ತೀರ್ಥಕ್ಷೇತ್ರಗಳ ಮಹಿಮೆಯನ್ನು ತನಗೆ ಹೇಳಬೇಕೆಂದು ಕೇಳಿದನು.

## ಬ್ರಾಹ್ಮಣರ ಪುನಃ ಪ್ರತಿಷ್ಠಾಪನೆ. ಸತ್ಯಮಂದಿರದ ಸ್ಥಾಪನೆ

**ಶ್ರೀರಾಮ:-** ಪೂಜ್ಯ ವಶಿಷ್ಠರೇ, ತಾವು ಯಾವ ಯಾವ ತೀರ್ಥಗಳ ಯಾತ್ರೆ ಮಾಡಿದಿರಿ? ಅವುಗಳಲ್ಲಿ ಅತ್ಯುತ್ತಮ ತೀರ್ಥಗಳು ಯಾವವು?

**ವಶಿಷ್ಠ:-** ಗಂಗಾ, ನರ್ಮದಾ, ತಾಪಿ, ಯಮುನಾ, ಸರಸ್ವತಿ, ಗಂಡಕಿ, ಗೋಮತಿ, ಪೂರ್ಣಾ ಈ ನದಿಗಳು ಪರಮಪಾವನ. ಈ ಪುಣ್ಯನದಿಗಳಲ್ಲಿ ನರ್ಮದಾ ಮತ್ತು ಗಂಗಾ ಎರಡು ಸರ್ವಶ್ರೇಷ್ಠ. ಕಲಿಯುಗದಲ್ಲಿ ನರ್ಮದೆಯ ದರ್ಶನದಿಂದ ನೂರು ಜನ್ಮಗಳ ಪಾಪನಾಶ. ಸ್ಪರ್ಶಮಾಡಿದರೆ ಮುನ್ನೂರು ಜನ್ಮಗಳ ಪಾಪಪರಿಹಾರ, ಸ್ನಾನದಿಂದ ಸಾವಿರ ಜನ್ಮಗಳ ಪಾಪಕ್ಷಾಲನ. ನರ್ಮದೆಯ ತೀರದಲ್ಲಿ ಒಬ್ಬ ವಿದ್ವಾಂಸರಿಗೆ ಭೋಜನ ಮಾಡಿಸಿದರೆ ಕೋಟಿ ಜನ ಶ್ರೋತ್ರಿಯರ ಭೋಜನ ಮಾಡಿಸಿದಷ್ಟು ಪುಣ್ಯ.

ಗಂಗಾನದಿಯ ನಾಮೋಚ್ಚಾರಣವೂ ಪರಮಪುಣ್ಯ ಪ್ರದ.

**"ಗಂಗಾಗಂಗೇತಿ ಯೋ ಬ್ರೂಯಾದ್ ಯೋಜನಾನಾಂ ಶತೈರಪಿ।**
**ಮುಚ್ಯತೇ ಸರ್ವ ಪಾಪೇಭ್ಯೋ ವಿಷ್ಣು ಲೋಕಂ ಸ ಗಚ್ಛತಿ॥"**

ನೂರು ಯೋಜನ ದೂರದಲ್ಲಿ ಗಂಗಾ ಗಂಗಾ ಎಂದು ನುಡಿದ ಮಾತ್ರಕ್ಕೆ ನರನಿಗೆ ಸರ್ವಪಾಪಗಳಿಂದ ಬಿಡುಗಡೆ. ನೇರವಾಗಿ ಅವನು ವಿಷ್ಣುಲೋಕಕ್ಕೆ ಪ್ರಯಾಣ ಬೆಳೆಸುವನು. ಫಾಲ್ಗುಣ ಚೈತ್ರಮಾಸದ ಕೊನೆಗೆ ಅಮಾವಾಸ್ಯಾ ತಿಥಿಯಂದು ಮತ್ತು (ಭಾದ್ರಪದ) ಆಶ್ವೀನ ಕೃಷ್ಣಪಕ್ಷದಲ್ಲಿ ಗಂಗಾತೀರಕ್ಕೆ ಹೋಗಿ ಸ್ನಾನ ಪಿತೃತರ್ಪಣ ಪಿಂಡದಾನಾದಿಗಳನ್ನು ಮಾಡಿದವರು ಅಕ್ಷಯ ಫಲವನ್ನು ಹೊಂದುತ್ತಾರೆ.

ತಾಪೀ ನದಿಯನ್ನು ನೆನೆದ ಮಾತ್ರಕ್ಕೆ ಮಹಾಪಾಪಿಗಳೂ ಅವರು ಏಳು ತಲೆಮಾರುಗಳ ಪಿತೃಗಳೂ ಉದ್ಧಾರ ಹೊಂದುವರು. ಯಮುನೆಯಲ್ಲಿ ಮಿಂದ ಮಾತ್ರಕ್ಕೆ ಮಹಾಪಾತಕಗಳೂ ತೊಲಗಿಹೋಗುವವು. ಕಾರ್ತೀಕ ಹುಣ್ಣಿಮೆಯಂದು ಕೃತ್ತಿಕಾ ನಕ್ಷತ್ರ ಯೋಗದಲ್ಲಿ ಸರಸ್ವತಿ ನದಿಯಲ್ಲಿ ಸ್ನಾನ ಮಾಡಿದರೆ ವೈಕುಂಠಧಾಮ ಪ್ರಾಪ್ತಿ. ಗಂಡಕೀ, ಅಥವಾ ನಾರಾಯಣೀ ನದಿಯ ಪುಣ್ಯತೀರ್ಥದಲ್ಲಿ ಸ್ನಾನಮಾಡಿ ಸಾಲಿಗ್ರಾಮ ಪೂಜೆಮಾಡಿದರೆ ಪುನರ್ಜನ್ಮವಿಲ್ಲ. ಗೋಮತಿಯಲ್ಲಿ ಸ್ನಾನಮಾಡಿ ದ್ವಾರಕಾ ಕ್ಷೇತ್ರದಲ್ಲಿರುವ ಶ್ರೀಕೃಷ್ಣನ ದರ್ಶನ ತೆಗೆದುಕೊಂಡವರಿಗೆ ಮೋಕ್ಷಾನಂದ. ಚರ್ಮಣ್ವತೀ ಸ್ನಾನದಿಂದ ಹತ್ತು ಪೀಳಿಗೆಯ ಪಿತೃಗಳ ಉದ್ಧಾರ. ಮಾಘ ಮಾಸದಲ್ಲಿ ಪ್ರಯಾಗ ಸ್ನಾನ, ಪ್ರಭಾಸ ಕ್ಷೇತ್ರದಲ್ಲಿ ಮೂರು ರಾತ್ರಿ ವಾಸ, ನೈಮಿಷಾರಣ್ಯದಲ್ಲಿ ಒಂದು ದಿನ ಭಗವತ್ ಪೂಜೆ, ಕುರುಕ್ಷೇತ್ರದಲ್ಲಿ ಸೂರ್ಯಚಂದ್ರ ಗ್ರಹಣಸ್ನಾನ, ವೈಶಾಖದಲ್ಲಿ ಉಜ್ಜಯಿನಿಯ ಕ್ಷಿಪ್ರಾ ನದೀ ಸ್ನಾನ, ಮೂರು ದಿನ ಸಿಂಧು ನದೀ ಸ್ನಾನ, ಒಂದು ದಿನ ಕೋಟಿತೀರ್ಥಸ್ನಾನ ಹಾಗೂ ಕೋಟೇಶ್ವರ ದರ್ಶನ, ಸೂರ್ಯೋದಯ ಕಾಲದಲ್ಲಿ ವೇದವತೀ ಸ್ನಾನ, ದಾನ, ಪಿತೃತರ್ಪಣ ಪಿಂಡಪ್ರದಾನ, ವಿದ್ವಾಂಸರ ಭೋಜನ ಮುಂತಾದವುಗಳನ್ನು ಮಾಡಿದವರು ತಾವು ಹಿಂದೆ ಮಾಡಿದ ಪಾಪಗಳನ್ನೆಲ್ಲ ಕಳೆದು ಕೊಂಡು ಸ್ವರ್ಗಮೋಕ್ಷಾದಿ ಸದ್ಗತಿಯನ್ನು ಪಡೆಯುವರು.

ಈ ಎಲ್ಲ ಭೂಲೋಕದ ತೀರ್ಥಕ್ಷೇತ್ರಗಳಲ್ಲಿ ಸರ್ವೋತ್ತಮ ಕ್ಷೇತ್ರ ಎಂದರೆ ಈ ಧರ್ಮಾರಣ್ಯ. ಇಲ್ಲಿಯ ತೀರ್ಥವು ಸರ್ವತೀರ್ಥಗಳಿಗಿಂತ ಅತ್ಯುತ್ತಮ. ಬ್ರಹ್ಮ, ವಿಷ್ಣು, ಶಿವ ತ್ರಿಮೂರ್ತಿಗಳು ಮೊಟ್ಟಮೊದಲು ಈ ಧರ್ಮಾರಣ್ಯ ತೀರ್ಥವನ್ನು ಸ್ಥಾಪಿಸಿದ್ದಾರೆ.

ಮಹರ್ಷಿ ವಶಿಷ್ಠರ ಮುಖದಿಂದ ಧರ್ಮಾರಣ್ಯದ ಈ ಮಹಾಮಹಿಮೆಯನ್ನು ಕೇಳಿ ಶ್ರೀರಾಮನು ಸೀತೆ ಹನುಮಂತ, ಕೌಸಲ್ಯೆ, ಕೈಕಾಯಿ, ಲಕ್ಷ್ಮಣ, ಭರತ ಶತ್ರುಘ್ನ, ಹಾಗೂ ತನ್ನ ಮಂತ್ರಿ ಸೇನಾಪತಿಗಳೊಂದಿಗೆ ಧರ್ಮಾರಣ್ಯದ ತೀರ್ಥಯಾತ್ರೆಯನ್ನು ಮಾಡಬೇಕೆಂದು ನಿರ್ಧರಿಸಿದ. ಕುಲಗುರು ವಶಿಷ್ಠರನ್ನು ಮುಂದೆ ಮಾಡಿಕೊಂಡು ತನ್ನ ಚತುರಂಗ ಸೇನೆ ಹಾಗೂ ಪರಿವಾರದೊಂದಿಗೆ ಅಯೋಧ್ಯೆಯಿಂದ ಧರ್ಮಾರಣ್ಯದ ಯಾತ್ರೆಗೆ ಶ್ರೀರಾಮಚಂದ್ರನು ಹೊರಟ. ದಾರಿಯಲ್ಲಿ ಅನೇಕ ಹಳ್ಳಿ, ಪಟ್ಟಣ, ನದಿ, ಹಳ್ಳ, ಕಾಡುನಾಡು, ಇವುಗಳನ್ನು ದಾಟುತ್ತ ಹತ್ತನೆಯ ದಿನ ರಾಮನ ಪರಿವಾರವು ಧರ್ಮಾರಣ್ಯ ಕ್ಷೇತ್ರದ ಸಮೀಪಕ್ಕೆ ಸಾರಿತು. ಅಲ್ಲಿಯ ಮಾಂಡಲಿಕಪುರದಲ್ಲಿ ಒಂದು ರಾತ್ರಿ ಇದ್ದು ಮರುದಿನ ಶ್ರೀರಾಮನು ತಾನು ಕುಳಿತ ಚಿನ್ನದ ಪಾಲಿಕೆಯಿಂದ ಕೆಳಗಿಳಿದು ವಶಿಷ್ಠರ ಆದೇಶದಂತೆ ಕಾಲಿನಿಂದ ನಡೆಯುತ್ತಲೇ ಮಧುವಾಸನ ಎಂಬ ಗ್ರಾಮವನ್ನು ಪರಿವಾರದೊಂದಿಗೆ ತಲುಪಿದ. ಅಲ್ಲಿ ವಶಿಷ್ಠರ ಹೇಳಿಕೆಯಂತೆ ಮಾತೃಕಾ ಪೂಜೆಮಾಡಿ ಸುವರ್ಣಾನದಿಯ ದಕ್ಷಿಣತೀರದ ಹರಿಕ್ಷೇತ್ರವನ್ನು ನೋಡಿಕೊಂಡು ಉತ್ತರತೀರಕ್ಕೆ ಬಂದು ಶ್ರದ್ಧೆಯಿಂದ ಪಿತೃಗಳನ್ನು ಉದ್ದೇಶಿಸಿ ಶ್ರಾದ್ಧ ಕಾರ್ಯವನ್ನು ಮಾಡಿದ. ಅದರ ವಾಯವ್ಯ ಕೋನದಲ್ಲಿ ಸುವರ್ಣಾನದಿಯ ಎರಡೂ ತೀರಗಳಲ್ಲಿ ರಾಮೇಶ್ವರ ಮೂರ್ತಿ ಹಾಗೂ ರಾಮೇಶ್ವರ ಲಿಂಗಗಳನ್ನು ಸ್ಥಾಪಿಸಿದ. ಮತ್ತು ಅಲ್ಲಿ ತೀರ್ಥವಿಧಿಯನ್ನೆಲ್ಲ ಮುಗಿಸಿ ಸೀತೆಯೊಂದಿಗೆ ನದೀ ತಟಾಕದಲ್ಲಿ ವಿಶ್ರಮಿಸಿದಾಗ ಮಧ್ಯರಾತ್ರಿಯಲ್ಲಿ ರೋದನ ಧ್ವನಿಯು ಕೇಳಿ ಬಂದಿತು. ಓರ್ವ ಹೆಣ್ಣು ಮಗಳು ಕರಳು ಕರಗುವಂತೆ ಆರ್ತಧ್ವನಿಯಿಂದ ಅಳುತ್ತಿದ್ದಳು. ಕೂಡಲೇ ಶ್ರೀರಾಮನು ಅಲ್ಲಿಗೆ ತನ್ನ ದೂತರನ್ನು ಕಳಿಸಿಕೊಟ್ಟನು. ರಾಮದೂತರು ರೋದನಗೈಯುವ ಆ ನಾರಿಯ ಬಳಿಗೆ ಬಂದು ''ಸುಂದರೀ, ನೀನು ಯಾರು? ದೇವಿಯೋ ದಾನವಿಯೋ? ಏಕೆ ಅಳುತ್ತಲಿರುವಿ? ನಿನಗೆ ಯಾವ ಅಪತ್ತು ಬಂದಿದೆ? ಎಂದು ಕೇಳಿದರು. ಅದಕ್ಕೆ ಆ ಹೆಣ್ಣುಮಗಳು- ''ದೂತರೇ, ನಿಮ್ಮ ಸ್ವಾಮಿಯಾದ ರಾಮನನ್ನು ಇಲ್ಲಿಯೇ ಕಳಿಸಿಕೊಡಿರಿ. ನಾನು ಅವನ ಬಳಿಯಲ್ಲಿಯೇ ನನ್ನ ದುಃಖವನ್ನು ತೋಡಿಕೊಳ್ಳುವೆನು'' ಎಂದು ಹೇಳಿದಳು.

ದೂತರು ಬಂದು ರಾಮನಿಗೆ ಈ ಸಮಾಚಾರ ತಿಳಿಸಿದರು. ಆ ಕ್ಷಣದಲ್ಲಿಯೇ ಅಲ್ಲಿಗೆ ಧಾವಿಸಿದ ಆ ಸೀತಾಪತಿ ಆ ನಾರೀಮಣಿಯನ್ನು- ''ನೀನು ಯಾರು? ಯಾರ ಮಡದಿ? ಈ ನಿರ್ಜನ ವನದಲ್ಲಿ ಒಬ್ಬಳೇ ಏಕೆ ರೋದಿಸುತ್ತಲಿರುವಿ? ಎಂದು ಅಂತಃಕರಣದಿಂದ ವಿಚಾರಿಸಿದ.

ಶ್ರೀರಾಮನ ವಾತ್ಸಲ್ಯಪೂರಿತವಾದ ಈ ಪ್ರಶ್ನೆಗಳನ್ನು ಕೇಳಿ ಆ ಅಂಗನೆಯು ಕೈಜೋಡಿಸಿ ಮಧುರವಾಣಿಯಿಂದ ಭಕ್ತಿಭರಿತಳಾಗಿ ಶ್ರೀರಾಮನ ಸ್ತೋತ್ರವನ್ನು ಮಾಡತೊಡಗಿದಳು- ''ಸರ್ವರ ದುಃಖಗಳನ್ನು ಪರಿಹರಿಸುವ ಶ್ರೀರಾಮ, ನಿನಗೆ ವಂದನೆ. ನೀನು ಸಾಕ್ಷಾತ್ ಪರಮಾತ್ಮ. ಲೋಕಕ್ಷೇಮಕ್ಕಾಗಿ ನಿನ್ನ ಅವತಾರ. ಲೋಕಕಂಟಕರಾದ ರಾವಣ, ಕುಂಭಕರ್ಣ, ಇಂದ್ರಜಿತ, ಖರ, ದೂಷಣ, ಮಾರೀಚ ಮುಂತಾದ ಭೀಕರಾಕಾರದ ರಾಕ್ಷಸರನ್ನು ಸಂಹರಿಸಿದೆ. ಸಜ್ಜನರ ಸಂಕಟಗಳನ್ನೆಲ್ಲ ಪರಿಹರಿಸಿದೆ. ನಿನಗೆ ನನ್ನ ಅನಂತ ವಂದನೆ. ರಾಮಚಂದ್ರ, ನಿನ್ನಂಥ ಮಹಾಪ್ರಭುವಿನ ಶಾಸನ ಕಾಲದಲ್ಲಿಯೂ ನಾನು ಒಣಗಿಹೋಗಿದ್ದೇನೆ. ನಾನು ಈ ಧರ್ಮಾರಣ್ಯದ ಅಧಿದೇವತೆ. ಲೋಹಾಸುರನು ಹಿಂದೆ ಈ

ನನ್ನ ಕ್ಷೇತ್ರದಲ್ಲಿ ಮೃತ್ಯುತಾಂಡವವನ್ನೇ ನಡೆಸಿದ್ದ. ಅದರಿಂದ ಇಲ್ಲಿ ಬಹುಕಾಲ ದಿಂದ ನೆಲಿಸಿದ ವಿದ್ವಾಂಸರಾದ ಎಲ್ಲ ಬ್ರಾಹ್ಮಣರು, ವೈಶ್ಯರು. ಆ ಲೋಹಾಸುರನ ಭಯದಿಂದ ಈ ಸ್ಥಾನವನ್ನು ಬಿಟ್ಟು ದಿಕ್ಕಾಪಾಲಾಗಿ ಓಡಿಹೋಗಿದ್ದಾರೆ. ಈಗ ಈ ಇಡೀ ಧರ್ಮಾರಣ್ಯವೆಲ್ಲವೂ ಶೂನ್ಯಪ್ರಾಯ. ಒಂದಾನೊಂದು ಕಾಲದಲ್ಲಿ ಬಗೆಬಗೆಯ ಜನರಿಂದ ತುಂಬಿ ತುಳುಕುತ್ತಿದ್ದ ಈ ನಗರವು ಈಗ ನಿರ್ಜನ, ನಿಶ್ಶಬ್ದ. ಈ ಕ್ಷೇತ್ರದ ತುಂಬ ಈಗ ಸ್ಮಶಾನ ಶಾಂತಿ. ದೇವತೆಗಳು ಬಂದು ಆ ಮಾಯಾವಿ ದೈತ್ಯನಾದ ಲೋಹಾಸುರನನ್ನು ಸಂಹರಿಸಿದ್ದಾರೆ. ಆದರೂ ಅವನ ಭಯದಿಂದ ಯಾರೂ ಇತ್ತ ಕಡೆ ಬರುವುದಿಲ್ಲ.

ಆ ದೈತ್ಯನು ಮೃತನಾಗಿ ಹನ್ನೆರಡು ವರ್ಷಗಳು ಕಳೆದಿವೆ. ಆದರೂ ಇಲ್ಲಿಂದ ಓಡಿಹೋದ ಜನರು ಯಾರೂ ಇಲ್ಲಿಗೆ ಮರಳಿ ಬಂದಿಲ್ಲ. ಅಂದು ಬ್ರಾಹ್ಮಣರು ವೈಶ್ಯರು ಮೀಯುವ ಇಲ್ಲಿಯ ಜಲಾಶಯಗಳಲ್ಲಿ ಇಂದು ಹಂದಿಗಳು ಮೈತೊಳೆಯುತ್ತವೆ. ಹಿಂದೆ ವೇದಘೋಷ ನಡೆಯುವಲ್ಲಿ ಇಂದು ನರಿನಾಯಿಗಳ ಕೂಗು. ಅಂದು ಅಗ್ನಿಹೋತ್ರದ ಹೊಗೆ. ಇಂದು ದಾವಾಗ್ನಿಯ ದಳ್ಳುರಿಯ ಹೊಗೆ. ಇದನ್ನೆಲ್ಲ ನೋಡಿದಾಗ ರಾಮರಾಜನೇ, ನನಗೆ ದುಃಖೋದ್ರೇಕ ಆಗುತ್ತದೆ. ನನ್ನ ದುಃಖವನ್ನು ದೂರಮಾಡಲು ನೀನೇ ಸಮರ್ಥ. ಹೇಗಾದರೂ ಮಾಡಿ ಇಲ್ಲಿಂದ ತೆರಳಿ ಹೋದ ವಿದ್ವಾಂಸರು ಮರಳಿ ಇಲ್ಲಿ ಬರುವಂತೆ ಮಾಡು.

**ರಾಮಚಂದ್ರ:-** ಶುಭಾಂಗಿಯೇ, ಈ ಪುಣ್ಯಸ್ಥಳದಿಂದ ಹೊರಟುಹೋದ ಬ್ರಾಹ್ಮಣರ ಜಾತಿ, ಗೋತ್ರ, ಹೆಸರು ಮುಂತಾದವುಗಳನ್ನು ತಿಳಿಸು. ಎಷ್ಟು ಜನ ವಿಪ್ರರು ಈ ಸ್ಥಾನವನ್ನು ತ್ಯಜಿಸಿದ್ದಾರೆ! ಅವರ ಸಂಖ್ಯೆಯನ್ನು ಹೇಳು. ನಾನು ಅವರೆಲ್ಲರನ್ನೂ ಮರಳಿ ಕರೆತರುತ್ತೇನೆ.

ಧರ್ಮಾರಣ್ಯದ ಅಧಿದೇವತೆ:- ಪ್ರಭು, ಪರಮೇಶ್ವರ, ಹರಿಹರ ಬ್ರಹ್ಮರು ಇಲ್ಲಿ ಹದಿನೆಂಟು ಸಾವಿರ ಬ್ರಾಹ್ಮಣರನ್ನು ಹಿಂದೆ ಸ್ಥಾಪಿಸಿದ್ದರು. ಎಲ್ಲರೂ ವೇದಪಾರಂಗತರು, ಶಾಸ್ತ್ರಪರಿಣತರು, ಆಚಾರಸಂಪನ್ನರು, ಮೂವತ್ತಾರು ಸಾವಿರ ಧರ್ಮಪಾರಾಯಣರಾದ ವೈಶ್ಯರು ಆ ವಿಪ್ರೋತ್ತಮರ ಸೇವೆಮಾಡಿಕೊಂಡು ಇಲ್ಲಿ ನೆಲೆಸಿದ್ದರು. ಈಗ ಯಾರೂ ಇಲ್ಲ.''

ಧರ್ಮಾರಣ್ಯದ ಸ್ವಾಮಿನಿಯಾದ ಭಟ್ಟಾರಿಕೆಯಿಂದ ಎಲ್ಲ ಸಮಾಚಾರ ತಿಳಿದು ಶ್ರೀರಾಮಚಂದ್ರನು ಒಂದು ಲಕ್ಷ ಜನ ತನ್ನ ಸೇವಕರನ್ನು ದಶ ದಿಕ್ಕುಗಳಿಗೂ ಕಳಿಸಿಕೊಟ್ಟನು. ಅವರು ರಾಷ್ಟ್ರದ ಎಲ್ಲ ಕಡೆಗೂ ಹೋಗಿ ಸಂಶೋಧನ ಮಾಡಿದರು. ದಿಕ್ಕು ದಿಕ್ಕುಗಳಲ್ಲಿದ್ದ ಧರ್ಮಾರಣ್ಯದ ವಿಪ್ರರನ್ನು ಹುಡುಕಾಡಿ ಗೊತ್ತು ಹಚ್ಚಿದರು. ಅವರಿಗೆಲ್ಲ ದಾನ ದಕ್ಷಿಣೆ ಇತ್ತು ಸತ್ಕಾರಮಾಡಿ ಶ್ರೀರಾಮನ ಅಪ್ಪಣೆಯನ್ನು ತಿಳಿಸಿ ಧರ್ಮಾರಣ್ಯಕ್ಕೆ ಗೌರವದಿಂದ ಕರೆದುಕೊಂಡು ಬಂದರು. ಧರ್ಮಾರಣ್ಯವನ್ನು ತೊರೆದು ಹೋದ ಬ್ರಾಹ್ಮಣರೆಲ್ಲರೂ ತಿರುಗಿ ಬಂದುದನ್ನು ಕಂಡು ಪರಮ ಸಂತುಷ್ಟನಾದ ಶ್ರೀರಾಮನು ಕೈಮುಗಿದು (ಲೋಕವಿಡಂಬನಕ್ಕಾಗಿ) ಆ ವಿದ್ವಾಂಸರಿಗೆ ಹೇಳಿದನು.

''ವಿಪ್ರಪ್ರಸಾದಾತ್ ಕಮಲಾವರೋಽಹಂ ।
ವಿಪ್ರಪ್ರಸಾದಾದ್ ಧರಣೀಧರೋಽಹಮ್ ॥

ವಿಪ್ರಪ್ರಸಾದಾದ್ ಜಗತಾಂ ಪತಿಶ್ಚ ।
ವಿಪ್ರಪ್ರಸಾದಾನ್ಮಮ ರಾಮನಾಮ ॥

ವಿಪ್ರೋತ್ತಮರೇ, ನಾನು ಲಕ್ಷ್ಮೀಪತಿಯಾದದ್ದು ನಿಮ್ಮ ಅನುಗ್ರಹದಿಂದಲೇ. ನಿಮ್ಮಂಥ ಬ್ರಾಹ್ಮಣರ ದಯೆಯಿಂದಲೇ ನಾನು ಧರಣೀವಲ್ಲಭನೂ ಆಗಿದ್ದೇನೆ. ನಾನು ಹದಿನಾಲ್ಕು ಲೋಕಗಳಿಗೆಲ್ಲ ಒಡೆಯನಾಗಿದ್ದುದು ಬ್ರಾಹ್ಮಣರ ಕೃಪೆಯಿಂದಲೇ. ಬ್ರಾಹ್ಮಣರ ಆಶೀರ್ವಾದದಿಂದಲೇ ನನ್ನ ರಾಮ ಎಂಬ ಹೆಸರು ಸಾರ್ಥಕವಾಗಿದೆ.

ಶ್ರೀರಾಮಚಂದ್ರನ ಈ ವಿನಯ ವಚನವನ್ನು ಕೇಳಿ ಬ್ರಾಹ್ಮಣರಿಗೆ ಪರಮ ಪ್ರಹರ್ಷ. ಅವರೆಲ್ಲರೂ ಒಕ್ಕೊರಲಿನಿಂದ ರಾಮನಾಮದ ಜೈಜೈಕಾರ ಮಾಡಿದರು. ''ರಘುನಂದನಾ, ನೀನು ದೀರ್ಘಾಯು ಆಗು'' ಎಂದು ಆಶೀರ್ವಾದ ನೀಡಿದರು.

ಅನಂತರ ಶ್ರೀರಾಮನು ಆ ಎಲ್ಲ ವಿಪ್ರೋತ್ತಮರಿಗೆ ಆಸನ, ವಸ್ತ್ರ ಆಭರಣ, ಉಂಗುರ, ಯಜ್ಞೋಪವೀತ, ನೂರು ನೂರು ಹಿಂಡುವ ಹಸು, ಹಿಂಡುವ ಪಾತ್ರೆ, ಸಹಿತವಾಗಿ ದಕ್ಷಿಣೆಯೊಂದಿಗೆ ದಾನ ನೀಡಿ ನುಡಿದನು.

## ದಾನದಕ್ಷಿಣೆಗೆ ಹಿಂಜರಿಯುವ ಬ್ರಾಹ್ಮಣರು

**ರಾಮ:-** ಪೂಜ್ಯರೇ, ನಾನು ಈ ಧರ್ಮಾರಣ್ಯದ ಅಧಿದೇವತೆಯಾದ ಭಟ್ಟಾರಿಕೆಯ ಆಜ್ಞೆಯಿಂದ ಈ ತೀರ್ಥದ ಜೀರ್ಣೋದ್ಧಾರ ಮಾಡುತ್ತೇನೆ. ಅದಕ್ಕಾಗಿ ನೀವೆಲ್ಲರೂ ನಾನು ನೀಡಲಿರುವ ದಾನ ಧರ್ಮಗಳನ್ನು ಸ್ವೀಕರಿಸಿರಿ. ನಾನು ಮಾಡುವ ಯಜ್ಞಕಾರ್ಯಗಳಲ್ಲಿ ಸಹಕರಿಸಿರಿ.

**ಬ್ರಾಹ್ಮಣ:-** ರಾಮಚಂದ್ರ, ನಾವೆಲ್ಲರೂ ಶಿಲೋಂಛ ವೃತ್ತಿಯ ಬ್ರಾಹ್ಮಣರು. ಅಪರಿಗ್ರಹವು ನಮ್ಮ ವೃತ್ತಿ. ನಾವು ಯಾರಿಂದಲೂ ಏನನ್ನೂ ದಾನ ರೂಪವಾಗಿ ಪಡೆಯುವದಿಲ್ಲ. ರಾಜರು ಕೊಟ್ಟ ದಾನವನ್ನು ಸ್ವೀಕರಿಸುವದು ಮಹಾಪಾಪ. ನಮ್ಮಲ್ಲಿ ಬಹುಜನರು ಮಿತಾಹಾರಿಗಳು. ಯದೃಚ್ಛಾ ಲಾಭ ತುಷ್ಟರು. ಅನಿಕೇತನರು. ಅಸಂಗ್ರಹ ವೃತ್ತಿಯವರು. ನಮ್ಮನ್ನು ಇಲ್ಲಿ ಮೊಟ್ಟಮೊದಲು ತಂದು ಸ್ಥಾಪಿಸಿದವರು ಹರಿಹರ ಬ್ರಹ್ಮಾದಿ ತ್ರಿಮೂರ್ತಿಗಳು. ಅವರ ಅಪ್ಪಣೆಯಿಲ್ಲದೇ ನಾವು ನಮ್ಮ ಅಪರಿಗ್ರಹ ವೃತ್ತಿಯನ್ನು ತೊರೆಯುವದಿಲ್ಲ. ನಿನ್ನ ದಾನವನ್ನು ಸ್ವೀಕರಿಸುವದಿಲ್ಲ.''

## ತ್ರಿಮೂರ್ತಿಗಳ ಆಜ್ಞೆಗೆ ತಲೆಬಾಗಿದರು

ಆ ನಿಸ್ಪೃಹಿ ಬ್ರಾಹ್ಮಣರ ಮಾತನ್ನು ಕೇಳಿ ಶ್ರೀರಾಮನು ವಶಿಷ್ಠರ ಜೊತೆಗೆ ಆಲೋಚಿಸಿ ತ್ರಿಮೂರ್ತಿಗಳನ್ನು ನೆನೆದನು. ಕೂಡಲೇ ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂರು ದೇವತಾ ಧುರೀಣರು ಅಲ್ಲಿಗೆ ಧಾವಿಸಿ ಬಂದರು. ಅಲ್ಲಿಯ ಸಮಾಚಾರವನ್ನೆಲ್ಲ ತಿಳಿದು ಆ ಬ್ರಾಹ್ಮಣರಿಗೆಲ್ಲ ತಿಳಿ ಹೇಳಿದರು- ''ಈ ಶ್ರೀರಾಮಚಂದ್ರನು ಸಾಕ್ಷಾತ್ ವಿಷ್ಣುವಿನ ಅವತಾರ. ಅವನು ಹೇಳಿದರೆ ನಾವೆಲ್ಲರೂ ಹೇಳಿದಂತೆಯೇ. ನೀವೆಲ್ಲರೂ ಈ ರಾಮವಚನವನ್ನು ಕೇಳಿರಿ. ಅವನು ಮಾಡಲಿರುವ ಈ ಧರ್ಮಾರಣ್ಯ ಕ್ಷೇತ್ರದ ಜೀರ್ಣೋದ್ಧಾರದ ಕಾರ್ಯದಲ್ಲಿ ಸಹಕರಿಸಿರಿ. ಅವನ ಮಾಡಲಿರುವ ಯಜ್ಞದಲ್ಲಿ ನೀವೆಲ್ಲರೂ ಭಾಗವಹಿಸಿರಿ.''

ಈ ದೇವತಾ ತ್ರಿಮೂರ್ತಿಗಳ ಆಜ್ಞೆಯಿಂದ ಎಲ್ಲ ಬ್ರಾಹ್ಮಣರು ಶ್ರೀರಾಮಚಂದ್ರನ ಯಜ್ಞಕಾರ್ಯದಲ್ಲಿ ಭಾಗವಹಿಸಲಿಕ್ಕೂ ಅವನಿಂದ ದಾನ ಧರ್ಮ ಪಡೆಯಲಿಕ್ಕೂ ಸಮ್ಮತಿಸಿದರು. ಹರಿಹರ ಬ್ರಹ್ಮಾದಿ ದೇವತೆಗಳು ಆ ಶ್ರೀರಾಮಚಂದ್ರ ಕೈಕೊಂಡ ಧರ್ಮಾರಣ್ಯ ತೀರ್ಥದ ಜೀರ್ಣೋದ್ಧಾರ ಕಾರ್ಯದಲ್ಲಿ ಸಹಾಯ ಸಲ್ಲಿಸಲು ಸ್ವಯಂ ಸಮಕ್ಷಮದಲ್ಲಿ ನಿಂತುಕೊಂಡರು. ಆದರ ಅಂಗವಾಗಿ ನಡೆಯುವ ಯಜ್ಞ ಕಾರ್ಯಗಳಿಗಾಗಿ ಪರ್ವತಾಕಾರವಾದ ಸುಂದರ ಹಾಗೂ ವಿಶಾಲವಾದ ವೇದಿಕೆಯು ನಿರ್ಮಿಸಲ್ಪಟ್ಟಿತು. ಅದರ ಮೇಲೆ ಅನೇಕ ದ್ರವ್ಯಶಾಲಾ, ಗೃಹಶಾಲಾ, ಬ್ರಹ್ಮಶಾಲಾ ಮುಂತಾದವುಗಳ ನಿರ್ಮಿತಿ ಆಯಿತು. ಈ ಎಲ್ಲ ಶಾಲೆಗಳಲ್ಲಿ ದ್ರವ್ಯ ಭಾಂಡಾರ, ಪಾತ್ರೆ, ಗೃಹೋಪಯೋಗಿ ವಸ್ತುಗಳು ಸಂಗ್ರಹಿಸಲ್ಪಟ್ಟವು. ಕೋಟಿ ಕೋಟಿ ಸುವರ್ಣ ಮುದ್ರೆಗಳು ವಸ್ತ್ರ, ಧನಧಾನ್ಯಗಳನ್ನೂ ಬಗೆ ಬಗೆಯ ಧಾತುಗಳನ್ನೂ ಇರಿಸುವ ಸಲುವಾಗಿ ಪ್ರತ್ಯೇಕ ಬೇರೆ ಬೇರೆ ವಿಶಾಲವಾದ ಪ್ರಕೋಷ್ಠಗಳು ರಚಿಸಲ್ಪಟ್ಟವು ಯೋಗ್ಯರಾದ ವಿದ್ವಾಂಸರಿಗೆ ವಿಪುಲವಾಗಿ ನಗನಾಣ್ಯ ವಸ್ತ್ರ ಆಭರಣಗಳನ್ನು ಕೊಟ್ಟನು.

## ಧರ್ಮಾರಣ್ಯದಲ್ಲಿ ಶ್ರೀರಾಮನ ಧರ್ಮಕಾರ್ಯ

ಪ್ರತಿಯೊಬ್ಬ ಬ್ರಾಹ್ಮಣನಿಗೆ ಹತ್ತು ಹಿಂಡುವ ಹಸುಗಳನ್ನೂ ದಕ್ಷಿಣೆ ಸಹಿತವಾಗಿ ಶ್ರೀರಾಮನು ದಾನ ನೀಡಿದನು. ಒಟ್ಟು ಆ ಯಜ್ಞದಲ್ಲಿ ಶ್ರೀರಾಮನು ವೇದ ವಿದ್ವಾಂಸರಿಗೆ ನಾಲ್ಕು ಸಾವಿರ ಊರುಗಳನ್ನು ದಾನವಾಗಿ ಕೊಟ್ಟನು. ದೇಶದ ಬೇರೆ ಬೇರೆ ಮಂಡಲಗಳಲ್ಲಿ ಅಧಿಪತಿಗಳಾಗಿ ಉದ್ಯೋಗ, ವ್ಯಾಪಾರ ಮತ್ತು ಸಹಾಯಕ ಸೇವೆಗಳನ್ನು ಸಲ್ಲಿಸುವ ಶೂದ್ರರು ಒಂದು ಲಕ್ಷ ಇಪ್ಪತ್ತೈದು ಸಾವಿರ ಜನ ಕಟಿಬದ್ಧರಾಗಿ ನಿಂತುಕೊಂಡಿದ್ದರು. ಶ್ರೀರಾಮನ ಆದೇಶವನ್ನು ಪಾಲಿಸುವ ಈ ಮಂಡಲಾಧಿಪತಿಗಳಿಗೆ ಮಾಂಡಲಿಕರು ಎಂದು ಹೆಸರು. ಈ ಎಲ್ಲ ಮಾಂಡಲಿಕರಿಗೆ ಅಲ್ಲಿ ಮರಳಿ ಬಂದು ಧರ್ಮಾರಣ್ಯದಲ್ಲಿ ನೆಲಿಸಿದ ವೇದಶಾಸ್ತ್ರ ವಿದ್ವಾಂಸರ ಸೇವೆಯನ್ನು ಕಡ್ಡಾಯವಾಗಿ ಮಾಡಬೇಕೆಂದು ಶ್ರೀರಾಮನು ಕಟ್ಟಪ್ಪಣೆ ಮಾಡಿದ. ಈ ಪ್ರತಿಷ್ಠಾವಿಧಿಯ ಜೊತೆಗೆ ಶ್ರೀರಾಮಚಂದ್ರನು ತನ್ನ ಕುಲದ ಮೂಲ ಪುರುಷನಾದ ಸೂರ್ಯನಾರಾಯಣನ ಪ್ರತಿಷ್ಠೆಯನ್ನು ಮಾಡಿದನು. ಇದರಂತೆ ಬ್ರಹ್ಮ, ಶ್ರೀಮಾತಾ, (ಭಟ್ಟಾರಿಕಾ) ಶ್ರೀಹರಿ, ಮಹಾಶಕ್ತಿ, ಮುಂತಾದ ದೇವ ದೇವತೆಯರನ್ನು ಪ್ರತಿಷ್ಠೆ ಮಾಡಿದ ಆ ದೊರೆ. ವಿಘ್ನ ನಿವಾರಣೆಗಾಗಿ ದಕ್ಷಿಣದ ಬಾಗಿಲದ ಬಳಿ ಗಣಪತಿ ಹಾಗೂ ಅನ್ಯ ದೇವತೆಗಳ ಸ್ಥಾಪನೆಯನ್ನು ಮಾಡಲಾಯಿತು.

ಸರ್ವಸ್ವಾಮಿಯಾದ ಶ್ರೀರಾಮಚಂದ್ರನು ಏಳು ಅಂತಸ್ತಿನ ಭವ್ಯ ಭವನವನ್ನು ಕಟ್ಟಿಸಿದ. ಮತ್ತು ''ಈ ಧರ್ಮಾರಣ್ಯದಲ್ಲಿ ಯಾರಾದರೂ ಮಂಗಳಕಾರ್ಯ ಜಾತಕರ್ಮ. ಅನ್ನಪ್ರಾಶನ, ಮುಂಡನ ಮುಂತಾದ ಕರ್ಮಗಳನ್ನು ಮಾಡಿದರೆ ಮತ್ತು ಯಜ್ಞಕರ್ಮ ಗಳಲ್ಲಿ ಲಕ್ಷ ಹೋಮ ಮತ್ತು ಕೋಟಿ ಹೋಮಗಳನ್ನು ಮಾಡಿದರೆ ಇಂಥ ಸಂದರ್ಭದಲ್ಲಿ ಅನ್ನ, ವಸ್ತ್ರ, ಹಸು, ಹಿರಣ್ಯ, ರಜತ ಮುಂತಾದವುಗಳ ದಾನವನ್ನು ಬ್ರಾಹ್ಮಣ, ಶೂದ್ರ,ದೀನ, ಅನಾಥ ಅಂಧರಿಗಾಗಿ ಕೊಡಬೇಕು. ಈ ಕಾರ್ಯದಲ್ಲಿ ಮೊದಲು ನಿರ್ವಿಘ್ನವಾಗಿ ಕಾರ್ಯವು ಕೊನೆಗಾಣಬೇಕೆಂದು ಬಕುಲಾದಿತ್ಯ, ಮತ್ತು ಶ್ರೀಮಾತೆಯರಿಗಾಗಿ ಕೆಲವು ಭಾಗವನ್ನು ತೆಗೆದಿರಿಸಬೇಕು.''

## ರಾಮನ ಆದೇಶದಿಂದ ಧರ್ಮಾರಣ್ಯದಲ್ಲಿ ಹನುಮಂತನ ನಿತ್ಯ ನಿವಾಸ

ಹೀಗೆ ಹೇಳಿ ಶ್ರೀರಾಮನು ಪ್ರಸನ್ನ ಮನಸ್ಸಿನಿಂದ ಕೋಟೆಗೋಡೆ, ದುರ್ಗದ ಉಪರಣಗಳ ಕಂದಕ, ಪ್ರಾಕಾರ, ಸರೋವರ, ಹೊಕ್ಕರಣಿ, ಧರ್ಮವಾಪಿ ಮುಂತಾದ ದೇವನಿರ್ಮಿತ ಕೂಪಗಳ ಪುನರ್ನಿರ್ಮಾಣ ಕಾರ್ಯಗಳನ್ನು ಮಾಡಿಸಿದನು. ಶ್ರೀರಾಮನ ಶಾಸನವನ್ನು ಅಲ್ಲಿ ತಾಮ್ರ ಪತ್ರದಲ್ಲಿ ಬರಿಸಿ ಇಡಲಾಗಿದೆ. ಅದರ ಉಲ್ಲಂಘನವನ್ನು ಅಥವಾ ಲೋಪವನ್ನು ಮಾಡಿದರೆ ಅವರ ಪೂರ್ವಜರು ನರಕದಲ್ಲಿ ಬೀಳುವರು. ಮತ್ತು ಇಲ್ಲಿ ಇದ್ದವರಿಗೆ ಸಂತಾನವು ಆಗುವುದಿಲ್ಲ. ಕೊನೆಗೆ ಶ್ರೀರಾಮನು ಹನುಮಂತನನ್ನು ಕರೆದು ''ವಾಯುನಂದನ, ಈ ಕ್ಷೇತ್ರ ನಿನ್ನದು, ನೀನು ಇಲ್ಲಿ ಇದ್ದರೆ, ಮುಂದೆ ಪೂಜೆ ನಡೆಯುವದು. ಈ ಕ್ಷೇತ್ರವನ್ನು ಆಜ್ಞೆಯನ್ನು ಶಿರಸಾ ಧರಿಸಿ ಹನುಮಂತನು ನಮಸ್ಕರಿಸಿದ. ಭಗವಂತನ ಆಜ್ಞೆಯಂತೆ ಅಲ್ಲಿಯೇ ವಾಸಮಾಡಿದ. ಹೀಗೆ ಶ್ರೀರಾಮಚಂದ್ರನು ಪ್ರಾರಂಭಿಸಿದ ಈ ಧರ್ಮಾರಣ್ಯ ತೀರ್ಥದ ಜೀರ್ಣೋದ್ಧಾರ ಮಾಡಿ, ಮಾರುತಿಯು ಶ್ರೀಮಾತೆಯ ಪೂಜೆಯನ್ನು ಮುಗಿಸಿ, ಬೇರೆ ತೀರ್ಥದಲ್ಲಿ ಸ್ನಾನ ಮಾಡಲು ಸಿದ್ಧನಾದ. ಬ್ರಹ್ಮಾದಿದೇವತೆಗಳು ಶ್ರೀರಾಮನಿಗೆ ಆಶೀರ್ವಾದ ಮಾಡಿ ತಮ್ಮ ತಮ್ಮ ಲೋಕಕ್ಕೆ ತೆರಳಿದರು.

## ರಾಮನಾಮದ ಮಹಿಮೆ, ಧರ್ಮಾರಣ್ಯ ಕ್ಷೇತ್ರದ ಮಾಹಾತ್ಮ್ಯ ಫಲ

**ವೇದವ್ಯಾಸ:-** 'ಹರೇ ರಾಮ ಹರೇ ರಾಮ ರಾಮರಾಮ ಹರೇ ಹರೇ' ಎಂಬ ಈ ರಾಮಮಂತ್ರವನ್ನು ಜಪಿಸುವವರಿಗೆ ದುಃಖ, ದೌರ್ಭಾಗ್ಯ, ಆಧಿವ್ಯಾಧಿಗಳ ಭಯ ಉಂಟಾಗುವುದಿಲ್ಲ. ರಾಮ ಎಂಬ ಹೆಸರನ್ನು ಉಚ್ಚರಿಸಿದ ಮಾತ್ರಕ್ಕೆ ಭಯಂಕರ ಪಾಪಗಳೆಲ್ಲವೂ ಬಿಟ್ಟು ಹೋಗುವವು.

ಹೀಗೆ ಶ್ರೀರಾಮಚಂದ್ರನು ತೀರ್ಥೋದ್ಧಾರದ ಕಾರ್ಯಾಂಗವಾಗಿ ನಡೆಸಿದ ಯಜ್ಞ ಕಾರ್ಯಗಳನ್ನೆಲ್ಲಮಾಡಿ ಮುಗಿಸಿದ. ಈ ಎಲ್ಲ ಪುಣ್ಯ ಕಾರ್ಯಗಳು ಮುಗಿದ ಬಳಿಕ ಇದರಲ್ಲಿ ಪೌರೋಹಿತ್ಯ ವಹಿಸಿದ ಎಲ್ಲ ಬ್ರಾಹ್ಮಣರಿಗೂ ಸಭಾಸದರಾಗಿ ಬಂದ ಎಲ್ಲ ಋಷಿಮುನಿಗಳಿಗೂ ಪ್ರದಕ್ಷಿಣೆ ನಮಸ್ಕಾರಾದಿಗಳನ್ನು ಹಾಕಿ ಹಸು ಕುದುರೆ ಎಮ್ಮೆ ರಥ ಮುಂತಾದ ಅನೇಕ ಬಗೆಯ ದಾನಗಳನ್ನು ನೀಡಿ ತನ್ನ ಸೈನ್ಯ ಸಹಿತವಾಗಿ ಅಯೋಧ್ಯಾ ರಾಜಧಾನಿಗೆ ಮರಳಿ ಆಗಮಿಸಿದ.

**ಧರ್ಮರಾಜ:-** ಮುನಿಗಳೇ, ಕಲಿಯುಗವು ಬಂದ ನಂತರ ಈ ಪ್ರಪಂಚದಲ್ಲಿ ಮತ್ತೆ ಯಾತರ ಭಯವು ಇರುತ್ತದೆ?

**ವೇದವ್ಯಾಸ:-** ರಾಜನೇ, ಕಲಿಯುಗದಲ್ಲಿ ಜನರು ಸುಳ್ಳು ಮಾತನಾಡುವವರೂ ಸಾಧು ಸಜ್ಜನರ ನಿಂದಕರೂ ಪಿತೃಭಕ್ತಿ ರಹಿತರೂ ಕಳವು ಕೊಲೆ ಸುಲಿಗೆಗಳನ್ನು ಮಾಡಿಸುವವರೂ ಸಗೋತ್ರ ವಿವಾಹಮಾಡಿಕೊಳ್ಳುವವರೂ ಶರಣಾಗತರನ್ನು ಸಂಹರಿಸುವವರೂ ಬ್ರಹ್ಮದ್ವೇಷಿಗಳೂ ಆಗುವರು. ಕಲಿಯುಗ ಬಂದ ಬಳಿಕ ಬ್ರಾಹ್ಮಣರೆಲ್ಲರೂ ವೇದಭ್ರಷ್ಟರಾಗುವರು. ಅಹಂಕಾರಿಗಳಾಗುವರು. ಮತ್ತು ಕೃಷಿ ಗೋರಕ್ಷ ವಾಣಿಜ್ಯ ಮುಂತಾದ ವೈಶ್ಯರಿಗೆ ವಿಹಿತವಾದ ವ್ಯಾಪಾರ ಉದ್ಯೋಗಗಳನ್ನು ಕೈಕೊಳ್ಳುವರು. ಶ್ರಾದ್ಧ, ತರ್ಪಣ, ವಿಷ್ಣು ಭಕ್ತಿ, ಸ್ನಾನ, ಸಂಧ್ಯೆ, ದೇವತಾ ಪೂಜೆ ಮುಂತಾದ ಎಲ್ಲ ಕಾರ್ಯಗಳು ಲೋಪವಾಗುವವು. ಹಿಂದೆ ಆಸ್ತಿಕರಾಗಿ ಇರುವ ಈ ಎಲ್ಲ ಬ್ರಾಹ್ಮಣರು ವಿಷ್ಣುಭಕ್ತಿ ರಹಿತರಾಗಿ ಎರಡನೆಯವರ ಹಣವನ್ನು ಎತ್ತಿ ಹಾಕುವರು. ಬ್ರಾಹ್ಮಣರು ಸ್ನಾನವಿಲ್ಲದೇ ಬರೀ ಭೋಜನಮಾಡುವರು. ಕ್ಷತ್ರಿಯರು ಯುದ್ಧದ ಹೆಸರನ್ನು ಹೇಳಿದ

ಮಾತ್ರಕ್ಕೆ ಹೆದರಿ ದೂರ ಓಡಿ ಹೋಗುವರು. ಎಲ್ಲರೂ ಮದ್ಯಪಾನ ಮಾಡಿ ವೇದಾಧಿಕಾರಿವನ್ನು ಕಳೆದು ಕೊಳ್ಳುವರು. ಸ್ತ್ರೀಯರೆಲ್ಲರೂ ಕಲಿಯುಗದಲ್ಲಿ ಪತಿಯೊಡನೆ ದ್ವೇಷಮಾಡುವರು. ಶೆರೆ ಕುಡಿಯುವ ಮತ್ತು ಯಜ್ಞಕ್ಕೆ ಅಧಿಕಾರವಿಲ್ಲದ ಜನರ ಕಡೆಯಿಂದ ಪುರೋಹಿತರು ಯಜ್ಞ ಮಾಡಿಸುವರು. ತಂದೆ, ತಾಯಿ, ಗಂಡ, ಹೆಂಡತಿ, ಅಣ್ಣ, ತಮ್ಮ ಮುಂತಾದವರಲ್ಲಿ ಪರಸ್ಪರ ಕಲಹ ಹಾಗೂ ವೈರಗಳು ಮೇಲಿಂದ ಮೇಲೆ ಉಂಟಾಗುವವು. ಬ್ರಾಹ್ಮಣರು ದ್ರವ್ಯವನ್ನು ಸಂಗ್ರಹಿಸಬೇಕು ಎಂಬ ಒಂದೇ ದೃಷ್ಟಿಯನ್ನು ಇಟ್ಟುಕೊಂಡು ಆಕಳ ಹಾಲು ಮೊಸರು ತುಪ್ಪ ಮಜ್ಜಿಗೆಗಳನ್ನು ಮಾರಾಟಮಾಡುವರು. ಈ ಕಲಿಯುಗದಲ್ಲಿ ಹಸುಗಳು ಪ್ರಾಯಃ ಹಾಲನ್ನು ಹಿಂಡುವುದಿಲ್ಲ. ಲೋಕದಲ್ಲಿ ಎಲ್ಲರೂ ಕನ್ಯೆಯನ್ನು ಮಾರಾಟಕ್ಕೆ ಇಡುವರು. ಹಸು ಮೇಕೆಗಳನ್ನು ಕೂಡ ಮಾರಿ ಹಾಕುವರು. ವಿಷವನ್ನು ಮತ್ತು ರಸವನ್ನು ಮಾರಾಟಮಾಡುವರು. ಬ್ರಾಹ್ಮಣರು ವೇದಗಳನ್ನು ಮಾರಿಕೊಳ್ಳುವರು. ಸ್ತ್ರೀಯರು ಹನ್ನೊಂದು ವರ್ಷದವರಿದ್ದಾಗಲೇ ಗರ್ಭಧಾರಣ ಮಾಡುವರು. ಯಾರೊಬ್ಬರೂ ಏಕಾದಶಿ ದಿನ ಉಪವಾಸಮಾಡುವದಿಲ್ಲ.

ತೀರ್ಥಯಾತ್ರೆ ಮಾಡಬೇಕೆಂದು ಬ್ರಾಹ್ಮಣರಿಗೆ ಬುದ್ಧಿಯೇ ಹುಟ್ಟುವುದಿಲ್ಲ. ವಾಮ ಮಾರ್ಗದಿಂದ ಕುಟಿಲ ವೃತ್ತಿಯಿಂದ ಉಪಜೀವನವನ್ನು ಮಾಡುತ್ತಲಿರುವ ಈ ಜನರು ವೇದಶಾಸ್ತ್ರಗಳ ನಿಂದೆಯಲ್ಲಿಯೇ ಹೊತ್ತು ಕಳೆಯುವರು. ಸನ್ಯಾಸಿಗಳ ನಿಂದೆ ಮತ್ತು ಅವಹೇಳನಗಳು ಸಾಮಾನ್ಯವಾಗಿ ಎಲ್ಲ ಕಡೆಗೂ ಕಂಡು ಬರುವವು. ಕಲಿಯುಗದಲ್ಲಿ ಸ್ಪಶ್ಯಾ ಸ್ಪೃಶ್ಯ ವಿಚಾರವೇ ಲೋಪವಾಗುವದು. ಕಲಿಯುಗದಲ್ಲಿ ಮ್ಲೇಂಛ ರಾಜರು ಆಗಮಿಸಿ ರಾಜ್ಯಾಧಿಕಾರವನ್ನು ನಡೆಸುವರು. ಪ್ರಾಯಃ ಎಲ್ಲ ಜನರೂ ಮುಂದೆ ಕಲಿಯುಗದಲ್ಲಿ ವಿಶ್ವಾಸ ಘಾತಕರೂ ಮಿತ್ರ ದ್ರೋಹಿಗಳೂ ಗುರುದ್ರೋಹಿಗಳೂ ಶಿಶ್ನೋದರ ಪರಾಯಣರೂ ಆಗುವರು. ಎಲ್ಲ ಜಾತಿ ವರ್ಣಸಂಕರವಾಗಿ ಎಲ್ಲ ಬ್ರಾಹ್ಮಣರೂ ಸ್ಥಾನ ಭ್ರಷ್ಟರೂ ವೇದಭ್ರಷ್ಟರೂ ಆಗುವರು.

ಪೂರ್ವಕಾಲದಲ್ಲಿ ಹರಿಹರ ಬ್ರಹ್ಮಾದಿ ದೇವತೆಗಳು ಸ್ಥಾಪನೆಮಾಡಿದ ಈ ತೀರ್ಥದ ಹೆಸರು ಕೃತಯುಗದಲ್ಲಿ ಧರ್ಮಾರಣ್ಯ, ತ್ರೇತಾಯುಗದಲ್ಲಿ ಸತ್ಯಮಂದಿರ, ದ್ವಾಪರದಲ್ಲಿ ವೇದಭವನ, ಕಲಿಯುಗದಲ್ಲಿ ಮೋಹೇರಕ ಎಂದು ಬೇರೆ ಬೇರೆಯೇ ಆಗುವುದು. ಈ ಧರ್ಮಾರಣ್ಯದ ಮಾಹಾತ್ಮ್ಯವನ್ನು ಭಕ್ತಿಯಿಂದ ಕೇಳಿದವರು ಮತ್ತು ಹೇಳಿದವರು ಭಗವಂತನ ಅನುಗ್ರಹಕ್ಕೆ ಪಾತ್ರರಾಗಿ ದಿವ್ಯಗತಿಯನ್ನು ಹೊಂದುವರು. ಈ ಧರ್ಮಾರಣ್ಯ ಮಾಹಾತ್ಮ್ಯದ ಪುಸ್ತಕವನ್ನು ರೇಶ್ಮೆ ಬಟ್ಟೆಯಲ್ಲಿ ಸುತ್ತಿ ಗಂಧ ಪುಷ್ಪಾಕ್ಷತೆಗಳಿಂದ ಪೂಜೆಮಾಡಬೇಕು. ಈ ಕಥೆಯನ್ನು ಹೇಳಿದ ವಾಚಕನಿಗೆ ಕಥಾಸಮಾಪ್ತಿಯಾದ ನಂತರ ಪೂಜೆಯನ್ನು ಮಾಡಬೇಕು. ಮತ್ತು ವಸ್ತ್ರ ಗಂಧಮಾಲೆಗಳಿಂದ ದೇವರಂತೆ ಈ ಪುರಾಣ ಪ್ರವಚನಕಾರರನ್ನು ಪೂಜೆಮಾಡಿ ಪುರಾಣ ಹೇಳುವವರಿಗೆ ಒಂದು ಹಿಂಡುವ ಹಸುವನ್ನು ದಾನಕೊಡಬೇಕು.

*ಇತಿ ಸ್ಕಂದಮಹಾಪುರಾಣ-ಬ್ರಹ್ಮಖಂಡದಲ್ಲಿನ .*
*ದರ್ಮಾರಣ್ಯಖಂಡ ಅಧ್ಯಾಯ ೭೮ರಲ್ಲಿ ಸಂಪೂರ್ಣ*

—○—

ಮಾತ್ರಕ್ಕೆ ಹೆದರಿ ದೂರ ಓಡಿ ಹೋಗುವರು. ಎಲ್ಲರೂ ಮದ್ಯಪಾನ ಮಾಡಿ ವೇದಾಧಿಕಾರಿವನ್ನು ಕಳೆದು ಕೊಳ್ಳುವರು. ಸ್ತ್ರೀಯರೆಲ್ಲರೂ ಕಲಿಯುಗದಲ್ಲಿ ಪತಿಯೊಡನೆ ದ್ವೇಷಮಾಡುವರು. ಶೆರೆ ಕುಡಿಯುವ ಮತ್ತು ಯಜ್ಞಕ್ಕೆ ಅಧಿಕಾರವಿಲ್ಲದ ಜನರ ಕಡೆಯಿಂದ ಪುರೋಹಿತರು ಯಜ್ಞ ಮಾಡಿಸುವರು. ತಂದೆ, ತಾಯಿ, ಗಂಡ, ಹೆಂಡತಿ, ಅಣ್ಣ, ತಮ್ಮ ಮುಂತಾದವರಲ್ಲಿ ಪರಸ್ಪರ ಕಲಹ ಹಾಗೂ ವೈರಗಳು ಮೇಲಿಂದ ಮೇಲೆ ಉಂಟಾಗುವವು. ಬ್ರಾಹ್ಮಣರು ದ್ರವ್ಯವನ್ನು ಸಂಗ್ರಹಿಸಬೇಕು ಎಂಬ ಒಂದೇ ದೃಷ್ಟಿಯನ್ನು ಇಟ್ಟುಕೊಂಡು ಆಕಳ ಹಾಲು ಮೊಸರು ತುಪ್ಪ ಮಜ್ಜಿಗೆಗಳನ್ನು ಮಾರಾಟಮಾಡುವರು. ಈ ಕಲಿಯುಗದಲ್ಲಿ ಹಸುಗಳು ಪ್ರಾಯಃ ಹಾಲನ್ನು ಹಿಂಡುವುದಿಲ್ಲ. ಲೋಕದಲ್ಲಿ ಎಲ್ಲರೂ ಕನ್ಯೆಯನ್ನು ಮಾರಾಟಕ್ಕೆ ಇಡುವರು. ಹಸು ಮೇಕೆಗಳನ್ನು ಕೂಡ ಮಾರಿ ಹಾಕುವರು. ವಿಷವನ್ನು ಮತ್ತು ರಸವನ್ನು ಮಾರಾಟಮಾಡುವರು. ಬ್ರಾಹ್ಮಣರು ವೇದಗಳನ್ನು ಮಾರಿಕೊಳ್ಳುವರು. ಸ್ತ್ರೀಯರು ಹನ್ನೊಂದು ವರ್ಷದವರಿದ್ದಾಗಲೇ ಗರ್ಭಧಾರಣ ಮಾಡುವರು. ಯಾರೊಬ್ಬರೂ ಏಕಾದಶಿ ದಿನ ಉಪವಾಸಮಾಡುವದಿಲ್ಲ.

ತೀರ್ಥಯಾತ್ರೆ ಮಾಡಬೇಕೆಂದು ಬ್ರಾಹ್ಮಣರಿಗೆ ಬುದ್ಧಿಯೇ ಹುಟ್ಟುವುದಿಲ್ಲ. ವಾಮ ಮಾರ್ಗದಿಂದ ಕುಟಿಲ ವೃತ್ತಿಯಿಂದ ಉಪಜೀವನವನ್ನು ಮಾಡುತ್ತಲಿರುವ ಈ ಜನರು ವೇದಶಾಸ್ತ್ರಗಳ ನಿಂದೆಯಲ್ಲಿಯೇ ಹೊತ್ತು ಕಳೆಯುವರು. ಸನ್ಯಾಸಿಗಳ ನಿಂದೆ ಮತ್ತು ಅವಹೇಳನಗಳು ಸಾಮಾನ್ಯವಾಗಿ ಎಲ್ಲ ಕಡೆಗೂ ಕಂಡು ಬರುವವು. ಕಲಿಯುಗದಲ್ಲಿ ಸ್ಪೃಶ್ಯಾಸ್ಪೃಶ್ಯ ವಿಚಾರವೇ ಲೋಪವಾಗುವದು. ಕಲಿಯುಗದಲ್ಲಿ ಮ್ಲೇಂಛ ರಾಜರು ಆಗಮಿಸಿ ರಾಜ್ಯಾಧಿಕಾರವನ್ನು ನಡೆಸುವರು. ಪ್ರಾಯಃ ಎಲ್ಲ ಜನರೂ ಮುಂದೆ ಕಲಿಯುಗದಲ್ಲಿ ವಿಶ್ವಾಸ ಘಾತಕರೂ ಮಿತ್ರ ದ್ರೋಹಿಗಳೂ ಗುರುದ್ರೋಹಿಗಳೂ ಶಿಶ್ನೋದರ ಪರಾಯಣರೂ ಆಗುವರು. ಎಲ್ಲ ಜಾತಿ ವರ್ಣಸಂಕರವಾಗಿ ಎಲ್ಲ ಬ್ರಾಹ್ಮಣರೂ ಸ್ಥಾನ ಭ್ರಷ್ಟರೂ ವೇದಭ್ರಷ್ಟರೂ ಆಗುವರು.

ಪೂರ್ವಕಾಲದಲ್ಲಿ ಹರಿಹರ ಬ್ರಹ್ಮಾದಿ ದೇವತೆಗಳು ಸ್ಥಾಪನೆಮಾಡಿದ ಈ ತೀರ್ಥದ ಹೆಸರು ಕೃತಯುಗದಲ್ಲಿ ಧರ್ಮಾರಣ್ಯ, ತ್ರೇತಾಯುಗದಲ್ಲಿ ಸತ್ಯಮಂದಿರ, ದ್ವಾಪರದಲ್ಲಿ ವೇದಭವನ, ಕಲಿಯುಗದಲ್ಲಿ ಮೋಹೇರಕ ಎಂದು ಬೇರೆ ಬೇರೆಯೇ ಆಗುವುದು. ಈ ಧರ್ಮಾರಣ್ಯದ ಮಾಹಾತ್ಮ್ಯವನ್ನು ಭಕ್ತಿಯಿಂದ ಕೇಳಿದವರು ಮತ್ತು ಹೇಳಿದವರು ಭಗವಂತನ ಅನುಗ್ರಹಕ್ಕೆ ಪಾತ್ರರಾಗಿ ದಿವ್ಯಗತಿಯನ್ನು ಹೊಂದುವರು. ಈ ಧರ್ಮಾರಣ್ಯ ಮಾಹಾತ್ಮ್ಯದ ಪುಸ್ತಕವನ್ನು ರೇಶ್ಮೆ ಬಟ್ಟೆಯಲ್ಲಿ ಸುತ್ತಿ ಗಂಧ ಪುಷ್ಪಾಕ್ಷತೆಗಳಿಂದ ಪೂಜೆಮಾಡಬೇಕು. ಈ ಕಥೆಯನ್ನು ಹೇಳಿದ ವಾಚಕನಿಗೆ ಕಥಾಸಮಾಪ್ತಿಯಾದ ನಂತರ ಪೂಜೆಯನ್ನು ಮಾಡಬೇಕು. ಮತ್ತು ವಸ್ತ್ರ ಗಂಧಮಾಲೆಗಳಿಂದ ದೇವರಂತೆ ಈ ಪುರಾಣ ಪ್ರವಚನಕಾರರನ್ನು ಪೂಜೆಮಾಡಿ ಪುರಾಣ ಹೇಳುವವರಿಗೆ ಒಂದು ಹಿಂಡುವ ಹಸುವನ್ನು ದಾನಕೊಡಬೇಕು.

*ಇತಿ ಸ್ಕಂದಮಹಾಪುರಾಣ-ಬ್ರಹ್ಮಖಂಡದಲ್ಲಿನ ,*
*ದರ್ಮಾರಣ್ಯಖಂಡ ಅಧ್ಯಾಯ ೭೦ರಲ್ಲಿ ಸಂಪೂರ್ಣ*

—○—